ಶ್ರೀರಾಘವೇಂದ್ರತೀರ್ಥವಿರಚಿತಾ

# ಗೀತಾವಿವೃತಿಃ

ಕನ್ನಡಾನುವಾದ ಸಹಿತ ೧

ಅನುವಾದಕರು:

**ಪೂರ್ಣಪ್ರಜ್ಞ ವಿದ್ಯಾಪೀಠದ ವಿದ್ವಾಂಸರು**

ಪ್ರಕಾಶನ:

**ಪೂರ್ಣಪ್ರಜ್ಞ ಸಂಶೋಧನ ಟ್ರಸ್ಟ್**

ಶ್ರೀ ರಾಘವೇಂದ್ರತೀರ್ಥವಿರಚಿತಾ

# ಗೀತಾವಿವೃತಿಃ

(ಕನ್ನಡಾನುವಾದ ಸಹಿತ)

ಅನುವಾದಕರು :

ಪೂರ್ಣಪ್ರಜ್ಞ ವಿದ್ಯಾಪೀಠದ ವಿದ್ವಾಂಸರು

ಪ್ರಕಾಶಕರು :

ಪೂರ್ಣಪ್ರಜ್ಞ ಸಂಶೋಧನ ಟ್ರಸ್ಟ್

ಪೂರ್ಣಪ್ರಜ್ಞ ಸಂಶೋಧನ ಮಂದಿರ, ಪೂರ್ಣಪ್ರಜ್ಞ ವಿದ್ಯಾಪೀಠ,

ಬೆಂಗಳೂರು - 28

2017

ಶ್ರೀವಿಶ್ವೇಶತೀರ್ಥ ಗ್ರಂಥಮಾಲಾ ನಂ. 13

ಶ್ರೀ ರಾಘವೇಂದ್ರತೀರ್ಥವಿರಚಿತಾ ಗೀತಾವಿವೃತಿಃ (ಕನ್ನಡಾನುವಾದ ಸಹಿತ)

ISBN : 978-93-81275-56-6

ಪ್ರಧಾನ ಸಂಪಾದಕರು: **ಪ್ರೊ। ಹಯವದನ ಪುರಾಣಿಕ**
ನಿವೃತ್ತ ಪ್ರಾಂಶುಪಾಲರು,
ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು - 28

ಪ್ರಕಾಶಕರು : **ಪೂರ್ಣಪ್ರಜ್ಞ ಸಂಶೋಧನ ಟ್ರಸ್ಟ್**
ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು - 28

ಪ್ರಥಮ ಮುದ್ರಣ : 2017

ಪುಟಸಂಖ್ಯೆ : 106 + 934

ಪ್ರತಿಗಳು : 1000

ಬೆಲೆ : ರೂ. 400-00

ಮುಖಪುಟ ವಿನ್ಯಾಸ : ಶ್ರೀ ಕೆ.ಎಂ. ಶೇಷಗಿರಿ, ಬೆಂಗಳೂರು

ಮುದ್ರಕರು : ಶ್ರೀ ಅನಿರುದ್ಧ ಕ್ರಿಯೇಷನ್ಸ್, ಬೆಂಗಳೂರು

# GĪTĀVIVṚTI

## of Śri Rāghavendratīrtha

**(With Kannada Translation)**

**Translated by**

**Scholars of Poornaprajna Vidyapeetha,**
Bangalore -560 028

**Publisher :**

**Poornaprajna Samshodhana Trust**
Poornaprajna Samshodhana Mandiram, Poornaprajna Vidyapeetha,
Bangalore -560 028

**2017**

Sri Vishveshatirtha Granthamala - Series No. 13

# GĪTĀVIVṚTI of Śri Rāghavendratīrtha

## (With Kannada Translation)

ISBN : 978-93-81275-56-6

Chief Editor : **Prof. K. Hayavadana Puranik**
Former Principal, Poornaprajna Vidyapeetha,
Bengaluru -560 028

Published by : **Poornaprajna Samshodhana Trust,**
Poornaprajna Samshodhana Mandiram,
Poornaprajna Vidyapeetha, Katriguppa Main Road,
Bengaluru-28

First Edition : 2017

Pages : 106 + 934

Copies : 1000

Price : Rs. 400-00

Cover Design : Sri K.M. Sheshagiri, Bengaluru

Printed by : Sri Aniruddha Creations, Bengaluru

**ಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದರು**
**ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಮಹಾ ಸಂಸ್ಥಾನ**
**ಶ್ರೀ ಪೇಜಾವರ ಅಧೋಕ್ಷಜ ಮಠ, ಉಡುಪಿ**

# ಅನುಗ್ರಹ ಸಂದೇಶ

ಪರದೇವತೆಯ ಅರಿವನ್ನು ನೀಡುವ ಪವಿತ್ರ ವಾಙ್ಮಯ- ವೇದಗಳು. ಆದರೆ ಅನುಭಾವದ ಎತ್ತರದಲ್ಲಿರುವ ಋಷಿಗಳ ಅಂತರಂಗದ ಅಭಿವ್ಯಕ್ತಿಯಾದ, ಗಂಭೀರವಾದ ಭಾಷೆಯನ್ನೊಳಗೊಂಡ ವೇದಗಳನ್ನು ಅರ್ಥೈಸಿಕೊಳ್ಳುವುದು ಸರಳ ಸಂಗತಿಯಲ್ಲ. ಪರತತ್ವದ ಅರಿವಿಲ್ಲದೇ ಮುಕುತಿ ಇಲ್ಲ. ಈ ಹಿನ್ನೆಲೆಯಲ್ಲಿ ಎಲ್ಲ ಸುಜನರಿಗೆ ಧರ್ಮ-ಅರ್ಥ-ಕಾಮ-ಮೋಕ್ಷಗಳ ಸ್ಫುಟವಾದ ಪ್ರಜ್ಞೆಯನ್ನು ನೀಡಲು ಶ್ರೀ ವೇದವ್ಯಾಸರು ಅನನ್ಯ ಕರುಣೆಯಿಂದ ಅನುಗ್ರಹಿಸಿದ ಕೃತಿ ಮಹಾಭಾರತವಾಗಿದೆ. ಇದನ್ನು ಐದನೆಯ ವೇದವೆಂದು ದಾರ್ಶನಿಕರು ಕೊಂಡಾಡಿದ್ದಾರೆ. ಈ ಮಹಾಭಾರತದ ಸಾರಗ್ರಂಥವೇ ಭಗವದ್ಗೀತೆಯಾಗಿದೆ. ಶ್ರೀಮಧ್ವಾಚಾರ್ಯರು ಮಹಾಭಾರತವೆಂಬ ಪಾರಿಜಾತವೃಕ್ಷದ ಹೆಜ್ಜೇನು ಭಗವದ್ಗೀತೆ ಎಂದು ಇದರ ಹಿರಿಮೆಯನ್ನು ಕೊಂಡಾಡಿದ್ದಾರೆ- **'ಮಹಾಭಾರತಪಾರಿಜಾತಮಧುಭೂತಾಂ ಗೀತಾಂ ಉಪನಿಬಬಂಧ'**.

ಇಂತಹ ಗೀತೆಯ ಹೃದಯವನ್ನು ತೆರೆದಿಡಲು ಶ್ರೀಮಧ್ವಾಚಾರ್ಯರು ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯ ಎಂಬ ಎರಡು ಕೃತಿಗಳನ್ನು ಕರುಣಿಸಿದ್ದಾರೆ. ಸೂರ್ಯ-ಚಂದ್ರರಂತೆ ಬೆಳಗುವ ಈ ಕೃತಿಗಳು ಸಾಧಕರ ಅಂತರಂಗದ ಕತ್ತಲೆಯನ್ನು ಕಳೆದು ಪರತತ್ವದ ಅರಿವಿನ ಜಾಗೃತಿಯನ್ನು ಮೂಡಿಸುತ್ತವೆ. ಗೀತೆಯ ವ್ಯಾಖ್ಯಾನದ ನೆಪದಿಂದ ಅನೇಕ ವಿದ್ವಾಂಸರು ತಮ್ಮ ತಮ್ಮ ಚಿಂತನೆಗಳನ್ನು ಅಭಿವ್ಯಕ್ತಿಗೊಳಿಸಿದರು. ಇದರಿಂದ ಗೀತಾಚಾರ್ಯನ ಹೃದಯವನ್ನು ಅರ್ಥೈಸಿಕೊಳ್ಳಲಾಗದ ಪರಿಸ್ಥಿತಿ ನಿರ್ಮಾಣವಾಯಿತು. ಇಂತಹ ಸಂದರ್ಭದಲ್ಲಿ ಶ್ರೀಮಧ್ವಾಚಾರ್ಯರು ಬೇರೆ ಬೇರೆ ದಾರ್ಶನಿಕರ ಚಿಂತನೆಯ ಅಕೌಶಲವನ್ನು ನಿರೂಪಿಸುವುದರ ಜೊತೆಗೆ ಶ್ರೀಕೃಷ್ಣನ ಆಶಯವನ್ನು ಹೃದಯಂಗಮವಾಗಿ ತಮ್ಮ ಕೃತಿಗಳ ಮೂಲಕ ಸ್ಫುಟಪಡಿಸಿದ್ದಾರೆ.

ಗೀತಾಭಾಷ್ಯ ಹಾಗೂ ತಾತ್ಪರ್ಯಗಳಲ್ಲಿ ನಡೆಸಿದ ವಿಭಿನ್ನ ಚಿಂತಕರ ವಿಮರ್ಶೆಯ

ೇಣಾಂಶಗಳನ್ನು ತೊರೆದು ಗೀತೆಗೆ ನೀಡಿದ ಅನೇಕಾರ್ಥಗಳನ್ನು ಸಂಗ್ರಹಿಸಿ ಗೀತೆಯ ೃದಯವನ್ನು ತೆರೆದಿಡಲು ಶ್ರೀರಾಘವೇಂದ್ರ ಗುರುಸಾರ್ವಭೌಮರು ರಚಿಸಿದ ಕೃತಿ ಗೀತಾವಿವೃತಿ'ಯಾಗಿದೆ. ಗೀತಾವಿವೃತಿಯನ್ನು ಅಧ್ಯಯನ ಮಾಡುವ ಪ್ರತಿಯೊಬ್ಬ ಎದ್ವಾಂಸನಿಗೂ, ವಿದ್ಯಾರ್ಥಿಗೂ ಭಾಷ್ಯ-ತಾತ್ಪರ್ಯಗಳಲ್ಲಿ ನಿರೂಪಿಸಿದ ಅರ್ಥಗಳನ್ನು ಶ್ರೀ ರಾಯರು ಅನೇಕ ವೇದವಾಕ್ಯಗಳು ಹಾಗೂ ಬ್ರಹ್ಮಸೂತ್ರಗಳ ಬೆಳಕಿನಲ್ಲಿ ವಿಸ್ತರಿಸಿ ಮನಮುಟ್ಟುವಂತೆ ಸರಳ ಸುಂದರ ಭಾಷೆಯಲ್ಲಿ ವಿವರಿಸಿದ್ದಾರೆ. ಈ ತನಕ ಈ ಮಹೋನ್ನತ ಕೃತಿಯ ಕನ್ನಡಾನುವಾದವು ಆಗಿರಲಿಲ್ಲ. ನಮ್ಮ ಅಮೃತ ಮಹೋತ್ಸವದ ಸುಮಧುರ ಸ್ಮೃತಿಗಾಗಿ ಪೂರ್ಣಪ್ರಜ್ಞ ಸಂಶೋಧನ ಮಂದಿರವು ಅನೇಕ ಸಜ್ಜನರ ಆರ್ಥಿಕ ನೆರವಿನೊಂದಿಗೆ ಈ ಕೃತಿಯನ್ನು ಹೊರತಂದಿರುವದು ನಮಗೆ ತುಂಬ ಸಂತೋಷವನ್ನು ನೀಡಿದೆ. ಈ ಕಾರ್ಯದಲ್ಲಿ ವಿಶೇಷ ಪ್ರೋತ್ಸಾಹವನ್ನು ನೀಡಿದ ವಿದ್ವಾಂಸರಾದ ಎಲ್.ಎಸ್. ಬ್ರಹ್ಮಣ್ಯಾಚಾರ್ಯ ಹಾಗೂ ಈ ಗ್ರಂಥಪ್ರಕಾಶನಕ್ಕಾಗಿ ಸ್ವಯಂಪ್ರೇರಣೆಯಿಂದ ಸೇವೆ ಸಲ್ಲಿಸಿದ ನಮ್ಮ ಅಭಿಮಾನಿಗಳಾದ ಅನೇಕ ದಾನಿಗಳನ್ನು ಹೃತ್ಪೂರ್ವಕವಾಗಿ ಹರಸುತ್ತೇವೆ. ನಮ್ಮ ಶಿಷ್ಯರೇ ಆದ ಅನೇಕ ವಿದ್ವಾಂಸರು ಕನ್ನಡಾನುವಾದ ಮಾಡಿ ನೀಡಿರುವುದು ನಮಗೆ ಮುದ ನೀಡಿದೆ. ಪೂರ್ಣಪ್ರಜ್ಞ ವಿದ್ಯಾಪೀಠವನ್ನು ಯಾವ ಹಿನ್ನೆಲೆಯಲ್ಲಿ ನಾವು ಸ್ಥಾಪಿಸಿದ್ದೇವೋ ಅದಕ್ಕೆ ತಕ್ಕಂತೆ ಇಲ್ಲಿಯ ವಿದ್ವಾಂಸರು ಪಾಠ-ಪ್ರವಚನ, ಕಠಿಣ ಶಾಸ್ತ್ರಗ್ರಂಥಗಳ ಅನುವಾದ, ರಾಷ್ಟ್ರಮಟ್ಟದ ವಿಚಾರಗೋಷ್ಠಿಗಳಲ್ಲಿ ಪ್ರಬಂಧಮಂಡನೆ, ಅಪ್ರಕಾಶಿತ ಅಪೂರ್ವ ಗ್ರಂಥಗಳ ಪ್ರಕಾಶನ ಹಾಗೂ ವಾಕ್ಯಾರ್ಥಗೋಷ್ಠಿಗಳಲ್ಲಿ ತಮ್ಮ ಪ್ರತಿಭಾಪ್ರದರ್ಶನದ ಮೂಲಕ ಶಾಸ್ತ್ರಪ್ರಪಂಚಕ್ಕೆ ಸೇವೆ ಸಲ್ಲಿಸುತ್ತಿರುವುದನ್ನು ಕಂಡು ನಾವು ತುಂಬ ಆನಂದಿತರಾಗಿದ್ದೇವೆ. ಈ ಕೃತಿಯ ಅನುವಾದಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ಎಲ್ಲ ವಿದ್ವಾಂಸರಿಗೂ ಹಾಗೂ ಇದನ್ನು ಸೂಕ್ಷ್ಮರೀತಿಯಿಂದ ಸಂಯೋಜಿಸಿ ಸಕ್ರಿಯರಾಗಿ ಸೇವೆ ಸಲ್ಲಿಸಿದ ಪೂರ್ಣಪ್ರಜ್ಞ ಸಂಶೋಧನ ಮಂದಿರದ ನಿರ್ದೇಶಕರಾದ ಡಾ। ಎ.ವಿ. ನಾಗಸಂಪಿಗೆಯವರು ಹಾಗೂ ಸಂಶೋಧನ ಮಂದಿರದ ಎಲ್ಲ ಕ್ರಿಯಾಶೀಲರಾದ ವ್ಯಕ್ತಿಗಳನ್ನು ಹೃದಯಪೂರ್ವಕವಾಗಿ ಅಭಿನಂದಿಸುತ್ತೇವೆ. ಶ್ರೀಕೃಷ್ಣನು ಅನುವಾದಕರಿಗೂ, ದಾನಿಗಳಿಗೂ, ಇದನ್ನು ಅಧ್ಯಯನ ಮಾಡಿ ಪಾಠ-ಪ್ರವಚನಗಳಲ್ಲಿ ಬಳಸಿಕೊಳ್ಳುವ ಸುಜನರಿಗೂ ಅನುಗ್ರಹದ ಮಹಾಪೂರವನ್ನು ಹರಿಸಲೆಂದು ಹಾರೈಸುತ್ತೇವೆ.

**ಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದರು**

## ಶ್ರೀಶ್ರೀ ಸುಶಮೀಂದ್ರ ತೀರ್ಥ ಶ್ರೀಪಾದರು

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಮಹಾ ಸಂಸ್ಥಾನ
ಶ್ರೀರಾಘವೇಂದ್ರಮಠ ಮಂತ್ರಾಲಯ

## ಶ್ರೀಶ್ರೀ ಸುಯತೀಂದ್ರತೀರ್ಥ ಶ್ರೀಪಾದರು

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಮಹಾ ಸಂಸ್ಥಾನ
ಶ್ರೀರಾಘವೇಂದ್ರಮಠ (ಕಿರಿಯ ಪಟ್ಟ )ಮಂತ್ರಾಲಯ

# ಅನುಗ್ರಹ ಸಂದೇಶ

ಪೇಜಾವರ ಮಠಾಧೀಶರೂ ನಮ್ಮ ಆತ್ಮೀಯರೂ ಆದ ಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದರು ಹುಟ್ಟುಹಾಕಿದ ಪೂರ್ಣಪ್ರಜ್ಞಸಂಶೋಧನ ಮಂದಿರವು ಶ್ರೀರಾಘವೇಂದ್ರ ಗುರುಸಾರ್ವಭೌಮರ ಗೀತಾವಿವೃತಿಯನ್ನು ಕನ್ನಡ ಅನುವಾದದೊಂದಿಗೆ ಮುದ್ರಿಸುತ್ತಿರುವುದು ನಮಗೆ ತುಂಬಾ ಸಂತೋಷವನ್ನು ತಂದಿದೆ.

ಶಾಸ್ತ್ರವಾಙ್ಮಯಕ್ಕೆ ಸಂಬಂಧಿಸಿದಂತೆ 50ಕ್ಕೂ ಹೆಚ್ಚು ಕೃತಿಗಳನ್ನು ಕರುಣಿಸಿದ ಶ್ರೀರಾಘವೇಂದ್ರ ಗುರುಸಾರ್ವಭೌಮರ ಗ್ರಂಥಾಧ್ಯಯನವು ಮುಕ್ತಿಗೆ ಸೋಪಾನ ವೆನಿಸಿದೆ. ಜಗದ್ಗುರು ಮಧ್ವಾಚಾರ್ಯರು ಗೀತಾಭಾಷ್ಯ ಹಾಗೂ ಗೀತಾತಾತ್ಪರ್ಯ ವೆಂಬ ತಮ್ಮ ಕೃತಿಗಳಲ್ಲಿ ನಿರೂಪಿಸಿದ ಗೀತಾರ್ಥವನ್ನು ಅಪೂರ್ವ ರೀತಿಯಿಂದ ಶ್ರೀಗುರುರಾಜರು ಗೀತಾವಿವೃತಿಯಲ್ಲಿ ಸಂಗ್ರಹಿಸಿದ್ದಾರೆ.

ಶ್ರೀಕೃಷ್ಣನು ತನ್ನ ಪುಟ್ಟ ಬಾಯಲ್ಲಿ ಬ್ರಹ್ಮಾಂಡವನ್ನು ತೋರಿದಂತೆ ಶ್ರೀಗುರುರಾಜರು ತಮ್ಮ ಗೀತಾವಿವೃತಿಯಲ್ಲಿ ಸಕಲ ಶಾಸ್ತ್ರಸಾರವನ್ನು ಸೆರೆ ಹಿಡಿದಿದ್ದಾರೆ. ವಿಸ್ತಾರವಾದ ಭಾಷ್ಯ-ಟೀಕೆಗಳನ್ನು ಅರ್ಥೈಸಿಕೊಳ್ಳಲಾಗದ ಸಾಧಕರ ಉದ್ಧಾರಕ್ಕಾಗಿ ರಚಿಸಿದ ಸರಳ ಸುಂದರ ಕೃತಿ ಇದಾಗಿದೆ. ಇದರ ಅಧ್ಯಯನದಿಂದ ಸುಜನರು ಶ್ರೀಕೃಷ್ಣನ ಅಂತರಂಗ ವನ್ನು ಅರಿಯಬಹುದಾಗಿದೆ. ಶ್ರೀರಾಯರ ಪ್ರತಿಯೊಂದು ಕೃತಿಯೂ ಮೂಲದ ಭಾವ ವನ್ನು ಆವಿಷ್ಕರಿಸುವುದರ ಜೊತೆಗೆ ಅಪೂರ್ವ ಪ್ರಮೇಯಗಳನ್ನು ಒಳಗೊಂಡಿರುವುದು ಸಹೃದಯ ವಿದ್ವಾಂಸರಿಗೆ ತಿಳಿದ ಸಂಗತಿಯಾಗಿದೆ. ಮಿತವಾದ ಪದಗಳಿಂದ ಅಮಿತ ವಾದ ಅರ್ಥವನ್ನು ಹೊಮ್ಮಿಸುವುದು ಗುರುರಾಜರ ಕೃತಿಗಳ ವೈಶಿಷ್ಟ್ಯವಾಗಿದೆ.

ಇಂತಹ ಕೃತಿರತ್ನದ ಅನುವಾದವನ್ನು ಮಾಡಿಸಿ ಎಲ್ಲ ಸಜ್ಜನರಿಗೆ ಅನುಗ್ರಹ ೀರುತ್ತಿರುವ ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಅಸಾಧಾರಣ ಕಾರ್ಯವನ್ನು ಭಿಮಾನದಿಂದ ಸ್ವಾಗತಿಸುತ್ತೇವೆ. ಶ್ರೀಗುರುರಾಜರ ಈ ಕೃತಿಯ ಅನುವಾದ ಕಾರ್ಯ ನಲ್ಲಿ ತಮ್ಮನ್ನು ತೊಡಗಿಸಿಕೊಂಡ ವಿದ್ವಾಂಸರಿಗೂ ಶ್ರದ್ಧಾವಂತರಾದ ದಾನಿಗಳಿಗೂ ಹಾಗೂ ಈ ಕೃತಿಯ ಪ್ರಕಾಶನದಲ್ಲಿ ನಿರಂತರ ಶ್ರಮವಹಿಸಿದ ಪೂರ್ಣಪ್ರಜ್ಞ ಸಂಶೋಧನ ಮಂದಿರದ ನಿರ್ದೇಶಕರಾದ ಡಾ। ಆನಂದತೀರ್ಥಾಚಾರ್ಯ ನಾಗಸಂಪಿಗೆಯವರನ್ನು ಹಾಗೂ ಸಂಶೋಧನ ಮಂದಿರದ ಸಿಬ್ಬಂದಿವರ್ಗವನ್ನು ಹೃತ್ಪೂರ್ವಕವಾಗಿ ಆಶೀರ್ವದಿಸುತ್ತೇವೆ.

ಪೂರ್ಣಪ್ರಜ್ಞ ಸಂಶೋಧನ ಮಂದಿರವು ಅನೇಕ ಅಪೂರ್ವ ಗ್ರಂಥಗಳ ಪ್ರಕಾಶನ ಮಾಡಿದ್ದು , ಇನ್ನೂ ಹೆಚ್ಚಿನ ಶಾಸ್ತ್ರಸೇವೆಯನ್ನು ಅವಿಚ್ಛಿನ್ನವಾಗಿ ನಡೆಸಲೆಂದು ನಮ್ಮ ಉಪಾಸ್ಯಮೂರ್ತಿಯಾದ ಶ್ರೀಮನ್ಮೂಲರಾಮಚಂದ್ರದೇವರಲ್ಲಿ ಪ್ರಾರ್ಥಿಸುತ್ತೇವೆ.

**ಶ್ರೀಶ್ರೀ ಸುಶಮೀಂದ್ರ ತೀರ್ಥ ಶ್ರೀಪಾದರು**

**ಶ್ರೀಶ್ರೀ ಸುಯತೀಂದ್ರತೀರ್ಥ ಶ್ರೀಪಾದರು**

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಮಹಾ ಸಂಸ್ಥಾನ
ಶ್ರೀರಾಘವೇಂದ್ರಮಠ ಮಂತ್ರಾಲಯ

# ಗೀತಾಸಾರ - ಸಂದೇಶ

ವೇದಾರ್ಥವನ್ನು ಅರಿಯಲಾರದ ಸಾಮಾನ್ಯರಿಗೆ ಧರ್ಮ ಮತ್ತು ತತ್ವಗಳ ಅರಿವು ಮೂಡಿಸಲು ಮಹಾಭಾರತವನ್ನು ವೇದವ್ಯಾಸರು ರಚಿಸಿದರು. ಮಹಾಭಾರತವೆನ್ನುವ ಈ ಪಾರಿಜಾತಪುಷ್ಪದ ಮಕರಂದವೇ ಭಗವದ್ಗೀತೆಯಾಗಿದೆ. ಮಹಾಭಾರತದ ಸಾರವೇ ಇದರಲ್ಲಿ ಅಡಗಿದೆ. ಮೊದಲನೆಯ ಆರು ಅಧ್ಯಾಯಗಳಲ್ಲಿ ಜ್ಞಾನದ ಉಪಾಯವಾದ ಕರ್ತವ್ಯದ ನಿರೂಪಣೆಯಾದರೆ, ಭಕ್ತಿ-ಜ್ಞಾನ ಮುಂತಾದ ಸಾಧನೆಗಳನ್ನು ಮುಂದಿನ ಆರು ಅಧ್ಯಾಯಗಳಲ್ಲಿ ಹೇಳಿದ್ದಾರೆ. ಕೊನೆಯ ಆರು ಅಧ್ಯಾಯಗಳಲ್ಲಿ ಇಷ್ಟರವರೆಗೆ ಹೇಳಿದ ವಿಷಯಗಳ ವಿವರಣೆಯನ್ನು ಕಾಣಬಹುದು. ಮೊದಲನೆಯ ಅಧ್ಯಾಯ ಮತ್ತು ಎರಡನೆಯ ಅಧ್ಯಾಯದ ಪ್ರಾರಂಭದಲ್ಲಿ ಗೀತೋಪದೇಶದ ಹಿನ್ನೆಲೆಯನ್ನು ನಿರೂಪಿಸಲಾಗಿದೆ. ಪ್ರಾರಂಭದಲ್ಲಿ ದುರ್ಯೋಧನನು ಆಚಾರ್ಯ ದ್ರೋಣರ ಬಳಿಗೆ ಬಂದು ಎರಡೂ ಕಡೆಯ ಪ್ರಮುಖ ವೀರರನ್ನು ಉಲ್ಲೇಖಿಸಿ ಭೀಮನ ರಕ್ಷಣೆಯನ್ನು ಪಡೆದ ಪಾಂಡವರ ಸೈನ್ಯವನ್ನು ಎದುರಿಸಲು ಭೀಷ್ಮ-ದ್ರೋಣಾದಿಗಳ ರಕ್ಷಣೆಯಿದ್ದರೂ ನಮ್ಮ ಸೈನ್ಯವು ಸಾಲದೆಂದು ಅಭಿಪ್ರಾಯಪಟ್ಟು ತಮ್ಮ ವಿಜಯದ ಬಗ್ಗೆ ಸಂದೇಹವನ್ನು ವ್ಯಕ್ತಪಡಿಸುತ್ತಾನೆ. ಅವನಿಗೆ ಉತ್ಸಾಹ ತುಂಬಲು ಭೀಷ್ಮರು ಶಂಖಧ್ವನಿಯನ್ನು ಮಾಡುತ್ತಾರೆ. ಇಡೀ ಸೈನ್ಯದಲ್ಲಿ ಎರಡೂ ಕಡೆಗಳಿಂದ ಶಂಖಧ್ವನಿಯು ಮೊಳಗುತ್ತದೆ. ಆಗ ಎರಡೂ ಸೈನ್ಯಗಳ ಮಧ್ಯದಲ್ಲಿ ತನ್ನ ರಥವನ್ನು ನಿಲ್ಲಿಸುವಂತೆ ಕೃಷ್ಣನಲ್ಲಿ ಅರ್ಜುನನು ಹೇಳುವನು. ಆಗ ಎರಡೂ ಕಡೆಯ ತಮ್ಮ ಬಂಧು-ಬಾಂಧವರನ್ನು ಗುರುಹಿರಿಯರನ್ನು ಅರ್ಜುನನು ನೋಡುತ್ತಾನೆ. ಇವರೆಲ್ಲರ ಮರಣದ ಭೀತಿಯಿಂದ ಬಂಧುವ್ಯಾಮೋಹಕ್ಕೆ ಒಳಗಾಗಿ ಅರ್ಜುನನು ವಿಷಣ್ಣನಾಗಿ ರಥದಲ್ಲಿಯೇ ಕುಸಿದು ಕುಳಿತುಕೊಳ್ಳುವನು. ಇವರೆಲ್ಲರೂ ಸಾಯುವುದರಿಂದ ತನಗಾಗುವ ದುಃಖದ ಆಶಂಕೆ, ಇವರನ್ನು ಕೊಲ್ಲುವುದರಿಂದ ಸಂಭವಿಸುವ ಪಾಪದ ಭೀತಿ ಇವೆರಡರಿಂದ ಅರ್ಜುನನ ಮನಸ್ಸು ತತ್ತರಿಸುತ್ತದೆ. ಕೌರವರು ತಮಗೆ ತುಂಬ ಅನ್ಯಾಯ

ಾಡಿದ್ದಾರೆ. ಅವರು ಸಮಾಜಕ್ಕೂ ಅನ್ಯಾಯ ಮಾಡಿದ ಧರ್ಮಹಂತಕರೂ ಅಹುದು. ಅವರನ್ನು ಕೊಲ್ಲುವುದು ನ್ಯಾಯಪ್ರಾಪ್ತವೇ ಆಗಿರಬಹುದು. ಅವರ ಜೊತೆಗೆ ಬಂಧುಗಳ ಹಾಗೂ ಹಿರಿಯರ ಹತ್ಯೆಯೂ ಆಗುವುದಲ್ಲವೇ ? ಇದರಿಂದ ಆಗುವ ದುಃಖವನ್ನೂ ಪಾಪವನ್ನೂ ತಾನು ಹೇಗೆ ಸಹಿಸಿಕೊಳ್ಳಲಿ. ಇದೇ ಅರ್ಜುನನ ಆತಂಕ ಮತ್ತು ಆಶಂಕೆ. ಯುದ್ಧದಿಂದ ಆಗುವ ಅನರ್ಥಪರಂಪರೆಯನ್ನು ಉಲ್ಲೇಖಿಸಿ ಅದರಿಂದ ಆಗುವ ಜನರ ಹತ್ಯಾಕಾಂಡದಿಂದಾಗಿ ಸಾಮಾಜಿಕ ವ್ಯವಸ್ಥೆಯೇ ಕುಸಿದು ಹೋಗುವ ಭೀತಿಯನ್ನು ವ್ಯಕ್ತಪಡಿಸಿದನು. ಬಾಣಗಳನ್ನು ಕೆಳಗಿಟ್ಟು ವಿಷಾದ ಗೊಂದಲಗಳಿಗೆ ಒಳಗಾಗಿ ಯುದ್ಧವಿಮುಖನಾಗಿ ರಥದಲ್ಲಿ ಕುಳಿತುಕೊಳ್ಳುವನು.

ಅವನಿಗೆ ಧೈರ್ಯ ಉತ್ಸಾಹ ತುಂಬುವ ಮಾತನ್ನು ಕೃಷ್ಣನು ಹೇಳಿದರೂ ಅರ್ಜುನನು ಬದಲಾಗುವುದಿಲ್ಲ. 'ಬಂಧುಗಳ ಹಿರಿಯರ ರಕ್ತ ಚೆಲ್ಲಿ ಪಡೆಯುವ ಈ ರಾಜ್ಯಭೋಗ ನನಗೇಕೆ ? ಅದರ ಬದಲು ಭಿಕ್ಷೆ ಬೇಡಿಯಾದರೂ ನಾನು ಜೀವಿಸಬಲ್ಲೆ. ಈ ಯುದ್ಧದಂತಹ ಕ್ರೂರ ಕಾರ್ಯವು ಬೇಡ ' ಎನ್ನುತ್ತಾನೆ. ಯಾವುದು ಧರ್ಮ ಯಾವುದು ಅಧರ್ಮ ಎಂಬುದನ್ನು ನಿರ್ಧರಿಸಲಾರದೆ ಗೊಂದಲಕ್ಕೊಳಗಾಗುತ್ತಾನೆ. ಒಂದೆಡೆ ಬಂಧುವ್ಯಾಮೋಹ, ಇನ್ನೊಂದೆಡೆ ಧರ್ಮಸಂದೇಹ ಇವುಗಳಿಂದ ಅವನ ಮನಸ್ಸು ಗೊಂದಲದ ಗೂಡಾಗಿತ್ತು. ಯಾವ ಮಾರ್ಗದಲ್ಲಿ ನಡೆಯಲಿ ಯಾವುದು ಶ್ರೇಯಸ್ಸು ಎಂಬುದನ್ನು ತಿಳಿಯದೆ ಶಿಷ್ಯಭಾವದಿಂದ ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತಾನೆ. ವೀರನೂ ಪ್ರಾಜ್ಞನೂ ಆದ ಅರ್ಜುನನ ಈ ಅವಸ್ಥೆಯನ್ನು ಕಂಡು ಕೃಷ್ಣನಿಗೆ ನಗು ಬರುವಂತಾಗಿದೆ. ಆಗ ಶ್ರೀಕೃಷ್ಣನು ಅವನಿಗೆ ಗೀತೆಯ ಉಜ್ವಲ ಸಂದೇಶವನ್ನು ನೀಡುತ್ತಾನೆ.

ಯಾರ ಬಗ್ಗೆ ದುಃಖಪಡಬೇಕಿಲ್ಲವೋ ಅಂತಹವರ ಬಗ್ಗೆ ನೀನು ಶೋಕಿಸುತ್ತಿರುವಿಯೆಂದೂ, ನೀನಾಡುವ ಮಾತು ಪ್ರಾಜ್ಞರ ಮಾತಲ್ಲವೆಂದೂ, ಯಾವ ಶಾಸ್ತ್ರದ ಆಧಾರವಿಲ್ಲದೆ ನಿನ್ನ ಸ್ವಂತ ಬುದ್ಧಿಯನ್ನಾಧರಿಸಿ ಕಲ್ಪನೆಯಿಂದ ನೀನು ಮಾತನಾಡುತ್ತಿರುವಿಯೆಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳುತ್ತಾನೆ.

'ಬಂಧುಗಳ ಹಿರಿಯರ ನಾಶಕ್ಕಾಗಿ ನೀನು ಪರಿತಪಿಸುತ್ತಿರುವಿಯಲ್ಲವೇ ? ಅವರ ಆತ್ಮವು ನಾಶವಾಗುವುದೆಂದು ನಿನಗೆ ದುಃಖವೇ ? ಅಥವಾ ದೇಹವು ನಾಶವಾಗುವುದೆಂದೇ ? ಆತ್ಮನಿಗಂತೂ ನಾಶವೇ ಇಲ್ಲ. ಆತ್ಮನು ನಿತ್ಯ, ಅಮರ. ನಮ್ಮ ಕಣ್ಣೆದುರಿಗೆ ನಾಶವಾಗುತ್ತಿರುವ ದೇಹವೇ ಆತ್ಮವಲ್ಲ. ದೇಹಕ್ಕಿಂತ ಬೇರೆಯಾಗಿ ಆತ್ಮನಿದ್ದಾನೆ. ನಾನೇ ದೇಹವೆಂದು ಯಾರಿಗೂ ಅನುಭವವಿಲ್ಲ. ಚಿಕ್ಕ ಬಾಲಕನಿಂದ ಆರಂಭಿಸಿ ಪ್ರತಿಯೊಬ್ಬರಿಗೂ 'ನನ್ನ ದೇಹ' ಎಂದೇ ಅನುಭವವಿದೆ. 'ನನ್ನ ಮನೆ', 'ನನ್ನ ಪುಸ್ತಕ' ಎಂದಾಗ ಆ ಮನೆ ಮತ್ತು ಪುಸ್ತಕಗಳು ನನಗಿಂ

ಬೇರೆಯೆಂದು ಭಾಸವಾಗುವಂತೆ 'ನನ್ನ ಶರೀರ' ಎಂದಾಗಲೂ ಈ ಶರೀರವು ನನಗಿಂತ ಬೇರೆಯೇ ಎಂದು ಸ್ಪಷ್ಟವಾಗಿ ತೋರುತ್ತದೆ. ಬಾಲ್ಯ ಕೌಮಾರಗಳಲ್ಲಿ ತಾರುಣ್ಯ ಮತ್ತು ಮುದಿತನದಲ್ಲಿ ನಮಗೆ ನಾನಾ ರೀತಿಯ ಅನುಭವಗಳಾಗುತ್ತವೆ. ಜಡವಸ್ತುವಿನಲ್ಲಿ ಇಂತಹ ಅನುಭವವಾಗಲು ಸಾಧ್ಯವೇ? ಅದರಲ್ಲಿ ಜ್ಞಾನಶಕ್ತಿಯೇ ಇಲ್ಲ. ಹೀಗೆ ನಮಗೆ ಜೀವನದಲ್ಲಿ ವಿವಿಧಸ್ತರಗಳಲ್ಲಿ ಉಂಟಾಗುವ ಅರಿವು, ಅನುಭವಗಳಿಂದಲೇ ಈ ಜಡದೇಹದಿಂದ ಬೇರೆಯಾದ ಆತ್ಮನಿದ್ದಾನೆ ಎಂದು ನಾವು ಮನಗಾಣಬಹುದು. ಆದುದರಿಂದ ನಾನು, ನೀನು, ನಮ್ಮ ಮುಂದಿರುವ ರಾಜರು ಇವರೆಲ್ಲರೂ ನಿತ್ಯ ಸನಾತನರು. ಯಾರಿಗೂ ನಾಶವಿಲ್ಲ. ಆದುದರಿಂದ ಆತ್ಮನಾಶದ ಬಗ್ಗೆ ದುಃಖ ಪಡಬೇಕಾಗಿಲ್ಲ. 'ಕನ್ನಡಿಯು ನಾಶವಾದಾಗ ಅದರಲ್ಲಿ ತೋರುವ ಪ್ರತಿಬಿಂಬವೂ ನಾಶವಾಗುವಂತೆ ಶರೀರವು ನಾಶವಾದಾಗ ಪರಮಾತ್ಮನ ಪ್ರತಿಬಿಂಬವಾಗಿ ಅಲ್ಲಿ ತೋರುವ ಜೀವನೂ ನಾಶವಾಗಬೇಕಲ್ಲವೇ ? ಎಂಬ ಅರ್ಜುನನ ಸಂದೇಹಕ್ಕೂ ಕೃಷ್ಣನು ಉತ್ತರಿಸುತ್ತಾನೆ. ನಮ್ಮ ದೃಷ್ಟಿಗೆ ಗೋಚರವಾದ ಈ ಬಾಹ್ಯ ಭೌತಿಕ ದೇಹಗಳು ಮಾತ್ರ ಅನಿತ್ಯ. ಎಲ್ಲರಿಗೂ ಅಪ್ರಾಕೃತಚೈತನ್ಯರೂಪಗಳಾದ ನಿತ್ಯದೇಹಗಳಿವೆ. ಆ ದೇಹಗಳಿಗೂ ನಾಶವಿಲ್ಲ. ಆ ದೇಹದಲ್ಲಿ ಪ್ರತಿಬಿಂಬದಂತೆ ಕಾಣಿಸುವ ಜೀವರಿಗೂ ನಾಶವಿಲ್ಲ. ಕನ್ನಡಿಯಲ್ಲಿ ತೋರುವ ಪ್ರತಿಬಿಂಬವು ನಾಶವಾಗಬಹುದು. ಆದರೆ ಕಲ್ಲಿನಲ್ಲಿ ಕೊರೆದ ಅಕ್ಷರಗಳು ನಾಶವಾಗುತ್ತವೆಯೇ ? ಕಲ್ಲು ಇರುವಷ್ಟು ಕಾಲ ಆ ಅಕ್ಷರಗಳೂ ಇರುವಂತೆ ಶಾಶ್ವತವಾದ ಅಪ್ರಾಕೃತವಾದ ಸ್ವರೂಪದೇಹದಲ್ಲಿ ನಿರಂತರವೂ ಪ್ರತಿಬಿಂಬಿತರಾಗಿರುವ ಜೀವರಿಗೆ ಈ ಭೌತಿಕದೇಹದ ನಾಶದಿಂದ ನಾಶವಿಲ್ಲ. ಹೀಗಾಗಿ ಆತ್ಮರ ನಾಶವಾಗುತ್ತದೆಂದು ದುಃಖಿಸಬೇಕಿಲ್ಲ. ಆಕಾಶ, ಕಾಲ, ಪ್ರಕೃತಿಗಳಂತೆ ಜೀವಾತ್ಮನೂ ನಿತ್ಯನಾಗಿರುತ್ತಾನೆ. ಹಾಗಾದರೆ ದೇಹವು ನಾಶವಾಗುತ್ತದೆ ಎಂದು ದುಃಖವೇ ? ಈ ದೇಹವು ನಾಶವಾದರೂ ಇದರ ಬದಲು ಇನ್ನೊಂದು ದೇಹವನ್ನು ನಾವು ನಿಶ್ಚಿತವಾಗಿ ಪಡೆಯುತ್ತೇವೆ. ಒಂದು ಬಟ್ಟೆಯ ಬದಲು ಇನ್ನೊಂದು ಬಟ್ಟೆಯನ್ನು ಪಡೆಯುವಾಗ ನಾವು ದುಃಖಿಸುತ್ತೇವೆಯೇ ? ಮರಣವೆಂಬುದು ಬದಲಾವಣೆ ಮಾತ್ರ. ಅದು ನಾಶವಲ್ಲ. ಬಾಲ್ಯವನ್ನು ಕಳೆದು ತಾರುಣ್ಯವನ್ನು ಪಡೆದಾಗ ದುಃಖಿಸುತ್ತೇವೆಯೇ? ಅದರಂತೆಯೇ ನಮ್ಮ ಜೀವನದಲ್ಲಿ ಮರಣವೂ ಒಂದು ಬದಲಾವಣೆ. ಅದಕ್ಕೆ ಯಾಕೆ ದುಃಖಿಸಬೇಕು.

ಆತ್ಮನು ನಿತ್ಯ. ಈ ದೇಹದ ಬದಲು ಇನ್ನೊಂದು ದೇಹವನ್ನು ನಾವು ಪಡೆಯಬಹುದು. ಆದರೂ ಈಗಿರುವ ಬಂಧು-ಬಾಂಧವರ ಜೊತೆಗಿನ ಸಂಪರ್ಕ ಮಾತುಕತೆ ಇವೆಲ್ಲವುಗಳನ್ನು ಕಳೆದುಕೊಂಡಾಗ ದುಃಖವಾಗುವುದಿಲ್ಲವೇ ? ಅವರೆಲ್ಲರೂ ಬೇರೆ ದೇಹವನ್ನು ಪಡೆದರೂ ಅದು ಈ ದೇಹಕ್ಕಿಂತ ನಿಕೃಷ್ಟವಾಗಿರಬಹುದು. ಅವರು ಎಲ್ಲಿಯೋ ದೂರದಲ್ಲಿರಬಹುದು. ಬಹಳ ಕಷ್ಟಪಡುತ್ತಿರಬಹುದು. ನಮಗೆ ಅವರನ್ನು ಕಾಣಲು ಸಾಧ್ಯವಾಗುವುದಿಲ್ಲ. ಹೀಗಾಗಿ ಬಂಧು-ಬಾಂಧವರ ಮರಣಕ್ಕಾಗಿ ದುಃಖಿಸುತ್ತೇನೆಂದು ಅರ್ಜುನನು ಹೇಳಬಹುದು.

ಇದಕ್ಕೆ ಶ್ರೀಕೃಷ್ಣನು ನೀಡುವ ಉತ್ತರವು ಅತ್ಯಂತ ಮಹತ್ವದ್ದಾಗಿದೆ. ನಮ್ಮೆಲ್ಲರ ದುಃಖದ ಕಾರಣವನ್ನು ವಿಶ್ಲೇಷಿಸಿ ದುಃಖದ ಮೂಲವನ್ನೇ ಕಿತ್ತುತ್ತೇನೆಂದು, ದುಃಖವನ್ನು ಎದುರಿಸುವ ವಿಧಾನವನ್ನು ಕೃಷ್ಣನು ಬೋಧಿಸುತ್ತಾನೆ. ಬರೇ ವಿಷಯಪದಾರ್ಥಗಳ ಸಂಪರ್ಕಗಳೇ ದುಃಖದ ಕಾರಣವಲ್ಲ. ನಿದ್ದೆಯಲ್ಲಿ ಎಲ್ಲಾ ವಸ್ತುಗಳ ಸಂಪರ್ಕವಿದ್ದರೂ ನಾವು ಸುಖ-ದುಃಖಗಳನ್ನು ಅನುಭವಿಸುವುದಿಲ್ಲ. ಅಭಿಮಾನ, ಮಮತೆಗಳಿದ್ದಾಗ ಮಾತ್ರ ನಮಗೆ ಸುಖ-ದುಃಖಗಳ ಅನುಭವವಾಗುತ್ತದೆ. ಇನ್ನೊಬ್ಬರ ಮನೆಗಳು ಸುಡುವಾಗ ನಮಗೆ ದುಃಖವಾಗುವುದಿಲ್ಲ. ಆದರೆ ನಮ್ಮ ಮನೆ ಸುಟ್ಟಾಗ ಮಾತ್ರ ನಾವು ಗೋಳಾಡುತ್ತೇವೆ. ಆದುದರಿಂದ ಅಭಿಮಾನವೇ ದುಃಖದ ಮೂಲ. ದೇಹ ಇಂದ್ರಿಯ ವಿಷಯಗಳಲ್ಲಿ ಅಭಿಮಾನ ಮಮತೆಗಳನ್ನು ತೊರೆದಾಗ ಯಾವ ಬಾಹ್ಯಘಟನೆಗಳಿಂದಲೂ ನಾವು ದುಃಖಕ್ಕೆ ಒಳಗಾಗುವುದಿಲ್ಲ. ಹೀಗೆ ಜೀವನದಲ್ಲಿ ದುಃಖವನ್ನು ಎದುರಿಸುವ ವಿಶ್ಲೇಷಣಾತ್ಮಕವಾದ ಮಾರ್ಗವನ್ನು ಕೃಷ್ಣನು ತೋರಿಸುತ್ತಾನೆ.

**ಆಸಕ್ತಿಯೇ ಪಾಪದ ಮೂಲ**

ಶ್ರೀಕೃಷ್ಣನು ಈವರೆಗೆ ಅಭಿಮಾನತ್ಯಾಗದ ಉಪದೇಶವನ್ನು ನೀಡಿ ವ್ಯಾಮೋಹಜನಿತವಾದ ದುಃಖದ ಭಾರವನ್ನು ಕಡಿಮೆ ಮಾಡಿದರೂ ಅರ್ಜುನನಿಗೆ ಪಾಪದ ಭೀತಿಯು ಇನ್ನೂ ಪೂರ್ಣವಾಗಿ ನಿರಸನವಾಗಿಲ್ಲ. ಬಂಧುಜನರ, ಗುರುಜನರ ಹಿಂಸೆಯಿಂದ ಪಾಪವು ಅಂಟಬಹುದೆಂಬ ಸಂಶಯವು ಅವನಲ್ಲಿ ಇನ್ನೂ ಉಳಿದಿದೆ. ಇದು ಧರ್ಮಯುದ್ಧವಾಗಿದ್ದು ಪುಣ್ಯಕರವಾದರೂ ಇದರ ಜೊತೆಗೆ ಅನೇಕ ಪಾಪಕಾರ್ಯಗಳೂ ಸಂಭವಿಸುತ್ತವೆ. ಪರಲೋಕದಲ್ಲಿ ಈ ಅಧರ್ಮಕೃತ್ಯಗಳಿಂದ ದುಃಖವನ್ನು ಅನುಭವಿಸಬೇಕಾಗುವುದು. ಹೀಗೆ ಸುಖದುಃಖಗಳೆರಡಕ್ಕೂ ಕಾರಣವಾದ ಧರ್ಮಾಧರ್ಮಮಿಶ್ರವಾದ ಈ ಯುದ್ಧಕ್ಕಿಂತ ಕೇವಲ ಧರ್ಮಕಾರಕವಾದ, ಪಾಪದ ಸೋಂಕೇ ಇಲ್ಲದ ಸಂನ್ಯಾಸವೇ ಶ್ರೇಷ್ಠವಲ್ಲವೆ ? ಇವೆಲ್ಲ ಕರ್ಮಗಳನ್ನು ತ್ಯಾಗ ಮಾಡಿ ಅರಣ್ಯಕ್ಕೆ ಹೋಗಿ ಮುನಿ ವೃತ್ತಿಯನ್ನು ಯಾಕೆ ಸ್ವೀಕರಿಸಬಾರದೆಂಬ ಅರ್ಜುನನ ಸಂಶಯವು ಇನ್ನೂ ಉಳಿದಿದೆ.

ಇದಕ್ಕಾಗಿ ಇನ್ನು ಮುಂದೆ ಪರಮಾತ್ಮನು ನಿಷ್ಕಾಮ ಕರ್ಮ ಅಥವಾ ಭಾಗವತ ಧರ್ಮದ ಸಂದೇಶವನ್ನು ನೀಡುತ್ತಾನೆ. ಹೇಗೆ ಅಭಿಮಾನವೇ ದುಃಖದ ಮೂಲವಾಗಿದ್ದು ಅಭಿಮಾನವನ್ನು ತ್ಯಾಗ ಮಾಡುವುದರಿಂದ ದುಃಖದ ಸಮೂಲ ಉಚ್ಚಾಟನೆಯಾಗುವುದೋ ಅದರಂತೆ ಪಾಪದ ಮೂಲ ಯಾವುದೆಂಬುದನ್ನು ನಾವು ಪರಿಶೀಲಿಸಿ ಅದನ್ನು ಕಿತ್ತೊಗೆಯಬೇಕು. ಬರಿ ಹಿಂಸೆಯಿಂದ ಪಾಪವು ಸಂಭವಿಸುವುದೇ ಇಲ್ಲ . ನ್ಯಾಯಾಧೀಶನು ಸಾವಿರಾರು ಜನರಿಗೆ ಮರಣದಂಡನೆ ಹಾಗೂ ಇತರ ಕಠಿಣ ಶಿಕ್ಷೆಗಳನ್ನು ವಿಧಿಸುತ್ತಾನೆ. ಅಧಿಕಾರಿಗಳು ಆ ಶಿಕ್ಷೆಯನ್ನು ಕಾರ್ಯಗತಗೊಳಿಸುವರು. ಇದರಿಂದ ಅವರೆಲ್ಲ ಪಾಪಿಗಳೆನಿಸುವರೆ ? ಆಸಕ್ತಿಯೇ ಪಾಪದ

ಮೂಲ. ನಮ್ಮ ಸ್ವಾರ್ಥಕ್ಕಾಗಿ ರಾಗದ್ವೇಷಗಳಿಂದ ನಾವು ಇನ್ನೊಬ್ಬರನ್ನು ಹಿಂಸಿಸುವೆವು. ಆದರಿಂದ ನಮಗೆ ಪಾಪವು ಸಂಭವಿಸುವುದು. ಇಂತಹ ರಾಗದ್ವೇಷಗಳಿಲ್ಲದೆ ಶಾಸ್ತ್ರವಿಹಿತವಾದ ಲೋಕಹಿತಕಾರಿಯಾದ ಕರ್ತವ್ಯವೆಂಬ ಭಾವನೆಯಿಂದ ಅನಾಸಕ್ತಿಯಿಂದ ಕಾರ್ಯವನ್ನು ಮಾಡುವಾಗ ಹಿಂಸೆಯ ಘಟನೆಗಳು ನಡೆದರೂ ಪಾಪವೂ ಅಂಟುವುದಿಲ್ಲ. ಇಡೀ ಜಗತ್ತನ್ನೇ ಸಂಹರಿಸುವ ಭಗವಂತನಿಗೆ ದೋಷವಿದೆಯೆ ? ಆದ್ದರಿಂದ ಆಸಕ್ತಿಯನ್ನು ಬಿಟ್ಟು ಕರ್ತವ್ಯ ಧರ್ಮವನ್ನು ನಿರ್ವಹಿಸಬೇಕು-ವೇದನಾ ನಿರೋಧಕ ಇಂಜಕ್ಷನ್ ನೀಡಿ ಶಸ್ತ್ರಕ್ರಿಯೆಯನ್ನು ಮಾಡುವಂತೆ. ಆಗ ಯಾವ ಮನೋವೇದನೆಗೂ ಅವಕಾಶ ಇರುವುದಿಲ್ಲವೆಂದು ನಿಷ್ಕಾಮ ಕರ್ಮದ ದಿವ್ಯಸಂದೇಶವನ್ನು ಶ್ರೀಕೃಷ್ಣನು ಉಪದೇಶಿಸುವನು.

ಹೀಗೆ ಕಾಮನೆಯಿಲ್ಲದೆ, ಭಗವತ್ ಪ್ರೀತಿಯಾಗಲೆಂಬ ಭಾವನೆಯಿಂದ ಮಾಡುವ ಸತ್ಕರ್ಮವನ್ನು ಸಂಕಲ್ಪಿಸಿದರೂ ಪ್ರಾರಂಭಮಾಡಿ ಅನಿವಾರ್ಯಕಾರಣದಿಂದ ಮಧ್ಯದಲ್ಲಿ ಕೈಬಿಟ್ಟರೂ ಅದರಿಂದ ಆವರೆಗೆ ಮಾಡಿದ್ದಕ್ಕೆ ಹಾನಿಯಿಲ್ಲ. ಭಗವಂತ ಹೇಳುತ್ತಾನೆ –

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥** (2.40)

ನಾವು ಕೃಷಿ, ವ್ಯಾಪಾರ ಮೊದಲಾದವುಗಳನ್ನು ಸಂಕಲ್ಪಿಸಿ ಆರಂಭ ಮಾಡಿ ಅರ್ಧದಲ್ಲೇ ತೊರೆದರೆ ವಿಶೇಷ ನಷ್ಟವಾಗುವುದು. ಆದರಿಂದ ಮತ್ತೆ ಮೇಲೆ ಏರುವುದೇ ದುಸ್ತರವಾಗುವುದು. ನಾವು ಔಷಧವನ್ನು ಸೇವಿಸುವಾಗ ಸ್ವಲ್ಪ ಹೆಚ್ಚು ಕಡಿಮೆ ಆದರೆ ಅದರಿಂದ ಬಹಳ ಅನರ್ಥವಾಗಬಹುದು. ಆದರೆ ಮುಂದೆ ವಿವರಿಸಲಿರುವ ಭಾಗವತಧರ್ಮ ಅಥವಾ ಅನಾಸಕ್ತಿ ಯೋಗದಲ್ಲಿ ಅಂತಹ ಭಯಕ್ಕೂ ಅವಸರವಿಲ್ಲ. ನಾವು ಶುದ್ಧ ಭಾವನೆಯಿಂದ ಮಾಡುವಾಗ ಸ್ವಲ್ಪ ಹೆಚ್ಚುಕಡಿಮೆ ಆದರೂ ಅದರಿಂದ ಪ್ರತ್ಯವಾಯವಿಲ್ಲ; ಅಪಾಯವಿಲ್ಲ. ಶ್ರೀಮದಾಚಾರ್ಯರು ಈ ಅಂಶವನ್ನು ಸ್ಫುಟಪಡಿಸಿದ್ದಾರೆ –

**ಪ್ರಾರಂಭಮಾತ್ರಮಿಚ್ಛಾ ವಾ ವಿಷ್ಣುಧರ್ಮೋ ನ ನಿಷ್ಫಲಾ ।** – ಗೀತಾತಾತ್ಪರ್ಯ

ಭಗವಂತನು ವಿವರಿಸುವ ಈ ಪವಿತ್ರ ಭಾಗವತಧರ್ಮ ಎಷ್ಟು ಸರಳ ನಿರಪಾಯ ರಾಜಮಾರ್ಗವಾಗಿದೆ ! ಇದನ್ನು ಸ್ವಲ್ಪವಾಗಿ ಯಥಾಶಕ್ತಿ ಆಚರಿಸಿದರೂ ಮಹಾಫಲವನ್ನು ಪಡೆಯಬಹುದು. ಎಷ್ಟು ಕರ್ತವ್ಯ ಮಾಡಿದ್ದೇವೆ ಎಂಬುದಕ್ಕಿಂತ ಹೇಗೆ ಮಾಡಿದ್ದೇವೆ ಎಂಬುದೇ ಮುಖ್ಯ. ಸುದಾಮನು ನೀಡಿದ ಹಿಡಿ ಅವಲಕ್ಕಿಗೆ ಭಗವಂತನು ಎಂತಹ ಪ್ರತಿಫಲವನ್ನು ನೀಡಿರುವನು ! ಆ ಹಿಡಿ ಅವಲಕ್ಕಿಯ ಹಿಂದೆ ಅಂತಹ ಪವಿತ್ರ ಭಾವವಿತ್ತು. ಶುದ್ಧ ಭಾವದಿಂದ ಮಾಡುವ ಅತ್ಯಲ್ಪ ಕರ್ಮವೂ ಪರಮ ಶ್ರೇಯಸ್ಸಿಗೆ ಕಾರಣವೆನಿಸುವುದು. ಕಾಗದದ ನೂರಾರು

ಎಳೆಗಳಿಗಿಂತಲೂ ರಾಷ್ಟ್ರಮುದ್ರೆ ಇರುವ ಒಂದು ನೋಟಿಗೆ ಎಷ್ಟು ಬೆಲೆ ಇದೆ ! ಭಕ್ತಿಯ ದೇವಮುದ್ರೆ ಇರುವ ಅಲ್ಪ ಕರ್ಮವೂ ನೂರಾರು ಕರ್ಮಗಳಿಗಿಂತ ಮಿಗಿಲು ಎಂದು ಶ್ರೀಕೃಷ್ಣನು ನಿಷ್ಕಾಮಕರ್ಮದ ಮಹತ್ತ್ವವನ್ನು ವರ್ಣಿಸಿ ಅದನ್ನು ಮುಂದಿನ ಭಾಗದಲ್ಲಿ ವಿವರಿಸುವನು.

ಫಲದ ಕಡೆ ಲಕ್ಷ್ಯ ಕೊಡದೆಯೇ (ಫಲದ ಆಸೆ ತೊರೆದು) ವಿಹಿತಕರ್ಮವನ್ನು ಅವಶ್ಯವಾಗಿ ಮಾಡಲೇಬೇಕೆಂದು ಶ್ರೀಕೃಷ್ಣನು ಆದೇಶಿಸಿದ್ದಾನೆ- **'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।'.**

ನಿಷ್ಕಾಮಕರ್ಮಯೋಗದ ಮಹತ್ತ್ವವನ್ನು ವಿವರಿಸುವುದರ ಜೊತೆಗೆ ಸ್ಥಿತಪ್ರಜ್ಞನ ಲಕ್ಷಣವಿವರಣೆಯೊಂದಿಗೆ ಎರಡನೆಯ ಅಧ್ಯಾಯವು ಕೊನೆಗೊಳ್ಳುತ್ತದೆ.

***

**ಮತ್ತೇಕೆ ಕರ್ಮದ ಜಂಜಾಟ ?**

**ಜ್ಯಾಯಸೀ ಚೇತ್ ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।**
**ತತ್ಕಿಂ ಕರ್ಮಣಿ ಘೋರೇ ಮಾಮ್ ನಿಯೋಜಯಸಿ ಕೇಶವ ॥** (3.1)

ಶ್ರೀಕೃಷ್ಣನ ಈವರೆಗಿನ ಉಪದೇಶವನ್ನು ಕೇಳಿದ ನಂತರ ಅವನ ಮಾತುಗಳಲ್ಲಿ ಕೆಲ ವಿರೋಧಾಭಾಸಗಳು ಅರ್ಜುನನಿಗೆ ಗೋಚರವಾದವು.

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾತ್...।** (2.49)

ಮುಂತಾದ ಮಾತುಗಳಿಂದ ಜ್ಞಾನಕ್ಕಿಂತ ಕರ್ಮವು ನಿಕೃಷ್ಟವೆಂದು ಸ್ವಾಮಿಯು ಹೇಳಿದ್ದಾನೆ. ಹೀಗಿದ್ದರೂ,

**...ಮಾ ತೇ ಸಂಗೋಽಸ್ತ್ವ ಕರ್ಮಣಿ ॥**
**ಯೋಗಸ್ಥಃ ಕುರು ಕರ್ಮಾಣಿ...॥** (2.47)

ಎಂದು ಮುಂತಾಗಿ ಕರ್ಮಗಳನ್ನು ಅವಶ್ಯವಾಗಿ ಆಚರಿಸಬೇಕೆಂದೂ ಹೇಳಿರುವನು. ಜ್ಞಾನವೇ ಶ್ರೇಷ್ಠವೆನ್ನುವುದಾದರೆ, ಆ ಜ್ಞಾನಯೋಗದ ಮಾರ್ಗದಲ್ಲೇ ಏಕೆ ನಡೆಯಬಾರದು? ಈ ಕರ್ಮ ಯೋಗದ ಜಂಜಾಟವೇಕೆ? ಎಂಬ ಸಂದೇಹವು ಸಹಜವಾಗಿ ಮೂಡುವುದು. 'ಒಂದೆಡೆ ಜ್ಞಾನವು ಶ್ರೇಷ್ಠವೆನ್ನುವುದು; ಇನ್ನೊಮ್ಮೆ ಕರ್ಮವನ್ನು ಆಚರಿಸಬೇಕೆಂದು ಹೇಳುವುದು; ಈ ವ್ಯಾಮಿಶ್ರಗಳಾದ ಮಾತುಗಳಿಂದ ನನ್ನ ಬುದ್ಧಿಯನ್ನೇ ವ್ಯಾಮೋಹಗೊಳಿಸುತ್ತಿರುವೆ. ಇಂತಹ ಮೋಹಕ್ಕೆ ಅವಕಾಶವಾಗದಂತಹ ನಿಶ್ಚಿತ ಜ್ಞಾನವನ್ನು ನನಗೆ ನೀಡು' ಎಂದು ಅರ್ಜುನನು ಪ್ರಶ್ನಿಸುತ್ತಾನೆ.

''ಕರ್ಮವು ನಿಕೃಷ್ಟವೆಂದು ಬೋಧಿಸುವಾಗ ಕೃಷ್ಣನ ಮನಸ್ಸಿನಲ್ಲಿ ಕಾಮ್ಯಕರ್ಮಗಳನ್ನು ನಿಷೇಧಿಸುವುದಿತ್ತು ; ನಿಷ್ಕಾಮವಾಗಿ ಕರ್ತವ್ಯಗಳನ್ನು ನಡೆಸಬೇಕೆಂಬುದೇ ಕೃಷ್ಣನ ಆಂತರ್ಯ'' ಎಂದಿಟ್ಟುಕೊಂಡರೂ ಈ ಪ್ರಶ್ನೆ ಇಲ್ಲಿಗೆ ಬಗೆಹರಿಯುವುದಿಲ್ಲ. ನಿಷ್ಕಾಮಕರ್ಮವನ್ನು ಆಚರಿಸಬೇಕೆಂದಿದ್ದರೆ ಯುದ್ಧವನ್ನೇ ಆರಂಭಿಸಬೇಕೆ? ಯುದ್ಧದ ಹೊರತು ಬೇರೆ ಅನೇಕ ವಿಧದ ನಿಷ್ಕಾಮಕರ್ಮಗಳು ಇವೆ. ಶಮದಮಾದಿರೂಪಗಳಾದ ಯತಿಧರ್ಮಗಳು ಎಂದೆಂದಿಗೂ ನಿಷ್ಕಾಮಕರ್ಮಗಳೇ.ಉಳಿದ ಧರ್ಮಗಳು ಅವರವರ ಮನಸ್ಸಿಗೆ ಅನುಸಾರವಾಗಿ ಕೆಲವೊಮ್ಮೆ ಸಕಾಮಗಳೂ ಕೆಲವೊಮ್ಮೆ ನಿಷ್ಕಾಮಗಳೂ ಆಗಬಲ್ಲವು. ಯಜ್ಞಯಾಗಾದಿಗಳನ್ನು ಕಾಮನೆಯಿಂದಲೂ, ಅದನ್ನು ತೊರೆದೂ ಮಾಡಬಹುದು. ಆದರೆ ಯತಿಧರ್ಮವನ್ನು ಆಚರಿಸುವಾಗ ಅಲ್ಲಿ ಕಾಮನೆಗೆ ಪ್ರವೇಶವೇ ಇರುವುದಿಲ್ಲ. ಉಳಿದ ಧರ್ಮಗಳು ವೈಕಲ್ಪಿಕವಾಗಿ ಅಕಾಮ್ಯಗಳಾಗಿದ್ದರೆ ಯತಿಧರ್ಮವು ಕೇವಲ ನಿಷ್ಕಾಮಧರ್ಮವಾಗಿರುವುದು. ಇಂತಹ ಯತಿಧರ್ಮವನ್ನು ಬಿಟ್ಟು ಕಾಮನೆಗಳು ಬಂದು ಇಣಿಕಿ ನೋಡಲು ಸಂದರ್ಭವಿರುವ ಉಳಿದ ಕರ್ತವ್ಯಗಳನ್ನು ಯಾಕೆ ಮಾಡಬೇಕು? ಅದರಲ್ಲೂ ಯುದ್ಧವನ್ನಂತೂ ನಿಷ್ಕಾಮನೆಯಿಂದ ಮಾಡಲು ಸಾಧ್ಯವೇ ಇಲ್ಲ. ಈ ಯುದ್ಧದಲ್ಲಿ ಮೊದಲಿಂದ ಕೊನೆಯವರೆಗೂ ಹೊಡೆಯುವುದು, ಕೊಲ್ಲುವುದು ಮುಂತಾದ ಭೀಷಣ ಹಿಂಸಾಕೃತ್ಯಗಳೇ ಇರುವುವು. ರಾಗದ್ವೇಷಗಳಿಲ್ಲದೆ ಈ ಘೋರಕೃತ್ಯವನ್ನು ನಡೆಸಲು ಸಾಧ್ಯವೆ? ನಿಷ್ಕಾಮನೆಯಿಂದ ಯುದ್ಧವನ್ನು ಆಚರಿಸುವುದೆಂದರೆ ಕಲ್ಲಿದ್ದಲು ಗಣಿಯಲ್ಲಿ ಕೆಲಸ ಮಾಡಿ ಕೈಗೆ ಮಸಿ ಅಂಟಬಾರದೆಂದು ಅಂದುಕೊಂಡಂತೆ ಅವ್ಯವಹಾರ್ಯವೆನಿಸುವುದು. ಕಾಮನೆಯ ಸೋಂಕೂ ಇಲ್ಲದೆ ಮಾಡಲು ಸಾಧ್ಯವಿರುವ ಅನೇಕ ರೀತಿಯ ಸತ್ಕರ್ಮಗಳು ಇರುವಾಗ ಕ್ಷಣಕ್ಷಣಗಳಲ್ಲಿ ಕೋಪ, ತಾಪಗಳಿಗೆ ಎಡೆಯಿರುವ ಈ ಭೀಕರ ಕೃತ್ಯದಲ್ಲಿ ತಾನು ಯಾಕೆ ತೊಡಗಬೇಕು? ಸಂನ್ಯಾಸ ವೃತ್ತಿಯನ್ನೇ ತಾನು ಆಚರಿಸುವುದು ಮೇಲಲ್ಲವೆ? – ಎಂದು ಅರ್ಜುನನಿಗೆ ನಾನಾ ಪ್ರಶ್ನೆಗಳು ತಲೆಯೆತ್ತುವುವು. ಆದುದರಿಂದಲೇ–

**ತತ್ ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ...।**

''ಘೋರವಾದ ಯುದ್ಧದ ಕಡೆಗೆ ನನ್ನನ್ನು ಯಾಕೆ ಪ್ರಚೋದಿಸುವೆ? '' ಎಂದು ಸ್ವಾಮಿಯನ್ನು ಕೇಳುವನು.

ಒಟ್ಟು ಅರ್ಜುನನು ಇಲ್ಲಿ ಎರಡು ಪ್ರಶ್ನೆಗಳನ್ನು ಪ್ರಸ್ತುತಪಡಿಸುವನು: (1) ಕರ್ಮಕ್ಕಿಂತ ಜ್ಞಾನವು ಶ್ರೇಷ್ಠವಾಗಿದೆ. ಆದುದರಿಂದ ಕರ್ಮಯೋಗ ಹಾಗೂ ಜ್ಞಾನಯೋಗಗಳಲ್ಲಿ ಜ್ಞಾನಯೋಗವನ್ನೇ ಆರಿಸಿಕೊಂಡು ಕರ್ಮವನ್ನು ತ್ಯಾಗ ಮಾಡಬಹುದಲ್ಲವೇ? (2) ಕರ್ಮವನ್ನು ಮಾಡುವುದಾದರೂ ನಿಷ್ಕಾಮ ನಿರಪಾಯಗಳಾದ ಯತಿಧರ್ಮಗಳು ಇರುವಾಗ ಈ ಯುದ್ಧವನ್ನೇ ಏಕೆ ಆಚರಿಸಬೇಕು?

## ಕರ್ಮತ್ಯಾಗವು ಅವ್ಯವಹಾರ್ಯ

ಮೊದಲನೆಯ ಪ್ರಶ್ನೆಗೆ ಶ್ರೀಕೃಷ್ಣನು ನೀಡುವ ಉತ್ತರ ಹೀಗಿದೆ :

ಕರ್ಮವೇ ಸಂಸಾರದ ಬೀಜವಾಗಿದೆ. ಅದರ ತ್ಯಾಗದಿಂದ ಸುಲಭವಾಗಿ ಮುಕ್ತಿಯನ್ನು ಪಡೆಯಬಹುದೆಂದು ಅರ್ಜುನನ ವಾದವಾಗಿದೆ. ಹೀಗಿದ್ದರೆ ಪಶು, ಪಕ್ಷ್ಯಾದಿ ಜನ್ಮಗಳಲ್ಲಿ ಜೀವಿಗಳಿಗೆ ಸಹಜವಾಗಿಯೇ ಮುಕ್ತಿಯು ಏಕೆ ದೊರೆಯುವುದಿಲ್ಲ? ಪಶು-ಪಕ್ಷಿಗಳಿಗೆ ಕರ್ಮದಲ್ಲಿ ಅಧಿಕಾರವೇ ಇರುವುದಿಲ್ಲ. ಅವುಗಳು ಮಾಡುವ ಕರ್ಮಗಳು ಸಂಸಾರಕ್ಕೆ ಕಾರಣವೇ ಅಲ್ಲ. ಹೀಗೆ ತಿರ್ಯಕ್ ಪ್ರಾಣಿಗಳ ಜೀವನದಲ್ಲಿ ಸಂಸಾರ ಬೀಜಗಳಾದ ಕರ್ಮ, ಪಾಪ ಪುಣ್ಯಗಳಿಗೆ ಅವಕಾಶವೇ ಇಲ್ಲದಿರುವುದರಿಂದ ಅವುಗಳಿಗೆ ಯಾಕೆ ಮುಕ್ತಿ ದೊರೆಯಬಾರದು? ಆದುದರಿಂದ ಬರೀ ನಿಷೇಧಾತ್ಮಕ (Negative) ವ್ಯವಹಾರದಿಂದ ಅರ್ಥಾತ್ ಕರ್ಮತ್ಯಾಗದಿಂದ ಮುಕ್ತಿಯು ದೊರೆಯದೆ ವಿಧಾನಾತ್ಮಕ (Positive) ವ್ಯವಹಾರದಿಂದ, ನಿಷ್ಕಾಮಕರ್ಮದಿಂದಲೇ ಮುಕ್ತಿಯನ್ನು ಹೊಂದಲು ಸಾಧ್ಯವಾದೀತು. ಬರೀ ಕರ್ಮವನ್ನು ಬಿಡುವುದರಿಂದಲೇ ಮುಕ್ತಿ ಎಂಬ ಭಾವದಿಂದ ಸಂನ್ಯಾಸವನ್ನು ಸ್ವೀಕರಿಸುವುದಿಲ್ಲ. ಮನಸ್ಸು ಏಕಾಗ್ರವಾಗಿ ಭಗವನ್ನಿಷ್ಠವಾಗಿರಲು ಅನುಕೂಲವಾಗುವುದೆಂಬ ವಿಧಾಯಕ ಉದ್ದೇಶದಿಂದಲೇ ಸಂನ್ಯಾಸದ ಪದ್ಧತಿಯು ಪ್ರವೃತ್ತವಾಗಿದೆ.

**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ।** (3.4)

ಬರಿ ಸಂನ್ಯಾಸವನ್ನು ಅವಲಂಬಿಸಿ ಕರ್ಮತ್ಯಾಗವನ್ನು ಮಾತ್ರ ಮಾಡುವುದರಿಂದ ಮುಕ್ತಿಯಿಲ್ಲ; ಅಲ್ಲೂ ನಿಷ್ಕಾಮಕರ್ಮ ಹಾಗೂ ಜ್ಞಾನದ ಪ್ರಯತ್ನ ಇವೆರಡೂ ಬೇಕು.

ಕರ್ಮವು ಸಂಸಾರದ ಬೀಜವಾಗಿರುವುದರಿಂದ ಯಾವ ಕರ್ಮವನ್ನೂ ಆಚರಿಸದೆ ಇದ್ದರೆ, ಬೇರು ಕಿತ್ತರೆ ಮರವು ಬೀಳುವಂತೆ, ನಮ್ಮ ಇಡೀ ಸಾಂಸಾರಿಕ ಜೀವನವೇ ಒಮ್ಮೆ ಚಿರವಿಶ್ರಾಂತಿಯನ್ನು ಪಡೆಯಬಹುದಲ್ಲ ಎಂದು ಪ್ರಶ್ನಿಸಬಹುದು. ಆದರೆ ಕರ್ಮದಿಂದ ಪೂರ್ಣ ಬಿಡುಗಡೆ ನಮಗೆ ಎಂದಿಗೂ ಶಕ್ಯವಿಲ್ಲ. ನಾವು ಅದನ್ನು ಬಿಟ್ಟರೂ ಅದು ನಮ್ಮನ್ನು ಅಂಟಿಕೊಂಡೇ ತೀರುವುದು. ಹೊಸ ಕರ್ಮಗಳನ್ನು ನಾವು ಮಾಡದಿದ್ದರೂ ಹಿಂದಿನ ಕರ್ಮಗಳನ್ನು ನಾವು ಭೋಗಿಸಿಯೇ ಅವುಗಳನ್ನು ಮುಕ್ತಾಯಗೊಳಿಸಬೇಕು. ಒಂದು ಕರ್ಮವನ್ನು ಅನುಭವಿಸುವಾಗ ಹತ್ತು ಹೊಸ ಕರ್ಮಗಳು ಸಿದ್ಧವಾಗುತ್ತವೆ. ರಕ್ತಬೀಜನ ಸಂತಾನದಂತೆ ಈ ಕರ್ಮಗಳ ಸಂತಾನವು ಬೆಳೆಯುತ್ತಲೇ ಹೋಗುವುದು. ಒಬ್ಬ ರಕ್ತಬೀಜನು ಸಾಯುವಾಗ ಅವನ ರಕ್ತದಿಂದ ಸಾವಿರಾರು ರಕ್ತಬೀಜರು ಹುಟ್ಟಿದಂತೆ ಒಂದು ಕರ್ಮವನ್ನು ಭೋಗಿಸಿ ಅದನ್ನು ಮುಗಿಸುವಾಗ ನೂರು ಕರ್ಮಗಳು ತಯಾರಾಗುತ್ತವೆ. ಇದಕ್ಕೆ ಪರ್ಯವಸಾನವಿಲ್ಲ. ಆದುದರಿಂದ ಕರ್ಮವನ್ನು

ತ್ಯಾಗಮಾಡಿ ಸುಲಭವಾಗಿ ಸಂಸಾರದ ಬೇರನ್ನೇ ಕಿತ್ತು ಒಗೆಯಬಹುದೆಂದು ಆಲೋಚಿಸುವುದು ಬರೀ ಹುಚ್ಚುಕಲ್ಪನೆ.

ಇಷ್ಟೇ ಅಲ್ಲದೆ ಕರ್ಮಗಳನ್ನು ಮಾಡದೆ ಸುಮ್ಮನೆ ಇರಲೂ ಸಾಧ್ಯವಿಲ್ಲ. ನಾವು ನಿರಂತರವಾಗಿ ಏನಾದರೊಂದು ಕಾರ್ಯವನ್ನು ಮಾಡುತ್ತಲೇ ಇರುವೆವು. ಉಸಿರಾಡಿಸುವುದು ಕೂಡ ಒಂದು ಕಾರ್ಯವೇ. ಅದರಿಂದಲೂ ಅನೇಕ ಹಿಂಸಾಕೃತಿಗಳು ನಡೆಯುವುವು. ಕರ್ಮವು ಬಂಧಕ ಹಾಗೂ ಪಾಪಲೇಪಕ್ಕೆ ಕಾರಣವೆಂದು ಕರ್ಮವನ್ನೇ ಪೂರ್ತಿ ಬಿಡಲು ಸಾಧ್ಯವೆ? ಆದ್ದರಿಂದ ಕರ್ಮವನ್ನು ಪೂರ್ತಿಯಾಗಿ ತ್ಯಜಿಸುವುದು ಅಸಾಧ್ಯ ಹಾಗೂ ಅವ್ಯವಹಾರ್ಯವಾಗಿದೆ. ಒಂದು ಪಕ್ಷ ಬಾಹ್ಯಕರ್ಮಗಳನ್ನು ತೊರೆದು ಅರಣ್ಯದಲ್ಲಿ ತಪಸ್ಸಿಗಾಗಿ ಕುಳಿತ ಮಾತ್ರಕ್ಕೆ ಆತನಿಗೆ ಸಿದ್ಧಿಯಾಗುವುದೆ? ಒಳಗೆ ಮನೋದೋಷಗಳನ್ನು ತುಂಬಿಕೊಂಡು ಅರಣ್ಯದಲ್ಲಿ ಕುಳಿತಾದರೂ ಆತ ಮಾಡುವುದೇನು? ಇಂದ್ರಿಯಗಳಿಂದ ಏನೂ ಬಾಹ್ಯ ವ್ಯಾಪಾರಗಳನ್ನು ಮಾಡದೆ ಆತ ಸುಮ್ಮನೆ ಕುಳಿತರೂ ಒಳಗೆ ತನಗೆ ಬೇಕಾದ ಸಾಂಸಾರಿಕ ವಸ್ತುಗಳನ್ನೇ ಚಿಂತಿಸುತ್ತಾನೆ. ಇಂತಹ ಡಂಭಾಚಾರದಿಂದ ಆತನಿಗೆ ಈ ಸಾಂಸಾರಿಕ ಜೀವನದಲ್ಲೂ ಸುಖವಿಲ್ಲ; ಪರಲೋಕದಲ್ಲೂ ಅನಿಷ್ಟವೇ. ಹೀಗೆ ಇಹಪರಗಳೆರಡೂ ಇಲ್ಲದೆ ಆತ ಉಭಯಭ್ರಷ್ಟನಾಗುವನು. ಕರ್ಮಗಳನ್ನು ವರ್ಜಿಸಿ ಅರಣ್ಯಕ್ಕೆ ಹೋದರೂ ಅದು ಫಲಕಾರಿಯಾಗಲು ಮನೋನಿಗ್ರಹವೇ ಅವಶ್ಯ ಎಂದಿರುವಾಗ ಅದನ್ನೇ ಪಡೆದು ಸಂಸಾರದಲ್ಲೇ ಏಕಿರಬಾರದು? ಮುಕ್ತಿಗೆ ಕರ್ಮತ್ಯಾಗಕ್ಕಿಂತಲೂ ಮನೋನಿಗ್ರಹವೇ ಮುಖ್ಯವಾಗಿರುವಾಗ ಅದನ್ನೇ ಸಾಧಿಸಿ ಸಂಸಾರದಲ್ಲೇ ಇರುವುದು ಲೇಸಲ್ಲವೇ?

ದಾಂತಸ್ಯ ಕಿಮರಣ್ಯೇನ ತಥಾಽದಾಂತಸ್ಯ ಭಾರತ ।
ಯತ್ರೈವ ನಿವಸೇದ್ದಾಂತಃ ತದರಣ್ಯಂ ಸ ಚಾಶ್ರಮಃ ॥ –ಮ.ಭಾ.ಶಾಂತಿಪರ್ವ

''ಮನೋನಿಗ್ರಹವಿದ್ದವನಿಗೆ ಅರಣ್ಯ ಏಕೆ? ಮನೋನಿಗ್ರಹವಿಲ್ಲದವನಿಗೂ ಅರಣ್ಯ ಏಕೆ? ನಿಗ್ರಹಶೀಲನು ಎಲ್ಲಿರುವನೋ ಅದೇ ಅರಣ್ಯ; ಅದೇ ಆಶ್ರಮ.'' ಆದುದರಿಂದ ಕರ್ಮತ್ಯಾಗದತ್ತ ಲಕ್ಷ್ಯ ಕೊಡುವುದಕ್ಕಿಂತ ಮನೋನಿಗ್ರಹದ ಕಡೆಗೇ ಗಮನ ಕೊಡುವುದು ಸೂಕ್ತವೆನಿಸುವುದು. ಇಷ್ಟೇ ಅಲ್ಲದೆ ಮನೋನಿಗ್ರಹವನ್ನು ಪಡೆಯಬೇಕಾದರೂ ಕರ್ಮವು ಆವಶ್ಯಕವಾಗಿರುವುದು. ಅದು ಇಲ್ಲದೆ ರಾಗದ್ವೇಷಗಳ ಪರಿಹಾರವಾಗಿ ಮನೋನಿಗ್ರಹವನ್ನು ಹೇಗೆ ಸಾಧಿಸಬಲ್ಲನು? ಹೀಗೆ ಸರ್ವಾತ್ಮನಾ ಕರ್ಮ ಅನಿವಾರ್ಯ ಹಾಗೂ ಆವಶ್ಯಕವೆಂದು ಸ್ಪಷ್ಟವಾಗುತ್ತದೆ. ಇದನ್ನೇ;

**ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥** (3.6)

–ಎಂದು ಮುಂತಾದ ಶ್ಲೋಕಗಳಲ್ಲಿ ಪರಮಾತ್ಮನು ತಿಳಿಸಿದ್ದಾನೆ.

## ರ್ಮವು ಯಜ್ಞರೂಪವಾಗಿರಲಿ

ಇನ್ನೂ ಒಂದು ಪ್ರಶ್ನೆಯನ್ನು ಬಿಡಿಸಬೇಕಿದೆ. ಕರ್ಮವು ಬಂಧಕವೆಂದು ಶಾಸ್ತ್ರವು ಸಾರಿ ಹೇಳಿದೆ:

**ಕರ್ಮಣಾ ಬಧ್ಯತೇ ಜಂತುಃ ।**

ಹೀಗೆ ಬಂಧಕವಾಗುವ ಕರ್ಮವನ್ನು ಆಚರಿಸಿಕೊಂಡು ನಾವು ಮುಕ್ತಿಯನ್ನು ಹೇಗೆ ಪಡೆಯುವುದು? ಮುಕ್ತಿವಿರೋಧಿಯಾದ ಕರ್ಮವನ್ನು ಆಚರಿಸುತ್ತ ಮುಕ್ತಿಯನ್ನು ಪಡೆಯಲು ಪ್ರಯತ್ನಿಸುವುದು ದುಃಸಾಹಸವೇ ಆಗುವುದು. ಅಪಥ್ಯವನ್ನು ಆಚರಿಸುತ್ತ ಔಷಧವನ್ನು ಸ್ವೀಕರಿಸುವುದು ಅನುಪಯುಕ್ತವೆನಿಸುವಂತೆ, ಕರ್ಮಾಚರಣೆಯೊಂದಿಗೆ ನಾವು ಮಾಡುವ ಮುಕ್ತಿಯ ಪ್ರಯತ್ನವೂ ವಿಫಲವೇ ಆಗುವುದು ಎಂಬುದೇ ಈ ಪ್ರಶ್ನೆ. ಇದನ್ನೇ ಮೂರನೇ ಅಧ್ಯಾಯದಲ್ಲಿ ವಿಸ್ತಾರವಾಗಿ ಪರಿಹರಿಸಲಾಗಿದೆ.

ಏನೂ ಆಹಾರವಿಲ್ಲದೆ ಜೀವಿಸಲು ಅಸಾಧ್ಯವಾದುದರಿಂದ ನಾವು ಜೀವಿಸಲು ಏನಾದರೂ ಆಹಾರವನ್ನು ಸ್ವೀಕರಿಸಲೇಬೇಕು. ಯಾವುದೇ ಕೆಟ್ಟ ಆಹಾರವನ್ನು ಸ್ವೀಕರಿಸುವುದರಿಂದ ಶರೀರವು ಕೆಟ್ಟುಹೋಗುವುದೆಂದು ಆಹಾರವನ್ನೇ ಸ್ವೀಕರಿಸದಿದ್ದರೆ ಅದರಿಂದ ಶರೀರವೇ ಅಳಿದು ಹೋಗುವುದು. ಅದಕ್ಕಾಗಿ ಉತ್ತಮ ಪೌಷ್ಟಿಕ ಆಹಾರವನ್ನು ಸ್ವೀಕರಿಸಿಯೇ ಶರೀರವನ್ನು ಪೋಷಿಸಬೇಕು. ಅದರಂತೆ ಕರ್ಮಗಳಿಂದ ಸಂಸಾರಬಂಧವು ಬಿಗಿಯಾಗುವುದೆಂದು ಕರ್ಮವನ್ನೇ ತ್ಯಜಿಸುವುದಲ್ಲ. ಕೆಟ್ಟ ಕರ್ಮಗಳಿಂದ ಮಾತ್ರ ಈ ಅನರ್ಥವಾಗುವುದು. ಉತ್ತಮ ಭಾವನೆಯಿಂದ ಸತ್‌ಕರ್ಮವನ್ನು ಆಚರಿಸುವುದರಿಂದ ಯಾವ ಕೆಡುಕೂ ಆಗಲಾರದು. ಅಂತಹ ಕರ್ಮವು ಮುಕ್ತಿಗೆ ವಿರೋಧಿಯಾಗಲೀ ಬಂಧಕವಾಗಲೀ ಆಗಲಾರದು. ಅದು ಚೈತನ್ಯ ಪೋಷಣೆಗೆ, ಆತ್ಮವಿಕಾಸಕ್ಕೆ ಸಹಾಯಕವೇ ಆಗುವುದು. ಆಹಾರದಲ್ಲಿ ಒಳ್ಳೆಯದು ಹಾಗೂ ಕೆಟ್ಟದ್ದನ್ನು ಪರಾಮರ್ಶಿಸಿ ಒಳ್ಳೇ ಆಹಾರವನ್ನು ಸ್ವೀಕರಿಸುವಂತೆ ಇಡೀ ಕರ್ಮವನ್ನೇ ನಾವು ದ್ವೇಷಿಸದೆ ಕರ್ಮಗಳನ್ನು ಪೃಥಕ್ಕರಿಸಿ ಒಳ್ಳೇ ಕರ್ಮವನ್ನು ಆಚರಿಸುವುದರಿಂದಲೇ ಆತ್ಮನ ಪೋಷಣೆ ಇದೆ. ನಮ್ಮ ಆತ್ಮನ ಕಲ್ಯಾಣಮಯ ರೂಪವನ್ನು ಮುಚ್ಚಿಡುವ, ಅಜ್ಞಾನದ ಪೆಟ್ಟಿಗೆಯನ್ನು ತೆರೆಯುವ ಬೀಗದ ಕೈಯೇ ಕರ್ಮ ಎನ್ನಬಹುದು. ಬೀಗದ ಕೈಯಿಂದ ಪೆಟ್ಟಿಗೆಯನ್ನು ಮುಚ್ಚಲೂಬಹುದು; ತೆರೆಯಲೂಬಹುದು. ಅದರಂತೆ ಕರ್ಮವು ಬಂಧಕವೂ ಎನಿಸಬಹುದು; ಮೋಚಕವಾಗಿಯೂ ಪರಿಣಮಿಸಬಹುದು. ಅದನ್ನು ಮಾಡುವ ದೃಷ್ಟಿಯನ್ನು ಇದು ಅವಲಂಬಿಸಿಕೊಂಡಿದೆ.

ಕರ್ಮಗಳಲ್ಲಿ ಯಾವುದು ಬಂಧಕವೆಂಬುದನ್ನು ಮೊದಲಾಗಿ ನಾವು ಅರಿತುಕೊಳ್ಳಬೇಕು. ಕರ್ಮ-ವಿಕರ್ಮಗಳ ವಿವೇಚನೆಯನ್ನು ಮಾಡಿ, ಯಾವ ಕರ್ಮವು ನಮ್ಮನ್ನು ಸಂಸಾರದ ಕಡೆಗೆ ತಳ್ಳದೆ ಪರಮಾತ್ಮನ ಕಡೆಗೆ ಒಯ್ಯಬಹುದೋ ಅಂತಹ ಸತ್ಕರ್ಮವನ್ನು ಅರಿತುಕೊಂಡು ಅದರಂತೆ

ನಡೆಯುವುದರಿಂದ ಜೀವನದಲ್ಲಿ ನಿಜವಾದ ಲಾಭವನ್ನೇ ಪಡೆಯಬಹುದು. ಕರ್ಮದ ಈ ವಿವೇಚನೆಯನ್ನು ಶ್ರೀಕೃಷ್ಣನು ಈ ರೀತಿ ಮಾಡಿರುವನು;

**ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ । (3.9)**

ಯಜ್ಞವೆಂದರೆ ಭಗವಂತನ ಅಥವಾ ಅವನಿಗಾಗಿ ಮಾಡುವ ತ್ಯಾಗಪೂರ್ವಕವಾದ ಸೇವೆ. ಪರಮಾತ್ಮನ ಉದ್ದೇಶದಿಂದ ಮಾಡುವ ಕರ್ಮವು ಬಂಧಕವಾಗಲಾರದು. ಸ್ವಾರ್ಥದ ಉದ್ದೇಶದಿಂದ ನಡೆಸುವ ಕಾರ್ಯಗಳೇ ಸಂಸಾರದಲ್ಲಿ ನಮ್ಮನ್ನು ಬಿಗಿಯುವ ಶೃಂಖಲೆಗಳಾಗಬಲ್ಲವು. ಭಗವಂತನ ಪೂಜಾರೂಪವಾಗಿ ನಾವು ಕರ್ಮಗಳನ್ನು ಮಾಡಹೊರಟರೆ, ಅವೇ ನಮ್ಮ ಆತ್ಮಸೌಂದರ್ಯವನ್ನು ಬೆಳಗಿಸುವ ಪುಷ್ಪಹಾರ, ಆಭರಣಗಳಾಗುವುವು. ಹಿಂದೆ, ಕರ್ಮವನ್ನು ಆಚರಿಸುವಾಗ ಆಸಕ್ತಿಯನ್ನು ತ್ಯಜಿಸಬೇಕೆಂದು ಹೇಳಿದ್ದರೆ, ಈಗ ಕರ್ಮವನ್ನು ಯಜ್ಞರೂಪವಾಗಿ ಆಚರಿಸಬೇಕೆಂಬ ಹೊಸ ಸಂಗತಿಯನ್ನು ತಿಳಿಸಲಾಗಿದೆ. ತ್ಯಾಗ ಮತ್ತು ಸೇವೆ ಇವೆರಡು ಯಜ್ಞದಲ್ಲಿ ಅಡಕವಾದ ಅಂಶಗಳು. ಭಗವತ್‌ಸೇವಾ ದೃಷ್ಟಿಯಿಂದ ನಮ್ಮಲ್ಲಿರುವ ವಸ್ತುವಿನ ತ್ಯಾಗದೊಂದಿಗೆ ನಡೆಸುವ ಕ್ರಿಯೆಯೇ ಯಜ್ಞವಾಗುವುದು. ಬರಿ ಅಗ್ನಿಯಲ್ಲಿ ಮಾಡುವ ಹೋಮವೇ ಯಜ್ಞವೆಂಬ ಪರಿಮಿತ ಅರ್ಥದಲ್ಲಿ ಈ ಯಜ್ಞಶಬ್ದವನ್ನು ಇಲ್ಲಿ ಬಳಸಲಾಗಿಲ್ಲ. ಯಜ್ಞಶಬ್ದದ ಅರ್ಥದ ವ್ಯಾಪ್ತಿಯನ್ನು ವಿಸ್ತರಿಸಲಾಗಿದೆ. ಭಗವತ್ ಪ್ರೀತಿಯಾಗಲಿ ಎಂಬ ಉದ್ದೇಶದಿಂದ ಅವನ ಪೂಜಾರೂಪವಾಗಿ ಫಲದ ಆಸಕ್ತಿ ಇಲ್ಲದೆ ಮಾಡುವ ಸತ್ಕಾರ್ಯಗಳೆಲ್ಲ ಯಜ್ಞಗಳಾಗುವುವು. ಯುದ್ಧವನ್ನು ರಾಗದ್ವೇಷಗಳಿಲ್ಲದೆ ಹೇಗೆ ಮಾಡಲಿ ಎಂಬ ಪ್ರಶ್ನೆಯನ್ನು ಶ್ರೀಕೃಷ್ಣನು ಈ ರೀತಿಯಾಗಿ ಪರಿಹರಿಸಿದ್ದಾನೆ. ಈ ಭಾವನೆಯಿಂದ ಪ್ರೇರಿತನಾಗಿ ಶ್ರೀಹರಿಯ ಪೂಜಾರೂಪವಾಗಿ ಈ ಯುದ್ಧವನ್ನು ಮಾಡುವಾಗ ರಾಗದ್ವೇಷಾದಿಗಳ ಉದಯವಾಗಲು ಅವಕಾಶವೆಲ್ಲಿ ? ಸ್ವಾರ್ಥ ಪ್ರೇರಿತನಾಗಿ ಮಾಡುವಾಗ ಮಾತ್ರ ಈ ಮನೋವಿಕಾರಗಳು ತಲೆಯೆತ್ತುವುವು. ಅಂತಹ ಕಾಮ್ಯಕರ್ಮಗಳನ್ನು ಮಾತ್ರ;

**ದೂರೇಣ ಹ್ಯವರಂ ಕರ್ಮ ।**

ಎಂದು ಶ್ರೀಕೃಷ್ಣ ಪರಮಾತ್ಮನು ನಿಂದಿಸಿರುವುದಾಗಿದೆ. ಯಜ್ಞರೂಪವಾದ ಕರ್ತವ್ಯವನ್ನೇ ಶ್ರೀಕೃಷ್ಣನು ಪ್ರಶಂಸಿಸಿ ಆಚರಿಸಬೇಕೆಂದು ವಿಧಿಸಿರುವುದರಿಂದ ಪರಮಾತ್ಮನ ಉಪದೇಶಗಳಲ್ಲಿ ಯಾವುದೇ ವಿರೋಧ ಅಸಂಗತಿಗಳು ಇಲ್ಲವೆಂಬುದು ಇಲ್ಲಿ ಸ್ಪಷ್ಟವಾಗುವುದು.

**ಪರಸ್ಪರಂ ಭಾವಯಂತಃ**

ತ್ಯಾಗ-ಸೇವೆಗಳ ಸಮನ್ವಯರೂಪವಾದ ಯಜ್ಞದೃಷ್ಟಿಯಿಂದ ಈ ಕರ್ತವ್ಯಗಳನ್ನು ಮಾನವರು ಅವಶ್ಯವಾಗಿ ಆಚರಿಸಲೇಬೇಕೆಂಬುದನ್ನು ಪರಮಾತ್ಮನು ವಿವರಿಸುತ್ತಾನೆ. ಕೃತಜ್ಞತಾದೃಷ್ಟಿಯ ಸಂಕೇತವಾಗಿಯೂ ಜಗಚ್ಚಕ್ರದ ಪ್ರವರ್ತನೆಯ ಉದ್ದೇಶದಿಂದಲೂ ಈ

ಕರ್ತವ್ಯವನ್ನು ಜಗತ್ತಿನಲ್ಲಿ ಹುಟ್ಟಿದ ಮಾನವನು ಅವಶ್ಯವಾಗಿ ಆಚರಿಸಲೇಬೇಕಾಗುವುದು. ನಾವು ಪ್ರತಿಕ್ಷಣದಲ್ಲಿ ಪರಮಾತ್ಮನಿಂದ ಹಾಗೂ ದೇವತೆಗಳಿಂದ ಉಪಕೃತರಾಗಿದ್ದೇವೆ. ಭೂಮಿ, ನೀರು, ತೇಜಸ್ಸು, ಗಾಳಿ, ಆಕಾಶ ಮುಂತಾದ ಭಗವಂತನು ಒದಗಿಸಿದ ವಸ್ತುಗಳನ್ನು ನಾವು ಅವಲಂಬಿಸಿಕೊಂಡಿರುತ್ತೇವೆ. ಈ ಸೃಷ್ಟಿಯ ಅಭಿಮಾನಿ ಹಾಗೂ ಅಂತರ್ಯಾಮಿ ದೇವತೆಗಳನ್ನು ಆಧರಿಸಿಯೇ ನಮ್ಮ ಆಹಾರ, ವ್ಯವಹಾರ ಮೊದಲಾದ ಎಲ್ಲ ಪ್ರವೃತ್ತಿಗಳೂ ನಡೆದಿವೆ. ಹೀಗೆ ಜಗನ್ನಿಯಾಮಕವಾದ ಆ ಪರಾತ್ಪರ ಶಕ್ತಿಯಿಂದ ಪ್ರತಿ ಕ್ಷಣವೂ ಪ್ರಯೋಜನವನ್ನು ಪಡೆಯುತ್ತಿರುವಾಗ, ಅವನಿಗಾಗಿ ಅವನ ಸೇವಾರೂಪವಾಗಿ ಮಾಡಬೇಕಾದ ಕರ್ತವ್ಯಗಳೂ ನಮಗಿವೆ ಎಂಬುದನ್ನು ನಾವು ಅರಿತುಕೊಳ್ಳಬೇಕು. ಈ ಜಗತ್ತಿನ ಒಡೆತನ ಯಾರಿಗಿದೆ? ಯಾವ ವ್ಯಕ್ತಿಗೂ, ಸಮಾಜಕ್ಕೂ ಈ ಜಗತ್ತಿನ ಮೇಲೆ ಪ್ರಭುತ್ವವಿಲ್ಲ.

**ಈಶಾವಾಸ್ಯಮಿದಂ ಸರ್ವಮ್ ।** –ಈಶೋಪನಿಷತ್

ಈ ಜಗತ್ತಿಗೆಲ್ಲ ಒಬ್ಬನೇ ಮಹಾಪ್ರಭು. ಅವನೇ ಶ್ರೀಹರಿ. ಇದೆಲ್ಲವೂ ಅವನ ಸೊತ್ತು. ಅವನ ಸೇವಾರೂಪವಾದ ಕರ್ತವ್ಯವನ್ನು ಮಾಡದೆ ಜಗತ್ತಿನ ವಸ್ತುಗಳನ್ನು ಇಚ್ಛಾನುಸಾರವಾಗಿ ನಾವು ಹೇಗೆ ಭೋಗಿಸಬಲ್ಲೆವು? ಆಗರ್ಭ ಶ್ರೀಮಂತನಾದರೂ ಇಂತಹ ಸೇವಾರೂಪವಾದ ಕರ್ತವ್ಯಗಳನ್ನು ಮಾಡದೆ ಆತನಿಗೆ ಈ ವಿಶ್ವದ ವಸ್ತುಗಳನ್ನು ಸ್ವೀಕರಿಸಲು ಅಧಿಕಾರವಿಲ್ಲ. ಕಡುಬಡವನಾದರೂ ಕರ್ತವ್ಯನಿಷ್ಠನಾದರೆ ಅವನಿಗೆ ತನ್ನ ಜೀವನಕ್ಕೆ ಆವಶ್ಯಕವಾದುದನ್ನು ಪಡೆಯಲು ಅಧಿಕಾರವಿದೆ. ಇದನ್ನೇ ಈಶಾವಾಸ್ಯೋಪನಿಷತ್ತಿನಲ್ಲಿ ಹೇಳಿದೆ;

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ।**

ಸೊತ್ತು ವ್ಯಕ್ತಿಗತವಾಗಿದ್ದರೆ ಆತನು ಅದನ್ನು ತನಗಾಗಿ, ತನ್ನ ಪರಿವಾರದವರಿಗಾಗಿಯೇ ಉಪಯೋಗಿಸುತ್ತಾನೆ. ತನ್ನ ಸಂಚಯವನ್ನು ಹೆಚ್ಚಿಸಲು ಇತರರನ್ನು ಶೋಷಣೆ ಮಾಡಲು ಆತನು ಹಿಂಜರಿಯುವುದಿಲ್ಲ. ಪಕ್ಷದ ಹಾಗೂ ಒಂದು ಗುಂಪಿನ ಸರ್ವಾಧಿಕಾರವು ಬೆಳೆದು ವ್ಯಕ್ತಿತ್ವದ ದಮನ ಮತ್ತು ಪ್ರಜೆಗಳ ಶೋಷಣೆಯು ನಡೆಯಲು ಅವಕಾಶವಿದೆ. ಎಲ್ಲ ವಸ್ತುಗಳ ಒಡೆತನ ವ್ಯಕ್ತಿಯದೂ ಅಲ್ಲ; ಸರಕಾರದ್ದೂ ಅಲ್ಲ; ಅವೆಲ್ಲವೂ ಪರಮಾತ್ಮನವು ಎಂಬ ಭಾವವು ರೂಢಮೂಲವಾದರೇ ವ್ಯಕ್ತಿತ್ವ ಹಾಗೂ ರಾಷ್ಟ್ರ ಇವೆರಡರ ಪ್ರಗತಿಯು ಸಾಧ್ಯವಾಗುವುದು. ವಿಶ್ವದಲ್ಲಿ ಸತ್ ಪ್ರವೃತ್ತಿಗಳು ಬೆಳೆಯುವುವು. ಜಗತ್ತಿಗೆಲ್ಲ ದೇವರೇ ಒಡೆಯನೆಂದು ಭಾವಿಸುವವನು ಆ ವಿಶ್ವಚಾಲಕ ಶಕ್ತಿಯ ನಿಷ್ಠಾವಂತ ನಾಗರಿಕನಾಗಿ ವರ್ತಿಸಲು ಪ್ರಯತ್ನಿಸುವನು. ಅಂತಹ ವ್ಯಕ್ತಿಯು ಭಗವಂತನ ನಿಯಮ–ಆದೇಶಗಳಿಗನುಸಾರವಾಗಿ ದೇವರಿಗೆ ಪ್ರೀತಿಕರವೂ ಲೋಕಹಿತಕಾರಿಯೂ ಆದ ಕರ್ತವ್ಯಮಾರ್ಗದಲ್ಲಿ ಸ್ವಲ್ಪವೂ ವಿಚಲಿತನಾಗದೆ ಮುನ್ನಡೆಯುವನು.

ಇಂತಹ ಸತ್ಕರ್ಮಗಳೇ ದೇವರಿಗೆ ನಾವು ಕೊಡಬಹುದಾದ ಆಹಾರ. ಭಗವಂತನಿಂದ ನಾವು ಆಹಾರವನ್ನು ಪಡೆಯುತ್ತಿರುವಾಗ ಪ್ರತಿಯಾಗಿ ನಾವೂ ಅವನಿಗೆ ಪ್ರಿಯವಾದ ಭೋಜ್ಯ ವಸ್ತುವನ್ನು ಕೊಡಬೇಡವೆ? ಲೋಕದಲ್ಲಿ ಧರ್ಮ, ಕರ್ಮಗಳು ಲೋಪವಾದಾಗ ದೇವತೆಗಳು ಬಡವಾಗುತ್ತಾರೆಂದು ಪುರಾಣಗಳಲ್ಲಿ ವರ್ಣಿಸಲಾಗಿದೆ. ಇದರ ಅರ್ಥವೇನು? ನಾವು ಮಾಡುವ ಸತ್ಕರ್ಮಗಳನ್ನು ಪರಮಾತ್ಮನು ಸ್ವೀಕರಿಸುವನು, ದೇವತೆಗಳು ಸ್ವೀಕರಿಸುವರು.

**ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್ ॥**

ಇಂತಹ ಸತ್ಕರ್ಮಗಳನ್ನು ನಾವು ಮಾಡುವುದರಿಂದಲೇ ದೇವತೆಗಳಿಗೆ ನಾವು ಆಹಾರ ಒದಗಿಸಿದಂತಾಗುವುದು. ಉತ್ತಮ ಧರ್ಮ, ಕರ್ಮಗಳಿಂದಲೇ ಲೋಕದಲ್ಲಿ ದೈವೀಶಕ್ತಿಯು ಪ್ರವರ್ಧಮಾನವಾಗುವುದು. ಇಂತಹ ಸತ್ಕರ್ಮಗಳು ಲೋಕದಲ್ಲಿ ಶಿಥಿಲವಾದರೆ ದೈವೀಶಕ್ತಿಗೆ ಆಹಾರ ಸಿಗದಂತಾಗಿ ಅದರ ಪೋಷಣೆಯು ನಿಂತುಹೋಗಿ ಲೋಕದಲ್ಲಿ ಆ ಶಕ್ತಿಯು ಕುಂಠಿತವಾಗುವುದು. ಇದರಿಂದ ಲೋಕಕ್ಕೆ ತೀವ್ರ ಹಾನಿ ಇದೆ. ಆದುದರಿಂದ ದೇವತೆಗಳಿಂದ ಉಪಕೃತರಾದ ನಾವು ಅವರಿಗೆ ಇಷ್ಟವಾದ ಆಹಾರವನ್ನು ಸಮರ್ಪಿಸುವುದು ನಮ್ಮ ಕರ್ತವ್ಯವಾಗಿದೆ. ಭಗವಂತನ ಉದ್ದೇಶದಿಂದ ಮಾಡುವ ಸತ್ಕರ್ಮವೇ ಯಜ್ಞವಾಗಿದ್ದು, ಇದೇ ದೇವತೆಗಳಿಗೆ ನಾವು ನೀಡಬಹುದಾದ ಪರಮ ಪವಿತ್ರ ನೈವೇದ್ಯವಾಗಿದೆ. ಇದರಿಂದಲೇ ಲೋಕದಲ್ಲಿ ದೈವೀಶಕ್ತಿಯು ವಿಜೃಂಭಿತವಾಗಿ ಹಿತವಾತಾವರಣದ ನಿರ್ಮಾಣವಾಗುವುದು:

**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ।**

ವಿಶ್ವಚಕ್ರದ ಪ್ರವರ್ತನೆಗಾಗಿ ದುಡಿಯುವುದು ಪ್ರಪಂಚದ ಘಟಕರಾಗಿರುವ ನಮ್ಮ ಅವಶ್ಯ ಕರ್ತವ್ಯವಾಗಿದೆ. ನಮ್ಮ ಸತ್‌ಕರ್ಮ ಸದ್‌ವ್ಯವಹಾರಗಳಿಂದ ಪ್ರಾಕೃತಿಕವಾಗಿಯೂ ಸಾಮಾಜಿಕವಾಗಿಯೂ ಉತ್ತಮ ವಾತಾವರಣವು ನೆಲೆಸುವಂತೆ ಪ್ರಯತ್ನಿಸಿ ಜಗಚ್ಚಕ್ರದ ಅಬಾಧಿತವಾದ ಮುನ್ನಡೆಗೆ ನಾವು ಸಹಕಾರಿಗಳಾಗಿ ಸೃಷ್ಟಿಕರ್ತನ ಸೇವೆಯನ್ನು ಸಲ್ಲಿಸಬೇಕು.

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।** (3.16)

ಎಂದು ಪರಮಾತ್ಮನು ಈ ವಿಶ್ವಚಕ್ರದ ಪ್ರವರ್ತನೆಯ ಕಾರ್ಯದಲ್ಲಿ ಸಹಕಾರಿಯಾಗದೆ ತನ್ನ ಭೌತಿಕ ಸುಖದಲ್ಲಿಯೇ ಲೋಲುಪನಾದವನ ಜೀವನವು ವ್ಯರ್ಥವೆಂದು ನಿಂದಿಸಿರುವನು. ಪರಮಾತ್ಮನು ಈ ಜಗತ್ತಿಗೆ ನಮ್ಮನ್ನು ಬರೀ ಕೈಯಿಂದ ಕಳಿಸಿಲ್ಲ. ತಂದೆಯು ಮಗನಿಗೆ ಸರಿಯಾಗಿ ಬಂಡವಾಳ ನೀಡಿ ವ್ಯವಹಾರವನ್ನು ಆರಂಭಿಸುವುದಕ್ಕಾಗಿ ಇನ್ನೊಂದು ಊರಿಗೆ ಕಳಿಸುವಂತೆ ಭಗವಂತನೂ ನಮ್ಮನ್ನು ಈ ಪ್ರಪಂಚಕ್ಕೆ ಕಳಿಸಿದ್ದಾನೆ. ಅವನು ನಮಗೆ ನೀಡಿದ ಬಂಡವಾಳವೆಂದರೆ ಈ ಯಜ್ಞದೃಷ್ಟಿ:

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ .................. ।**
**ಅನೇನ ಪ್ರಸವಿಷ್ಯಧ್ವಮ್ ........................ ॥** (3.10)

ಈ ಯಜ್ಞದೃಷ್ಟಿಯನ್ನು ಉಪಯೋಗಿಸಿಕೊಂಡು ಐಹಿಕ, ಆಮುಷ್ಮಿಕ, ವೈಯಕ್ತಿಕ, ಸಾಮಾಜಿಕ ಸುಖ–ಹಿತಗಳನ್ನು ಪಡೆಯಿರಿ ಎಂದು ಪರಮಾತ್ಮನು ಇಲ್ಲಿಗೆ ನಮ್ಮನ್ನು ಕಳಿಸಿದ್ದಾನೆ. ಪರಮಾತ್ಮನು, ಸಜ್ಜೀವರ ಆತ್ಮವಿಕಾಸಕ್ಕಾಗಿಯೇ ಈ ಸೃಷ್ಟಿಯನ್ನು ಏರ್ಪಡಿಸಿದ್ದಾನೆ. ಆತ್ಮನು ತನ್ನ ಸುಪ್ತವಾದ ಸುಂದರ ವ್ಯಕ್ತಿತ್ವವನ್ನು ಪಡೆಯಲಿ ಎಂಬ ಅಭಿಪ್ರಾಯದಿಂದಲೇ ಈ ಜಗತ್ತನ್ನು ಪರಮಾತ್ಮನು ನಿರ್ಮಿಸಿರುವನು. ಅದಕ್ಕಾಗಿ ಈ ಯಜ್ಞದೃಷ್ಟಿಯೆಂಬ ಪವಿತ್ರ ಸಾಧನವನ್ನು ನಮಗೆ ನೀಡಿರುವನು. ಈ ಸೃಷ್ಟಿಯ ಉದ್ದೇಶವನ್ನು, ಜೀವವಿಕಾಸದ ಬಗ್ಗೆ ಪರಮಾತ್ಮನಿಗೆ ಇರುವ ಈ ಸಂಕಲ್ಪವನ್ನು ನಾವು ಅರಿತುಕೊಂಡು ಅವನ ಉದ್ದೇಶಕ್ಕನುಗುಣವಾಗಿ ಈ ವಿಶ್ವವಿಕಾಸದ ಕಾರ್ಯದಲ್ಲಿ ನಾವೂ ಪಾಲುಗಾರರಾಗಬೇಕು. ಈ ಹೊಣೆಗಾರಿಕೆಯನ್ನು ತಿಳಿದುಕೊಳ್ಳದೆ ಸ್ವಾರ್ಥಮಾತ್ರ ಪರಾಯಣರಾಗಿ ಈ ಯಜ್ಞರೂಪವಾದ ಕರ್ತವ್ಯವನ್ನು ನಿರ್ವಹಿಸದೆ ನಾವು ದೂರ ಸರಿದರೆ ಅದು ದೇವವಿರೋಧಿಯೂ ವಿಶ್ವವಿಘಾತಕವೂ ಆದ ಪ್ರವೃತ್ತಿ ಎನಿಸುವುದು. ಪರಮಾತ್ಮನಿಂದ ಉಪಕಾರವನ್ನು ಪಡೆದೂ ಅವನ ಈ ವಿಶ್ವಕಾರ್ಯದಲ್ಲಿ ನಾವು ಭಾಗವಹಿಸದೆ ಇರುವುದು ಅಕ್ಷಮ್ಯ ಅಪರಾಧವೂ ಆಗುವುದು.

ಹೀಗೆ ಯಜ್ಞರೂಪವಾದ ಕರ್ತವ್ಯವು ಬಂಧಕವಲ್ಲವೆನ್ನುವುದರ ಜೊತೆಗೆ ಕೃತಜ್ಞತಾಭಾವ ದಿಂದಲೂ, ಲೋಕದ ಪ್ರಾಕೃತಿಕ ಸಾಮಾಜಿಕ ವ್ಯವಸ್ಥೆಯ ರಕ್ಷಣೆಯ ದೃಷ್ಟಿಯಿಂದಲೂ ಇಂತಹ ಕರ್ತವ್ಯವನ್ನು ಆಚರಿಸುವುದು ಅತ್ಯಂತ ಆವಶ್ಯಕವೂ ಅನಿವಾರ್ಯವೂ ಆಗಿದೆ ಎಂಬುವುದನ್ನು ಇಲ್ಲಿ ಮನಗಾಣಿಸಲಾಗಿದೆ. ಮನುಕುಲದಲ್ಲಿ ಹುಟ್ಟಿದ ಪ್ರತಿಯೊಬ್ಬನೂ ಕರ್ಮವು ಬಂಧಕವೆಂದು ಹೆದರಿಕೊಡದೆ ಯಜ್ಞರೂಪವಾಗಿ ಭಗವತ್‌ಸೇವಾದೃಷ್ಟಿಯಿಂದ ಕರ್ತವ್ಯಗಳನ್ನು ಆಚರಿಸಲೇ ಬೇಕೆಂದು ಗೀತೆಯ ಪ್ರತಿಪಾದನೆ ಇದೆ.

***

## ಭಗವಂತನ ಅವತಾರ ಮತ್ತು ಅದರ ಉದ್ದೇಶ

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।**
**ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥** (4.1)

ಶ್ರೀಕೃಷ್ಣನು ತಾನು ಕರ್ಮಯೋಗದ ಉಪದೇಶವನ್ನು ಸೂರ್ಯನಿಗೆ ಮಾಡಿರುವೆನೆಂದು ಹೇಳಿರುವನು. ದ್ವಾಪರಯುಗದಲ್ಲಿ ಇರುವ ಕೃಷ್ಣನು ಸೃಷ್ಟಿಯ ಆದಿಯಲ್ಲಿ ಸೂರ್ಯನಿಗೆ ಹೇಗೆ ಉಪದೇಶ ಮಾಡಿದನು ಎಂದು ಸಹಜವಾಗಿ ಏಳಬಹುದಾದ ಪ್ರಶ್ನೆಯನ್ನು ಶ್ರೀಕೃಷ್ಣನು ತನ್ನ ಅವತಾರದ ವಿಚಾರವನ್ನು ವಿವರಿಸಿ ಪರಿಹರಿಸುತ್ತಾನೆ.

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾऽऽತ್ಮಾನಂ ಸೃಜಾಮ್ಯಹಮ್ ॥**
**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥** (4.7-8)

ಪರಮಾತ್ಮನು ಭೂಮಿಯಲ್ಲಿ ಅವತರಿಸದೆ ತನ್ನ ಸ್ಥಾನದಲ್ಲಿ ಇದ್ದೇ ತನ್ನ ಅಖಂಡ ಇಚ್ಛಾಶಕ್ತಿಯಿಂದಲೇ ದುಷ್ಟರನ್ನು ನಿಗ್ರಹಿಸಬಲ್ಲ. ಆದರೂ ಭೂಮಿಗಿಳಿದು, ಸಾಮಾನ್ಯ ಮಾನವರೊಡನೆ ಬೆರೆತು ತನ್ನ ಲೀಲಾಕಾರ್ಯಗಳನ್ನು ನಡೆಸಿರುವನು. ಇದರಲ್ಲೂ ನಮ್ಮನ್ನು ತರಬೇತಿಗೊಳಿಸುವ ಅವನ ಉದ್ದೇಶವು ಅಡಗಿದೆ. ಮಗುವನ್ನು ಕಂಕುಳಲ್ಲಿ ಇಟ್ಟುಕೊಂಡು ತಾಯಿ ವೇಗವಾಗಿ ನಡೆಯಬಲ್ಲಳು. ಆದರೆ ಅವಳು ಹಾಗೆ ನಡೆದರೆ ಮಗು ನಡೆಯನ್ನು ಕಲಿಯುವುದೆಂದು? ಆದ್ದರಿಂದ ತನ್ನ ವೇಗವನ್ನು ಕುಗ್ಗಿಸಿ ಮಗುವಿನ ಹೆಜ್ಜೆಗೆ ಸರಿಯಾಗಿ ತನ್ನ ಹೆಜ್ಜೆಯನ್ನಿಟ್ಟು ನಿಧಾನವಾಗಿ ನಡೆದು ಮಗುವಿಗೆ ತರಬೇತಿಯನ್ನು ನೀಡುವಳು. ಪರಮಾತ್ಮನ ಅವತಾರ ಕಾರ್ಯದಲ್ಲೂ ಈ ಮಾತೆಯ ಅಂತಃಕರಣವೇ ಹರಿದಿದೆ. ತಾನು ಧರೆಗಿಳಿದು ಮಾನವನಾಗಿ ವ್ಯವಹರಿಸಿ, ಮಾನವರಾಗಿ ನಾವು ಹೇಗೆ ನಡೆಯಬೇಕೆಂಬುದನ್ನು ಪರಮಾತ್ಮನು ನಮಗೆ ಕಲಿಸಿಕೊಡುತ್ತಿದ್ದಾನೆ. ನಮಗೆ ಜೀವನದ ಶಿಕ್ಷಣವನ್ನು ನೀಡುವುದಕ್ಕಾಗಿಯೇ ಪರಮಾತ್ಮನ ಅವತಾರ. ಇದನ್ನು ಭಾಗವತದಲ್ಲಿ ಹೀಗೆ ನಿರೂಪಿಸಲಾಗಿದೆ:

**ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಮ್ ।**

'ಮಾನವನಿಗೆ ಶಿಕ್ಷಣ ನೀಡುವುದೇ ಭಗವಂತನ ಮಾನವಾವತಾರದ ಪ್ರಯೋಜನ.'

## ಎಲ್ಲವೂ ಕೃಷ್ಣಾರಾಧನೆ

ಯಾರನ್ನು ಸೇವಿಸಿದರೂ ನಮಗೆ ಅವರಿಂದ ದೊರೆಯುವ ಕ್ಷುದ್ರ ಫಲವನ್ನು ಕೂಡ ನೀಡುವವನು ಶ್ರೀಹರಿಯೇ! ಪರಬ್ರಹ್ಮನು ಒಬ್ಬನೇ ಇದ್ದು ಆತನೇ ಎಲ್ಲ ದೇವತೆಗಳಲ್ಲೂ ಅವರ ರೂಪ, ನಾಮಗಳಿಂದಲೂ ಇದ್ದು ಸರ್ವಾಂತರ್ಯಾಮಿಯಾಗಿ ಕಾರ್ಯವನ್ನು ನಡೆಸುತ್ತಾನೆ. ಯಾರನ್ನೇ ನಮಸ್ಕರಿಸಿ ಪೂಜಿಸಿದರೂ ಅದು ಸರ್ವರ ಒಡೆಯನಾದ ಆ ಪರಮಾತ್ಮನಿಗೆ ಸಮರ್ಪಿತವಾಗುತ್ತದೆ. ಆದರೆ ತ್ರೈವಿದ್ಯರಿಗೆ ಇಂತಹ ಅನುಸಂಧಾನವಾಗಲೀ, ಭಾವನೆಯಾಗಲೀ ಇರುವುದಿಲ್ಲ. ಈ ತಾತ್ತ್ವಿಕ ದೃಷ್ಟಿಯಿಲ್ಲದಿರುವುದರಿಂದ ಶ್ರೀಹರಿಯ ಸರ್ವಾಂತರ್ಯಾಮಿತ್ವದ ಸ್ಮರಣೆ ಹಾಗೂ ಎಲ್ಲಾ ದೇವತೆಗಳಲ್ಲೂ ನೆಲೆಸಿರುವ ಏಕಮೇವ ಪರವಸ್ತುವಿನ ಅನುಸಂಧಾನವಿಲ್ಲದೆ ತ್ರೈವಿದ್ಯರು ನಾನಾ ದೇವತೆಗಳನ್ನು ಭಜಿಸುವರು. ಅಲ್ಲಿಯೂ ಪರಮಾತ್ಮನನ್ನೇ ಪೂಜಿಸುತ್ತಿದ್ದರೂ ತಾವು ಯಾರನ್ನೂ ಪೂಜಿಸುತ್ತಿರುವೆವೆಂಬುದನ್ನೇ ಅವರು ಅರಿಯರು.

**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ।** (4.11)

ಈ ಭಕ್ತರೂ ತಮಗೆ ತಿಳಿಯದಂತೆಯೇ ಪರಮಾತ್ಮನ ಕಡೆಗೆ ಸಾಗುತ್ತಿದ್ದಾರೆ. ತಾವು ಪೂಜಿಸುವ ವಸ್ತುವು ಪರಮಾತ್ಮನೆಂದು ಗೊತ್ತಿಲ್ಲದೆಯೇ ಅವನನ್ನು ಪೂಜಿಸುತ್ತಿರುತ್ತಾರೆ. ಜ್ಞಾನಿಗಳಾದ ಭಾಗವತರಿಗೆ ಸಿಗುವಂತಹ ಶ್ರೇಷ್ಠ ಫಲವು ದೊರೆಯದಿದ್ದರೂ ಇವರ ಕ್ಷುದ್ರಕಾಮನೆಗಳನ್ನು ಪೂರೈಸಿ ಪರಮಾತ್ಮನು ಇವರನ್ನು ಅನುಗ್ರಹಿಸುತ್ತಿರುತ್ತಾನೆ.

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ।** (4.11)

ಅವರವರ ಭಕ್ತಿ, ಸಾಧನೆಗಳಿಗೆ ಅನುಸಾರವಾಗಿ ತಾನು ಅವರಿಗೆ ಫಲವನ್ನು ನೀಡುವುದಾಗಿ ಭಗವಂತನು ಹೇಳಿದ್ದಾನೆ.

ಇನ್ನು ಇತರ ದೇವತೆಗಳ ಬಳಿಗೆ ಓಡದೇ ಪರಮಾತ್ಮನನ್ನು ತಮ್ಮ ಲೌಕಿಕಫಲಗಳಿಗಾಗಿ ಬೇಡುವ ಸಕಾಮಭಕ್ತರೂ ಇದ್ದಾರೆ.

ಇಂತಹ ಸಕಾಮಭಕ್ತಿಯಿಂದ ಸಂಸಾರಬಂಧನದ ಬಿಡುಗಡೆಯಾಗದಿದ್ದರೂ ಕ್ರಮವಾಗಿ ಅಂತಹ ಸ್ಥಿತಿಗೆ ಒಯ್ಯಲು ಈ ಸಕಾಮಭಕ್ತಿಯು ಕಾರಣವಾಗುತ್ತದೆ. ಪರಮಾತ್ಮನಲ್ಲಿ ಭಕ್ತಿಯನ್ನು ಮಾಡದೆ ಕರ್ತವ್ಯಹೀನವಾದ ನಾಸ್ತಿಕ ಜೀವನವನ್ನು ನಡೆಸುವುದಕ್ಕಿಂತ ಲೌಕಿಕ ಆಶಾಭಾವದಿಂದಲಾದರೂ ಪರಮಾತ್ಮನ ಕಡೆಗೆ ಸಾಗುವ ಸಕಾಮವ್ಯಕ್ತಿಯ ಜೀವನವೇ ಶ್ರೇಷ್ಠವಾಗಿದೆ. ನಾನಾವಿಧ ಕಾಮನೆಗಳಿಗೆ ಬಲಿಯಾಗಿ ಶ್ರೀಮಂತರಲ್ಲಿ, ಅಧಿಕಾರಿಗಳಲ್ಲಿ ಬಾಗಿ ಬೇಡುವ ದೀನಜೀವನಕ್ಕಿಂತ ತಮ್ಮ ಕಾಮನೆಗಳನ್ನು ತಣಿಸಲು ದೇವತೆಗಳು ಹಾಗೂ ಭಗವಂತನ ಕಡೆಗೆ ಸಾಗುವ ಪ್ರವೃತ್ತಿಯು ಎಷ್ಟೋ ಪಾಲು ಮಿಗಿಲಾದುದು.

**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥**

ಎಂದು ಸಕಾಮಭಕ್ತರೂ ತನ್ನನ್ನು ಹೊಂದುವ ಮಾರ್ಗದಲ್ಲೇ ನಡೆದಿದ್ದಾರೆಂದು ಶ್ರೀಕೃಷ್ಣನು ಹೇಳಿದ್ದಾನೆ.

ಮಲತಾಯಿಯ ಮಾತುಗಳಿಂದ ಅವಮಾನಿತನಾದ ಧ್ರುವರಾಜನು ಕಾಡಿನಲ್ಲಿ ತಪಸ್ಸು ಮಾಡಿ ಪರಮಾತ್ಮನ ದರ್ಶನ ಪಡೆಯಲಿಲ್ಲವೆ? ಕಾಮನೆಯಿಂದಲಾದರೂ ದೇವರ ಕಡೆಗೆ ತಿರುಗಿದರೆ ನಮ್ಮನ್ನು ಆತನು ಅತಿ ಎತ್ತರಕ್ಕೆ ಏರಿಸುವನು. ಧ್ರುವರಾಜನು ದೇವರನ್ನು ಸಾಕ್ಷಾತ್ಕರಿಸಿಕೊಂಡು ಅತಿ ಸಮೃದ್ಧವಾದ ಲೌಕಿಕ ಫಲವನ್ನು ಪಡೆದರೂ ಅವನಿಗೆ ತನ್ನ ಬಗ್ಗೆ ತೀವ್ರ ಅತೃಪ್ತಿಯುಂಟಾಯಿತು. 'ಮುಕುಂದನಲ್ಲಿ ಮೋಕ್ಷಸಾಮ್ರಾಜ್ಯವನ್ನು ಕೇಳದೆ ಲೌಕಿಕ ಭೋಗಭಾಗ್ಯಗಳನ್ನೇ ಆತನಲ್ಲಿ ಬೇಡಿ ಪಡೆದೆನಲ್ಲಾ' ಎಂದು ಆತ ಮರುಗುತ್ತಾನೆ. ದುಃಖದ ಮೂಲವಾದ ಭವಬಂಧವನ್ನೇ ಕಿತ್ತೊಗೆದು

ಅನುಗ್ರಹದ ಮಹಾಪೂರವನ್ನೇ ಹರಿಸುವ ಆ ಪರಮಪುರುಷನನ್ನು ಸಾಕ್ಷಾತ್ಕರಿಸಿಕೊಂಡೂ ಈ ನಶ್ವರ ಭೋಗೈಶ್ವರ್ಯಗಳನ್ನು ಬಯಸಿದೆನೆಂದು ಧ್ರುವರಾಜನು ಪರಿತಪಿಸಿದನು. ಪರಮಭಾಗವತನಾದ ಧ್ರುವರಾಜನು ಮುಂದೆ ನಿಷ್ಕಾಮಕರ್ಮ ಹಾಗೂ ಅನನ್ಯಭಕ್ತಿಯಿಂದ ಪರಮಾತ್ಮನ ಪ್ರಸಾದಕ್ಕೆ ಭಾಜನನಾಗುವನು. ಯೋಗ್ಯ ಸಜ್ಜನ ವ್ಯಕ್ತಿಗಳು ಫಲದಾಸೆಯಿಂದ ಪರಮಾತ್ಮನ ಕಡೆಗೆ ಸಾಗಿದರೂ ಮುಂದೆ ಅಂತಃಕರಣಶುದ್ಧಿಯಿಂದ ತನ್ನ ಕಡೆಗೆ ನಡೆಯುತ್ತಿರುವವರು ಎಂದು ಸ್ವಾಮಿಯು ಅಪ್ಪಣೆಕೊಡಿಸುತ್ತಾನೆ.

ಆದುದರಿಂದಲೇ ಉಪನಿಷತ್ತಿನಲ್ಲಿ ''ಹ್ರಿಯಾ ದೇಯಂ'' ''ಭಿಯಾ ದೇಯಂ'' ಎಂದು ನಿರೂಪಿಸಲಾಗಿದೆ. ಇನ್ನೊಬ್ಬರು ದಾನಮಾಡುವುದನ್ನು ನೋಡಿ ನಾಚಿಕೆಯಿಂದಾದರೂ ನಿಮ್ಮಲ್ಲಿ ಇದ್ದುದನ್ನು ವಿತರಣ ಮಾಡಿರಿ. ದಾನ ಮಾಡದೆ ಇದ್ದರೆ ಆಗುವ ಲೌಕಿಕ ಪಾರತ್ರಿಕ ಅನರ್ಥಗಳಿಗೆ ಹೆದರಿಯಾದರೂ ದಾನ ಮಾಡಿರಿ ಎಂದು ಸತ್ಕಾರ್ಯದ ಬಗ್ಗೆ ಒತ್ತಾಯ ಮಾಡಲಾಗಿದೆ. ಏನೂ ಸತ್ಕಾರ್ಯವನ್ನು ಮಾಡದೆ ಅನುಪಯುಕ್ತ ಜೀವನವನ್ನು ನಡೆಸುವುದಕ್ಕಿಂತ ಭಯ, ಲಜ್ಜೆಗಳಿಂದಾಗಲೀ, ಕೀರ್ತಿ ಪ್ರತಿಷ್ಠೆಗಳಿಗಾಗಲೀ ಏನಾದರೂ ಯೋಗ್ಯಕಾರ್ಯಗಳನ್ನು ಮಾಡುವುದು ಉತ್ತಮ ಪದ್ಧತಿಯಾಗಿವೆ.

ಇನ್ನೊಬ್ಬರು ದೊಡ್ಡ ಪ್ರಮಾಣದಿಂದ ದಾನ ಧರ್ಮಗಳನ್ನು ಮಾಡುವಾಗ ತಾವು ಏನು ಮಾಡದಿದ್ದರೂ ಅವರ ಕಾರ್ಯವನ್ನೂ ಡಂಭಾಚಾರವೆಂದೂ ಪ್ರತಿಷ್ಠೆಗಾಗಿ ಮಾಡುವ ಕಾರ್ಯವೆಂದೂ ಅವಹೇಳನ ಮಾಡುವ ವ್ಯಕ್ತಿಗಳನ್ನು ನಾವು ನೋಡಿದ್ದೇವೆ. ಪ್ರತಿಷ್ಠೆಗಾಗಿಯಾದರೂ ಸಂಪತ್ತಿನ ವಿತರಣ ಮಾಡುವ ಆ ತ್ಯಾಗಪ್ರವೃತ್ತಿಯೂ ಇಲ್ಲದ ತಾವು ಮತ್ತೂ ಕೆಳಮಟ್ಟದಲ್ಲಿ ಇರುವೆವೆಂಬುದನ್ನು ಅರಿಯದೇ ಮತ್ತೊಬ್ಬರನ್ನು ಅಪಹಾಸಮಾಡುವ ಅಂತಹ ಜನರನ್ನು ಕಂಡು ಕನಿಕರವಾಗುತ್ತದೆ. ಅಂತೂ ಭಗವದ್ವಿಮುಖವಾದ ಜೀವನಕ್ಕಿಂತ ಯಾವುದೇ ಸ್ವರೂಪದಲ್ಲಿದ್ದರೂ ಭಗವದುನ್ಮುಖವಾದ ಜೀವನವೇ ಪ್ರಶಸ್ತವೆಂದು ಗೀತೆಯ ತಾತ್ಪರ್ಯ.

**ವರ್ಣವಿಭಾಗದ ವೈಶಿಷ್ಟ್ಯ**

ಪ್ರಾಚೀನರು ಈ ವರ್ಣಧರ್ಮವನ್ನು ಯಾಕೆ ಏರ್ಪಡಿಸಿದ್ದಾರೆ ? ಅದರ ಮಹತ್ವವೇನು ? ಎಂಬುದನ್ನು ನಾವು ಸ್ವಲ್ಪ ವಿಚಾರ ಮಾಡುವಾ. ರಾಷ್ಟ್ರದಲ್ಲಿ ವ್ಯಕ್ತಿಗೆ ತನ್ನ ತನ್ನ ಕಸುಬುಗಳ ಬಗ್ಗೆ ನಿರ್ಬಂಧ ಬೇಕೆ ? ಬೇಡವೆ ? ಇದೊಂದು ದೊಡ್ಡ ಪ್ರಶ್ನೆಯಾಗಿದೆ. ವ್ಯಕ್ತಿಸ್ವಾತಂತ್ರ್ಯವಾದಿಗಳು ವ್ಯಕ್ತಿಗೆ ಏನೂ ನಿರ್ಬಂಧವಿರಬಾರದು, ತಾನು ಬಯಸಿದ ವೃತ್ತಿಯನ್ನು ನಡೆಸಲು ಪ್ರತಿಯೊಬ್ಬನಿಗೂ ಅನಿರ್ಬಂಧ ಅಧಿಕಾರವಿರಬೇಕೆಂದು ವಾದಿಸುವರು. ಹೀಗೆ ವ್ಯಕ್ತಿಗೆ ಅತಿಯಾದ ಸ್ವಾತಂತ್ರ್ಯವನ್ನು ನೀಡುವುದರಿಂದ ದೇಶದ ಸರ್ವಾಂಗೀಣ ಉನ್ನತಿಗೆ ಧಕ್ಕೆಯಾಗಬಹುದು. ಲಾಭದಾಯಕ

ಕಸುಬುಗಳ ಕಡೆಗೇ ಎಲ್ಲರೂ ಧಾವಿಸುವುದರಿಂದ ಕೆಲವು ಕಸುಬುಗಳೇ ನಿಂತುಹೋಗಬಹುದು. ಆಹಾರ ಪದಾರ್ಥಗಳನ್ನು ಬೆಳೆಸುವ ಬದಲು ಲಾಭದಾಯಕಗಳೆಂದು ತಂಬಾಕು ಮೊದಲಾದದ್ದನ್ನೇ ಬೆಳೆದರೆ ಇದು ಸ್ವಾತಂತ್ರ್ಯದ ದುರುಪಯೋಗವೇ ಆಗುವುದು. ರಾಷ್ಟ್ರದ ಎಲ್ಲ ಕಸುಬು, ವೃತ್ತಿಗಳಲ್ಲಿ ಸಮತೋಲನವು ತಪ್ಪುವುದು. ಅನಾವಶ್ಯಕ ಸ್ಪರ್ಧೆ, ಘರ್ಷಣೆಗಳಿಗೆ ಅವಕಾಶವಾಗುವುದು. ಕೆಲವು ಕಸುಬುಗಳ ವಿಷಯದಲ್ಲಿ ಬಹಳ ಸ್ಪರ್ಧೆ ಒತ್ತಡಗಳಿದ್ದರೆ, ಕೆಲವು ಕಸುಬುಗಳ ಕಡೆಗೆ ಜನರ ಸುಳಿವೇ ಇರುವುದಿಲ್ಲವೆನ್ನುವ ಪರಿಸ್ಥಿತಿಯು ನಿರ್ಮಾಣವಾಗುವುದು. ಇಂದು ಮೆಡಿಕಲ್, ಇಂಜಿನಿಯರಿಂಗ್ ಶಿಕ್ಷಣದ ಬಗ್ಗೆ ಬಿರುಸಿನ ಸ್ಪರ್ಧೆ ಇದ್ದರೆ ಆರ್ಟ್ಸ್, ಸೈನ್ಸ್ ಮುಂತಾದವುಗಳ ಅಭ್ಯಾಸದ ಬಗ್ಗೆ ಯಾವುದೇ ಆಸೆ, ಆಸಕ್ತಿ ಸಮಾಜದಲ್ಲಿ ಉಳಿದಿಲ್ಲ. ದೇಶದ ಎಲ್ಲ ಅಂಗಗಳೂ ಸಮಪ್ರಮಾಣದಿಂದ ಅಭಿವೃದ್ಧಿಯನ್ನು ಹೊಂದುವ ಸಾಮಾಜಿಕ ವ್ಯವಸ್ಥೆಯು ಆವಶ್ಯಕ.

ಇದಕ್ಕಾಗಿ ಬಲಾತ್ಕಾರದಿಂದ ಅವರವರ ಕಸುಬನ್ನು ನಿರ್ಧರಿಸಬೇಕೆನ್ನುವ ವಾದವೂ ಇದೆ. ಸರಕಾರವು ಜನರಲ್ಲಿ ಕಸುಬುಗಳನ್ನು ಹಂಚಿ ಕಡ್ಡಾಯವಾಗಿ ಅದನ್ನು ಮಾಡಿಸಬೇಕು. ಯಾವ ವೃತ್ತಿ, ಉದ್ಯೋಗಗಳೂ ಸ್ಥಗಿತವಾಗದಂತೆ ವ್ಯವಸ್ಥಿತವಾದ ನಿರ್ಬಂಧವನ್ನು ಹಾಕಿ ಸಮಷ್ಟಿಗಾಗಿ ವ್ಯಕ್ತಿಯ ಸ್ವಾತಂತ್ರ್ಯವನ್ನು ನಿರ್ಬಂಧಿಸಿದರೆ ತಪ್ಪೇನಿಲ್ಲವೆಂದು ಈ ವಾದದ ಸಮರ್ಥನೆಯಾಗಿದೆ. ಕೆಲವು ದೇಶಗಳಲ್ಲಿ ಈ ರೀತಿ ಜನರನ್ನು ಅವರ ಇಚ್ಛೆಯ ವಿರುದ್ಧವಾಗಿ ಬಲಾತ್ಕಾರದಿಂದ ದುಡಿಸುತ್ತಾರೆ. ಇದರಲ್ಲೂ ಕೆಲವು ತೊಡಕುಗಳಿವೆ. ಒಬ್ಬನು ಬೆಳೆದು ಶಿಕ್ಷಿತನಾಗಿ ಅವನ ಒಲವು, ಅಭಿರುಚಿ, ಆಸಕ್ತಿಗಳು ರೂಪುಗೊಂಡ ಮೇಲೆ ಅವನನ್ನು ಇಂತಹದೇ ಕಸುಬನ್ನು ಮಾಡಬೇಕೆಂದು ನಿರ್ಬಂಧಿಸುವುದರಿಂದ ಆ ವ್ಯಕ್ತಿಗೆ ಬಹಳ ಆಘಾತವಾಗುವುದು. ತನ್ನ ಅಭಿರುಚಿಗೆ ವಿರುದ್ಧವಾದ ಕಸುಬುಗಳ ಬಗ್ಗೆ ತನ್ನನ್ನು ಹೊಂದಿಸಿಕೊಳ್ಳಲು ಅವನಿಂದ ಆಗುವುದಿಲ್ಲ. ಜನರಿಗೆ ಕಸುಬುಗಳನ್ನು ಹಂಚಿಕೊಡುವಾಗ ಅನೇಕ ರೀತಿಯ ಅನ್ಯಾಯ, ಪಕ್ಷಪಾತಗಳಿಗೂ ಅವಕಾಶವಾಗುವುದು. ಅಂತೂ ಇಂತಹ ನಿರ್ಬಂಧದಿಂದ ವ್ಯಕ್ತಿತ್ವದ ದಮನಕ್ಕೆ ಅವಕಾಶವಾಗುವುದು.

ಆದ್ದರಿಂದ ಬಾಲ್ಯದಿಂದಲೇ ರಾಷ್ಟ್ರಕ್ಕೆ ಆವಶ್ಯಕಗಳಾದ ಭಿನ್ನಭಿನ್ನ ಕಸುಬು, ಉದ್ಯೋಗಗಳಿಗೆ ಅನುಗುಣವಾಗುವಂತೆ ವ್ಯಕ್ತಿಯನ್ನು ಸಿದ್ಧಪಡಿಸುವುದೇ ಯೋಗ್ಯ ಉಪಾಯವಾಗಿದೆ. ಮುಂದೆ ಮಾಡಬೇಕಾದ ಉದ್ಯೋಗಗಳಿಗೆ ಅನುಕೂಲವಾದ ಮನೋಭಾವನೆ ಹಾಗೂ ಶಿಕ್ಷಣವನ್ನು ಬಾಲ್ಯದಿಂದಲೇ ವ್ಯಕ್ತಿಯಲ್ಲಿ ರೂಪಿಸಲು ಏರ್ಪಡಿಸಿದರೆ ಆಗ ಈ ಬಲಾತ್ಕಾರಕ್ಕೆ ಎಡೆಯಿರುವುದಿಲ್ಲ. ವ್ಯಕ್ತಿಯು ಪ್ರಬುದ್ಧನಾದಾಗಲೇ ಅವನ ಕರ್ತವ್ಯವೂ ಸಿದ್ಧವಾಗಿ, ಅದಕ್ಕೆ ಬೇಕಾದ ಶಿಕ್ಷಣ, ಸಂಸ್ಕಾರಗಳೂ ಅವನಲ್ಲಿ ರೂಪುಗೊಂಡಿದ್ದಾದರೆ ಸ್ಪರ್ಧೆ ಬಲಾತ್ಕಾರಗಳಿಗೆ ಅವಕಾಶವೇ ಇರುವುದಿಲ್ಲ.

ಯಾರಿಗೆ ಯಾವ ಸಂಸ್ಕಾರವನ್ನು ನೀಡಬೇಕು ? ಯಾವ ಕಸುಬಿಗಾಗಿ ಯಾರನ್ನು ಆರಿಸಿ ಸಿದ್ಧಗೊಳಿಸಬೇಕು ? ಎಂಬ ಪ್ರಶ್ನೆಯನ್ನು ನಾವು ಯೋಗ್ಯ ರೀತಿಯಿಂದ ಬಗೆಹರಿಸಬಹುದು. ವ್ಯಕ್ತಿಯ ಪರಂಪರೆಯ ಸಂಸ್ಕಾರ, ಅವನು ಬೆಳೆಯುತ್ತಿರುವ ಕುಟುಂಬದ ವಾತಾವರಣ ಇವನ್ನು ನೋಡಿ ಅದಕ್ಕೆ ಅನುಗುಣವಾದ ಕಸುಬುಗಳನ್ನು ನಾವು ನಿರ್ಧರಿಸಿದರೆ ಆ ವ್ಯಕ್ತಿಗೆ ಏನೂ ಅನ್ಯಾಯವನ್ನು ಮಾಡಿದಂತಾಗುವುದಿಲ್ಲ. ಪರಂಪರೆ ಹಾಗೂ ರಕ್ತಸಂಬಂಧವು ವ್ಯಕ್ತಿತ್ವದ ರಚನೆಯಲ್ಲಿ ಪ್ರಮುಖ ಸಾಧನವಾಗಿದೆಯೆನ್ನುವುದನ್ನು ಎಲ್ಲರೂ ಒಪ್ಪಿರುವರು. ಆನುವಂಶಿಕ ಗುಣವು ಪರಂಪರೆಯಲ್ಲಿ ಬಂದ ಕರ್ಮಗಳಿಗೆ ಅವನನ್ನು ಸಹಜವಾಗಿಯೇ ಹೊಂದಿಸುವುದು. ಬಾಲ್ಯದಿಂದಲೂ ಅದೇ ಕಸುಬನ್ನು ನಡೆಸುವ ಕುಟುಂಬಪರಿಸರದಲ್ಲೇ ಅವನು ಬೆಳೆಯುವುದರಿಂದ ಅದಕ್ಕೆ ಬೇಕಾದ ಶಿಕ್ಷಣ, ಸಂಸ್ಕಾರಗಳು ಅನಾಯಾಸವಾಗಿ ಅವನಲ್ಲಿ ಮೂಡುವವು. ಒಬ್ಬ ಸಮಗಾರನ ಮಗನ ನೈಪುಣ್ಯವನ್ನು ಆ ವೃತ್ತಿಯನ್ನು ಕಲಿತ ಇತರರು ಖಂಡಿತವಾಗಿಯೂ ಪಡೆಯಲಾರರು. ಅಂತೂ ವ್ಯಕ್ತಿಯು ಹುಟ್ಟಿರುವ ಪರಂಪರೆ, ಅವನು ಬೆಳೆದಿರುವ ವಾತಾವರಣ ಇವೆರಡೂ ವ್ಯಕ್ತಿಯ ಮನೋಧರ್ಮವನ್ನು ರೂಪಿಸಿ ಅವನ ಕರ್ತವ್ಯದ ನಿರ್ಧಾರಕಶಕ್ತಿಗಳೆನಿಸುವವು. ತನ್ನ ಕಸುಬುಗಳಿಗೆ ಬೇಕಾದ ಶಿಕ್ಷಣವನ್ನು ವಯಸ್ಸಾದ ಮೇಲೆ ಪಡೆಯುವುದಲ್ಲ. ಮಗುವಾಗಿರುವಾಗಲೇ ಅವನಿಗೆ ಶಿಕ್ಷಣ ಆರಂಭವಾಗಬೇಕು. ಮನೆಯೇ ಆತನಿಗೆ ಶಿಕ್ಷಣಶಾಲೆಯಾಗಬೇಕು. ಹೀಗೆ ದೇಶದ ವಿವಿಧ ಆವಶ್ಯಕತೆಗಳಿಗೆ ಅನುಗುಣವಾಗಿ ಮಕ್ಕಳ ಮನಸ್ಸನ್ನೇ ಅನುರೂಪವಾದ ರೀತಿಯಲ್ಲಿ ಅಣಿಗೊಳಿಸಿ ದೇಶದ ಎಲ್ಲ ಕಸುಬುಗಳನ್ನು ಯಾವುದೇ ಒತ್ತಾಯವಿಲ್ಲದೆ ಉಳಿಸಿ, ಅಭಿವೃದ್ಧಿಪಡಿಸಿ ದೇಶದಲ್ಲಿ ಸಮತೋಲನವನ್ನು ಕಾಪಾಡುವ ಸಾಮಾಜಿಕ ವ್ಯವಸ್ಥೆಯನ್ನು ವರ್ಣಧರ್ಮದ ಮೂಲಕ ನಮಗೆ ಪ್ರಾಚೀನರು ಒದಗಿಸಿಕೊಟ್ಟಿದ್ದಾರೆ. ಶಾಸ್ತ್ರೋಕ್ತವಾದ ವರ್ಣ ವ್ಯವಸ್ಥೆಯು ಕೇವಲ ಸಂಕುಚಿತ ದೃಷ್ಟಿಯಿಂದ ಸ್ಥಾಪಿತವಾಗಿರದೆ ಲೌಕಿಕ ಹಾಗೂ ಆಧ್ಯಾತ್ಮಿಕ ಇವೆರಡೂ ಉದ್ದೇಶಗಳಿಂದ, ದೂರದೃಷ್ಟಿಯಿಂದ ಏರ್ಪಡಿಸಲ್ಪಟ್ಟಿದೆ. ಯಾವ ವ್ಯಕ್ತಿಯು ತನ್ನ ಪರಂಪರಾಪ್ರಾಪ್ತವಾದ ಕರ್ತವ್ಯವನ್ನು ಉತ್ತಮ ರೀತಿಯಿಂದ, ಭಗವದ್ಭಕ್ತಿಯಿಂದ ಆಚರಿಸುವನೋ ಅವನ ವ್ಯಕ್ತಿತ್ವವನ್ನು ನಿರ್ಧರಿಸಲಾಗುವುದಿಲ್ಲ. ಭಕ್ತಿ, ಜ್ಞಾನ, ಸದ್ಗುಣಗಳು ಸಾರ್ವವರ್ಣಿಕಗಳು. ಇವುಗಳನ್ನು ಅಳವಡಿಸಿಕೊಂಡು ತನ್ನ ಕರ್ತವ್ಯವನ್ನು ಯೋಗ್ಯ ರೀತಿಯಿಂದ ಆಚರಿಸಿದಲ್ಲಿ, ಅವನು ಯಾವ ಜಾತಿಯಲ್ಲಿದ್ದರೂ ಶ್ರೇಷ್ಠ ವ್ಯಕ್ತಿಯೆಂದು ಪರಿಗಣಿಸಲ್ಪಡುವನು. ಇದೇ ವ್ಯಕ್ತಿಯ ಪರಮಧರ್ಮ.

**ಸ್ವವಿಹಿತವೃತ್ತ್ಯಾ ಭಕ್ತ್ಯಾ ಭಗವದಾರಾಧನಂ ಪರಮೋ ಧರ್ಮಃ ।** -ಗೀತಾಭಾಷ್ಯ

ಭಗವದ್ಭಕ್ತಿ, ಸ್ವಧರ್ಮಾಚರಣೆ, ಸದ್ಗುಣಗಳು ಇವೇ ವ್ಯಕ್ತಿತ್ವದ ಅಳತೆಗೋಲು. ಧರ್ಮ-
ನಿಷ್ಠರಾಗದ ಬ್ರಾಹ್ಮಣ ಮತ್ತು ಋಷಿಗಿಂತ, ಸ್ವಧರ್ಮನಿಷ್ಠರಾದ ಸಾಧ್ವೀ ಸ್ತ್ರೀ ಹಾಗೂ

ೀಡರವನು ಶ್ರೇಷ್ಠರೆನಿಸಿದರು. ಜಾಬಾಲಿ ಮುನಿಗೆ ವ್ಯಾಪಾರಿ ತುಲಾಧಾರನು ಉಪದೇಶ ೀಡುವನು –

**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ।**

ಪರಂಪರಾಪ್ರಾಪ್ತವಾದ ವರ್ಣಾಶ್ರಮಧರ್ಮಾನುಸಾರವಾಗಿ ವಿಹಿತ ಕರ್ಮಗಳನ್ನು ಆಚರಿಸುವುದೇ ಪರಮಾತ್ಮನ ಪೂಜೆ. ಮಂಗಳಾರತಿ ಹಚ್ಚಿ ಷೋಡಶೋಪಚಾರ ಪೂಜೆಯನ್ನು ಸಲ್ಲಿಸಿದರೂ ಸ್ವಕರ್ಮಾಚರಣೆಯ ಈ ಮಹಾಪೂಜೆಯನ್ನು ಸಲ್ಲಿಸದಿದ್ದರೆ ಭಗವಂತನು ಪ್ರಸನ್ನನಾಗಲಾರ. ಭಗವದ್ದ್ವೇಷಿಗಳಾಗಿ ಲೋಕವ್ಯವಸ್ಥಾಭಂಜಕರಾದ ದುರ್ಯೋಧನಾದಿ ದುಷ್ಟಶಕ್ತಿಗಳನ್ನು ನಿಗ್ರಹಿಸುವುದು ಕ್ಷತ್ರಿಯನ ಪರಮಕರ್ತವ್ಯ. ಇಂತಹ ದೇಶರಕ್ಷಣೆಯ ಸ್ವಧರ್ಮವನ್ನು ಕರ್ಮಯೋಗಿಯೂ ಕ್ಷತ್ರಿಯನೂ ಆದ ಅರ್ಜುನನು ಅವಶ್ಯವಾಗಿ ಆಚರಿಸಬೇಕೆಂದು ಶ್ರೀಕೃಷ್ಣನು ಬೋಧಿಸಿ, ಯುದ್ಧದಿಂದ ವ್ಯತಿರಿಕ್ತಗಳಾದ ಬೇರೆ ಕಾರ್ಯಗಳನ್ನು ಯಾಕೆ ಮಾಡಬಾರದೆಂಬ ಅರ್ಜುನನ ಬಲವಾದ ಸಂಶಯವನ್ನು ಪರಿಹರಿಸಿದ್ದಾನೆ.

**ಗೀತೆಯು ನಿರೂಪಿಸಿದ ಚಾತುರ್ವರ್ಣ್ಯ**

ಭಕ್ತಿ ಹಾಗೂ ಕರ್ಮಾನುಷ್ಠಾನಗಳಲ್ಲಿ ಈ ರೀತಿಯ ತಾರತಮ್ಯ ಅಂತರಗಳಿಗೆ ಜೀವರಲ್ಲಿರುವ ಸ್ವಭಾವ, ಗುಣ, ವ್ಯಕ್ತಿತ್ವಗಳಿಗೆ ಅನುಸಾರವಾಗಿ ಪರಮಾತ್ಮನು ಮಾಡಿರುವ ಸೃಷ್ಟಿವ್ಯವಸ್ಥೆಯೇ ಕಾರಣವಾಗಿದೆ. ಜೀವರಲ್ಲಿರುವ ಈ ಗುಣ, ಸ್ವಭಾವಗಳನ್ನು ಪರಮಾತ್ಮನು ಸೃಜಿಸಿರುವುದಿಲ್ಲ. ಈ ಗುಣಧರ್ಮಗಳು ಸ್ವಾಭಾವಿಕ ಹಾಗೂ ಅನಾದಿಯಾಗಿದ್ದು , ಆ ಆಧಾರದಿಂದ ಪರಮಾತ್ಮನು ಮಾಡಿರುವ ಈ ಜಗದ್ರಚನೆಯಲ್ಲಿ ಸಾಧಕರೊಳಗೆ ಪರಸ್ಪರ ಅಂತರವಿರುವುದು ಸಹಜವೇ ಆಗಿದೆ. ಈ ವಿಚಾರವನ್ನು

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ॥** (4.13)

ಎಂಬ ಶ್ಲೋಕದಲ್ಲಿ ಪರಮಾತ್ಮನು ನಿರೂಪಿಸಿದ್ದಾನೆ.

ಈ ಮಾತಿನ ಅರ್ಥ ವಿವರಣೆಯಲ್ಲಿ ಸ್ವಲ್ಪ ಗೊಂದಲಕ್ಕೆ ಎಡೆಯಿದೆ. ವರ್ಣವಿಭಾಗವ ಗುಣಕರ್ಮಾನುಸಾರಿಯಾಗಿದೆ ಎಂಬ ಅಭಿಪ್ರಾಯವು ಆಪಾತವಾಗಿ ಈ ಶ್ಲೋಕದಿಂ ಪ್ರತೀತವಾಗುವುದು. ಆದರೆ ನಿಷ್ಕಾಮಭಕ್ತರ ಹಾಗೂ ಸಕಾಮ ಭಕ್ತರ ತಾರತಮ್ಯವನ್ನು ವಿವರಿಸು ಸಂದರ್ಭದಲ್ಲಿ ಜಾತಿವ್ಯವಸ್ಥೆಯ ವಿಚಾರಕ್ಕೆ ಪ್ರಸಕ್ತಿ ಇರುವುದಿಲ್ಲ . ಆದುದರಿಂ ವರ್ಣವ್ಯವಸ್ಥೆಯು ಅನಾದಿಯಾಗಿರಲಿ, ಗುಣದಿಂದಾಗಿರಲಿ, ಅದನ್ನು ಇಲ್ಲಿ ನಿರೂಪಿಸು ಸಂದರ್ಭವೇ ಇರುವುದಿಲ್ಲ. ಆದ್ದರಿಂದ ಇಲ್ಲಿ ಚಾತುರ್ವರ್ಣ್ಯ ಎಂದರೆ ಪ್ರಚಲಿತವಾ ವರ್ಣವ್ಯವಸ್ಥೆಯನ್ನು ಪರಿಗ್ರಹಿಸಬಾರದು.

ಮಾತ್ರವಲ್ಲದೆ, ವರ್ಣವಿಭಾಗಕ್ಕೆ ಗುಣಕರ್ಮಗಳು ಆಧಾರವೆನ್ನುವುದು ವಸ್ತುಸ್ಥಿತಿಗೆ ವಿರುದ್ಧವೂ ಆಗುವುದು. ಶಮದಮಾದಿ ಸದ್ಗುಣಗಳು ಬರಿ ಒಂದು ಜಾತಿಗೆ ಮಾತ್ರ ಮೀಸಲಾಗಿಲ್ಲ. ನಾಲ್ಕು ವರ್ಣಗಳ ಜನರಲ್ಲೂ ಇಂತಹ ವಿಶಿಷ್ಟಸದ್ಗುಣಗಳನ್ನು ನಾವು ಕಾಣಬಹುದು. ಬ್ರಾಹ್ಮಣನೆನಿಸಿಕೊಂಡವನಲ್ಲಿ ಇಲ್ಲದೆ ಇರುವ ಭಗವದ್ಭಕ್ತಿ ಮುಂತಾದ ವಿಶಿಷ್ಟ ನಡವಳಿಕೆಗಳು ವೈಶ್ಯ, ಶೂದ್ರರಲ್ಲಿ ಇರಲು ಸಾಧ್ಯವಿದೆ. ಪ್ರಚಲಿತವಾದ ಜಾತಿ ವಿಭಾಗಕ್ಕೂ ಗೀತೆಯಲ್ಲಿ ಕಂಡುಬರುವ ಶಮದಮಾದಿಗಳ ವರ್ಗೀಕರಣಕ್ಕೂ ಏನೂ ಹೊಂದಿಕೆಯು ಕಂಡುಬರುವುದಿಲ್ಲ. ಇನ್ನು ಗೀತೆಯಲ್ಲಿ ಹೇಳಿರುವ ಪದ್ಧತಿಯಲ್ಲೇ ಹೊಸ ವರ್ಣವಿಭಾಗವನ್ನು ಗುಣಕರ್ಮಗಳ ಆಧಾರದಿಂದಲೇ ಏರ್ಪಡಿಸುವುದೆಂದರೆ ಇದೂ ಅತ್ಯಂತ ಅವ್ಯವಹಾರ್ಯಕ್ರಮವಾಗಬಲ್ಲದು. ಗುಣಗಳ ಆಧಾರದಿಂದ ಜಾತಿ ವಿಭಾಗವನ್ನು ರಚಿಸಿ ಸಮಾಜ ರಚನೆಯನ್ನು ಮಾಡಲು ಎಂದಿಗೂ ಶಕ್ಯವಾಗಲಾರದು. ಭಿನ್ನಭಿನ್ನ ಸಂದರ್ಭಗಳಲ್ಲಿ ಮಾನವನ ಗುಣ, ನಡವಳಿಕೆಗಳಲ್ಲಿ ಬದಲಾವಣೆಗಳಾಗಬಹುದು. ಅಂತಹ ಪ್ರಸಂಗದಲ್ಲಿ ಶಾಸ್ತ್ರೀಯ ಸಂಸ್ಕಾರ, ವೃತ್ತಿ, ಕಸಬುಗಳನ್ನು ಅವಲಂಬಿಸಿಕೊಂಡಿರುವ ವರ್ಣ ಪದ್ಧತಿಯನ್ನು ಒಬ್ಬನಲ್ಲಿ ಕ್ಷಣಕ್ಷಣದಲ್ಲಿ ಬದಲಿಸುತ್ತ ಹೋಗುವುದು ವ್ಯವಹಾರ್ಯವೆನಿಸಲಾರದು. ಯಾರಲ್ಲಿ ಯಾವ ಗುಣಗಳು ಇವೆ, ಇಲ್ಲವೆಂಬುದನ್ನು ನಿರ್ಧರಿಸಿ ಸಾಮಾಜಿಕ ವ್ಯವಸ್ಥೆಯನ್ನು ಮಾಡುವಾಗ ತೀವ್ರ ಸಂಘರ್ಷಣೆಗೆ ಎಡೆಯಾಗಬಹುದು. ಒಬ್ಬನ ವೈಯಕ್ತಿಕ ಗುಣ, ಪ್ರಭಾವಗಳನ್ನು ಅವನ ವೈಯಕ್ತಿಕ, ಆಧ್ಯಾತ್ಮಿಕ ಸಾಧನೆಯನ್ನು ನಿರ್ಧರಿಸುವಲ್ಲಿ ಆಧಾರವಾಗಿ ಉಪಯೋಗಿಸಿ ಕೊಳ್ಳಬಹುದು. ಆದರೆ ವೈಯಕ್ತಿಕ ಗುಣ ನಡತೆಗಳ ಆಧಾರದಿಂದ ಸಾಮಾಜಿಕ ವ್ಯವಸ್ಥೆಯನ್ನು ಏರ್ಪಡಿಸುವುದೆಂದರೆ ನಿತ್ಯ ಸಂಘರ್ಷವನ್ನು ಆಹ್ವಾನಿಸಿದಂತೆಯೇ ಸರಿ. ಆದ್ದರಿಂದ ಗುಣ ಕರ್ಮಗಳ ಆಧಾರದಿಂದ ಜಾತಿಗಳನ್ನು ವಿಭಜಿಸಿ ಹೊಸ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸಲೂ ಸಾಧ್ಯವಿಲ್ಲ ಎಂದು ಸ್ಪಷ್ಟವಾಗುವುದು. ಪ್ರಚಲಿತವಾದ ಜಾತಿ ವ್ಯವಸ್ಥೆಯಲ್ಲಿ ಗುಣ ವಿಭಾಗವನ್ನು ಹೊಂದಿಸುವುದೂ ಶಕ್ಯವಲ್ಲ . ಯಾಕೆಂದರೆ, ಬ್ರಾಹ್ಮಣನಿಗೆ ಹೇಳಿದ ಸದ್ಗುಣಗಳ ಇತರ ವರ್ಗದವರಲ್ಲಿ ಬೇಕಾದಷ್ಟು ದೊರೆಯುತ್ತಿರುವಾಗ ಬ್ರಾಹ್ಮಣಜಾತಿಯಲ್ಲಿ ಜನಿಸಿದವರಲ್ಲಿ ಮಾತ್ರ ಇಂತಹ ಶೀಲ, ಸದ್ಗುಣಗಳು ಇರುವವು, ಉಳಿದವರಲ್ಲಿ ಇಲ್ಲವೆಂದು ಹೇಳುವುದು ವಸ್ತುಸ್ಥಿತಿಗೆ ವಿರುದ್ಧವೆನಿಸುವುದು. ಆದುದರಿಂದ ಯಾವ ಅರ್ಥದಿಂದ ಶ್ರೀಕೃಷ್ಣನು ಈ ಮಾತನ್ನು ಹೇಳಿರುವನೆಂಬುದು ವಿಮರ್ಶಿಸಬೇಕಾಗಿದೆ.

ಶ್ರೀಮದಾಚಾರ್ಯರು ತಮ್ಮ ಗೀತೆಯ ವ್ಯಾಖ್ಯಾನದಲ್ಲಿ ಈ ಮಾತಿನ ನಿಜಾರ್ಥವನ್ನು ವಿಶದಪಡಿಸಿದ್ದಾರೆ. ಇಲ್ಲಿ ಚಾತುರ್ವರ್ಣ್ಯವೆಂಬ ಪದದಿಂದ ಶರೀರವನ್ನೇ ಆಧರಿಸಿಕೊಂಡಿರುವ ಪ್ರಚಲಿತಗಳಾದ ನಾಲ್ಕು ವರ್ಣಗಳನ್ನು ಪರಿಗ್ರಹಿಸಿರದೆ ಆತ್ಮನ ಮೂಲಭೂತವ್ಯಕ್ತಿತ್ವ, ಸ್ವರೂಪ, ಗುಣಗಳ ಆಧಾರದಿಂದ ಜೀವರನ್ನು ನಾಲ್ಕು ರೀತಿಯಿಂದ ವಿಂಗಡಿಸಿ, ನಿರೂಪಿಸಲಾಗಿದೆ. ಮುಕ್ತಿಗೆ

೫ರ್ಹರಾದ ಸಜ್ಜನರಾದ ಮಾನವರ ಗುಂಪನ್ನು ಇಲ್ಲಿ ನಾಲ್ಕು ವರ್ಗವಾಗಿ ವಿಂಗಡಿಸಲಾಗಿದೆ. ಇವರೆಲ್ಲರೂ ಸತ್ತ್ವಪ್ರಧಾನರೇ ಆಗಿದ್ದು ಅವರ ಸತ್ತ್ವ, ರಜ, ತಮೋಗುಣಗಳ ಅಂತರದಿಂದ ಈ ಜೀವ ವರ್ಗವನ್ನೇ ನಾಲ್ಕು ವರ್ಣಗಳಾಗಿ ವಿಭಜಿಸಲಾಗಿದೆ. ಶಮದಮಾದಿ ಸದ್ಗುಣಗಳು ಎಲ್ಲ ಜನರಲ್ಲೂ ಅವಶ್ಯವಾಗಿ ಬೇಕಾಗಿವೆ. ಆ ಸದ್ಗುಣಗಳ ತಾರತಮ್ಯವನ್ನು ಅವಲಂಬಿಸಿ ಅವರವರ ವ್ಯಕ್ತಿತ್ವವನ್ನು ನಾಲ್ಕು ರೀತಿಯಾಗಿ ವರ್ಗೀಕರಿಸಲಾಗಿದೆ. ಇದೇ ಗೀತೆಯಲ್ಲಿ ನಿರೂಪಿತವಾಗಿರುವ, ಆತ್ಮವನ್ನು ಅವಲಂಬಿಸಿರುವ ಚಾತುರ್ವರ್ಣ್ಯವಾಗಿದೆ.

**ಸ್ವಾಭಾವಿಕೋ ಬ್ರಾಹ್ಮಣಾದಿಃ ಶಮಾದ್ಯೈರೇವ ಭಿದ್ಯತೇ ।**
**ಯೋನಿಭೇದಕೃತೋ ಭೇದಃ ಜ್ಞೇಯ ಔಪಾಧಿಕಸ್ತ್ವಯಮ್ ॥**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವಿಭಾಗವನ್ನು ಎರಡು ರೀತಿಯಿಂದ ಮಾಡಲಾಗುತ್ತದೆ. ಹುಟ್ಟು, ಶರೀರ ಇವುಗಳ ಆಧಾರದಿಂದ ಏರ್ಪಡಿಸಿದ ಬ್ರಾಹ್ಮಣಾದಿ ವಿಭಾಗವು ಔಪಾಧಿಕವಾಗಿದ್ದು ಜೀವರ, ಮೂಲಭೂತ ಸದ್ಗುಣಗಳ ಹಿನ್ನೆಲೆಯಲ್ಲಿರುವ ವರ್ಣ ವಿಭಾಗವೇ ಸ್ವಾಭಾವಿಕವಾದುದು. ಒಬ್ಬನ ಬಾಹ್ಯಶರೀರವನ್ನೇ ಕಂಡು ಅವನ ನಿಜವಾದ ವ್ಯಕ್ತಿತ್ವ, ವರ್ಣಗಳನ್ನು ನಿರ್ಧರಿಸುವುದು ಉಚಿತವೆನಿಸುವುದಿಲ್ಲ. ಅವನ ಕೃತಿ, ವ್ಯವಹಾರ, ನಡತೆಗಳಿಂದ ಅವನ ವರ್ಣವನ್ನು ನಾವು ನಿರ್ಧರಿಸಬೇಕಾಗುವುದು. ಶಾರೀರಿಕವಾದ ವರ್ಣವಿಭಾಗಕ್ಕಿಂತಲೂ ಆತ್ಮನ ಮೂಲಭೂತ ಗುಣಧರ್ಮಗಳನ್ನು ಆಧರಿಸಿದ ವ್ಯಕ್ತಿತ್ವದ ವಿಭಾಗವೇ ಮುಖ್ಯವಾದ ವರ್ಣವಿಭಾಗವಾಗಿದೆ.

ಜನ್ಮವನ್ನು ಅವಲಂಬಿಸಿದ ಔಪಾಧಿಕವಾದ ವರ್ಣ ವಿಭಾಗವು ಸಾಮಾಜಿಕ ವ್ಯವಸ್ಥೆಗೂ ಸ್ಮೃತಿವಿಹಿತಗಳಾದ ಧರ್ಮಾನುಷ್ಠಾನಗಳಿಗೂ ಆಧಾರವಾಗಿದ್ದರೆ ಗೀತೆಯಲ್ಲಿ ಹೇಳಿದ ಆತ್ಮನ ಗುಣ, ಪ್ರವೃತ್ತಿಗಳನ್ನು ಅವಲಂಬಿಸಿರುವ ಸ್ವಾಭಾವಿಕ ವರ್ಣವಿಭಾಗವೇ ನಮ್ಮ ಆಧ್ಯಾತ್ಮಿಕ ಸಾಧನಾನುಷ್ಠಾನಗಳಿಗೆ ಮೂಲಭೂತವೆನಿಸಿದೆ.

**ಅಧಿಕಾಶ್ಚೇತ್ ಗುಣಾಃ ಶೂದ್ರೇ ಬ್ರಾಹ್ಮಣಾದಿಃ ಸ ಉಚ್ಯತೇ ।**
**ಬ್ರಾಹ್ಮಣೋಽಪ್ಯಲ್ಪಗುಣಕಃ ಶೂದ್ರ ಏವೇತಿ ಕೀರ್ತಿತಃ ॥**

ಶರೀರತಃ ಶೂದ್ರನಾಗಿದ್ದರೂ ಶಮದಮಾದಿ ಸದ್ಗುಣಗಳು ಹೆಚ್ಚು ಇದ್ದರೆ ಆತ್ಮದ ದೃಷ್ಟಿಯಿಂದ ಆತನು ಬ್ರಾಹ್ಮಣನೇ ಆಗಿರುತ್ತಾನೆ. ಬ್ರಾಹ್ಮಣಶರೀರವನ್ನು ಪಡೆದಿದ್ದರೂ ಶಮದಮಾದಿ ಸದ್ಗುಣಗಳು ಕಡಿಮೆಯಾಗಿದ್ದರೆ ಆತ್ಮದ ಹಿನ್ನೆಲೆಯಲ್ಲಿ ಆತನು ಶೂದ್ರನೆ ಆಗಿರುವನು. ಆದುದರಿಂದ ಜಾತಿ, ಜನ್ಮಗಳಿಂದಲೆ, ವ್ಯಕ್ತಿತ್ವವನ್ನು ಅಳೆಯಬಾರದು. ನೀತಿ, ಭಕ್ತಿ, ಸದ್ಗುಣಗಳಿಂದಲೇ ಮಾನವನ ವ್ಯಕ್ತಿತ್ವವನ್ನು, ಆತನ ನಿಜಸ್ವರೂಪವನ್ನು ನಾವು ತಿಳಿದುಕೊಳ್ಳಬೇಕು. ಎಷ್ಟು ಮೇಲ್ಮಟ್ಟದ ಶರೀರ ಇದ್ದರೂ ಅದರಿಂದಲೇ ಒಳಗಿರುವ ಜೀವನು ಶ್ರೇಷ್ಠನೇ

ಆಗಿರಬೇಕೆಂದಿಲ್ಲ. ಜೀವನ ಸ್ವರೂಪ ವ್ಯಕ್ತಿತ್ವವನ್ನು ಪ್ರತಿಬಿಂಬಿತಗೊಳಿಸುವ ಸದ್ಗುಣ ಸದ್ವ್ಯವಹಾರಗಳೆ ಆತನನ್ನು ಅಳೆಯುವ ಮಾನದಂಡಗಳೆಂಬುದೇ ಗೀತೆಯ ಆಶಯವಾಗಿದೆ. ಆದುದರಿಂದಲೇ –

**ವಿಪ್ರಾದ್ದ್ವಿಷಡ್ಗುಣಯುತಾದರವಿಂದನಾಭ-**
**ಪಾದಾರವಿಂದವಿಮುಖಾತ್ ಶ್ವಪಚಂ ವರಿಷ್ಠಮ್ ॥**

ಎಂದು ಭಾಗವತದಲ್ಲಿ ಭಗವದ್ ವಿಮುಖನಾದ ಬ್ರಾಹ್ಮಣನಿಗಿಂತ ಭಗವದ್ ಭಕ್ತನಾದ ಹೊಲೆಯನೇ ಶ್ರೇಷ್ಠನೆಂದು ವರ್ಣಿಸಿದ್ದಾರೆ. ಭಾರತದಲ್ಲಿ ಧರ್ಮವ್ಯಾಧನ ಉಪಾಖ್ಯಾನದಲ್ಲಿ:

**ಯಸ್ತು ಶೂದ್ರೋ ದಮೇ ಸತ್ಯೇ ಧರ್ಮೇ ಚ ಸತತೋತ್ಥಿತಃ ।**
**ತಂ ಬ್ರಾಹ್ಮಣಮಹಂ ಮನ್ಯೇ ವೃತ್ತೇನ ಹಿ ಭವೇದ್ ದ್ವಿಜಃ ॥**

ಎಂಬುದಾಗಿ, ಸತ್ಯ, ದಮ ಮುಂತಾದ ಸದ್ಗುಣಗಳುಳ್ಳ ಶೂದ್ರನು ಬ್ರಾಹ್ಮಣನೇ ಆಗಿರುವನೆಂದೂ ಸದ್ವರ್ತನೆಯಿಂದಲೇ ಬ್ರಾಹ್ಮಣನನ್ನು ಗುರ್ತಿಸಬೇಕೆಂದೂ ಹೇಳಲಾಗಿದೆ. ಯಕ್ಷ ಪ್ರಶ್ನೆಯ ಸಂದರ್ಭದಲ್ಲಿಯೂ

**ಕಾರಣಂ ಹಿ ದ್ವಿಜತ್ವೇ ಚ ವೃತ್ತಮೇವ ನ ಸಂಶಯಃ ।**

ಎಂದು ಸಚ್ಚಾರಿತ್ರ್ಯವೇ ಬ್ರಾಹ್ಮಣ್ಯದ ಹೇತುವೆಂದು ಬರೆಯಲಾಗಿದೆ. ಇವೆಲ್ಲ ಔಪಾಧಿಕವಾದ ಶಾರೀರಿಕ ವರ್ಣ ವಿಭಾಗವನ್ನು ಅಲ್ಲಗಳೆಯುವ ದೃಷ್ಟಿಯಿಂದ ಬರೆಯಲ್ಪಟ್ಟಿಲ್ಲ. ಆತ್ಮನ ವ್ಯಕ್ತಿತ್ವ ಮತ್ತು ಅವನ ಶ್ರೇಷ್ಠತೆಯನ್ನು ಸದ್ಗುಣ ಸಚ್ಚಾರಿತ್ರ್ಯದಿಂದಲೇ ನಿರ್ಧರಿಸಬೇಕೆಂಬುದೇ ಈ ವಾಕ್ಯಗಳ ತಾತ್ಪರ್ಯವಾಗಿದೆ.

ಧರ್ಮಶಾಸ್ತ್ರಗಳಲ್ಲಿ ಹೇಳಿದ ವರ್ಣವ್ಯವಸ್ಥೆಯು ಔಪಾಧಿಕವಾಗಿದ್ದರೂ ಅದು ಅನವಶ್ಯವೆಂದು ಅಭಿಪ್ರಾಯವಲ್ಲ. ಧರ್ಮಶಾಸ್ತ್ರೋಕ್ತಕರ್ಮಾನುಷ್ಠಾನಗಳಿಗೆ ಅದೇ ಆಧಾರವಾಗಿದ್ದು ಅದರ ರೀತಿಯಲ್ಲೇ ನಾವು ಆ ಕರ್ಮಗಳನ್ನು ಆಚರಿಸಬೇಕು. ಆದರೆ ಒಬ್ಬನಿಗೆ ಮುಕ್ತಿಗಿರುವ ಅರ್ಹತೆಯನ್ನು ಅವನ ಜನ್ಮಜಾತಿಗಳಿಂದಲೇ ನಿರ್ಧರಿಸಲು ಬರುವುದಿಲ್ಲ. ಬ್ರಾಹ್ಮಣ, ಕ್ಷತ್ರಿಯ ಮುಂತಾದ ಔಪಾಧಿಕ ಜಾತಿಗಳನ್ನಾಧರಿಸಿ ಧರ್ಮಶಾಸ್ತ್ರೋಕ್ತ ಕರ್ತವ್ಯಗಳನ್ನು ನಾವು ವಿಂಗಡಿಸಿದರೂ ಮುಕ್ತಿಯನ್ನು ಮಾತ್ರ ಈ ಬಾಹ್ಯಜಾತಿಯ ಆಧಾರದಿಂದ ನಿರ್ಧರಿಸಲು ಸಾಧ್ಯವಿಲ್ಲ. ಭಕ್ತಿ, ಪ್ರಾರ್ಥನೆ, ಉಪಾಸನೆ ಮೊದಲಾದ ಆಧ್ಯಾತ್ಮಿಕ ಸಾಧನೆಗೆ ಬೇಕಾದ ಅರ್ಹತೆಗಳನ್ನು ಒಬ್ಬನ ನಿಜವಾದ ಸಜ್ಜನಿಕೆಯನ್ನು ಅವನ ಜನ್ಮಜಾತಿಗಳಿಂದಲೇ ನಿರ್ಧರಿಸಬಾರದು. ಬ್ರಾಹ್ಮಣಜಾತಿಯಲ್ಲಿ ಹುಟ್ಟಿದ ಕೂಡಲೇ ಅವನು ಸಹಜವಾಗಿಯೇ ಶಮದಮಾದಿ ಗುಣಸಂಪನ್ನನಾದ ಸಜ್ಜನನಾಗಿರುವನೆಂಬ ನಿಯಮ ಇರುವುದಿಲ್ಲ. ಸಜ್ಜನಿಕೆಯನ್ನೂ ಅದರ

ಅಂತರವನ್ನೂ ಮಾನವನ ಸದ್ವ್ಯವಹಾರ ಮತ್ತು ಸತ್ತ್ವ, ರಜಸ್ಸು, ತಮಸ್ಸುಗಳ ತಾರತಮ್ಯದಿಂದಲೇ ನಿರ್ಧರಿಸಬೇಕಾಗುವುದು. ಯಾವುದೇ ಜಾತಿಯಲ್ಲಿದ್ದರೂ ಈ ಸಜ್ಜನರನ್ನು ಕಂಡುಹಿಡಿದು ಅವರನ್ನು ನಾವು ಗೌರವಿಸಬೇಕಾಗಿದೆ. ಮಾನವರಲ್ಲಿ ಮೂಲಭೂತವಾಗಿ ಇರಬಹುದಾದ ಈ ಸಜ್ಜನಿಕೆಯನ್ನೂ ಅದರ ಅಂತರವನ್ನೂ ಗುರುತಿಸಿಕೊಳ್ಳುವುದಕ್ಕಾಗಿಯೇ ಗೀತೆಯು ಈ ಸ್ವಾಭಾವಿಕವಾದ ಆತ್ಮಗುಣವನ್ನೇ ಆಧರಿಸಿರುವ ವರ್ಣವಿಭಾಗವನ್ನು ನಿರೂಪಿಸಿದೆ. ಗೀತೆಯು ಪ್ರತಿಪಾದಿಸಿದ ವರ್ಣವಿಭಾಗವು ಶರೀರಭೇದವನ್ನು ಅವಲಂಬಿಸಿದ ಜಾತಿವಿಭಾಗವಾಗಿರದೆ ಪ್ರಪಂಚದಲ್ಲಿರುವ ಸಜ್ಜನ ಸಮಾಜದ ವರ್ಗೀಕರಣವಾಗಿರುವುದು. ಆತ್ಮದ ಗುಣಧರ್ಮಗಳ ಕಡೆಗೆ ಗಮನವಿಟ್ಟು ಜನರನ್ನು ವರ್ಗೀಕರಿಸುವ ಈ ದೃಷ್ಟಿಯಿಂದ ಔಪಾಧಿಕ ವರ್ಣಧರ್ಮಗಳಿಂದ ಸಂಭವಿಸಬಹುದಾದ ಅನೇಕ ಲೋಪಹಾನಿಗಳನ್ನು ಪರಿಹರಿಸಿ ಸಮಾಜದಲ್ಲಿಸಾಮರಸ್ಯವನ್ನು ಸ್ಥಾಪಿಸಲು ಅವಕಾಶವಾಗುವುದು.

ಅಂತೂ ಚಾತುರ್ವರ್ಣ್ಯವೆಂದರೆ ಜಗತ್ತಿನ ಸಜ್ಜನ ಸಮೂಹವೆಂದೇ ನಿಜವಾದ ಅರ್ಥವಾಗಿದೆ. ಈ ಸಜ್ಜನವೃಂದಕ್ಕೆ ದೇಹವನ್ನೂ ಇತರ ಸಾಧನಸಾಮಗ್ರಿಗಳನ್ನೂ ನೀಡಿ ಈ ಜಗತ್ತಿಗೆ ತಂದಿರುವ ಪರಮಾತ್ಮನು ತಂದೆ, ತಾಯಿ, ಗುರುಗಳಿಗಿಂತಲೂ ಮಿಗಿಲಾಗಿ ಸರ್ವದಾ ಸರ್ವ ರೀತಿಯಿಂದಲೂ ಪರಮೋಪಕಾರಕನಾಗಿರುವನು. ಇಂತಹವನನ್ನು ಮರೆತು ಲೌಕಿಕ ಫಲಗಳಿಗಾಗಿ ಬೇರೆ ಕಡೆಗೆ ಓಡಾಡುವುದರಿಂದ ಸರ್ವಥಾ ಶ್ರೇಯಸ್ಸು ಉಂಟಾಗಲಾರದು. ಆದುದರಿಂದ ಸಜ್ಜನರೆಲ್ಲರೂ ಅನನ್ಯಭಕ್ತಿಯಿಂದ ಲೋಕೈಕನಾಯಕನೂ ಅನಂತಕಲ್ಯಾಣಗುಣನಿಧಿಯೂ ಪರಬ್ರಹ್ಮನೂ ಆದ ಶ್ರೀಹರಿಯನ್ನೇ ಆಶ್ರಯಿಸಬೇಕು. ಅವನನ್ನು ತೊರೆದು ಇತರ ದೇವತೆಗಳನ್ನಾಗಲಿ ಭೂತಗಳನ್ನಾಗಲಿ ಸಾಮಾನ್ಯ ಕ್ಷುದ್ರ ಮಾನವ ವ್ಯಕ್ತಿಗಳನ್ನಾಗಲಿ ಸ್ವಾರ್ಥಭಾವನೆಯಿಂದ ಮೊರೆಯಿಡುವುದು ಉಚಿತವಾಗುವುದಿಲ್ಲ. ಸರ್ವೋತ್ತಮವಾದ ಪರಬ್ರಹ್ಮವಸ್ತುವು ಒಂದೇ ಆಗಿದೆ. ಅದರಲ್ಲಿ ಅಚಲವಾದ ಶ್ರದ್ಧೆ, ನಿಷ್ಠೆ, ಭಕ್ತಿಗಳನ್ನು ಕಾಯ್ದುಕೊಳ್ಳಬೇಕು. ನಾನಾವಿಧ ಫಲವಾಸನೆಗಳಿಂದ ವಿವಿಧ ದೇವತೆಗಳನ್ನು ಆರಾಧಿಸಿ ನವ ಭಾವನೆಯನ್ನು ವಿಕ್ಷಿಪ್ತಗೊಳಿಸಿಕೊಳ್ಳಬಾರದು. ಬಹುಜನರು ತಿಳಿದುಕೊಂಡಂತೆ ಹಿಂದು ಧರ್ಮವು ಅನೇಕ ದೇವತೆಗಳ ಪರಮಶ್ರೇಷ್ಠತೆಯನ್ನು ಸಾರುವ ವಿಕ್ಷಿಪ್ತವಾದವಲ್ಲ. ಏಕದೇವತ ವಾದವೇ ಗೀತೆಯ ಪರಮಾಭಿಪ್ರಾಯವಾಗಿದೆಯೆಂಬುದು ಇಲ್ಲಿಸ್ಪಷ್ಟವಾಗುವುದು.

ಒಂಭತ್ತನೇ ಅಧ್ಯಾಯದಲ್ಲಿಇದನ್ನು ಇನ್ನೂ ಸ್ಪಷ್ಟಪಡಿಸಲಾಗಿದೆ.

**ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಾಯಾನ್ವಿತಾಃ ।** (9.23)

**...ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**

**ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ॥** (9.24)

**ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ ।**
**ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಂ ॥** (9.25)

ಅನ್ಯದೇವತೆಗಳೆಂದರೆ ಯಾರು ? ಸರ್ವೋತ್ತಮನಾದ, ಮೋಕ್ಷದಾತನಾದ ಪರಬ್ರಹ್ಮನೆಂದರೆ ಯಾರು ? ಎಂಬುದನ್ನು ಇಲ್ಲಿ ವಿಶದೀಕರಿಸಲಾಗಿದೆ. 'ಮಾಂ' 'ಮದ್ಯಾಜಿನಃ' ಎಂಬ ಶಬ್ದಗಳಿಂದ ಸರ್ವೋತ್ತಮನಾದ ಪರದೇವತೆಯು ತಾನೇ ಎಂದು ಶ್ರೀಕೃಷ್ಣನು ಹೇಳಿರುವನು. ಇದರಿಂದ ಶ್ರೀವಿಷ್ಣುವೇ ಸರ್ವದೇವತೆಗಳಿಗೆ ಸ್ವಾಮಿಯೂ ಸರ್ವಕರ್ಮಗಳಲ್ಲಿ ಆರಾಧ್ಯಪುರುಷನೂ ಆದ ಪರದೈವವೆಂಬುದು ನಿಃಸಂದಿಗ್ಧವಾಗಿ ಸಿದ್ಧವಾಗುವುದು. ದೇವತೆಗಳ, ಪಿತೃ, ಭೂತಗಳ ಆರಾಧನೆಯಿಂದ ಅಲ್ಪಫಲವು ದೊರೆಯುವುದೆಂದೂ ಅನ್ಯದೇವತೆಗಳನ್ನು ಪೂಜಿಸಿದರೂ ಅವರ ಒಳಗಿದ್ದು ಅದನ್ನು ಸ್ವೀಕರಿಸಿ ಆ ಕ್ಷುದ್ರ ಫಲಗಳನ್ನು ನೀಡುವ ಸರ್ವಯಜ್ಞಭೋಕ್ತನಾದ ಶ್ರೀಹರಿಯೇ ಸರ್ವೋತ್ತಮ ದೇವತೆಯಾಗಿದ್ದು, ಅವನ ಆರಾಧನೆಯಿಂದ ಮೋಕ್ಷರೂಪವಾದ ಮಹಾಫಲವು ದೊರೆಯುವುದೆಂಬುದನ್ನೂ ಮೇಲೆ ಉದಾಹರಿಸಿದ ಶ್ಲೋಕಗಳಲ್ಲಿ ನಿರೂಪಿಸಲಾಗಿದೆ.

### ಯಜ್ಞದ ವಿವಿಧ ಪ್ರಕಾರಗಳು

ಪರಮಾತ್ಮನ ಸ್ವಾತಂತ್ರ್ಯ ಸರ್ವಕರ್ತೃತ್ವಗಳನ್ನು ಸರ್ವದಾ ಸ್ಮರಿಸಿಕೊಂಡು ಕ್ಷುದ್ರ ಫಲಾಶೆಗಳಿಲ್ಲದೆ ಭಗವಂತನ ಸೇವಾರೂಪವಾಗಿ ಸ್ವಧರ್ಮವನ್ನಾಚರಿಸುವುದೇ ನಿಜವಾದ ಕರ್ಮಾಚರಣೆಯಾಗಿದೆ. ಯಜ್ಞರೂಪವಾದ ಇಂತಹ ಕರ್ಮವು ನಮಗೆ ಸಂಸಾರ ಬಂಧನಕ್ಕೆ ಪೋಷಕವಾಗುವುದಿಲ್ಲ ಎಂಬುದೇ ಇಷ್ಟರವರೆಗಿನ ಗೀತೋಪದೇಶದ ಮಥಿತಾರ್ಥವಾಗಿದೆ. ಯಜ್ಞ ರೂಪವಾದ ಈ ಕರ್ಮದ ವಿವಿಧ ರೀತಿಗಳನ್ನು ಈ ನಾಲ್ಕನೆಯ ಅಧ್ಯಾಯದಲ್ಲಿ ಪರಮಾತ್ಮನು ವಿವರಿಸುತ್ತಾನೆ:

**ದ್ರವ್ಯಯಜ್ಞಾಸ್ತಪೋಯಜ್ಞಾಃ ಯೋಗಯಜ್ಞಾ ಸ್ತಥಾಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥** (4.28)
**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।** (4.32)

ಪರಮಾತ್ಮನ ಪ್ರೀತಿಯಾಗಲಿ ಎಂಬ ಉದ್ದೇಶದಿಂದ ಕಾಮರಾಗಾದಿಗಳು ಇಲ್ಲದೇ ಮಾಡುವ ಕಾರ್ಯಗಳೆಲ್ಲವೂ ಯಜ್ಞಗಳೇ. ಅಗ್ನಿಯಲ್ಲಿ ಆಹುತಿಯನ್ನು ನೀಡಿ ನಡೆಸಲಾಗುವ ಪ್ರಸಿದ್ಧವಾದ ಯಜ್ಞವನ್ನು ಸಂನ್ಯಾಸಿಗಳು ಮಾಡಬಾರದು ಎಂದಿದೆ. ಆದರೆ ಗೀತೆಯಲ್ಲಿ ನಿರೂಪಿಸಿದ ಯಜ್ಞಕ್ಕೆ ಎಲ್ಲರೂ ಅಧಿಕಾರಿಗಳೇ. ಯೋಗಿಗಳು ಮಾಡುವ ಭಗವದುಪಾಸನೆಯೂ ಸಾಧಕರು ನಡೆಸುವ ಇಂದ್ರಿಯ ನಿಗ್ರಹ, ಉಪವಾಸ, ಪ್ರಾಣಾಯಾಮಾದಿಗಳೂ ವಿದ್ವಾಂಸರ ಪಾಠಪ್ರವಚನಗಳೂ ಎಲ್ಲವೂ ಯಜ್ಞಗಳೇ ಆಗಿವೆ. ಹೆಚ್ಚೇಕೆ, ಇಂದ್ರಿಯಗಳಿಂದ ನಡೆಯುವ ವಿಷಯೋಪಭೋಗ ವ್ಯವಹಾರವೂ ಕೂಡ ಯಜ್ಞವೇ ಆಗುವುದು.

**ಶಬ್ದಾದೀನ್ ವಿಷಯಾನನ್ಯೇ ಇಂದ್ರಿಯಾಗ್ನಿಷು ಜುಹ್ವತಿ ।** (4.26)

ಇಂದ್ರಿಯವೆಂಬ ಅಗ್ನಿಯಲ್ಲಿ ರೂಪ ರಸ ಮುಂತಾದ ಹವಿಸ್ಸನ್ನು ಕೆಲವರು ಹೋಮಿಸುವರೆಂದು ವಿಷಯೋಪಭೋಗದ ಯಜ್ಞವನ್ನು ವರ್ಣಿಸಲಾಗಿದೆ. ಶರೀರವೂ ಪರಮಾತ್ಮನ ಸೇವೆಗೆ ಉಪಕರಣವೆಂದು ಬಗೆದು, ಸೇವಾಕಾರ್ಯವು ಅವ್ಯಾಹತವಾಗಿ ನಡೆಯಲೆಂಬ ಭಾವನೆಯಿಂದ, ನಿರಭಿಮಾನದಿಂದ ಶರೀರ ಪೋಷಣೆಗಾಗಿ ಆಹಾರಾದಿ ಪದಾರ್ಥಗಳನ್ನು ಸ್ವೀಕರಿಸಿದರೆ ಅದೂ ಪವಿತ್ರವಾದ ಯಜ್ಞವೆನಿಸುವುದು. ಯಾಂತ್ರಿಕನು ತನ್ನ ಯಂತ್ರವು ಸರಿಯಾಗಿ ಕೆಲಸಮಾಡಲೆಂದು ಅದಕ್ಕೆ ಎಣ್ಣೆಯನ್ನು ಹಾಕುವಂತೆ ಶರೀರವೂ ಒಂದು ಯಂತ್ರೋಪಕರಣವೆಂದು ಭಾವಿಸಿ ಅದಕ್ಕೆ ಪೋಷಕದ್ರವ್ಯವನ್ನು ಜ್ಞಾನಿಯು ನೀಡುವನು. ಈ ಸಂದರ್ಭದಲ್ಲಿ ಅವನಲ್ಲಿ ಯಾವುದೇ ಚಿತ್ತೋದ್ರೇಕ ವಿಕಾರಗಳಿಗೆ ಅವಕಾಶವಿರುವುದಿಲ್ಲ. ಇಂತಹ ಮಾನಸಿಕ ಸುಸ್ಥಿತಿಯಿಂದ ನಡೆಸಲಾಗುವ ಆಹಾರಾದಿ ಸೇವನೆಯಾಗಲೀ ಇತರ ಎಲ್ಲಾ ದೈನಂದಿನ ಶಾರೀರಿಕ ವ್ಯವಹಾರಗಳಾಗಲೀ ಯಜ್ಞದ ಪ್ರಭೇದಗಳೆಂದೇ ಗೀತೆಯಲ್ಲಿ ಪರಿಗಣಿಸಲಾಗಿದೆ.

ಛಾಂದೋಗ್ಯೋಪನಿಷತ್ತಿನಲ್ಲಿ ಜೀವನವನ್ನೇ ಒಂದು ಯಜ್ಞವೆಂದು ಕರೆಯಲಾಗಿದೆ. ಪರಮಾತ್ಮನ ಸೇವೆಗಾಗಿಯೇ ತನ್ನ ಜೀವನದ ಸಕಲ ವ್ಯವಹಾರಗಳನ್ನು ಮೀಸಲಾಗಿರಿಸಿದ ಪುಣ್ಯಪುರುಷನ ಜೀವನವೇ ಒಂದು ಪರಮಯಜ್ಞವೆನಿಸುವುದು. ಎಲ್ಲಿ ತ್ಯಾಗವಿದೆಯೋ, ಎಲ್ಲಿ ಭಗವಂತನಲ್ಲಿ ಸಮರ್ಪಣಬುದ್ಧಿ ಇದೆಯೋ, ಅಲ್ಲೇ ಯಜ್ಞದ ನಿಜವಾದ ತಿರುಳು ಇದೆ. ಪವಿತ್ರವಾದ ಜೀವನದಲ್ಲಿ ಈ ಭಾವವು ಸಂಪೂರ್ಣವಾಗಿ ಅನುಸೂತ್ಯವಾಗಿರುವುದರಿಂದ ಅದನ್ನು ಯಜ್ಞವೆಂದು ಕರೆದಿರುವುದು ಸಹಜವೇ ಆಗಿದೆ. ಯಜ್ಞದಲ್ಲಿ ದಕ್ಷಿಣೆಗೆ ಪ್ರಮುಖವಾದ ಸ್ಥಾನವಿರುವುದು. ದಕ್ಷಿಣೆಯು ಯಾವುದೆಂಬುದನ್ನು ವಿವೇಚಿಸಿ ಸತ್ಯ, ದಯೆ, ಅಭಯಗಳೇ ದಕ್ಷಿಣೆಗಳೆಂದು ಉಪನಿಷತ್ತು ನಿರೂಪಿಸಿದೆ. ಈ ಸದ್ಗುಣಗಳಿಂದಲೇ ನಮ್ಮ ಜೀವನಯಜ್ಞವೂ ಪರಿಪೂರ್ಣತೆಯನ್ನೂ ಸಾಫಲ್ಯವನ್ನೂ ಪಡೆಯಬಲ್ಲದು. ಮರಣವೇ ಈ ಯಜ್ಞದ ಅವಭೃಥವೆಂದು ಮಾರ್ಮಿಕವಾಗಿ ಕೊನೆಯಲ್ಲಿ ವರ್ಣಿಸಲಾಗಿದೆ. ನಿಜವಾದ ಜ್ಞಾನಿಯೂ ಕರ್ತವ್ಯನಿರತನೂ ಆದ ವ್ಯಕ್ತಿಯು ಮರಣಕ್ಕೆ ಅಂಜುವುದಿಲ್ಲ. ಮರಣವೊಂದು ವರದಾನ ಎಂದು ಬಗೆದು ಅದನ್ನು ಆದರದಿಂದಲೇ ಎದುರಿಸುವನು. ಯಜ್ಞವನ್ನು ಅನುಷ್ಠಾನ ಮಾಡುವವರು ಅವಭೃಥ ಸ್ನಾನಕ್ಕೆ ಉತ್ಸಾಹದಿಂದ ಹಾತೊರೆಯುವಂತೆ ತನ್ನ ಜೀವನದ ಪರಮಸಿದ್ಧಿಯನ್ನು ಪಡೆಯುವುದಕ್ಕಾಗಿ ಮರಣವನ್ನು ಆನಂದದಿಂದ ಕರ್ಮಯೋಗಿಗಳು ಸ್ವಾಗತಿಸಬಲ್ಲರು.

ಹೀಗೆ ಯಜ್ಞವನ್ನು ಅತ್ಯಂತ ವಿಸ್ತೃತವಾದ ಅರ್ಥದಲ್ಲಿ ನಮಗೆ ಗೀತೆಯು ತೋರಿಸಿದೆ. ತಾನು, ತನ್ನದು ಎಂಬ ಪರಿಮಿತ ವರ್ತುಲದಲ್ಲಿಯೇ ತಿರುಗುತ್ತ ಸ್ವಾರ್ಥಕ್ಕಾಗಿಯೇ ಜೀವನದ ಎಲ್ಲ ವ್ಯವಹಾರಗಳನ್ನೂ ನಡೆಸುವ ಭೋಗಜೀವನದಿಂದ ನಮ್ಮನ್ನು ಪರಾವೃತ್ತಗೊಳಿಸಿ ಲೋಕಕ್ಕಾಗಿ, ಲೋಕದ ಅಂತರ್ಯಾಮಿಯಾದ ಭಗವಂತನಿಗಾಗಿ, ತನ್ನ ಜೀವನವನ್ನು ಧಾರೆ ಎರೆಯುವ

ತ್ಯಾಗಜೀವನವನ್ನು ಗೀತೆಯು ನಮಗೆ ಬೋಧಿಸಿದೆ. ಸ್ವರ್ಗ, ಸಂಪತ್ತು ಮೊದಲಾದ ಲೌಕಿಕ ಸುಖಗಳನ್ನು ಪಡೆಯುವುದಕ್ಕಾಗಿ ವಿವಿಧ ದೇವತೆಗಳ ಹೆಸರಿನಲ್ಲಿ ಅಗ್ನಿಯಲ್ಲಿ ಘೃತ, ಹವಿಸ್ಸುಗಳನ್ನು ಪ್ರಕ್ಷೇಪಿಸುವುದೇ ಯಜ್ಞವೆಂದು ಭಾವಿಸಿದ ಜನತೆಗೆ ಯಜ್ಞದ ವಿಸ್ತಾರವಾದ ಭವ್ಯ ರೂಪವನ್ನು ಗೀತೆಯಲ್ಲಿ ವಿವರಿಸಲಾಗಿದೆ. ಸ್ವಾಮಿಯು ತನ್ನ ವಿಶ್ವರೂಪವನ್ನು ನಮಗೆ ತೋರಿಸಿರುವನು. ಲೌಕಿಕ ಯಜ್ಞದಲ್ಲಿ ಪಶುವಧೆಯೂ ಒಂದು ಅಂಗವಾಗಿ ಪರಿಗಣಿತವಾಗಿದೆ. ಗೀತೆಯು ಬೋಧಿಸಿದ ಯಜ್ಞದಲ್ಲಿ ನಾವು ವಧಿಸಬೇಕಾಗಿರುವ ಪಶುಗಳೆಂದರೆ ನಮ್ಮ ಒಳಗಿರುವ ಅಹಂಕಾರ ಮಮತೆಗಳೇ ಆಗಿವೆ. ಭೋಗಲಾಲಸೆಗೆ ಪರವಶರಾದ ಜನರು ಪಶುಗಳಂತೆ ಸ್ವೇಚ್ಛಾಪ್ರವೃತ್ತರಾಗಿ ಅವಿವೇಕದಿಂದ ವರ್ತಿಸುತ್ತಾರೆ. ನಮ್ಮಲ್ಲಿ ಹುದುಗಿರುವ ಈ ಪಶುತ್ವವನ್ನು ವಧಿಸುವುದೇ ಗೀತೆಯು ವಿಧಿಸುವ ಯಜ್ಞದ ಪವಿತ್ರ ಬಲಿಯಾಗಿದೆ. ಮಮತೆ ಮೋಹಗಳಿಗೆ ಒಳಗಾದ ಜನರು ಎಲ್ಲವನ್ನು ಮೇಕೆಯಂತೆ ''ಮೇ ಮೇ'' – ನನ್ನದು ನನ್ನದೆಂದು ಅನ್ನುವರು. ಇಂತಹ ಸ್ವಾರ್ಥ ಪಶುವಿನ ವಿಹಾರ ಭೂಮಿಯಾಗಿದೆ ನಮ್ಮ ಜೀವನ.

**ಇದಮದ್ಯ ಮಯಾ ಲಬ್ಧಂ ಇಮಂ ಪ್ರಾಪ್ಸ್ಯೇ ಮನೋರಥಮ್ ।**
**ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್ ॥** (16.13)

ಪ್ರಪಂಚದಲ್ಲಿ ಯಾವುದು ಕಾಣಸಿಗುತ್ತದೋ ಅದೆಲ್ಲಾ ತನ್ನದಾಗಬೇಕೆಂದು ಇವರು ಸದಾ ಬಡಬಡಿಸುತ್ತಾರೆ. ಇಂದು ಇದನ್ನು ಪಡೆದಿದ್ದೇನೆ. ನಾಳೆ ಇನ್ನೊಂದನ್ನು ಪಡೆಯಬೇಕೆಂಬುದೇ ಇಂತಹವರ ಮಂತ್ರ, ಚಿಂತನೆಗಳು. ಸಂಪತ್ತನ್ನು ಅಭಿವೃದ್ಧಿಪಡಿಸಲು, ಅಧಿಕಾರಕ್ಕೆ ಕೊನೆಯವರೆಗೂ ಅಂಟಿಕೊಳ್ಳಲು ಯಾವ ಅಕೃತ್ಯ ಅವ್ಯವಹಾರಗಳನ್ನು ಮಾಡಲೂ ಇಂತಹ ಜನರು ಅಂಜುವುದಿಲ್ಲ. ಇಂದು ಇಂತಹ ಪ್ರವೃತ್ತಿಯನ್ನು ಎಲ್ಲ ರಂಗಗಳಲ್ಲೂ ಬಹಳ ಅಸಹನೀಯವೆನ್ನುವ ಸ್ಥಿತಿಯಲ್ಲಿ ನಾವು ನೋಡುತ್ತಲೇ ಇದ್ದೇವೆ. ಗೀತೆಯು ನಿರೂಪಿಸಿದ ಈ ಯಜ್ಞದೃಷ್ಟಿಯು ನಮ್ಮ ಜೀವನದ ಎಲ್ಲ ರಂಗಗಳಲ್ಲೂ ವ್ಯಾಪಿಸಿದರೆ ಮಾತ್ರ ಈ ವಿಕಲ್ಪ ವಿಕಾರಗಳ ನಿರ್ನಾಮವಾಗಬಲ್ಲದು. ಈ ಸ್ವಾರ್ಥಪಶುವಿನ ಬಲಿದಾನ ಮಾಡಿ ವಿಶ್ವದ ಅಧಿದೇವತೆಯಾದ ಭಗವಂತನಿಗೆ ನಮ್ಮದೆಲ್ಲವನ್ನೂ ಅರ್ಪಿಸಿ ಅವನ ಪೂಜಾರೂಪವಾಗಿ ವಿಶ್ವರಹಿತಕರವಾದ ಸೇವಾಕಾರ್ಯಗಳನ್ನೆಲ್ಲ ನಡೆಸುವುದೇ ಈ ಜೀವನವ್ಯಾಪಿ ಪವಿತ್ರ ಯಜ್ಞವಾಗಿದೆ. ಇದೇ ಭಗವಂತನ ನಿಜವಾದ ಮಹಾಪೂಜೆ ಯೆನಿಸುವುದು.

**ಪ್ರಾತಃಪ್ರಭೃತಿ ಸಾಯಾಂತಂ ಸಾಯಾದಿ ಪ್ರಾತರಂ ತತಃ ।**
**ಯತ್ಕರೋಮಿ ಜಗನ್ನಾಥ ತದಸ್ತು ತವ ಪೂಜನಂ ॥** – ಪಂಚರಾತ್ರ

ಎಂದು ಹೇಳಿದಂತೆ ಬೆಳಗಿನಿಂದ ಸಾಯಂಕಾಲದವರೆಗೆ ನಾವು ಮಾಡುವ ಎಲ್ಲಾ ಕಾರ್ಯಗಳೂ ಪರಮಾತ್ಮನ ಪೂಜೆಯೆನ್ನುವ ರೀತಿಯಲ್ಲಿ ನಾವು ವ್ಯವಹರಿಸಬೇಕು. ದಿನಕ್ಕೆ ಒಂದು ಘಂಟೆಯಾಗಲೀ ವಾರಕ್ಕೆ ಒಂದು ದಿನವಾಗಲೀ ದೇವರ ಪೂಜೆಯನ್ನು ಮಾಡಿ, ದೇವರನ್ನು,

ಧರ್ಮವನ್ನು ಗುಡಿಯೊಳಗಾಗಲಿ ಪೆಟ್ಟಿಗೆಯಲ್ಲಾಗಲಿ, ನಮಗೂ ಅದಕ್ಕೂ ಮುಂದಿನ ಪೂಜಾಪ್ರಾರ್ಥನೆಗಳವರೆಗೆ ಸಂಬಂಧವೇ ಇಲ್ಲವೆನ್ನುವ ರೀತಿಯಲ್ಲಿ ಬಿಟ್ಟು ಉಳಿದ ಸಮಯದಲ್ಲಿ ಬೇಕಾದಂತೆ ವ್ಯವಹರಿಸುವ ಧರ್ಮವನ್ನು ಗೀತೆಯು ನಮಗ ಬೋಧಿಸುತ್ತಿಲ್ಲ. ಧರ್ಮವು ಜೀವನವ್ಯಾಪಿಯಾಗಿರಬೇಕು. ಧರ್ಮವು ಜೀವನದ ಒಂದು ಅಂಗವಾಗಿರದೆ ಜೀವನದ ಎಲ್ಲ ರಂಗಗಳಿಗೂ ಚೈತನ್ಯದಾಯಿಯಾಗಿ ಅದು ಶರೀರಕ್ಕೆ ಆತ್ಮದಂತೆ ನಮ್ಮ ಜೀವನದಲ್ಲಿ ಪ್ರತಿಷ್ಠಿತವಾಗಿರಬೇಕು. ಜೀವನನಿರ್ವಾಹಕ್ಕಾಗಿ ನಾವು ನಡೆಸುವ ವ್ಯವಹಾರಗಳನ್ನು ನಾವು ಧರ್ಮದಿಂದ ಬೇರ್ಪಡಿಸಿ ಇಡಬಾರದು. ಪರಮಾತ್ಮನಲ್ಲಿ ಭೃತ್ಯಭಾವನೆಯನ್ನು ತುಂಬಿಕೊಂಡು ತಾನು ಮಾಡುವ ಜೀವನವೃತ್ತಿಗಳಲ್ಲಿಯೂ ಪ್ರಾಮಾಣಿಕತೆ ಹಾಗೂ ಲೋಕಹಿತದೃಷ್ಟಿಯನ್ನು ಬೆಳೆಸಿಕೊಂಡು ಅನಿಷಿದ್ಧವಾದ ಲೌಕಿಕ ವ್ಯವಹಾರಗಳನ್ನು ನಡೆಸಿದಲ್ಲಿ ಅದೂ ಧರ್ಮವೆನಿಸುವುದು.

***

## ಸಂನ್ಯಾಸ ಮತ್ತು ಕರ್ಮಯೋಗ

**ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥** (5.1)

ಶ್ರೀಕೃಷ್ಣನು ತನ್ನ ಉಪದೇಶದಲ್ಲಿ ಕಾಮ–ಕ್ರೋಧ ಮೊದಲಾದ ಹೃದಯದೋಷವನ್ನು ಪರಿತ್ಯಜಿಸುವುದು ಮತ್ತು ಈಶ್ವರಾರ್ಪಣ ಬುದ್ಧಿಯಿಂದ ಕರ್ತವ್ಯವನ್ನಾಚರಿಸುವುದು–ಈ ಎರಡು ಸಂಗತಿಗಳನ್ನು ಮುಖ್ಯವಾಗಿ ಬೋಧಿಸಿರುವನು. ಈವರೆಗಿನ ಬೋಧನೆಯ ಸಾರಾಂಶವು ಇದೇ ಆಗಿದೆ. ಆದರೆ ಇವರೆಡರಲ್ಲಿ ಯಾವುದು ಪ್ರಧಾನವೆಂಬುದನ್ನು ತಿಳಿಯುವ ಕುತೂಹಲವನ್ನು ಅರ್ಜುನನು ವ್ಯಕ್ತಪಡಿಸುತ್ತಾನೆ. ಕಾಮಾದಿ ಮನೋದೋಷಗಳ ನಿವಾರಣೆಯೇ ಮುಖ್ಯವಾಗಿರುವುದಾದರೆ ಅದನ್ನೇ ಸಾಧಿಸಿದರೆ ಸಾಲದೇ? ಕಾಮದ್ವೇಷಗಳ ಜಾಲವಾದ ಈ ಯುದ್ಧದ ತೊಡಕಿನಿಂದ ತಾನು ಪಾರಾಗಬಾರದೇಕೆ? ಎಂಬುದು ಅರ್ಜುನನ ವಿಚಾರವಾಗಿದೆ. ಸಂನ್ಯಾಸ ಮತ್ತು ಕರ್ಮ ಇವೆರಡನ್ನೂ ಒಬ್ಬನೇ ನಿರ್ವಹಿಸಲಾರ. ಒಂದು ಸಂನ್ಯಾಸಿಗಳಿಗೆ ಸಂಬಂಧಿಸಿದರೆ ಇನ್ನೊಂದು ಗೃಹಸ್ಥರಿಗಾಗಿಯೇ ಮೀಸಲು. ಪರಸ್ಪರ ವಿರೋಧಿಗಳಾದ ಈ ಸಂನ್ಯಾಸ ಮತ್ತು ಕರ್ಮಯೋಗಗಳಲ್ಲಿ ತಾನು ಯಾವುದರ ಆಯ್ಕೆ ಮಾಡಲಿ? ಎನ್ನುವುದೂ ಅರ್ಜುನನ ಜಿಜ್ಞಾಸೆಯಾಗಿದೆ.

ಇದಕ್ಕೆ ಭಗವಂತನ ಉತ್ತರ ಹೀಗಿದೆ: ಈ ಸಂನ್ಯಾಸ ಮತ್ತು ಕರ್ಮಯೋಗಗಳು ಪರಸ್ಪರ ವಿರೋಧಿಗಳಾಗಿರದೆ ಪರಸ್ಪರ ಪೂರಕಗಳಾಗಿವೆ. ಸಂನ್ಯಾಸ ಮತ್ತು ಕರ್ಮಯೋಗ – ಈ ಶಬ್ದಗಳಿಂದ ಯತಿಧರ್ಮ ಹಾಗೂ ಗೃಹಸ್ಥಧರ್ಮಗಳನ್ನು ಇಲ್ಲಿ ನಿರೂಪಿಸಲಾಗಿಲ್ಲ. ಸಂನ್ಯಾಸ

ಎಂದರೆ ಮನಸ್ಸಿನಲ್ಲಿ ಹುದುಗಿರುವ ಕಾಮ, ದ್ವೇಷ, ಮೋಹ ಮೊದಲಾದ ವಿಕಾರಗಳ ವಿಮೋಚನೆಯೇ ಆಗಿದೆ. ಇದು ಕರ್ಮಯೋಗದ ಪೂರ್ವಾಂಗವಾಗಿದೆ. ಕಾಮದ್ವೇಷಾದಿ ಹೃದಯ ದೋಷಗಳನ್ನು ಕಿತ್ತೊಗೆದು ಅಂತಃಕರಣವನ್ನು ಹದಗೊಳಿಸಿದ ನಂತರ ಕರ್ಮದ ಪವಿತ್ರಾಂಕುರಗಳನ್ನು ಅಲ್ಲಿ ನೆಡದಿದ್ದರೆ ಆವರೆಗೆ ಮಾಡಿದ ಪ್ರಸಾಧನ ಪರಿಷ್ಕರಣಗಳೆಲ್ಲ ವ್ಯರ್ಥವಾಗುವುದಿಲ್ಲವೇ? ಹೊಲದ ಕಳೆಗಳನ್ನು ಕಿತ್ತೊಗೆದು ಅದನ್ನು ಕೃಷಿ ಯೋಗ್ಯವಾಗುವಂತೆ ಮಾಡಲು ಬೇಕಾದ ಸಾಧನ ಸಂವಿಧಾನಗಳನ್ನು ನಡೆಸಿ, ಕೃಷಿಯನ್ನು ಮಾತ್ರ ಮಾಡದಿದ್ದಲ್ಲಿ ಅಷ್ಟರವರೆಗಿನ ಶ್ರಮ ಸಾಧನೆಯೆಲ್ಲ ಸಂಪೂರ್ಣ ವಿಫಲವೆನಿಸುವುದು. ಗೀತೆಯಲ್ಲಿ ಇದುವರೆಗೆ ನಿರೂಪಿಸಲಾದ ರಾಗದ್ವೇಷಾದಿ ಪರಿತ್ಯಾಗರೂಪವಾದ ಈ ಸಂನ್ಯಾಸವು ಮನಸ್ಸನ್ನು ಹದಗೊಳಿಸುವ ಪ್ರಕ್ರಿಯೆಯೇ ಆಗಿದೆ.

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।** (5.3)

ಸುಖದುಃಖಗಳ ದ್ವಂದ್ವವನ್ನು ದಾಟಿನಿಂತು ದ್ವೇಷ-ಕಾಂಕ್ಷೆಗಳನ್ನು ಕಿತ್ತು ಒಗೆದ ವ್ಯಕ್ತಿಯೇ ಸಂನ್ಯಾಸಿ ಎನಿಸುವನು. ಇಂತಹ ಸಂನ್ಯಾಸಿಯನ್ನು ದಂಡ ಕಾಷಾಯಗಳಿಂದಲೇ ಗುರುತಿಸಬೇಕಾಗಿಲ್ಲ. ಸಂಸಾರ ಸಮಾಜಗಳ ಮಧ್ಯದಲ್ಲಿದ್ದುಕೊಂಡೇ ಈ ಸನ್ಯಾಸಿಮನೋವೃತ್ತಿಯನ್ನು ಪಡೆಯಲು ಎಲ್ಲರೂ ಪ್ರಯತ್ನಿಸಬಹುದು. ಆದರೆ ಈ ಮಾನಸಿಕ ದೋಷಗಳ ಪರಿತ್ಯಾಗವೇ ಅಂತಿಮ ಸಾಧನೆಯೆಂದು ನಾವು ಗ್ರಹಿಸಬಾರದು. ಭಗವಂತನ ಸಾಕ್ಷಾತ್ಕಾರಕ್ಕಾಗಿ ನಾವು ಮಾಡಲಿರುವ ಮಹಾ ಸಾಧನೆಗೆ ಇದು ಭೂಮಿಕೆಯಾಗಿರುವುದನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು. ಗೀತೆಯು ಹೇಳಿದ ಈ ನಿತ್ಯಸಂನ್ಯಾಸವು ಮನಸ್ಸಿನ ಪರಿಷ್ಕರಣ ಮಾತ್ರವಾಗಿದ್ದು, ಭಗವದರ್ಪಣಭಾವನೆಯಿಂದ ನಾವು ಮಾಡುವ ಕರ್ತವ್ಯಾನುಷ್ಠಾನದಿಂದಲೇ ಅದು ಸಮಗ್ರತೆಯನ್ನು ಪಡೆಯುವುದು. ಹೀಗೆ ಈ ಸಂನ್ಯಾಸ ಹಾಗೂ ಕರ್ಮಯೋಗಗಳು ಪರಸ್ಪರ ಪೂರಕಗಳಾಗಿದ್ದು ರಾಗಾದಿ ಪರಿವರ್ಜನದಿಂದಲೇ ನಾವು ತೃಪ್ತರಾಗದೆ ನಿಷ್ಕಾಮಕರ್ಮಾಚರಣೆಯಿಂದ ನಮ್ಮ ಸಾಧನೆಗೆ ಪರಿಪೂರ್ಣತೆಯನ್ನು ತಂದುಕೊಳ್ಳಬೇಕು ಈ ಅಭಿಪ್ರಾಯದಿಂದಲೇ,

**ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ।** (5.2)

ಎಂದು ಸಂನ್ಯಾಸಕ್ಕಿಂತಲೂ ಕರ್ಮಯೋಗಕ್ಕೆ ಹೆಚ್ಚಿನ ಮಹತ್ತ್ವವನ್ನು ಗೀತೆಯಲ್ಲಿ ಹೇಳಲಾಗಿದೆ.

## ಕರ್ಮಯೋಗಿಯ ನಿರ್ಲಿಪ್ತತೆ

ರಾಗದ್ವೇಷಾದಿತ್ಯಾಗ ಮತ್ತು ನಿಷ್ಕಾಮಕರ್ಮಾಚರಣೆ ಇವೆರಡನ್ನು ತನ್ನಲ್ಲಿ ಅಳವಡಿಸಿಕೊಂಡ ಕರ್ಮಯೋಗಿಯು ಎಲ್ಲರಂತೆ ಲೌಕಿಕ ವ್ಯವಹಾರಗಳನ್ನೇನೋ ನಡೆಸುತ್ತಿರುತ್ತಾನೆ. ಆದರೆ ಅವನ

ಪ್ರತಿಯೊಂದು ಆಚರಣೆಯಲ್ಲಿಯೂ ಬ್ರಹ್ಮಾರ್ಪಣದೃಷ್ಟಿಯು ಅನುಸೂತ್ಯವಾಗಿರುವುದು. ಯಾವ ಕ್ಷಣದಲ್ಲಿಯೂ ತಾನು ಇದನ್ನು ಮಾಡಿದೆನೆಂಬ ಅಹಂಕಾರದ ಭಾವವೇ ಅವನಲ್ಲಿ ಉದಯವಾಗುವುದಿಲ್ಲ. ಭಗವಂತನ ಶಕ್ತಿ, ಇಚ್ಛೆಗಳಿಂದ ತನ್ನ ಶರೀರ ಇಂದ್ರಿಯಗಳೆಲ್ಲ ಪ್ರವರ್ತಿಸುತ್ತವೆ, ಎಂಬ ಭಾವನೆಯು ಅವನಲ್ಲಿ ನಿತ್ಯಜಾಗೃತವಾಗಿರುತ್ತದೆ.

ದೈನಂದಿನ ಪ್ರತಿಯೊಂದು ಸಾಧಾರಣ ಚಟುವಟಿಕೆ ನಡೆಯುತ್ತಿರುವಾಗಲೂ ಈ ಅನುಸಂಧಾನವು ಅವನಲ್ಲಿ ಓತಪ್ರೋತವಾಗಿರುವುದು. ಆದುದರಿಂದಲೇ ಈ ಜಗತ್ತಿನ ಮಧ್ಯದಲ್ಲಿಯೇ ಸಾಂಸಾರಿಕ ವ್ಯವಹಾರಗಳ ಜಾಲದಲ್ಲಿ ಇದ್ದರೂ ಆತನು ನಿರ್ಲಿಪ್ತನೆನಿಸಿದ್ದಾನೆ. ಅಂತರಂಗದಲ್ಲಿ ನೈರ್ಮಲ್ಯ ಹಾಗೂ ತತ್ತ್ವಜ್ಞಾನದ ಹಿನ್ನೆಲೆ ಇರುವುದರಿಂದ ಈ ಲೌಕಿಕ ಕರ್ಮಗಳಿಂದ ಪಾಪದ ಲವಲೇಶ ಸಂಪರ್ಕವೂ ಅವನಿಗೆ ತಾಗಲಾರದು.

**ಪದ್ಮಪತ್ರಮಿವಾಂಭಸಾ ।**

ವಿಶಾಲವಾದ ಜಲರಾಶಿಯ ಮಧ್ಯದಲ್ಲೇ ಇದ್ದು ಅಲ್ಲೇ ಹುಟ್ಟಿ ಬೆಳೆದಿದ್ದರೂ ತಾವರೆಯ ಎಲೆಗೆ ತೇವ ಅಂಟುವುದೇ ಇಲ್ಲ. ಬಟ್ಟೆಯನ್ನು ನೀರಿನಲ್ಲಿ ಅದ್ದಿದರೆ ಅದು ಒದ್ದೆಯಾಗಿ ನೀರು ಬಟ್ಟೆಯನ್ನೆಲ್ಲಾ ವ್ಯಾಪಿಸುತ್ತದೆ. ತಾವರೆ ಎಲೆಯನ್ನು ನೀರಿನಲ್ಲಿ ಮುಳುಗಿಸಿದರೂ ಒಂದು ಹನಿಯೂ ಅದರಲ್ಲಿ ಅಂಟಿಕೊಳ್ಳುವುದಿಲ್ಲ. ನಿಷ್ಕಾಮಕರ್ಮದ ಪ್ರಕ್ರಿಯೆಯಲ್ಲಿ ಈ ಚಮತ್ಕಾರವು ಅಡಗಿದೆ. ಪಾಪದ ಸೋಂಕು ಸಂಭವಿಸದಂತೆಯೇ ಈ ಜಗತ್ತಿನ ವ್ಯವಹಾರದಲ್ಲಿ ಅವನು ಭಾಗಿಯಾಗಬಲ್ಲನು.

ಕರ್ಮಯೋಗಿಯಾದ ಒಬ್ಬ ರಾಜನಿದ್ದನು. ಹಳೆಯ ಮಿತ್ರನೊಬ್ಬ ಆತನ ಬಳಿಗೆ ಬಂದು ಭೋಗವ್ಯವಹಾರಗಳ ಮಧ್ಯದಲ್ಲಿಯೇ ನೀನಿದ್ದರೂ ಎಲ್ಲರೂ ನಿನ್ನನ್ನು ಕರ್ಮಯೋಗಿ ಎಂದು ಕರೆಯುತ್ತಾರೆ. ಇದರ ರಹಸ್ಯವೇನು? ಎಂದು ಕೇಳುವನು. ಆ ರಾಜನು ''ಅದರ ರಹಸ್ಯವನ್ನು ಸಾವಕಾಶವಾಗಿ ಹೇಳುವೆನು. ಮೊದಲು ನನ್ನ ಅರಮನೆಯ ಸಂದಿಗೊಂದಿಗಳನ್ನು ಬಿಡದೆ ಎಲ್ಲವನ್ನು ನೋಡಿಕೊಂಡು ಬಾ. ದರ್ಶನೀಯ ಕಲಾಕೃತಿಗಳನ್ನು ಕಣ್ಣುತುಂಬಾ ನೋಡು. ಆದರೆ ಜೋಕೆ, ಅರಮನೆಯನ್ನು ನೋಡುವಾಗ ಕೈಯಲ್ಲಿ ಹಿಡಿದುಕೊಂಡಿರುವ ದೀಪವು ಆರದಂತೆ ಎಚ್ಚರಿಕೆ ಇರಲಿ'' ಎಂದು ಹೇಳಿದನು. ಅದರಂತೆ ಅರಮನೆಯನ್ನು ಸುತ್ತಾಡಿ ತಿರುಗಿ ಬಂದ ಮಿತ್ರನಲ್ಲಿ ''ಅರಮನೆಯನ್ನೆಲ್ಲಾ ನೋಡಿದೆಯಾ?'' ಎಂದು ವಿಚಾರಿಸಿದಾಗ ''ಎಲ್ಲಾ ಭಾಗವನ್ನು ನೋಡಿದರೂ ನೋಡಿದಂತೆ ಆಗಲಿಲ್ಲ. ಕೈಯಲ್ಲಿದ್ದ ದೀಪವು ಆರಲಾಗದೆಂದು ನೀನು ನಿರ್ಬಂಧಿಸಿರುವುದರಿಂದ ನನ್ನ ಗಮನವು ಯಾವಾಗಲೂ ಅದರ ಕಡೆಗೇ ಇತ್ತು. ನನ್ನ ದೃಷ್ಟಿಯು ದೀಪದ ಕಡೆಗೇ ಇದ್ದುದರಿಂದ ಅರಮನೆಯನ್ನು ನೋಡಿದರೂ ನೋಡಿದಂತಾಗಲಿಲ್ಲ'' ಎಂದು ಅವನು ನುಡಿದನು. ''ಇದೇ ನನ್ನ ಜೀವನದ ರಹಸ್ಯ'' ಎಂದು ರಾಜನು ಉತ್ತರಿಸಿದನು. ''ಭೋಗದ

ಹಾಗೂ ದೈನಂದಿನ ರಾಜಕೀಯ ವ್ಯವಹಾರದ ಮಧ್ಯದಲ್ಲಿ ನಾನಿದ್ದರೂ ನನ್ನ ಈ ಜೀವನಜ್ಯೋತಿಯು ನಂದದಂತೆ ನಾನು ಎಚ್ಚರಿಕೆ ವಹಿಸುತ್ತಿದ್ದೇನೆ. ನನ್ನ ಅಂತರಂಗದ ಜ್ಯೋತಿಯ ಕಡೆಗೆ ನನ್ನ ಲಕ್ಷ್ಯ ಸದಾ ಇರುತ್ತದೆ. ಆದ್ದರಿಂದ ನಾನು ಈ ಎಲ್ಲ ವ್ಯವಹಾರದಲ್ಲಿ ಭಾಗಿಯಾಗಿದ್ದರೂ ಇವುಗಳನ್ನು ಆಚರಿಸದವನಂತೆ ಇರುವೆನು. ಈ ನಿರ್ಲಿಪ್ತತೆಯೇ, ಅಂತರಂಗದಲ್ಲಿಯ ಈ ಜಾಗೃತ ಪ್ರಜ್ಞೆಯೇ ನನ್ನ ಜೀವನದ ಯಶಸ್ಸಿನ ಮೂಲವಾಗಿದೆ'' ಎಂದು ವಿವರಿಸುತ್ತಾನೆ. ಕರ್ಮಯೋಗಿಯ ಜೀವನದರ್ಶನವೆಲ್ಲ ಈ ಚಿಕ್ಕ ಹಾಗೂ ಮಾರ್ಮಿಕ ಕಥೆಯಲ್ಲಿ ಅಡಕವಾಗಿದೆ.

## ಜ್ಞಾನಿಯ ಸಮದೃಷ್ಟಿ

ಪ್ರತಿಯೊಬ್ಬರ ವ್ಯವಹಾರಗಳ ಹಿನ್ನೆಲೆಯಲ್ಲಿಯೂ ಪರಮಾತ್ಮನ ಶಕ್ತಿಯನ್ನು ಕಾಣುವ ಬ್ರಹ್ಮಜ್ಞಾನಿಗಳು ಪ್ರಪಂಚದ ದರ್ಶನ ವ್ಯವಹಾರಗಳಲ್ಲಿಯೂ ದಿವ್ಯ ಆನಂದವನ್ನೇ ಅನುಭವಿಸಬಲ್ಲರು. ಪ್ರತಿಯೊಂದು ವಸ್ತುವಿನಲ್ಲೂ ಪರಮಾತ್ಮನ ದಿವ್ಯ ರೂಪದ ದರ್ಶನವನ್ನು ಪಡೆಯುತ್ತಿರುವ ಅವರು ಈ ಪ್ರಾಪಂಚಿಕ ಸಂಪರ್ಕದಿಂದ ವಿಚಲಿತರೂ ವಿಕಾರವಶರೂ ಆಗಲಾರರು. ವಿದ್ಯಾವಿನಯಸಂಪನ್ನರಾದ ಸಜ್ಜನರಲ್ಲಿಯೂ ಹಿಂಸಾಜೀವಿಗಳೆನಿಸಿದ ಅನಾಗರೀಕ ಕ್ರೂರ ಮನುಷ್ಯರಲ್ಲಿಯೂ ಹುದುಗಿದ ಭಗವತ್ತತ್ತ್ವವನ್ನು ಅವರು ಕಾಣಬಲ್ಲರು. ಈ ಪ್ರಪಂಚದಲ್ಲಿ ಎಷ್ಟೇ ಭೇದ, ವೈಚಿತ್ರ್ಯಗಳಿದ್ದರೂ ಈ ಜಗತ್ತಿನಲ್ಲಿ ಅಂತರ್ಯಾಮಿ ಎನಿಸಿದ ಜಗತ್ಪ್ರಚೋದಕ ಶಕ್ತಿಯಾದ ಪರಮಾತ್ಮನು ಎಲ್ಲ ಕಡೆಗಳಲ್ಲಿಯೂ ಏಕರೂಪವಾಗಿ ನೆಲೆಸಿರುವನು. ಪ್ರಪಂಚದಲ್ಲಿ ವ್ಯವಹರಿಸುವಾಗ ಭಗವಂತನ ಈ ಸಮತೆಯ ದರ್ಶನದಿಂದ ಯಾವುದೇ ಕ್ಷೋಭವಾಗುವುದಿಲ್ಲ. ಎಲ್ಲಿ ನೋಡಿದರೂ ಭಗವಂತನ ಚಿದಾನಂದಮಯರೂಪ ಮತ್ತು ಅವನ ಅದ್ಭುತ ಶಕ್ತಿಕ್ರಿಯಾವಿಲಾಸವಿಭ್ರಮಗಳನ್ನು ಕಾಣುವ ಯೋಗಿಯು ಪ್ರಪಂಚದ ಪ್ರತಿಯೊಂದು ಪದಾರ್ಥದಲ್ಲಿಯೂ ಆನಂದವನ್ನೇ ಅನುಭವಿಸುವನು. ಶ್ರೀಮಧ್ವಾಚಾರ್ಯರು ಸಂನ್ಯಾಸಿಯಾಗಲು ಹೊರಟಾಗ ಎದುರಿಗೆ ಇದ್ದ ಹೊಲ ಮರಗಳ ಕಡೆಗೂ ನಮಸ್ಕರಿಸುತ್ತಿದ್ದುದನ್ನು ಕಂಡು ಅಚ್ಚರಿಗೊಂಡ ಅವರ ಬಂಧುಗಳು ಇದೇನು ನಿನ್ನ ಈ ವಿಚಿತ್ರ ವ್ಯವಹಾರವೆಂದು ಕೇಳಲು, ನನ್ನ ಪ್ರೀತಿಯ ವಸ್ತುವು ಎಲ್ಲ ಕಡೆಗಳಲ್ಲಿಯೂ ಗೋಚರವಾಗುತ್ತಿರುವಾಗ ಅದಕ್ಕೆ ತಲೆಬಾಗದೆ ಹೇಗೆ ಇರಲಿ ಎಂದರಂತೆ. ಹೀಗೆ ಜ್ಞಾನಿಗಳಿಗೆ ಎಲ್ಲಿ ನೋಡಿದರೂ ಮಂಗಲಮಯ ದರ್ಶನ ಹಾಗೂ ನಿತ್ಯಾನಂದದ ಅನುಭವವೇ ದೊರೆಯುತ್ತಿರುವುದರಿಂದ ವೈಷಮ್ಯಪೂರಿತವಾದ ರುದ್ರ ಬೀಭತ್ಸವೆನಿಸಿದ ಈ ಜಗತ್ತಿಗೆ ಅವರು ಹೆದರುವುದಿಲ್ಲ.

ಜಗತ್ತಿನ ಎಲ್ಲ ಪದಾರ್ಥಗಳಲ್ಲಿಯೂ ಏಕರೂಪವಾಗಿ ಭಗವಚ್ಛಕ್ತಿ ಪ್ರವಹಿಸಿಕೊಂಡಿದೆ. ವಿದ್ಯುಚ್ಛಕ್ತಿಯು ಎಲ್ಲ ಕಡೆಗಳಲ್ಲಿಯೂ ಒಂದೇ ರೀತಿಯಿಂದ ಹರಿಯುತ್ತಿದ್ದರೂ ಬಲ್ಬಗಳಿಗೆ ಅನುಗುಣವಾಗಿ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಅದು ಅಭಿವ್ಯಕ್ತವಾಗುವಂತೆ ಭಗವಂತನು ಎಲ್ಲರಲ್ಲಿಯೂ ಏಕಪ್ರಕಾರವಾಗಿ ಅನುಸ್ಯೂತನಾಗಿದ್ದರೂ ಅಧಿಷ್ಠಾನವಾದ ಪದಾರ್ಥ ಹಾಗೂ

ವ್ಯಕ್ತಿಯ ಸ್ವರೂಪ ಯೋಗ್ಯತೆಗಳಿಗನುಸಾರವಾಗಿ ಪ್ರಕಟನಾಗುತ್ತಿರುವನು. ದುಷ್ಟರಲ್ಲಿ ಭಗವಂತನ ಸನ್ನಿಧಾನವಿದ್ದರೂ ಅವರ ದೌಷ್ಟ್ಯದರ್ಪಗಳಲ್ಲಿ ಅಡಗಿದ ಭಗವತ್ತತ್ತ್ವವನ್ನು ಕಾಣುವುದು ಸಾಮಾನ್ಯ ಜನರಿಗೆ ಸಾಧ್ಯವಾಗದ ಕಾರ್ಯವಾಗಿದ್ದರೆ ದುಷ್ಟ-ಶಿಷ್ಟರಿಬ್ಬರಲ್ಲಿಯೂ ಭಗವಂತನ ಹಾಗೂ ಅವನ ಏಕತ್ವದ ದರ್ಶನವನ್ನು ಪಡೆಯುವ ಭಾಗ್ಯ ಜ್ಞಾನಿಗಳದ್ದಾಗಿದೆ. ಪರಮಾತ್ಮನು ಎಲ್ಲರಲ್ಲಿಯೂ ಒಂದೇ ರೀತಿಯಿಂದ ವ್ಯಾಪ್ತನಾಗಿದ್ದರೂ ಆಯಾಯ ವ್ಯಕ್ತಿಗಳ ಸ್ವಭಾವ ಮತ್ತು ಮೂಲಭೂತ ಅಭಿರುಚಿಗಳನ್ನನುಸರಿಸಿ ಜಗತ್ತಿನಲ್ಲಿ ದುಷ್ಟಶಿಷ್ಟರ ವಿಭಾಗ ವ್ಯವಸ್ಥೆಯಾಗಿದೆ. ಪರಮಾತ್ಮನು ಎಲ್ಲ ಕಡೆ ಇದ್ದಾನೆ ಎಂಬುದರಿಂದ ಸಜ್ಜನರು ದುರ್ಜನರು ಎಲ್ಲರೂ ಸಮಾನರು ಎಂಬುದಾಗಿ ಸಮತೆಯ ಅರ್ಥವಿಪರ್ಯಾಸವನ್ನು ನಾವು ಮಾಡಬಾರದು. ಇದೇ ಸಮದೃಷ್ಟಿ.

**ಪಂಡಿತಾಃ ಸಮದರ್ಶಿನಃ ॥**

***

## ಕರ್ಮಯೋಗಿಗೆ ಲೋಕಸೇವೆ ಅನಿವಾರ್ಯ

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥** (6.1)

ಧ್ಯಾನಯೋಗದ ಮೊದಲು ನಾವು ಮಾಡುವ ಕರ್ಮಗಳೆಂದರೆ ಜಪ, ಪೂಜೆ ಹಾಗೂ ಇತರ ವರ್ಣಾಶ್ರಮೋಚಿತ ಕರ್ತವ್ಯಗಳೆಂದು ಮಾತ್ರ ನಾವು ಭಾವಿಸಿದ್ದೇವೆ. ಪಾಠ-ಪ್ರವಚನ ಮುಂತಾದ ಆಯಾಯ ವರ್ಣಗಳು ಮಾಡುವ ವಿಶೇಷ ಧರ್ಮಗಳು ಮಾತ್ರವಲ್ಲದೆ ಎಲ್ಲ ವರ್ಣದವರೂ ಮಾಡಬೇಕಾದ, ಸರ್ವಸಾಧಾರಣವೆನಿಸುವ ಒಂದು ಶ್ರೇಷ್ಠ ಕರ್ತವ್ಯವೂ ಇದೆ. ಅದೇ ನಾನಾಜನಶುಶ್ರೂಷೆ. ಈ ಜಗತ್ತಿನಲ್ಲಿರುವ ಅನೇಕ ಬಗೆಯ ಜನತೆಯ ಸೇವೆಯೂ ಸಾಧಕನು ಅನುಷ್ಠಿಸಬೇಕಾದ ಮುಖ್ಯ ಕರ್ತವ್ಯಗಳಲ್ಲಿ ಒಂದೆನಿಸಿದೆ. ಎಲ್ಲಿ ದುಃಖ, ರೋಗ, ಹಸಿವುಗಳಿವೆಯೋ ಅಂತಹ ಆರ್ತಜನರಿಗಾಗಿ ನಮ್ಮ ಹೃದಯ ಮಿಡುಕಬೇಕು. ಎಲ್ಲ ಜನರಲ್ಲಿರುವ ಹರಿಯನ್ನು ಸ್ಮರಿಸಿ ಸ್ವಾರ್ಥಭಾವನೆಯನ್ನು ತ್ಯಜಿಸಿ ಜನಸೇವೆಯನ್ನು ಕೈಗೊಳ್ಳುವುದರಿಂದ ಭಗವಂತನು ಪ್ರೀತನಾಗುವನು.

**ತಸ್ಯ ಪ್ರಾಣ್ಯುಪಕಾರೇಣ ಪ್ರೀತೋ ಭವತಿ ಕೇಶವಃ ।** -ಗೀತಾತಾತ್ಪರ್ಯ

ಸಾಕ್ಷಾತ್ಕಾರವನ್ನು ಪಡೆಯುವವರೆಗೆ ತನ್ನ ಜಪ ಪೂಜಾದಿಗಳ ಜೊತೆಗೆ ಸಾಧಕನು ಈ ಜನಶುಶ್ರೂಷೆಯ ಕಾರ್ಯವನ್ನೂ ಕೈಗೊಳ್ಳಬೇಕು. ಇದು ಐಚ್ಛಿಕವಲ್ಲ. ಕಡ್ಡಾಯವಾಗಿ ಈ ಸೇವೆಯನ್ನು ನಾವು ಆಚರಿಸಬೇಕು. ಸರಕಾರಕ್ಕೆ ಕರ, ಕಂದಾಯಗಳನ್ನು ಕೊಡುವುದು ಹೇಗೆ ಅನಿವಾರ್ಯವೋ ಅದರಂತೆ ನಾನಾ ಜನಸೇವೆಯು ಭಗವಂತನು ನಮಗೆ ವಿಧಿಸಿದ ಕಡ್ಡಾಯದ ಕರ್ತವ್ಯವಾಗಿದೆ. ಇದು ಜಗತ್ತಿನ ಅಧಿದೇವತೆಗೆ ನಾವು ಸಲ್ಲಿಸಬಹುದಾದ ಕಂದಾಯವೆನಿಸಿದೆ.

ಕರಕಂದಾಯಗಳನ್ನು ಕೊಡಲು ತಪ್ಪಿದಲ್ಲಿ ಅವನು ರಾಷ್ಟ್ರದ ಯೋಗ್ಯ ನಾಗರಿಕನಾಗಬಲ್ಲನೇ? ಅದರಂತೆ ವಿಶ್ವರಾಜ್ಯದ ಏಕಮೇವ ಸಾರ್ವಭೌಮನೆನಿಸಿದ ಭಗವಂತನಿಗಾಗಿ ದೀನದಲಿತರ ಸೇವೆಯನ್ನು ನಡೆಸದಿದ್ದರೆ ನಾವು ಹೇಗೆ ವಿಶ್ವದ ಯೋಗ್ಯ ಪ್ರಜೆಗಳೆನಿಸಬಲ್ಲೆವು?

**ನಾನಾಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇಃ ।** (ಗೀತಾತಾತ್ಪರ್ಯ 6.3)

ಲೋಕಸೇವೆಯ ಅನಿವಾರ್ಯತೆಯನ್ನೂ ಅದರ ಹಿಂದಿರುವ ಪವಿತ್ರವಾದ ಭಾವವನ್ನೂ ಇದು ವಿವರಿಸುತ್ತದೆ. ಶ್ರೀಮಧ್ವಾಚಾರ್ಯರು ಜನಸೇವೆಯು ಸಾಧಕನಿಗೆ ಆವಶ್ಯಕವೆಂದು ಪ್ರತಿಪಾದಿಸಲು ಗೀತಾತಾತ್ಪರ್ಯದಲ್ಲಿ ಉದಾಹರಿಸಿದ ಶ್ಲೋಕವಿದು. ಇದು ನಮಗೆ ಪ್ರಿಯವಾದ ಧ್ಯೇಯವಾಕ್ಯವೆನಿಸಿದೆ. ಕರ್ಮಾಚರಣೆಯು ಅವಶ್ಯವೆಂದು ಭಾವಿಸಿ ತಮ್ಮ ವೈಯಕ್ತಿಕ ಧರ್ಮಕರ್ಮಗಳನ್ನು ಮಾತ್ರ ಆಚರಿಸಿ ಸಮಾಜದ ಬಗ್ಗೆ ಉದಾಸೀನವಾಗಿರುವ ಪ್ರವೃತ್ತಿಯನ್ನೇ ನಾವು ಹೆಚ್ಚಾಗಿ ಕಾಣುತ್ತೇವೆ. ಸಮಾಜದ ಸೇವೆಯೆಂದರೆ ಅದೊಂದು ಲೌಕಿಕ ಕಾರ್ಯವೆಂದೂ ಅದನ್ನು ತೊರೆದು ದಿನವಿಡೀ ಜಪತಪ ಮೊದಲಾದ ವೈಯಕ್ತಿಕವಾದ ಆಧ್ಯಾತ್ಮಿಕ ಕಾರ್ಯಗಳಲ್ಲಿ ತೊಡಗುವವನೇ ಕಟ್ಟಾ ಧಾರ್ಮಿಕನೆಂದೂ ಒಂದು ಭಾವನೆಯು ಪ್ರಚಲಿತವಿದೆ. ಗೀತೆಯಲ್ಲಿ ಹೇಳಿದ ಕರ್ಮದ ಸಂದೇಶವನ್ನು ವರ್ಣಾಶ್ರಮ ಪದ್ಧತಿಯಿಂದ ಬಂದ ನಮ್ಮ ನಮ್ಮ ವೃತ್ತಿ ಹಾಗೂ ಜಪಪೂಜಾದಿಗಳಲ್ಲೇ ನಾವು ಪರಿಮಿತಗೊಳಿಸಿದ್ದೇವೆ. ನಮ್ಮ ಆಧ್ಯಾತ್ಮಿಕ ಸಾಧನೆಯಲ್ಲಿ ಆರ್ತಜನತೆಯ ಸೇವೆಯೂ ಒಂದು ಪ್ರಧಾನವಾದ ಅಂಶವಾಗಿದೆಯೆಂದೂ ಸಾಧಕನು ತನ್ನ ನಿತ್ಯಾನುಷ್ಠಾನಗಳ ಜೊತೆಗೆ ಈ ಸೇವಾಕಾರ್ಯವನ್ನೂ ಆಚರಿಸಲೇಬೇಕೆನ್ನುವುದು ಗೀತೆಯ ಆದೇಶವೆಂದೂ ಶ್ರೀಮಧ್ವಾಚಾರ್ಯರು ಪ್ರತಿಪಾದಿಸಿದ್ದಾರೆ. ವೇದಾಂತವು ಸಮಾಜವಿಮುಖವಾದ ದೃಷ್ಟಿಯನ್ನು ನಮಗೆ ನೀಡದೆ ವೈಯಕ್ತಿಕ ಹಾಗೂ ಸಮಾಜದ ಉನ್ನತಿಗೆ ಪೋಷಕವಾದ ವಿಧಾಯಕವಾದ ಮಾರ್ಗವನ್ನು ಹೇಗೆ ತೋರಿಸುತ್ತದೆ ಎಂಬುದನ್ನು ಇದರಿಂದ ನಾವು ಮನಗಾಣಬಹುದು.

ಲೋಕದಲ್ಲಿ ಎರಡು ಬಗೆಯ ಜನರಿರುವರು. ಜಪಾನುಷ್ಠಾನ ನಿರತರಾಗಿ ಸಾಮಾಜಿಕ ಕಾರ್ಯವನ್ನು ತೊರೆಯುವವರು ಕೆಲವರು. ಸಮಾಜಸೇವೆಯಲ್ಲಿಯೇ ನಿರತರಾಗಿ ದೇವರನ್ನೇ ಮರೆಯುವವರು ಕೆಲವರು. ಈ ಎರಡು ಬಗೆಯ ಜನರ ಜೀವನವೂ ಅಪೂರ್ಣವೆನಿಸುತ್ತದೆ. ಸಮಾಜಸೇವೆಯಿಲ್ಲದ ನಿತ್ಯಕರ್ಮಗಳು ಪೂರ್ಣ ಧರ್ಮವೆನಿಸಲಾರವು. ಪರಮಾತ್ಮನ ಭಕ್ತಿಪೂಜೆಗಳಿಲ್ಲದ ಸಮಾಜಸೇವೆಯೂ ಪರಿಪೂರ್ಣ ಸೇವೆ ಎನಿಸಲಾರದು. ಧರ್ಮದ ಒಂದು ಮುಖವನ್ನು ಮಾತ್ರ ಪರಿಗ್ರಹಿಸಿ ಇನ್ನೊಂದು ಭಾಗವನ್ನು ಅಲಕ್ಷಿಸಿದರೆ ನಮ್ಮ ಧರ್ಮವು ಪರಿಪೂರ್ಣವೆನಿಸಲಾರದು. ಆನೆಯ ಒಂದೊಂದು ಭಾಗವನ್ನು ಮಾತ್ರ ಮುಟ್ಟಿ ಕುರುಡರು ತಾವು ಆನೆಯನ್ನು ಅರಿತೆವೆಂದು ಭಾವಿಸಿಕೊಂಡಂತೆ ನಮ್ಮ ಪರಿಸ್ಥಿತಿಯಾಗುವುದು. ಆನೆಯ ಬಾಲವನ್ನು

ಮಾತ್ರ ಮುಟ್ಟಿ ಆನೆಯು ಹಗ್ಗದಂತಿದೆ ಎಂದು ಆ ಕುರುಡರು ಹೇಳಿದರಂತೆ. ಅದರಂತೆ ಧರ್ಮದ ಒಂದು ಭಾಗವೆನಿಸುವ ನಿತ್ಯಕರ್ಮಾನುಷ್ಠಾನವನ್ನು ಮಾತ್ರ ಆಚರಿಸಿ ಇನ್ನೊಂದು ಭಾಗವೆನಿಸುವ ಲೋಕಸೇವೆಯನ್ನು ಪರಿತ್ಯಜಿಸಿದರೆ ನಮ್ಮ ಧರ್ಮವು ಅಪೂರ್ಣವಾಗುವುದು. ಆದುದರಿಂದ ಧಾರ್ಮಿಕರೆನಿಸುವವರು ಸಮಾಜಸೇವೆಯ ಮಹತ್ತ್ವವನ್ನೂ, ಸಾಮಾಜಿಕ ಕಾರ್ಯಕರ್ತರು ನಿಃಸ್ವಾರ್ಥಸೇವಾಭಾವದ ಸ್ಫೂರ್ತಿಗೆ ಆಧಾರವೆನಿಸಿದ ಭಗವದ್ಭಕ್ತಿಯನ್ನೂ ಅರಿತುಕೊಂಡು ಅವೆರಡನ್ನೂ ತಮ್ಮ ಜೀವನದಲ್ಲಿ ಸಮ್ಮಿಲಿತಗೊಳಿಸಬೇಕು.

ಕಾಶೀಯಾತ್ರೆಯನ್ನು ಮುಗಿಸಿ ಗಂಗಾತೀರ್ಥವನ್ನು ಪಾತ್ರೆಗಳಲ್ಲಿ ತುಂಬಿಕೊಂಡು ಕೆಲವರು ಸಾಧುಗಳು ಹಿಂತಿರುಗುತ್ತಿದ್ದರು. ಆ ತೀರ್ಥವನ್ನು ರಾಮೇಶ್ವರದಲ್ಲಿ ಅಭಿಷೇಕ ಮಾಡಬೇಕೆಂದು ಅವರ ಸಂಕಲ್ಪವಾಗಿತ್ತು. ಹಿಂತಿರುಗುವ ದಾರಿಯಲ್ಲಿ ರಾಜಸ್ಥಾನದ ಮರುಭೂಮಿಯಲ್ಲಿ ಒಂಟೆಯೊಂದು ನೀರಿಲ್ಲದೆ ಪ್ರಾಣಸಂಕಟದಿಂದ ನರಳುತ್ತಿತ್ತು. ಅದನ್ನು ಕಂಡು ಸಾಧುಗಳಿಗೆ ಮರುಕವೇನೋ ಆಯಿತು. ಆದರೆ ಅದರ ಸಂಕಟವನ್ನು ನಿವಾರಿಸಲು ನೀರಿನ ಅನುಕೂಲವಿಲ್ಲದೆ ಅವರೆಲ್ಲ ನಿರುಪಾಯರಾಗಿದ್ದರು. ಅವರಲ್ಲಿ ಒಬ್ಬನು ತನ್ನ ಕೈಯಲ್ಲಿದ್ದ ಗಂಗಾಪಾತ್ರೆಯನ್ನೇ ಒಡೆದು ಆ ನೀರನ್ನೇ ಒಂಟೆಯ ಬಾಯಿಗೆ ಸುರುವಿದನು. ರಾಮೇಶ್ವರನ ಅಭಿಷೇಕಕ್ಕಾಗಿ ಸಂಗ್ರಹಿಸಿದ್ದ ಗಂಗಾತೀರ್ಥವನ್ನು ಒಂಟೆಯ ಬಾಯಿಗೆ ಹಾಕಿದ ಬಗ್ಗೆ ಉಳಿದವರು ಆಕ್ಷೇಪಿಸಿದಾಗ ತನಗೆ ಈ ಒಂಟೆಯಲ್ಲೇ ರಾಮೇಶ್ವರನ ದರ್ಶನವಾಯಿತೆಂದೂ ಕಷ್ಟದಲ್ಲಿ ಸಿಲುಕಿದ ಪ್ರಾಣಿಗಳಿಗೆ ಮಾಡುವ ಉಪಕಾರವೂ ಈಶ್ವರನ ಪೂಜೆಯೇ ಆಗಿರುವುದೆಂದೂ ಆ ಸಾಧುವು ಅವರಿಗೆ ಬೋಧಿಸಿದನು. ಪರಮಾತ್ಮನು ನಮ್ಮಿಂದ ಬಹುದೂರದಲ್ಲಿ ಇಲ್ಲ. ನಮ್ಮ ಸೇವೆಯನ್ನು ಸ್ವೀಕರಿಸಲು ಸಿದ್ಧನಾಗಿ ನಮ್ಮ ಮುಂದೆಯೇ ಎಲ್ಲ ಪ್ರಾಣಿಗಳಲ್ಲಿ ನೆಲೆಸಿದ್ದಾನೆ. ಜನತೆಯಲ್ಲಿರುವ ಪರಮಾತ್ಮನನ್ನು ಗುರುತಿಸಿ ಕೊಂಡು ಲೋಕಾರಾಧನೆಯನ್ನು ಮಾಡುವುದೇ ವಿಶೇಷವಾದ ಪರಮಾತ್ಮನ ಪೂಜೆಯೆಂದು ಪ್ರಹ್ಲಾದನು ಉಪದೇಶಿಸಿರುವುದನ್ನು ಭಾಗವತದಲ್ಲಿ ವರ್ಣಿಸಲಾಗಿದೆ.

ಆದರೆ ಲೋಕಸೇವೆಯನ್ನು ಮಾಡುವಾಗಲೂ ಅಲ್ಲಿ ಪರಮಾತ್ಮನ ವಿಸ್ಮರಣೆಯು ಸಲ್ಲದು. ಯಾವುದೇ ಕಾರ್ಯಕ್ಕೆ ಹಿನ್ನೆಲೆಯಾಗಿ ಒಂದು ಉದ್ದೇಶವು ಇರಲೇಬೇಕಾಗುವುದು. ಭಗವಂತನನ್ನು ಮರೆತು ಅವನ ಪ್ರೀತಿಯ ಉದ್ದೇಶವಿಲ್ಲದೆ ಪ್ರವರ್ತಿಸಿದಾಗ ಸಹಜವಾಗಿ ಇತರ ಲೌಕಿಕ ಕಾಮನೆಗಳ ಉದಯವಾಗುವುದು ಅನಿವಾರ್ಯ. ಲೋಕಸೇವೆಯನ್ನು ಮಾಡುವಾಗಲೂ ಲೋಕದ ಅಂತರಂಗದಲ್ಲಿ ನೆಲೆಸಿದ ಭಗವಂತನ ಸೇವಾಭಾವನೆ ಇಲ್ಲದಿದ್ದರೆ ಅಲ್ಲಿಯೂ ಸ್ವಾರ್ಥ ಪ್ರವೃತ್ತಿಯ ಪ್ರವೇಶವಾಗಿ ಕೀರ್ತಿ, ಪ್ರತಿಷ್ಠೆ, ಅಧಿಕಾರ ಮೊದಲಾದವುಗಳ ಆಕಾಂಕ್ಷೆಯಿಂದ ಆ ಸೇವೆಯಲ್ಲಿ ಕೃತ್ರಿಮತೆಯು ನೆಲೆಸುವುದು. ಭಗವತ್ಪ್ರೀತ್ಯರ್ಥವಲ್ಲದ ಸ್ವಾರ್ಥಪೂರ್ಣ ಕಾರ್ಯಗಳೆಲ್ಲ ಎಷ್ಟೇ ಪರೋಪಕಾರಿಗಳಾಗಿದ್ದರೂ ಇವೆಲ್ಲ ಇಷ್ಟಾಪೂರ್ತಗಳಾಗಿದ್ದು ತಾತ್ಕಾಲಿಕ ಫಲಕಾರಿ

ಗಳಾಗಿವೆ. ಆದುದರಿಂದ ಲೋಕಸೇವೆಯನ್ನು ಮಾಡುವಾಗಲೂ ಭಗವತ್ಸೇವಾದೃಷ್ಟಿ ಜಾಗ್ರತವಾಗಿರಬೇಕು.

***

## ಭಕ್ತಿಯೂ ಮಾಹಾತ್ಮ್ಯಜ್ಞಾನವೂ

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥** (7.1)

ಧ್ಯಾನಕ್ಕೆ ಭಕ್ತಿಯ ಹಿನ್ನೆಲೆಯು ಆವಶ್ಯಕವೆಂದು ಹಿಂದೆ ನಿರೂಪಿಸಿದೆಯಷ್ಟೆ. ಈ ಭಕ್ತಿಯ ಸ್ವರೂಪವರ್ಣನೆಯನ್ನು ಏಳನೇ ಅಧ್ಯಾಯದಲ್ಲಿ ಮಾಡಲಾಗುವುದು. ಭಕ್ತಿಯಲ್ಲಿ ಎರಡು ಅಂಶಗಳು ಅಡಕವಾಗಿವೆ. ಒಂದು ಜ್ಞಾನ ಹಾಗೂ ಇನ್ನೊಂದು ಪ್ರೇಮ. ಜ್ಞಾನಪ್ರೇಮಗಳ ಸಮನ್ವಯವೇ ಭಕ್ತಿ ಎನಿಸುವುದು. ಪರಮಾತ್ಮನ ಮಾಹಾತ್ಮ್ಯಜ್ಞಾನವನ್ನು ಪಡೆದು ಅವನ ಕಡೆಗೆ ಹರಿಸುವ ನಿರಂತರ ಪ್ರೇಮಧಾರೆಯೇ ಭಕ್ತಿಯಾಗಿದೆ. ಒಬ್ಬನ ಗುಣಮಹಿಮೆಗಳ ಪರಿಚಯವಿಲ್ಲದೆ ಅವನಲ್ಲಿ ಮಾಡುವ ಪ್ರೀತಿಯು ಆಸಕ್ತಿ ಎನಿಸುವುದು. ಮಕ್ಕಳು ಹಾಗೂ ಪರಿವಾರವನ್ನು ಪ್ರೀತಿಸುವಾಗ ಈ ಆಸಕ್ತಿಯು ತುಂಬಿರುತ್ತದೆ. ಅವರ ಗುಣನಡತೆಗಳ ಕಡೆಗೆ ಗಮನ ನೀಡದೆ 'ನಮ್ಮವರು' ಎಂಬ ಇಷ್ಟೇ ಭಾವದಿಂದ ಪ್ರೀತಿಸುತ್ತೇನೆ. ಅದರಂತೆ ಭಗವಂತನ ಮಹಿಮೆಯನ್ನು ತಿಳಿಯದೆ ಅವನಲ್ಲಿ ಮಾಡುವ ಪ್ರೇಮವು ಕುರುಡು ಭಕ್ತಿಯಾಗುವುದು. ಅವನ ಮಹಿಮೆಯನ್ನು ತಿಳಿದಷ್ಟೂ ವಿಶುದ್ಧ ಭಕ್ತಿಯು ಮನಸ್ಸಿನಲ್ಲಿ ಒಡಮೂಡುವುದು. ಆದುದರಿಂದಲೇ ಸಕಲ ವೇದಗಳೂ ಭಗವಂತನ ಮಹಿಮೆಯನ್ನು ಗಾನ ಮಾಡಲು ಹೊರಟಿವೆ. ಗೀತೆಯಲ್ಲಿಯೂ ಈ ಭಕ್ತಿ ಭಾವವನ್ನು ಬಲಗೊಳಿಸುವುದಕ್ಕಾಗಿಯೇ ಪರಮಾತ್ಮನ ಮಾಹಾತ್ಮ್ಯದ ವರ್ಣನೆಯನ್ನು ಮಾಡಲಾಗಿದೆ.

ಈ ವಿಶ್ವವನ್ನು ನಿರೀಕ್ಷಿಸಿದಂತೆ ವಿಶ್ವಕರ್ತನ ವಿಚಿತ್ರ ಅದ್ಭುತ ಶಕ್ತಿಯ ಪರಿಚಯವು ನಮಗಾಗುತ್ತದೆ. ಪರಮಾತ್ಮನನ್ನು ಮತ್ತು ಅವನ ಅಪಾರಶಕ್ತಿಯನ್ನು ಸಿದ್ಧಪಡಿಸಲು ಬೇರಾವ ದಾಖಲೆ ಆಧಾರಗಳೂ ಬೇಡ. ಈ ವಿಶ್ವವೇ ಪರಮಾತ್ಮನ ಅಸ್ತಿತ್ವವನ್ನು ಸಾರಿ ಹೇಳುತ್ತದೆ. ಈ ವಿಶ್ವವು ಅವ್ಯವಸ್ಥಿತವಾಗಿ ರೂಪುಗೊಂಡಿರುವುದಿಲ್ಲ. ಇದು ಕ್ರಮಬದ್ಧವಾಗಿ, ಸಂಯೋಜಿತ ರೀತಿಯಿಂದ ನಿರ್ಮಿತವಾಗಿದೆ. ಪ್ರತಿಯೊಂದು ವಸ್ತುವಿನ ಸೃಷ್ಟಿ ಹಾಗೂ ಬೆಳವಣಿಗೆಗಳಲ್ಲಿ ನೂರಾರು ನಿಯಮಗಳು ಸಂಯೋಜನವನ್ನು ನಾವು ಕಾಣಬಹುದು. ನಮ್ಮ ಇಂದ್ರಿಯಗಳ ರಚನೆ, ಶರೀರದ ರೀತಿ, ನಮ್ಮ ಆಹಾರವು ಜೀರ್ಣವಾಗಲು ಇರುವ ಸಂವಿಧಾನ, ಗ್ರಹ ನಕ್ಷತ್ರಗಳ ಸಂಬಂಧ ಸುವ್ಯವಸ್ಥೆಗಳು, ಶ್ವಾಸೋಚ್ಛ್ವಾಸದ ಪ್ರಕ್ರಿಯೆಗಳು – ಹೀಗೆ ನೂರಾರು ಪ್ರಾಕೃತಿಕ ವ್ಯಾಪಾರ ವ್ಯವಸ್ಥೆಗಳನ್ನು ನೋಡುವಾಗ ಒಂದು ಉದ್ದೇಶಪೂರ್ವಕವಾಗಿ ಸುಯೋಜಿತವಾದ ಏರ್ಪಾಡನ್ನು ಈ ಪ್ರಪಂಚದಲ್ಲಿ ಮಾಡಲಾಗಿದೆ ಎಂದು ಕಂಡುಬರುತ್ತದೆ. ಒಂದೆರಡು

ಘಟನೆಗಳಾಗಿದ್ದರೆ ಅದು ಆಕಸ್ಮಿಕವೆಂದು ನಾವು ತಳ್ಳಿಹಾಕಬಹುದಿತ್ತು. ಲಕ್ಷಗಟ್ಟಲೆ ನಿಯಮಗಳು, ಕೋಟ್ಯಂತರ ಪದಾರ್ಥಗಳು ಜಗತ್ತಿನ ಸೃಷ್ಟಿ ಬೆಳವಣಿಗೆಗಳಿಗೆ ಅನುಕೂಲವಾಗುವಂತೆ ಸಂಯೋಜಿತವಾಗಿರುವುದನ್ನು ಕಂಡಾಗ ಇವೆಲ್ಲ ಆಕಸ್ಮಿಕವೆಂದು ನಾವು ಹೇಗೆ ಹೇಳಬಲ್ಲೆವು? ಉದ್ದೇಶವಿಲ್ಲದೆ ಸುಮ್ಮನೆ ಸಂಸ್ಕೃತವರ್ಣಗಳನ್ನು ವರ್ಷಗಟ್ಟಲೆ ಜೋಡಿಸುತ್ತಿದ್ದರೂ ಶಾಕುಂತಲ ನಾಟಕದ ಒಂದು ಪದ್ಯದ ರಚನೆಯೂ ಆಕಸ್ಮಿಕವಾಗಿ ಆಗಲಾರದು. ಹೀಗಿರುವಾಗ ಇಂತಹ ಸುವ್ಯವಸ್ಥಿತ ವಿಶಾಲ ವಿಶ್ವದ ರಚನೆಯ ಹಿಂದೆ ಯಾವ ಚೇತನ ಶಕ್ತಿಯ ಕೈವಾಡವೂ ಇಲ್ಲದೆ, ಕೇವಲ ಪ್ರಕೃತಿ ನಿರ್ಮಾಣವೆಂದು ನಾವು ಸಿದ್ಧಪಡಿಸಲಾರೆವು. ನಿಯಮಬದ್ಧವಾದ ಈ ಜಗತ್ತು ಒಬ್ಬ ಮಹಾ ಬುದ್ಧಿವಂತನಿಂದ ರಚಿತವಾದಂತೆ ಅತ್ಯಂತ ಸುಯೋಜಿತವಾಗಿದೆ ಎಂದು ಐನ್‌ಸ್ಟೈನ್ ಹೇಳಿದ್ದಾನೆ. ಈ ಜಗತ್ತನ್ನೂ ಅದರ ಪ್ರಾಕೃತಿಕ ವೈಚಿತ್ರ್ಯಗಳನ್ನೂ ಕಂಡಷ್ಟು ವಿಶ್ವಕರ್ತನ ಅಸ್ತಿತ್ವದಲ್ಲಿ ವಿಶ್ವಾಸವು ದೃಢವಾಗುತ್ತದೆ.

ಕಣ್ಣಿಗೆ ಕಾಣದ ಭಗವಂತನನ್ನು ನಾನು ಹೇಗೆ ನಂಬಲಿ? ಎಂದು ಶ್ವೇತಕೇತು ಪ್ರಶ್ನಿಸಿದಾಗ ತಂಬಿಗೆ ತುಂಬ ನೀರಲ್ಲಿ ಉಪ್ಪು ಸೇರಿಸಿ ಈ ನೀರನ್ನು ಸ್ವಲ್ಪ ಕುಡಿಯುವಂತೆ ತಂದೆ ಉದ್ದಾಲಕನು ಶ್ವೇತಕೇತುವಿಗೆ ಹೇಳುವನು. ಆ ನೀರಿನ ಯಾವ ಭಾಗವನ್ನು ಕುಡಿದರೂ ಅದು ಉಪ್ಪಾಗಿತ್ತು. ಆ ನೀರಿನಲ್ಲಿರುವ ಉಪ್ಪನ್ನು ತೆಗೆದು ತೋರಿಸುವಿಯಾ? ಎಂದು ಉದ್ದಾಲಕನು ಪ್ರಶ್ನಿಸುವನು. ಪರಮಾತ್ಮನ ಅಸ್ತಿತ್ವವೂ ಇದೇ ರೀತಿಯಾಗಿದೆ. ನೀರಿನಲ್ಲಿರುವ ಉಪ್ಪು ಪ್ರತ್ಯೇಕವಾಗಿ ಕಾಣಿಸದಿದ್ದರೂ ನೀರಿನ ಕಣಕಣಗಳಲ್ಲಿಯೂ ಅದರ ವ್ಯಾಪ್ತಿಯನ್ನು ನಾವು ಅನುಭವಿಸುತ್ತಿರುವಂತೆ ವಿಶ್ವದ ಪ್ರತಿ ಪದಾರ್ಥವೂ ಪರಮಾತ್ಮನ ಅಸ್ತಿತ್ವವನ್ನು ನಮಗೆ ಸಾರಿ ಹೇಳುತ್ತದೆ. ಪರಮಾತ್ಮನು ಇಂದ್ರಿಯಗಳಿಗೆ ಅಗೋಚರನಾದರೂ ಅವನ ಶಕ್ತಿ ನಿಯಮಗಳನ್ನು ಪ್ರಪಂಚದ ಪ್ರತಿಯೊಂದು ವಸ್ತುವಿನಲ್ಲೂ ನಾವು ಕಾಣಬಲ್ಲೆವು.

**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ।** (7.7)

ಈ ವಿಶ್ವವು ನೆಲದಲ್ಲಿ ವಿಕ್ಷಿಪ್ತವಾಗಿ ಚದುರಿದ ಮಣಿಗಳಂತಿರದೆ ಒಂದು ಸೂತ್ರದಲ್ಲಿ ಪೋಣಿಸಲ್ಪಟ್ಟ ಮಣಿಮಾಲೆಯಂತಿದೆ. ಈ ಪ್ರಪಂಚವನ್ನು ಜೋಡಿಸಿರುವ ಅನುಸ್ಯೂತವಾದ ಸೂತ್ರವೇ ಭಗವಂತ. ಅವನನ್ನು ಆಧರಿಸಿ ಅವನ ಬಲದಿಂದ ಜಗತ್ತಿನ ಸಕಲ ಪ್ರವೃತ್ತಿ ವ್ಯವಹಾರಗಳೂ ನಡೆದಿವೆ. ಜಡಪ್ರಕೃತಿ ಮತ್ತು ಪೃಥಿವಿ ಜಲ ತೇಜಸ್ಸು ವಾಯು ಆಕಾಶ ಮುಂತಾದ ಪ್ರಕೃತಿಯ ಕಾರ್ಯಗಳು ಮತ್ತು ಈ ಜಡ ತತ್ತ್ವಗಳಿಗೆ ಆಧಾರಶಕ್ತಿಯೆನಿಸಿದ ಚಿತ್‌ಪ್ರಕೃತಿ ಇವೆಲ್ಲವುಗಳ ದ್ವಾರದಿಂದ ಭಗವಂತನೇ ನಿಖಿಲ ಬ್ರಹ್ಮಾಂಡವನ್ನು ನಿರ್ಮಿಸುತ್ತಾನೆ. ಕುಂಬಾರನು ಗಡಿಗೆಯನ್ನು ನಿರ್ಮಿಸುವಂತೆಯೇ ದೇವರು ಈ ಜಗತ್ತನ್ನು ಸೃಷ್ಟಿಸುವುದಿಲ್ಲ. ಕುಂಬಾರನಿಗೆ ಗಡಿಗೆಯ ಗುಣಧರ್ಮಗಳ ಮೇಲೆ ಪ್ರಭುತ್ವವಿಲ್ಲ. ಗಡಿಗೆಯಿಂದ ಪ್ರತ್ಯೇಕವಾಗಿ ಒಂದು ಕಡೆ

ಕುಳಿತು ಅದನ್ನು ಸೃಜಿಸುತ್ತಾನೆ. ಭಗವಂತನೂ ಎಲ್ಲಿಯೋ ಒಂದು ಮೂಲೆಯಲ್ಲಿದ್ದು ಈ ಪ್ರಪಂಚವನ್ನು ರಚಿಸುವುದಿಲ್ಲ. ಪ್ರಪಂಚದ ಕಾರಣಗಳೆನಿಸಿದ ಪದಾರ್ಥಗಳಲ್ಲೆಲ್ಲ ವ್ಯಾಪಿಸಿ ನಿಂತು ಆ ಪದಾರ್ಥಗಳಿಗೆ ಮತ್ತು ಅವುಗಳ ಗುಣಧರ್ಮಗಳೆಲ್ಲವುಗಳಿಗೂ ಕಾರಣನೆನಿಸಿದ್ದಾನೆ. ಯಂತ್ರವಲ್ಲಿ ವಿದ್ಯುತ್ತು ಹರಿಯುವಂತೆ ವಿಶ್ವದ ಕಣಕಣಗಳಲ್ಲಿ ವ್ಯಾಪಿಸಿ ಆಯಾವ ವಸ್ತುಗಳ ವ್ಯಕ್ತಿತ್ವದ ಸಂಪೂರ್ಣ ರಚನೆಗೆ ಅವನು ನಿಮಿತ್ತನೂ ಅಂತರ್ಯಾಮಿಯೂ ಆಗಿರುವನು.

ಈ ವಿಶಾಲವೂ ಅದ್ಭುತವೂ ಆಗಿರುವ ಪ್ರಪಂಚದ ರಚನೆಗೆ ಹಿನ್ನೆಲೆಯಾದ ಪರಮಾತ್ಮನ ಜ್ಞಾನ, ಕ್ರಿಯಾಶಕ್ತಿಗಳು ಊಹಾತೀತವಾಗಿವೆ. ಸರ್ವಜ್ಞನೂ ಅಚಿಂತ್ಯ ಶಕ್ತಿಶಾಲಿಯೂ ಅನಂತ ಗುಣನಿಧಿಯೂ ಆದ ಮಹಾಚೇತನನಿಂದಲೇ ಈ ಸಮಗ್ರ ವಿಶ್ವದ ರಚನೆಯಾಗಲು ಸಾಧ್ಯ. ಈ ವಿಶಾಲ ಜಗತ್ತನ್ನು ನಿರೀಕ್ಷಣ ಮಾಡಿದಷ್ಟೂ ಜಗಜ್ಜನ್ಮಾದಿಕಾರಣನ ಅಪಾರ ಮಹಿಮೆಯ ಭವ್ಯತೆ ಹಾಗೂ ವಿಸ್ತಾರವನ್ನು ಮನಗಾಣುತ್ತೇವೆ.

## ಭಕ್ತಿಯ ಪ್ರಕಾರಗಳು

ಪರಮಾತ್ಮನ ಈ ಮಹಿಮೆಯ ಜ್ಞಾನದಿಂದಲೂ ನಮಗೆ ಪ್ರತಿಕ್ಷಣವೂ ಅವನಿಂದ ಒದಗುವ ಉಪಕಾರವನ್ನು ಸ್ಮರಿಸಿಯೂ ಅವನಲ್ಲಿ ನಮ್ಮ ಭಕ್ತಿಯು ಉಕ್ಕೇರುವುದು. ಭಕ್ತರಲ್ಲಿ ಅನೇಕ ಪ್ರಕಾರ ಗಳಿವೆ. ತಮ್ಮ ದುಃಖಸಂಕಷ್ಟಗಳ ನಿವಾರಣೆಗಾಗಿ ಪರಮಾತ್ಮನಲ್ಲಿ ಮೊರೆ ಇಡುವ ಆರ್ತಭಕ್ತರು ಕೆಲವರು, ಸಂಪತ್ತು ವೈಭವಗಳಿಗಾಗಿ ಅವನನ್ನು ಭಜಿಸುವ ಅರ್ಥಾರ್ಥಿಗಳು ಕೆಲವರು. ಲೌಕಿಕ ಫಲಗಳ ಆಶೆಯಿಂದ ನಾನಾವಿಧ ಅವ್ಯವಹಾರಗಳನ್ನು ಮಾಡುವುದಕ್ಕಿಂತ, ನಾನಾ ವ್ಯಕ್ತಿಗಳನ್ನು ಬೇಡುತ್ತ ದಿನಜೀವನ ನಡೆಸುವುದಕ್ಕಿಂತ, ಲೌಕಿಕ ಫಲಗಳನ್ನು ಪೂರೈಸಿಕೊಳ್ಳುವುದಕ್ಕಾಗಿ ಭಗವಂತ ನನ್ನೇ ಬೇಡುವವರು ಸಕಾಮರಾದರೂ, ಶ್ರೇಷ್ಠರೂ ಉದಾರ ಪುರುಷರೂ ಆಗಿರುವರು. ಲೌಕಿಕ ಪ್ರಯೋಜನವನ್ನು ಬಯಸದೆ ಭಗವಂತನ ಜ್ಞಾನ ಸಾಕ್ಷಾತ್ಕಾರಗಳಿಗಾಗಿಯೇ ಅವನನ್ನು ಆರಾಧಿ ಸುವ ಜಿಜ್ಞಾಸುಗಳು ಉತ್ತಮ ಶ್ರೇಣಿಯ ಭಕ್ತರು. ಇವರೆಲ್ಲರಿಗಿಂತಲೂ ಮಿಗಿಲಾದವನು ಭಗವತ್ ಸಾಕ್ಷಾತ್ಕಾರಪಡೆದ ಭಕ್ತನು. ಭಗವಂತನ ದಿವ್ಯ ಸುಂದರಮೂರ್ತಿಯನ್ನು ಸಾಕ್ಷಾತ್ತಾಗಿ ನೋಡಿ ಉತ್ಕಟವಾದ ಪ್ರೇಮಭಾವವನ್ನು ಹೊಂದಿದವನೇ ಪರಿಪೂರ್ಣಭಕ್ತನೆನಿಸುತ್ತಾನೆ. ಒಂದು ವಸ್ತು ವನ್ನು ಕೇಳಿ ತಿಳಿದಾಗ ಅಲ್ಲಿ ಉಂಟಾಗುವ ಪ್ರೀತಿಗೂ, ಪ್ರತ್ಯಕ್ಷವಾಗಿ ಅದನ್ನು ನೋಡಿದಾಗ ಮೂಡುವ ಪ್ರೀತಿಗೂ ಬಹಳ ಅಂತರವಿದೆ. ಸಕಾಮರಿಗೆ ಹಾಗೂ ಜಿಜ್ಞಾಸುಗಳಿಗೆ ಭಗವದ್ದರ್ಶನ ವಾಗಿರುವುದಿಲ್ಲ. ಶಾಸ್ತ್ರಗಳಿಂದ ಹಾಗೂ ಗುರುಗಳ ಉಪದೇಶದಿಂದಲೇ ಭಗವಂತನ ಸಾಮಾನ್ಯ ಜ್ಞಾನವನ್ನು ಪಡೆದು ಅವರು ಮಾಡುವ ಭಕ್ತಿಯು ಸಾಧಾರಣವೇ ಇರುತ್ತದೆ. ಅಪರೋಕ್ಷಜ್ಞಾನಿ ಸ್ವತಃ ಪರಮಾತ್ಮನನ್ನು ನೋಡುತ್ತಿರುವುದರಿಂದ ಭಕ್ತಿಯ ಪರಾಕಾಷ್ಠೆಯನ್ನು ಅನುಭವಿಸಬಲ್ಲನು.

**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ।**

ಎಂದು ಜ್ಞಾನಿಭಕ್ತನಿಗೆ ಭಗವಂತನೂ, ಭಗವಂತನಿಗೆ ಜ್ಞಾನಿಯೂ ಪರಸ್ಪರವಾಗಿ ರಮಪ್ರಿಯರೆನಿಸಿಕೊಳ್ಳುವರು. ಈ ಪರಮಭಕ್ತಿಯಿಂದಲೇ ಜ್ಞಾನಿಯು ಪರಮಾತ್ಮನ ಅತ್ಯಂತ ನುಗ್ರಹಕ್ಕೆಪಾತ್ರನಾಗುವನು.

**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥** (7.30)

***

**ಸಾಧಕನು ತಿಳಿಯಬೇಕಾದ ತತ್ತ್ವಗಳು**

**ಕಿಂ ತದ್ ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಂ ಅಧಿದೈವಂ ಕಿಮುಚ್ಯತೇ ॥** (8.1)

ಏಳನೇ ಅಧ್ಯಾಯದಲ್ಲಿಬ್ರಹ್ಮ, ಅಧ್ಯಾತ್ಮ, ಕರ್ಮ, ಅಧಿಭೂತ, ಅಧಿದೈವ, ಅಧಿಯಜ್ಞಗಳ ಸ್ವರೂಪವನ್ನು ತಿಳಿದುಕೊಳ್ಳುವ ಆವಶ್ಯಕತೆಯನ್ನು ನಿರೂಪಿಸಲಾಗಿದೆ. ಎಂಟನೆಯ ಅಧ್ಯಾಯದಲ್ಲಿ ಅದರ ವಿವರಣೆಯನ್ನು ಶ್ರೀಕೃಷ್ಣನು ನೀಡುತ್ತಾನೆ. ಯಾವವಿಧವಾದ ನಾಶ-ಹಾನಿ-ಚ್ಯುತಿ ಗಳಿಂದಲೂ ರಹಿತನಾದ ಅನಂತನೂ ಅವ್ಯಯನೂ ಆದ ಪರಮಾತ್ಮನೇ ಬ್ರಹ್ಮ. ಅವನೇ ಅಧಿ ಯಜ್ಞನು. ಸಕಲ ದೇಹಗಳಲ್ಲಿಯೂ ದೇಹಿಗಳ ನಿಯಾಮಕನಾಗಿ ಸರ್ವಪ್ರೇರಕನಾಗಿ ಅಧಿಯಜ್ಞ ರೂಪದಿಂದ ಪರಮಾತ್ಮನು ನೆಲೆಸಿದ್ದಾನೆ. ಬ್ರಹ್ಮನೂ ಅಧಿಯಜ್ಞನೂ ಬೇರೆಯಲ್ಲ. ಪರದೇವತೆ ಯಾದ ಶ್ರೀವಿಷ್ಣುವಿನ ವ್ಯಾಪ್ತರೂಪವನ್ನು ಬ್ರಹ್ಮನೆಂದೂ, ಎಲ್ಲರ ದೇಹಗಳೊಳಗೂ ಪ್ರೇರಕ ನಾಗಿರುವ ಅವನ ಅಂತರ್ಯಾಮಿರೂಪವನ್ನು ಅಧಿಯಜ್ಞನೆಂದೂ ಕರೆದಿದ್ದಾರೆ. ಅಧ್ಯಾತ್ಮರೆಂದರೆ ಜೀವರು. ಪರಮಾತ್ಮನಿಂದಲೂ ಜಡಪದಾರ್ಥಗಳಿಂದಲೂ ಭಿನ್ನವಾದ ತನ್ನ ವ್ಯಕ್ತಿತ್ವವನ್ನು ತಿಳಿಯುವುದು ಸಾಧಕನಿಗೆ ಆವಶ್ಯಕವಾಗಿದೆ. ಕರ್ಮವೆಂದರೆ ನಾವು ಮಾಡುವ ಕ್ಷುದ್ರ ಕಾರ್ಯ ಗಳಲ್ಲ. ಇಡೀ ವಿಶ್ವದ ಸಕಲ ವ್ಯವಹಾರಗಳನ್ನೂ ನಿಯಂತ್ರಿಸುವ, ಪ್ರಪಂಚದ ಜೀವರೂಪನಾದ ಪರಮಾತ್ಮನ ಅದ್ಭುತರಮಣೀಯವಾದ ಕ್ರಿಯೆಯೇ ಕರ್ಮವಾಗಿದ್ದು, ಜಗತ್ತಿನ ಪ್ರತಿಯೊಂದು ವ್ಯವಹಾರದ ಹಿನ್ನೆಲೆಯಲ್ಲಿಯೂ ಈ ಈಶ್ವರೀಯ ಕರ್ಮದ ನಿರೀಕ್ಷಣೆ ಮಾಡುವುದರಿಂದ ಅತಿಶಯಿತವಾದ ಸಾತ್ತ್ವಿಕ ಆನಂದವನ್ನೂ ಮಾನಸಿಕ ಶಾಂತಿಯನ್ನೂ ಪಡೆಯಬಲ್ಲೆವು. ಪ್ರಪಂಚದ ನಿರಾತಂಕ ಪ್ರವೃತ್ತಿಗೆ ಕಾರಣವಾದ, ಸಜ್ಜನರು ನಡೆಸುವ ಯಜ್ಞರೂಪವಾದ ಸತ್ಕಾರ್ಯಗಳನ್ನೂ ಕರ್ಮವೆಂದು ಹೇಳಬಹುದು. ಜೀವರಿಗೆ ಅಧ್ಯಾತ್ಮದ ಸಾಧನೆ ಮಾಡಲು ಉಪಕಾರಗಳೆನಿಸಿದ ಶರೀರ, ಇಂದ್ರಿಯ ಹಾಗೂ ಇತರ ಪಾಂಚಭೌತಿಕ ವಸ್ತುಗಳು ಅಧಿಭೂತಗಳಾಗಿವೆ. ಪರಮಾತ್ಮನ ಅಧೀನರಾಗಿ ವಿಶ್ವದ ವ್ಯಾಪಾರವನ್ನು ನಡೆಸುತ್ತಿರುವ ದೇವತೆಗಳ ಗುಂಪಿನಲ್ಲಿ ಮುಖ್ಯರೆನಿಸಿ

ಅತ್ಯಂತ ಶ್ರೇಷ್ಠ ಸಾಧಕರೆನಿಸಿದ ಜೀವೋತ್ತಮರಾದ ಬ್ರಹ್ಮದೇವರೇ ಅಧಿದೈವರೆನಿಸಿದ್ದಾರ ಇವೆಲ್ಲವುಗಳನ್ನು ತಿಳಿಯುವುದರಿಂದ ಸಾಧಕನಿಗೆ ಜಗತ್ತಿನ ವಸ್ತುತತ್ತ್ವ ಮತ್ತು ಅವುಗ ವಿಭಿನ್ನಕಾರ್ಯಗಳ ಪರಿಚಯವಾಗಿ ತನ್ನ ಆಧ್ಯಾತ್ಮಿಕ ಸಾಧನೆಗೆ ಇವೆಲ್ಲ ತತ್ತ್ವಗಳನ್ನು ಯೋಗ್ರ ರೀತಿಯಿಂದ ಬಳಸಿಕೊಂಡು ಮುನ್ನಡೆಯಲು ಸಾಧ್ಯವಾಗುತ್ತದೆ.

## ಶುಕ್ಲ-ಕೃಷ್ಣ ಗತಿಗಳು

ಎಂಟನೇ ಅಧ್ಯಾಯದ ಕೊನೆಯ ಭಾಗದಲ್ಲಿ ಶುಕ್ಲ-ಕೃಷ್ಣ ಗತಿಗಳ ನಿರೂಪಣವನ್ನು ಮಾಡಿರುವರು. ಇದರಿಂದ ಅನೇಕರು ಗೊಂದಲಕ್ಕೆ ಒಳಗಾಗಿರುವರು. ಶುಕ್ಲಪಕ್ಷದಲ್ಲಿ, ಉತ್ತರಾಯಣದಲ್ಲಿ, ಹಗಲಿನಲ್ಲಿ ಮರಣವಾದರೆ ಮಾತ್ರ ಮುಕ್ತಿ ದೊರಕುವುದು; ಕೃಷ್ಣಪಕ್ಷದಲ್ಲಿ, ದಕ್ಷಿಣಾಯನದಲ್ಲಿ, ರಾತ್ರಿಯಲ್ಲಿ ಪ್ರಾಣ ವಿಯೋಗವಾದರೆ ಅವನಿಗೆ ಸಂಸಾರದಲ್ಲಿಯೇ ಪರಿಭ್ರಮಣ ಎಂಬ ಪ್ರತೀತಿಯು ಇಲ್ಲಿರುವ ವಚನಗಳಿಂದ ಸಾಮಾನ್ಯ ಜನರಿಗಾಗುವುದು. ಪ್ರಶಸ್ತಕಾಲ ಹಾಗೂ ಉತ್ತಮ ಸನ್ನಿವೇಶಗಳು ಒಳ್ಳೆಯದರ ಸೂಚಕಗಳೇನೋ ಆಗಿವೆ. ಬರೀ ಕಾಲದೇಶಗಳ ಆಧಾರದಿಂದ ಪುಣ್ಯಮರಣ ಹಾಗೂ ಪಾಪಮರಣವೆಂದು ವಿಶ್ಲೇಷಣ ಮಾಡುವುದು ಸಮಂಜಸವೆನಿಸಲಾರದು. ಗೀತೆಯ ಈ ಭಾಗದಲ್ಲಿ ಯೋಗಿಗಳು ಶರೀರ ವಿಯೋಗದ ನಂತರ ಹೋಗುವ ಮಾರ್ಗದ ವಿವೇಚನೆಯನ್ನು ಮಾತ್ರ ಮಾಡಲಾಗಿದೆ. ಶುಕ್ಲಪಕ್ಷ, ಉತ್ತರಾಯಣ ಮುಂತಾದ ಕಾಲಗಳ ಅಭಿಮಾನಿಗಳೆನಿಸಿದ ದೇವತೆಗಳಿಂದ ಅಧಿಷ್ಠಿತವಾದ ಮಾರ್ಗದಲ್ಲಿ ಯಾತ್ರೆಯನ್ನು ನಡೆಸುವ ಯೋಗಿಗಳು ಬ್ರಹ್ಮನನ್ನು ಪಡೆಯುವರು. ಫಲಾಪೇಕ್ಷೆಯಿಂದ ಕಠೋರ ತಪಸ್ಸು ಯಜ್ಞಯಾಗಾದಿಗಳನ್ನು ನಡೆಸಿದ ಯೋಗಿಗಳಿಗೆ ಇದಕ್ಕಿಂತ ಭಿನ್ನವಾದ ಮಾರ್ಗವಿದೆ. ದಕ್ಷಿಣಾಯನ, ಕೃಷ್ಣಪಕ್ಷ ಮೊದಲಾದವುಗಳಿಗೆ ಅಭಿಮಾನಿಗಳಾದ ದೇವತೆಗಳು ನೆಲೆಸಿದ ಮಾರ್ಗದಲ್ಲಿ ಅವರು ತಮ್ಮ ಅಂತಿಮ ಪ್ರಯಾಣವನ್ನು ನಡೆಸುವರು. ಹೀಗೆ ಯೋಗಿಗಳು ತಮ್ಮ ಶರೀರದಿಂದ ಜೀವವನ್ನು ನಿಷ್ಕ್ರಮಣಗೊಳಿಸುವ ಮಾರ್ಗದ ಆಧ್ಯಾತ್ಮಿಕ ಸ್ವರೂಪವನ್ನಿಲ್ಲಿ ಹೇಳಲಾಗಿದ್ದು ಇದು ಯೋಗಶಾಸ್ತ್ರಕ್ಕೆ ಸಂಬಂಧಿಸಿದ ವಿಷಯವಾಗಿದೆ. ಜೀವನ ಮರಣದ ಬಾಹ್ಯ ಕಾಲದ ನಿರೂಪಣೆಗಾಗಿ ಈ ವಾಕ್ಯಗಳು ಹೊರಟಿರುವುದೆಂಬ ಭಾವನೆಯು ಸಾಮಾನ್ಯ ಜನರಲ್ಲಿ ಪ್ರಚಲಿತವಾಗಿದೆ. ಇದು ಸರಿಯಲ್ಲ.

ಮರಣಕಾಲದಲ್ಲಿ ನಮ್ಮ ಹೃದಯವು ಮುಗಿಲು ಕತ್ತಲೆಗಳಿಂದ ತುಂಬಿದ ದಕ್ಷಿಣಾಯನದ ಕೃಷ್ಣಪಕ್ಷದ ರಾತ್ರಿಯಂತಿರಬಾರದು. ಹೊಗೆ ತುಂಬಿದ ಕೋಣೆಯಂತೆ ನಮ್ಮ ಮನಸ್ಸು ಮಲಿನವಾಗಿರಲೂಬಾರದು. ವಿಷಯಾಸಕ್ತಿ ಮತ್ತು ಅಜ್ಞಾನಗಳು ಮುಗಿಲು ಕತ್ತಲೆಗಳಂತೆ ನಮ್ಮ ಜೀವನವನ್ನೇ ನಿಷ್ಪ್ರಭೆಗೊಳಿಸುವುವು. ಇವುಗಳನ್ನು ನಮ್ಮ ಹೃದಯದಿಂದ ಹೊರದೂಡಿ ಚಂದ್ರನ ಬೆಳದಿಂಗಳಿನಂತಿರುವ ಶುದ್ಧ ತಾತ್ತ್ವಿಕ ವಿಚಾರಧಾರೆಯಿಂದ ನಾವು ಪರಿಪ್ಲುತರಾಗಿರಬೇಕು.

ತ್ತರಾಯಣದ ಹಗಲಿನ ನಿರಭ್ರ ಶುಭ್ರ ಗಗನದಂತೆಯೂ ಶುಕ್ಲಪಕ್ಷದ ಹುಣ್ಣಿಮೆಯ ಬೆಳದಿಂಗಳ ರಾತ್ರಿಯಂತೆಯೂ ನಮ್ಮ ಹೃದಯವು ಇರಬೇಕು. ಮರಣಕಾಲದಲ್ಲಿ ಯಾವ ಮನೋಮಲಿನತೆಯೂ ಇಲ್ಲದೆ ಪ್ರಜ್ವಲಿಸುವ ಅಗ್ನಿಯಂತೆ ಕ್ರಿಯಾಶೀಲವೂ ತೇಜಸ್ವಿಯೂ ಆಗಿ ನಮ್ಮ ಚಿತ್ತವೃತ್ತಿ ಇರಬೇಕು. ಹೀಗೆ ಮರಣಕಾಲದಲ್ಲಿ ನಮ್ಮಲ್ಲಿರಬೇಕಾದ ಆಂತರಿಕ ಸನ್ನಿವೇಶವನ್ನು ಈ ರೂಪಕದ ರೂಪದಲ್ಲಿ ಚಿತ್ರಿಸಲಾಗಿದೆ ಎಂದೂ ನಾವು ಭಾವಿಸಬಹುದು.

**ವೇದೇಷು ಯಜ್ಞೇಷು ತಪಃಸ್ಸು ಚೈವ ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥** (8.28)

***

## ಯೋಗಕ್ಷೇಮಂ ವಹಾಮ್ಯಹಂ

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾಮೋಕ್ಷ್ಯಸೇಽಶುಭಾತ್ ॥** (9.1)

ತನ್ನ ಭಕ್ತರ ಸಂರಕ್ಷಣೆಯ ಪೂರ್ಣ ಭಾರವನ್ನು ಭಗವಂತನು ಹೊತ್ತಿರುವನು. ತನ್ನನ್ನೇ ದೃಢನಿಷ್ಠೆಯಿಂದ ಉಪಾಸಿಸುವ ನಿತ್ಯಾಭಿಯುಕ್ತರಾದ ಭಕ್ತರ ಯೋಗಕ್ಷೇಮವನ್ನು ತಾನು ನಿರ್ವಹಿಸುವೆನೆಂದು ಶ್ರೀಕೃಷ್ಣನು ಗೀತೆಯಲ್ಲಿ ಅಭಿವಚನವನ್ನು ನೀಡಿರುವನು. ನಮ್ಮಲ್ಲಿ ಆತ್ಮವಿಶ್ವಾಸ ಹಾಗೂ ಹೃದಯಬಲವನ್ನು ಕುದುರಿಸುವ ಜಗದೀಶ್ವರನ ಆಶ್ವಾಸನದ ದಿವ್ಯ ಸಂಜೀವಿನಿಯು ದೊರಕಿರುವಾಗ ಜನತೆಯು ಜೀವನದ ಹೋರಾಟದಲ್ಲಿ ಕಂಗೆಡುವುದೇಕೆ? ಭಗವದ್‌ಭಕ್ತಿಯ ಭದ್ರವಾದ ತಳಹದಿಯ ಮೇಲೆ ಜೀವನದ ಉತ್ತುಂಗ ಸೌಧದ ನಿರ್ಮಾಣಕಾರ್ಯದಲ್ಲಿ ನಾವು ದೃಢ ನಿರ್ಧಾರದಿಂದ ತೊಡಗಬಹುದು. ತನ್ನನ್ನು ಮೊರೆಹೊಕ್ಕು ಪ್ರಾರ್ಥಿಸುತ್ತಿರುವ ಭಕ್ತವರ್ಗವನ್ನು ರಕ್ಷಿಸುವುದು ತನ್ನ ವ್ರತವೆಂದು ರಾಮಾವತಾರದಲ್ಲಿ ಭಗವಂತನು ಹೇಳಿದ್ದಾನೆ.

**ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।**
**ಅಭಯಂ ಸರ್ವಭೂತೇಭ್ಯಃ ದದಾಮ್ಯೇತದ್ ವ್ರತಂ ಮಮ ॥**

ಇದು ರಾಮಾಯಣದಲ್ಲಿ ಶರಣಾಗತ ಭಕ್ತನಿಗೆ ಪರಮಾತ್ಮನೇ ನೀಡಿದ ಅಭಯವಾಣಿಯಾಗಿದ್ದರೆ,

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥** (9.22)

ಇದು ಕೃಷ್ಣಾವತಾರದಲ್ಲಿ ಭಗವಂತನು ನೀಡಿದ ಭರವಸೆಯ ಅಮೃತವಾಣಿ ಆಗಿದೆ.

**ಕೌಂತೇಯ, ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ । (9.31)**

''ಅರ್ಜುನ! ನನ್ನ ಭಕ್ತನಿಗೆ ಎಂದೆಂದಿಗೂ ನಾಶವಿಲ್ಲವೆಂಬುದನ್ನು ದೃಢವಾಗಿ ತಿಳಿದುಕೋ'' ಎಂದು ಭಕ್ತಿಯ ಮಾರ್ಗದಲ್ಲಿ ಮುನ್ನಡೆಯುವವನಿಗೆ ಯಾವ ಹಾನಿಯೂ ಇಲ್ಲವೆಂಬ ಅಭಿನಿವೇಶದಿಂದ ಭಗವಂತನು ಸಾರಿದ್ದಾನೆ. ಇಂತಹ ಸುಸ್ಪಷ್ಟ ಘೋಷಣೆಗಳಿರುವಾಗ ಅಸಂಬದ್ಧ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡು ಭಕ್ತಿವಿರೋಧಿ ಮಾರ್ಗಗಳನ್ನು ಬೋಧಿಸಿ ಜನರ ಮನಸ್ಸಿನಲ್ಲಿ ವೃಥಾ ಗೊಂದಲವೆಬ್ಬಿಸುವುದನ್ನು ಕಂಡು ನಮ್ಮ ಮನಸ್ಸಿಗೆ ಬಹಳ ಸಂತಾಪವಾಗುತ್ತಿದೆ. ಭಗವಂತನೇ ಭಕ್ತಿಮಾರ್ಗವನ್ನು ಶ್ರೇಷ್ಠವೂ ಪವಿತ್ರವೂ ಎನಿಸಿದ ನಿರಾತಂಕವಾದ ರಾಜಪಥವೆಂದು ಘೋಷಿಸಿರುವಾಗ ಆ ಮಾರ್ಗದಲ್ಲಿ ನಡೆಸಲು ಸಂಕೋಚಸಂದೇಹಗಳೇಕೆ?

**ಕೌಂತೇಯ, ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ।**

ಈ ವಾಕ್ಯದಲ್ಲಿ ಶ್ರೀಕೃಷ್ಣನು ತನ್ನ ಭಕ್ತರಿಗೆ ಎಂದಿಗೂ ನಾಶವಿಲ್ಲವೆಂದು ಅರ್ಜುನನಿಂದ ಪ್ರತಿಜ್ಞೆ ಮಾಡಿಸುತ್ತಾನೆ. ಅದೇಕೆ? ತಾನು ಪ್ರತಿಜ್ಞೆ ಮಾಡದೆ ಅರ್ಜುನನಿಂದ ಭಗವಂತನು ಏಕೆ ಪ್ರತಿಜ್ಞೆ ಮಾಡಿಸುತ್ತಾನೆ ? ತನ್ನ ಪ್ರತಿಜ್ಞೆಯಾದರೂ ಕೆಲವೊಮ್ಮೆ ಹುಸಿಯಾದೀತು. ತನ್ನ ಭಕ್ತರ ಪ್ರತಿಜ್ಞೆಯು ಎಂದಿಗೂ ಹುಸಿಯಾಗಲಾರದೆಂದು ಶ್ರೀಕೃಷ್ಣನ ಆಶಯವಾಗಿದೆ.

**ಕ್ರಿಯಾಸಮರ್ಪಣೆ**

ಭಕ್ತರ ಯೋಗಕ್ಷೇಮದ ಭಾರವನ್ನು ಹೊತ್ತಿರುವ ಪರಮಾತ್ಮನು ನಮ್ಮಿಂದ ಹೆಚ್ಚಿನದೇನನ್ನೂ ಅಪೇಕ್ಷಿಸುವುದಿಲ್ಲ. ನಮ್ಮಲ್ಲಿರುವ ವಸ್ತುವನ್ನು ಸ್ವಾರ್ಥಕ್ಕಾಗಿಯೇ ಬಳಸದೆ ಅದನ್ನು ಭಗವಂತನಿಗಾಗಿ ಸಮರ್ಪಿಸುವ ತ್ಯಾಗವೃತ್ತಿಯಿಂದ ಪರಮಾತ್ಮನು ಪ್ರಸನ್ನನಾಗುವನು. ವಸ್ತುವಿನ ಮೇಲೆ ಒಡೆತನದ ಭಾವನೆಯಾಗಲೀ ನಮ್ಮ ಕ್ರಿಯೆಗಳ ಬಗ್ಗೆ ಕರ್ತೃತ್ವದ ಅಹಂಕಾರವಾಗಲೀ ನಮ್ಮಲ್ಲಿ ಇರಬಾರದು. ನಮ್ಮಿಂದ ನಡೆದ ಎಲ್ಲ ಕಾರ್ಯಗಳಿಗೂ ಸ್ವತಂತ್ರನಾದ ಪರಮಾತ್ಮನೇ ಪ್ರೇರಕನೂ ಕಾರಕನೂ ಆಗಿರುವನೆಂದು ಭಾವಿಸುವುದೇ ಸಕಲ ಕ್ರಿಯೆಗಳ ಸಮರ್ಪಣವಾಗಿದೆ. ಪರಮಾತ್ಮನಿಗೆ ಪ್ರೀತಿಕಾರವಾಗುವಂತೆ ನಮ್ಮ ಎಲ್ಲ ವ್ಯವಹಾರಗಳೂ ನಡೆಯಬೇಕೆಂದು ಬಲವಾದ ಭಾವನೆಯಿಂದ ಪ್ರವರ್ತಿಸುವುದರಿಂದ ನಮ್ಮ ಎಲ್ಲ ಕ್ರಿಯೆಗಳು ಹರಿಪೂಜೆ ಎನಿಸುವುದು, ಲೋಕವ್ಯವಸ್ಥೆಗೆ ಪೋಷಕವಾದ ಸದ್ವೃತ್ತಿಗಳೇ ಭಗವಂತನಿಗೆ ಪ್ರಿಯವಾಗಿರುವುದರಿಂದ ನಮ್ಮ ಶಯನಾಸನಾದಿ ವ್ಯವಹಾರಗಳೆಲ್ಲವೂ ವಿಶ್ವಕರ್ತನ ನಿಯಮ ಆದೇಶಗಳಿಗೆ ಅನುಸಾರವಾಗಿ ಇದ್ದರೆ ಮಾತ್ರ ಅವು ಹರಿ ಪೂಜೆ ಎನಿಸುತ್ತವೆ. ತನ್ನ ಜೀವನದ ಎಲ್ಲ ಕೃತಿಗಳನ್ನು ಹೀಗೆ ಭಗವಂತನ ಪೂಜೆಯಾಗಿ ಮಾರ್ಪಡಿಸಿಕೊಂಡು ಎಲ್ಲ ಕ್ರಿಯೆಗಳ ಬಗ್ಗೆಯೂ ದೇವರಿಗೆ ಇರುವ ಸ್ವಾತಂತ್ರ್ಯ ವನ್ನು ಸ್ಮರಿಸಿ ನಡೆಯುವುದೇ ಸರ್ವಕ್ರಿಯಾಸಮರ್ಪಣೆಯಾಗಿದೆ.

**ಯತ್ ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ ತಪಸ್ಯಸಿ ಕೌಂತೇಯ ತತ್ ಕುರುಷ್ವ ಮದರ್ಪಣಮ್ ॥**

**ಹರಿಪೂಜೆ ಬಹು ಸುಲಭ**

ಅದರಂತೆ ನಮ್ಮಲ್ಲಿರುವ ಸಾಧನಸಾಮಗ್ರಿಯನ್ನೂ ದೇಹೇಂದ್ರಿಯಗಳನ್ನೂ ಲೌಕಿಕ ಸಂಪತ್ತನ್ನೂ ಪರಮಾತ್ಮನಿಗೆ ಪ್ರಿಯಕರವಾದ ಕಾರ್ಯಕ್ಕೆ ವಿನಿಯೋಗಿಸಿದರೆ ಅದೂ ಭಗವತ್ ಸಮರ್ಪಣೆ ಎನಿಸುತ್ತದೆ. ನಮ್ಮಲ್ಲಿರುವ ಸಾಧನಸಾಮಗ್ರಿ ಅಲ್ಪವೇ ಆಗಿರಬಹುದು. ಆದರೂ ಅದನ್ನು ಸ್ವಾರ್ಥಕ್ಕಾಗಿಯೇ ಬಳಸದೆ ಭಗವಂತನ ಸೇವೆಗಾಗಿ ವಿನಿಯೋಗಿಸಬೇಕು. ಅವನಿಗೆ ಪ್ರಿಯವಾದ ಕಾರ್ಯಗಳಿಗೇ ಅರ್ಪಿತಗೊಳಿಸಬೇಕು. ವಸ್ತುವಿನ ಪರಿಮಾಣವನ್ನಲ್ಲ, ಅದರ ಹಿಂದಿರುವ ಭಾವನೆಯ ವಿಸ್ತಾರವನ್ನು ಪರಮಾತ್ಮನು ಗಮನಿಸುತ್ತಾನೆ-

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**

ಎಷ್ಟೇ ಅಲ್ಪವಾದ ವಸ್ತುವಾದರೂ ಭಕ್ತಿಯ ಹಿರಿಮೆಯಿಂದ ಅದು ದೊಡ್ಡದಾಗುವುದು. ಅಂತೂ ಪರಮಾತ್ಮನು ಭಕ್ತನಿಂದ ತ್ಯಾಗ ಹಾಗೂ ಸಮರ್ಪಣಾಭಾವವನ್ನು ಬಯಸುತ್ತಾನೆ. ಇದರಿಂದ ಲೋಕದ ಪ್ರಗತಿಯ ಜೊತೆಗೆ ಭಕ್ತನ ವೈಯಕ್ತಿಕ ವಿಕಾಸವೂ ಸಾಧಿತವಾಗುತ್ತದೆ. ನೂರಾರು ಸುವರ್ಣಾಭರಣಗಳಿಂದ, ವೈಭವಾಡಂಬರಗಳಿಂದ ಪೂಜಿಸಿದ ಚೋಲರಾಜನಿಂದ ಪಡೆಯಲಾಗದ ಆಧ್ಯಾತ್ಮಿಕ ಸಿದ್ಧಿಯನ್ನು ತುಲಸೀಪತ್ರಗಳಿಂದ ಪರಮಾತ್ಮನನ್ನು ಅರ್ಚಿಸಿದ ವಿಷ್ಣುದಾಸನು ಹೊಂದಿದನು. ಮೊಸಳೆಯ ಆಕ್ರಮಣವನ್ನು ಸರ್ವಶಕ್ತಿಯಿಂದ ಎದುರಿಸಿ ತನ್ನ ಪುರುಷಪ್ರಯತ್ನವೆಲ್ಲ ವಿಫಲವಾದಾಗ ಕಮಲಪುಷ್ಪವನ್ನೆತ್ತಿ ಹಿಡಿದು ಆರ್ತಭಾವದಿಂದ ಮೊರೆಯಿಟ್ಟ ಗಜರಾಜನನ್ನು ಸಂರಕ್ಷಿಸಲು ಆತುರದಿಂದ ಓಡಿಬಂದಿದ್ದಾನೆ, ನಮ್ಮ ಭಕ್ತವತ್ಸಲನಾದ ಶ್ರೀಹರಿ. ವರ್ಷವರ್ಷಗಳವರೆಗೆ ಶ್ರೀರಾಮನ ಪ್ರತೀಕ್ಷೆಯಲ್ಲಿ ಕಾದು ಕುಳಿತ ದಾಸಿ ಶಬರಿಯು ಕಾಡಿನಲ್ಲಿ ಬೆಳೆದ ಫಲಗಳನ್ನು ಅವನಿಗೆ ಸಮರ್ಪಿಸಿ ಪರಮಶ್ರೇಯಸ್ಸನ್ನು ಪಡೆದಳು. ಬಹುದಿನಗಳ ಉಪವಾಸದ ನಂತರ ಅಂದು ತಾನು ಸ್ವೀಕರಿಸಬೇಕೆಂದಿದ್ದ ಹಿಟ್ಟನ್ನು ಉಪವಾಸದಿಂದ ಬಳಲಿ[illegible] ಬೇಡರಿಗೆ ನೀಡಿ ಉಳಿದಿರುವ ಸ್ವಲ್ಪ ನೀರನ್ನು ರಾಜಾ ರಂತಿದೇವನು ಕುಡಿಯಬಯಸಿದ. ಆದ[illegible] ಎದುರಿಗೆ ನೀರಿಗಾಗಿ ಬಾಯಿ ತೆರೆದು ತನ್ನನ್ನೇ ದೀನದೃಷ್ಟಿಯಿಂದ ನೋಡುತ್ತಿರುವ ನಾಯಿಯನ[illegible] ಕಂಡು ಸರ್ವಾಂತರ್ಯಾಮಿಯಾದ ಶ್ರೀಹರಿಯು ಪ್ರೀತನಾಗಲೆಂದು ಆ ನೀರನ್ನು ನಾಯಿಗೆ ಧಾ[illegible] ಎರೆಯುತ್ತಾನೆ. ''ಸ್ವಾಮಿ, ಸಮಗ್ರ ಭೂಮಿಯ ಚಕ್ರಾಧಿಪತ್ಯವನ್ನಾಗಲೀ ಸಕಲ ಭೋಗವೈಭ[illegible] ವನ್ನಾಗಲೀ ಹೆಚ್ಚೇಕೆ, ಮುಕ್ತಿಯನ್ನೂ ಕೂಡ ನಾನು ಬಯಸುವುದಿಲ್ಲ; ಸಕಲ ಜನರ ದುಃಖವನು[illegible] ನಾನೇ ಅನುಭವಿಸುವಂತಾಗಿ ಅವರು ದುಃಖರಹಿತರಾಗುವಂತಿದ್ದರೆ ಅದೇ ನನಗೆ ಹಿಗ್ಗು!'' ಇದ[illegible] ತ್ಯಾಗಿ, ತಪಸ್ವಿಯಾದ ರಾಜಾ ರಂತಿದೇವನ ಅಮೃತಮಯ ಉದ್ಗಾರವಾಗಿದೆ. ಹೀಗೆ ಪತ್ರ ಪು[illegible]

ಫಲ ತೋಯಗಳ ಸಮರ್ಪಣೆಗೆ ವಿಷ್ಣುದಾಸ, ಗಜೇಂದ್ರ, ಶಬರಿ ರಂತಿದೇವರು ಆದರ್ಶ ಉದಾಹರಣೆಗಳೆನಿಸಿದ್ದಾರೆ.

ಈ ಶ್ಲೋಕಕ್ಕೆ ಇನ್ನೂ ಒಂದು ಆಧ್ಯಾತ್ಮಿಕ ಅರ್ಥವಿದೆ.

ಜಗತ್ತೆಂಬ ವಿಶಾಲ ವೃಕ್ಷದ ಪತ್ರಗಳೆಂದು ವೇದವನ್ನು ವರ್ಣಿಸಿದ್ದಾರೆ- **'ಛಂದಾಂಸಿ ಯಸ್ಯ ಪರ್ಣಾನಿ'**. ವೇದಾಧ್ಯಯನ ಮಾಡಿ ವೇದಕುಸುಮದ ಜ್ಞಾನಮಧುವನ್ನು ತನ್ನಲ್ಲಿ ಸಂಗ್ರಹಿಸಿ ಸಜ್ಜನರಲ್ಲಿ ಅದರ ವಿತರಣ ಮಾಡುವುದೇ ಪತ್ರ ಸಮರ್ಪಣವೆನಿಸುವುದು.

**ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯನಿಗ್ರಹಃ ।**

ಎಂದು ಮುಂತಾಗಿ ನಿರೂಪಿಸಲಾದ ಅಹಿಂಸಾ, ಇಂದ್ರಿಯನಿಗ್ರಹ, ಸರ್ವಭೂತದಯಾ, ಸತ್ಯ, ಜ್ಞಾನ, ತಪಸ್ಸು, ಕ್ರಿಯಾ, ಧ್ಯಾನಗಳೆಂಬ ಎಂಟು ಭಾವಪುಷ್ಪಗಳನ್ನು ಇಲ್ಲಿ ಪುಷ್ಪವೆಂದು ಪರಿಗ್ರಹಿಸಲಾಗಿದೆ. ಇಂತಹ ಸದ್ಗುಣಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದೇ ಪುಷ್ಪದ ಅರ್ಪಣೆಯಾಗಿದೆ. ಕರ್ಮವನ್ನಾಚರಿಸಿ ಅದರ ಫಲವನ್ನು ಬಯಸದೆ ನಿಷ್ಕಾಮವೃತ್ತಿಯಿಂದ ಇರುವುದು ಫಲಾರ್ಪಣೆ ಎನಿಸುವುದು. ಪರಮಾತ್ಮನ ಕಥಾಶ್ರವಣ ಹಾಗೂ ಕೀರ್ತನಕಾಲಗಳಲ್ಲಿ ಭಕ್ತಿಯ ಆವೇಶದಿಂದ ಉಕ್ಕಿ ಹರಿಯುವ ಆನಂದಬಾಷ್ಪದ ಜಲಧಾರೆಯನ್ನು ಇಲ್ಲಿ ತೋಯವೆಂದು ಪರಿಗ್ರಹಿಸಬಹುದು. ಭಕ್ತಿರಸಭರಿತವಾದ ಇಂತಹ ಸಂಕೀರ್ತನಯೋಗವೇ ಶ್ರೀಹರಿಗೆ ಭಕ್ತನು ಮಾಡುವ ತೋಯಾರ್ಪಣೆಯಾಗಿದೆ. ಅಂತೂ ಈ ಸುಂದರವಾದ ಪದ್ಯವು ಯಾವ ವೈಭವಾಡಂಬರಗಳಿಲ್ಲದಿದ್ದರೂ ತುಂಬಿದ ಹೃದಯದಿಂದ ಭಗವಂತನನ್ನು ಹೇಗೆ ಒಲಿಸಬಹುದೆಂಬುದನ್ನು ನಮಗೆ ತೋರಿಸಿಕೊಡುತ್ತದೆ.

ಇಂದು ಜಗತ್ತಿನಲ್ಲಿ ವಿಕಟತಾಂಡವವನ್ನು ಆಡುತ್ತಿರುವ ಭ್ರಷ್ಟಾಚಾರದ ಮಹಾದೈತ್ಯನ ಹುಟ್ಟಡಗಿಸಲು ಭಕ್ತಿಯ ಅಮೃತಪ್ರಾಶನವೇ ಏಕಮಾತ್ರ ಉಪಾಯವಾಗಿದೆ. ಸರಕಾರವು ವಿಧಿಸುವ ಕಾಯಿದೆಗಳಿಂದಲೇ ಲೋಕದ ಸುಧಾರಣೆಯಾಗದು. ಜನರ ಮನಸ್ಸಿನಲ್ಲಿ ಸುಧಾರಣೆ ಪರಿವರ್ತನೆಗಳಾಗದೇ ಉಳಿದಿರುವುದರಿಂದ ಈಗ ಮಾಡಲಾದ ಕಾಯಿದೆಗಳೆಲ್ಲ ಅಯಶಸ್ವಿಗಳೇ ಆಗಿವೆ. ಈ ಕಾಯಿದೆಗಳು ಬೆಳೆದಂತೆ ಅವುಗಳನ್ನು ಉಲ್ಲಂಘಿಸುವ ಕುತಂತ್ರಗಳ ಆವಿಷ್ಕಾರ ಗಳಿಗಿಂತ ಹೆಚ್ಚಿನದೇನೂ ಆಗುತ್ತಿಲ್ಲ. ಕಾಯಿದೆಯು ಸುಧಾರಣೆಯ ಮಗುವಾಗಿದೆ. ಅದು ಸುಧಾರಣೆಯ ತಾಯಿಯಾಗಲಾರದು. ಜನರ ಮನಸ್ಸಿನಲ್ಲಿ ಆಗುವ ಸುಧಾರಣೆಯಿಂದ ಯಶಸ್ವೀ ಕಾಯಿದೆಗಳನ್ನು ಸೃಜಿಸಬಲ್ಲೆವಲ್ಲದೆ ಕಾಯಿದೆಬಲದಿಂದ ಲೋಕವನ್ನು ಸುಧಾರಿಸಲು ಸಾಧ್ಯವಾಗಲಾರದು. ನೀತಿ ಶೀಲಗಳ ಬಗ್ಗೆ ಅಂತಹ ಮೂಲಭೂತ ಮನೋಭೂಮಿಕೆಯನ್ನು ನಿರ್ಮಿಸುವುದೇ ಇಂದಿನ ಪ್ರಧಾನವಾದ ರಾಷ್ಟ್ರನಿರ್ಮಾಣಕಾರ್ಯವಾಗಿದೆ. ಎಲ್ಲ ಶೀಲ

ಸದ್ಗುಣಗಳ ಮುಖ್ಯ ಪ್ರೇರಕಶಕ್ತಿಯಾದ ನೈಜವಾದ ಭಕ್ತಿಭಾವವನ್ನು ಸುಶಿಕ್ಷಿತ ಜನಾಂಗದಲ್ಲಿ ಒಡಮೂಡಿಸುವಂತಹ ಮಹಾಪ್ರಯತ್ನವು ಇಂದು ಭರದಿಂದ ನಡೆಯಬೇಕಾಗಿದೆ.

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಯುಕ್ತ್ವೈವಮ್ ಆತ್ಮಾನಂ ಮತ್ಪರಾಯಣಃ ॥ (9.34)

***

## ಭಗವಂತನ ವಿಭೂತಿಗಳು

ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।
ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥ (10.1)

ಹತ್ತನೆಯ ಅಧ್ಯಾಯದಲ್ಲಿ ಭಗವದ್ವಿಭೂತಿಗಳ ವಿಸ್ತಾರವಾದ ವರ್ಣನೆಯಿದೆ. ಪರಮಾತ್ಮನು ಜಗತ್ತಿನ ಕಣಕಣಗಳಲ್ಲಿಯೂ ವ್ಯಾಪಿಸಿರುವುದರಿಂದಲೇ ಅವುಗಳಲ್ಲಿ ವಿವಿಧ ಕ್ರಿಯೆ ಪರಿಣಾಮಗಳು ಸಂಭವಿಸುತ್ತವೆ. ಆದುದರಿಂದ ಸರ್ವಪ್ರವರ್ತಕನಾಗಿ ಪರಮಾತ್ಮನು ಎಲ್ಲ ವಸ್ತುಗಳಲ್ಲಿ ನೆಲೆಸಿದ್ದರೂ ಕೆಲ ವಿಶಿಷ್ಟ ವಸ್ತುಗಳಲ್ಲಿ ಪರಮಾತ್ಮನ ಸನ್ನಿಧಾನವು ಅತಿಶಯಿತವಾಗಿದೆ. ಹೆಚ್ಚು ಶಕ್ತಿಶಾಲಿಯೂ ಪವಿತ್ರವೂ ಲೋಕೋಪಕಾರವೂ ಆದ ಗುಣಶಾಲಿ ವಸ್ತುಗಳಲ್ಲಿ ಪರಮಾತ್ಮನ ಸನ್ನಿಧಾನವು ಹೆಚ್ಚಾಗಿರುವುದು. ರೇಡಿಯೋ ಯಂತ್ರಗಳ ಶಕ್ತಿಯೋಗ್ಯತೆಗಳನ್ನನುಸರಿಸಿ ಅವುಗಳ ಶಬ್ದಾಭಿವ್ಯಕ್ತಿಯ ತಾರತಮ್ಯವಿರುವಂತೆ ವಿಶಿಷ್ಟ ವಸ್ತುವಿನಲ್ಲಿ ಭಗವಂತನ ಸನ್ನಿಧಾನವು ಅಧಿಕವಾಗಿರುವುದು. ಶ್ರೇಷ್ಠ ವಸ್ತುಗಳಲ್ಲಿರುವ ಭಗವಂತನ ಈ ರೂಪವಿಶೇಷಗಳನ್ನು ಅರಿಯುವುದನ್ನೇ ವಿಭೂತಿದರ್ಶನವೆನ್ನಲಾಗುತ್ತದೆ. ಒಮ್ಮೆ ದೇವತೆಗಳು ಭಗವದುಪಾಸನೆಗಾಗಿ ಉತ್ತಮವಾದ ಪ್ರತಿಮೆಯೊಂದನ್ನು ಹುಡುಕುತ್ತಿದ್ದರು. ಹುಡುಕುತ್ತಿದ್ದುದು ಕಲ್ಲಿನ ಮೂರ್ತಿಯನ್ನಲ್ಲ, ಪರಮಾತ್ಮನಿಗೆ ಅಧೀನವಾಗಿರಬಹುದಾದ, ದೋಷ ವಿಪರ್ಯಾಸಗಳಿಂದ ದೂರವಾದ ಒಂದು ಮಹಾಚೇತನವನ್ನು ಅವರು ಅರಸುತ್ತಿದ್ದರು. ಸ್ವಚ್ಛವಾದ ಕನ್ನಡಿಯಲ್ಲಿಯೇ ಮುಖವು ಪ್ರತಿಬಿಂಬಿತವಾಗುವಂತೆ ದೋಷದ ಲವಲೇಶವೂ ಇಲ್ಲದ ನಿರ್ಮಲ ಚೇತನದಲ್ಲಿಯೇ ಪುರುಷೋತ್ತಮನ ಸನ್ನಿಧಾನವಿರುವುದರಿಂದ ಅಂತಹ ಶ್ರೇಷ್ಠಾತ್ಮನೇ ಭಗವದುಪಾಸನೆಗೆ ಅನುಕೂಲವಾದ ಪ್ರತಿಮೆಯೆಂದು ದೇವತೆಗಳ ವಿಚಾರವಾಗಿತ್ತು. ಆದರೆ ಯಾವ ವ್ಯಕ್ತಿಯನ್ನು ಪರೀಕ್ಷಿಸಿದರೂ ಅದು ದೋಷ ದೌರ್ಬಲ್ಯಗಳ ನೆಲೆಯಾಗಿತ್ತು. ಆಸುರೀಶಕ್ತಿಗಳು ಎಲ್ಲ ಹೃದಯಗಳನ್ನು ಪ್ರವೇಶಿಸಿ ಅವುಗಳನ್ನು ಕಲುಷಿತಗೊಳಿಸುತ್ತಿದ್ದವು. ಈ ದುಃಶಕ್ತಿಗಳ ಪ್ರವೇಶಕ್ಕೆ ಎಡೆಯೇ ಇಲ್ಲದ ಹೃದಯವು ವಾಯುದೇವರದೊಂದೇ ಆಗಿತ್ತು. ವಾಯುದೇವರ ಮೇಲೆ ಅಭಿಯೋಗ ಮಾಡಲೆಳಸಿದ ಆಸುರೀದುಃಶಕ್ತಿಗಳೆಲ್ಲ ಕಲ್ಲಿನ ಗೋಡೆಗೆ ಅಪ್ಪಳಿಸಲಾದ ಮಣ್ಣ

ಹೆಂಟೆಗಳಂತೆ ಶೀರ್ಣವಿಶೀರ್ಣವಾದವು. ಈ ದೈತ್ಯಶಕ್ತಿಯ ಗರ್ವಪರ್ವತಗಳನ್ನು ತನ್ನ ವಜ್ರಸತ್ತ್ವದಿಂದ ಭಿನ್ನವಿಭಿನ್ನಗೊಳಿಸಿ ತನ್ನ ಅಪ್ರತಿಹತ ಸಾತ್ತ್ವಿಕ ತೇಜಸ್ಸಿನಿಂದ ಬೆಳಗಿದ ಶ್ರೀವಾಯುದೇವರಲ್ಲಿ ಪರಮಾತ್ಮನ ಪೂರ್ಣ ಸಾನ್ನಿಧ್ಯವನ್ನು ಗುರುತಿಸಿ ತಮ್ಮ ಉಪಾಸನೆಗೆ ಪ್ರತಿಮೆಯಾಗಿ ವಾಯುದೇವರನ್ನೇ ಆರಿಸಿದರೆಂದು ಉಪನಿಷತ್ತಿನಲ್ಲಿ ಕಥೆಯಿದೆ. ಎಲ್ಲಿ ಗುಣಾತಿಶಯವಿದೆಯೋ ಎಲ್ಲಿ ಸತ್ತ್ವಸೌಂದರ್ಯಗಳು ಅಧಿಕವಾಗಿವೆಯೋ ಅವುಗಳೆಲ್ಲ ದೈವೀ ಶಕ್ತಿಯ ವಿಶೇಷ ಕೇಂದ್ರವೆನಿಸುತ್ತವೆಂಬ ಪ್ರಮೇಯವೇ ಹತ್ತನೇ ಅಧ್ಯಾಯದಲ್ಲಿ ನಿರೂಪಿತವಾಗಿದೆ. ಪ್ರಪಂಚದಲ್ಲಿರುವ ಬೇರೆಬೇರೆ ಗುಂಪಿನ ವಿಶಿಷ್ಟ ವಸ್ತುವನ್ನುಲ್ಲೇಖಿಸಿ ಅಲ್ಲಿ ಪರಮಾತ್ಮನ ವಿಶೇಷ ವಿಭೂತಿ ಇರುವುದನ್ನು ವರ್ಣಿಸಿ,

**ಯದ್ಯದ್ ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥** (10.41)

ಎಂದು ಮಥಿತಾರ್ಥವನ್ನು ಕೊನೆಗೆ ಹೇಳಲಾಗಿದೆ.

### ವಿಭೂತಿಯೋಗದ ಸಂದೇಶ

ನಮ್ಮ ಹೃದಯವೂ ಪರಮಾತ್ಮನ ವಿಭೂತಿಯ ಅಧಿಷ್ಠಾನವಾಗುವಂತೆ ಪ್ರಯತ್ನಿಸ ಬೇಕೆನ್ನುವುದೇ ಈ ಹತ್ತನೆಯ ಅಧ್ಯಾಯದಿಂದ ನಾವು ಕಲಿಯಬೇಕಾದ ಸಂಗತಿಯಾಗಿದೆ. ನಮ್ಮ ಹೃದಯವು ಭಗವಂತನ ನೃತ್ಯಮಂದಿರವಾಗಬೇಕಾದರೆ ಪರಮಾತ್ಮನಿಗೆ ಪ್ರಿಯವಾದ ಸದ್ಗುಣ ಗಳಿಂದ ಇದನ್ನು ಸಿಂಗರಿಸಬೇಕು. ಮಗುವಿಗೆ ಬೇಕಾದ ತಿಂಡಿ ಮಿಠಾಯಿಗಳು, ಸುಂದರ ಆಟಿಕೆಗಳು ನಮ್ಮಲ್ಲಿದ್ದರೆ ಮಗುವು ನಮ್ಮ ಕಡೆ ಓಡಿಬರುವುದು. ಹೊಲಸು ಪದಾರ್ಥಗಳಿಂದ ತುಂಬಿದ ಜಾಗವು ಕ್ರಿಮಿಕೀಟಗಳ ಆವಾಸಸ್ಥಾನವೇ ಆಗುವುದು. ಸದ್ಗುಣ ಸತ್ಕೃತಿಗಳಿಂದ ತುಂಬಿದ ನಮ್ಮ ಹೃದಯವು ಬಾಲಕೃಷ್ಣನ ಕ್ರೀಡಾಭೂಮಿಯಾಗುವುದಾದರೆ, ಅದೇ ದುರ್ಗುಣಗಳಿಂದ ದೂಷಿತವಾದಾಗ ಆಸುರೀಶಕ್ತಿಗಳ ರುದ್ರತಾಂಡವ ಭೂಮಿಯೆನಿಸಬಹುದು. ನಮ್ಮ ಮನಸ್ಸು ಬಾಲಗೋಪಾಲನ ನೃತ್ಯ ಮಂದಿರವಾಗುವಂತೆ ಸದ್ಗುಣ ಸದ್ವಿಚಾರಗಳಿಂದ ಅಲಂಕೃತಗೊಳಿಸುವ, ನಾವು ಮಾಡುವ ಸತ್‌ಕರ್ಮಗಳೇ ಭಗವಂತನು ನಮ್ಮಿಂದ ಸ್ವೀಕರಿಸಬಹುದಾದ ಅಮೂಲ್ಯ ನೈವೇದ್ಯವಾಗಿದೆ–

**ಋತಂ ಪಿಬಂತೌ ಸುಕೃತಸ್ಯ ಲೋಕೇ ।** –ಕಠೋಪನಿಷತ್

**ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್ ।** –ಬ್ರಹ್ಮಸೂತ್ರಭಾಷ್ಯ

ನಮ್ಮ ಒಳಗೆ ನೆಲೆಸಿ ನಾವು ಮಾಡುವ ಶುಭಕರ್ಮಗಳನ್ನು ಮಾತ್ರ ಪರಿಗ್ರಹಿಸಿ ನಮ್ಮನ್ನು ಶ್ರೀಹರಿಯು ಅನುಗ್ರಹಿಸುತ್ತಾನೆ. ನಾವು ಸಮರ್ಪಿಸುವ ಶುಭಕರ್ಮಗಳೆಂಬ ಪ್ರಿಯ

ಭೋಜ್ಯಗಳನ್ನು ಸ್ವೀಕರಿಸಲು ನಮ್ಮ ಹೃದಯಕ್ಕೆ ಭಗವಂತನು ಓಡಿಬರುವನು. ದುಷ್ಕರ್ಮಗಳನ್ನಾಚರಿಸಿ ನಾವು ಆ ಹರಿಯನ್ನು ನಮ್ಮಿಂದ ದೂರ ಓಡಿಸುತ್ತಿದ್ದೇವೆ. ಹಿರಿಯನಾದ ದಕ್ಷಪ್ರಜಾಪತಿಯನ್ನು ಅವನು ಬಂದಾಗ ಎದ್ದುನಿಂತು ಏಕೆ ಗೌರವಿಸಲಿಲ್ಲವೆಂದು ಸತಿಯು ಶಿವನನ್ನು ಪ್ರಶ್ನಿಸಿದಾಗ ಶಿವನು ನೀಡುವ ಉತ್ತರವು ಮಾರ್ಮಿಕವಾಗಿದೆ. ಉತ್ಥಾನ, ಅಭಿವಾದನ ಮುಂತಾದ ಗೌರವಗಳನ್ನು ನಾವು ವ್ಯಕ್ತಿಗೆ ಸಲ್ಲಿಸುತ್ತಿರದೆ ವ್ಯಕ್ತಿಯೊಳಗಿರುವ ಭಗವತ್-ಶಕ್ತಿಗೆ ಆ ಗೌರವಸಮರ್ಪಣೆಯಾಗಿದೆ. ಗೌರವವನ್ನು ಸಲ್ಲಿಸುವವನೂ ಪಡೆಯುವವನೂ ಇದನ್ನು ಅರಿತುಕೊಂಡಿರಬೇಕು. ಅಧಿಕಾರದ ಉನ್ಮಾದದಿಂದ ಗರ್ವಿತನಾದ ದಕ್ಷಪ್ರಜಾಪತಿಯಲ್ಲಿ ಆ ಪ್ರಜ್ಞೆಯೇ ಇರಲಿಲ್ಲ. ದರ್ಪಾಹಂಕಾರದಿಂದ ದೂಷಿತವಾದ ಅವನ ಹೃದಯದಲ್ಲಿ ಪರಮಾತ್ಮನನ್ನೆಷ್ಟು ಅರಸಿದರೂ ಅವನು ಕಾಣಲೊಲ್ಲನು. ಪರಮಾತ್ಮನ ಸನ್ನಿಧಾನವನ್ನೇ ಕಳೆದುಕೊಂಡ ಕಲಾಹೀನ ದೂಷಿತ ಪ್ರತಿಮೆಯನ್ನು ನಾನೇಕೆ ಗೌರವಿಸಲಿ ಎಂದು ಮಹಾದೇವನು ಪ್ರಶ್ನಿಸುತ್ತಾನೆ. ಅಸತ್ಯ ಅಸದ್ವಿಚಾರಗಳಿಂದ ನಮ್ಮ ಒಳಗಿರುವ ದೇವಮಂದಿರವನ್ನು ನಾವು ಕೆಡಹುತ್ತಿದ್ದೇವೆ. ನಮ್ಮ ಜೀವನವನ್ನು ಅಪವಿತ್ರಗೊಳಿಸುವಂತಹ ಇಂತಹ ದುಷ್ಕೃತ್ಯಗಳ ಬಗ್ಗೆ ಎಚ್ಚರದಿಂದಿದ್ದು ನಮ್ಮಲ್ಲಿ ಪರಮಾತ್ಮನನ್ನು ಅಭಿವ್ಯಕ್ತಿಗೊಳಿಸಬಹುದಾದಂತಹ ಉತ್ತಮ ಕೃತಿಗಳಿಂದ ನಮ್ಮ ಜೀವನವನ್ನು ಉದಾತ್ತಗೊಳಿಸಬೇಕೆಂಬುದೇ ಹತ್ತನೆಯ ಅಧ್ಯಾಯದ ಸಂದೇಶವಾಗಿದೆ.

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನಮ್ ಏಕಾಂಶೇನ ಸ್ಥಿತೋ ಜಗತ್ ॥** (10.42)

***

## ವಿಶ್ವರೂಪ ದರ್ಶನ

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥** (11.1)

ಪರಮಾತ್ಮನ ಅಗಾಧ ಮಹಿಮೆಯ ವಿಸ್ತೃತ ವರ್ಣನೆಯನ್ನು ಕೇಳಿದ ಅರ್ಜುನನಿಗೆ ವಿಶ್ವಧಾರಕವಾದ ಅವನ ವಿರಾಡ್ರೂಪದ ಪ್ರತ್ಯಕ್ಷ ದರ್ಶನವನ್ನು ಪಡೆಯುವ ಬಯಕೆಯುಂಟಾಗುವುದು. ಅದಕ್ಕಾಗಿ ಅವನಿಗೆ ದಿವ್ಯ ದೃಷ್ಟಿಯನ್ನು ಕರುಣಿಸಿ ಶ್ರೀಕೃಷ್ಣನು ತನ್ನ ವಿಶ್ವರೂಪದರ್ಶನವನ್ನು ಅವನಿಗೆ ಅನುಗ್ರಹಿಸುವನು. ನಮ್ಮೆದುರಿಗೆ ಸಾವಿರಾರು ಸೂಕ್ಷ್ಮ ವಸ್ತುಗಳು ಇದ್ದರೂ ಅವುಗಳ ಪರಿಜ್ಞಾನವೇ ಆಗುವುದಿಲ್ಲ. ಸೂಕ್ಷ್ಮದರ್ಶಕ ಯಂತ್ರದ ಸಹಾಯದಿಂದ ನಮ್ಮ ಚಕ್ಷುಸ್ಸಿಗೆ ಗೋಚರವಾಗದ ಅನೇಕ ಸೂಕ್ಷ್ಮ ವಿಷಯಗಳನ್ನು ನಾವು ಗ್ರಹಿಸುವೆವು. ಅದರಂತೆ ವಿಶ್ವವ್ಯಾಪಿಯಾಗಿ ಸರ್ವಪದಾರ್ಥಗಳಲ್ಲಿಯೂ ಅನುಸ್ಯೂತನಾದ ಪರಮಾತ್ಮನ ಸಚ್ಚಿದಾನಂದಮಯ ರೂಪಗಳು ನಮ್ಮ ಸ್ಥೂಲ ದೃಷ್ಟಿಗೆ ನಿಲುಕುವುದಿಲ್ಲ. ಅದಕ್ಕಾಗಿ

ಈ ಸಂದರ್ಭದಲ್ಲಿ ಅರ್ಜುನನಿಗೆ ದಿವ್ಯ ಚಕ್ಷುಸ್ಸನ್ನು ಪರಮಾತ್ಮನು ಪ್ರದಾನ ಮಾಡಿದ್ದಾನೆ. ಹುಟ್ಟು ಕುರುಡನಾದ ಧೃತರಾಷ್ಟ್ರನಿಗೂ ದಿವ್ಯ ದೃಷ್ಟಿಯನ್ನು ನೀಡಿ ತನ್ನ ವಿಶ್ವರೂಪ ದರ್ಶನವನ್ನು ಶ್ರೀಕೃಷ್ಣನು ಮಾಡಿಸಿದ್ದುಂಟು. ಶಾಂತಿಯ ಉಪದೇಶವನ್ನು ನೀಡಿದ ಶ್ರೀಕೃಷ್ಣನನ್ನು ಬಂಧಿಸಲು ದುರ್ಯೋಧನಾದಿಗಳು ಹವಣಿಸಿದಾಗ ಭೀಷ್ಮ ಧೃತರಾಷ್ಟ್ರಾದಿ ಸಜ್ಜನವರ್ಗಕ್ಕೆ ಶ್ರೀಕೃಷ್ಣನ ವಿರಾಟ್ ರೂಪದ ದರ್ಶನವನ್ನು ಪಡೆಯುವ ಮಹಾಭಾಗ್ಯ ಒದಗಿತ್ತು. ಕೃಷ್ಣನ ಅನುಗ್ರಹದಿಂದ ಚಕ್ಷುಸ್ಸನ್ನು ಪಡೆದ ಧೃತರಾಷ್ಟ್ರನಂತೂ ಶ್ರೀಕೃಷ್ಣನ ದಿವ್ಯಮಂಗಲ ರೂಪಗಳನ್ನು ಕಂಡು ಆನಂದತುಂದಿಲನಾಗಿ ''ಕೃಷ್ಣ, ಈ ವಿಶ್ವರೂಪವನ್ನು ಉಪಸಂಹರಿಸಿದ ನಂತರ ನನ್ನನ್ನು ಮೊದಲಿನಂತೆ ಕುರುಡನನ್ನಾಗಿಸು. ಪರಮಕಲ್ಯಾಣವಾದ ನಿನ್ನ ಈ ರೂಪವನ್ನು ಕಂಡ ಕಣ್ಣುಗಳಿಂದ ಜಗತ್ತಿನ ಅಭದ್ರ ಪ್ರಾಕೃತ ರೂಪಗಳನ್ನು ನಾನು ಹೇಗೆ ನೋಡಲಿ? ಆದುದರಿಂದ ಮೊದಲಿನಂತೆ ಕುರುಡನಾಗಿರುವುದರಲ್ಲೇ ನನಗೆ ಆನಂದವಿದೆ'' ಎಂದು ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತಾನೆ. ಜೀವನದಲ್ಲಿ ಶ್ರೀಕೃಷ್ಣನ ವಿಶ್ವರೂಪವನ್ನು ಹೊರತು ಬೇರೆ ಯಾವ ಪ್ರಾಪಂಚಿಕ ಪದಾರ್ಥವನ್ನೂ ಒಮ್ಮೆಯೂ ನೋಡದ ಈ ಕುರುಡ ಭಕ್ತನೇ ಪರಮ ಧನ್ಯನೆಂದು ನಮಗನಿಸುತ್ತದೆ.

ಶ್ರೀಕೃಷ್ಣನ ವಿಶ್ವಂಭರ ರೂಪವನ್ನು ಕಂಡ ಅರ್ಜುನನು ಹರ್ಷಪುಲಕಿತನಾಗುವನು. ಸಾವಿರ ಸೂರ್ಯರು ಒಮ್ಮೆಲೆ ಗಗನದಲ್ಲಿ ಉದಯಿಸಿದಂತಹ ಅದ್ಭುತ ಪ್ರಭೆಯು ಸುತ್ತಲೂ ಹರಡಿದೆ. ಎಲ್ಲಿ ನೋಡಿದರೂ ಪರಮಾತ್ಮನ ಮುಖಕಮಲಗಳು ಗೋಚರಿಸುತ್ತಿದ್ದರೆ ಸುತ್ತಲೂ ಪರಮಾತ್ಮನ ಕಣ್ಣುಗಳು ಜಗತ್ತಿನ ಕಣಕಣಗಳನ್ನೂ ಪರೀಕ್ಷಿಸುತ್ತಿವೆ. ಅವನ ಸಹಸ್ರಾರು ಕರಚರಣಗಳು ಜಗತ್ತನ್ನೆಲ್ಲಾ ಪಸರಿಸಿ ನಿಂತಿವೆ. ವಿಶ್ವತಶ್ಚಕ್ಷುವೂ ವಿಶ್ವತೋಮುಖನೂ ಆದ ಪರಮಾತ್ಮನಲ್ಲಿ ಭೂತಭವಿಷ್ಯದ್ ವರ್ತಮಾನಗಳೆಲ್ಲವನ್ನೂ ಅರ್ಜುನನು ಕಂಡನು.

**ತತ್ರೈಕಸ್ಥಂ ಜಗತ್ ಕೃತ್ಸ್ನಂ ಪ್ರವಿಭಕ್ತಮನೇಕಧಾ ।** (11.13)

ಅನಂತ ವೈವಿಧ್ಯಪೂರ್ಣವಾದ ಜಗತ್ತೆಲ್ಲವೂ ಕ್ರೋಡೀಕೃತವಾಗಿ ಅಲ್ಲಿದೆ. ಅರ್ಜುನನಿಗೆ ಪರಮಾತ್ಮನ ದೇಹದಲ್ಲಿ ಸಮಗ್ರವಿಶ್ವದ ದರ್ಶನವಾಗುವುದು. ವಾಯು, ಯಮ, ಅಗ್ನಿ, ಬ್ರಹ್ಮ, ರುದ್ರ ಮುಂತಾದ ಸಕಲ ದೇವತೆಗಳೂ ಪರಮಾತ್ಮನ ಆಶ್ರಯದಲ್ಲಿ ಅವನ ದೇಹದಲ್ಲಿ ನೆಲೆಸಿರುವುದನ್ನೂ ಅರ್ಜುನನು ನೋಡುವನು. ಹೀಗೆ ಸರ್ವ ಜಡವಸ್ತುಗಳಿಗೂ ಸಕಲ ಪ್ರಾಣಿಗಳಿಗೂ ಸಮಸ್ತ ದೇವತೆಗಳಿಗೂ ಆಶ್ರಯನೆನಿಸಿ ಅವೆಲ್ಲವುಗಳ ಪ್ರವರ್ತನೆಗಾಗಿ ಅನಂತ ರೂಪಗಳನ್ನು ಧರಿಸಿದ ಈ ವಿಶ್ವರೂಪಿಯಾದ ಪರಮಾತ್ಮನನ್ನು ಕಂಡು ಹರ್ಷವಿಭ್ರಾಂತನಾದ ಅರ್ಜುನನು ವಿಸ್ಮಯಭರಿತನಾಗಿ ಭಕ್ತಿಪರವಶತೆಯಿಂದ ನಾನಾರೀತಿಯಲ್ಲಿ ಸ್ತುತಿಸುವನು.

***

## ್ರೀತತ್ತ್ವದ ಉಪಾಸನೆ

ಪರಮಾತ್ಮನ ಭಕ್ತಿ ಹಾಗೂ ಅವನ ಉಪಾಸನೆಯಿಂದಲೇ ಮುಕ್ತಿ ಎಂಬುದು ಈವರೆಗಿನ ಕ್ತಿಯೋಗದ ವಿಸ್ತೃತನಿರೂಪಣೆಯಿಂದ ಸ್ಪಷ್ಟವಾಗಿದೆ. ಆದರೂ ಪರಮಾತ್ಮನ ಉಪಾಸನೆಯ ಬದಲು ಜಗತ್ತಿನ ಮೂಲಕಾರಣವಾದ ಜಡಪ್ರಕೃತಿಯ ಅಭಿಮಾನಿಯಾದ ಚಿತ್‌ಪ್ರಕೃತಿ ಎನಿಸಿರುವ ಶ್ರೀತತ್ತ್ವದ ಉಪಾಸನೆಯಿಂದಲೂ ಮುಕ್ತಿಯು ದೊರೆಯಬಹುದೇ? ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಪರಮಪುರುಷನಾದ ಶ್ರೀನಾರಾಯಣನೂ ಜಗನ್ಮಾತೆಯೂ ಮಂಗಲ ದೇವತೆಯೂ ಆದ ಲಕ್ಷ್ಮೀದೇವಿಯೂ ಇವರಿಬ್ಬರೂ ಸಮಾನವ್ಯಾಪ್ತಿಯುಳ್ಳ ನಿತ್ಯಮುಕ್ತರಾದ ಜಗತ್ತಿನ ಪರತತ್ತ್ವಗಳೆನಿಸಿದ್ದಾರೆ. ಇವರಿಬ್ಬರಲ್ಲಿ ಯಾರ ಉಪಾಸನೆಯಿಂದಲೂ ಮುಕ್ತಿಯನ್ನು ಪಡೆಯಬಹುದೆಂಬ ಶಂಕೆಯು ಮೂಡುವುದು ಸಹಜವಾಗಿದೆ. ಅದರಲ್ಲಿಯೂ ಜಗತ್ತಿನ ತಂದೆಯಾದ ಶ್ರೀಹರಿಯನ್ನು ಪ್ರಸನ್ನಗೊಳಿಸುವುದಕ್ಕಿಂತ ಜಗನ್ಮಾತೆಯನ್ನು ಬೇಗನೆ ಒಲಿಸ ಬಹುದಾದುದರಿಂದ ಈ ಸುಲಭೋಪಾಯವನ್ನೇ ಏಕೆ ಅನುಸರಿಸಬಾರದು? ಎಂಬ ಭಾವನೆಯೂ ಸಹಜವಾಗಿ ಉಂಟಾಗುತ್ತದೆ. ಈ ಸಂದೇಹವನ್ನೇ ಅರ್ಜುನನೂ ಶ್ರೀಕೃಷ್ಣನಲ್ಲಿ ತೋಡಿಕೊಳ್ಳುತ್ತಾನೆ.

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥** (12.1)

ಅವ್ಯಕ್ತತತ್ತ್ವದ ಅರ್ಥಾತ್ ಶ್ರೀತತ್ತ್ವದ ಉಪಾಸನೆಯನ್ನು ಮಾಡಿದರೂ ಪರಮಾತ್ಮನ ಉಪಾಸನೆ ಮತ್ತು ಸಾಕ್ಷಾತ್ಕಾರವಿಲ್ಲದೆ ಮುಕ್ತಿಯನ್ನು ಸರ್ವಥಾ ಪಡೆಯಲು ಶಕ್ಯವಿಲ್ಲ. ತನ್ನನ್ನು ಉಪಾಸನೆ ಮಾಡಿದರೂ ಪರಮಪುರುಷನ ಆರಾಧನೆಯನ್ನು ಮಾಡುವ ವ್ಯಕ್ತಿಯಲ್ಲಿ ದೇವಿಯೂ ಪ್ರಸನ್ನಳಾಗುವುದಿಲ್ಲ. ದೇವಿಯ ಉಪಾಸನೆಯು, ಕ್ಲಿಷ್ಟವಾದ ಭಗವದುಪಾಸನೆಯ ಮಾರ್ಗವನ್ನು ಸುಲಭಗೊಳಿಸುವುದರಿಂದ ಮೋಕ್ಷಾರ್ಥಿಗಳು ಅದನ್ನು ಸ್ವಾಗತಿಸಬಹುದಾದರೂ ಅದರಿಂದಲೇ ಮುಕ್ತಿಯನ್ನು ಪಡೆಯಲು ಸಾಧ್ಯವಿಲ್ಲ. ಆದುದರಿಂದ ಚಿತ್‌ಪ್ರಕೃತಿಯನ್ನು ಉಪಾಸಿಸಿ ಅದರ ಮೂಲಕವಾಗಿ ಪರಮಪುರುಷನ ಉಪಾಸನೆಯನ್ನು ಗೈಯುವ ಈ ಬಳಸು ದಾರಿಯನ್ನು ಅನುಸರಿಸುವುದಕ್ಕಿಂತ ನೇರವಾಗಿ ತನ್ನನ್ನೇ ಆರಾಧಿಸುವ ಸುಲಭ ಮಾರ್ಗವನ್ನೇ ಹಿಡಿಯುವಂತೆ ಶ್ರೀಕೃಷ್ಣನು ಉಪದೇಶಿಸುವನು.

**ಕ್ಲೇಶೋಽಧಿಕತರಸ್ತೇಷಾಮ್ ಅವ್ಯಕ್ತಾಸಕ್ತಚೇತಸಾಮ್ ।** (12.5)

ಜಗತ್ತಿನ ತಂದೆ ತಾಯಂದಿರಾದ ಪರಮಾತ್ಮ ಮತ್ತು ಚಿತ್‌ಪ್ರಕೃತಿ ಇವೆರಡೂ ಪರತತ್ತ್ವಗಳನ್ನು ಚಿಂತಿಸಿಕೊಂಡು ಲಕ್ಷ್ಮೀಪತಿಯಾದ ಶ್ರೀಹರಿಯ ಪೂಜೋಪಾಸನೆಗಳಿಂದಲೇ ಮೋಕ್ಷಪದವಿಯನ್ನು ಪಡೆಯಲು ಪ್ರಯತ್ನಿಸುವುದು ಸರಿಯಾದ ಹಾಗೂ ಸುಲಭವಾದ ಮಾರ್ಗವಾಗಿದೆ. ಒಂದು

ದೃಷ್ಟಿಯಿಂದ ನಾವೆಲ್ಲರೂ ಲಕ್ಷ್ಮಿಯ ಆರಾಧಕರೇ ಎಂದೆನ್ನಬಹುದು. ಪರಮಾತ್ಮನನ್ನು ಮರೆತು ಜೀವನವಿಡೀ ಲಕ್ಷ್ಮಿಯ ಅರ್ಥಾತ್ ಸಂಪತ್ತಿನ ಧ್ಯಾನದಲ್ಲಿಯೇ ನಾವು ಮುಳುಗಿದ್ದೇವೆ. ಆದರೆ ದೇವನನ್ನು ಮರೆತು ಬರೇ ಸಂಪತ್ತಿನ ಚಿಂತನದಲ್ಲೇ ತಲ್ಲೀನರಾದ ನಮಗೆ ಸಿರಿದೇವಿಯು ಒಲಿದಾಳೆಯೆ? ಸಿರಿಯೊಡೆಯನನ್ನು ತೊರೆದ ನಮ್ಮಿಂದ ಸಿರಿಯೂ ದೂರವಿರುವುದು ಸಹಜವೇ ಆಗಿದೆ.

**ವಿಷ್ಣುನಾ ಸಹಿತಾ ಧ್ಯಾತಾ ಸಾ ಹಿ ತುಷ್ಟಿಂ ಪರಾಂ ವ್ರಜೇತ್ ।**

ವಿಷ್ಣುವಿನ ಜೊತೆಗೆ ಪೂಜಿಸಿದರೇನೇ ಲಕ್ಷ್ಮಿಗೆ ಪರಮ ಸಂತೋಷವಂತೆ. ಪರಮಾತ್ಮನನ್ನು ಮರೆತು ಜೀವನವಿಡೀ ಬರೇ ಸಿರಿ ಸಂಪತ್ತುಗಳ ಪೂಜೆಯನ್ನೇ ನಡೆಸುವ ನಾವು ಭೂತಿ ಮತ್ತು ಭಗವಂತ ಇವೆರಡನ್ನೂ ಕಳೆದುಕೊಳ್ಳುತ್ತೇವೆ. ಅಂತೂ ಲಕ್ಷ್ಮೀ ಉಪಾಸನೆಗಿಂತಲೂ ಲಕ್ಷ್ಮೀನಾರಾಯಣನ ಉಪಾಸನೆಯೇ ಜೀವನದ ಪರಮಪುರುಷಾರ್ಥವನ್ನು ಪಡೆಯುವ ಶ್ರೇಷ್ಠವಾದ ಸಾಧನವೆಂದು ಈ ಭಾಗದ ತಾತ್ಪರ್ಯವಾಗಿದೆ.

## ಸಾಧಕನಲ್ಲಿ ಶೀಲಸಂವರ್ಧನೆ

ಸಾಧಕನು ನಿಷ್ಕಾಮಕರ್ಮಾಚರಣ, ವೈರಾಗ್ಯ ಮತ್ತು ಪ್ರಯತ್ನಗಳ ಜೊತೆಗೆ ತನ್ನಲ್ಲಿ ಸದ್ಗುಣಗಳನ್ನು ಬೆಳೆಸಿಕೊಳ್ಳಲು ಪ್ರಯತ್ನಿಸಬೇಕು. ನಮ್ಮಲ್ಲಿ ಸದ್ಗುಣಗಳನ್ನು ವಿಕಸಿತಗೊಳಿಸುವುದೂ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಆವಶ್ಯಕವಾಗಿದೆ. ಮುಕ್ತಿಯನ್ನು ಹೊಂದಲಿರುವ ಆತ್ಮರೆಲ್ಲರೂ ಸ್ವತಃ ಸದ್ಗುಣರೂಪಿಗಳೇ ಆಗಿರುವರು. ಅಜ್ಞಾನದಿಂದ ಆವೃತವಾದ, ಆದರೆ ಸ್ವಾಭಾವಿಕವಾಗಿ ಸದ್ಗುಣಾತ್ಮಕವಾದ ತಮ್ಮ ಚೈತನ್ಯವನ್ನು ಆವಿಷ್ಕಾರಗೊಳಿಸುವುದೇ ಮುಕ್ತಿ ಎಂದು ಶಾಸ್ತ್ರಗಳಲ್ಲಿ ಹೇಳಿದೆ. ಹೀಗೆ ನಮ್ಮ ಮೂಲಭೂತ ಸದ್ಗುಣಗಳ ಅಭಿವ್ಯಕ್ತಿಯಾಗಲು ಅದಕ್ಕೆ ಅನುಕೂಲವೆನಿಸುವ ಪ್ರವೃತ್ತಿಗಳೇ ನಮ್ಮ ಜೀವನದಲ್ಲಿ ವ್ಯಾಪಿಸಿಕೊಂಡಿರಬೇಕು. ಆತನ ಸ್ವಾಭಾವಿಕ ಧರ್ಮಗಳೆನಿಸಿದ ಸತ್ಯ, ಜ್ಞಾನ, ದಯೆ, ತ್ಯಾಗ ಮುಂತಾದ ಸ್ವರೂಪ ಸದ್ಗುಣಗಳಿಗೆ ತೀರ ವ್ಯತಿರಿಕ್ತವೂ ವಿರೋಧಿಯೂ ಆದ ಪ್ರವೃತ್ತಿಯನ್ನು ನಮ್ಮಲ್ಲಿ ರೂಢಿಸಿಕೊಂಡಲ್ಲಿ ನಮ್ಮ ಆತ್ಮವು ಇನ್ನೂ ಹೆಚ್ಚು ಘನವಾದ ಆವರಣಕ್ಕೆ ಒಳಪಟ್ಟಂತಾಗುವುದು. ಅಸತ್ಯ, ಕ್ರೌರ್ಯ, ಹಿಂಸೆ, ವಂಚನೆ ಮೊದಲಾದ ದುರ್ಗುಣಗಳು ಆತ್ಮಸ್ವರೂಪಕ್ಕೆ ತೀರ ವಿಸಂಗತಗಳಾದ ವಿರೋಧಿ ಭಾವಗಳಾಗಿವೆ. ಇಂತಹ ದುರ್ಗುಣಗಳಿಗೆ ನಮ್ಮ ಜೀವನದಲ್ಲಿ ಅವಕಾಶ ದೊರೆಯುವುದರಿಂದ ನಮ್ಮ ಆತ್ಮವನ್ನು ಕುಗ್ಗಿಸಿ ಅಜ್ಞಾನ ವಿಕೃತಿಗಳ ವಿಜೃಂಭಣೆಯನ್ನು ಇನ್ನೂ ಹೆಚ್ಚಿಸಿದಂತಾಗುತ್ತದೆ.

ಅದರಂತೆ ನಮ್ಮಲ್ಲಿ ದುರ್ಗುಣಗಳು ಹೆಚ್ಚಿದರೆ ಅನಂತಗುಣರೂಪಿಯಾದ ಭಗವಂತನ ಧ್ಯಾನ ಸಾಕ್ಷಾತ್ಕಾರಗಳನ್ನು ಪಡೆಯುವ ಅರ್ಹತೆಯನ್ನೇ ನಾವು ಕಳೆದುಕೊಂಡಂತಾಗುವುದು. ನಮ್ಮ

ನಿತ್ಯವ್ಯವಹಾರಗಳೆಲ್ಲವೂ ದುರ್ಗುಣ ದುರಾಚಾರಗಳಿಂದ ದೂಷಿತವಾಗಿದ್ದರೆ, ಸುಗುಣಮೂರ್ತಿಯಾದ ಪರಮಾತ್ಮನ ಸಾಮ್ಯಪ್ರಾಪ್ತಿಯೆನ್ನಲಾಗುವ. ಮುಕ್ತಿಯನ್ನು ಪಡೆಯಲು ನಾವು ಹೇಗೆ ಅರ್ಹರಾಗಬಲ್ಲೆವು? ಆದುದರಿಂದ ನಮ್ಮ ಮೂಲಭೂತ ಸ್ಥಿತಿಯೆನಿಸಿದ ನಮ್ಮ ಆತ್ಮದ ಸ್ವಾಭಾವಿಕ ಗುಣಧರ್ಮಗಳಿಗೂ ನಮ್ಮ ಪರಮಪ್ರಾಪ್ಯ ಸ್ಥಾನವಾಗಿರುವ ಪರಮಾತ್ಮ ಸ್ವರೂಪಗುಣಗಳಿಗೂ ತೀರ ವಿರೋಧಿಯಾದ ಮನೋಧರ್ಮಗಳಿಗೆ ನಮ್ಮ ಜೀವನದಲ್ಲಿ ಸರ್ವಥಾ ಅವಕಾಶವಿರಬಾರದು. ಇದರಿಂದ ಭಗವಂತನಿಂದ ನಾವು ಇನ್ನೂ ಹೆಚ್ಚು ದೂರ ಉಳಿಯುವ ಮತ್ತು ಆತ್ಮವಿಕಾಸಕ್ಕೆ ಅಡಚಣೆಯಾಗುವ ದುರಂತ ಸನ್ನಿವೇಶವು ಒದಗುವುದು. ಆದುದರಿಂದ ಅನಂತ ಗುಣಮೂರ್ತಿಯಾದ ಪರಮಾತ್ಮನ ಸಾಕ್ಷಾತ್ಕಾರದಿಂದ ನಮ್ಮಲ್ಲಿಯೇ ಸಹಜವಾಗಿ ಹುದುಗಿರುವ ಚೇತನಾತ್ಮಕ ಸದ್ಗುಣಪ್ರಭೆಗಳಿಂದ ನಾವು ಬೆಳಗಬೇಕಾದರೆ ನಮ್ಮ ಲೌಕಿಕ ಜೀವನವು ನೀತಿಶೀಲಸಂಪನ್ನವಾಗಿರಬೇಕು. ನಮ್ಮ ವ್ಯವಹಾರಗಳೆಲ್ಲ ಸದ್ಗುಣಮಯವಾಗಿರಬೇಕು. ಸಾಧಕನು ತನ್ನಲ್ಲಿ ಅಳವಡಿಸಿಕೊಳ್ಳಬೇಕಾದ ಈ ಗುಣಗಳ ಯಾದಿಯನ್ನು ಹನ್ನೆರಡನೆ ಅಧ್ಯಾಯದ ಕೊನೆಯಲ್ಲಿ ಬರುವ,

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**

ಮುಂತಾದ ಶ್ಲೋಕಗಳಲ್ಲಿ ನಾವು ಕಾಣಬಹುದು. ಅದ್ವೇಷ, ಮೈತ್ರಿ, ಕರುಣೆ, ನಿರ್ಮಮತೆ, ನಿರಹಂಕಾರ, ಸಹನೆ, ಅಲಂಬುದ್ಧಿ ಮೊದಲಾದವುಗಳೇ ನಮ್ಮಲ್ಲಿ ಅಳವಡಿಸಿಕೊಳ್ಳಬೇಕಾದ ಸದ್ಗುಣಗಳಾಗಿವೆ. ಭಕ್ತನಲ್ಲಿ ಈ ಗುಣಗಳು ತುಂಬಿರುತ್ತವೆ. ಇಂತಹ ಗುಣಶಾಲಿಯೇ ತನಗೆ ಅತ್ಯಂತ ಪ್ರೀತಿಪಾತ್ರನೆಂದು ಸ್ವಾಮಿಯು ಅರುಹಿದ್ದಾನೆ. ಲೋಕದ ಯಾವುದೇ ವ್ಯವಹಾರದಿಂದ ಉದ್ವಿಗ್ನನಾಗದೆ, ಯಾರಿಗೂ ಹೆದರದೆ ಭಕ್ತನು ತನ್ನ ಕರ್ತವ್ಯವನ್ನು ನಿರ್ವಹಿಸುತ್ತಾನೆ. ಅದರಂತೆ ಅವನಿಂದಲೂ ಜನರಿಗೆ ಯಾವ ಭಯ, ಅಪಾಯ ಉಪದ್ರವಗಳೂ ಇಲ್ಲ. ಸರ್ವರಿಗೂ ಅಭಯ ನೀಡಿ ತಾನೂ ನಿರ್ಭಯನಾಗಿ, ಉಳಿದವರೂ ನಿರುದ್ವಿಗ್ನರಾಗಿರುವಂತಹ ಸನ್ನಿವೇಶವನ್ನು ಭಕ್ತನು ನಿರ್ಮಿಸುತ್ತಾನೆ. ಆತನು 'ಸರ್ವಾರಂಭ ಪರಿತ್ಯಾಗಿ' ಅಂದರೆ ಪರಮಾತ್ಮ ಪ್ರೀತಿಕರವಾಗದ ಕೇವಲ ಸ್ವಫಲಾಪೇಕ್ಷೆಯ ಕರ್ಮಗಳಿಂದ ದೂರವಾಗಿರುತ್ತಾನೆ. ಅವನಿಗೆ ಸುಖದುಃಖಗಳೆರಡರಲ್ಲಿಯೂ ಸಮದೃಷ್ಟಿ ಇರುತ್ತದೆ. ಸುಖದಂತೆ ದುಃಖವೂ ಅವನಿಗೆ ಅಪೇಕ್ಷಿತವೇ. ತನ್ನ ದುಷ್ಕೃತ್ಯಗಳ ಫಲರೂಪವಾದ ದುಃಖತಾಪಗಳನ್ನು ಅನುಭವಿಸಿ ತನ್ನ ಪಾತಕಗಳನ್ನು ಪರಿಹರಿಸಿಕೊಳ್ಳಲು ಭಕ್ತನು ತವಕಿಸುತ್ತಾನೆ. ತನ್ನ ಆತ್ಮಶುದ್ಧಿಗೆ ಸಹಾಯಕವೆಂದು ದುಃಖದ ಸನ್ನಿವೇಶವನ್ನು ಸಂತೋಷ ಸಮಾರಂಭವೆಂಬಂತೆ ಉತ್ಸಾಹದಿಂದ ಆತನು ಸ್ವಾಗತಿಸುತ್ತಾನೆ. ಅದರಂತೆ ಭಕ್ತನು ದುಃಖದಂತೆ ಸುಖವನ್ನು ಉಪೇಕ್ಷಾಬುದ್ಧಿಯಿಂದ ನೋಡುವನು. ದುಃಖವು ಕ್ಲೇಶರೂಪವಾಗಿರುವಂತೆ ಸುಖವೂ ಅನಂತ ಕ್ಲೇಶಕರವಾಗಿದೆ. ಒಂದು ಸುಖದ ತುಣುಕಿಗಾಗಿ ಮಾನವರು ಅದೆಷ್ಟು ದೈನ್ಯ ಸಂಕಟಗಳನ್ನು ಅನುಭವಿಸುತ್ತಾನೆ! ಸಮಚಿತ್ತನಾದ ಭಕ್ತನ ದೃಷ್ಟಿಯಲ್ಲಿ ವೈಷಯಿಕ ಸುಖ ಹಾಗೂ

ಸಾಂಸಾರಿಕ ಕ್ಲೇಶ ಇವೆರಡಕ್ಕೂ ಒಂದೇ ಬೆಲೆ. ಎರಡನ್ನೂ ಹೇಯಭಾವನೆಯಿಂದಲೇ ಆತನು ನಿರೀಕ್ಷಿಸುತ್ತಿರುವುದರಿಂದ ಆತನು ಸಮದುಃಖನೆನಿಸುತ್ತಾನೆ. ಸ್ತುತಿನಿಂದೆಗಳೆರಡರಲ್ಲಿಯೂ ನಿರ್ವಿಕಾರನಾಗಿರುವುದೂ ಒಂದು ಅಪೂರ್ವವಾದ ಮಹತ್ವದ ಗುಣವಾಗಿದೆ. ಉಳಿದ ಎಲ್ಲಾ ಗುಣಗಳಿದ್ದರೂ ಸ್ತುತಿನಿಂದೆಗಳಿಂದ ವಿಕಾರವಶನಾಗದ ವ್ಯಕ್ತಿಯು ದೊರೆಯುವುದು ವಿರಳ. ಸರ್ವಸಂಗಪರಿತ್ಯಾಗಿಗಳಿಗೂ ನಿಸ್ಪೃಹ ಸೇವಾಜೀವಿಗಳಿಗೂ ಸ್ತುತಿಯ ಮೋಹವನ್ನು ಮೀರಿ ನಿಲ್ಲಲಾಗುವುದಿಲ್ಲ. ತನ್ನ ತ್ಯಾಗ ಸೇವೆಗಳನ್ನು ಸ್ತುತಿಸುವಾಗ ಎಂತಹ ತ್ಯಾಗಿ ತಪಸ್ವಿಯ ಮುಖವೂ ಅರಳುತ್ತದೆ. ಫಲಾಶೆ ಇಲ್ಲದೆ ಕೇವಲ ಹರಿ ಪ್ರೀತಿಯ ಅಪೇಕ್ಷೆಯಿಂದ ಸ್ವಕರ್ತವ್ಯಬುದ್ಧಿಯಿಂದ ನಡೆಯುವ ಕರ್ಮಯೋಗಿಯಾದ ಭಕ್ತನಿಗೆ ಸ್ತುತಿನಿಂದೆಗಳೆರಡೂ ಸಮಾನವೇ ಆಗುವುವು. ಇಂತಹ ದಿವ್ಯ ಸದ್ಗುಣಗಳನ್ನೆಲ್ಲ ಪಡೆಯಲು ಸಾಧಕನು ಪ್ರಯತ್ನಿಸಿದಲ್ಲಿ ಅಧ್ಯಾತ್ಮನಿಧಿಯು ಅವನ ಹಸ್ತಗತವಾಗುವುದರಲ್ಲಿ ವಿಲಂಬವಾಗುವುದಿಲ್ಲ.

**ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥** (12.20)

***

## ಜ್ಞೇಯ ಮತ್ತು ಜಿಜ್ಞಾಸುಗಳ ಗುಣಧರ್ಮಗಳು

**ಪ್ರಕೃತಿಂ ಪುರುಷಂ ಚೈವ ಕ್ಷೇತ್ರಂ ಕ್ಷೇತ್ರಜ್ಞಮೇವ ಚ ।**
**ಏತದ್ವೇದಿತುಮಿಚ್ಛಾಮಿ ಜ್ಞಾನಂ ಜ್ಞೇಯಂ ಚ ಕೇಶವ ॥** (13.1)

ಈ ಅಧ್ಯಾಯದಲ್ಲಿ ಕ್ಷೇತ್ರ ಕ್ಷೇತ್ರಜ್ಞರನ್ನು ನಿರೂಪಿಸಿ ನಂತರ ಜ್ಞೇಯ ಮತ್ತು ಜ್ಞಾನವನ್ನು ಪಡೆಯಲು ನಮ್ಮಲ್ಲಿ ಇರಬೇಕಾದ ಅರ್ಹತೆಗಳು – ಇವುಗಳನ್ನು ವಿವರಿಸಲಾಗಿದೆ.

ಇಡೀ ವಿಶ್ವಕ್ಕೆ ಆತ್ಮದಂತಿರುವ ಸರ್ವವ್ಯಾಪಕನಾದ ಪರಮಾತ್ಮನೇ ಜ್ಞೇಯನು. ಜಗತ್ತಿನ ಮುಖ್ಯವಾಗಿ ತಿಳಿಯಬೇಕಾದ ವಸ್ತುವು ಈತನೆ. ಹನ್ನೆರಡು ವರ್ಷಗಳ ಗುರುಕುಲವಾಸದ ನಂತರ ಮನೆಗೆ ಹಿಂತಿರುಗಿದ ಶ್ವೇತಕೇತುವಿನ ಮುಖದಲ್ಲಿ ಅವನ ತಂದೆಗೆ ಜ್ಞಾನದ ವರ್ಚಸ್ಸು ಲಕ್ಷಣಗಳೇನೂ ಕಾಣಲೊಲ್ಲವು. ಅಲ್ಲಿ ಸ್ತಬ್ಧತೆ ಅಹಂಕಾರಗಳನ್ನೇ ಗುರುತಿಸಿದ ತಂದೆ ಉದ್ದಾಲಕನು ಖಿನ್ನನಾಗಿ–

**ಉತ ತಮಾದೇಶಮಪ್ರಾಕ್ಷ್ಯಃ । ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮ್ ॥**
–ಛಾಂದೋಗ್ಯೋಪನಿಷತ್

ಯಾವ ಒಂದು ವಸ್ತುವಿನ ಜ್ಞಾನದಿಂದ ಎಲ್ಲವೂ ತಿಳಿಯಲ್ಪಡುವುದೋ ಆ ವಸ್ತುವಿನ ಜ್ಞಾನವನ್ನು ಪಡೆದಿರುವೆಯಾ? ಎಂದು ಕೇಳುವನು. ಶ್ವೇತಕೇತುವಿಗೆ ತಂದೆಯ ಪ್ರಶ್ನೆಯನ್ನು

ಉತ್ತರಿಸಲಾಗಲಿಲ್ಲ. ಒಂದರ ತಿಳಿವಳಿಕೆಯಿಂದ ಎಲ್ಲವನ್ನೂ ತಿಳಿಯಬಹುದೆಂಬ ತಂದೆಯ ಮಾತು ಅವನಿಗೆ ಒಂದು ಒಗಟಾಗಿ ತೋರಿತು. ''ಪರಮಾತ್ಮನ ಜ್ಞಾನವೇ ಅಂತಹುದು. ಅವನ ಜ್ಞಾನದಿಂದ ನಾವು ಇಡೀ ಜಗತ್ತನ್ನು ತಿಳಿದಂತೆಯೇ. ಮಾವಿನ ಹಣ್ಣನ್ನು ತಿನ್ನುವವನು ಅದರ ಸಿಪ್ಪೆ ಗೊರಟುಗಳನ್ನು ಜಗಿಯಬೇಕಾಗಿಲ್ಲ. ಹಣ್ಣಿನ ರಸಕವಲವನ್ನು ಆಸ್ವಾದಿಸಿದರೆ ಇಡೀ ಹಣ್ಣನ್ನು ತಿಂದಂತೆ. ಜಗತ್ತಿನ ಸಾರವಸ್ತುವಾದ ಪರಮಾತ್ಮನನ್ನು ಅರಿತರೆ ಉಳಿದ ಪ್ರಪಂಚವನ್ನು ನಾವು ಬೇರೆ ತಿಳಿಯಬೇಕೇ? ಪ್ರಪಂಚದ ಸಾರಸರ್ವಸ್ವವೆನಿಸಿದ ಸರ್ವೋತ್ತಮನಾದ ಪರಮಾತ್ಮನ ಜ್ಞಾನವನ್ನು ಪಡೆಯದೆ ಸಿಪ್ಪೆಯಂತಿರುವ ಈ ತುಚ್ಛ ಜಗತ್ತಿನ ಪರಿಜ್ಞಾನದಿಂದಲೇ ಗರ್ವಿತನಾಗಿ ನೀನಿಲ್ಲಿಗೆ ಬಂದಿರುವಿ. ಜ್ಞಾನದ ಪರಿಣತಿಯಾದ ವಿನಯಪ್ರವೃತ್ತಿಯು ನಿನ್ನ ಮುಖದಲ್ಲಿ ಕಾಣಿಸುವುದಿಲ್ಲ.'' ಎಂದು ಉದ್ದಾಲಕನು ಉಪದೇಶ ನೀಡಿ ಅವನ ಕಣ್ಣು ತೆರೆಸುತ್ತಾನೆ. ಅಂತೂ ಪರಮಾತ್ಮನೇ ಜಗತ್ತಿನಲ್ಲಿ ಮುಖ್ಯವಾದ ಜ್ಞೇಯ ವಸ್ತುವೆಂದು ಇದರಿಂದ ವಿಶದವಾಗುವುದು. ಎಲ್ಲೆಡೆಗಳಲ್ಲಿಯೂ ತನ್ನ ಅಪ್ರಾಕೃತ ಸರ್ವೇಂದ್ರಿಯಗಳನ್ನು ಹರಡಿಸಿ ನಮ್ಮೆಲ್ಲರ ಬಾಹ್ಯ ಆಂತರಗಳೆಲ್ಲವನ್ನೂ ಪೂರ್ತಿಯಾಗಿ ಅರಿತಿರುವ, ಪ್ರಪಂಚದ ಒಳಗೂ ಹೊರಗೂ ವ್ಯಾಪಿಸಿರುವ, ನಮ್ಮಿಂದ ಬಹು ದೂರದಲ್ಲಿದ್ದರೂ ನಮ್ಮ ಸನಿಹದಲ್ಲಿಯೇ ಇರುವ, ಪ್ರಕೃತಿ ಮತ್ತು ಅದರ ಗುಣಗಳಿಗೆ ಅತೀತನೂ ದಿವ್ಯ ಕಲ್ಯಾಣಗುಣಾಕರನೂ ಆದ, ವಿಶ್ವರೂಪಿಯಾದ ಪರಬ್ರಹ್ಮನ ಜ್ಞಾನವನ್ನು ಸಂಪಾದಿಸುವುದೇ ನಮ್ಮ ಜೀವನದ ಪರಮ ಲಕ್ಷ್ಯವಾಗಿರಬೇಕು.

ಈ ಜ್ಞಾನವನ್ನು ಸಂಪಾದಿಸಲು ಕೆಲವು ಮೂಲಭೂತ ಅರ್ಹತೆಗಳು ನಮ್ಮಲ್ಲಿರಬೇಕಾಗಿದ್ದು ಅವುಗಳ ಕಡೆಗೆ ನಾವು ವಿಶೇಷವಾಗಿ ಗಮನಹರಿಸಬೇಕು. ಆತ್ಮಶ್ಲಾಘನೆ, ಹಿಂಸೆ ದಂಭಗಳಿಲ್ಲದ ವ್ಯವಹಾರ, ಕ್ಷಮಾವೃತ್ತಿ, ಪ್ರಾಮಾಣಿಕತನ, ಗುರುಶುಶ್ರೂಷೆ, ಶುಚಿತ್ವ, ಆತ್ಮನಿಗ್ರಹ, ವೈಷಯಿಕ ಪದಾರ್ಥಗಳಲ್ಲಿ ಅನಾಸಕ್ತಿ, ವಿನಯ, ಪ್ರಪಂಚದಲ್ಲಿರುವ ದೋಷ ನ್ಯೂನತೆಗಳನ್ನು ಅರಿಯುವ ವಿವೇಕದೃಷ್ಟಿ, ಮಾನಸಿಕ ಸಂತುಲನ, ಪರಮಾತ್ಮನಲ್ಲಿ ಅನನ್ಯ ಭಕ್ತಿ ಇವೇ ಮುಂತಾದ ಸದ್ಗುಣಗಳನ್ನು ಅಳವಡಿಸಿಕೊಂಡವನೇ ಜ್ಞಾನವನ್ನು ಪಡೆಯಬಲ್ಲನು.

ಆರ್ಜವ ಗುಣದಿಂದಲೇ ಸತ್ಯಕಾಮ ಜಾಬಾಲಿಯ ಅರ್ಹತೆಯನ್ನು ಅವನ ಗುರುವು ಗುರುತಿಸುತ್ತಾನೆ. ಪ್ರಪಂಚದ ಸಕಲ ಭೋಗಪದಾರ್ಥಗಳನ್ನು ಕೊಡಮಾಡಿದರೂ ಜ್ಞಾನದ ಮುಂದೆ ಅದೆಲ್ಲ ತುಚ್ಛವೆಂದು ಪರಿಗಣಿಸಿದ ಬಾಲ ನಚಿಕೇತನ ತ್ಯಾಗ ವೈರಾಗ್ಯಗಳಿಗೆ ಬೆರಗಾದ ಯಮನು ಸುಪ್ರಸನ್ನನಾಗಿ ಅವನಿಗೆ ಪರವಿದ್ಯೆಯನ್ನು ಉಪದೇಶಿಸುತ್ತಾನೆ. ತಾನು ಅನೇಕ ಕಷ್ಟ ನಿಷ್ಠುರಗಳನ್ನು ಅನುಭವಿಸಿದರೂ ಗುರುಗಳ ಆದೇಶವನ್ನು ಮೀರಬಾರದೆಂಬ ದೃಢನಿಷ್ಠೆಯಿಂದ ವರ್ತಿಸಿದ ಆರುಣಿ ಉಪಮನ್ಯುಗಳು ಆಚಾರ್ಯೋಪಾಸನದ ಬಲದಿಂದಲೇ ಸಕಲ ವಿದ್ಯೆಗಳನ್ನು ಪಡೆದರು. ಇಂದು ವಿದ್ಯೆಯ ಕ್ಷೇತ್ರದಲ್ಲಿ ಆಚಾರ್ಯೋಪಾಸನೆಯು ಸಂಪೂರ್ಣವಾಗಿ ಲುಪ್ತವಾಗಿದೆ. ಗುರುಗಳೇ ಶಿಷ್ಯರಿಗೆ ಹೆದರಿ ನಡೆಯುವಂತಹ ವಾತಾವರಣವು ಇಂದು

ವಿಶ್ವವಿದ್ಯಾಲಯಗಳಲ್ಲಿ ಏರ್ಪಟ್ಟಿದೆ. ಗುರುಶಿಷ್ಯರ ಸಂಬಂಧದಲ್ಲಿಯೂ ವ್ಯಾಪಾರೀವೃತ್ತಿಯು ಸೇರಿಕೊಂಡಿದೆ. ಗಿರಣಿ ಕಾರಖಾನೆಗಳಲ್ಲಿ ಮಾಲಿಕರು ಮತ್ತು ಕೆಲಸಗಾರರುಗಳಲ್ಲಿರುವಂತೆ ಇಂದು ಅಧ್ಯಾಪಕರ ಹಾಗೂ ವಿದ್ಯಾರ್ಥಿಗಳ ಸಂಬಂಧವು ರೂಪುಗೊಂಡಿದೆ ಎಂದು ಹೇಳಿದರೂ ತಪ್ಪಾಗದು.

ಜ್ಞಾನಾರ್ಥಿಗಳ ಅರ್ಹತೆಗಳಲ್ಲಿ ಒಂದಾಗಿ ಪರಿಗಣಿತವಾದ ಶುಚಿತ್ವವೂ ಕೇವಲ ಕಾಯಿಕವಲ್ಲ. ಆಂತರಿಕ ಶುಚಿತ್ವವೇ ಇಲ್ಲಿ ಪ್ರಧಾನವಾಗಿ ಪರಿಗ್ರಹಿಸಲ್ಪಟ್ಟಿದೆ. ಎಷ್ಟು ಸಾರಿ ನೀರಲ್ಲಿ ಮುಳುಗಿದರೂ ಎಷ್ಟು ಬಾರಿ ಮೃತ್ತಿಕಾಲೇಪವನ್ನು ಮಾಡಿಕೊಂಡರೂ ಮಾನಸಿಕ ನೈರ್ಮಲ್ಯವನ್ನು ಪಡೆಯದ ವ್ಯಕ್ತಿಯು ಜ್ಞಾನಕ್ಕೆ ಅಧಿಕಾರಿಯಾಗಲಾರ. ಆತ್ಮನಿಗ್ರಹಕ್ಕೆ ಬೈದರ ಶಿಷ್ಯನಾದ ಉತ್ತಂಕನು ಆದರ್ಶ ಉದಾಹರಣೆಯಾಗಿದ್ದಾನೆ. ಗುರುಗಳ ಅನುಪಸ್ಥಿತಿಯಲ್ಲಿ ಸುಂದರಿಯಾದ ಗುರುಪತ್ನಿಯ ವಿಲಾಸವಿಭ್ರಮಗಳಿಗೆ ಬಲಿಯಾಗದೆ ಆತ್ಮಸ್ಥೈರ್ಯವನ್ನು ಕಾಪಾಡಿಕೊಂಡ ಉತ್ತಂಕನು ಗುರುಗಳ ವಿಶೇಷ ಅನುಗ್ರಹವನ್ನು ಪಡೆಯುವನು. ದಂಭ ಅಹಂಕಾರಗಳಂತೂ ಜ್ಞಾನದ ಕಡು ವೈರಿಗಳು. ಎತ್ತರದ ಜಾಗಕ್ಕೆ ನೀರು ಹರಿಯಲಾರದು. ನೀರು ಹರಿಯಲು ತಗ್ಗಾದ ಸ್ಥಳವೇ ಬೇಕು. ಅಹಂಕಾರ ಔದ್ಧತ್ಯಗಳಿರುವಲ್ಲಿ ಜ್ಞಾನವು ಪ್ರವಹಿಸಲಾರದು. ವಿನಯದಿಂದ ನಮ್ರವಾದ ಅಂತಃಕರಣದೆಡೆಗೇ ಜ್ಞಾನದ ಪ್ರವಾಹವು ವೇಗದಿಂದ ಹರಿಯಬಲ್ಲದು. ತನ್ನ ಅಲ್ಪತೆಯನ್ನು ಅರಿತೂ ಅವಾಸ್ತವವಾಗಿ ತನ್ನ ಹೆಚ್ಚುಗಾರಿಕೆಯನ್ನು ಪ್ರದರ್ಶಿಸುವುದೇ ದಂಭವೆನಿಸುವುದು. ಈಗ ಎಲ್ಲೆಡೆಗಳಲ್ಲಿಯೂ ಇಂತಹ ಕೃತ್ರಿಮ ಜೀವನವನ್ನೇ ಕಾಣುತ್ತಿದ್ದೇವೆ. ಒಬ್ಬ ವ್ಯಕ್ತಿಯು ತನ್ನನ್ನು ತಿಳಿದುಕೊಂಡಿರುವ ಮಾನವು ಒಂದಾಗಿದ್ದರೆ ಉಳಿದವರು ಅವನನ್ನು ತಿಳಿದುಕೊಂಡಿರುವ ಸ್ವರೂಪವೇ ಬೇರೆ ಇರುತ್ತದೆ. ಆದರೆ ವಾಸ್ತವವಾದ ಅವನ ವ್ಯಕ್ತಿತ್ವವು ಇವೆರಡಕ್ಕಿಂತಲೂ ಭಿನ್ನವಾಗಿರುತ್ತದೆ. ಅಂತೂ ಸ್ವಾರ್ಥಸಾಧನೆಯ ಹೆಸರಿನಲ್ಲಾಗಲೀ ಶಿಷ್ಟಾಚಾರದ ರೂಪದಲ್ಲಾಗಲೀ ಈ ದಂಭವಂಚನೆಗಳ ಸಾಮ್ರಾಜ್ಯವೇ ಎಲ್ಲೆಡೆಗಳಲ್ಲಿಯೂ ಪಸರಿಸಿದೆ. ನಮ್ಮ ಈ ಮಾನಸಿಕ ವಿಕೃತಿಗಳ ವಿರುದ್ಧವಾಗಿ ಸಂತತವಾದ ಹೋರಾಟವನ್ನು ನಡೆಸಿ ಆತ್ಮಗುಣಗಳನ್ನು ಅಭಿವೃದ್ಧಿಗೊಳಿಸಿದಲ್ಲಿ ಮಾನವನ ಜೀವನದ ಪರಮೋದ್ದೇಶವೆನಿಸಿದ ಸುಜ್ಞಾನವನ್ನು ಹೊಂದಲು ನಾವು ಸಮರ್ಥರಾಗುವೆವು.

**ಕ್ಷೇತ್ರಕ್ಷೇತ್ರಜ್ಞಯೋರೇವಮ್ ಅಂತರಂ ಜ್ಞಾನಚಕ್ಷುಷಾ ।**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್ ॥** (13.35)

***

## ಜೀವನದಲ್ಲಿ ಗುಣತ್ರಯದ ಪ್ರಭಾವ

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।**
**ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥** (14.1)

ಪ್ರಕೃತಿಯು ತನ್ನ ಗುಣತ್ರಯದಿಂದ ಜೀವರ ಮೇಲೆ ಅನೇಕ ವಿಧದ ಪರಿಣಾಮವನ್ನು ಮಾಡುತ್ತದೆ. ಅದು ಮಾಡುವ ಪರಿಣಾಮವೂ ಒಂದೇ ರೀತಿ ಇರುವುದಿಲ್ಲ. ತಮೋಗುಣದ ಪ್ರಾಬಲ್ಯವು ಆಲಸ್ಯ, ಪ್ರಮಾದ, ವ್ಯಾಮೋಹ ಮೊದಲಾದ ದುರ್ಗುಣಗಳಿಗೆ ದಾರಿಯಾದರೆ, ಬಯಕೆ ಬವಣೆಗಳಿಂದಲೂ ಕೋಪ ತಾಪಗಳಿಂದಲೂ ಉದ್ರಿಕ್ತವಾದ ಜೀವನವೇ ರಜೋಗುಣದ ಕೊಡುಗೆಯಾಗಿದೆ. ಜ್ಞಾನ, ವಿವೇಕ, ಶೀಲಗಳ ಸೆಲೆಯಾದ ಸತ್ತ್ವಗುಣವೇ ನಮ್ಮ ಬಾಳಿನ ಬೆಳಕಾಗಿ ನಮ್ಮನ್ನು ಗುಣಾತೀತವಾದ ನಮ್ಮ ನೈಜಪೂರ್ಣತೆಯ ಕಡೆಗೆ ಒಯ್ಯುವ ಕೈದೀವಿಗೆಯಾಗಿದೆ. ರಜಸ್ಸು, ತಮಸ್ಸುಗಳನ್ನು ಮೆಟ್ಟಿ ನಿಂತವನೆ ಸತ್ತ್ವದ ಎತ್ತರದ ಮಟ್ಟವನ್ನು ಮುಟ್ಟಬಲ್ಲನು. ತಮೋಗುಣದಿಂದ ಕರ್ತವ್ಯದಲ್ಲಿ ಅನಾಸಕ್ತಿಯುಂಟಾಗುವುದಾದರೆ, ರಜೋಗುಣದಿಂದ ಕ್ಷುದ್ರಾಶೆ ವ್ಯಾಮೋಹಗಳಿಗೊಳಗಾಗಿ ಕಾರ್ಯಗಳನ್ನೆಸಗುವನು. ಸತ್ತ್ವಗುಣದ ಬಲದಿಂದಲೇ ನಿಷ್ಕಾಮನೆಯಿಂದ ಸ್ವಕರ್ತವ್ಯವನ್ನು ಆಚರಿಸುವ ಸತ್‌ಪ್ರವೃತ್ತಿಯುಂಟಾಗುವುದು. ಜಡತತ್ತ್ವದ ಈ ಪರಿಣಾಮವಿಶೇಷಗಳನ್ನು ಅರಿತುಕೊಂಡು ಅದರಿಂದಲೂ ಒಳ್ಳೆಯದನ್ನು ಸಾಧಿಸಿ ಪರಮಾತ್ಮನನ್ನು ಮುಟ್ಟಲು ಸೇತುವೆಯನ್ನಾಗಿ ಪ್ರಕೃತಿಯನ್ನು ನಾವು ಬಳಸಿಕೊಳ್ಳಬೇಕು. ಪ್ರಕೃತಿಯನ್ನು ಯೋಗ್ಯರೀತಿಯಿಂದ ಉಪಯೋಗಿಸಿದರೆ ಪ್ರಕೃತಿಬಂಧವಿಮೋಚನೆಯ ಕಾರ್ಯವು ಅತ್ಯಂತ ಸುಗಮವಾಗುವುದು.

ಇಂದು ರಜೋಗುಣ ತಮೋಗುಣಗಳ ಅತಿರೇಕವನ್ನು ನಾವು ಎಲ್ಲೆಡೆಗಳಲ್ಲಿಯೂ ನೋಡುತ್ತಿದ್ದೇವೆ. ಜನತೆಯನ್ನು ಇಂದು ಎರಡು ವಿಧವಾಗಿ ವಿಂಗಡಿಸಬಹುದು. ಒಂದು ರಾವಣವರ್ಗ, ಇನ್ನೊಂದು ಕುಂಭಕರ್ಣ ವರ್ಗ. ಅಧಿಕಾರ ಸಂಪತ್ತಿಗಾಗಿ ಹಾತೊರೆಯುವ ಜನರನ್ನು ನೋಡುವಾಗ ರಾವಣನ ಸ್ಮರಣೆಯೇ ನಮಗೆ ಆಗುತ್ತಿದೆ. ತ್ರೈಲೋಕ್ಯದಲ್ಲಿರುವ ಸುಂದರವಾದ ಅಪೂರ್ವವಾದ ವಸ್ತುಗಳೆಲ್ಲ ತನ್ನವಾಗಬೇಕೆಂಬುದು ರಾವಣನ ಲವಲವಿಕೆ ಅದಕ್ಕಾಗಿ ಬಲಪ್ರಯೋಗ ಮತ್ತು ತನ್ನ ಪಾಶವೀ ಶಕ್ತಿಯ ಪ್ರದರ್ಶನವನ್ನು ಅವ್ಯಾಹತವಾಗಿ ರಾವಣನು ನಡೆಸಿದ್ದ. ಕೊನೆಯವರೆಗೂ ಅಧಿಕಾರಕ್ಕೆ ಅಂಟಿಕೊಳ್ಳುವ ದುರಾಶೆ ಮತ್ತು ಅಧಿಕಾರ ಸಂಪತ್ತುಗಳನ್ನು ಗಳಿಸುವ ಕುತಂತ್ರ ವಾಮಾಚಾರಗಳನ್ನು ಇಂದಿನ ಜನರಲ್ಲಿ ಧಾರಾಳವಾಗಿ ನಾವು ನೋಡುತ್ತಿದ್ದೇವೆ. ಪ್ರತಿಯೊಬ್ಬರಲ್ಲಿಯೂ ರಾವಣನ ಈ ಕಾರ್ಯಭಾರವು ಸ್ವಚ್ಛಂದವಾಗಿ ನಡೆದಿದೆ ಪ್ರತಿಯೊಂದು ಕ್ಷೇತ್ರದಲ್ಲಿಯೂ ಇಂದು ನಡೆಯುತ್ತಿರುವ ಅನೈತಿಕ ಸ್ಪರ್ಧೆಗಳು ನಮ್ಮ ಜನರ ಬೀಡು ಮಾಡಿರುವ ರಜೋಗುಣದ ಅತಿರೇಕವನ್ನು ವ್ಯಕ್ತಪಡಿಸುತ್ತವೆ. ಹೀಗೆ ರಾಜಸಪ್ರವೃತ್ತಿಯ ರಾವಣನು ಒಂದು ಕಡೆಯಿದ್ದರೆ ತಮೋಗುಣದ ಪ್ರತೀಕರಾದ ಆಲಸ್ಯದ ಪ್ರತಿಮೂರ್ತಿಗಳೆನಿಸಿ ಕುಂಭಕರ್ಣರು ಇನ್ನೊಂದೆಡೆ. ನಮ್ಮ ಸನಾತನೀ ಮನೋವೃತ್ತಿಯ ಧಾರ್ಮಿಕ ಜನರನ್ನು ಈ ಗುಂಪಿನಲ್ಲಿ ಸೇರಿಸಬಹುದು. ವೈದಿಕ ಧರ್ಮದ ಮೇಲೆ ಇಡೀ ದೇಶದಲ್ಲಿ ಪ್ರಬಲ ಆಘಾತವಾಗುತ್ತಿದ್ದರೂ ಇದರ ಪರಿಹಾರದ ಬಗ್ಗೆ ತಮ್ಮ ಕರ್ತವ್ಯವಿದೆ ಎಂಬುದನ್ನು ಲಕ್ಷಿಸಿದೆ ತವ

ಪಾಡಿಗೆ ತಾವು ಎಂಬ ಭಾವನೆಯಿಂದ, ಉದಾಸೀನ ವೃತ್ತಿಯಿಂದ ಇರುವ ಧಾರ್ಮಿಕ ಮುಖಂಡರನ್ನೂ ಕುಂಭಕರ್ಣರ ಗುಂಪಿಗೆ ಸೇರಿಸಬೇಕಾಗಿದೆ. ಆಲಸ್ಯವೇ ಸಕಲದುರ್ಗುಣಗಳಿಗೆ ಮೂಲವಾಗಿದೆ. ತನ್ನ ಕಾಲನ್ನು ಪೂರ್ತಿಯಾಗಿ ಸರಿಯಾಗಿ ತೊಳೆಯಲು ನಳ ಮಹಾರಾಜನು ಅಜಾಗರೂಕತೆಯನ್ನು ತೋರಿದಾಗಲೇ ಅವನಲ್ಲಿ ಕಲಿಯ ಪ್ರವೇಶವಾಯಿತು. ಅನೇಕ ದಿನಗಳಿಂದ ನಳ ಮಹಾರಾಜನನ್ನು ಆಕ್ರಮಿಸಲು ಕಲಿಯು ಹೊಂಚುಹಾಕುತ್ತಿದ್ದನು. ಧರ್ಮಮೂರ್ತಿಯಾದ ಆ ಮಹಾರಾಜನ ಛಿದ್ರರಹಿತವಾದ ಸುಭದ್ರಜೀವನದಲ್ಲಿ ಕಲಿಗೆ ಪ್ರವೇಶ ಪಡೆಯಲು ಸ್ವಲ್ಪವೂ ಅವಕಾಶ ದೊರೆಯಲಿಲ್ಲ. ಕಾಲನ್ನು ತೊಳೆಯುವ ಸಂದರ್ಭದಲ್ಲಿ ನಳನು ತೋರಿದ ಆಲಸ್ಯವೇ ಕಲಿಯ ಪ್ರವೇಶದ್ವಾರವಾಯಿತು. ಮುಂದೆ ಕಲಿಯು ಅವನ ಇಡೀ ಜೀವನವನ್ನು ಆಕ್ರಮಿಸುವಂತಾಯಿತು. ಆಲಸ್ಯಕ್ಕೆ ನಮ್ಮ ಜೀವನದಲ್ಲಿ ಅಣುಮಾತ್ರವಾದರೂ ಪ್ರವೇಶ ದೊರಕಿದರೆ ಸಕಲ ದುರ್ಗುಣಗಳಿಗೂ ಆಹ್ವಾನ ಬಂದಂತೆ. ಹೀಗೆ ಆಲಸ್ಯ ದುರಾಶೆಗಳಿಂದ ತುಂಬಿದ ಈ ರಾವಣ ಕುಂಭಕರ್ಣರ ರಾಜ್ಯದಲ್ಲಿ ವಿಭೀಷಣನಂತಹ ಸಾತ್ತ್ವಿಕ ಶಕ್ತಿಯು ನಮಗೆ ಎಲ್ಲಿಯೂ ಗೋಚರಿಸುವುದಿಲ್ಲ. ಈ ರಜೋಗುಣ ತಮೋಗುಣಗಳ ದಮನವಾಗಿ ಪ್ರಕೃತಿಯಲ್ಲಿರುವ ಸತ್ತ್ವಗುಣದ ವಿಜೃಂಭಣೆಯು ಈಗ ಲೋಕದಲ್ಲಿ ನಡೆಯಬೇಕಾದ ಮುಖ್ಯ ಕಾರ್ಯವಾಗಿದೆ. ಪ್ರಕೃತಿಯು ಬಂಧಕವಾದರೂ ಅದರಲ್ಲಿ ಅಡಕವಾದ ಸತ್ತ್ವಗುಣದ ಸರಿಯಾದ ಲಾಭವನ್ನು ಪಡೆದು ಈ ಸತ್ತ್ವಗುಣದ ಸೇತುವೆಯಲ್ಲಿ ಪರಮಾತ್ಮನ ಕಡೆಗೆ ಸಾಗುವ ಸಾಹಸಪೂರ್ಣ ಯಾತ್ರೆಯನ್ನು ಜೀವನು ಕೈಗೊಳ್ಳಬೇಕು. ಹದಿನಾಲ್ಕನೆಯ ಅಧ್ಯಾಯವು ಈ ರೀತಿಯಾಗಿ ಜೀವನ ಮೇಲೆ ಆಗುವ ಪ್ರಕೃತಿಯ ಪರಿಣಾಮ ಪ್ರಭಾವಗಳನ್ನು ವಿಶ್ಲೇಷಿಸಿ, ಜೀವಪ್ರಕೃತಿಗಳ ಪರಸ್ಪರ ಸಂಬಂಧವನ್ನು ವಿವರಿಸಿ, ಸತ್ತ್ವಗುಣದ ಸಹಾಯದಿಂದ ಜೀವನು ಪ್ರಕೃತಿಯನ್ನು ಗೆದ್ದು ಗುಣಾತೀತನಾಗಿ ಹೇಗೆ ಪರಮಸಿದ್ಧಿಯನ್ನು ಪಡೆಯಬಹುದೆಂಬುದನ್ನು ಪ್ರತಿಪಾದಿಸಿದೆ.

**ಬ್ರಹ್ಮಣೋ ಹಿ ಪ್ರತಿಷ್ಠಾಹಮ್ ಅಮೃತಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥** (14.27)

***

**ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥** (15.1)

ಹಿಂದೆ ಹದಿಮೂರನೆಯ ಅಧ್ಯಾಯದಲ್ಲಿ ಪ್ರಕೃತಿ, ಪಂಚ ಮಹಾಭೂತಗಳು ಮುಂತಾದ ಇಪತ್ತೈದು ತತ್ತ್ವಗಳನ್ನೊಳಗೊಂಡ ವಿಶಾಲ ವಿಶ್ವವನ್ನು ಕ್ಷೇತ್ರವೆಂದೂ, ಇದನ್ನೆಲ್ಲಾ ಸರಿಯಾಗಿ ಪೂರ್ಣವಾಗಿ ತಿಳಿದ ಭಗವಂತನನ್ನು ಕ್ಷೇತ್ರಜ್ಞನೆಂದೂ ವರ್ಣಿಸಲಾಗಿದೆ. ಈ ಜಗತ್ತನ್ನು ದಾಟಲು

ಭಗವಂತನ ಜ್ಞಾನವೇ ಸಾಧನವೆಂಬುದನ್ನು ಅಲ್ಲಿ ತಿಳಿಸಿದೆ. ಈ ಜಗತ್ತಿನ ಸ್ವರೂಪವನ್ನು ವಿವರವಾಗಿ ವರ್ಣಿಸಿ ಸಂಸಾರನಿವೃತ್ತಿಯ ಸಾಧನಗಳನ್ನು ವಿಸ್ತಾರವಾಗಿ ವಿವರಿಸಿ ಭಗವಂತನ ಮಹಿಮೆಯನ್ನು ಬೋಧಿಸಲು ಈ ಅಧ್ಯಾಯವು ಹೊರಟಿದೆ.

ಈ ವಿಶ್ವವನ್ನು ಒಂದು ಮರವೆಂದು ರೂಪಿಸಿಕೊಳ್ಳೋಣ. ಈ ಮರಕ್ಕೆ ಅತ್ಯಂತ ಶ್ರೇಷ್ಠಗಳಾದ ಮೂರು ಬೇರುಗಳಿವೆ. ವಿಶ್ವದಲ್ಲಿಯೇ ಅತ್ಯಂತ ಶ್ರೇಷ್ಠನಾದ ಪರಮಾತ್ಮನು ಒಂದು ಬೇರಾಗಿದ್ದರೆ, ಜಡವಸ್ತುಗಳಲ್ಲಿಯೇ ಅತ್ಯಂತ ಶ್ರೇಷ್ಠವಾದ, ಜಡಜಗತ್ತಿನ ಮೂಲಕಾರಣವೆನಿಸಿದ, ಅನಾದಿಯಾದ ಜಡಪ್ರಕೃತಿಯು ಇನ್ನೊಂದು ಬೇರು. ಈ ಜಡಪ್ರಕೃತಿಯ ಅಭಿಮಾನಿದೇವತೆಯಾಗಿ ಅದರ ಎಲ್ಲ ಪ್ರವೃತ್ತಿ ಚಟುವಟಿಕೆ ಮತ್ತು ಬೆಳವಣಿಗೆಗಳ ಚೈತನ್ಯಶಕ್ತಿಯಾದ ಚಿತ್‌ಪ್ರಕೃತಿಯು ಜಗತ್ತಿನ ಮೂರನೆಯ ಬೇರಾಗಿದೆ. ಮರದ ಬೇರು ರೂಪುಗೊಂಡು ಮರವಾಗಿ ಪರಿಣಮಿಸುವಂತೆ ಜಡಪ್ರಕೃತಿಯೇ ಜಗತ್ತಾಗಿ ಪರಿಣಾಮಗೊಳ್ಳುತ್ತದೆ. ಮರವು ನೆಲೆಸಿರುವ ಭೂಮಿಯ ಪ್ರದೇಶವು ಬೀಜವು ಮರವಾಗಿ ಬೆಳೆಯಲು ಎಲ್ಲಾ ರೀತಿಯಿಂದ ಸಹಾಯಕವಾಗುವಂತೆ ಜಗತ್ತಿನ ಬೆಳವಣಿಗೆಗೆ ಜಡಪ್ರಕೃತಿಯ ಅಭಿಮಾನಿಯಾದ ಚಿತ್‌ಪ್ರಕೃತಿಯು ಶಕ್ತಿಯನ್ನು ತುಂಬುತ್ತಾಳೆ. ಆ ಚಿತ್‌ಪ್ರಕೃತಿಯನ್ನೇ ಜಗನ್ಮಾತೆಯಾದ ಮಹಾಲಕ್ಷ್ಮಿಯೆಂದು ಕರೆಯುತ್ತೇವೆ. ಮರ, ಅದರ ಬೇರು, ಅದು ನೆಲೆಸಿದ ಭೂಪ್ರದೇಶ ಇವೆಲ್ಲವುಗಳಿಗೂ ಆಧಾರಶಕ್ತಿಯಾದ ಭೂಮಾತೆಯಂತೆ ಪರಮಾತ್ಮನು ಈ ಜಗತ್ತಿನ ಮೂಲ ಕಾರಣನು. ಹೀಗೆ ಪರಮಾತ್ಮ, ಚಿತ್‌ಪ್ರಕೃತಿ. ಜಡಪ್ರಕೃತಿ ಈ ಮೂರು ಬೇರುಗಳ ಆಧಾರದಿಂದ ಈ ಜಗತ್ತೆಂಬ ವೃಕ್ಷವು ನಿಂತಿದೆ.

ಮರದಲ್ಲಿ ಕೊಂಬೆಗಳಿರುವಂತೆ ಮಹತ್ತತ್ತ್ವ, ಅಹಂಕಾರತತ್ತ್ವ, ಪಂಚ ಭೂತಗಳು, ಶರೀರ ಮೊದಲಾದ ಪ್ರಕೃತಿಜನ್ಯವಾದ ವಸ್ತುಗಳೆಲ್ಲವೂ ಈ ಜಗದ್‌ವೃಕ್ಷದ ಶಾಖೋಪಶಾಖೆಗಳಾಗಿವೆ. ಈ ಜಗತ್ತು ಇಂದಿನಂತೆ ನಾಳೆ ಇರುವುದಿಲ್ಲ. ಇದು ಪರಿವರ್ತನಶೀಲ. ಆದರೂ ಇದು ಪರಿವರ್ತನೆಗೊಳ್ಳುತ್ತಾ ನಿರಂತರವಾಗಿ ಇರುತ್ತದೆ. ಇದಕ್ಕೆ ಮುಕ್ತಾಯವೇ ಇಲ್ಲ.

ಮರದಲ್ಲಿ ಎಲೆಗಳಿರುತ್ತವೆ. ಆ ಎಲೆಗಳ ಮೂಲಕವೇ ಮರವು ಹಣ್ಣುಗಳನ್ನು ನೀಡುತ್ತದೆ. ಅದರಂತೆ ವೇದಗಳು ಈ ವಿಶ್ವವೃಕ್ಷದ ಎಲೆಗಳು. ಈ ವೇದಗಳು ಅವುಗಳು ನೀಡುವ ಜ್ಞಾನದಿಂದಲೇ ಜೀವನದ ಅಮೃತಫಲವನ್ನು ನಾವು ಪಡೆಯಬಲ್ಲೆವು. ಸಂಸಾರದ ಸುಖವನ್ನಾಗಲೀ, ಮುಕ್ತಿಯ ಸುಖವನ್ನಾಗಲೀ ಪಡೆಯಲು ವೇದಗಳು ನಿರೂಪಿಸುವ ನೈತಿಕಮೌಲ್ಯ, ಕರ್ತವ್ಯ, ಜ್ಞಾನ, ಭಕ್ತಿಗಳೇ ಕಾರಣವಾದುದರಿಂದ ಜಗತ್ತಿನ ಫಲವೆನಿಸಿದ ಕಾಮ ಮೋಕ್ಷಗಳನ್ನು ನೀಡುವ ಎಲೆಗಳೆಂದರೆ ವೇದವೇ ಆಗಿವೆ. ಇಂತಹ ಜಗತ್ತು ಅದರ ಕಾರಣ ಕಾರ್ಯಪ್ರಪಂಚ, ಅದು ಜಗತ್ತಿಗೆ ನೀಡುವ ಜ್ಞಾನದ ಸಂದೇಶ ಇವೆಲ್ಲವುಗಳನ್ನು ತಿಳಿದಾಗಲೆ ನಾವು ಸಮಗ್ರವಾಗಿ ವೇದವನ್ನು ತಿಳಿದಂತೆ ಆಗುತ್ತದೆ.

'ಊರ್ಧ್ವಮೂಲಮ್ ಅಧಃಶಾಖಮ್' ಎಂಬ ಮಾತಿಗೆ ಬೇರು ಮೇಲೆ, ಕೊಂಬೆಗಳು ಕೆಳಗೆ ಎಂದು ಆಪಾತತಃ ನಮಗೆ ಅರ್ಥವಾಗುತ್ತದೆ. ಇದು ವಿಚಿತ್ರವಾಗಿ ತೋರಬಹುದು. ಬೇರು ಕೆಳಗಿರುವುದನ್ನು ಕೊಂಬೆಗಳು ಮೇಲಿರುವುದನ್ನು ನಾವು ನೋಡುತ್ತಿದ್ದೇವೆ. ಆದರೆ ಬೇರು ಮೇಲೆ ಎಂದರೆ ಪರಮಾತ್ಮ, ಚಿತ್‌ಪ್ರಕೃತಿ ಮತ್ತು ಜಡಪ್ರಕೃತಿಗಳೆಂಬ ಜಗತ್ತಿನ ಮೂರು ಮೂಲವಸ್ತುಗಳು ಮೇಲೆ ಅಂದರೆ ಉತ್ತಮ- ಶ್ರೇಷ್ಠವೆಂದೂ, ಕೊಂಬೆಗಳಂತಿರುವ ಪಂಚಭೂತ ಮುಂತಾದ ಪ್ರಾಕೃತಪದಾರ್ಥಗಳು ಕೆಳಗೆ ಅಂದರೆ ಆ ಮೂಲವಸ್ತುಗಳಿಂದ ಕಡಿಮೆಯವು- ಕನಿಷ್ಠ ಎಂದೂ ಅಭಿಪ್ರಾಯವಾಗುತ್ತದೆ.

ಮರದ ಕೊಂಬೆ-ರೆಂಬೆಗಳು ಅದರಿಂದ ಜನಿಸುವ ಎಲೆ-ಹಣ್ಣುಗಳಲ್ಲಿಯೂ ಅದರ ಕಾರಣವಾದ ಬೇರಿನಲ್ಲಿಯೂ ಸೂಕ್ಷ್ಮರೂಪದಿಂದ ಇರುವಂತೆ ಈ ಪಂಚಭೂತಗಳು ಮುಂತಾದ ಪ್ರಕೃತಿಯ ಕಾರ್ಯಗಳು ಕಾರಣವಾದ ಪ್ರಕೃತಿ ಮತ್ತು ಕಾರ್ಯಪ್ರಪಂಚವಾದ ಶರೀರ ಹಾಗೂ ವಿಷಯವಸ್ತುವಿನಲ್ಲಿಯೂ ಸೂಕ್ಷ್ಮರೂಪದಲ್ಲಿ ಇರುತ್ತವೆ. ಅದರಂತೆ ಮೂಲಕಾರಣವಾಗಿರುವ, ಭಗವಂತ, ಲಕ್ಷ್ಮೀದೇವಿ ಮತ್ತು ಜಡಪ್ರಕೃತಿಗಳು ಕಾರ್ಯಪ್ರಪಂಚವನ್ನು ವ್ಯಾಪಿಸಿಕೊಂಡಿವೆ. ಹೀಗೆ ಕಾರ್ಯ-ಕಾರಣಪ್ರಪಂಚ ಪರಸ್ಪರ ವ್ಯಾಪ್ತಿಯನ್ನು ನಾವು ಅರಿತುಕೊಳ್ಳಬೇಕು. ಬೇರಿನ ಮೇಲ್ಭಾಗದ ಆಧಾರದಲ್ಲಿ ಶಾಖೋಪಶಾಖೆಗಳು ಬೆಳೆಯುವಂತೆ ಪ್ರಕೃತಿಯ ವಿಭಾಗವಾದ ಸತ್ವ, ರಜಸ್ಸು, ತಮಸ್ಸುಗಳಿಂದ ಈ ವಿಶ್ವದ ಶಾಖೋಪಶಾಖೆಗಳ ಬೆಳವಣಿಗೆಯಾಗುತ್ತದೆ. ಮರದ ಕೊಂಬೆಗಳಲ್ಲಿ ಚಿಗುರೆಲೆಗಳು ಮೂಡುವಂತೆ ಈ ಪಂಚಭೂತಗಳೆಂಬ ಕೊಂಬೆಗಳಿಂದ ನಾನಾವಿಧ ವಿಷಯಪದಾರ್ಥಗಳೆಂಬ ಚಿಗುರೆಲೆಗಳು ಹುಟ್ಟುವವು. ಬಣ್ಣಬಣ್ಣದ ಚಿಗುರೆಲೆಗಳಂತೆ ಈ ವಿಷಯವಸ್ತುಗಳು ತುಂಬಾ ಆಕರ್ಷಕವಾಗಿರುತ್ತವೆ. ಆದರೆ ಚಿಗುರೆಲೆಗಳನ್ನು ಹಾಗೆಯೇ ಉಪಯೋಗಿಸದೆ ಅವುಗಳಿಂದ ಹಣ್ಣುಗಳನ್ನು ಪಡೆಯುವಂತೆ ಈ ಆಕರ್ಷಕವಾದ ವಿಷಯಪದಾರ್ಥಗಳನ್ನು ಸರಿಯಾಗಿ ಉಪಯೋಗಿಸಿ ಮುಕ್ತಿ ಎನ್ನುವ ಅಮೃತಫಲವನ್ನು ಪಡೆಯಬೇಕೆಂದು ಈ ಶ್ಲೋಕದ ತಾತ್ಪರ್ಯವಾಗಿದೆ. ಆದರೆ ಈ ಜಗತ್ತಿನಲ್ಲಿ ಎಲ್ಲರೂ ಒಬ್ಬರಂತಲ್ಲ. ವಿಶ್ವದ ಈ ವೈಚಿತ್ರ್ಯ ವ್ಯತ್ಯಾಸಗಳಿಗೆ ಕಾರಣಗಳೇನು ? ಈ ಜೀವನ ವ್ಯಕ್ತಿತ್ವ ಅವರ ಭಿನ್ನಸ್ವಭಾವಗಳು ಅನಾದಿಯಿಂದ ಇವೆ. ಅವುಗಳಿಗೆ ಅನುಸಾರವಾಗಿ ಪರಮಾತ್ಮನ ಶಕ್ತಿಯ ಹಿನ್ನೆಲೆಯಲ್ಲಿ ಜೀವನು ಮಾಡುವ ವಿವಿಧ ಕರ್ಮಗಳೇ ಸಂಸಾರದಲ್ಲಿ ನಾವು ನೋಡುತ್ತಿರುವ ವಿವಿಧತೆಗೆ ಕಾರಣವಾಗಿವೆ. ಅವರವರ ಸ್ವಭಾವ, ಯೋಗ್ಯತೆ, ವ್ಯಕ್ತಿತ್ವಗಳಿಗೆ ಅನುಗುಣವಾಗಿ ಜೀವರು ಮಾಡುವ ವಿವಿಧ ಕರ್ಮಗಳಿಂದಾಗಿ ಜಗತ್ತಿನ ಇಂತಹ ವ್ಯತ್ಯಾಸವುಂಟಾಗುತ್ತದೆ.

ಪರಿವರ್ತನಶೀಲವಾದ ಜಗತ್ತಿನ ನಿಜರೂಪವನ್ನು ತಿಳಿಯಲಾರೆವು. ಈ ಜಗತ್ತಿನ ಆದಿಕಾರಣನೂ, ಇದರ ಸಂಹಾರಕರ್ತನೂ, ಇದರ ಒಳಗಿದ್ದು ಇದನ್ನು ನಿಯಂತ್ರಿಸುವವನೂ ಆದ ಭಗವಂತನನ್ನೂ ನಾವು ಸರಿಯಾಗಿ ತಿಳಿಯಲಾರೆವು. ಈ ಕಾರ್ಯಪ್ರಪಂಚವೂ ನಮಗೆ

ಸರಿಯಾಗಿ ಗೊತ್ತಿಲ್ಲ. ಇದರ ಕಾರಣಪುರುಷನನ್ನೂ ನಾವು ಸರಿಯಾಗಿ ಅರಿಯಲಾರೆವು. ಈ ಜಗತ್ತು ಬದಲಾವಣೆಗೊಳ್ಳುತ್ತಿದ್ದರೂ ಇದರ ಕಾರಣಗಳಾದ ಪ್ರಕೃತಿ ಪುರುಷರು ಗಟ್ಟಿಯಾಗಿವೆ. ಅವು ಅನಾದಿನಿತ್ಯವೂ ಆಗಿವೆ. ಈ ಜಗತ್ತನ್ನು ವಿಶ್ಲೇಷಿಸಿ ನೋಡಬೇಕು. ಜಡ, ಜೀವ, ಪರಮಾತ್ಮರನ್ನು ಪ್ರತ್ಯೇಕವಾಗಿ ವಿಭಜಿಸಿ ತಿಳಿಯಬೇಕು. ಭೌತಿಕಾಸಕ್ತಿಯನ್ನು ತೊರೆದು ಪ್ರಕೃತಿಯಿಂದ ಮೇಲೆದ್ದು ವಿಮರ್ಶಿಸಿದಾಗ ಈ ಜಗತ್ತಿನ ಸತ್ಯತೆಯು ನಮಗೆ ಗೋಚರವಾಗುತ್ತದೆ. ಜಡ, ಜೀವ, ಪರಮಾತ್ಮರ ಪ್ರತ್ಯೇಕತೆಯು ನಮಗೆ ಸ್ಪಷ್ಟವಾಗುತ್ತದೆ. ಹೀಗೆ ವಿಶ್ಲೇಷಿಸಿದಾಗ ಆ ಪರತತ್ವವನ್ನು ನಾವು ಅರಿತುಕೊಳ್ಳಬಲ್ಲೆವು. ಆ ಭಗವಂತನ ಅರಿವು ಉಂಟಾದಮೇಲೆ ಈ ಸಂಸಾರದ ಗೊಂದಲಕ್ಕೆ ನಾವು ಸಿಲುಕುವುದಿಲ್ಲ. ಇಂತಹ ಪರಮಸತ್ಯದ ಅರಿವುಂಟಾಗ ಬೇಕಾದರೂ ನಮ್ಮ ಪ್ರಯತ್ನ ಸಾಲದು. ಆ ಭಗವಂತನಿಗೆ ಶರಣಾಗಬೇಕು. ಅವನ ಅನುಗ್ರಹ ಪಡೆಯಬೇಕು. ಅವನ ಅನುಗ್ರಹದ ಹಿನ್ನೆಲೆಯಲ್ಲಿ ನಮ್ಮ ಸಾಧನೆಯನ್ನು ಮುಂದುವರಿಸಿದಾಗ ಈ ದಿವ್ಯಜ್ಞಾನವನ್ನು ನಾವು ಪಡೆಯಬಲ್ಲೆವು.

ಭಗವದನುಗ್ರಹ ಮತ್ತು ತಾತ್ವಿಕ ವಿಮರ್ಶೆಯ ಜೊತೆಗೆ ಭಗವಂತನನ್ನು ಹೊಂದಲು ಆವಶ್ಯಕವಾದ ಕೆಲವು ಸಾಧನೆಗಳನ್ನು ಗೀತೆಯು ನಿರೂಪಿಸುತ್ತದೆ. ಅಹಂಕಾರ, ಮಿಥ್ಯಾಜ್ಞಾನ, ವಿಷಯಪದಾರ್ಥಕಾಮನೆ, ಸಂಪರ್ಕಗಳನ್ನು ತೊರೆಯಬೇಕು. ಸುಖ-ದುಃಖ, ಲಾಭ-ನಷ್ಟ, ಜಯ-ಪರಾಜಯ ಮೊದಲಾದ ದ್ವಂದ್ವಗಳಿಂದ ವಿಚಲಿತರಾಗಿರಬಾರದು. ಭಗವಂತನ ಚಿಂತನ-ಮಂಥನದಲ್ಲಿ ಮಗ್ನರಾಗಿರಬೇಕು. ರಾಜಸ ತಾಮಸ ಪ್ರವೃತ್ತಿಯಿಂದಾಗಿ ಸರಿಯಾದ ದಾರಿಯನ್ನು ಕಾಣದೆ ಮೂಢರಾಗುತ್ತೇವೆ. ಈ ಮೌಢ್ಯವನ್ನು ಮೆಟ್ಟಿ ನಿಲ್ಲಬೇಕು. ಆಗಲೇ ಭಗವಂತನನ್ನು ನಾವು ಮುಟ್ಟಬಲ್ಲೆವು.

ಆ ಭಗವಂತನ ಸ್ಥಾನವು ಈ ಸೂರ್ಯ, ಚಂದ್ರ, ಅಗ್ನಿ ಮೊದಲಾದ ಭೌತಿಕ ಪ್ರಕಾಶವನ್ನು ಮೀರಿ ನಿಂತಿದೆ. ಅದು ಅಪ್ರಾಕೃತವಾದ ದಿವ್ಯಪ್ರಕಾಶದ ಬೀಡು. ಅದನ್ನು ತಲುಪಿರುವವರು ಮತ್ತೆ ಈ ಸಂಸಾರದ ಕತ್ತಲೆಗೆ ಬೀಳುವುದಿಲ್ಲ.

ಇಂತಹ ಪರಮಮುಕ್ತಿಯನ್ನು ಪಡೆಯಲು ಪರಮಾತ್ಮನ ಜ್ಞಾನ ಅವನ ಅನುಗ್ರಹದ ಹೊರತು ಬೇರೆ ಯಾರ ಆಶ್ರಯದಿಂದಲೂ ಪಡೆಯಲು ಸಾಧ್ಯವಿಲ್ಲ. ಪರಮಾತ್ಮನ ಹೊರತು ಉಳಿದ ಎಲ್ಲಾ ಜೀವರೂ ಅವನ ಮುಂದೆ ಒಂದು ಧೂಳಿನ ಕಣ. ಭಗವಂತನು ಸಾಗರವಾಗಿದ್ದ ಜೀವರೆಲ್ಲರೂ ಅವನ ಒಂದು ಅಂಶದಂತೆ. ಒಂದು ಬಿಂದುವಿನಂತೆ. ದೇವರ ಮುಂ ನಾವೆಲ್ಲರೂ ಅತ್ಯಂತ ಅಲ್ಪರು. ಜೀವರೆಲ್ಲರೂ ಪರಮಾತ್ಮನ ಅಂಶರೆಂದು ಕೃಷ್ಣನ ಹೇಳಿರುವುದರಿಂದ ರಾಮ, ಕೃಷ್ಣ ಮುಂತಾದ ಭಗವಂತನ ರೂಪಗಳಂತೆ ನಾವು ದೇವರಿ ಸಮಾನರೆಂದು ಅಪಾರ್ಥ ಮಾಡಿ ಅಹಂಕಾರಕ್ಕೊಳಗಾಗಬಾರದು. ನನ್ನಲ್ಲಿರುವ ಹಣದ ಒಂದ ಅಂಶ ಮಾತ್ರ ಅವನಲ್ಲಿದೆ. ನನ್ನ ಮಹಾಶಕ್ತಿಯ ಒಂದಂಶ ಅವನಲ್ಲಿದೆಯೆಂದರೆ ಅವನಲ್ಲಿ ಅಪ

ಕಡಿಮೆ ಹಣವಿದೆ, ಕಡಿಮೆ ಶಕ್ತಿ ಇದೆ ಎಂದು ಅರ್ಥವಾಗುವುದಿಲ್ಲವೇ ? ಅದರಂತೆ ಜೀವನು ಭಗವಂತನ ಅಂಶವೆಂದರೆ ಪರಮಾತ್ಮನ ಮುಂದೆ ಅತ್ಯಂತ ಚಿಕ್ಕವನು ಎಂಬುದೇ ಅದರ ಅರ್ಥವಾಗಿದೆ. ಆದುದರಿಂದ ನಮ್ಮ ಪ್ರಯತ್ನದಿಂದಾಗಲೀ ಉಳಿದ ದೇವತೆಗಳಿಂದಾಗಲೀ ಮುಕ್ತಿಯನ್ನು ಪಡೆಯಲಾರೆವು. ಪರಬ್ರಹ್ಮನಾದ ಶ್ರೀಕೃಷ್ಣನಿಂದಲೇ ಆ ಪರಮಸ್ಥಾನವನ್ನು ನಾವು ಹೊಂದಬಲ್ಲೆವು.

ಜೀವನು ಅತ್ಯಂತ ಅಶಕ್ತನಾದರೂ ಶರೀರ ಇಂದ್ರಿಯವ್ಯಾಪಾರಗಳನ್ನು ನಡೆಸುತ್ತಾನೆ. ಇದಕ್ಕೂ ಭಗವಂತನೇ ಕಾರಣ. ಭಗವಂತನು ಶರೀರದೊಳಗಿರುವುದರಿಂದಲೇ ಜೀವನಿಂದ ವಿವಿಧ ಚಟುವಟಿಕೆಗಳು ನಡೆಯುತ್ತವೆ. ಜೀವನು ಶರೀರದೊಳಗೆ ಪ್ರವೇಶಿಸಿ ಕಾರ್ಯಗಳನ್ನು ಮಾಡುವಾಗಲೆಲ್ಲಾ ಅದರ ಹಿನ್ನೆಲೆಯಲ್ಲಿ ಭಗವಂತನು ಇದ್ದಾನೆ. ಪುಷ್ಪದ ಸೂಕ್ಷ್ಮ ಅಂಶಗಳ ಜೊತೆಗೆ ಗಾಳಿಯು ಚಲಿಸುವಂತೆ, ಪರಮಾತ್ಮನ ಶಕ್ತಿಯಿಂದ ಮರಣದ ಕಾಲದಲ್ಲಿ ಇಂದ್ರಿಯ ಸೂಕ್ಷ್ಮಾಂಶಗಳ ಜೊತೆಗೆ ಜೀವನು ಈ ಶರೀರವನ್ನು ಬಿಟ್ಟು ತೆರಳುತ್ತಾನೆ. ಅಂತಹ ಪರಮಾತ್ಮನ ಹೊರತು ಬೇರೆ ಯಾರಿಂದಲೂ ಜೀವರ ಉದ್ಧಾರವು ಸಾಧ್ಯವಿಲ್ಲ.

ಭಗವಂತನು ನಮ್ಮ ಇಂದ್ರಿಯಗಳ ಪ್ರವರ್ತಕನಾಗಿರುವ ಜೊತೆಗೆ ನಮ್ಮ ಶರೀರೇಂದ್ರಿಯಗಳಲ್ಲಿ ಸನ್ನಿಹಿತನಾಗಿ ನಮ್ಮ ಉತ್ತಮ ಕಾರ್ಯಗಳನ್ನು ಸ್ವೀಕರಿಸಿ ಸಂತೋಷಪಡುತ್ತಾನೆ. ನಮ್ಮ ಕೆಟ್ಟಕಾರ್ಯಗಳನ್ನು ಅವನು ಸ್ವೀಕರಿಸುವುದಿಲ್ಲ. ಅವುಗಳನ್ನು ತಿರಸ್ಕರಿಸುತ್ತಾನೆ. ಅದರಿಂದ ಅವನಿಗೆ ಅಸಮಾಧಾನವೇ ಆಗುತ್ತದೆ. ದೇವರಿಗೆ ನಿತ್ಯವಾದ ಸಹಜವಾದ ಆನಂದವಿದೆ. ನಮ್ಮ ಕೃತಿಗಳಿಂದ ಅವನು ಆನಂದವನ್ನು ಪಡೆಯಬೇಕಾಗಿಲ್ಲ. ಆದರೂ ನಮ್ಮ ಉತ್ತಮಕಾರ್ಯಗಳಿಂದ ತನ್ನ ಸಹಜ ಆನಂದವನ್ನು ಅಭಿವ್ಯಕ್ತಗೊಳಿಸುತ್ತಾನೆ. ಅರ್ಥಾತ್ ನಮ್ಮ ಮೇಲೆ ಪ್ರಸನ್ನನಾಗುತ್ತಾನೆ. ಆದುದರಿಂದ ಭಗವಂತನಿಗೆ ಪ್ರೀತಿಕರವಾದ ಉತ್ತಮ ಕಾರ್ಯಗಳೇ ನಮ್ಮಿಂದ ನಡೆಯಬೇಕೆಂಬುದು ಈ ಗೀತೆಯ ಆಶಯವಾಗಿದೆ.

ಹೀಗೆ ನಮ್ಮ ಇಂದ್ರಿಯಗಳಿಗೆ ಪ್ರವರ್ತಕನಾಗಿ ನಮ್ಮ ಉತ್ತಮ ಕೃತಿಗಳನ್ನು ಸ್ವೀಕರಿಸುವ ಭಗವಂತನು ನಮ್ಮ ಜೊತೆಗೇ ಇದ್ದರೂ ಸಾಮಾನ್ಯ ಜನರಿಗೆ ಅವನು ಗೋಚರನಾಗುವುದಿಲ್ಲ. ಜ್ಞಾನಿಗಳು ಮಾತ್ರ ಅವನನ್ನು ತಿಳಿಯಬಲ್ಲರು. ಚಿನ್ನದ ಗನಿಯಲ್ಲಿ ಚಿನ್ನವಿದ್ದರೂ ಸಾಮಾನ್ಯ ಜನರಿಗೆ ಕಲ್ಲು–ಮಣ್ಣುಗಳು ಮಾತ್ರ ಕಾಣಿಸುತ್ತವೆ. ವಿಜ್ಞಾನಿಗಳು ಮಾತ್ರ ಚಿನ್ನವನ್ನು ಹುಡುಕಿ ತೆಗೆಯುವಂತೆ ನಮ್ಮ ಜೊತೆಗೆ ಇದ್ದರೂ ಸಾಮಾನ್ಯ ಜನರಿಗೆ ತಿಳಿಯದ ಪರವಸ್ತುವನ್ನು ಜ್ಞಾನಿಗಳು ಮಾತ್ರ ಅರಿಯಬಲ್ಲರು.

ಭಗವಂತನು ಎಲ್ಲಿಯೋ ದೂರದ ವೈಕುಂಠದ ಮೂಲೆಯಲ್ಲಿದ್ದುಕೊಂಡು ಈ ಜಗತ್ತಿನ ವ್ಯವಹಾರಗಳನ್ನು ನಡೆಸುತ್ತಿಲ್ಲ. ಎಲ್ಲಾ ವಸ್ತುಗಳಲ್ಲಿ ಅಂತರ್ಯಾಮಿಯಾಗಿ ಅವುಗಳ

ಶಕ್ತಿಪ್ರಚೋದಕನಾಗಿ ಪ್ರಪಂಚದ ಎಲ್ಲಾ ವ್ಯವಹಾರಗಳನ್ನು ನಡೆಸುತ್ತಾನೆ. ಸೂರ್ಯನ ಒಳಗಿದ್ದು ಬೆಳಕನ್ನು ನೀಡುವವನೂ, ಭೂಮಿಯೊಳಗಿದ್ದು ಸಕಲ ಪ್ರಾಣಿಧಾರಕನೂ, ಚಂದ್ರನಲ್ಲಿದ್ದು ಗಿಡ, ಬಳ್ಳಿ, ಓಷಧಿಗಳ ಬೆಳವಣಿಗೆಗೆ ಕಾರಣನೂ, ಶರೀರದೊಳಗೆ ಜಠ ೌಗ್ನಿಯಲ್ಲಿದ್ದು ನಾವು ಉಂಡ ಆಹಾರವನ್ನು ಪಚನಗೊಳಿಸುವವನೂ ಆತನೇ. ಎಲ್ಲ ಪ್ರಾಣಿಗಳ ಹೃದಯದೊಳಗೆ ಸನ್ನಿಹಿತನಾಗಿ ನಿದ್ದೆ, ಎಚ್ಚರ, ನೆನಪು, ಮರೆವು, ತಿಳುವಳಿಕೆ ಮುಂತಾದ ಆಂತರ ವ್ಯಾಪಾರವೂ ಅವನಿಂದಲೇ ನಡೆಯುತ್ತದೆ. ಸಕಲ ವೇದಗಳನ್ನು ತಿಳಿದವನೂ ಅವನೇ. ಸಕಲ ವೇದಗಳು ತಿಳಿಸುವುದೂ ಅವನನ್ನೇ. ವೇದದ ನಿಜವಾದ ಅರ್ಥವೇನು ಎಂಬ ನಿರ್ಣಯವೂ ಅವನಿಂದಲೇ ದೊರೆಯಬೇಕು. ಹೀಗೆ ವೇದಮೂರ್ತಿಯಾದ ಸರ್ವಜ್ಞನಾದ ಭಗವಂತನೇ ಸರ್ವೋತ್ತಮನು. ಅವನು 'ನಾನೇ' ಎಂಬುದಾಗಿ ಶ್ರೀಕೃಷ್ಣನು ಈ ಅಧ್ಯಾಯದ ಕೊನೆಗೆ ಘೋಷಿಸುತ್ತಾನೆ.

ಈ ಜಗತ್ತಿನಲ್ಲಿ ಸಂಸಾರಿಗಳಾದ ಸಕಲ ಜೀವರೂ ಕ್ಷರಪುರುಷರು. ಶರೀರವನ್ನು ಪಡೆಯುವುದು, ಅದನ್ನು ಕಳೆದುಕೊಳ್ಳುವುದು ಮುಂತಾದ ಜನನ-ಮರಣಗಳಿಗೆ ಒಳಗಾಗುವ ಸಕಲ ಸಂಸಾರಿಗಳೂ ಕ್ಷರಪುರುಷರು. ಈ ಜಗತ್ತಿನ ಮೂಲಕಾರಣವಾದ ಜಡಪ್ರಕೃತಿಯ ಅಂತರ್ಯಾಮಿಯಾಗಿ ಎಲ್ಲಾ ಜೀವರ ಸಂಸಾರಕ್ಕೆ ಕಾರಣಳಾಗಿ ಜಗನ್ಮಾತೆಯಾದ ಚಿತ್‌ಪ್ರಕೃತಿಯು ಸ್ವಯಂ ತಾನು ಸಂಸಾರದಿಂದ ಅತೀತಳು. ಎಲ್ಲರ ಜನನ-ಮರಣಗಳಿಗೆ ಕಾರಣಳಾದ ಈ ಮಹಾಮಾತೆಗೆ ಜನನ-ಮರಣಗಳಿಲ್ಲ. ಇವಳು ನಿತ್ಯಮುಕ್ತಳು. ಇವಳನ್ನೇ 'ಅಕ್ಷರಪುರುಷ ' ಎಂದು ಕರೆಯಲಾಗಿದೆ. ಇವಳೇ ಮಹಾಲಕ್ಷ್ಮೀ. ಈ ಕ್ಷರಾಕ್ಷರ ಪ್ರಪಂಚಕ್ಕಿಂತ ಭಿನ್ನನಾಗಿ ಇವುಗಳಿಗೆ ನಿಯಾಮಕನಾಗಿರುವ ಸರ್ವೋತ್ತಮನೇ ಪರಮಾತ್ಮನು. ಅವನೇ ತಾನು ಎಂಬುದಾಗಿ ಸ್ಪಷ್ಟವಾಗಿ ಶ್ರೀಕೃಷ್ಣನೇ ಸಕಲ ಜೀವರಿಗಿಂತ ಭಿನ್ನನಾಗಿ ಸರ್ವನಿಯಾಮಕನಾಗಿರುವ ಸರ್ವೋತ್ತಮನೆಂದು ಗೀತೆಯ ಹದಿನೈದನೆಯ ಅಧ್ಯಾಯದಲ್ಲಿ ಸಾರಲಾಗಿದೆ. ಇದು ಸಕಲ ಶಾಸ್ತ್ರದ ಸಾರ. ಭಗವಂತನ ಸರ್ವಶ್ರೇಷ್ಠತ್ವದಲ್ಲಿಯೇ ಎಲ್ಲಾ ವೇದಶಾಸ್ತ್ರಗಳ ತಾತ್ಪರ್ಯ. ಇದನ್ನು ತಿಳಿದು ಜ್ಞಾನಿಯಾಗಿ ಮುಕ್ತಿಯನ್ನು ಪಡೆಯಬೇಕು ಎಂಬುದಾಗಿ ಈ ಅಧ್ಯಾಯದಲ್ಲಿ ಜಗತ್ತಿನ ಸ್ವರೂಪ, ವೇದದ ಪಾತ್ರ, ಸಂಸಾರದ ಬಿಡುಗಡೆಗಾಗಿ ನಾವು ಮಾಡಬೇಕಾದ ಸಾಧನೆಗಳು, ನಮ್ಮ ಅಲ್ಪವ್ಯಕ್ತಿತ್ವ ಭಗವಂತನ ಮಹೋನ್ನತವ್ಯಕ್ತಿತ್ವ, ಸಂಸಾರದ ಬಿಡುಗಡೆಗಾಗಿ ಅವನ ಅನುಗ್ರಹದ ಆವಶ್ಯಕತೆ ಇವೆಲ್ಲವನ್ನೂ ಈ ಅಧ್ಯಾಯವು ಸಂಗ್ರಹವಾಗಿ ಪ್ರತಿಪಾದಿಸಿದೆ.

***

## ದೈವ ಮತ್ತು ಆಸುರ ಸಂಪತ್ತುಗಳು

**ಅಭಯಂ ಸತ್ತ್ವಸಂಶುದ್ಧಿಃ ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥** (16.1)

ಹದಿನಾರನೆಯ ಅಧ್ಯಾಯದಲ್ಲಿ ದೈವೀ ಸಂಪತ್ತು ಮತ್ತು ಆಸುರೀ ಸಂಪತ್ತುಗಳ ವರ್ಣನೆಯಿದೆ. ಮಾನವನ ಉನ್ನತಿಗೆ ಸಹಾಯಕಗಳಾದ ಸತ್ಯ, ಅಹಿಂಸೆ, ತ್ಯಾಗ, ತಪಸ್ಸು, ದಾನ, ದಯೆ ಮೊದಲಾದ ಸದ್ಗುಣಗಳೇ ದೈವೀ ಸಂಪತ್ತುಗಳಾಗಿವೆ. ಇವುಗಳಿಗೆ ತೀರ ವಿರೋಧಿಗಳಾಗಿ ಮಾನವನ ಅಧಃಪತನಕ್ಕೆ ಕಾರಣಗಳಾದ ದಂಭ, ದರ್ಪ, ಅಹಂಕಾರ, ಅಜ್ಞಾನ ಮೊದಲಾದ ದುರ್ಗುಣಗಳು ಆಸುರೀ ಸಂಪತ್ತುಗಳೆನಿಸಿವೆ. ಆಸುರೀ ಸಂಪತ್ತು ಮತ್ತು ಅದರ ದುಷ್ಪರಿಣಾಮಗಳ ಸವಿಸ್ತರ ವರ್ಣನೆಯನ್ನು ಹದಿನಾರನೆಯ ಅಧ್ಯಾಯದಲ್ಲಿ ಮಾಡಿರುವರು. ಆಸುರಭಾವದಿಂದ ಸಮಾಜದಲ್ಲಿ ಉಂಟಾಗುವ ಅನರ್ಥ-ಅನಾಹುತಗಳ ದುರಂತ ಚಿತ್ರದ ಕಲ್ಪನೆಯಾದಾಗಲೇ ಸದ್ಗುಣ ಸತ್‌ಪ್ರವೃತ್ತಿಗಳ ಬಗ್ಗೆ ಸಹಜವಾಗಿ ನಮ್ಮ ಒಲವು ಬೆಳೆಯುವುದು. ಕತ್ತಲನ್ನು ಅನುಭವಿಸದೆ ಬೆಳಕಿನ ಮಹತ್ತ್ವವನ್ನು ಹೇಗೆ ಅರಿಯಬಲ್ಲೆವು? ಅದಕ್ಕಾಗಿಯೇ ಆಸುರೀಸಂಪತ್ತಿನ ಭಯಾನಕದೃಶ್ಯವನ್ನು ಗೀತೆಯು ನಮ್ಮ ಮುಂದೆ ಚಿತ್ರಿಸಿದೆ. ಇಲ್ಲಿ ಮಾಡಿರುವ ಆಸುರೀ ಸಂಪತ್ತಿನ ವರ್ಣನೆಯು ಇಂದಿನ ಸಮಾಜದ ಚಿತ್ರವನ್ನೇ ನಮ್ಮ ಕಣ್ಣ ಮುಂದೆ ಇಡುತ್ತಿದೆ. ಪ್ರಪಂಚದ ಅಸ್ತಿತ್ವವನ್ನು ನಿರಾಕರಿಸಿ, ಜಗತ್ತಿನಲ್ಲಿ ತಾವು ನಿರ್ವಹಿಸಬೇಕಾದ ಕರ್ತವ್ಯಗಳಿಂದ ವಿಮುಖರಾಗುವ ಅಕರ್ಮಣ್ಯತೆಯೂ ಒಂದು ವಿಧದ ಆಸುರೀ ಪ್ರವೃತ್ತಿಯಾಗಿದ್ದರೆ, ಪ್ರಪಂಚದ ನಿಯಾಮಕ ಶಕ್ತಿಯಾಗಿರುವ ಪರಮಾತ್ಮನನ್ನೇ ಅಲ್ಲಗಳೆದು ನೀತಿನಿಯಮಗಳನ್ನು ಉಲ್ಲಂಘಿಸಿ ಸ್ವಚ್ಛಂದ ವೃತ್ತಿಯಿಂದ ಭೋಗ ಪರಾಯಣರಾಗಿ ನಡೆಯುವುದು ಇನ್ನೊಂದು ಬಗೆಯ ಆಸುರೀ ವೃತ್ತಿಯಾಗಿದೆ.

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।** (16.8)

ಜಗತ್ತು ಅಸತ್ಯವೆನ್ನುವುದು ಅಕರ್ಮಣ್ಯತೆಗೆ ಪ್ರಚೋದಕವಾಗಿದ್ದರೆ ಈಶ್ವರನೇ ಇಲ್ಲವೆನ್ನುವುದು ಸ್ವಚ್ಛಂದ ವೃತ್ತಿ ಹಾಗೂ ಅತ್ಯಾಚಾರಗಳಿಗೆ ಮುಕ್ತದ್ವಾರವನ್ನು ನೀಡುವುದು. ನಮ್ಮ ಕಣ್ಣೆದುರಿಗಿರುವ ಈ ದೃಶ್ಯಪ್ರಪಂಚವನ್ನೂ, ಇದರ ಒಡೆಯನಾದ ಪರಮಾತ್ಮನನ್ನೂ ನಿರಾಕರಿಸುವ ವಾದಗಳ ಗೊಂದಲಗಳಿಂದಾಗಿಯೇ ಕರ್ತವ್ಯ ಪರಾಙ್ಮುಖತೆ ಹಾಗೂ ಸ್ವೇಚ್ಛಾಚಾರಗಳು ಲೋಕದಲ್ಲಿ ಬೆಳೆಯಲು ಅವಕಾಶವಾಗಿದೆ. ಜನತೆಗೆ ಎಂತಹ ಕಷ್ಟ ವಿಪತ್ತುಗಳು ಒದಗಿದರೂ ತೀವ್ರವೇದನೆಯಿಂದ ಒಬ್ಬನು ನರಳುತ್ತಿದ್ದರೂ, ಅದರ ಪರಿಹಾರಕ್ಕಾಗಿ ಧುಮುಕಿ ಧಾವಿಸುವ ಉತ್ಸಾಹದ ಪ್ರವೃತ್ತಿಯನ್ನೇ- ಜಗತ್ತು ಅಸತ್ಯವೆನ್ನುವವನು ಕಳೆದುಕೊಳ್ಳುತ್ತಾನೆ. ಅವನ ದೃಷ್ಟಿಯಲ್ಲಿ ಇವೆಲ್ಲವೂ ಸ್ವಪ್ನಪ್ರಪಂಚ. ಸ್ವಪ್ನದ ಘಟನೆಗಳಿಗೆ ಇರುವ ಮಹತ್ತ್ವವನ್ನೇ ವಾಸ್ತವ ಪ್ರಪಂಚಕ್ಕೂ ನೀಡುವ ಇಂತಹ ಮನೋವೃತ್ತಿಯಿಂದ ನಮ್ಮ ವೈಯಕ್ತಿಕ ಹಾಗೂ ಸಾಮಾಜಿಕ ಕರ್ತವ್ಯಗಳೆಲ್ಲವೂ ಮೂಲೆಪಾಲಾಗುವುವು. ಇದಕ್ಕಿಂತ ಗಂಡಾಂತರಕಾರಿಯಾದ ಸಂಗತಿಯೆಂದರೆ ಜಗತ್ತಿನ ಒಡೆಯನೂ ಸರ್ವಜ್ಞನೂ ಸರ್ವಶಕ್ತಿಶಾಲಿಯೂ ವಿಶ್ವವ್ಯಾಪಕನೂ ಆದ ಪರಮಾತ್ಮನನ್ನು ಅಂಗೀಕರಿಸದಿರುವುದು. ಕೆಲವರು ಜಗತ್ತನ್ನೊಪ್ಪಿ ದೇವರನ್ನು ಮಾತ್ರ ಒಪ್ಪದವರಿದ್ದರೆ ಕೆಲವರು

;ಗತ್ತು ಕಾಲ್ಪನಿಕವೆಂದೂ ಜಗದೀಶ್ವರನು ಮಾಯೆಯ ಶಿಶುವೆಂದೂ ಎರಡನ್ನೂ ಅಲ್ಲಗಳೆಯುತ್ತಾರೆ.

***

## ಧರ್ಮ ಮತ್ತು ನಿತ್ಯವ್ಯವಹಾರ

**ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾಽನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥** (17.1)

ಸತ್ತ್ವ ರಜಸ್ಸು ತಮಸ್ಸುಗಳು ನಮ್ಮ ಜೀವನವ್ಯವಹಾರಗಳಲ್ಲಿ ಬೀರುವ ಪ್ರಭಾವದ ವಿವರಣೆಯನ್ನು ಹದಿನೇಳನೆ ಅಧ್ಯಾಯದಲ್ಲಿ ಮಾಡಿದೆ. ಆತ್ಮನ ಮೂಲಭೂತ ಸ್ವಭಾವಕ್ಕನುಸರಿಸಿ ನಮ್ಮ ಪ್ರವೃತ್ತಿಗಳಲ್ಲಿಯೂ ವೈವಿಧ್ಯವುಂಟಾಗುತ್ತದೆ.

**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**

ನಮ್ಮ ಈ ಬಾಹ್ಯ ವಿಚಾರ ವರ್ತನೆ ನಂಬಿಕೆಗಳಿಗೆ ಆತ್ಮನ ವ್ಯಕ್ತಿತ್ವವೇ ಮೂಲಕಾರಣವಾಗಿದೆ. ರಾಜಸ ತಾಮಸ ವೃತ್ತಿಗಳಿಂದ ನಮ್ಮ ವ್ಯವಹಾರಗಳೆಲ್ಲವೂ ದೂಷಿತವಾಗುವುವು. ನಮ್ಮ ಲೌಕಿಕ ಹಾಗೂ ಧಾರ್ಮಿಕ ವ್ಯವಹಾರಗಳೆರಡರಲ್ಲಿಯೂ ಸತ್ತ್ವ, ರಜಸ್ಸು, ತಮಸ್ಸುಗಳು ತಮ್ಮ ಮುದ್ರೆಯನ್ನು ಒತ್ತಬಲ್ಲವು. ಲೌಕಿಕವ್ಯವಹಾರಗಳಲ್ಲಿಯೂ ತಾತ್ತ್ವಿಕವೃತ್ತಿಯೂ ಅನುಸ್ಯೂತವಾದಾಗ ಅವು ಧರ್ಮಗಳೇ ಎನಿಸುವುವು. ಧರ್ಮಾಚಾರಗಳೂ ರಾಜಸ, ತಾಮಸ ಭಾವನೆಗಳಿಂದ ಕಲುಷಿತಗೊಂಡರೆ ಅವೇ ಅಧರ್ಮಗಳಾಗಬಲ್ಲವು. ತುಲಾಧಾರ, ಧರ್ಮವ್ಯಾಧರು ನಡೆಸಿದ ವ್ಯಾಪಾರ ವ್ಯವಹಾರಗಳು ಧರ್ಮವೆನಿಸಿದ್ದರೆ, ರಾವಣ, ಜರಾಸಂಧರಂತಹವರು ಮಾಡಿದ ತಪಸ್ಸೂ ಅಧರ್ಮವಾಗಿದೆ.

**ಧರ್ಮೋ ಭವತ್ಯಧರ್ಮೋಽಪಿ ಕೃತೋ ಭಕ್ತೈಸ್ತವಾಚ್ಯುತ ।**
**ಪಾಪಂ ಭವತಿ ಧರ್ಮೋಽಪಿ ಯೋ ನ ಭಕ್ತೈಃ ಕೃತೋ ಹರೇ ॥** –ಸದಾಚಾರಸ್ಮೃತಿ

''ಭಗವದ್ಭಕ್ತರಾದ ಸಜ್ಜನರು ಮಾಡಿದ ಧರ್ಮಭಿನ್ನವಾದ ವ್ಯವಹಾರವೂ ಧರ್ಮವಾಗಬಲ್ಲದು. ಅಭಕ್ತರಾದ ದುಷ್ಟಜನರು ಆಚರಿಸಿದ ಧರ್ಮವೂ ಪಾತಕವಾಗುವುದು'' ತುಲಾಧಾರರಂತಹವರು ಮಾಡಿದ ವ್ಯಾಪಾರವೂ ಧರ್ಮವಾಗಿದ್ದರೆ, ಇಂದು ಜನರು ಲೋಭವೃತ್ತಿಯಿಂದ ಮಾಡುವ ವ್ಯಾಪಾರವೇ ಅಧರ್ಮವಾಗುತ್ತಿದೆ. ನಮ್ಮ ಭೋಜನಾದಿ ವ್ಯವಹಾರಗಳೂ ದಾನ, ತಪಸ್ಸು, ಯಜ್ಞಗಳು ಸತ್ತ್ವ ರಜ, ತಮಗಳಿಂದ ವೈವಿಧ್ಯವನ್ನು ಪಡೆಯುವುವು. ಆಹಾರ, ನಿದ್ರೆ, ಕಾಮ ವ್ಯವಹಾರಗಳು ಪಶುಗಳಿಗಿರುವಂತೆ ಮಾನವನಿಗೂ ಇವೆ ಅವನ್ನು ಮಾನವನು ಬಿಡಲೂ ಸಾಧ್ಯವಿಲ್ಲ, ಧಾರ್ಮಿಕನಾಗಲು ಈ ವ್ಯವಹಾರಗಳನ್ನು

ಬಿಡಬೇಕೆಂದೂ ಇಲ್ಲ. ಪಶುಗಳು ಯಾವುದೇ ನೀತಿ ನಿರ್ಬಂಧಗಳಿಲ್ಲದೆ ಸ್ವಚ್ಛಂದವಾಗಿ ಆಹಾರ-ನಿದ್ರಾದಿಗಳನ್ನು ಸೇವಿಸುವುವು. ಅದೇ ವ್ಯವಹಾರಗಳಲ್ಲಿ ಒಂದು ಶಿಸ್ತನ್ನು, ಒಂದು ನಿಯಮವನ್ನು ಜೋಡಿಸಿದಾಗಲೇ ನಾವು ಧಾರ್ಮಿಕರಾಗುವೆವು. ಧರ್ಮವೆಂದರೆ ಲೌಕಿಕ ವ್ಯವಹಾರಗಳ ಪರಿವರ್ಜನೆಯಲ್ಲ. ಪಶುಗಳೂ ನಡೆಸುವಂತಹ ಈ ವ್ಯವಹಾರಗಳಲ್ಲಿ ಧರ್ಮನೀತಿಗಳನ್ನು ಜೋಡಿಸಿದಾಗಲೇ ನಾವು ಮಾನವರಾಗಬಲ್ಲೆವು. ಡಾರ್ವಿನ್ ವಾದದಂತೆ ಪಶುಗಳೇ ವಿಕಾಸವನ್ನು ಹೊಂದಿ ಮಾನವರಾಗಿ ಪರಿವರ್ತಿತರಾಗಿರುವರೆಂದು ವಿಜ್ಞಾನಿಗಳು ಹೇಳುತ್ತಿದ್ದರೆ, ಮಾನವರೇ ಪಶುಗಳಾಗಿ ಪರಿವರ್ತನೆಗೊಂಡು ಡಾರ್ವಿನ್ ವಾದದ ತಿರುವು ಮುರುವು ನಡೆದಿದೆಯೇನೋ ಎನ್ನುವ ರೀತಿಯ ಕಪಿಚೇಷ್ಟೆ ಪಶುವರ್ತನೆಗಳನ್ನು ಜಗತ್ತಿನಲ್ಲಿ ನಾವು ಎಲ್ಲೆಡೆಗಳಲ್ಲಿಯೂ ನೋಡುತ್ತಿರುವೆವು.

**ಆಹಾರ**

ಮದ್ಯ-ಮಾಂಸಗಳಂತಹ ದುಷ್ಟ ಖಾದ್ಯಪೇಯಗಳನ್ನು ಪರಿತ್ಯಜಿಸಿ ಶರೀರ ಮನಸ್ಸುಗಳಿಗೆ ಹಿತಕರವಾದ ಶುಚಿ ಆಹಾರವನ್ನು ಸೇವಿಸುವುದೇ ಭೋಜನ ವ್ಯವಹಾರದಲ್ಲಿ ನಾವು ಅಳವಡಿಸಬೇಕಾದ ಶಿಸ್ತು ನಿಯಮಗಳಾಗಿವೆ. ಅದನ್ನು ನಿಯತವೇಳೆಯಲ್ಲಿ ಸ್ವೀಕರಿಸುವುದು, ಭಗವಂತನಿಗೆ ಸಮರ್ಪಿಸಿ ಅವನ ಪ್ರಸಾದವೆಂದು ಪರಿಗ್ರಹಿಸುವುದು, ಮೊದಲಾದ ನೀತಿ ನಿಯಮಗಳನ್ನು ಜೋಡಿಸಿದಾಗಲೇ ನಮ್ಮದು ಸಾತ್ತ್ವಿಕ ಭೋಜನವಾಗುವುದು. ನಿದ್ರೆ, ಕಾಮವ್ಯವಹಾರಗಳಲ್ಲಿಯೂ ಇಂತಹವೇ ನೀತಿ ನಿರ್ಬಂಧಗಳನ್ನು ಸಮಾವೇಶಗೊಳಿಸಿದಲ್ಲಿ ಅವುಗಳಲ್ಲಿಯೂ ಸಾತ್ತ್ವಿಕತೆಯು ತುಂಬುವುದು.

ನಾವು ಸ್ವೀಕರಿಸಿದ ಆಹಾರವೇ ನಮ್ಮ ಮನೋಬುದ್ಧಿಗಳಾಗಿ ಪರಿಣತಿಗೊಳ್ಳುವುದು.

**ಅನ್ನಮಶಿತಂ ತ್ರೇಧಾ ಭವತಿ ।**

ನಾವು ಸೇವಿಸಿದ ಆಹಾರವು ಮೂರು ರೀತಿಯಲ್ಲಿ ವಿಭಕ್ತವಾಗುವುದು. ಅದರ ಒಂದು ಸೂಕ್ಷ್ಮ ಭಾಗವೇ ನಮ್ಮ ಮನಸ್ಸಾಗಿ ಪರಿಣತಗೊಳ್ಳುವುದು ಎಂದು ಛಾಂದೋಗ್ಯೋಪನಿಷತ್ತಿನಲ್ಲಿ ಉಲ್ಲೇಖವಿದೆ. ನಾವು ಸ್ವೀಕರಿಸುವ ಆಹಾರದ ಗುಣಧರ್ಮಗಳನ್ನನುಸರಿಸಿಯೇ ನಮ್ಮ ಮನಸ್ಸಿನಲ್ಲಿ ವಿಕೃತಿ, ಸಂಸ್ಕೃತಿಗಳಿವೆ. ಶರೀರಕ್ಕೆ ಪೋಷಕವಾಗಿರುವ ಮಾಂಸಾಹಾರವನ್ನು ಏಕೆ ಸ್ವೀಕರಿಸಬಾರದೆಂದು ಕೆಲವರು ಕೇಳುವುದುಂಟು. ಅದರಿಂದ ನಮ್ಮ ಶರೀರವೇನೋ ಉಬ್ಬಬಹುದು. ಆದರೆ ನಮ್ಮ ಆತ್ಮ ಅಂತಃಕರಣಗಳು ಪೂರ್ತಿಯಾಗಿ ಕುಗ್ಗುವವು. ಇಂತಹ ಆಹಾರಗಳಿಂದ ಶರೀರವು ಪರಿಪುಷ್ಟವಾಗಿ ಬೆಳೆದರೂ ಸ್ವೇಚ್ಛಾಚಾರ, ವಿಲಾಸಪ್ರವೃತ್ತಿ, ದೌಷ್ಟ್ಯಗಳೂ ಅಂತಃಕರಣದಲ್ಲಿ ಅದೇ ಪ್ರಮಾಣದಲ್ಲಿ ವೃದ್ಧಿಹೊಂದುವುವು. ಸಾತ್ತ್ವಿಕ ಆಹಾರದಿಂದಲೇ ಮನಸ್ಸು ಸಾತ್ತ್ವಿಕವಾಗಿ ಪರಿಣಮಿಸುವುದು. ನ್ಯಾಯವಾದ ಪದ್ಧತಿಯಿಂದ

ಯೋಗ್ಯ ಆಹಾರವನ್ನು ಗಳಿಸಿ ಭಗವಂತನಿಗೆ ನಿವೇದಿಸಿ ಸ್ವೀಕರಿಸುವುದೇ ವಿಹಿತವಾದ ಸಾತ್ತ್ವಿಕ ಭೋಜನದ ರೀತಿಯಾಗಿದೆ. ಇದರಿಂದಲೇ ನಮ್ಮ ಶರೀರವೂ ಮನಸ್ಸೂ ಪುನೀತವಾಗುವುವು. ಆಹಾರದಿಂದ ನಮ್ಮ ಮನಸ್ಸಿನ ಮೇಲೆ ಆಗುವ ಪರಿಣಾಮದ ಬಗ್ಗೆ ಒಂದು ಮನೋರಂಜಕವಾದ ಕಥೆಯು ಪ್ರಚಲಿತವಿದೆ. ಮಹಾಭಾರತದ ಯುದ್ಧವು ಮುಗಿದ ಮೇಲೆ ಧರ್ಮರಾಜನ ಮನಃಶಾಂತಿಗಾಗಿ ಭೀಷ್ಮರು ವಿವಿಧ ಧರ್ಮಗಳನ್ನು ವಿಸ್ತಾರವಾಗಿ ಬೋಧಿಸುವರು. ಇದನ್ನು ಕೇಳಿದ ದ್ರೌಪದಿಯು ಪ್ರಶ್ನಿಸುವಳು– 'ಧರ್ಮದ ಬಗ್ಗೆ ಧಾರಾಳವಾಗಿ ಉಪದೇಶ ಮಾಡುವ ತಾವು ನನ್ನ ಮಾನಹರಣವನ್ನು ದುರ್ಯೋಧನ ದುಃಶಾಸನರು ನಡೆಸಿದಾಗ ಅನ್ಯಾಯವನ್ನು ಪ್ರತಿಭಟಿಸದೇ ಏಕೆ ತಟಸ್ಥರಾದಿರಿ ? ಆಗ ಧರ್ಮಪ್ರಜ್ಞೆಯು ಏಕೆ ಜಾಗೃತವಾಗಲಿಲ್ಲ ?' ಇದಕ್ಕೆ ಭೀಷ್ಮರು ನೀಡಿದ ಉತ್ತರವಿದು – 'ದ್ರೌಪದಿ, ಅಂದು ನಾನು ದುರ್ಯೋಧನನು ನೀಡಿದ ಅನ್ನವನ್ನು ಸ್ವೀಕರಿಸುತ್ತಿದ್ದೆ. ಆ ಪಾಪದ ಅನ್ನವನ್ನು ಉಂಡು ಕೊಬ್ಬಿದ ಈ ದೇಹದಲ್ಲಿ ಧರ್ಮಪ್ರಜ್ಞೆಯ ಸುಳಿವೇ ಇರಲಿಲ್ಲ. ದುಷ್ಟ ಆಹಾರದ ಪರಿಣಾಮವಾದ ತಾಮಸವೃತ್ತಿಯ ಅಬ್ಬರದಲ್ಲಿ ಧರ್ಮದ ದನಿಯೆ ಆಗ ಕೇಳಿಸದಂತಿತ್ತು. ಮಹಾಭಾರತ ಯುದ್ಧದಲ್ಲಿ ಅರ್ಜುನನ ಬಾಣವರ್ಷಗಳಿಂದ ನನ್ನ ಶರೀರದಿಂದ ರಕ್ತಧಾರೆಯೆಲ್ಲ ಹೊರಗೆ ಹರಿದಿದೆ. ದುರ್ಯೋಧನನು ನೀಡಿದ ಆಹಾರವನ್ನು ಸೇವಿಸಿ ಸಿದ್ಧವಾದ ರಕ್ತ ಧಾರೆ ಹರಿದುಹೋಗಿ ಅಸ್ಥಿಮಾತ್ರವಾದ ನನ್ನ ಶರೀರವು ಈಗ ಪರಿಶುದ್ಧವಿದೆ. ಆ ದುಷ್ಟ ಆಹಾರದ ಪರಿಣಾಮ ವಿಕೃತಿಗಳಾವುವೂ ಈಗ ನನ್ನಲ್ಲಿ ಕಂಡು ಬರುವುದಿಲ್ಲ. ಸ್ವಾಭಾವಿಕವಾಗಿ ಧರ್ಮಪ್ರಜ್ಞೆಯು ಜಾಗೃತವಾದುದರಿಂದಲೇ ಈಗ ವಿಸ್ತಾರವಾದ ಉಪದೇಶವನ್ನು ನಾನು ನೀಡುವಂತಾಗಿದೆ.'

ಆದುದರಿಂದಲೇ ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಆಹಾರಸೇವನೆಯ ಬಗ್ಗೆ ವಿಶಿಷ್ಟ ಹಾಗೂ ಹಿತಕರ ನಿರ್ಬಂಧಗಳಿಗೆ ಪ್ರಾಶಸ್ತ್ಯವನ್ನು ನೀಡಲಾಗಿದೆ. ಮಾಂಸಾಹಾರವನ್ನು ಪೂರ್ತಿಯಾಗಿ ಪರಿತ್ಯಜಿಸಿ ಶಾಖಾಹಾರವನ್ನೇ ಸ್ವೀಕರಿಸುವ ನಮ್ಮ ಭಾರತೀಯ ಪರಂಪರೆಯನ್ನು ಕಂಡು ವಿದೇಶಿಯರು ಅಚ್ಚರಿಪಟ್ಟಿದ್ದಾರೆ. ಶತಶತಮಾನಗಳಿಂದ ಆಹಾರದ ಈ ಸಾತ್ತ್ವಿಕನಿಯಮಗಳು ಸಹಜವಾಗಿ ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿ ನಮ್ಮ ಭಾರತೀಯಸಂಸ್ಕೃತಿಯು ದೊಡ್ಡ ಪವಾಡವನ್ನೇ ಮಾಡಿದೆ. ಯಜ್ಞ ದಾನ ತಪಸ್ಸುಗಳನ್ನೂ ದುರಭಿಸಂಧಿಯಿಂದ, ಪ್ರತಿಫಲಾಪೇಕ್ಷೆಯಿಂದ, ಪ್ರದರ್ಶನ ಮನೋಭಾವದಿಂದ, ಅಸಡ್ಡೆ ಅಹಂಕಾರಗಳಿಂಧ ನಡೆಸಿದರೆ ಲೋಕಕ್ಕೆ ಹಾನಿ ಉಪಪ್ಲವಗಳೇ ಆಗುವುವು. ರಾಜಸ ತಾಮಸಗಳಾದ ಈ ಧಾರ್ಮಿಕ ವ್ಯವಹಾರಗಳೆಲ್ಲವೂ ಅಧರ್ಮವೆಂದೇ ಪರಿಗಣಿಸಲ್ಪಟ್ಟಿವೆ. ಧರ್ಮದ ಈ ವಿಕೃತರೂಪವನ್ನು ಇಂದು ನಾವು ಲೋಕದಲ್ಲಿ ಹೆಚ್ಚಾಗಿ ಕಾಣುತ್ತಿದ್ದೇವೆ.

## ದಾನ

ದಾನವು ಭಗವಂತನು ಮಾನವರಿಗೆ ನೀಡಿದ ಶ್ರೇಷ್ಠ ಕೊಡುಗೆ. ದೇವ, ಅಸುರ, ಮಾನವರಿಗೆ ಸೃಷ್ಟಿಕರ್ತರಿಂದ 'ದ' ಎಂಬ ಉಪದೇಶವನ್ನು ಕೊಡಲಾಯಿತು. ಅಹಂಕಾರಕ್ಕೆ ವಶರಾದ ದೇವತೆಗಳಿಗೆ ದಮ ಅರ್ಥಾತ್ ಆತ್ಮನಿಗ್ರಹದ ಸಂದೇಶವು ಇದರಿಂದ ದೊರಕಿದರೆ, ಹಿಂಸಾ ವೃತ್ತಿಯ ಕ್ರೂರ ಅಸುರರು ದಯೆಯ ಪಾಠವನ್ನು ಈ ಉಪದೇಶದಿಂದ ಪಡೆದರು; ಲೋಭವೃತ್ತಿಯ ಮಾನವರು ಈ 'ದ'ದಿಂದ ದಾನದ ಸ್ಫೂರ್ತಿಯನ್ನು ಪಡೆದರು ಎಂದು ಉಪನಿಷತ್ತಿನಲ್ಲಿ ಕಥೆ ಇದೆ. ಮಾನವರು ತಮ್ಮಲ್ಲಿದ್ದುದನ್ನೆಲ್ಲ ಭಗವಂತನ ಸೇವೆಯೆಂದು ಸಮಾಜಕ್ಕೆ ನೀಡುವ ಉದಾರತೆಯನ್ನು ಪಡೆದು ಆದರ್ಶ ಮಾನವರಾಗಲು ಪ್ರಯತ್ನಿಸಬೇಕು. ಈ ದಾನದಲ್ಲಿಯೂ ರಾಜಸ ತಾಮಸ ಭಾವದ ಪ್ರವೇಶಕ್ಕೆ ಅವಕಾಶವಿದೆ. ಪ್ರತ್ಯುಪಕಾರದ ಅಪೇಕ್ಷೆಯಿಂದ, ಕುಹಕ ದೃಷ್ಟಿಯಿಂದ ಮಾಡಿದ ದಾನವು ತನ್ನ ಪವಿತ್ರತೆಯನ್ನು ಕಳೆದುಕೊಳ್ಳುವುದು. ದಾಕ್ಷಿಣ್ಯಕ್ಕೆ ಒಳಗಾಗಿ ಪರಿಕ್ಲೇಶದಿಂದ ನೀಡುವ ದಾನವೂ ಇಂತಹುದೇ. ತಮ್ಮ ಅಧಿಕಾರ ಹಂಗುಗಳನ್ನು ಸ್ಥಾಪಿಸುವ ಕುತಂತ್ರದಿಂದ ಪ್ರಬಲ ರಾಷ್ಟ್ರಗಳು ಹಿಂದುಳಿದ ರಾಷ್ಟ್ರಗಳಿಗೆ ನೀಡುವ ದುರುದ್ದೇಶಪೂರ್ಣವಾದ ದಾನವೈಖರಿಯು ಅಂತಾರಾಷ್ಟ್ರೀಯ ರಂಗದಲ್ಲಿ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿದೆ. ಅಧಿಕಾರದ ಬಲವನ್ನು ಉಪಯೋಗಿಸಿ ಶ್ರೀಮಂತರಿಂದ ದಾನವನ್ನು ಪಡೆಯುವದಂತೂ ವಾಡಿಕೆಯ ಸಂಗತಿಯೇ ಆಗಿದೆ. ಹೀಗೆ ನಾನಾರೀತಿಯ ದಾನದ ಆಭಾಸಗಳು ಈಗ ಜಗತ್ತಿನಲ್ಲಿ ಪ್ರಚಲಿತವಾಗಿವೆ. ಎಲ್ಲೆಲ್ಲಿಯೂ ಇಂತಹ ದಾನದ ಅಸಾತ್ತ್ವಿಕ ದೃಶ್ಯಗಳೇ ಕಂಡುಬರುತ್ತದೆ. ಮಾನವೀಯ ಅನುಕಂಪದಿಂದ ಪ್ರೇರಿತವಾದ ಸ್ವಾರ್ಥನಿರಪೇಕ್ಷವಾದ ಪುಣ್ಯತಮ ಸಾತ್ತ್ವಿಕ ದಾನವು ಇಂದು ಅಪೂರ್ವವೇ ಆಗಿದೆ. ಪ್ರತಿಯೊಂದು ದಾನದ ಹಿನ್ನೆಲೆಯಲ್ಲಿಯೂ ಏನಾದರೂ ಕುಹಕ ಕುತಂತ್ರಗಳು ಅಡಕವಾಗಿರುತ್ತವೆ.

## ತಪಸ್ಸು

ತಪಸ್ಸಿಗೂ ಸಾಧಕರು ಪ್ರಾಮುಖ್ಯದ ಸ್ಥಾನವನ್ನು ನೀಡುವರು. ಜೀವನದ ಪರಮ ಸುಖವನ್ನು ನಾವು ಶರೀರದ ಆರಾಧನೆಯಿಂದಲೇ ಪಡೆಯಲಾರೆವು. ಕಬ್ಬನ್ನು ಅಭಿಷೇಕ ಆರತಿಗಳಿಂದ ಪೂಜಿಸಿದರೆ ಅದರ ರಸವು ದೊರಕದು. ಹಿಂಡಿದಾಗಲೇ ಅದರ ಮಧುರ ರಸವನ್ನು ಆಸ್ವಾದಿಸಲು ಸಾಧ್ಯವಾಗುವುದು. ಜೀವನದ ಅಮೂಲ್ಯ ರಸವೂ ಶರೀರಕ್ಕೆ ನಾವು ಮಾಡುವ ಷೋಡಶೋಪಚಾರಗಳಿಂದ ದೊರೆಯದು. ನಮ್ಮ ಶರೀರ ಮನಸ್ಸುಗಳಿಗೆ ತಪಸ್ಸಿನ ಸಂಸ್ಕಾರವನ್ನು ನೀಡಿದರೆ ಜ್ಞಾನ ಸುಖಗಳ ಅಮೃತಧಾರೆಯು ಜೀವನದಲ್ಲಿ ಹರಿಯುವುದನ್ನು ನಾವು ಕಾಣಬಲ್ಲೆವು. ನಮ್ಮ ವಾಕ್ ಕಾಯ ಮನಸ್ಸುಗಳನ್ನು ತಪಸ್ಸಿನಿಂದ ಪವಿತ್ರಗೊಳಿಸಬೇಕು. ಯಾರಿಗೂ ಉದ್ವೇಗಕರವಾಗದ, ಸತ್ಯವೂ ಮಧುರವೂ ಆದ ಮಾತೇ ನಮ್ಮ ನಾಲಿಗೆಯಲ್ಲಿರಬೇಕು.

**ಸ್ಮಿತಪೂರ್ವಾಭಿಭಾಷೀ ಚ ।**

ಎಂದು ರಾಮಾಯಣದಲ್ಲಿ ಶ್ರೀರಾಮನನ್ನು ವರ್ಣಿಸಲಾಗಿದೆ. ಯಾವಾಗಲೂ ನಗುಮೊಗದ ಮಾತುಗಳಿಂದ ಶ್ರೀರಾಮನು ಜನರ ಹೃದಯವನ್ನು ಸೂರೆಗೊಳ್ಳುತ್ತಿದ್ದನಂತೆ. ಮಾತಿನಲ್ಲಿ ಸೌಂದರ್ಯ ಸೌಜನ್ಯಗಳು ತುಂಬಿರಬೇಕು. ಒರಟು, ಕಠೋರ ಭಾಷೆಯನ್ನು ಬಳಸಬಾರದು. ಇಂದ್ರಿಯನಿಗ್ರಹ, ಅಹಿಂಸೆ, ಪರಮಾತ್ಮನ ಮತ್ತು ಹಿರಿಯರ ಸೇವೆಯನ್ನು ಮಾಡುವುದು ಇವು ಶಾರೀರಿಕ ತಪಸ್ಸು ಎಂದೆನಿಸಿದರೆ ಆತ್ಮನಿಗ್ರಹ, ಮನೋನೈರ್ಮಲ್ಯಗಳೇ ಮಾನಸ ತಪಸ್ಸೆಂದು ಪರಿಗಣಿತವಾಗಿದೆ. ಇಲ್ಲಿಯೂ ದಂಭ, ದುರಭಿಸಂಧಿಗಳಿಗೆ ಪ್ರವೇಶ ದೊರೆತರೆ ಅದರ ಪಾವಿತ್ರ್ಯ ಹಾಗೂ ಸಾತ್ತ್ವಿಕತೆಯು ಭ್ರಷ್ಟವಾಗುವುದು.

**ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥** (17.28)

***

**ಜ್ಞಾನ**

**ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥** (18.1)

ಹೀಗೆಯೇ ನಮ್ಮ ಜ್ಞಾನ, ಕೃತಿ, ಸುಖ ಮುಂತಾದ ಎಲ್ಲ ದೈಹಿಕ, ಮಾನಸಿಕ ವ್ಯಾಪಾರಗಳನ್ನು ನಮ್ಮ ಮಾನಸಿಕ ಗುಣ-ದೋಷಗಳ ಹಿನ್ನೆಲೆಯಿಂದಾದ ಸಾತ್ತ್ವಿಕ, ರಾಜಸ, ತಾಮಸಗಳೆಂದು ವರ್ಗೀಕರಿಸಬೇಕು. ಈ ವಿಭಾಗದಿಂದಾಗಿ ಪ್ರತಿಯೊಂದು ಕೃತಿಯನ್ನೂ ಅದರ ಬಾಹ್ಯ ಪರಿಮಾಣಗಳಿಂದ ಅಳೆಯದೆ, ಆಂತರಿಕ ಭಾವಶುದ್ಧಿಯ ಆಧಾರದಿಂದ ಸತ್, ಅಸತ್ ಕೃತಿಗಳನ್ನು ತೂಗಿ ನೋಡುವ ವಿವೇಕಶಕ್ತಿಯು ನಮ್ಮಲ್ಲಿ ಬೆಳೆಯುವುದು. ನಾವು ಎಷ್ಟೋ ಧರ್ಮಕೃತಿಗಳನ್ನು ಮಾಡುತ್ತಿದ್ದರೂ ಅವು ಹೇಗೆ ನಮ್ಮ ಮನೋದೋಷಗಳಿಂದ ಕಲುಷಿತವಾಗಿರುತ್ತವೆ ಎಂಬುದನ್ನು ಅರ್ಥ ಮಾಡಿಕೊಳ್ಳಲು ಗೀತೆಯು ಮಾಡಿದ ಈ ವಿವೇಚನೆಯು ನಮಗೆ ಸಹಾಯಕವಾಗಿದೆ.

ನಮ್ಮ ಜ್ಞಾನವು ಪ್ರಪಂಚದ ತತ್ತ್ವಗಳನ್ನು ಅವುಗಳ ಯಥಾರ್ಥರೂಪದಲ್ಲಿ ಗ್ರಹಿಸಲು ಶಕ್ತವಾದಾಗಲೇ ಅದು ಸಾತ್ತ್ವಿಕವಾಗುವುದು. ಸರ್ವವಸ್ತುಗಳಲ್ಲಿಯೂ ಅನುಸ್ಯೂತನಾಗಿರುವ ಸರ್ವೋತ್ತಮನಾದ ಪರಬ್ರಹ್ಮನ ತಿಳುವಳಿಕೆಯೇ ಸಾತ್ತ್ವಿಕ ಜ್ಞಾನವು.

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥** (18.20)

ಕೆಲವರು ಅದ್ವೈತಜ್ಞಾನವೇ ಸಾತ್ತ್ವಿಕಜ್ಞಾನವೆಂದೂ, ದ್ವೈತಜ್ಞಾನವು ರಾಜಸ-ತಾಮಸ ವರ್ಗದಲ್ಲಿ ಅಂತರ್ಗತವಾಗಿದೆಯೆಂದೂ ಇಲ್ಲಿ ವ್ಯಾಖ್ಯಾನವನ್ನು ಬರೆದಿರುವರು. ಇಲ್ಲಿರುವ,

**'ಅವಿಭಕ್ತಂ ವಿಭಕ್ತೇಷು'**

ಎನ್ನುವ ವಾಕ್ಯವನ್ನು ಪರಿಶೀಲಿಸಿದಲ್ಲಿ ಇಂತಹ ಭ್ರಮೆಗೆ ಅವಕಾಶವಾಗದು. ವಸ್ತುಗಳಲ್ಲಿ ಭೇದವಿದೆ; ಜೀವ, ಜಡವರ್ಗದಲ್ಲಿ ಅನೇಕ ರೀತಿಯ ಪರಿಭೇದ-ವೈವಿಧ್ಯಗಳಿವೆ. ಈ ಅನಂತ ಭೇದಗಳುಳ್ಳ ಪ್ರಪಂಚವನ್ನು ಏಕಸೂತ್ರಿತಗೊಳಿಸುವ ಪರಮಾತ್ಮನು ಒಬ್ಬನೇ. ಜಗತ್ತಿನಲ್ಲಿರುವ ಭಿನ್ನತೆ, ವಿಕಾರಗಳಿಂದ ಅದರೊಳಗೆ ನೆಲೆಸಿರುವ ಭಗವಂತನ ರೂಪಗಳು ಬೇರ್ಪಡುವುದಿಲ್ಲ; ಯಾವ ವಿಕಾರಗಳಿಗೂ ಒಳಪಡುವುದಿಲ್ಲ. ಪ್ರತಿ ಶರೀರದಲ್ಲಿ ಜೀವರು ಬೇರೆ ಬೇರೆ ಇರಬಹುದು. ಆದರೆ ವಸ್ತು-ವಸ್ತುಗಳಲ್ಲಿ ಅವುಗಳ ನಿಯಮನ ಮಾಡಲು ನೆಲೆಸಿರುವ ಭಗವಚ್ಚೈತನ್ಯವನ್ನು ವಸ್ತುವಿಭಾಗ ದಿಂದ ವಿಭಜಿಸಲಾರೆವು. ಅದು ಅಖಂಡವಾಗಿ ಸರ್ವವ್ಯಾಪಿಯಾಗಿ ಏಕಮೇವಾದ್ವಿತೀಯ ವಾಗಿ ಪರಿಗಣಿತವಾಗಿದೆ. ಈ ಜ್ಞಾನವನ್ನೇ ಇಲ್ಲಿ ಸಾತ್ತ್ವಿಕವೆಂದು ವರ್ಣಿಸಿರುವುದಾಗಿದೆ. ವಸ್ತುಗಳ ಭೇದ, ವೈವಿಧ್ಯಗಳನ್ನು 'ವಿಭಕ್ತೇಷು' ಎಂದು ಸ್ಪಷ್ಟವಾಗಿ ಹೇಳಿ ಅದರೊಳಗಿರುವ ಪರಮಾತ್ಮನ 'ಅವಿಭಕ್ತ'ರೂಪದ ಜ್ಞಾನವನ್ನು ಇಲ್ಲಿ ಸಾತ್ತ್ವಿಕವೆಂದು ಹೇಳಿದೆ.

ಈ ದೃಶ್ಯಪ್ರಪಂಚವನ್ನು ಮತ್ತು ಅದರ ಭೇದವೈಚಿತ್ರ್ಯವನ್ನು ಗ್ರಹಿಸಿದರೂ ಅದರೊಳಗಿನ ಭಗವತ್ತತ್ತ್ವದ ಬಗ್ಗೆ ಮಾತ್ರ ಉದಾಸೀನವೂ ಸಂಶಯಗ್ರಸ್ತವೂ ಆದ ತಿಳುವಳಿಕೆಯೇ ರಾಜಸವಾದ ಜ್ಞಾನವು. ಭೌತಿಕವಿಜ್ಞಾನದಿಂದ ಈ ರಾಜಸಜ್ಞಾನವೇ ಹೆಚ್ಚಾಗಿ ಬೆಳೆಯುತ್ತದೆ. ಪರಮಾತ್ಮನನ್ನು ಹೊರತು ಉಳಿದ ವಸ್ತುಗಳ ಅಭ್ಯಾಸ, ಸಂಶೋಧನೆಗಳು ತೀವ್ರಗತಿಯಿಂದ ನಡೆದಿರುವುದರಿಂದ ವಿಶ್ವದಲ್ಲಿಯ ಸತ್ಯಗಳ ಅರಿವು ಹೆಚ್ಚುತ್ತಿದ್ದರೂ ಪ್ರಧಾನಸತ್ಯನಾದ ಪರಮಾತ್ಮನನ್ನು ಕಡೆಗಣಿಸಿ ಗೌಣವಸ್ತುಗಳ ಪರಿಜ್ಞಾನಕ್ಕೇ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಲಾಗುತ್ತದೆ. ಇದು ರಾಜಸಪ್ರವೃತ್ತಿಯೇ ಆಗಿದೆ.

ಇನ್ನು ಕಾರ್ಯವಾದ ಈ ದೃಶ್ಯಪ್ರಪಂಚವನ್ನು ಮಾತ್ರ ಒಪ್ಪಿ ಅದರ ಕಾರಣನಾದ ಪರಮಾತ್ಮ ನನ್ನು ನಿರಾಕರಿಸುವ ನಾಸ್ತಿಕ್ಯವಿಚಾರವು ತಾಮಸ ಜ್ಞಾನವಾಗಿದೆ.

**ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ ।** (18.22)

ಜಗತ್ತಿನ ಒಂದು ಭಾಗವನ್ನು ಪರಿಪೂರ್ಣವಾದ ಜಗತ್ತೆಂದು ಭಾವಿಸಿ, ಉಳಿದುದನ್ನು ನಿರಾಕರಿಸುವ ಏಕದೇಶಜ್ಞಾನವು ನಮ್ಮನ್ನು ತಪ್ಪುದಾರಿಗೆ ಎಳೆಯುವ ತಾಮಸಜ್ಞಾನವಾಗಿದೆ. ಜೀವನನ್ನು ಮಾತ್ರ ಅಂಗೀಕರಿಸಿ, ಅವನಿಂದ ವ್ಯತಿರಿಕ್ತವಾದ ಬ್ರಹ್ಮವಸ್ತುವನ್ನು ನಿರಾಕರಿಸುವ, ಜಗದೀಶ್ವರನನ್ನು ಅಲ್ಲಗಳೆದು ದೃಶ್ಯಜಗತ್ತು ಮಾತ್ರ ಸತ್ಯವೆನ್ನುವ, ಬ್ರಹ್ಮನನ್ನು ಮಾತ್ರ ಒಪ್ಪಿ ಜಗತ್ತನ್ನು

ಬಥ್ಯೆ ಎಂದು ಗ್ರಹಿಸುವ ಏಕದೇಶವನ್ನೇ ಸರ್ವಸ್ವವೆಂದು ಭಾವಿಸುವ ಜ್ಞಾನಗಳೆಲ್ಲವೂ ತಾಮಸ ಜ್ಞಾನದ ಪ್ರಭೇದಗಳೇ.

**ಸುಖ**

ಸುಖವೂ ಇದೇ ರೀತಿಯಲ್ಲಿ ಅನೇಕ ಬಗೆಯದಾಗಿದೆ. ಸುಖವನ್ನು ಪಡೆಯಲು ನಾವು ಬಳಸುವ ಸಾಮಗ್ರಿಯನ್ನನುಸರಿಸಿ ಸುಖದ ವಿಭಾಗವನ್ನು ಮಾಡಬೇಕು. ಕಜ್ಜಿಯನ್ನು ತುರಿಸುವಾಗ ದೊರೆಯುವ ಸುಖದಂತೆ ವೈಷಯಿಕ ಪದಾರ್ಥಗಳಿಂದ ತಾತ್ಕಾಲಿಕ ಆನಂದವು ದೊರಕಿದರೂ ಮುಂದೆ ಕ್ಲೇಶದ ಅನುಭವವಾಗುವುದರಿಂದ ವೈಷಯಿಕ ಸುಖವು ರಾಜಸವಾಗಿದೆ. ನಮ್ಮಲ್ಲಿ ಆತ್ಮವಿಸ್ಮೃತಿಯನ್ನು ನಿರ್ಮಿಸಿ ಕತ್ತಲಲ್ಲಿ ಕೆಡಹುವ ವಿಕೃತ ಸುಖವು ಕೊಲೆ, ಸುಲಿಗೆ, ಮದ್ಯಪಾನಗಳಂತಹ ದುಷ್ಟ ವ್ಯವಹಾರಗಳಲ್ಲಿ ದೊರಕುವುದು. ಇವೆಲ್ಲವೂ ತಾಮಸ ಸುಖದ ಸಾಲಿನಲ್ಲಿಸೇರುವುವು. ಆರಂಭದಲ್ಲಿ ಕ್ಲೇಶ ಕಷ್ಟಗಳೊದಗಿದರೂ ಚಿರಕಾಲದ ತೃಪ್ತಿ ಪ್ರಸನ್ನತೆಗಳನ್ನು ನೀಡುವ ತಾತ್ತ್ವಿಕಸುಖ ನಮ್ಮ ಲಕ್ಷ್ಯವಾಗಿರಬೇಕು. ಇದು ಭಗವಂತನ ಜ್ಞಾನ, ಧ್ಯಾನ, ಪ್ರಸಾದಗಳಿಂದಲೇ ದೊರೆಯುವುದು. ಇಂತಹ ನೈಜವಾದ ಸುಖದ ಬದಲು ವೈಷಯಿಕವಾದ ಕೃತ್ರಿಮ ಸುಖವೇ ಮಹತ್ತರವೆಂದು ಅದಕ್ಕಾಗಿ ಜನತೆ ಚಡಪಡಿಸುತ್ತದೆ. ನಿಜವಾದ ಹಾಲಿನ ರುಚಿಯನ್ನೇ ತಿಳಿಯದ ಅಶ್ವತ್ಥಾಮನು ತನಗೂ ಹಾಲು ಬೇಕೆಂದು ತಾಯಿಯಲ್ಲಿ ಹಠ ಹಿಡಿಯುವನು. ಆದರೆ ತಮ್ಮ ಬಡತನದಲ್ಲಿ ಅಶ್ವತ್ಥಾಮನಿಗೆ ಹಸುವಿನ ಹಾಲನ್ನು ಅವಳು ಎಲ್ಲಿಂದ ಒದಗಿಸುವಳು? ಹಿಟ್ಟಿನ ನೀರನ್ನೇ ಹಾಲೆಂದು ಅವಳು ನೀಡಿದಾಗ ಅದನ್ನು ಕುಡಿದು ತಾನೂ ಹಾಲನ್ನು ಕುಡಿದನೆಂಬ ಸಂತಸದಿಂದ ಅಶ್ವತ್ಥಾಮನು ಕುಣಿದಾಡುವನು. ನಮ್ಮ ಆತ್ಮದಲ್ಲಿಯೇ ಇರುವ ನೈಜಸುಖದ ಸವಿಯನ್ನು ಅರಿತುಕೊಳ್ಳದೆ ಸಂಸಾರದ ಮೋಹಕವಾದ ಕೃತ್ರಿಮ ಸುಖಕ್ಕಾಗಿ ಬಾಯಿಬಿಡುವ ನಮ್ಮ ಚೇಷ್ಟೆಗಳನ್ನು ನೋಡುವಾಗ ಈ ಅಶ್ವತ್ಥಾಮನ ಕತೆಯು ನೆನಪಾಗುತ್ತದೆ.

**ಶರಣಾಗತಿ**

ಈವರೆಗಿನ ವಿಸ್ತೃತ ನಿರೂಪಣೆಯಿಂದ ಅರ್ಜುನನ ಪ್ರಶ್ನೆಗಳಿಗೆಲ್ಲ ಸರಿಯಾದ ಸಮಾಧಾನವು ದೊರೆತಿದೆ. ಆತ್ಮ, ಪರಮಾತ್ಮ ಹಾಗೂ ಪ್ರಾಕೃತ ಜಡಪದಾರ್ಥಗಳ ಪರಸ್ಪರ ಸಂಬಂಧ ಮತ್ತು ಪ್ರಪಂಚದಲ್ಲಿ ಅವುಗಳ ಕಾರ್ಯವಿಭಾಗ ಹಾಗೂ ಶಕ್ತಿಸ್ವಭಾವಗಳ ಸವಿಸ್ತಾರ ವಿವೇಚನೆಯಾಗಿದೆ. ಇದರಿಂದ ಜಗತ್ತಿನಲ್ಲಿ ವ್ಯಕ್ತಿಯ ಪಾತ್ರವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲು ಅವಕಾಶವಾಗಿದೆ. ಪ್ರಕೃತಿಯ ಸಂಬಂಧವು ಅನಾದಿ ಕಾಲದಿಂದಲೂ ಇರುವುದರಿಂದ ಪ್ರಕೃತಿಯ ಆವರಣವು ನಮ್ಮನ್ನು ನಿರ್ಬಂಧಿಸಿದೆ. ಬೇಡವೆಂದರೂ ಪ್ರಕೃತಿ ಸಂಬಂಧವಿರುವವರೆಗೆ ಅದರ ಕಾರ್ಯಪರಿಣಾಮಗಳಿಗೆ ನಾವು ಒಳಗಾಗಲೇಬೇಕು. ಈ ಪ್ರಕೃತಿಯಿಂದ ಅತೀತರಾಗುವುದೇ ನಮ್ಮ ಗುರಿಯಾಗಿದ್ದರೂ ಈ ಪ್ರಾಕೃತ ಜಗತ್ತಿನಲ್ಲಿ ಇರುವವರೆಗೆ ನಮ್ಮಲ್ಲಿರುವ

ಸಾಧನಸಾಮಗ್ರಿಯನ್ನೂ ಪ್ರಕೃತಿಯ ಶಕ್ತಿಯನ್ನೂ ಯೋಗ್ಯರೀತಿಯಿಂದ ಬಳಸಿಕೊಂಡು ನಮ್ಮ ಗುರಿಯನ್ನು ಮುಟ್ಟುವ ದಾರಿಯಲ್ಲಿ ನಡೆಯಬೇಕು. ಪ್ರಕೃತಿಯ ಸಂಬಂಧದಿಂದ ಮಾನವನಿಗೆ ಈ ಸಂಸಾರದ ಕ್ಲೇಶ ತಾಪಗಳೊದಗಿವೆ ಎಂದು ಅದರ ಮೇಲಿನ ದ್ವೇಷದಿಂದ ಈ ಜಗತ್ತಿನ ಯಾವ ವ್ಯವಹಾರಗಳೂ ಬೇಡವೆಂದು ನಿಷ್ಕ್ರಿಯರಾಗಿ ಕುಳಿತುಕೊಳ್ಳುವುದರಿಂದ ನಾವು ಏನನ್ನೂ ಸಾಧಿಸಿದಂತಾಗುವುದಿಲ್ಲ. ಪ್ರಕೃತಿಯ ಬಂಧನದಲ್ಲಿ ನಾವಿರುವೆವೆಂಬ ವಸ್ತುಸ್ಥಿತಿಯನ್ನು ಅರಿತು ಶಿಸ್ತು ಸಂಯಮಗಳಿಂದ ಇಲ್ಲಿ ವರ್ತಿಸಿ ಈ ಕಾರಾಗೃಹದಿಂದ ಬಿಡುಗಡೆಯಾಗಬೇಕೆಂಬುದನ್ನು ನಾವು ತಿಳಿದಿರಬೇಕು. ಪ್ರಕೃತಿಯನ್ನು ದ್ವೇಷಿಸಿ ಜಗತ್ತಿನ ಕರ್ತವ್ಯಗಳಲ್ಲಿ ಪಾಲುಗೊಳ್ಳಲಾಗದಿರುವುದರಿಂದ ಪ್ರಕೃತಿಯ ಸಾಗರವನ್ನು ದಾಟಬೇಕೆನ್ನುವುದು ನಮ್ಮ ಅದಮ್ಯ ಆಕಾಂಕ್ಷೆಯಾಗಿದ್ದರೆ ನಾವು ಪ್ರಕೃತಿಯ ಈಚೆಯ ದಡದಲ್ಲಿಯೇ ಕುಳಿತು ಸಾಗರದಲ್ಲಿ ಇಳಿಯಬೇಕೇ ಬೇಡವೇ ಎಂದು ಡೋಲಾಯಮಾನ ಚಿತ್ತದಿಂದ ಸಂಶಯಾಸ್ಕಂದಿತ ಮನಸ್ಕರಾಗಿ ಕಾಲಹರಣಮಾಡುವುದದಿಂದ ಏನು ಸಾಧಿಸಿದಂತಾಗುವುದು ? ಧೈರ್ಯದಿಂದ ಈ ಸಂಸಾರಸಾಗರದಲ್ಲಿ ನಾವು ಧುಮುಕಲೇಬೇಕು.

**ಈಸಬೇಕು ಇದ್ದು ಜೈಸಬೇಕು ।** – ಶ್ರೀಪುರಂದರದಾಸರು.

ಈ ಪ್ರವಾಹದಲ್ಲಿ ಇಳಿದರೂ ಅದರಲ್ಲಿ ಮುಳುಗದೆ 'ಈಸಿ ಜೈಸುವ' ಕಲೆಯನ್ನು ಗೀತೆಯು ನಮಗೆ ಹೇಳಿದೆ. ಆಸಕ್ತಿ ಮೋಹಗಳ ಪಾಶಗಳನ್ನು ಬಿಗಿದುಕೊಂಡು ಈ ಜಗತ್ತಿನಲ್ಲಿ ಇಳಿದರೆ ನಾವು ಇದರಿಂದ ಪಾರಾಗುವ ಸಂಭವವೇ ಇಲ್ಲ. ಅನಾಸಕ್ತಿಯಿಂದ ವಿಹಿತ ಕರ್ತವ್ಯಗಳನ್ನು ಆಚರಿಸಿಕೊಂಡಿದ್ದರೆ ಜಗತ್ತಿನ ಈ ಕರ್ಮಪ್ರವಾಹದಲ್ಲಿದ್ದರೂ ಅದರ ಯಾವ ಸೆಳೆವು ಸುಳಿಯೊಳಗೆ ಸಿಲುಕದೆ ಸಾಗಲು ನಮಗೆ ಸಾಧ್ಯವಾಗುವುದು.

ಜಗತ್ತಿನಲ್ಲಿದ್ದರೂ ಅದರ ಬಂಧವು ಬಿಗಿಯಾಗದಂತೆ ಅದರ ಸೆಳೆತದಲ್ಲಿ ಬಂಧನದಿಂದ ಪೂರ್ಣವಾಗಿ ಬಿಡುಗಡೆ ಹೊಂದುವ ಬಗೆಯನ್ನು ಆಲೋಚಿಸಬೇಕು. ಅನಾದಿಯಾದ ಈ ಪ್ರಕೃತಿಬಂಧದ ವಿಮೋಚನೆಯು ನಮ್ಮ ಶಕ್ತಿಗೆ ಮೀರಿದುದಾಗಿದೆ. ಇದು ನಮ್ಮ ಶಕ್ತಿಗೆ ಒಳಪಡುತ್ತಿದ್ದರು, ಇದನ್ನು ಅಡಗಿಸುವ ತೇಜಸ್ಸು ನಮ್ಮಲ್ಲಿ ಸ್ವಯಂಸಿದ್ಧವಾಗಿದ್ದರೆ ಈ ಕ್ಲೇಶ ವಿಪ್ಲವಗಳಿಗೆ ನಾವು ಈಡಾಗುತ್ತಿರಲಿಲ್ಲ. ಇದಕ್ಕಾಗಿ ಪ್ರಕೃತಿ ಜೀವರನ್ನೆಲ್ಲ ಮೀರಿಸುವ ವಿಶ್ವದ ಮಹಾಶಕ್ತಿಯ ಆಸರೆಯನ್ನು ಪಡೆಯಬೇಕು.

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।** (18.62)

ಅವನಲ್ಲಿ ಶರಣಾಗತರಾಗದೆ, ಅವನಲ್ಲಿ ಅನನ್ಯಭಕ್ತಿಯಿಂದ ನಡೆಯದೆ ಇದ್ದರೆ, ನಮ್ಮ ಜೀವನದ ಈ ಮಹಾ ಲಕ್ಷ್ಯವನ್ನು ಮುಟ್ಟಲಾರೆವು. ಮಗುವಿನ ಕೈಯಲ್ಲಿ ಮೂಸಂಬಿಯನ್ನು ಇತ್ತಂತೆ

ಮ್ಮ ಸ್ವರೂಪಾನಂದದ ನಿಧಿಯು ನಮ್ಮ ಕೈಯಲ್ಲೇನೋ ಇದೆ. ಮೂಸಂಬಿಯ ಹೊರ ಸಿಪ್ಪೆಯನ್ನು ೆಗೆಯಲು ಮಗುವಿಗೆ ಸಾಧ್ಯವಾಗುವುದೆ ? ತಾಯಿಯೇ ಅದನ್ನು ಮಗುವಿಗೆ ಸುಲಿದು ೀಡಬೇಕು. ಅದರಂತೆ ನಮ್ಮ ಸ್ವರೂಪಾನಂದದ ಹೊರಗಿನ ಪ್ರಕೃತಿಯ ಆವರಣವನ್ನು ಕಿತ್ತೊಗೆಯಲು ಸಾಧ್ಯವಾಗದೆ ನಮಗೆ ಈ ಆನಂದದ ನಿಧಿಯು ಇದ್ದರೂ ಇಲ್ಲದಂತೆ. ಭಗವಂತನೇ ತಾಯಿಯ ಮಮತೆಯಿಂದ ಈ ಹೊರ ಆವರಣವನ್ನು ಬಿಡಿಸಬೇಕು.

**ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ ।** -ಅನುವ್ಯಾಖ್ಯಾನ

ನಮಗೆ ಜ್ಞಾನ, ಬಂಧನಿವೃತ್ತಿ ಮುಂತಾದ ಎಲ್ಲಾ ವಿಕಾಸ ಬೆಳವಣಿಗೆಗಳು ಪರಮಾತ್ಮನಿಂದಲೇ ಆಗಬೇಕು. ನಮ್ಮ ಜೀವನದ ಎಲ್ಲಾ ಆಗುಹೋಗುಗಳಿಗೂ ಅವನು ಕಾರಣನು. ಅವನ ಶಕ್ತಿ ಅನುಗ್ರಹಗಳಿಲ್ಲದೆ ನಮ್ಮಿಂದ ಏನೂ ನಡೆಯದೆಂಬುದನ್ನು ಅರಿತು ಸರ್ವಾತ್ಮನಾ ಭಗವಂತನನ್ನು ಆಶ್ರಯಿಸಿಕೊಂಡು ಭಕ್ತಿಪೂರ್ಣಮನೋಭಾವದಿಂದ ನಮ್ಮ ಕರ್ತವ್ಯವನ್ನು ಆಚರಿಸಬೇಕು. ಭಕ್ತಿಯೇ ಕರ್ಮದ ಅಂತಃಸತ್ತ್ವವು. ಆ ಸತ್ತ್ವವು ಇಲ್ಲದ ಕರ್ಮಗಳು ರಾಶಿರಾಶಿಯಾಗಿದ್ದರೂ ಅವೆಲ್ಲವೂ ನಿರ್ಜೀವ ಹಾಗೂ ನಿಷ್ಪ್ರಯೋಜನವೇ.

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।** (18,66)

ದೈವೀ ಭಾವನೆಯಿಲ್ಲದ, ಪರಮಾತ್ಮನ ಕಡೆಗೆ ಸಮ್ಮನ್ನು ಒಯ್ಯದ, ಕರ್ಮಗಳೆಲ್ಲವೂ ವ್ಯರ್ಥವಾಗಿವೆ. ಅವೆಲ್ಲವನ್ನೂ ನಾವು ಬಿಡಬೇಕು. ಸರ್ವಧರ್ಮಗಳ ತ್ಯಾಗವೆನ್ನುವುದರ ಭಾವವು ಇದೇ ಆಗಿದೆ. ಅಥವಾ ಫಲಾಪೇಕ್ಷೆಯನ್ನು ತ್ಯಜಿಸುವುದೇ ಸರ್ವಧರ್ಮಗಳ ತ್ಯಾಗವೆಂದೂ ನಾವು ಭಾವಿಸಬಹುದು.

**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ।**

ಎಂಬುದಾಗಿ ಫಲವನ್ನು ತೊರೆಯುವುದೇ ಕರ್ಮದ ನಿಜವಾದ ತ್ಯಾಗವೆಂದು ಗೀತೆಯಲ್ಲಿಯೇ ಹಿಂದೆ ಹೇಳಿದೆ.

ಸರ್ವಭಾವದಿಂದ ಪರಮಾತ್ಮನನ್ನು ಆಶ್ರಯಿಸಿ ಪರಮಭಕ್ತಿಯಿಂದ ಕರ್ತವ್ಯಗಳನ್ನು ಆಚರಿಸುವುದೊಂದೇ ನಮ್ಮ ಈ ಅನರ್ಥ ವಿಪ್ಲವಗಳ ಏಕಮಾತ್ರ ಪರಿಹಾರೋಪಾಯವಾಗಿದೆ. ಈ ಶರಣಾಗತಿಯ ಭಾವವು ನಮ್ಮ ಪ್ರತಿಯೊಂದು ಕೃತಿಯಲ್ಲಿ ಅನುಸ್ಯೂತವಾಗಿರಬೇಕು.

**ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ**
**ಹರಿಪಾದವಿನಮ್ರಧಿಯಾ ಸತತಮ್ ।** -ದ್ವಾದಶಸ್ತೋತ್ರ

ಕರ್ಮವನ್ನು ಆಚರಿಸುವಾಗಲೂ, ಅದರ ಫಲವನ್ನು ಭೋಗಿಸುವಾಗಲೂ, ಹರಿಯ ಸ್ಮರಣೆಯು ನಿರಂತರವಾಗಿರಬೇಕು. ನಮ್ಮ ಶರೀರದ ಅಂಗಾಂಗಗಳಲ್ಲಿ ಚೇತನವು ಹರಿಯುವುದು ಅವಶ್ಯವಿರುವಂತೆ ನಮ್ಮ ಪ್ರತಿಯೊಂದು ಕರ್ಮದಲ್ಲಿ ನಿರಂತರವಾಗಿ ಹರಿಭಕ್ತಿಯು ಹರಿಯಬೇಕು. ಗೀತೆಯಲ್ಲಿ ಸರ್ವಪ್ರಧಾನವೆಂದು ಉಲ್ಲೇಖಿಸಿ ಅಂತಿಮವಾಗಿ ಬಂದಿರುವ ಈ ಉಪದೇಶವೇ ಗೀತೆಯ ಸಾರ ಸಂದೇಶವಾಗಿದೆ.

ಪರಮಾತ್ಮನ ಮುಖದಿಂದ ಹೊರಟ ಉಪದೇಶದ ಅಮೃತಧಾರೆಯಿಂದ ಅರ್ಜುನನ ಅಂತಃಕರಣಪಟಲದಲ್ಲಿ ಅಂಟಿದ ಮೋಹಮಲಗಳೆಲ್ಲ ಪೂರ್ತಿಯಾಗಿ ಕೊಚ್ಚಿಹೋದವು. ಅವನ ಹೃದಯದಲ್ಲಿ ಸುಪ್ತವಾಗಿದ್ದ ಜ್ಞಾನದ ದಿವ್ಯಾಂಕುರವು ಚಿಗುರಿ ವಿಕಸಿತವಾಯಿತು.

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥** (18.73)

'ನನ್ನ ಮೋಹದ ನಿರಸನವಾಗಿದೆ. ಮೋಹದಿಂದ ಉಂಟಾದ ಅಭಿಭವದಿಂದ ಕಳೆದುಹೋದಂತಿರುವ ಜ್ಞಾನದ ನಿಧಿಯನ್ನು ನಿನ್ನ ಅನುಗ್ರಹದಿಂದ ತಿರುಗಿ ಪಡೆದೆ. ನನ್ನ ಸಂದೇಹ ಸಮಸ್ಯೆಗಳ ನಿವಾರಣೆಯಾಗಿದೆ. ನಿನ್ನ ಆಜ್ಞೆಯಂತೆ ಕರ್ತವ್ಯರಂಗಕ್ಕೆ ಧುಮುಕುವೆ' ಎಂದು ಅರ್ಜುನನು ಪ್ರಸನ್ನ ಹೃದಯದಿಂದ ಭಕ್ತಿ ಉತ್ಸಾಹಗಳಿಂದ ಪರಮಾತ್ಮನಲ್ಲಿ ನಿವೇದಿಸುತ್ತಾನೆ.

ಅರ್ಜುನನಿಗೆ ಬಂದಿರುವ ಸಂದರ್ಭ ಸನ್ನಿವೇಶಗಳು ನಮ್ಮೆಲ್ಲರ ಜೀವನದಲ್ಲಿಯೂ ಅನುದಿನವೂ ಸಂಭವಿಸುತ್ತವೆ. ಗೀತೆಯ ಸಂದೇಶವು ಅರ್ಜುನನಿಗೆ ಮಾತ್ರ ಪರಿಸೀಮಿತವಲ್ಲ. ಜಗತ್ತಿನ ಮಾನವರೆಲ್ಲರ ಜೀವನದ ಗೊಂದಲ ವಿಪ್ಲವಗಳನ್ನು ಪರಿಹರಿಸಿ ಉದಾತ್ತ ರೀತಿಯ ಕರ್ತವ್ಯದ ಸ್ಫೂರ್ತಿಯನ್ನು ಗೀತೆಯು ನಮಗೆ ನೀಡುತ್ತಿದೆ. ಭಾರತದ ಮಹಾ ಯುದ್ಧದಲ್ಲಿ ಒಂದೇ ರಥದಲ್ಲಿ ಅರ್ಜುನನ ಜೊತೆಗೆ ಶ್ರೀಕೃಷ್ಣನು ಸಾರಥಿಯಾಗಿದ್ದು ಹೆಜ್ಜೆ ಹೆಜ್ಜೆಗೂ ಸ್ಫೂರ್ತಿದಾತನಾಗಿ ಅವನನ್ನು ಮುನ್ನಡೆಸಿದ್ದಾನೆ. ಅರ್ಜುನನು ನರನಾಗಿದ್ದರೆ ಶ್ರೀಕೃಷ್ಣನು ನಾರಾಯಣನಾಗಿದ್ದಾನೆ. ಈ ನರ-ನಾರಾಯಣರ ಜೊತೆಯಿಂದಲೇ ಅಲ್ಲಿ ವಿಜಯಭೂತಿ ನೀತಿಗಳ ಸಮಾವೇಶವಾಗಿದೆ.

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿಃ ಧ್ರುವಾ ನೀತಿರ್ಮತಿರ್ಮಮ ॥** (18.78)

ನಮ್ಮ ಜೀವನದ ಯುದ್ಧರಂಗದಲ್ಲಿಯೂ ಈ ನರರಿಗೆ ನಾರಾಯಣನೇ ಸಾರಥಿಯಾಗಿರಬೇಕು. ನರರಿಗೆ ತಮ್ಮ ಜೀವನದಲ್ಲಿ ನಾರಾಯಣನ ವಿಯೋಗ ವಾದುದರಿಂದಲೇ ಇಂದು ಎಲ್ಲೆಡೆಗಳಲ್ಲಿಯೂ ಅನೀತಿ ಮತ್ತು ಆರ್ಥಿಕ ಸಂಕಟದ, ದುಃಖದ ದೃಶ್ಯವನ್ನು ನಾವು ನೋಡುತ್ತಿರುವೆವು. ನಮ್ಮ ಜೀವನದಲ್ಲಿ ನರ-ನಾರಾಯಣರ

ಸಮಾಗಮವಾಗಬೇಕು. ಭಗವಂತನನ್ನು ನಾವು ನಮ್ಮ ಸಾರಥಿ, ಸ್ಫೂರ್ತಿದಾತ ಹಾಗೂ ಮಾರ್ಗದರ್ಶಕನನ್ನಾಗಿ ಆರಿಸಬೇಕು. ಆಗಲೇ ನಮ್ಮ ಜೀವನವು ದೈವೀಸಂಪತ್ತಿನ ಆಗರವಾಗುವುದು.

**ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು**

ತಾ। 13-07-2008

ಶ್ರೀ ಪೇಜಾವರ ಅಧೋಕ್ಷಜ ಮಠ, ಉಡುಪಿ

# ನಿರ್ದೇಶಕರ ನುಡಿ

ವಿದ್ವಾಂಸರಾದ ಎಲ್.ಎಸ್. ಬ್ರಹ್ಮಣ್ಯಾಚಾರ್ಯರು ಶ್ರೀ ಪೇಜಾವರ ಮಠಾಧೀಶರಾದ ಪರಮಪೂಜ್ಯ ಶ್ರೀವಿಶ್ವೇಶತೀರ್ಥ ಶ್ರೀಪಾದರ ದಿವ್ಯಸನ್ನಿಧಿಯಲ್ಲಿ ಹರಿದ್ವಾರ ಕ್ಷೇತ್ರದಲ್ಲಿ ಜ್ಞಾನಸತ್ರ ಹಮ್ಮಿಕೊಂಡಿದ್ದರು. 12 ಜನ ವಿದ್ವಾಂಸರು ಭಾಗವತದ ಹನ್ನೆರಡು ಸ್ಕಂಧಗಳನ್ನು ಅಲ್ಲಿ ಸಪ್ತಾಹಪರ್ಯಂತ ಹೃದಯಂಗಮವಾಗಿ ವ್ಯಾಖ್ಯಾನಿಸಿದರು. ಈ ಮಂಗಲ ವಾತಾವರಣದಲ್ಲಿ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಗೀತಾವಿವೃತಿ ಈ ತನಕ ಕನ್ನಡಾನುವಾದವಾಗಿಲ್ಲ. ಅದನ್ನು ಕನ್ನಡಕ್ಕೆ ಅನುವಾದಿಸಿ ಮುದ್ರಿಸಬೇಕೆಂಬ ಸಲಹೆ ಶ್ರೀಯುತ ಚೈತ್ರ ರಾಘವೇಂದ್ರರಾವ್ ಹಾಗೂ ವಿ। ಬ್ರಹ್ಮಣ್ಯಾಚಾರ್ಯರಿಂದ ಬಂದಿತು. ಶ್ರೀ ಶ್ರೀಗಳವರ ದಿವ್ಯ ಸಮ್ಮುಖದಲ್ಲಿ ಅವರ ಆದೇಶದಂತೆ ಅಲ್ಲಿ ಉಪಸ್ಥಿತರಿದ್ದ ವಿದ್ವಾಂಸರಿಗೆ ಅನುವಾದಕಾರ್ಯವನ್ನು ವಹಿಸಲಾಯಿತು. 4-6 ತಿಂಗಳಲ್ಲಿ ಮುಗಿಸಬೇಕೆಂದು ಸಂಕಲ್ಪಿಸಲಾಯಿತು. ಆದರೆ ದಿನನಿತ್ಯ 6-8 ಘಂಟೆ ಪಾಠ-ಪ್ರವಚನಗಳಲ್ಲಿ ನಿರತರಾದ ಅನೇಕ ಶೈಕ್ಷಣಿಕ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿ ಕೊಂಡ ವಿದ್ವಾಂಸರಿಗೆ ನಿರೀಕ್ಷಿಸಿದಷ್ಟು ವೇಗದಿಂದ ಅನುವಾದ ಮಾಡಿಕೊಡಲು ಸಾಧ್ಯವಾಗಲಿಲ್ಲ. ಆದರೂ ಎಲ್ಲ ಶ್ರೇಷ್ಠ ವಿದ್ವಾಂಸರು ತಮ್ಮ ಶ್ರಮವನ್ನು ಗಣನೆಗೆ ತೆಗೆದುಕೊಳ್ಳದೇ ಗೀತಾವಿವೃತಿಯ ಅನುವಾದ ಮಾಡಿಕೊಟ್ಟಿದ್ದಾರೆ.

ಪರಮಪೂಜ್ಯ ಶ್ರೀ ವಿಶ್ವೇಶತೀರ್ಥ ಶ್ರೀಪಾದರು ಗೀತಾಸಾರವನ್ನು ಬರೆದು ಅನುಗ್ರಹಿಸಿದ್ದಾರೆ. ಈ ಹೊತ್ತಿಗೆ ಹೊರಬರಲು ಅವರ ಅನುಗ್ರಹ ಪ್ರಧಾನಪಾತ್ರವಹಿಸಿದೆ. ಇದರಂತೆ ಮಂತ್ರಾಲಯ ಮಠದ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದರು ಹಾಗೂ ಶ್ರೀ ಸುಯತೀಂದ್ರತೀರ್ಥ ಶ್ರೀಪಾದರು ಆಶೀರ್ವಚನ ನೀಡಿ ನಮ್ಮನ್ನು ಹರಸಿದ್ದಾರೆ. ಈ ಎಲ್ಲ ಯತಿವರೇಣ್ಯರಿಗೆ ಭಕ್ತಿಶ್ರದ್ಧಾಪೂರ್ವಕವಾದ ಅನಂತನಮಸ್ಕಾರಗಳನ್ನು ಅರ್ಪಿಸುತ್ತೇನೆ.

ಗೀತಾವಿವೃತಿಯ ವೈಶಿಷ್ಟ್ಯಗಳು

ಗೀತಾವಿವೃತಿ ಗ್ರಂಥವು ಶಾಸ್ತ್ರಜ್ಞರಿಗೆ ಪರಮೋಪಕಾರಿಯಾಗಿದೆ ಎಂಬುದು ಎಲ್ಲರ ಅನುಭವಸಿದ್ಧವಾಗಿದೆ. ಇದರ ವೈಶಿಷ್ಟ್ಯವನ್ನು ವಿಚಾರಗೋಷ್ಠಿಯಲ್ಲಿ ವಿದ್ವಾಂಸರು ಹೀಗೆ ಸೆರೆ ಹಿಡಿದಿದ್ದಾರೆ-

1. ಗೀತಾಭಾಷ್ಯ- ಗೀತಾತಾತ್ಪರ್ಯಗಳಲ್ಲಿನ ನೇರವಾಗಿ ಶ್ಲೋಕದ ವಿವರಣೆಗೆ ಸಂಬಂಧಿಸಿದ ಮುಖ್ಯ ಪ್ರಮೇಯಗಳ ಸಂಗ್ರಹ.
2. ಗೀತಾಭಾಷ್ಯ ಹಾಗೂ ತಾತ್ಪರ್ಯಗಳಲ್ಲಿ ಶ್ರೀಮದಾಚಾರ್ಯರು ಬಿಟ್ಟ ಶ್ಲೋಕಗಳ ಹೃದಯಂಗಮವಾದ ವಿವರಣೆ.

. ಹೆಚ್ಚಾಗಿ ಭಾಷ್ಯ- ಟೀಕೆಯ ಪದಗಳನ್ನು ಬಳಸಿಕೊಳ್ಳುವುದರ ಜೊತೆಗೆ ಅಗತ್ಯವಿದ್ದಲ್ಲಿ ಆ ಪದಗಳ ವಿವರಣೆಯನ್ನು ತಮ್ಮ ವ್ಯಾಖ್ಯಾನದಲ್ಲಿ ಅಳವಡಿಸಿಕೊಳ್ಳುವುದು. (ಉದಾ- ತ್ರೈಗುಣ್ಯಂ ಚಾಹ ನ್ಯಾ.ವಜಿಯೆ. *18.1* ಇದನ್ನು ತ್ರಿಗುಣಕಾರ್ಯಂ ಚಾಹ ಎಂದು ಗೀತಾವಿವೃತಿಯಲ್ಲಿ ಸಂಗ್ರಹಿಸಲಾಗಿದೆ. ಇದು ಸಂಗ್ರಹಮಾತ್ರವಾಗಿರದೆ, ಆವಶ್ಯಕ ಸಂಕ್ಷಿಪ್ತ ವ್ಯಾಖ್ಯಾನವೂ ಆಗಿದೆ.)

4. ಪ್ರತಿಯೊಂದು ಅಧ್ಯಾಯ ಹಾಗೂ ಘಟ್ಟಗಳಲ್ಲಿ ಹಿಂದೆ ನಡೆದ ಹಾಗೂ ಮುಂದೆ ನಡೆಯಲಿರುವ ಚರ್ಚೆಗಳ ಸಾರವನ್ನು ನೀಡಿ ಸಂಗತಿಯನ್ನು ವಿವರಿಸುವುದು.
5. ಗೀತೆಯಲ್ಲಿ ವಿಷಯದ ಜಾಡನ್ನು ಗುರುತಿಸಲು ಪ್ರತಿ ಶ್ಲೋಕಕ್ಕೆ ಹೃದಯಂಗಮವಾದ ಅವತರಣಿಕೆಯನ್ನು ನೀಡುವುದು.
6. ಅಹಿಂಸಾ-ಸತ್ಯ-ದಂಭ-ದರ್ಪ ಮೊದಲಾದ ಗುಣವಾಚಕ ಪದಗಳಿಗೆ ಭಗವಾನ್ ವೇದವ್ಯಾಸರ ವ್ಯಾಖ್ಯಾನಕ್ಕೆ ಅನುಗುಣವಾಗಿ ಅರ್ಥವಿವರಣೆ ನೀಡುವುದು.
7. ಗೀತೆಯ ಪ್ರಮೇಯವನ್ನು ವಿವರಿಸುವಾಗ ಬ್ರಹ್ಮಸೂತ್ರಗಳನ್ನು ಬಳಸಿಕೊಂಡು ವ್ಯಾಖ್ಯಾನಿಸುವುದು.
8. ಸಂದರ್ಭೋಚಿತವಾಗಿ ಸಂವಾದಿ ಶ್ರುತಿಗಳನ್ನು ಉಲ್ಲೇಖಿಸಿ ವ್ಯಾಖ್ಯಾನಿಸುವುದು.

ಈ ಅಮೂಲ್ಯ ಕೃತಿಯನ್ನು ಕನ್ನಡದ ಕನ್ನಡಿಯಲ್ಲಿ ಸುಜನರಿಗೆ ದೊರಕಿಸಿ ಕೊಡಬೇಕೆಂಬ ಪೂಜ್ಯ ಪೇಜಾವರ ಶ್ರೀಪಾದರ ಹಂಬಲದ ಫಲವೇ ಈ ಮುದ್ರಿತ ಕೃತಿಯಾಗಿದೆ. ಕನ್ನಡಾನುವಾದದ ಪ್ರಸಂಗದಲ್ಲಿ ಶುದ್ಧ ಪಾಠ ನೀಡುವ ಬಗ್ಗೆ ವಿದ್ವಾಂಸರು ಶ್ರಮ ವಹಿಸಿದ್ದಾರೆ. ಈ ವರೆಗೆ ಮುದ್ರಿತವಾದ ಗೀತಾವಿವೃತಿಯ ಮೂರು ಪುಸ್ತಕಗಳನ್ನು ಗಮನಿಸುವುದರ ಜೊತೆಗೆ ಅನೇಕ ಹಸ್ತಪ್ರತಿಗಳನ್ನು ಅವಲೋಕಿಸಿ ಶುದ್ಧ ಪಾಠ ನೀಡುವ ಪ್ರಯತ್ನ ನಡೆದಿದೆ. ಇನ್ನೂ ಈ ಬಗ್ಗೆ ಹೆಚ್ಚಿನ ಸಾಧನೆಯ ಆವಶ್ಯಕತೆ ಇದೆ. ಈ ಪ್ರಯತ್ನವನ್ನು ವಿದ್ವಾಂಸರು ಅನುಗ್ರಹದೃಷ್ಟಿಯಿಂದ ಕಾಣುವರೆಂದು ನಂಬುತ್ತೇನೆ. ಮುದ್ರಿತ ಗೀತಾವಿವೃತಿ ಪುಸ್ತಕಗಳು ಹಾಗೂ ಹಸ್ತಪ್ರತಿಯಲ್ಲಿ ದೊರಕಿದ, ಪಾಠಾಂತರಗಳನ್ನು ವಿದ್ವಾಂಸರ ಅವಗಾಹನೆಗಾಗಿ ನೀಡಲಾಗಿದೆ.

| ಅಪಪಾಠ | ಶುದ್ಧಪಾಠ | ಅಧ್ಯಾಯ-ಶ್ಲೋಕ |
|---|---|---|
| ಪ್ರತಿನಿಧಿಃ | ಪ್ರತಿವಿಧಿಃ | 2- 13 |
| ಅನಾದಿನಿತ್ಯತ್ವಾತ್ | ಅನಾದಿತ್ವಾತ್ | 2- 13 |
| ಮಾತ್ರಾಸ್ಪರ್ಶಾನಾಂ ಸುಖಾದಿದತ್ವೇನ | ಮಾತ್ರಾಸ್ಪರ್ಶಾನಾಂ ಸುಖಾದಿದತ್ವೇ | 2- 14 |

| ಅಪಪಾಠ | ಶುದ್ಧಪಾಠ | ಅಧ್ಯಾಯ-ಶ್ಲೋಕ |
|---|---|---|
| ಮನಸ್ತದಾಭಿಮುಖ್ಯೇನ ನ ಹರಂತಿ ಅಪಹೃತೇಽಪಿ | ಮನಸ್ತದಾಭಿಮುಖ್ಯೇನ ನಾಹರಂತಿ ಆಹೃತೇಽಪಿ | 2-59 |
| ತಸ್ಯಾಸಂಭವಮ್ | ತಸ್ಯ ಸಂಭವಮ್ | 2-69 |
| ಯೋ ಮನಸಾ ಇಂದ್ರಿಯಾರ್ಥಾನ್ | ಯ ಇಂದ್ರಿಯಾರ್ಥಾನ್ | 3-6 |
| ಪೂರ್ವೋಕ್ತಶ್ಲೋಕೋಕ್ತರೀತ್ಯಾ | ಪೂರ್ವೋಕ್ತರೀತ್ಯಾ | 3-31 |
| ನ ಪ್ರಯೋಜನಾಪೇಕ್ಷೇತಿ | ನ ಪ್ರಯೋಜನಾಪೇಕ್ಷ ಇತಿ | 4-6 |
| ಮಾಂ ಜೀವವಿಲಕ್ಷಣಮ್ ಅಕರ್ತೃತ್ವಾದಕರ್ತಾರಂ | ಜೀವವಿಲಕ್ಷಣಕರ್ತೃತ್ವಾದಕರ್ತಾರಮ್ | 4-13 |
| ಭಾವ್ಯಮಿತ್ಯತ ಆಹ | ಭಾವ್ಯಮಿತ್ಯಾಹ | 4-20 |
| ಮುಮುಕ್ಷ್ಯೇತಿ ಭಾವ್ಯಮ್ | ಮುಮಕ್ಷ್ಯಸ ಇತಿ ಭಾವ್ಯಮ್ | 4-32 |
| ಜ್ಞಾನಮಪಿ | ಜ್ಞಾತಮಪಿ | 5-3 |
| ಅಗ್ನಿಮುಗ್ಧೋ ಹ ವೈ | ಅಗ್ನಿಮುಗ್ಧೋ ಹೈವ | 5-4 |
| ಪ್ರತಿಜಾನಾತಿ | ಪ್ರತಿಪ್ರಜಾನಾತಿ | 5-4 |
| ತೈತ್ತರೀಯೇ ಸಂಜ್ಞಾನಾಖ್ಯಪ್ರಶ್ನಃ | ತೈತ್ತಿರೀಯೇ ಸಂಜ್ಞಾನಾಖ್ಯೇ ಪ್ರಶ್ನೇ | 5-4 |
| ಏಕವಿಂಶತ್ಯಧ್ಯಾಯೇ | ಏಕವಿಂಶೇಽದ್ಯಾಯೇ | 5-4 |
| ಸ್ಥಿತಮನಾ ಇತ್ಯರ್ಥಃ | ಸ್ಥಿತಮನಾ ಇತಿ ಧ್ಯಾನಯೋಗ ಉಕ್ತ ಇತ್ಯರ್ಥಃ | 5-7 |
| ಸ್ವಸ್ಯ ವಾ ಕರ್ಮಸಂಪಾದನೇ | ಸ್ವಸ್ಯ ವಾ ಫಲಸಂಪಾದನೇ | 5-14 |
| ಉದ್ವೇಗರೂಪಮನೋಧೈರ್ಯಮ್ | ಉದ್ವೇಗರೂಪಮನೋಽಧೈರ್ಯಮ್ | 5-20 |
| ಬ್ರಹ್ಮಾಧಿಗಚ್ಛತೀತ್ಯುಕ್ತ್ವಾ | ಬ್ರಹ್ಮಾಧಿಗಚ್ಛತೀತ್ಯುಕ್ತ್ಯಾ | 5-24 |
| ದುಃಖಸಂಯೋಗೋ ಯಸ್ಯ ವಿಯೋಗ ಇತಿ ವಾ | ದುಃಖಸಂಯೋಗಸ್ಯ ವಿಯೋಗ ಇತಿ ವಾ | 6-23 |
| ಪಾರ್ಥಾನಾಮಪಿ | ಪಾರ್ಥಾನಪಿ | 11-32 |
| ಯತ್ಸದಸದ್ಭಾವಾತ್ಮಕಮ್ | ಯತ್ಸದಸದ್ಭಾವಾಭಾವಾತ್ಮಕಮ್ | 11-37 |

| ಅಪಪಾಠ | ಶುದ್ಧಪಾಠ | ಅಧ್ಯಾಯ-ಶ್ಲೋಕ |
|---|---|---|
| ಜ್ಞೇಯಮಿತಿ | ಜ್ಞೇಯಮ್ | 1-38 |
| ಅತಿಸುಖಾಂತಿಕತ್ವಾತ್ | ಅತಿಸುಖಾಂಕಿತತ್ವಾತ್ | 11.39 |
| ಇದಂ ಸೌಮ್ಯಮಕ್ರೂರಮಿದಮ್ | ಇದಂ ಸೌಮ್ಯಮಕ್ರೂರಮ್ | 11.51 |

ಈ ಕೃತಿಯ ಮುದ್ರಣಕ್ಕೆ ಅಗತ್ಯವಿರುವ ಹೆಚ್ಚಿನ ಮೊತ್ತ ವಿ। ಬ್ರಹ್ಮಣ್ಯಾಚಾರ್ಯರ ಜ್ಞಾನಸತ್ರದಲ್ಲಿ ಬಂದಿತು. ಸ್ವತಃ ಬ್ರಹ್ಮಣ್ಯಾಚಾರ್ಯರು ತಮ್ಮ ಆತ್ಮೀಯರಿಂದ ಈ ಕೃತಿಯ ಮುದ್ರಣಕ್ಕೆ ಉದಾರ ದೇಣಿಗೆ ಕೊಡಿಸಿದರು. ವಿದ್ವಾಂಸರಾದ ಬ್ರಹ್ಮಣ್ಯಾಚಾರ್ಯರ ಈ ಸಹಕಾರವನ್ನು ನಾನು ಹೃತ್ಪೂರ್ವಕವಾಗಿ ಸ್ಮರಿಸುತ್ತೇನೆ. ಅವರ ಔದಾರ್ಯದ ಲಾಭ ಜ್ಞಾನಕ್ಷೇತ್ರದಲ್ಲಿ ಇನ್ನೂ ಹೆಚ್ಚಾಗಲೆಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

ವಿದ್ವದಗ್ರೇಸರರೂ ಸರಳರೂ ಆದ ಶ್ರೀ ಕೆ. ಹಯವದನ ಪುರಾಣಿಕರು ಎಲ್ಲ ವಿದ್ವಾಂಸರ ಅನುವಾದವನ್ನು ಪರಿಶೀಲಿಸಿ ಇದರ ಸೌಂದರ್ಯವನ್ನು ಹೆಚ್ಚಿಸಿದ್ದಾರೆ. ಸ್ವತಃ ತಾವೂ 15ನೇ ಅಧ್ಯಾಯದ ಅನುವಾದ ಮಾಡಿ ಉಪಕರಿಸಿದ್ದಾರೆ. ಅವರ ಸೌಜನ್ಯ-ವಾತ್ಸಲ್ಯಗಳಿಗೆ ನಾನು ಸದಾ ಋಣಿ. ತಮ್ಮ ಒತ್ತಡದ ಕೆಲಸದ ನಡುವೆಯೂ ಸಂಶೋಧನ ಮಂದಿರದ ಅಪ್ರಕಾಶಿತ ಗ್ರಂಥಗಳ ಪ್ರಕಾಶನ ಮತ್ತು ಪರಿಶೀಲನೆ ಮೊದಲಾದ ಯಾವುದೇ ಕಾರ್ಯಗಳನ್ನು ವಹಿಸಿದರೂ ಅವರು ಶ್ರದ್ಧೆಯಿಂದ ಮಾಡಿಕೊಡುತ್ತಾರೆ. ಅವರಿಗೆ ನನ್ನ ಗೌರವಪೂರ್ವಕ ವಂದನೆಗಳನ್ನು ಅರ್ಪಿಸುತ್ತೇನೆ. ಪೂರ್ಣಪ್ರಜ್ಞ ವಿದ್ಯಾಪೀಠದ ಹೆಮ್ಮೆಯ ವಿದ್ವಾಂಸರಾದ ಶ್ರೀ ಹಯವದನ ಪುರಾಣಿಕರಿಗೆ ಈ ವರ್ಷ ರಾಷ್ಟ್ರಪತಿ ಪುರಸ್ಕಾರ ದೊರಕಿರುವುದು ಸಮಗ್ರ ಮಾಧ್ವಸಮಾಜಕ್ಕೆ ಆನಂದ ತಂದಿದೆ.

ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತರೂ ಹಿರಿಯ ವಿದ್ವಾಂಸರೂ ಸಂಶೋಧನ ಮಂದಿರದ ಅಧ್ಯಕ್ಷರೂ ಆದ ಪ್ರೊ। ಡಿ. ಪ್ರಹ್ಲಾದಾಚಾರ್ಯರು 7 ಮತ್ತು 8ನೇ ಅಧ್ಯಾಯಗಳನ್ನು ಅನುವಾದ ಮಾಡಿ ಅನುಗ್ರಹಿಸುವುದರ ಜೊತೆಗೆ ಸಂಶೋಧನ ಮಂದಿರದ ಸರ್ವಾಂಗೀಣ ಅಭಿವೃದ್ಧಿಗೆ ಕಾರಣರಾಗಿದ್ದಾರೆ. ಅವರಿಗೆ ನನ್ನ ವಂದನೆಗಳನ್ನು ಅರ್ಪಿಸುವೆ.

ತಮ್ಮ ತಮ್ಮ ಭಾಗದ ಗೀತಾವಿವೃತಿಯ ಅನುವಾದವನ್ನು ಸುಂದರವಾಗಿ ಮಾಡಿದ ಹಿರಿಯ ವಿದ್ವಾಂಸರೂ ನಿರಂತರ ಪಾಠ-ಪ್ರವಚನ ನಿರತರೂ, ಅನೇಕ ಶಾಸ್ತ್ರಗ್ರಂಥಗಳ ಸಂಪಾದಕರು ಹಾಗೂ ಅನುವಾದಕರಾದ ಆದ ಡಾ। ಆರ್. ಜಿ. ಮಾಳಗಿ, ಡಾ। ಸಿ. ಹೆಚ್. ಶ್ರೀನಿವಾಸಮೂರ್ತಿ, ಪ್ರೊ। ಅನಂತ ತಂತ್ರಿ ಇವರಿಗೆ ನನ್ನ ವಂದನೆಗಳು.

ವಿದ್ಯಾಪೀಠದ ಪ್ರಾಂಶುಪಾಲರೂ ನಿರಂತರ ಉದ್ಗ್ರಂಥಗಳ ಪಾಠ-ಪ್ರವಚನ ಮತ್ತು

ಶಾಸ್ತ್ರಗ್ರಂಥಗಳ ಅನುವಾದ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ಅದ್ಯಪಾಡಿ ಹರಿದಾಸ ಭಟ್ಟರು ತಮ್ಮ ಒತ್ತಡವನ್ನು ಗಣನೆಗೆ ತೆಗೆದುಕೊಳ್ಳದೇ ವಿಸ್ತೃತವಾದ ಎರಡನೆಯ ಅಧ್ಯಾಯದ ಅನುವಾದವನ್ನು ಸುಂದರವಾಗಿ ನೆರವೇರಿಸಿ ಕೊಟ್ಟಿದ್ದಾರೆ. ಅವರಿಗೆ ನನ್ನ ಆದರದ ನಮನಗಳು.

ಇದಲ್ಲದೆ, ವಿದ್ವಾಂಸರಾದ ಶ್ರೀ ಗುರುಪ್ರಸಾದಾಚಾರ್ಯ, ಶ್ರೀರಾಮವಿಟ್ಠಲಾಚಾರ್ಯ, ರಘುಪತಿ ಉಪಾಧ್ಯಾಯ ಇವರು ತಮ್ಮ ಭಾಗದ ಅನುವಾದವನ್ನು ಹೃದಯಂಗಮವಾಗಿ ಮಾಡಿಕೊಟ್ಟು ಉಪಕರಿಸಿದ್ದಾರೆ.

ತರುಣ ವಿದ್ವಾಂಸರಾದ ವಿ। ಜಿ.ಪಿ. ನಾಗರಾಜಾಚಾರ್ಯ, ವಿ। ಸಿ.ಹೆಚ್. ಬದರೀನಾಥ ಆಚಾರ್ಯ, ಡಾ। ತಿರುಮಲಾಚಾರ್ಯ ಕುಲಕರ್ಣಿ, ವಿ। ಹೆಚ್.ಪಿ. ನಾಗರಾಜಾಚಾರ್ಯ, ಡಾ। ಹೆಚ್. ಸತ್ಯನಾರಾಯಣಾಚಾರ್ಯರು ಸುಂದರ ಅನುವಾದ ಮಾಡಿದ್ದಕ್ಕಾಗಿ ನಾನು ಆಭಾರಿಯಾಗಿದ್ದೇನೆ. ಈ ಎಲ್ಲ ವಿದ್ವಾಂಸರಿಗೆ ನನ್ನ ವಂದನೆಗಳು.

ಸ್ವಯಂಪ್ರೇರಣೆಯಿಂದ ದಾನಿಗಳು ಬಂದು ಈ ಕಾರ್ಯ ಸಫಲಗೊಳ್ಳುವಂತೆ ಮಾಡಿದ್ದಾರೆ. ಇಂತಹ ಮಹತ್ವದ ಕಾರ್ಯಕ್ಕೆ ದೇಣಿಗೆ ನೀಡಿದ ಎಲ್ಲ ಸಜ್ಜನರಿಗೂ ಶ್ರೀರಾಘವೇಂದ್ರ ಗುರುಸಾರ್ವಭೌಮರ ಹಾಗೂ ಅವರ ಅಂತರ್ಯಾಮಿಯಾದ ರಾಮ-ನರಹರಿ-ಕೃಷ್ಣ-ವೇದವ್ಯಾಸ-ಹಯಗ್ರೀವರೂಪಿಯಾದ ಭಗವಂತನ ಅನುಗ್ರಹವಾಗುವುದರಲ್ಲಿ ಸಂಶಯವಿಲ್ಲ. ಈ ಪವಿತ್ರ ಗ್ರಂಥದ ಕನ್ನಡಾನುವಾದವನ್ನು ಓದಿ ಆನಂದ ಪಡುವ ಎಲ್ಲ ಸುಜನರಿಗೂ, ವಿದ್ಯಾರ್ಥಿಗಳಿಗೂ ಮತ್ತು ವಿದ್ವಾಂಸರಿಗೂ ಈ ಹೊತ್ತಿಗೆ ಕೈದೀವಿಗೆಯಂತೆ ಮಾರ್ಗದರ್ಶಿಯಾಗಿರುವುದು. ಇಂತಹ ಹೊತ್ತಿಗೆಯನ್ನು ಮುದ್ರಿಸಲು ಉದಾರ ಮನಸ್ಸಿನಿಂದ ಆರ್ಥಿಕ ನೆರವು ನೀಡಿದ ಎಲ್ಲ ಮಹನೀಯರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

ಒಬ್ಬ ಸತ್ಕುಲಪ್ರಸೂತರೂ, ಅನುಷ್ಠಾನಶೀಲರೂ ಆದ ಆದರ್ಶ ಯಾಜ್ಞಿಕರು ಈ ಗ್ರಂಥಪ್ರಕಾಶನಕ್ಕೆ ಮೂವತ್ತು ಸಹಸ್ರ ರೂಪಾಯಿಗಳನ್ನು ಗುಪ್ತದಾನವಾಗಿ ನೀಡಿದ್ದನ್ನು ಈ ಪ್ರಸಂಗದಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಸ್ವತಃ ವೈದಿಕರಾದ ಅವರ ಉದಾರ ಕೊಡುಗೆ, ಸೌಜನ್ಯಗಳು ಅವಿಸ್ಮರಣೀಯವೂ ಅನುಕರಣೀಯವೂ ಆಗಿವೆ. ನಮ್ಮ ಆರ್ಥಿಕ ಕೊರತೆಯನ್ನು ಗಮನಿಸಿ ಸ್ವಯಂಪ್ರೇರಣೆಯಿಂದ ನೆರವು ನೀಡಿದ ಶ್ರೀ ಭೀಮಣ್ಣ ಹಾಗೂ ವಿಜಯಾ ದಂಪತಿಗಳು 20 ಸಹಸ್ರ ರೂಪಾಯಿಗಳ ನೆರವು ನೀಡಿದ್ದಲ್ಲದೆ, ಶಾಸ್ತ್ರನಿಧಿ ಬಿ. ವೆಂಕಟೇಶಾಚಾರ್ಯ ಮೆಮೋರಿಯಲ್ ಟ್ರಸ್ಟ್ ಮುಖ್ಯಾಧಿಕಾರಿಗಳಾದ ಶ್ರೀ ಬಿ.ಆರ್. ಚಕ್ರಪಾಣಿ ಇವರಿಂದ 30 ಸಹಸ್ರ ರೂಪಾಯಿಗಳ ನೆರವು ದೊರಕುವಂತೆ ಉಪಕರಿಸಿದರು. ಇವರ ಸಜ್ಜನಿಕೆ ಹಾಗೂ ದೇಣಿಗೆಯನ್ನು ಕೃತಜ್ಞತೆಯಿಂದ ಸ್ಮರಿಸುತ್ತೇವೆ.

ಮೊದಲು ಒಂದು ಸಹಸ್ರ ಪ್ರತಿಗಳನ್ನು ಮುದ್ರಿಸುವ ಯೋಜನೆಯನ್ನು ಹಾಕಿಕೊಂಡಿದ್ದೆವು. ಹೆಚ್ಚಿನ ಪ್ರತಿಗಳು ವಿದ್ವಾಂಸರಿಗೆ ಹಾಗೂ ದಾನಿಗಳಿಗೆ ಗೌರವಪ್ರತಿಯಾಗಿ ನೀಡುತ್ತಿರುವ ಕಾರಣ ಎರಡು ಸಾವಿರ ಪ್ರತಿಗಳನ್ನು ಮುದ್ರಿಸಲು ಸಂಕಲ್ಪಿಸಿದೆವು. ಈ ಹಂತದಲ್ಲಿ ನಮಗೆ ಒಟ್ಟಿಗೆ 500 ಪ್ರತಿಗಳನ್ನು ಕೊಂಡು ಪ್ರಕಾಶನಪೂರ್ವದಲ್ಲಿ 75 ಸಹಸ್ರ ರೂಪಾಯಿಗಳನ್ನು ಸಂದಾಯ ಮಾಡಿ ಪ್ರೋತ್ಸಾಹ ನೀಡಿದವರು ಶ್ರೀ ರಾಘವೇಂದ್ರ ಮಠದ ಆಪ್ತಕಾರ್ಯದರ್ಶಿಗಳೂ ನಿರಂತರ ಕ್ರಿಯಾಶೀಲರೂ ಆದ ಶ್ರೀ ರಾಜಾ ರಾಜಗೋಪಾಲಾಚಾರ್ಯರು. ಅಪೂರ್ವ ಗ್ರಂಥಪ್ರಕಾಶನ ಹಾಗೂ ಸಾಮಾಜಿಕ ಕಾರ್ಯಗಳಲ್ಲಿ ಶ್ರೀಮಠದ ಕೀರ್ತಿಪತಾಕೆಯನ್ನು ಗುರುಕರುಣೆಯಿಂದ ಎತ್ತಿ ಹಿಡಿದ ಶ್ರೀ ರಾಜಗೋಪಾಲಾಚಾರ್ಯರ ಕರ್ತೃತ್ವಶಕ್ತಿ ಅಸಾಧಾರಣವಾದುದು. ಅವರಿಂದ ಇನ್ನೂ ಹೆಚ್ಚಿನ ಧಾರ್ಮಿಕ, ಸಾಮಾಜಿಕ ಸೇವಾಕಾರ್ಯಗಳು ನಡೆಯಲೆಂದು ಪ್ರೀತಿ- ಅಭಿಮಾನಗಳಿಂದ ಹಾರೈಸುತ್ತೇನೆ.

ಗೀತಾವಿವೃತಿಯ ಕನ್ನಡಾನುವಾದಕ್ಕಾಗಿ ನಮಗೆ ದೊರಕಿದ ದೇಣಿಗೆ ರೂ. 2,03,515/-. ಹಸ್ತಪ್ರತಿಗಳ ಪಾಠಾಂತರಸಮೀಕ್ಷೆ ಹಾಗೂ ಕನ್ನಡಾನುವಾದ ಅಕ್ಷರಸಂಯೋಜನೆ, ಕರಡುಪ್ರತಿ ತಿದ್ದುವಿಕೆ ಇತ್ಯಾದಿ ಕಾರ್ಯಗಳಿಗಾಗಿ 31,000/- ರೂ.ಗಳನ್ನು ವೆಚ್ಚ ಮಾಡಲಾಯಿತು. ಪುಸ್ತಕ ಬಿಡುಗಡೆಯ ದಿನದಂದು ವಿದ್ವಾಂಸರ ಗೌರವಸಂಭಾವನೆ, ಪರಿಶೀಲಕರ ಗೌರವಸಂಭಾವನೆ, ಕಾರ್ಯಕ್ರಮದ ವೆಚ್ಚ ಇತ್ಯಾದಿಗಳಿಗಾಗಿ 47,755/- ರೂ.ಗಳನ್ನು ವಿನಿಯೋಗಿಸಲಾಯಿತು. (31,000 + 47,755= 78,755). ಬಾಕಿ ಉಳಿದ ಮೊತ್ತ 1,24,760/- ರೂ.ಗಳು. ಎಲ್ಲಾ ಮುದ್ರಣಾಲಯಗಳು ನೀಡಿದ ಕೊಟೇಶನ್ ರೂ. 2,50,000/-ಗಳಿಗೂ ಮೀರಿತ್ತು. ಈ ಪ್ರಸಂಗದಲ್ಲಿ ವಿ। ವೆಂಕಟರಮಣ ಉಪಾಧ್ಯಾಯರು ಶ್ರಮವಹಿಸಿ 2,20,000/- ರೂ.ಗಳಿಗೆ ಇದರ ಮುದ್ರಣವಾಗುವಂತೆ ಅವಿರತ ಯತ್ನಿಸಿದರು. ಅವರ ಈ ಸೇವೆಯು ಅಭಿಮಾನಪೂರ್ವಕವಾಗಿ ಉಲ್ಲೇಖಾರ್ಹವಾಗಿದೆ. ಅವರ ವಿನಂತಿಯನ್ನು ಗೌರವಿಸಿದ ಲಾವಣ್ಯ ಮುದ್ರಣಾಲಯದ ಅಧಿಕಾರಿಗಳ ಸೌಜನ್ಯದಿಂದ ಈ ಕೃತಿಯನ್ನು ಕಡಿಮೆ ಮೊತ್ತದಲ್ಲಿ ಮುದ್ರಣ ಮಾಡಲು ಸಾಧ್ಯವಾಯಿತು. ಹೀಗಿದ್ದರೂ, ಮುದ್ರಣಕ್ಕೆ ನಾವು ಸಂದಾಯ ಮಾಡಬೇಕಾದ ಬಾಕಿ ಮೊತ್ತ 95,240/- ರೂ.ಗಳನ್ನು ಸಂಶೋಧನ ಮಂದಿರದ ಮುದ್ರಿತ ಗ್ರಂಥಗಳ ಮಾರಾಟದಿಂದ ಬಂದ ಹಣದಿಂದ ಭರಿಸಲಾಗಿದೆ. ಗೀತಾವಿವೃತಿಯ ಗ್ರಂಥಪ್ರಕಾಶನದ ಸಮಗ್ರ ವೆಚ್ಚವು - 2,20,000 + 78,755 = 2,98,755/- ರೂ.ಗಳು. ಈ ಹಿನ್ನೆಲೆಯಲ್ಲಿ ನಾವು ಪ್ರತಿಯೊಂದು ಮುದ್ರಿತ ಪುಸ್ತಕಕ್ಕೆ ಕನಿಷ್ಠ 600/- ರೂ.ಗಳನ್ನು ನಿಗದಿ ಪಡಿಸಬೇಕಾಗಿತ್ತು. ಆದರೆ ಪರಮಪೂಜ್ಯ ಗುರುಗಳಾದ ಪೇಜಾವರ ಮಠಾಧೀಶರಾದ ಶ್ರೀವಿಶ್ವೇಶತೀರ್ಥ ಶ್ರೀಪಾದರ ಆದೇಶದಂತೆ ಸುಜನರಿಗೆಲ್ಲ ಇದು ಕಡಿಮೆ ಬೆಲೆಯಲ್ಲಿ ದೊರಕಬೇಕೆಂಬ ದೃಷ್ಟಿಯಿಂದ ಇದರ ಮುಖಬೆಲೆಯನ್ನು ಕೇವಲ 200/- ರೂ.ಗಳಿಗೆ ನಿಗದಿ ಪಡಿಸಲಾಗಿದೆ.

ಈ ಕಾರ್ಯಕ್ಕೆ ನಾನಾ ಹಂತಗಳಲ್ಲಿ ಸಹಕಾರ ನೀಡಿದ ಎಲ್ಲ ಸಜ್ಜನ ಬಂಧುಗಳ ಉಪಕಾರವ ಮತ್ತೊಮ್ಮೆ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಪೂರ್ಣಪ್ರಜ್ಞ ವಿದ್ಯಾಪೀಠದ ವಿದ್ವಾಂಸರಾದ ಕಡ್ಡಿ ಬದರೀನಾರಾಯಣಾಚಾರ್ಯ ಭಗವದ್ಗೀತೆಯ ಶ್ಲೋಕಾನುಕ್ರಮಣಿಕೆಯನ್ನು ಸಿದ್ಧಪಡಿಸಿಕೊಟ್ಟು ಸಂಪುಟದ ಉಪಯುಕ್ತ ಹೆಚ್ಚಿಸಲು ಕಾರಣರಾಗಿದ್ದಾರೆ. ಅವರಿಗೆ ನನ್ನ ಗೌರವದ ನಮನಗಳು.

ಪೂರ್ಣಪ್ರಜ್ಞ ಸಂಶೋಧನ ಮಂದಿರದ ಉಪನಿದೇಶಕರಾದ ವಿ। ಶಂಕರನಾರಾಯಣ ಅಡಿ ಹಾಗೂ ವಿ। ರಂಗನಾಥ ಕಟ್ಟಿಯವರು ಮತ್ತು ಶ್ರೀ ಪಿ. ಗುರುರಾಜ ಉಪಾಧ್ಯಾಯ, ವಿ ಸಂಜೀವಾಚಾರ್ಯ ಇವರು ಪಾಠಾಂತರಸಂಕಲನ ಹಾಗೂ ಕರಡುಪ್ರತಿ ಪರಿಶೀಲನೆಯಲ್ಲಿ ವಿಶಿಷ್ಟವಾದ ಸೇವೆ ಸಲ್ಲಿಸಿದ್ದಾರೆ. ಇವರೆಲ್ಲರಿಗೆ ನಾವು ಆಭಾರಿಯಾಗಿದ್ದೇವೆ.

ಸುಂದರವಾದ ಮುಖಪುಟವನ್ನು ಸಿದ್ಧಪಡಿಸಿ ನೀಡಿದ ಶ್ರೀ ಕೆ.ಎಂ. ಶೇಷಗಿರಿಯವರಿಗೆ ನನ್ನ ಪ್ರೀತಿಯ ವಂದನೆಗಳು.

ಅಕ್ಷರಸಂಯೋಜನೆಯ ಕಾರ್ಯವನ್ನು ನೆರವೇರಿಸಿದ ಶ್ರೀ ಸುಬ್ಬಣ್ಣ ಹಾಗೂ ಶ್ರೀ ಪ್ರಸಾದ ಇವರಿಗೆ ನಾನು ಆಭಾರಿಯಾಗಿದ್ದೇನೆ. ವಿದ್ವಾಂಸರಾದ ವ್ಯಾಸರಾಜ ಜೋಶಿಯವರು ಸಾವಿ ಪುಟದ ಈ ಬೃಹತ್ ಕೃತಿಯ ಸುಂದರವಾದ ವಿನ್ಯಾಸವನ್ನು ನೆರವೇರಿಸಿ ಕೊಟ್ಟಿದ್ದಾರೆ. ಅವರಿ ನಮ್ಮ ಕೃತಜ್ಞತೆಗಳು.

ಸುಂದರವಾಗಿ ಮುದ್ರಣಕಾರ್ಯವನ್ನು ನೆರವೇರಿಸಿಕೊಟ್ಟ ಲಾವಣ್ಯ ಮುದ್ರಣಾಲಯದ ಅಧಿಕಾರಿಗಳಿಗೆ ನಾನು ಕೃತಜ್ಞನಾಗಿದ್ದೇನೆ.

**ಡಾ। ಎ.ವಿ. ನಾಗಸಂಪಿಗೆ**

# ಪ್ರಕೃತ ಮುದ್ರಣದ ಕುರಿತು.....

ಪರಮಪೂಜ್ಯ ಗುರುಗಳೂ, ಪ್ರಾತಃಸ್ಮರಣೀಯರೂ ಆದ ಶ್ರೀವಿದ್ಯಾಮಾನ್ಯತೀರ್ಥ ಶ್ರೀಪಾದರು ತಮ್ಮ ಪ್ರವಚನದಲ್ಲಿ ಹೀಗೆ ಅನುಗ್ರಹ ಸಂದೇಶವನ್ನು ಕರುಣಿಸಿದ್ದರು- 'ವಿದ್ವತ್‌ಪರಿಜ್ಞೇಯಮಹಾವಿಶೇಷಃ' ನಾಲ್ಕು ದರ್ಶನಗಳಲ್ಲಿ ಆಳವಾದ ಪಾಂಡಿತ್ಯವುಳ್ಳ ವಿದ್ವಾಂಸರು ರಾಯರ ಕೃತಿಗಳನ್ನು ತಕ್ಕಮಟ್ಟಿಗೆ ಅರ್ಥ ಮಾಡಿಕೊಳ್ಳಬಲ್ಲರೆಂಬುದು ಸ್ಥೂಲವಾದ ಅರ್ಥ. ಇದರ ಮುಖ್ಯಾರ್ಥ ಹೀಗಿದೆ 'ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ' ಎಂಬ ಉಪನಿಷತ್ತಿನ ಸಮಾಖ್ಯೆಯೊಂದಿಗೆ 'ವಿದ್ವಾನ್' ಎಂಬ ಪದವು ಅಪರೋಕ್ಷಜ್ಞಾನಿಯನ್ನು ತಿಳಿಸುತ್ತಿದೆ. ಇದರಿಂದ ದೊರಕುವ ಅರ್ಥವೆಂದರೆ, ಅಪರೋಕ್ಷಜ್ಞಾನಿಗಳಲ್ಲಿ ಶ್ರೇಷ್ಠರಾದ ರಾಯರ ಕೃತಿಗಳನ್ನು ಅರ್ಥೈಸಿಕೊಳ್ಳಲು ಅಪರೋಕ್ಷ ಜ್ಞಾನವು ಸಾಮಾನ್ಯ ಅರ್ಹತೆ ಎಂದು ತಿಳಿಯಬಹುದಾಗಿದೆ. ಬಿಂಬಾಪರೋಕ್ಷವನ್ನು ಪಡೆದ ಎತ್ತರದ ಜ್ಞಾನಿಯು ರಾಯರ ಕೃತಿಗಳ ವ್ಯಾಖ್ಯಾನದಲ್ಲಿ ನ್ಯಾಯವನ್ನು ನೀಡಬಲ್ಲನು. ಇದು ಶ್ರೀರಾಯರ ಕೃತಿಗಳ ಹಿರಿಮೆ.

ಪರಮಪೂಜ್ಯ ಗುರುಗಳಾದ ಶ್ರೀವಿಶ್ವೇಶತೀರ್ಥ ಶ್ರೀಪಾದರು ತಮ್ಮ ಸಂದೇಶದಲ್ಲಿ ಹೀಗೆ ರಾಯರ ಮಹಿಮೆಯನ್ನು ಕೊಂಡಾಡುವುದಿದೆ- 'ಕರುಣಾಸಾಗರರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಪಂಡಿತರು ಹಾಗೂ ಪಾಮರರು ಇಬ್ಬರಿಗೂ ತಮ್ಮ ಕರುಣೆಯ ಮಹಾಪೂರವನ್ನು ಹರಿಸಿದವರು. ಲೌಕಿಕ ಇಷ್ಟಾರ್ಥಗಳನ್ನು ಬಯಸಿ ಬಂದವರಿಗೆ ಅದನ್ನು ಕರುಣಿಸಿ ಅನುಗ್ರಹಿಸುವುದು ಅವರ ಮಹಾಗುಣ. ಇದರಂತೆ ಪರಿಶುದ್ಧವಾದ ತತ್ತ್ವಜ್ಞಾನವನ್ನು ಬಯಸಿ ಬಂದ ಪಂಡಿತರಿಗೆ ಅವರ ಯೋಗ್ಯತೆಗೆ ತಕ್ಕಂತೆ ತಮ್ಮ ಗ್ರಂಥಗಳ ಮೂಲಕ ತತ್ತ್ವರಹಸ್ಯಗಳನ್ನು ಶ್ರೀಗುರುರಾಜರು ಅನುಗ್ರಹಿಸಿದ್ದಾರೆ. ಇವರ ಗ್ರಂಥಗಳ ಅಧ್ಯಯನದಿಂದ ಶ್ರೀಹರಿವಾಯುಗುರುಗಳ ಕರುಣೆ ದೊರಕಿ ಮುಕ್ತಿಯನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.'

ಪರಮಪೂಜ್ಯ ಗುರುಗಳಾದ ಶ್ರೀವಿಶ್ವೇಶತೀರ್ಥ ಶ್ರೀಪಾದರ ವಾತ್ಸಲ್ಯಪೂರ್ಣವಾದ ಅನುಗ್ರಹದಿಂದ ಕನ್ನಡದ ಕನ್ನಡಿಯಲ್ಲಿ ಮೂರು ಮುದ್ರಣಗಳನ್ನು ಕಂಡ ಗೀತಾವಿವೃತಿಯು ಸಹೃದಯ ವಿದ್ವಾಂಸರ ಮೆಚ್ಚುಗೆಯನ್ನು ಗಳಿಸಿ, **ಇದೀಗ ಈ ಕೃತಿಯು ಪೂರ್ಣಪ್ರಜ್ಞ ಸಂಶೋಧನ ಟ್ರಸ್ಟ್‌ನ ಮೂಲಕ ಪ್ರಕಾಶನಗೊಳ್ಳುತ್ತಿದೆ.** ಈ ಗ್ರಂಥಪ್ರಕಾಶನಕ್ಕೆ ಕರ್ನಾಟಕ ಉಚ್ಚನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿಗಳಾದ ಶ್ರೀ ವಿ. ಜಗನ್ನಾಥನ್‌ರವರು ಒಂದು ಲಕ್ಷ ರೂ.ಗಳನ್ನು ನೀಡಿ ಮುದ್ರಣದ ಸಿಂಹಪಾಲು ವೆಚ್ಚವನ್ನು ಭರಿಸಿದ್ದಾರೆ. ಶ್ರೀಹರಿವಾಯುಗುರುಗಳು ಅವರಿಗೆ ದೀರ್ಘಾಯುರಾರೋಗ್ಯ ಭಾಗ್ಯವನ್ನು ಕರುಣಿಸಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ. ಸಮರ್ಥವಾಗಿ ಮುದ್ರಣಕಾರ್ಯವನ್ನು ನಿರ್ವಹಿಸಿದ ಶ್ರೀ ಅನಿರುದ್ಧ ಕ್ರಿಯೇಷನ್ಸ್‌ನ ಶ್ರೀ ಶ್ರೀಕಾಂತ ಕಲ್ಯಾಣಿ ಇವರನ್ನು ಅಭಿನಂದಿಸುತ್ತೇನೆ.

**ಡಾ। ಎ.ವಿ. ನಾಗಸಂಪಿಗೆ**

ನಿರ್ದೇಶಕರು



ಯತ್ರ ಯೋಗೇಶ್ವರಃ ಕೃಷ್ಣೋ
ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋ ಭೂತಿಃ
ಧ್ರುವಾ ನೀತಿರ್ಮತಿರ್ಮಮ ॥

ವ್ಯಾಸೇನ ವ್ಯುಪ್ತಬೀಜಃ
ಶ್ರುತಿಭುವಿಭಗವತ್ಪಾದಲಬ್ಧಾಂಕುರಶ್ರೀಃ
ಪ್ರತ್ನೈರೀಷತ್ಪ್ರಭಿನ್ನೋಽಜನಿ
ಜಯಮುನಿನಾ ಸಮ್ಯಗುದ್ಭಿನ್ನಶಾಖಃ ।
ಮೌನೀಶವ್ಯಾಸರಾಜಾದುದಿತಕಿಸಲಯಃ
ಪುಷ್ಪಿತೋಽಯಂ ಜಯೀಂದ್ರಾತ್
ಅದ್ಯ ಶ್ರೀರಾಘವೇಂದ್ರಾತ್ ವಿಲಸತಿ ಫಲಿತಃ
ಮಧ್ವಸಿದ್ಧಾಂತಶಾಖೀ ॥

ಶ್ರೀಮತೋ ರಾಘವೇಂದ್ರಸ್ಯ
ನಮಾಮಿ ಪದಪಂಕಜೇ ।
ಕಾಮಿತಾಶೇಷಕಲ್ಯಾಣ-
ಕಲನಾಕಲ್ಪಪಾದಪೌ ॥

ಮೂಕೋಽಪಿ ಯತ್ಪ್ರಸಾದೇನ
ಮುಕುಂದಶಯನಾಯತೇ ।
ರಾಜರಾಜಾಯತೇ ರಿಕ್ತೋ
ರಾಘವೇಂದ್ರಂ ತಮಾಶ್ರಯೇ ॥

# ವಿಷಯಾನುಕ್ರಮಣಿಕಾ

| ಶೀರ್ಷಿಕೆ | ಪುಟಸಂಖ್ಯೆ |
|---|---|

## ಅಧ್ಯಾಯ – 1



## ಅಧ್ಯಾಯ – 2

| ಶೀರ್ಷಿಕೆ | ಪುಟಸಂಖ್ಯೆ |
|---|---|
| ಶ್ರೀಕೃಷ್ಣನ ಮಾತಿನಲ್ಲಿ ವಿಶ್ವಾಸವಿಡಬೇಕು. | 253 |
| ಅಜ್ಞಾನಿಗೆ ದುಃಖ ನಿಶ್ಚಿತ | 254 |
| ಸ್ವಭಾವವನ್ನು ಯಾರೂ ಬಿಡುವುದಿಲ್ಲ | 255 |
| ರಾಗದ್ವೇಷಗಳು ಶ್ರೇಯಸ್ಸಿಗೆ ಪ್ರತಿಬಂಧಕ | 256 |
| ಸ್ವಧರ್ಮಾಚರಣೆ ಶ್ರೇಷ್ಠ | 258 |
| ಪಾಪಾಚರಣೆಗೆ ಏನು ಕಾರಣ ? | 259 |
| ರಜೋಗುಣದ ವಿಕಾರವಾದ ಕಾಮ– ಕ್ರೋಧಗಳು ಪಾಪಕಾರಣಗಳು | 261 |
| ತ್ರಿವಿಧ ಜೀವರಿಗೂ ಕಾಮ ಆವಶ್ಯಕ | 262 |
| ಕಾಮವು ಅಪರೋಕ್ಷ ಜ್ಞಾನವನ್ನೂ ತಡೆಯುತ್ತದೆ. | 264 |
| ಜ್ಞಾನೇಂದ್ರಿಯ ಮನಸ್ಸುಗಳನ್ನು ಆಶ್ರಯಿಸದ ಕಾಮವು ಜ್ಞಾನಬರಲು ತಡೆಯಾಗಿದೆ | 266 |
| ಇಂದ್ರಿಯ ನಿಗ್ರಹದಿಂದ ಕಾಮನಾಶ | 267 |
| ತಾರತಮ್ಯ ಜ್ಞಾನ ಆವಶ್ಯಕ | 258 |
| ಹರಿಸರ್ವೋತ್ತಮತ್ವ ಜ್ಞಾನವೇ ಕಾಮಜಯಕ್ಕೆ ಸಾಧನ . | 269 |
| **ಅಧ್ಯಾಯ – 4** | |
| ಉಪದೇಶಪರಂಪರೆ | 271 |
| ನಾಲ್ಕನೆಯ ಅಧ್ಯಾಯ ಏನನ್ನು ಹೇಳುತ್ತದೆ ? | 272 |
| ಪ್ರಾಚೀನನಾದ ಸೂರ್ಯನಿಗೆ ನೀನು ಉಪದೇಶಿಸಿದ್ದು ಹೇಗೆ ? | 275 |
| ಸರ್ವಜ್ಞನೂ ಅನಂತರೂಪಿಯೂ ಆದ ನಾನು ಸೂರ್ಯನಿಗಿಂತ ಹಿಂದಿನವ | 276 |
| ಭಗವಂತನ ಅವತಾರ ಸ್ವೇಚ್ಛೆಯಿಂದಲೇ | 278 |
| ಧರ್ಮಕ್ಕೆ ಅವನತಿಯಾದಾಗ ನಾನು ಅವತರಿಸುವೆ | 281 |
| ಮುಕ್ತಿಗೆ ಜನ್ಮ-ಕರ್ಮರಹಸ್ಯ ಜ್ಞಾನವು ಆವಶ್ಯಕ, ಆದರೆ ಅದೊಂದೇ ಅಲ್ಲ. | 282 |
| ಸೇವೆಗೆ ಅನುಗುಣವಾಗಿ ಫಲದಾತೃ | 284 |
| ಗುಣ-ಕರ್ಮಗಳನ್ನಾಧರಿಸಿದ ವರ್ಣವ್ಯವಸ್ಥೆ | 289 |

| ಶೀರ್ಷಿಕೆ | ಪುಟಸಂಖ್ಯೆ |
|---|---|

| ಶೀರ್ಷಿಕೆ | ಪುಟಸಂಖ್ಯೆ |
|---|---|

## ಅಧ್ಯಾಯ – 8



## ಅಧ್ಯಾಯ – 9

## ಅಧ್ಯಾಯ – 10

| ಶೀರ್ಷಿಕೆ | ಪುಟಸಂಖ್ಯೆ |
|---|---|

| ಶೀರ್ಷಿಕೆ | ಪುಟಸಂಖ್ಯೆ |
|---|---|



## ಅಧ್ಯಾಯ – 12



## ಅಧ್ಯಾಯ – 13

| ಶೀರ್ಷಿಕೆ | ಪುಟಸಂಖ್ಯೆ |
|---|---|

| ಶೀರ್ಷಿಕೆ | ಪುಟಸಂಖ್ಯೆ |
|---|---|

# ಅನುವಾದ ಮಾಡಿರುವ ವಿದ್ವಾಂಸರು

| | |
|---|---|
| ಅಧ್ಯಾಯ - 1 | ಡಾ। ಆರ್. ಜಿ. ಮಾಳಗಿ |
| ಅಧ್ಯಾಯ - 2 | ಪ್ರೊ। ಎ. ಹರಿದಾಸ್ ಭಟ್ |
| ಅಧ್ಯಾಯ - 3 | ವಿ। ಎಚ್. ಪಿ. ನಾಗರಾಜಾಚಾರ್ಯ |
| ಅಧ್ಯಾಯ - 4 | ವಿ। ಎ. ಗುರುಪ್ರಸಾದಾಚಾರ್ಯ |
| ಅಧ್ಯಾಯ - 5 ಮತ್ತು 6 | ಡಾ। ಜಿ . ಪಿ. ನಾಗರಾಜಾಚಾರ್ಯ |
| ಅಧ್ಯಾಯ - 7 ಮತ್ತು 8 | ಪ್ರೊ। ಡಿ. ಪ್ರಹ್ಲಾದಾಚಾರ್ಯ (ಶ್ರೀವಿದ್ಯಾಶ್ರೀಶತೀರ್ಥ ಶ್ರೀಪಾದರು) |
| ಅಧ್ಯಾಯ - 9 ಮತ್ತು 10 | ದಿ। ಪ್ರೊ। ಅನಂತ ತಂತ್ರಿ |
| ಅಧ್ಯಾಯ - 11 | ವಿ। ರಘುಪತಿ ಉಪಾಧ್ಯಾಯ |
| ಅಧ್ಯಾಯ - 12 | ಡಾ। ಎ. ವಿ. ನಾಗಸಂಪಿಗೆ |
| ಅಧ್ಯಾಯ - 13 | ಡಾ। ಎಚ್. ಸತ್ಯನಾರಾಯಣಾಚಾರ್ಯ |
| ಅಧ್ಯಾಯ - 14 | ವಿ। ಶ್ರೀರಾಮವಿಟ್ಠಲಾಚಾರ್ಯ |
| ಅಧ್ಯಾಯ - 15 | ಪ್ರೊ। ಕೆ. ಹಯವದನ ಪುರಾಣಿಕ್ |
| ಅಧ್ಯಾಯ - 16 | ಡಾ। ಸಿ. ಎಚ್. ಶ್ರೀನಿವಾಸಮೂರ್ತಿ |
| ಅಧ್ಯಾಯ - 17 | ವಿ। ಸಿ. ಎಚ್. ಬದರಿನಾಥಾಚಾರ್ಯ |
| ಅಧ್ಯಾಯ - 18 | ಡಾ। ತಿರುಮಲಾಚಾರ್ಯ ಕುಲಕರ್ಣಿ |

## ಶ್ರೀರಾಘವೇಂದ್ರತೀರ್ಥಕೃತಾ

# ಗೀತಾವಿವೃತಿಃ

## (ಗೀತಾರ್ಥಸಂಗ್ರಹಃ)

## ಅಧ್ಯಾಯ – 1

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತಶ್ರೀರಾಮಕೃಷ್ಣವೇದವ್ಯಾಸಾತ್ಮಕ-
ಶ್ರೀಲಕ್ಷ್ಮೀಹಯಗ್ರೀವಾಯ ನಮಃ ॥

### ಗೀತಾವಿವೃತಿಯ ಮಂಗಳಶ್ಲೋಕ

**ಓಂ॥ ಲಕ್ಷ್ಮೀನಾರಾಯಣಂ ನತ್ವಾ [1]ಪೂರ್ಣಬೋಧಾನ್ ಗುರೂನಪಿ ।**
**ಕುರ್ಮಃ ಶ್ರೀಕೃಷ್ಣಗೀತಾಯಾ ಭಾಷ್ಯಾದ್ಯುಕ್ತಾರ್ಥಸಂಗ್ರಹಮ್ ॥**

**ಅರ್ಥ** – ಲಕ್ಷ್ಮೀಪತಿಯಾದ ನಾರಾಯಣನನ್ನು, ಪೂರ್ಣಪ್ರಜ್ಞರನ್ನು ಮತ್ತು ನನ್ನ ಗುರುಗಳನ್ನೂ ನಮಸ್ಕರಿಸಿ ಶ್ರೀಕೃಷ್ಣನಿಂದ ಉಪದೇಶಿಸಲ್ಪಟ್ಟ ಭಗವದ್ಗೀತೆಗೆ ಗೀತಾಭಾಷ್ಯ, ಗೀತಾತಾತ್ಪರ್ಯ ಹಾಗೂ ಟೀಕೆಗಳಲ್ಲಿ ಹೇಳಿದ ಅರ್ಥಗಳ ಸಂಗ್ರಹವನ್ನು ಮಾಡುತ್ತೇವೆ. (ಸಂಗ್ರಹಿಸುತ್ತೇವೆ)

**ವಿವರಣೆ** – ಗೀತಾ ವಿವೃತಿಯನ್ನು ರಚಿಸಲು ಉದ್ಯುಕ್ತರಾದ ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರು ಗ್ರಂಥದ ಆರಂಭದಲ್ಲಿ ಲಕ್ಷ್ಮೀಪತಿ ನಾರಾಯಣನನ್ನು, ಮಧ್ವಗುರುಗಳನ್ನು ಮತ್ತು ತಮ್ಮ ಸಾಕ್ಷಾತ್ ಗುರುಗಳಾದ ಶ್ರೀಸುಧೀಂದ್ರತೀರ್ಥರನ್ನು ನಮಸ್ಕರಿಸಿ ಶ್ರೀಮಧ್ವಗುರುಗಳು ಗೀತಾಭಾಷ್ಯ, ಗೀತಾತಾತ್ಪರ್ಯದಲ್ಲಿ ಹೇಳಿದಂತೆ ಮತ್ತು ಶ್ರೀಜಯತೀರ್ಥರು ತಮ್ಮ ಟೀಕೆಯಲ್ಲಿ ಹೇಳಿದಂತೆ, ಶ್ರೀಕೃಷ್ಣನಿಂದ ಉಕ್ತವಾದ ಭಗವದ್ಗೀತೆಯ ಅರ್ಥಗಳನ್ನು ಸಂಗ್ರಹಿಸುತ್ತೇನೆ' ಎಂದು ಪ್ರತಿಜ್ಞೆಮಾಡಿದ್ದಾರೆ. **'ಗುರುಗಳು ಹೇಳಿದ ಅರ್ಥಗಳನ್ನು ಸಂಗ್ರಹಿಸುತ್ತೇನೆ'** ಎಂದು ಗ್ರಂಥ ಕರ್ತೃಗಳೇ ಹೇಳಿರುವುದರಿಂದ ಈ ಗ್ರಂಥಕ್ಕೆ **'ಗೀತಾರ್ಥ**

---

1.'ಬೋಧಾದಿಕಾನ್ ಗುರೂನ್' ಕ.ಘ.ಪ್ರ. 'ಪೂರ್ಣಬೋಧಾದಿಸದ್ಗುರೂನ್' ಖ.

ೃಹ' ಎಂಬ ಹೆಸರೇ ಉಚಿತವೆನಿಸುತ್ತದೆ. ಭಾಷ್ಯಟೀಕಾಕಾರರಲ್ಲಿ ರಾಯರಿಗೆ ಇರುವ ಭಕ್ತಿ, ರಗಳು ಮತ್ತು ಸ್ವಾಹಂಕಾರ ಖಂಡನೆಯೂ ಈ ಶಬ್ದದಿಂದ ಸೂಚಿತವಾಗುತ್ತದೆ.

## ಗೀತಾವಿವೃತಿ

### ಹಾಭಾರತದ ಹೆಜ್ಜೇನು ಗೀತೆ

'ಸ್ತ್ರೀಶೂದ್ರಬ್ರಹ್ಮಬಂಧೂನಾಂ ತ್ರಯೀ ನ ಶ್ರುತಿಗೋಚರಾ ।
ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ ॥'

ಇತಿ ಭಾಗವತೋಕ್ತ್ಯಾ ವೇದಾರ್ಥಜ್ಞಾನಾನಧಿಕಾರಿಣಾಂ ಸ್ತ್ರೀಶೂದ್ರಾದೀನಾಂ ಧರ್ಮಜ್ಞಾನದ್ವಾರಾ ಮೋಕ್ಷೋ ಭವೇದಿತಿ ಭಗವಾನ್ ವೇದವ್ಯಾಸಃ ಸಂಭವ-ಸಭಾ-ಅರಣ್ಯ-ವಿರಾಟ-ಉದ್ಯೋಗ-ಭೀಷ್ಮ-ದ್ರೋಣ-ಕರ್ಣ-ಶಲ್ಯ-ಗದಾ-ಸೌಷುಪ್ತಿಕ-ಶಾಂತಿ-ಆನುಶಾಸನಿಕ-ಆಶ್ವಮೇಧಿಕ-ಮೌಸಲ-ಮಹಾಪ್ರಸ್ಥಾನ-ಸ್ವರ್ಗಾರೋಹಣ-ಭವಿಷ್ಯತ್ಪರ್ವಭೇದೇನಾಷ್ಟಾದಶಪರ್ವಾತ್ಮಕಂ ಭಾರತಂ ಕೃತ್ವಾ ತತ್ರ ಭೀಷ್ಮಪರ್ವಣಿ ಭಾರತಪಾರಿಜಾತಮಧುಭೂತಾಂ ಸರ್ವಭಾರತಾರ್ಥ-ಸಂಗ್ರಹಭೂತಾಂ ಶ್ರೀಕೃಷ್ಣಾರ್ಜುನಸಂವಾದರೂಪಾಂ ಭಗವದ್ಗೀತಾಂ [1]ನಿಬಬಂಧ ।

**ಅನುವಾದ**– 'ಸ್ತ್ರೀಯರು, ಶೂದ್ರರು ಮತ್ತು ಬ್ರಹ್ಮಬಂಧುಗಳಿಗೆ ವೇದಾಧ್ಯಯನದಲ್ಲಿ ಅಧಿಕಾರವಿಲ್ಲದಿರುವುದರಿಂದ ಪೂಜ್ಯರಾದ ವೇದವ್ಯಾಸರು ಮಹಾಭಾರತವನ್ನು ರಚಿಸಿದರು.' ಎಂಬುದಾಗಿ ಭಾಗವತದಲ್ಲಿ ಹೇಳಿದಂತೆ, ವೇದಾರ್ಥ ಜ್ಞಾನವನ್ನು ಪಡೆಯಲು ಅಧಿಕಾರವಿಲ್ಲದಿರುವ ಸ್ತ್ರೀಯರು ಶೂದ್ರರು ಮತ್ತು ಬ್ರಹ್ಮಬಂಧುಗಳು ಇವರಿಗೆ ಧರ್ಮಜ್ಞಾನ ಮೂಲಕವಾಗಿ ಮೋಕ್ಷವು ದೊರೆಯಬೇಕು ಎಂಬ ಭಾವನೆಯಿಂದ ಷಡ್ಗುಣೈಶ್ವರ್ಯ ಸಂಪನ್ನರಾದ ವೇದವ್ಯಾಸರು, ಸಂಭವ-ಸಭಾ-ಅರಣ್ಯ-ವಿರಾಟ-ಉದ್ಯೋಗ-ಭೀಷ್ಮ-ದ್ರೋಣ- ಕರ್ಣ-ಶಲ್ಯ-ಗದಾ-ಸೌಷುಪ್ತಿಕ-ಶಾಂತಿ-ಆನುಶಾಸನಿಕ-ಆಶ್ವಮೇಧಿಕ-ಮೌಸಲ-ಮಹಾಪ್ರಸ್ಥಾನ-ಸ್ವರ್ಗಾರೋಹಣ-ಭವಿಷ್ಯತ್ ಎಂಬ ಹೆಸರುಗಳುಳ್ಳ ಹದಿನೆಂಟು ಪರ್ವಾತ್ಮಕ ವಾದ ಮಹಾ ಭಾರತವನ್ನು ರಚಿಸಿ, ಈ ಹದಿನೆಂಟು ಪರ್ವಗಳಲ್ಲಿ ಒಂದಾದ ಭೀಷ್ಮಪರ್ವದಲ್ಲಿ ಮಹಾಭಾರತ ಎಂಬ ಪಾರಿಜಾತ ಕುಸುಮದ ಮಕರಂದದಂತಿರುವ, ಸಮಗ್ರ ಮಹಾಭಾರತದ ಸಂಗ್ರಹದಂತಿರುವ, ಶ್ರೀಕೃಷ್ಣಾರ್ಜುನಸಂವಾದರೂಪವಾದ, ಭಗವದ್ಗೀತೆಯನ್ನು ಜೋಡಿಸಿದರು. (ಅಳವಡಿಸಿದರು)

---

[1] 'ಉಪನಿಬಬಂಧ' ಕ.ಖ.ಗ.

**ತತ್ರ ಪೂರ್ವಷಟ್ಕೇ ಜ್ಞಾನೋಪಾಯೋಕ್ತಿಃ । ದ್ವಿತೀಯಷಟ್ಕೇ [1]ತತ್ಸಾಧ್ಯ-ಜ್ಞಾನಸ್ಯೋಕ್ತಿಃ । ತೃತೀಯಷಟ್ಕೇ ಪ್ರಾಗುಕ್ತಸ್ಯ ಪ್ರಪಂಚನಂ ಕ್ರಿಯತ ಇತಿ ವಿವೇಕಃ।**

**ಅನುವಾದ** – (ಗೀತೆಯ ವಿಷಯ) ಈ ಹದಿನೆಂಟು ಅಧ್ಯಾಯಗಳಲ್ಲಿ ಮೊದಲನೆಯ ಆರು ಅಧ್ಯಾಯಗಳು ಜ್ಞಾನೋಪಾಯ ಬೋಧಕಗಳು, ಎರಡನೆಯ ಆರು ಅಧ್ಯಾಯಗಳು ತತ್ಸಾಧ್ಯಜ್ಞಾನ ಬೋಧಕಗಳು ಮತ್ತು ಕೊನೆಯ ಆರು ಅಧ್ಯಾಯಗಳು ಹಿಂದಿನ ವಿಷಯಗಳ ವಿವರಣಾತ್ಮಕವಾದವುಗಳು ಎಂದು ತಿಳಿಯುವುದು.

**ತತ್ರಾದ್ಯಾಧ್ಯಾಯೋ ದ್ವಿತೀಯೇ ಕತಿಪಯಶ್ಲೋಕಾಶ್ಚ ಕೃಷ್ಣೇನಾರ್ಜುನ-ಬೋಧನೇ ಪ್ರಸಕ್ತಿಸಂಪಾದನಾಯ ಪ್ರವೃತ್ತಾಃ । ತತ್ರಾಯಮರ್ಥಃ । ಧೃತರಾಷ್ಟ್ರ ಉವಾಚ । ಕಿಮಿತ್ಯಾಹ- ಧರ್ಮೇತಿ ॥**

**ಅನುವಾದ** – (ಮೊದಲನೆಯ ಅಧ್ಯಾಯದ ಅವತರಣಿಕೆ) ಈ ಹದಿನೆಂಟು ಅಧ್ಯಾಯಗಳ ಮಧ್ಯೆ ಮೊದಲನೆಯ ಅಧ್ಯಾಯವು ಮತ್ತು ಎರಡನೆಯ ಅಧ್ಯಾಯದ 10 ಶ್ಲೋಕಗಳು ಕೃಷ್ಣನು ಅರ್ಜುನನಿಗೆ ಗೀತೆಯನ್ನು ಉಪದೇಶಿಸಲು ಏನು ಸಂದರ್ಭ ? ಉಪದೇಶದ ಪ್ರಸಕ್ತಿ ಏಕೆ ? ಎಂಬ ಪ್ರಶ್ನೆಗೆ ಉತ್ತರರೂಪವಾಗಿ ಸಂದರ್ಭ ಸಂಪಾದಕಗಳು. ಧೃತರಾಷ್ಟ್ರ ಹೇಳಿದನು. ಎನೆಂದು ಹೇಳಿದನು ? ಧರ್ಮಕ್ಷೇತ್ರೆ ಎಂದು ಮುಂತಾಗಿ ಹೇಳಿದನು.

## ನನ್ನವರು-ಪಾಂಡವರು ಏನು ಮಾಡಿದರು ?

**ಧೃತರಾಷ್ಟ್ರ ಉವಾಚ-**

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ** ॥ 1 ॥

**ಅರ್ಥ** – ಧೃತರಾಷ್ಟ್ರನು ಹೇಳಿದನು – ಸಂಜಯನೇ ! ಧರ್ಮಸಾಧನ ಭೂಮಿಯಾದ ಕುರುಕ್ಷೇತ್ರದಲ್ಲಿ ಯುದ್ಧಮಾಡಲೆಂದು ಬಂದು ಸೇರಿದ ನನ್ನ ಮಕ್ಕಳು ಮತ್ತು ಪಾಂಡವರು ಏನು ಮಾಡಿದರು ?

ಧರ್ಮಸಾಧನಭೂಮೌ ಕುರುಕ್ಷೇತ್ರೇ **ಯುಯುತ್ಸವಃ** = ಯುದ್ಧಮಿಚ್ಛಂತ ಏವ **ಸಮವೇತಾಃ**= ಮಿಲಿತಾಃ ಸಂತೋ **ಮಾಮಕಾಃ**= ಮದೀಯಾಃ ದುರ್ಯೋಧನಾದಯಃ, **ಪಾಂಡವಾಶ್ಚ** ಹೇ **ಸಂಜಯ ಕಿಮಕುರ್ವತ** 'ಇತಿ'

1. 'ಸಾಧನೋಕ್ತಿಃ' – ಕ.

**ಇತಿಶಬ್ದೋ ಯೋಜ್ಯಃ । ಪಾಂಡವಾನಾಂ ಭಗವತ್ಪ್ರಿಯತ್ವಂ ಸರ್ವಸಾಕ್ಷಿಕಮಪ್ಯಜಾನನ್ ಧೃತರಾಷ್ಟ್ರಃ ಸ್ವಪುತ್ರಾಣಾಂ ವಿಜಯವಿವಿದಿಷಯಾ ಸಂಜಯಂ ಪಪ್ರಚ್ಛೇತ್ಯರ್ಥಃ ॥ 1 ॥**

**ಅನುವಾದ** – ಧರ್ಮಸಾಧನ ಭೂಮಿಯಾದ ಕುರುಕ್ಷೇತ್ರದಲ್ಲಿ , **ಯುಯುತ್ಸವಃ**= ಯುದ್ಧವನ್ನು ಅಪೇಕ್ಷಿಸುವವರಾಗಿಯೇ, **ಸಮವೇತಾಃ** = ಸೇರಿರುವವರಾದ, **ಮಾಮಕಾಃ**= ನನ್ನವರಾದ ದುರ್ಯೋಧನಾದಿಗಳು ಮತ್ತು ಪಾಂಡವರು, ಸಂಜಯನೇ ! ಏನು ಮಾಡಿದರು? ಎಂದು (ಧೃತರಾಷ್ಟ್ರನು ಪ್ರಶ್ನಿಸಿದನು) (ಮೂಲದಲ್ಲಿ ಇಲ್ಲದ) 'ಇತಿ' ಎಂಬ ಶಬ್ದವನ್ನು ಸೇರಿಸಿ ಕೊಳ್ಳಬೇಕು. (ಯೋಜಿಸಬೇಕು) ಪಾಂಡವರು ಶ್ರೀಕೃಷ್ಣನಿಗೆ ಪ್ರಿಯರಾದವರು (ಆದ್ದರಿಂದ ಅವರೆ ಜಯಶಾಲಿಗಳಾಗುತ್ತಾರೆ.) ಎಂಬ ವಿಷಯವು ಸರ್ವವಿದಿತವಾದುದು. ಆದರೂ ಅದನ್ನು ಅರಿಯದ ಧೃತರಾಷ್ಟ್ರನು ತನ್ನ ಮಕ್ಕಳಾದ ದುರ್ಯೋಧನಾದಿಗಳು ಯುದ್ಧದಲ್ಲಿ ಗೆಲ್ಲಬಹುದೇನೋ ಎಂದು ತಿಳಿಯುವ ಆಸೆಯಿಂದ ಸಂಜಯನನ್ನು ಪ್ರಶ್ನೆ ಮಾಡಿದನು. ಎಂದು ಭಾವ. ॥ 1 ॥

## ಆತಂಕದಲ್ಲಿ ಕಲಿ ದುರ್ಯೋಧನ

**ಸಂಜಯ ಉವಾಚ–**

**ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥ 2 ॥**

**ಅರ್ಥ**– ಸಂಜಯ ಹೇಳಿದನು. ವ್ಯೂಹರಚನೆ ಮಾಡಿ ನಿಲ್ಲಿಸಲಾಗಿದ್ದ ಪಾಂಡವರ ಸೇನೆಯನ್ನು ನೋಡಿ, ರಾಜನಾದ ದುರ್ಯೋಧನನು ದ್ರೋಣಾಚಾರ್ಯರ ಬಳಿ ಬಂದು ಹೀಗೆ ಹೇಳಿದನು.

**ಧೃತರಾಷ್ಟ್ರಪ್ರಶ್ನಸ್ಯ ಸಂಜಯ ಉತ್ತರಮುಕ್ತವಾನಿತ್ಯಾಹ ವೈಶಂಪಾಯನೋ ಜನಮೇಜಯಂ ಪ್ರತಿ ಸಂಜಯ ಉವಾಚ ಇತ್ಯಾದಿನವಭಿಃ ಶ್ಲೋಕೈಃ । ದುರ್ಯೋಧನಕೃತವ್ಯಾಪಾರಮ್ ಆಹ– ದೃಷ್ಟ್ವೇತ್ಯಾದಿನಾ ॥ ದುರ್ಯೋಧನಸ್ತು ರಾಜಾ, ತದಾ= ಯುದ್ಧಾರ್ಥಂ ಮಿಲಿತಸಮಯೇ, ವ್ಯೂಢಂ= ವ್ಯೂಹಾತ್ಮನಾ ರಚಿತಂ, ಪಾಂಡವಸೈನ್ಯಂ ದೃಷ್ಟ್ವಾ ತು= ದೃಷ್ಟ್ವೈವ ಇತಿ ವಾ ತೋರನ್ವಯಃ । ದ್ರೋಣಾಚಾರ್ಯಸಮೀಪಮಾಗತ್ಯ ವಚನಮುವಾಚ ॥ 2 ॥**

**ಅನುವಾದ – ಸಂಜಯ ಉವಾಚ** ಎಂಬಲ್ಲಿಂದ ಮುಂದೆ ಒಂಬತ್ತು ಶ್ಲೋಕಗಳಿಂದ ಧೃತರಾಷ್ಟ್ರನ ಪ್ರಶ್ನೆಗೆ ಸಂಜಯನು ಉತ್ತರಿಸಿದನು, ಎಂದು ವೈಶಂಪಾಯನರು ಜನಮೇಜಯ ರಾಜನನ್ನು ಕುರಿತು ಹೇಳಿದರು.

ದುರ್ಯೋಧನನ ವ್ಯಾಪಾರವನ್ನು (ಕಾರ್ಯವನ್ನು) 'ದೃಷ್ಟ್ವಾ' ಇತ್ಯಾದಿ ಶ್ಲೋಕಗಳಿಂದ ಸಂಜಯನು ಹೇಳಿದನು. ರಾಜನಾದ ದುರ್ಯೋಧನನಾದರೂ, ಯುದ್ಧಕ್ಕಾಗಿ ಸೇರಿದ ಸಮಯದಲ್ಲಿ ವ್ಯೂಹಾಕಾರವಾಗಿ ರಚಿಸಿದ ಪಾಂಡವರ ಸೈನ್ಯವನ್ನು ನೋಡಿದೊಡನೆಯೇ ದ್ರೋಣಾಚಾರ್ಯರ ಬಳಿಗೆ ಹೋಗಿ ಈ ರೀತಿಯಾಗಿ ಹೇಳಿದನು. ॥ 2 ॥

**ವಿವರಣೆ**– ಮೂಲಶ್ಲೋಕದಲ್ಲಿರುವ '**ತು**' ಎಂಬ ಅವ್ಯಯವನ್ನು ಶ್ರೀರಾಯರು ಎರಡು ಕಡೆ ಅನ್ವಯಿಸಿದ್ದಾರೆ. '**ದುರ್ಯೋಧನಸ್ತು**' ದುರ್ಯೋಧನನಾದರೂ , ಎಂದು ಒಂದನೆಯ ಬಾರಿ ಅನ್ವಯ. '**ದೃಷ್ಟ್ವೈವ**' ನೋಡಿದ ಕೂಡಲೇ ಎಂದು ಎರಡನೆಯ ಬಾರಿ ಅನ್ವಯ. ಎರಡು ರೀತಿಯಾಗಿಯೂ ಅನ್ವಯಿಸಬಹುದು.

**ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್ ।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ** ॥ 3 ॥

**ಅರ್ಥ**– ನಿಮ್ಮ ಶಿಷ್ಯನೂ ಬುದ್ಧಿವಂತನೂ ಆದ ದ್ರುಪದನ ಮಗನಾದ ಧೃಷ್ಟದ್ಯುಮ್ನನಿಂದ ವ್ಯೂಹಾಕಾರವಾಗಿ ನಿಲ್ಲಿಸಲ್ಪಟ್ಟ ಪಾಂಡವರ ಈ ದೊಡ್ಡ ಸೈನ್ಯವನ್ನು ನೋಡಿರಿ.

**ತದ್ವಚನಮೇವ ಅನುವದತಿ ಸಂಜಯಃ । ಪಶ್ಯೈತಾಮ್ ಇತ್ಯಾದಿನಾ । ಹೇ ಆಚಾರ್ಯ । ತವ ಶಿಷ್ಯೇಣ ಧೀಮತಾ ಧೃಷ್ಟದ್ಯುಮ್ನೇನ ವ್ಯೂಢಾಂ ಪಾಂಡುಪುತ್ರಾಣಾಂ ಏತಾಂ ಮಹತೀಂ ಚಮೂಂ = ಸೇನಾಂ ಪಶ್ಯ ॥ 3 ॥**

**ಅನುವಾದ** – ಆ ಮಾತನ್ನೇ ಸಂಜಯ '**ಪಶ್ಯೈತಾಂ**' ಇತ್ಯಾದಿ ಶ್ಲೋಕಗಳಿಂದ ಅನುವಾದಿಸುತ್ತಾನೆ. ಆಚಾರ್ಯರೇ ! ತಮ್ಮ ಶಿಷ್ಯನಾದ, ಬುದ್ಧಿವಂತನಾದ ಧೃಷ್ಟದ್ಯುಮ್ನನಿಂದ ವ್ಯೂಹಾಕಾರವಾಗಿ ನಿಲ್ಲಿಸಲ್ಪಟ್ಟ ಪಾಂಡವರ ಈ ದೊಡ್ಡ ಸೈನ್ಯವನ್ನು ನೋಡಿರಿ ॥ 3 ॥

**ಪಾಂಡವರ ಸೈನ್ಯದ ಬಲ ಸಂಕೀರ್ತನೆ**

**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ ।**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ** ॥ 4 ॥

**ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ ।**
**ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥ 5 ॥**

**ಅರ್ಥ** – ಈ ಸೈನ್ಯದಲ್ಲಿಧನುರ್ಧಾರಿಗಳೆನಿಸಿದ ಮತ್ತು ಯುದ್ಧದಲ್ಲಿ ಭೀಮಾರ್ಜುನರಿಗೆ ಸಮರೆನಿಸಿದ, ಅನೇಕಮಂದಿ ಪರಾಕ್ರಮಿಗಳು ಇದ್ದಾರೆ. ಮಹಾರಥಿಕರಾದ ಸಾತ್ಯಕಿ, ವಿರಾಟರಾಜ, ದ್ರುಪದರಾಜ, ವೀರರಾದ ಧೃಷ್ಟಕೇತು, ಚೇಕಿತಾನ, ಕಾಶಿರಾಜ, ಪುರುಷಶ್ರೇಷ್ಠರಾದ ಪುರುಜಿತ್, ಕುಂತಿಭೋಜ, ಶೈಬ್ಯ.

**ಅತ್ರ ಸೇನಾಯಾಂ ಮಹೇಷ್ವಾಸಾಃ= ಮಹಾಧಾನುಷ್ಕಾಃ ಯುಧಿ ಭೀಮಾರ್ಜುನಸಮಾಃ ಶೂರಾಃ ಸಂತಿ । ತೇ ಕ ಇತ್ಯತ ಆಹ- ಯುಯುಧಾನ ಇತ್ಯಾದಿನಾ । ಮಹಾರಥ ಇತಿ ಪ್ರತ್ಯೇಕಮನ್ವೇತಿ ॥ 4 ॥**

**ವೀರ್ಯವಾನಿತಿ ವಿಶೇಷಣಂ ನರಪುಂಗವೋ ನರಶ್ರೇಷ್ಠ ಇತ್ಯಪಿ ತ್ರಯಾಣಾಮ್ ॥ 5 ॥**

**ಅನುವಾದ** – **ಅತ್ರ ಸೇನಾಯಾಂ** = ಈ ಸೇನೆಯಲ್ಲಿ, **ಮಹೇಷ್ವಾಸಾಃ** = ಮಹಾಧನುರ್ಧಾರಿಗಳಾದ, ಯುದ್ಧದಲ್ಲಿ ಭೀಮಾರ್ಜುನರಿಗೆ ಸರಿಸಮಾನರಾದ ಪರಾಕ್ರಮಶಾಲಿಗಳು ಇದ್ದಾರೆ. ಅವರು ಯಾರೆಂಬುದನ್ನು '**ಯುಯುಧಾನ**'ಎಂಬಲ್ಲಿಂದ ಹೇಳಿದ್ದಾರೆ . **ಮಹಾರಥಃ** ಎಂಬ ವಿಶೇಷಣವು ಪ್ರತ್ಯೇಕ ಪ್ರತ್ಯೇಕವಾಗಿ ಎಲ್ಲರಿಗೂ ಅನ್ವಯವಾಗುತ್ತದೆ. ॥ 4 ॥

**ಅನುವಾದ** – **ವೀರ್ಯವಾನ್** ಎಂಬ ವಿಶೇಷಣವು ಮತ್ತು **ನರಪುಂಗವಃ = ನರಶ್ರೇಷ್ಠಃ** ಎಂಬ ವಿಶೇಷಣವು ಮೂವರಿಗೂ ವಿಶೇಷಣವಾಗಿದೆ ॥ 5 ॥

**ವಿವರಣೆ**– ಯುಯುಧಾನ (ಸಾತ್ಯಕಿ) ವಿರಾಟರಾಜ, ಮುಂತಾದವರೆಲ್ಲರೂ ಮಹಾರಥರಾಗಿದ್ದಾರೆ. ಧೃಷ್ಟಕೇತು, ಕಾಶಿರಾಜ, ಮತ್ತು ಚೇಕಿತಾನ ಈ ಮೂವರು ಮಹಾಪರಾಕ್ರಮಶಾಲಿಗಳಾಗಿದ್ದಾರೆ. ಪುರುಜಿತ್, ಕುಂತಿಭೋಜ ಮತ್ತು ಶೈಬ್ಯ ಈ ಮೂವರೂ ನರಶ್ರೇಷ್ಠರಾಗಿದ್ದಾರೆ. ಹೀಗೆ ಮಹಾರಥ, ವೀರ್ಯವಾನ್, ಮತ್ತು ನರಶ್ರೇಷ್ಠ ಈ ಮೂರು ವಿಶೇಷಣಗಳನ್ನು ಅನ್ವಯಿಸಬೇಕು.

**ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥ 6 ॥**

**ಅರ್ಥ** – ಪರಾಕ್ರಮಿಯಾದ ಯುಧಾಮನ್ಯು ಮತ್ತು ಶಕ್ತಿಶಾಲಿಯಾದ ಉತ್ತಮೌಜಸ್ ಸುಭದ್ರೆಯ ಮಗನಾದ ಅಭಿಮನ್ಯು ಮತ್ತು ದ್ರೌಪದಿಯ ಮಕ್ಕಳು, ಇವರೆಲ್ಲರೂ

ಮಹಾಪರಾಕ್ರಮಶಾಲಿಗಳು. ಮತ್ತು ಮಹಾರಥರು. ಏಕಾಂಗಿಯಾಗಿ ಹತ್ತುಸಾವಿರಮಂದಿ ಧನುರ್ಧಾರಿಗಳೊಂದಿಗೆ ಹೋರಾಡಬಲ್ಲ ಶಸ್ತ್ರಾಸ್ತ್ರಪ್ರವೀಣರು.

ಮಹಾರಥತ್ವಂ ನಾಮ-

'ಏಕೋ ದಶಸಹಸ್ರಾಣಾಂ ಯೋಧಯೇದ್ಯಃ ಸ ಧನ್ವಿನಾಂ ।
ಶಸ್ತ್ರಶಾಸ್ತ್ರಪ್ರವೀಣಶ್ಚ ಮಹಾರಥ ಇತಿ ಸ್ಮೃತಃ ॥ '

(ಉದ್ಯೋ. ಪರ್ವ-5.168.141)

**ಇತ್ಯುಕ್ತರೂಪಮ್ । ವಿಕ್ರಾಂತಃ= ಪರಾಕ್ರಮವಾನ್ । ಸೌಭದ್ರಃ= ಅಭಿಮನ್ಯುಃ। ದ್ರೌಪದೇಯಾಃ= ದ್ರೌಪದೀಪುತ್ರಾಃ ॥ 6 ॥**

ಅನುವಾದ – ' ಮಹಾರಥ ' ಎಂದರೆ- ಏಕಾಂಗಿಯಾಗಿ ಹತ್ತುಸಾವಿರ ಧನುರ್ಧಾರಿಗಳ ಜೊತೆಯಲ್ಲಿ ಹೋರಾಡಬಲ್ಲ, ಶಸ್ತ್ರಾಸ್ತ್ರಗಳಲ್ಲಿ ಮತ್ತು ಶಾಸ್ತ್ರಗಳಲ್ಲಿ ಪ್ರಾವೀಣ್ಯವನ್ನು ಪಡೆದವನು ಎಂಬುದಾಗಿ ಉದ್ಯೋಗಪರ್ವದಲ್ಲಿ ಹೇಳಿದಂತೆ ತಿಳಿಯಬೇಕು. **ವಿಕ್ರಾಂತಃ=** ಪರಾಕ್ರಮ ಶಾಲಿಯು. **ಸೌಭದ್ರಃ=** ಅಭಿಮನ್ಯುವು, **ದ್ರೌಪದೇಯಾಃ=** ದ್ರೌಪದಿಯ ಮಕ್ಕಳು. ॥ 6 ॥

## ಸಾವಿಗೆ ಸಿದ್ಧರಾದ ಎನ್ನವರು

**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।
ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ॥ 7 ॥**

**ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।
ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ॥ 8 ॥**

**ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ ।
ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥ 9 ॥**

**ಅರ್ಥ–** ಬ್ರಾಹ್ಮಣೋತ್ತಮರಾದ ದ್ರೋಣಾಚಾರ್ಯರೇ ! ನಮ್ಮಲ್ಲಿ ಬಲಿಷ್ಠರಾದವರು ಮತ್ತು ನನ್ನ ಸೈನ್ಯದ ನಾಯಕರು ಯಾರು ಯಾರೆಂದು ತಿಳಿದುಕೊಳ್ಳಿ. ನಿಮ್ಮ ಸರಿಯಾದ ತಿಳುವಳಿಕೆಗಾಗಿ ಅವರ ಹೆಸರನ್ನು ಹೇಳುತ್ತೇನೆ. ॥ 7 ॥

ಪೂಜ್ಯರಾದ ತಾವು, ಭೀಷ್ಮಾಚಾರ್ಯರು, ಕರ್ಣ, ಯುದ್ಧದಲ್ಲಿ ಜಯಶೀಲರಾದ ಕೃಪಾಚಾರ್ಯರು, ಅಶ್ವತ್ಥಾಮಾಚಾರ್ಯರು, ವಿಕರ್ಣ ಹಾಗೆಯೇ ಭೂರಿಶ್ರವ ॥ 8 ॥

ಮತ್ತು ಇನ್ನುಳಿದ ಅನೇಕರು. ಇವರೆಲ್ಲರೂ ಮಹಾಪರಾಕ್ರಮಿಗಳೇ, ನನಗಾಗಿ ಪ್ರಾಣದ ಹಂಗು ತೊರೆದು ಹೋರಾಡುವವರು. ನಾನಾವಿಧ ಶಸ್ತ್ರಾಸ್ತ್ರಜ್ಞಾನ ಉಳ್ಳವರು. ಎಲ್ಲರೂ ಯುದ್ಧಕಲೆಯಲ್ಲಿನಿಪುಣರು ।। 9 ।।

**ಅಸ್ಮಾಕಂ ತ್ವಿತಿ ಪಾಂಡವವ್ಯಾವರ್ತಕಸ್ತುಶಬ್ದಃ । ಅಸ್ಮಾಕಂ ಸಂಬಂಧಿನೋ, ವಿಶಿಷ್ಟಾಃ = ಬಲಿಷ್ಠಾಃ, ಮಮ ಸೈನ್ಯಸ್ಯ ನಾಯಕಾಃ = ನೇತಾರೋ ಯೇ ತಾನ್ ನಿಬೋಧ = ಬುದ್ಧಿಸ್ಥಾನ್ ಜಾನೀಹಿ । ತೇ = ತವ ಸಮ್ಯಗ್ ಜ್ಞಾನಾರ್ಥಂ ತಾನ್ ಬ್ರವೀಮಿ । ದ್ವಿಜೋತ್ತಮ ಇತ್ಯಾಚಾರ್ಯಸಂಬೋಧನಮ್ ।। 7 ।।**

**ಅನುವಾದ** - ಪಾಂಡವರ ಸೈನ್ಯವನ್ನು ವ್ಯಾವೃತ್ತಿಗೊಳಿಸಲು '**ಅಸ್ಮಾಕಂ ತು**' ಎಂಬಲ್ಲಿ '**ತು**' ಶಬ್ದವನ್ನು ಬಳಸಲಾಗಿದೆ. ನಮ್ಮ ಸಂಬಂಧಿಗಳಾದವರು (ನಮ್ಮವರಾದ) **ವಿಶಿಷ್ಟಾಃ**= ಬಲಿಷ್ಠ ರಾದವರು ನನ್ನ ಸೈನ್ಯದ, **ನಾಯಕಾಃ**= ನೇತಾರರಾದವರು (ಮುನ್ನಡೆಸಿದವರಾದ) **ಯೇ**= ಯಾರಿರುವರೋ. **ತಾನ್**= ಅವರನ್ನು, **ನಿಬೋಧ** = ಬುದ್ಧಿಗೆ ತಂದುಕೊಳ್ಳಿ. **ತೇ** = ನಿಮ್ಮ, **ಸಮ್ಯಗ್ ಜ್ಞಾನಾರ್ಥಂ**= ಸರಿಯಾದ ತಿಳುವಳಿಕೆಗಾಗಿ, **ತಾನ್**= ಅವರ ಹೆಸರುಗಳನ್ನು, **ಬ್ರವೀಮಿ**= ಹೇಳುತ್ತೇನೆ. '**ದ್ವಿಜೋತ್ತಮ**' ಎಂಬುದು ದ್ರೋಣಾಚಾರ್ಯರಿಗೆ ಸಂಬೋಧನ. ಪೂಜ್ಯರಾದ ದ್ರೋಣಾಚಾರ್ಯರೇ ! ಎಂದು ಅರ್ಥ. ।। 7 ।।

ತಾನಾಹ- **ದ್ವಾಭ್ಯಾಂ** ಭವಾನಿತ್ಯಾದಿನಾ । **ಸಮಿತಿಂಜಯಃ**=ಯುದ್ಧೇ ಜಯಶೀಲಃ । **ಸೌಮದತ್ತಿಃ**= **ಸೋಮದತ್ತಸುತೋ ಭೂರಿಶ್ರವಾಃ ।। 8 ।।**

**ಅನುವಾದ** - ಆ ನಾಯಕರುಗಳ ಹೆಸರನ್ನು '**ಭವಾನ್**' ಇತ್ಯಾದಿ ಎರಡು ಶ್ಲೋಕಗಳಿಂದ ಹೇಳಿದ್ದಾರೆ. **ಸಮಿತಿಂಜಯಃ**= ಯುದ್ಧದಲ್ಲಿ ಜಯಶೀಲನಾದವನು. **ಸೌಮದತ್ತಿಃ**= ಸೋಮದತ್ತನ ಮಗನಾದ ಭೂರಿಶ್ರವ ।। 8 ।।

**ಶೂರಾ ಏವೇತಿ** ವಾ **ಮದರ್ಥ ಏವೇತಿ** ವಾऽವಧಾರಣಾನ್ವಯಃ । **ತ್ಯಕ್ತಜೀವಿತಾಃ** = **ಪ್ರಾಣತ್ಯಾಗೇ ಕೃತನಿಶ್ಚಯಾ ಇತ್ಯರ್ಥಃ । ಪ್ರಹ್ರಿಯಂತೇ** ಏಭಿರಿತಿ **ಪ್ರಹರಣಾನಿ**= **ಅಸ್ತ್ರಾಣಿ । ನಾನಾವಿಧಾನಿ ಶಸ್ತ್ರಾಣಿ**[1] **ಯೇಷಾಂ ತೇ ನಾನಾ-ಶಸ್ತ್ರಪ್ರಹರಣಾಃ । ಯುದ್ಧವಿಶಾರದಾಃ**= **ಯುದ್ಧಕುಶಲಾಃ ।। 9 ।।**

**ಅನುವಾದ** - ಎಲ್ಲರೂ ಶೂರರೇ ! ಆಗಿದ್ದಾರೆ. ಅಥವಾ ಎಲ್ಲರೂ ನನಗಾಗಿಯೇ ಪ್ರಾಣತ್ಯಾಗಮಾಡಲು ಸಿದ್ಧರಾಗಿದ್ದಾರೆ. ಹೀಗೆ ಎರಡು ರೀತಿಯಾಗಿ ಅವಧಾರಣಾರ್ಥಕ '**ಚ**'

1. 'ಶಸ್ತ್ರಾಣಿ ಅಸ್ತ್ರಾಣಿ ಚ '

ಎಂಬ ಶಬ್ದಕ್ಕೆ ಅನ್ವಯ ಹೇಳಬೇಕು. **ತ್ಯಕ್ತಜೀವಿತಾಃ=** ಪ್ರಾಣತ್ಯಾಗ ಮಾಡಲು ನಿಶ್ಚಯಿಸಿದವರು. **ಪ್ರಹರಣಾನಿ=** ಅಸ್ತ್ರಗಳು. ನಾನಾವಿಧವಾದ ಶಸ್ತ್ರಗಳು ಮತ್ತು ಅಸ್ತ್ರಗಳುಳ್ಳವರು. (ನಾನಾ ವಿಧವಾದ ಶಸ್ತ್ರಾಸ್ತ್ರಗಳನ್ನು ಬಲ್ಲವರು) **ಯುದ್ಧವಿಶಾರದಾಃ=** ಯುದ್ಧದಲ್ಲಿ ಕುಶಲರಾದವರು. ॥ 9 ॥

**ವಿವರಣೆ-** ಮೂಲದಲ್ಲಿ ಅವಧಾರಣಾರ್ಥಕವಾದ 'ಏವ ' ಶಬ್ದವು ಇಲ್ಲ. ಆದರೆ ರಾಯರು. 'ಏವ ' ಎಂಬ ಶಬ್ದಕ್ಕೆ ಎರಡು ರೀತಿಯಾಗಿ ಅನ್ವಯವನ್ನು ತೋರಿಸಿದ್ದಾರೆ. ಆದ್ದರಿಂದ ಮೂಲದಲ್ಲಿರುವ 'ಚ' ಶಬ್ದಕ್ಕೆ 'ಏವ' ಎಂದು ಅರ್ಥಮಾಡಿ. ಆ 'ಏವ ಶಬ್ದಾರ್ಥ ಅವಧಾರಣವನ್ನು ' ಎರಡು ರೀತಿ ಅನ್ವಯಿಸಬೇಕು . ಇದು ರಾಯರಿಗೆ ಸಮ್ಮತ ಎನಿಸುತ್ತದೆ.

**'ಪ್ರಹ್ರಿಯಂತೇ ಏಭಿರಿತಿ ಪ್ರಹರಣಾನಿ ಅಸ್ತ್ರಾಣಿ'** ಯಾವವುಗಳಿಂದ ಶತ್ರುಗಳು ಚೆನ್ನಾಗಿ ನಾಶ ಮಾಡಲ್ಪಡುತ್ತಾರೆಯೋ ಅವುಗಳು ಪ್ರಹರಣಗಳು ಎಂದರೆ ಅಸ್ತ್ರಗಳು. **'ನಾನಾ ವಿಧಾನಿ ಶಸ್ತ್ರಾಣಿ ಪ್ರಹರಣಾನಿ ಚ ಯೇಷಾಂ ತೇ ನಾನಾಶಸ್ತ್ರಪ್ರಹರಣಾಃ'** ನಾನಾ ವಿಧವಾದ ಶಸ್ತ್ರಗಳು ಮತ್ತು ಅಸ್ತ್ರಗಳು ಯಾರಿಗೆ ಇವೆಯೋ (ಸ್ವಾಧೀನವಾಗಿ ಇವೆಯೋ) ಅವರು ನಾನಾಶಸ್ತ್ರ ಪ್ರಹರಣರು. ಬಾಣದಲ್ಲಿ ದೇವತೆಗಳನ್ನು ಅಭಿಮಂತ್ರಿಸಿ, ಆಹ್ವಾನಿಸಿ, ಆ ದೇವತೆಯನ್ನು ಪ್ರಾರ್ಥಿಸಿ ಬಿಡುವ ಬಾಣಗಳಿಗೆ **'ಅಸ್ತ್ರಗಳು'** ಎನ್ನುತ್ತಾರೆ. ಅಭಿಮಂತ್ರಿಸದೇ ಪ್ರಯೋಗಿಸುವ ಬಾಣಗಳಿಗೆ **'ಶಸ್ತ್ರ'** ಎನ್ನುತ್ತಾರೆ.

## ಭೀಷ್ಮರ ರಕ್ಷೆ ಸಾಲದು - ಬಲಭೀಮನ ರಕ್ಷೆಗೆ ಇಲ್ಲ ಅಪಜಯ

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥ 10 ॥**

**ಅರ್ಥ-** (ದುರ್ಯೋಧನನ ಅನಿಸಿಕೆ) ಭೀಷ್ಮರಿಂದ ರಕ್ಷಿಸಲ್ಪಟ್ಟ, ಹಿಂದೆ ಹೇಳಿದ ಬಲಿಷ್ಠ ನಾಯಕರಿಂದ ಕೂಡಿದ ನಮ್ಮ ಸೇನೆಯು ಪಾಂಡವರನ್ನು ಗೆಲ್ಲಲು ಸಮರ್ಥವಾಗಲಾರದೆಂದು ನನಗೆ ಅನಿಸುತ್ತದೆ. ಆದರೆ ಭೀಮನಿಂದ ರಕ್ಷಿಸಲ್ಪಟ್ಟ ಪಾಂಡವರ ಈ ಸೇನೆಯು ಮಾತ್ರ ನಮ್ಮನ್ನು ಗೆಲ್ಲಲು ಸಮರ್ಥವಾದೀತೆಂದು ನನಗೆ ಅನಿಸುತ್ತಿದೆ. ॥ 10 ॥

ಬಲದ್ವಯೇ ಬಲಿಷ್ಠಪರಿಗಣನೇ ಪಾಂಡವವಿಜಯೇ ಮಮ ಸಂದೇಹೋಽಸ್ತಿ । **ತತೋ ಭವದಾದಯಃ ಸರ್ವೇ ಬಹುಸನ್ನದ್ಧಾ ಭವಂತ್ವಿತಿ ಭಾವೇನಾಹ- ಅಪರ್ಯಾಪ್ತಮಿತಿ ॥ ಸೇನಾಪತಿಭೂತಭೀಷ್ಮಾಭಿರಕ್ಷಿತಮ್ ಅಸ್ಮಾಕಂ ತತ್ = ಪ್ರಾಗುಕ್ತಬಲಿಷ್ಠೋಪೇತಂ ಬಲಮ್ ಅಪರ್ಯಾಪ್ತಂ = ಪಾಂಡವಜಯೇ ನ**

**ಸಮರ್ಥಂ ಪ್ರತೀಯತೇ । ಭೀಮಾಭಿರಕ್ಷಿತಮಿದಂ = ಪಾಂಡವಾನಾಂ ಬಲಂ ತು ಪರ್ಯಾಪ್ತಮ್ = ಅಸ್ಮದ್ವಿಜಯೇ ಶಕ್ತಂ ಪ್ರತೀಯತೇ ॥ 10 ॥**

**ಅನುವಾದ –** ಎರಡೂ ಸೈನ್ಯಗಳಲ್ಲಿರುವ ವೀರರನ್ನು ಗಮನಿಸಿದಾಗ ಪಾಂಡವರನ್ನು ನಾವು ಗೆಲ್ಲುವುದರಲ್ಲಿ ನನಗೇನೋ ಸಂದೇಹವೇ ಇದೆ. ಆದ್ದರಿಂದ ನೀವೆಲ್ಲರು ಬಹಳ ಸನ್ನದ್ಧರಾಗಿ ಇರಬೇಕಾಗುತ್ತದೆ ಎಂಬ ಅಭಿಪ್ರಾಯದಿಂದ ದುರ್ಯೋಧನನು ಮುಂದಿನ '**ಅಪರ್ಯಾಪ್ತಂ**' ಎಂಬ ಶ್ಲೋಕವನ್ನು ಹೇಳುತ್ತಾನೆ.

ಸೇನಾಪತಿಗಳಾದ ಭೀಷ್ಮರಿಂದ ರಕ್ಷಿತವಾದ, ಹಿಂದೆ ಹೇಳಿದ ಬಲಿಷ್ಠರಿಂದ ಕೂಡಿದ ನಮ್ಮ ಆ ಸೈನ್ಯವು. **ಅಪರ್ಯಾಪ್ತಂ** = ಪಾಂಡವರನ್ನು ಗೆಲ್ಲಲು ಸಮರ್ಥವಾಗಲಾರದು ಎಂದು ನನಗೆ ಅನಿಸುತ್ತಿದೆ. ಭೀಮಸೇನನಿಂದ ರಕ್ಷಿತವಾದ ಈ ಪಾಂಡವರ ಸೇನೆಯಾದರೂ **ಪರ್ಯಾಪ್ತಂ**= ನಮ್ಮನ್ನು ಗೆಲ್ಲಲು ಸಮರ್ಥವಾಗಿದೆ ಎಂದು ನನಗೆ ಅನಿಸುತ್ತದೆ.

## ಭೀಷ್ಮನ ಶಂಖನಾದ

**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।**
**ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ॥ 11 ॥**

**ಅರ್ಥ–** ಆದ್ದರಿಂದ ಭೀಷ್ಮರು ಶತ್ರುಗಳೊಡನೆ ಯುದ್ಧ ಮಾಡುತ್ತಿರುವಾಗ ಯಾರಾದರೂ ಶತ್ರುಗಳು ಬಂದು ಹಿಂದಿನಿಂದ ಅವರನ್ನು ಹೊಡೆಯದಂತೆ ನೀವೆಲ್ಲರೂ ವ್ಯೂಹ ಪ್ರವೇಶ ದ್ವಾರಗಳಲ್ಲಿ (ಮಾರ್ಗಗಳಲ್ಲಿ) ನಿಮ್ಮ ನಿಮ್ಮ ಸ್ಥಳಗಳಲ್ಲಿ ದೃಢವಾಗಿ ನಿಂತು ಭೀಷ್ಮರನ್ನು ರಕ್ಷಿಸಿರಿ. ॥ 11 ॥

**ಹಿ** = **ಯಸ್ಮಾದೇವಮತೋ ಭವಂತಃ ಸರ್ವ ಏವ ಸರ್ವೇಷ್ವಯನೇಷು** = **ವ್ಯೂಹಪ್ರವೇಶಮಾರ್ಗೇಷು ಯಥಾಭಾಗಮವಸ್ಥಿತಾಃ** = **ಸ್ವಸ್ವರಣಭೂಮಿ-ಸ್ಥಾನೇಷು ದೃಢಮವಸ್ಥಿತಾಃ ಸಂತಃ ಭೀಷ್ಮಮೇವಾಭಿರಕ್ಷಂತು । ಅನ್ಯೈರ್ಯುಧ್ಯ-ಮಾನೋ ಭೀಷ್ಮಃ ಪೃಷ್ಠತೋಽರಿಭಿರ್ಯಥಾ ನ ಹನ್ಯತೇ ತಥಾ ರಕ್ಷಂತ್ವಿತಿ ದ್ರೋಣಾಚಾರ್ಯಮುಕ್ತ್ವಾ ವಿಷಸಾದ ॥ 11 ॥**

**ಅನುವಾದ –** **ಹಿ** = ಹಿಂದೆ ಹೇಳಿದ ಕಾರಣದಿಂದ ನೀವೆಲ್ಲರೂ, **ಸರ್ವೇಷು ಅಯನೇಷು** = ಎಲ್ಲ ವ್ಯೂಹ ಪ್ರವೇಶ ಮಾರ್ಗಗಳಲ್ಲಿ (ದ್ವಾರಗಳಲ್ಲಿ) **ಯಥಾಭಾಗ-ಮವಸ್ಥಿತಾಃ** = ನಿಮ್ಮ ನಿಮ್ಮ ಯುದ್ಧರಂಗದ ಸ್ಥಳಗಳಲ್ಲಿ ದೃಢವಾಗಿ ನಿಂತಿರುವವರಾಗಿ ಭೀಷ್ಮಾಚಾರ್ಯರನ್ನೇ ರಕ್ಷಿಸಿರಿ. ಸೇನಾಪತಿಗಳಾದ ಭೀಷ್ಮರು ಶತ್ರುಗಳ ಜೊತೆಯಲ್ಲಿ

ಕಾದಾಡುತ್ತಿರುವಾಗ ಹಿಂದಿನಿಂದ ಯಾರಾದರೂ ಶತ್ರುಗಳು ಬಂದು ಅವರನ್ನು ಹಿಂಸಿಸದಂತೆ ಜಾಗರೂಕರಾಗಿ ಅವರನ್ನು ರಕ್ಷಿಸಿರಿ ಎಂದು ಆಚಾರ್ಯ ದ್ರೋಣರನ್ನು ಕುರಿತು ಹೇಳಿ ದುರ್ಯೋಧನನು ಸುಮ್ಮನಾದನು. (ವಿರಮಿಸಿದನು) ॥ 11 ॥

**ತಸ್ಯ ಸಂಜನಯನ್‌ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥ 12 ॥**

**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥ 13 ॥**

## ಶ್ರೀಕೃಷ್ಣಾರ್ಜುನರ ಶಂಖನಾದ ಮೊಳಗಿತು

**ತತಃ ಶ್ವೇತಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥ 14 ॥**

**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥ 15 ॥**

**ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।**
**ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥ 16 ॥**

**ಅರ್ಥ** – ಈ ರೀತಿ ನಿರಾಶೆಗೊಂಡ ದುರ್ಯೋಧನನಿಗೆ ಉತ್ಸಾಹವನ್ನು ಉಂಟು-ಮಾಡಲು ಪರಾಕ್ರಮಶಾಲಿಗಳೂ, ಕುರುಕುಲಕ್ಕೆ ಹಿರಿಯರೂ ಆದ ಪಿತಾಮಹರಾದ ಭೀಷ್ಮಾಚಾರ್ಯರು ಗಟ್ಟಿಯಾಗಿ ಸಿಂಹನಾದವನ್ನು ಮಾಡಿ ಶಂಖವನ್ನು ಮೊಳಗಿಸಿದರು (ಊದಿದರು) ॥ 12 ॥

ಭೀಷ್ಮರ ಶಂಖನಾದವಾದ ನಂತರ, ಶಂಖಗಳು, ನಗಾರಿಗಳು,ಡೋಲು ತಮಟೆ, ಕಹಳೆ, ಇವುಗಳೆಲ್ಲವೂ ಏಕಕಾಲದಲ್ಲಿ ಮೊಳಗಿಸಲ್ಪಟ್ಟವು. ಬಾರಿಸಲ್ಪಟ್ಟವು. ಆ ಶಬ್ದವು ಎಲ್ಲಡೆ ಆವರಿಸಿತು. ॥ 13 ॥

ಬಿಳಿಯ ಕುದುರೆಗಳಿಂದ ಕಟ್ಟಲ್ಪಟ್ಟ ದೊಡ್ಡ ರಥದಲ್ಲಿ ಕುಳಿತಿರುವ ಕೃಷ್ಣಾರ್ಜುನರು ದಿವ್ಯ ಶಂಖಗಳನ್ನು (ಮೊಳಗಿಸಿದರು) ಊದಿದರು. ॥ 14 ॥

ಶ್ರೀಕೃಷ್ಣನು ಪಾಂಚಜನ್ಯ ಎಂಬ ಮಹಾಶಂಖವನ್ನೂ, ಅರ್ಜುನನು ದೇವದತ್ತ

ಎಂಬ ಮಹಾಶಂಖವನ್ನೂ, ಶತ್ರುಗಳಿಗೆ ಭಯ ಉಂಟಾಗುವಂತೆ ಯುದ್ಧ ಮಾಡುವ ಸ್ವಭಾವವುಳ್ಳ ಭೀಮನು ಪೌಂಡ್ರ ಎಂಬ ಮಹಾಶಂಖವನ್ನೂ ಊದಿದರು. ॥ 15 ॥

ಕುಂತಿಯ ಮಗನೂ ರಾಜನೂ ಆದ ಧರ್ಮರಾಜನು ಅನಂತವಿಜಯ ಎಂಬ ಹೆಸರುಳ್ಳ ಶಂಖವನ್ನೂ, ನಕುಲ ಸಹದೇವರು ಸುಘೋಷ ಮತ್ತು ಮಣಿಪುಷ್ಪಕ ಎಂಬ ಹೆಸರುಳ್ಳ ಮಹಾಶಂಖಗಳನ್ನೂ ಊದಿದರು. ॥ 16 ॥

**ಏವಂ ವಿಷಾದಿನಸ್ತಸ್ಯ ದುರ್ಯೋಧನಸ್ಯ ಹರ್ಷಂ ಸಂಜನಯನ್** = **ಜನಯಿತುಮ್ । 'ಲಕ್ಷಣಹೇತ್ವೋಃ ಕ್ರಿಯಾಯಾ' ಇತಿ ಹೇತೌ ಶತ್ರಂತಮ್ । ಪ್ರತಾಪವಾನ್ ಕುರುವೃದ್ಧಃ ಪಿತಾಮಹೋ** = **ಭೀಷ್ಮಃ ಸಿಂಹನಾದಂ ಉಚ್ಚೈರ್ವಿನದ್ಯ ಶಂಖಂ ದಧ್ಮೌ । 'ಧ್ಮಾ ಶಬ್ದೇ' ॥ 12 ॥**

**ಅನುವಾದ** - ಈ ರೀತಿಯಾಗಿ ವಿಷಾದವನ್ನು ಹೊಂದಿದ ದುರ್ಯೋಧನನಿಗೆ ಸಂತೋಷವನ್ನು , **ಸಂಜನಯನ್** = ಉಂಟುಮಾಡಲು, **'ಲಕ್ಷಣ ಹೇತ್ವೋಃ ಕ್ರಿಯಾಯಾಃ'** ಎಂಬ ಪಾಣಿನಿಸೂತ್ರದ ಪ್ರಕಾರ ಹೇತ್ವರ್ಥದಲ್ಲಿ ಶತೃಪ್ರತ್ಯಯ ಬಂದು ಸಂಜನಯನ್ ಎಂದು ರೂಪವಾಗಿದೆ. ಸಂತೋಷವನ್ನು ಉಂಟು ಮಾಡುವುದಕ್ಕೋಸ್ಕರವಾಗಿ ಎಂದು ಅರ್ಥ. ಪ್ರತಾಪಶಾಲಿಯಾದ ಕುರುಕುಲ ಪಿತಾಮಹನಾದ ಆಚಾರ್ಯ ಭೀಷ್ಮರು ಸಿಂಹನಾದವನ್ನು ಗಟ್ಟಿಯಾಗಿ ಮಾಡಿ ತಮ್ಮ ಶಂಖವನ್ನು ಊದಿದರು . **'ದಧ್ಮೌ'** ಎಂಬ ರೂಪವು **'ಧ್ಮಾ ಶಬ್ದೇ'** ಎಂಬ ಧಾತುವಿನಿಂದ ಉಂಟಾಗಿದೆ. ಶಬ್ದ ಮಾಡಿದನು ಎಂದರೆ ಊದಿದನು ಎಂದು ಅರ್ಥ ॥ 12 ॥

**ತತಃ**= ತಚ್ಛಂಖಧ್ಮಾನಾನಂತರಂ **ಪಣವಾನಕಗೋಮುಖಾಃ**= ವಾದ್ಯವಿಶೇಷಾಃ **ಸಹಸೈವ**= ಯುಗಪದೇವ । **ತುಮುಲಃ**= ಸರ್ವತ್ರ ಪರಿಪೂರ್ಣೋಽಭವತ್ **॥ 13 ॥**

**ಅನುವಾದ** - **ತತಃ** = ಭೀಷ್ಮಾಚಾರ್ಯರ ಶಂಖನಾದಾನಂತರದಲ್ಲಿ , **ಪಣವಾನಕ-ಗೋಮುಖಾಃ** = ಡೋಲು ತಮಟೆ ಕಹಳೆ ಮುಂತಾದ ಎಲ್ಲ ಯುದ್ಧವಾದ್ಯಗಳು, **ಸಹಸೈವ** = ಒಟ್ಟಿಗೆನೇ, ಮೊಳಗಿಸಲ್ಪಟ್ಟವು, **ತುಮುಲಃ** = ಎಲ್ಲ ಕಡೆಯಲ್ಲಿಯೂ ಪರಿಪೂರ್ಣ ವಾಯಿತು ( ಆ ಶಬ್ದವು ವ್ಯಾಪಿಸಿತು) ॥ 13 ॥

**ತತಃ**= **ತೇಷಾಂ ಘೋಷಾನಂತರಂ ಶ್ವೇತಹಯೈಃ ಶುಕ್ಲವರ್ಣಾಶ್ವೈಃ ಯುಕ್ತೇ ಸ್ಯಂದನೇ** = **ರಥೇ ಪಾಂಡವಸ್ತ್ವರ್ಜುನಃ । ಸ್ಥಿತಾವೇವ ಇತ್ಯನ್ವಯಃ ॥ 14 ॥**

**ಅನುವಾದ - ತತಃ** = ಆ ವಾದ್ಯಗಳ ಶಬ್ದದ ಅನಂತರದಲ್ಲಿ, **ಶ್ವೇತಹಯೈಃ** = ಬಿಳಿಬಣ್ಣದ ಕುದುರೆಗಳಿಂದ, ಕೂಡಿದ, **ಸ್ಯಂದನೇ** = ರಥದಲ್ಲಿ, **ಪಾಂಡವಃ** = ಅರ್ಜುನನು, ಕೃಷ್ಣ ಮತ್ತು ಅರ್ಜುನರಿಬ್ಬರೂ ರಥದಲ್ಲಿ ಕುಳಿತುಕೊಂಡೇ ಶಂಖಗಳನ್ನು ಊದಿದರು ॥ 14 ॥

**ವಿವರಣೆ -** ಪಾಂಡವಶ್ಚೈವ ಎಂಬಲ್ಲಿರುವ 'ಏವ' ಕಾರವನ್ನು ಸ್ಥಿತಾವೇವ ಎಂಬುದಾಗಿ ಸ್ಥಿತೌ ಶಬ್ದದ ಜೊತೆಯಲ್ಲಿ ಅನ್ವಯಿಸಬೇಕು. ಅಂದರೆ ಕೃಷ್ಣಾರ್ಜುನರಿಬ್ಬರೂ, ರಥದಲ್ಲಿ ಕುಳಿತುಕೊಂಡೇ ಶಂಖವನ್ನು ಊದಿದರು ಎಂದು ಅರ್ಥವಾಗುತ್ತದೆ.

**ತದ್ವಿವೃಣೋತಿ । ಪಾಂಚಜನ್ಯಮಿತಿ । ಹೃಷೀಕೇಶಶಬ್ದಾರ್ಥ ಉಕ್ತೋ ಗೀತಾಭಾಷ್ಯೇ ಏಕಾದಶೇ – 'ಹೃಷೀಕಾಣಾಮ್ ಇಂದ್ರಿಯಾಣಾಮ್ ಈಶತ್ವಾಚ್ಚ ಹೃಷೀಕೇಶಃ' ಇತ್ಯಾದಿ ।**

**ಅನುವಾದ -** ಆ ಶಂಖದ ಊದುವಿಕೆಯನ್ನೇ '**ಪಾಂಚಜನ್ಯಂ**' ಎಂಬ ಶ್ಲೋಕದಿಂದ ವಿವರಿಸುತ್ತಾರೆ. ಗೀತೆಯ ಏಕಾದಶ ಅಧ್ಯಾಯದ ಭಾಷ್ಯದಲ್ಲಿ ಹೃಷೀಕೇಶ ಶಬ್ದದ ಅರ್ಥವನ್ನು ಆಚಾರ್ಯರು ಹೀಗೆ ವಿವರಿಸಿದ್ದಾರೆ- **ಹೃಷೀಕಾಣಾಂ** = ಇಂದ್ರಿಯಗಳಿಗೆ **ಈಶತ್ವಾಚ್ಚ** = ಒಡೆಯನಾದುದರಿಂದಲೂ (ಪ್ರೇರಕನಾದುದರಿಂದಲೂ) ಕೃಷ್ಣನು ಹೃಷೀಕೇಶನಾಗಿದ್ದಾನೆ. ಇತ್ಯಾದಿಯಾಗಿ.

**ದಧ್ಮಾವಿತ್ಯನ್ವಯಃ ॥ 15 ॥**

**ಅನುವಾದ - ದಧ್ಮೌ** ಎಂಬ ಕ್ರಿಯಾಪದವನ್ನು ಮೂರು ಕಡೆಯಲ್ಲಿಯೂ ಅನ್ವಯಿಸಬೇಕು . ಶ್ರೀಕೃಷ್ಣನು ಪಾಂಚಜನ್ಯ ಎಂಬ ಹೆಸರುಳ್ಳ ಶಂಖವನ್ನು ಊದಿದನು . ಅರ್ಜುನನು ದೇವದತ್ತ ಎಂಬ ಹೆಸರುಳ್ಳ ಶಂಖವನ್ನು ಊದಿದನು . ಶತ್ರುಭಯಕಾರ್ಯಗಳಲ್ಲಿ ಸಮರ್ಥನಾದ ಭೀಮಸೇನನು ಪೌಂಡ್ರ ಎಂಬ ಹೆಸರುಳ್ಳ ಶಂಖವನ್ನು ಊದಿದನು . ॥ 15 ॥

**ಅನಂತ ವಿಜಯಂ =ಅನಂತವಿಜಯಾಖ್ಯಮ್ । ನಕುಲಃ ಸುಘೋಷಾಖ್ಯಂ ಶಂಖಂ ಸಹದೇವೋ ಮಣಿಪುಷ್ಪಕಾಖ್ಯಂ ದಧ್ಮುರಿತಿ ಅನ್ವಯಃ ॥ 16 ॥**

**ಅನುವಾದ –** ಯುಧಿಷ್ಠಿರನು **ಅನಂತ ವಿಜಯಂ** = ಅನಂತವಿಜಯ ಎಂಬ ಹೆಸರುಳ್ಳ ಶಂಖವನ್ನು , ನಕುಲನು ಸುಘೋಷ ಎಂಬ ಹೆಸರುಳ್ಳ ಶಂಖವನ್ನು , ಸಹದೇವನು ಮಣಿಪುಷ್ಪಕ ಎಂಬ ಹೆಸರುಳ್ಳ ಶಂಖವನ್ನು , **ದಧ್ಮುಃ** ಊದಿದರು ಎಂಬ ಕ್ರಿಯಾಪದವನ್ನು ಅನ್ವಯಿಸಬೇಕು.

**ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥ 17 ॥**

**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।**
**ಸೌಭದ್ರಶ್ಚ ಮಹಾಬಾಹುಃ ಶಂಖಂ ದಧ್ಮುಃ ಪೃಥಕ್ ಪೃಥಕ್ ॥ 18 ॥**

**ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।**
**ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥ 19 ॥**

**ಅರ್ಥ–** ರಾಜನಾದ ಧೃತರಾಷ್ಟ್ರನೇ ! ಮಹಾಧನುರ್ಧಾರಿಯಾದ ಕಾಶಿರಾಜನೂ, ಮಹಾರಥನಾದ ಶಿಖಂಡಿಯೂ, ಧೃಷ್ಟದ್ಯುಮ್ನನೂ, ವಿರಾಟರಾಜನೂ, ಎಂದೂ ಸೋಲನ್ನು ಕಾಣದ ಸಾತ್ಯಕಿಯೂ, ದ್ರುಪದರಾಜನೂ, ದ್ರೌಪದಿಯ ಮಕ್ಕಳೂ, ಮಹಾಬಾಹುಶಾಲಿಯಾದ ಸುಭದ್ರೆಯ ಮಗನಾದ ಅಭಿಮನ್ಯುವೂ, ಪ್ರತ್ಯೇಕ ಪ್ರತ್ಯೇಕವಾಗಿ ತಮ್ಮ ತಮ್ಮ ಶಂಖಗಳನ್ನು ಊದಿದರು. ॥ 17–18 ॥

ಆ ಶಂಖಗಳ ಶಬ್ದವು ಎಲ್ಲೆಡೆ ಭೂಮಿ ಮತ್ತು ಅಂತರಿಕ್ಷಗಳಲ್ಲಿ ಹರಡಿ ಅಲ್ಲಿ ಪ್ರತಿಧ್ವನಿಸಿ ನಿನ್ನ ಮಕ್ಕಳ ಹೃದಯವನ್ನು ಭೇದಿಸಿತು. ॥ 19 ॥

**ಪರಮೇಷ್ವಾಸೋ = ಮಹಾಧಾನುಷ್ಕಃ ಕಾಶ್ಯಃ । ಮಹಾರಥಃ ಶಿಖಂಡೀ ಚ, ಅಪರಾಜಿತಃ ಸಾತ್ಯಕಿಶ್ಚ ॥ 17 ॥**

**ಅನುವಾದ– ಪರಮೇಷ್ವಾಸಃ**= ಮಹಾಧನುರ್ಧಾರಿಯಾದ ಕಾಶಿರಾಜನೂ, ಮಹಾರಥನಾದ ಶಿಖಂಡಿಯೂ, ಯಾರಿಗೂ ಸೋಲದ ಸಾತ್ಯಕಿಯೂ ಕೂಡ ॥ 17 ॥

**ಪೃಥಿವೀಪತೇ ಹೇ ಧೃತರಾಷ್ಟ್ರ ಮಹಾಬಾಹುಃ ಸೌಭದ್ರಃ = ಅಭಿಮನ್ಯುಶ್ಚ । ಶಂಖಮಿತಿ ಸಮುದಾಯಾಭಿಪ್ರಾಯಃ । ಸ್ವಸ್ವಶಂಖಾನ್ ದಧ್ಮುರಿತಿ ॥ 18 ॥**

**ಅನುವಾದ – ಪೃಥಿವೀಪತೇ** = ರಾಜನಾದ ಧೃತರಾಷ್ಟ್ರನೇ ! ಮಹಾಪರಾಕ್ರಮ–ಶಾಲಿಯಾದ, **ಸೌಭದ್ರಃ** = ಸುಭದ್ರೆಯ ಮಗನಾದ ಅಭಿಮನ್ಯುವೂ, (ಇವರೆಲ್ಲರೂ) ತಮ್ಮ ತಮ್ಮ ಶಂಖಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಊದಿದರು. **'ಶಂಖಂ'** ಎಂಬುದಾಗಿ ಸಮುದಾಯಾಭಿಪ್ರಾಯದಲ್ಲಿ ಏಕವಚನ ಪ್ರಯೋಗ ॥ 18 ॥

**ಸ ಘೋಷಸ್ತುಮುಲೋ = ವ್ಯಾಪ್ತೋ ಭೂತ್ವಾ ನಭಶ್ಚ ಪೃಥಿವೀಂ ಚ ವ್ಯನುನಾದಯನ್ = ತತ್ರ ತತ್ರ ಪ್ರತಿಧ್ವನಿಂ ಜನಯನ್ನೇವ ಧಾರ್ತರಾಷ್ಟ್ರಾಣಾಂ[1] ಹೃದಯಾನಿ ವ್ಯದಾರಯತ್ । ಅದ್ಯೈವ ನಷ್ಟಂ ಕುರುಕುಲಮಿತಿ ತ್ವತ್ಪುತ್ರಾ ಮೇನಿರ ಇತ್ಯರ್ಥಃ ॥ 19 ॥**

ಅನುವಾದ - ಆ ಶಂಖಗಳ ಶಬ್ದವು ತುಮುಲಃ = ಎಲ್ಲೆಡೆ ಹರಡಿ (ವ್ಯಾಪಿಸಿ) ನಭಶ್ಚ ಪೃಥಿವೀಂ ಚ ವ್ಯನುನಾದಯನ್ = ಅಲ್ಲಲ್ಲಿ ಪ್ರತಿಧ್ವನಿಯನ್ನುಂಟು ಮಾಡುತ್ತಲೇ, ನಿನ್ನ ಮಕ್ಕಳ ಹೃದಯಗಳನ್ನು ಭೇದಿಸಿತು. 'ಇಂದೇ ಕುರುಕುಲವು ನಾಶವಾಯಿತು'. ಎಂಬುದಾಗಿ ನಿನ್ನ ಮಕ್ಕಳು ತಿಳಿದರು ಎಂದು ಅಭಿಪ್ರಾಯ ॥ 19 ॥

**ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।**
**ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥ 20 ॥**

**ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।**

ಅರ್ಥ – ಅರ್ಜುನನ ಪ್ರವೃತ್ತಿ (ವ್ಯಾಪಾರ) – ಧೃತರಾಷ್ಟ್ರನೇ ! ಅನಂತರದಲ್ಲಿ ಯುದ್ಧಕ್ಕೆ ಸಿದ್ಧರಾಗಿ ನಿಂತಿರುವ ನಿನ್ನ ಮಕ್ಕಳನ್ನು ನೋಡಿ ಕಪಿಧ್ವಜನಾದ ಅರ್ಜುನನು, ಇನ್ನೇನು ಶಸ್ತ್ರ ಪ್ರಯೋಗವಾಯಿತು ಎನ್ನುವಷ್ಟರಲ್ಲಿ ತನ್ನ ಬಿಲ್ಲನ್ನು ಎತ್ತಿ ಕೃಷ್ಣನೊಡನೆ ಹೀಗೆ ಮಾತನಾಡಿದನು. ॥ 20 ॥

**ತತ್ತ್ವೋಪದೇಶಪ್ರಸಂಜಕಂ ಅರ್ಜುನವಿಷಾದಂ ವಕ್ತುಮ್ ಏತಾವಾನ್ ಉಪೋದ್ಘಾತಃ ಪ್ರವೃತ್ತಃ । ಏವಂ ದುರ್ಯೋಧನವ್ಯಾಪಾರಂ ದಲದ್ವಯಗತ-ವ್ಯಾಪಾರಂ ಚ ಉಕ್ತ್ವಾ ಅಧುನಾ ಅರ್ಜುನವ್ಯಾಪಾರಮಾಹ ಅಥೇತ್ಯಾದಿ ಚತುರ್ಭಿಃ ಶ್ಲೋಕೈಃ ।**

ಅನುವಾದ - ಅರ್ಜುನನನ್ನು ಕುರಿತು ಶ್ರೀಕೃಷ್ಣನ ಉಪದೇಶಕ್ಕೆ ಪ್ರಸಂಜಕವಾದ (ಕಾರಣ ವಾದ) ಅರ್ಜುನನ ವಿಷಾದವನ್ನು ಹೇಳಲು ಈವರೆಗೆ ಉಪೋದ್ಘಾತವನ್ನು ಹೇಳಲಾಯಿತು. (ಇಷ್ಟು ಉಪೋದ್ಘಾತವು ಪ್ರಸಕ್ತವಾಯಿತು) ಈ ರೀತಿಯಾಗಿ ದುರ್ಯೋಧನನ ವ್ಯಾಪಾರವನ್ನೂ ಮತ್ತು ಎರಡೂ ಸೇನೆಯಲ್ಲಿರುವ ಪ್ರಮುಖರ ವ್ಯಾಪಾರಗಳನ್ನೂ ಹೇಳಿ ಈಗ ಅರ್ಜುನನ ವ್ಯಾಪಾರವನ್ನು ಅಥ ಎಂಬಲ್ಲಿಂದ ಆರಂಭಿಸಿ ನಾಲ್ಕು ಶ್ಲೋಕಗಳಿಂದ ಹೇಳುತ್ತಾರೆ.

---

1. 'ಧಾರ್ತರಾಷ್ಟ್ರಾನ್' ಕ.ಖ.ಘ.

**ಅಥ = ಅನಂತರಂ ಕಪಿಧ್ವಜಃ = ಅರ್ಜುನಃ ವ್ಯವಸ್ಥಿತಾನ್ = ಯುದ್ಧೇ ಕೃತ-ನಿಶ್ಚಯಾನ್[1] ದೃಷ್ಟ್ವಾ ಶಸ್ತ್ರಸಂಪಾತೇ = ಶಸ್ತ್ರಪ್ರಹರಣೇ ಪ್ರವೃತ್ತೇ । 'ವರ್ತಮಾನ ಸಾಮೀಪ್ಯೇ ವರ್ತಮಾನವದ್ವಾ' । ಪ್ರವರ್ತಿತುಮುದ್ಯುಕ್ತೇ ಸತಿ ತದಾ = ಶಸ್ತ್ರ-ಸಂಪಾತಪ್ರಾಕ್ಕಾಲೇ ಇದಂ ವಕ್ಷ್ಯಮಾಣಂ ವಾಕ್ಯಮ್ ಆಹೇತ್ಯನ್ವಯಃ ॥ 20 ॥**

**ಅನುವಾದ - ಅಥ** = ಅನಂತರದಲ್ಲಿ, **ಕಪಿಧ್ವಜಃ** = (ತನ್ನ ರಥದ ಧ್ವಜದಲ್ಲಿ ಹನುಮಂತನುಳ್ಳ) ಅರ್ಜುನನು. **ವ್ಯವಸ್ಥಿತಾನ್** = ಯುದ್ಧಮಾಡಲು ನಿಶ್ಚಯಿಸಿರುವ ನಿನ್ನವರನ್ನು, **ದೃಷ್ಟ್ವಾ** = ನೋಡಿ, **ಶಸ್ತ್ರಸಂಪಾತೇ** = ಶಸ್ತ್ರಪ್ರಹಾರವು ಪ್ರಾರಂಭವಾಗುತ್ತಿರಲು. **'ವರ್ತಮಾನಸಾಮೀಪ್ಯೇ ವರ್ತಮಾನವದ್ವಾ'** ಎಂಬ ವ್ಯಾಕರಣನಿಯಮದಂತೆ ವರ್ತಮಾನ ಸಾಮೀಪ್ಯವಿರುವಲ್ಲಿ ವರ್ತಮಾನ ಪ್ರಯೋಗ ಮಾಡುವ ಪದ್ಧತಿ ಇರುವುದರಿಂದ ಎದುರಾಳಿಗಳ ಶಸ್ತ್ರಪ್ರಹರಣವು ಇನ್ನೂ ಆಗಿಲ್ಲ, ಇನ್ನೇನು ಮುಂದಿನ ಕ್ಷಣದಲ್ಲಿ ಆಗುತ್ತದೆ. ಎಲ್ಲ ಎದುರಾಳಿಗಳೂ ಶಸ್ತ್ರಪ್ರಹರಣ ಮಾಡಲು ಸಜ್ಜಾಗಿದ್ದಾರೆ. ಆ ಕ್ಷಣದಲ್ಲಿ ಅಂದರೆ ಶಸ್ತ್ರಪ್ರಹಾರಕ್ಕಿಂತ ಮುಂಚಿನ ಕ್ಷಣದಲ್ಲಿ, **ಇದಂ**= ಮುಂದೆ ಹೇಳುವ ವಾಕ್ಯವನ್ನು ಅರ್ಜುನನು ಹೇಳಿದನು ಎಂದು ಅನ್ವಯಿಸಬೇಕು. ॥ 20 ॥

**ನಿಲ್ಲಿಸೆರಡು ಸೇನೆಗಳ ನಡುವೆನ್ನ ರಥ**

**ಅರ್ಜುನ ಉವಾಚ ।**

**ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥ 21 ॥**

**ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ।**
**ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥ 22 ॥**

**ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥ 23 ॥**

**ಅರ್ಥ** – ಅರ್ಜುನನು ಹೇಳಿದನು. ಅಚ್ಯುತನೇ ! ಈ ಯುದ್ಧಕಾರ್ಯದಲ್ಲಿ ನಾನು ಯಾರ ಯಾರ ಜೊತೆಯಲ್ಲಿ ಹೋರಾಡಬೇಕಾಗಿದೆ ? ದುರ್ಬುದ್ಧಿಯುಳ್ಳ ದುರ್ಯೋಧನನಿಗೆ ಸಹಾಯ ಮಾಡಲೆಂದು ಈ ಯುದ್ಧಭೂಮಿಯಲ್ಲಿ ಬಂದು ಸೇರಿ ಯುದ್ಧಮಾಡಲು ಸಜ್ಜಾಗಿ ನಿಂತಿರುವ, ಯುದ್ಧ ಮಾಡಲಿರುವ ಪರಾಕ್ರಮಶಾಲಿಗಳನ್ನು ನಾನು

1. 'ತ್ವತ್ಪುತ್ರಾಣಾಂ' ಶ.ಘ.

ನೋಡುತ್ತೇನೆ. ಅವರನ್ನು ನೋಡುವ ತನಕ ನನ್ನ ರಥವನ್ನು ಎರಡೂ ಸೈನ್ಯಗಳ ಮಧ್ಯದಲ್ಲಿ ನಿಲ್ಲಿಸು. ॥ 21–23 ॥

**ಸಾರ್ಧಶ್ಲೋಕದ್ವಯೇನ ತದ್ವಾಕ್ಯಮಾಹ ಸೇನಯೋರಿತಿ । ಅಸ್ಮಿನ್ ರಣೋದ್ಯೋಗೇ ಕೈಃ ಸಹ ಮಯಾ ಯೋದ್ಧವ್ಯಮ್ । ದುರ್ಬುದ್ಧೇರ್ಧಾರ್ತ-ರಾಷ್ಟ್ರಸ್ಯ ಪ್ರಿಯಂ ಕರ್ತುಮಿಚ್ಛಂತೋ ಯೇಽತ್ರ ಸಮಾಗತಾಃ ತಾನ್ ಯೋದ್ಧು-ಕಾಮಾನವಸ್ಥಿತಾನ್ಯೋತ್ಸ್ಯಮಾನಾನ್ಯಾವದ್ ದ್ರಕ್ಷ್ಯಾಮಿ ತಾವದುಭಯೋಃ ಸೇನಯೋರ್ಮಧ್ಯೇ ರಥಂ ಸ್ಥಾಪಯೇತ್ಯಾಹ ಇತ್ಯರ್ಥಃ ॥ 21–23 ॥**

ಅನುವಾದ – 'ಸೇನಯೋಃ' ಎಂಬಲ್ಲಿಂದ ಎರಡೂವರೆ ಶ್ಲೋಕಗಳಲ್ಲಿ ಅರ್ಜುನನ ಮಾತನ್ನು ಹೇಳುತ್ತಾನೆ. 'ಈ ರಣೋದ್ಯೋಗದಲ್ಲಿ ನಾನು ಯಾರ್ಯಾರ ಜೊತೆಯಲ್ಲಿ ಕಾದಾಡಬೇಕು ? ದುಷ್ಟಬುದ್ಧಿಯುಳ್ಳ ಧೃತರಾಷ್ಟ್ರನ ಮಗನಾದ ದುರ್ಯೋಧನನಿಗೆ ಸಂತೋಷ ವನ್ನುಂಟು ಮಾಡುವ ಇಚ್ಛೆಯಿಂದ ಯಾರು ಇಲ್ಲಿಗೆ ಬಂದಿದ್ದಾರೆ. ಅಂತಹ ಯುದ್ಧ ಮಾಡುವ ಇಚ್ಛೆಯಿಂದ ಬಂದು ನಿಂತಿರುವ, ಯುದ್ಧಸನ್ನದ್ಧರಾದ ಪ್ರತಿವೀರರನ್ನು ನಾನು ನೋಡುತ್ತೇನೆ. ಅಲ್ಲಿಯ ವರೆಗೆ (ನಾನು ಅವರೆಲ್ಲರನ್ನು ನೋಡುವ ವರೆಗೆ) ಎರಡೂ ಸೈನ್ಯಗಳ ಮಧ್ಯದಲ್ಲಿ ನನ್ನ ರಥವನ್ನು ನಿಲ್ಲಿಸು' ಎಂದು ಅರ್ಜುನನು ಹೇಳಿದನು ಎಂದು ಅಭಿಪ್ರಾಯ. ॥ 21–23 ॥

**ಸಂಜಯ ಉವಾಚ ।**

**ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ॥ 24 ॥**

**ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।**
**ಉವಾಚ ಪಾರ್ಥ ಪಶ್ಯೈತಾನ್ಸಮವೇತಾನ್ಕುರೂನಿತಿ ॥ 25 ॥**

**ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ**
**ಪಿತೄನಥ ಪಿತಾಮಹಾನ್ ।**
**ಆಚಾರ್ಯಾನ್ ಮಾತುಲಾನ್ ಭ್ರಾತೄನ್**
**ಪುತ್ರಾನ್ ಪೌತ್ರಾನ್ ಸಖೀಂಸ್ತಥಾ ॥ 26 ॥**

**ಶ್ವಶುರಾನ್ ಸುಹೃದಶ್ಚೈವ**
**ಸೇನಯೋರುಭಯೋರಪಿ ।**

**ತಾನ್‌ಸಮೀಕ್ಷ್ಯ ಸ ಕೌಂತೇಯಃ**
**ಸರ್ವಾನ್ ಬಂಧೂನವಸ್ಥಿತಾನ್**
**ಕೃಪಯಾ ಪರಯಾಽಽವಿಷ್ಟೋ ವಿಷೀದನ್ ಇದಮಬ್ರವೀತ್ ॥ 27 ॥**

**ಅರ್ಥ** – ಈ ರೀತಿಯಾಗಿ ಅರ್ಜುನನಿಂದ ಹೇಳಲ್ಪಟ್ಟ (ಪ್ರಾರ್ಥಿಸಲ್ಪಟ್ಟ) ಶ್ರೀಕೃಷ್ಣನು ತನ್ನ ಉತ್ತಮವಾದ ರಥವನ್ನು ಎರಡೂ ಸೈನ್ಯಗಳ ಮಧ್ಯದಲ್ಲಿ, ಭೀಷ್ಮದ್ರೋಣರ ಹಾಗು ಇತರ ಎಲ್ಲ ರಾಜರ ಸಮ್ಮುಖದಲ್ಲಿ ತಂದು ನಿಲ್ಲಿಸಿ.'ಅರ್ಜುನ ! ಯುದ್ಧಕ್ಕಾಗಿ ಇಲ್ಲಿ ಸೇರಿರುವ ಈ ಕೌರವರನ್ನು ನೋಡು' ಎಂದನು . ॥ 24–25 ॥

ಆಗ ಅರ್ಜುನನು ಆ ಎರಡೂ ಸೈನ್ಯದಲ್ಲಿದ್ದ ಪಿತೃಸಮಾನರಾದ ಭೂರಿಶ್ರವ ಮುಂತಾದವರನ್ನೂ, ಭೀಷ್ಮ, ಸೋಮದತ್ತ, ಮುಂತಾದ ಪಿತಾಮಹರನ್ನೂ, ಬಾಹ್ಲೀಕನೇ ಮೊದಲಾದ ಪ್ರಪಿತಾಮಹರನ್ನೂ, ದ್ರೋಣರಂಥ ಗುರುಗಳನ್ನೂ , ಶಲ್ಯ ಶಕುನಿ ಮುಂತಾದ ಸೋದರಮಾವಂದಿರನ್ನೂ , ಧರ್ಮರಾಜ ದುರ್ಯೋಧನ ಮುಂತಾದ ಅಣ್ಣತಮ್ಮಂದಿರನ್ನೂ, ಅಭಿಮನ್ಯುವೇ ಮೊದಲಾದ ಮಕ್ಕಳನ್ನೂ, ಘಟೋತ್ಕಚನ ಮಗನೇ ಮೊದಲಾದ ಮೊಮ್ಮಕ್ಕಳನ್ನೂ, ಕೃಷ್ಣ ಅಶ್ವತ್ಥಾಮ ಮುಂತಾದ ಸ್ನೇಹಿತರನ್ನೂ, ದ್ರುಪದ ಮುಂತಾದ ಮಾವಂದಿರನ್ನೂ, ವಿರಾಟರಂಥ ಹಿತೈಷಿಗಳನ್ನೂ ನೋಡಿದನು.

ಆ ಅರ್ಜುನನು ತನ್ನ ಮುಂದೆ ನಿಂತಿರುವ ಆ ಎಲ್ಲ ಬಂಧುಗಳನ್ನೂ ಕಣ್ಣಾರೆ ಕಂಡು ಅತಿಯಾದ ಕರುಣೆಯಿಂದ ಆವಿಷ್ಟನಾಗಿ (ಕರುಣೆಯುಳ್ಳವನಾಗಿ) ಮೋಹದಿಂದ ಉಂಟಾದ ಶೋಕದಿಂದ ಮನೋದೌರ್ಬಲ್ಯವನ್ನು ಹೊಂದಿ ಮುಂದೆ ಹೇಳುವಂತೆ ಮಾತನಾಡಿದನು. ॥ 26–27 ॥

ಏವಂ **ಗುಡಾಕೇಶೇನ** **ಗುಡಾಕಾಯಾಃ** = ನಿದ್ರಾಯಾಃ **ಈಶೇನ** = ಜಿತನಿದ್ರೇಣಾರ್ಜುನೇನ ಉಕ್ತೋ **ಹೃಷೀಕೇಶಃ** = ಸರ್ವೇಂದ್ರಿಯಪ್ರೇರಕಃ ಶ್ರೀಕೃಷ್ಣಃ ಬಲದ್ವಯಮಧ್ಯೇ ಭೀಷ್ಮದ್ರೋಣಪ್ರಮುಖತ ಇತಿ ಬುದ್ಧ್ಯಾ ವಿವಿಕ್ತೇನಾನ್ವಯಃ । ರಥಂ ಸ್ಥಾಪಯಿತ್ವಾ ಹೇ ಪಾರ್ಥ **ಸಮವೇತಾನ್**= ಯುದ್ಧಾರ್ಥಂ ಮಿಲಿತಾನೇತಾನ್ ಕುರೂನ್ ಪಶ್ಯೇತ್ಯುವಾಚೇತಿ ॥ 24–25 ॥

**ಅನುವಾದ** – ಈ ರೀತಿಯಾಗಿ ಗುಡಾಕೇಶನಿಂದ, **ಗುಡಾಕಾಯಾಃ ಈಶೇನ** = ನಿದ್ರೆಯನ್ನು ಗೆದ್ದಿರುವ ಅರ್ಜುನನಿಂದ ಹೇಳಲ್ಪಟ್ಟ (ಪ್ರಾರ್ಥಿಸಲ್ಪಟ್ಟ) **ಹೃಷೀಕೇಶಃ** = ಸರ್ವೇಂದ್ರಿಯ ಪ್ರೇರಕನಾದ ಶ್ರೀಕೃಷ್ಣನು , ಎರಡು ಸೇನೆಗಳ ಮಧ್ಯದಲ್ಲಿ, ಭೀಷ್ಮದ್ರೋಣರ ಸಮ್ಮುಖದಲ್ಲಿ

ರಥವನ್ನು ನಿಲ್ಲಿಸಿ, 'ಹೇ ಅರ್ಜುನನೇ ! **ಸಮವೇತಾನ್** = ಯುದ್ಧಕ್ಕಾಗಿ ಬಂದು ಸೇರಿರುವ, **ಏತಾನ್ ಕುರೂನ್** = ಈ ಕೌರವರನ್ನು ನೋಡು' ಎಂದು ಹೇಳಿದನು . ॥ 24–25 ॥

**ತತ್ರೇತ್ಯಸ್ಯ ವಿವರಣಂ ಸೇನಯೋರುಭಯೋರಪೀತಿ । ತಥೇತಿ ಸಮುಚ್ಚಯೇ ॥ 26 ॥**

**ಅನುವಾದ -** 'ತತ್ರ ' ಎಂಬುದರ ವಿವರಣೆ 'ಸೇನಯೋರುಭಯೋರಪಿ' ಎಂಬುದಾಗಿ ಎರಡೂ ಸೈನ್ಯದಲ್ಲಿರುವ ಪರಾಕ್ರಮಿಗಳನ್ನು ಬಂಧುಗಳನ್ನು ಅರ್ಜುನನು ನೋಡಿದನು ಎಂದು ಅರ್ಥ. '**ತಥಾ**' ಎಂಬ ಶಬ್ದವು '**ಸಮುಚ್ಚಯ**' ಎಂಬ ಅರ್ಥದಲ್ಲಿದೆ. ಮೊಮ್ಮಕ್ಕಳನ್ನು ಮತ್ತು ಸ್ನೇಹಿತರನ್ನು ಎಂದು ಅಭಿಪ್ರಾಯ ॥ 26 ॥

**ತಾನವಸ್ಥಿತಾನ್ ಸರ್ವಾನ್ ಬಂಧೂನ್ ಸಮೀಕ್ಷ್ಯೈವೇತ್ಯೇವಕಾರೇ-ಣಾನ್ವಯಃ ॥ 27 ॥**

**ಅನುವಾದ -** ಯುದ್ಧಕ್ಕೆ ಸನ್ನದ್ಧರಾಗಿ ಬಂದಿರುವ ಆ ಎಲ್ಲ ಬಂಧುಗಳನ್ನು ನೋಡಿದ ಕೂಡಲೇ ಎಂಬ ಅರ್ಥದಲ್ಲಿ '**ಏವ**' ಎಂಬ ಶಬ್ದವನ್ನು '**ಸಮೀಕ್ಷ್ಯ**' ಎಂಬ ಪದದ ಜೊತೆಯಲ್ಲಿ ಅನ್ವಯಿಸಬೇಕು.

**ವಿಷೀದನ್ = ವಿಷಾದಂ ಕುರ್ವನ್ । ವಿಷಾದೋ ನಾಮ ಮೋಹನಿಮಿತ್ತ-ಕಾತ್ ಶೋಕಾದ್ಯನ್ಮನೋದೌರ್ಬಲ್ಯಂ ಯಸ್ಮಿನ್ಸತಿ ಸರ್ವವ್ಯಾಪಾರೋಪರಮೋ ಭವತಿ ಸ ಇತಿ ಜ್ಞೇಯಮ್ ॥**

**ವಿಷೀದನ್** = ವಿಷಾದವನ್ನು ಮಾಡುವವನಾಗಿ (ಮುಂದಿನಂತೆ ನುಡಿದನು) ವಿಷಾದ ಎಂದರೆ ನಮ್ಮವರು ಎಂಬ ಮೋಹದಿಂದಾಗಿ ಬರುವ ದುಃಖದಿಂದ (ಶೋಕದಿಂದ) ಉಂಟಾಗುವ ಮನೋದೌರ್ಬಲ್ಯ . ಯಾವ ಮನೋದೌರ್ಬಲ್ಯವಿದ್ದರೆ ಎಲ್ಲವ್ಯಾಪಾರಗಳೂ (ಕ್ರಿಯೆಗಳೂ) ಸ್ಥಗಿತವಾಗುತ್ತವೆಯೋ ಅಂಥ ಮನೋದೌರ್ಬಲ್ಯವೇ ವಿಷಾದ ಶಬ್ದಾರ್ಥ ಎಂದು ತಿಳಿಯಬೇಕು .

## ಮೋಹ ಮುಸುಕಿತು

**ಅರ್ಜುನ ಉವಾಚ ।**

**ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ ॥ 28 ॥**

**ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ।**
**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥ 29 ॥**

**ಅರ್ಥ** – ಅರ್ಜುನನ ವಿಷಾದ (ಮಾತು) ಹೇ ಕೃಷ್ಣ ! ಯುದ್ಧವನ್ನು ಬಯಸಿ ಬಂದು ಸನ್ನದ್ಧರಾಗಿ ನಿಂತಿರುವ ಈ ನನ್ನ ಬಂಧುಜನರನ್ನು ನೋಡಿ, ನನ್ನ ಅಂಗಾಂಗಗಳು ಶಿಥಿಲ ವಾಗುತ್ತಿವೆ. ಬಾಯಿ ಒಣಗುತ್ತಿದೆ . ಮೈ ನಡುಗುತ್ತಿದೆ. ರೋಮಾಂಚನವೂ ಉಂಟಾಗುತ್ತಿದೆ. ॥ 28 – 29 ॥

ಇದಮಬ್ರವೀತ್ ಇತ್ಯುಕ್ತಮರ್ಜುನವಾಕ್ಯಮಾಹ- ದೃಷ್ಟ್ವೇತ್ಯಾದಿನಾಽಽ-**ಧ್ಯಾಯಸಮಾಪ್ತಿ ॥ ಹೇಕೃಷ್ಣ** = ಸಕಲಲೋಕಕರ್ಷಕ । ತದುಕ್ತಂ ಗೀತಾಭಾಷ್ಯೇ ಪಂಚಮೇಽಧ್ಯಾಯೇ । 'ನಿಯಮನಾದಿನಾ ಸಕಲಲೋಕಕರ್ಷಣಾತ್ ಕೃಷ್ಣಃ ' । ತಚ್ಚೋಕ್ತಂ । 'ಯತಃ ಕರ್ಷಸಿ ದೇವೇಶ ನಿಯಮ್ಯ ಸಕಲಂ ಜಗತ್ । ಅತೋ ವದಂತಿ ಮುನಯಃ ಕೃಷ್ಣಂ ತ್ವಾಂ ಬ್ರಹ್ಮವಾದಿನಃ' ಇತಿ ಮಹಾಕೌರ್ಮೇ ಇತ್ಯುಕ್ತೇಃ। **ಯುಯುತ್ಸುಂ** = ಯೋದ್ಧುಮಿಚ್ಛಂತಂ ಸಮ್ಯಗವಸ್ಥಿತಮಿಮಂ ಬಂಧುಜನಂ ದೃಷ್ಟ್ವಾ ಮಮ **ಗಾತ್ರಾಣಿ**= ಹಸ್ತಾದ್ಯವಯವಾಃ **ಸೀದಂತಿ**= ವಿಶೀರ್ಯಂತೇ । 'ಷದ್ಲೃ ವಿಶರಣಗತ್ಯವಸಾದನೇಷು' ಇತಿ ಧಾತೋಃ । ಮುಖೇ ಮ್ಲಾನತಾ ಚ ಜಾಯತೇ **॥ 28 ॥**

**ಅರ್ಥ** – 'ಅರ್ಜುನನು ಈ ಮಾತನ್ನು ಹೇಳಿದನು.' ಎಂದು ಹಿಂದೆ ಹೇಳಲಾಗಿದೆ. ಅರ್ಜುನನ ಆ ಮಾತನ್ನು 'ದೃಷ್ಟ್ವಾ' ಎಂಬ ಶ್ಲೋಕದಿಂದ ಆರಂಭಿಸಿ ಮೊದಲನೆಯ ಅಧ್ಯಾಯವು ಮುಗಿಯುವ ವರೆಗೆ (ಗ್ರಂಥಕಾರರು) ಹೇಳುತ್ತಾರೆ.

ಹೇ ಕೃಷ್ಣ– ಎಲ್ಲರನ್ನೂ ಆಕರ್ಷಿಸುವವನೇ ! ಕೃಷ್ಣಶಬ್ದಕ್ಕೆ **'ಲೋಕಕರ್ಷಕ'** ಎಂಬರ್ಥವನ್ನು ಶ್ರೀಮಧ್ವಾಚಾರ್ಯರು ಗೀತಾಭಾಷ್ಯದ ಐದನೆಯ ಅಧ್ಯಾಯದಲ್ಲಿ ಭಗವಂತನು ಪ್ರಪಂಚಕ್ಕೆ ನಿಯಮನ ಜ್ಞಾನಾಜ್ಞಾನ ಬಂಧ ಮೋಕ್ಷಗಳನ್ನು ಕೊಡುವುದರ ಮೂಲಕ ಎಲ್ಲರ ನಿಯಾಮಕನಾಗಿ ಎಲ್ಲರನ್ನೂ ಆಕರ್ಷಿಸುವುದರಿಂದ ಕೃಷ್ಣನೆನಿಸಿದ್ದಾನೆ ಎಂದು ಹೇಳಿ ಈ ವಿಷಯದಲ್ಲಿ, ಮಹಾಕೌರ್ಮಪುರಾಣವನ್ನು ಪ್ರಮಾಣವನ್ನಾಗಿ ಉದಾಹರಿಸಿದ್ದಾರೆ. 'ದೇವತೆಗಳಿಗೆ ಒಡೆಯನಾದ ಭಗವಂತನೇ ! ನೀನು ಎಲ್ಲ ಪ್ರಪಂಚವನ್ನು ನಿಯಮಿಸಿ (ನಿಯಂತ್ರಿಸಿ) ಎಲ್ಲರನ್ನೂ ಆಕರ್ಷಿಸುವವನಾಗಿದ್ದೀ. ಆದ್ದರಿಂದ ಬ್ರಹ್ಮವಾದಿಗಳೆನಿಸಿದ ಜ್ಞಾನಿಗಳು (ಮುನಿಗಳು) ನಿನ್ನನ್ನು 'ಕೃಷ್ಣ ' ಎಂಬುದಾಗಿ ಕರೆಯುತ್ತಾರೆ. (ಹೇಳುತ್ತಾರೆ) ಎಂದು ಮಹಾಕೌರ್ಮದಲ್ಲಿ ಹೇಳಲಾಗಿದೆ.

**ಯುಯುತ್ಸುಂ** = ಯುದ್ಧಮಾಡುವ ಇಚ್ಛೆಯಿಂದ, ಸಮ್ಯಕ್ ಅವಸ್ಥಿತಂ ಚೆನ್ನಾಗಿ ಬಂದು ಸೇರಿರುವ ಈ ಬಂಧು ಜನರ ಸಮೂಹವನ್ನು ನೋಡಿ ನನ್ನ, **ಗಾತ್ರಾಣಿ** = ಹಸ್ತ , ಪಾದ ಮುಂತಾದ ಅವಯವಗಳು, **ಸೀದಂತಿ** = ಶಿಥಿಲವಾಗುತ್ತಿವೆ. 'ಸೀದಂತಿ' ಎಂಬ ರೂಪವು 'ಷದ್ಲೃ ವಿಶರಣಗತ್ಯವಸಾದನೇಷು' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. **ಮುಖೇ** = ಮುಖ ದಲ್ಲಿ ಮ್ಲಾನತೆಯು= ಬಾಡುವಿಕೆಯು ಉಂಟಾಗುತ್ತಿದೆ. (ಮುಖವು ಬಾಡುತ್ತಿದೆ) .

ವಿವರಣೆ - 'ಸಮುಪಸ್ಥಿತಮ್' ಎಂಬುದು ಪ್ರಚಲಿತಪಾಠ 'ಸಮವಸ್ಥಿತಂ' ಎಂಬುದು ಗೀತಾವಿವೃತಿಕಾರರಿಗೆ ಸಮ್ಮತವಾದ ಪಾಠ. ಸಾಮಾನ್ಯವಾಗಿ ಎರಡೂ ಶಬ್ದಗಳಿಗೆ ಅರ್ಥ ಒಂದೇ ಆಗುತ್ತದೆ.

**ಶರೀರೇ ಕಂಪೋ ರೋಮಾಂಚಶ್ಚ ಜಾಯತೇ ॥ 29 ॥**

ಅನುವಾದ - ಶರೀರವು ನಡುಗುತ್ತಿದೆ. (ಶರೀರದಲ್ಲಿ ಕಂಪನವು ಉಂಟಾಗುತ್ತಿದೆ) ರೋಮಾಂಚನವೂ ಉಂಟಾಗುತ್ತಿದೆ ॥ 29 ॥

**ಗಾಂಡೀವಂ ಸ್ರಂಸತೇ ಹಸ್ತಾತ್ ತ್ವಕ್‌ಚೈವ ಪರಿದಹ್ಯತೇ ।**
**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥ 30 ॥**

**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।**
**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ॥ 31 ॥**

**ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।**
**ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ॥ 32 ॥**

ಅರ್ಥ – ಗಾಂಡೀವ ಧನುಸ್ಸು ನನ್ನ ಕೈಯಿಂದ ಜಾರುತ್ತಿದೆ. ಚರ್ಮವು ಸುಡುತ್ತಲೇ ಇದೆ. ನಿಲ್ಲುವುದಕ್ಕೂ ತ್ರಾಣವಿಲ್ಲದವನಾಗಿದ್ದೇನೆ. (ನಿಲ್ಲಲು ಸಾಧ್ಯವಾಗುತ್ತಿಲ್ಲ) ಬುದ್ಧಿಯು ಭ್ರಮಣೆಯಾದಂತೆ ಭಾಸವಾಗುತ್ತಿದೆ . ॥ 30 ॥

ಕೇಶವನೇ ! ಅಪಶಕುನಗಳನ್ನು ಕಾಣುತ್ತಿದ್ದೇನೆ. ಯುದ್ಧದಲ್ಲಿ ಬಂಧು ಸಮೂಹವನ್ನು ಕೊಂದು ನಾನು ಪಡೆಯಬೇಕಾದ ಶ್ರೇಯಸ್ಸನ್ನು ನಾಕಾಣೆ ॥ 31 ॥

ಕೃಷ್ಣನೇ ! ನಾನು ಯುದ್ಧದಲ್ಲಿ ಜಯವನ್ನು ಅಪೇಕ್ಷಿಸುವುದಿಲ್ಲ, ರಾಜ್ಯವನ್ನೂ , ರಾಜ್ಯದಿಂದ ಉಂಟಾಗುವ ಸುಖವನ್ನೂ (ನಾನು) ಅಪೇಕ್ಷಿಸುವುದಿಲ್ಲ. ಗೋವಿಂದನೇ! ನಮಗೆ ರಾಜ್ಯದಿಂದ

ಏನು ಸುಖ(ಏನು ಪ್ರಯೋಜನ) ಸುಖ ಭೋಗಗಳಿಂದಾಗಲೀ ಬದುಕಿನಿಂದಾಗಲೀ. ಏನು ಪ್ರಯೋಜನ ? (ಏನು ಸುಖ) ॥ 32 ॥

**ಧನುಃ ಹಸ್ತಾತ್ ಪತತಿ । ತ್ವಕ್ಚ ಪರಿತಸ್ತಪ್ಯತ ಏವ । ಅವಸ್ಥಾತುಂ ಚ ನ ಶಕ್ನೋಮಿ । ಮನಶ್ಚ ಮೇ ಭ್ರಮತೀವ ಚ ॥ 30 ॥**

**ಅನುವಾದ** – **'ಗಾಂಡೀವ'** ಎಂಬ ಧನುಸ್ಸು ನನ್ನ ಕೈಯಿಂದ ಜಾರಿಬೀಳುತ್ತಿದೆ. ಚರ್ಮವು ಎಲ್ಲ ಕಡೆಯಿಂದಲೂ ಸುಡುತ್ತಲೇ ಇದೆ. ನಾನು ನಿಲ್ಲಲೂ ಶಕ್ತನಾಗುತ್ತಿಲ್ಲ. ನನ್ನ ಬುದ್ಧಿಯು (ಮನಸ್ಸು) ಭ್ರಮಣೆಯಾದಂತೆ ಭಾಸವಾಗುತ್ತಿದೆ. ॥ 30 ॥

**ವಿಪರೀತಾನಿ ನಿಮಿತ್ತಾನಿ= ದುರ್ನಿಮಿತ್ತಾನಿ ಚ ಪಶ್ಯಾಮಿ । ಕೇಶವ= ಬ್ರಹ್ಮ-ರುದ್ರಪ್ರವರ್ತಕ । 'ಕಶ್ಚ ಈಶಶ್ಚ ಕೇಶೌ ತೌ ಸೃಷ್ಟ್ಯಾದಿನಾ ವರ್ತಯತಿ' ಇತಿ ವ್ಯುತ್ಪತ್ತೇಃ । ಕೇಶಪದೋಪಪದಾದ್ 'ವೃತು' ವರ್ತನ ಇತ್ಯತೋಽಂತರ್ಣೀತ-ಣ್ಯರ್ಥಾತ್ ಡಪ್ರತ್ಯಯೇ ರೂಪಸಿದ್ಧೇಃ । ಉಕ್ತಂ ಹಿ 'ಸ್ಥಿತಪ್ರಜ್ಞಸ್ಯ ಕಾ ಭಾಷಾ' ಇತ್ಯೇತದ್ಭಾಷ್ಯೇ –**

**'ಹಿರಣ್ಯಗರ್ಭಃ ಕಃ ಪ್ರೋಕ್ತ ಈಶಃ ಶಂಕರ ಏವ ಚ ।**
**ಸೃಷ್ಟ್ಯಾದಿನಾ ವರ್ತಯತಿ ತೌ ಯತಃ ಕೇಶವೋ ಭವಾನ್ ॥ ಇತಿ ॥'**

**ಅನುವಾದ**– **ವಿಪರೀತಾನಿ ನಿಮಿತ್ತಾನಿ** = ಅಪಶಕುನಗಳನ್ನು ನೋಡುತ್ತಿದ್ದೇನೆ. ಕೇಶವನೇ ಬ್ರಹ್ಮರುದ್ರ ಪ್ರವರ್ತಕನೇ ! 'ಕ' ಎಂದರೆ ಬ್ರಹ್ಮ **'ಈಶ'** ಎಂದರೆ ರುದ್ರ ಇವರಿಬ್ಬರನ್ನೂ ಸೃಷ್ಟಿಸ್ಥಿ ನಿಯಮನ ಮುಂತಾದವುಗಳಿಂದ ನಿಯಂತ್ರಿಸುವವನಾದುದರಿಂದ ಕೇಶವ ಎಂದರೆ ಬ್ರಹ್ಮರುದ್ರ ಪ್ರವರ್ತಕ ಎಂದು ಕೇಶವ ಶಬ್ದ ನಿಷ್ಪತ್ತಿ . 'ಕೇಶ' ಎಂಬ ಉಪಪದವಿರುವ ಒಳಗೆ ಅಡಗಿರು ಣಿಜರ್ಥವುಳ್ಳ 'ವೃತು ವರ್ತನ ' ಎಂಬ ಧಾತುವಿನ ಪರದಲ್ಲಿ 'ಡ 'ಪ್ರತ್ಯಯ ಬಂದು **'ಕೇಶವ** ಎಂಬ ರೂಪವು ನಿಷ್ಪನ್ನವಾಗುತ್ತದೆ. (ಸಿದ್ಧವಾಗುತ್ತದೆ) ಬ್ರಹ್ಮರುದ್ರರನ್ನು ನಿಯಮಿಸುವವನ ಎಂದು ಅರ್ಥ.

ಆನಂದತೀರ್ಥ ಭಗವತ್ಪಾದರು **'ಸ್ಥಿತಪ್ರಜ್ಞಸ್ಯ ಕಾ ಭಾಷಾ'** ಎಂಬ ಗೀತೆಯ ಎರಡನೆ ಅಧ್ಯಾಯದ ಶ್ಲೋಕವನ್ನು ವಿವರಿಸುವಾಗ ಗೀತಾಭಾಷ್ಯದಲ್ಲಿ **'ಕೇಶವ'** ಎಂಬ ಶಬ್ದಕ್ಕೆ ಬ್ರಹ್ಮರು ಪ್ರವರ್ತಕ ಎಂಬ ಅರ್ಥವನ್ನು ಪ್ರಮಾಣ ಪುರಸ್ಸರವಾಗಿ ವಿವರಿಸಿದ್ದಾರೆ. ಆ ಪ್ರಮಾಣದ ಅರ್ಥ ಹೀಗಿದೆ.

'ಕ' ಎಂದರೆ ಹಿರಣ್ಯಗರ್ಭನು (ಬ್ರಹ್ಮನು) ಈಶ ಎಂದರೆ ಶಂಕರನು . ಇವರಿಬ್ಬರನ್ನೂ ಸೃಷ್ಟ್ಯಾದಿಗಳಿಂದ ನೀನು ನಿಯಂತ್ರಿಸುವವನು. ಆದ್ದರಿಂದ ನೀನು 'ಕೇಶವ' ಶಬ್ದದಿಂದ ಕರೆಯಿಸಿಕೊಳ್ಳಲ್ಪಡುತ್ತಿ' ಎಂಬುದಾಗಿ.

**ಯುದ್ಧೇನ ಶ್ರೇಯೋ ಲಭ್ಯತ ಇತ್ಯತ ಆಹ ನಚೇತಿ । ಶ್ರೇಯಶ್ಚ ನ ಪಶ್ಯಾಮಿ ।**
**ಆಹವೇ = ಯುದ್ಧೇ ॥ 31 ॥**

**ಅನುವಾದ** – ಯುದ್ಧದಿಂದ ಶ್ರೇಯಸ್ಸು (ಕೀರ್ತಿಯು) ಲಭಿಸುವುದಷ್ಟೇ ! ಆದ್ದರಿಂದ ಯುದ್ಧವನ್ನು ಮಾಡು ಎಂದರೆ 'ನ ಚ ' ಎಂಬ ಶ್ಲೋಕದಿಂದ ಅರ್ಜುನನು ಹೇಳುತ್ತಾನೆ. ಯುದ್ಧದಲ್ಲಿ ಶ್ರೇಯಸ್ಸನ್ನೂ ನಾನು ಕಾಣುವುದಿಲ್ಲ. (ಯುದ್ಧ ಮಾಡಿ ನಾವು ಶ್ರೇಯಸ್ಸನ್ನೂ ಪಡೆಯಲಾರೆವು) ॥ 31 ॥

**ವಿಜಯಾದಿಕಂ ಫಲಂ ನೇಚ್ಛಾಮಿ ॥ 32 ॥**

**ಅನುವಾದ** – ವಿಜಯಾದಿ ಫಲಗಳನ್ನೂ ನಾನು ಅಪೇಕ್ಷಿಸುವುದಿಲ್ಲ ॥ 32 ॥

## ಕೊಲ್ಲಲಾರೆ ಸ್ವಜನರನು

**ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ ।**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥ 33 ॥**

**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।**
**ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ ॥ 34 ॥**

**ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥ 35 ॥**

**ಅರ್ಥ** – ಯಾರಿಗೋಸ್ಕರವಾಗಿ ನಮಗೆ ರಾಜ್ಯ, ಭೋಗ ಮತ್ತು ಸುಖ ಇವುಗಳೆಲ್ಲವೂ ಅಪೇಕ್ಷಿತವಾಗಿವೆಯೋ, ಆ ಬಂಧುಗಳೇ ಪ್ರಾಣದಾಸೆಯನ್ನೂ, ಸಂಪತ್ತಿನ ಆಸೆಯನ್ನೂ ತೊರೆದು ಯುದ್ಧಸನ್ನದ್ಧರಾಗಿ ನಿಂತಿದ್ದಾರೆ. ॥ 33 ॥

**ಯೇಷಾಮರ್ಥೇ** = ಪ್ರಯೋಜನನಿಮಿತ್ತಂ ರಾಜ್ಯಾದ್ಯಪೇಕ್ಷಿತಂ **ನಃ** = ಅಸ್ಮಾಕಂ । **ತ ಇಮೇ** = ಬಾಂಧವಾಃ ಪ್ರಾಣಾನ್ ಧನಾನಿ ಚ ತ್ಯಕ್ತ್ವಾ ಯುದ್ಧೇ ವ್ಯವಸ್ಥಿತಾಃ ॥ 33 ॥

**ಅನುವಾದ - ಯೇಷಾಮರ್ಥೇ** = ಯಾರ ಪ್ರಯೋಜನಕ್ಕಾಗಿ (ಯಾರಿಗೋಸ್ಕರವಾಗಿ) ರಾಜ್ಯ ಮೊದಲಾದವುಗಳು ನಮಗೆ ಅಪೇಕ್ಷಿತವಾಗಿದ್ದಾವೆಯೋ ಆ ಈ ಬಾಂಧವರು ಪ್ರಾಣಗಳ ಹಂಗನ್ನೂ , ಸಂಪತ್ತಿನ ಆಸೆಯನ್ನೂ ತೊರೆದು ರಣರಂಗದಲ್ಲಿ ಯುದ್ಧ ಸನ್ನದ್ಧರಾಗಿ ನಿಂತಿದ್ದಾರೆ. || 33 ||

ಗುರುಗಳು, ಪಿತೃಸಮಾನರು, ಮಕ್ಕಳು, ತಾತಂದಿರು ಸೋದರಮಾವಂದಿರು, ಹೆಣ್ಣು ಕೊಟ್ಟ ಮಾವಂದಿರು, ಮೊಮ್ಮಕ್ಕಳು, ಭಾವಮೈದರು ಮತ್ತು ಇನ್ನುಳಿದ ಸಂಬಂಧಿಗಳೆಲ್ಲರೂ ಯುದ್ಧರಂಗದಲ್ಲಿ ನಿಂತಿದ್ದಾರೆ || 34 ||

**ತೇ ಕ ಇತ್ಯತ ಆಹ । ಆಚಾರ್ಯಾ ಇತಿ || 34 ||**

ಯುದ್ಧಸನ್ನದ್ಧರಾಗಿ ನಿಂತಿರುವವರು ಯಾರು ಯಾರು ಎಂಬುದನ್ನು **'ಆಚಾರ್ಯಾಃ'** ಎಂಬ ಶ್ಲೋಕದಿಂದ ಹೇಳಿದ್ದಾರೆ. || 34 ||

ಮಧುನಾಮಕ ದೈತ್ಯನನ್ನು ಕೊಂದಿರುವ ಕೃಷ್ಣನೇ ! ನಾನು ಯುದ್ಧ ವಿಮುಖನಾಗಿ ನಿಂತಾಗ ಇವರಿಂದ ನಾನು ಕೊಲ್ಲಲ್ಪಟ್ಟರೂ ಸರಿಯೇ. ಇವರನ್ನು ಮಾತ್ರ ಕೊಲ್ಲಲು ಇಚ್ಛಿಸಲಾರೆ. ಮೂರು ಲೋಕದ ಆಧಿಪತ್ಯವು ಲಭಿಸುವಂತಿದ್ದರೂ ನಾನು ಇವರನ್ನು ಕೊಲ್ಲಲಾರೆ . ಎಂದ ಮೇಲೆ ಕೇವಲ ಭೂಮಿಯ ಒಡೆತನಕ್ಕಾಗಿ ಇವರನ್ನು ಕೊಲ್ಲಲಾರೆ ಎಂದು ಪ್ರತ್ಯೇಕವಾಗಿ ಹೇಳಬೇಕೇನು ? (ಹೇಳಬೇಕಾಗಿಲ್ಲ) || 35 ||

**ನೈವೇಚ್ಛಾಮೀತ್ಯೇವಕಾರಾನ್ವಯಃ । ಯದಿ ಮಾಂ ಯುದ್ಧಾನ್ನಿವೃತ್ತಂ ಏತೇ ಹನ್ಯುಸ್ತರ್ಹಿ ಘ್ನತೋಽಪಿ ನೈವ ಹಂತುಮಿಚ್ಛಾಮೀತ್ಯರ್ಥಃ । ಹೇ ಮಧುನಾಮಕ ದೈತ್ಯಮರ್ದನ ! ಕೈಮುತ್ಯನ್ಯಾಯೇನಾಹ- ಅಪೀತಿ || ತ್ರೈಲೋಕ್ಯರಾಜ್ಯಸ್ಯಾಪಿ ಹೇತೋರೇತಾನ್ ಹಂತುಂ ನೇಚ್ಛಾಮಿ । ಕಿಮುತ ಮಹೀಮಾತ್ರನಿಮಿತ್ತಮಿತಿ । || 35 ||**

**ಅನುವಾದ - ನೈವ ಇಚ್ಛಾಮಿ** ಎಂಬುದಾಗಿ ಏವಕಾರವನ್ನು ನಞ್ ಜೊತೆಯಲ್ಲಿ ಅನ್ವಯಿಸಬೇಕು. ಯುದ್ಧದಿಂದ ನಿವೃತ್ತನಾದ ನನ್ನನ್ನು ಈ ಎದುರಾಳಿಗಳು ಒಂದುವೇಳೆ ಹಿಂಸಿಸಿದರೆ, ಅವರಿಂದ ಕೊಲ್ಲಲ್ಪಟ್ಟವನಾದರೂ ನಾನು ಅವರನ್ನು ಸಂಹರಿಸಲು (ಕೊಲ್ಲಲು) ಬಯಸುವುದಿಲ್ಲ ಎಂದು ಅಭಿಪ್ರಾಯ . ಎಲೈ ಮಧುನಾಮಕದೈತ್ಯನನ್ನು ಕೊಂದವನೆ ಕೈಮುತ್ಯನ್ಯಾಯದಿಂದ **'ಅಪಿ'** ಎಂಬ ಶ್ಲೋಕಭಾಗದಲ್ಲಿ ಹೇಳುತ್ತಾರೆ. ಯುದ್ಧಮಾಡಿದ್ದರಿಂ

ಮೂರು ಲೋಕಗಳ ಆಧಿಪತ್ಯವು ಸಿಗುತ್ತದೆ. (ಮೂರು ಲೋಕಗಳ ಪ್ರಾಪ್ತಿಯ ಕಾರಣದಿಂದ) ಎಂದಾದರೂ ಇವರನ್ನು ಕೊಲ್ಲಲು ನಾನು ಇಚ್ಛಿಸುವುದಿಲ್ಲ. ಹೀಗಿರುವಾಗ ಕೇವಲ ಭೂಲೋಕದ ಪ್ರಾಪ್ತಿಗಾಗಿ ಇವರನ್ನು ಕೊಲ್ಲುವುದಿಲ್ಲ ಎಂದು ಪ್ರತ್ಯೇಕ ಹೇಳಬೇಕೆ ? ಹೇಳಬೇಕಾಗಿಲ್ಲ ಎಂದು ಅಭಿಪ್ರಾಯ . ॥ 35 ॥

**ವಿವರಣೆ** - **'ನೈವ ಇಚ್ಛಾಮಿ ಇತ್ಯೇವಕಾರಾನ್ವಯಃ'** ಎಂದು ರಾಯರು ಏವಕಾರಾನ್ವಯವನ್ನು ಹೇಳಿದ್ದಾರೆ. ಆದರೆ ಪ್ರಚಲಿತಪಾಠದ ಪ್ರಕಾರ ಈ ಶ್ಲೋಕದಲ್ಲಿ ಏವಕಾರ ಇಲ್ಲ. ಹಿಂದಿನ ಶ್ಲೋಕದಲ್ಲಿ ಆಗಲೀ ಮುಂದಿನ ಶ್ಲೋಕದಲ್ಲಿ ಆಗಲೀ ಏವಕಾರ ಇಲ್ಲ. **'ಪಾಪಮೇವಾಶ್ರಯೇತ್'** ಎಂಬ ಮುಂದಿನ ಶ್ಲೋಕದಲ್ಲಿ ಏವಕಾರ ಇದೆ. ಆದರೆ ಅಲ್ಲಿರುವ ಏವಕಾರವನ್ನು ರಾಯರು **'ಪಾಪ '** ಶಬ್ದದ ಜೊತೆಯಲ್ಲಿ ಅನ್ವಯಿಸಿದ್ದಾರೆ. ಹೀಗಾಗಿ ಈ ಶ್ಲೋಕದಲ್ಲಿರುವ **'ನಞ್'** ಜೊತೆಯಲ್ಲಿ ಅನ್ವಯಿಸುವ ಏವಕಾರಪಾಠವು ಪ್ರಚಲಿತ ಪಾಠದಲ್ಲಿ ಇಲ್ಲ. ಆದರೂ **'ಸರ್ವಂ ವಾಕ್ಯಂ ಸಾವಧಾರಣಂ'** ಎಂಬ ನ್ಯಾಯದಿಂದಾಗಲೀ, ಇಲ್ಲಿ **'ತ್ರೈಲೋಕ್ಯರಾಜ್ಯಸ್ಯಾಪಿ ಹೇತೋಃ'** ಎಂದು ಹೇಳುತ್ತಿರುವುದರಿಂದಾಗಲೀ ಅವಧಾರಣಾರ್ಥಕ ಏವಕಾರ ಇಟ್ಟುಕೊಳ್ಳಬೇಕು. ಅಥವಾ **'ತಥೈವ ಚ '** ಎಂಬಲ್ಲಿರುವ 'ಏವ 'ಕಾರವನ್ನು ಇಲ್ಲಿಗೆ ತರಬೇಕು.

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥ 36 ॥**

**ಅರ್ಥ** – ಜನಾರ್ದನನೇ ? ಕೌರವರನ್ನು ಕೊಂದದ್ದರಿಂದ ನಮಗೆ ಆಗುವ (ಸುಖವಾದರೂ) ಪ್ರೀತಿಯಾದರೂ ಏನು ? ಆತತಾಯಿಗಳಾದ = ಹೆಣ್ಣು ಹೊನ್ನು ಮಣ್ಣು ಇವುಗಳನ್ನು ಅಪಹರಿಸಿರುವ ಈ ಕೌರವರನ್ನು ಕೊಂದರೆ ನಮಗೆ ಪಾಪವೇ ಬಂದೀತು. ಹಿಂಸೆಯು ಪಾಪ ಸಾಧನವಾದುದರಿಂದ ಇವರನ್ನು ಹಿಂಸಿಸುವುದರಿಂದ ಪಾಪವೇ ನಮ್ಮನ್ನು ಆಶ್ರಯಿಸೀತು ॥ 36 ॥

**ಕಿಂಚ ಧಾರ್ತರಾಷ್ಟ್ರಾನ್ ನಿಹತ್ಯ ನೋಽಸ್ಮಾಕಂ ಕಾ ಪ್ರೀತಿಃ = ಕಿಮೈಹಿಕ ಸುಖಮ್ । ನ ಕಿಮಪಿ । ನಾಪಿ ಪಾರತ್ರಿಕಂ - ಪ್ರತ್ಯುತ ಪಾರತ್ರಿಕದುಃಖ-ಹೇತುಪಾಪಮೇವಾಸ್ಮಾನಾಶ್ರಯೇತ್ । ನ ಜಾಯತ ಇತಿ ಜನಃ, ಅರ್ದಯತಿ ಸಂಸಾರಮಿತಿ ಅರ್ದನಃ, ಜನಶ್ಚಾಸಾವರ್ದನಶ್ಚೇತಿ ಜನಾರ್ದನಃ, ತಸ್ಯ ಸಂಬುದ್ಧಿಃ । ಉಕ್ತಂ ಹ್ಯೇವಂ ಗೀತಾಭಾಷ್ಯೇ ದಶಮೇ ॥**

**ಆತತಾಯಿನಃ =**

**ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ ।**

**ಕ್ಷೇತ್ರದಾರಾಪಹಾರೀ ಚ ಷಡೇತೇ ಹ್ಯಾತತಾಯಿನಃ ।**

(ಭೀ.ಪ 107.110) **ಇತ್ಯುಕ್ತಲಕ್ಷಣಾನ್ ।**

**ಅನುವಾದ** – ಮತ್ತು ಧೃತರಾಷ್ಟ್ರನ ಮಕ್ಕಳಾದ ಕೌರವರನ್ನು ಕೊಂದು ನಮಗೆ ದೊರೆಯಬಹುದಾದ (ಪ್ರೀತಿಯಾದರೂ) ಸುಖವಾದರೂ ಏನು ? ಐಹಿಕ ಸುಖವಿದೆಯೇ? ಅದು ಇಲ್ಲ. ಪಾರತ್ರಿಕ ಸುಖವಿದೆಯೋ ? ಅದೂ ಇಲ್ಲ . ಪ್ರತ್ಯುತ ಅದರ ಬದಲಾಗಿ ಪರಲೋಕದಲ್ಲಿ ಪಡಬಹುದಾದ ದುಃಖಕ್ಕೆ ಕಾರಣವಾದ ಪಾಪವೇ ನಮಗೆ ಬರುತ್ತದೆ. (ನಮ್ಮನ್ನು ಆಶ್ರಯಿಸುತ್ತದೆ) ಜನಾರ್ದನ ಎಂಬ ಶಬ್ದದ ಅರ್ಥವನ್ನು ಶ್ರೀಮದಾನಂದತೀರ್ಥರು ಹತ್ತನೆಯ ಅಧ್ಯಾಯದ ಗೀತಾಭಾಷ್ಯದಲ್ಲಿ ಹೀಗೆ ವಿವರಿಸಿದ್ದಾರೆ. ಭಗವಂತನು ಹುಟ್ಟುವುದಿಲ್ಲ ಆದ್ದರಿಂದ ಅವನು 'ಜನ'. ಸಂಸಾರವನ್ನು ನಾಶಪಡಿಸುತ್ತಾನೆ ಆದ್ದರಿಂದ ಅವನು '**ಅರ್ದನ**'. ಭಗವಂತನು (ಕೃಷ್ಣನು) ಹುಟ್ಟುವುದಿಲ್ಲ ಮತ್ತು ಸಂಸಾರನಾಶಕನಾಗಿದ್ದಾನೆ. ಆದ್ದರಿಂದ ಅವನು 'ಜನಾರ್ದನ' ಶಬ್ದದಿಂದ ಕರೆಯಲ್ಪಡುತ್ತಾನೆ. ಅಂಥ ಜನಾರ್ದನನೇ ! ಎಂದು ಅರ್ಜುನನು ಸಂಬೋಧಿಸಿದ್ದಾನೆ.

'**ಆತತಾಯಿನಃ**' ಎಂದರೆ ಮಹಾಭಾರತದ ಭೀಷ್ಮ ಪರ್ವದಲ್ಲಿ '**ಆತತಾಯಿ**'ಯ ಲಕ್ಷಣವನ್ನು ಹೀಗೆ ಹೇಳಿದ್ದಾರೆ – 'ಬೆಂಕಿ ಕೊಡುವವನು (ಬೆಂಕಿ ಹಚ್ಚುವವನು) ವಿಷ ಕೊಡುವವನು , ಶಸ್ತ್ರಗ್ರಹಣ ಮಾಡಿ ಎದುರು ಬರುವವನು , ಪರರ ಹಣವನ್ನು ಅಪಹರಿಸುವವನು. ಭೂಮಿ ಮತ್ತು ಸ್ತ್ರೀ ಅಪಹಾರಕನು. ಈ ಆರು ಜನರು ಆತತಾಯಿಗಳೆನಿಸಿದ್ದಾರೆ.ಇಂಥ ಲಕ್ಷಣವುಳ್ಳ ಕೌರವರನ್ನು ಎಂದರ್ಥ. ॥ 36 ॥

**ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ [1]ಸಬಾಂಧವಾನ್ ।**

**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥ 37 ॥**

**ಅರ್ಥ** – ಮಾಧವನೇ ! (ಆದ್ದರಿಂದ) ಹಿಂದೆ ಹೇಳಿದ ಎಲ್ಲ ಕಾರಣಗಳಿಂದ ಬಂಧು ಸಹಿತರಾದ ಕೌರವರನ್ನು ಕೊಲ್ಲಲು ನಾವು ಅರ್ಹರಲ್ಲ. ಬಂಧುಗಳನ್ನು ಕೊಂದು ನಾವು ಹೇಗೆ ಸುಖಿಗಳಾದೇವು ? ॥ 37 ॥

---

1. 'ಸ್ವಬಾಂಧವಾನ್ ಇತ್ಯಪಿ' ಕ್ವಚಿತ್

**ತಸ್ಮಾತ್ = 'ಸೀದಂತಿ ಮಮ ಗಾತ್ರಾಣಿ' ಇತ್ಯಾದಿನೋಕ್ತೋಪಪತ್ತಿಬಲಾತ್ ಸಬಾಂಧವಾನ್ ಧಾರ್ತರಾಷ್ಟ್ರಾನ್ ಹಂತುಂ ವಯಂ ನಾರ್ಹಾಃ ।**

**'ಆತತಾಯಿನಮಾಯಾಂತಂ ಹನ್ಯಾದೇವಾವಿಚಾರಯನ್ ।**
**ನಾತತಾಯಿವಧೇ ದೋಷೋ ಹಂತುರ್ಭವತಿ ಕಶ್ಚನ ।**

(ಶಾಂ. ಪ. 15.15)

**ಇತ್ಯುಕ್ತೇಸ್ತೇಷಾಮ್ ಆತತಾಯಿತ್ವೇನ ಹಂತವ್ಯತಯಾ ಪ್ರಾಪ್ತತ್ವೇಽಪಿ ತದ್ಧನನ ಪ್ರಸಕ್ತ್ಯಾ ಬಂಧೂನಾಮಪಿ ಹನನಪ್ರಾಪ್ತೇರ್ನ ಹಂತುಂ ವಯಂ ಯೋಗ್ಯಾ ಇತಿ ಭಾವಃ ॥**

**ಬಂಧುತ್ವೇಽಪಿ ಆತತಾಯಿಸಂಬಂಧಿತ್ವಾತ್ ತೇಽಪಿ ಬಂಧುಜನಾ ಹಂತವ್ಯಾ ಏವೇತ್ಯತ ಆಹ– ಸ್ವಜನಂ ಹೀತಿ ॥ ಸ್ಯಾಮ = ಭವೇಮ । ತದ್ದರ್ಶನ-ಸ್ಪರ್ಶನ-ಸಂಭಾಷಣಾದೇರಭಾವಪ್ರಾಪ್ತೇರಿತಿ ಭಾವಃ ॥ 37 ॥**

**ಅನುವಾದ** - ತಸ್ಮಾತ್ **'ಸೀದಂತಿ ಮಮ ಗಾತ್ರಾಣಿ'** ನನ್ನ ಅಂಗಾಂಗಗಳು ಶಿಥಿಲ ವಾಗುತ್ತಿವೆ ಎಂಬಲ್ಲಿಂದ ಈವರೆಗೆ ಹೇಳಿದ ಅನೇಕ ಕಾರಣಗಳಿಂದಾಗಿ ಬಂಧು-ಬಾಂಧವ ರಿಂದ ಕೂಡಿದ ದುರ್ಯೋಧನಾದಿಗಳನ್ನು ಕೊಲ್ಲಲು ನಾವು ಅರ್ಹರಲ್ಲ.

ಮಹಾಭಾರತ ಶಾಂತಿಪರ್ವದಲ್ಲಿ 'ಯುದ್ಧರಂಗದಲ್ಲಿ ಎದುರಾಳಿಯಾಗಿ ಯುದ್ಧಕ್ಕೆ ಬಂದಿರುವ ಆತತಾಯಿಯನ್ನು ಏನೂ ವಿಚಾರ ಮಾಡದೇ ಕೂಡಲೇ ಕೊಲ್ಲಲೇಬೇಕು. ಹಾಗೆ ಮಾಡಿದಲ್ಲಿ ಆತತಾಯಿಯನ್ನು ಕೊಂದವನಿಗೆ ಯಾವ ದೋಷವೂ ಬರುವುದಿಲ್ಲ.'' ಎಂದು ಹೇಳಿರುವುದರಿಂದ, ದುರ್ಯೋಧನಾದಿಗಳು ಆತತಾಯಿಗಳಾಗಿರುವುದರಿಂದ ಅವರು ವಧಾರ್ಹರಾಗಿದ್ದಾರೆ. (ಅವರ ವಧವು ಕರ್ತವ್ಯವಾಗಿದೆ.) ಆದರೂ ಅವರನ್ನು ಕೊಲ್ಲುವ ಸಂದರ್ಭದಲ್ಲಿ ಇತರ ಬಂಧುಗಳನ್ನೂ ಕೊಲ್ಲುವ ಸಂದರ್ಭಬರುತ್ತದೆ. ದುರ್ಯೋಧನಾದಿಗಳು ಆತತಾಯಿಗಳಾದುದಿಂದ ಅವರು ವಧಾರ್ಹರಾದರೂ ಕೂಡ ಅವರ ಸಂಬಂಧಿಗಳಾದ (ಅವರ ಬಂಧುಗಳಾದ) ಭೀಷ್ಮದ್ರೋಣಾದಿಗಳು ಆತತಾಯಿಗಳಲ್ಲ. ಆದ್ದರಿಂದ ಅವರು ವಧಾರ್ಹರಲ್ಲ. ಆತತಾಯಿಗಳಾದ ದುರ್ಯೋಧನಾದಿಗಳನ್ನು ಕೊಲ್ಲಲು ಹೊರಟಾಗ ಆತತಾಯಿಗಳಲ್ಲದ, ಆತತಾಯಿಗಳ ಬಂಧುಗಳಾದ ಭೀಷ್ಮ-ದ್ರೋಣಾದಿಗಳನ್ನು ಕೊಲ್ಲಬೇಕಾದ ಸಂದರ್ಭ ಬರುವುದಿಂದ ಅವರನ್ನು ಕೊಲ್ಲಲು ನಾವು ಅರ್ಹರಲ್ಲ ಎಂಬುದು ಅರ್ಜುನನ ಅಭಿಪ್ರಾಯ.

**ವಿವರಣೆ - ಸ್ವಬಾಂಧವಾನ್** ಎಂಬುದು ಪ್ರಚಲಿತಪಾಠ 'ಸಬಾಂಧವಾನ್' ಎಂಬುದು ಾಯರಿಗೆ ಸಮ್ಮತವಾದ ಪಾಠ, ರಾಯರು ಬರೆದ ವ್ಯಾಖ್ಯಾನದಂತೆ ಸಬಾಂಧವಾನ್ ಎಂಬ ಾಠವೇ ಸರಿಯಾದ ಪಾಠ ಎನಿಸುತ್ತದೆ. ಸ್ವಬಾಂಧವರು ಆತತಾಯಿಗಳಾಗಿರುವುದರಿಂದ ಅವರ ವಧೆಯು ಶಾಸ್ತ್ರಸಮ್ಮತವಾದುದರಿಂದ 'ಅವರನ್ನು ಕೊಲ್ಲಲು ನಾವು ಅರ್ಹರಲ್ಲ' ಎಂಬ ಅರ್ಜುನನ ಮಾತು ವ್ಯರ್ಥವಾಗುತ್ತದೆ. 'ಸಬಾಂಧವಾನ್' ಎಂಬ ಪಾಠದಲ್ಲಿ ದುರ್ಯೋಧನಾದಿಗಳು ಆತತಾಯಿಗಳಾದ್ದರಿಂದ ಅವರು ವಧಾರ್ಹರಾಗಿದ್ದರೂ ಅವರ ಸಂಬಂಧಿಗಳಾದ (ಬಂಧುಗಳಾದ) ಭೀಷ್ಮ-ದ್ರೋಣರು ಆತತಾಯಿಗಳಲ್ಲ, ಆದುದರಿಂದ ಸಬಾಂಧವರಾದ ದುರ್ಯೋಧನಾದಿಗಳನ್ನು ಕೊಲ್ಲಲು ನಾವು ಅರ್ಹರಲ್ಲ ಎಂಬ ಅರ್ಜುನನ ಮಾತು ಸಮಂಜಸವಾಗುತ್ತದೆ.

ಭೀಷ್ಮ-ದ್ರೋಣಾದಿಗಳು ಆತತಾಯಿಗಳಲ್ಲದಿದ್ದರೂ, ಆತತಾಯಿಗಳಾದ ದುರ್ಯೋಧನಾದಿಗಳ ಸಂಬಂಧವು ಅವರಿಗಿರುವುದರಿಂದ ಅವರೂ ವಧಾರ್ಹರಾಗಿದ್ದಾರಷ್ಟೇ. ಆದ್ದರಿಂದ ಅವರನ್ನೂ (ಭೀಷ್ಮ ದ್ರೋಣಾದಿಗಳನ್ನೂ) ಏಕೆ ಕೊಲ್ಲಬಾರದು ? ಎಂಬ ಪ್ರಶ್ನೆಗೆ ಅರ್ಜುನನು 'ಸ್ವಜನಂ ಹಿ' ಎಂಬ ಶ್ಲೋಕ ಭಾಗದಿಂದ ಉತ್ತರಿಸುತ್ತಾನೆ ! ಸ್ಯಾಮ= ಆಗುತ್ತೇವೆ. ನಮಗೂ ಅವರು ಬಂಧುಗಳು. ಬಂಧುಗಳನ್ನು ಕೊಂದದ್ದರಿಂದ ನಾವು ಹೇಗೆ ಸುಖಿಗಳಾದೇವು ? ಅವರ ದರ್ಶನ , ಸ್ಪರ್ಶನ , ಸಂಭಾಷಣ ಮುಂತಾದವುಗಳಿಂದ ವಂಚಿತರಾಗುವುದರಿಂದ (ರಹಿತರಾಗುವುದರಿಂದ) ನಮಗೆ ಹೇಗೆ ತಾನೇ ಸುಖ ಉಂಟಾದೀತು ? ಎಂದು ಅರ್ಜುನನ ಅನಿಸಿಕೆ || 37 ||

## ಕುಲಕ್ಷಯದ ದುಷ್ಪರಿಣಾಮಗಳು

**ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ || 38 ||**

**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ || 39 ||**

**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಸ್ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ || 40 ||**

**ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ || 41 ||**

**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥ 42 ॥**

**ಅರ್ಥ** – (ವಸ್ತುತಃ) ವಾಸ್ತವಿಕವಾಗಿ ಈ ಕೌರವರು ರಾಜ್ಯದ ಲೋಭದಿಂದ ವಿವೇಕವನ್ನೇ ಕಳೆದುಕೊಂಡವರಾಗಿ, ಕುಲಕ್ಷಯದಿಂದ ಆಗಬಹುದಾದ ಹಾನಿಯನ್ನಾಗಲೀ, ಮಿತ್ರದ್ರೋಹದಿಂದ ಆಗಬಹುದಾದ ಪಾಪವನ್ನಾಗಲೀ ತಿಳಿಯದವರಾಗಿದ್ದಾರೆ. ॥ 38॥

**ಕುತ ಏವಂಬುದ್ಧ್ಯಾ ತೇ ನ ನಿವೃತ್ತಾ ಇತ್ಯತ ಆಹ– ಯದ್ಯಪೀತಿ ॥ ಏತೇ= ದುರ್ಯೋಧನಾದಯಃ ರಾಜ್ಯಲೋಭೇನೋಪಹತಚೇತಸಃ= ನಷ್ಟಧರ್ಮ-ಜ್ಞಾನಾಃ ದೋಷಂ = ಪಾತಕಂ ನ ಪಶ್ಯಂತಿ । ಯದ್ಯಪಿ ॥ 38 ॥**

**ಅನುವಾದ** - ಯುದ್ಧದ ನಂತರ ಆಗಬಹುದಾದ ಅನರ್ಥವನ್ನು ತಿಳಿದು ಎದುರಾಳಿಗಳು ಏಕೆ ಯುದ್ಧದಿಂದ ನಿವೃತ್ತರಾಗುತ್ತಿಲ್ಲ ? ಎಂಬ ಪ್ರಶ್ನೆಗೆ ಅರ್ಜುನನು '**ಯದ್ಯಪಿ**' ಎಂಬ ಶ್ಲೋಕದಿಂದ ಉತ್ತರಿಸುತ್ತಾನೆ. ಈ ದುರ್ಯೋಧನಾದಿಗಳು ರಾಜ್ಯದ ಲೋಭದಿಂದ **ಉಪಹತಚೇತಸಃ** = ಧರ್ಮಬುದ್ಧಿಯನ್ನು ಕಳೆದುಕೊಂಡಿದ್ದಾರೆ . ಆದ್ದರಿಂದಲೇ **ದೋಷಂ**= ಮುಂದೆ ಆಗಬಹುದಾದ ಅನರ್ಥಗಳನ್ನು ತಿಳಿಯದವರಾಗಿದ್ದಾರೆ. ॥ 38 ॥

ಜನಾರ್ದನನೇ ! ಕುಲಕ್ಷಯದಿಂದ ಉಂಟಾಗಬಹುದಾದ ಹಾನಿಯು ಏನೆಂಬುದನ್ನು ಚೆನ್ನಾಗಿ ತಿಳಿಯಬಲ್ಲ ನಮ್ಮಿಂದ, ಈ ಪಾಪಕಾರ್ಯದಿಂದ ಹಿಂಜರಿಯಬೇಕು ಎಂದು ಆಲೋಚಿಸದಿರಲು ಹೇಗೆ ಸಾಧ್ಯ ? ॥ 39 ॥

**ತಥಾಽಪಿ ಹೇ ಜನಾರ್ದನ = ಜನನರಹಿತಸಂಸಾರಾರ್ದನ-ಕುಲಕ್ಷಯ-ಕೃತಂ ದೋಷಂ ಪ್ರಪಶ್ಯದ್ಭಿರಸ್ಮಾಭಿಃ ಅಸ್ಮಾದ್ದೋಷಾನ್ನಿವರ್ತಿತುಂ ಕಥಂ ನ ಜ್ಞೇಯಮ್ ॥ 39 ॥**

**ಅನುವಾದ - ತಥಾಽಪಿ** = ಆದರೂ ಕೂಡ, **ಹೇ ಜನಾರ್ದನ** = ಜನನ ರಹಿತನೇ ಮತ್ತು ಸಂಸಾರವನ್ನು ನಾಶಪಡಿಸುವವನೇ ! ಕುಲಕ್ಷಯದಿಂದ ಉಂಟಾಗಬಲ್ಲ ಅನರ್ಥ ಏನೆಂಬದನ್ನು ಚೆನ್ನಾಗಿ ತಿಳಿಯಬಲ್ಲ ನಮ್ಮಿಂದ 'ಈ ಪಾಪಕಾರ್ಯದಿಂದ ಹಿಂಜರಿಯಬೇಕು'. ಎಂದು ತಿಳಿಯದಿರಲು ಹೇಗೆ ಸಾಧ್ಯ ? ॥ 39 ॥

ಕುಲಕ್ಷಯವು ಉಂಟಾದಾಗ ಅನಾದಿ ಪರಂಪರಾಗತವಾದ ಕುಲೋಚಿತ ಧರ್ಮಗಳು (ಸನಾತನ ಧರ್ಮಗಳು) ನಾಶವಾಗುತ್ತವೆ. ಕುಲಧರ್ಮವು ನಾಶವಾದಾಗ ಅಧರ್ಮವೇ ಅಳಿದುಳಿದ ಎಲ್ಲ ಕುಲವನ್ನೂ ಆವರಿಸಿಬಿಡುತ್ತದೆ. ॥ 40 ॥

**ಕಃ ಕುಲಕ್ಷಯಕೃತೋ ದೋಷ ಇತ್ಯತ ಆಹ– ಕುಲಕ್ಷಯ ಇತಿ ॥ ಸನಾತನಾಃ= ಪರಂಪರಾಪ್ರಾಪ್ತಾಃ ಕುಲಧರ್ಮಾಃ= ಕ್ಷತ್ರಿಯಾದಿಕುಲಧರ್ಮಾಃ । ಉತ ಶಬ್ದೋಽಪ್ಯರ್ಥೇ । ಅವಶಿಷ್ಟಂ ಕೃತ್ಸ್ನಮಪಿ ಕುಲಮಧರ್ಮೋಽಭಿಭವತಿ= ಕುಲಂ ಅಧರ್ಮಾಕ್ರಾಂತಂ ಭವತಿ ॥ 40॥**

**ಅನುವಾದ –** ಕುಲಕ್ಷಯದಿಂದ ಉಂಟಾಗಬಹುದಾದ ದೋಷವಾದರೂ ಯಾವುದು ? ಎಂಬ ಪ್ರಶ್ನೆಗೆ '**ಕುಲಕ್ಷಯ**' ಎಂಬ ಶ್ಲೋಕದಿಂದ ಅರ್ಜುನನು ಉತ್ತರಿಸುತ್ತಾನೆ. **ಸನಾತನಾಃ** = ಪರಂಪರಾಗತವಾದ, **ಕುಲಧರ್ಮಾಃ** = ಕ್ಷತ್ರಿಯ, ವೈಶ್ಯ, ಶೂದ್ರ ಮೊದಲಾದ ವರ್ಣಧರ್ಮಗಳು '**ಉತ**' ಎಂಬ ಶಬ್ದಕ್ಕೆ 'ಅಪಿ' ಎಂಬ ಅರ್ಥ. '**ಕೃತ್ಸ್ನಮಪಿ**' ಎಲ್ಲ ಉಳಿದ ಕುಲವನ್ನು ಅಧರ್ಮವು **ಅಭಿಭವತಿ** ಅಂದರೆ ಅಧರ್ಮಾಕ್ರಾಂತ ವಾಗುತ್ತದೆ. ॥ 40 ॥

ಕೃಷ್ಣನೇ ! ಅಧರ್ಮವು ಕುಲದಲ್ಲಿ ಆವರಿಸಿದಾಗ ಕುಲಸ್ತ್ರೀಯರು ಕೆಡುತ್ತಾರೆ. ಸ್ತ್ರೀಯರು ಕೆಟ್ಟಾಗ ವರ್ಣಸಾಂಕರ್ಯವು ಉಂಟಾಗುತ್ತದೆ. ॥ 41 ॥

**ವಾರ್ಷ್ಣೇಯ = ವೃಷ್ಣಿಕುಲೋದ್ಭವ ॥ 41 ॥**

**ಅನುವಾದ– ವಾರ್ಷ್ಣೇಯ**= ವೃಷ್ಣಿವಂಶದಲ್ಲಿ ಯಾದವರ ಕುಲದಲ್ಲಿ ಜನಿಸಿದವನೇ ॥ 41 ॥

ಜಾತಿಸಾಂಕರ್ಯದಿಂದ ಕುಲನಾಶಕರಿಗೂ, ಕುಲಕ್ಕೂ ಏಕಕಾಲದಲ್ಲಿ ನರಕವೇ ಆಗುತ್ತದೆ. ಈ ಕುಲನಾಶಕರ ಪಿತೃಗಳು ಪಿಂಡಪ್ರದಾನ, ಜಲತರ್ಪಣ ಮುಂತಾದವುಗಳಿಂದ ರಹಿತರಾಗಿ ನರಕದಲ್ಲಿ ಬೀಳುತ್ತಾರೆ. ಇದು ನಿಶ್ಚಯ. ॥ 42 ॥

**ಕುಲಸ್ಯ ಚೇತಿ ಪುತ್ರಪೌತ್ರಾದಿಸಂತಾನಸ್ಯ ಚೇತ್ಯರ್ಥಃ । ಏಷಾಂ ಕುಲಘ್ನಾನಾಂ ಪಿತರಃ ಲುಪ್ತಪಿಂಡಾಃ ಲುಪ್ತೋದಕಕ್ರಿಯಾಶ್ಚ ಸಂತಃ ನರಕೇ ಪತಂತಿ ॥ 42 ॥**

**ಅನುವಾದ – ಕುಲಸ್ಯ ಚೇತಿ** = ಪುತ್ರ ಪೌತ್ರಾದಿ ಸಂತಾನವೂ ಕೂಡ ನರಕವನ್ನು ಹೊಂದುತ್ತದೆ. ಈ ಕುಲನಾಶಕರ ಪಿತೃಗಳು ಪಿಂಡರಹಿತರಾಗಿ ತರ್ಪಣಾದಿಗಳಿಂದಲೂ ರಹಿತರಾಗಿ ಅಧಃ ಪತನ ಹೊಂದುತ್ತಾರೆ. ॥ 42 ॥

**ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥ 43 ॥**

**ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥ 44 ॥**

**ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।**
**ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥ 45 ॥**

**ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥ 46 ॥**

**ಅರ್ಥ –** ವರ್ಣಸಾಂಕರ್ಯಕ್ಕೆ ಕಾರಣಗಳಾದ ಕುಲನಾಶಕರ ಈ ಅಪರಾಧಗಳಿಂದ (ದೋಷಗಳಿಂದ) ಶಾಶ್ವತವಾದ ಜಾತಿಧರ್ಮಗಳೂ ಮತ್ತು ಕುಲಾಚಾರಗಳೂ ಹಾಳಾಗುತ್ತವೆ ॥ 43 ॥

ಜನಾರ್ದನನೇ ! ಕುಲಜಾತಿ ಧರ್ಮಗಳನ್ನೆಲ್ಲ ಕಳೆದುಕೊಂಡ ಮನುಷ್ಯರಿಗೆ ನರಕವಾಸವು ತಪ್ಪದೇ ಉಂಟಾಗುತ್ತದೆ ಎಂದು ಕೇಳಿದ್ದೇವೆ. ॥ 44 ॥

ರಾಜ್ಯಸುಖದ ಲೋಭದಿಂದ ನಾವು ಈಗ ನಮ್ಮ ಬಂಧುಜನರನ್ನು ಕೊಲ್ಲಲು (ಹೊರಟಿದ್ದೇವೆ) (ಸಜ್ಜಾಗಿದ್ದೇವೆ) ಉದ್ಯುಕ್ತರಾಗಿದ್ದೇವೆ. ಮಹತ್ತರವಾದ ಈ ಪಾಪಕೃತ್ಯ ವನ್ನೆಸಗಲು ನಾವು ಮುಂದಾಗಿದ್ದೇವೆ. ಅಯ್ಯೋ ಕೃಷ್ಣ! ॥ 45 ॥

ಯಾವ ರೀತಿಯ ಪ್ರತೀಕಾರವನ್ನೂ ಮಾಡದೇ, ಶಸ್ತ್ರವನ್ನೂ ಧಾರಣೆ ಮಾಡದೇ ಸುಮ್ಮನೇ ನಿಂತಿರುವ ನನ್ನನ್ನು ಶಸ್ತ್ರಪಾಣಿಗಳಾದ ಕೌರವರು ಯುದ್ಧದಲ್ಲಿ ಕೊಂದರೆ ಅದು ನನಗೆ ಕ್ಷೇಮಕರವಾದೀತು. ॥ 46 ॥

**ಉಕ್ತದೋಷಮುಪಸಂಹರತಿ – ದೋಷೈರಿತಿ ದ್ವಾಭ್ಯಾಮ್ । ಜಾತಿಧರ್ಮಾಃ= ಕ್ಷತ್ರಿಯತ್ವಾದಿ ಜಾತಿಪ್ರಯುಕ್ತಾ ಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ= ಪರಂಪರಾ ಪ್ರಾಪ್ತಾಃ ॥ 43 ॥**

**ಅನುವಾದ –** **'ದೋಷೈಃ'** ಎಂಬ ಶ್ಲೋಕದಿಂದ ಆರಂಭಿಸಿ ಎರಡು ಶ್ಲೋಕಗಳಿಂದ ಹೇಳಿದ (ಯುದ್ಧ ನಡೆದರೆ ಆಗಬಹುದಾದ) ದೋಷಗಳನ್ನು ಉಪಸಂಹಾರ ಮಾಡುತ್ತಾನೆ. **ಜಾತಿ ಧರ್ಮಾಃ** = ಕ್ಷತ್ರಿಯತ್ವ ಮುಂತಾದ ಜಾತಿ ನಿಮಿತ್ತವಾದ ಧರ್ಮಗಳು ಮತ್ತು ಕುಲಧರ್ಮಗಳು. **ಶಾಶ್ವತಾಃ** = ಪರಂಪರಾಪ್ರಾಪ್ತವಾದವು ॥ 43 ॥

**ಉತ್ಸನ್ನಕುಲಧರ್ಮಾಣಾಂ ಉತ್ಸನ್ನಜಾತಿಧರ್ಮಾಣಾಂ ಚೇತ್ಯಪಿ ಜ್ಞೇಯಮ್ । ಅನುಶುಶ್ರುಮ 'ಪ್ರಾಯಶ್ಚಿತ್ತಮಕುರ್ವಾಣಾಃ ಪಾಪೇಷು ನಿರತಾ ನರಾಃ । ಅಪಶ್ಚಾತ್ತಾಪಿನಃ ಕಷ್ಟಾನ್ ನಿರಾಯಾನ್ ಯಾಂತಿ ದಾರುಣಾನ್' ಇತ್ಯಾದಿ ವದದ್ಭಿರ್ವೃದ್ಧೈಃ ಶ್ರುತವಂತಃ ಸ್ಮಃ ॥ 44 ॥**

**ಅನುವಾದ** - ನಷ್ಟವಾದ ಕುಲಧರ್ಮ ಉಳ್ಳವರಿಗೆ ಅಂದರೆ ಕುಲಧರ್ಮಗಳನ್ನು ನಾಶ ಪಡಿಸಿಕೊಂಡವರಿಗೆ ಮತ್ತು ಜಾತಿಧರ್ಮಗಳನ್ನು ನಾಶಪಡಿಸಿಕೊಂಡವರಿಗೆ (ನರಕದಲ್ಲಿ ವಾಸವು ಉಂಟಾಗುತ್ತದೆ)**ಅನುಶುಶ್ರುಮ** = 'ತಾವು ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳದೇ, ಪಶ್ಚಾತ್ತಾಪವನ್ನೂ ಪಡದೇ , ಪಾಪಕರ್ಮಗಳಲ್ಲಿಯೇ ನಿರತರಾದ ಮನುಜರು ಘೋರವಾದ ನರಕಗಳನ್ನು ಹೊಂದುತ್ತಾರೆ. ಇವೇ ಮೊದಲಾದ ಮಾತುಗಳನ್ನು ಹಿರಿಯರಿಂದ ಕೇಳಿದವರಾಗಿದ್ದೇವೆ. ॥ 44 ॥

**ಏವಂ ಬಂಧುವಧಸ್ಯ ದೋಷಹೇತುತ್ವಾಧ್ಯವಸಾಯೇನ ಸಂತಪ್ಯ-ಮಾನೋಽರ್ಜುನ ಆಹ- ಅಹೋ ಬತೇತಿ ॥ ರಾಜ್ಯಸುಖ ಲೋಭೇನ ಸ್ವಜನಂ ಹಂತುಂ ವಯಮುದ್ಯತಾ ಇತಿ ಯತ್ತದೇತನ್ಮಹತ್ಪಾಪಂ ಕರ್ತುಂ ವ್ಯವಸಿತಾ = ನಿಶ್ಚಯವಂತೋ ವಯಮ್ । ಅಹೋ ಬತ = ಮಹಾಕಷ್ಟಮಿತಿ ॥ 45 ॥**

**ಅನುವಾದ** - ಈ ರೀತಿಯಾಗಿ ಬಂಧುಗಳ ವಧವು ಅನೇಕ ಅನರ್ಥಗಳಿಗೆ ಕಾರಣವಾಗುವುದರಿಂದ ಯುದ್ಧದ ಬಗ್ಗೆ ಪರಿತಪಿಸುತ್ತಿರುವ ಅರ್ಜುನನು ತನ್ನ ಸಂತಾಪವನ್ನು '**ಅಹೋ ಬತ**' ಎಂಬ ಶ್ಲೋಕದಿಂದ ಹೇಳುತ್ತಾನೆ. ರಾಜ್ಯಸುಖದ ಲೋಭದಿಂದ ನಮ್ಮವರನ್ನು ಕೊಲ್ಲಲು ನಾವು ಉದ್ಯುಕ್ತರಾಗಿದ್ದೇವೆ. ಎಂದರೆ ಮಹತ್ತರವಾದ ಪಾಪವನ್ನು ಮಾಡಲು ನಾವು ನಿಶ್ಚಯಿಸಿದ್ದೇವೆ. ಅಯ್ಯೋ ಇದು ಮಹಾಕಷ್ಟ ! ॥ 45 ॥

**ಏವಂ ಸಂತಪ್ತಃ ಸನ್ಮೃತಿಮೇವಾರ್ಥಯಮಾನ ಆಹ- ಯದೀತಿ ॥ ಅಕೃತಪ್ರತೀಕಾರಮಶಸ್ತ್ರಂ ತೂಷ್ಣೀಮ್ ಆಸೀನಂ ಮಾಂ ಯದಿ ಶಸ್ತ್ರಪಾಣಯೋ ಧಾರ್ತರಾಷ್ಟ್ರಾ ರಣೇ ಹನ್ಯುಸ್ತರ್ಹಿ ತದ್ಧನನಂ ಮೇ ಕ್ಷೇಮತರಮ್ = ಅತ್ಯಂತ ಹಿತಮೇವ ಭವೇತ್ । ಬಂಧುವಧ ದೋಷಾಭಾವಾದ್ರಣೇ ಹನನೇನ ಗತಿಸಂಭವಾಚ್ಚೇತಿ ಭಾವಃ ॥ 46 ॥**

**ಅನುವಾದ** - ಈ ರೀತಿ ಸಂತಾಪಗೊಂಡ ಅರ್ಜುನನು, ಮರಣವನ್ನೇ ಅಪೇಕ್ಷಿಸುವವನಾ

'ಯದಿ' ಎಂಬ ಶ್ಲೋಕವನ್ನು ಹೇಳಿದನು. ಪ್ರತೀಕಾರವನ್ನೇ ಮಾಡದಿರುವ ಶಸ್ತ್ರಗ್ರಹಣ ಮಾಡದೇ ಸುಮ್ಮನೇ ನಿಂತಿರುವ ನನ್ನನ್ನು ಶಸ್ತ್ರಧಾರಿಗಳಾದ (ಎದುರಾಳಿಗಳು) ದುರ್ಯೋಧನಾದಿಗಳು ಯುದ್ಧರಂಗದಲ್ಲಿ ಕೊಂದರೂ ಆ ನನ್ನ ಸಾವು ನನಗೆ , ಕ್ಷೇಮತರಂ = ಅತ್ಯಂತ ಹಿತಕರವೇ ಆಗುತ್ತದೆ (ಆದೀತು) ಆ ರೀತಿ ಸತ್ತರೆ ಬಂಧುಗಳನ್ನು ಕೊಂದ ಪ್ರಯುಕ್ತ ದೋಷವು ನನಗೆ ಬರುವುದಿಲ್ಲ. ರಣರಂಗದಲ್ಲಿ ಸತ್ತದ್ದರಿಂದ ಸದ್ಗತಿಯೂ ನನಗೆ ದೊರೆಯುತ್ತದೆ ಎಂದು ಅರ್ಜುನನ ಅಭಿಪ್ರಾಯ ll 46 ll

## ಚೆಲ್ಲಿದನು ಬಿಲ್ಲು - ಬಾಣಗಳ

**ಸಂಜಯ ಉವಾಚ –**

**ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ll 47 ll**

*ll ಓಂ ತತ್ಸದಿತಿ ಶ್ರೀಮದ್‌ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ*
*ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಅರ್ಜುನವಿಷಾದಯೋಗೋ ನಾಮ*
*ಪ್ರಥಮೋಽಧ್ಯಾಯಃ ll*

**ಅರ್ಥ** – ಸಂಜಯ ಹೇಳಿದನು- ಅರ್ಜುನನು ಹೀಗೆ ಹೇಳಿ, ದುಃಖದಿಂದ ಉದ್ವಿಗ್ನವಾದ ಮನಸ್ಸುಳ್ಳವನಾಗಿ ಎದೆಗುಂದಿ ಬಿಲ್ಲುಬಾಣಗಳನ್ನು ಕೆಳಗಿಟ್ಟು ಆ ರಣರಂಗದಲ್ಲಿ ರಥದ ಮಧ್ಯದಲ್ಲಿ ಕುಳಿತು ಬಿಟ್ಟನು. ll 47 ll

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ*
*ಭಗವದ್ಗೀತೆಯಲ್ಲಿ ಅರ್ಜುನವಿಷಾದಯೋಗವೆಂಬ*
*ಮೊದಲನೆಯ ಅಧ್ಯಾಯವು ಮುಗಿಯಿತು.*

**ತತಃ ಕಿಂ ಜಾತಮಿತಿ ಧೃತರಾಷ್ಟ್ರಹಾರ್ದಂ ಪರಿಹರತಿ ಸಂಜಯ ಏವಮಿತಿ । ಸಂಖ್ಯೇ=ರಣೇ, ರಥೋಪಸ್ಥೇ=ರಥಮಧ್ಯೇ ಉಪಾವಿಶತ್ । ಕಥಂ? ಶೋಕೇನ ಕಂಪಿತಚಿತ್ತಃ ಸನ್ ಸಶರಂ ಚಾಪಂ ವಿಸೃಜ್ಯೇತಿ ll47ll**

ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ
ಪ್ರಥಮೋಽಧ್ಯಾಯಃ

**ಅನುವಾದ** – ಮುಂದೆ ಏನು ನಡೆಯಿತು ? ಎಂಬ ಧೃತರಾಷ್ಟ್ರನ ಹಾರ್ದಿಕ ಪ್ರಶ್ನೆಯನ್ನು ಸಂಜಯನು 'ಏವಮುಕ್ತ್ವಾ' ಎಂಬ ಶ್ಲೋಕದಿಂದ ಪರಿಹರಿಸುತ್ತಾನೆ. **ಸಂಖ್ಯೇ** = ಯುದ್ಧಭೂಮಿಯಲ್ಲಿ (ರಣರಂಗದಲ್ಲಿ) **ರಥೋಪಸ್ಥೇ** = ರಥದ ಮಧ್ಯದಲ್ಲಿ ಕುಳಿತುಕೊಂಡನು. ಹೇಗೆ ಕುಳಿತನೆಂದರೆ ದುಃಖದಿಂದ ನಡುಗಿದ ಬುದ್ಧಿಯುಳ್ಳವನಾಗಿ (ಉದ್ವಿಗ್ನಗೊಂಡ ಮನಸ್ಸುಳ್ಳವನಾಗಿ) ಬಾಣದಿಂದ ಕೂಡಿದ ಬಿಲ್ಲನ್ನು ಕೆಳಗಿಟ್ಟು ಕುಳಿತೇ ಬಿಟ್ಟನು. ॥ 47 ॥

*ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ*
*ಮೊದಲನೆಯ ಅಧ್ಯಾಯವು ಮುಗಿಯಿತು.*

# ಅಧ್ಯಾಯ - 2

**ಸಂಜಯ ಉವಾಚ -**

**ತಂ ತಥಾ ಕೃಪಯಾಽಽವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ॥ 1 ॥**

**ಅರ್ಥ** – ಹೀಗೆ ಅನುಕಂಪದಿಂದ ಕೂಡಿದ, ನೀರು ತುಂಬಿ ಕದಡಿದ ಕಣ್ಣುಗಳುಳ್ಳ, ವಿಷಾದಕ್ಕೊಳಗಾದ ಅರ್ಜುನನಿಗೆ ಮಧುಸೂದನನು ಈ ಮುಂದಿನ ಮಾತನ್ನು ಹೇಳಿದನು.

## ಗೀತಾವಿವೃತಿ

**'ತತಃ ಕಿಂ ಜಾತಮ್' ಇತಿ ಧೃತರಾಷ್ಟ್ರಸ್ಯಾಪೇಕ್ಷಾಯಾಂ ಸಂಜಯ ಉವಾಚ- ತಂ ತಥೇತಿ ।**

**ಅನುವಾದ** - ಅರ್ಜುನ ಯುದ್ಧ ಮಾಡುವುದಿಲ್ಲ ಎಂದು ಶಸ್ತ್ರತ್ಯಾಗ ಮಾಡಿದ ಮೇಲೆ ಏನಾಯಿತು ? ಎಂಬ ಧೃತರಾಷ್ಟ್ರನ ಜಿಜ್ಞಾಸೆಗೆ ಉತ್ತರವಾಗಿ ಸಂಜಯನು **'ತಂ ತಥಾ'** ಎಂದು ಮುಂತಾಗಿ ಹೇಳಿದ.

**ಉಕ್ತದಿಶಾ ಕೃಪಯಾಽಽವಿಷ್ಟಮೇವಂ ವಿಷಣ್ಣಂ ಅರ್ಜುನಂ ಭಗವಾನುವಾಚ 'ಕುತಃ' ಇತ್ಯಾದಿ ದ್ವಾಭ್ಯಾಂ ಶ್ಲೋಕಾಭ್ಯಾಮ್ ॥ 1 ॥**

**ಅನುವಾದ** - ಪ್ರಥಮಾಧ್ಯಾಯದಲ್ಲಿ ಹೇಳಿದಂತೆ ಅನುಕಂಪದಿಂದ ಕೂಡಿದ ಹಾಗೂ ವಿಷಾದಕ್ಕೆ ಒಳಗಾದ ಅರ್ಜುನನಿಗೆ ಭಗವಾನ್ ಶ್ರೀಕೃಷ್ಣನು ಮುಂದಿನ **'ಕುತಃ'** ಇತ್ಯಾದಿ ಎರಡು ಶ್ಲೋಕಗಳಿಂದ ಉತ್ತರ ಕೊಟ್ಟಿರುತ್ತಾನೆ . ॥ 1 ॥

**ವಿವರಣೆ** - ವಿಷಾದವೆಂದರೆ ಬಾಂಧವರ ಮೇಲಿನ ಮೋಹದಿಂದಾದ ದುಃಖ ಪ್ರಯುಕ್ತವಾದ ಮನೋದೌರ್ಬಲ್ಯ ॥ 1 ॥

## ಏಳು ಎದ್ದೇಳು - ಬಿಡು ಚಿಂತೆಯ

**ಶ್ರೀ ಭಗವಾನ್ ಉವಾಚ ।**

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ** **॥ 2 ॥**

**ಅರ್ಥ** – ಎಲೈ ಅರ್ಜುನನೇ ! ಇಂತಹ ವಿಷಮ ಸನ್ನಿವೇಶದಲ್ಲಿ ಈ ಮೋಹವೆಂಬ ಕಶ್ಮಲವು ನಿನಗೆ ಹೇಗೆ ಅಂಟಿಕೊಂಡಿತು ? ಇಂತಹ ಮೋಹವು ಸಜ್ಜನರಿಗೆ ಯೋಗ್ಯವಾದುದಲ್ಲ. ಇದು ಸ್ವರ್ಗಾದಿ ಪರಲೋಕಪ್ರಾಪ್ತಿಗೆ ವಿರೋಧಿಯಾದುದು . ನಿನ್ನ ಅಪಕೀರ್ತಿಗೆ ಕಾರಣವಾದುದು.

**ಹೇ ಅರ್ಜುನ ಕುತೋ ಹೇತೋಸ್ತ್ವಾ = ತ್ವಾಂ, ವಿಷಮೇ = ಸಂಕಟೇ, ಇದಂ ಕಶ್ಮಲಂ ಉಪಸ್ಥಿತಮ್= ಅಯಂ ಮೋಹಃ ಪ್ರಾಪ್ತಃ । ಯತಃ ಆರ್ಯೈರಸೇವಿತಮ್, ಅಸ್ವರ್ಗ್ಯಂ = ಸ್ವರ್ಗವಿರೋಧಿ, ಅಯಶಸ್ಕರಂ ಚ ॥ 2 ॥**

**ಅನುವಾದ** - ಎಲೈ ಅರ್ಜುನನೇ, ಯಾವ ಕಾರಣಕ್ಕಾಗಿ **ತ್ವಾ** = ನಿನಗೆ ಈ, **ವಿಷಮೇ**= ಸಂಕಟದ ಸನ್ನಿವೇಶದಲ್ಲಿ ಇಂತಹ ಮಾನಸಿಕ ಕಲ್ಮಷವು ಉಂಟಾಯಿತು ? ಅಂದರೆ, ಇಂತಹ ಬಂಧುಮೋಹ ಉಂಟಾಯಿತು ? ಏಕೆಂದರೆ, ಇದು ಸಜ್ಜನರಿಗೆ ಯೋಗ್ಯವಲ್ಲ. **ಅಸ್ವರ್ಗ್ಯ**= ಸ್ವರ್ಗಪ್ರಾಪ್ತಿಗೆ ವಿರೋಧಿಯಾದುದು , ನಿನಗೆ ಅಪಯಶಸ್ಸನ್ನು ಕೊಡುವಂತಹುದು ಕೂಡ . ॥ 2 ॥

**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ** **॥ 3 ॥**

**ಅರ್ಥ** - ಪಾರ್ಥನೆ ! ಹೆದರಿಕೆಯನ್ನು ಕಿತ್ತೊಗೆ . ಇದು ನಿನಗೆ ತಕ್ಕುದಲ್ಲ. ಈ ಪುಕ್ಕಲುತನವನ್ನು ಕಿತ್ತೊಗೆದು ಎದ್ದೇಳು. ನೀನು ಶತ್ರುಭಯಂಕರನಲ್ಲವೇ?

**ತಸ್ಮಾತ್ ಕ್ಲೈಬ್ಯಂ = ಕಾತರ್ಯಂ, ಮಾಸ್ಮ ಗಮಃ = ನೈವ ಪ್ರಾಪ್ನು ಹಿ । ಹೇ ಪಾರ್ಥ, ಏತದ್ ಕ್ಲೈಬ್ಯಂ ತ್ವಯಿ ನೋಪಪದ್ಯತೇ= ಯೋಗ್ಯಂ ನ ಭವತಿ । ಕ್ಷುದ್ರಂ= ಲಾಘವಕರಂ, ಹೃದಯದೌರ್ಬಲ್ಯಂ = ಕಾತರ್ಯಂ ತ್ಯಕ್ತ್ವಾ ಉತ್ತಿಷ್ಠ = [1]ಉತ್ಥಾಯ ಸನ್ನದ್ಧೋ ಭವ । ಹೇ ಪರಂತಪ, ಪರಂ ಶತ್ರುಂ ತಾಪಯತೀತಿ ಶತ್ರುತಾಪನ । 'ದ್ವಿಷತ್ಪರಯೋಸ್ತಾಪೇಃ' ಇತಿ ಖಚಿ 'ಖಿತ್ಯನವ್ಯಯಸ್ಯ' ಇತಿ ಮುಮಾಗಮಃ ॥**

---

1. ಯುದ್ಧಾಯ ಇತಿ ಕ್ವಚಿತ್

**ಅನುವಾದ** - ಆದಕಾರಣ **ಕ್ಲೈಬ್ಯಂ** = ಕಾತರತೆಯನ್ನು , **ಮಾ ಸ್ಮ ಗಮಃ** = ಹೊಂದಬೇಡ, ಎಲೆ ಪೃಥಾಸುತನೇ, ಈ ಕಾತರತೆಯು ನಿನ್ನಲ್ಲಿ, **ನೋಪಪದ್ಯತೇ** = ಯುಕ್ತವಾದುದಲ್ಲ. **ಕ್ಷುದ್ರಂ**= ನಿನ್ನ ವ್ಯಕ್ತಿತ್ವಕ್ಕೆ ಕುಂದು ತರುವ **ಹೃದಯದೌರ್ಬಲ್ಯಂ** = ಪುಕ್ಕಲುತನವನ್ನು ಬಿಟ್ಟು , **ಉತ್ತಿಷ್ಠ**= ಎದ್ದೇಳು, ಎಲೈ **ಪರಂತಪ**- **ಪರಂ**= ಶತ್ರುಗಳಿಗೆ, **ತಾಪಯತಿ**= ನೋವನ್ನು ಉಂಟು ಮಾಡುತ್ತಾನೆ, ಆದ ಕಾರಣ ಪರಂತಪ ಎಂದರೆ ಶತ್ರುತಾಪಕ.

'**ಪರಂತಪ** ' ಶಬ್ದದ ನಿಷ್ಪತ್ತಿ - '**ತಪ** ' ಎಂಬ ಧಾತುವಿಗೆ '**ದ್ವಿಷತ್ ಪರಯೋಃ ತಾಪೇಃ**' ಎಂಬ ಸೂತ್ರದಿಂದ '**ಖಚ್**' ಪ್ರತ್ಯಯ ಬರುತ್ತದೆ. '**ಖಿತಿ ಅನವ್ಯಯಸ್ಯ**' ಎಂಬ ಸೂತ್ರದಿಂದ '**ಪರ**'ಶಬ್ದಕ್ಕೆ '**ಮುಮ್**' ಎಂಬ ಆಗಮ ಬರುತ್ತದೆ. ಆಗ '**ಪರಂತಪ**' ಎಂಬ ರೂಪ ಸಿದ್ಧವಾಗುತ್ತದೆ. ('**ಪರತಪ**' ಎಂಬ ರೂಪದ ಬದಲು '**ಪರಂತಪ**' ಎಂಬ ರೂಪ ಹೇಗಾಯಿತು ಎನ್ನುವ ಜಿಜ್ಞಾಸೆಗೆ ಉತ್ತರವಾಗಿ ರಾಯರು ಈ ವಿವರಣೆ ನೀಡಿರುತ್ತಾರೆ.)

**ಪುನಃ ಸ್ನೇಹಕಾರುಣ್ಯತಯಾ ವ್ಯಾಕುಲೋ ಭಗವದುಕ್ತಂ ಹಿತಮಜಾನನ್**
**ಅರ್ಜುನ ಉವಾಚ – 'ಕಥಮಿತ್ಯಾದಿ ಪಂಚಭಿಃ ಶ್ಲೋಕೈಃ' ॥ 3 ॥**

**ಅನುವಾದ** - ಬಂಧು ಸ್ನೇಹ ಮತ್ತು ಕಾರುಣ್ಯದಿಂದ ದುಃಖಗೊಂಡ ಅರ್ಜುನನು ಶ್ರೀಕೃಷ್ಣ ಹೇಳಿದ ಹಿತವಚನವನ್ನು ಅರ್ಥಮಾಡಿಕೊಳ್ಳಲಾಗದೆ '**ಕಥಂ ಭೀಷ್ಮಂ**' ಇತ್ಯಾದಿ ಐದು ಶ್ಲೋಕ ಗಳಿಂದ ಶ್ರೀಕೃಷ್ಣನಿಗೆ ಹೇಳುತ್ತಿದ್ದಾನೆ. ॥ 3 ॥

## ಪೂಜ್ಯರೊಡನೆ ಹೇಗೆ ಯುದ್ಧ ?

**ಅರ್ಜುನ ಉವಾಚ –**

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥ 4 ॥**

**ಅರ್ಥ** - ಮಧುನಾಮಕ ದೈತ್ಯಸಂಹಾರಕ ಕೃಷ್ಣ , ನಾನು ಯುದ್ಧದಲ್ಲಿ ಗೌರವಾರ್ಹರಾದ ಭೀಷ್ಮರನ್ನು ದ್ರೋಣರನ್ನು ಬಾಣಗಳಿಂದ ಹೇಗೆ ತಾನೇ ಪ್ರತಿಭಟಿಸಲಿ ?

**ಹೇ ಮಧುದೈತ್ಯಘಾತಕ ಶತ್ರುನಿಬರ್ಹಣ, ಸಂಖ್ಯೇ = ಯುದ್ಧೇ , ಭೀಷ್ಮಂ ದ್ರೋಣಂ ಕಥಮಹಮಿಷುಭಿಃ** = **ಬಾಣೈಃ** ಪ್ರತಿಯೋತ್ಸ್ಯಾಮಿ । **ಕುತಃ** ? **ಯತಸ್ತೌ ಪೂಜಾರ್ಹೌ**= ಪೂಜನೀಯೌ ತತ ಇತಿ ॥ 4 ॥

**ಅನುವಾದ** - ಮಧುದೈತ್ಯಸಂಹಾರಕ ಶತ್ರುನಾಶಕ ಶ್ರೀಕೃಷ್ಣ , **ಸಂಖ್ಯೇ** = ಯುದ್ಧದಲ್ಲಿ

ಭೀಷ್ಮರನ್ನು ದ್ರೋಣರನ್ನೂ ಹೇಗೆ ನಾನು , **ಇಷುಭಿಃ** = ಬಾಣಗಳಿಂದ , ಪ್ರತಿಭಟಿಸಲಿ? 'ಏಕೆ ಅದರಲ್ಲೇನು ತೊಂದರೆ ?' ಏಕೆಂದರೆ, ಅವರಿಬ್ಬರೂ , **ಪೂಜಾರ್ಹೌ** = ಪೂಜ್ಯರಾಗಿರುತ್ತಾರೆ ಆದಕಾರಣ (ಅವರನ್ನು ನಾನು ಪ್ರತಿಭಟಿಸಲಾರೆ.)

**ನನು ಚೈತದಹನನೇ ರಾಜ್ಯಾಪ್ರಾಪ್ತೇಃ ದೇಹನಿರ್ವಾಹೋ ನ ಸ್ಯಾದಿತ್ಯತ ಆಹ– ಗುರೂನಿತಿ ॥**

**ಅನುವಾದ** – ಅವರನ್ನು ಕೊಲ್ಲದೇ ಹೋದರೆ ರಾಜ್ಯ ಸಿಗುವುದಿಲ್ಲವಾದುದರಿಂದ ನಿಮ್ಮ ಜೀವನನಿರ್ವಾಹ ಆಗಲಿಕ್ಕಿಲ್ಲ. ಅದಕ್ಕೆ ಅರ್ಜುನ 'ಗುರೂನಹತ್ವಾ' ಎಂಬ ಶ್ಲೋಕದಲ್ಲಿ ಉತ್ತರ ಹೇಳುತ್ತಾನೆ.

**ಗುರೂನಹತ್ವಾ ಹಿ ಮಹಾನುಭಾವಾನ್**
**ಶ್ರೇಯೋ ಭೋಕ್ತುಂ ಭೈಕ್ಷಮಪೀಹ ಲೋಕೇ ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ**
**ಭುಂಜೀಯ ಭೋಗಾನ್‌ರುಧಿರಪ್ರದಿಗ್ಧಾನ್ ॥ 5 ॥**

**ಅರ್ಥ** – ಭಕ್ತ್ಯಾದಿಸದ್ಗುಣಭರಿತರಾದ ಗುರುಗಳನ್ನು ಕೊಲ್ಲುವುದಕ್ಕಿಂತ ಈ ಸಂಸಾರದಲ್ಲಿ ಭಿಕ್ಷೆಬೇಡಿ ತಿನ್ನುವುದೇ ಲೇಸು. ರಾಜ್ಯಸಂಪತ್ತನ್ನು ಬಯಸುವ ಗುರುಹಿರಿಯರನ್ನು ಕೊಂದರೆ, ಅವರ ರಕ್ತಸಿಕ್ತವಾದ ಈ ಲೌಕಿಕ ಸೌಭಾಗ್ಯವನ್ನು ನಾನು ಅನುಭವಿಸಬೇಕಾಗಿ ಬಂದೀತು.

**ಮಹಾನುಭಾವಾನ್= ಭಗವದ್‌ಭಕ್ತ್ಯಾದಿಗುಣಸಂಪನ್ನಾನ್ ದ್ರೋಣಾದಿ-ಗುರೂನಹತ್ವಾ ಇಹ ಲೋಕೇ ಭೈಕ್ಷಂ= ಭಿಕ್ಷಯೋಪಲಬ್ಧಂ ಅನ್ನಂ ಭೋಕ್ತುಂ ಶ್ರೇಯಃ= ವರಮ್ । ಪಾರತ್ರಿಕದುಃಖಾಭಾವಾದಿತಿ ಭಾವಃ । ಹಿ= ಯತೋಽತೋ ನ ಯೋತ್ಸ್ಯಮೀತ್ಯನ್ವಯಃ ।**

**ಅನುವಾದ** – **ಮಹಾನುಭಾವಾನ್** = ಭಕ್ತ್ಯಾದಿಗುಣಭರಿತರಾದ ದ್ರೋಣನೇ ಮುಂತಾದ ಗುರುಗಳನ್ನು ಕೊಲ್ಲದೆ, ಈ ಸಂಸಾರದಲ್ಲಿ **ಭೈಕ್ಷಂ** = ಭಿಕ್ಷಾಟನೆಯಿಂದ ದೊರಕುವ ಆಹಾರವನ್ನು, ತಿಂದು ಜೀವಿಸುವುದು, **ಶ್ರೇಯಃ** = ವಾಸಿ. ಹೀಗೆ ಮಾಡುವುದರಿಂದ (ಇಹದಲ್ಲಿ ಸ್ವಲ್ಪ ಕಷ್ಟವೆನಿಸಿದರೂ) ಪರಲೋಕದಲ್ಲಿ ದುಃಖವು ಬರಲಾರದು.

ಶ್ಲೋಕದಲ್ಲಿ 'ಹಿ' ಎಂದರೆ ಯಾವ ಕಾರಣದಿಂದ ಎಂದರ್ಥ. 'ಯಾವ ಕಾರಣದಿಂದಾಗಿ ಪಾರತ್ರಿಕ ದುಃಖ ಬರಲಾರದೋ ಆ ಕಾರಣದಿಂದ ದ್ರೋಣಾದಿಗಳ ಜೊತೆ ನಾನು ಹೋರಾಡುವುದಿಲ್ಲ' ಎಂದು ಅರ್ಜುನನ ಭಾವ.

**ನ ಕೇವಲಂ ತೇಷಾಂ ಹನನೇ ಪಾರತ್ರಿಕದುಃಖಮ್ । ಕಿಂತು ಇಹಾಪಿ ಅತಿದುಃಖಮಿತ್ಯಾಹ- ಹತ್ವೇತಿ ॥**

**ಅನುವಾದ -** ದ್ರೋಣಾದಿಗಳನ್ನು ಕೊಲ್ಲುವುದರಿಂದ ಪಾರತ್ರಿಕ ದುಃಖ ಮಾತ್ರವಲ್ಲ, ಇಹದಲ್ಲೂ ಅದರಿಂದ ಅತಿ ದುಃಖವೇ ಆಗುವುದು ಎಂದು **'ಹತ್ವಾರ್ಥಕಾಮಾಂಸ್ತು'** ಎಂಬ ಉತ್ತರಾರ್ಧದಿಂದ ಅರ್ಜುನ ಹೇಳುತ್ತಾನೆ.

**[1]ಅರ್ಥಂ ಕಾಮಯಂತ ಇತ್ಯರ್ಥಕಾಮಾಸ್ತಾನ್ ಗುರೂನ್ ಹತ್ವಾ ತೈರ್ಭುಜ್ಯಮಾನಾಂಸ್ತಾನೇವ ಭೋಗಾನ್ ತದ್ರುಧಿರೇಣ ಪ್ರದಿಗ್ಧಾನ್= ಪ್ರಕರ್ಷೇಣ ಲಿಪ್ತಾನ್, ತದೀಯಾಸನೇಷ್ವೇವೋಪವಿಶ್ಯ [2]ಇಹ ಭುಂಜೀಯ= ಅನುಭವೇಯಮ್ । ತದೇತತ್ ಪರಲೋಕದುಃಖಾದತಿಶಯಿತಂ ದುಃಖಮಿತಿ ಭಾವಃ ॥ 5 ॥**

**ಅನುವಾದ -** ಐಹಿಕ ದ್ರವ್ಯಸಂಪತ್ತನ್ನು ಬಯಸುವವರು ಅರ್ಥಕಾಮರು. ಅಂತಹ ಗುರುಹಿರಿಯರನ್ನು ಕೊಂದು ಅವರಿಂದ ಭೋಗಿಸಲ್ಪಡುವ ಅದೇ ಅಧಿಕಾರ, ಐಶ್ವರ್ಯಗಳನ್ನು ಅವರ ರಕ್ತದಿಂದ **ಪ್ರದಿಗ್ಧಾನ್** = ಚೆನ್ನಾಗಿ ತೊಯ್ದವುಗಳನ್ನು ಅವರು ಕುಳಿತ ಆಸನಗಳಲ್ಲೇ ಕುಳಿತು ಇಹದಲ್ಲಿ, **ಭುಂಜೀಯ** = ಅನುಭವಿಸಿಯೇನು. ಈ ಪರಿಸ್ಥಿತಿ ಪರಲೋಕದಲ್ಲಾಗುವ ದುಃಖಕ್ಕಿಂತಲೂ ಹೆಚ್ಚಿನ ದುಃಖ ಎಂದು ಅರ್ಜುನನ ಭಾವ. ॥ 5 ॥

**ಪಾಪಮಂಗೀಕೃತ್ಯ ಯುದ್ಧಕರಣೇಽಪಿ ಜಯಃ ಸಂದಿಗ್ಧ ಏವೇತ್ಯಾಹ- ನ ಚೈತದಿತಿ ॥**

**ಅನುವಾದ -** ಹಿರಿಯರ ಹತ್ಯೆಯಿಂದ ಪಾಪವು ಬಂದರೆ ಬರಲಿ ಎಂದು ಛಲದಿಂದ ಯುದ್ಧ ಮಾಡಿದರೂ ಯುದ್ಧದಿಂದ ಲಭಿಸುವ ಜಯವು ಸಂದಿಗ್ಧವಾದುದು ಎಂದು ಮುಂದಿನ ಶ್ಲೋಕಗಳಿಂದ ಅರ್ಜುನ ಹೇಳುತ್ತಿದ್ದಾನೆ.

**ನ ಚೈತದ್ವಿದ್ಮಃ ಕತರನ್ನೋ ಗರೀಯೋ**
**ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ।**
**ಯಾನೇವ ಹತ್ವಾ ನ ಜಿಜೀವಿಷಾಮ-**
**ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥ 6 ॥**

---

1.ಅರ್ಥೇ ಧನಾದೌ ಕಾಮೋ ಯೇಷಾಂ ತೇ ತಥಾ । ಘ.

2. ಜೀವಲೋಕೇ. ಘ.

**ಅರ್ಥ** - ಈ ಯುದ್ಧದಿಂದ ನಮಗೇನು ಹೆಚ್ಚಿನ ಲಾಭವಾದೀತು ಎಂದು ತಿಳಿಯಲಾರೆವು. ಏಕೆಂದರೆ, ಇದರಿಂದ ಕೌರವರನ್ನು ನಾವು ಗೆಲ್ಲಬಹುದು ಅಥವಾ ನಮ್ಮನ್ನೇ ಅವರು ಗೆಲ್ಲಬಹುದು. (ಸೋಲು ಗೆಲುವು ಅನಿಶ್ಚಿತ) ಯಾರ..ನ್ನು ಕೊಂದು ನಾವು ಬದುಕಿ ಉಳಿಯಲಾರೆವೋ ಅಂತಹ ಧೃತರಾಷ್ಟ್ರನ ಮಕ್ಕಳು ನಮ್ಮ ಮುಂದೆ ನಿಂತಿದ್ದಾರೆ.

**ದ್ವಯೋರ್ಮಧ್ಯೇ ನೋಽಸ್ಮಾಕಂ ಕತರತ್= ಕಿನ್ನಾಮ ಗರೀಯಃ ಅಧಿಕತರಂ ಭವಿಷ್ಯತೀತಿ ನ ವಿದ್ಮಃ । ತದೇವ ದ್ವಯಮಾಹ- ಯದ್ವೇತಿ ॥ ಏತಾನ್ ವಯಂ ಜಯೇಮ ಜೇಷ್ಯಾಮಃ, ಯದಿ ವಾ ನೋ = ಅಸ್ಮಾನೇತೇ ಜಯೇಯುಃ= ಜೇಷ್ಯಂತೀತಿ ।**

**ಅನುವಾದ**– ಎರಡರ ಮಧ್ಯದಲ್ಲಿ (ಸೋಲು – ಗೆಲುವುಗಳಲ್ಲಿ) ನಃ = ನಮಗೆ, **ಕತರತ್**= ಯಾವುದು, **ಗರೀಯಃ** = ಹೆಚ್ಚು ಆದೀತು ಎಂದು, ತಿಳಿಯಲಾರೆ.

ಆ ಎರಡು ಯಾವುದು ? ಎಂದು '**ಯದ್ವಾ ಜಯೇಮ**' ಎಂಬ ಗೀತೆಯ ಸಾಲಿನಲ್ಲಿ ಹೇಳಲಾಗಿದೆ. ಅದೇನೆಂದರೆ, ಇವರನ್ನು ನಾವು ಗೆಲ್ಲುತ್ತೇವೋ ಅಥವಾ, ನಃ = ನಮ್ಮನ್ನೇ ಅವರು, **ಜಯೇಯುಃ** = ಗೆಲ್ಲುತ್ತಾರೋ, ಎಂದು.

**ವಿವರಣೆ** - ಅರ್ಜುನ ಹೇಳುತ್ತಾನೆ - ಯುದ್ಧದಲ್ಲಿ ಕೌರವರನ್ನು ನಾವು ಗೆಲ್ಲುತ್ತೇವೋ ಅಥವಾ ಅವರೇ ನಮ್ಮನ್ನು ಗೆಲ್ಲುತ್ತಾರೋ ಎನ್ನುವುದು ಸಂದಿಗ್ಧ . ಒಂದು ವೇಳೆ ನಾವೇ ಗೆದ್ದರೂ ಬಂಧುಗಳನ್ನು ಕೊಂದು ಲಭಿಸುವ ಜಯವು ಸಂತೋಷವನ್ನು ಉಂಟು ಮಾಡೀತೇ ?

**ಕಿಂಚಾಸ್ಮಾಕಂ ಜಯೋಽಪಿ ಪರಾಜಯ ಏವ ಫಲತ (ಬುಧ್ಯತೇ) ಇತ್ಯಾಹ- ಯಾನೇವೇತಿ ॥ ಯಾನೇವ ಹತ್ವಾ ಜೀವಿತುಂ ನೇಚ್ಛಾಮಃ ತ ಏವ ಧಾರ್ತರಾಷ್ಟ್ರಾಃ ಸಮ್ಮುಖೇಽವಸ್ಥಿತಾಃ ತಸ್ಮಾತ್ ॥ 6 ॥**

**ಅನುವಾದ** – ಜಯ – ಪರಾಜಯಗಳು ಸಂದಿಗ್ಧವಾಗಿವೆ. ಅಷ್ಟೇ ಅಲ್ಲ, ನಮಗೆ ಜಯ ವಾದರೂ ಅದರ ಪರಿಣಾಮ ಪರಾಜಯವೇ. ಅದು ಹೇಗೆ ? ಅದನ್ನು 'ಯಾನೇವ ಹತ್ವಾ' ಎಂಬ ವಾಕ್ಯದಲ್ಲಿ ಹೇಳಲಾಗಿದೆ.

ಯಾರನ್ನು ಕೊಂದು ನಾವು ಬದುಕಲು ಬಯಸಲಾರೆವೋ ಅಂತಹ ಧೃತರಾಷ್ಟ್ರನ ಮಕ್ಕಳೇ ನಮ್ಮ ಮುಂದಿದ್ದಾರೆ. ಆದ್ದರಿಂದ ನಮಗೆ ಜಯವೂ ಪರಾಜಯವೇ ಆಗುತ್ತದೆ. ॥ 6 ॥

## ಶರಣಾಗಿಹೆ ಕೃಷ್ಣ ! ಕಾಪಿಡು ಎನ್ನ

**ಕಾರ್ಪಣ್ಯದೋಷೋಪಹತಸ್ವಭಾವಃ**
**ಪೃಚ್ಛಾಮಿ ತ್ವಾ ಧರ್ಮಸಮ್ಮೂಢಚೇತಾಃ ।**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ**
**ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥ 7 ॥**

**ಅರ್ಥ** – ಬಂಧುಗಳಲ್ಲಿ ಕಾರುಣ್ಯ ಎಂಬ ದೋಷದಿಂದಾಗಿ ನನ್ನ ಕ್ಷತ್ರಿಯ ಸಹಜ ಸ್ವಭಾವವು ಮರೆಯಾಗಿದೆ. ಧರ್ಮದ ಬಗ್ಗೆ ಸಂದೇಹಗೊಂಡ ನಾನು ನಿನ್ನನ್ನು ಕೇಳುತ್ತಿದ್ದೇನೆ- ಭಿಕ್ಷಾಟನೆ, ಯುದ್ಧ ಇವೆರಡರಲ್ಲಿ ಯಾವುದು ಒಳ್ಳೆಯದೋ ಅದನ್ನು ನಿರ್ಧರಿಸಿ ಹೇಳು. ನಾನು ನಿನ್ನ ಶಿಷ್ಯನಾಗಿದ್ದೇನೆ. ಶರಣಾಗತನಾದ ನನಗೆ ಸರಿಯಾಗಿ ಬುದ್ಧಿಯನ್ನು ಹೇಳು.

**ಕಾರ್ಪಣ್ಯದೋಷೇಣ= ಏತಾನ್ ಹತ್ವಾ ಕಥಂ ಜೀವಿಷ್ಯಾಮ, ಇತಿ ಕೃಪಣತಾ-ದೋಷೇಣಾಭಿಭೂತಶೌರ್ಯಲಕ್ಷಣಸ್ವಭಾವಃ, ಧರ್ಮಸಮ್ಮೂಢಚೇತಾಃ- ಧರ್ಮೇ ಸಮ್ಮೂಢಂ=ಸಂದಿಗ್ಧಂ ಚೇತೋ ಯಸ್ಯ ಸ ತಥೋಕ್ತಃ, ತಾದೃಶೋಽಹಂ, ತ್ವಾ= ತ್ವಾಂ ಪೃಚ್ಛಾಮಿ । ಯಚ್ಛ್ರೇಯಃ ಸ್ಯಾದ್ಭಿಕ್ಷಾಟನಯುದ್ಧಯೋರ್ಮಧ್ಯೇ ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ತನ್ಮೇ ಬ್ರೂಹಿ । ಕಿಂಚಾಹಂ ತೇ ಶಿಷ್ಯಃ= ಶಾಸನಾರ್ಹಃ। ಅತಃ ತ್ವಾಂ ಪ್ರಪನ್ನಂ = ಶರಣಾಗತಂ ಮಾಂ ಶಾಧಿ = ಶಿಕ್ಷಯ ॥ 7 ॥**

**ಅನುವಾದ** – ಕಾರ್ಪಣ್ಯ ದೋಷದಿಂದ ಅರ್ಥಾತ್ 'ಇವರನ್ನು ಕೊಂದು ಹೇಗೆ ಬದುಕಿ ಉಳಿಯೋಣ' ಎಂಬ ಕಾರುಣ್ಯ ದೋಷದಿಂದ ಮರೆಯಾದ ಶೌರ್ಯ ಎಂಬ ಕ್ಷತ್ರಿಯ ಸ್ವಭಾವವುಳ್ಳವನಾಗಿ, **ಧರ್ಮಸಮ್ಮೂಢಚೇತಾಃ**= ಧರ್ಮದಲ್ಲಿ , **ಸಮ್ಮೂಢಂ** = ಸಂದಿಗ್ಧವಾದ, **ಚೇತಃ** = ಬುದ್ಧಿಯು ಯಾರಿಗಿದೆಯೋ ಅಂತಹವನಾಗಿ ನಾನು, **ತ್ವಾ** = ನಿನ್ನನ್ನು ಕೇಳುತ್ತಿದ್ದೇನೆ . (ಧರ್ಮದ ಬಗ್ಗೆ ಸಂದೇಹಗೊಂಡು ನಿನ್ನಲ್ಲಿ ಕೇಳುತ್ತಿದ್ದೇನೆ)

**ಯಚ್ಛ್ರೇಯಃ ಸ್ಯಾತ್** = ಭಿಕ್ಷಾಟನೆ – ಯುದ್ಧ ಇವೆರಡರ ಮಧ್ಯದಲ್ಲಿ ಯಾವುದರಿಂದ ನನಗೆ ಶ್ರೇಯಸ್ಸಾದೀತು ? ಅದನ್ನು ನಿರ್ಧಾರವಾಗಿ ನನಗೆ ತಿಳಿಸು.

ಅಷ್ಟೇ ಅಲ್ಲದೇ, ನಾನು ನಿನ್ನ , **ಶಿಷ್ಯಃ** = ಆದೇಶಕ್ಕೆ ಅರ್ಹನಾದವನು. ಆದ್ದರಿಂದ ನಿನಗೆ , **ಪ್ರಪನ್ನಂ** = ಶರಣಾಗತನಾದ ನನ್ನನ್ನು , **ಶಾಧಿ** = ಆದೇಶಿಸು .॥ 7 ॥

**ತ್ವಮೇವ ವಿಚಾರ್ಯ ಯದ್ಯುಕ್ತಂ ತತ್ಕುರ್ವಿತ್ಯತ ಆಹಾರ್ಜುನಃ- ನ ಹೀತಿ ॥**

**ಅನುವಾದ** – 'ಅರ್ಜುನ, ನೀನೇ ವಿಚಾರ ಮಾಡಿ ಯಾವುದು ಯುಕ್ತವೋ ಅದನ್ನು ಮಾಡು'

ಎಂದು ಕೃಷ್ಣನು ಅರ್ಜುನನಿಗೆ ಹೇಳಿದರೆ ಅದಕ್ಕೆ ಉತ್ತರವನ್ನು ಮುಂದಿನ 'ನ ಹಿ ಪ್ರಪಶ್ಯಾಮಿ' ಎಂಬ ಶ್ಲೋಕದಲ್ಲಿ ಅರ್ಜುನ ಹೇಳಿದ್ದಾನೆ.

**ನ ಹಿ ಪ್ರಪಶ್ಯಾಮಿ ಮಮಾಪನುದ್ಯಾದ್**
**ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್ ।**
**ಅವಾಪ್ಯ ಭೂಮಾವಸಪತ್ನಮೃದ್ಧಂ**
**ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥ 8 ॥**

**ಅರ್ಥ** - ನಾನು , ಇಹದಲ್ಲಿ ಶತ್ರುಗಳೇ ಇಲ್ಲದ , ಸಮೃದ್ಧವಾದ ರಾಜ್ಯವನ್ನೂ , ಸತ್ತಮೇಲೆ ಶತ್ರುಸಂಹಾರದ ಫಲವಾಗಿ ದೇವತೆಗಳ ಆಧಿಪತ್ಯವನ್ನೂ ಪಡೆಯಬಹುದು. ಹೀಗೆ ಬೇಕಾದುದೆಲ್ಲವನ್ನೂ ಹೊಂದಿದರೂ ಇಂದ್ರಿಯಗಳನ್ನು ಒಣಗಿಸುವ ನನ್ನ ಈ ದುಃಖವು ಹೇಗೆ ಪರಿಹಾರವಾದೀತೋ ಅದು ನನಗೆ ತಿಳಿಯದಾಗಿದೆ.

**ಇಂದ್ರಿಯಾಣಾಂ ಉಚ್ಛೋಷಣಮ್ = ಅತಿಶೋಷಕರಂ, ಮದೀಯಂ ಶೋಕಂ ಯತ್ಕರ್ಮಾಪನುದ್ಯಾತ್ = ಅಪನಯೇತ್ತದಹಂ ನ ಪ್ರಪಶ್ಯಾಮಿ । ರಾಜ್ಯಲಾಭಹೇತುಯುದ್ಧಕರ್ಮೈವ ತಾದೃಶಮಿತ್ಯತ ಆಹ- ಅವಾಪ್ಯೇತಿ ॥**

**ಅನುವಾದ** - ಇಂದ್ರಿಯಗಳನ್ನು , **ಉಚ್ಛೋಷಣಂ** = ಅತಿಯಾಗಿ ಒಣಗಿಸುವ, (ಇಂದ್ರಿಯಗಳ ಶಕ್ತಿಯನ್ನು ಹೀರುವ) ನನ್ನ ದುಃಖವನ್ನು ಯಾವ ಕರ್ತವ್ಯವು **ಅಪನುದ್ಯಾತ್** = ನಾಶಗೊಳಿಸೀತೋ ಅಂತಹ ಕರ್ತವ್ಯವನ್ನು ನಾನು ತಿಳಿಯದಾಗಿರುವೆನು.

ರಾಜ್ಯದ ಪ್ರಾಪ್ತಿಗೆ ಕಾರಣವಾದ ಯುದ್ಧವೆಂಬ ಕರ್ತವ್ಯವೇ ನಿನ್ನ ದುಃಖವನ್ನು ನಾಶಗೊಳಿಸಬಲ್ಲದು, ಎಂದರೆ ಅದಕ್ಕೆ ಅರ್ಜುನನ ಉತ್ತರ - **'ಅವಾಪ್ಯ'** ಮುಂತಾಗಿದೆ.

**ಯದ್ಯಪಿ ಭೂಮೌ ನಿಷ್ಕಂಟಕಂ ರಾಜ್ಯಂ ಪ್ರಾಪ್ಸ್ಯಾಮಿ, ತಥಾ ಸುರಾಣಾಂ = ದೇವಾನಾಮಾಧಿಪತ್ಯಂ ಚ ಪ್ರಾಪ್ಸ್ಯಾಮಿ । ಏವಮಭೀಷ್ಟಂ ಸರ್ವಮವಾಪ್ಯಾಪಿ ಶೋಕಾಪನೋದನೋಪಾಯಂ ನ ಪ್ರಪಶ್ಯಾಮೀತ್ಯರ್ಥಃ । ಹತ್ವಾರ್ಥ- ಕಾಮಾನಿತಿ ಉಕ್ತದಿಶಾ ಸರ್ವಸ್ಯಾಪಿ ದುಃಖಹೇತುತ್ವಾದಿತಿ ಭಾವಃ ॥ 8 ॥**

**ಅನುವಾದ** - ವಸ್ತುತಃ ನಾನು ಭೂಮಿಯಲ್ಲಿ ನಿಷ್ಕಂಟಕವಾದ ರಾಜ್ಯವನ್ನು ಹೊಂದಿಯೇನು . ಅದರಂತೆ, **ಸುರಾಣಾಂ** = ದೇವತೆಗಳ, ಒಡೆತನವನ್ನೂ ಹೊಂದಿಯೇನು. ಹೀಗೆ ಅಭೀಷ್ಟವಾದ ಎಲ್ಲವನ್ನೂ ಹೊಂದಿದರೂ ನನ್ನ ದುಃಖವು ಉಪಶಮನಗೊಳ್ಳಬಹುದಾದ

ಉಪಾಯವನ್ನು ಕಾಣದಾಗಿರುವೆನು, ಎಂದು ಅರ್ಥ. ಏಕೆಂದರೆ, ಹಿಂದೆ **'ಹತ್ವಾರ್ಥ-ಕಾಮಾನ್...'** ಎಂಬ ಶ್ಲೋಕದಲ್ಲಿ ಹೇಳಿರುವಂತೆ ಇಹದಲ್ಲಿ ರಾಜ್ಯ , ಪರದಲ್ಲಿ ಸ್ವರ್ಗ ಇವೆಲ್ಲವೂ ದುಃಖಕ್ಕೇ ಕಾರಣವಾದೀತು ದುಃಖಪರಿಹಾರಕ್ಕಲ್ಲ, ಎಂದು ಅರ್ಜುನನ ಭಾವ. ॥ 8 ॥

**ತತಃ ಕಿಮಕರೋದರ್ಜುನ ಇತಿ ಧೃತರಾಷ್ಟ್ರಾಕಾಂಕ್ಷಾಂ ನಿರಾಹ ಸಂಜಯಃ- ಏವಮುಕ್ತ್ವಾ ಇತಿ ॥**

**ಅನುವಾದ -** ಇಷ್ಟು ಹೇಳಿ ಅರ್ಜುನನು ಏನು ಮಾಡಿದ ? ಎಂಬ ಧೃತರಾಷ್ಟ್ರನ ಜಿಜ್ಞಾಸೆಯನ್ನು ಸಂಜಯನು **'ಏವಮುಕ್ತ್ವಾ'** ಇತ್ಯಾದಿ ಶ್ಲೋಕದಲ್ಲಿ ಹೇಳಿದಂತೆ ನಿರೂಪಿಸಿ ತಣಿಸಿದ. ಇದನ್ನು ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ.

**ಸಂಜಯ ಉವಾಚ ।**

**ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।**
**ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ ॥ 9 ॥**

**ಅರ್ಥ -** ಶತ್ರುಸಂಹಾರಕನೂ ನಿದ್ದೆಯನ್ನು ಗೆದ್ದವನೂ ಆದ ಅರ್ಜುನನು ಸರ್ವೇಂದ್ರಿಯ ಪ್ರೇರಕನಾದ ಶ್ರೀಕೃಷ್ಣನಿಗೆ ಇಷ್ಟು ಹೇಳಿ 'ನಾನು ಯುದ್ಧ ಮಾಡಲಾರೆ' ಎಂದು ಹೇಳಿ ನಿಷ್ಕ್ರಿಯನಾದ.

**ಹೃಷೀಕೇಶಂ ಸರ್ವೇಂದ್ರಿಯಪ್ರೇರಕಂ, ಗುಡಾಕೇಶೋ= ಜಿತನಿದ್ರಃ, ಪರಂತಪಃ = ಶತ್ರುತಾಪನಃ, ಗೋವಿಂದಂ- ಗಾಃ= ವೇದವಾಚಃ ಪ್ರತಿಪಾದಕತ್ವೇನ ವಿಂದತೇ= ಲಭತ ಇತಿ ಗೋವಿಂದಃ ತಮ್ । ಹೇತ್ವಾಶ್ಚರ್ಯೇ । ಮಹಾ-ಧೈರ್ಯಾದಿ ಗುಣವತೋಽಪ್ಯೇವಂ ಬುದ್ಧಿರ್ಜಾತೇತಿ ॥ 9 ॥**

**ಅನುವಾದ - ಹೃಷೀಕೇಶಂ** = ಸರ್ವೇಂದ್ರಿಯ ಪ್ರೇರಕನಾದ ಶ್ರೀಕೃಷ್ಣನನ್ನು , **ಗುಡಾಕೇಶಃ**= ನಿದ್ರೆಯನ್ನು ಗೆದ್ದಿರುವ (ಗುಡಾಕಾ = ನಿದ್ದೆ) **ಪರಂತಪಃ** = ಶತ್ರುಗಳಿಗೆ ದುಃಖವನ್ನು ಕೊಡುವ ಅರ್ಜುನನು.

**ಗೋವಿಂದಂ** - **ಗಾಃ** = ವೇದದ ವಾಕ್ಯಗಳನ್ನು , **ವಿಂದತೇ** = ಪ್ರತಿಪಾದಕಗಳನ್ನಾಗಿ ಹೊಂದುತ್ತಾನೆ, ಆದ್ದರಿಂದ ಅವನು ಗೋವಿಂದನೆನಿಸಿದ್ದಾನೆ. (ಸಕಲ ವೇದ ವಾಕ್ಯಗಳಿಂದಲೂ ಪ್ರತಿಪಾದ್ಯ ಶ್ರೀಕೃಷ್ಣ ಎಂದು ಭಾವ)

ಶ್ಲೋಕದಲ್ಲಿರುವ 'ಹ' ಶಬ್ದವು 'ಆಶ್ಚರ್ಯ' ಎಂಬ ಅರ್ಥವನ್ನು ಸೂಚಿಸುತ್ತದೆ. ಅತ್ಯಂತ ಸ್ಥೈರ್ಯಶಾಲಿಯಾದ ಅರ್ಜುನನಿಗೂ ಇಂತಹ ಬುದ್ಧಿ ಬಂತು. ಇದು ಆಶ್ಚರ್ಯವಾದುದು ಎಂದು ಭಾವ. ॥ 9 ॥

**ತತಃ ಕಿಂ ಜಾತಮಿತ್ಯತ ಆಹ- ತಮುವಾಚೇತಿ ॥**

**ಅನುವಾದ** - ಮುಂದೇನಾಯಿತು ಎನ್ನುವುದನ್ನು 'ತಮುವಾಚ ' ಎಂಬ ಶ್ಲೋಕದಲ್ಲಿ ಹೇಳಲಾಗಿದೆ.

**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥ 10 ॥**

**ಅರ್ಥ** - ಪರಿಹಾಸಕರವಾದ ಮಾತನ್ನು ಅರ್ಜುನನು ಆಡುತ್ತಿದ್ದಾನೆ ಎನ್ನುವುದನ್ನು ಸೂಚಿಸುವಂತೆ ಶ್ರೀಕೃಷ್ಣನು ಮುಗುಳ್ನಗುತ್ತಾ ಎರಡು ಸೇನೆಗಳ ಮಧ್ಯದಲ್ಲಿ ವಿಷಾದಕ್ಕೊಳಗಾದ ಅರ್ಜುನನಿಗೆ ಹೀಗೆ ಹೇಳಿದನು .

**ಹೇ ಭಾರತೇತಿ ಧೃತರಾಷ್ಟ್ರ ಸಂಬೋಧನಮ್ । ಪ್ರಹಸನ್ನಿವೇತಿ ಪರಿಹಾಸಕರವಾಕ್ಯೋಕ್ತಿದ್ಯೋತಕಹಾಸಸ್ಯ ಸೂಚನಾಯೇವಶಬ್ದಃ ।**

**ಅನುವಾದ** - ಈ ಶ್ಲೋಕದಲ್ಲಿ 'ಭಾರತ ' ಎಂದು ಸಂಜಯನು ಧೃತರಾಷ್ಟ್ರನಿಗೆ ಮಾಡಿದ ಸಂಬೋಧನೆ (ಹೇ ಧೃತರಾಷ್ಟ್ರನೇ ! ಎಂದರ್ಥ)

'ಪ್ರಹಸನ್ನಿವ ' ಎಂಬಲ್ಲಿರುವ ಇವ ಎಂಬ ಶಬ್ದವು 'ಅರ್ಜುನನು ಇದುವರೆಗೆ ಆಡಿದ ಮಾತುಗಳೆಲ್ಲ ಹಾಸ್ಯಾಸ್ಪದವಾದವುಗಳು ಎಂದು ಸೂಚಿಸುವ ನಗುವನ್ನು ಶ್ರೀಕೃಷ್ಣ ಬೀರಿದ ಎಂಬುದನ್ನು ತಿಳಿಸಿಕೊಡುತ್ತದೆ. ॥ 10 ॥

ಭಗವನ್ಮಾಹಾತ್ಮ್ಯಜ್ಞಾನ ತದ್ಭಕ್ತಿಪೂರ್ವಕಂ ಭಗವದಾರಾಧನರೂಪತಯಾ ಸ್ವವಿಹಿತವೃತ್ತಿತ್ವೇನ ವಾಽನುಷ್ಠೀಯಮಾನೋ ನಾರಾಯಣದ್ವಿಟ್ ತದನುಬಂಧಿ ನಿಗ್ರಹಃ ಕ್ಷತ್ರಿಯಾಣಾಂ ಪರಮೋ ಧರ್ಮಃ । ತಂ ಧರ್ಮಂ ಬಂಧು-ಸ್ನೇಹಾದಧರ್ಮತ್ವೇನೋಕ್ತದಿಶಾ ಶಂಕಮಾನಂ ಅರ್ಜುನಂ ಪ್ರತಿ ಉಕ್ತರೂಪೋ ನಿಗ್ರಹ ಏವ ಪರಮಧರ್ಮಃ, ತದ್ವಿರುದ್ಧಃ ಸರ್ವೋಽಪಿ ಅಧರ್ಮ ಇತಿ ಕೃತ್ಸ್ನಗೀತಾಶಾಸ್ತ್ರೇಣ ಬೋಧಯಿಷ್ಯನ್ ಆದೌ ತಾವದವಿವೇಕೇನ ತವ ಶೋಕ ಇತ್ಯಾಹ- **'ಅಶೋಚ್ಯಾನಿತಿ' ॥ 10 ॥**

**ಅನುವಾದ** – 'ಪರಮಾತ್ಮ ಸರ್ವೋತ್ತಮ' ಎಂಬ ಜ್ಞಾನ ಮತ್ತು ಅವನಲ್ಲಿ ಭಕ್ತಿ ಇವೆರಡನ್ನು ತುಂಬಿಕೊಂಡು, ಭಗವದ್ದ್ವೇಷಿಗಳು ಹಾಗೂ ಅವರಿಗೆ ಸಹಾಯಕರನ್ನು ನಿಗ್ರಹಿಸುವುದು ತಮಗೆ ವಿಹಿತವಾದ ಕರ್ತವ್ಯ ಎಂದು ತಿಳಿದು , ಅಂತಹ ಕರ್ತವ್ಯವನ್ನು ನಿರ್ವಹಿಸುವುದೇ ಕ್ಷತ್ರಿಯರ ಶ್ರೇಷ್ಠವಾದ ಧರ್ಮ. ಆದರೆ, ಅರ್ಜುನ ತನ್ನ ಬಂಧುಗಳ ಮೇಲಿನ ಮಮತೆಯಿಂದ ಅಂತಹ ಧರ್ಮವನ್ನೇ ಅಧರ್ಮ ಎಂದು ಸಂದೇಹಿಸುತ್ತಿದ್ದಾನೆ. ಈ ರೀತಿಯ ಶತ್ರುನಿಗ್ರಹವೇ ಉತ್ತಮ ಕ್ಷತ್ರಿಯಧರ್ಮ, ಅದಕ್ಕೆ ವಿರುದ್ಧವಾದುದೆಲ್ಲವೂ ಅಧರ್ಮ ಎಂಬ ತತ್ತ್ವವೇ ಸಮಗ್ರ ಭಗವದ್ಗೀತೆಯ ತಾತ್ಪರ್ಯ. ಇದನ್ನು ಬೋಧಿಸುವ ಸಲುವಾಗಿ ಶ್ರೀಕೃಷ್ಣನು ಮೊದಲು 'ನಿನ್ನ ಈ ದುಃಖಕ್ಕೆ ಅವಿವೇಕವೇ ಕಾರಣ' ಎಂದು (ಮುಂದಿನ ಶ್ಲೋಕದಲ್ಲಿ) ತಿಳಿಸುತ್ತಿದ್ದಾನೆ. ॥ 10 ॥

## ಇದು ಪ್ರಾಜ್ಞರ ವಾದವಲ್ಲ

**ಶ್ರೀ ಭಗವಾನ್ ಉವಾಚ ।**

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥ 11 ॥**

**ಅರ್ಥ** – ಅರ್ಜುನ ! ನೀನು ಯಾರ ಬಗ್ಗೆ ದುಃಖಿಸುತ್ತಿರುವೆಯೋ ಅವರು ನಿನ್ನ ದುಃಖಕ್ಕೆ ಅರ್ಹರಲ್ಲ. ಅವರ ಕುರಿತು ದುಃಖಪಡುವ ಅಗತ್ಯವಿಲ್ಲ. ನೀನು ಆಡುವ ಮಾತಾವುದೂ ಪ್ರಾಜ್ಞ ಸಮ್ಮತವಲ್ಲ. ಮನಬಂದಂತೆ ಮಾತನಾಡುತ್ತಿರುವೆ. ತಿಳಿದವರಾರೂ, ಬದುಕಿರುವವರ ಬಗ್ಗೆ ಹೇಗೋ ಹಾಗೆಯೇ, ಸಾವಿನಂಚಿನಲ್ಲಿರುವವರ ಬಗ್ಗೆಯೂ ದುಃಖ ಪಡುವುದಿಲ್ಲ.

**ಅಶೋಚ್ಯಾನ್= ಶೋಕಾನರ್ಹಾನ್ ಹೇ ಪಾರ್ಥ ತ್ವಮ್ ಅನ್ವಶೋಚಃ । ಯಾನ್ ತ್ವಂ ಶೋಚಿತವಾನಭೂಸ್ತೇ ನ ಶೋಕಾರ್ಹಾ ಇತಿ ಯಾವತ್ । ಪ್ರಜ್ಞಾವಾದಾಂಶ್ಚ ಭಾಷಸೇ । ಪ್ರಜ್ಞಯೋತ್ಥಾ ವಾದಾಃ ಪ್ರಜ್ಞಾವಾದಾಃ= ಸ್ವಬುದ್ಧಿ-ಮಾತ್ರಪರಿಕಲ್ಪಿತಾ ವಾದಾಃ, ತಾನ್ ಭಾಷಸೇ । ಯಾನ್ ಪ್ರಭಾಷಸೇ ತೇ ಸ್ವಬುದ್ಧಿಮಾತ್ರಪರಿಕಲ್ಪಿತಾ ವಾದಾಃ, ನ ವೃದ್ಧಸಮ್ಮತಾ ಇತಿ ಯಾವತ್ ।**

**ಯದ್ವಾ ಪ್ರಕರ್ಷೇಣ ಜಾನಂತೀತಿ ಪ್ರಜ್ಞಾಃ । 'ಇಗುಪಧಜ್ಞಾಪ್ರೀಕಿರಃ ಕಃ' । ತೇಷಾಮವಾದಾಃ ಪ್ರಜ್ಞಾವಾದಾಃ = ಪ್ರಾಜ್ಞವಿರುದ್ಧವಾದಾಃ ತಾನ್ ಪ್ರಭಾಷಸ ಇತ್ಯರ್ಥಃ । ನ ಹಿ 'ದೃಷ್ಟ್ವೇಮಂ ಸ್ವಜನಂ ಕೃಷ್ಣ' ಇತ್ಯಾದಿ ಅರ್ಜುನವಾಕ್ಯೇಷು ಕಶ್ಚಿತ್ ಪ್ರಾಜ್ಞಸಮ್ಮತವಾದೋಽಸ್ತಿ । ನ ಹಿ ಪ್ರಾಜ್ಞಾ ನಾರಾಯಣದ್ವಿಟ್ ತದನುಬಂಧಿ-ನಿಗ್ರಹಮ್ ಅಧರ್ಮಂ ವದಂತೀತಿ ಭಾವಃ ।**

**ಅನುವಾದ - ಅಶೋಚ್ಯಾನ್** = ಶೋಕಕ್ಕೆ ಅರ್ಹರಲ್ಲದವರ ಬಗ್ಗೆ , ಎಲೈ ಅರ್ಜುನನೇ, ನೀನು ಶೋಕಪಡುತ್ತಿರುವೆ. ಅರ್ಥಾತ್ ಯಾರ ಕುರಿತು ನೀನು ಶೋಕಿಸುತ್ತಿರುವೆಯೋ ಅವರು ವಸ್ತುತಃ ಶೋಕಾರ್ಹರಲ್ಲ ಎಂದು ಭಾವ. **ಪ್ರಜ್ಞಾವಾದಾಂಶ್ಚ ಭಾಷಸೇ**= ಪ್ರಜ್ಞೆಯನ್ನು ಅವಲಂಬಿಸಿ ಆಡಿದ ಮಾತುಗಳು ಪ್ರಜ್ಞಾವಾದಗಳು. ಸ್ವಂತ ಬುದ್ಧಿಯಿಂದ ಕಲ್ಪಿತವಾದ ಮಾತುಗಳು ಎಂದರ್ಥ. ಅಂತಹ ಮಾತುಗಳನ್ನಾಡುತ್ತಿರುವೆ. ಅಂದರೆ, ನೀನೇನು ಆಡುತ್ತಿರುವೆಯೋ ಅದು ನಿನ್ನ ಬುದ್ಧಿಗೆ ತೋಚಿದಂತೆ ಆಡಿದ ಮಾತುಗಳೇ ಹೊರತು, ಜ್ಞಾನಿಗಳಿಗೆ ಸಮ್ಮತವಾದವುಗಳಲ್ಲ ಎಂದು ಅರ್ಥ.

ಅಥವಾ, ಸರಿಯಾಗಿ ತಿಳಿದವರು ಪ್ರಾಜ್ಞರು. 'ಪ್ರ' ಉಪಸರ್ಗದಿಂದ ಕೂಡಿದ 'ಜ್ಞಾ' ಧಾತುವಿಗೆ '**ಇಗುಪಧಜ್ಞಾ-ಪ್ರೀ-ಕಿರಃ ಕಃ**' ಎಂಬ ಸೂತ್ರದಿಂದ 'ಕ' ಪ್ರತ್ಯಯ ಬಂದು '**ಪ್ರಜ್ಞ**' ಎಂಬ ರೂಪವಾಗಿದೆ. ಅಂತಹ ಪ್ರಜ್ಞರು ಆಡದಿರುವ ಮಾತು (ಪ್ರಜ್ಞ + ಅವಾದ) ಅರ್ಥಾತ್ ಜ್ಞಾನಿಗಳಿಗೆ ಅಸಮ್ಮತವಾದ ಮಾತುಗಳು. ಅವುಗಳನ್ನು ನೀನು ಆಡುತ್ತಿರುವಿ ಎಂದರ್ಥ.

ಹೀಗೆಯೇ ಅರ್ಥಮಾಡಬೇಕು. ಹೊರತು, 'ಜ್ಞಾನಿಗಳಾಡುವ ಮಾತನ್ನು ನೀನು ಆಡುತ್ತಿರುವಿ' ಎಂದು ಅರ್ಥವನ್ನು ಮಾಡಬಾರದು. ಏಕೆಂದರೆ,ಈ ಹಿಂದೆ '**ದೃಷ್ಟ್ವೇಮಂ ಸ್ವಜನಂ ಕೃಷ್ಣ** ' ಮುಂತಾಗಿ ಅರ್ಜುನನಾಡಿದ ಮಾತುಗಳು ಪ್ರಾಜ್ಞರಿಗೇನೂ ಸಮ್ಮತವಾದುದಲ್ಲ. ಪ್ರಾಜ್ಞರಾರೂ ಭಗವದ್ದ್ವೇಷಿಗಳು ಹಾಗೂ ಅವರ ಅನುಯಾಯಿಗಳ ನಿಗ್ರಹವನ್ನು ಅಧರ್ಮವೆಂದು ಹೇಳಲಾರರು.

**ನನು ಆಸನ್ನವಿನಾಶಾಸ್ತೇ ಕಥಮಶೋಚ್ಯಾ ಇತ್ಯತ ಆಹ-'ಗತಾಸೂನಿತಿ' ॥ ಪಂಡಿತಾಃ = ಜ್ಞಾನಿನಃ । ಗತಾಸೂನ್ ಆಸನ್ನವಿನಾಶಾನ್ । ಅಗತಾಸೂನ್ ಇವ ಇತ್ಯುಪಮಾರ್ಥಶ್ಚಕಾರಃ । ಜೀವತ ಇವ ತಾನ್ ನಾನುಶೋಚಂತಿ ಯತೋಽತೋ ನ ಶೋಚ್ಯಾಸ್ತ ಇತಿ ತಾನನ್ವಶೋಚಸ್ತ್ವಂ ಇತ್ಯರ್ಥಃ ।**

**ಅನುವಾದ** - ನನ್ನ ಬಂಧುಗಳು ಇನ್ನೇನು ಸಾಯಲಿದ್ದಾರೆ. ಅಂತಹವರ ಬಗ್ಗೆ ದುಃಖ ಪಡಬಾರದು, ಎನ್ನುವುದು ಹೇಗೆ ? ಈ ಪ್ರಶ್ನೆಗೆ – '**ಗತಾಸೂನ್**' ಇತ್ಯಾದಿ ಮಾತುಗಳಲ್ಲಿ ಉತ್ತರವಿದೆ.

**ಪಂಡಿತಾಃ** = ಜ್ಞಾನಿಗಳು, **ಗತಾಸೂನ್** = ಮರಣಸನ್ನಿಹಿತರಾದವರನ್ನು. ಇಲ್ಲಿ 'ಚ ' ಶಬ್ದಕ್ಕೆ 'ಅದರಂತೆ' ಎಂದು ಅರ್ಥ. **ಅಗತಾಸೂನಿವ** = ಜೀವಿಸಿರುವವರ ಬಗ್ಗೆ ಹೇಗೋ ಹಾಗೆ (ಮರಣ ಸನ್ನಿಹಿತರಾದವರ ಬಗ್ಗೆಯೂ ಜ್ಞಾನಿಗಳು ದುಃಖಪಡುವುದಿಲ್ಲ) ಹೀಗಾಗಿ, ನೀನು ದುಃಖಪಡಬಾರದವರ ಬಗ್ಗೆ ದುಃಖಪಡುತ್ತಿರುವಿ. ॥ 11 ॥

**ನನು ಕುತೋ ನ ಶೋಚಂತಿ ? ಕುತಶ್ಚ ಮದೀಯಾ ವಾದಾಃ ಪ್ರಾಜ್ಞಮತ-ವಿರುದ್ಧಾ ಇತಿ ? 'ದೃಷ್ಟ್ವೇಮಂ ಸ್ವಜನಂ ಕೃಷ್ಣ' ಇತ್ಯಾದಿನಾ ಉಪಪತ್ತೇರುಕ್ತತ್ವಾದಿತಿ ಚೇತ್ । ತತ್ಕಿಂ ತೇಷಾಂ ಜೀವನಾಶಾತ್ತವ ಶೋಕ ಉತ ದೇಹನಾಶಾತ್ । ಅಥ ದೇಹಾನ್ಯಾತ್ಮನೋಽಭಾವಾತ್ತದ್ದೇಹನಾಶ ಏವ ತನ್ನಾಶ ಇತಿ । ನಾದ್ಯಃ । ಜೀವಾನಾಂ ಅನಾದಿನಿತ್ಯತ್ವಾದಿತ್ಯಾಹ - ನ ತ್ವೇವೇತಿ ॥**

**ಅನುವಾದ** - ಅರ್ಜುನ ಕೇಳಬಹುದು - 'ಇಂತಹವರ ಬಗ್ಗೆ ಜ್ಞಾನಿಗಳೇಕೆ ದುಃಖ ಪಡುವುದಿಲ್ಲ ? ನನ್ನ ಮಾತುಗಳಾದರೂ ಏಕೆ ಪ್ರಾಜ್ಞಸಮ್ಮತವಲ್ಲ ? ಏಕೆಂದರೆ, '**ದೃಷ್ಟ್ವೇಮಂ ಸ್ವಜನಂ ಕೃಷ್ಣ** ' ಇತ್ಯಾದಿಯಾಗಿ . ನಾನು ನನ್ನ ದುಃಖಕ್ಕೆ ಸಮರ್ಥನೆಯನ್ನು ಕೊಟ್ಟಿರುತ್ತೇನೆ. ಹೀಗಿರುವಾಗ ಅದು ಪ್ರಾಜ್ಞರಿಗೆ ಅಸಮ್ಮತವೆನಿಸುವುದು ಹೇಗೆ ? ಎಂದು.

ಇದಕ್ಕೆ ಶ್ರೀಕೃಷ್ಣನು ಕೇಳುತ್ತಾನೆ - ನಿನಗೆ ಬಂಧುಗಳ ಆತ್ಮನಾಶದ ಬಗ್ಗೆ ಚಿಂತೆಯೋ, ಅಥವಾ ಅವರ ದೇಹನಾಶದ ಬಗ್ಗೆಯೋ ? ಇಲ್ಲವೇ , ದೇಹಬಿಟ್ಟು ಆತ್ಮನ ಅಸ್ತಿತ್ವವೇ ಇಲ್ಲವಾದುದರಿಂದ (ದೇಹವೇ ಆತ್ಮವಾದುದರಿಂದ) ದೇಹನಾಶವೇ ಬಾಂಧವರ ನಾಶವೆಂದೋ ? ಈ ಮೂರರಲ್ಲಿ ಮೊದಲನೆಯ ಕಾರಣ ಸರಿಯಲ್ಲ. ಏಕೆಂದರೆ ಆತ್ಮ ಅನಾದಿ-ನಿತ್ಯ. ಅವನಿಗೆ ಹುಟ್ಟು - ಸಾವು ಎರಡೂ ಇಲ್ಲ. ಇದನ್ನು '**ನ ತ್ವೇವಾಹಂ**' ಎಂಬ ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ. ॥ 11 ॥

## ಆತ್ಮರೆಲ್ಲ ಅಮರರು - ದೇಹನಾಶ ಅಪರಿಹಾರ್ಯ

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥ 12 ॥**

**ಅರ್ಥ** - ನಾನು, ನೀನು , ಈ ಎಲ್ಲಾ ರಾಜಮಹಾರಾಜರು ಹಿಂದೆಂದೂ ಇಲ್ಲವೆಂದಾಗಿಲ್ಲ. ಆದ್ದರಿಂದಲೇ ನಾವಾರೂ ಮುಂದೆಂದೂ ಇಲ್ಲವೆಂದಾಗಲಾರೆವು.

**ಜಾತು = ಕದಾಽಪಿ । ಅಹಂ ನ ನಾಸಂ = ನಾಸಮಿತಿ ನ । ಕಿಂ ತ್ವಾಸಮೇವ । ತ್ವಂ ನ ನಾಸೀಃ । ವಿಪರಿಣಾಮೇನ ಕ್ರಿಯಾಪದಾನ್ವಯಃ । ಅಪಿ ತ್ವಾಸೀರೇವ । ಇಮೇ ಜನಾಧಿಪಾಶ್ಚ ನ ನಾಸನ್ = ಆಸನ್ನೇವ । ಅಹಂ ಯೂಯಂ ಚ ವಯಂ ಸರ್ವೇ ಏವ ಅತಃ ಪರಮ್ = ಅನಂತರಕಾಲೇ ನ ನ ಭವಿಷ್ಯಾಮಃ, ಕಿಂತು ಭವಿಷ್ಯಾಮ ಏವ ।**

**ಅನುವಾದ** - **ಜಾತು** = ಎಂದೆಂದೂ, ನಾನು ಇಲ್ಲವೆಂದು ಆಗಿಲ್ಲ. ಅರ್ಥಾತ್

ಎಂದೆಂದಿಗೂ ಇದ್ದೇ ಇದ್ದೆ. 'ತ್ವಂ' ಎಂಬ ಕರ್ತೃ ಪದಕ್ಕೆ ಅನುಗುಣವಾಗಿ 'ಆಸಂ' ಎಂಬ ಉತ್ತಮ ಪುರುಷ-ಕ್ರಿಯಾಪದವನ್ನು 'ಆಸೀಃ' ಎಂದು ಮಧ್ಯಮಪುರುಷವನ್ನಾಗಿ ಬದಲಾಯಿಸಿಕೊಳ್ಳ ಬೇಕು. 'ನೀನು ಹಿಂದೆ ಇರಲಿಲ್ಲವೆಂದಿಲ್ಲ, ಇದ್ದೇ ಇದ್ದಿ. ಈ ರಾಜ ರು ಹಿಂದೆ ಇರಲಿಲ್ಲವೆಂದಿಲ್ಲ, ಹಿಂದೆಯೂ ಇದ್ದರು.

ನಾನು, ನೀವು, ನಾವೆಲ್ಲರೂ ಮುಂದಿನ ಕಾಲದಲ್ಲಿ ಉಳಿಯಲಾರೆವು ಎಂದಿಲ್ಲ; ಉಳಿದೇ ತೀರುತ್ತೇವೆ.

**ಅತ್ರ ಪೂರ್ವೋತ್ತರಾರ್ಧಾಭ್ಯಾಂ ಕಾಲದ್ವಯಸಂಬಂಧೋಕ್ತ್ಯಾ ಅನಾದಿತ್ವಂ ನಿತ್ಯತ್ವಂ ಚೋಕ್ತಮ್ । ವರ್ತಮಾನಕಾಲಸಂಬಂಧಸ್ತು ಸ್ಫುಟತ್ವಾನ್ನೋಕ್ತಃ । 'ದ್ವೌ ನಞೌ ಪ್ರಕೃತಮರ್ಥಂ ಸಾತಿಶಯಂ ಗಮಯತಃ' ಇತಿ ನ್ಯಾಯೇನ ನಞ್ ದ್ವಯಪ್ರಯೋಗಾದೇವ ಅವಧಾರಣಸಿದ್ಧೌ ಪುನಸ್ತದುಕ್ತಿಃ 'ನಿತ್ಯೋ ನಿತ್ಯಾನಾಂ' (ಕಾಠಕ 2-5-13)**

**'ಸ್ವದೇಹಯೋಗವಿಗಮೌ ನಾಮ ಜನ್ಮಮೃತೀ ಪುರಾ ।**
**ಇಷ್ಯೇತೇ ಹ್ಯೇವ ಜೀವಸ್ಯ ಮುಕ್ತೇರ್ನ ತು ಹರೇಃ ಕ್ವಚಿತ್ ॥'**

**(ಸ್ಕಾಂದ ಪು.)**

**ಇತಿ ಶ್ರುತಿಸ್ಮೃತಿಪ್ರಸಿದ್ಧಿದ್ಯೋತನಾರ್ಥಾ । ಚಶಬ್ದೋಽನಾದಿತ್ವೇನ ಸಹ ನಿತ್ಯತ್ವಸ್ಯ ಸಮುಚ್ಚಯಾರ್ಥಃ । ತು ಶಬ್ದಸ್ತು ಸ್ಮೃತ್ಯುಕ್ತದಿಶಾ ಈಶ್ವರಸ್ಯೇತರೇಷಾಮಿವ ದೇಹತೋಽಪ್ಯುತ್ಪತ್ತಿನಾಶೌ ನೇತಿ ವಿಶೇಷಾರ್ಥಃ । ತದಾಹ 'ಓಂ ಅಸಂಭವಸ್ತು ಸತೋಽನುಪಪತ್ತೇಃ ಓಂ(2-3-9)' ॥ ಓಂ ನಾತ್ಮಾಽಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ ಓಂ ॥' (2-3-17) ಇತಿ ಸೂತ್ರಾಭ್ಯಾಮ್ । ತತ್ರಾಣುಭಾಷ್ಯಮಪಿ 'ಸೋಽನುತ್ಪತ್ತಿಲಯಃ' ಇತಿ ।**

**ಅನುವಾದ** - ಈ ಶ್ಲೋಕದ ಪೂರ್ವಾರ್ಧದಲ್ಲಿ ಆತ್ಮನಿಗೆ ಭೂತಕಾಲದ ಸಂಬಂಧವನ್ನು ಹೇಳಿರುವುದರಿಂದ ಆತ್ಮನು ಅನಾದಿ ಎಂದೂ ಉತ್ತರಾರ್ಧದಲ್ಲಿ ಭವಿಷ್ಯತ್ಕಾಲದ ಸಂಬಂಧವನ್ನು ಹೇಳಿರುವ ಕಾರಣ ಅವನು ನಿತ್ಯನೆಂದೂ ಹೇಳಲಾಗಿದೆ. ವರ್ತಮಾನಕಾಲ ಸಂಬಂಧ ಜೀವಿಸಿರುವವರಿಗೆಲ್ಲ ಸ್ಪಷ್ಟವಾದುದರಿಂದ ಹೇಳುವ ಅಗತ್ಯವಿಲ್ಲ.

ಈ ಶ್ಲೋಕದಲ್ಲಿ 'ನಾನು ಹಿಂದೆ ಇದ್ದೆ' ಎನ್ನುವ ಬದಲು 'ಹಿಂದೆ ಇರಲಿಲ್ಲವೆಂದಿಲ್ಲ' ಎಂದ ಎರಡು ನಿಷೇಧಗಳನ್ನು ಹೇಳಿರುವುದರಿಂದ 'ನಾನು ಹಿಂದೆ ಇದ್ದೇ ಇದ್ದೆ' ಎಂದು ತಿಳಿಯುತ್ತದೆ.

ನಿರ್ಧಾರವನ್ನೇ ಪುನಃ 'ಏವ ' ಎಂಬ ಪದವು ತಿಳಿಸುತ್ತದೆ. ವಸ್ತುತಃ ಅದರ ಅಗತ್ಯವಿಲ್ಲ. ಆದರೂ ಜೀವಾತ್ಮನ ಅನಾದಿ – ನಿತ್ಯತೆ ಶ್ರುತಿ – ಸ್ಮೃತಿಗಳಲ್ಲಿ ಪ್ರಸಿದ್ಧವಿದೆ, ಎಂದು ತಿಳಿಸಲು ಪುನರುಕ್ತಿ ಮಾಡಲಾಗಿದೆ.

**ಶ್ರುತಿ** – ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ ॥ **(ಕಾಠಕ. 2.5.13)**

**ಸ್ಮೃತಿ** – ಸ್ವದೇಹಯೋಗವಿಗಮೌ ನಾಮ ಜನ್ಮಮೃತೀ ಪುರಾ ।
ಇಷ್ಯೇತೇ ಹ್ಯೇವ ಜೀವಸ್ಯ ಮುಕ್ತೇರ್ನ ತು ಹರೇಃ ಕ್ವಚಿತ್ ॥

'ನ ಚೈವ ' ಎಂಬ ಉತ್ತರಾರ್ಧದಲ್ಲಿರುವ 'ಚ ' ಶಬ್ದದಿಂದ ಅಲ್ಲಿ ಹೇಳಿರುವ ನಿತ್ಯತ್ವದ ಜೊತೆಯಲ್ಲಿ ಪೂರ್ವಾರ್ಧದಲ್ಲಿ ಹೇಳಿದ ಅನಾದಿತ್ವವನ್ನೂ ಪರಾಮರ್ಶ ಮಾಡಿಕೊಳ್ಳಬೇಕು.

'ನ ತ್ವೇವ' ( ನ ತು ಏವ) ಎಂದು ಪೂರ್ವಾರ್ಧದಲ್ಲಿ 'ತು' ಶಬ್ದವಿದೆ. ಅದು '**ಅಹಂ**' ಶಬ್ದಾರ್ಥನಾದ ಶ್ರೀಕೃಷ್ಣನಲ್ಲಿರುವ ವಿಶಿಷ್ಟತೆಯನ್ನು ತಿಳಿಸುತ್ತದೆ. ಇತರ ಜೀವಾತ್ಮರಿಗೂ ಶ್ರೀಕೃಷ್ಣನಿಗೂ ವಿಶೇಷವಿದೆ. ಇತರರಿಗೆ ಸ್ವರೂಪತಃ ಉತ್ಪತ್ತಿ ಇಲ್ಲವಾದರೂ ದೇಹತಃ ಉತ್ಪತ್ತಿ ಇದೆ; ದೇಹತಃ ನಾಶವೂ ಇದೆ. ಆದರೆ ಶ್ರೀಕೃಷ್ಣನಿಗೆ ಅದೂ ಇಲ್ಲ. ಅವನ ದೇಹವು ಪ್ರಾಕೃತವಲ್ಲ. ಆದ್ದರಿಂದ ಅದಕ್ಕೆ ಉತ್ಪತ್ತಿ ನಾಶವಿಲ್ಲ.

ಇದನ್ನು – **ಓಂ ॥ ಅಸಂಭವಸ್ತು ಸತೋऽನುಪಪತ್ತೇಃ ॥ ಓಂ** (2–3–9), **ಓಂ ॥ ನಾತ್ಮಾऽಶ್ರುತೇಃ ನಿತ್ಯತ್ವಾಚ್ಚ ತಾಭ್ಯಃ ॥ ಓಂ** (2–3–17) ಎಂಬ ಬ್ರಹ್ಮಸೂತ್ರಗಳೂ ಹೇಳಿವೆ. ಈ ಸೂತ್ರಗಳ ಅರ್ಥವನ್ನು ಆಚಾರ್ಯರು ಅಣುಭಾಷ್ಯದಲ್ಲಿ ಹೀಗೆ ವಿವರಿಸಿರುತ್ತಾರೆ– **'ಸೋऽನುತ್ಪತ್ತಿಲಯಃ.....'**

**ವಿವರಣೆ** – ಕಾಠಕವಾಕ್ಯದ ಅರ್ಥ – ಪರಮಾತ್ಮನು ನಿತ್ಯರಾದ ಜೀವರಿಗಿಂತಲೂ ನಿತ್ಯನಾಗಿರುತ್ತಾನೆ. ಅವನಿಗೆ ಯಾವ ವಿಧವಾದ ನಾಶವೂ ಇಲ್ಲ. ಅವನು ಚೇತನರಿಗೂ ಪರಮಚೇತನ.

**'ನಿತ್ಯೋ ನಿತ್ಯಾನಾಂ'** ಎಂಬ ಕಾಠಕ ಮಂತ್ರವು ಪರಮಾತ್ಮನು ನಿತ್ಯರಿಗೂ ನಿತ್ಯ ಎಂದು ಹೇಳುತ್ತದೆ . ಜೀವರೂ ನಿತ್ಯರು, ಪರಮಾತ್ಮನೂ ನಿತ್ಯ. ಇಬ್ಬರ ನಿತ್ಯತ್ವವೂ ಒಂದೇ ರೀತಿಯಾದರೆ ಪರಮಾತ್ಮನು ನಿತ್ಯರಿಗೆ ನಿತ್ಯ ಎನಿಸುವುದು ಹೇಗೆ ? ಅದಕ್ಕಾಗಿ ಜೀವರ ನಿತ್ಯತ್ವಕ್ಕಿಂತ ಪರಮಾತ್ಮನ ನಿತ್ಯತ್ವದಲ್ಲಿ ಏನಾದರೂ ವಿಶೇಷವನ್ನು ಹೇಳಬೇಕಾಗುತ್ತದೆ. ಜೀವರು ಸ್ವರೂಪತಃ ನಿತ್ಯರಾದರೂ

ಅವರ ದೇಹಕ್ಕೆ ನಾಶವಿದೆ. ಪರಮಾತ್ಮನ ದೇಹಕ್ಕೂ ನಾಶವಿಲ್ಲ. ಹೀಗೆ ಹೇಳಿದಾಗ ಪರಮಾತ್ಮನು 'ನಿತ್ಯರಿಗೂ ನಿತ್ಯ' ಎಂದುದನ್ನು ಸಮರ್ಥಿಸಬಹುದು. ಹೀಗೆ ಈ ಉಪನಿಷತ್ತು ಪರಮಾತ್ಮನ ದೇಹಕ್ಕೆ ನಾಶವಿಲ್ಲ ಎನ್ನಲು ಆಧಾರವಾಗುತ್ತದೆ.

**ಸ್ಮೃತಿವಾಕ್ಯದ ಅರ್ಥ -** ಜೀವರಿಗೆ ಹೊಸ ಹೊಸದೇಹಗಳ ಸಂಪರ್ಕವೇ ಉತ್ಪತ್ತಿ, ಅಂತಹ ದೇಹಗಳ ನಾಶವೇ ಮರಣ. ಇಂತಹ ಜನ್ಮ-ಮರಣಗಳು ಜೀವನಿಗೆ ಮೋಕ್ಷಪರ್ಯಂತ ಇರುತ್ತದೆ. ಆದರೆ ಶ್ರೀಹರಿಗೆ ಇಲ್ಲ.

**ಬ್ರಹ್ಮಸೂತ್ರಗಳ ಅರ್ಥ -**

1. **ಅಸಂಭವಸ್ತು ಸತಃ ಅನುಪಪತ್ತೇಃ** (2-3-9)

**ಸತಃ** = ಬ್ರಹ್ಮನಿಗೆ, **ಅಸಂಭವಃ** - ಅಸಂಭವ ಅಂದರೆ ಉತ್ಪತ್ತಿಯು ಇಲ್ಲ. **ಅನುಪಪತ್ತೇಃ** = ಶೂನ್ಯದಿಂದ ಸೃಷ್ಟಿಯು ಅಸಾಧ್ಯವಾದುದರಿಂದ . ಬ್ರಹ್ಮನು ಎಲ್ಲ ವಸ್ತುಗಳ ಉತ್ಪತ್ತಿಗೂ ಕಾರಣನಾದುದರಿಂದ ಅವನು ಸೃಷ್ಟಿಯಾಗುವ ಮೊದಲು ಯಾವುದೂ ಇರಲು ಸಾಧ್ಯವಿಲ್ಲ. ಹೀಗಿರುವಾಗ ಅವನ ಉತ್ಪತ್ತಿ ಶೂನ್ಯದಿಂದಲೇ ಆಗಬೇಕು . ಆದರೆ ಶೂನ್ಯವು ಯಾವುದಕ್ಕೂ ಕಾರಣವಾಗಲಾರದು.

2. **ನಾತ್ಮಾऽಶ್ರುತೇಃ ನಿತ್ಯತ್ವಾಚ್ಚ ತಾಭ್ಯಃ** (2-3-17)

**ಆತ್ಮಾ** = ಪರಮಾತ್ಮನು ,ನ = ದೇಹನಾಶವುಳ್ಳವನು ಅಲ್ಲ. ಪರಮಾತ್ಮನ ದೇಹಕ್ಕೆ ನಾಶವಿಲ್ಲ **ಅಶ್ರುತೇಃ** = ಅವನ ದೇಹಕ್ಕೆ ನಾಶವಿದೆ ಎಂದು ಹೇಳುವ ಶ್ರುತಿ ಇಲ್ಲವಾದುದರಿಂದ.

**ತಾಭ್ಯಃ** = ಪರಮಾತ್ಮನ ದೇಹವೂ ನಿತ್ಯ ಎಂದು ಹೇಳುವ 'ನಿತ್ಯೋ ನಿತ್ಯಾನಾಂ' ಇ ಮೊದಲಾದ ಶ್ರುತಿಗಳಿಂದ, **ನಿತ್ಯತ್ವಾತ್** ಪರಮಾತ್ಮನ ದೇಹವೂ ನಿತ್ಯವೆಂದು ತಿಳಿಯುತ್ತ ಯಾದ್ದರಿಂದ ಅವನ ದೇಹಕ್ಕೆ ನಾಶವಿದೆ ಎಂದು ಹೇಳುವ ವಾಕ್ಯಗಳೇನಾದರೂ ಇದ್ದರೆ ಅದ ಅರ್ಥಾಂತರವನ್ನು ಮಾಡಬೇಕು.

**ಯೇ ತು ಕೃಷ್ಣಸ್ಯೇಶ್ವರತ್ವಮ್ ಅನಾದಿತ್ವಂ ಚ ನ ಜಾನಂತಿ ತಾನ್ ಪ್ರತಿ ಯಥಾಶ್ರುತ್ಯೈವೋಕ್ತಯೋಜನಾ । ಯೇ ತು ತದ್‌ಜ್ಞಾತ್ವಾ ಜೀವಾನಾದಿ-ನಿತ್ಯತಾಮೇವ ನ ಜಾನಂತಿ ತಾನ್ ಪ್ರತಿ ತು ಯಥೈವಂಪದಯೋರಧ್ಯಾಹಾರೇಣ ದೃಷ್ಟಾಂತದಾರ್ಷ್ಟಾಂತಿಕಭಾವೇನ ಯಥಾऽಹಂ ನ ನಾಸಮ್ ಅನಾದಿತೋऽ-ವರ್ತೇ, ಏವಂ ತ್ವಮೇತೇ ಚ ಸರ್ವೇ ಯೂಯಂ 'ನ ನಾಸುಃ' ಅನಾದಿತೋऽ-ವರ್ತಧ್ವಮಿತಿ ಯೋಜನಾ ।**

**ಅನುವಾದ** - ಈ ಶ್ಲೋಕದಲ್ಲಿಪದಗಳನ್ನು ಎರಡು ರೀತಿಯಲ್ಲಿ ಜೋಡಿಸಿಕೊಳ್ಳಬೇಕು- ಯಾರು ಶ್ರೀಕೃಷ್ಣನು ಪರಮಾತ್ಮ, ಅನಾದಿಯಾದ ಚೇತನ ಎಂದು ತಿಳಿದಿಲ್ಲವೋ ಅವರ ದೃಷ್ಟಿಯಲ್ಲಿ ಶ್ಲೋಕದಲ್ಲಿ ಹೇಳಿದ ಕ್ರಮದಲ್ಲೇ ಪದಗಳನ್ನು ಜೋಡಿಸಿಕೊಳ್ಳಬೇಕು. ಆದರೆ, ಯಾರಿಗೆ ಶ್ರೀಕೃಷ್ಣ, ದೇವರು, ಅವನಿಗೆ ಹುಟ್ಟು - ಸಾವುಗಳು ಇಲ್ಲ ಎಂದು ಈಗಾಗಲೇ ತಿಳಿದಿದೆಯೋ ಅವರ ದೃಷ್ಟಿಯಲ್ಲಿ '**ಯಥಾ**' '**ಏವಂ**' ಎಂಬ ಪದಗಳನ್ನು ಸೇರಿಸಿಕೊಂಡು ವಾಕ್ಯವನ್ನು ಸಿದ್ಧಪಡಿಸಬೇಕು. ಹೇಗೆಂದರೆ - '**ಯಥಾ ಅಹಂ ನ ನಾಸಂ** = ಹೇಗೆ ನಾನು ಅನಾದಿ ಕಾಲದಿಂದಲೂ ಇದ್ದೇನೆಯೋ, **ಏವಂ ತ್ವಮ್** ಏತೇ ಚ **ಸರ್ವೇ ಯೂಯಂ, ನ ನಾಸುಃ** = ನೀನೂ , ಇವರೆಲ್ಲರೂ ಅನಾದಿ ಕಾಲದಿಂದ ಇದ್ದೇ ಇದ್ದೀರಿ' ಹೀಗೆ ಪದಗಳನ್ನು ಜೋಡಿಸ ಬೇಕು. ಹೇಗೆ ನಾನು (ಶ್ರೀಕೃಷ್ಣ) ಅನಾದಿಯಾಗಿರುವೆನೋ ಅದರಂತೆ ನೀನೂ , ಇವರೆಲ್ಲರೂ ಅನಾದಿಯಾಗಿರುವರು. ಹೀಗೆ ಈ ಪಕ್ಷದಲ್ಲಿ ಶ್ರೀಕೃಷ್ಣ ದೃಷ್ಟಾಂತ, ಇತರರು ದಾರ್ಷ್ಟಾಂತಿಕರು.

**ಅತ್ರೈತೌ ಪ್ರಯೋಗಾವಭಿಮತೌ - ಕೃಷ್ಣ ತ್ವದಾದಿಚೇತನಾಃ, ನ ನಾಶವಂತಃ, ಭಾವತ್ವೇ ಸತ್ಯನಾದಿತ್ವಾತ್ । 'ನಾಸತ' ಇತಿ ಶ್ಲೋಕೇ ವಕ್ಷ್ಯಮಾಣಪ್ರಕೃತ್ಯಾದಿ- ವದಿತಿ । ದ್ವಿತೀಯಯೋಜನಾಯಾಂ ತು- ತ್ವದಾದಯೋ ಜನಾಧಿಪಾಃ, ನ ನಾಶವಂತಃ, ಚೇತನತ್ವೇ ಸತ್ಯನಾದಿತ್ವಾತ್ । ಕೃಷ್ಣವದಿತಿ ।**

**ಅನುವಾದ** - ಈ ಶ್ಲೋಕದಲ್ಲಿ ವಿವಕ್ಷಿತವಾದ ಅನುಮಾನದ ಕ್ರಮ ಹೀಗೆ - ಕೃಷ್ಣಮತ್ತು ನೀನೇ (ಅರ್ಜುನನೇ) ಮೊದಲಾದ ಚೇತನರು ಅನಾದಿಭಾವವಸ್ತುಗಳಾದುದರಿಂದ ಅವರಿಗೆ ನಾಶವಿಲ್ಲ. ಅದಕ್ಕೆ ಉದಾಹರಣೆ ಪ್ರಕೃತಿತತ್ತ್ವ. (ಅದನ್ನು '**ನಾಸತೋ ವಿದ್ಯತೇ ಭಾವಃ**' ಎಂಬ 16ನೇ ಶ್ಲೋಕದಲ್ಲಿ ವಿವರಿಸಲಾಗಿದೆ.)

ಎರಡನೆಯ ರೀತಿಯ ಪದಜೋಡಣೆಯಿಂದ ತಿಳಿಯುವ ಅನುಮಾನ ಹೀಗೆ - ನೀನೇ ಮುಂತಾದ ರಾಜರುಗಳು ಅನಾದಿ ಭಾವವಸ್ತುಗಳಾದುದರಿಂದ ನಿಮಗೆ ನಾಶವಿಲ್ಲ. **ಉದಾ** - ಶ್ರೀಕೃಷ್ಣ. (ಶ್ರೀಕೃಷ್ಣನಿಗೆ ಉತ್ಪತ್ತಿ ಇಲ್ಲದುದರಿಂದ ಹೇಗೆ ನಾಶವಿಲ್ಲವೋ ಅದರಂತೆ, ಈ ರಾಜ ಮಹಾರಾಜರಿಗೂ ನಿನಗೂ ಉತ್ಪತ್ತಿ ಇಲ್ಲದುದರಿಂದ ನಾಶವಿಲ್ಲ)

**ಸ್ವರೂಪಾಸಿದ್ಧಿಸ್ತು ದೇಹಿನ ಇತ್ಯತ್ರ ನಿರಸಿಷ್ಯತೇ । ನ ಚ ಸಾಧನವೈಕಲ್ಯಮ್ । 'ನಿತ್ಯೋ ನಿತ್ಯಾನಾಂ' ಇತಿ ಶ್ರುತೇಃ । ತತ್ರ ಅನಾದಿತ್ವಸ್ಯಾಪಿ ಉಪಲಕ್ಷಣಾತ್ ।**

**ಅನುವಾದ** - ಚೇತನರು ಅನಾದಿಯಾಗಿದ್ದರೆ ಅದರಿಂದಾಗಿ ನಾಶವಿಲ್ಲ ಎಂದು ಸಾಧಿ ಸಬಹುದು. ಆದರೆ, ಅವರು ಅನಾದಿಯಲ್ಲ (ಅವರಿಗೆ ಉತ್ಪತ್ತಿ ಇದೆ). ಹೀಗಿರುವಾಗ

'ಅನಾದಿಯಾದುದರಿಂದ ನಾಶವಿಲ್ಲ' ಎಂದು ಸಾಧಿಸುವುದು ಹೇಗೆ ? ಇದಕ್ಕೆ ಉತ್ತರವನ್ನು **'ದೇಹಿನೋಽಸ್ಮಿನ್'** ಎಂಬ ಮುಂದಿನ ಶ್ಲೋಕದಲ್ಲಿ ಕೊಡಲಾಗಿದೆ.

ಶ್ರೀಕೃಷ್ಣನನ್ನು ಉದಾಹರಿಸಿ ಅವನಂತೆ ಇತರ ಜೀವರಿಗೂ ಹುಟ್ಟು ಇಲ್ಲವಾದುದರಿಂದ ಸಾವೂ ಇಲ್ಲ ಎಂದು ಹೇಳಲಾಯಿತು. ಆದರೆ ಶ್ರೀಕೃಷ್ಣನಿಗೆ ಏಕೆ ಹುಟ್ಟಿಲ್ಲ ? ಅಂದರೆ, **'ನಿತ್ಯೋ ನಿತ್ಯಾನಾಂ'** ಎಂಬ ಕಾಠಕ ಶ್ರುತಿಯು ಅವನಿಗೆ ನಾಶವಿಲ್ಲ ಎಂದು ತಿಳಿಸಿದೆ. ಕಾಠಕವಾಕ್ಯಕ್ಕೆ ಅಷ್ಟೇ ಅರ್ಥವಲ್ಲ. ಅದರ ಜೊತೆಯಲ್ಲಿ ಅವನಿಗೆ ಉತ್ಪತ್ತಿಯೂ ಇಲ್ಲವೆಂದು ತಿಳಿಯಬೇಕು . ಹೀಗೆ ಶ್ರುತಿಯ ಆಧಾರದಿಂದ ಶ್ರೀಕೃಷ್ಣನಿಗೆ ಉತ್ಪತ್ತಿ – ನಾಶಗಳೆರಡೂ ಇಲ್ಲ.

**ವಿವರಣೆ – ಸ್ವರೂಪಾಸಿದ್ಧಿ –** ಅನುಮಾನ ಪ್ರಮಾಣದಲ್ಲಿ ಪಕ್ಷ , ಸಾಧ್ಯ , ಹೇತುಗಳೆಂದು ಮೂರು ಅಂಗಗಳಿವೆ . ನಾವು ಹೊಸದಾಗಿ ತಿಳಿಯುವ ಧರ್ಮ ಸಾಧ್ಯ. ಅದಕ್ಕೆ ಆಶ್ರಯವಾದ ವಸ್ತು ಪಕ್ಷ. ಊಹೆಮಾಡಲು, ಆಧಾರವಾದುದು ಹೇತು. ಹೊಗೆಯನ್ನು ನೋಡಿ ಬೆಂಕಿಯನ್ನು ಊಹಿಸಿದಾಗ, ಹೊಗೆ ಹೇತು . ಬೆಂಕಿ ಸಾಧ್ಯ . ಅಡಿಗೆ ಮನೆ ಪಕ್ಷ.

ಪ್ರಕೃತ – ಜೀವನಿಗೆ ನಾಶವಿಲ್ಲ, ಹುಟ್ಟಿಲ್ಲವಾದುದರಿಂದ ಎಂದು ಅನುಮಾನ . ಇಲ್ಲಿ ಪಕ್ಷ ಜೀವರು. 'ಸಾವಿಲ್ಲ' ಎನ್ನುವ ಅಂಶ ಸಾಧ್ಯ. 'ಹುಟ್ಟಿಲ್ಲವಾದುದರಿಂದ ' ಎಂಬ ಕಾರಣ ಹೇತು ಹೇತುವು ಪಕ್ಷದಲ್ಲಿ ಇಲ್ಲದೇ ಹೋದರೆ ಸ್ವರೂಪಾಸಿದ್ಧಿ . ಪ್ರಕೃತ, ಜೀವರಿಗೆ ಹುಟ್ಟಿಲ್ಲ ಎಂಬ ಕಾರಣದಿಂದ ಅವರಿಗೆ ನಾಶವಿಲ್ಲ ಎಂದು ಸಾಧಿಸಬೇಕು. ಅವರಿಗೇಕೆ ಹುಟ್ಟಿಲ್ಲ ? ಅವರು ಹುಟ್ಟಬಹುದಲ್ಲವೆ ? ಎಂಬ ಪ್ರಶ್ನೆಯೇ ಸ್ವರೂಪಾಸಿದ್ಧಿ.

**ಸಾಧನ ವೈಕಲ್ಯ –** ದೃಷ್ಟಾಂತದಲ್ಲಿ ಹೇತುವು ಇಲ್ಲದೇ ಹೋದರೆ ಸಾಧನವೈಕಲ್ಯ. ಎರಡನೆಯ ಅನುಮಾನದಲ್ಲಿ ದೃಷ್ಟಾಂತ ಕೃಷ್ಣ. ಅವನು ಅನಾದಿಯಲ್ಲ ಎನ್ನುವುದು ಸಾಧನವೈಕಲ್ಯ.

**ಏವಂ ಚೈವಮನಾದಿನಿತ್ಯಾ ಜೀವಾಃ ಕಥಂ ನಾಮ ಶೋಚ್ಯಾಃ ? ಅನಾದಿ ನಿತ್ಯಜೀವಾನಾಂ ನಾಶಭೀತ್ಯಾ 'ನ ಯೋತ್ಸ್ಯ' ಇತ್ಯಾದಿತ್ವದೀಯಾ ವಾದಾಃ ಕಥಂ ನಾಮ ಪ್ರಾಜ್ಞಮತವಿರುದ್ಧಾ ನ ಭವೇಯುಃ ? ಇತಿ ಭಾವಃ ।। 12 ।।**

**ಅನುವಾದ–** ಹೀಗೆ ಜೀವರೆಲ್ಲ ಅನಾದಿನಿತ್ಯರೆಂದಾದ ಮೇಲೆ ಯುದ್ಧದಿಂದ ಅವರು ಸಾಯುತ್ತಾರೆ ಎಂದು ನೀನು ದುಃಖಿಸುವುದು ಹೇಗೆ ತಾನೇ ಯುಕ್ತವಾದೀತು ? ಸಾವಿಲ್ಲದ ಜೀವರ ನಾಶಕ್ಕೆ ಅಂಜಿ 'ನಾನು ಯುದ್ಧ ಮಾಡಲಾರೆ' ಎಂದು ಮುಂತಾಗಿ ನೀನಾಡಿರುವ ಮಾತುಗಳು ಪ್ರಾಜ್ಞರ ಅಭಿಮತಕ್ಕೆ ವಿರುದ್ಧ ಹೇಗೆ ತಾನೇ ಆಗಲಾರವು? ಇದು ಈ ಶ್ಲೋಕದ ಒಟ್ಟು ಭಾವ ।। 12 ।।

**ದೇಹಿನೋಽಸ್ಮಿನ್ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ 13 ॥**

ಅರ್ಥ - ಹೇಗೆ ಈ ದೇಹದಲ್ಲಿ ಬಾಲ್ಯ ಕಳೆದು ತಾರುಣ್ಯ ಬರುವುದೋ ಅಥವಾ ತಾರುಣ್ಯ ಕಳೆದು ವೃದ್ಧಾಪ್ಯ ಬರುವುದೋ ಹಾಗೆಯೇ ಜೀವನಿಗೆ ಈ ದೇಹ ನಾಶವಾಗಿ ಹೊಸದೊಂದು ದೇಹ ಬರುವುದು. ಇದೇ ಸಾವು. ಇದಕ್ಕಾಗಿ ಬಲ್ಲವರು ದುಃಖಿಸುವುದಿಲ್ಲ. ಆದ್ದರಿಂದ ಅರ್ಜುನ, ಬಂಧುಗಳು ಮರಣಹೊಂದಿದಾಗ ದೇಹನಾಶವಾಗುತ್ತದೆ ಎಂಬ ಕಾರಣಕ್ಕಾಗಿ ನೀನು ದುಃಖಪಡುವ ಅಗತ್ಯವಿಲ್ಲ.

ಅಥವಾ ಈ ದೇಹದಲ್ಲಿರುವ ಬಾಲ್ಯ, ತಾರುಣ್ಯ, ಮುಪ್ಪು ಈ ಅವಸ್ಥೆಗಳ ಅನುಭವವು ದೇಹಕ್ಕಲ್ಲ, ಅದರಲ್ಲಿರುವ ಆತ್ಮನಿಗೆ. ಅಂತಹ ಆತ್ಮನ ಬಾಲ್ಯ, ತಾರುಣ್ಯ, ವೃದ್ಧಾಪ್ಯದ ದೇಹಗಳು ಬೇರೆ ಬೇರೆಯಾದರೂ ಆ ಎಲ್ಲ ದೇಹಗಳಲ್ಲಿ ಅನುಸ್ಯೂತವಾಗಿ ಹೇಗೆ ಒಬ್ಬನೇ ಆತ್ಮನು ಇರುವನೋ ಹಾಗೆ ಈ ದೇಹವನ್ನೇ ತೊರೆದು ಬೇರೊಂದು ದೇಹವನ್ನು ಪಡೆದಾಗಲೂ ಅದೇ ಆತ್ಮನು ಮುಂದುವರಿಯುತ್ತಾನೆ. ಹೀಗೆ ಆತ್ಮನು ಅನಾದಿಯಾಗಿದ್ದಾನೆ.

**ದೇಹನಾಶಭಯಾದಿತಿ ದ್ವಿತೀಯಪಕ್ಷಂ ನಿರಾಹ – ದೇಹಿನ ಇತಿ ॥ ದೇಹಿನಃ= ದೇಹವತೋ ಜೀವಸ್ಯ, ಅಸ್ಮಿನ್= ಇದಾನೀಂ ವರ್ತಮಾನೇ ಸ್ಥೂಲದೇಹೇ, ಕೌಮಾರಂ ಯೌವನಂ ಜರಾ ಚ ಯಥಾ ಪ್ರಾಪ್ನೋತಿ ತಥಾ ದೇಹಾಂತರಪ್ರಾಪ್ತಿಃ।**

ಅನುವಾದ- ಇದುವರೆಗೆ 'ಆತ್ಮನಾಶಕ್ಕಾಗಿ ದುಃಖ' ಎಂಬ ಕಾರಣವನ್ನು ನಿರಾಕರಿಸ ಲಾಯಿತು. ಈ ಶ್ಲೋಕದಲ್ಲಿ 'ದೇಹನಾಶಕ್ಕಾಗಿ ದುಃಖ' ಎಂಬ ಎರಡನೇ ಕಾರಣವನ್ನು ನಿರಾಕರಿಸಲಾಗಿದೆ.

ದೇಹಿನಃ = ದೇಹಧರಿಸಿರುವ ಜೀವಾತ್ಮನಿಗೆ, ಅಸ್ಮಿನ್ = ಈಗಿರುವ ಈ ಸ್ಥೂಲ ದೇಹದಲ್ಲಿ ಬಾಲ್ಯ, ತಾರುಣ್ಯ, ಮುಪ್ಪುಗಳು ಹೇಗೆ ಆಗುತ್ತವೆಯೋ ಅದರಂತೆಯೇ ಈ ದೇಹ ಹೋಗಿ ಮರಣವಾದಾಗಲೂ ಇನ್ನೊಂದು ದೇಹವು ಬರುತ್ತದೆ.

**ಅಯಂ ಭಾವಃ । ಕೌಮಾರಾವಸ್ಥಾವಿಶಿಷ್ಟದೇಹಹಾನೇ ಯೌವನಾವಸ್ಥಾ ವಿಶಿಷ್ಟದೇಹಹಾನೇ ಚ ಶೋಕಸ್ತಾವನ್ನಾಸ್ತೀತಿ ಪ್ರಸಿದ್ಧಮ್ । ತತ್ಕುತ ಇತಿ ವಾಚ್ಯಮ್ । ಜರಾದಿವಿಶಿಷ್ಟದೇಹಾಂತರಲಾಭಾತ್ ಸಮಾನಲಾಭೇನ ಹಾನಿರ್ಹಿ ಸಮಾಧೀಯತ ಇತಿ ಚೇತ್ । ಮೃತಾವಪಿ ಶೋಕೋ ನ ಕಾರ್ಯಃ, ದೇಹಾಂತರಲಾಭಾದೇವ । ಯದಾ ತು ಜೀರ್ಣದೇಹಲಾಭೇನ ಸಮೀಚೀನ-**

**ಯೌವನದೇಹಹಾನೇಃ ಪ್ರತಿವಿಧಿಃ[1], ತದಾ ಸುತರಾಂ ಸಮೀಚೀನ ದೇಹಾಂತರ-ಲಾಭೇನ ಜೀರ್ಣದೇಹಹಾನೇರಿತಿ । ಅತೋ ಧೀರಃ = ಬುದ್ಧಿಮಾನ್ ತತ್ರ= ದೇಹನಾಶವಿಷಯೇ ನ ಮುಹ್ಯತಿ= ನ ಮೋಹಂ ಪ್ರಾಪ್ನೋತಿ । ಏತೇಷಾಂ ದೇಹಾಃ ನಶ್ಯಂತೀತಿ ಶೋಕಂ ನ ಪ್ರಾಪ್ನೋತಿ ಇತ್ಯರ್ಥಃ ।**

**ಅನುವಾದ** – ಶ್ಲೋಕದ ಭಾವ ಹೀಗೆ – ಬಾಲ್ಯಾವಸ್ಥೆಯ ದೇಹವು ಕಳೆದಾಗಲೂ ತಾರುಣ್ಯ ದೇಹವು ಕಳೆದಾಗಲೂ ಜೀವನು ದುಃಖ ಪಡುವುದಿಲ್ಲ. ಅದಕ್ಕೆ ಕಾರಣವೇನು? ಬೇರೆ ಮುಪ್ಪಿ ದೇಹ ಬರುವುದರಿಂದ. ಹೀಗೆ ಸಮಾಧಾನ ಪಡುವುದಾದಲ್ಲಿ ಮರಣಕ್ಕೂ ಅಳಬಾರದು ಏಕೆಂದರೆ, ಅಲ್ಲೂ ಮತ್ತೊಂದು ದೇಹ ಬಂದೇ ಬರುತ್ತದೆ. ಯೌವನದ ಸುಂದರದೇಹ ಹೋ ಮುದಿ ದೇಹ ಬಂದರೂ ಸಮಾಧಾನ ಪಟ್ಟುಕೊಳ್ಳುವುದಾದರೆ ಮರಣದಲ್ಲಿ ಮುದಿದೇ ನಾಶವಾಗಿ ಒಳ್ಳೆಯ ದೇಹ ಬರುವುದರಿಂದ ಸಮಾಧಾನ ಪಟ್ಟುಕೊಳ್ಳಲೇಬೇಕಲ್ಲವೇ ?

ಆದ್ದರಿಂದ, **ಧೀರಃ** = ತಿಳಿದವನು, **ತತ್ರ** = ದೇಹನಾಶದ ಬಗ್ಗೆ **ನ ಮುಹ್ಯತಿ** = ದುಃ ಪಡುವುದಿಲ್ಲ, ಅರ್ಥಾತ್, ಬಂಧುಗಳ ದೇಹವು ನಾಶವಾಗುತ್ತದೆ, ಎಂಬ ಕಾರಣಕ್ಕಾ ದುಃಖಿಸುವುದಿಲ್ಲ, ಎಂದು ಅರ್ಥ.

**ತತ್ರಾವಸ್ಥಾಮಾತ್ರಹಾನಿಃ, ಅತ್ರಾವಸ್ಥಾವತೋಽಪೀತಿ ವೈಷಮ್ಯಮನುಪ-ಯುಕ್ತಮ್ । ನಿಷ್ಕದಾನೇನ ಪಟಗ್ರಹಣದೃಷ್ಟೇರಿತಿ । ಅತ್ರ ದೇಹಿನ ಇತ್ಯುಕ್ತ್ಯಾ ದೇಹವತೋ ಜೀವಸ್ಯೈವ, ನ ತು ದೇಹದೇಹಿಭೇದಹೀನಸ್ಯ ಹರೇರ್ಜರಾದ್ಯವಸ್ಥಾ ದೇಹಾಂತರಾವಾಪ್ತಿರ್ವೇತಿ ಸೂಚಿತಮ್ ।**

**ಅನುವಾದ** – ತಾರುಣ್ಯ-ವಾರ್ಧಕ್ಯಗಳಲ್ಲಿ ದೇಹವು ಒಂದೇ ಇದ್ದು ಅದರಲ್ಲಿ ಬಾಲ್ಯ ತಾರುಣ್ಯ, ವೃದ್ಧಾಪ್ಯ ಮುಂತಾದ ಬದಲಾವಣೆಗಳು ಮಾತ್ರ ಆಗುತ್ತವೆ. ಆದರೆ, ಮರಣದ ಹೀಗಲ್ಲ . ಮೊದಲಿದ್ದ ದೇಹವೇ ನಾಶವಾಗಿ ಬೇರೆಯೇ ದೇಹ ಬರುತ್ತದೆ, ಎಂದ ಇದರಿಂದೇನಾಯಿತು ? ಮರಣಕ್ಕೂ ವೃದ್ಧಾಪ್ಯಕ್ಕೂ ವ್ಯತ್ಯಾಸವನ್ನಷ್ಟೇ ಹೇಳಿದಂತಾಯಿತು ಹೊರತು, ದುಃಖಕ್ಕೆ ಕಾರಣವನ್ನೇನೂ ತಿಳಿಸಿದಂತಾಗಿಲ್ಲ. ಏಕೆಂದರೆ, ಹಣಕೊಟ್ಟು ಅಂಗಡಿಯಿಂ ಹೊಸ ಬಟ್ಟೆಯನ್ನು ಕೊಂಡುಕೊಳ್ಳುತ್ತೇವೆ. ಆಗ ಹಣ ಹೋಯಿತೆಂದು ಯಾರಾದರ ಅಳುತ್ತಾರೆಯೇ ?

ಈ ಶ್ಲೋಕದಲ್ಲಿ '**ದೇಹಿನಃ**' ಎಂದರೆ ತನಗಿಂತ ಭಿನ್ನವಾದ ದೇಹವನ್ನು ಹೊಂದಿದವನಿ ಎಂದರ್ಥ. ಇದರಿಂದ ಈ ರೀತಿಯ ಬಾಲ್ಯಾದಿ ಅವಸ್ಥೆಗಳ ಬದಲಾವಣೆ, ದೇಹನಾಃ

---

1. ಪ್ರತಿನಿಧಿಃ – ಮು .

ದೇಹಾಂತರ ಪ್ರಾಪ್ತಿ ಇವೆಲ್ಲ ಜೀವರಿಗೆ ಮಾತ್ರ , ಪರಮಾತ್ಮನಿಗೆ ಇಲ್ಲವೆಂದೇ ತಿಳಿಯುತ್ತದೆ. ಏಕೆಂದರೆ, ಅವನಿಗೆ ಭಿನ್ನವಾದ ದೇಹವೇ ಇಲ್ಲವಾದುದರಿಂದ ಅವನು 'ದೇಹೀ' ಎನಿಸುವುದೇ ಇಲ್ಲ.

**ದೇಹಾನ್ಯಜೀವ ಏವ ನಾಸ್ತಿ । ಏವಂ ಚ ತ್ವದಾದಯೋ ಜನಾಧಿಪಾ ನಿತ್ಯಾಃ [1]ಅನಾದಿತ್ವಾದಿತಿ ಪ್ರಾಗುಕ್ತಪ್ರಯೋಗೇ ದೇಹಪಕ್ಷೀಕಾರೇ ಅಸಿದ್ಧಿ- ಬಾಧೌ । ಜೀವಪಕ್ಷೀಕಾರೇ ಚಾಶ್ರಯಾಸಿದ್ಧಿರಿತಿ ತೃತೀಯಪಕ್ಷಮಾಶಂಕ್ಯ ಪರಿಹರತಿ- ದೇಹಿನ ಇತಿ ॥**

**ಅನುವಾದ** – ದೇಹ ಬಿಟ್ಟರೆ ಜೀವ ಎಂಬ ಪ್ರತ್ಯೇಕ ಚೇತನವೇ ಇಲ್ಲ. ಆದ್ದರಿಂದ 'ನೀನೇ ಮುಂತಾದ ರಾಜರು ನಿತ್ಯರು , ಅನಾದಿಯಾದುದರಿಂದ' ಎಂಬ ಅನುಮಾನದಲ್ಲಿ 'ನೀನು – ರಾಜರು' ಎಂದರೆ ಯಾರು ? ದೇಹವೋ, ಆತ್ಮನೋ ? ದೇಹವಾದರೆ ಅದು ಅನಾದಿಯೂ ಅಲ್ಲ, ನಿತ್ಯವೂ ಅಲ್ಲ . ಆದುದರಿಂದ ಅನುಮಾನದಲ್ಲಿ ಬಾಧ ಮತ್ತು ಅಸಿದ್ಧಿ ದೋಷಗಳು. ಆತ್ಮನಾದರೆ ಆಶ್ರಯಾಸಿದ್ಧಿ ದೋಷ . ಏಕೆಂದರೆ, ದೇಹಕ್ಕಿಂತ ಭಿನ್ನನಾದ ಆತ್ಮನೇ ಇಲ್ಲ . ಹೀಗೆ, ದೇಹಕ್ಕಿಂತ ಬೇರೆ ಆತ್ಮನೇ ಇಲ್ಲವಾದುದರಿಂದ ದೇಹನಾಶವೇ ಬಂಧುನಾಶ . ಅದಕ್ಕಾಗಿ ನನಗೆ ದುಃಖ, ಎಂಬ ಮೂರನೆಯ ಪಕ್ಷವನ್ನು '**ದೇಹಿನಃ**' ಎಂಬ ಈ ಶ್ಲೋಕದಲ್ಲಿ ನಿರಾಕರಿಸಲಾಗಿದೆ.

**ವಿವರಣೆ** – ಗೀತಾಶ್ಲೋಕದ ಪೂರ್ವಾರ್ಧಕ್ಕೆ ಇನ್ನೊಂದು ಅರ್ಥವನ್ನು ಹೇಳಲು ಇಲ್ಲಿ ಪೀಠಿಕೆಯನ್ನು ರಾಯರು ರಚಿಸುತ್ತಿದ್ದಾರೆ . **ಅಸಿದ್ಧಿ** – ಎಂದರೆ ಪಕ್ಷದಲ್ಲಿ ಹೇತು ಇಲ್ಲದಿರುವುದು. ಪ್ರಕೃತದಲ್ಲಿ ಪಕ್ಷ ದೇಹ. ಅದು ಅನಾದಿಯಲ್ಲ. ಆದ್ದರಿಂದ ಅಸಿದ್ಧಿ.

**ಬಾಧ** – ಪಕ್ಷದಲ್ಲಿ ಸಾಧ್ಯವು ಇಲ್ಲವೆಂದು ಮೊದಲೆ ನಿಶ್ಚಿತವಾಗಿದ್ದರೆ ಬಾಧ. ಪ್ರಕೃತ ಪಕ್ಷ – ದೇಹ, ಸಾಧ್ಯ–ನಿತ್ಯತ್ವ . ದೇಹವು ನಿತ್ಯವಲ್ಲ, ನಶ್ವರ ಎಂದು ನಾವು ನೋಡುತ್ತಿದ್ದೇವೆ. ಆದಕಾರಣ ಬಾಧದೋಷ.

**ಆಶ್ರಯಾಸಿದ್ಧಿ** – ಸಾಧ್ಯಕ್ಕೆ ಆಶ್ರಯವಾದುದು ಪಕ್ಷ. ಅಂತಹ ಪಕ್ಷವೇ ಇಲ್ಲವಾದಲ್ಲಿ ಆಶ್ರಯಾಸಿದ್ಧಿ. ಪ್ರಕೃತ ದೇಹಾತಿರಿಕ್ತ ಆತ್ಮ ಪಕ್ಷ. ಅಂತಹ ಆತ್ಮ ತತ್ತ್ವ ಅಪ್ರಾಮಾಣಿಕ . ಆದ್ದರಿಂದ ಆಶ್ರಯಾಸಿದ್ಧಿ ದೋಷ .

**ತೃತೀಯ ಪಕ್ಷ** – ಆತ್ಮ ನಾಶಕ್ಕಾಗಿ ಶೋಕವೋ, ದೇಹನಾಶಕ್ಕಾಗಿಯೋ ಅಥವಾ ದೇಹಾತಿರಿಕ್ತ ಆತ್ಮನೇ ಇಲ್ಲ , ದೇಹವೇ ಆತ್ಮ. ದೇಹನಾಶವಾದರೆ ಆತ್ಮನೂ ನಾಶವಾದಂತೆ. ಅದಕ್ಕಾಗಿ

1. ಅನಾದಿನಿತ್ಯತ್ವಾತ್ – ಮು .

ದುಃಖವೋ? ಈ ಮೂರು ಪಕ್ಷಗಳನ್ನು 'ನ ತ್ವೇವಾಹಂ' ಎಂಬ ಹಿಂದಿನ ಶ್ಲೋಕದಲ್ಲಿ ಮಾಡಿ ಕೊಳ್ಳಲಾಗಿದೆ. ಇವುಗಳಲ್ಲಿ ಮೂರನೆಯ ಪಕ್ಷವನ್ನು ಈ ಶ್ಲೋಕದಲ್ಲಿ ನಿರಾಕರಿಸಲಾಗಿದೆ.

**ಅತ್ರ ಕೌಮಾರಾದಿವಿಷಯೇಣ ತದನುಭವೋ ವಿಷಯೀ ಲಕ್ಷ್ಯತೇ । ದೇಹಿನ ಇತ್ಯಸ್ಯ ದೇಹಾದನ್ಯಸ್ಯೇತ್ಯರ್ಥಃ । ದೇಹೋऽಸ್ಯಾಸ್ತೀತ್ಯರ್ಥೇ ಮತುಬರ್ಥೇಽನಿ-ಪ್ರತ್ಯಯವಿಧಾನಾತ್ । ಏಕವಚನಾತ್ ಏಕಸ್ಯೇತ್ಯಪಿ ಲಭ್ಯತೇ । ದೇಹಾಂತರ-ಶಬ್ದೋऽತ್ರಾನೇಕದೇಹಪರಃ ।**

**ಅನುವಾದ** – ಈ ಶ್ಲೋಕದಲ್ಲಿರುವ ಕೌಮಾರ, ಯೌವನ, ಜರಾ ಎಂಬ ಪದಗಳ ಅರ್ಥ ದೇಹದ ವಿಭಿನ್ನ ಅವಸ್ಥೆಗಳು. ಆದರೆ, ಆ ಶಬ್ದಗಳಿಗೆ ಆ ಅರ್ಥವನ್ನು ಬಿಟ್ಟು ಅವುಗಳ ಜ್ಞಾನ ಎಂದು ಅರ್ಥವನ್ನು ಮಾಡಬೇಕು. ಕೌಮಾರ ಎಂದರೆ ಬಾಲ್ಯದ ಅನುಭವ , ಯೌವನ ಎಂದರೆ ತಾರುಣ್ಯದ ಅನುಭವ, ಹೀಗೆ.

'**ದೇಹೀ**' ಎಂದರೆ ದೇಹದಲ್ಲಿ ಇರುವವನು, ದೇಹಕ್ಕಿಂತ ಭಿನ್ನನಾದವನು ಎಂದರ್ಥ '**ದೇಹಿನಃ**' ಎಂಬ ಶಬ್ದ ಏಕವಚನದಲ್ಲಿದೆ . ಅದರ ಅಭಿಪ್ರಾಯ 'ಒಬ್ಬ ಆತ್ಮನಿಗೆ ' ಎಂದು.

ತಥಾ '**ದೇಹಾಂತರ ಪ್ರಾಪ್ತಿಃ**' ಎಂಬಲ್ಲಿ ದೇಹಾಂತರ ಎಂದರೆ ಬೇರೊಂದು ದೇಹ ಎಂದಿಷ್ಟೆ ಅರ್ಥವಲ್ಲ. ಅನೇಕ ದೇಹಗಳು ಎಂದರ್ಥ.

**ವಿವರಣೆ – ವಿಷಯೇಣ ವಿಷಯೀ ಲಕ್ಷ್ಯತೇ** – ಜ್ಞಾನವು ವಿಷಯೀ, ವಸ್ತುಗಳ ವಿಷಯಗಳು .ಪುಸ್ತಕದ ಜ್ಞಾನ ಬಂದಾಗ ಪುಸ್ತಕವು ಜ್ಞಾನಕ್ಕೆ ವಿಷಯ. ಪುಸ್ತಕಜ್ಞಾನವು ವಿಷಯೀ

ಈ ಶ್ಲೋಕಗಳಲ್ಲಿ ಬಾಲ್ಯ, ಯೌವನ, ಜರಾ ಎಂಬ ವಿಷಯಗಳನ್ನು ಹೇಳುವ ಶಬ್ದವಿದೆ ಅದಕ್ಕೆ ಆ ಅರ್ಥವನ್ನು ಬಿಟ್ಟು ಆ ವಿಷಯಗಳ , **ವಿಷಯೀ** = ಜ್ಞಾನ ಎಂಬ ಅರ್ಥವನ್ನು ಹೇಳಬೇಕು . ಅದು ಆ ಶಬ್ದಗಳ ಮುಖ್ಯಾರ್ಥವಲ್ಲವಾದುದರಿಂದ ಲಾಕ್ಷಣಿಕ ಅರ್ಥವಾಗಿದೆ

**ತಥಾ ಚಾಯಮರ್ಥಃ – ಅಸ್ಮಿನ್ ದೇಹೇ ಕೌಮಾರಂ= ಕೌಮಾರಾನು-ಸಂಧಾನಮ್, ಯೌವನಂ= ಯೌವನಾನುಸಂಧಾನಮ್, ಜರಾ= ಜರಾನು-ಸಂಧಾನಮ್, ಯೋऽಹಂ ಕೌಮಾರಶರೀರವಾನಭೂವಂ ಸ ಇದಾನೀಂ ಯುವಶರೀರವಾನ್ವರ್ತೇ, ಯೋऽಹಂ ಯುವಶರೀರವಾನಭೂವಂ ಸ ಇದಾನೀಂ ಜೀರ್ಣಶರೀರವಾನ್ವರ್ತೇ ಇತ್ಯೇವಂ ರೂಪೇಣ ತಾವದಸ್ತಿ । ತಚ್ಚ ದೇಹಿನೋ= ದೇಹವತೋ, ದೇಹಾನ್ಯಸ್ಯೇತಿ ಯಾವತ್ । ದೇಹಶಬ್ದೋऽತ್ರ ದೇಹೇಂದ್ರಿ-ಯಾಂತಃಕರಣಸಂಘಾತಪರಃ । ದೇಹೇಂದ್ರಿಯಾಂತಃಕರಣೇಭ್ಯೋऽನ್ಯಸ್ಯ**

**ಚೇತನಸ್ಯ ಭವತಿ । ದೇಹಾದೇರ್ಜಡತ್ವೇನಾನುಸಂಧಾನಕರ್ತೃತ್ವಾಯೋಗಾತ್ । ಏವಂ ಚ ದೇಹೇಂದ್ರಿಯಾದಿತೋಽತಿರಿಕ್ತಜೀವಸಿದ್ಧಿಃ ।**

**ಅನುವಾದ** - ಒಟ್ಟಿನಲ್ಲಿ ಶ್ಲೋಕಕ್ಕೆ ಹೀಗರ್ಥವಾಗುತ್ತದೆ - ಈ ದೇಹದಲ್ಲಿ **ಕೌಮಾರಂ**= ಬಾಲ್ಯಾನುಭವ, **ಯೌವನಂ** = ತಾರುಣ್ಯಾವಸ್ಥೆಯ ಅನುಭವ, **ಜರಾ** = ಮುಪ್ಪಿನ ಅನುಭವ ಎಲ್ಲರಿಗೂ ಇದೆ. ಹೇಗೆಂದರೆ - 'ಮಗುವಾಗಿದ್ದನಾನು ಯುವಕನಾಗಿದ್ದೇನೆ' 'ಯುವಕನಾಗಿದ್ದ ನಾನು ಇಂದು ಮುದುಕನಾಗಿದ್ದೇನೆ ' ಹೀಗೆ . ಈ ಅನುಭವವು, **ದೇಹಿನಃ**= ದೇಹವುಳ್ಳವನಿಗೆ, ಅರ್ಥಾತ್ ದೇಹಾತಿರಿಕ್ತನಾದ ಆತ್ಮನಿಗೆ , ದೇಹಕ್ಕಲ್ಲ.

ಇಲ್ಲಿರುವ ದೇಹಶಬ್ದಕ್ಕೆ ದೇಹ, ಇಂದ್ರಿಯ, ಅಂತಃಕರಣ ಇವುಗಳ ಸಮಷ್ಟಿ ರೂಪವು ಅರ್ಥ. ಹಾಗಾಗಿ, ಇಂತಹ ಅನುಭವಗಳು **ದೇಹಿನಃ** ಅಂದರೆ ದೇಹ - ಇಂದ್ರಿಯ- ಅಂತಃಕರಣಗಳಿಂದ ಭಿನ್ನನಾದ ಒಬ್ಬ ಆತ್ಮನಿಗೇ ಹೊರತು ದೇಹಾದಿಗಳಿಗಲ್ಲ. ಅವುಗಳೆಲ್ಲ ಜಡವಸ್ತುಗಳಾದುದರಿಂದ ಅವುಗಳಿಗೆ ಅನುಭವ - ಜ್ಞಾನ ಬರಲು ಸಾಧ್ಯವಿಲ್ಲ.

ಹೀಗೆ ಜ್ಞಾನಕ್ಕೆ ಆಶ್ರಯನಾಗಿ ದೇಹಾದಿಗಳಿಗಿಂತ ಅತಿರಿಕ್ತವಾದ ಒಂದು ಆತ್ಮತತ್ತ್ವವನ್ನು ಒಪ್ಪಿಕೊಳ್ಳಬೇಕಾಗುತ್ತದೆ.

**ತಥಾ ಚೈಕವಚನಬಲಾದೇಕಸ್ಯೈವ ದೇಹಾದನ್ಯಸ್ಯ ಕೌಮಾರಾದ್ಯನೇಕ-ದೇಹಾನುಸಂಧಾನಂ ಯಥಾ ತಥಾ ದೇಹಾಂತರಪ್ರಾಪ್ತಿಃ ಅನೇಕದೇಹಪ್ರಾಪ್ತಿಃ ದೇಹಿನೋ= ದೇಹಾದನ್ಯಸ್ಯೈಕಸ್ಯೈವ ಭವತೀತಿ ಪೂರ್ವಾರ್ಧೇನ ದೇಹಾದನ್ಯ-ಸಿದ್ಧಿಃ ।**

**ಅನುವಾದ** - '**ದೇಹಿನಃ**' ಎಂಬ ಏಕವಚನದಿಂದ ಹೀಗರ್ಥ ಸಿಗುತ್ತದೆ - ಒಬ್ಬನೇ ಆತ್ಮನಿಗೆ ಹೇಗೆ ಬಾಲ್ಯಾದಿ ಅನೇಕ ದೇಹಗಳ ಅನುಭವವು ಇದೆಯೋ ಹಾಗೆಯೇ, **ದೇಹಾಂತರ ಪ್ರಾಪ್ತಿಃ**= ಮನುಷ್ಯ -ಪಶು-ಪಕ್ಷ್ಯಾದಿ ಅನೇಕ ದೇಹಗಳ ಪ್ರಾಪ್ತಿಯೂ ದೇಹಕ್ಕಿಂತ ಭಿನ್ನನಾದ ಒಬ್ಬ ಆತ್ಮನಿಗೆ ಆಗುತ್ತದೆ. ಹೀಗೆ ಶ್ಲೋಕದ ಪೂರ್ವಾರ್ಧಭಾಗದಲ್ಲಿ ದೇಹಕ್ಕಿಂತ ಭಿನ್ನನಾದ ಆತ್ಮನಿದ್ದಾನೆಂದು ಸಾಧಿಸಿದಂತಾಗುತ್ತದೆ.

**ತ್ರಿಪಾದ್ಯಾ ಚೋಕ್ತವಿಧಯಾಽನೇಕದೇಹಪ್ರಾಪ್ತಿಮಾನ್ಸಿದ್ಧ ಇತಿ ದೇಹಾನ್ಯ-ಜೀವಪಕ್ಷೀಕಾರೇ ನಾಶ್ರಯಾಸಿದ್ಧಿಃ ಪ್ರತ್ಯಗ್ರಜಾತಸ್ಯ ಶಿಶೋರಾಹಾರಾದ್ಯಭಿ-ಲಾಷೇಣ ಪೂರ್ವಪೂರ್ವತರದೇಹಾನುಸಂಧಾನೇನ ಸಿದ್ಧಾನೇಕದೇಹಾನು-ಗತ್ಯಾಽನಾದಿತ್ವಸಿದ್ಧೇರ್ನ ಹೇತೋಃ ಸ್ವರೂಪಾಸಿದ್ಧಿರಿತಿ ಭಾವಃ ।**

**ಅನುವಾದ** – ಈ ಶ್ಲೋಕದ ಮೂರು ಪಾದಗಳು ಸೇರಿ ಹಿಂದೆ ಹೇಳಿದಂತೆ, ಒಬ್ಬನೇ ಆತ್ಮನಿಗೆ ಅನೇಕ ದೇಹಗಳು ಬರುತ್ತವೆ ಎಂದು ತಿಳಿಸುತ್ತವೆ .

ಹೀಗೆ ದೇಹಭಿನ್ನನಾದ ಆತ್ಮನಿದ್ದಾನೆಂದು ಸಾಧಿಸಿರುವುದರಿಂದ ಅಂಥ ಆತ್ಮನನ್ನು ಉದ್ದೇಶಿಸಿ ನಿತ್ಯತ್ವವನ್ನು ಸಾಧಿಸಿದಾಗ ಆಶ್ರಯಾಸಿದ್ಧಿ ದೋಷ ಇಲ್ಲ.

ಹುಟ್ಟಿದ ಕೂಡಲೇ ಮಗುವಿಗೆ ಆಹಾರದ ಅಭಿಲಾಷೆ ಉಂಟಾಗುವುದರಿಂದ ಅದಕ್ಕೆ ಹಿಂದಿನ ಜನ್ಮದ ಅನುಸಂಧಾನ ಇದೆ ಎಂದು ತಿಳಿಯುತ್ತದೆ. ಹಿಂದಿನ ಜನ್ಮದಲ್ಲೂ ಹೀಗೆಯೇ ಕಾಣುವುದರಿಂದ ಅದಕ್ಕೂ ಹಿಂದಿನ ಜನ್ಮ. ಹೀಗೆ ಅನೇಕ ದೇಹಗಳಲ್ಲಿ ಹರಿದು ಬಂದಿರುವುದರಿಂದ ಆತ್ಮನು ಅನಾದಿ ಎಂದು ತಿಳಿಯಬಹುದಾಗಿದೆ. ಆದ್ದರಿಂದ ಆತ್ಮನಿಗೆ ನಿತ್ಯತ್ವವನ್ನು ಸಾಧಿಸುವ ಅನುಮಾನದಲ್ಲಿ 'ಸ್ವರೂಪಾಸಿದ್ಧಿ' ದೋಷವೂ ಇಲ್ಲ.

**ನನು ದೇಹಾದ್ಯನ್ಯತಮಸ್ಯೈವಾಸ್ತ್ವನುಸಂಧಾನಮ್ । ಚಾರ್ವಾಕಾದ್ಯುಕ್ತ-ತರ್ಕಬಲಾದಿತ್ಯತ ಆಹ– ಧೀರ ಇತಿ ॥ ಬುದ್ಧಿಮಾಂಸ್ತತ್ರ = ದೇಹಾದನ್ಯಾತ್ಮ-ವಿಷಯೇ ನ ಮುಹ್ಯತಿ । ದೇಹಾದೀನಾಂ ಜಡತ್ವಕರಣತ್ವಾದಿನಾ ಕರ್ತೃತ್ವಾಯೋಗ ಇತ್ಯಾದಿರೂಪೇಣ ತೇ ತರ್ಕಾ ನಿರಸ್ತಾ ಇತಿ ಭಾವಃ ॥ 13 ॥**

**ಅನುವಾದ** - ಜ್ಞಾನವು ದೇಹಕ್ಕೆ ಬರಲು ಸಾಧ್ಯವಿಲ್ಲ, ದೇಹಕ್ಕಿಂತ ಭಿನ್ನನಾದ ಆತ್ಮನಿಗೇ ಬರಬೇಕು, ಎನ್ನುವ ತರ್ಕದಿಂದ ದೇಹಾತಿರಿಕ್ತ ಆತ್ಮನ ಅಸ್ತಿತ್ವವನ್ನು ಸಾಧಿಸಲಾಯಿತು. ಆದರೆ ಹೀಗೇಕೆ ಆಗಬೇಕು ? ದೇಹಕ್ಕೋ , ಇಂದ್ರಿಯಗಳಿಗೋ, ಅಂತಃಕರಣಕ್ಕೋ ಇವುಗಳಲ್ಲಿ ಯಾವುದಾದರೊಂದಕ್ಕೆ ಅನುಭವ ಉಂಟಾಗುತ್ತದೆ ಎಂದು ಹೇಳಬಹುದಲ್ಲವೇ ? ಚಾರ್ವಾಕರು ಹಾಗೆಯೇ ಹೇಳುತ್ತಾರೆ.

ಅವರು, ಆತ್ಮನೇ ಇಲ್ಲ , ದೇಹಕ್ಕೆ ಅನುಭವ . ದೇಹವು ಭೌತಿಕ. ಭೂತಗಳಲ್ಲಿ ಒಂದೊಂದರಲ್ಲೂ ಅನುಭವ (ಜ್ಞಾನ) ಎಂಬ ವಿಶೇಷಗುಣ ಇಲ್ಲವಾದರೂ ಅವೆಲ್ಲವುಗಳ ಸಮಷ್ಟಿರೂಪವಾದ ದೇಹದಲ್ಲಿ ಜ್ಞಾನ ಎಂಬ ಗುಣವು ಇರಬಹುದು. ಎಲೆ, ಅಡಿಕೆ, ಸುಣ್ಣ ಇವುಗಳಲ್ಲಿ ಪ್ರತ್ಯೇಕವಾಗಿ ಕೆಂಪು ಬಣ್ಣ ಇಲ್ಲವಾದರೂ ಅವೆಲ್ಲವನ್ನು ಸೇರಿಸಿ ಜಗಿದಾಗ ಕೆಂಪು ಬಣ್ಣ ಬರುವುದಿಲ್ಲವೇ ? ಅದರಂತೆ ದೇಹದಲ್ಲಿ ಜ್ಞಾನ ಎಂಬ ಗುಣವಿರಲು ಅಡ್ಡಿಯಿಲ್ಲ, ಎನ್ನುತ್ತಾರೆ ಹೀಗೆ ದೇಹಾತಿರಿಕ್ತ ಆತ್ಮ ಬೇಕಾಗಿಲ್ಲ ಎಂದು ಚಾರ್ವಾಕರು ತರ್ಕಬಲದಿಂದ ಮಾಡುವ ಆಕ್ಷೇಪಕ್ಕೆ ಸಮಾಧಾನ – 'ಧೀರಸ್ತತ್ರ ನ ಮುಹ್ಯತಿ' ಎಂಬ ಈ ಶ್ಲೋಕದ ಅಂತಿಮ ಚರಣ.

ಬುದ್ಧಿವಂತನಾದವನು, ತತ್ರ = ದೇಹಭಿನ್ನವಾದ ಆತ್ಮನ ವಿಷಯದಲ್ಲಿ ತಪ್ಪುಗ್ರಹಿಕೆಗೆ ಒಳಗಾಗುವುದಿಲ್ಲ.

ದೇಹವು ಜಡ. ಅದು ಜ್ಞಾನಕ್ಕೆ ಆಶ್ರಯವಾಗಲಾರದು. ಅಂತಃಕರಣ ಇಂದ್ರಿಯಗಳು ಜ್ಞಾನಕ್ಕೆ ಸಾಧನಗಳಾದುದರಿಂದ ಜ್ಞಾನಕ್ಕೆ (ಕರ್ತೃ) ಆಶ್ರಯವಾಗಲಾರವು. ಹಾಗಾಗಿ ದೇಹಾದಿಗಳಿಗಿಂತ ಭಿನ್ನನಾದ ಆತ್ಮನೇ ಅಸ್ತಿತ್ವದ ಜ್ಞಾನಕ್ಕೆ ಆಶ್ರಯ ಎಂದು ಹೇಳಬೇಕಾ-ಗುವುದು. ಹೀಗೆ ಚಾರ್ವಾಕರ ತರ್ಕವನ್ನು ನಿರಾಕರಿಸಿ ವಿವೇಕಿಯು ಆತ್ಮನ ಅಸ್ತಿತ್ವದ ಬಗ್ಗೆ ಮೋಹಕ್ಕೊಳಗಾಗುವುದಿಲ್ಲ ॥ 13 ॥

**ವಿವರಣೆ** - ಜಡವಾದ ಒಂದರಲ್ಲಿ ಜ್ಞಾನವಿಲ್ಲವೆಂದಾದ ಮೇಲೆ ಅಂತಹ ನೂರಾರುವಸ್ತುಗಳು ಸೇರಿದರೂ ಜ್ಞಾನ ಎಂಬ ಹೊಸದೊಂದು ಗುಣ ಹುಟ್ಟಿಕೊಳ್ಳಲಾರದು. ನೂರಾರು ಕುರುಡರು ಸೇರಿದರೆ ಕಣ್ಣು ಕಾಣಿಸಬಹುದೆ ? ಎಲೆ, ಅಡಿಕೆಯ ಉದಾಹರಣೆಯಲ್ಲೂ ಅವುಗಳಲ್ಲಿ ಯಾವುದೋ ಒಂದರಲ್ಲಿ ಸೂಕ್ಷ್ಮವಾಗಿ ಕೆಂಪು ಬಣ್ಣವಿರುವುದರಿಂದಲೇ ಮೂರೂ ಸೇರಿದಾಗ ವ್ಯಕ್ತವಾಗಿ ಕೆಂಪುಬಣ್ಣ ಕಾಣಬಹುದಷ್ಟೆ . ಆದ್ದರಿಂದ ಜಡದೇಹವು ಜ್ಞಾನಕ್ಕೆ ಆಶ್ರಯವಾಗಲಾರದು.

## ಅಭಿಮಾನವೇ ದುಃಖದ ಮೂಲ

**ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥ 14 ॥**

**ಅರ್ಥ**- ಎಲೈ ಕುಂತೀಪುತ್ರನೇ ! ಇಂದ್ರಿಯಗಳಿಗೆ ತಮ್ಮ ತಮ್ಮ ಗ್ರಾಹ್ಯವಿಷಯಗಳೊಂದಿಗೆ ಆಗುವ ಸನ್ನಿಕರ್ಷಗಳು ಮಾತ್ರವೇ ತಂಪು, ಬಿಸಿ ಮುಂತಾದ ಅನುಭವಗಳನ್ನು ಉಂಟುಮಾಡಿ ಆ ಮೂಲಕ ನಮ್ಮ ಸುಖ ದುಃಖಗಳಿಗೆ ಕಾರಣವಾಗುತ್ತವೆಯೋ ? ಇಲ್ಲ. ಏಕೆಂದರೆ, ವಿಷಯ ಸನ್ನಿಕರ್ಷ ಇಂದ್ರಿಯಗಳೊಂದಿಗೆ ಸರ್ವದಾ ಇದ್ದರೂ ಸುಖ ಅಥವಾ ದುಃಖಗಳು ಆಗಾಗ ಬಂದು ಹೋಗುತ್ತಿರುತ್ತವೆ ಕೆಲವೊಮ್ಮೆ ಅದೂ ನಿಂತು ಹೋಗುತ್ತದೆ. ಅಂದರೆ, ದೇಹದಲ್ಲಿ , ವಿಷಯವಸ್ತುಗಳಲ್ಲಿ ಅಭಿಮಾನವಿದ್ದರೆ ಮಾತ್ರ ವಿಷಯಸಂಬಂಧಗಳು ಸುಖ ದುಃಖಕ್ಕೆ ಕಾರಣವಾಗುತ್ತವೆ. ಆದ್ದರಿಂದ ಅಭಿಮಾನವನ್ನು ತ್ಯಜಿಸಿ ವಿಷಯ ಸಂಬಂಧಗಳನ್ನು ವಿಫಲಗೊಳಿಸು.

**ಸತ್ಯಮೇವ ತತ್ಸರ್ವಂ ಭವದುಕ್ತಮ್ । ಉಕ್ತವಿಧಯಾಽಽತ್ಮಹಾನೇ-ರಭಾವಾತ್, ದೇಹಹಾನಾವಪಿ ಸಮೀಚೀನದೇಹಾಂತರರೂಪಪ್ರತಿನಿಧಿ-**

**ಲಾಭಾತ್, ಬಾಂಧವಾನಾಂ ಹಾನಿಃ ಭವಿಷ್ಯತೀತಿ ಧಿಯಾ ಶೋಕೋ ನ ಯುಕ್ತ ಇತಿ । ತಥಾಽಪಿ ತನ್ಮೃತೌ ಮಮೈವ ಸುಖಹಾನಿರ್ದುಃಖಪ್ರಾಪ್ತಿಶ್ಚ ಸ್ಯಾತ್ । ತದ್ದೇಹದರ್ಶನಸ್ಪರ್ಶನಸಂಭಾಷಣಾದೇಃ ಸುಖಹೇತೋರಭಾವಾತ್ । ಭೇದ-ಭೇದಾದಿನಾ ವಿಕೃತತದ್ದೇಹದರ್ಶನಸ್ಯ ದುಃಖಹೇತೋರ್ಭಾವಾದಿತ್ಯತ ಆಹ-ಮಾತ್ರೇತಿ ॥**

**ಅನುವಾದ** – 'ಕೃಷ್ಣ , ನೀನು ಇದುವರೆಗೆ ಹೇಳಿರುವುದೆಲ್ಲ ಸರಿ – ನೀನು ಹೇಳಿದಂತೆ ಆತ್ಮನಿಗೆ ನಾಶವಿಲ್ಲ, ಈ ದೇಹನಾಶವಾದರೂ ಮತ್ತೊಂದು ಹೊಸದೇಹ ಬರುತ್ತದೆ. ಹೀಗಾಗಿ ಬಾಂಧವರಿಗೆ ತೊಂದರೆಯಾಗುತ್ತದೆ ಎನ್ನುವ ಕಾರಣಕ್ಕಾಗಿ ದುಃಖಪಡುವುದು ತರವಲ್ಲ. ಆದರೂ, ಅವರು ಸತ್ತರೆ ನನಗೆ ದುಃಖವಾಗುತ್ತದೆ. ಸುಖವಿಲ್ಲದಾಗುತ್ತದೆ. ಹೇಗೆಂದರೆ, ಅವರಿದ್ದರೆ ಅವರ ದೇಹ ದರ್ಶನ ಸಂಪರ್ಕಗಳಿಂದ , ಅವರ ಜೊತೆ ಮಾತನಾಡುವುದರಿಂದ ನನಗೆ ಸುಖವಾಗುತ್ತಿತ್ತು . ಸತ್ತರೆ ಈ ಸುಖದಿಂದ ನಾನು ವಂಚಿತನಾಗುತ್ತೇನೆ. ಸುಖಕ್ಕೆ ಕಾರಣವಾದ ಅವರ ದೇಹವೇ ಇಲ್ಲವಲ್ಲ? ಅಷ್ಟೇ ಅಲ್ಲ, ಯುದ್ಧಮಾಡಿದರೆ , ನನ್ನ ಶಸ್ತ್ರದಿಂದ ಘಾಸಿಯಾದ ಅವರ ವಿಕೃತದೇಹವನ್ನು ನಾನು ನೋಡಬೇಕಾಗುತ್ತದೆ. ಇದು ನನ್ನ ದುಃಖಕ್ಕೆ ಕಾರಣವಾಗುತ್ತದೆ. ಅರ್ಜುನನ ಈ ಪ್ರಶ್ನೆಗೆ ಉತ್ತರ – **'ಮಾತ್ರಾಸ್ಪರ್ಶಾಸ್ತು'** ಎಂಬ ಈ ಶ್ಲೋಕದಲ್ಲಿದೆ.

**ಮೀಯಂತ ಇತಿ ಮಾತ್ರಾಃ । ಮಾಙ್ಮಾನ ಇತ್ಯತಃ ಕರ್ಮಣಿ ತ್ರಪ್ರತ್ಯಯಃ । ಸ್ತ್ರೀತ್ವಂ ಶಬ್ದಸ್ವಾಭಾವ್ಯಾತ್ । ಜ್ಞಾನವಿಷಯಾಃ ಗಂಧರಸರೂಪ-ಸ್ಪರ್ಶಶಬ್ದಾಃ , ತೇಷಾಂ ಸ್ಪರ್ಶಾಃ ಸಂಬಂಧಾಃ । ಶೀತೋಷ್ಣಶಬ್ದೌ ಶೀತೋಷ್ಣ-ಸ್ಪರ್ಶವಾಚಕೌ ಲಕ್ಷಣಯಾ ಗಂಧರಸರೂಪಸ್ಪರ್ಶಶಬ್ದಾಖ್ಯಸರ್ವವಿಷಯಪರೌ ಭೂತ್ವಾ ತದನುಭವಲಕ್ಷಕೌ । ಲಾಕ್ಷಣಿಕೋಕ್ತಿಕೃತ್ಯಮಗ್ರೇ ವ್ಯಕ್ತಮ್ ।**

**ಅನುವಾದ** – **'ಮೀಯಂತೇ'** ಎಂಬ ಅರ್ಥದಲ್ಲಿ **'ಮಾತ್ರಾಃ'** ಎಂಬ ಶಬ್ದವಿದೆ. ಜ್ಞಾನಾರ್ಥಕವಾದ **'ಮಾ'** ಧಾತುವಿಗೆ ಕರ್ಮಾರ್ಥಕ **'ತ್ರ'** ಪ್ರತ್ಯಯಬಂದು **'ಮಾತ್ರಾ'** ಎಂಬ ಶಬ್ದವು ನಿಷ್ಪನ್ನವಾಗಿದೆ. ಶಬ್ದಸ್ವಭಾವದಂತೆ **'ಮಾತ್ರಾ'** ಶಬ್ದವು ಸ್ತ್ರೀಲಿಂಗವಾಗಿದೆ. ಜ್ಞಾನಃ ಗೋಚರವಾದುದು ಅರ್ಥಾತ್ ಮೂಗು ಮೊದಲಾದ ಇಂದ್ರಿಯಗಳಿಂದ ತಿಳಿಯಲ್ಪಡುವ ಪರಿಮಳ , ರುಚಿ, ಬಣ್ಣ, ಬಿಸಿ–ತಂಪು , ಶಬ್ದ ಇವುಗಳೇ **'ಮಾತ್ರಾ'**ಗಳು. ಇವುಗಳಿಗೆ **ಸ್ಪರ್ಶ** = ಇಂದ್ರಿಯಗಳೊಂದಿಗಾಗುವ ಸಂಬಂಧಗಳೇ ಮಾತ್ರಾಸ್ಪರ್ಶಗಳು.

ಈ ಶ್ಲೋಕದಲ್ಲಿ ಶೀತ – ಉಷ್ಣ ಶಬ್ದಗಳಿಗೆ ನಿಜವಾದ ಅರ್ಥ ತಂಪು ಮತ್ತು ಬಿ ಸ್ಪರ್ಶಗಳೆಂದು. ಆದರೆ ಪ್ರಕೃತದಲ್ಲಿ ಪರಿಮಳ, ರುಚಿ, ಬಣ್ಣ, ಶಬ್ದಗಳೆಂಬ ಪಂಚೇಂದ್ರಿಯಗಳ

ಗ್ರಹಿಸುವ ಇತರ ವಿಷಯಗಳನ್ನೂ ಶೀತ -ಉಷ್ಣ ಎಂಬ ಶಬ್ದಾರ್ಥದ ಜೊತೆಯಲ್ಲಿ ಸೇರಿಸಿಕೊಂಡು 'ಇವಿಷ್ಟೂ ವಿಷಯಗಳ ಜ್ಞಾನ ' ಎಂಬ ಅರ್ಥವನ್ನು ಅದಕ್ಕೆ ಮಾಡಬೇಕು. ಇಲ್ಲಿ ಇತರ ವಿಷಯವಾಚಕ ಪದವನ್ನು ಪ್ರಯೋಗಿಸದೆ 'ಶೀತ-ಉಷ್ಣ ' ಶಬ್ದಗಳನ್ನೇ ಏಕೆ ಪ್ರಯೋಗಿಸಲಾಗಿದೆ, ಎನ್ನುವುದಕ್ಕೆ ಕಾರಣವನ್ನು ಮುಂದೆ ಹೇಳಲಾಗಿದೆ.

**ಗಂಧ-ರಸ-ರೂಪ-ಸ್ಪರ್ಶ-ಶಬ್ದಾಖ್ಯವಿಷಯಾಣಾಂ ಘ್ರಾಣ-ರಸನ-ಚಕ್ಷುಸ್-ತ್ವಕ್-ಶ್ರೋತ್ರರೂಪೇಂದ್ರಿಯೈಃ ಯಥಾಕ್ರಮಂ ಯೇ ಸನ್ನಿಕರ್ಷಾಸ್ತೇ ಮಾತ್ರಾ-ಸ್ಪರ್ಶಾಃ, ಶೀತೋಷ್ಣಸುಖದುಃಖದಾಃ । ಸುಗಂಧ-ಸುರಸ-ಸುರೂಪ-ಸುಸ್ಪರ್ಶ-ಸುಶಬ್ದವಿಷಯಕಸಾಕ್ಷಾತ್ಕಾರರೂಪಾನುಭವಜನನದ್ವಾರಾಽಽತ್ಮನಃ ಸುಖಪ್ರದಾಃ । ಅನಿಷ್ಟಗಂಧರಸಾದಿವಿಷಯಕಸಾಕ್ಷಾತ್ಕಾರಜನನದ್ವಾರಾ ದುಃಖಪ್ರದಾಃ । ತೇಷಾಂ ಮೃತೌ ಚ ತನ್ನಿಮಿತ್ತಸುಖದುಃಖಹಾನಿಪ್ರಾಪ್ತೀ ಭವತ ಇತಿ ಕಿಲ ಕೌಂತೇಯ ತವಾಶಯ ಇತಿ ಪಾರ್ಥಹಾರ್ದಮನೂದ್ಯ ಭಗವಾನ್ ಕೃಷ್ಣಃ ಕಾಕುಸ್ವರ-ಶಿರಸ್ಕ'ತು'ಶಬ್ದೇನಾವಧಾರಣಾರ್ಥಕೇನ ನಿರಾಚಷ್ಟೇ । ಹೇ ಕೌಂತೇಯ, ಮಾತ್ರಾಸ್ಪರ್ಶಾ ಏವ= ಗಂಧಾದಿವಿಷಯೇಂದ್ರಿಯಸನ್ನಿಕರ್ಷಾ ಏವ, ಇಷ್ಟಾನಿಷ್ಟ-ಸ್ವಸ್ವವಿಷಯಸಾಕ್ಷಾತ್ಕಾರದ್ವಾರಾ ಸುಖದುಃಖದಾಃ ಕಿಮಿತಿ ಕಾಕುಸ್ವರೇಣಾಕ್ಷೇಪಃ । ಕೇವಲಂ ತನ್ಮಾತ್ರಾ ಏವ ನ ಭವಂತಿ । ಕಿಂತು ವಿಷಯೇಷು ಶೋಭನಾಧ್ಯಾಸ-ನಿಮಿತ್ತಸ್ನೇಹರೂಪೇಣ ವಾ ಅರಿತ್ವಾದಿಭ್ರಮಹೇತುಕದ್ವೇಷರೂಪೇಣ ವಾ ದೇಹೇಂದ್ರಿಯಾಂತಃಕರಣೇಷು ಮಮತಾಽತಿಶಯಹೇತುಕಾವಿವೇಕರೂಪೇಣ ವಾಽಭಿಮಾನೇನ ಸಹಿತಾ ಏವ ತಥೇತ್ಯರ್ಥಃ ।**

**ಅನುವಾದ** - ಗಂಧ-ರಸ-ರೂಪ-ಸ್ಪರ್ಶಶಬ್ದಗಳೆಂಬ ವಿಷಯಗಳಿಗೆ ಘ್ರಾಣ ರಸನ ಚಕ್ಷು ತ್ವಚೆ ಶ್ರೋತ್ರ ಇಂದ್ರಿಯಗಳೊಂದಿಗೆ ಸಂಪರ್ಕವಾಗುವುದೇ ಮಾತ್ರಾ ಸ್ಪರ್ಶಗಳು. ಅವು ಶೀತ ಉಷ್ಣ ಮುಂತಾಗಿ ಸುಖ ದುಃಖಕಾರಣವಾಗುತ್ತವೆ. ಒಳ್ಳೆಯ ಪರಿಮಳಕ್ಕೆ ಮೂಗಿನೊಂದಿಗೆ ಸಂಪರ್ಕ, ರುಚಿಯಾದ ರಸಕ್ಕೆ ನಾಲಿಗೆಯ ಸಂಪರ್ಕ, ಸುಂದರ ಬಣ್ಣಕ್ಕೆ ಕಣ್ಣಿನೊಂದಿಗೆ ಸಂಪರ್ಕ, ತಣ್ಣಗಿನ ಸ್ಪರ್ಶಕ್ಕೆ (ವಸ್ತುವಿಗೆ ) (ಸೆಕೆಯ ಸಮಯದಲ್ಲಿ) ಚರ್ಮದ ಸಂಪರ್ಕ, ಇಂಪಾದ ಶಬ್ದಕ್ಕೆ ಕಿವಿಯ ಸಂಪರ್ಕ ಇವೇ ಮಾತ್ರಾಸ್ಪರ್ಶಗಳು. ಇವುಗಳು ನಮಗೆ, **ಶೀತೋಷ್ಣಸುಖ-ದುಃಖದಾಃ**= ಪರಿಮಳ, ರುಚಿ, ಬಣ್ಣ, ಸ್ಪರ್ಶ, ಶಬ್ದಗಳ ಅನುಭವವನ್ನು ಉಂಟು ಮಾಡುವ ಮೂಲಕ ಸುಖವನ್ನುಂಟು ಮಾಡುತ್ತವೆ. ಅಥವಾ ದುರ್ಗಂಧ, ಕಹಿರಸಾದಿಗಳ ಅನುಭವವನ್ನು ತಂದುಕೊಟ್ಟು ಆ ಮೂಲಕ ದುಃಖವನ್ನು ಕೊಡುತ್ತವೆ. 'ಬಾಂಧವರು ಮಡಿದರೆ ಅದರಿಂದಾಗಿ ಸುಖಹಾನಿ, ದುಃಖ ಪ್ರಾಪ್ತಿಯು ಆಗುತ್ತದೆ, ಇದು ತಾನೇ ಅರ್ಜುನ ನಿನ್ನ ಅಭಿಪ್ರಾಯ' ಹೀಗೆ

ಅರ್ಜುನನ ಭಾವವನ್ನು ಶ್ರೀಕೃಷ್ಣನು ಅನುವಾದ ಮಾಡಿ 'ಕಾಕು'ಸ್ವರಸಹಿತವಾದ ಅವಧಾರಣಾರ್ಥಕವಾದ 'ತು' ಶಬ್ದದಿಂದ ನಿರಾಕರಿಸಿರುತ್ತಾನೆ.

ಒಟ್ಟು ಪೂರ್ವಾರ್ಧದ ಭಾವ - ಎಲೈ ಕುಂತೀಪುತ್ರನೇ , **ಮಾತ್ರಾಸ್ಪರ್ಶಾಃ** ಏವ= ಗಂಧ ಮುಂತಾದ ವಿಷಯಗಳೊಂದಿಗೆ ಇಂದ್ರಿಯಗಳ ಸಂಬಂಧವೇ ಇಷ್ಟವಾದ ಅಥವಾ ಅನಿಷ್ಟವಾದ ವಸ್ತುಗಳ ಅನುಭವವನ್ನು ಉಂಟುಮಾಡಿ ಆ ಮೂಲಕ ಸುಖ-ದುಃಖಗಳಿಗೆ ಕಾರಣ ವಾಗುವುದೇನು ?' ಹೀಗೆ ಕಾಕುಸ್ವರದಿಂದ ಆಕ್ಷೇಪಾರ್ಥವು ಲಭ್ಯವಾಗುತ್ತದೆ.

'ಅಷ್ಟೇ ಸಾಲದು ; ಗಂಧಾದಿ ವಿಷಯವಸ್ತುಗಳಲ್ಲಿ 'ಇವು ಚೆನ್ನಾಗಿವೆ ' ಎಂಬ ಭ್ರಮೆಯಿಂದಾದ ಆಕರ್ಷಣೆಯ ಕಾರಣದಿಂದ ಬರುವ ಆಸೆ ಎಂಬ ಅಭಿಮಾನ, 'ಇದು ನನಗಾಗದು' ಎಂಬ ಭಾವನೆಯ ಕಾರಣದಿಂದ ಬರುವ ದ್ವೇಷ ಎಂಬ ಅಭಿಮಾನ ಹಾಗೂ ದೇಹ-ಇಂದ್ರಿಯ-ಮನಸ್ಸುಗಳಲ್ಲಿ ಮಮತಾತಿರೇಕದಿಂದ ಅವು ಬೇರೆ ಅಲ್ಲ ತಾನು ಬೇರೆ ಅಲ್ಲ ಎಂಬ ಅಭಿಮಾನವೂ ಜೊತೆ ಸೇರಿದಾಗ ಮಾತ್ರ ವಿಷಯಸಂಬಂಧಗಳು ಸುಖ-ದುಃಖಗಳಿಗೆ ಕಾರಣವಾಗುತ್ತವೆ.

**ವಿವರಣೆ - ಕಾಕುಸ್ವರಶಿರಸ್ಕ'ತು'ಶಬ್ದೇನ ಅವಧಾರಣಾರ್ಥಕೇನ** - ಶ್ಲೋಕದಲ್ಲಿ '**ಮಾತ್ರಾಸ್ಪರ್ಶಾಸ್ತು**' ಎಂದು '**ತು**' ಶಬ್ದವಿದೆ. ಅದಕ್ಕೆ '**ಏವ**' ಎಂದರ್ಥ. 'ವಿಷಯ ಸಂಬಂಧಗಳು ಮಾತ್ರ' ಎಂದು ಭಾವಾರ್ಥ. '**ತು**' ಶಬ್ದವನ್ನು '**ಕಾಕು**' ಸ್ವರದೊಂದಿಗೆ ಉಚ್ಚರಿಸಬೇಕು . 'ವಿಷಯ ಸಂಬಂಧಗಳು ಮಾತ್ರವೇ ಸುಖ ದುಃಖಕ್ಕೆ ಕಾರಣವಾಗುತ್ತವೆಯೇ?' ಎಂಬ ಆಕ್ಷೇಪದ ಧ್ವನಿ ಅದರಲ್ಲಿದೆ. ಅರ್ಥಾತ್, ಅಷ್ಟು ಮಾತ್ರ ದುಃಖಕ್ಕೆ ಕಾರಣವಲ್ಲ ಎಂದಂತಾಗುತ್ತದೆ.

ಒಂದೇ ಘಟನೆಯನ್ನು ಇಬ್ಬರು ನೋಡಿದಾಗ ಒಬ್ಬನಿಗೆ ಸಂತೋಷವಾಗಬಹುದು ಮತ್ತೊಬ್ಬನಿಗೆ ದುಃಖವಾಗಬಹುದು. ರಸ್ತೆ ಅಪಘಾತದಿಂದ ಘಾಸಿಯಾದಾಗ ಬಂಧುಗಳಿಗೆ ದುಃಖವಾಗುತ್ತದೆ, ಶತ್ರುಗಳಿಗೆ ಸಂತೋಷವಾಗುತ್ತದೆ. ಈ ಸಂದರ್ಭದಲ್ಲಿ ಅಪಘಾತಕ್ಕೂ ಇಬ್ಬರ ಕಣ್ಣಿಗೂ ಆದ ಸಂಪರ್ಕವು ಸಮಾನವಾದುದು. ಆದರೆ ಒಬ್ಬರಿಗೆ ದುಃಖ, ಮತ್ತೊಬ್ಬರಿಗೆ ಸುಖ.ಏಕೆ ಹೀಗೆ ? 'ನನ್ನವರು' ಎಂಬ ಅಭಿಮಾನವಿದ್ದವರಿಗೆ ದುಃಖ, 'ನನಗಾಗದವರು' ಎಂಬ ದ್ವೇಷವಿದ್ದವರಿಗೆ ಸುಖ. ಹೀಗೆ ಸುಖ ದುಃಖಗಳಿಗೆ ಕಾರಣವಾದ ಈ ಭಾವನೆಯೇ ವಿಷಯಾಭಿಮಾನ.

ದೇಹಕ್ಕೆ ತಣ್ಣನೆಯ ಗಾಳಿ ಬೀಸಿದಾಗ ಸೆಖೆಗಾಲದಲ್ಲಿ ಸಂತಸವಾಗುತ್ತದೆ. ಚಳಿಗಾಲದ ಹಿಂಸೆಯಾಗುತ್ತದೆ. ಆದರೆ ಇದು ನಿದ್ದೆ ಬರುವವರೆಗೆ ಮಾತ್ರ. ನಿದ್ದೆ ಬಂದರೆ ಸುಖವೂ ಇಲ್ಲ ದುಃಖವೂ ಇಲ್ಲ. ಏಕೆ ? ಆಗ ದೇಹದ ಮೇಲೆ ಪರಿಜ್ಞಾನವಿಲ್ಲ. ಹೀಗೆ ದೇಹದ ಪರಿವೆ ಇದ್ದಾಗ ಸುಖ-ದುಃಖಗಳು ; ಅದಿಲ್ಲದಾದಾಗ ಸುಖವೂ ಇಲ್ಲ, ದುಃಖವೂ ಇಲ್ಲ. ಇದೇ ದೇಹಾಭಿಮಾನ

ಹೀಗೆ ಆತ್ಮನಿಗಾಗುವ ಸುಖದುಃಖಗಳಿಗೆ ಇಂದ್ರಿಯಗಳೊಂದಿಗೆ ವಿಷಯ ಸಂಪರ್ಕವಷ್ಟೇ ಕಾರಣವಲ್ಲ. ವಿಷಯಾಭಿಮಾನ - ದೇಹಾಭಿಮಾನಗಳೂ ಕಾರಣಗಳಾಗಿವೆ.

**ಕುತ ಏವಂ ? ತನ್ಮಾತ್ರಾ ಏವ ಸ್ವಸ್ವವಿಷಯಾನುಭವದ್ವಾರಾ ಸುಖದುಃಖ-ಹೇತವೋ ಭವಂತ್ವಿತ್ಯತ ಆಹ - ಆಗಮೇತಿ ॥ ಯತ ಇತಿ ಶೇಷೋ ವಾ, ಹೇತುಗರ್ಭವಿಶೇಷಣಂ ವಾ । ಏತಚ್ಚಾಗಮಾಪಾಯಿತ್ವಂ ಶೀತೋಷ್ಣಸುಖ-ದುಃಖದಾಃ ಮಾತ್ರಾಸ್ಪರ್ಶಾ ಆಗಮಾಪಾಯಿನ ಇತ್ಯೇವಂ ಸ್ವಸ್ವವಿಷಯಕ-ಧೀದ್ವಾರಾ ಸುಖದುಃಖದತ್ವವಿಶಿಷ್ಟಮಾತ್ರಾಸ್ಪರ್ಶಾನಾಂ ವಿಶೇಷಣಮ್, 'ಸವಿಶೇಷಣೇ ಹಿ ವಿಧಿನಿಷೇಧೌ ವಿಶೇಷ್ಯೇ ಬಾಧಾದ್ವಿಶೇಷಣಮುಪಸಂಕ್ರಾಮತ' ಇತಿ ನ್ಯಾಯಾತ್, ಮಾತ್ರಾಸ್ಪರ್ಶಾನಾಂ ಸ್ವಸ್ವವಿಷಯಕಧೀದ್ವಾರಾ ಯತ್ಸುಖ-ದುಃಖದತ್ವಂ ತಸ್ಯಾಗಮಾಪಾಯಿತ್ವಾದಿತಿ ಸುಖಾದಿದತ್ವ ರೂಪವಿಶೇಷಣಂ ಉಪಸಂಕ್ರಾಮತಿ ।**

**ಅನುವಾದ -** ಹೀಗೇಕೆ ವಿಷಯ ಸಂಬಂಧಗಳೇ ವಿಷಯಾನುಭವದ ಮೂಲಕ ಸುಖ ದುಃಖಗಳಿಗೆ ಏಕೆ ಕಾರಣವಾಗಬಾರದು ? ಅಭಿಮಾನದ ಅಗತ್ಯವೇನು ? ಇದಕ್ಕೆ ಸಮಾಧಾನ **'ಆಗಮಾಪಾಯಿನಃ'** ಎಂಬ ಶ್ಲೋಕದ ಉತ್ತರಾರ್ಧದಲ್ಲಿದೆ.

ಉತ್ತರಾರ್ಧದಲ್ಲಿ 'ಯಾವ ಕಾರಣದಿಂದ ' ಎಂಬ ಅರ್ಥವನ್ನು ಕೊಡುವ **'ಯತಃ'** ಶಬ್ದವನ್ನು ಸೇರಿಸಿಕೊಳ್ಳಬೇಕು. ಅಥವಾ **'ಆಗಮಾಪಾಯಿನಃ ಅನಿತ್ಯಾಃ '** ಎಂಬ ಈ ಎರಡು ವಿಶೇಷಣಗಳು (**ಮಾತ್ರಾಸ್ಪರ್ಶಾಃ** ಎಂಬ ಕರ್ತೃವಾಚಕ ಪದಕ್ಕೆ) ಹೇತುಗರ್ಭ- ವಿಶೇಷಣಗಳು ಎಂದು ಪರಿಗಣಿಸಬೇಕು.

ಶ್ಲೋಕದಲ್ಲಿ **'ಶೀತೋಷ್ಣಸುಖದುಃಖದಾಃ ಮಾತ್ರಾಸ್ಪರ್ಶಾ ಆಗಮಾಪಾಯಿನಃ'** ಎಂದು ಪದಗಳನ್ನು ಜೋಡಿಸಿಕೊಳ್ಳಬೇಕು. ಇಲ್ಲಿ **'ಮಾತ್ರಾಸ್ಪರ್ಶಾಃ'** ಇದು ವಿಶೇಷ್ಯ. ಈ ವಿಶೇಷ್ಯಕ್ಕೆ **'ಶೀತೋಷ್ಣಸುಖದುಃಖದಾಃ'** ಎಂಬ ವಿಶೇಷಣವನ್ನು ಕೂಡಲಾಗಿದೆ. ಇದರಿಂದ ಅನುಭವದ ಮೂಲಕ ಸುಖದುಃಖಗಳಿಗೆ ಕಾರಣವಾಗುವ ವಿಷಯ ಸಂಬಂಧಗಳು (ಮಾತ್ರಾ ಸ್ಪರ್ಶಾಃ) ಆಗಮಾಪಾಯಿಗಳು (ತಾತ್ಕಾಲಿಕಗಳು) ಎಂದಂತಾಗುತ್ತದೆ. ಅದರ ಅಭಿಪ್ರಾಯ - ವಿಷಯ ಸಂಬಂಧಗಳಲ್ಲಿರುವ ಅನುಭವ ಮತ್ತು ಸುಖ-ದುಃಖಾದಿ ಕಾರಣತ್ವ ಶಾಶ್ವತವಲ್ಲ, ಕೆಲವೊಮ್ಮೆ ಇರುತ್ತದೆ. ಕೆಲವೊಮ್ಮೆ ಇರುವುದಿಲ್ಲ ಎಂದು. ಅರ್ಥಾತ್ ವಿಷಯಸಂಬಂಧಗಳಿದ್ದರೂ ಕೆಲವೊಮ್ಮೆ ಸುಖದುಃಖಾದಿಗಳು ಆಗುತ್ತವೆ, ಕೆಲವೊಮ್ಮೆ ಆಗುವುದಿಲ್ಲ. ಈ ಅರ್ಥವು **'ಸವಿಶೇಷಣೇ ಹಿ ವಿಧಿನಿಷೇಧೌ'** ಇತ್ಯಾದಿ ನಿಯಮದಿಂದ ಸಿಗುತ್ತದೆ.

**ವಿವರಣೆ – ಹೇತುಗರ್ಭವಿಶೇಷಣ** – ಕೆಲವು ವಿಶೇಷಣಗಳನ್ನು ವಸ್ತುವಿನ ಪರಿಚಯಕ್ಕಾಗಿ ಕೊಡಲಾಗುವುದು. ಉದಾಹರಣೆಗೆ – 'ಪರಿಮಳದ ಹೂವು' . ಇನ್ನು ಕೆಲವು ವಿಶೇಷಣಗಳನ್ನು ಪ್ರಕೃತ ವಿಷಯವನ್ನು ಸಮರ್ಥನೆ ಮಾಡುವುದಕ್ಕಾಗಿ ಕೊಡಲಾಗುವುದು. **ಉದಾ:** 'ಬುದ್ಧಿವಂತರಾದ ವಿದ್ಯಾರ್ಥಿಗಳು ಅನುತ್ತೀರ್ಣರಾಗುವುದಿಲ್ಲ'. ಇಲ್ಲಿ ಅನುತ್ತೀರ್ಣರಾಗದಿರಲು ವಿದ್ಯಾರ್ಥಿಗಳಲ್ಲಿರುವ ಬುದ್ಧಿವಂತಿಕೆಯು ಕಾರಣವಾಗುತ್ತದೆ. ಅವರು ಏಕೆ ಅನುತ್ತೀರ್ಣ-ರಾಗುವುದಿಲ್ಲ ಎನ್ನುವುದಕ್ಕೆ ಸಮರ್ಥನೆಯನ್ನು ಅದು ನೀಡುತ್ತದೆ. ಅದರಂತೆ 'ಆಗಮಾಪಾಯಿಗಳಾದ ವಿಷಯಸಂಬಂಧಗಳು ಅಭಿಮಾನವಿಲ್ಲದೆ ಸುಖದುಃಖಗಳಿಗೆ ಕಾರಣಗಳಲ್ಲ' ಎಂದಾಗ 'ವಿಷಯ ಸಂಬಂಧಗಳು ಆಗಮಾಪಾಯಿಗಳಾದುದರಿಂದ (ಕೆಲವೊಮ್ಮೆ ಮಾತ್ರ ಇರುವ ಕಾರಣ) ಅವುಗಳು ಮಾತ್ರ ಸುಖದುಃಖಗಳಿಗೆ ಕಾರಣಗಳಲ್ಲ ಅಭಿಮಾನವೂ ಇರಬೇಕು ' ಎಂದು ಅಭಿಪ್ರಾಯವಾಗುತ್ತದೆ. ಇಂತಹ, ವಿಶೇಷಣಗಳು ಹೇತುಗರ್ಭವಿಶೇಷಣಗಳು.

2. **'ಸವಿಶೇಷಣೇ ಹಿ ವಿಧಿನಿಷೇಧೌ ವಿಶೇಷ್ಯೇ ಬಾಧಾತ್ ವಿಶೇಷಣಮ್ ಉಪಸಂಕ್ರಾಮತಃ'** ಇದು ಭಾಷೆಗೆ ಸಂಬಂಧಿಸಿದ ಒಂದು ನಿಯಮ. ವಿಶೇಷಣಸಹಿತವಾದ ಒಂದು ಧರ್ಮಿಗೆ ವಿಧಿಯನ್ನೋ ನಿಷೇಧವನ್ನೋ ಮಾಡಿದಾಗ ಆ ವಿಧಿ – ನಿಷೇಧಗಳು ವಿಶೇಷ್ಯದಲ್ಲಿ ಇಲ್ಲವೆಂದು ಕಂಡುಬಂದಾಗ ವಿಶೇಷಣಕ್ಕೆ ಅನ್ವಯಿಸಬೇಕು. **ಉದಾ:** 'ಮಂತ್ರಿಪದವಿಯಲ್ಲಿದ್ದ ರಾಮನು ಬಿದ್ದನು' ಎಂದಾಗ 'ರಾಮನಿಗಿದ್ದ ಮಂತ್ರಿ ಪದವಿಯು ಬಿದ್ದು ಹೋಯಿತು' ಎಂದರ್ಥ. ಅದರಂತೆ, ಸುಖದುಃಖಗಳನ್ನು ಉಂಟುಮಾಡುವ ವಿಷಯ-ಸಂಬಂಧಗಳು ಕೆಲವೊಮ್ಮೆ ಮಾತ್ರ ಇರುತ್ತವೆ , ಎಂದರೆ ವಿಷಯ ಸಂಬಂಧಗಳಲ್ಲಿ ಸುಖದುಃಖ ಕಾರಣತ್ವವು ಕೆಲವೊಮ್ಮೆ ಮಾತ್ರ ಇರುತ್ತದೆ ಎಂದರ್ಥ. ನಾವು ಎಚ್ಚರದಲ್ಲಿದ್ದರೂ ಮಲಗಿದ್ದರೂ ನಮ್ಮ ದೇಹಕ್ಕೆ ಯಾವುದಾದರೊಂದು ವಸ್ತುವಿನ ಸಂಪರ್ಕವು ಇದ್ದೇ ಇರುತ್ತದೆ. ಆದರೆ, ಎಚ್ಚರದಲ್ಲಿದ್ದಾಗ ಹಾಸಿಗೆಯ ಮೆತ್ತನೆ ಹಾಗೂ ಅದರಿಂದಾಗುವ ಸುಖವು ಸಂವೇದನೆಗೆ ಬರುತ್ತದೆ. ನಿದ್ದೆ ಬಂದ ಮೇಲೆ ಆ ಸುಖದ ಸಂವೇದನೆ ಇರುವುದಿಲ್ಲ. ಹೀಗೆ , ಇಂತಹ ಸಂದರ್ಭದಲ್ಲಿ ಚರ್ಮಕ್ಕೂ ವಸ್ತುವಿಗೂ ಆಗುವ ಸಂಬಂಧವು ಎಚ್ಚರದಲ್ಲಿ ಸುಖಕೊಡುತ್ತದೆ, ನಿದ್ರೆಯಲ್ಲಿ ಕೊಡುವುದಿಲ್ಲ. ಆದ್ದರಿಂದ ವಿಷಯ ಸಂಬಂಧದಲ್ಲಿ ಸುಖದುಃಖಪ್ರದತ್ವವು **'ಆಗಮಾಪಾಯಿ'** ಸಾರ್ವಕಾಲಿಕವಲ್ಲ .

**ಸುಪ್ತ್ಯಾದೌ ಶ್ರೀಚಂದನಾಗ್ನಿಕಣಾದಿಶೀತೋಷ್ಣಸ್ಪರ್ಶಸಂಬಂಧೇ ಅವಿನಾಭೂತ-ಮನಸ್ಸಂಬಂಧಾತ್ಮಸನ್ನಿಕೃಷ್ಟತ್ವಗಿಂದ್ರಿಯಸ್ಯ ಸತ್ವೇಽಪಿ ಸ್ವವಿಷಯಾನುಭವದ್ವಾರಾ ಸುಖದುಃಖಾದಿದತ್ವಸ್ಯ ಅದರ್ಶನಾತ್ ಜಾಗ್ರದ್ದಶಾಯಾಂ ಅಭಿಮಾನಸತ್ವೇ ಏವ ತದ್ದರ್ಶನಾತ್, ಅನ್ವಯವ್ಯತಿರೇಕಾಭ್ಯಾಂ ಅಭಿಮಾನಸಹಿತಾ ಏವ**

**ಮಾತ್ರಾಸ್ಪರ್ಶಾಃ ಸ್ವಸ್ವವಿಷಯಕಧೀದ್ವಾರಾ ಸುಖದುಃಖಾದಿದಾಃ, ನ ತು ಕೇವಲಾ ಇತಿ ಭಾವಃ ।**

**ಅನುವಾದ** - ಮಲಗಿದಾಗ, ಮೂರ್ಛಾವಸ್ಥೆಯಲ್ಲಿದ್ದಾಗ ಶ್ರೀಗಂಧ ಅಥವಾ ಬೆಂಕಿಯ ಕಿಡಿ ಇವುಗಳ ಶೀತಸ್ಪರ್ಶ ಅಥವಾ ಉಷ್ಣಸ್ಪರ್ಶಗಳ ಸಂಬಂಧವು ನಮ್ಮ ಚರ್ಮಕ್ಕೆ ಆಗುತ್ತಿರುತ್ತದೆ. ಮನಸ್ಸು ಸದಾ ದೇಹದೆಲ್ಲೆಡೆ ಇರುವ ತ್ವಗಿಂದ್ರಿಯದೊಂದಿಗೆ ಸಂಪರ್ಕ ಹೊಂದಿರುತ್ತದೆ. ಹೀಗೆ ತ್ವಗಿಂದ್ರಿಯದಿಂದ ಜ್ಞಾನಬರಲು ಬೇಕಾದ ಎಲ್ಲ ಸಲಕರಣೆಗಳು ಇದ್ದರೂ ನಿದ್ರಾಕಾಲದಲ್ಲಿ ಶೀತ-ಉಷ್ಣಗಳ ಜ್ಞಾನ ಬರುವುದಿಲ್ಲ , ಸುಖದುಃಖಗಳೂ ಆಗುವುದಿಲ್ಲ. ಆದರೆ, ಎದ್ದಾಗ ಸುಖದುಃಖಗಳು ಆಗುತ್ತವೆ. ನಿದ್ದೆ ಎಂದರೆ ದೇಹ ಮತ್ತು ವಿಷಯಗಳಲ್ಲಿ ಅಭಿಮಾನವಿಲ್ಲದ ಸ್ಥಿತಿ. ಎಚ್ಚರದಲ್ಲಿ ದೇಹಾಭಿಮಾನ ವಿಷಯಾಭಿಮಾನಗಳು ಉಂಟಾಗುತ್ತವೆ. ಹೀಗೆ ದೇಹಾಭಿಮಾನ ವಿದ್ದಾಗ ಸುಖದುಃಖಗಳ ಸಂವೇದನೆ, ಇಲ್ಲದಿರುವಾಗ ಆ ಸಂವೇದನೆಯೂ ಇಲ್ಲ. ಇದರಿಂದ ಅಭಿಮಾನದ ಜೊತೆ ಸೇರಿದಾಗ ಮಾತ್ರ ವಿಷಯ ಸಂಬಂಧಗಳು ಅನುಭವದ ಮೂಲಕ ಸುಖದುಃಖಗಳಿಗೆ ಕಾರಣವಾಗುತ್ತವೆ ಎಂದು ನಿರ್ಧರಿಸಬಹುದಾಗಿದೆ.

**ಸುಪ್ತೌ ಅನ್ಯೇಂದ್ರಿಯಾಣಾಂ ಉಪರಮೇಽಪಿ ತ್ವಗಿಂದ್ರಿಯಸ್ಯ ನೋ-ಪರಮಃ । ತಸ್ಯ ತದಾಽಪಿ ವಿಷಯಸನ್ನಿಕರ್ಷೋಽಸ್ತೀತಿ ಜ್ಞಾಪನಾಯೈವ ಇತರವಿಷಯಲಾಕ್ಷಣಿಕಶೀತೋಷ್ಣಪದಪ್ರಯೋಗಃ ।**

**ಅನುವಾದ** - ಮಲಗಿರುವಾಗ ಇತರೆಲ್ಲ ಇಂದ್ರಿಯಗಳು ಶಾಂತಗಳಾದರೂ ತ್ವಗಿಂದ್ರಿಯ ಶಾಂತವಾಗಿರುವುದಿಲ್ಲ. ಅದಕ್ಕೆ ಆಗಲೂ ವಿಷಯ ಸಂಬಂಧವು ಇದ್ದೇ ಇರುತ್ತದೆ. ಹೀಗಾಗಿ ಆ ಇಂದ್ರಿಯದ ಮೂಲಕ ನಮಗೆ ಜ್ಞಾನ ಬರುವ ಸಾಧ್ಯತೆ ಇದೆ. ಅಭಿಮಾನವಿಲ್ಲದ್ದರಿಂದ ಜ್ಞಾನ ಬರುವದಿಲ್ಲ. ಈ ವಿಶೇಷವನ್ನು ತಿಳಿಸುವ ಸಲುವಾಗಿ ಇತರ ವಿಷಯಗಳಿಗೆ ಉಪಲಕ್ಷಣವಾಗಿ ಗಂಧಾದಿ ವಿಷಯಗಳನ್ನು ಉಲ್ಲೇಖಿಸದೆ ಭಗವದ್ಗೀತೆಯಲ್ಲಿ ಶೀತ-ಉಷ್ಣ ಎಂಬ ಪದಗಳನ್ನು ಬಳಸಿಯೇ ಇತರ ವಿಷಯಗಳನ್ನು ಉಪಲಕ್ಷಣವಾಗಿ ತೆಗೆದುಕೊಳ್ಳಲಾಗಿದೆ.

**ವಿವರಣೆ**– ಜ್ಞಾನ ಬರಬೇಕಾದರೆ ಆತ್ಮ ಮನಸ್ಸಿನೊಂದಿಗೆ ಸೇರಬೇಕು, ಮನಸ್ಸು ಇಂದ್ರಿಯ ಗಳೊಂದಿಗೆ ಸೇರಬೇಕು. ಇಂದ್ರಿಯಗಳು ವಿಷಯಪದಾರ್ಥಗಳೊಡನೆ ಸೇರಬೇಕು. ನಿದ್ರಾಕಾಲ ದಲ್ಲಿ ಕಣ್ಣು ಮತ್ತು ನಾಲಿಗೆಗಳಿಗೆ ವಿಷಯ ಸಂಪರ್ಕವಿಲ್ಲ. ಕಿವಿಗೆ ಶಬ್ದದೊಂದಿಗೆ, ಮೂಗಿಗೆ ಗಂಧದೊಂದಿಗೆ ಸಂಪರ್ಕವಾದರೂ ಈ ಎರಡು ಇಂದ್ರಿಯಗಳೊಂದಿಗೆ ಮನಸ್ಸಿನ ಸಂಪರ್ಕ ವಿಲ್ಲ. ಏಕೆಂದರೆ ಮನಸ್ಸು ದೇಹದಲ್ಲಿರುವ ನಾಡಿಯೊಳಗೆ ಸೇರಿಕೊಂಡಿರುತ್ತದೆ. ಆದರೆ, ತ್ವಗಿಂದ್ರಿಯವು ದೇಹದ ಎಲ್ಲಾ ಭಾಗಗಳಲ್ಲೂ ವ್ಯಾಪಿಸಿದೆ. ಹೀಗಾಗಿ ಮನಸ್ಸಿನೊಡನೆ ಮತ್ತು

ಬಾಹ್ಯವಿಷಯವಸ್ತುವಿನೊಡನೆ ತ್ವಗಿಂದ್ರಿಯಕ್ಕೆ ಸಂಪರ್ಕವು ಅನಿವಾರ್ಯ. ಆದರೂ ಜ್ಞಾನ ಬರುವುದಿಲ್ಲ. ಅದಕ್ಕಾಗಿ ಅಭಿಮಾನದ ಸಹಾಯವನ್ನು ಒಪ್ಪಲೇ ಬೇಕಾಗುತ್ತದೆ. ಈ ವಿಷಯವನ್ನು ತಿಳಿಸುವುದಕ್ಕಾಗಿ ಗೀತೆಯಲ್ಲಿ ಇತರ ವಿಷಯವಸ್ತುಗಳನ್ನು ಉಲ್ಲೇಖಿಸದೆ ಶೀತ-ಉಷ್ಣಪದಗಳನ್ನು ಉಲ್ಲೇಖಿಸಲಾಗಿದೆ.

**ಆಗಮಾಪಾಯಿತ್ವಂ ಚಾತ್ರ ಗಂಗೋದಕಸ್ಯೇವ ಪ್ರವಾಹತೋ ನಿತ್ಯತ್ವೇಽಪಿ ವ್ಯಕ್ತಿಸ್ವರೂಪೇಣಾನಿತ್ಯತ್ವಂ ನ ವಿವಕ್ಷಿತಮ್ । ಮಾತ್ರಾಸ್ಪರ್ಶಾನಾಂ [1]ಸುಖಾದಿದತ್ವೇ ತದಯೋಗಾತ್ । ತಥಾತ್ವೇ ಸುಪ್ತ್ಯಾದೌ ಸತ್ವೇನಾಭಿಮಾನಸ್ಯ ಪ್ರಕೃತಾನ್ವಯ-ವ್ಯತಿರೇಕೋಕ್ತ್ಯಯೋಗಾತ್ । ಅರ್ಜುನಸ್ಯ ಅಭಿಮಾನನಿವರ್ತನಬೋಧಾ-ನುಪಯೋಗಾಚ್ಚ । ಕಿಂತು ಕಿಂಶುಕಕುಸುಮಾನಾಮಿವ ಪ್ರವಾಹತೋಽಪಿ ವಿಚ್ಛಿದ್ಯ-ಮಾನತ್ವಮ್ । ಸುಪ್ತಿಮೂರ್ಛಾಽಸಂಪ್ರಜ್ಞಾತಸಮಾಧಿಷು ವಿಚ್ಛೇದೇನ ಪ್ರವಾಹ-ವಿಚ್ಛೇದಸಂಭವಾತ್ । ತಸ್ಯ ಪ್ರಕೃತೋಪಯೋಗಾಚ್ಚೇತಿ ಭಾವೇನ ಆಗಮಾ-ಪಾಯಿತ್ವಂ ವ್ಯನಕ್ತಿ- ಅನಿತ್ಯಾ ಇತಿ ॥**

**ಅನುವಾದ** - ಆಗಮ - ಅಪಾಯಿ ಎಂದರೆ ಗಂಗೆಯ ಪ್ರವಾಹದಂತೆ ಅಲ್ಲ. ಗಂಗೆಯ ಒಂದೊಂದು ಕಣಗಳೂ ಬೇರೆ ಬೇರೆಯಾದರೂ ಅದರ ಪ್ರವಾಹ ನಿರಂತರವಾಗಿರುತ್ತದೆ. ಹೀಗೆ ಅಲ್ಲಿ ನೀರಿನ ಕಣಗಳು ಅನಿತ್ಯಗಳು. ಅವುಗಳ ಪ್ರವಾಹವು ನಿತ್ಯ. ನೀರಿನ ಕಣಗಳಂತೆ ಆಗಮಾಪಾಯಿತ್ವವು ಪ್ರಕೃತದಲ್ಲಿ ವಿವಕ್ಷಿತವಲ್ಲ. ಏಕೆಂದರೆ, ನಿದ್ರಾಕಾಲದಲ್ಲಿ ಮಾತ್ರಾಸ್ಪರ್ಶಗಳ ಸುಖದುಃಖಕಾರಣತ್ವಪ್ರವಾಹಕ್ಕೂ ಚ್ಯುತಿಯಾಗುತ್ತದೆ. ಆ ಕಾಲದಲ್ಲಿ ವಿಷಯಗಳ ಜೊತೆಗೆ ಸಂಬಂಧವಿದ್ದರೂ ಸುಖದುಃಖಗಳು ಆಗುವುದಿಲ್ಲ . ಆ ಕಾಲದಲ್ಲೂ ಅದು ಸುಖ ದುಃಖಪ್ರದವಾಗುವುದಾದಲ್ಲಿ, ಹಿಂದೆ ಹೇಳಿದಂತೆ, 'ಅಭಿಮಾನವಿದ್ದ ಕಾಲದಲ್ಲಿ ಮಾತ್ರ ವಿಷಯ ಸಂಬಂಧಗಳು ಸುಖದುಃಖಗಳನ್ನು ನೀಡುತ್ತವೆ , ಅಭಿಮಾನವಿಲ್ಲದಿದ್ದಾಗ ಸುಖದುಃಖವನ್ನು ಉಂಟು ಮಾಡುವುದಿಲ್ಲ' ಎಂದು ಹೇಳಲು ಬರುವುದಿಲ್ಲ. ಅಷ್ಟೇ ಅಲ್ಲದೆ 'ಅಭಿಮಾನವೇ ದುಃಖಕಾರಣ, ಅರ್ಜುನ, ನೀನು ಅಭಿಮಾನವನ್ನು ಬಿಟ್ಟು ಬಿಡು' ಎಂದು ಶ್ರೀಕೃಷ್ಣನ ಉಪದೇಶವೂ ಸರಿಯಾಗದು . ಏಕೆಂದರೆ, ಸುಖದುಃಖಗಳಾಗಲು ಅಭಿಮಾನವು ಕಾರಣವೇ ಅಲ್ಲ ತಾನೆ !

ಆದ್ದರಿಂದ ಪ್ರಕೃತದಲ್ಲಿ ಆಗಮಾಪಾಯಿತ್ವ ಕಿಂಶುಕದ ಹೂವಿನಂತೆ, ಹೊರತು ಗಂಗೆಯ ಪ್ರವಾಹದಂತೆ ಅಲ್ಲ. ಏಕೆಂದರೆ, ಮಲಗಿದಾಗ, ಮೂರ್ಛೆ ಹೋದಾಗ ಮತ್ತು ಅಸಂಪ್ರಜ್ಞಾತ ಸಮಾಧಿಯಲ್ಲಿದ್ದಾಗ ವಿಷಯ ಸಂಬಂಧವಿದ್ದರೂ ಅವುಗಳಿಂದ ಸುಖದುಃಖಗಳು ಆಗುವುದಿಲ್ಲ.

1. ಸುಖಾದಿದತ್ವೇನ

ಇಂತಹ ಆಗಮಾಪಾಯಿತ್ವವೇ ಅಭಿಮಾನಕ್ಕೆ ಗಮಕವಾಗುವುದರಿಂದ ಪ್ರಕೃತಕ್ಕೆ ಉಪಯೋಗವಾಗುತ್ತದೆ. ಇದನ್ನು ಸೂಚಿಸಲು ಗೀತೆಯಲ್ಲಿ 'ಅನಿತ್ಯಾಃ' ಎಂಬ ಪುನರುಕ್ತಿ ಇದೆ.

**ವಿವರಣೆ - 'ಆಗಮ + ಅಪಾಯಿ'** ಎಂದರೆ ಬಂದು-ಹೋಗುವಂತಹುದು. ಅಂತಹ ವಸ್ತು ಎರಡು ವಿಧವಾಗಿರುತ್ತದೆ - ಕೆಲವು ಸಮಯದವರೆಗೆ ಇದ್ದು ಆಮೇಲೆ ಇಲ್ಲದಾಗಿ ಮತ್ತೆ ಕಾಣಿಸಿಕೊಳ್ಳುವಂತಹುದು. **ಉದಾ :** ಮುತ್ತುಗಮರದ ಹೂ. ನಿರ್ದಿಷ್ಟ ಋತುವಿನಲ್ಲಿ ಮುತ್ತುಗ ಮರ ಪ್ರತಿವರ್ಷವೂ ಹೂ ಬಿಡುತ್ತದೆ. ಆಮೇಲೆ ಅನೇಕ ತಿಂಗಳುಗಳ ಕಾಲ ಹೂವೇ ಇಲ್ಲ. ಮತ್ತೆ ಆ ಋತು ಬಂದಾಗ ಹೂವು. ಇದು ಒಂದು ರೀತಿಯ **'ಆಗಮ- ಅಪಾಯಿ'**. ಇನ್ನೊಂದು, ಗಂಗೆಯ ಪ್ರವಾಹ . ಅದು ನಿರಂತರವಾದರೂ ನೀರಿನ ಕಣಗಳು ಕ್ಷಣಕ್ಷಣಕ್ಕೂ ಬೇರೆ ಬೇರೆ. ಕಣಗಳು ಬೇರಾದರೂ ಪ್ರವಾಹ ನಿರಂತರ. ಅದಕ್ಕೆ ಕಾಲದ ಅಂತರವಿಲ್ಲ. ಹೀಗೆ ಗಂಗೆಯ ಕಣವೂ **'ಆಗಮ-ಅಪಾಯಿ'**. ಪ್ರಕೃತದಲ್ಲಿ ವಿಷಯಸಂಬಂಧಗಳು ಸುಖದುಃಖಗಳಿಗೆ ಕಾರಣವಾಗುವುದು 'ಆಗಮ-ಅಪಾಯಿ' ಎನ್ನಲಾಗಿದೆ. ಇದು ಮುತ್ತುಗಮರದ ಹೂವಿನಂತೆಯೋ ಅಥವಾ ಗಂಗೆಯ ನೀರಿನ ಕಣದಂತೆಯೋ? ಅದು ಮುತ್ತುಗಪುಷ್ಪದಂತೆ, ಹೊರತು , ಗಂಗೆಯ ನೀರಿನ ಕಣದಂತೆ ಅಲ್ಲ. ಏಕೆಂದರೆ, ನಿದ್ರಾಕಾಲದಲ್ಲಿ ಮೂರ್ಛಾವಸ್ಥೆಯಲ್ಲಿ ಅಸಂಪ್ರಜ್ಞಾತಸಮಾಧಿಯಲ್ಲಿ ವಿಷಯಸಂಪರ್ಕನಿಮಿತ್ತವಾಗಿ ಸುಖದುಃಖಗಳು ಆಗುವುದಿಲ್ಲ. ಹೀಗೆ ಮುತ್ತುಗ ಹೂವಿನಂತೆ ಅದಕ್ಕೆ ಕೆಲವೊಮ್ಮೆ ವಿಚ್ಛೇದವಿದೆ. ಗಂಗಾ ಪ್ರವಾಹದಂತೆ ನೈರಂತರ್ಯವಿಲ್ಲ. ಈ ವಿಚ್ಛೇದಕ್ಕೆ ಕಾರಣವೇನು ? ಎಂಬ ವಿಚಾರ ಬಂದಾಗ ಅಭಿಮಾನವೂ ಸುಖದುಃಖಗಳಿಗೆ ಕಾರಣವೆಂದು ತಿಳಿಯುತ್ತದೆ. ಅಭಿಮಾನವಿದ್ದಾಗ ವಿಷಯಸಂಬಂಧಗಳು ಸುಖದುಃಖಗಳನ್ನು ಉಂಟು ಮಾಡುತ್ತವೆ . ಅಭಿಮಾನವಿಲ್ಲದ ನಿದ್ರೆ , ಮೂರ್ಛಾದಿ ಕಾಲಗಳಲ್ಲಿ ಸುಖದುಃಖವನ್ನು ಉಂಟು ಮಾಡುವುದಿಲ್ಲ. ಹೀಗೆ ವಿಷಯಸಂಬಂಧಗಳು ಮಾತ್ರ ಸುಖದುಃಖಗಳಿಗೆ ಕಾರಣವಲ್ಲ ಅವುಗಳ ಜೊತೆಗೆ ಅಭಿಮಾನವೂ ಸೇರಬೇಕು ಎಂದು ನಿರ್ಧರಿಸಬಹುದಾಗಿದೆ. ಒಂದು ವೇಳೆ ವಿಷಯಸಂಬಂಧಗಳು ಎಡಬಿಡದೆ, ಗಂಗಾಪ್ರವಾಹದಂತೆ ನಿರಂತರವಾಗಿ ಸುಖದುಃಖಗಳನ್ನು ಉಂಟು ಮಾಡುವುದಾದಲ್ಲಿ ಅಭಿಮಾನದ ಅಗತ್ಯವೇ ಇರುತ್ತಿರಲಿಲ್ಲ.

ಈ ವಿಶೇಷವನ್ನು ತಿಳಿಸುವ ಉದ್ದೇಶದಿಂದ ಗೀತೆಯಲ್ಲಿ **'ಆಗಮಾಪಾಯಿನಃ'** ಎಂದು ಹೇಳಿ ಅದೇ ಅರ್ಥವನ್ನು ಕೊಡುವ **'ಅನಿತ್ಯಾಃ'** ಎಂಬ ಪದವನ್ನು ಪ್ರಯೋಗಿಸಲಾಗಿದೆ.

**ಶೀತೋಷ್ಣಸುಖದುಃಖದಾಃ ಮಾತ್ರಾಸ್ಪರ್ಶಾ ಅನಿತ್ಯಾಃ = ಪ್ರವಾಹತೋಽಪಿ ಅನಿತ್ಯಾಃ । ತೇಷಾಂ ಸುಖಾದಿದತ್ವಂ ಪ್ರವಾಹತೋಽಪ್ಯನಿತ್ಯಂ ಯತೋಽ-ತೋಽನ್ವಯವ್ಯತಿರೇಕಾಭ್ಯಾಂ ಅಭಿಮಾನಯುತಾ ಏವ ಸುಖಾದಿದಾ ಇತ್ಯರ್ಥಃ ।**

**ಅತ ಇತಿ ಶೇಷಃ । ಅಭಿಮಾನಹೀನಮಾತ್ರಾಸ್ಪರ್ಶಾನಾಂ ಸುಖಾದಿದತ್ವಾಭಾವಾತ್ ಅಭಿಮಾನತ್ಯಾಗೇನ ತಾನ್ಮಾತ್ರಾಸ್ಪರ್ಶಾಂಸ್ತಿತಿಕ್ಷಸ್ವ = ವಿಫಲೀಕುರು । ಸುಖದುಃಖಾದಿದಾ ಯಥಾ ನ ಭವಂತಿ ತಥಾ ಕುರು । ನ ಹ್ಯಭಿಮಾನಂ ವಿನಾ ಕೃತೋ ಮಾತ್ರಾಸ್ಪರ್ಶರೂಪಃ ಸಾಮಗ್ರ್ಯೈಕದೇಶಃ ಸುಖಾದಿದಾನೇ ಶಕ್ತೋ ಭವತೀತಿ ಭಾವಃ ॥ 14 ॥**

**ಅನುವಾದ** - ಶೀತ ಉಷ್ಣ ಇವುಗಳ ಅನುಭವವನ್ನೂ ಆ ಮೂಲಕ ಸುಖದುಃಖಗಳನ್ನೂ ಉಂಟುಮಾಡುವ ವಿಷಯ ಸಂಬಂಧಗಳು, **ಅನಿತ್ಯಾಃ**= ಪ್ರವಾಹರೂಪದಿಂದಲೂ ಅನಿತ್ಯವಾಗಿವೆ, ವ್ಯಕ್ತಿರೂಪದಿಂದ ಮಾತ್ರವಲ್ಲ. ಅಂದರೆ ಅವುಗಳಲ್ಲಿರುವ ಸುಖಾದಿಕಾರಣತ್ವವು ಪ್ರವಾಹರೂಪದಿಂದಲೂ ಅನಿತ್ಯವಾಗಿದೆ. ನಿದ್ರಾದಿಕಾಲದಲ್ಲಿ ಅವುಗಳಿದ್ದರೂ ಅವುಗಳಿಂದ ಆತ್ಮನಿಗೆ ಸುಖಾದಿಗಳು ಆಗುವುದಿಲ್ಲ. ಈ ಕಾರಣದಿಂದಾಗಿ, ಅಭಿಮಾನದೊಂದಿಗೆ ಅನ್ವಯ ಮತ್ತು ವ್ಯತಿರೇಕಗಳಿರುವ ಕಾರಣ ಅಭಿಮಾನದ ಸಹಾಯವಿದ್ದಾಗ ಮಾತ್ರ ಅವುಗಳು ಸುಖಾದಿಗಳನ್ನು ಉಂಟುಮಾಡುತ್ತವೆ ಎಂದು ತಿಳಿಯುತ್ತದೆ.

ಶ್ಲೋಕದಲ್ಲಿ '**ತಾನ್ ತಿತಿಕ್ಷಸ್ವ**' ಎನ್ನುವುದರ ಮೊದಲು '**ಅತಃ**' ಎಂಬ ಶಬ್ದವನ್ನು ಸೇರಿಸಿಕೊಳ್ಳಬೇಕು. **ಅತಃ** = ವಿಷಯಾಭಿಮಾನ, ದೇಹಾಭಿಮಾನ ಇಲ್ಲದಿದ್ದಾಗ ವಿಷಯ ಸಂಬಂಧಗಳು ಸುಖ ಅಥವಾ ದುಃಖಕ್ಕೆ ಕಾರಣಗಳಾಗುವುದಿಲ್ಲವಾದ ಕಾರಣ, ಈ ಎರಡು ವಿಧದ ಅಭಿಮಾನಗಳನ್ನು ತೊರೆದು **ತಾನ್‌ತಿತಿಕ್ಷಸ್ವ** = ವಿಷಯ ಸಂಬಂಧಗಳನ್ನು ನಿಷ್ಫಲಗೊಳಿಸು. ಅಂದರೆ, ಅವುಗಳು ಸುಖ ಅಥವಾ ದುಃಖವನ್ನು ಉಂಟುಮಾಡದಂತೆ ಪ್ರಯತ್ನಿಸು. ಅಭಿಮಾನವಿಲ್ಲದಿದ್ದಾಗ ವಿಷಯ ಸಂಬಂಧಗಳು ಸುಖ ದುಃಖದ ಸಾಮಗ್ರಿಯಲ್ಲಿ ಘಟಕವಾದ ಒಂದು ಅಂಶಮಾತ್ರವಾದುದರಿಂದ ಅವುಗಳು ಸುಖದುಃಖವನ್ನು ಉಂಟು ಮಾಡಲಾರವು. ಏಕೆಂದರೆ ಅನೇಕ ಸಾಮಗ್ರಿಗಳು ಸೇರಿದಾಗ ಆಗುವ ಕಾರ್ಯವು ಅವುಗಳಲ್ಲಿ ಯಾವುದೋ ಒಂದು ಮಾತ್ರ ಇದ್ದಾಗ ಆಗದು.

**ವಿವರಣೆ**– ಒಟ್ಟು ಶ್ರೀಕೃಷ್ಣ ಹೀಗೆ ಹೇಳುತ್ತಿದ್ದಾನೆ – ಅರ್ಜುನ, ನಿನ್ನ ಬಾಂಧವರ ದೇಹದಲ್ಲಿ ಗಾಯವಾಗಿ ರಕ್ತಸುರಿದಾಗ ನನಗೆ ದುಃಖವೆನಿಸುತ್ತದೆ. ಅವರ ಅಗಲಿಕೆಯಿಂದ ನನಗೆ ಒಡನಾಟದ ಸುಖವಿಲ್ಲದಾಗುತ್ತದೆ ಎಂದು ತಾನೆ, ನಿನ್ನ ಸಮಸ್ಯೆ . ಇದನ್ನು ಹೀಗೆ ಪರಿಹರಿಸಿಕೊಳ್ಳಬಹುದು – ಒಬ್ಬ ಸಾಮಾನ್ಯ ಯೋಧನಿಗೆ ಗಾಯವಾದಾಗ ನಿನಗೆ ದುಃಖವೆನಿಸುವುದಿಲ್ಲ , ಏಕೆ ? ಅವನು ನಿನ್ನವನಲ್ಲ. ಹಾಗಾದರೆ ಗಾಯವನ್ನು ನೋಡುವ ಕಾರಣದಿಂದಲೇ ದುಃಖವಾಗುವುದಲ್ಲ . ನೋಡುವುದರ ಜೊತೆಯಲ್ಲಿ 'ನನ್ನವರು' ಎಂಬ

ಅಭಿಮಾನವೂ ಸೇರಬೇಕು . ಆಗ ದುಃಖವೆನಿಸುತ್ತದೆ. ಅಂದರೆ , ಅಭಿಮಾನದ ಜೊತೆ ಸೇರಿದಾಗ ವಿಷಯಸಂಬಂಧವು ದುಃಖಕ್ಕೆ ಕಾರಣವಾಗುತ್ತದೆ. ಈ ಕಾರಣಕ್ಕಾಗಿ ನೀನು ಧರ್ಮ ಯುದ್ಧವನ್ನೇ ಬಿಟ್ಟು ಬಿಡಬೇಕಾಗಿಲ್ಲ. ಭೀಷ್ಮಾದಿಗಳಲ್ಲಿ ಅಭಿಮಾನವನ್ನು ಬಿಟ್ಟುಬಿಡು . ಭೀಷ್ಮರಲ್ಲಿ 'ನನ್ನ ತಾತ' ಎಂಬ ಅಭಿಮಾನವನ್ನು ತ್ಯಜಿಸಿ ಅವರೂ ಅಧರ್ಮದ ಕಡೆ ನಿಂತವರು ಎಂದು ತಿಳಿ. ಆಗ ಅವರಿಗೆ ಗಾಯವಾದರೂ ನಿನ್ನ ಮನಸ್ಸಿಗೆ ಖೇದವೆನಿಸುವುದಿಲ್ಲ. ಇದು ಶ್ರೀಕೃಷ್ಣ ಅರ್ಜುನನಿಗೆ ಕೊಟ್ಟ ಸಂದೇಶ.

2. **ತಿತಿಕ್ಷಸ್ವ** –ಈ ಶಬ್ದಕ್ಕೆ ಸಹಿಸು ಎಂದು ಅರ್ಥವಲ್ಲ. ವ್ಯರ್ಥಗೊಳಿಸು ಎಂದು ಅರ್ಥ. ವಿಷಯ ಸಂಬಂಧಗಳು ಅಭಿಮಾನದ ಜೊತೆಗೂಡಿದಾಗ ಸುಖದುಃಖಗಳೆಂಬ ಫಲವನ್ನು ಕೊಡುತ್ತವೆ . ಅಭಿಮಾನವನ್ನು ಕಿತ್ತೊಗೆದಾಗ ಅವುಗಳ ಯಾವ ಆಟವೂ ನಡೆಯುವುದಿಲ್ಲ. ಅವು ನಿಷ್ಫಲಗಳಾಗುತ್ತವೆ.

3. **ಸಾಮಗ್ರಿ – ಏಕದೇಶ** – ಒಂದು ಕಾರ್ಯಕ್ಕೆ ಬೇಕಾದ ಕಾರಣಗಳ ಸಮಷ್ಟಿಯೇ 'ಸಾಮಗ್ರೀ'. ಉದಾ : ಬಟ್ಟೆಗೆ ಬೇಕಾದ ನೂಲು, ಯಂತ್ರ, ನೇಯ್ಗೆಯ ವ್ಯಕ್ತಿ ಇತ್ಯಾದಿ. ಇವುಗಳು ಜೊತೆ ಸೇರಿದರೆ ಮಾತ್ರ ಬಟ್ಟೆ ಸಿದ್ಧವಾಗುತ್ತದೆ. ಇವುಗಳಲ್ಲಿ ಯಾವುದಾದರೊಂದು ಇಲ್ಲವಾದರೂ ಬಟ್ಟೆ ಸಿದ್ಧಗೊಳ್ಳುವುದಿಲ್ಲ . ಸಾಮಗ್ರಿಯಿಂದಾಗುವ ಕೆಲಸ ಅದರ ಏಕದೇಶದಿಂದ ಅಂದರೆ ಸಾಮಗ್ರಿಯಲ್ಲಿ ಸೇರಿದ ಪ್ರತ್ಯೇಕ ಒಂದೊಂದು ಕಾರಣದಿಂದ ಆಗುವುದಿಲ್ಲ. ಪ್ರಕೃತ ಸುಖದುಃಖವಾಗಬೇಕಾದರೆ ವಿಷಯಸಂಬಂಧ , ದೇಹಾದ್ಯಭಿಮಾನ ಇವೆರಡೂ ಬೇಕು. ಇದು ಸಾಮಗ್ರಿ . ಎರಡರಲ್ಲಿ ಒಂದಾದ ಅಭಿಮಾನ 'ಏಕದೇಶ'. ಅದು ಇಲ್ಲದೇ ಹೋದಲ್ಲಿ ವಿಷಯಸಂಬಂಧವು ಸುಖದುಃಖಗಳನ್ನು ಉಂಟುಮಾಡುವುದಿಲ್ಲ. ॥ 14॥

## ಬಿಡು ಅಭಿಮಾನವನು, ಬಿಡದಿರು ಕರ್ಮವನು

**ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥ 15 ॥**

**ಅರ್ಥ** – ಪುರುಷಶ್ರೇಷ್ಠನಾದ ಅರ್ಜುನನೆ, ಈ ವಿಷಯ ಸಂಬಂಧಗಳು ವಿಷಯ ಸುಖದುಃಖಗಳೆರಡನ್ನೂ ಅನಿಷ್ಟವೆಂದು ಸಮಾನವಾಗಿ ಕಾಣಬಲ್ಲ ಯಾರಿಗೆ (ಅಭಿಮಾನವನ್ನು ತ್ಯಜಿಸಿದವನಿಗೆ) ದೇಹಾಭಿಮಾನವಿರುವಾಗಲೇ ಅಂದರೆ , ನಿದ್ದೆ ಇಲ್ಲದೆ ಎಚ್ಚರದ ಸ್ಥಿತಿಯಲ್ಲೂ ಸುಖ ದುಃಖಗಳನ್ನು ಉಂಟುಮಾಡಿ ಬಾಧಿಸುವುದಿಲ್ಲವೋ ಅಂತಹವನು ಮೋಕ್ಷಕ್ಕೆ ಅರ್ಹನಾಗುತ್ತಾನೆ.

(ದೇಹ ಮತ್ತು ವಿಷಯಗಳಲ್ಲಿ ಅಭಿಮಾನವನ್ನು ತ್ಯಾಗ ಮಾಡುವ ಬಗೆ ಹೀಗೆ- ಸುಖ ಅಥವಾ ದುಃಖಗಳಾದಾಗ ಅದರಿಂದಾಗುವ ಏರಿಳಿತಗಳನ್ನು ತಡೆಯುವ ಪ್ರಯತ್ನ ಮಾಡಬೇಕು. ಇದರಿಂದ ಕ್ರಮೇಣ ಸಮದುಃಖಸ್ಥಿತಿಯನ್ನು ಪಡೆಯಬಹುದು. ದುಃಖವು ಹೇಗೆ ಬೇಡವೋ ವಿಷಯಸುಖವೂ, ದುಃಖ ಹೇತುವಾದುದರಿಂದ, ನನಗೆ ಬೇಡ ಎಂಬ ಉದಾಸೀನಸ್ಥಿತಿಯೇ ಸಮದುಃಖಸುಖತೆ. ಇದರಿಂದ ಕ್ರಮೇಣ ವಿಷಯ, ದೇಹಗಳಲ್ಲಿ ಅಭಿಮಾನ ಕಡಿಮೆ ಯಾಗುತ್ತದೆ.)

**ನನು ದುಃಖಾಭಾವಸ್ಯ ಯುದ್ಧಾಕರಣೇऽಪಿ ಸಂಭವಾತ್ ಕಿಂ ತತ್ಕೃತ್ವಾ ದುಃಖಾಭಾವಾಯಾಭಿಮಾನತ್ಯಾಗೇನೇತ್ಯಾಶಂಕ್ಯ ದೇಹಾದ್ಯಭಿಮಾನತ್ಯಾಗೇನ ಭವನ್ ದುಃಖಾಭಾವಃ ಸ್ವಯಂ ಫಲರೂಪೋऽಪಿ ಪರಮಪುಮರ್ಥಹೇತುಶ್ಚ ಭವತೀತ್ಯಾಹ- ಯಂ ಹೀತಿ ॥**

**ಅನುವಾದ** – ಅರ್ಜುನ ಕೇಳಬಹುದು – 'ಯುದ್ಧ ಮಾಡದಿರುವುದರಿಂದಲೇ ದುಃಖವನ್ನು ಬಾರದಂತೆ ಮಾಡಿಕೊಳ್ಳಬಹುದು. ಹೀಗಿರುವಾಗ, ಕೃಷ್ಣ, ಯುದ್ಧ ಮಾಡಿ, ಅದರಿಂದಾಗ ಬಹುದಾದ ದುಃಖವನ್ನು ಅಭಿಮಾನತ್ಯಾಗದಿಂದ ಬಾರದಂತೆ ಮಾಡಿಕೊಳ್ಳು ಎನ್ನುವ ನಿನ್ನ ಉಪದೇಶ ಹೇಗೆ ಸರಿ ?' ಎಂದು. ಇದಕ್ಕೆ ಶ್ರೀಕೃಷ್ಣನ ಉತ್ತರ – ಯುದ್ಧ ನಿನ್ನ ಕರ್ತವ್ಯ. ಅದನ್ನು ನಿರ್ವಹಿಸುತ್ತಾ, ಆಗ ಬರಬಹುದಾದ ದುಃಖವನ್ನು ಅಭಿಮಾನ ತ್ಯಾಗದಿಂದ ಬಾರದಂತೆ ಮಾಡಿಕೊಂಡರೆ ಅದೇ ಒಂದು ಫಲವಾಗುವುದು. ಮಾತ್ರವಲ್ಲದೆ ಅದರಿಂದ ಮೋಕ್ಷವೂ ದೊರಕುವುದು . ಇದನ್ನು '**ಯಂ ಹಿ**' ಎಂಬ ಮುಂದಿನ ಶ್ಲೋಕ ಹೇಳುತ್ತದೆ.

**ಹೇ ಪುರುಷರ್ಷಭ = ಪುರುಷಶ್ರೇಷ್ಠ ಪಾರ್ಥ । ಏತೇ = ಮಾತ್ರಾಸ್ಪರ್ಶಾಃ ವಿಷಯೇಂದ್ರಿಯಸನ್ನಿಕರ್ಷಾಃ ಪುರುಷಂ- ಪುರಂ = ದೇಹಂ, ಸರತಿ = ಗಚ್ಛತಿ 'ಸೃಗತೌ' ಪ್ರತ್ಯಕ್ಷತೋ ಜಾನಾತಿ । ಉಪಪದಾಂತಸ್ಯೋಕಾರಃ । ಸರತೇರ್ಡ- ಪ್ರತ್ಯಯಃ । ಷತ್ವಮ್ । ಶರೀರದರ್ಶನವಂತಮ್ । ಯದ್ವಾ , ಪುರು= ಪೂರ್ಣಂ ಬ್ರಹ್ಮ । ತತ್ಸರತ್ಯವಗಚ್ಛತೀತಿ ಬ್ರಹ್ಮಜ್ಞಾನೀ, ತಮ್ ।**

**ಅನುವಾದ** – ಹೇ ಪುರುಷರ್ಷಭ ! ಎಲೈ ಶ್ರೇಷ್ಠಪುರುಷನಾದ ಅರ್ಜುನನೆ, **ಏತೇ**= ಮಾತ್ರಾಸ್ಪರ್ಶಗಳು ಅಂದರೆ, ವಿಷಯ ಸಂಬಂಧಗಳು, **ಪುರುಷಂ** – (ಪುರು+ಷಂ) **ಪುರಂ** = ದೇಹವನ್ನು , **ಸರತಿ** = ಗಚ್ಛತಿ, ಪ್ರತ್ಯಕ್ಷವಾಗಿ ನೋಡುತ್ತಾನೆ. ಅಂದರೆ ಎಚ್ಚರದ ಸ್ಥಿತಿಯಲ್ಲಿ ಇರುವವನು ಅಂತಹವನು ಪುರುಷ ಎಂದು ಇಲ್ಲಿ ವಿವಕ್ಷಿತ . '**ಪುರು+ಷ**' ಇಲ್ಲಿರುವ '**ಷ**' ಎಂಬ ಪದವು 'ಚಲಿಸು, ತಿಳಿ' ಎಂಬ ಅರ್ಥದ 'ಸೃ' ಧಾತುವಿನಿಂದ ನಿಷ್ಪನ್ನವಾಗಿದೆ. '**ಸೃ**' ಧಾತುಗೆ '**ಡ**'

ಪ್ರತ್ಯಯವು ಬಂದಾಗ ಅದರ ಜೊತೆಯಲ್ಲಿರುವ '**ಪುರ**' ಎಂಬ ಪದಕ್ಕೆ ಉಕಾರ ಬಂದು '**ಪುರು**' ಎಂದಾಗುತ್ತದೆ. 'ಸ' ಕಾರಕ್ಕೆ ಷಕಾರವು ಬಂದು '**ಪುರುಷ**' ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಒಟ್ಟನಲ್ಲಿ ಶರೀರದ ಪರಿಜ್ಞಾನವಿರುವವನು, ಎಚ್ಚರದಲ್ಲಿರುವವನು ಎಂದರ್ಥ. ಅಥವಾ, **ಪುರು**= ಪೂರ್ಣನಾದ ಬ್ರಹ್ಮ, ಅವನನ್ನು, **ಸರತಿ** = ತಿಳಿಯುವವನು ಅರ್ಥಾತ್ ಬ್ರಹ್ಮಜ್ಞಾನೀ 'ಪುರುಷ' ಎನಿಸುತ್ತಾನೆ. ಇಂತಹ ಪುರುಷನನ್ನು (ಮಾತ್ರಾಸ್ಪರ್ಶಾಃ ನ ವ್ಯಥಯಂತಿ).

**ಧೀರಂ= ಸುಖೇ ದುಃಖೇ ಚ ಪ್ರಾಪ್ತೇ ಸತಿ ತತ್ಕಾರ್ಯಯೋರುತ್ಸೇಕ-ವಿಷಾದಯೋಃ ಸ್ತಂಭಕಪ್ರಯತ್ನವಂತಂ, ಅತ ಏವ ಸಮದುಃಖಸುಖಮ್ । ಅನುಪಾದೇಯತ್ವೇನ ಧರ್ಮೇಣ, ದುಃಖೇನ ಸಮಂ ಸುಖಂ ಯಸ್ಯ ಸ ತಥಾ, ತಮ್ । ದುಃಖಂ ಯಥಾಽಪುಮರ್ಥತ್ವಹೇತುನಾಽನುಪಾದೇಯಂ ತಥಾ ವೈಷಯಿಕಂ ಸುಖಮಪಿ ಅಮೃತತ್ವವಿರೋಧಿತ್ವಾತ್ ಅನುಪಾದೇಯಂ ಯಸ್ಯ ಸ ಸಮದುಃಖಸುಖಃ । ದುಃಖಸಮಂ ಸುಖಮಿತಿ ಯಾವತ್ । ಅತ ಏವ ಯಂ= ಅಭಿಮಾನಹೀನಂ ಜೀವಂ, ಸ್ತ್ರೀಜನಂ ಪುಂಜನಂ ವಾ, ನ ವ್ಯಥಯಂತಿ= ನ ಚಾಲಯಂತಿ ಸುಖದುಃಖಕೃತೋಚ್ಚತ್ವನೀಚತ್ವಲಕ್ಷಣವಿಕಾರಂ ನ ಪ್ರಾಪಯಂತಿ ಸೋಽಧಿಕಾರೀ ಅಮೃತತ್ವಾಯ ಮುಕ್ತಯೇ ಕಲ್ಪತೇ= ಸಮರ್ಥೋ ಭವತಿ ।**

**ಅನುವಾದ - ಧೀರಂ** = ಸುಖ ದುಃಖಗಳು ಬಂದಾಗ ಅದರಿಂದಾಗುವ ಏರು-ಇಳಿತಗಳು ಬರದಂತೆ ತಡೆದುಹಿಡಿದುಕೊಳ್ಳಲು ಪ್ರಯತ್ನವಿರುವವನನ್ನು .

ಅದರಿಂದಾಗಿಯೇ, **ಸಮದುಃಖಸುಖಂ**= ಸುಖ ದುಃಖಗಳೆರಡೂ ನನಗೆ ಬೇಡ ವಾದವುಗಳು ಎನ್ನುವ ಸಮಭಾವವುಳ್ಳವನನ್ನು . ದುಃಖವು ಪುರುಷಾರ್ಥವಲ್ಲದ ಕಾರಣ ಹೇಗೆ ಬೇಡವೋ ವಿಷಯಾನುಭವದಿಂದಾಗುವ ಸುಖವೂ ಹಾಗೆಯೇ ನನಗೆ ಬೇಡ. ಅದೂ ಮೋಕ್ಷಕ್ಕೆ ವಿರೋಧಿಯಾದುದು. ಈ ಭಾವನೆ ಇಟ್ಟುಕೊಂಡವನು ಸಮದುಃಖಸುಖ ಎನಿಸುತ್ತಾನೆ. ಅರ್ಥಾತ್ ಅಂತಹವನಿಗೆ ಸುಖವೂ ದುಃಖಕ್ಕೆ ಸಮಾನವಾಗುವುದು.

ಇಂತಹ ಸ್ಥಿತಿಯನ್ನು ತಲುಪಿರುವ ಕಾರಣದಿಂದಾಗಿಯೇ **ಯಂ** = ಅಭಿಮಾನರಹಿತನಾದ ಯಾವ ವ್ಯಕ್ತಿಯನ್ನು , ಅವನು ಸ್ತ್ರೀಯಾಗಿರಬಹುದು ಅಥವಾ, ಪುರುಷನೇ ಆಗಿರಬಹುದು, (ವಿಷಯ ಸಂಬಂಧಗಳು) **ನ ವ್ಯಥಯಂತಿ** = ವಿಚಲಿತನನ್ನಾಗಿ ಮಾಡಲಾರವೋ, ಅರ್ಥಾತ್, ಸುಖ ಪ್ರಯುಕ್ತವಾಗಿ ಉಬ್ಬಿದವನನ್ನಾಗಿಯೂ ದುಃಖನಿಮಿತ್ತದಿಂದ ಕುಗ್ಗಿದವನನ್ನಾಗಿಯೂ ಮಾಡಲಾರವೋ ಇಂತಹ ಸಾಧಕನು, **ಅಮೃತತ್ವಾಯ** = ಮೋಕ್ಷಕ್ಕಾಗಿ, **ಕಲ್ಪತೇ** = ಅರ್ಹತೆಯನ್ನು ಪಡೆಯುತ್ತಾನೆ.

**ಅತ್ರ ಧೀರಮಿತಿ ಸಮದುಃಖಸುಖತ್ವೇ ಹೇತುಃ । ತಚ್ಚಾಭಿಮಾನತ್ಯಾಗೇ ಹೇತುಃ। ಸಮದುಃಖಸುಖೋ ಜೀವಃ ಸುಖಹೇತುಷು ಶೋಭನಾಧ್ಯಾಸಲಕ್ಷಣಾಭಿಮಾನವಾಂಸ್ತದ್ವಿರೋಧಿಷು ದ್ವೇಷರೂಪಾಭಿಮಾನವಾಂಶ್ಚ ಕಥಂ ಭವೇದಿತಿ ।**

**ಅನುವಾದ** - ಈ ಶ್ಲೋಕದಲ್ಲಿರುವ **'ಧೀರಂ'** ಎಂಬುದು ಸಾಧಕನು ಸಮದುಃಖ-ಸುಖನಾಗಲು ಕಾರಣವನ್ನು ತಿಳಿಸುತ್ತದೆ. ಸಮದುಃಖಸುಖತೆಯು ಅಭಿಮಾನ ತ್ಯಜಿಸಲು ಬೇಕಾಗಿರುವ ಕಾರಣ. ಹೇಗೆಂದರೆ, ಸುಖವೂ ಬೇಡ ದುಃಖವೂ ಬೇಡ ಎಂದು ಸುಖದುಃಖಗಳಲ್ಲಿಸಮಭಾವವನ್ನು ಹೊಂದಿದವನು ಸುಖಕ್ಕೆ ಕಾರಣವಾದ ವಸ್ತುವಿನಲ್ಲಿ 'ಇದು ಚೆನ್ನಾಗಿದೆ' ಎಂಬ ಭಾವನೆಯನ್ನಾಗಲೀ ದುಃಖಕ್ಕೆ ಕಾರಣವಾದುದರಲ್ಲಿ ದ್ವೇಷ ಭಾವನೆಯನ್ನಾಗಲೀ ಹೇಗೆ ಮಾಡಿಯಾನು ?

**ವಿವರಣೆ** - ವಿಷಯಗಳಲ್ಲಿ ಮತ್ತು ದೇಹದಲ್ಲಿ ಅಭಿಮಾನವನ್ನು ತ್ಯಜಿಸಿದವನಿಗೆ ಸುಖದುಃಖಗಳು ಆಗುವುದಿಲ್ಲ. 'ನನ್ನದು' ಎಂಬ ಅಭಿಮಾನಕ್ಕೆ ಪಾತ್ರವಾದ ವ್ಯಕ್ತಿ ಅಥವಾ ವಸ್ತುವಿಗೆ ಹಾನಿಯಾದಾಗ ದುಃಖವೂ, ಒಳಿತಾದಾಗ ಸುಖವೂ ಆಗುತ್ತದೆ. ಇಂತಹ ಅಭಿಮಾನವನ್ನು ಕಳೆದುಕೊಂಡಾಗ ಸುಖದುಃಖಗಳು ಆಗುವುದಿಲ್ಲ. ಹೀಗೆ ಅಭಿಮಾನವೇ ಸುಖದುಃಖಗಳಿಗೆ ಮೂಲ. ಅಂತಹ ಅಭಿಮಾನವನ್ನು ಕಳೆದುಕೊಂಡರೆ ನಿರಾಳವಾಗಿರ ಬಹುದು. ಆದರೆ, ಅದನ್ನು ಕಳೆದುಕೊಳ್ಳುವುದು ಹೇಗೆ ? ಅದಕ್ಕೆ ಭಗವದ್ಗೀತೆ ಕೊಟ್ಟಿರುವ ಕಾರಣ ಸಮದುಃಖಸುಖಸ್ಥಿತಿ. ಸುಖ ಮತ್ತು ದುಃಖಗಳಲ್ಲಿ ಸಮಭಾವವನ್ನು ತಾಳಬೇಕು. ದುಃಖದಲ್ಲಿರುವ ಭಾವನೆಯನ್ನು ಸುಖದಲ್ಲೂ ತಾಳಬೇಕು. ದುಃಖ ಬೇಡ. ಸುಖವೂ ಬೇಡವೆನಿಸಬೇಕು. ಇದೇ ಸಮ ದುಃಖ-ಸುಖ ಸ್ಥಿತಿ. ಇಂತಹ ಭಾವನೆ ಬಂದಾಗ ಪ್ರಾಪಂಚಿಕ ವಸ್ತುಗಳಲ್ಲಿ ನಿರಾಸಕ್ತಿಯು ಬೆಳೆಯುತ್ತದೆ. ಸ್ನೇಹ ದ್ವೇಷಗಳು ಉಂಟಾಗುವುದಿಲ್ಲ. ಇದರಿಂದ ನಿರಭಿಮಾನದ ಸ್ಥಿತಿ ತಲುಪಬಹುದು .

ಸರಿ, ಈ ಸಮದುಃಖ-ಸುಖಸ್ಥಿತಿಯನ್ನಾದರೂ ಸಾಧಿಸುವುದು ಹೇಗೆ ? ಅದಕ್ಕೆ ಗೀತೆ ಹೇಳಿದ ಉಪಾಯ - 'ಧೀರಂ' - ಧೈರ್ಯ. ಧೈರ್ಯ ಎಂದರೆ ಪ್ರಯತ್ನ. ಸುಖವಾದಾಗ ಮಿತಿ ಮೀರಿ ಪ್ರತಿಸ್ಪಂದಿಸುವುದು, ದುಃಖ ಬಂದಾಗ ಕುಸಿದು ಬೀಳುವುದು ಇಂತಹ ಅತಿರೇಕವನ್ನು ತಡೆಯುವ ಪ್ರಯತ್ನ ಮಾಡಬೇಕು . ಸುಖದುಃಖಗಳ ಪರಿಣಾಮ ಮನಸ್ಸಿನವರೆಗೆ ಮಾತ್ರ ಮುಟ್ಟಬೇಕು. ಆತ್ಮನ ಏರಿಳಿತಗಳಿಗೆ ಕಾರಣವಾಗಬಾರದು. ಹೀಗಾಗದಂತೆ ಪ್ರಯತ್ನಿಸಬೇಕು . ಆದರಿಂದ ಸಮದುಃಖಸುಖಭಾವ , ಅದರಿಂದ ನಿರಭಿಮಾನ ಸ್ಥಿತಿ. ಹೀಗೆ ಪ್ರಪಂಚವನ್ನು ಗೆಲ್ಲಬೇಕು.

ಯುದ್ಧವನ್ನೇ ಬಿಟ್ಟು ಯುದ್ಧದಿಂದಾಗುವ ದುಃಖವನ್ನು ಬರದಂತೆ ಮಾಡಬಹುದು. ಆದರೆ ಅರ್ಜುನ ಕ್ಷತ್ರಿಯ. ಯುದ್ಧ ಅವನ ಕರ್ತವ್ಯ. ಅದನ್ನು ಮಾಡಿ ಅದರಿಂದಾಗುವ ದುಃಖವನ್ನು ಅವನು ಗೆಲ್ಲಬೇಕು. ಇದರಿಂದ ಭಗವಂತನ ಅನುಗ್ರಹ, ಅದರಿಂದ ಮೋಕ್ಷವಾಗುವುದು, ಎಂದು ಈ ಶ್ಲೋಕದ ಭಾವಾರ್ಥ.

**ಸುಪ್ತ್ಯಾದೌ ಪಾಮರಾಣಾಮಪಿ ಅಭಿಮಾನಾಭಾವೇನ ವ್ಯಥಾಭಾವಾ-ದಮೃತತ್ವಪ್ರಸಕ್ತಿರಿತಿ ಶಂಕಾವ್ಯಾವೃತ್ತಯೇ ಪುರುಷಂ= ಶರೀರದರ್ಶನವಂತಂ ಇತ್ಯುಕ್ತಮ್ । ತಥಾ ವ್ಯಥಾಭಾವಮಾತ್ರೇಣ ಕಥಮಮೃತತ್ವಂ, 'ತಮೇವಂ ವಿದ್ವಾನ್' (ತೈ.ಆ. 3-12-7) ಇತ್ಯಾದಿ ಶ್ರುತಿವಿರೋಧಾದಿತ್ಯಪಿ ಶಂಕಾಽ-ಪನುತ್ತಯೇ ಪುರುಷಂ ಬ್ರಹ್ಮಜ್ಞಾನಿನಮಿತ್ಯುಕ್ತಮ್ ।**

**'ಪುರು ಬ್ರಹ್ಮ ಗುಣಾಧಿಕ್ಯಾತ್ ತಜ್ಜ್ಞಾನಾತ್ಪುರುಷಃ ಸ್ಮೃತಃ' ಇತ್ಯುಕ್ತೇಃ ।**

**ಅನುವಾದ** - ನಿದ್ರೆ, ಮೂರ್ಛೆ, ಅಸಂಪ್ರಜ್ಞಾತ ಸಮಾಧಿ ಸ್ಥಿತಿಯಲ್ಲಿ ಸಾಮಾನ್ಯ ಜನರಿಗೂ ಶರೀರಾಭಿಮಾನ, ವಿಷಯಾಭಿಮಾನಗಳು ಇರುವುದಿಲ್ಲ. ಅಭಿಮಾನತ್ಯಾಗಮಾತ್ರದಿಂದ ಮೋಕ್ಷವಾಗುವುದಾದಲ್ಲಿ ಅವರಿಗೂ ಮೋಕ್ಷವಾಗಬೇಕಾದೀತು. ಈ ಆಕ್ಷೇಪಪರಿಹಾರಕ್ಕಾಗಿ ಗೀತೆಯಲ್ಲಿ 'ಪುರುಷಂ' ಎಂಬ ಪದವಿದೆ. 'ಶರೀರದ ಬಗ್ಗೆ ಎಚ್ಚರವಿರುವವನನ್ನು' ಎಂದು ಅದರ ಅರ್ಥ.

(ಒಟ್ಟು ಭಾವ - ನಿದ್ರಾದಿಕಾಲದಲ್ಲಿ ಶರೀರದ ಪರಿಜ್ಞಾನವಿರುವುದಿಲ್ಲ. ಶರೀರ ಪರಿಜ್ಞಾನವಿದ್ದಾಗ ಶರೀರ- ವಿಷಯಗಳಲ್ಲಿ ಅಭಿಮಾನವನ್ನು ತ್ಯಜಿಸಬೇಕು. ಅದು ಮೋಕ್ಷಕ್ಕೆ ಕಾರಣ, ಎಂದು.)

ಆದರೂ ಅಭಿಮಾನ ತ್ಯಾಗದಿಂದ ದುಃಖವನ್ನು ಕಳೆದುಕೊಂಡ ಮಾತ್ರಕ್ಕೆ ಮೋಕ್ಷ ದೊರಕುವುದು ಸಾಧ್ಯವಿಲ್ಲ.ತೈತ್ತಿರೀಯ ಶ್ರುತಿಯು ಬ್ರಹ್ಮಜ್ಞಾನದಿಂದಲೇ ಮೋಕ್ಷವನ್ನು ಹೊಂದಲು ಸಾಧ್ಯ ಎಂದು ಹೇಳುತ್ತದೆ. ಅದಕ್ಕೆ ವಿರುದ್ಧವಾಗಿ ಅಭಿಮಾನತ್ಯಾಗದಿಂದ ಮೋಕ್ಷ ಹೇಗೆ ಸಾಧ್ಯ ? ಈ ಪ್ರಶ್ನೆಗೂ '**ಪುರುಷಂ**' ಎಂಬ ಪದವೇ ಉತ್ತರವಾಗಿದೆ. ಪುರುಷನೆಂದರೆ ಬ್ರಹ್ಮಜ್ಞಾನವನ್ನು ಪಡೆದವನೆಂದರ್ಥ. ಹೇಗೆಂದರೆ, 'ಗುಣಪೂರ್ಣನಾದುದರಿಂದ ಬ್ರಹ್ಮನೇ '**ಪುರು**' ಎನಿಸಿದ್ದಾನೆ. ಅವನ ಜ್ಞಾನವನ್ನು ಗಳಿಸಿದವನು ಪುರುಷ. ಹೀಗೆ ಪುರುಷಶಬ್ದಕ್ಕೆ ಅರ್ಥವನ್ನು ಪ್ರಮಾಣವು ನಿರೂಪಿಸಿದೆ. ಆದ್ದರಿಂದ ಅಭಿಮಾನ ತ್ಯಾಗ ಮಾಡಿ ಬ್ರಹ್ಮಜ್ಞಾನಿಯಾದವನು ಮಾತ್ರ ಮೋಕ್ಷಕ್ಕೆ ಅರ್ಹನಾಗುತ್ತಾನೆ, ಎಂದು ಭಾವ.

**ಅತ್ರ ನರಹರಿತೀರ್ಥೀಯೇ- 'ಬ್ರಹ್ಮಾ ನಿರಭಿಮಾನಿತ್ವಾತ್' ಇತಿ ಸ್ಮೃತಿಂ ಉದಾಹೃತ್ಯ ಚತುರ್ಮುಖಾದನ್ಯೇಷಾಂ ಅತಿವ್ಯಥಾರಾಹಿತ್ಯಮೇವ, ಲಿಂಗ-ಭಂಗಾತ್ಪ್ರಾಗ್ದೇಹಾದ್ಯಭಿಮಾನಭಾವಾತ್ ಇತ್ಯುಕ್ತಮ್ ॥ 15 ॥**

**ಅನುವಾದ -** ಗೀತಾಭಾಷ್ಯಕ್ಕೆ ನರಹರಿತೀರ್ಥರು ಮಾಡಿರುವ ಟೀಕೆಯಲ್ಲಿ ಹೀಗಿದೆ- ಚತುರ್ಮುಖ ಬ್ರಹ್ಮದೇವರಿಗೆ ಮಾತ್ರ ಶರೀರಾಭಿಮಾನವಿಲ್ಲದಿರುವ ಪ್ರಯುಕ್ತ 'ನ ವ್ಯಥಯಂತಿ' ಎಂದು ಹೇಳಿದ ಪೂರ್ತಿ ದುಃಖಾಭಾವ. ಉಳಿದವರಿಗೆ ಲಿಂಗದೇಹ-ಭಂಗವಾಗುವುದಕ್ಕೆ ಮೊದಲು ದುಃಖದಿಂದ ಹೆಚ್ಚಿನ ಪೀಡೆ ಆಗುವುದಿಲ್ಲ . ಅಲ್ಪದುಃಖವು ಆಗಿಯೇ ತೀರುತ್ತದೆ. ಏಕೆಂದರೆ ಅವರಿಗೆ ದೇಹದ ಮೇಲೆ ಅಲ್ಪಾಭಿಮಾನ ಇದ್ದೇ ಇರುತ್ತದೆ. ಲಿಂಗದೇಹ ಭಂಗವಾದ ಮೇಲೆಯೇ ಇತರ ಸಾಧಕರಿಗೆ ಪೂರ್ಣವಾದ ದುಃಖ ನಾಶವಾಗುವುದು ॥ 15 ॥

**ಸತ್ಕರ್ಮ ದುಃಖದಾಯಕವಲ್ಲ - ಕುಕರ್ಮ ಸುಖದಾಯಕವೂ ಅಲ್ಲ .**

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥ 16 ॥**

**ಅರ್ಥ -** ಕೆಟ್ಟಕೆಲಸದಿಂದ ಸುಖವು ಹೇಗೆ ಆಗದೋ ಅದರಂತೆ ಒಳ್ಳೆಯ ಕೆಲಸದಿಂದ ಎಂದೂ ದುಃಖವಾಗದು. ಈ ಎರಡೂ ವಿಷಯದಲ್ಲಿ , ಮಹಾತ್ಮರು ಪರಂಪರೆಯಿಂದ ಹೇಳಿಕೊಂಡು ಬಂದ ಮಾತೇ ಆಧಾರವಾಗಿದೆ.

ಅಥವಾ, ಜಗತ್ತಿಗೆ ಕಾರಣವಾದ ಜಡಪ್ರಕೃತಿಗೆ ಉತ್ಪತ್ತಿ ವಿನಾಶಗಳು ಇಲ್ಲ. ಅದರಂತೆಯೇ ಬ್ರಹ್ಮನಿಗೂ ಉತ್ಪತ್ತಿ ವಿನಾಶಗಳಿಲ್ಲ. ಇವೆರಡೂ ವಿಷಯಗಳು, ಪರಂಪರೆಯಿಂದ ಹರಿದು ಬಂದ ಮಹಾತ್ಮರ ಉಪದೇಶದಿಂದ ಪ್ರಮಾಣೀಕರಿಸಲ್ಪಟ್ಟಿವೆ .

**ನನು 'ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನ್ ಆತತಾಯಿನಃ' ಇತ್ಯಾದಿನಾ ಬಂಧುಹನನರೂಪಯುದ್ಧಾತ್ ಪರಲೋಕದುಃಖಂ, ಶೋಕ-ಹೇತುತಯೋಕ್ತಮ್ । ಅತಃ ಶೋಕ ಇತ್ಯತ ಆಹ- ನಾಸತ ಇತಿ ॥**

**ಅನುವಾದ -** ಹಿಂದೆ ಅರ್ಜುನನು **'ಪಾಪಮೇವಾಶ್ರಯೇತ್ ಅಸ್ಮಾನ್'** ಎಂದು ತನ್ನ ದುಃಖಕ್ಕೆ ಕಾರಣವನ್ನು ಸ್ಪಷ್ಟವಾಗಿ ನಿರೂಪಿಸಿದ್ದಾನೆ. ಗುರು-ಹಿರಿಯರನ್ನು ಕೊಲ್ಲುವುದರಿಂದ ಪಾಪ ಬರುತ್ತದೆ. ಅದರಿಂದ ಪರಲೋಕದಲ್ಲಿ ದುಃಖವಾಗುತ್ತದೆ, ಇದೇ ನನ್ನ ಶೋಕಕ್ಕೆ ಕಾರಣ

ಎಂದು ಅರ್ಜುನನ ವಾದ. ಇದಕ್ಕೆ ಪರಿಹಾರವನ್ನು 'ನಾಸತಃ' ಎಂಬ ಶ್ಲೋಕದಲ್ಲಿ ಶ್ರೀಕೃಷ್ಣನು ಕೊಟ್ಟಿರುತ್ತಾನೆ.

**ಅತ್ರ ಸದಸತ್‌ಶಬ್ದೌ ಸಾಧ್ವಸಾಧುಕರ್ಮಪರೌ । ಭಾವಾಭಾವಶಬ್ದೌ ಸುಖದುಃಖವಾಚಕೌ ।**

**'ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ' (ಗೀ. 17/26)ಇತ್ಯಾದೇಃ ।**

**'ಸದ್ಭಾವವಾಚಿನಃ ಶಬ್ದಾಃ ಸರ್ವೇ ತೇ ಸುಖವಾಚಿನಃ' ಇತ್ಯಾದೇಃ ।**

**ಅನುವಾದ** – ಈ ಶ್ಲೋಕದಲ್ಲಿ ಸತ್ ಶಬ್ದಕ್ಕೆ ಸತ್ಕರ್ಮ ಎಂದೂ, ಅಸತ್ ಶಬ್ದಕ್ಕೆ ದುಷ್ಕರ್ಮ ಎಂದೂ ಅರ್ಥ. ಅದರಂತೆ ಭಾವ ಎಂದರೆ ಸುಖ, ಅಭಾವ ಎಂದರೆ ದುಃಖ.

ಭಗವದ್ಗೀತೆಯಲ್ಲಿ (17ನೇ ಅಧ್ಯಾಯದ 26ನೆಯ ಶ್ಲೋಕ) **'ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ'** ಎಂದು **ಸತ್** ಎಂಬ ಶಬ್ದಕ್ಕೆ ಸತ್‌ಕರ್ಮ ಎಂಬ ಅರ್ಥವನ್ನು ಹೇಳಲಾಗಿದೆ. ಅದರಂತೆ 'ಭಾವವಾಚಕಗಳಾದ ಶಬ್ದಗಳು ಸುಖ ಎಂಬ ಅರ್ಥವನ್ನು ಕೊಡುತ್ತವೆ'ಎಂಬ ಆಧಾರದಂತೆ ಭಾವಶಬ್ದಕ್ಕೆ ಸುಖ ಎಂಬ ಅರ್ಥವೂ ಇದೆ.

**ಅಸತೋ = ದುಷ್ಕರ್ಮಣಃ ಸಕಾಶಾತ್ ಭಾವಃ = ಸುಖಂ, ನಾಸ್ತಿ ಯಥೇತಿ ದೃಷ್ಟಾಂತತಯಾಽಸ್ಯೋಪಯೋಗಃ । ಸತಃ= ಸಾಧುಕರ್ಮಣಃ ಸಕಾಶಾ-ದಭಾವೋ= ದುಃಖಂ ನಾಸ್ತಿ । ಏತಚ್ಚ ಯುದ್ಧಂ ನಾರಾಯಣದ್ವಿಟ್‌ತದನುಬಂಧಿ ನಿಗ್ರಹರೂಪತ್ವೇನ ಸತ್ಕರ್ಮತ್ವಾತ್ ನ ಪರಲೋಕದುಃಖಹೇತುಃ । ಪ್ರತ್ಯುತ ಸುಖಹೇತುರೇವೇತಿ ಭಾವಃ ।**

**ಅನುವಾದ** – ಶ್ಲೋಕದ ಒಟ್ಟು ಅರ್ಥ ಹೀಗೆ – **ಅಸತಃ** = ಕೆಟ್ಟಕೆಲಸದಿಂದಾಗಿ, **ಭಾವಃ**= ಸುಖವು, **ನಾಸ್ತಿ** = ಇಲ್ಲ, **'ಯಥಾ'** ಎಂಬ ಶಬ್ದವನ್ನು ಸೇರಿಸಿಕೊಂಡು ಈ ಅಂಶವನ್ನು ದೃಷ್ಟಾಂತವಾಗಿ ತಿಳಿಯಬೇಕು . 'ಕೆಟ್ಟಕೆಲಸದಿಂದ ಹೇಗೆ ಸುಖವಿಲ್ಲವೋ ಹಾಗೆ' ಎಂದು ಅರ್ಥ ವಾಗುತ್ತದೆ .

**ಸತಃ** = ಒಳ್ಳೆಯ ಕೆಲಸದಿಂದ, **ಅಭಾವಃ** = ದುಃಖವು ಇಲ್ಲ . (ಕೆಟ್ಟಕೆಲಸದಿಂದ ಹೇಗೆ ಸುಖವಿಲ್ಲವೋ ಅಂತೆಯೇ ಒಳ್ಳೆಯಕೆಲಸದಿಂದ ದುಃಖವೂ ಇಲ್ಲ)

ಈ ಯುದ್ಧವಾದರೋ ಭಗವಂತನ ದ್ವೇಷಿಗಳ ಮತ್ತು ಅವರ ಅನುಯಾಯಿಗಳ ನಿಗ್ರಹವಾದುದರಿಂದ ಒಳ್ಳೆಯ ಕೆಲಸವಾಗಿದೆ. ಇದರಿಂದ ಪರಲೋಕದಲ್ಲಿ ದುಃಖವಾಗ ಲಾರದು. ಆದರಿಂದ ಸುಖವೇ ಸಿಗುತ್ತದೆ ಎಂದು ಅಭಿಪ್ರಾಯ.

**ಕಿಮತ್ರ ಪ್ರಮಾಣಮಿತ್ಯತ ಆಹ - ಉಭಯೋರಪೀತಿ ॥ ಅಂತೋ= ನಿರ್ಣಯಃ= ಪೂರ್ವಾರ್ಧೋಕ್ತಾರ್ಥಸ್ಯ ಅವಧಾರಣಮ್ । ಅನ್ಯದರ್ಶನ- ಸ್ಯಾನ್ಯಾನ್ ಪ್ರತ್ಯಪ್ರತ್ಯಾಯಕತ್ವಾತ್, ದರ್ಶನಮೂಲಃ ಸಂಪ್ರದಾಯೋಽತ್ರ ಲಕ್ಷ್ಯತೇ । ಉಭಯೋರಪ್ಯನಯೋಃ ಸದಸತ್ಕರ್ಮಣೋಃ ದುಃಖಸುಖೇ ಯಥಾಕ್ರಮಂ ನ ವಿದ್ಯೇತೇ ಇತ್ಯರ್ಥಯೋರಪಿ ತತ್ತ್ವದರ್ಶಿಭಿಃ ಅಂತಸ್ತು= ಸಂಪ್ರದಾಯಸ್ತು ಪ್ರಮಾಣತಯಾ ದೃಷ್ಟ ಇತಿ ವಾ, ದೃಷ್ಟಸ್ತು = ದೃಷ್ಟ ಏವೇತಿ ವಾ, ತು ಶಬ್ದಾನ್ವಯಃ । ಸತ್ಕರ್ಮಣೋ ದುಃಖಂ ನಾಸ್ತಿ , ಅಸತ್ಕರ್ಮಣಃ ಸುಖಂ ವಾ ನಾಸ್ತೀತ್ಯನಯೋಃ ಅರ್ಥಯೋಃ ನಿರ್ಣಾಯಕೋಪದೇಶಪರಂಪರಾರೂಪ- ಸಂಪ್ರದಾಯೋ ಮಹಾತ್ಮಭಿಃ ದೃಷ್ಟ ಏವೇತ್ಯರ್ಥಃ ।**

**ಅನುವಾದ** - ಈ ವಿಷಯದಲ್ಲಿ ಏನು ಪ್ರಮಾಣ ಎನ್ನುವ ಪ್ರಶ್ನೆಗೆ ಉತ್ತರ - '**ಉಭಯೋರಪಿ**' ಎಂಬ ಗೀತೆಯ ಉತ್ತರಾರ್ಧ.

**ಅಂತಃ** = ನಿರ್ಣಯ. ಅಂದರೆ, ಗೀತೆಯ ಪೂರ್ವಾರ್ಧದಲ್ಲಿ ಹೇಳಿದ ವಿಷಯದ ನಿರ್ಧಾರ ಎಂದರ್ಥ. ಮತ್ತೊಬ್ಬರ ನಿರ್ಧಾರವು ನಮಗೆ ಪ್ರಮಾಣವಾಗುವುದಿಲ್ಲ. ಆದಕ್ಕಾಗಿ, ಮಹಾತ್ಮರು ಕಂಡು ಮಾಡಿರುವ ಉಪದೇಶ ಪರಂಪರೆ ಎಂದು '**ಅಂತ**' ಶಬ್ದದ ಅರ್ಥ.

ಒಟ್ಟು ಅರ್ಥ - **ಉಭಯೋಃ ಅಪಿ ಅನಯೋಃ** = ಈ ಎರಡೂ ವಿಷಯದ ಅಂದರೆ ಅಸತ್‌ಕರ್ಮದಿಂದ ಸುಖವಿಲ್ಲ, ಸತ್ಕರ್ಮದಿಂದ ದುಃಖವಿಲ್ಲ ಈ ಎರಡಕ್ಕೂ, **ಅಂತಸ್ತು** = ಪರಂಪರೆಯಿಂದ ಬಂದ ಉಪದೇಶವು , ಪ್ರಮಾಣವಾಗಿ ತತ್ತ್ವಜ್ಞಾನಿಗಳಿಂದ, **ದೃಷ್ಟಸ್ತು** = ತಿಳಿಯಲ್ಪಟ್ಟೇ ಇದೆ. ಹೀಗೆ '**ತು**' ಶಬ್ದವನ್ನು ಎರಡೂ ಕಡೆ ಸೇರಿಸಿಕೊಳ್ಳಬಹುದು.

ಕೆಟ್ಟಕೆಲಸದಿಂದ ಸುಖವಿಲ್ಲ , ಒಳ್ಳೆಯ ಕೆಲಸದಿಂದ ದುಃಖವಿಲ್ಲ ಈ ಎರಡರ ಬಗ್ಗೆ ನಿರ್ಣಯಾತ್ಮಕವಾದ ಉಪದೇಶ ಪರಂಪರೆಯನ್ನು ಮಹಾತ್ಮರು ಕಂಡಿರುತ್ತಾರೆ, ಇದು ಶ್ಲೋಕದ ಭಾವಾರ್ಥ.

**ಶ್ಲೋಕಕ್ಕೆ ಇನ್ನೊಂದು ಅರ್ಥ–**

**ನನು ಅನಾದಿತ್ವಹೇತುನಾಽಹಮಪಿ ಪಕ್ಷೇ ನಿಕ್ಷಿಪ್ಯ ನಿತ್ಯತ್ವೇನಾನುಮಾತವ್ಯ**

**ಇತಿ ಯದುಕ್ತಂ ತ್ವಯಾ ಸ ತ್ವಯುಕ್ತಃ ಪಕ್ಷಃ । ದೃಷ್ಟಾಂತಾಭಾವೇನ ವ್ಯಾಪ್ತಿ-ಗ್ರಹಾಸಂಭವಾತ್ । ಅನ್ಯಸ್ಯಾನಾದಿನಿತ್ಯಸ್ಯ ಮಾನಾಭಾವೇನಾಭಾವಾದಿತ್ಯ-ತೋಽನ್ಯದಪಿ ಅನಾದಿನಿತ್ಯಮೇತದಪ್ಯನೇನೋಚ್ಯತೇ– ನಾಸತ ಇತಿ ॥**

**ಅನುವಾದ** – ಅರ್ಜುನ ಕೇಳುತ್ತಾನೆ– 'ಕೃಷ್ಣ 'ನನ್ನನ್ನೂ ಒಳಗೊಂಡಂತೆ ಎಲ್ಲ ಚೇತನರೂ ಅನಾದಿಯಾದುದರಿಂದ ನಿತ್ಯರು, ಎಂದು ಅನುಮಾನ ಪ್ರಮಾಣದಿಂದ ಸಾಧಿಸಬಹುದು' ಎಂದು ನೀನು ಹಿಂದೆ ಹೇಳಿರುವಿ . ಆದರೆ , ಅದು ಸರಿಯಲ್ಲ . 'ಅನಾದಿಯಾದುದು ನಿತ್ಯ ' ಎಂದು ವ್ಯಾಪ್ತಿಯನ್ನು ನಿರ್ಧರಿಸಲು ಬೇಕಾದ ದೃಷ್ಟಾಂತವೇ ಇಲ್ಲ. ಚೇತನರನ್ನು ಬಿಟ್ಟರೆ ಉಳಿದ ವಸ್ತು ಅನಾದಿ–ನಿತ್ಯ ಎನ್ನಲು ಆಧಾರವಿಲ್ಲವಾದುದರಿಂದ ಅಂತಹ ವಸ್ತುವೇ ಇಲ್ಲ.' ಎಂದು.

ಇದಕ್ಕೆ ಉತ್ತರವಾಗಿ ಶ್ರೀಕೃಷ್ಣನು ಚೇತನರಲ್ಲದೆ ಅನಾದಿ ನಿತ್ಯವಾದ ಬೇರೆ ವಸ್ತುಗಳೂ ಇವೆ, ಎಂದು **'ನಾಸತೋ ವಿದ್ಯತೇ ಭಾವಃ'** ಎಂಬ ಶ್ಲೋಕದಲ್ಲಿ ಹೇಳಿದ್ದಾನೆ .

**ವಿವರಣೆ** – ಹಿಂದೆ **'ನ ತ್ವೇವಾಹಂ'** ಎಂಬ ಶ್ಲೋಕವನ್ನು ಎರಡು ರೀತಿಯಲ್ಲಿ ವಿವರಿಸಲಾಗಿದೆ. ಕೃಷ್ಣನು ದೇವರು, ಅನಾದಿನಿತ್ಯ ಎಂದು ತಿಳಿದವರಿಗೆ ಅವನನ್ನು ದೃಷ್ಟಾಂತವನ್ನಾಗಿಸಿ ಅವನಂತೆ ಎಲ್ಲ ಜೀವರೂ ಅನಾದಿ–ನಿತ್ಯರು, ಎಂದು ಒಂದು ವ್ಯಾಖ್ಯಾನ. ಇನ್ನೊಂದು ವ್ಯಾಖ್ಯಾನ, ಕೃಷ್ಣನೂ ನಮ್ಮಂತೆಯೇ ಒಬ್ಬ ಚೇತನ, ಅವನೂ ಅನಾದಿ – ನಿತ್ಯ ಎಂಬುದು ಸಂದಿಗ್ಧ. ಹೀಗಾಗಿ ಅವನನ್ನೂ ಸೇರಿಸಿ ಎಲ್ಲ ಚೇತನರೂ ಅನಾದಿಯಾದುದರಿಂದ ನಿತ್ಯರು , ಎಂದು. ಈ ಎರಡನೆಯ ಪಕ್ಷದಲ್ಲಿ ದೃಷ್ಟಾಂತ ಯಾವುದು ? ದೃಷ್ಟಾಂತವೇ ಇಲ್ಲವೆಂದಾದರೆ ವ್ಯಾಪ್ತಿ ನಿಶ್ಚಯವಾಗಲಾರದು. ಅನಾದಿ – ನಿತ್ಯವಾದ ವಸ್ತುವೊಂದಿದ್ದರೆ ಅದನ್ನು ನಿದರ್ಶನವನ್ನಾಗಿ ಕೊಟ್ಟು 'ಜೀವರು ಅನಾದಿಯಾದುದರಿಂದ ನಿತ್ಯರು' ಎಂದು ಸಾಧಿಸಬಹುದು. ಆದರೆ, ಅಂತಹ ವಸ್ತುವು ಇಲ್ಲ . ಅಂದಮೇಲೆ ಜೀವರಿಗೆ ನಿತ್ಯತ್ವವನ್ನು ಹೇಗೆ ಸಾಧಿಸುವುದು ? ಅದಕ್ಕೆ ಉತ್ತರವನ್ನು **'ನಾಸತೋ ವಿದ್ಯತೇ ಭಾವಃ'** ಎಂಬ ಈ ಶ್ಲೋಕ ಕೊಡುತ್ತದೆ.

**ಅಸತಃ = ಕಾರಣಸ್ಯ = ಪ್ರಕೃತೇಃ ಅಭಾವಃ = ಪ್ರಾಗಭಾವಃ, ಪ್ರಧ್ವಂಸಶ್ಚ ನ ವಿದ್ಯತೇ = ನಾಸ್ತಿ । ತಥಾ, ಸತೋ = ಬ್ರಹ್ಮಣಶ್ಚಾಭಾವೋ = ದ್ವಿರೂಪೋಽಭಾವಃ ನ ವಿದ್ಯತೇ । ಅತ್ರಾಸತಃ ಸತಶ್ಚಾಭಾವೋ ನ ವಿದ್ಯತ ಇತ್ಯೇಕವಾಕ್ಯೇ ಸಂಭವತಿ ವಾಕ್ಯದ್ವಯಗ್ರಹಣಂ ಪ್ರಾಗುಕ್ತಾನಾದಿತ್ವಾನುಮಾನೇ ವ್ಯಾಪ್ತಿಸದ್ಭಾವೇ ಆದರಸೂಚನಾರ್ಥಮ್ । ಅತ ಏವಾಗ್ರೇಽವಿನಾಶಿ ತ್ವಿತ್ಯಾದಿನಾ ವ್ಯಾಪ್ತಿಗ್ರಹಣ-ಸ್ಥಲಮನೇಕಂ ದರ್ಶಯತಿ ।**

**ಅನುವಾದ - ಅಸತಃ** = ಜಗತ್ತಿಗೆ ಕಾರಣವಾದ ಜಡ ಪ್ರಕೃತಿಗೆ, **ಅಭಾವಃ** = ಪ್ರಾಗಭಾವ ಮತ್ತು ಪ್ರಧ್ವಂಸಾಭಾವಗಳು, **ನ ವಿದ್ಯತೇ**= ಇಲ್ಲ. ಅದರಂತೆಯೇ, **ಸತಃ**= ಬ್ರಹ್ಮನಿಗೆ, **ಅಭಾವಃ**= ಹಿಂದೆ ಹೇಳಿದ ಎರಡು ಅಭಾವಗಳು, **ನ ವಿದ್ಯತೇ** = ಇಲ್ಲ.

ಈ ಶ್ಲೋಕದಲ್ಲಿ '**ಸತಃ ಅಸತಶ್ಚ ಅಭಾವಃ ನ ವಿದ್ಯತೇ**' ಎಂದು ಒಂದೇ ವಾಕ್ಯವನ್ನು ಹೇಳಿದರೂ ಸಾಕಿತ್ತು. ಆದರೂ, '**ಅಸತಃ ಅಭಾವಃ ನ ವಿದ್ಯತೇ, ಸತಃ ಅಭಾವಃ ನ ವಿದ್ಯತೇ**' ಎಂದು ಎರಡು ಪ್ರತ್ಯೇಕ ವಾಕ್ಯಗಳನ್ನು ಮಾಡಿರುವುದರಿಂದ '**ನ ತ್ವೇವಾಹಂ**' ಎಂಬ ಶ್ಲೋಕದಲ್ಲಿ ಹೇಳಿದ ಅನುಮಾನಕ್ಕೆ 'ವ್ಯಾಪ್ತಿ ಇದೆ ' ಎಂಬ ವಿಷಯದಲ್ಲಿ ಆದರವಿದೆ, ಎಂಬುದನ್ನು ಸೂಚಿಸಲಾಗಿದೆ. (ಪುನರುಕ್ತಿಯಿಂದಾಗಿ ಹೇಳಿದ ವಿಷಯದಲ್ಲಿ ಆದರವು ತಿಳಿಯುತ್ತದೆ ) ಆದ್ದರಿಂದಲೇ '**ಅವಿನಾಶಿ ತು**' ಎಂಬ 17ನೇಯ ಶ್ಲೋಕದಲ್ಲಿ ವ್ಯಾಪ್ತಿಯನ್ನು ನಿಶ್ಚಯ ಮಾಡಲು ಬೇಕಾಗಿರುವ ಅನೇಕ ದೃಷ್ಟಾಂತಗಳನ್ನು ತೋರಿಸಲಾಗಿದೆ. ಇದರಿಂದಾಗಿ ವ್ಯಾಪ್ತಿಯು ದೃಢವಾಗುತ್ತದೆ.

**ವಿವರಣೆ** – ಬಟ್ಟೆಯು ಸಿದ್ಧಗೊಳ್ಳುವ ಮೊದಲು ಇರುವುದಿಲ್ಲ. ಇದು ಪ್ರಾಗಭಾವ. ಸುಟ್ಟ ಮೇಲೂ ಇರುವುದಿಲ್ಲ. ಅದು ಧ್ವಂಸ. ಹುಟ್ಟದ ವಸ್ತುವಿಗೆ ಪ್ರಾಗಭಾವ ಇರುವುದಿಲ್ಲ; ನಾಶವಿಲ್ಲದ ವಸ್ತುವಿಗೆ ಧ್ವಂಸ ಇರುವುದಿಲ್ಲ. ಜಗತ್ತಿಗೆ ಕಾರಣವಾದ ಮೂಲದ್ರವ್ಯ ಪ್ರಕೃತಿ . ಆ ಪ್ರಕೃತಿಯಿಂದ ಈ ವಿಶ್ವವನ್ನು ಸೃಷ್ಟಿಮಾಡುವವನು ಬ್ರಹ್ಮ. ಇವೆರಡಕ್ಕೂ ಪ್ರಾಗಭಾವ – ಧ್ವಂಸಗಳು ಇಲ್ಲ. ಆದ್ದರಿಂದಲೇ ಅವೆರಡಕ್ಕೂ ಉತ್ಪತ್ತಿವಿನಾಶಗಳು ಇಲ್ಲ.

ಹೇತುಸಾಧ್ಯಗಳನ್ನು ಜೊತೆ ಜೊತೆಯಾಗಿ ಅನೇಕ ಸ್ಥಳಗಳಲ್ಲಿ ನೋಡಿದಷ್ಟು ಅವುಗಳಿಗಿರುವ ವ್ಯಾಪ್ತಿಯು ದೃಢವಾಗುತ್ತದೆ. 'ಅನಾದಿವಸ್ತುವಿಗೆ ನಾಶವಿಲ್ಲ' ಎಂಬ ಪ್ರಕೃತ ವ್ಯಾಪ್ತಿಯು ದೃಢವಾಗುವುದಕ್ಕಾಗಿ ಪ್ರಕೃತಿ ಮತ್ತು ಬ್ರಹ್ಮ ಇವೆರಡರಲ್ಲಿ ಅನಾದಿತ್ವವೂ ಇದೆ ನಿತ್ಯತ್ವವೂ ಇದೆ ಎಂದು ಪ್ರತ್ಯೇಕವಾಗಿ ಹೇಳಲಾಗಿದೆ. ಮುಂದಿನ ಶ್ಲೋಕದಲ್ಲೂ ಇದಕ್ಕೆ ಇನ್ನಷ್ಟು ಉದಾಹರಣೆಗಳನ್ನು ಕೊಡಲಾಗಿದೆ.

**ಅತ್ರ ವ್ಯಾಪ್ತಿಸ್ಥಲಪ್ರದರ್ಶನಾರ್ಥಂ 'ನಾಸತೋ ವಿದ್ಯತೇऽಭಾವ' ಇತ್ಯೇತಾವದೇವ ವಾಚ್ಯಮ್ । ತಥಾऽಪಿ ಪ್ರಾಗುಕ್ತದ್ವಿತೀಯಪ್ರಯೋಗೇ ಕೃಷ್ಣೋ ದೃಷ್ಟಾಂತಿತಃ । ತತ್ರ ಸಾಧ್ಯಸಾಧನಾನುಗತಿಸೂಚನಾಯ 'ನಾಭಾವೋ ವಿದ್ಯತೇ ಸತಃ' ಇತ್ಯಪ್ಯುಕ್ತಿಃ । ತಥಾ ಚ ದ್ವಿತೀಯಪ್ರಯೋಗೇऽಪಿ ವ್ಯಾಪ್ತಿಃ ಸುದೃಢಾ ।**

**ಅನುವಾದ** – ಈ ಶ್ಲೋಕದಲ್ಲಿ ವ್ಯಾಪ್ತಿಯನ್ನು ತಿಳಿಸುವ ಉದ್ದೇಶವಾಗಿದ್ದಲ್ಲಿ '**ನಾಸತೋ ವಿದ್ಯತೇ ಭಾವಃ**' ಎಂದು ಪ್ರಕೃತಿಯ ಉಲ್ಲೇಖ ಮಾತ್ರ ಸಾಕಿತ್ತು. '**ನಾಭಾವೋ ವಿದ್ಯತೇ ಸತಃ**

ಎಂದು ಬ್ರಹ್ಮನ ಉಲ್ಲೇಖ ಬೇಕಿಲ್ಲ. ಏಕೆಂದರೆ,ಬ್ರಹ್ಮನು ದೃಷ್ಟಾಂತನಲ್ಲ. ಅವನು (ಶ್ರೀಕೃಷ್ಣ) ಪಕ್ಷದಲ್ಲೇ ಸೇರಿರುತ್ತಾನೆ.ಆದರೂ ಬ್ರಹ್ಮನ ಉಲ್ಲೇಖ ಮಾಡಿರುವ ಉದ್ದೇಶ- ಎರಡನೆಯ ಅನುಮಾನದಲ್ಲಿ ಶ್ರೀಕೃಷ್ಣನನ್ನು ಜೀವನಿತ್ಯತ್ವಕ್ಕೆ ನಿದರ್ಶನವನ್ನಾಗಿ ಬಳಸಲಾಗಿದೆ. ಅವನಲ್ಲಿ (ಬ್ರಹ್ಮನಲ್ಲಿ) ಸಾಧ್ಯ (ನಿತ್ಯತ್ವ) ಹೇತು(ಅನಾದಿತ್ವ)ಗಳೆರಡೂ ಇವೆ ಎಂದು ತಿಳಿಸುವುದು. ಇದರಿಂದ ಆ ಎರಡನೆಯ ಅನುಮಾನದಲ್ಲೂ ವ್ಯಾಪ್ತಿಯು ದೃಢವಾದಂತಾಯಿತು.

**ನನ್ವನ್ಯಸ್ಯಾನಾದಿನಿತ್ಯತ್ವೇ ಮಾನಾ (ಭಾವಾತ್) ಭಾವ ಇತ್ಯುಕ್ತಮಿತ್ಯತ ಆಹ– ಉಭಯೋರಪೀತಿ ॥ ಸದಸತೋರನಾದಿನಿತ್ಯಯೋರಂತಸ್ತು = ನಿರ್ಣಯಭೂತ- ಪರಂಪರೋಪದೇಶಲಕ್ಷಣಸಂಪ್ರದಾಯಸ್ತು ಇತ್ಯರ್ಥಃ । ತತ್ತ್ವದರ್ಶಿಭಿಃ ದೃಷ್ಟ ಇತ್ಯರ್ಥಃ ।**

**ಅನುವಾದ** - ಅನಾದಿ ನಿತ್ಯವಾದ ವಸ್ತು ಇದೆ ಎನ್ನಲು ಏನು ಆಧಾರ ? ಎನ್ನುವ ಪ್ರಶ್ನೆಗೆ- 'ಉಭಯೋರಪಿ' ಎಂಬ ಉತ್ತರಾರ್ಧವು ಉತ್ತರವಾಗಿದೆ. ಬ್ರಹ್ಮ ಮತ್ತು ಪ್ರಕೃತಿಗಳು ಅನಾದಿ ನಿತ್ಯಗಳು ಎನ್ನುವ ಬಗ್ಗೆ , **ಅಂತಸ್ತು** = ನಿರ್ಣಯವಾದರೋ, ಅಂದರೆ, ಉಪದೇಶ- ಪರಂಪರಾರೂಪವಾದ ಸಂಪ್ರದಾಯವನ್ನು ಜ್ಞಾನಿಗಳು ತಿಳಿದಿದ್ದಾರೆ.

**ನರಹರಿತೀರ್ಥಾಸ್ತು ತತ್ತ್ವದರ್ಶಿಭಿರಪೀತ್ಯಪಿಪದಂ ಭಿನ್ನಕ್ರಮಮುಪೇತ್ಯ 'ಪ್ರಕೃತಿಃ ಪುರುಷಶ್ಚೈವ ನಿತ್ಯೌ ಕಾಲಶ್ಚ ಸತ್ತಮ' (ವಿಷ್ಣು ಪು.) ಇತ್ಯಾಗಮೋಽ- ತ್ರಾರ್ಥೇ ಮಾನತ್ವೇನ ಸಮುಚ್ಚೀಯತ ಇತ್ಯಾಹುಃ ॥ 16 ॥**

**ಅನುವಾದ** - ಶ್ರೀನರಹರಿತೀರ್ಥರು ತಮ್ಮ ಟೀಕೆಯಲ್ಲಿ **'ಉಭಯೋರಪಿ'** ಎಂಬಲ್ಲಿರುವ ಅಪಿ ಶಬ್ದವನ್ನು **'ತತ್ತ್ವದರ್ಶಿಭಿಃ'** ಎಂಬ ಪದದೊಂದಿಗೆ ಜೋಡಿಸಿಕೊಂಡು ಪ್ರಕೃತಿ ಬ್ರಹ್ಮರು ನಿತ್ಯರೆನ್ನಲು ತತ್ತ್ವದರ್ಶಿಗಳು ಕಂಡಿರುವ ಸಂಪ್ರದಾಯವೂ ಪ್ರಮಾಣ, **''ಪ್ರಕೃತಿಃ ಪುರುಷಶ್ಚೈವ ನಿತ್ಯೌ ಕಾಲಶ್ಚ ಸತ್ತಮ''** ಎಂಬ ವಿಷ್ಣುಪುರಾಣದ ವಾಕ್ಯವೂ ಪ್ರಮಾಣ ಎಂಬ ಅರ್ಥವನ್ನು ಹೇಳಿರುತ್ತಾರೆ ॥ 16 ॥

## ವ್ಯಾಪ್ತವಾದ ವರ್ಣಸಮುದಾಯ ಮತ್ತು ಅವ್ಯಾಕೃತಾಕಾಶದಂತೆ ಆತ್ಮನೂ ಅನಾದಿನಿತ್ಯ.

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥ 17 ॥**

**ಅರ್ಥ** – ಈ ವಿಶ್ವವೆಲ್ಲವೂ ಯಾವುದರಿಂದ ವ್ಯಾಪಿಸಿದೆಯೋ ಅಂತಹ ಅವ್ಯಾಕೃತಾಕಾಶ, ಪಂಚಾಶದ್ವರ್ಣಗಳು ಇವೆಲ್ಲವೂ ನಿತ್ಯವಾಗಿವೆ. ವೃದ್ಧಿಹ್ರಾಸಾದಿವಿಕಾರಗಳಿಲ್ಲದ ಇವುಗಳ ವಿನಾಶವನ್ನು ಯಾರೂ ಮಾಡಲಾರರು.

**ನನು 'ಪ್ರಕೃತಿಃ ಪುರುಷಃ ಕಾಲಃ' ಇತ್ಯಾದಿವಾಕ್ಯಾನಾಂ ಉಪಾಸನಾರ್ಥ-ತ್ವಾತ್, ಸಂಪ್ರದಾಯಸ್ಯ ಚ ಮೂಲಾನಿಶ್ಚಯಾತ್, ಪ್ರಕೃತಿಪುರುಷಯೋಃ ಸ್ವರೂಪಸ್ಯೈವಾಸಿದ್ಧೇಃ ಪುನರನುಮಾನಸ್ಯ ವ್ಯಾಪ್ತ್ಯಸಿದ್ಧಿರಿತ್ಯಾಶಂಕ್ಯ ಭಗವಾನ್, ಕಿಮಿದಾನೀಂ ಪ್ರಕೃತ್ಯಾದಿಸ್ವರೂಪಸಾಧನೇನ, ಕಿಂಚೇದಂ ನಿತ್ಯಂ ಇದಂ ನಿತ್ಯಮಿತಿ ಪ್ರತ್ಯೇಕಮುಕ್ತೇನ ಚ । ಯದ್ದೇಶತೋ ಅನಂತಂ ತತ್ಸರ್ವಂ ನಿತ್ಯಮೇವೇತ್ಯೇವಂ ಸಂಗ್ರಾಹಕಸಂಗೃಹೀತಂ ವರ್ಣಾದಿ ಜೀವಾದನ್ಯದಪಿ ಅಸ್ತಿ। ತದ್ವ್ಯಾಪ್ತಿಗ್ರಹಣಸ್ಥಲಂ ಭವಿಷ್ಯತೀತ್ಯಾಹ– ಅವಿನಾಶಿತ್ವಿತಿ ॥**

**ಅನುವಾದ** – ಹಿಂದೆ ಪ್ರಕೃತಿಯು ಅನಾದಿ ನಿತ್ಯ ಎನ್ನಲು 'ವಿಷ್ಣು ಪುರಾಣ' ಮತ್ತು 'ಸಂಪ್ರದಾಯದ' ಆಧಾರವನ್ನು ಕೊಡಲಾಯಿತು. ಅವುಗಳಲ್ಲಿ ಪ್ರಕೃತಿಯು ನಿತ್ಯವಲ್ಲದಿದ್ದರೂ 'ಪ್ರಕೃತಿಯನ್ನು ನಿತ್ಯವೆಂದು ಉಪಾಸನೆಮಾಡು' ಎಂದು ಪುರಾಣವು ಹೇಳುತ್ತದೆ. ಇನ್ನು, ಸಂಪ್ರದಾಯವು ಯಾರಿಂದ ಆರಂಭವಾಗಿದೆ, ಅದೆಷ್ಟು ಪ್ರಮಾಣ ಎಂದು ನಿರ್ಧರಿಸಲಾಗದು. ಅಷ್ಟೇ ಅಲ್ಲದೆ ಸಾಂಖ್ಯರು ಹೇಳುವ ಪ್ರಕೃತಿ – ಪುರುಷ ಎಂಬ ತತ್ತ್ವವಿದೆ ಎನ್ನಲು ಆಧಾರವೂ ಇಲ್ಲ . ಆದ್ದರಿಂದ ಚೇತನರಿಗೆ ನಿತ್ಯತ್ವವನ್ನು ಸಾಧಿಸುವ ಅನುಮಾನಕ್ಕೆ ದೃಷ್ಟಾಂತವಿಲ್ಲದ ಕಾರಣ ವ್ಯಾಪ್ತಿಯನ್ನು ನಿಶ್ಚಯ ಮಾಡಲಾಗದು.

ಈ ಆಕ್ಷೇಪವನ್ನು ನಿರಾಕರಿಸಬೇಕಾದರೆ ಪ್ರಕೃತಿ ಎಂಬ ಒಂದು ತತ್ತ್ವವಿದೆ ಎಂದು ಸಾಧಿಸಬೇಕಾಗುವುದು . ಅಲ್ಲದೆ, ಇದು ನಿತ್ಯ, ಇದು ನಿತ್ಯ ಎಂದು ವ್ಯಕ್ತಿಶಃ ಒಂದೊಂದನ್ನು ಉಲ್ಲೇಖ ಮಾಡುವುದೂ ಪ್ರಯಾಸದ ಕೆಲಸ. ಅದಕ್ಕಾಗಿ, ಯಾವುದು ಎಲ್ಲೆಡೆ ವ್ಯಾಪಿಸಿದೆಯೋ ಅವೆಲ್ಲವೂ ನಿತ್ಯ, ಈ ನಿಯಮವು ಅನ್ವಯಿಸುವ, ಜೀವನಿಗಿಂತ ಭಿನ್ನವಾದ , ಐವತ್ತೊಂದು ಅಕ್ಷರಗಳು ನಿತ್ಯವಾಗಿವೆ. ಅವುಗಳೇ ಪ್ರಕೃತಾನುಮಾನದ ವ್ಯಾಪ್ತಿಯನ್ನು ನಿಶ್ಚೈಸುವ ದೃಷ್ಟಾಂತಗಳಾಗುತ್ತವೆ. ಹೀಗೆಂದು ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ.

**ಯೇನೇದಂ ಸರ್ವಂ ತತಂ = ವ್ಯಾಪ್ತಂ ತದಕಾರಾದಿವರ್ಣಜಾತಮ್, ಅವ್ಯಾಕೃತಾಕಾಶಶ್ಚೇತ್ಯೇವಮಾದಿ ಸರ್ವಂ ಅವಿನಾಶಿ ತು = ನಿತ್ಯಮೇವೇತಿ । ತುರೇವೇತ್ಯರ್ಥಃ । ಅನಾದಿ ಚೇತ್ಯಪಿ ಗ್ರಾಹ್ಯಮ್ ।**

**ಅನುವಾದ** - ಯಾವುದರಿಂದ ಈ ಎಲ್ಲ ಜಗತ್ತು , **ತತಂ** = ವ್ಯಾಪಿಸಿದೆಯೋ, **ತತ್** = ಅಂತಹ ಅಕಾರಾದಿ ಅಕ್ಷರಸಮೂಹ, ಅವ್ಯಾಕೃತ ಆಕಾಶ ಇವೆಲ್ಲವೂ **ಅವಿನಾಶಿ ತು** = ನಿತ್ಯವೇ ಆಗಿವೆ .

ಶ್ಲೋಕದಲ್ಲಿ 'ತು' ಶಬ್ದಕ್ಕೆ 'ಏವ ' ಎಂದು ಅರ್ಥ. ಶ್ಲೋಕದಲ್ಲಿ ಹೇಳಿದಂತೆ ವ್ಯಾಪ್ತವಾದುದು 'ನಿತ್ಯ' ಮಾತ್ರವಲ್ಲ, 'ಅನಾದಿಯೂ' ಆಗಿದೆ ಎಂದು ತಿಳಿಯಬೇಕು.

**ನನು 'ಸುಪ್ಯಜಾತೌ ಣಿನಿಸ್ತಾಚ್ಛೀಲ್ಯೇ' (3.2.78) ಇತಿ ಸೂತ್ರೇಣ ಸೋಪಸರ್ಗಸ್ಯಾಪಿ ಚ್ಛಾಂದಸತಾಚ್ಛೀಲಿಕಣಿನಿಪ್ರತ್ಯಯಾಂತಾವಿನಾಶಿಶಬ್ದೇನ ಸ್ವಾಭಾವಿಕವಿನಾಶಾಭಾವೋಕ್ತಾವಪಿ ಶಾಪೇನ ವಾ ಬಲವತ್ಪ್ರಯತ್ನಾದಿನಾ ವಾ ವಿನಾಶಃ ಕಿಂ ನ ಸ್ಯಾದಿತ್ಯತ ಆಹ– ವಿನಾಶಮಿತಿ ॥ ಅಸ್ಯ = ವ್ಯಾಪ್ತಸ್ಯ ವಸ್ತುನೋ, ವಿನಾಶಂ= ಧ್ವಂಸಂ ಕಶ್ಚಿದಪಿ ಕರ್ತುಂ ನಾರ್ಹತಿ । ಕುತ ಇತ್ಯತ ಉಕ್ತಮ್– ಅವ್ಯಯಸ್ಯೇತಿ ॥ ಹ್ರಾಸಹೀನಸ್ಯೇತ್ಯರ್ಥಃ । ಹ್ರಾಸ ಏವ ನಾಸ್ತಿ ತಾದೃಶಸ್ಯ ನಾಶಂ ನ ಕೋಽಪಿ ಕರ್ತುಮೀಷ್ಟ ಇತಿ ಕಿಮು ವಾಚ್ಯಮಿತ್ಯರ್ಥಃ ॥ 17 ॥**

**ಅನುವಾದ** - 'ಸುಪ್ಯಜಾತೌ ಣಿನಿಃ ತಾಚ್ಛೀಲ್ಯೇ' ಎಂದು ಪಾಣಿನಿಯ ವ್ಯಾಕರಣ ಸೂತ್ರ. ಸ್ವಭಾವ ಎಂಬ ಅರ್ಥದಲ್ಲಿ ಧಾತುಗಳಿಗೆ 'ಣಿನಿ' ಎಂಬ ಪ್ರತ್ಯಯವು ಬರುತ್ತದೆ ಎಂದು ಅದರ ಅರ್ಥ. ಆ ಪ್ರತ್ಯಯ ಬರಬೇಕಾದರೆ ಧಾತುವಿನ ಜೊತೆಯಲ್ಲಿ ಉಪಸರ್ಗಗಳು ಇರಬಾರದು. ಪ್ರಕೃತ 'ನಶ' ಎಂಬ ಧಾತುವಿನ ಜೊತೆಯಲ್ಲಿ 'ವಿ' ಎಂಬ ಉಪಸರ್ಗವಿದ್ದರೂ ಗೀತೆಯು ವೇದತುಲ್ಯವಾದುದರಿಂದ ಲೌಕಿಕ ಭಾಷಾನಿಯಮವನ್ನು ಮೀರಿ ಅದಕ್ಕೆ 'ಣಿನಿ' ಪ್ರತ್ಯಯ ಬಂದು **'ಅವಿನಾಶಿ'** ಎಂಬ ರೂಪವಾಗಿದೆ. ವ್ಯಾಪ್ತವಾದ ತತ್ತ್ವಕ್ಕೆ ಸ್ವಾಭಾವಿಕವಾಗಿ ವಿನಾಶವಿಲ್ಲ ಎಂದು ಅದರ ಅರ್ಥ. ಆದರೂ ಶಾಪದಿಂದಲೋ ಅಥವಾ ಮತ್ತಾರದೋ ಪ್ರಯತ್ನ ವಿಶೇಷದಿಂದಲೋ ಅದಕ್ಕೆ ವಿನಾಶ ಏಕೆ ಆಗಬಾರದು ? ಅದಕ್ಕೆ ಉತ್ತರ – '**ವಿನಾಶಂ**'ಇತ್ಯಾದಿ ಉತ್ತರಾರ್ಧ.

**ಅಸ್ಯ** = ವ್ಯಾಪ್ತವಾಗಿರುವ ತತ್ತ್ವಕ್ಕೆ **ವಿನಾಶಂ** = ಧ್ವಂಸವನ್ನು ಯಾರೂ ಮಾಡಲಾರರು.

ಏಕೆ ಮಾಡಲಾರರು ? ಅದಕ್ಕುತ್ತರ – **'ಅವ್ಯಯಸ್ಯ'** ಎಂದು. ಅವ್ಯಯ ಎಂದರೆ ಹ್ರಾಸ ವಿಲ್ಲದ್ದು . ಯಾವುದಕ್ಕೆ (ವ್ಯಾಪ್ತವಾದ ತತ್ತ್ವಕ್ಕೆ) ಹ್ರಾಸವೇ ಇಲ್ಲವೋ ಅದಕ್ಕೆ ನಾಶವನ್ನು ಯಾರೂ ಮಾಡಲಾರರು, ಎನ್ನುವುದನ್ನು ಪ್ರತ್ಯೇಕವಾಗಿ ಹೇಳಲೇಬೇಕಾಗಿಲ್ಲ. ॥ 17 ॥

## ಜೀವರು ಸರ್ವಗತನಾದ ಪರಮಾತ್ಮನ ಪ್ರತಿಬಿಂಬರು

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ** ॥ 18 ॥

**ಅರ್ಥ** - ನಿತ್ಯರಾದ ಜೀವಾತ್ಮರ, ನಾವು ಕಾಣುವ ಈ ಬಾಹ್ಯದೇಹಗಳು ನಾಶವಾಗುವವುಗಳೇ. ಆದರೆ, ಜೀವಾತ್ಮರು ಮಾತ್ರ ನಾಶರಹಿತನಾದ, ಸರ್ವಗತನಾದ ಪರಮಾತ್ಮನ ಪ್ರತಿಬಿಂಬರು. ಆದ್ದರಿಂದ ಅವರಿಗೆ ಎಂದೂ ನಾಶವಿಲ್ಲ.

'ನನು ರೂಪಂ ರೂಪಂ ಪ್ರತಿರೂಪೋ ಬಭೂವ'(ಕಾಠಕ.2-5-9) ಇತಿ ಶ್ರುತೇಃ ಜೀವಃ ಪ್ರತಿಬಿಂಬಃ । ಪ್ರತಿಬಿಂಬಶ್ಚ ಉಪಾಧಿಕೃತಃ, ಪ್ರತಿಮುಖಮಿವ ದರ್ಪಣೋಪಾಧಿಕೃತಮ್ । ದೇಹ ಏವಾತ್ರ ಜೀವೋಪಾಧಿರ್ನಾನ್ಯೋಽಸ್ತಿ । ತಥಾ ಚ 'ಜೀವಚೇತನಾ ನ ನಿತ್ಯಾಃ, ನಾಶವದ್ದೇಹೋಪಾಧಿಕತ್ವಾತ್, ದರ್ಪಣೋಪಾಧಿಕಪ್ರತಿಮುಖವತ್ । ನಶ್ವರಬಿಂಬೋಪಾಧಿಸನ್ನಿಧಿಕತ್ವಾತ್, ನಶ್ವರಮುಖದರ್ಪಣಸನ್ನಿಧಿಕಪ್ರತಿಮುಖವತ್, ಇತಿ ಪ್ರತಿಪಕ್ಷಗ್ರಸ್ತಮನಾದಿ-ನಿತ್ಯತ್ವಾನುಮಾನಮಿತ್ಯತ ಆಹ- **ಅಂತವಂತ ಇತಿ** ॥

**ಅನುವಾದ** – ಕಾಠಕೋಪನಿಷತ್ತಿನ 'ರೂಪಂ ರೂಪಂ ಪ್ರತಿರೂಪೋ ಬಭೂವ' ಎನ್ನುವ ಮಂತ್ರವು ಜೀವನು ಪರಮಾತ್ಮನ ಪ್ರತಿಬಿಂಬ ಎಂದು ಹೇಳುತ್ತದೆ. ಪ್ರತಿಬಿಂಬವು ಉಪಾಧಿ ಸಾಪೇಕ್ಷವಾದುದು . ನಮ್ಮ ಮುಖದ ಪ್ರತಿಬಿಂಬವು ಕನ್ನಡಿಯನ್ನು ಅಪೇಕ್ಷಿಸುವಂತೆ. ( ಕನ್ನಡಿ ಇದ್ದರೆ ತಾನೇ, ನಮ್ಮ ಪ್ರತಿಬಿಂಬ ಮೂಡುವುದು.) ಜೀವನು ಪ್ರತಿಬಿಂಬನಾದರೆ ಈ ಜಡದೇಹವೇ ಕನ್ನಡಿಯಂತೆ ಮಾಧ್ಯಮವಾಗಬೇಕು.ಆಗ, ಆ ದೇಹ ನಾಶವಾದರೆ, ಕನ್ನಡಿ ಒಡೆದಾಗ ಪ್ರತಿಬಿಂಬ ನಾಶವಾಗುವಂತೆ, ಜೀವನೂ ನಾಶವಾಗಬೇಕು. ಆದ್ದರಿಂದ ಹೀಗ ಅನುಮಾನ ಮಾಡಬಹುದು- ಜೀವರು ನಾಶವಾಗುತ್ತಾರೆ, ಏಕೆಂದರೆ ನಶ್ವರವಾದ ದೇಹ ಪ್ರಯುಕ್ತ ಪ್ರತಿಬಿಂಬರಾದುದರಿಂದ. ಉದಾ:- ಕನ್ನಡಿಯಿಂದಾಗುವ ನಮ್ಮ ಮುಖದ ಪ್ರತಿಬಿಂಬದಂತೆ.

ಅಷ್ಟೇ ಅಲ್ಲ. ಕನ್ನಡಿ ಇದ್ದರೂ ಅದರ ಮುಂದೆ ನಾವು ನಿಂತರೆ ಮಾತ್ರ ನಮ್ಮ ಪ್ರತಿಬಿಂ ಮೂಡುತ್ತದೆ. ನಾವು ದೂರ ಸರಿದರೆ ಪ್ರತಿಬಿಂಬ ಮೂಡುವುದಿಲ್ಲ. ಜೀವಾತ್ಮನು ಪರಮಾತ್ಮ ಪ್ರತಿಬಿಂಬ. ಪರಮಾತ್ಮನು ಕನ್ನಡಿಯಂತಿರುವ ನಮ್ಮ ದೇಹದ ಮುಂದಿದ್ದರೆ ಮಾತ್ರ ಅವ ಪ್ರತಿಬಿಂಬರಾಗಿ ನಾವು ಮೂಡಿಬರಲು ಸಾಧ್ಯ. ಅವನು ಆಚೀಚೆ ಸರಿದರೆ ಪ್ರತಿಬಿಂಬವೂ ಇಲ್

ಹೀಗೆ ಉಪಾಧಿಗೂ ಬಿಂಬಕ್ಕೂ ಇರುವ ಸನ್ನಿಧಿ (ಸಾಮೀಪ್ಯ) ನಶ್ವರವಾದ ಕಾರಣ ಪ್ರತಿಬಿಂಬನಾದ ಜೀವನೂ ನಶ್ವರ.

ಈ ಎರಡು ಅನುಮಾನಗಳಿಂದ ಜೀವರು ನಿತ್ಯರಲ್ಲವೆಂದು ಸಿದ್ಧವಾಗುವ ಕಾರಣ ಅವರು ನಿತ್ಯರಾಗಿದ್ದಾರೆ ಎಂದು ಸಾಧಿಸುವ ಅನುಮಾನವು ತಪ್ಪಾಗಿದೆ. ಇದಕ್ಕೆ ಉತ್ತರ **ಅಂತವಂತಃ** ಎಂಬ ಶ್ಲೋಕ.

**ವಿವರಣೆ – ಸತ್ಪ್ರತಿಪಕ್ಷ** – ಒಂದು ಅನುಮಾನಕ್ಕೆ ಮತ್ತೊಂದು ಅನುಮಾನದ ವಿರೋಧ ಬಂದರೆ ಸತ್ಪ್ರತಿಪಕ್ಷ ದೋಷ. ಜೀವಾತ್ಮರು 'ಅನಾದಿಯಾದುದರಿಂದ ನಿತ್ಯರು' ಎನ್ನುವ ಅನುಮಾನಕ್ಕೆ 'ಜೀವರೆಂಬ ಪ್ರತಿಬಿಂಬಕ್ಕೆ ಕಾರಣವಾದ ದೇಹ ಮತ್ತು ದೇಹ-ಪರಮಾತ್ಮರ ಸನ್ನಿಧಿಯು ನಶ್ವರವಾದ ಕಾರಣ ಜೀವರೂ ಅನಿತ್ಯರು' ಎಂಬ ಅನುಮಾನದ ವಿರೋಧವಿದೆ. ಆದ್ದರಿಂದ ಸತ್ಪ್ರತಿಪಕ್ಷದೋಷ.

**ಏಕವಚನಂ ಬಹುವಚನಾರ್ಥೇ । ಶರೀರಿಣಾಂ ನಿತ್ಯಾನಾಮಿಮೇ= ಪರಿದೃಶ್ಯ-ಮಾನಾಃ ಭೌತಿಕಾಃ ದೇಹಾಃ ಅಂತವಂತಃ= ವಿನಾಶಿನಃ ಇತಿ ಯೋಜನಾ । ಇಮ ಇತಿ ವಿಶೇಷಣಾದನ್ಯೇಽಂತಹೀನಾ ಅಪಿ ದೇಹಾಃ ಸಂತೀತಿ ಸೂಚ್ಯತೇ । ತ ಏವೋಪಾಧಯೋ ಜೀವಾನಾಂ, ನಾಂತವದ್ಭೌತಿಕದೇಹಾ ಇತಿ ಆದ್ಯಪ್ರತಿಪಕ್ಷೇ ಹೇತುರಸಿದ್ಧಃ । ಅತ ಏವ ನಿತ್ಯಸ್ಯೇತಿ ಸಾಧ್ಯೋಕ್ತಿಃ । 'ಜೀವಾಃ ನಿತ್ಯಾಃ, ನಿತ್ಯೋ-ಪಾಧಿಕತ್ವಾತ್, ವ್ಯತಿರೇಕೇಣ ಪ್ರತಿಮುಖವತ್' ಇತ್ಯುಕ್ತಂ ಭವತಿ ।**

**ಅನುವಾದ–** ನಿತ್ಯಸ್ಯ ಶರೀರಿಣಃ (ಜೀವಾತ್ಮನ) ಎಂಬಲ್ಲಿ ಏಕವಚನವು ಬಹುವಚನಾರ್ಥ ದಲ್ಲಿದೆ. '**ನಿತ್ಯಾನಾಂ ಶರೀರಿಣಾಂ**' (ಜೀವಾತ್ಮರ) ಎಂದು ಅರ್ಥ.

ದೇಹವನ್ನು ಧರಿಸಿರುವ ನಿತ್ಯರಾದ ಜೀವರ, **ಇಮೇ** = ಕಾಣುವ ಈ ಭೌತಿಕದೇಹಗಳು, **ಅಂತವಂತಃ** = ಕೊನೆಯುಳ್ಳವು, ನಶ್ವರಗಳಾಗಿವೆ. ಹೀಗೆ ಶ್ಲೋಕದ ಪದಗಳನ್ನು ಜೋಡಿಸಿಕೊಳ್ಳಬೇಕು.

ಇಲ್ಲಿ ದೇಹಕ್ಕೆ '**ಇಮೇ**' (ಕಾಣುವ ಈ) ಎಂಬ ವಿಶೇಷಣದಿಂದಾಗಿ, ಈ ದೇಹಗಳು ಮಾತ್ರ ನಶ್ವರ, ನಶ್ವರವಲ್ಲದ ಇನ್ನೊಂದು ದೇಹವೂ ಇವರಿಗಿದೆ ಎಂದು ಸೂಚಿತವಾಗುತ್ತದೆ. ಅಂತಹ ಶಾಶ್ವತವಾದ ಸ್ವರೂಪದೇಹವೇ ಜೀವರು ಪರಮಾತ್ಮನ ಪ್ರತಿಬಿಂಬರೆನಿಸಲು ಕನ್ನಡಿಯಂತೆ ಉಪಾಧಿಯಾಗಿದೆ. ಹೊರತು ಈ ನಶ್ವರವಾದ ದೇಹವಲ್ಲ ಎಂದು ತಿಳಿಸಿದಂತಾಯಿತು. ಇದರಿಂದಾಗಿ 'ಜೀವರ ಪ್ರತಿಬಿಂಬಕ್ಕೆ ಕಾರಣವಾದ ದೇಹವೆಂಬ ಉಪಾಧಿಯು

ಅನಿತ್ಯವಾದುದರಿಂದ ಜೀವರು ಅನಿತ್ಯರು' ಎಂದು ಹಿಂದೆ ಹೇಳಿದ ಮೊದಲ ಪ್ರತಿಪಕ್ಷಾನುಮಾನದ ಹೇತುವು ಅಸಿದ್ಧ ಎಂದಂತಾಯಿತು. (ಏಕೆಂದರೆ, ಪ್ರತಿಬಿಂಬಕ್ಕೆ ಕಾರಣವಾದ ಉಪಾಧಿಯು ಅನಿತ್ಯವಲ್ಲ , ನಿತ್ಯ) ಇದಕ್ಕಾಗಿಯೇ ಜೀವರನ್ನು **'ಶರೀರಿಣಃ'** ಎಂದಿಷ್ಟೇ ಉಲ್ಲೇಖಿಸದೆ, **'ನಿತ್ಯಸ್ಯ'** ಎಂದು ವಿಶೇಷಣವನ್ನು ಸೇರಿಸಲಾಗಿದೆ. ಇದರಿಂದ ಹೀಗೊಂದು ಅನುಮಾನವು ಸಿದ್ಧವಾಗುತ್ತದೆ– 'ಜೀವರು ನಿತ್ಯರು, ಏಕೆಂದರೆ, ಅವರ 'ಉಪಾಧಿಯು' ನಿತ್ಯವಾದುದರಿಂದ ' ಅದಕ್ಕೆ ವ್ಯತಿರೇಕ ದೃಷ್ಟಾಂತ– ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬ. ಕನ್ನಡಿ ಎಂಬ ಉಪಾಧಿಯು ಅನಿತ್ಯವಾದುದರಿಂದ ಆ ಪ್ರತಿಬಿಂಬವೂ ಅನಿತ್ಯ. ಆದರೆ ಜೀವರ ಸ್ವರೂಪದೇಹ ನಿತ್ಯವಾದುದರಿಂದ ಜೀವರು ನಿತ್ಯರು.

**ನಿತ್ಯಸ್ಯೇತ್ಯೇವೋಕ್ತೌ ಈಶ್ವರಸ್ಯಾಪಿ ದೇಹೋಽಂತವಾನಿತಿ ಪ್ರಾಪ್ನೋತೀತ್ಯತಃ ಶರೀರಿಣ ಇತಿ ವಿಶೇಷಣಮ್ । ದ್ವಿತೀಯಹೇತುರಪ್ಯಸಿದ್ಧ ಇತ್ಯಾಹ – ಅನಾಶಿನ ಇತಿ ॥ ಬಿಂಬೋಪಾಧಿಸನ್ನಿಧಿನಾಶಕೃತನಾಶಹೀನಸ್ಯ ಶರೀರಿಣ ಇತ್ಯನ್ವಯಃ । 'ಜೀವಾಃ ನಿತ್ಯಾಃ, ನಿತ್ಯಬಿಂಬೋಪಾಧಿಸನ್ನಿಧಿಕತ್ವಾತ್, ವ್ಯತಿರೇಕೇಣ ಪ್ರತಿಮುಖವತ್' ಇತ್ಯುಕ್ತಂ ಭವತಿ ।**

ಜೀವರನ್ನು 'ನಿತ್ಯರು' (ನಿತ್ಯಸ್ಯ) ಎಂದಿಷ್ಟೇ ಉಲ್ಲೇಖಿಸಿದ್ದರೆ, ಶ್ಲೋಕದಲ್ಲಿ 'ನಿತ್ಯರಾದವರ ಶರೀರಕ್ಕೆ ನಾಶವಿದೆ' ಎಂದಂತಾಗುತ್ತಿತ್ತು. ಹೀಗೆ ಹೇಳಿದರೆ ಪರಮಾತ್ಮನ ದೇಹಕ್ಕೂ ನಾಶವಿದೆ ಎಂದು ತಿಳಿಯುತ್ತಿತ್ತು. ಅದಕ್ಕಾಗಿ 'ಶರೀರಿಣಃ' ಎಂಬ ವಿಶೇಷಣವನ್ನೂ ಸೇರಿಸಲಾಗಿದೆ (ಭಿನ್ನವಾದ ಶರೀರವಿರುವ ಜೀವರ ಶರೀರವು ಅನಿತ್ಯ ಎಂದು ಈಗ ಅರ್ಥ. ಪರಮಾತ್ಮನ ದೇಹ ಅವನಿಗಿಂತ ಭಿನ್ನವಾಗಿಲ್ಲ. ಹೀಗಾಗಿ ಅದು ಅನಿತ್ಯವಲ್ಲ. ಇದು **'ಶರೀರಿಣಃ'** ಎಂಬ ವಿಶೇಷಣದಿಂದ ತಿಳಿಯುತ್ತದೆ).

ಎರಡನೆಯ ಪ್ರತಿಪಕ್ಷಾನುಮಾನದಲ್ಲೂ ಹೇತುವು ಅಸಿದ್ಧವಾಗಿದೆ ಎಂದು – **'ಅನಾಶಿನ'** ಎಂಬ ಪದವು ತಿಳಿಸುತ್ತದೆ. 'ಬಿಂಬ ಮತ್ತು ಉಪಾಧಿಗಳ ಸನ್ನಿಧಿನಾಶ ಪ್ರಯುಕ್ತವಾದ ನಾಶವು ಇಲ್ಲದ ಜೀವರ ' (ಶರೀರಗಳು ನಶಿಸುತ್ತವೆ) ಎಂದು ಅನ್ವಯಿಸಿಕೊಳ್ಳಬೇಕು. ಇದರಿಂದ ಸೂಚಿತವಾದ ಅನುಮಾನ ಹೀಗಿದೆ – 'ಪ್ರತಿಬಿಂಬ ಕಾರಣವಾದ ಉಪಾಧಿಗೂ ಬಿಂಬನಾದ ಪರಮಾತ್ಮನಿಗೂ ಇರುವ ಸಂಪರ್ಕಕ್ಕೆ ಎಂದೂ ಚ್ಯುತಿ ಇಲ್ಲದ ಕಾರಣ ಪ್ರತಿಬಿಂಬರಾದ ಜೀವರಿಗೆ ನಾಶವಿಲ್ಲ'. ಇದಕ್ಕೆ ವಿರುದ್ಧವಾದ ಉದಾಹರಣೆ – ಕನ್ನಡಿಯ ಪ್ರತಿಬಿಂಬ. ಅಲ್ಲಿ ಬಿಂಬವಾದ ವಸ್ತು ಕನ್ನಡಿಯ ಮುಂದೆ ಬಂದಾಗ ಮಾತ್ರ ಪ್ರತಿಬಿಂಬ ಮೂಡುತ್ತದೆ . ಅದನ್ನು ಸರಿಸಿದಾಗ ಪ್ರತಿಬಿಂಬ ನಾಶವಾಗುತ್ತದೆ. ಹೀಗೆ ಅಲ್ಲಿ ಬಿಂಬ–ಉಪಾಧಿಗಳ 'ಸನ್ನಿಧಿಗೆ' ನಾಶವಿದೆ. ಪ್ರಕೃತದಲ್ಲಿ ಇಲ್ಲ. ಇದನ್ನು **'ಅನಾಶಿನಃ'** ಎಂಬ ವಿಶೇಷಣದಿಂದ ತಿಳಿಸಲಾಗಿದೆ.

**ನನು ಉಪಾಧೇರ್ನಿತ್ಯತ್ವೇಽಪಿ ಪರಿಚ್ಛಿನ್ನಪರಿಮಾಣಸ್ಯೈವ ವಸ್ತುನೋ ಬಿಂಬತ್ವಯೋಗ್ಯತ್ವಾತ್ ಪರಿಚ್ಛಿನ್ನಯೋಶ್ಚ ಬಿಂಬೋಪಾಧ್ಯೋಃ ಸನ್ನಿಧೇಃ ದರ್ಪಣ ಮುಖಸನ್ನಿಧೇರಿವ ಕಾದಾಚಿತ್ಕತ್ವನಿಯಮಾತ್ ಕಥಂ ತಸ್ಯ ನಿತ್ಯತೇತ್ಯತ ಆಹ– ಅಪ್ರಮೇಯಸ್ಯೇತಿ॥ ಪ್ರಮಾ= ಪರಿಮಿತಿಃ, ಅಪರಿಚ್ಛಿನ್ನಸ್ಯೇತ್ಯರ್ಥಃ[1] । ಸರ್ವಗತ-ಸ್ಯೇತಿ ಯಾವತ್ । ಜೀವೇ ಸರ್ವಗತತ್ವಸ್ಯಾಭಾವಾದತದ್ಭಾವೇ ಸಾಮಾನಾಧಿ-ಕರಣ್ಯಂ ಸಾರೂಪ್ಯಂ ಗಮಯತೀತಿ 'ಸಿಂಹಶ್ಚೈತ್ರ' ಇತ್ಯಾದೌ ಪ್ರಸಿದ್ಧೇಃ, ಸರ್ವಗತೇಶ್ವರಸರೂಪಸ್ಯೇತ್ಯರ್ಥಃ । ತತ್ಪ್ರತಿಬಿಂಬಸ್ಯೇತಿ ಯಾವತ್ । ಸರ್ವ-ಗತೇಶ್ವರಪ್ರತಿಬಿಂಬಸ್ಯ ಕಥಂ ಬಿಂಬೋಪಾಧಿಸನ್ನಿಧಿನಾಶೇನ ನಾಶಃ ಸ್ಯಾದಿತಿ ಭಾವಃ ।**

**ಅನುವಾದ–** ಜೀವರು ಪ್ರತಿಬಿಂಬರೆನಿಸಲು ಕಾರಣವಾದ ಸ್ವರೂಪದೇಹವೆಂಬ ಉಪಾಧಿಯು ನಿತ್ಯವಾಗಲಿ. ಆದರೆ, ಬಿಂಬನಾದ ಪರಮಾತ್ಮನಿಗೂ ಉಪಾಧಿಗೂ ಇರುವ ಸನ್ನಿಧಿಯು ನಾಶವಾಗಲೇಬೇಕು. ಅದು ನಿತ್ಯವಾಗಿರಲು ಸಾಧ್ಯವಿಲ್ಲ. ಏಕೆಂದರೆ, ಪರಿಮಿತವಾದ ವಸ್ತು ಪ್ರತಿಬಿಂಬಿತವಾಗಲು ಸಾಧ್ಯ. ಅಪರಿಮಿತವಾದುದು (ಎಲ್ಲೆಡೆ ವ್ಯಾಪಿಸಿರುವ ವಸ್ತು) ಹೇಗೆ ತಾನೇ ಪ್ರತಿಬಿಂಬಿತವಾದೀತು ? ಪರಿಮಿತ ವಸ್ತುವಿಗೆ ಚಲನೆ ಇದ್ದೇ ಇರುತ್ತದೆ. ಆ ವಸ್ತು ಚಲಿಸಿದಾಗ ಬಿಂಬ ಮತ್ತು ಉಪಾಧಿಗಳ ಸನ್ನಿಧಿಯು ನಾಶವಾಗಲೇಬೇಕು. ಮುಖ ಮತ್ತು ಕನ್ನಡಿಯ ಸನ್ನಿಧಿಯಂತೆ. ಹೀಗಿರುವಾಗ ಪ್ರಕೃತ ಬಿಂಬೋಪಾಧಿಸನ್ನಿಧಿಯು ನಿತ್ಯವಾಗುವುದು ಹೇಗೆ ? ಇದಕ್ಕೆ ಗೀತೆಯ ಉತ್ತರ '**ಅಪ್ರಮೇಯಸ್ಯ**' ಎಂದು.

'ಪ್ರಮಾ' ಎಂದರೆ ಪರಿಮಿತಿ. ಅಪ್ರಮೇಯ ಎಂದರೆ ಪರಿಮಿತಿ ಇಲ್ಲದ ಎಂದರ್ಥ. ಅರ್ಥಾತ್ ಎಲ್ಲೆಡೆ ವ್ಯಾಪ್ತವಾದುದು. ಜೀವಾತ್ಮನಲ್ಲಿ ಈ ವಿಶೇಷಣ ಇಲ್ಲ. ಅವನು ಅಣು, ಸರ್ವಗತನಲ್ಲ. 'ಎರಡಕ್ಕೆ ಅಭೇದವು ಇಲ್ಲವಾದಾಗ ಒಂದೇ ವಿಭಕ್ತ್ಯಂತವಾದ ಪದವನ್ನು ಪ್ರಯೋಗಿಸಿದರೆ ಸಾದೃಶ್ಯ ಎಂಬ ಅರ್ಥವನ್ನು ಹೇಳಬೇಕು' ಇದು ಭಾಷಾ ನಿಯಮ. 'ದೇವದತ್ತನು ಸಿಂಹ ' ಎಂದಾಗ ಸಿಂಹಕ್ಕೂ ದೇವದತ್ತನಿಗೂ ಅಭೇದವು ಇಲ್ಲವಾದುದರಿಂದ 'ಸಿಂಹ' ಎಂದರೆ 'ಸಿಂಹದಂತೆ ಪರಾಕ್ರಮವುಳ್ಳವನು' ಎಂದು ಅರ್ಥ. ಅದರಂತೆ 'ಅಣುವಾದ ಜೀವನು ಅಪ್ರಮೇಯ (ವ್ಯಾಪ್ತ) ' ಎಂದರೆ ಅಪ್ರಮೇಯನಾದ (ಸರ್ವಗತನಾದ) ಪರಮಾತ್ಮನ ಸದೃಶ ಎಂದರ್ಥ. 'ಸದೃಶ ' ಎಂದರೆ ಪ್ರತಿಬಿಂಬ. ಹೀಗೆ ಸರ್ವತ್ರ ವ್ಯಾಪ್ತನಾದವನು ಪರಮಾತ್ಮ. ಅಂತಹವನ ಪ್ರತಿಬಿಂಬ ಜೀವ. ಹೀಗಿದ್ದ ಮೇಲೆ ಬಿಂಬ–ಉಪಾಧಿಗಳ ಸನ್ನಿಧಿಗೆ ನಾಶವೇ ಇಲ್ಲ. ಸನ್ನಿಧಿನಾಶದಿಂದ ಪ್ರತಿಬಿಂಬದ ನಾಶವಾಗಲು ಸಾಧ್ಯವಿಲ್ಲ ಎಂದು ಶ್ಲೋಕದ ಭಾವಾರ್ಥ.

---

1. ಅಪ್ರಮಾ = ಅಪರಿಮಿತಿಃ ಕ.ಗ.

**ನ ಚ ಸರ್ವಗತಸ್ಯ ಪ್ರತಿಬಿಂಬಾಯೋಗಃ । ತತ್ಸಾರೂಪ್ಯಸ್ಯೈವ ಪ್ರತಿಬಿಂಬತಾ-ಶಬ್ದಾರ್ಥತ್ವಾತ್ । ತದಾಹ ಸೂತ್ರಕಾರಃ – 'ಓಂಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ಓಂ' (2-3-30) ಇತಿ ।**

**ಅನುವಾದ–** ಪರಮಾತ್ಮನು ಸರ್ವತ್ರ ವ್ಯಾಪ್ತನಾಗಿದ್ದಾನೆ. ಅವನ ಪ್ರತಿಬಿಂ ಮೂಡುವುದಾದರೂ ಹೇಗೆ ? ಈ ಪ್ರಶ್ನೆಗೆ ಉತ್ತರ – ಪ್ರಕೃತ ಪ್ರತಿಬಿಂಬವೆಂದರೆ ಕನ್ನಡಿಯ ಕಾಣುವಂತೆ ಅಲ್ಲ. ಜೀವನಲ್ಲಿರುವ ಪರಮಾತ್ಮನ ಸಾದೃಶ್ಯವೇ ಪ್ರತಿಬಿಂಬತ್ವ . ಪರಮಾತ್ಮನ ಸರ್ವಗತನಾದರೂ ಅವನ ಅಲ್ಪಸಾದೃಶ್ಯ ಜೀವನಲ್ಲಿ ಇದೆ. ಇದೇ ಪ್ರತಿಬಿಂಬ ಶಬ್ದಾರ್ಥ.

ಜೀವೋಪಾಧಿಯು ನಿತ್ಯವೆಂದು ಸೂತ್ರಕಾರರೂ **'ಯಾವದಾತ್ಮಭಾವಿತ್ವಾತ್ ಚ ದೋಷಃ ತದ್ದರ್ಶನಾತ್'** (2.3.30) ಎಂಬ ಸೂತ್ರದಲ್ಲಿ ಹೇಳಿದ್ದಾರೆ.

**ವಿವರಣೆ – 'ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್'** (2-3-30) ಜೀವ ಪ್ರತಿಬಿಂಬತ್ವಕ್ಕೆ ಕಾರಣವಾದ ಸ್ವರೂಪ-ಉಪಾಧಿಯು ಆತ್ಮ ಇರುವವರೆಗೂ ಇರುತ್ತದೆ. ಅದ ಆತ್ಮನಂತೆಯೇ ನಿತ್ಯವಾಗಿದೆ. **'ನಿತ್ಯಃ ಪರೋ ನಿತ್ಯೋ ಜೀವಃ'** ಎಂಬ ಶ್ರುತಿಯು (ತದ್ದರ್ಶನಾತ್ ಜೀವಾತ್ಮನು ನಿತ್ಯ ಎನ್ನುವ ಮೂಲಕ ಉಪಾಧಿಯೂ ನಿತ್ಯವೆಂದು ತಿಳಿಸುತ್ತದೆ. ಇದು ಸೂತ್ರ ಭಾವಾರ್ಥ.

**ಉಪಸಂಹರತಿ – ತಸ್ಮಾದಿತಿ ॥ ಬಿಂಬೋಪಾಧಿತತ್ಸನ್ನಿಧೀನಾಂ ನಾಶಾ-ಭಾವೇನ ತನ್ನಾಶಪ್ರಯುಕ್ತನಾಶಸ್ಯ ಜೀವಚೇತನೇ ಅನಾಶಂಕ್ಯತ್ವೇನ ಪ್ರತಿಪಕ್ಷಾ-ನುತ್ಥಾನಾತ್ 'ನ ತ್ವೇವಾಹಮ್' ಇತ್ಯತ್ರೋಕ್ತಾನಾದಿತ್ವಾನುಮಾನೇನ ಜೀವಸ್ಯ ನಿತ್ಯತ್ವಾತ್, ಜೀರ್ಣದೇಹಹಾನೇಽಪಿ ಸಮೀಚೀನದೇಹಾಂತರಲಾಭರೂಪ-ಪ್ರತಿನಿಧಿನಾ ಸಮಾಧಾನಸಂಭವಾತ್, ಬಂಧುದೇಹಸ್ಪರ್ಶನದರ್ಶನಾದ್ಯಭಾವ-ನಿಮಿತ್ತಶೋಕಸ್ಯ ಚ ಪರಮಪುಮರ್ಥಹೇತ್ವಭಿಮಾನತ್ಯಾಗೇನ ನಿವರ್ತಿತುಂ ಶಕ್ಯತ್ವಾತ್, ಭಗವತ್ಪೂಜಾರ್ಥಂ, ಹೇ ಭಾರತ, ಯುದ್ಧ್ಯಸ್ವೇತಿ ।**

**ಅನುವಾದ–** ಇದುವರೆಗೆ ಹೇಳಿದ ವಿಷಯವನ್ನು **'ತಸ್ಮಾದ್ ಯುದ್ಧ್ಯಸ್ವ ಭಾರತ'** ಎಂದ ಕೊನೆಯ ಪಾದದಲ್ಲಿ ಉಪಸಂಹಾರ ಮಾಡಲಾಗಿದೆ. ಜೀವನು ಪ್ರತಿಬಿಂಬ, ಪರಮಾತ್ಮ ಬಿಂ ಅವನು ಸರ್ವಗತ . ಆದ್ದರಿಂದ ಬಿಂಬಕ್ಕಾಗಲೀ, ಉಪಾಧಿಗಾಗಲೀ, ಅವೆರಡರ ಸನ್ನಿಧಿಗಾಗಲ ನಾಶವಿಲ್ಲ. ಅವುಗಳ ನಾಶ ಪ್ರಯುಕ್ತವಾಗಿ ಜೀವನಿಗೂ ನಾಶವಾಗಲಿ ಎಂಬ ಸಂಶಯ ಆಸ್ಪದವಿಲ್ಲ. ಇದರಿಂದಾಗಿ, ಜೀವನು ನಿತ್ಯ ಎಂದು ಸಾಧಿಸುವ ಹಿಂದಿನ ಅನುಮಾನ

'ಪ್ರತಿಪಕ್ಷ'ವಿಲ್ಲ. ಹೀಗೆ 'ನ ತ್ವೇವಾಹಂ' ಎಂಬ ಹಿಂದಿನ ಶ್ಲೋಕದಲ್ಲಿ ಹೇಳಿದ ಅನುಮಾನದಿಂದ ಜೀವನು ನಿತ್ಯನೆಂದು ಸಿದ್ಧವಾಗುತ್ತದೆ. ಆದ್ದರಿಂದ ಜೀವನಾಶಕ್ಕಾಗಿ ದುಃಖ ಸಲ್ಲದು. ಇನ್ನು, ದೇಹನಾಶವಾದರೂ ಅದರ ಪ್ರತಿನಿಧಿಯಾಗಿ ಮತ್ತೊಂದು ಹೊಸ ದೇಹ ಬರುತ್ತದೆ. ಮತ್ತೆ , ಬಂಧುಗಳ ದೇಹದ ದರ್ಶನ, ಸಂಪರ್ಕಗಳಿಂದಾಗುವ ಸುಖವು ಇಲ್ಲದಾಗುತ್ತದೆ ಎನ್ನುವ ವ್ಯಥೆಯನ್ನು ಬಂಧುಗಳಲ್ಲಿ ಅಭಿಮಾನ ತ್ಯಾಗ ಮಾಡಿ ಕಳೆದುಕೊಳ್ಳಬೇಕು. ಹೀಗೆ ದುಃಖಕ್ಕೆ ಕಾರಣವೇ ಇಲ್ಲವಾದ್ದರಿಂದ (ತಸ್ಮಾತ್) ಎಲೈ ಭರತವಂಶಜನೆ, ಪರಮಾತ್ಮನ ಆರಾಧನೆ ಎಂದು ತಿಳಿದು ಯುದ್ಧ ಮಾಡು.

**ನನ್ವೇತದಯುಕ್ತಮ್ । ಜೀವೇಶ್ವರಯೋಃ ನಿತ್ಯತ್ವಾವಿಶೇಷಾತ್, ಕುತ ಈಶ್ವರಸ್ಯ ಪೂಜ್ಯತೇತ್ಯತೋ ವಾ ಜೀವಾದ್ಧರೇರ್ವಿಶೇಷಂ ವಕ್ತುಮವಿನಾಶಿ ತ್ವಿತ್ಯಾದಿ ಶ್ಲೋಕ-ದ್ವಯಂ ಪ್ರವೃತ್ತಮ್ । ತಥಾಹಿ – ಯೇನ ಭಗವತಾ ಇದಂ = ಜಗತ್ ಕಾಲಃ ಗುಣಜಾತಂ ದೇಶಶ್ಚ ತತಂ = ವ್ಯಾಪ್ತಮ್ । ಕಾಲತೋ ಗುಣತೋ ದೇಶತಶ್ಚ ಯದ್ವಿಷ್ಣ್ವಾಖ್ಯಂ ಬ್ರಹ್ಮ ತತಿಮತ್ ತದ್ವಿಷ್ಣ್ವಾಖ್ಯಂ ಬ್ರಹ್ಮಾವಿನಾಶಿ । ತುರ್ವಿಶೇಷೇ ।**

**'ಅನಿತ್ಯತ್ವಂ ದೇಹಹಾನಿರ್ದುಃಖಪ್ರಾಪ್ತಿರಪೂರ್ಣತಾ ।**
**ನಾಶಶ್ಚತುರ್ವಿಧಃ ಪ್ರೋಕ್ತಃ ತದಭಾವೋ ಹರೇಃ ಸದಾ ।'**

**ಇತ್ಯುಕ್ತದಿಶಾ ಚತುರ್ವಿಧನಾಶಹೀನಮಿತಿ ವಿದ್ಧಿ = ಜಾನೀಹೀತ್ಯರ್ಥಃ । ವಿನಾಶ-ಮಿತ್ಯಾದಿಪ್ರಾಗ್ವದ್ವ್ಯಾಖ್ಯೇಯಮ್ ।**

**ವರ್ಣಾಕಾಶಾದೇರ್ದೇಶಕಾಲಾಭ್ಯಾಂ ವ್ಯಾಪ್ತತ್ವೇಽಪಿ ನ ಗುಣತಃ ಸಾಽಸ್ತಿ। ಜೀವಸ್ಯ ಕಾಲತಸ್ತತತ್ವೇಽಪಿ ನ ದೇಶಗುಣಾಭ್ಯಾಂ ತತಿರಸ್ತೀತಿ ಹರೇಸ್ತತತ್ವೇ ವಿಶೇಷಃ ॥ 17 ॥**

**ಅನುವಾದ** – 'ಪರಮಾತ್ಮನ ಆರಾಧನಾರೂಪವಾಗಿ ಯುದ್ಧ ಮಾಡು' ಎಂಬ ಶ್ರೀಕೃಷ್ಣನ ಉಪದೇಶ ಸರಿಯಲ್ಲ . ನಾವೂ ನಿತ್ಯರು ; ಪರಮಾತ್ಮನೂ ನಿತ್ಯ . ನಮಗೂ ದೇವರಿಗೂ ವಿಶೇಷವೇನಿಲ್ಲ. ಅವನ ಆರಾಧನೆಯ ಅಗತ್ಯವೇನು ?

ಈ ಪ್ರಶ್ನೆಗೆ ಉತ್ತರವಾಗಿ ದೇವರಲ್ಲಿ ನಮಗಿಂತ ವಿಶಿಷ್ಟತೆ ಇದೆ ಎಂದು ಹೇಳಲು 'ಅವಿನಾಶಿ ತು ತದ್ವಿದ್ಧಿ' ಎಂಬ ಹಿಂದಿನ (17,18) ಎರಡು ಶ್ಲೋಕಗಳಿವೆ , ಎಂದೂ ಈ ಎರಡು ಶ್ಲೋಕಗಳ ಅಭಿಪ್ರಾಯವನ್ನು ತಿಳಿಯಬಹುದು . ಅದರ ಭಾವ ಹೀಗೆ–

**ಶ್ಲೋಕ 17** – ಯಾವ ಪರಮಾತ್ಮನಿಂದ **ಇದಂ** = ಈ ಜಗತ್ತು , ಕಾಲ, ಗುಣಗಳು ಮತ್ತು

ದೇಶವು . **ತತಂ** = ವ್ಯಾಪ್ತವಾಗಿವೆಯೋ, ಅಂದರೆ, ಕಾಲ, ಗುಣ, ದೇಶಗಳ ಮಿತಿಯನ್ನು ಮೀರಿ ಯಾವುದು ಇದೆಯೋ, ಅಂತಹ ವಿಷ್ಣುವು, **ಅವಿನಾಶಿ** = ನಾಶವಿಲ್ಲದವನು.

'**ಅವಿನಾಶಿ ತು**' ಎಂಬಲ್ಲಿರುವ 'ತು' ಶಬ್ದವು ವಿಷ್ಣುವಿಗೆ ಇರುವ ಅವಿನಾಶವು ನಮಗಿಂತಲೂ ವಿಶಿಷ್ಟವಾದುದು ಎಂದು ತಿಳಿಸುತ್ತದೆ. ಅಂತಹ ವಿಶೇಷವೇನೆಂದರೆ – 'ಸ್ವರೂಪನಾಶ, ದೇಹನಾಶ, ದುಃಖಪ್ರಾಪ್ತಿ, ಅಪೂರ್ಣತೆ ಹೀಗೆ ನಾಶವು ನಾಲ್ಕುವಿಧವಾಗಿದೆ. ಈ ನಾಲ್ಕೂವಿಧದ ನಾಶವು ಶ್ರೀಹರಿಗೆ ಇಲ್ಲ. (ಜೀವನಿಗೆ ಮೂರು ವಿಧದ ನಾಶ ಇದೆ)'. ಹೀಗೆ ಪರಮಾತ್ಮನಿಗೆ ನಾಲ್ಕು ವಿಧದ ನಾಶವೂ ಇಲ್ಲವೆಂದು, **ವಿದ್ಧಿ** = ತಿಳಿ.

ಇದು 'ಅವಿನಾಶಿ ತು ತದ್ವಿದ್ಧಿ' ಎಂಬ ಒಂದು ಪಾದದ ಅರ್ಥ. ಉಳಿದಂತೆ ಹಿಂದೆ ಹೇಳಿದ ಅರ್ಥವನ್ನೇ ಪರಮಾತ್ಮನಿಗೂ ಅನ್ವಯಿಸಿಕೊಳ್ಳಬೇಕು.

ಐವತ್ತೊಂದು ಅಕ್ಷರಗಳು, ಆಕಾಶ ಇವುಗಳಿಗೆ ದೇಶದ ವ್ಯಾಪ್ತಿ, ಕಾಲದ ವ್ಯಾಪ್ತಿ ಇದ್ದರೂ, ಗುಣತಃ ವ್ಯಾಪ್ತಿ ಇಲ್ಲ. ಅವುಗಳು ಗುಣಗಳಿಂದ ಪೂರ್ಣಗಳಲ್ಲ. ಜೀವಾತ್ಮರು ಕಾಲತಃ ವ್ಯಾಪ್ತರು (ನಿತ್ಯರು). ಆದರೂ ದೇಶತಃ, ಗುಣತಃ, ವ್ಯಾಪ್ತಿ ಅವರಿಗಿಲ್ಲ. ಆದರೆ, ಶ್ರೀಹರಿಗೆ ದೇಶ, ಕಾಲ, ಗುಣ ಈ ಮೂರರ ವ್ಯಾಪ್ತಿಯೂ ಇದೆ. ಇದು ವ್ಯಾಪ್ತಿಯ ಬಗ್ಗೆ ಭಗವಂತನಿಗಿರುವ ವಿಶೇಷ .

|| 17 ||

**ಅಸ್ತ್ವೇವಂ ಹರೇಃ ಸರ್ವಪ್ರಕಾರೇಣ ವಿನಾಶಾಭಾವಃ । ತಾವತಾ ಜೀವಾದವಿನಾಶವಿಷಯೇ ಕೋ ಹರೇರ್ವಿಶೇಷ ಇತ್ಯತ ಆಹ– ಅಂತವಂತ ಇತಿ ॥ ಶರೀರಿಣಾಂ= ಶೀರ್ಯಮಾಣದೇಹವತಾಂ ಸಂಸಾರಿಣಾಮಿತಿ ಯಾವತ್, ಸ್ವರೂಪತೋ ನಿತ್ಯಾನಾಂ ಜೀವಾನಾಮಿಮೇ ದೇಹಾಃ ಅಂತವಂತೋ= ವಿನಾಶ-ವಂತೋ, ಜನಿಮಂತಶ್ಚೇತ್ಯಪಿ ಗ್ರಾಹ್ಯಮ್ । ಸಂಸಾರಿದೇಹಾ ಆದ್ಯಂತವಂತ ಇತ್ಯುಕ್ತ್ಯಾ ಮುಕ್ತದೇಹೋ ನೈವಮಿತಿ ಲಾಭಾತ್ ಮುಕ್ತೇಶ್ವರಸ್ಯ ಹರೇಃ ಕೈಮುತ್ಯ-ಸಿದ್ಧೋ ನಿತ್ಯದೇಹಃ । ಏವಂ ಚೋತ್ಪತ್ತಿವಿನಾಶವದ್ದೇಹವತಾಂ ಚ ದುಃಖ-ಪ್ರಾಪ್ತಿರವರ್ಜನೀಯೈವ । ಗುಣತೋಽಪೂರ್ಣತಾ ವ್ಯಕ್ತೈವೇತಿ ।**

**ಅನುವಾದ** – ಶ್ರೀಹರಿಗೆ ಯಾವ ವಿಧದ ವಿನಾಶವೂ ಇಲ್ಲ, ಇದು ಅವನ 'ವಿಶೇಷ'ವಾಗಿರಲಿ. ಆದರೆ, ಸ್ವರೂಪತಃ ನಾಶಾಭಾವದಲ್ಲಿ ಜೀವರಿಗಿಂತಲು ಶ್ರೀಹರಿಯಲ್ಲಿರುವ ಹೆಚ್ಚಿನ ವಿಶೇಷವೇನು ? ಅದಕ್ಕೆ 'ಅಂತವಂತಃ' ಎಂದು ಗೀತೆಯ ಉತ್ತರ

**ಶರೀರಿಣಾಂ** = ನಾಶವಾಗುವ ದೇಹವಿರುವ ಅರ್ಥಾತ್ ಸಂಸಾರಿ ಜೀವರ, ಅವರ

ಸ್ವರೂಪತಃ ನಿತ್ಯರಾದರೂ, ಅವರ ಈ ದೇಹಗಳು **ಅಂತವಂತಃ** = ವಿನಾಶವುಳ್ಳವುಗಳು. ಅಷ್ಟೇ ಅಲ್ಲ, ಆ ದೇಹಗಳಿಗೆ ಉತ್ಪತ್ತಿಯೂ ಇದೆ.

ಸಂಸಾರಿಗಳ ದೇಹಕ್ಕೆ ಉತ್ಪತ್ತಿ ನಾಶಗಳಿವೆ ಎಂದುದರಿಂದ ಮುಕ್ತರ ದೇಹವು ಹೀಗಲ್ಲ ಎಂದು ತಿಳಿಯುತ್ತದೆ. ಮುಕ್ತರ ದೇಹವೇ ಹಾಗಿಲ್ಲದ ಮೇಲೆ ನಿತ್ಯಮುಕ್ತನಾದ ಪರಮಾತ್ಮನ ದೇಹಕ್ಕೆ ನಾಶವಿಲ್ಲವೆಂದು ಹೇಳಲೇಬೇಕಿಲ್ಲ.

ಹೀಗೆ ಹುಟ್ಟು – ನಾಶವುಳ್ಳ ದೇಹವಿರುವುದರಿಂದಲೇ ಜೀವರಿಗೆ ದುಃಖಪ್ರಾಪ್ತಿಯು ಅನಿವಾರ್ಯ. ಜೀವರು ಗುಣಗಳಿಂದ ಪೂರ್ಣರಲ್ಲ ಎನ್ನುವುದಂತೂ ಸ್ಪಷ್ಟವೇ. ಇದೇ ಜೀವರಿಗಿಂತ ಶ್ರೀಹರಿಯಲ್ಲಿರುವ ವಿಶೇಷ.

**ಸ್ವರೂಪತೋ ನಿತ್ಯತ್ವೇಽಪಿ ತ್ರಿವಿಧನಾಶವತ್ತ್ವಾಜ್ಜೀವಸ್ಯ ತತೋ ಹರೇಶ್ಚತುರ್ವಿಧನಾಶಹೀನಸ್ಯಾಸ್ತಿ ಮಹಾನ್ವಿಶೇಷ ಇತಿ ತತ್ಪೂಜಾಕಾರ್ಯೇತ್ಯುಪ-ಸಂಹರತಿ– ಅನಾಶಿನ ಇತಿ ॥ ತಸ್ಮಾಜ್ಜೀವೇಭ್ಯೋ[1]ಽತಿಶಯವತ್ತ್ವಾತ್, ಅನಾಶಿನಃ= ಚತುರ್ವಿಧನಾಶಹೀನಸ್ಯ , ಅಪ್ರಮೇಯಸ್ಯ= ದೇಶಕಾಲಗುಣಾಪರಿಚ್ಛಿನ್ನಸ್ಯ ಹರೇಃ ಪೂಜಾರ್ಥಂ ಯುಧ್ಯಸ್ವೇತಿ ।**

**ಅನುವಾದ**– ಪರಮಾತ್ಮನಂತೆ ಜೀವರೂ ಸ್ವರೂಪತಃ ನಿತ್ಯರಾದರೂ ಜೀವರಿಗೆ ದೇಹನಾಶ, ದುಃಖಪ್ರಾಪ್ತಿ, ಅಪೂರ್ಣತೆ ಎಂಬ ಮೂರು ವಿಧದ ವಿನಾಶಗಳೂ ಇವೆ. ಶ್ರೀಹರಿಗೆ ನಾಲ್ಕೂವಿಧದ ವಿನಾಶವಿಲ್ಲ. ಹೀಗೆ ಅವನಲ್ಲಿ ಅತಿ ಹೆಚ್ಚಿನ ವೈಶಿಷ್ಟ್ಯವಿರುವುದರಿಂದ ಅವನ ಆರಾಧನಾ ಭಾವನೆಯಿಂದ ಯುದ್ಧವನ್ನು ಮಾಡಬೇಕು. ಹೀಗೆಂದು '**ಅನಾಶಿನೋಽಪ್ರಮೇಯಸ್ಯ**' ಎಂಬ ಉತ್ತರಾರ್ಧದಿಂದ ಶ್ರೀಕೃಷ್ಣ ಉಪಸಂಹಾರ ಮಾಡಿದ್ದಾನೆ.

**ತಸ್ಮಾತ್** = ಜೀವರಿಗಿಂತ ಶ್ರೇಷ್ಠನಾದುದರಿಂದ, **ಅನಾಶಿನಃ** = ನಾಲ್ಕೂ ವಿಧದ ನಾಶವಿಲ್ಲದ, **ಅಪ್ರಮೇಯಸ್ಯ** = ದೇಶ, ಕಾಲ, ಗುಣಗಳ ಪರಿಮಿತಿ ಇಲ್ಲದ ಶ್ರೀಹರಿಯ ಆರಾಧನೆಗಾಗಿ ಯುದ್ಧಮಾಡು. ಇದು ಉತ್ತರಾರ್ಧದ ಅರ್ಥ.

**ಕಿಂಚ ನ ಕೇವಲಂ ಸರ್ವಪ್ರಕಾರೇಣಾವಿನಾಶಿತ್ವಾತ್ ತತ್ಪೂಜಾ ಕಾರ್ಯೇತಿ । ಕಿಂತು ಸರ್ವಥಾ ಏವ ಅವಿನಾಶಿತ್ವಾತ್ ಸ ಏವ ಸ್ವತಂತ್ರಃ । ತತಶ್ಚ ತದಧೀನತ್ವಾನ್ಮುಕ್ತೇಃ ಯುದ್ಧಾದಿಸ್ವಕರ್ಮಣಾರಾಧಿತಶ್ಚ ಮೋಕ್ಷಂ ದದಾತೀತ್ಯತಸ್ತತ್ಪೂಜಾ ಕಾರ್ಯೇತಿ ಭಾವೇನ ಚೋಕ್ತಮನಾಶಿನೋಽಪ್ರಮೇಯಸ್ಯೇತಿ ॥ 18 ॥**

---

1. ಅತಿಶಯತ್ವಾತ್. ಇತಿ ಕಶ್ಚಿತ್

**ಅನುವಾದ**– ಶ್ರೀಹರಿಗೆ ಯಾವ ರೀತಿಯಿಂದಲೂ ವಿನಾಶವಿಲ್ಲದ ಕಾರಣದಿಂದಷ್ಟೇ ಅವನ ಆರಾಧನೆಯನ್ನು ಮಾಡಬೇಕಾದುದಲ್ಲ. ಹೊರತಾಗಿ, ಸರ್ವಥಾ ನಾಶವಿಲ್ಲದ ಕಾರಣದಿಂದ ಅವನೇ ಸ್ವತಂತ್ರನು. ಆದ್ದರಿಂದಲೇ ಮೋಕ್ಷವೂ ಅವನ ಅಧೀನದಲ್ಲಿದೆ. ಯುದ್ಧವೆಂಬ, ನಿನಗೆ ವಿಹಿತವಾದ, ಕರ್ಮದಿಂದ ಅವನನ್ನು ಆರಾಧಿಸಿದರೆ ಅವನು ಮೋಕ್ಷವನ್ನು ಕರುಣಿಸುತ್ತಾನೆ. ಈ ಕಾರಣದಿಂದಲೂ ಸ್ವಕರ್ಮದಿಂದ ಅವನ ಆರಾಧನೆಯನ್ನು ನಡೆಸಬೇಕು. ಈ ವಿಶೇಷವನ್ನು ತಿಳಿಸುವುದಕ್ಕಾಗಿಯೂ 'ಅನಾಶಿನೋಽಪ್ರಮೇಯಸ್ಯ' ಎಂಬ ಪದಗಳಿವೆ. ।। 18 ।।

## ಜೀವನು ಸ್ವತಂತ್ರನಾಗಿ ಇನ್ನೊಬ್ಬನನ್ನು ಕೊಲ್ಲಲಾರ

**ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ।। 19 ।।**

**ಅರ್ಥ**- ಯಾರು ಇನ್ನೊಬ್ಬನನ್ನು ಕೊಲ್ಲಲು ತಾನೇ ಸ್ವತಂತ್ರನೆಂದೂ ಆತ್ಮಕ್ಕೆ ಸಾವಿದೆ ಎಂದೂ ಬಗೆದು ತಾನು ಕೊಲ್ಲುತ್ತೇನೆ, ಅವನು ಸಾಯುತ್ತಾನೆ ಎಂದು ತಿಳಿಯುವನೋ ಅಂತಹ ಇಬ್ಬರೂ, ಅಂದರೆ ತನಗೆ ಕೊಲ್ಲುವ ಸ್ವಾತಂತ್ರ್ಯವಿದೆ ಎಂದು ತಿಳಿಯುವವನೂ, ಜೀವನು ಸಾಯುತ್ತಾನೆ ಎಂದು ತಿಳಿಯುವವನೂ, ಭ್ರಾಂತರು . ಏಕೆಂದರೆ ಇವನು ಸ್ವತಂತ್ರವಾಗಿ ಕೊಲ್ಲುವವನೂ ಅಲ್ಲ; ಅವನು ಸ್ವರೂಪತಃ ಸಾಯುವವನೂ ಅಲ್ಲ.

**ನನು ಯದುಕ್ತಂ ಜೀವಚೈತನ್ಯಸ್ಯ ನಿತ್ಯತ್ವಂ, ಯಚ್ಚೋಕ್ತಂ ಸರ್ವಥೈಕ-ಪ್ರಕಾರೇಣಾವಿನಾಶಿತ್ವಾತ್ ಈಶ್ವರಃ ಸ್ವತಂತ್ರಃ, ಅನಿಚ್ಛಯಾ ದೇಹನಾಶಾತ್, ತನ್ನಿಮಿತ್ತದುಃಖವತ್ವಾಚ್ಚ ಜೀವಃ ಪರತಂತ್ರ ಇತಿ, ತಜ್ಜೀವ- ನಿತ್ಯತ್ವಪಾರತಂತ್ರ್ಯೇ ನ ಯುಕ್ತೇ । 'ಹಂತಾಽಯಮಸ್ಯ', 'ಹತಶ್ಚಾಯಮಿ'ತಿ ಹನನಾದಿಕ್ರಿಯಾಯಾಃ, ಜೀವೇ ತತ್ರ ಸ್ವಾತಂತ್ರ್ಯಸ್ಯ ಚ ಪ್ರತೀತೇರಿತ್ಯತ ಆಹ– ಯ ಇತಿ ।।**

**ಅನುವಾದ** - ಹಿಂದಿನ ಶ್ಲೋಕದಲ್ಲಿ ಜೀವಚೈತನ್ಯವು ನಿತ್ಯವೆನ್ನಲಾಗಿದೆ. ಅದರಂತೆ, ಸರ್ವಥಾ ನಾಶವಿಲ್ಲದ ಕಾರಣ ಪರಮಾತ್ಮನು ಸ್ವತಂತ್ರ, ತನ್ನ ಇಚ್ಛೆಗೆ ವಿರುದ್ಧವಾಗಿ ದೇಹನಾಶವಾಗುವುದರಿಂದ ಹಾಗೂ ದುಃಖ ಬರುವುದರಿಂದಲೂ ಜೀವನು ಪರತಂತ್ರ ಎಂದು ಹೇಳಲಾಗಿದೆ. ಜೀವರ ಈ ನಿತ್ಯತ್ವ, ಪಾರತಂತ್ರ್ಯ ಎರಡೂ ಸರಿಯಲ್ಲ. 'ಇವನು ಕೊಲ್ಲುತ್ತಾನೆ ಅವನು ಸತ್ತ' ಎಂದು ನಮಗೆಲ್ಲರಿಗೂ ಅನುಭವವಿರುವ ಕಾರಣ ಜೀವರಿಗೆ ನಾಶವೂ ನಾಶಕ್ರಿಯೆಯಲ್ಲಿ ಸ್ವಾತಂತ್ರ್ಯವೂ ಇದೆ ಎಂದೇ ಹೇಳಬೇಕಾಗುತ್ತದೆ. ಆದ್ದರಿಂದ ನಿತ್ಯತ್ವ–ಪಾರತಂತ್ರ್ಯ ಎರಡೂ ಸರಿಯಲ್ಲ ಎನ್ನುವ ಆಕ್ಷೇಪಕ್ಕೆ ಉತ್ತರ **'ಯ ಏನಂ ವೇತ್ತಿ'** ಎಂಬ ಶ್ಲೋಕ.

**ಯಃ= ಪುಮಾನ್, ಏನಂ= ಜೀವಂ, ಹಂತಾರಂ= ಜೀವಾಂತರಸ್ಯ ಸ್ವಾತಂತ್ರ್ಯೇಣ ಘಾತಕಂ ವೇತ್ತಿ, ಯಶ್ಚ ಏನಂ, ಕೇನಚಿತ್ಸ್ವಾತಂತ್ರ್ಯೇಣ ಹತಂ ಮನ್ಯತೇ, ತಾವುಭೌ= ಜೀವಸ್ಯಾನಿತ್ಯತ್ವಜ್ಞಾನೀ, ಹನನಾದಿಕ್ರಿಯಾಯಾಂ ಜೀವಸ್ವಾತಂತ್ರ್ಯಜ್ಞಾನೀ ಚೇತ್ಯುಭೌ ನ ವಿಜಾನೀತಃ । ಜೀವನಿತ್ಯತ್ವಭಗವತ್ ಸ್ವಾತಂತ್ರ್ಯಾಜ್ಞಾನಿನೌ ಭ್ರಾಂತಾವಿತಿ ಯಾವತ್ ।**

**ಅನುವಾದ - ಯಃ** = ಯಾರು, **ಏನಂ** = ಈ ಜೀವನನ್ನು, **ಹಂತಾರಂ** = ಯಾರ ಅಧೀನಕ್ಕೂ ಒಳಪಡದೆ ಮತ್ತೊಬ್ಬನನ್ನು ಕೊಲ್ಲುತ್ತಾನೆ ಎಂದು ತಿಳಿಯುತ್ತಾನೋ, ಅದರಂತೆ, ಯಾರು, ಈ ಜೀವನನ್ನು ಮತ್ತೊಬ್ಬರಿಂದ ಸ್ವತಂತ್ರವಾಗಿ ಸಾಯಿಸಲ್ಪಟ್ಟವನನ್ನಾಗಿ ತಿಳಿಯುವನೋ, **ತಾವುಭೌ**= ಜೀವನಿಗೆ ವಿನಾಶವನ್ನು ತಿಳಿಯುವ ಮತ್ತು ನಾಶಕ್ರಿಯೆಯಲ್ಲಿ ಜೀವನಿಗೆ ಅಪರಾಧೀನತೆಯನ್ನು ತಿಳಿಯುವ ಈ ಇಬ್ಬರೂ ಸರಿಯಾದ ತಿಳುವಳಿಕೆವುಳ್ಳವರಲ್ಲ. ಜೀವನಿಗೆ ನಿತ್ಯತ್ವವನ್ನೂ ಭಗವಂತನಿಗೆ ಸ್ವಾತಂತ್ರ್ಯವನ್ನೂ ತಿಳಿಯದವರು ಭ್ರಾಂತರು, ಎಂದು ಒಟ್ಟು ತಾತ್ಪರ್ಯ.

**ಕುತೋ ಬಾಧಕಾದ್ ಭ್ರಾಂತಿತ್ವಕಲ್ಪನೇತ್ಯತ ಆಹ– ನಾಯಮಿತಿ ॥ ಬಿಂಬನಿತ್ಯ-ತ್ವೋಪಾಧಿನಿತ್ಯತ್ವ[1]ಬಿಂಬೋಪಾಧಿಸನ್ನಿಧಿನಿತ್ಯತ್ವಾನಾದಿತ್ವರೂಪೋಕ್ತಹೇತುಭ್ಯೋ ನಾಯಂ ಹಂತಿ ಜೀವಮ್ । ನ ಹನ್ಯತೇ ಚ ಜೀವಃ । ಪ್ರತಿಬಿಂಬತ್ವಾದೇವ ಹೇತೋರ್ನ ಸ್ವತಂತ್ರಃ ಸನ್ ಕಶ್ಚನ ಹಂತೀತ್ಯರ್ಥಃ । ಅತೋ ಬಾಧಕಾದ್ ಭ್ರಾಂತಿತ್ವಮಿತಿ ಭಾವಃ ।**

**ಅನುವಾದ** - ಯಾವ ಕಾರಣದಿಂದಾಗಿ ಅಂತಹವರು ಭ್ರಾಂತರು ? ಅದಕ್ಕುತ್ತರ **'ನಾಯಂ ಹಂತಿ'** ಎಂಬ ಉತ್ತರಾರ್ಧ.

ಬಿಂಬವೂ ನಿತ್ಯ, ಉಪಾಧಿಯೂ ನಿತ್ಯ, ಅವೆರಡರ ಸಾನ್ನಿಧ್ಯವೂ ಸದಾಕಾಲ ಇದೆ. ಈ ಕಾರಣಗಳಿಂದ ಯಾವನೂ ಜೀವನನ್ನು ಕೊಲ್ಲಲಾರ, ಜೀವನು ಸಾಯಲೂ ಆರ. ಜೀವನು ಪ್ರತಿಬಿಂಬನಾದುದರಿಂದಲೇ ಬಿಂಬನಾದ ಪರಮಾತ್ಮನ ಪ್ರೇರಣೆ ಇಲ್ಲದೆ ತಾನೇ ತಾನಾಗಿ ಕೊಲ್ಲಲೂ ಸಾಧ್ಯವಿಲ್ಲ. ಹೀಗೆ ಅನಿತ್ಯತೆಗೆ , ಸ್ವಾತಂತ್ರ್ಯಕ್ಕೆ ಬಾಧಕವಿರುವುದರಿಂದ ಹಾಗೆ ತಿಳಿಯುವವರಿಬ್ಬರೂ ಭ್ರಾಂತರೆನ್ನ ಬೇಕಾಗುತ್ತದೆ.

---

1. ಬಿಂಬಸನ್ನಿಧಿ

**ಅತ್ರ ಹನನಕ್ರಿಯಾ ಜೀವಕ್ರಿಯಾಂತರೋಪಲಕ್ಷಣಮ್ । ಸರ್ವತ್ರ ತಸ್ಯಾ-ಸ್ವಾತಂತ್ರ್ಯಾದಿತಿ । ಏನಮೀಶ್ವರಂ ಜೀವಚೇತನಸ್ಯ ಹಂತಾರಂ ಯೋ ಮನ್ಯತೇ ಸೋಽಪಿ ಭ್ರಾಂತ ಏವ । ಚೇತನಹನನಸ್ಯೇಶ್ವರೇಣಾಕರಣಾದಿತ್ಯಪಿ ಯೋಜನಾ ತಾತ್ಪರ್ಯೋಕ್ತಾ ॥ 19 ॥**

**ಅನುವಾದ** – ಈ ಶ್ಲೋಕದಲ್ಲಿ ಕೊಲ್ಲುವ ಕ್ರಿಯೆಯನ್ನು ಮಾತ್ರ ಹೇಳಲಾಗಿದೆ. ಇದರಂತೆ ಎಲ್ಲ ಕ್ರಿಯೆಗಳನ್ನೂ ತಿಳಿಯಬೇಕು. ಏಕೆಂದರೆ, ಎಲ್ಲ ಕ್ರಿಯೆಗಳಲ್ಲೂ ಜೀವರು ಅಸ್ವತಂತ್ರರು.

ಇನ್ನೊಂದು ಅರ್ಥವನ್ನು ಆಚಾರ್ಯರು ತಾತ್ಪರ್ಯದಲ್ಲಿ ಹೇಳಿರುತ್ತಾರೆ – ಏನಂ= ಪರಮಾತ್ಮನನ್ನು , ಜೀವ ಚೇತನನ ಸಂಹಾರಕಾರಕ ಎಂದು ಯಾರು ತಿಳಿಯುವರೋ ಅವರೂ ಭ್ರಾಂತರೇ. ಏಕೆಂದರೆ ಚೇತನರ ನಾಶವನ್ನು ಪರಮಾತ್ಮನೂ ಮಾಡುವುದಿಲ್ಲ.

### ಜೀವಸ್ವರೂಪಕ್ಕೆ ಹುಟ್ಟು – ಸಾವುಗಳಿಲ್ಲ

**ನ ಜಾಯತೇ ಮ್ರಿಯತೇ ವಾ ಕದಾಚಿ-**
**ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥ 20 ॥**

**ಅನುವಾದ** – ಈ ಜೀವನು ಸ್ವರೂಪತಃ ಹುಟ್ಟುವುದಿಲ್ಲ, ಸಾಯುವುದೂ ಇಲ್ಲ, ಆದರೂ ಪರಮಾತ್ಮನ ಜ್ಞಾನದಂತೆ ಯಾವ ವ್ಯತ್ಯಾಸವೂ ಇಲ್ಲದೆ ಅಚಿಂತ್ಯಶಕ್ತಿಯಿಂದ ಅವನು ಹುಟ್ಟುವವನು ಅಲ್ಲ. ಒಂದು ದೇಹವನ್ನು ತೊರೆದು ಮತ್ತೊಂದು ದೇಹವನ್ನು ಹೊಂದುವ ಕಾರಣದಿಂದ, ಒಂದು ವಿಧವಾದ ಹುಟ್ಟು ಸಾವುಗಳೂ ಅವನಿಗಿವೆ (ಪುರಾಣಃ). ಅವನು ಹುಟ್ಟಿಲ್ಲದ, ಸಾವೂ ಇಲ್ಲದ, ಎಂದೂ ಯಾವ ವ್ಯತ್ಯಾಸವೂ ಇಲ್ಲದ ಪರಮಾತ್ಮನ ಪ್ರತಿಬಿಂಬನಾಗಿದ್ದಾನೆ. ಈ ದೇಹವು ನಾಶವಾದರೂ ಅವನಿಗೆ ಮಾತ್ರ ನಾಶವಿಲ್ಲ.

ಅಥವಾ, ಈ ಪರಮಪುರುಷನಾದ ಪರಮಾತ್ಮನು ದೇಹದಿಂದಲೂ ಹುಟ್ಟುವುದಿಲ್ಲ; ಸಾಯುವುದೂ ಇಲ್ಲ. ಅವನ ರಾಮಕೃಷ್ಣಾದಿರೂಪಗಳು ಮೊದಲೇ ಇದ್ದು ಕಾಲಕಾಲಗಳಲ್ಲಿ ಆ ರೂಪಗಳಿಂದ ಅವನು ಕಾಣಿಸಿಕೊಳ್ಳುತ್ತಾನೆ. ಅವನಿಗೆ ಜೀವನಂತೆ ದೇಹ ಪ್ರಾಪ್ತಿ, ದೇಹವಿಯೋಗಗಳು ಇಲ್ಲ.

ಜೀವನಿಗೂ ಪರಮಾತ್ಮನಂತೆ ಹುಟ್ಟು ಸಾವುಗಳಿಲ್ಲ. ಆದರೂ ಅವನ ಇಚ್ಛೆಗೆ ವಿರುದ್ಧವಾಗಿ ದೇಹಗಳು ಬಂದು ಹೋಗುವುದರಿಂದ ಅವನು ಸದಾ ಪರತಂತ್ರ. ಆದರೂ

ದೇಹನಾಶವಾದಾಗ ಜೀವನಿಗೆ ನಾಶವಿಲ್ಲ. ಇದು ಭಗವದ್ಗೀತೆ ಉದಾಹರಿಸಿರುವ ಕಾಠಕೋಪನಿಷತ್ತಿನ ಮಂತ್ರ.

**ಯದುಕ್ತಂ ಜೀವೇಶ್ವರಯೋಃ ಉತ್ಪತ್ತಿನಾಶರಾಹಿತ್ಯಮ್, ಈಶ್ವರಸ್ಯ ದೇಹತೋಽಪಿ ಉತ್ಪತ್ತ್ಯಭಾವೇನ ಸ್ವಾತಂತ್ರ್ಯಂ, ಜೀವಸ್ಯ ಸ್ವರೂಪತೋ ಜನ್ಮಾದಿ-ಶೂನ್ಯಸ್ಯಾಪಿ ದೇಹೋತ್ಪತ್ತ್ಯಾದಿನಾಽಸ್ವಾತಂತ್ರ್ಯಂ, ತೇಷ್ವರ್ಥೇಷು ಪ್ರಮಾಣತ್ವೇನ ಮಂತ್ರವರ್ಣಮುದಾಹರತಿ – ನ ಜಾಯತ ಇತಿ ॥**

**ಅನುವಾದ** – ಹಿಂದಿನ ಶ್ಲೋಕಗಳಲ್ಲಿ – ಜೀವ ಮತ್ತು ಪರಮಾತ್ಮರಿಗೆ ಹುಟ್ಟು ಸಾವುಗಳಿಲ್ಲ. ಅವರಿಬ್ಬರಲ್ಲಿ ಪರಮಾತ್ಮನಿಗೆ ಹೊಸ ಹೊಸ ದೇಹಗಳ ಸಂಬಂಧ ಬರುವುದಿಲ್ಲವಾದುದರಿಂದ ದೇಹತಃ ಉತ್ಪತ್ತಿಯೂ ಅವನಿಗಿಲ್ಲ. ಆದರಿಂದಾಗಿಯೇ ಅವನು ಸ್ವತಂತ್ರ. ಆದರೆ, ಜೀವನಿಗೆ ಸ್ವರೂಪತಃ ಉತ್ಪತ್ತಿನಾಶ ಇಲ್ಲವಾದರೂ ಅವನ ಇಚ್ಛೆಗೆ ವಿರುದ್ಧವಾಗಿ ಒಂದು ದೇಹ ನಾಶವಾಗಿ ಮತ್ತೊಂದು ದೇಹವು ಬರುವುದರಿಂದ ಅವನು ಅಸ್ವತಂತ್ರ – ಈ ವಿಷಯಗಳನ್ನು ಹೇಳಲಾಯಿತು. ಈ ಬಗ್ಗೆ ಆಧಾರವಾಗಿ ಭಗವದ್ಗೀತೆಯಲ್ಲಿ ಕಾಠಕ ಉಪನಿಷತ್ತಿನ ಮಂತ್ರವನ್ನು 'ನ ಜಾಯತೇ' ಎಂದು ಉಲ್ಲೇಖಿಸಲಾಗಿದೆ.

**ತಥಾ ಹಿ, ಜೀವವಿಷಯೇ ತಾವದಿಯಂ ಯೋಜನಾ । ಅಯಂ =ಜೀವಃ ಸ್ವರೂಪೇಣ ನ ಜಾಯತೇ ನ ಮ್ರಿಯತೇ = ನ ನಶ್ಯತಿ ಚ । ವಾ ಶಬ್ದಶ್ಚ-ಶಬ್ದಾರ್ಥಃ । ಅಗ್ರೇತನನಞೋಽತ್ರಾನುಕರ್ಷಃ ।**

**ಜೀವೋ ನ ಜಾಯತೇ ಚೇತ್ತರ್ಹಿ ಯಥೇಶ್ವರಜ್ಞಾನಂ ವೃದ್ಧಿಹ್ರಾಸ-ವಿವರ್ಜಿತಂ ಭೂತ್ವೈವ ಕದಾಚಿದಚಿಂತ್ಯಶಕ್ತ್ಯಾ ಭೂತಮಿವ ವ್ಯವಹಾರಾವ-ಲಂಬನಂ ಭವತಿ, 'ತದೈಕ್ಷತ' (ಛಾಂ. 6-2-3) ಇತ್ಯಾದಿಶ್ರುತೇಃ, ತಥಾ ಜೀವೇಽಪಿ ಕಿಂ ಜನನವ್ಯವಹಾರಸ್ತನ್ನಿಮಿತ್ತ ಇತ್ಯತೋ ನೇತ್ಯುಚ್ಯತೇ । ಅಯಂ ಜೀವಃ ಸ್ವರೂಪೇಣ ಭೂತ್ವಾ ಕಯಾಚಿದ್ವಿವಕ್ಷಯಾ ಈಶ್ವರಜ್ಞಾನವದ್ಭವಿತಾ ನ ಭವತಿ ।**

**ಅನುವಾದ** – ಈ ಶ್ಲೋಕವನ್ನು ಜೀವನಿಗೂ ಪರಮಾತ್ಮನಿಗೂ ಅನ್ವಯಿಸಬಹುದು. ಜೀವನಿಗೆ ಅನ್ವಯಿಸುವ ಕ್ರಮ ಹೀಗೆ – **ಅಯಂ** = ಈ ಜೀವನು, ಸ್ವರೂಪತಃ ಹುಟ್ಟುವುದಿಲ್ಲ, ನ ಮ್ರಿಯತೇ= ಸಾಯುವುದೂ ಇಲ್ಲ.

ಶ್ಲೋಕದಲ್ಲಿರುವ 'ವಾ' ಎಂಬ ಶಬ್ದಕ್ಕೆ 'ಚ' ಶಬ್ದದ 'ಸಮುಚ್ಚಯಾರ್ಥ'ವನ್ನು ಮಾಡಬೇಕು. '**ನಾಯಂ**' ಎಂಬಲ್ಲಿರುವ **ನ** ಶಬ್ದವನ್ನು **ಮ್ರಿಯತೇ** ಎಂಬ ಹಿಂದಿನ ಶಬ್ದದೊಂದಿಗೆ ಅನ್ವಯಿಸಿ ಕೊಳ್ಳಬೇಕು..

ಜೀವನು ಹುಟ್ಟುವುದಿಲ್ಲ, ಸಾಯುವುದೂ ಇಲ್ಲವೆಂದಾದಲ್ಲಿ 'ಅವನು ಹುಟ್ಟುತ್ತಾನೆ, ಸಾಯುತ್ತಾನೆ' ಎಂಬ ವ್ಯವಹಾರಗಳು ಹೇಗೆ ? ಪರಮಾತ್ಮನ ಜ್ಞಾನದಂತೆಯೋ ? ಪರಮಾತ್ಮನ ಜ್ಞಾನಕ್ಕೆ ಉತ್ಪತ್ತಿನಾಶಗಳು ಇಲ್ಲ. ಆದರೂ '**ತದೈಕ್ಷತ**' 'ಅವನಿಗೆ ಜ್ಞಾನ ಬಂತು' ಎಂದು ಉಪನಿಷತ್ತು ಹೇಳುತ್ತದೆ. ಪರಮಾತ್ಮನ ಅಚಿಂತ್ಯ ಶಕ್ತಿಯಿಂದಾಗಿ 'ಜ್ಞಾನಹುಟ್ಟಿತು' ಎಂಬ ವ್ಯವಹಾರವನ್ನೂ ಮಾಡಲಾಗುತ್ತದೆ. ಹಾಗೆ ಜೀವನಿಗೂ ಅಚಿಂತ್ಯಶಕ್ತಿ ಏನಾದರೂ ಇದೆಯೇ ? ಈ ಜಿಜ್ಞಾಸೆಗೆ – '**ಭೂತ್ವಾ ಭವಿತಾ ನ ಭೂಯಃ**' ಎಂದು ಸಮಾಧಾನ. ಈ ಜೀವನು ಎಲ್ಲಾ ವಿಧದಿಂದಲೂ ಮೊದಲು ಇದ್ದು ಯಾವುದೋ ಸಾಮರ್ಥ್ಯ– ವಿಶೇಷದಿಂದಾಗಿ, ಈಶ್ವರನ ಜ್ಞಾನದಂತೆ, 'ಹುಟ್ಟುವನು' ಎಂಬ ವ್ಯವಹಾರಕ್ಕೆ ಆಸ್ಪದನಾಗುವವನಲ್ಲ. (ಅವನಿಗೆ ಮೊದಲು ಇಲ್ಲದ ಹೊಸ ಹೊಸ ದೇಹಗಳ ಸಂಬಂಧವೇ ಹುಟ್ಟು).

**ಕುತೋ 'ನ ಜಾಯತೇ ನ ಮ್ರಿಯತೇ ವೇತಿ ಸ್ವರೂಪೋತ್ಪತ್ತಿವಿನಾಶಾಭಾವೋ ಜೀವಸ್ಯೇ'ತ್ಯತ ಉಕ್ತಮ್– ಅಜೋ ನಿತ್ಯಃ ಶಾಶ್ವತ ಇತಿ ॥ ಸ್ವರೂಪೋತ್ಪತ್ತಿ-ವಿನಾಶಶೂನ್ಯ ಸದೈಕರೂಪಭಗವತ್ ಸ್ವರೂಪತ್ವಾದಿತ್ಯರ್ಥಃ । ಅತದ್ಭಾವೇ ಸಾಮಾನಾಧಿಕರಣ್ಯಸ್ಯ ಸಾರೂಪ್ಯಗಮಕತ್ವಾತ್, ಅಜನಿತ್ಯಪದಾಭ್ಯಾಂ ಬಿಂಬೋತ್ಪತ್ತಿವಿನಾಶಾಭಾವಃ, ಶಾಶ್ವತಪದೇನ ಬಿಂಬೋಪಾಧಿಸನ್ನಿಧಿಜನ್ಮ-ನಾಶಾಭಾವಶ್ಚ ಹೇತುರುಕ್ತೋ ಭವತಿ ।**

**ಅನುವಾದ** – '**ನ ಜಾಯತೇ ನ ಮ್ರಿಯತೇ**' ಎಂದಂತೆ ಜೀವನ ಸ್ವರೂಪಕ್ಕೆ ಉತ್ಪತ್ತಿ ವಿನಾಶಗಳು ಇಲ್ಲದಿರಲು ಕಾರಣವೇನು ? ಅದಕ್ಕೆ ಉತ್ತರ – '**ಅಜೋ ನಿತ್ಯಃ ಶಾಶ್ವತಃ**' ಎಂದು. ಅದರ ಅರ್ಥ – ಸ್ವರೂಪತಃ ಉತ್ಪತ್ತಿ, ವಿನಾಶರಹಿತನಾಗಿ ಸದಾಕಾಲ ಒಂದೇ ರೀತಿಯಾಗಿರುವ ಪರಮಾತ್ಮನ ಪ್ರತಿಬಿಂಬನಾಗಿದ್ದಾನೆ ಜೀವ – ಎಂದು.

ಇಲ್ಲಿ '**ಅಜ**' ಎಂದರೆ ಜನಿ ಇಲ್ಲದ ಪರಮಾತ್ಮನ ಸದೃಶ ಎಂದು ಅರ್ಥ. ಎರಡು ಶಬ್ದಗಳಿಗೆ ಸಮಾನ ವಿಭಕ್ತಿ ಇದ್ದಾಗ ಅಭೇದವಿರಬೇಕು. ಉದಾ:– '**ಸುಂದರಃ ರಾಮಃ**'. ಅಭೇದವು ಇಲ್ಲದಾದಾಗ ಸದೃಶ ಎಂದು ಅರ್ಥ ಮಾಡಬೇಕು. ಉದಾ – '**ಸಿಂಹೋ ದೇವದತ್ತಃ**' ಸಿಂಹನೆಂದರೆ ಸಿಂಹದಂತೆ ಎಂದರ್ಥ. ಪ್ರಕೃತದಲ್ಲೂ ಅಜಃ ಮುಂತಾದ ಪದಗಳಿಗೆ 'ಅಜನಾದ ಪರಮಾತ್ಮನಿಗೆ ಸದೃಶ' ಎಂದು ಮುಂತಾಗಿ ಅರ್ಥ.

ಇಲ್ಲಿ 'ಅಜ' ಪದದಿಂದ ಬಿಂಬನಾದ ಪರಮಾತ್ಮನಿಗೆ ಉತ್ಪತ್ತಿ ಇಲ್ಲವೆಂದೂ, ನಿತ್ಯ ಪದದಿಂದ ನಾಶವಿಲ್ಲವೆಂದೂ, ಶಾಶ್ವತಪದದಿಂದ ಯಾವ ಬದಲಾವಣೆಗಳೂ ಇಲ್ಲವೆಂದೂ ತಿಳಿಯುತ್ತದೆ. ಹೀಗೆ ಬಿಂಬಕ್ಕೆ ಉತ್ಪತ್ತಿ ಇಲ್ಲದ ಕಾರಣ ಬಿಂಬದ ಉತ್ಪತ್ತಿಯಿಂದಾಗಿ ಪ್ರತಿಬಿಂಬನಾದ ಜೀವನಿಗೆ ಉತ್ಪತ್ತಿ ಇಲ್ಲ ಎಂದು ತಿಳಿಯುತ್ತದೆ. ನಾಶರಹಿತ ಎಂದುದರಿಂದ ಬಿಂಬನಾಶ ಪ್ರಯುಕ್ತವಾಗಿ ನಾಶವಿಲ್ಲವೆಂದೂ ಶಾಶ್ವತ ಎಂದುದರಿಂದ ಸನ್ನಿಧಿನಾಶಪ್ರಯುಕ್ತವಾಗಿ ನಾಶವಿಲ್ಲವೆಂದೂ ತಿಳಿಯುತ್ತದೆ.

**ಈಶ್ವರಜ್ಞಾನವದ್ಭೂತ್ವಾ ಭವಿತಾಽಪಿ ಚೇನ್ನ ಜೀವಃ, ತರ್ಹಿ ಕಿಂ ನಿಮಿತ್ತೋ ಜನನವ್ಯವಹಾರೋ ಜೀವೇ ಇತ್ಯತ ಉಕ್ತಮ್ – ಪುರಾಣ ಇತಿ ॥ ಪುರಾಣಿ = ದೇಹಾನ್, ಅಣತಿ = ಅಣ ಪಣ ಗತೌ, ಗಚ್ಛತಿ- ದೇಹಾದ್ದೇಹಾಂತರಂ ಪ್ರಾಪ್ನೋತೀತಿ ದೇಹಯೋಗನಿಮಿತ್ತ ಇತ್ಯರ್ಥಃ । ಏವಂ ತರ್ಹಿ ಉಪಾಧಿ- ಭೂತದೇಹನಾಶಾತ್ ನಾಶಃ ಸ್ಯಾದಿತ್ಯತ ಆಹ– ನ ಹನ್ಯತ ಇತಿ ॥ 'ಅಂತವಂತ ಇಮೇ ದೇಹಾ' ಇತ್ಯತ್ರೋಕ್ತದಿಶಾ ನಿತ್ಯೋಪಾಧೇರನ್ಯಸ್ಯ ಭಾವಾತ್, ಏತಚ್ಛರೀರನಾಶೇಽಪಿ ನ ಜೀವನಾಶ ಇತಿ ಭಾವಃ ।**

**ಅನುವಾದ** – ಜೀವನಿಗೆ ಈಶ್ವರನ ಜ್ಞಾನದಂತೆ ಅಚಿಂತ್ಯಶಕ್ತಿಯಿಂದಾಗಿ ಭೂತ್ವಾ ಭವನ ಇಲ್ಲವೆಂದಾದರೆ 'ಅವನು ಹುಟ್ಟುತ್ತಾನೆ' ಎನ್ನುವ ವ್ಯವಹಾರ ಹೇಗೆ ? ಅದಕ್ಕೆ ಉತ್ತರ– '**ಪುರಾಣಃ**' ಎಂದು . **ಪುರಾಣಿ** = ಅನೇಕ ದೇಹಗಳನ್ನು ಕುರಿತು , **ಅಣತಿ** = ಹೋಗುತ್ತಾನೆ, ಹೀಗೆ ಜೀವ '**ಪುರಾಣ**' ಎನಿಸಿದ್ದಾನೆ. '**ಗತಿ**' (ಗಮನ) ಎಂಬ ಅರ್ಥದ ಅಣಧಾತುವಿನಿಂದ '**ಅಣಃ**' ಎಂಬ ಶಬ್ದವಾಗಿದೆ. ಜೀವನಿಗೆ ಹೊಸ ಹೊಸದೇಹಗಳ ಪ್ರಾಪ್ತಿಯಿಂದಾಗಿ 'ಹುಟ್ಟುತ್ತಾನೆ' ಎಂಬ ವ್ಯವಹಾರ ಬರುತ್ತದೆ, ಎಂದು ಒಟ್ಟು ಭಾವಾರ್ಥ.

ಹಾಗಾದರೆ, ಪ್ರತಿಬಿಂಬಕ್ಕೆ ಕಾರಣವಾದ ಈ ದೇಹವೆಂಬ ಉಪಾಧಿಯು ನಾಶವಾದಾಗ ಜೀವನೂ ನಾಶವಾಗುತ್ತಾನೆಯೇ ? ಇಲ್ಲ– '**ನ ಹನ್ಯತೇ ಹನ್ಯಮಾನೇ ಶರೀರೇ**'. '**ಅಂತವಂತ ಇಮೇ ದೇಹಾಃ**' ಎಂದು ಹಿಂದೆ ಹೇಳಿದಂತೆ ನಾಶವಾಗುವ ಈ ದೇಹವು ಉಪಾಧಿಯಲ್ಲ. ಸ್ವರೂಪದೇಹವೇ ಉಪಾಧಿ. ಅದಕ್ಕೆ ನಾಶವಿಲ್ಲ. ಆದ್ದರಿಂದ ಈ ದೇಹವು ನಾಶವಾದರೂ ಜೀವನು ನಾಶವಾಗುವುದಿಲ್ಲ.

**'ಈಶ್ವರವಿಷಯೇ' ತು, ಪೂರ್ವೋತ್ತರಾರ್ಧೇ ಈಶ್ವರಜೀವಸ್ವರೂಪ- ವಿಷಯಭೇದೇನ ಯೋಜ್ಯೇ । ತಥಾ ಹಿ, ವಾಶಬ್ದಾದೇವ ಪೂರ್ವನಞೋ ಮ್ರಿಯತೇ ವೇತ್ಯತ್ರಾನುಕರ್ಷಸ್ಯ ಸಿದ್ಧೇಃ ನಞಂತರವೈಯರ್ಥ್ಯಾತ್, ನಾಯಂ**

**ಭೂತ್ವೇತ್ಯತ್ರ ಶ್ರುತೋ ನಶಬ್ದೋ ನ ನಞ್, ಕಿಂತು ನೃಶಬ್ದಃ । ತಥಾಚಾಯಂ ನಾ= ಪರಮಪುರುಷಃ ನ ಜಾಯತೇ ನ ವಾ ಮ್ರಿಯತೇ, ದೇಹಯೋಗವಿಯೋಗ-ವಾನ್ನ ಭವತಿ, ನಿತ್ಯದೇಹ ಏವೇತ್ಯರ್ಥಃ । ಅತ ಏವ ಸ್ವರೂಪಾನಾಶಃ ಕೈಮುತ್ಯ-ಸಿದ್ಧಃ । ದೇಹೋತ್ಪತ್ತಿವಿನಾಶಯೋರಪಿ ಅಭಾವೇನ ಸ್ವಾತಂತ್ರ್ಯಮಪಿ ಸಿದ್ಧಮೇವೇತಿ ಭಾವಃ । ಏವಂ ಚೇತ್ಕಥಂ ತರ್ಹಿ ರಾಮಕೃಷ್ಣಾದಿರೂಪೇಣ ಜನನವ್ಯವಹಾರ ಇತ್ಯತಃ, ಭೂತ್ವಾ = ರಾಮಕೃಷ್ಣಾದಿರೂಪೇಣ ಸರ್ವದಾ ಭೂತ್ವೈವ, ಕದಾಚಿತ್ ಜನದೃಗ್ವಿಷಯತ್ವಾದಿರೂಪೇಣ ಭೂಯಃ= ಪುನಃ ಭವಿತಾ । ನ ತು ದೇಹ-ಯೋಗೇನಾಪಿ ಭವಿತಾ ।**

**'ಕಿಂತು ನಿರ್ದೋಷಚೈತನ್ಯಸುಖಾಂ ನಿತ್ಯಾಂ ಸ್ವಕಾಂ ತನುಮ್ ।**
**ಪ್ರದರ್ಶಯತಿ ಲೋಕಸ್ಯ ಜನಿರಿತ್ಯುಚ್ಯತೇ ಹರೇಃ ॥'**

**ಇತಿ ತತ್ತ್ವನಿರ್ಣಯೋಕ್ತೇಃ ।**

**ಅನುವಾದ** – ಈ ಶ್ಲೋಕವನ್ನು ಪರಮಾತ್ಮನಿಗೆ ಅನ್ವಯಿಸಿದಾಗ ಶ್ಲೋಕದ ಪೂರ್ವಾರ್ಧವು ಪರಮಾತ್ಮನ ಬಗ್ಗೆಯೂ ಉತ್ತರಾರ್ಧವು ಜೀವನ ಕುರಿತೂ ಹೇಳುತ್ತದೆ.

ಶ್ಲೋಕದಲ್ಲಿ ಸಮುಚ್ಚಯಾರ್ಥದ ವಾಶಬ್ದದಿಂದಾಗಿಯೇ '**ಮ್ರಿಯತೇ**' ಎಂಬಲ್ಲೂ '**ನ ಜಾಯತೇ**'ಎಂಬಲ್ಲಿರುವ ನಿಷೇಧವಾಚಕ ಶಬ್ದವನ್ನು ಅನ್ವಯಿಸಿಕೊಳ್ಳಬೇಕು ಎಂದು ತಿಳಿಯುತ್ತದೆ. ಹೀಗಾಗಿ '**ನ + ಅಯಂ**' ಎಂಬಲ್ಲಿ ಇನ್ನೊಂದು ನಿಷೇಧಾರ್ಥದ ಪದದ ಅಗತ್ಯವಿಲ್ಲ. ಆದಕ್ಕಾಗಿ ಅಲ್ಲಿ '**ನಾ + ಅಯಂ**' ಎಂದು ಪದವಿಭಾಗ ಮಾಡಬೇಕು. ಇದು '**ನೃ**' ಶಬ್ದದ ಪ್ರಥಮಾವಿಭಕ್ತ್ಯಂತರೂಪ. **ಅಯಂ ನಾ** ಎಂದರೆ ಈ ಪರಮಪುರುಷನಾದ ಪರಮಾತ್ಮನು, ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಅಂದರೆ ಜೀವನಂತೆ ಅವನಿಗೆ ದೇಹ ಪ್ರಾಪ್ತಿ, ನಾಶಗಳು ಇಲ್ಲ. ಅವನಂತೆ ಅವನ ದೇಹವೂ ನಿತ್ಯ. ದೇಹವೇ ನಿತ್ಯವೆಂದಾದ ಮೇಲೆ ಅವನ ಸ್ವರೂಪಕ್ಕೆ ನಾಶವಿಲ್ಲಎಂದು ಹೇಳಬೇಕಾಗಿಲ್ಲ. ದೇಹಪ್ರಾಪ್ತಿ– ನಾಶಗಳು ಇಲ್ಲವಾದುದರಿಂದಲೇ ಅವನು ಸ್ವತಂತ್ರನೆಂದೂ ತಿಳಿಯುತ್ತದೆ. (ಅವನ ಇಚ್ಛೆಯಂತೆ ಅವನ ದೇಹವಿದೆ. ಜೀವನಿಗಿರುವಂತೆ ಅವನ ಇಚ್ಛೆಗೆ ಮೀರಿ ದೇಹ ನಾಶವಾಗುವುದಿಲ್ಲ).

ಹಾಗಾದರೆ ರಾಮ– ಕೃಷ್ಣಾದಿರೂಪಗಳಿಂದ ಹುಟ್ಟುತ್ತಾನೆ, ಎನ್ನುವುದು ಹೇಗೆ ? ಅದಕ್ಕೇನು ನಿಮಿತ್ತ ? ಅದಕ್ಕುತ್ತರ '**ಭೂತ್ವಾ ಭವಿತಾ**'. **ಭೂತ್ವಾ** = ರಾಮ ಕೃಷ್ಣಾದಿರೂಪಗಳಿಂದ ಪರಮಾತ್ಮನು ಮೊದಲೇ ಇದ್ದರೂ, ಜನರ ಕಣ್ಣಿಗೆ ಕಾಣಿಸಿಕೊಳ್ಳುವ ಕಾರಣದಿಂದಾಗಿ, **ಭವಿತಾ** =

ಹುಟ್ಟಿದ, ಎನಿಸಿಕೊಳ್ಳುತ್ತಾನೆ. ಹೊರತು, ಇಲ್ಲದ ದೇಹ ಬರುವ ಕಾರಣದಿಂದಲ್ಲ. 'ತತ್ತ್ವ ನಿರ್ಣಯ' ಗ್ರಂಥದಲ್ಲಿ ಇದನ್ನೇ ಹೇಳಲಾಗಿದೆ– 'ಶ್ರೀಹರಿಯು ದೋಷರಹಿತವಾದ, ಚೈತನ್ಯಾತ್ಮಕ ದೇಹವನ್ನು ಜನರ ಕಣ್ಣಿಗೆ ಬೀಳುವಂತೆ ಮಾಡುತ್ತಾನೆ. ಇದೇ ಅವನಿಗೆ ಹುಟ್ಟು'.

**ಅಯಂ ಜೀವೋಽಪ್ಯಜೋ ನಿತ್ಯಶ್ಚ । ಈಶ್ವರಸ್ಯೇವ ಜೀವಸ್ಯಾಪಿ ಅನಾದಿನಿತ್ಯತ್ವೇ ಸ್ವಾತಂತ್ರ್ಯಸ್ಯಾಪಿ ಪ್ರಾಪ್ತೇರೀಶ್ವರಾದವಿಶೇಷಃ ಸ್ಯಾದಿತ್ಯತ ಉಕ್ತಮ್ – ಶಾಶ್ವತ ಇತಿ ॥ ಸದೈಕರೂಪಃ, ಅನಾದ್ಯನಂತಕಾಲಮತ್ಯಕ್ತಪಾರತಂತ್ರ್ಯಾದಿಸ್ವಭಾವ ಇತ್ಯರ್ಥಃ । ಕುತ ಏತದಿತ್ಯತ ಉಕ್ತಮ್ – ಪುರಾಣ ಇತಿ ॥ ಅನಿಚ್ಛಯಾಽಪಿ ದೇಹಾದ್ದೇಹಾಂತರಪ್ರಾಪ್ತಿಮತ್ತ್ವಾದಿತಿ ಹೇತುಗರ್ಭವಿಶೇಷಣಮಿದಮ್ । ನ ಹಿ ತಾದೃಶಸ್ಯ ಸ್ವಾತಂತ್ರ್ಯಸಂಭಾವನಾಽಪೀತಿ ಭಾವಃ । ಏತಾವಾನ್ ಗುಣ ಇತ್ಯಾಹ – ನ ಹನ್ಯತೇ ಹನ್ಯಮಾನೇ ಶರೀರ ಇತಿ ॥ 20 ॥**

**ಅನುವಾದ**– ಪರಮಾತ್ಮನಂತೆ ಈ ಜೀವನೂ ಉತ್ಪತ್ತಿನಾಶಗಳು ಇಲ್ಲದವನು. ಪರಮಾತ್ಮನಂತೆ ಜೀವನೂ ನಿತ್ಯನಾದರೆ ಅವನಂತೆ ಇವನಿಗೂ ಸ್ವಾತಂತ್ರ್ಯವೂ ಬಂದೀತು, ಆಗ ಜೀವನಿಗೂ ಪರಮಾತ್ಮನಿಗೂ ವ್ಯತ್ಯಾಸವೇ ಇಲ್ಲವಾದೀತು. ಅದಕ್ಕಾಗಿ '**ಶಾಶ್ವತಃ**' ಎನ್ನಲಾಗಿದೆ. ಅನಾದಿ ಅನಂತಕಾಲದವರೆಗೆ ಜೀವನು ಒಂದೇ ವಿಧವಾಗಿ ಅಂದರೆ ಅಸ್ವತಂತ್ರನಾಗಿಯೇ ಇರುತ್ತಾನೆ, ಎಂದರ್ಥ. ಅದೇಕೆ ? ಅದಕ್ಕುತ್ತರ – '**ಪುರಾಣಃ**' ಅವನ ಇಚ್ಛೆಗೆ ವಿರುದ್ಧವಾಗಿ ಹಿಂದಿನ ದೇಹಗಳು ಹೋಗಿ ಬೇರೆ ಬೇರೆ ದೇಹಗಳು ಬರುತ್ತವೆ. ಆದ್ದರಿಂದ ಅವನು ಅಸ್ವತಂತ್ರ. ಹೀಗೆ 'ಪುರಾಣಃ' ಎಂಬುದನ್ನು ಹೇತ್ವರ್ಥವನ್ನು ಸೂಚಿಸುವ ವಿಶೇಷಣವನ್ನಾಗಿ ಪರಿಗಣಿಸಬೇಕು.

ಅಸ್ವತಂತ್ರನಾದರೂ ಜೀವನ ಹೆಗ್ಗಳಿಕೆ ಏನೆಂದರೆ – ಅವನ ದೇಹ ನಾಶವಾದರೂ ಅವನ ಸ್ವರೂಪಕ್ಕೆ ನಾಶವಿಲ್ಲ ॥ 20 ॥

**ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।**
**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್ ॥ 21 ॥**

**ಅರ್ಥ** - ಜೀವಾತ್ಮನಿಗೆ ಬಿಂಬನಾಶಾದಿ ನಿಮಿತ್ತಗಳಿಂದಾಗಿ ಅಥವಾ ಸ್ವಾಭಾವಿಕವಾಗಿ ನಾಶವಿಲ್ಲ. ಅವನಿಗೆ ಬರುವ ರಾಗ – ದ್ವೇಷಾದಿದೋಷಗಳೂ ಸ್ವಾಭಾವಿಕಗಳಲ್ಲ, ಅಭಿಮಾನ ನಿಮಿತ್ತವಾಗಿ. ಅವನಿಗೆ ಉತ್ಪತ್ತಿಯೂ ಇಲ್ಲ, ಯಾವ ವಿಕಾರಗಳೂ ಇಲ್ಲ. ಹೀಗೆ ಜೀವಾತ್ಮನನ್ನು ಯಾರು ತಿಳಿದಿರುತ್ತಾನೋ ಅಂತಹವನು ಒಬ್ಬರಿಂದ ಮತ್ತೊಬ್ಬರನ್ನು ಕೊಲ್ಲಿಸಲಾರ ಅಥವಾ ತಾನಾದರೂ ಯಾರನ್ನೂ ಕೊಲ್ಲಲಾರ.

ಅಥವಾ, ನೈಮಿತ್ತಿಕವಾಗಿಯೂ ಸ್ವಾಭಾವಿಕವಾಗಿಯೂ ನಾಶವಿಲ್ಲದ, ಉತ್ಪತ್ತಿಯೂ ಇಲ್ಲದ, ನಿರ್ವಿಕಾರನಾದ , ಆದ್ದರಿಂದಲೇ ಸ್ವತಂತ್ರನಾದ , ಪರಮ ಪುರುಷನನ್ನು ತಿಳಿದವನು, ತಾನೇ ಮತ್ತೊಬ್ಬರಿಂದ ಕೊಲ್ಲಿಸಿದೆ, ಎಂದಾಗಲೀ, ತಾನೇ ಸ್ವತಂತ್ರವಾಗಿ ಇನ್ನೊಬ್ಬರನ್ನು ಕೊಂದೆ, ಎಂದಾಗಲೀ, ಅಹಂಕಾರ ಪಡಲಾರನು. ಅವನು ತನ್ನಿಂದ ನಡೆಯುವ ಎಲ್ಲ ಕ್ರಿಯೆಗಳೂ ಭಗವಂತನಿಂದಲೇ ಆಗಿವೆ ಎಂದು ತಿಳಿಯುತ್ತಾನೆ.

**'ಯ ಏನಮ್' ಇತಿ ಶ್ಲೋಕೇ ಜೀವಚೈತನ್ಯಸ್ಯ ಹನನಂ ವಾ, ಹನನ-ಕ್ರಿಯಾಯಾಂ ಸ್ವಾತಂತ್ರ್ಯಂ ವಾ ಮನ್ಯಮಾನೋ ನ ಜಾನಾತೀತ್ಯತ್ರ ಜೀವಚಿತೋ ಬಿಂಬೋಪಾಧಿಸನ್ನಿಧ್ಯನಾಶಹೇತುಕನಿತ್ಯತ್ವಪ್ರತಿಬಿಂಬತ್ವಹೇತುಕಾ-ಸ್ವಾತಂತ್ರ್ಯರೂಪಹೇತೂ ಉಕ್ತೌ । ಯಸ್ತು, ಜೀವಚಿತೋ ನಿತ್ಯತ್ವಂ ಹರೇಃ ಸ್ವಾತಂತ್ರ್ಯಂ ಚ ಜಾನಾತಿ, ಸ ಜ್ಞಾನೀ । ಸ್ವಾತಂತ್ರ್ಯಾಭಿಮಾನಾಭಾವಾತ್ ಹಂತಾಽಹಮಿತಿ ವಾ ಅಸ್ಯಾಯಂ ಹಂತೇತಿ ವಾ ನ ಜಾನಾತೀತ್ಯಜ್ಞಾನೇಽಭಿ-ಮಾನಾಭಾವೋಽಪರೋ ಹೇತುರುಚ್ಯತೇ- ವೇದೇತಿ ॥**

'**ಯ ಏನಂ ವೇತ್ತಿ ಹಂತಾರಂ**' ಎಂಬ ಹತ್ತೊಂಭತ್ತನೆಯ ಶ್ಲೋಕದಲ್ಲಿ, ಜೀವ ಚೈತನ್ಯ ನಾಶವಾಗುತ್ತದೆ ಎಂದೂ ನಾಶಾದಿಕ್ರಿಯೆಗಳಲ್ಲಿ ಜೀವನು ಸ್ವತಂತ್ರ ಎಂದೂ ತಿಳಿಯುವುದು ಸರಿಯಲ್ಲ. ಏಕೆಂದರೆ, ಬಿಂಬನಾಶದಿಂದಾಗಲೀ, ಉಪಾಧಿನಾಶದಿಂದಾಗಲೀ ಅಥವಾ ಅವೆರಡರ ಸಾನ್ನಿಧ್ಯನಾಶದಿಂದಾಗಲೀ ಜೀವನಿಗೆ ನಾಶವಿಲ್ಲ, ಜೀವ ನಿತ್ಯ. ಅದರಂತೆ ಪ್ರತಿಬಿಂಬನಾದು-ದರಿಂದ ಅವನು ಬಿಂಬನಾದ ಪರಮಾತ್ಮನ ಅಧೀನ, ಅಸ್ವತಂತ್ರ, ಎಂದು ಹೇಳಲಾಯಿತು . (ಇದರಿಂದಾಗಿ ಜೀವನು ನಿತ್ಯ ಎನ್ನಲು ಬಿಂಬೋಪಾಧಿ ಸನ್ನಿಧಿಗಳ ನಾಶವಿಲ್ಲ ಎಂಬ ಕಾರಣವನ್ನೂ ಜೀವನು ಅಸ್ವತಂತ್ರ ಎನ್ನಲು ಅವನು ಪರಮಾತ್ಮನ ಪ್ರತಿಬಿಂಬ ಎಂಬ ಕಾರಣವನ್ನೂ ಕೊಟ್ಟಂತಾಯಿತು.) ಜೀವನು ನಿತ್ಯನೆಂದೂ ಶ್ರೀಹರಿಯು ಸ್ವತಂತ್ರನೆಂದೂ ತಿಳಿಯುವ ಜ್ಞಾನಿ . ತಾನು ಸ್ವತಂತ್ರ ಎಂಬ ಭ್ರಮೆ ಇರುವುದಿಲ್ಲ, ಅದರಿಂದ 'ನಾನೇ ಕೊಲ್ಲುತ್ತೇನೆ ' ಎಂದಾಗಲಿ 'ಇವನು ಅವನನ್ನು ಕೊಲ್ಲುತ್ತಾನೆ ' ಎಂದಾಗಲಿ ಭ್ರಮೆ ಇಲ್ಲದಿರುವುದಕ್ಕೆ ಸ್ವಾತಂತ್ರ್ಯಾಭಿಮಾನ ಇಲ್ಲದಿರುವುದು ಮತ್ತೊಂದು ಕಾರಣವಾಗಿದೆ, ಎಂದು '**ವೇದಾವಿನಾಶಿನಂ**'ಎಂಬ ಈ ಶ್ಲೋಕದಲ್ಲಿ ಹೇಳಲಾಗಿದೆ.

**ಅವಿನಾಶಿನಂ = ಬಿಂಬನಾಶಾದಿನಿಮಿತ್ತಕನಾಶಹೀನಮ್ । ಮಾತ್ರಾಸ್ಪರ್ಶಾ ಇತ್ಯತ್ರೋಕ್ತದಿಶಾಽಭಿಮಾನಕೃತಾ ಏವ ರಾಗದ್ವೇಷಸುಖಾದಿದೋಷಾಃ, ನ ತು ಸ್ವತ ಇತಿ ಸ್ವತೋ ದೋಷಹೀನಮಿತಿ ವಾ । ದುಷ್ಟೇಷು ನಷ್ಟಶಬ್ದ-**

**ಪ್ರಯೋಗಾನ್ನಾಶೋऽತ್ರ ದೋಷೋ ಧ್ಯೇಯಃ । ನಿತ್ಯಂ= ಸ್ವಾಭಾವಿಕನಾಶ-ಹೀನಮ್ । ಅಜಂ= ಉತ್ಪತ್ತಿಹೀನಮ್ । ಅವ್ಯಯಂ= ಸ್ವರೂಪವಿಕಾರ-ಶೂನ್ಯಮ್ । ಏನಂ= ಜೀವಮ್ ।**

**ಯದ್ವಾ ಅವಿನಾಶಿನಂ [1]ನಿತ್ಯಂ = ಸ್ವರೂಪತೋ ನಾಶಹೀನಮ್ । ಅಜಂ = ಜನ್ಮಹೀನಮ್ । ಅವ್ಯಯಂ = ನಿರ್ವಿಕಾರಮ್ । ಅತ ಏವ ಸರ್ವಸ್ವತಂತ್ರಮ್ ಏನಂ = ಈಶ್ವರಂ ಯೋ ವೇದ = ಜಾನಾತಿ, ಸ ಪುರುಷೋ= ಜ್ಞಾನೀ, ಕಥಂ = ಕೇನ ಪ್ರಕಾರೇಣ ಕಂ ಘಾತಯತಿ ? ಕಂ ವಾ ಹಂತಿ ? ಘಾತಯಾಮ್ಯೇನಮಿತಿ ವಾ ಹನ್ಮ್ಯೇನಮಿತಿ ವಾ ಭಾವಂ ನ ಕರೋತೀತ್ಯರ್ಥಃ ॥ 21 ॥**

**ಅನುವಾದ** – ಶ್ಲೋಕದಲ್ಲಿ '**ಅವಿನಾಶಿನಂ**' ಎಂಬ ಪದಕ್ಕೆ ಬಿಂಬ ನಾಶ, ಸಾನ್ನಿಧ್ಯನಾಶಾದಿ ಕಾರಣಗಳಿಂದಾಗಿ ಜೀವನು ನಾಶನಾಗುವುದಿಲ್ಲ ಎಂದು ಅರ್ಥ. ಅಥವಾ ನಾಶವೆಂದರೆ ದೋಷ. ದುಷ್ಟರಲ್ಲಿ 'ನಷ್ಟ' ಎಂಬ ಶಬ್ದದ ಪ್ರಯೋಗವಿರುವುದರಿಂದ ವಿನಾಶಶಬ್ದಕ್ಕೆ ದೋಷ ಎಂಬ ಅರ್ಥವೂ ಇದೆ. '**ಅವಿನಾಶಿ**' ಎಂದರೆ ಸ್ವಾಭಾವಿಕವಾಗಿ ರಾಗ-ದ್ವೇಷ- ಸುಖಮುಂತಾದ ದೋಷವಿಲ್ಲದವನು ಎಂದು ಅರ್ಥ .'ಮಾತ್ರಾಸ್ಪರ್ಶಾಸ್ತು' ಎಂಬಲ್ಲಿ (ಶ್ಲೋಕ. 14) ಹೇಳಿದಂತೆ ಈ ದೋಷಗಳು ಜೀವನಿಗೆ ದೇಹಾಭಿಮಾನ ಮತ್ತು ವಿಷಯಾಭಿಮಾನ ಪ್ರಯುಕ್ತವಾಗಿ ಬರುತ್ತವೆ, ಸ್ವಾಭಾವಿಕವಾಗಿ ಈ ದೋಷಗಳು ಇಲ್ಲ ಎಂದು ಹೇಳಲಾಗಿದೆ. '**ನಿತ್ಯಂ**' ಎಂದರೆ ಸ್ವಾಭಾವಿಕ ವಾದ ನಾಶವಿಲ್ಲದವನು. **ಅಜಂ**= ಹುಟ್ಟು ಇಲ್ಲದವನು . **ಅವ್ಯಯಂ** = ಸ್ವರೂಪದಲ್ಲಿ ವಿಕಾರ ಗಳಿಲ್ಲದವನು. **ಏನಂ**= ಇಂಥ ಜೀವನನ್ನು. ಅಥವಾ, **ನಿತ್ಯಂ**= ಸ್ವರೂಪನಾಶವಿಲ್ಲದವನು, **ಅಜಂ**= ಹುಟ್ಟಿಲ್ಲದವನು. **ಅವ್ಯಯಂ** = ವಿಕಾರರಹಿತನಾದವನು . ಇಂತಹ ಮಹಿಮೆಗಳಿರುವ ಕಾರಣದಿಂದ ಸ್ವತಂತ್ರನಾಗಿರುವ, **ಏನಂ**= ಈ ಪರಮಾತ್ಮನನ್ನು ಯಾರು **ವೇದ**= ತಿಳಿದಿರುವನೋ ಅಂತಹ **ಪುರುಷಃ** = ಜ್ಞಾನಿಯು, **ಕಥಂ** = ಹೇಗೆ ತಾನೇ, **ಕಂ ಘಾತಯತಿ**= ಮತ್ತೊಬ್ಬರಿಂದ ಯಾರನ್ನು ಕೊಲ್ಲಿಸುತ್ತಾನೆ , **ಕಂ ವಾ ಹಂತಿ** = ಅಥವಾ ಯಾರನ್ನು ಕೊಲ್ಲುತ್ತಾನೆ ?

ಆತ್ಮನು ನಿತ್ಯನಾದುದರಿಂದ ಈತನನ್ನು ಕೊಲ್ಲುವ ಎಂದಾಗಲಿ ಅಸ್ವತಂತ್ರನಾದುದರಿಂದ ತಾನೇ ಇಂತಹ ಕೆಲಸವನ್ನು ಮಾಡಿಸುತ್ತೇನೆಂದಾಗಲೀ ಜ್ಞಾನಿಯು ಭಾವಿಸುವುದಿಲ್ಲ ಎಂದು ಭಾವ ॥ 21 ॥

---

1.'ದೇಹಾಪಾಯಹೀನಮ್'

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾ-**
**ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ 22 ॥**

**ಅರ್ಥ** – ಹಳೆಯ ಬಟ್ಟೆಯನ್ನು ಬಿಟ್ಟು ಮನುಷ್ಯನು ಹೊಸ ಬಟ್ಟೆಗಳನ್ನು ಧರಿಸುವಂತೆ ಆತ್ಮನು ಮುದಿಶರೀರವನ್ನು ತೊರೆದು ದೃಢವಾದ ಹೊಸ ಶರೀರಗಳನ್ನು ಪಡೆಯುತ್ತಾನೆ.

**ಪೂರ್ವತ್ರ ಪುರಾಣಪದೇನ ಜೀವಸ್ಯ ದೇಹಾದ್ದೇಹಾಂತರಪ್ರಾಪ್ತಿರುಕ್ತಾ । ಸಾ ತು ದೇಹಾನ್ಯನಿತ್ಯಜೀವಸ್ಯ ಸತ್ವ ಏವ ಯುಕ್ತಾ । ಕೌಮಾರಂ ಯೌವನಂ ಜರಾ ಇತ್ಯತ್ರ ದೇಹಾತ್ಮವಿವೇಕೋಕ್ತಾವಪಿ ಕೌಮಾರಾದಿದೇಹಾನಾಂ ಅತಿಭಿನ್ನತ್ವಾ-ಭಾವಾನ್ನ ತೇನ ದೇಹಾತ್ಮನೋರ್ವಿನಾಶಿತ್ವಾವಿನಾಶಿತ್ವಲಕ್ಷಣೋ ವಿವೇಕಃ ಸ್ಫುಟಮನುಭವಾರೂಢೋ ಭವತೀತ್ಯತೋ ದೃಷ್ಟಾಂತಾಂತರೇಣ ತಮುಪಪಾದ-ಯತಿ – ವಾಸಾಂಸೀತಿ ॥**

**ಅನುವಾದ** – ಇಪ್ಪತ್ತನೆಯ ಶ್ಲೋಕದಲ್ಲಿ 'ಪುರಾಣ' ಪದದಿಂದ ಜೀವಾತ್ಮನು ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಅಲೆದಾಡುತ್ತಾನೆ ಎಂದು ತಿಳಿಸಲಾಗಿದೆ. ಈ ಅಲೆದಾಟ ದೇಹವಲ್ಲದ ಒಬ್ಬ ಆತ್ಮನಿದ್ದರೆ ಮಾತ್ರ ಸಾಧ್ಯ. ಆದರೆ ಅಂತಹ ಆತ್ಮನಿದ್ದಾನೆ ಎನ್ನಲು ಏನು ಆಧಾರ ?

ಈ ಪ್ರಶ್ನೆಗೆ **'ದೇಹಿನೋಽಸ್ಮಿನ್'** (ಶ್ಲೋಕ 13) ಎಂಬ ಶ್ಲೋಕದಲ್ಲಿ ಉತ್ತರವನ್ನು ಕೊಡಲಾಗಿದೆ. ಆದರೆ ಅದು ಸ್ಪಷ್ಟವಾಗಿ ಮನವರಿಕೆಯಾಗುವುದಿಲ್ಲ. ಬಾಲ್ಯ, ಕೌಮಾರ ಶರೀರಗಳು ಬೇರೆಯಾದರೂ ಅದರಲ್ಲಿರುವ ಆತ್ಮ ಒಬ್ಬನೇ, ಅವನು ಬೇರೆಯಲ್ಲ ಎಂದು ಆ ಶ್ಲೋಕದಲ್ಲಿ ದೇಹಾತ್ಮವಿವೇಕವನ್ನು ತಿಳಿಸಲಾಗಿದೆ. ಆದರೆ ಬಾಲ್ಯ, ಕೌಮಾರದ ಶರೀರಗಳು ಬೇರೆ ಬೇರೆಯಾಗಿವೆ ಎನ್ನುವ ಕಲ್ಪನೆ ಸಾಮಾನ್ಯರಿಗೆ ಬರುವುದಿಲ್ಲ. ಬಾಲ್ಯ ಶರೀರಕ್ಕೂ ಕೌಮಾರ ಶರೀರಕ್ಕೂ ಭೇದಾಭೇದವಿರುವುದರಿಂದ ಸ್ಫುಟವಾಗಿ ಭೇದದ ಕಲ್ಪನೆ ಎಲ್ಲರಿಗೂ ಇಲ್ಲ. ಹೀಗಾಗಿ ಶರೀರ ಬೇರೆಯಾದರೂ ಆತ್ಮ ಒಬ್ಬನೇ ಎಂದು ಸಾಧಿಸಲು ಆ ದೃಷ್ಟಾಂತ ಸಾಲದು . ಅದಕ್ಕಾಗಿ ಸ್ಫುಟವಾದ ಮತ್ತೊಂದು ದೃಷ್ಟಾಂತವನ್ನು **'ವಾಸಾಂಸಿ'** ಎಂಬ ಶ್ಲೋಕದಲ್ಲಿ ತಿಳಿಸಲಾಗಿದೆ.

**ಯದ್ವಾ, ಈಶ್ವರಸ್ಯ ದೇಹತಃ ಸ್ವರೂಪತಶ್ಚ ನಿತ್ಯತ್ವೇನ ತದ್ವಿಷಯೇ ಶೋಕಾಭಾವೇಽಪಿ ಜೀವವಿಷಯೇ ತು ಸ ಭವಿಷ್ಯತಿ । ಜೀವೋ ನಿತ್ಯಃ,**

**ತದ್ದೇಹಯೋಗವಿಯೋಗೌ ಕೌಮಾರಾದಿದೇಹವದೇವೇತ್ಯುಕ್ತಾವಪಿ ಸರ್ವ-ಲೋಕಪ್ರಸಿದ್ಧಜನಿಮೃತಿಸತ್ತ್ವಾತ್, ಯುದ್ಧೇ ಚ ತತ್ಪ್ರಾಪ್ತೇಸ್ತನ್ನಿಮಿತ್ತಃ ಶೋಕ ಇತ್ಯತ ಆಹ– ವಾಸಾಂಸೀತಿ ॥**

**ಅನುವಾದ** – ಅಥವಾ ಈ ಶ್ಲೋಕಕ್ಕೆ ಇನ್ನೊಂದು ರೀತಿಯಾದ ಸಂದರ್ಭವನ್ನೂ ತಿಳಿಯಬಹುದು – ಪರಮಾತ್ಮನ ಸ್ವರೂಪಕ್ಕೂ ನಾಶವಿಲ್ಲ, ದೇಹಕ್ಕೂ ನಾಶವಿಲ್ಲ. ಹೀಗಾಗಿ ದೇವರ ಬಗ್ಗೆ ದುಃಖಿಸುವುದಕ್ಕೆ ಕಾರಣವಿಲ್ಲ. ಆದರೆ, ಜೀವ ವಿಷಯದಲ್ಲಿ ದುಃಖ ಆಗಿಯೇ ಆಗುತ್ತದೆ. ಅವನ ಸ್ವರೂಪ 'ನಿತ್ಯ'. ಅವನಿಗೆ ಬಾಲ್ಯ ಯೌವನಾವಸ್ಥೆಗಳಲ್ಲಿ ಬೇರೆ ಬೇರೆ ದೇಹಗಳು ಬರುವಂತೆ ಹುಟ್ಟು – ಸಾವುಗಳಾದಾಗಲೂ ಸಹಜವಾಗಿ ದೇಹಗಳು ಬದಲಾಗುತ್ತಿರುತ್ತವೆ, ಅದಕ್ಕೇಕೆ ಅಳಲು ? ಎಂದು ಹಿಂದೆ '**ದೇಹಿನೋಽಸ್ಮಿನ್**' ಎಂಬ ಶ್ಲೋಕದಲ್ಲಿ ಹೇಳಲಾಗಿದೆ. ಇದು ತೃಪ್ತಿಕರವಾದ ಸಮಾಧಾನವಲ್ಲ. ಬಾಲ್ಯ – ತಾರುಣ್ಯಗಳಲ್ಲಿ ದೇಹದಲ್ಲಿ ಬದಲಾವಣೆಗಳಾದರೂ 'ಹುಟ್ಟು–ಸಾವು' ಎಂದೇನೂ ಅದನ್ನು ಕರೆಯಲಾಗುವುದಿಲ್ಲ. ಆದರೆ ಜನ್ಮ ಮರಣಗಳಾದಾಗ 'ಹುಟ್ಟಿದ–ಸತ್ತ' ಎನ್ನಲಾಗುತ್ತದೆ. ಯುದ್ಧದಲ್ಲಿ ಇಂತಹ ಸಾವು ಅನಿವಾರ್ಯವಾದುದು. ಅದಕ್ಕಾಗಿ ದುಃಖವಾಗುತ್ತದೆ. ಈ ಆಕ್ಷೇಪಕ್ಕೂ 'ವಾಸಾಂಸಿ' ಎಂಬ ಶ್ಲೋಕವು ಪರಿಹಾರವನ್ನು ನೀಡುತ್ತದೆ.

**ಶರೀರಯೋಗವಿಯೋಗಯೋಃ ಕೌಮಾರಾದಿವತ್ ಶೋಕಕಾರಣತ್ವಾ-ಭಾವೋಽಂಗೀಕೃತಶ್ಚೇತ್ತರ್ಹಿ ಜನಿಮೃತೀ ಅಪಿ ನ ಶೋಕಕಾರಣಂ । ದೇಹ-ಯೋಗವಿಯೋಗಯೋರೇವ ಜನಿಮೃತಿಶಬ್ದಾರ್ಥತ್ವಾದಿತಿ ಭಾವಃ ।**

**ಅನುವಾದ** – ಬಾಲ್ಯ – ತಾರುಣ್ಯಾವಸ್ಥೆಗಳಲ್ಲಿ ಶರೀರದಲ್ಲಿ ಬದಲಾವಣೆಗಳಾದಾಗಲೂ ಅದೇನು ದುಃಖಕರವಾದ ಸಂಗತಿಯಲ್ಲ ಎಂದು ಸಮಾಧಾನಪಟ್ಟುಕೊಳ್ಳುವುದಾದಲ್ಲಿ ಹುಟ್ಟು – ಸಾವುಗಳಿಗೂ ದುಃಖಪಡಬಾರದು . ಹುಟ್ಟು – ಸಾವು ಎಂದರೂ ಇದೇ. ಒಂದು ದೇಹವನ್ನು ಕಳೆದುಕೊಂಡು ಮತ್ತೊಂದು ದೇಹವನ್ನು ಪಡೆದುಕೊಳ್ಳುವುದು. ಅದಕ್ಕಾದರೂ ಏಕೆ ಅಳಬೇಕು ? ಎಂದು ಶ್ರೀಕೃಷ್ಣನ ಅಭಿಪ್ರಾಯ.

**ಯದ್ವಾ ವಾಸಸೋ ಜರಾವತ್ ಸ್ವಶರೀರೇ ಜರಾದಾವಸ್ವಾತಂತ್ರ್ಯದರ್ಶನಾತ್ ಸರ್ವತ್ರಾಸ್ವಾತಂತ್ರ್ಯಂ ಜೀವಸ್ಯ ಜ್ಞೇಯಮಿತ್ಯನೇನೋಚ್ಯತೇ । ಶ್ಲೋಕಾರ್ಥಸ್ತು ವ್ಯಕ್ತಃ ॥ 22 ॥**

**ಅನುವಾದ** – ಅಥವಾ ಈ ಶ್ಲೋಕದಲ್ಲಿ ಜೀವನ ಅಸ್ವಾತಂತ್ರ್ಯವನ್ನು ದೃಷ್ಟಾಂತದಿಂದ ದೃಢಪಡಿಸಲಾಗಿದೆ. ನಮ್ಮ ಬಟ್ಟೆ ಹಳೆಯದಾಗುವುದು ನಮ್ಮ ಅಧೀನದಲ್ಲಿಲ್ಲ. ಅದರಲ್ಲಿ ನಾವು

ಹೇಗೆ ಅಸ್ವತಂತ್ರರೋ ಅದರಂತೆಯೇ, ದೇಹದ ಮುದಿತನವೂ ನಮ್ಮ ಪ್ರಯತ್ನ ಮೀರಿದ ಅವಸ್ಥೆ. ಅದರಲ್ಲಿ ನಾವು ಅಸ್ವತಂತ್ರರಾದಂತೆ ಎಲ್ಲ ಕಾರ್ಯಗಳಲ್ಲೂ ನಾವು ಅಸ್ವತಂತ್ರರೆಂದು ತಿಳಿಯಬೇಕು. ಶ್ಲೋಕದ ಅರ್ಥವು ಸ್ಪಷ್ಟವಾಗಿದೆ. ಆದ್ದರಿಂದ ನಾವು (ರಾಯರು) ವಿವರಿಸುವುದಿಲ್ಲ. ॥ 22 ॥

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥ 23 ॥**

**ಅನುವಾದ** - ಈ ಜೀವನನ್ನು ಶಸ್ತ್ರಾಸ್ತ್ರಗಳು ತುಂಡರಿಸಲಾರವು, ಬೆಂಕಿ ಸುಡಲಾರದು. ನೀರು ತೋಯಿಸಲಾರದು, ಗಾಳಿ ಒಣಗಿಸಲಾರದು.

**ನನು ಜೀವಚಿತಃ ಕಾಲಕೃತಸ್ಯ ಬಿಂಬನಾಶಾದಿನಿಮಿತ್ತಕೃತಸ್ಯ ಚ ನಾಶಸ್ಯಾ-ಭಾವೇಽಪಿ ದಕ್ಷಶಿರಶ್ಛೇದ ಇವ ಶಸ್ತ್ರಾದಿಪ್ರಬಲಹೇತುನಾ ನಾಶೋಽಸ್ತಿ ಕಿಮಿತ್ಯತ ಆಹ– ನೈನಮಿತಿ ॥ ಏನಂ= ದೇಹೀತಿ ಪ್ರಕೃತಂ ಜೀವಂ ನ ಕ್ಲೇದಯಂತಿ । ಮೃದುಕರಣೇನ ಶಿಥಿಲಂ ನ ಕುರ್ವಂತೀತ್ಯರ್ಥಃ ॥ 23 ॥**

**ಅನುವಾದ** - ಜೀವಚೈತನ್ಯಕ್ಕೆ ಕಾಲನಿಮಿತ್ತವಾದ ನಾಶವು ಇಲ್ಲದಿರಬಹುದು , ಅಥವಾ ಬಿಂಬನಾಶಾದಿ ಪ್ರಯುಕ್ತವಾದ ವಿನಾಶವೂ ಇಲ್ಲದಿರಬಹುದು. ಆದರೂ ದಕ್ಷಪ್ರಜಾಪತಿಯ ಶಿರಶ್ಛೇದವಾದಂತೆ ನಿಮಿತ್ತವಿಶೇಷಗಳಿಂದ ಜೀವನಿಗೂ ನಾಶವಿರಬಹುದು , ಎಂಬ ಸಂಶಯವನ್ನು ಈ ಶ್ಲೋಕದಲ್ಲಿ ಪರಿಹರಿಸಲಾಗಿದೆ.

ಈ ಶ್ಲೋಕದಲ್ಲಿ **ಏನಂ** , ಹಿಂದಿನ ಶ್ಲೋಕದಲ್ಲಿ **'ದೇಹೀ'** ಎಂದು ಉಲ್ಲೇಖಿಸಲ್ಪಟ್ಟ ಜೀವನನ್ನು ಎಂದು ಅರ್ಥ. **ನ ಕ್ಲೇದಯಂತಿ** = ಜೀವನನ್ನು ನೀರು ಮೃದುವಾಗಿ ಮಾಡಿ ಸಡಿಲುಗೊಳಿಸಲಾರದು ಎಂದು ಅರ್ಥ.

**ವಿವರಣೆ** – ತನ್ನನ್ನು ಅವಮಾನಗೊಳಿಸಿದ ದಕ್ಷಪ್ರಜಾಪತಿಯ ತಲೆಯನ್ನು ರುದ್ರದೇವರು ಯಾವ ಶಸ್ತ್ರದಿಂದಲೂ ತುಂಡರಿಸಲಾಗಲಿಲ್ಲ. ಏಕೆಂದರೆ , ಅವನು ಯಜ್ಞದೀಕ್ಷೆಯಲ್ಲಿದ್ದ. ಕೊನೆಗೆ ಅಶರೀರವಾಣಿಯಂತೆ ಯಜ್ಞಪಶು ಎಂದು ಅನುಸಂಧಾನ ಮಾಡಿದಾಗ ಅವನ ತಲೆಯನ್ನು ಕಡಿಯಲು ಸಾಧ್ಯವಾಯಿತು. ಅದರಂತೆ ಜೀವಾತ್ಮನಿಗೂ ಶಾಪಾದಿ ವಿಶೇಷಕಾರಣಗಳಿಂದ ನಾಶವಿರಬಹುದು ಎಂಬ ಸಂಶಯವನ್ನು ಇಲ್ಲಿ ಪರಿಹರಿಸಲಾಗಿದೆ ॥ 23॥

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಃ ಸರ್ವಗತಸ್ಥಾಣುರಚಲೋಽಯಂ ಸನಾತನಃ ॥ 24 ॥**

**ಅರ್ಥ** - ಈ ಜೀವಾತ್ಮನು ಶಸ್ತ್ರಗಳಿಂದ ಛೇದಾರ್ಹನೇ ಅಲ್ಲ, ಬೆಂಕಿಯಿಂದ ಸುಡಲು ಅರ್ಹನಲ್ಲ, ನೀರಿನಿಂದ ತೋಯಿಸಲೂ ಅರ್ಹನಲ್ಲ, ಗಾಳಿಯಿಂದ ಒಣಗಿಸಲೂ ಅರ್ಹನಲ್ಲ. ಏಕೆಂದರೆ, ಅವನು ಸದಾ ಸರ್ವಗತನಾದ, ನೈಮಿತ್ತಿಕವಾದ ಹಾಗೂ ಸ್ವಾಭಾವಿಕವಾದ ವಿಕಾರವಿಲ್ಲದ, ವೇದವಾಚ್ಯನಾದ ಪರಮಾತ್ಮನ ಪ್ರತಿಬಿಂಬನಾಗಿರುತ್ತಾನೆ.

**ನನು ನ ಛಿಂದಂತೀತ್ಯಾದಿ ಲಟ್‌ಪ್ರಯೋಗೇಣ ವರ್ತಮಾನಸ್ಯೈವ ಛೇದಾದೇರ್ನಿಷೇಧಾತ್ ಇದಾನೀಂ ದೃಶ್ಯಮಾನತ್ವೇನಾತ್ಮನಃ ಪ್ರಾಗ್ವಿನಾಶಾಭಾವೇಽಪ್ಯುತ್ತರತ್ರ ಶಸ್ತ್ರಾದಿನಾ ವಿನಾಶಃ ಸ್ಯಾದಿತ್ಯತಃ ಛೇದಾದಿಯೋಗ್ಯತೈವಾತ್ಮನೋ ನಾಸ್ತೀತ್ಯಾಹ– ಅಚ್ಛೇದ್ಯೋಽಯಮಿತಿ ॥**

**ಅನುವಾದ** – ಹಿಂದಿನ **'ನೈನಂ ಛಿಂದಂತಿ'** ಎಂಬ ಶ್ಲೋಕದಲ್ಲಿ ವರ್ತಮಾನ ಕಾಲಾರ್ಥಕವಾದ ಲಟ್ ಲಕಾರದ ಪ್ರಯೋಗ ಮಾಡಿರುವ ಕಾರಣ ಜೀವನಿಗೆ ವರ್ತಮಾನ ಕಾಲದಲ್ಲಿ ಛೇದಾದಿಗಳಿಲ್ಲ ಎಂದು ತಿಳಿಯುತ್ತದೆ. ವರ್ತಮಾನಕಾಲದಲ್ಲಿ ಜೀವನು ಇರುವುದರಿಂದ ಭೂತಕಾಲದಲ್ಲೂ ಅವನು ಇರಬೇಕಾಗುತ್ತದೆ. ಆದರೂ ಭವಿಷ್ಯತ್ಕಾಲದಲ್ಲಿ ಅವನಿಗೆ ಶಸ್ತ್ರಾದಿಗಳಿಂದ ವಿನಾಶವಿರಬಹುದು ಎಂಬ ಸಂದೇಹವನ್ನು ಈ ಶ್ಲೋಕದಲ್ಲಿ ಪರಿಹರಿಸಲಾಗಿದೆ. ಇಲ್ಲಿ ಜೀವಾತ್ಮನಿಗೆ ಛೇದಯೋಗ್ಯತೆಯೇ ಇಲ್ಲ ಎಂದು ತಿಳಿಸುವ ಮೂಲಕ ಭವಿಷ್ಯತ್‌ಕಾಲದಲ್ಲೂ ಅವನಿಗೆ ನಾಶವಿಲ್ಲ ಎಂದು ತಿಳಿಸಲಾಗಿದೆ.

**ಅಯಂ= ಜೀವಃ 'ಕೃತ್ಯಾಃ' (3-1-95) 'ಪ್ರಾಙ್ಣ್ವುಲಃ' ಇತಿ ಸೂತ್ರೇಣೋಕ್ತಕೃತ್ಯಸಂಜ್ಞಕಸ್ಯ ಣ್ಯತ್‌ಪ್ರತ್ಯಯಸ್ಯ 'ಅರ್ಹೇ ಕೃತ್ಯತೃಚಶ್ಚ' (3.3.169) ಇತ್ಯರ್ಹಾರ್ಥೇ ಛಿದಿ ದಹೇತ್ಯಾದೇರ್ಧಾತೋರ್ವಿಧಾನಾತ್ ಛೇದನಾದ್ಯರ್ಹೋ ನ ಭವತೀತ್ಯರ್ಥಃ । ಅಯಮಯಮಿತಿ ಪೃಥಗ್ವಚನಂ 'ಯೋ ಯೋ ಜೀವಃ ಸ ಸರ್ವೋಽಪ್ಯೇವಂರೂಪ' ಇತಿ ಪ್ರದರ್ಶನಾಯ ।**

**ಅನುವಾದ** – ಅಚ್ಛೇದ್ಯ ಎಂಬ ಶಬ್ದ **ಛಿದಿ** ಧಾತುವಿಗೆ **'ಣ್ಯತ್'** ಎಂಬ ಪ್ರತ್ಯಯ ಸೇರಿ ನಿಷ್ಪನ್ನವಾಗಿದೆ. **'ಣ್ಯತ್'** ಪ್ರತ್ಯಯಕ್ಕೆ **'ಕೃತ್ಯಾಃ'** ಎಂಬ ಸೂತ್ರದಂತೆ ಕೃತ್ಯ ಎಂಬ ಸಂಜ್ಞೆ ಇದೆ. ಕೃತ್ಯ ಸಂಜ್ಞೆ ಇರುವ ಪ್ರತ್ಯಯಗಳು **ಅರ್ಹ** = ಯೋಗ್ಯ ಎಂಬ ಅರ್ಥದಲ್ಲಿ ಬರುತ್ತವೆ ಎಂದು **'ಅರ್ಹೇ ಕೃತ್ಯ ತೃಚಶ್ಚ'** ಎಂಬ ಸೂತ್ರದಲ್ಲಿ ಪಾಣಿನಿಯು ಹೇಳಿದ್ದಾನೆ. ಅಂತಹ ಪ್ರತ್ಯಯವು 'ಛಿದಿ', 'ದಹ'

ಮುಂತಾದ ಧಾತುಗಳಿಗೆ ಸೇರಿದಾಗ ಛೇದ್ಯ, ದಾಹ್ಯ ಎಂದು ರೂಪವಾಗುತ್ತದೆ. ಆದ್ದರಿಂದ ಅಚ್ಛೇದ್ಯ ಶಬ್ದಕ್ಕೆ 'ಛೇದಕ್ಕೆ ಅನರ್ಹನಾದವನು' ಎಂದು ಅರ್ಥವಾಗುತ್ತದೆ.

ಈ ಶ್ಲೋಕದಲ್ಲಿ **ಅಯಂ** = ಜೀವಾತ್ಮ. ಈ '**ಅಯಂ**' ಎಂಬ ಶಬ್ದವನ್ನು ಅಚ್ಛೇದ್ಯ, ಅದಾಹ್ಯ, ಅಕ್ಲೇದ್ಯ, ಅಶೋಷ್ಯ ಈ ಎಲ್ಲ ಶಬ್ದಗಳ ಜೊತೆಯಲ್ಲೂ ಸೇರಿಸಲಾಗಿದೆ. ಅದರ ಉದ್ದೇಶ-ಯಾರೋ ಒಬ್ಬ ಜೀವನು ಮಾತ್ರ ಅಚ್ಛೇದ್ಯನಲ್ಲ, ಎಲ್ಲ ಜೀವರೂ ಹೀಗೆಯೇ ಆಗಿದ್ದಾರೆ ಎಂದು ತಿಳಿಸುವುದಾಗಿದೆ.

**ಕುತೋಽನರ್ಹತೇತ್ಯತ ಉಕ್ತಮ್– ನಿತ್ಯ ಇತ್ಯಾದಿನಾ ॥ ಸರ್ವಗತಃ ಸ್ಥಾಣುರಿತಿ ಪದವಿಭಾಗಃ । ನಿತ್ಯ ಇತಿ ಸರ್ವಗತ ಇತ್ಯಸ್ಯ ವಿಶೇಷಣಮ್ । ಸರ್ವಗತಪದೇನ ಸರ್ವಗತತ್ವವಿಶಿಷ್ಟ ಉಚ್ಯತೇ । ನಿತ್ಯಃ ಸರ್ವಗತತ್ವವಿಶಿಷ್ಟ ಇತ್ಯುಕ್ತೇ 'ಸವಿಶೇಷಣೇ ಹೀ'ತಿ ನ್ಯಾಯೇನ ನಿತ್ಯತ್ವಂ ಸರ್ವಗತತ್ವರೂಪವಿಶೇಷಣಮುಪಸಂಕ್ರಾಮತಿ । ನಿತ್ಯಂ ಯತ್ಸರ್ವಗತತ್ವಮಿತಿ । ತದ್ವಾನ್ಸರ್ವಗತ ಇತ್ಯರ್ಥಃ ।**

**ಅನುವಾದ** – ಜೀವನು ಛೇದಾದಿಗಳಿಗೆ ಅನರ್ಹನಾಗಿರುವುದಕ್ಕೆ ಏನು ಕಾರಣ ? ಎನ್ನುವ ಪ್ರಶ್ನೆಗೆ– 'ನಿತ್ಯಃ ಸರ್ವಗತಸ್ಥಾಣುಃ' ಇತ್ಯಾದಿಯಾಗಿ ಉತ್ತರ ಕೊಡಲಾಗಿದೆ.

'**ಸರ್ವಗತಸ್ಥಾಣುಃ**' ಎಂಬ ಪದವನ್ನು '**ಸರ್ವಗತಃ ಸ್ಥಾಣುಃ**' ಎಂದು ಎರಡುಪದಗಳನ್ನಾಗಿ ವಿಭಾಗ ಮಾಡಬೇಕು. 'ನಿತ್ಯಃ' ಶಬ್ದವನ್ನು ಸರ್ವಗತ ಶಬ್ದದೊಂದಿಗೆ ಜೋಡಿಸಿಕೊಳ್ಳಬೇಕು. ಸರ್ವಗತ ಎಂದರೆ 'ಸರ್ವಗತತ್ವವಿಶಿಷ್ಟ' ಎಂದರ್ಥ. ನಿತ್ಯ ಎಂಬ ವಿಶೇಷಣವು ಸರ್ವಗತತ್ವ ಎಂಬ ಅಂಶಕ್ಕೆ ಅನ್ವಯಿಸುತ್ತದೆ. ವಿಶಿಷ್ಟಕ್ಕೆ ಹೇಳಿರುವ ವಿಶೇಷಣವು ವಿಶಿಷ್ಟದಲ್ಲಿರುವ ವಿಶೇಷಣಾಂಶಕ್ಕೆ ಅನ್ವಯಿಸುತ್ತದೆ ಎಂದು ಭಾಷಾನಿಯಮ. ಆದ್ದರಿಂದ ಸಾರ್ವಕಾಲಿಕವಾದ ಸರ್ವಗತತ್ವ ವಿಶೇಷಣವುಳ್ಳವನು ನಿತ್ಯಸರ್ವಗತ ಎನಿಸುತ್ತಾನೆ. ಪರಮಾತ್ಮನು ಸದಾ ವ್ಯಾಪ್ತನಾಗಿದ್ದಾನೆ ಎಂದು ಭಾವ.

**ಸ್ಥಾಣುರಿತಿ ಯತ್ಕಿಂಚಿನ್ನಿಮಿತ್ತಕೃತವಿಕಾರಹೀನಃ । 'ಅಜೋ ನಿತ್ಯಃ ಶಾಶ್ವತಃ' ಇತ್ಯತ್ರ ಶಾಶ್ವತಪದೇನ ಸಾಮಾನ್ಯತೋ ವಿಕಾರಾಭಾವೋಕ್ತಾವಪೀಹ ನೈಮಿತ್ತಿಕ-ನಿಷೇಧಪ್ರಕರಣಾನ್ನೈಮಿತ್ತಿಕವಿಕಾರಾಭಾವೋಕ್ತ್ಯರ್ಥಂ ಸ್ಥಾಣುರಿತ್ಯುಕ್ತಮ್ । ಅತೋ ನ ಪುನರುಕ್ತತಾ । ಅಚಲಃ= ಪ್ರಾಕೃತಚಲನಹೀನಃ, ಸನಾತನಃ= ವಕ್ಷ್ಯಮಾಣದಿಶಾ ಸಶಬ್ದ ಇತ್ಯರ್ಥಃ । 'ತ್ವಯೀಶ್ವರೇ ಬ್ರಹ್ಮಣಿ ನೋ ವಿರುಧ್ಯತೇ', 'ವಿಜ್ಞಾನಶಕ್ತಿರಹಮಾಸಮನಂತಶಕ್ತೇಃ, (ಭಾಗ.3.10.24) 'ಪರಾಽಸ್ಯ**

**ಶಕ್ತಿರ್ವಿವಿಧೈವ ಶ್ರೂಯತೇ, (ಶ್ವೇತಾ. ತ್. 6.8) ಇತ್ಯಾದಿ ಶ್ರುತಿಸ್ಮೃತಿರೂಪ-ಶಬ್ದಸಹಿತಃ, ತತ್ಪ್ರತಿಪಾದ್ಯ ಇತಿ ಯಾವತ್ । ತಥಾಚ ಸ್ಥಾಣುತ್ವೇಽಪಿ ಹರೇಃ 'ತದೈಕ್ಷತ' (ಛಾ.6-2-3) ಇತ್ಯಾದ್ಯುಕ್ತಕರ್ತೃತ್ವಮಚಿಂತ್ಯಶಕ್ತ್ಯೈವ ಯುಕ್ತಂ । ನ ತು ಪರರೀತ್ಯಾ ಮಾಯಾವಶಾದಿತ್ಯುಕ್ತಂ ಭವತಿ ।**

**ಅನುವಾದ**– ಸ್ಥಾಣು ಶಬ್ದಕ್ಕೆ ನೈಮಿತ್ತಿಕವಾದ ವಿಕಾರಗಳಿಲ್ಲದವನು ಎಂದು ಅರ್ಥ. '**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣಃ**' (ಶ್ಲೋಕ 20) ಎಂಬ ಶ್ಲೋಕದಲ್ಲಿ **ಶಾಶ್ವತಃ** (ಶಶ್ವತ್ ಏಕಪ್ರಕಾರಃ) ಎಂಬ ಪದದಿಂದ ಸಾಮಾನ್ಯವಾಗಿ ವಿಕಾರಗಳಿಲ್ಲ ಎಂದು ತಿಳಿಸಲಾಗಿದ್ದರೂ ಇಲ್ಲಿ ಸ್ಥಾಣು ಪದದಿಂದ ವಿಕಾರವಿಶೇಷವಾದ ನೈಮಿತ್ತಿಕ ವಿಕಾರವನ್ನು ನಿಷೇಧಿಸಲಾಗಿದೆ. ಏಕೆಂದರೆ , ಇದು ನೈಮಿತ್ತಿಕ ದೋಷಗಳನ್ನು ನಿಷೇಧಿಸುವ ಪ್ರಕರಣವಾಗಿದೆ. ಹೀಗೆ, '**ಶಾಶ್ವತಃ**' ಎಂಬ ಪದದೊಂದಿಗೆ ಪುನರುಕ್ತಿ ಇಲ್ಲ.

'**ಅಚಲಃ**' ಎಂದರೆ ಪ್ರಾಕೃತವಾದ ಚಲನೆ ಇಲ್ಲದವನು. ಶಬ್ದ(ನಾದ)ಸಹಿತನಾದವನು ಸನಾದನು. ಇದರ ಅರ್ಥ – ಪರಮಾತ್ಮನು '**ತ್ವಯೀಶ್ವರೇ ಬ್ರಹ್ಮಣಿ ನೋ ವಿರುಧ್ಯತೇ**' (ಸರ್ವಸಮರ್ಥನಾದ ಬ್ರಹ್ಮನಲ್ಲಿ ವಿರುದ್ಧ ಧರ್ಮಗಳೆಲ್ಲವೂ ವಿರೋಧವಿಲ್ಲದೆ ಜೊತೆಯಲ್ಲಿರುತ್ತವೆ) '**ವಿಜ್ಞಾನಶಕ್ತಿರಹಮಾಸಮನಂತಶಕ್ತೇಃ**' (ಅಮಿತಶಕ್ತಿಸಂಪನ್ನನಾದ ಭಗವಂತನಿಂದ ನಾನು ಜ್ಞಾನ ಶಕ್ತಿ ಸಂಪನ್ನನಾಗಿ ಜನಿಸಿರುವೆನು), '**ಪರಾಽಸ್ಯ ಶಕ್ತಿಃ ವಿವಿಧೈವ ಶ್ರೂಯತೇ**' (ಈ ಪರಮಾತ್ಮನ ಶ್ರೇಷ್ಠ ಶಕ್ತಿಯು ಅನೇಕ ವಿಧವಾದುದು) ಇವೇ ಮುಂತಾದ ಶ್ರುತಿ-ಸ್ಮೃತಿ ರೂಪವಾದ ಶಬ್ದ ಸಹಿತನಾದವನು . ಅರ್ಥಾತ್ ಅವುಗಳಿಂದ ಪ್ರತಿಪಾದ್ಯನಾದವನು '**ಸನಾತನ**' ಎನಿಸುತ್ತಾನೆ.

'ಸ್ಥಾಣು ' ಎಂದರೆ ಯಾವ ವ್ಯತ್ಯಾಸವೂ ಇಲ್ಲದವನು. ಆದರೆ, ಸೃಷ್ಟಿಕಾಲದಲ್ಲಿ ಪರಮಾತ್ಮನಲ್ಲಿ ಸೃಷ್ಟಿಮಾಡುವ ಇಚ್ಛೆಯು ಮೂಡುತ್ತದೆ. ಇಂತಹ ವಿಶೇಷಗಳು ಕಾಲಕಾಲಕ್ಕೆ ಬಂದರೂ ಪರಮಾತ್ಮನು ಸ್ಥಾಣುವಾಗಿರುವುದು ಅಚಿಂತ್ಯಶಕ್ತಿಯಿಂದಾಗಿ. ಆದರೆ , ಮಾಯಾವಾದಿಗಳು– ಇಂತಹ ವಿಶೇಷಗಳು ಭಗವಂತನಲ್ಲಿ ಇಲ್ಲ ; ಅವೆಲ್ಲ ಮಾಯೆಯಿಂದಾಗುವ ಕಲ್ಪನೆಗಳು ಎಂದು ಹೇಳುತ್ತಾರೆ. ಆದರೆ ಇದು ಸರಿಯಲ್ಲ. ಪರಮಾತ್ಮನಲ್ಲಿ ಶ್ರುತಿಸಿದ್ಧವಾದ ಯಾವ ಗುಣಗಳನ್ನೂ '**ಮಾಯಿಕ**' ಎಂದು ಹೇಳಕೂಡದು . ಪರಸ್ಪರ ವಿರುದ್ಧವಾದ ಗುಣಗಳೂ ಅವನಲ್ಲಿ ಅಚಿಂತ್ಯ ಶಕ್ತಿಯಿಂದ ಜೊತೆಗೂಡಿವೆ ಎಂದು ವೇದವೇ ಹೇಳುತ್ತದೆ . ಈ ಅಂಶವನ್ನು '**ಸನಾತನಃ**' ಎಂಬ ಪದವು ತಿಳಿಸಿಕೊಡುತ್ತದೆ.

**ವಿವರಣೆ**– 'ನಾದ ' ವೆಂದರೆ ಶಬ್ದ . 'ಸನಾದ ' ಎಂದರೆ ಶಬ್ದಗಮ್ಯ. ಶಬ್ದವೆಂದರೆ ವೇದ. ಸನಾದ ಎಂದರೆ ವೇದಗಮ್ಯ . ಸನಾದನೇ ಸನಾತನ .

**ನನು ನಿತ್ಯ ಇತ್ಯಾದಿವಿಶೇಷಣವಿಶಿಷ್ಟಸ್ಯ ಈಶ್ವರತ್ವಾದಯಂ ಜೀವೋ ನಿತ್ಯಃ ಸರ್ವಗತ (ಗತಃ) ಸ್ಥಾಣುರಿತಿ ಭಗವದಭೇದೋಕ್ತಿರಯುಕ್ತೇತಿ ಚೇತ್ । ಸತ್ಯಮ್ । ಉಕ್ತಾನುಪಪತ್ತೇರೇವಾಭೇದೋಕ್ತಿರತ್ರ 'ಅತದ್ಭಾವೇ ಸಾಮಾನಾಧಿಕರಣ್ಯಂ ಸಾರೂಪ್ಯಂ ಗಮಯತಿ' ಇತಿ ನ್ಯಾಯಾದ್ಗೌಣೀ ನೇಯಾ । ನಿತ್ಯಸರ್ವಗತತ್ವಾದಿಯುಕ್ತಭಗವತ್ಸರೂಪೋಽಯಂ ಜೀವ ಇತಿ । ಉಕ್ತಗುಣಕೇಶ್ವರಪ್ರತಿಬಿಂಬೋ ಜೀವ ಇತಿ ಯಾವತ್ ।**

**ಅನುವಾದ** – ನಿತ್ಯಸರ್ವಗತನಾದವನು ಪರಮಾತ್ಮ , ಜೀವನಲ್ಲ. ಹೀಗಿರುವಾಗ ಪರಮಾತ್ಮನಿಗೆ ಅನ್ವಯಿಸುವ 'ನಿತ್ಯಸರ್ವಗತ, ಸ್ಥಾಣುಃ' ಮುಂತಾದ ವಿಶೇಷಗಳನ್ನು ಗೀತೆಯು ಜೀವನಿಗೆ ಹೇಳುವ ಮೂಲಕ ಜೀವೇಶರಿಗೆ ಅಭೇದವನ್ನು ಹೇಳುತ್ತಿದೆಯೇ? ಇಲ್ಲ. ಈ ಅನುಪಪತ್ತಿಯ ಪರಿಹಾರಕ್ಕಾಗಿ, 'ಅಂತಹ ಗುಣವುಳ್ಳ ಪರಮಾತ್ಮನ ಪ್ರತಿಬಿಂಬ' ಎಂಬ ಅರ್ಥವನ್ನು ಆ ಶಬ್ದಗಳಿಗೆ ಹೇಳಬೇಕು. 'ಅಭೇದವು ಪ್ರಮಾಣವಿರುದ್ಧವಾದಾಗಲೆಲ್ಲ ಸಾರೂಪ್ಯವನ್ನು ಹೇಳಬೇಕು' ಎಂದು ಭಾಷಾನಿಯಮ. 'ಅವನು ಯಮ' ಎಂದರೆ ಯಮನಂತೆ ಎಂದರ್ಥ. ಆದರಂತೆ 'ಜೀವನು ಸರ್ವಗತ' ಎಂದರೆ ಸರ್ವಗತನಾದ ಪರಮಾತ್ಮನಂತೆ, ಅರ್ಥಾತ್ ಪರಮಾತ್ಮನ ಪ್ರತಿಬಿಂಬ ಎಂದು ಅರ್ಥ.

**ತಾವತಾ ಕಥಂ ಛೇದನಾದ್ಯರ್ಹೋ ಜೀವಃ ಇತಿ ಶಂಕಾನಿರಾಸ ಇತಿ ಚೇತ್, 'ಯೋ ಯತ್ಪ್ರತಿಬಿಂಬಃ ಸೋಽಸತಿವಿರೋಧೇತತ್ಸಮಾನಧರ್ಮಕ', ಇತಿ ವ್ಯಾಪ್ತಿಬಲೇನ ಜೀವಸ್ಯ ಸ್ಥಾಣುತ್ವಾದೀಶ್ವರಧರ್ಮಸಮಾನಧರ್ಮಪ್ರಾಪ್ತೇರಿತಿ ತಾತ್ಪರ್ಯಾತ್ । 'ಅನಾಶಿನೋಽಪ್ರಮೇಯಸ್ಯೇ'ತ್ಯತ್ರ 'ಅಜೋ ನಿತ್ಯಃ ಶಾಶ್ವತಃ' ಇತ್ಯತ್ರ, 'ನಿತ್ಯ' ಇತಿ ಪ್ರಕೃತಾರ್ಥೇ ಚ ಜೀವಸ್ಯೇಶ್ವರಪ್ರತಿಬಿಂಬತ್ವೋಕ್ತಾವಪಿ ನ ಪುನರುಕ್ತತಾ ಶಂಕ್ಯಾ । ತತ್ತಚ್ಛಂಕಾನಿವರ್ತಕತ್ವೇನ ಭಿನ್ನಗುಣವಿಶಿಷ್ಟೇಶ್ವರಪ್ರತಿಬಿಂಬತ್ವಸ್ಯ ತತ್ರ ತತ್ರ ಕಥನಾದಿತಿ ಜ್ಞೇಯಮ್ ।**

**ಅನುವಾದ** – ಈಶನ ಪ್ರತಿಬಿಂಬ ಜೀವ ಎಂದ ಮಾತ್ರಕ್ಕೆ ಅವನು ಛೇದಾರ್ಹ ಎಂಬ ಶಂಕೆಗೆ ಪರಿಹಾರ ಹೇಗೆ ? ಹೀಗೆ – ಪ್ರತಿಬಿಂಬವೆಲ್ಲವೂ ಬಿಂಬದ ಸಮಾನಧರ್ಮಗಳನ್ನು ಹೊಂದಿರುತ್ತದೆ . ಪ್ರಮಾಣದ ವಿರೋಧವಿದ್ದಾಗ ಮಾತ್ರ ಬಿಂಬದ ಕೆಲವು ಧರ್ಮಗಳನ್ನು ಪ್ರತಿಬಿಂಬದಲ್ಲಿ ನಿರಾಕರಿಸಲಾಗುತ್ತದೆ. ಪ್ರಕೃತ, ಜೀವನು ಈಶನ ಪ್ರತಿಬಿಂಬನಾಗಿರುವ ಕಾರಣ ಸ್ಥಾಣುತ್ವಾದಿ ಧರ್ಮಗಳು ಈಶ್ವರನಂತೆ ಜೀವನಲ್ಲೂ ಇವೆ. ಈಶನು ಸ್ಥಾಣುವಾದ ಕಾರಣ ಛೇದಾದ್ಯನರ್ಹ. ಆದ್ದರಿಂದ ಅವನ ಪ್ರತಿಬಿಂಬನಾದ ಜೀವನೂ ಛೇದಾದ್ಯನರ್ಹನಾಗಿದ್ದಾನೆ.

ಇದುವರೆಗೆ '**ಅನಾಶಿನೋಽಪ್ರಮೇಯಸ್ಯ**' (ಶ್ಲೋಕ-18), '**ಅಜೋ ನಿತ್ಯಃ**' (ಶ್ಲೋಕ-20) ಮತ್ತು 'ನಿತ್ಯಃ' ಎಂಬ ಪ್ರಕೃತ ಈ ಶ್ಲೋಕದಲ್ಲಿ ಹೀಗೆ ಅನೇಕ ಕಡೆಗಳಲ್ಲಿ ಜೀವನು ಈಶನ ಪ್ರತಿಬಿಂಬ ಎನ್ನುವ ಮಾತು ಬಂದಿದೆ. ಇದು ಪುನರುಕ್ತಿ ಎಂದು ತಿಳಿಯಬಾರದು. ಏಕೆಂದರೆ, ಸಂದರ್ಭಕ್ಕೆ ಅನುಗುಣವಾಗಿ ಬಂದಿರುವ ಬೇರೆ ಬೇರೆ ಆಕ್ಷೇಪಗಳನ್ನು ಪರಿಹರಿಸುವ ಸಲುವಾಗಿ ಭಗವಂತನಿಗೆ ಬೇರೆ ಬೇರೆ ಗುಣಗಳನ್ನು ಹೇಳಿ ಅಂತಹ ಗುಣಗಳುಳ್ಳ ಈಶನ ಪ್ರತಿಬಿಂಬ ಎಂಬುದನ್ನು ಮತ್ತೆ ಮತ್ತೆ ಹೇಳಲಾಗಿದೆ. ಬೇರೆ ಬೇರೆಗುಣಗಳುಳ್ಳ ಈಶನ ಪ್ರತಿಬಿಂಬತ್ವವನ್ನು ಹೇಳುವುದರಿಂದ ಪರಿಹರಿಸಲ್ಪಡುವ ಪ್ರಶ್ನೆಗಳು ಬೇರೆ ಬೇರೆ. ಆದ್ದರಿಂದ ಪುನರುಕ್ತಿ ದೋಷವಲ್ಲ',

**ನನು ಸಯುಕ್ತಿಕಮಚ್ಛೇದ್ಯತ್ವಾದ್ಯುಕ್ತ್ಯೈವ ನೈಮಿತ್ತಿಕನಾಶಶಂಕಾನಿರಾಸಾತ್ 'ನೈನಮ್' ಇತಿ ವ್ಯರ್ಥಮಿತಿ ಚೇತ್, [1]'ಪ್ರವೃತ್ತೇ ಶಸ್ತ್ರಸಂಪಾತೇ' ಇತ್ಯುಕ್ತೇಃ ಪ್ರಸಕ್ತೌ ಸತ್ಯಾಮಪಿ ವರ್ತಮಾನಸ್ಯ ಛೇದಾದೇರದೃಷ್ಟೇರಾತ್ಮನಃ ಛೇದಾ-ದ್ಯಯೋಗ್ಯತ್ವಂ ಯುಕ್ತಮಿತಿ ಪ್ರದರ್ಶನಾರ್ಥತ್ವಾತ್ ।**

**ಅನುವಾದ–** ಈ ಶ್ಲೋಕದಲ್ಲಿ 'ಈಶ್ವರನ ಪ್ರತಿಬಿಂಬನಾದುದರಿಂದ ಜೀವನಿಗೆ ಛೇದ-ಯೋಗ್ಯತೆಯೇ ಇಲ್ಲ' ಎಂದು ಯುಕ್ತಿ ಯುಕ್ತವಾಗಿ ಸಿದ್ಧಪಡಿಸಿರುವಾಗ ಹಿಂದಿನ '**ನೈನಂ ಛಿಂದಂತಿ**' ಎಂಬ ಶ್ಲೋಕದಲ್ಲಿ ವರ್ತಮಾನಕಾಲದಲ್ಲಿ ಶಸ್ತ್ರಾದಿ ನಿಮಿತ್ತಗಳಿಂದ ನಾಶವಿಲ್ಲಎಂದು ಹೇಳಿರುವುದು ಅನಗತ್ಯವಲ್ಲವೆ ? ಇಲ್ಲ, ಪ್ರಕೃತ ಶ್ಲೋಕದಲ್ಲಿ ಛೇದಾಯೋಗ್ಯತ್ವವನ್ನು ಸಾಧಿಸಲು '**ನೈನಂ ಛಿಂದಂತಿ**' ಎಂಬ ಶ್ಲೋಕದಲ್ಲಿ ಹೇಳಿರುವ ವಿಷಯವೂ ಒಂದು ಕಾರಣವಾಗುತ್ತದೆ. ಹೇಗೆಂದರೆ, ಪ್ರಥಮಾಧ್ಯಾಯದಲ್ಲಿ '**ಪ್ರವೃತ್ತೇ ಶಸ್ತ್ರಸಂಪಾತೇ**' ಎಂದಿರುವುದರಿಂದ ಯುದ್ಧದಲ್ಲಿ ಶಸ್ತ್ರದಾಳಿಯು ಕೆಲವೇ ಕ್ಷಣದಲ್ಲಿ ಪ್ರಾರಂಭವಾಗಿರುವುದಾಗಿ ಹೇಳಲ್ಪಟ್ಟಿದೆ. ಅಂತಹ ಸಂದರ್ಭವಿದ್ದರೂ '**ನೈನಂ ಛಿಂದಂತಿ ಶಸ್ತ್ರಾಣಿ**' ಎಂದಿರುವುದರಿಂದ ಜೀವನಿಗೆ ಛೇದ-ಯೋಗ್ಯತೆಯೇ ಇಲ್ಲ, ಎಂದು ನಿರ್ಣಯಿಸಬಹುದಾಗಿದೆ. ಹೀಗೆ ಈ ಶ್ಲೋಕದಲ್ಲಿ ಹೇಳಿರುವ ಅಚ್ಛೇದ್ಯತ್ವಕ್ಕೆ ಹಿಂದಿನ ಶ್ಲೋಕವು ಸಮರ್ಥನೆಯನ್ನು ಕೊಡುವುದರಿಂದ ಅದು ವ್ಯರ್ಥವಲ್ಲ.

**ಯದ್ವಾ ನೈನಮಿತ್ಯಾದಿಶ್ಲೋಕಃ ಈಶ್ವರವಿಷಯಃ । ತಥಾಹಿ, ವೇದಾವಿನಾಶಿನ-ಮಿತ್ಯತ್ರೇಶ್ವರಸ್ಯ ಸ್ವತೋ ನಾಶಾಭಾವೋಕ್ತ್ಯಾ ತನ್ನಿಮಿತ್ತಶೋಕಾಭಾವೇಽಪಿ ಯುದ್ಧಗತಶಸ್ತ್ರಾದಿಕಾರಣವಿಶೇಷೇಣ ಛೇದಾದಿಪ್ರಸಕ್ತೇಃ ತನ್ನಿಮಿತ್ತಶೋಕೋ ಮಮೇತ್ಯತ ಆಹ– ನೈನಮಿತಿ ॥ 'ಯ ಏನಂ ವೇತ್ತಿ' ಇತಿ ಶ್ಲೋಕೇ**

1. 'ನ ' ಇತಿ ಕ್ವಚಿತ್ ನಾಸ್ತಿ

**ಪ್ರಕೃತಮೀಶ್ವರಮ್ । ಶಿಷ್ಟಂ ವ್ಯಕ್ತಮ್ । ಏತೇನ ಈಶ್ವರಸ್ಯ ದೇಹತೋಽಪಿ ಚ್ಛೇದಾದ್ಯಭಾವಾತ್ ಸ್ವಾತಂತ್ರ್ಯಮಿತ್ಯುಕ್ತಂ ಭವತಿ । ಏನಮೇನಮಿತಿ ಪೃಥಕ್ ಪೃಥಗ್ವಚನಂ ಸರ್ವರೂಪಾಣಾಮೇವಂಭಾವಪ್ರದರ್ಶನಾಯ । ಏವಮವ್ಯ-ಕ್ತೋಽಯಮಿತ್ಯತ್ರಾಪಿ ।**

ಅನುವಾದ – ಅಥವಾ, 'ನೈನಂ ಛಿಂದಂತಿ' ಎಂಬ ಶ್ಲೋಕ ಈಶನ ಬಗ್ಗೆ ಹೇಳುತ್ತದೆ. ಅದು ಹೀಗೆ – 'ವೇದಾವಿನಾಶಿನಂ' ಎಂಬ ಶ್ಲೋಕದಲ್ಲಿ (21) ಪರಮಾತ್ಮನಿಗೆ ಸ್ವಾಭಾವಿಕವಾದ ನಾಶ ವಿಲ್ಲ ಎಂದುದರಿಂದ ಆ ಕಾರಣಕ್ಕಾಗಿ ದುಃಖಿಸುವ ಅಗತ್ಯವಿಲ್ಲವಾದರೂ ಯುದ್ಧದಲ್ಲಿ ಶಸ್ತ್ರಾದಿ ಗಳಿಂದ ಈಶನಿಗೂ (ಕೃಷ್ಣನಿಗೂ) ಗಾಯಗಳಾಗುವ ಸಂದರ್ಭವಿರುವುದರಿಂದ ದುಃಖ ವಾಗುತ್ತದೆ ಎನ್ನುವ ಅರ್ಜುನನ ಪ್ರಶ್ನೆಗೆ 'ನೈನಂ ಛಿಂದಂತಿ' ಎಂಬ ಶ್ಲೋಕ ಉತ್ತರ ಹೇಳುತ್ತದೆ. 'ಯ ಏನಂ ವೇತ್ತಿ ಹಂತಾರಂ' ಎಂಬ ಶ್ಲೋಕವನ್ನು (19) ಗೀತಾ ತಾತ್ಪರ್ಯದಲ್ಲಿ ಈಶಪರವಾಗಿ ವ್ಯಾಖ್ಯಾನಿಸಲಾಗಿದೆ. ಆ ಶ್ಲೋಕದಲ್ಲಿ 'ಏನಂ' ಎಂದರೆ ಪರಮಾತ್ಮನನ್ನು ಎಂದು ಅರ್ಥ. ಪರಮಾತ್ಮನೂ ಜೀವನ ಹತ್ಯೆಯನ್ನು ಮಾಡಲಾರ ಎಂಬ ಭಾವ. ಆ ಶ್ಲೋಕದಲ್ಲಿ 'ಏನಂ' ಎಂಬ ಶಬ್ದದಿಂದ ಪ್ರಸ್ತುತನಾದ ಪರಮಾತ್ಮನನ್ನೇ ಈ ಶ್ಲೋಕದಲ್ಲಿ 'ಅಯಂ' ಎಂದು ಉಲ್ಲೇಖಿಸಲಾಗಿದೆ. ಈ ಈಶನು 'ಅಚ್ಛೇದ್ಯನಾಗಿದ್ದಾನೆ', ಎಂದರ್ಥ. ಮುಂದೆ ಈ ಶ್ಲೋಕದ ಅರ್ಥಸ್ಪಷ್ಟ. ಇದರಿಂದ ಪರಮಾತ್ಮನ ದೇಹಕ್ಕೂ ಛೇದ – ಭೇದಾದಿಗಳಿಲ್ಲ ಎನ್ನುವ ಮೂಲಕ ಅವನು ಸ್ವತಂತ್ರ ಚೇತನ ಎನ್ನುವುದಕ್ಕೆ ಸಮರ್ಥನೆಯನ್ನು ಕೊಡಲಾಗಿದೆ. ಶ್ಲೋಕದಲ್ಲಿ ಏನಂ, ಏನಂ ಎಂದು ಮತ್ತೆ ಮತ್ತೆ ಹೇಳುವ ಮೂಲಕ ಪರಮಾತ್ಮನ ಪ್ರತಿಯೊಂದು ರೂಪವೂ ಹೀಗೆಯೇ ಎಂದು ತಿಳಿಸಲಾಗಿದೆ. 'ಅವ್ಯಕ್ತೋಽಯಂ' ಎಂಬ ಮುಂದಿನ ಶ್ಲೋಕದಲ್ಲೂ ಅಯಂ ಶಬ್ದವನ್ನು ಮತ್ತೆ ಮತ್ತೆ ಹೇಳಲು ಇದೇ ಕಾರಣ.

**ನನು ಜೀವಸ್ಯ ಸ್ವತೋ ನಾಶಾಭಾವೇಽಪಿ ಯುದ್ಧಗತಶಸ್ತ್ರಾದಿಕರಣವಿಶೇಷೇಣ ಛೇದಾದಿಃ ಸ್ಯಾದಿತ್ಯತ ಆಹ – ಅಚ್ಛೇದ್ಯೋಽಯಮಿತಿ ॥ ಅಯಂ= ಜೀವಃ । ನನು ಜೀವಸ್ಯಾಪಿ ಈಶ್ವರವದಚ್ಛೇದ್ಯತ್ವಾದಿ ಸತ್ವೇ ಸರ್ವಸಾಮ್ಯಂ ಸ್ಯಾತ್ । ತಥಾ ಚ ಕಿಂ ತತ್ಪೂಜಯೇತ್ಯತೋ ಜೀವಸ್ಯ ನಿತ್ಯಮೀಶಾಧೀನತಾಮಾಹ– ನಿತ್ಯ ಇತಿ ॥ ಸರ್ವಗತಸ್ಥಾಣುರಿತ್ಯೇಕಂ ಪದಮ್ । ನಿತ್ಯ ಇತಿ ಯೋಗ್ಯತಯಾ ಸ್ಥಿತಿರೂಪ-ಕ್ರಿಯಾವಿಶೇಷಣಮ್ । 'ಕ್ರಿಯಾವ್ಯಯವಿಶೇಷಣಾನಾಂ ಚ ನಪುಂಸಕತ್ವಮೇಕ-ವಚನಾಂತತ್ವಂ ಚ ವಾಚ್ಯಮ್' ಇತ್ಯೇತನ್ನಾಶ್ರಿತಮ್ ।**

**ಅನುವಾದ**– ಈ ಶ್ಲೋಕವನ್ನು ಹೀಗೂ ವ್ಯಾಖ್ಯಾನಿಸಬಹುದು– ಜೀವನಿಗೆ ಸ್ವಾಭಾವಿಕವಾಗಿ ನಾಶವಿಲ್ಲದಿದ್ದರೂ ಯುದ್ಧದಲ್ಲಿ ನಡೆಯುವ ಶಸ್ತ್ರಾಘಾತದಿಂದ ಅವನಿಗೆ ನಾಶವಾಗಬಹುದು ಎಂಬ ಸಂಶಯವನ್ನು, '**ಅಚ್ಛೇದ್ಯೋಽಯಂ**' ಎಂಬ ಶ್ಲೋಕದಲ್ಲಿ ನಿರಾಕರಿಸಲಾಗಿದೆ. **ಅಯಂ** = ಜೀವಾತ್ಮ.

ಪ್ರಶ್ನೆ – ಜೀವನೂ ಈಶನಂತೆಯೇ ಅಚ್ಛೇದ್ಯನಾದರೆ ಅವರಿಬ್ಬರಲ್ಲಿ ವ್ಯತ್ಯಾಸವೇ ಇಲ್ಲ. ಹೀಗಿರುವಾಗ ಅವನ ಆರಾಧನೆಗಾಗಿ ಸ್ವಕರ್ತವ್ಯವನ್ನೇಕೆ ಮಾಡಬೇಕು ? ಅದಕ್ಕುತ್ತರ– '**ಸರ್ವಗತಸ್ಥಾಣುಃ**' ಎಂಬ ಪದ. ಇದು ಹಿಂದಿನ ವ್ಯಾಖ್ಯಾನದಂತೆ ಎರಡು ಪದಗಳಲ್ಲ. ಅಖಂಡವಾದ ಒಂದೇ ಪದ. ನಿತ್ಯ ಎಂಬ ಪದವು '**ಸರ್ವಗತಸ್ಥ**' ಎಂಬ ಪದದಲ್ಲಿರುವ '**ಸ್ಥ**' ಪದದ ಅರ್ಥವಾದ ಸ್ಥಿತಿರೂಪಕ್ರಿಯೆಗೆ ವಿಶೇಷಣ. ಸದಾಕಾಲವೂ ಸರ್ವಗತನಾದ ಈಶನ ಅಧೀನದಲ್ಲಿ ಜೀವನು ಇದ್ದಾನೆ ಎಂದು ಭಾವ . 'ಕ್ರಿಯಾ ವಿಶೇಷಣವಾದ ಪದಗಳು ಸದಾ ನಪುಂಸಕಲಿಂಗ ಏಕವಚನದಲ್ಲೇ ಇರಬೇಕು' ಎಂಬ ನಿಯಮವನ್ನು ಇಲ್ಲಿ ಅನುಸರಿಸಲಾಗಿಲ್ಲ. ಆದ್ದರಿಂದ 'ನಿತ್ಯಃ' ಎಂಬ ಶಬ್ದವು 'ಸ್ಥ' ಎಂಬ ಕ್ರಿಯೆಗೆ ವಿಶೇಷಣವಾದರೂ ಪುಲ್ಲಿಂಗದಲ್ಲೇ ಇದೆ.

**ಅಯಂ= ಜೀವಃ । ನಿತ್ಯಃ - ನಿತ್ಯಂ ಸರ್ವಗತೇ ಹರೌ ತಿಷ್ಠತೀತಿ, ನಿತ್ಯಃ ಸರ್ವಗತಸ್ಥಃ । ತದಧೀನತಯಾ ಸದಾ ಸ್ಥಿತ ಇತಿ ಯಾವತ್ । ಸ ಚಾಸಾವಣುಶ್ಚ ಸರ್ವಗತಸ್ಥಾಣುರಿತ್ಯರ್ಥಃ । ಈಶಜೀವಯೋಃ ಸರ್ವಗತತ್ವಾಣುತ್ವರೂಪ-ವೈಷಮ್ಯಾನ್ನ ಸರ್ವಸಾಮ್ಯಮಿತಿ ಭಾವೇನ ಸರ್ವಗತೇತಿ ಅಣುರಿತಿ ಚೋಕ್ತಮ್ ।**

**ಅನುವಾದ – ಅಯಂ** = ಜೀವಾತ್ಮನು , ಸರ್ವತ್ರ ವ್ಯಾಪ್ತನಾದ ಪರಮಾತ್ಮನಲ್ಲಿ ಸರ್ವದಾ ಇದ್ದಾನೆ (ಸ್ಥಃ). ಅರ್ಥಾತ್ ಈಶಾಧೀನನಾಗಿ ಸರ್ವದಾ ಇದ್ದಾನೆ ಎಂದರ್ಥ. ಅವನು ಅಣುಸ್ವರೂಪನೂ ಆಗಿದ್ದಾನೆ. (ಸರ್ವಗತಸ್ಥ + ಅಣು) ಈಶನು ಎಲ್ಲೆಡೆಯೂ ಇದ್ದಾನೆ ; ಜೀವನು ಅಣು. ಹೀಗೆ ಅವರಿಬ್ಬರಲ್ಲಿ ಬಹಳಷ್ಟು ಅಂತರವಿದೆ , ಸಾಮ್ಯವಿಲ್ಲ. ಇದರ ಸೂಚನೆಗಾಗಿಯೇ ಈಶನನ್ನು ಸರ್ವಗತನೆಂದು ಹೇಳಿ ಜೀವನನ್ನು 'ಅಣು' ಎಂದು ಹೇಳಲಾಗಿದೆ.

**ನನು ಜೀವಸ್ಯೇಶಾಧೀನತ್ವಂ ಯದಾ ನ ಸ್ಯಾತ್ತದಾ ಸ್ಯಾತ್ಸರ್ವಸಾಮ್ಯಮ್ । ತಥಾ ಚ ನ ತತ್ಪೂಜಾ ಕಾರ್ಯೇತ್ಯತ ಆಹ – ಅಚಲ ಇತಿ ॥ ಸರ್ವಗತಸ್ಥ-ಪದಂ ಬುದ್ಧಿವಿವಿಕ್ತಮಾಕೃಷ್ಯತೇ ಭಾವಪ್ರಧಾನಮ್ । ಸರ್ವಗತಸ್ಥತ್ವಾನ್ನ ಕದಾಚಿಚ್ಚಲತೀತ್ಯಚಲಃ । ನಿತ್ಯಃ ಸರ್ವಗತಸ್ಥ ಇತ್ಯುಕ್ತ್ಯೈವಾಸ್ಯಾರ್ಥಸ್ಯ ಲಾಭೇಽಪಿ ಕೇನಚಿದ್ವರಾದಿನಿಮಿತ್ತೇನಾಪಿ ನ ತದಧೀನತ್ವಸ್ಯ ನಾಶ ಇತಿ ನೈಮಿತ್ತಿಕ-**

**ನಾಶಾಭಾವೋಕ್ತ್ಯರ್ಥಮಚಲ ಇತ್ಯುಕ್ತಿಃ । ಕುತಃ ಸದಾ ಹರ್ಯಧೀನತ್ವಂ ಜೀವಸ್ಯೇತ್ಯತ ಆಹ – ಸನಾತನ ಇತಿ ॥ ನಾದೇನ= ವಿಧಿನಿಷೇಧರೂಪಶಬ್ದೇನ ಸಹ ವರ್ತತ ಇತಿ ಸನಾದಃ । ಸನಾದ ಏವ ಸನಾತನಃ । ದಶಬ್ದಸ್ಯ ಛಾಂದಸಸ್ತನಾದೇಶಃ । ವಿಧಿನಿಷೇಧಬದ್ಧತ್ವಾತ್ ಸದಾ ತದಧೀನ ಇತಿ ಭಾವಃ । ತದುಕ್ತಂ ವಿಷ್ಣುಪುರಾಣೇ ।**

**'ನಿತ್ಯಂ ಸರ್ವಗತೇ ವಿಷ್ಣಾವಣುರ್ಜೀವೋ ವ್ಯವಸ್ಥಿತಃ' ಇತ್ಯಾದಿ ॥ 24 ॥**

**ಅನುವಾದ–** ಜೀವನು ಈಗ ಈಶಾಧೀನನಾಗಿದ್ದಾನೆ. ಮುಂದೊಮ್ಮೆ ಅವನಲ್ಲಿ ಈಶಾಧೀನತ್ವವು ಇಲ್ಲದಾದಾಗ ಈಶನಿಗೂ ಜೀವನಿಗೂ ಸಾಮ್ಯವಿದೆ. ಆಗ ತನ್ನಂತೆಯೇ ಆಗಿರುವ ಪರಮಾತ್ಮನನ್ನು ಜೀವನು ಏಕೆ ಆರಾಧಿಸಬೇಕು ? ಅದಕ್ಕೆ ಉತ್ತರ '**ಅಚಲಃ**' ಎಂಬ ಪದ. '**ಸರ್ವಗತಸ್ಥಾಣುಃ**' ಎಂಬ ಸಮಸ್ತಪದದಲ್ಲಿರುವ 'ಸರ್ವಗತಸ್ಥ' ಎಂಬ ಪದವನ್ನು ಬೌದ್ಧಿಕವಾಗಿ ಪ್ರತ್ಯೇಕಗೊಳಿಸಿ 'ಅಚಲ' ಪದದೊಂದಿಗೆ ಅನ್ವಯಿಸಿಕೊಳ್ಳಬೇಕು . ಸರ್ವಗತಸ್ಥ ಎಂಬ ಪದವನ್ನು ಭಾವ ಪ್ರಧಾನವನ್ನಾಗಿಯೂ ಪರಿಗಣಿಸಬೇಕು. ಆಗ ಜೀವನು ಈಶಾಧೀನತ್ವಧರ್ಮದಿಂದ ಎಂದೂ ದೂರಕ್ಕೆ ಚಲಿಸುವುದಿಲ್ಲವಾದ್ದರಿಂದ ಜೀವನು 'ಅಚಲ' ಎಂದು ಹೇಳಿದಂತಾಗುತ್ತದೆ. ಆ ಗುಣವು ಎಂದೂ ಜೀವನಲ್ಲಿ ಇಲ್ಲದಾಗುವುದಿಲ್ಲ ಎಂದರ್ಥ. ಈ ಅರ್ಥವು 'ನಿತ್ಯಸರ್ವಗತಸ್ಥ' ಎಂಬ ವಿಶೇಷಣದಿಂದಲೇ ಲಭ್ಯವಾಗುತ್ತದೆ. ಆದರೂ ಜೀವನು ಮಹಾತ್ಮರ ವರವಿಶೇಷದಿಂದ ಒಂದೊಮ್ಮೆ ಈಶಾಧೀನತ್ವವನ್ನು ಕಳೆದುಕೊಂಡು ಈಶನಂತೆಯೇ ಸ್ವತಂತ್ರ ನಾಗಬಹುದು ಎಂಬ ಸಂದೇಹವನ್ನು ಅಚಲ ಎಂಬ ಪದದಿಂದ ಪರಿಹರಿಸಲಾಗಿದೆ.

ಜೀವನು ಸದಾ ಈಶಾಧೀನ ಏಕೆ ? ಈ ಪ್ರಶ್ನೆಗೆ '**ಸನಾತನಃ**' ಎಂಬ ಪದವು ಉತ್ತರವಾಗಿದೆ. '**ನಾದೇನ ಸಹ ವರ್ತತೇ**' ಎಂದು ಸನಾತನ ಶಬ್ದದ ನಿರುಕ್ತಿ. ನಾದ ಎಂದರೆ ವಿಧಿ – ನಿಷೇಧರೂಪವಾದ ವೇದ. ಜೀವನು ವೇದೋಕ್ತವಾದ ವಿಧಿ – ನಿಷೇಧಗಳಿಂದ ಬದ್ಧನಾಗಿರುತ್ತಾನೆ. ಆದ್ದರಿಂದ ಅವನು ಸದಾ ಈಶಾಧೀನ ಎಂದು ಅರ್ಥ.

'**ನಾದೇನ ಸಹ ವರ್ತತೇ**' ಎಂದು ಅರ್ಥವಾದಾಗ '**ಸನಾದಃ**' ಎಂದಾಗಬೇಕು. ದಕಾರಕ್ಕೆ ಛಾಂದಸವ್ಯಾಕರಣರೀತ್ಯಾ '**ತನ**' ಎಂಬ ಆದೇಶ ಬಂದು '**ಸನಾತನ** ' ಎಂದಾಗಿದೆ.

'**ನಿತ್ಯಃ ಸರ್ವಗತಸ್ಥಾಣುಃ**' ಎಂಬ ಶಬ್ದಕ್ಕೆ ಶ್ರೀಮಧ್ವಾಚಾರ್ಯರು ಕೊಟ್ಟ ವಿವರಣೆಯು ವಿಷ್ಣುಪುರಾಣಕ್ಕೆ ಸಮ್ಮತವಾಗಿದೆ – '**ನಿತ್ಯಂ ಸರ್ವಗತೇ ವಿಷ್ಣೌ ಅಣುರ್ಜೀವೋ ವ್ಯವಸ್ಥಿತಃ**' 'ಅಣುವಾದ ಜೀವನು ವ್ಯಾಪ್ತನಾದ ಪರಮಾತ್ಮನ ಅಧೀನದಲ್ಲಿ ಸದಾ ಇರುತ್ತಾನೆ.' ॥ 24 ॥

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ।**
**ತಸ್ಮಾದೇನಂ ವಿದಿತ್ವೈವಂ ನಾನುಶೋಚಿತುಮರ್ಹಸಿ ॥ 25 ॥**

**ಅರ್ಥ** – 'ಆ ಶ್ರೀಹರಿಯು ಯಾವ ಇಂದ್ರಿಯಗಳಿಗೂ ಗೋಚರನಲ್ಲ. ದೇಹವಿದ್ದು ಎಲ್ಲೆಡೆ ಇದ್ದರೂ ಕಾಣಿಸಿಕೊಳ್ಳದ ಅಚಿಂತ್ಯ ಶಕ್ತಿ ಅವನಿಗಿದೆ. ಅವನಿಗೆ ಯಾವುದೇ ವಿಧವಾದ ವಿಕಾರಗಳೂ ಇಲ್ಲ. ಹೀಗೆ ಭಗವಂತನ ಮಹಿಮೆಯನ್ನು ತಿಳಿದು ಅವನ ಆರಾಧನಾರೂಪವಾಗಿ ನಿನ್ನ ಕರ್ತವ್ಯವನ್ನು ನಿರ್ವಹಿಸಿ ದುಃಖವನ್ನು ಕಳೆದುಕೊ.'

**ನನ್ವಣೋರ್ಜೀವಸ್ಯಾಧಾರಃ ಪರಮಾತ್ಮಾ ಸರ್ವಗತಶ್ಚೇತ್ ಕುತಸ್ತಥಾ ನ ದೃಶ್ಯತ ? ಇತ್ಯತ ಆಹ – ಅವ್ಯಕ್ತೋಽಯಮಿತಿ ॥ ಅಯಂ = ಸರ್ವಗತಪದೇನ ಪ್ರಕೃತೋ ಹರಿಃ । ನನು ನೈನಮಿತಿ ಶ್ಲೋಕೇ ದೇಹತೋಽಪಿ ಭೇದಾದ್ಯಭಾವಾತ್ ಸ್ವತಂತ್ರೋ ಹರಿರಿತ್ಯುಕ್ತಮ್ । ದೇಹವಾನ್ ಸರ್ವಗತಶ್ಚೇತ್ ಕಥಮವ್ಯಕ್ತಃ? ಇತ್ಯತಃ– ಅಚಿಂತ್ಯೋಽಯಮಿತಿ ॥ ಅಚಿಂತ್ಯಶಕ್ತಿಕ ಇತ್ಯರ್ಥಃ । ಏತೇನ ಹರೇ-ರವ್ಯಕ್ತತ್ವೇ ತದ್ದರ್ಶನಶ್ರುತ್ಯಪ್ರಾಮಾಣ್ಯಮಿತಿ ನಿರಸ್ತಮ್ । ತದಾಹ ಸೂತ್ರೇ । ಓಂ ಅತೋಽನಂತೇನ ತಥಾ ಹಿ ಲಿಂಗಮ್ ಓಂ (3-2-27) ಇತಿ ।**

**ಅನುವಾದ** – ಅಣುವಾದ ಜೀವನಿಗೆ ಈಶನು ಆಧಾರನಾಗಿ ಸರ್ವತ್ರ ಇದ್ದಾನೆಂದಾದರೆ ಏಕೆ ಕಣ್ಣಿಗೆ ಕಾಣುತ್ತಿಲ್ಲ ? ಇದಕ್ಕೆ ಉತ್ತರ – '**ಅವ್ಯಕ್ತೋಽಯಂ**' ಎಂಬ ಶ್ಲೋಕ.

**ಅಯಂ** = ಹಿಂದಿನ ಶ್ಲೋಕದಲ್ಲಿ '**ಸರ್ವಗತ** ' ಎಂಬ ಪದದಿಂದ ಪ್ರಸ್ತುತನಾದ ಪರಮಾತ್ಮನು.

'**ನೈನಂ ಛಿಂದಂತಿ**' ಎಂಬ ಹಿಂದಿನ ಶ್ಲೋಕದಲ್ಲಿ ದೇಹಕ್ಕೂ ಭೇದಾದಿಗಳಿಲ್ಲವಾದುದರಿಂದ ಶ್ರೀಹರಿಯು ಸ್ವತಂತ್ರನಾಗಿದ್ದಾನೆ ಎಂದು ಹೇಳಲಾಗಿದೆ. ಇದರಿಂದ ಅವನಿಗೆ ದೇಹವಿದೆ ಎಂದಂತಾಯಿತು. ಸರ್ವಗತನಿಗೆ ದೇಹವಿದ್ದ ಮೇಲೆ ಅವನು ಕಾಣಿಸಿಕೊಳ್ಳಲೇಬೇಕು. ಅವ್ಯಕ್ತನಾಗುವುದು ಹೇಗೆ ? ಅದಕ್ಕುತ್ತರ – '**ಅಚಿಂತ್ಯೋಽಯಂ**' ಎಂಬ ಪದ. ಅವನಿಗೆ ಅದ್ಭುತ ಶಕ್ತಿ ಇದೆ ಎಂದರ್ಥ. ದೇಹವಿದ್ದರೂ ಕಾಣಿಸಿಕೊಳ್ಳದ ಅಚಿಂತ್ಯಶಕ್ತಿ ಅವನಿಗಿದೆ. ಅವ್ಯಕ್ತನಾದರೂ ಪರಮಾತ್ಮನು ಭಕ್ತರ ಮೇಲಿನ ಕಾರುಣ್ಯದಿಂದಾಗಿ ತನ್ನ ಅಚಿಂತ್ಯ ಶಕ್ತಿಯಿಂದ ಕಾಣಿಸಿಕೊಳ್ಳುವನಾದುದರಿಂದಲೇ ಭಗವದ್ದರ್ಶನವನ್ನು ಹೇಳುವ ವೇದವಾಕ್ಯಗಳು ತಪ್ಪಲ್ಲ. ಬ್ರಹ್ಮಸೂತ್ರವೂ ಇದನ್ನೇ ಹೇಳುತ್ತದೆ– **ಅತಃ** = 'ಪರಮಾತ್ಮನು ವ್ಯಕ್ತರೂಪ– ಅವ್ಯಕ್ತರೂಪ ' ಎಂದು

ಎರಡೂ ರೀತಿಯಿಂದ ಹೇಳುವ ಶ್ರುತಿಗಳಿರುವುದರಿಂದಾಗಿ ಅನಂತೇನ = 'ಈಶಪ್ರಸಾದದಿಂದ ವ್ಯಕ್ತ' 'ಜೀವ ಪ್ರಯತ್ನದಿಂದ ಅವ್ಯಕ್ತ' ಎಂದು ತಿಳಿಯಬೇಕು . ಇದು ಸೂತ್ರಾರ್ಥಸಂಕ್ಷೇಪ .

**ಅಚಿಂತ್ಯಶಕ್ತೇಃ ಪ್ರತಿಬಂಧೇ, ನಾಶೇ ವಾ, ತಸ್ಯ ಪ್ರತೀತಿಪ್ರಸಂಗಃ, ಇತ್ಯತ ಉಕ್ತಮ್– ಅವಿಕಾರ್ಯೋಽಯಮಿತಿ ।। ಸಾ ಶಕ್ತಿರ್ನ ಕದಾಽಪ್ಯನ್ಯಥಾ ಭವತೀತ್ಯರ್ಥಃ । ಕುತ ಏತದಚ್ಛೇದ್ಯದೇಹತ್ವಾದೀತ್ಯತ ಉಕ್ತಮ್– ಉಚ್ಯತ ಇತಿ ।। 'ಸದ್ದೇಹಃ ಸುಖಗಂಧಶ್ಚ' ಇತ್ಯಾದಿ ತಾತ್ಪರ್ಯೋದಾಹೃತಶ್ರುತಿಷು ಏತತ್ಸರ್ವಂ ಹರೇರುಚ್ಯತ ಇತ್ಯರ್ಥಃ । ಅಯಮಿತಿ ಪೃಥಗ್ವಚನಂ ಸರ್ವರೂಪಾಣಾಮೇವಂಭಾವಪ್ರದರ್ಶನಾರ್ಥಮ್ । ತೇನಾಯಮಯಮವ್ಯಕ್ತಃ, ಅಯಮಯಮಚಿಂತ್ಯೋ, ಅಯಮಯಮವಿಕಾರ್ಯೋ, ಇತೀದಂಶಬ್ದೋ ವೀಪ್ಸಾರೂಪೇಣಾನೇಕರೂಪಪರಾಮರ್ಶೀತಿ ಸೂಚಿತಮ್ ।**

**ಅನುವಾದ**– ಶ್ರೀಹರಿಯ ಅಚಿಂತ್ಯ ಶಕ್ತಿಯು ಪ್ರತಿಬದ್ಧವಾದಾಗ ಅಥವಾ ನಾಶವಾದಾಗ ಅವನು ನಮ್ಮ ಕಣ್ಣಿಗೆ ಕಾಣಿಸಬಹುದಲ್ಲದೇ ? ಎಂಬ ಸಂಶಯವನ್ನೂ 'ಅವಿಕಾರ್ಯೋಽಯಂ' ಪದದಿಂದ ಪರಿಹರಿಸಲಾಗಿದೆ. ಅವನ ಶಕ್ತಿಯು ಎಂದೂ ವ್ಯತ್ಯಯವಾಗುವುದಿಲ್ಲ ಎಂದರ್ಥ. ಭಗವಂತನ ದೇಹಕ್ಕೆ ಛೇದ–ಭೇದಾದಿಗಳಿಲ್ಲ ಎನ್ನಲು ಆಧಾರವನ್ನು ತಿಳಿಸುವ ಕಾರಣದಿಂದ **'ಉಚ್ಯತೇ '** ಎಂಬ ಶಬ್ದವನ್ನು ಪ್ರಯೋಗಿಸಲಾಗಿದೆ. ಆಚಾರ್ಯರು ಭಗವದ್ಗೀತೆಗೆ ಬರೆ **'ತಾತ್ಪರ್ಯ'** ಗ್ರಂಥದಲ್ಲಿ **'ಸದ್ದೇಹಃ' 'ಸುಖಗಂಧಶ್ಚ '** ಮುಂತಾದ ವೇದವಾಕ್ಯಗಳನ್ನು ಉಲ್ಲೇಖಿಸಿರುತ್ತಾರೆ. ಆ ಶ್ರುತಿವಾಕ್ಯಗಳೇ ಶ್ರೀಹರಿಯ ದೇಹವು ವಿಕಾರರಹಿತವಾದುದು ಎಂದ ಹೇಳಲು ಆಧಾರಗಳು, ಎಂದು **'ಉಚ್ಯತೇ'** ಶಬ್ದದ ಭಾವ.

ಈ ಶ್ಲೋಕದಲ್ಲಿ **'ಅಯಂ'** ಎಂಬ ಶಬ್ದವನ್ನು ಪ್ರತಿಯೊಂದು ವಿಶೇಷಣಗಳೊಂದಿಗ ಬಳಸಲಾಗಿದೆ. **ಅಯಂ** ಎಂದರೆ ಇದು ಎಂದರ್ಥ. ಭಗವಂತನ ಈ ರೂಪ ಹೀಗೆ. ಈ ರೂಪವ ಹೀಗೆ ಎಂದು ತಿಳಿಸಿಕೊಡುವುದು ಅದರ ಉದ್ದೇಶ. ಇದರಿಂದ ಭಗವಂತನ ಪ್ರತಿಯೊಂದ ರೂಪವೂ ಇಂತಹ ಗುಣಗಳುಳ್ಳದ್ದು ಎಂದು ತಿಳಿಸಿದಂತಾಗಿದೆ.

**ನೈನಮಿತ್ಯತ್ರಾಪಿ ಪೂರ್ವಶ್ಲೋಕೇ ಏನಮೇನಮಿತಿ ಬಹುಶಬ್ದಯೋಗೇನ ಬಹುರೂಪಪರಾಮರ್ಶ ಇತ್ಯುಕ್ತಂ ಭವತಿ । ಅನ್ಯಥಾ ನಞಃ ಏನಮಿತ್ಯಸ್ಯ ಚ ಪುನಃ ಪುನರುಕ್ತಿರಯುಕ್ತಾ ಸ್ಯಾದಿತಿ ಭಾವಃ ।**

**ಅನುವಾದ** – **'ನೈನಂ ಛಿಂದಂತಿ ಶಸ್ತ್ರಾಣಿ'** ಎಂಬ ಶ್ಲೋಕದಲ್ಲಿ **'ಏನಂ'** ಎಂಬ ಶಬ್ದವನ್ನು ಅನೇಕ ಬಾರಿ ಪ್ರಯೋಗಿಸಲಾಗಿದೆ. ಅದರ ಉದ್ದೇಶವೂ, ಭಗವಂತನ ಅನೇಕ ರೂಪಗಳನ್ನು ಉಲ್ಲೇಖಿಸಿ ಅವೆಲ್ಲವೂ ನಾಶವಿಲ್ಲದವುಗಳು ಎಂದು ತಿಳಿಸುವುದೇ ಆಗಿದೆ. ಈ ಉದ್ದೇಶವಿಲ್ಲದಿರುತ್ತಿದ್ದರೆ **'ನೈನಂ ಛಿಂದಂತಿ, ನ ಚೈನಂ ಕ್ಲೇದಯಂತಿ'** ಎಂದು ಮುಂತಾಗಿ ನಿಷೇಧಾರ್ಥಕವಾದ **ನಞ್** ಪದವನ್ನು, **ಏನಂ** ಎಂಬ ಪದವನ್ನೂ ಅನೇಕ ಬಾರಿ ಪ್ರಯೋಗಿಸುವ ಅಗತ್ಯವಿರಲಿಲ್ಲ.

**ಏವಂ ಸರ್ವಶಂಕೋದ್ಧಾರೇಣಾತ್ಮನಿತ್ಯತ್ವಂ ಪ್ರತಿಪಾದ್ಯೋಪಸಂಹರತಿ– ತಸ್ಮಾದಿತಿ ।। ಬಿಂಬೋಪಾಧಿತತ್ಸನ್ನಿಧಿನಾಶನಿಮಿತ್ತಸ್ಯ ಶಾಪಾದಿನಿಮಿತ್ತಸ್ಯ ಶಸ್ತ್ರಾ-ಸ್ತ್ರಾದಿನಿಮಿತ್ತಕಸ್ಯ ಚ ನಾಶಸ್ಯಾಭಾವೇನಾತ್ಮನೋ ನಿತ್ಯತ್ವಾದೇನಂ= ಜೀವಮ್ ಏವಂ= ನಿತ್ಯತ್ವಾದಿನಾ ವಿದಿತ್ವಾ ಶೋಚಿತುಂ ನಾರ್ಹಸೀತಿ ।**

**ಅನುವಾದ** – ಹೀಗೆ ಎಲ್ಲಾ ಸಂಶಯಗಳಿಗೂ ಪರಿಹಾರ ನೀಡಿ ಆತ್ಮನ ನಿತ್ಯತ್ವವನ್ನು ಸಮರ್ಥಿಸಿ ಈ ವಿಷಯವನ್ನು **'ತಸ್ಮಾದೇನಂ'** ಎಂಬ ಉತ್ತರಾರ್ಧದಿಂದ ಉಪಸಂಹಾರ ಮಾಡಲಾಗಿದೆ. ಅದರ ಅಭಿಪ್ರಾಯ– ಜೀವನಿಗೆ ಬಿಂಬನಾದ ಪರಮಾತ್ಮ ಮತ್ತು ಉಪಾಧಿಯಾದ ಸ್ವರೂಪದೇಹ ಹಾಗೂ ಅವೆರಡರ ಸಾನ್ನಿಧ್ಯಕ್ಕೆ ನಾಶವಿಲ್ಲದ ಕಾರಣದಿಂದಲೂ, ಶಾಪಾದಿ ನಿಮಿತ್ತದಿಂದಲೂ , ಶಸ್ತ್ರಾಸ್ತ್ರಗಳಿಂದಲೂ ನಾಶವಿಲ್ಲದಿರುವ ಕಾರಣ ಆತ್ಮನು ನಿತ್ಯನಾದುದರಿಂದ (ತಸ್ಮಾತ್ ಎಂಬ ಗೀತೆಯ ಪದದ ಅರ್ಥ) **ಏನಂ** = ಈ ಜೀವನನ್ನೂ, **ಏವಂ** = ನಾಶವಿಲ್ಲದವನನ್ನಾಗಿ, ತಿಳಿದು ದುಃಖ ಪಡಬೇಡ.

**ಅಥವಾ ಅಸ್ತ್ವೇವಂ ಭಗವಾನೇವ ನಿತ್ಯಃ ಸರ್ವಗತಸ್ಥಾಣುರಿತ್ಯಾದೌ ಉಕ್ತದಿಶಾ ಸ್ವತಂತ್ರಃ, ತತಶ್ಚ ಕಿಮಿತ್ಯತ ಆಹ – ತಸ್ಮಾದಿತಿ ।। ಹರೇರೇವ ಸರ್ವಸ್ವತಂತ್ರತ್ವೇನ ಅಖಿಲದುಃಖನಿವೃತ್ತಿವಿಶಿಷ್ಟಪುಮರ್ಥಪ್ರದತ್ವಾತ್, ಏವಂ= ಯುದ್ಧಾದಿಸ್ವ-ಕರ್ಮಣಾಽವ್ಯಕ್ತತ್ವಾದಿರೂಪೇಣೈನಂ= ಭಗವಂತಂ ಜ್ಞಾತ್ವಾ ಶೋಚಿತುಂ= ಸಂಸಾರದುಃಖಮನುಭವಿತುಂ ನಾರ್ಹಸಿ । ಮುಕ್ತೋ ಭವಿಷ್ಯಸೀತ್ಯರ್ಥಃ । ಅತ ಉಕ್ತರೂಪೇಣ ತಂ ಜ್ಞಾತ್ವಾ ಯುದ್ಧಾದಿಸ್ವಕರ್ಮಣಾ ತಂ ಆರಾಧ್ಯಾಶೇಷದುಃಖಂ ಪರಿಹರೇತಿ ಭಾವಃ ।। 25 ।।**

**ಅನುವಾದ** – ಅಥವಾ, ಹೀಗೂ ಉತ್ತರಾರ್ಧದ ಅಭಿಪ್ರಾಯವನ್ನು ತಿಳಿದುಕೊಳ್ಳಬಹುದು.

ಹಿಂದೆ ಹೇಳಿದಂತೆ ಪರಮಾತ್ಮನು ನಿತ್ಯ, 'ಸರ್ವಗತಸ್ಥಾಣು' ಎಂದು ಹೇಳಿದಂತೆ ಅವನು ಸ್ವತಂತ್ರ ಎಂದು ಒಪ್ಪೋಣ. ಇದರಿಂದ ಪ್ರಕೃತಕ್ಕೇನಾಯಿತು ? ಎಂಬುದನ್ನು 'ತಸ್ಮಾದೇನಂ' ಎಂಬ ಉತ್ತರಾರ್ಧವು ತಿಳಿಸುತ್ತದೆ. ಅದರ ಭಾವ – ಶ್ರೀಹರಿಯೇ ಸರ್ವತಂತ್ರಸ್ವತಂತ್ರನಾಗಿರುತ್ತಾನೆ. ಆದ್ದರಿಂದ ಅವನೇ ಅಖಿಲದುಃಖನಿವೃತ್ತಿಸಹಿತವಾದ ಪೂರ್ಣಸುಖ- ರೂಪವಾದ ಮೋಕ್ಷಾಖ್ಯ ಪುರುಷಾರ್ಥವನ್ನು ಕೊಡುವವನು. ಆದ್ದರಿಂದ, ಏವಂ = ಯುದ್ಧಾದಿ ಸ್ವವಿಹಿತ ಕರ್ಮವನ್ನು ಮಾಡಿ ಪರಮಾತ್ಮನನ್ನು ಅವ್ಯಕ್ತ, ಅಚಿಂತ್ಯ, ಅವಿಕಾರ್ಯ ಎಂದು ಮುಂತಾಗಿ ತಿಳಿದು, **ಶೋಚಿತುಂ**= ಸಂಸಾರ ದುಃಖವನ್ನು ಅನುಭವಿಸಲು ಅನರ್ಹನಾಗುವಿ, ಅರ್ಥಾತ್ ಮುಕ್ತನಾಗುವಿ. ಒಟ್ಟಿನಲ್ಲಿ ಹಿಂದೆ ಹೇಳಿದಂತೆ ಪರಮಾತ್ಮನನ್ನು ತಿಳಿದು ಯುದ್ಧಾದಿ ಸ್ವಕರ್ಮದಿಂದ ಅವನನ್ನು ತುಷ್ಟಿಗೊಳಿಸಿ ಸಕಲ ದುಃಖಗಳನ್ನೂ ಪರಿಹರಿಸಿಕೊಳ್ಳು ಎಂದು ಶ್ರೀಕೃಷ್ಣನ ಅಭಿಪ್ರಾಯ ॥ 25 ॥

**ಹುಟ್ಟು-ಸಾವುಗಳು ಅಪರಿಹಾರ್ಯ, ಶೋಕ ತರವಲ್ಲ .**

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।**
**ತಥಾಪಿ ತ್ವಂ ಮಹಾಬಾಹೋ ನೈನಂ ಶೋಚಿತುಮರ್ಹಸಿ ॥ 26 ॥**

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥ 27 ॥**

**ಅರ್ಥ** - ಜೀವನ ಸ್ವರೂಪಕ್ಕೆ ನಾಶವಿಲ್ಲ. ಆದರೂ ಅವನಿಗೆ ದೇಹದ ಸಂಪರ್ಕವೇ ಹುಟ್ಟು ದೇಹ ಸಂಬಂಧನಾಶವೇ ಸಾವು. ಇಂತಹ ಹುಟ್ಟುಸಾವುಗಳು ಅವನಿಗೆ ಇವೆ ಎಂದೇ ತಿಳಿದಿರುವೆಯಾದರೂ ಅದಕ್ಕಾಗಿ ನೀನು ದುಃಖಪಡುವ ಆವಶ್ಯಕತೆ ಇಲ್ಲ ॥ 26 ॥

ಹುಟ್ಟಿದವನು ಸಾಯಲೇಬೇಕು, ಸತ್ತವನು ಹುಟ್ಟಲೇ ಬೇಕು. ಹೀಗೆ ಈ ಹುಟ್ಟುಸಾವುಗಳು ಅಪರಿಹಾರ್ಯವಾದುದರಿಂದ ಅದಕ್ಕಾಗಿ ದುಃಖಪಡಬೇಕಾಗಿಲ್ಲ. ॥ 27 ॥

**ಅಸ್ತ್ವೇವಮ್ ಆತ್ಮನೋ ನಿತ್ಯತ್ವಮ್, ಅಥಾಽಪಿ ದೇಹಯೋಗವಿಯೋಗ-ರೂಪಜನ್ಮಮೃತೀ ಸ್ತ ಏವ । ಯುದ್ಧೇ ಚ ಮೃತಿರ್ನಿಯತಾ । ಅತಃ ತನ್ನಿಮಿತ್ತಂ ಚ ದುಃಖಂ ಮದೀಯಾನಾಂ ಭವಿಷ್ಯತೀತಿ ಮೇ ಶೋಕ ಇತ್ಯತ ಆಹ– ಅಥ ಚೇತಿ ।**

**ಅನುವಾದ** – ಆತ್ಮನು ನಿತ್ಯನೇ ಆಗಿರಲಿ. ಆದರೂ ಅವನಿಗೆ ಹೊಸದೇಹದ ಸಂಬಂಧವೇ ಹುಟ್ಟು , ಅದರ ನಾಶವೇ ಸಾವು. ಇಂತಹ ಹುಟ್ಟು ಸಾವುಗಳಂತೂ ಇದ್ದೇ ಇವೆ.

ಯುದ್ಧದಲ್ಲಂತೂ ಈ ರೀತಿಯ ಸಾವು ನಿಶ್ಚಯ . ಇದರಿಂದ ನನ್ನವರಿಗೆ ದುಃಖವಾಗುತ್ತದೆ, ಎನ್ನುವ ಕಾರಣಕ್ಕಾಗಿ ನನಗೆ ವ್ಯಥೆಯಾಗುತ್ತದೆ ಎಂಬ ಆಕ್ಷೇಪಕ್ಕೆ '**ಅಥ ಚೈನಂ**' ಎಂಬ ಶ್ಲೋಕವು ಉತ್ತರ ಕೊಡುತ್ತದೆ.

**ನಿತ್ಯಶಬ್ದೋಽತ್ರಾವಧಾರಣೇ । ಏನಂ= ಜೀವಂ, ನಿತ್ಯಜಾತಂ= ದೇಹ-ಯೋಗರೂಪಜನಿಮಂತಮೇವ, ನಿತ್ಯಂ ಮೃತಂ= ದೇಹವಿಯೋಗರೂಪ-ಮೃತಿಮಂತಮೇವ, ತ್ವಂ ಮನ್ಯಸೇ ಚೇತ್ತಥಾಽಪಿ ಹೇ ಮಹಾಬಾಹೋ, ಏನಂ = ಜೀವಂ, ಶೋಚಿತುಂ ನಾರ್ಹಸೀತ್ಯರ್ಥಃ ॥ 26 ॥**

**ಅನುವಾದ** – ಗೀತೆಯಲ್ಲಿರುವ ನಿತ್ಯ ಶಬ್ದಕ್ಕೆ 'ನಿಯತ-ಅನಿವಾರ್ಯ' ಎಂದು ಅರ್ಥ. ಆಗ ಗೀತೆಯ ಅರ್ಥ– **ಏನಂ** = ಜೀವನನ್ನು , **ನಿತ್ಯಜಾತಂ** = ದೇಹಸಂಪರ್ಕರೂಪವಾದ ಹುಟ್ಟು ಅನಿವಾರ್ಯವಾಗಿರುವವನನ್ನಾಗಿಯೂ, **ನಿತ್ಯಂ ಮೃತಂ**= ದೇಹವಿಯೋಗರೂಪವಾದ ಮರಣವೂ ಇದ್ದೇ ಇರುವವನನ್ನಾಗಿಯೂ, ನೀನು (ಅರ್ಜುನ) ತಿಳಿಯುವುದಾದಲ್ಲೂ, ಎಲೈ ಬಾಹುಶಾಲಿ ಅರ್ಜುನನೇ, **ಏನಂ** = ಈ ಜೀವನ ಬಗ್ಗೆ ನೀನು ದುಃಖಪಡುವ ಅಗತ್ಯ ಇಲ್ಲ. ॥ 26 ॥

**ಪೂರ್ವಾರ್ಧೇನ ಅರ್ಜುನಶಂಕಾಮ್ ಅನೂದ್ಯ ಉತ್ತರಾರ್ಧೇನ ತಥಾಽಪಿ ತ್ವಂ ನ ಶೋಚಿತುಮ್ ಅರ್ಹಸೀತ್ಯೇವೋಕ್ತಮ್ । ನ ತು ತತ್ರ ಹೇತುರುಕ್ತಃ । ಅತಃ ಶೋಕಾಭಾವೇ ಹೇತ್ವಾಕಾಂಕ್ಷಾಯಾಂ ಜನ್ಮಮರಣಯೋಃ ಯಾವನ್ಮೋಕ್ಷಂ ನಿಯತತ್ವಾದಿತಿ ಹೇತೂಕ್ತಿಪೂರ್ವಂ ಸಾಧ್ಯಮಾಹ– ಜಾತಸ್ಯೇತಿ ॥ ಧ್ರುವೋ = ನಿಯತ ಇತ್ಯರ್ಥಃ । ಮೃತ್ಯುರ್ಮೃತಿಃ । ತಸ್ಮಾಜ್ಜನ್ಮಮೃತ್ಯೋರ್ನಿಯತತ್ವಾದಿ-ತ್ಯರ್ಥಃ ॥ 27 ॥**

**ಅನುವಾದ** - ಹಿಂದಿನ ಶ್ಲೋಕದ ಪೂರ್ವಾರ್ಧದಲ್ಲಿ ಅರ್ಜುನನ ಸಂಶಯವನ್ನು ಅನುವಾದ ಮಾಡಿ ಉತ್ತರಾರ್ಧದಲ್ಲಿ 'ದುಃಖಪಡಬೇಕಾಗಿಲ್ಲ' ಎಂದಿಷ್ಟೇ ಹೇಳಲಾಯಿತು. ಅದಕ್ಕೆ ಕಾರಣವನ್ನು ಕೊಡಲಾಗಿಲ್ಲ . ಆ ಕಾರಣವನ್ನು ಈ ಶ್ಲೋಕದಲ್ಲಿ ಕೊಡಲಾಗಿದೆ. ಮೋಕ್ಷಪರ್ಯಂತ ಹುಟ್ಟುಸಾವುಗಳು ಅನಿವಾರ್ಯವಾದವುಗಳು, ಎನ್ನುವುದೇ ಅದಕ್ಕೆ ಕಾರಣ. ಈ ಕಾರಣವನ್ನು ಮೇಲಿನ ಶ್ಲೋಕದ ಪೂರ್ವಾರ್ಧದಲ್ಲಿ ಹೇಳಲಾಗಿದೆ. ಅಂತಹ ಕಾರಣದಿಂದ ತಿಳಿದು ಕೊಳ್ಳಬೇಕಾಗಿರುವ ಸಾಧ್ಯವನ್ನು '**ತಸ್ಮಾತ್ ಅಪರಿಹಾರ್ಯೇಽರ್ಥೇ**' ಎಂಬ ಉತ್ತರಾರ್ಧದಲ್ಲಿ ಹೇಳಲಾಗಿದೆ.

ಶ್ಲೋಕದಲ್ಲಿ ಧ್ರುವಃ = ಅನಿವಾರ್ಯ ಎಂದರ್ಥ. ಮೃತ್ಯು = ಮರಣ, ತಸ್ಮಾತ್ = ಜನ್ಮ - ಮರಣಗಳು ಅನಿವಾರ್ಯವಾಗಿರುವುದರಿಂದ ।। 27 ।।

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ, ಕಾ ಪರಿದೇವನಾ ।। 28 ।।**

**ಅರ್ಥ** - ನಮ್ಮ ಶರೀರದ ಉತ್ಪತ್ತಿಗೆ ಕಾರಣವಾದುದು ಅವ್ಯಕ್ತತತ್ತ್ವ - ಪ್ರಕೃತಿತತ್ತ್ವ. ಹುಟ್ಟು-ಸಾವುಗಳ ಮಧ್ಯದ ಕಾಲಮಾನದಲ್ಲಿ ಈ ಶರೀರವು ಪ್ರಕೃತಿಯ ಕಾರ್ಯರೂಪವಾಗಿರುತ್ತದೆ. ಮತ್ತೆ ಅದು ಕಾರಣವಾದ ಅವ್ಯಕ್ತತತ್ತ್ವದಲ್ಲಿ ಲಯ ಹೊಂದುತ್ತದೆ. ಹೀಗಿರುವಾಗ ಈ ಶರೀರದ ಬಗ್ಗೆ ಏಕೆ ವೃಥಾ ದುಃಖಪ್ರಲಾಪ ?

**ಏತದೇವ ಜನ್ಮಮೃತಿಸ್ವರೂಪೋಕ್ತ್ಯಾ ಸ್ಪಷ್ಟಯತಿ- ಅವ್ಯಕ್ತೇತಿ ।। ಅವ್ಯಕ್ತಂ= ಪ್ರಧಾನಮಾದಿಃ= ಉತ್ಪತ್ತಿಕಾರಣಂ ಯೇಷಾಂ ತಾನ್ಯವ್ಯಕ್ತಾದೀನಿ ಭೂತಾನಿ= ಜೀವಶರೀರಾಣಿ, ವ್ಯಕ್ತಮಧ್ಯಾನಿ – ವ್ಯಕ್ತಂ= ಕಾರ್ಯತಾಪತ್ತ್ಯಾವಸ್ಥಾನಂ ಮಧ್ಯಂ= ಜನ್ಮನಿಧನಾಂತರಾಲಂ, ಯೇಷಾ ತಾನಿ ವ್ಯಕ್ತಮಧ್ಯಾನಿ, ಅವ್ಯಕ್ತೇ= ಪ್ರಧಾನೇ, ನಿಧನಂ= ಲಯೋ ಯೇಷಾಂ ತಾನಿ ಅವ್ಯಕ್ತನಿಧನಾನಿ ಏವ । ತತ್ರ= ತೇಷ್ವೇವಂ-ರೂಪೇಷು ಭೂತೇಷು, ಕಾ ಪರಿದೇವನಾ= ಕಃ ಶೋಕ ಇತಿ ।**

**ಅನುವಾದ** - ಹಿಂದೆ ಹೇಳಿದ್ದನ್ನೇ , ಹುಟ್ಟು - ಸಾವುಗಳ ಸ್ವರೂಪವನ್ನು ವಿವರಿಸುವ ಮೂಲಕ '**ಅವ್ಯಕ್ತಾದೀನಿ**' ಎಂಬ ಈ ಶ್ಲೋಕದಲ್ಲಿ ಸ್ಪಷ್ಟಗೊಳಿಸಲಾಗಿದೆ.

**ಅವ್ಯಕ್ತ** = ಜಡಪ್ರಕೃತಿ, ಅದೇ, **ಆದಿಃ** = ಉತ್ಪತ್ತಿಗೆ ಕಾರಣವಾಗಿ ಯಾವುಗಳಿಗೆ ಇರುವುದೋ ಅವೆಲ್ಲವೂ – ಅಂತಹ ಶರೀರಗಳೆಲ್ಲವೂ **ಅವ್ಯಕ್ತಾದೀನಿ** ಎಂದು ಹೇಳಲ್ಪಡುತ್ತವೆ. **ಭೂತಾನಿ** ಎಂದರೆ ಜೀವರ ಶರೀರಗಳು. **ವ್ಯಕ್ತ ಮಧ್ಯಾನಿ - ವ್ಯಕ್ತಂ** = (ಅವ್ಯಕ್ತತತ್ತ್ವವು) ಕಾರ್ಯರೂಪವಾಗಿ ಪರಿಣಾಮಗೊಳ್ಳುವ, **ಮಧ್ಯಂ** = ಹುಟ್ಟು ಮತ್ತು ಸಾವುಗಳ ಮಧ್ಯದ ಸ್ಥಿತಿಯು ಯಾವ ಶರೀರಗಳಿಗೆ ಇವೆಯೋ ಅಂತಹ ಶರೀರಗಳು ವ್ಯಕ್ತಮಧ್ಯಾನಿ.

**ಅವ್ಯಕ್ತ ನಿಧನಾನಿ - ಅವ್ಯಕ್ತೇ** = ಪ್ರಧಾನ ತತ್ತ್ವದಲ್ಲಿ , **ನಿಧನಂ** = ಲಯವು ಯಾವ ಶರೀರಗಳಿಗೆ ಇದೆಯೋ ಅಂತಹ ಶರೀರಗಳು ಅವ್ಯಕ್ತನಿಧನಾನಿ (ಶರೀರಗಳೆಲ್ಲವೂ ಅವ್ಯಕ್ತ ತತ್ತ್ವದಲ್ಲೇ ಲಯವಾಗುತ್ತವೆ ಎಂದರ್ಥ)

**ತತ್ರ** = ಇಂತಹ ಶರೀರಗಳ ಬಗ್ಗೆ, **ಕಾ ಪರಿದೇವನಾ** = ದುಃಖವೇಕೆ ?

**ವಿವರಣೆ** – ಭೌತ ಶರೀರಗಳಿಗೆಲ್ಲ ಮೂಲ ಕಾರಣ ಪ್ರಕೃತಿ ತತ್ತ್ವ. ಅದು ಯಾರ ಕಣ್ಣಿಗೂ ಕಾಣದ ಸೂಕ್ಷ್ಮವಸ್ತು. ಅದಕ್ಕೆಂದೇ ಆ ತತ್ತ್ವಕ್ಕೆ ಅವ್ಯಕ್ತವೆಂದು ಹೆಸರು. ಸೃಷ್ಟಿಕಾಲದಲ್ಲಿ ಅವ್ಯಕ್ತವು ವ್ಯಕ್ತರೂಪವಾಗಿ ಪರಿಣಾಮಗೊಳ್ಳುತ್ತದೆ. ಅವ್ಯಕ್ತದ ವ್ಯಕ್ತರೂಪವೇ ನಮ್ಮೆಲ್ಲರ ಶರೀರಗಳು. ಪ್ರಲಯಕಾಲದಲ್ಲಿ ಮತ್ತೆ ಈ ವ್ಯಕ್ತಸ್ಥಿತಿಯು ಅವ್ಯಕ್ತವಾಗುತ್ತದೆ. ಆದಿ-ಅಂತ್ಯಗಳಲ್ಲಿ ಅವ್ಯಕ್ತತೆ, ಮಧ್ಯದಲ್ಲಿ ವ್ಯಕ್ತಸ್ಥಿತಿ. ಇದು ಪ್ರಕೃತಿ ಸಹಜವಾದುದು. ಇದನ್ನು ಯಾರೂ ಬದಲಿಸಲಾರರು. ಅಂದಮೇಲೆ ನಮ್ಮ ಕೈಮೀರಿದ ಈ ಬದಲಾವಣೆಗೆ ನಾವು ಹೊಂದಿಕೊಳ್ಳಬೇಕೇ ಹೊರತು, ಅಳಬಾರದು.

**ಯದ್ವಾ ಕೃಷ್ಣೇನೈವ ಸ್ವಯಂ ಯುಕ್ತೀರುಕ್ತ್ವಾ ಶೋಕೋ ನ ಕಾರ್ಯ ಇತ್ಯುಕ್ತಮ್ । ತತ್ರ ದೇಹನಾಶಸ್ಯಾವಶ್ಯಂಭಾವಿತ್ವಂ ಯದುಕ್ತಂ ತನ್ನಾಸ್ಮಾಭಿಃ ಸಾಧ್ಯಂ, ಭವತೋಽಪಿ ಸಿದ್ಧಮ್ । ತೇನೈವ ಶೋಕೋ ನ ಕಾರ್ಯ ಇತ್ಯಾಹ– ಅಥ ಚೇತಿ ॥ ಅತ್ರ ನಿತ್ಯಶಬ್ದೋ ನಿಯತವಾಚೀ । 'ನಿತ್ಯಂ ನಿಯತಮೇವ ಚ' ಇತಿ ವಚನಾತ್ । ಅಥೇತ್ಯಸ್ಯ ತಿಷ್ಠತು ತಾವದಯಂ ಪ್ರಾಚೀನೋ ವಿಸ್ತರ ಇತ್ಯರ್ಥಃ । ಏನಂ = ಜೀವಂ, ನಿತ್ಯಜಾತಂ = ನಿಯತ- ಜನಿಮಂತಂ, ನಿತ್ಯಂ ಮೃತಂ ವಾ= ನಿಯತಮೃತಿಮಂತಂ, ತ್ವಂ ಮನ್ಯಸೇ ಚೇತ್, ಯದಿ ಯಾವನ್ಮೋಕ್ಷಂ ಜೀವಸ್ಯ ಜನ್ಮಮರಣೇ ನಿಯತೇ ಇತಿ ಸ್ವಯಮೇವ ಮನ್ಯಸೇ, ತಥಾಽಪಿ= ತಾವನ್ಮಾತ್ರ- ಜ್ಞಾನೇನಾಪಿ ಏನಂ= ಜೀವಂ ಶೋಚಿತುಂ ನಾರ್ಹಸಿ । ಜನ್ಮಮರಣಯೋಃ ಅವರ್ಜನೀಯತಯಾ ನಿಯಮೇನ ಪ್ರಾಪ್ನುವತೋಸ್ತ್ವಯೈವ ಜ್ಞಾತತ್ವಾತ್ । ಅವರ್ಜನೀಯೇ ಕಥಂ ಶೋಕ, ಇತಿ ಭಾವಃ ।**

**ಅನುವಾದ** – ಶ್ರೀಕೃಷ್ಣನು, ಇದುವರೆಗೆ ಅನೇಕ ಕಾರಣಗಳನ್ನು ಹೇಳಿ ದುಃಖಪಡಬಾರದು ಎಂದು ಹೇಳಿರುತ್ತಾನೆ. ಇವುಗಳಲ್ಲಿ, ದೇಹದ ನಾಶವು ಅನಿವಾರ್ಯ ಎನ್ನುವುದನ್ನು ಯಾರೂ ನಿನಗೆ ತಿಳಿಸಿ ಹೇಳಬೇಕಾದ ಅಗತ್ಯವಿಲ್ಲ. ಅದು ಗೊತ್ತಿರುವ ವಿಷಯ. ಆದುದರಿಂದಲೇ ಶೋಕಿಸಬಾರದು ಎಂಬುದನ್ನು '**ಅಥ ಚೈನಂ**' ಎಂಬ 26ನೆಯ ಶ್ಲೋಕದಲ್ಲಿ ಹೇಳಲಾಗಿದೆ. ಹೀಗೆ ಈ ಶ್ಲೋಕವನ್ನು ಮತ್ತೊಂದು ರೀತಿಯಿಂದಲೂ ಪರಿಗಣಿಸಬಹುದು.

ಇಲ್ಲಿರುವ ನಿತ್ಯಶಬ್ದಕ್ಕೆ **ನಿಯತ** = ಅನಿವಾರ್ಯವಾದುದು ಎಂದರ್ಥ. '**ನಿತ್ಯಂ ನಿಯತಮೇವ ಚ**' ಎಂದು ಶಬ್ದನಿರ್ಣಯವು ನಿತ್ಯಶಬ್ದಕ್ಕೆ ಈ ಅರ್ಥವನ್ನು ಹೇಳಿದೆ.

'**ಅಥ**' ಎಂಬುದರ ಭಾವ – ಇದುವರೆಗಿನ ವಿವರಣೆ ಹಾಗಿರಲಿ, ಇದಂತೂ ನಿನಗೆ ತಿಳಿದ ವಿಷಯವೇ ಆಗಿದೆ, ಎಂದು.

ಒಟ್ಟಿನಲ್ಲಿ ಶ್ಲೋಕದ ಅರ್ಥ - **ಏನಂ** = ಈ ಜೀವನನ್ನು , **ನಿತ್ಯಜಾತಂ** = ಅನಿವಾರ್ಯವಾದ ಹುಟ್ಟುಳ್ಳವನನ್ನಾಗಿಯೂ, **ನಿತ್ಯಂ ಮೃತಂ** = ಅನಿವಾರ್ಯವಾದ ಮರಣವುಳ್ಳವನನ್ನಾಗಿಯೂ, ನೀನು ತಿಳಿದೇ ಇರುವಿ , ಅರ್ಥಾತ್ ಮೋಕ್ಷವಾಗುವವರೆಗೆ ಈ ಜೀವನಿಗೆ ಹುಟ್ಟು ಸಾವುಗಳು ಅನಿವಾರ್ಯವೆಂದು ನಿನಗೆ ತಿಳಿದೇ ಇದೆ. **ತಥಾಪಿ** = ಇಷ್ಟಕ್ಕಾಗಿಯೂ ಈ ಜೀವನ ಬಗ್ಗೆ ಶೋಕವು ಉಚಿತವಲ್ಲ. ಏಕಂದರೆ, ಜನ್ಮ-ಮರಣಗಳು ಅನಿವಾರ್ಯವಾದುದರಿಂದ ಅವುಗಳನ್ನು ತಡೆಯುವವರು ಯಾರೂ ಇಲ್ಲವೆಂದು ನಿನಗೇ ತಿಳಿದಿದೆ. ನಮ್ಮ ಕೈಮೀರಿದ ವಿಷಯದ ಬಗ್ಗೆ ದುಃಖ ಏಕೆ ? ಇದು ಶ್ಲೋಕದ ಭಾವಾರ್ಥ.

**ಏವಂ ಚಾಸ್ಮಿನ್ನೇವ ಶ್ಲೋಕೇ ಶೋಕಾಭಾವೇ ಜನಿಮೃತಿನಿಯಮರೂಪೋ ಹೇತುಃ ಸ್ಪಷ್ಟಮೇವಾವಗಮ್ಯತ ಇತಿ ಪುನಃ ತತ್ರ ಹೇತ್ವಾಕಾಂಕ್ಷಾಭಾವಾದೇತದ್ವಿವರಣಪರೇ ''ಜಾತಸ್ಯ'' ಇತ್ಯಾದಿ ಶ್ಲೋಕದ್ವಯೇ ಜೀವಸ್ಯ ಜನಿಮೃತಿನೈಯತ್ಯಾನುವಾದಃ ಪ್ರಾಗಭಿಪ್ರೇತಜೀವಾಸ್ವಾತಂತ್ರ್ಯೇ ಚ ಹೇತುತ್ವೇನೇತಿ । 'ಕಾ ತವ ಪರಿದೇವನಾ' ಇತ್ಯನಂತರಂ ತಸ್ಮಾಜ್ಜೀವಸ್ಯ ಜನಿಮೃತಿನಿಯಮವತ್ವಾಜ್ಜೀವೇ ಶೋಕೋ ಯಥಾ ನ ಕಾರ್ಯಃ ತಥಾ ಸ್ವಾತಂತ್ರ್ಯಬುದ್ಧಿಶ್ಚ ನ ಕಾರ್ಯೇತಿ ಶ್ಲೋಕದ್ವಯತಾತ್ಪರ್ಯಾರ್ಥೋ ಜ್ಞೇಯಃ ॥ 28 ॥**

**ಅನುವಾದ** - ಮೇಲೆ ಹೇಳಿರುವಂತೆ 26ನೆಯ ಶ್ಲೋಕದಲ್ಲಿ ಜೀವನಿಗೆ ಜನನ ಮರಣಗಳು ಅನಿವಾರ್ಯವಾದುದರಿಂದ ಆ ಕುರಿತು ದುಃಖಿಸುವ ಅಗತ್ಯವಿಲ್ಲ ಎನ್ನುವುದು ಸ್ಪಷ್ಟವಾಗಿದೆ. ಹೀಗಾಗಿ ಮುಂದಿನ **'ಜಾತಸ್ಯ ಹಿ'** ಇತ್ಯಾದಿ ಎರಡು ಶ್ಲೋಕಗಳಲ್ಲಿ ಅದಕ್ಕೆ ಕಾರಣವನ್ನು ಮತ್ತೆ ವಿವರಿಸುವ ಅಗತ್ಯವಿಲ್ಲ . ಆದ್ದರಿಂದ **'ಜಾತಸ್ಯ ಹಿ ಧ್ರುವೋ ಮೃತ್ಯುಃ'** ಮುಂತಾಗಿ ಎರಡು ಶ್ಲೋಕಗಳು ಜೀವನಿಗೆ ಅಸ್ವಾತಂತ್ರ್ಯವನ್ನು ಸಮರ್ಥಿಸುತ್ತಲಿವೆ. **'ಮನ್ಯತೇ ಹತಂ'** ಎಂಬ ಶ್ಲೋಕದಲ್ಲಿ ಜೀವನ ಅಸ್ವಾತಂತ್ರ್ಯವೂ ಪ್ರಸ್ತುತವಾಗಿದೆ. ಜನನ-ಮರಣಗಳ ಅನಿವಾರ್ಯತೆಯಿಂದ ಅದರ ಸಮರ್ಥನೆಯನ್ನು ಈ ಶ್ಲೋಕಗಳಲ್ಲಿ ಮಾಡಲಾಗಿದೆ. ಈಗ ಈ ಎರಡು ಶ್ಲೋಕಗಳ ಅಭಿಪ್ರಾಯವನ್ನು ಹೀಗೆ ಗ್ರಹಿಸಬೇಕು- ಜನನ ಮರಣಗಳು ಜೀವನ ಕೈಮೀರಿರುವ ಕಾರಣ ಅದರ ಬಗ್ಗೆ ದುಃಖವು ಹೇಗೆ ಅನಗತ್ಯವೋ ಹಾಗೆಯೇ, ಆ ಕಾರಣಕ್ಕಾಗಿಯೇ ಜೀವನು ಸ್ವತಂತ್ರ ಎನ್ನುವ ಜ್ಞಾನವೂ ಭ್ರಮೆಯಾಗಿದೆ. ಅವನು ಸ್ವತಂತ್ರನಾದರೆ ಅವನ ಇಚ್ಛೆಗೆ ಮೀರಿ ಜನನ ಮರಣಗಳು ಏಕೆ ಆಗಬೇಕು? ಆದ್ದರಿಂದ 'ತತ್ರ ಕಾ ಪರಿದೇವನಾ' (ಶ್ಲೋ.28) ಎಂಬ ನಿಗಮನದ ಜೊತೆಯಲ್ಲಿ ಜೀವನಲ್ಲಿ ಸ್ವಾತಂತ್ರ್ಯ ಬುದ್ಧಿಯೂ ಸರಿಯಲ್ಲ , ಎನ್ನುವ ಅಭಿಪ್ರಾಯವನ್ನು ಸೇರಿಸಿಕೊಳ್ಳಬೇಕು. ॥ 28 ॥

**ಆಶ್ಚರ್ಯವತ್ಪಶ್ಯತಿ ಕಶ್ಚಿದೇನಮ್**
**ಆಶ್ಚರ್ಯವದ್ವದತಿ ತಥೈವ ಚಾನ್ಯಃ ।**
**ಆಶ್ಚರ್ಯವಚ್ಚೈನಮನ್ಯಃ ಶ್ರುಣೋತಿ**
**ಶ್ರುತ್ವಾಽಪ್ಯೇನಂ ವೇದ ನ ಚೈವ ಕಶ್ಚಿತ್ ॥ 29 ॥**

**ಅರ್ಥ**- ಸಾತ್ವಿಕಸ್ವಭಾವದ ವ್ಯಕ್ತಿಯು ಅವ್ಯಕ್ತನಾದ ಪರಮಾತ್ಮನನ್ನು ಸರ್ವತಂತ್ರ ಸ್ವತಂತ್ರನನ್ನಾಗಿ ನೋಡುತ್ತಾನೆ. ಮತ್ತೊಬ್ಬನು ಶ್ರೀಹರಿಯನ್ನು ಸ್ವತಂತ್ರನನ್ನಾಗಿಯೇ ಮತ್ತೊಬ್ಬರಿಗೆ ಬಣ್ಣಿಸುತ್ತಾನೆ. ಕೇಳುವವನೂ ಪರಮಾತ್ಮನನ್ನು ಬಿಟ್ಟು ಇನ್ನೊಬ್ಬನು ಸ್ವತಂತ್ರನಾದವನು ಇಲ್ಲವೆಂದೇ ತಿಳಿಯುತ್ತಾನೆ. ಎಷ್ಟು ಕೇಳಿ ತಿಳಿದರೂ ದೇವರನ್ನು ಪೂರ್ಣವಾಗಿ ತಿಳಿದವರು ಯಾರೂ ಇಲ್ಲ.

ಅಥವಾ, ಜೀವಾತ್ಮನನ್ನು ಈಶ ಪ್ರತಿಬಿಂಬನನ್ನಾಗಿ ತಿಳಿಯುವವರು ದುರ್ಲಭ. ಅವನನ್ನು ಆ ರೀತಿ ಹೇಳುವವರು, ಕೇಳುವವರೂ ದುರ್ಲಭವೆ. ಜೀವಾತ್ಮನ ಯಥಾರ್ಥಸ್ವರೂಪವನ್ನು ಉಪದೇಶಪಡೆದರೂ ಹಾಗೆ ಮನವರಿಕೆ, ಮಾಡಿಕೊಂಡವರು ದುರ್ಲಭವೇ ಸರಿ.

**ತರ್ಹಿ ಕುತ್ರ ಸಾ ಕಾರ್ಯಾ ? ನೈನಮಿತ್ಯಾದೌ ಸಾ ಬುದ್ಧಿರ್ಭಗವತಿ ಕಾರ್ಯೇತಿ ಉಕ್ತಾವಪಿ ಸಾ ಕಿಂ ಭಗವತ್ಯೇವ ಕಾರ್ಯಾ, ಅಥ ತತೋಽನ್ಯತ್ರಾಪಿ ಕ್ವಚಿದಿತ್ಯಾಶಂಕಾಂ ವತಿಪ್ರತ್ಯಯಪ್ರಯೋಗಬಲೇನ ಪರಿಹರನ್ ಭಗವತ್ಸ್ವಾತಂತ್ರ್ಯಂ ಪ್ರಾಗುಕ್ತಮುಪಸಂಹರತಿ – ಆಶ್ಚರ್ಯವದಿತಿ ॥**

**ಅನುವಾದ** – ಜೀವನಲ್ಲಿ ಸ್ವತಂತ್ರ ಎಂಬ ಭಾವನೆಯನ್ನು ಮಾಡಬಾರದು, ಎಂದರೆ ಅಂತಹ ಭಾವನೆಯನ್ನು ಯಾರಲ್ಲಿ ಮಾಡಬೇಕು ? ಈ ಪ್ರಶ್ನೆಗೆ ಉತ್ತರವಾಗಿ– ಭಗವಂತನಲ್ಲಿ ಸ್ವಾತಂತ್ರ್ಯ – ಭಾವನೆಯನ್ನು ಮಾಡಬೇಕು, ಎಂದು '**ನೈನಂ ಛಿಂದಂತಿ**' ಇತ್ಯಾದಿ ಹಿಂದಿನ ಶ್ಲೋಕಗಳಲ್ಲಿ ತಿಳಿಸಲಾಗಿದೆ . ಅಂತಹ ಸ್ವಾತಂತ್ರ್ಯ ಬುದ್ಧಿಯನ್ನು ಪರಮಾತ್ಮನಲ್ಲಿ ಮಾತ್ರ ಮಾಡಬೇಕೋ ? ಅಥವಾ ಪರಮಾತ್ಮನಂತೆ ಇತರ ಕೆಲವರೂ ಸ್ವತಂತ್ರಪುರುಷರಿದ್ದಾರೆಂದು ತಿಳಿಯಬೇಕೋ ? ಎನ್ನುವ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರವನ್ನು ಕೊಡಲಾಗಿದೆ. ಈ ಶ್ಲೋಕದ '**ಆಶ್ಚರ್ಯವತ್**' ಎಂಬ ಪದದಲ್ಲಿರುವ 'ವತಿ' ಪ್ರತ್ಯಯದಿಂದ ಪರಮಾತ್ಮನೊಬ್ಬನೇ ಸ್ವತಂತ್ರನೆಂದು ತಿಳಿಯಬೇಕು ಎಂದು ಸೂಚಿಸಲಾಗಿದೆ. ಹೀಗೆ ಸೂಚಿಸುವ ಮೂಲಕ ಭಗವಂತನೇ ಸ್ವತಂತ್ರ ಪುರುಷ ಎಂಬ ಪರಿಹಾರವನ್ನು ನೀಡಿ ಪ್ರಕೃತವಾದ ಸ್ವಾತಂತ್ರ್ಯದ ವಿಷಯವನ್ನು ಈ ಶ್ಲೋಕದಲ್ಲಿ ಉಪಸಂಹಾರ ಮಾಡಲಾಗಿದೆ.

**ವಿವರಣೆ-** ಜೀವನು ಸ್ವತಂತ್ರನಲ್ಲವಾದರೆ ಮತ್ತೆ ಯಾರನ್ನು ಸ್ವತಂತ್ರನೆಂದು ತಿಳಿಯಬೇಕು? ಈ ಪ್ರಶ್ನೆಗೆ '**ನೈನಂ ಛಿಂದಂತಿ**' ಇತ್ಯಾದಿ ಶ್ಲೋಕಗಳಲ್ಲೇ 'ಭಗವಂತನೇ ಸ್ವತಂತ್ರನೆಂದು ತಿಳಿಯಬೇಕು' ಎನ್ನುವ ಉತ್ತರವನ್ನು ಕೊಡಲಾಗಿದೆ. ಆದರೂ ಅವನೊಬ್ಬನೇ ಸ್ವತಂತ್ರನೋ, ಬೇರೆ ಇನ್ನಾರಾದರೂ ಸ್ವತಂತ್ರರು ಇದ್ದಾರೋ ಎನ್ನುವ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರಿಸಲಾಗಿದೆ.

ಈ ಶ್ಲೋಕದಲ್ಲಿ '**ಆಶ್ಚರ್ಯವತ್**' ಎಂಬ ಶಬ್ದದಲ್ಲಿರುವ '**ವತಿ**'ಪ್ರತ್ಯಯದಿಂದ ಭಗವಂತನೊಬ್ಬನೇ ಸ್ವತಂತ್ರ ಎಂಬ ವಿಷಯವನ್ನು ತಿಳಿಸಲಾಗಿದೆ. ಹೀಗೆ, ಪ್ರಶ್ನೆಗೆ ಉತ್ತರವನ್ನು ಕೊಟ್ಟು ಭಗವಂತನು ಸ್ವತಂತ್ರ ಎಂಬ ವಿಷಯವನ್ನು ಈ ಶ್ಲೋಕದಲ್ಲಿ ಉಪಸಂಹಾರ ಮಾಡಲಾಗಿದೆ.

**ಕಶ್ಚಿತ್ಸಾತ್ತ್ವಿಕಪ್ರಕೃತಿಃ ಏನಂ= ಅವ್ಯಕ್ತ ಇತ್ಯತ್ರ ಪ್ರಕೃತಮೇನಮ್ ಈಶ್ವರಮ್ ಆಶ್ಚರ್ಯವತ್ಪಶ್ಯತಿ । ಆಶ್ಚರ್ಯತ್ವೇನ= ಸರ್ವಸ್ವತಂತ್ರತ್ವೇನ ಸಂತಮೇವ ತಮ್ ಆಶ್ಚರ್ಯವತ್ ಸ್ವತಂತ್ರವದ್ಯಥಾ ಭವತಿ ತಥಾ ಪಶ್ಯತೀತಿ ಕ್ರಿಯಾ ವಿಶೇಷಣಮ್ । ಗಗನಂ ಗಗನಾಕಾರಮಿತ್ಯಾದಿವತ್ । ಆಶ್ಚರ್ಯಭೂತಸ್ಯ ಹರೇರೇವಾಶ್ಚರ್ಯವದಿತಿ ಸ್ವೋಪಮಾಮುಖೇನ ಹರೇರಿತರಸ್ಯ ಸ್ವಾತಂತ್ರ್ಯಾಭಾವಜ್ಞಾಪನಾಯ ಆಶ್ಚರ್ಯ-ವದಿತಿ ವತ್ಯಂತೋಕ್ತಿಃ ।**

**ಅನುವಾದ – ಕಶ್ಚಿತ್** = ಸಾತ್ವಿಕ ಸ್ವಭಾವದ ಒಬ್ಬನು , **ಏನಂ** = '**ಅವ್ಯಕ್ತಾದೀನಿ**' ಎಂಬ ಹಿಂದಿನ ಶ್ಲೋಕದಲ್ಲಿ ಪ್ರಸ್ತುತನಾದ ಸ್ವತಂತ್ರನಾಗಿರುವ ಈ ಪರಮಾತ್ಮನನ್ನು, '**ಆಶ್ಚರ್ಯವತ್ ಪಶ್ಯತಿ**', ಸರ್ವತಂತ್ರ ಸ್ವತಂತ್ರನಾದ ಪರಮಾತ್ಮನು ಹೇಗೋ ಹಾಗೆ ಸ್ವಾತಂತ್ರ್ಯವುಳ್ಳವನಂತೆ ತಿಳಿಯುತ್ತಾನೆ. ಹೀಗೆ '**ಆಶ್ಚರ್ಯವತ್**' ಎಂಬ ಶಬ್ದವು '**ಪಶ್ಯತಿ**' ಎಂಬ ಕ್ರಿಯೆಗೆ ವಿಶೇಷಣವಾಗಿದೆ.

'**ಗಗನಂ ಗಗನಾಕಾರಂ**' 'ಆಕಾಶವು ಆಕಾಶದಂತೆ ಇದೆ. ಅದಕ್ಕೆ ಮತ್ತೊಂದು ಹೋಲಿಕೆ ಇಲ್ಲ' ಎಂದಂತೆ '**ಆಶ್ಚರ್ಯವತ್ ಪಶ್ಯತಿ**' ಎಂದು ಪರಮಾತ್ಮನನ್ನು ಹೇಳಲಾಗಿದೆ. ಆಕಾಶಕ್ಕೆ ಮತ್ತೊಂದು ಹೋಲಿಕೆ ಇಲ್ಲದಿರುವಂತೆ ಸ್ವಾತಂತ್ರ್ಯದ ವಿಷಯದಲ್ಲಿ ಪರಮಾತ್ಮನಿಗೆ ಸಮನಾದ ವ್ಯಕ್ತಿ ಮತ್ತೊಬ್ಬನಿಲ್ಲ. ಅವನನ್ನುಳಿದ ಇತರರೆಲ್ಲರೂ ಅಸ್ವತಂತ್ರರು ಎಂದು '**ಆಶ್ಚರ್ಯವತ್**' ಎಂಬ ಪದದ ಅಭಿಪ್ರಾಯ.

**ವಿವರಣೆ– '‍ಆಶ್ಚರ್ಯವತ್**' ಎಂಬುದು '**ವತಿ**' ಪ್ರತ್ಯಯಾಂತವಾದ ಶಬ್ದ. 'ಆದರಂತೆ' ಎಂದು ಆ ಪ್ರತ್ಯಯಕ್ಕೆ ಅರ್ಥ . '**ಗೋವತ್**' ಎಂದರೆ ಹಸುವಿನಂತೆ' ಎಂದರ್ಥ.ಆದರೆ ದೇವರಂತೆ ಸ್ವತಂತ್ರವಾದುದು ಇನ್ನೊಂದಿರಲಾರದು. ಆದ್ದರಿಂದ '**ವತಿ**' ಪ್ರತ್ಯಯವು '**ಗಗನಂ**

ಗಗನಾಕಾರಂ' ಎಂದಂತೆ ದೇವರಿಗೆ ದೇವರ ಹೋಲಿಕೆಯನ್ನೇ ಕೊಟ್ಟಿದೆ. ಗೀತಾ ತಾತ್ಪರ್ಯದಲ್ಲಿ ಬ್ರಹ್ಮತರ್ಕದ ಆಧಾರವನ್ನು ನೀಡಿ ಆಚಾರ್ಯರು ಈ ಅರ್ಥವನ್ನು ಸಮರ್ಥಿಸಿದ್ದಾರೆ. '**ಆಶ್ಚರ್ಯೋ ಭಗವಾನ್ ವಿಷ್ಣುಃ ಯಸ್ಮಾನ್ನೈತಾದೃಶಃ ಕ್ವಚಿತ್ ।** ಗೀತಾತಾತ್ಪರ್ಯ ಟೀಕೆಯಲ್ಲಿ ಆಶ್ಚರ್ಯವತ್ ಎಂಬ ಶಬ್ದದ ತಾತ್ಪರ್ಯವನ್ನು 'ಭಗವದಿತರತ್ರ ಸ್ವಾತಂತ್ರ್ಯಾಭಾವೇ ತಾತ್ಪರ್ಯಮತ್ರೇತಿ ಭಾವಃ' ಎಂದು ತಿಳಿಸಲಾಗಿದೆ.

**ಅನ್ಯಶ್ಚ ತಥೈವ= ದ್ರಷ್ಟೃವದೇವ ಆಶ್ಚರ್ಯತ್ವೇನ ಸಂತಮೇನಮಾಶ್ಚರ್ಯವದ್ಯಥಾ ಭವತಿ ತಥಾ ವದತಿ । 'ಸಾಗರಂ ಸಾಗರೋಪಮಮ್' [1]ಇತಿವತ್ ಅನ್ಯತ್ ಆಶ್ಚರ್ಯವಸ್ತು ನೇತಿ ಜ್ಞಾಪನಾಯ ಸ್ವೋಪಮತ್ವೇನ ವಕ್ತೀತ್ಯರ್ಥಃ । ಅನ್ಯಶ್ಚ ಸಾತ್ವಿಕಃ ಆಶ್ಚರ್ಯತ್ವೇನ ಸಂತಮೇನಂ ಹರಿಂ ಆಶ್ಚರ್ಯವದ್ಯಥಾ ಭವತಿ ತಥಾ,**

**'ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ'**

**ಇತಿವತ್, ಅನ್ಯದಾಶ್ಚರ್ಯತಯಾ ಶ್ರೋತವ್ಯಂ ವಸ್ತು ನೇತಿ ಜ್ಞಾಪನಾಯ ಸ್ವೋಪಮತ್ವೇನ ಶೃಣೋತಿ । ಕಶ್ಚಿಚ್ಚ ಸಾತ್ವಿಕ ಏನಮಾಶ್ಚರ್ಯತಯಾ ಸಂತಂ ಹರಿಂ ಶ್ರುತ್ವಾಽಪಿ ನೈವ ವೇದ । ಅತ್ಯದ್ಭುತವಸ್ತುತ್ವಾದಿತಿ ಭಾವಃ ।**

**ಅನುವಾದ**– ಇನ್ನೊಬ್ಬನು, ತಥೈವ = ಹಿಂದೆ ಹೇಳಿದ ದ್ರಷ್ಟೃವಿನಂತೆಯೇ (ಪಶ್ಯತಿ....) ಸ್ವತಂತ್ರನಾಗಿರುವ ಪರಮಾತ್ಮನನ್ನು ಸ್ವತಂತ್ರನಂತೆಯೇ ಮತ್ತೊಬ್ಬರಿಗೆ ತಿಳಿಸಿ ಹೇಳುತ್ತಾನೆ. 'ಸಮುದ್ರವು ಸಮುದ್ರದಂತೆ ಇದೆ' ಎಂದು ಹೇಳುವಂತೆ ಪರಮಾತ್ಮನಿಗೆ ಹೋಲುವ ಸ್ವತಂತ್ರತತ್ತ್ವವು (ಆಶ್ಚರ್ಯ) ಮತ್ತೊಂದು ಇಲ್ಲ ಎಂದು ಹೇಳುತ್ತಾನೆ ಎಂದು ಭಾವ. ಇನ್ನೊಬ್ಬ ಸಾತ್ವಿಕನು ಸ್ವತಂತ್ರನಾದ ಪರಮಾತ್ಮನನ್ನು ಆಶ್ಚರ್ಯನಂತೆಯೇ ಕೇಳಿ ತಿಳಿಯುತ್ತಾನೆ. 'ರಾಮ-ರಾವಣರ ಯುದ್ಧವು ರಾಮ-ರಾವಣರ ಯುದ್ಧದಂತಿದೆ ' (ಅದಕ್ಕೆ ಮತ್ತೊಂದು ಹೋಲಿಕೆ ಇಲ್ಲ) ಎಂದಂತೆ ಸ್ವತಂತ್ರನಾದ ಪರಮಾತ್ಮನು ಅವನಂತೆಯೇ ಇದ್ದಾನೆ , ಅವನಿಗೆ ಹೋಲಿಕೆ ಇಲ್ಲ ಎಂದು ಕೇಳಿ ತಿಳಿಯುತ್ತಾನೆ.

ಮತ್ತೊಬ್ಬ ಸಾತ್ವಿಕ ಸ್ವಭಾವದ ವ್ಯಕ್ತಿಯು ಸ್ವತಂತ್ರನಾದ ಈ ಪರಮಾತ್ಮನನ್ನು ಕೇಳಿ ತಿಳಿದರೂ ಅತ್ಯದ್ಭುತವಾದುದರಿಂದ ಪೂರ್ಣವಾಗಿ ತಿಳಿಯಲಾರ.

---

1. 'ಇತಿವದನ್ ಆಶ್ಚರ್ಯ' ಇತಿ ಕ್ವಚಿತ್

**ಈಶ್ವರಸ್ಯ ಸರ್ವಾನ್ಪ್ರತಿ ಆಶ್ಚರ್ಯತ್ವೇಽಪಿ ವಿಪರೀತದರ್ಶಿನಾಮ್ ಅಸುರಾದೀನಾಂ ಬಹೂನಾಂ ಭಾವಾತ್, ಯಥಾವದ್ದರ್ಶೀ ಯಥಾವದ್ವಾದೀ ಚ ಕಶ್ಚಿದ್ ಕಶ್ಚಿದೇವೇತಿ ಜ್ಞಾಪನಾಯ ಕಶ್ಚಿದಿತ್ಯಾದ್ಯುಕ್ತಿಃ ।**

**ಅನುವಾದ** – ಪರಮಾತ್ಮನು ಎಲ್ಲರಿಗೂ ಆಶ್ಚರ್ಯವಾದ ವಸ್ತುವೆ , ಒಬ್ಬರಿಗೆ ಮಾತ್ರವಲ್ಲ. ಆದರೂ ಅವನನ್ನು ತಪ್ಪಾಗಿ ತಿಳಿಯುವ ಆಸುರ ಸ್ವಭಾವದವರು ಬಹಳ ಮಂದಿ ಇರುವ ಕಾರಣ ಅವನನ್ನು ಸರಿಯಾಗಿ ನೋಡುವವರು, ಸರಿಯಾಗಿ ಹೇಳುವವರು, ಕೆಲವರು ಮಾತ್ರ ಎಂದು ತಿಳಿಸುವ ಸಲುವಾಗಿ ಶ್ಲೋಕದಲ್ಲಿ '**ಕಶ್ಚಿತ್**' ಎಂದು ಮತ್ತೆ ಮತ್ತೆ ಹೇಳಲಾಗಿದೆ.

**ಯದ್ವೋಪಸಂಹಾರಪರೋತ್ತರಶ್ಲೋಕೋಪಯುಕ್ತತ್ವೇನ 'ಅಪ್ರಮೇಯಸ್ಯ' ಇತ್ಯಾದಿನಾ ಪ್ರಾಙ್ಮಹಿಮೋಕ್ತಾವಪಿ ಪುನರ್ಮಹಿಮಾಂತರಮಾಹ- ಆಶ್ಚರ್ಯವದಿತಿ ॥ ವತಿರತ್ರ ಏವಕಾರಾರ್ಥಃ । ಏನಂ= ಪೂರ್ವತ್ರ ಪ್ರಕೃತಂ ಜೀವಂ, ಯಃ ಕಶ್ಚಿದಜಾದಿಲಕ್ಷಣೇಶ್ವರಸರೂಪತ್ವತದಧೀನತ್ವಾದಿನಾ ಪಶ್ಯತಿ ಸ ಪುಮಾನಾಶ್ಚರ್ಯವತ್= ಆಶ್ಚರ್ಯಏವ । ಉಕ್ತರೂಪೇಣೈನಂ ಜೀವಂ ವದನ್ ಶೃಣ್ವಂಶ್ಚಾಶ್ಚರ್ಯ ಏವ= ದುರ್ಲಭ ಏವೇತ್ಯರ್ಥಃ ।**

**ಸರ್ವೇಷಾಮಪಿ ಅಹಮಿತ್ಯಾತ್ಮದರ್ಶನಾದಿಭಾವಾತ್ ದರ್ಶನಾದಿಮಾನ್ ಕಥಂ ದುರ್ಲಭ ಇತ್ಯತ ಉಕ್ತಮುಪಪಾದಯತಿ – ಶ್ರುತ್ವೇತಿ ॥ ದೃಷ್ಟ್ವಾ ಉಕ್ತ್ವೇತ್ಯಪಿ ಗ್ರಾಹ್ಯಮ್ । ಸಾಮಾನ್ಯತೋ ದರ್ಶನಾದೌ ಸತ್ಯಪ್ಯುಕ್ತರೂಪೇಣ ಸಮ್ಯಕ್ ನ ವೇದೇತಿ ಸಮ್ಯಗ್ಜ್ಞಾನೀ ದುರ್ಲಭ ಇತ್ಯರ್ಥಃ । ಪ್ರತಿಬಿಂಬಭೂತಜೀವಸ್ಯಾಪಿ ಸಮ್ಯಗ್ಜ್ಞಾನೀ ದುರ್ಲಭಃ । ಕಿಮೀಶ್ವರಸಾಮರ್ಥ್ಯಂ ವರ್ಣನೀಯಮಿತಿ ಈಶ್ವರ- ಸಾಮರ್ಥ್ಯೋಕ್ತಿರ್ಧ್ಯೇಯಾ (ಜ್ಞೇಯಾ) ॥ 29 ॥**

**ಅನುವಾದ** – ಹೀಗೂ ಈ ಶ್ಲೋಕಕ್ಕೆ ಅರ್ಥವನ್ನು ಹೇಳಬಹುದು – ಮುಂದಿನ ಶ್ಲೋಕದಲ್ಲಿ ಜೀವನಿತ್ಯತ್ವ ವಿಷಯವನ್ನು ಮುಕ್ತಾಯಗೊಳಿಸಲಾಗಿದೆ . ಅದಕ್ಕೆ ಉಪಯುಕ್ತವಾಗುವಂತೆ ಜೀವನ ಬಗ್ಗೆ ಇನ್ನಷ್ಟು ವಿಷಯಗಳನ್ನು ಈ ಶ್ಲೋಕದಲ್ಲಿ ನಿರೂಪಿಸಲಾಗಿದೆ. ಹಿಂದೆ '**ಅನಾಶಿನಃ, ಅಪ್ರಮೇಯಸ್ಯ**' ಎಂದು ಜೀವನಿಗೆ ಸಂಬಂಧಪಟ್ಟ ವಿಷಯಗಳನ್ನು ನಿರೂಪಿಸಲಾಗಿದೆ. ಇನ್ನೂ ಹೆಚ್ಚಿನ ವಿಷಯಗಳನ್ನು ತಿಳಿಸಲು ಈ ಶ್ಲೋಕ ಹೊರಟಿದೆ.

ಈ ಶ್ಲೋಕದಲ್ಲಿರುವ '**ಆಶ್ಚರ್ಯವತ್**' ಎಂಬ ಪದದ '**ವತಿ**' ಪ್ರತ್ಯಯಕ್ಕೆ '**ಏವ**'

ಶಬ್ದಕ್ಕಿರುವಂತೆ '**ನಿರ್ಧಾರ**' ಎಂಬ ಅರ್ಥ. ಆದ್ದರಿಂದ, **ಏನಂ** = ಹಿಂದೆ ಪ್ರಕೃತನಾದ ಜೀವಾತ್ಮ-ನನ್ನು ಯಾರು ಉತ್ಪತ್ತಿನಾಶವಿಲ್ಲದ ಪರಮಾತ್ಮನ ಸದೃಶನನ್ನಾಗಿಯೂ ಅವನ ಅಧೀನನನ್ನಾಗಿಯೂ ತಿಳಿಯುವನೋ ಅಂತಹವನು **ಆಶ್ಚರ್ಯವತ್** = ಆಶ್ಚರ್ಯನೇ ಸರಿ. ಜೀವನು ಪರಮಾತ್ಮನ ಅಧೀನ ಎಂದು ದೃಢವಾಗಿ ಹೇಳುವ ಅಥವಾ ಕೇಳುವ ವ್ಯಕ್ತಿಯು **ಆಶ್ಚರ್ಯ ಏವ**= ದುರ್ಲಭನೇ ಸರಿ.

ಎಲ್ಲರೂ ತಮ್ಮನ್ನು ತಾವು ತಿಳಿದೇ ಇರುತ್ತಾರೆ. ಹೀಗಿರುವಾಗ ಆತ್ಮಜ್ಞಾನಿಯು ದುರ್ಲಭ ಎನ್ನುವುದು ಹೇಗೆ ? ಈ ಪ್ರಶ್ನೆಗೆ '**ಶ್ರುತ್ವಾಪ್ಯೇನಂ**' ಇತ್ಯಾದಿಯಾದ ಶ್ಲೋಕದ ಕೊನೆಯ ವಾಕ್ಯವು ಉತ್ತರ ಕೊಡುತ್ತದೆ. ಅಲ್ಲಿ **ಶ್ರುತ್ವಾ** ಶಬ್ದದೊಂದಿಗೆ **ದೃಷ್ಟ್ವಾ** (ನೋಡಿ) **ಉಕ್ತ್ವಾ** (ಹೇಳಿ) ಎಂದೂ ಸೇರಿಸಿಕೊಳ್ಳಬೇಕು. ತಮ್ಮ ತಮ್ಮ ಅರಿವು ಎಲ್ಲರಿಗೂ ಇದೆಯಾದರೂ 'ನಾನು ಪರಮಾತ್ಮಾಧೀನ' ಎನ್ನುವ ಜ್ಞಾನ ಎಲ್ಲರಿಗೂ ಇರುವುದಿಲ್ಲ. ಹೀಗೆ ಪರಮಾತ್ಮನ ಪ್ರತಿಬಿಂಬರಾದ ತಮ್ಮನ್ನು ತಾವು ಸರಿಯಾಗಿ ತಿಳಿದವರೇ ದುರ್ಲಭರೆಂದ ಮೇಲೆ ನಮ್ಮನ್ನೇ ನಾವು ಸರಿಯಾಗಿ ತಿಳಿಯದಂತೆ ಮಾಡಿರುವ ಪರಮಾತ್ಮನ ಸಾಮರ್ಥ್ಯವನ್ನು ಏನೆಂದು ಹೇಳಬೇಕು ? ಈ ರೀತಿಯಾಗಿ ಈ ಶ್ಲೋಕವು ಭಗವಂತನ ಪಾರಮ್ಯವನ್ನೇ ಹೇಳುತ್ತದೆ. || 29 ||

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ || 30 ||**

**ಅರ್ಥ** - ಜೀವಾತ್ಮರ ಸ್ಥೂಲದೇಹ, ಲಿಂಗದೇಹ ಮತ್ತು ಸ್ವರೂಪದೇಹ ಈ ಮೂರು ದೇಹಗಳಲ್ಲಿ ಪರಮಾತ್ಮನು ರಕ್ಷಕನಾಗಿ ಸನ್ನಿಹಿತನಾಗಿರುತ್ತಾನೆ. ಆ ಕಾರಣದಿಂದಾಗಿಯೇ ಜೀವನು ಅವಧ್ಯನಾಗಿದ್ದಾನೆ. ಆದ್ದರಿಂದ ಅರ್ಜುನ, ನೀನು ಯಾರ ಬಗ್ಗೆಯೂ ದುಃಖಿಸುವ ಅಗತ್ಯವಿಲ್ಲ.

ಅಥವಾ- ಜೀವಾತ್ಮರಿಗೆ ರಕ್ಷಕನಾಗಿ ದೇಹತ್ರಯದಲ್ಲೂ ಪರಮಾತ್ಮನಿದ್ದಾನೆ. ಹಿಂದೆ ಹೇಳಿದಂತೆ ಬೇರೆ ಬೇರೆ ದೇಹಗಳ ಸಂಬಂಧವು ಅನಿವಾರ್ಯವಾದುದರಿಂದಲೂ , ಆತ್ಮನು ಈಶ ಪ್ರತಿಬಿಂಬನಾಗಿರುವ ಕಾರಣದಿಂದ ಅವನಿಗೆ ನಾಶವಿಲ್ಲದಿರುವುದರಿಂದಲೂ ಅರ್ಜುನ, ಬಂಧುಗಳ ಬಗ್ಗೆ ನೀನು ದುಃಖಿಸಬೇಡ.

**ಯದೇತಜ್ಜೀವಸ್ಯ 'ನ ತ್ವಂ ನೇಮೇ' ಇತ್ಯಾದಿನಾ ನಿತ್ಯತ್ವಮುಕ್ತಮ್, ತತ್ ಸ್ವಾಭಾವಿಕತ್ವಾತ್ ನ ಈಶಾಧೀನಮ್ । ತಥಾ ಚ ಸರ್ವಂ ಪರಮೇಶ್ವರಾಧೀನಂ, ಸ ಏವ ಸರ್ವಸ್ವತಂತ್ರ ಇತ್ಯುಕ್ತಮ್ । ಅತಸ್ತದ್ವಿರೋಧ ಇತ್ಯತಃ, ತದಪಿ 'ದ್ರವ್ಯಂ ಕರ್ಮ ಚ' ಇತ್ಯಾದೇರೀಶ್ವರಾಯತ್ತಮಿತ್ಯಾಹ- ದೇಹೀತಿ ||**

**ಅನುವಾದ** - ಹಿಂದೆ **'ನ ತ್ವಂ ನೇಮೇ'** (ಶ್ಲೋಕ 12) ಎಂಬ ಶ್ಲೋಕದಲ್ಲಿ ಜೀವಾತ್ಮನು ನಿತ್ಯ ಎಂದು ಹೇಳಲಾಗಿದೆ. ಆ ನಿತ್ಯತ್ವವು 'ಜೀವ'ನ ಸ್ವಾಭಾವಿಕವಾದ ಧರ್ಮವಾಗಿದೆ. ಆ ಕಾರಣದಿಂದಾಗಿಯೇ ಅದು ಈಶಾಧೀನವಾಗಿರಲು ಸಾಧ್ಯವಿಲ್ಲ. ಹೀಗಿರುವಾಗ, ಎಲ್ಲವೂ ಈಶಾಧೀನ, ಅವನೇ ಸರ್ವತಂತ್ರ ಸ್ವತಂತ್ರ ಎನ್ನುವುದು ಹೇಗೆ ?

ಈ ಪ್ರಶ್ನೆಗೆ **'ದ್ರವ್ಯಂ ಕರ್ಮ ಚ ಕಾಲಶ್ಚ'** ಎಂಬ ಪ್ರಮಾಣದಂತೆ, ಸ್ವಾಭಾವಿಕವಾದುದೂ ಈಶಾಧೀನ ಎಂಬ ಉತ್ತರವನ್ನು **'ದೇಹೀ ನಿತ್ಯಂ'** ಎಂಬ ಶ್ಲೋಕದಲ್ಲಿ ಹೇಳಲಾಗಿದೆ.

**ಸರ್ವಸ್ಯ ದೇಹಿನಃ, ದೇಹೇ= ಸ್ಥೂಲದೇಹೇ, ಸೂಕ್ಷ್ಮಲಿಂಗದೇಹೇ, ಚಿದ್ರೂಪಸ್ವರೂಪದೇಹೇ ಚ, ಅಯಂ= ಪೂರ್ವಪ್ರಕೃತೋ ಹರಿಃ ರಕ್ಷಕತ್ವೇನ ತಿಷ್ಠತಿ । ಅತೋ ದೇಹೀ = ಜೀವೋ ನಿತ್ಯಮವಧ್ಯಃ । ಹೇ ಭಾರತ, ತಸ್ಮಾತ್= ರಕ್ಷಕತಯಾ ಸ್ಥಿತತ್ವೇನ ನಿತ್ಯಮವಧ್ಯತ್ವಾತ್ ಸರ್ವಾಣಿ ಭೂತಾನಿ ತ್ವಂ ಶೋಚಿತುಂ ನಾರ್ಹಸೀತ್ಯರ್ಥಃ ॥ 30 ॥**

**ಅನುವಾದ** - ಎಲ್ಲಾ ಜೀವಾತ್ಮರ, **ದೇಹೇ** = ಸ್ಥೂಲದೇಹ, ಸೂಕ್ಷ್ಮವಾದ ಲಿಂಗದೇಹ ಮತ್ತು ಚಿದ್ರೂಪವಾದ ಸ್ವರೂಪದೇಹ ಈ ಮೂರರಲ್ಲೂ , **ಅಯಂ** = ಈ ಹಿಂದೆ ಪ್ರಸ್ತುತನಾದ ಶ್ರೀಹರಿಯು ರಕ್ಷಕನಾಗಿ ಇದ್ದಾನೆ. ಈ ಕಾರಣದಿಂದಾಗಿಯೇ ಜೀವಾತ್ಮನು ಸರ್ವದಾ ಅವಧ್ಯನಾಗಿದ್ದಾನೆ.

ಎಲೈ ಅರ್ಜುನನೇ, **ತಸ್ಮಾತ್** = ರಕ್ಷಕನಾಗಿರುವ ಪರಮಾತ್ಮನು ಸದಾ ಅವಧ್ಯನಾಗಿರುವ ಕಾರಣದಿಂದಾಗಿ ಯಾವ ಜೀವರ ಸಾವಿನ ಬಗ್ಗೆಯೂ ನೀನು ದುಃಖಪಡುವ ಅಗತ್ಯವಿಲ್ಲ.

॥ 30 ॥

**ಯದ್ವಾ ದೇಹಯೋಗವಿಯೋಗಯೋಃ ನಿಯತತ್ವಾತ್ ಆತ್ಮನಶ್ಚೇಶ್ವರ-ಸರೂಪತ್ವಾದ್ ಬಿಂಬನಾಶಾದಿನಿಮಿತ್ತನಾಶಾಭಾವಾನ್ನ ಶೋಕಃ ಕಾರ್ಯ ಇತ್ಯುಪಸಂಹರತಿ – ದೇಹೀತಿ ॥**

**ಅನುವಾದ** - ಅಥವಾ, ಜೀವರಿಗೆ ಪೂರ್ವದೇಹನಾಶ ಹೊಸದೇಹ ಪ್ರಾಪ್ತಿಯು ಅನಿವಾರ್ಯ. ಅವನು ಈಶಪ್ರತಿಬಿಂಬನಾಗಿರುವ ಕಾರಣ ಬಿಂಬನಾದ ಪರಮಾತ್ಮನಿಗೆ ವಿನಾಶವಾಗಲೀ ಅವನ ಸನ್ನಿಧಿನಾಶವಾಗಲೀ ಇಲ್ಲದಿರುವ ಕಾರಣ ಪ್ರತಿಬಿಂಬನಾದ ಜೀವನಿಗೂ ಸರ್ವಥಾ ನಾಶವಿಲ್ಲ, ಆದ್ದರಿಂದ ಜೀವನ ಬಗ್ಗೆ ದುಃಖಪಡುವ ಅಗತ್ಯವಿಲ್ಲ ಎಂದು ಉಪಸಂಹಾರ ಮಾಡುತ್ತಿದ್ದಾನೆ ಶ್ರೀಕೃಷ್ಣ, ಈ ಶ್ಲೋಕದಲ್ಲಿ.

**ಪ್ರಾಗ್ವದೇವ ಪೂರ್ವಾರ್ಧಸ್ಯಾರ್ಥಃ । ತಸ್ಮಾದಿತ್ಯಸ್ಯ ತು ದೇಹಯೋಗ-ವಿಯೋಗಯೋಃ ಅವರ್ಜನೀಯತ್ವಾತ್ ಆತ್ಮನಶ್ಚೇಶ್ವರಸರೂಪತ್ವೇನ ಸರ್ವಥೈವಾ-ನಾಶಾದಿತ್ಯರ್ಥಃ । ಭಗವತ್ಸರೂಪತ್ವೇಽಪ್ಯನಾಶಃ ಕುತಃ ಇತ್ಯತೋಽತಿಸಮರ್ಥೋ ಭಗವಾನಿತಿ ತತ್ಸಾಮರ್ಥ್ಯಂ ಪ್ರಾಗುಕ್ತಮಿತಿ ತಸ್ಯ ತದುಪಸಂಹಾರೋಪಯುಕ್ತತಾ ಧ್ಯೇಯೇತಿ ॥ 30 ॥**

**ಅನುವಾದ** – ಪೂರ್ವಾರ್ಧಕ್ಕೆ ಹಿಂದಿನಂತೆಯೇ ಅರ್ಥ. '**ತಸ್ಮಾತ್**' ಎಂಬ ಉತ್ತರಾರ್ಧದ ಪದಕ್ಕೆ ಹೀಗೆ ಅರ್ಥ–ದೇಹ ಪ್ರಾಪ್ತಿ – ನಾಶಗಳು ಅನಿವಾರ್ಯವಾಗಿರುವುದರಿಂದ ಮತ್ತು ಆತ್ಮನು ಈಶ ಪ್ರತಿಬಿಂಬನಾಗಿರುವ ಕಾರಣದಿಂದಾಗಿ ಸರ್ವಥಾ ನಾಶವಿಲ್ಲದಿರುವುದರಿಂದ ಎಂದು. ಪರಮಾತ್ಮನ ಪ್ರತಿಬಿಂಬನಾದರೂ ಜೀವನಿಗೆ ವಿನಾಶವಿಲ್ಲದಿರುವುದು ಹೇಗೆ ? ಎನ್ನುವ ಪ್ರಶ್ನೆಗೆ – ಪರಮಾತ್ಮನು ಅತಿಸಮರ್ಥನಾಗಿದ್ದಾನೆ ಎಂದು ಉತ್ತರ. ಇದಕ್ಕಾಗಿಯೇ ಪರಮಾತ್ಮನ ಸಾಮರ್ಥ್ಯವನ್ನು ಹಿಂದೆ ಹೇಳಲಾಗಿದೆ. ಹೀಗೆ, ಪರಮಾತ್ಮನ ಮಹಿಮೆಯನ್ನು ಹಿಂದೆ ಹೇಳಿರುವುದು ಇಲ್ಲಿ ಮಾಡಿರುವ ಉಪಸಂಹಾರಕ್ಕೆ ಉಪಯುಕ್ತವಾಗಿದೆ ಎಂದು ತಿಳಿಯಬೇಕು. ॥ 30 ॥

## ದುರ್ಜನ ಸಂಹಾರ ಕ್ಷತ್ರಿಯನ ಮುಖ್ಯಧರ್ಮ

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್‌ಕ್ಷತ್ರಿಯಸ್ಯ ನ ವಿದ್ಯತೇ ॥ 31 ॥**

**ಅರ್ಥ** – ಅರ್ಜುನನೆ, ನಿನ್ನ ಕ್ಷತ್ರಿಯ ಧರ್ಮವನ್ನು ಪರಾಮರ್ಶಿಸಿದಾಗಲೂ ನೀನು ಹೆದರಿ ನಡುಗಬೇಕಾದ ಆಗತ್ಯವಿಲ್ಲ. ಏಕೆಂದರೆ ಕ್ಷತ್ರಿಯರಿಗೆ ಯುದ್ಧವು ವಿಹಿತ ಧರ್ಮ. ಅಂತಹ ಧರ್ಮಕ್ಕಿಂತ ಶ್ರೇಯಸ್ಕರವಾದ ಕೆಲಸ ಕ್ಷತ್ರಿಯರಿಗೆ ಬೇರೊಂದಿಲ್ಲ.

**ಯದುಕ್ತಂ ಪ್ರಾಕ್ 'ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ' ಇತಿ ತತ್ರಾಹ– ಸ್ವಧರ್ಮಮಿತಿ ॥ ಯದ್ವಾ ನ ಕೇವಲಮಾತ್ಮನಿತ್ಯತ್ವಾದಶೋಕಃ ।[1] ಕಿಂ ತರ್ಹೀತ್ಯತ ಆಹ– ಸ್ವಧರ್ಮಮಿತಿ ॥**

**ಅನುವಾದ** – ಹಿಂದೆ (ಪ್ರಥಮಾಧ್ಯಾಯದಲ್ಲಿ) ಅರ್ಜುನನು ತನಗೆ ನಡುಕ

1. ಯದ್ವಾ ಇತಿವಾಕ್ಯಂ ಖಕೋಶೇ ನಾಸ್ತಿ

ಬರುತ್ತಿದೆಯೆಂದೂ, ರೋಮಾಂಚವಾಗುತ್ತಿದೆಯೆಂದೂ ಹೇಳಿದ್ದಾನೆ. ಅದಕ್ಕೆ ಉತ್ತರವನ್ನು ಈ ಶ್ಲೋಕದಲ್ಲಿ ಶ್ರೀಕೃಷ್ಣ ಕೊಡುತ್ತಿದ್ದಾನೆ.

ಅಥವಾ, ಆತ್ಮನು ನಿತ್ಯನಾದುದರಿಂದ ನೀನು ದುಃಖಿಸುವ ಅಗತ್ಯವಿಲ್ಲ. ಅಷ್ಟೇ ಅಲ್ಲ, ಇನ್ನೊಂದು ಕಾರಣದಿಂದಾಗಿಯೂ ನೀನು ದುಃಖ ಪಡಬೇಕಾಗಿಲ್ಲ ಎಂದು ಈ ಶ್ಲೋಕದಲ್ಲಿ ಹೇಳುತ್ತಿದ್ದಾನೆ.

**ನ ಕೇವಲಮಾತ್ಮನೋಽವಿನಾಶಾದೇವಾವಿಕಂಪಃ । ಕಿಂತು ಸ್ವಧರ್ಮಮಪಿ ಅವೇಕ್ಷ್ಯ ವಿಕಂಪಿತುಂ = ಶರೀರೇ ಕಂಪಂ, ಸರ್ವಾವಯವಚೇಷ್ಟಾಂ ಕರ್ತುಂ ನಾರ್ಹಸೀತ್ಯರ್ಥಃ । ಯಚ್ಚೋಕ್ತಂ 'ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ' ಇತಿ ತತ್ರಾಹ – ಧರ್ಮ್ಯಾದಿತಿ ॥ ಪರಲೋಕಸುಖ-ಹೇತುರ್ಧರ್ಮಃ, ತತ್ಸಂಬಂಧಿ ತಜ್ಜನಕಮಿತಿ ಯಾವತ್ । ಯದ್ವಾ ಧಾರಕತ್ವಾದ್ ಧರ್ಮೋ ಹರಿಃ, ತತ್ಪೂಜಾರೂಪಂ ಯತ್ತದ್ಧರ್ಮ್ಯಂ, ತಸ್ಮಾದ್ ಯುದ್ಧಾದನ್ಯತ್ ಶ್ರೇಯಃ ಕ್ಷತ್ರಿಯಸ್ಯ ನ ವಿದ್ಯತೇ । ಹಿ ಪ್ರಸಿದ್ಧಮೇತತ್॥ 31 ॥**

**ಅನುವಾದ** – ಆತ್ಮನಿಗೆ ನಾಶವಿಲ್ಲದ ಕಾರಣದಿಂದಷ್ಟೇ ಅಲ್ಲ; ನಿನ್ನ ಕರ್ತವ್ಯದೃಷ್ಟಿಯಿಂದಲೂ ನೀನು ಹೆದರಿ ನಡುಗುವ ಅಗತ್ಯವಿಲ್ಲ ಎಂದು ಶ್ಲೋಕದ ಅಭಿಪ್ರಾಯ.

ಶ್ಲೋಕದಲ್ಲಿ ವಿಕಂಪ ಶಬ್ದಕ್ಕೆ ದೇಹದ ಅಂಗಾಂಗಗಳ ನಡುಕ ಎಂದರ್ಥ.

ಹಿಂದೆ 'ಬಂಧುಜನರನ್ನು ಕೊಂದರೆ ನಮಗೆ ಶ್ರೇಯಸ್ಸಾಗದು' ಎಂದು ಅರ್ಜುನ ಹೇಳಿದ್ದ (1–31). ಅದಕ್ಕೆ ಶ್ರೀಕೃಷ್ಣನ ಉತ್ತರ ಈ ಶ್ಲೋಕದ ಉತ್ತರಾರ್ಧ. ಧರ್ಮಕ್ಕೆ ಕಾರಣವಾದುದು ಧರ್ಮ್ಯ . ಅರ್ಥಾತ್, ಧರ್ಮವೆಂದರೆ ಪರಲೋಕದ ಸುಖಕ್ಕೆ ಕಾರಣವಾದ ಪುಣ್ಯ . ಅಥವಾ ಲೋಕಧಾರಕನಾದುದರಿಂದ ಪರಮಾತ್ಮನಿಗೆ ಧರ್ಮ ಎಂಬ ಹೆಸರಿದೆ. ಅಂತಹ ಪುಣ್ಯಜನಕವಾದ ಪರಮಾತ್ಮನ ಆರಾಧನಾರೂಪವಾದ ಸತ್ಕರ್ಮಗಳು ಧರ್ಮ್ಯವೆನಿಸುತ್ತವೆ. ಪ್ರಕೃತದಲ್ಲಿ ಕ್ಷತ್ರಿಯೋಚಿತವಾದ ಯುದ್ಧವೇ ಧರ್ಮ್ಯ. ಅಂತಹ ಯುದ್ಧಕ್ಕಿಂತ ಶ್ರೇಯಸ್ಕರವಾದ ಸತ್ಕರ್ಮ ಕ್ಷತ್ರಿಯರಿಗೆ ಬೇರೊಂದಿಲ್ಲ. (ಈ ಕಾರಣದಿಂದಾಗಿಯೂ ನೀನು ಹೆದರುವ ಅಗತ್ಯವಿಲ್ಲ.) ಶ್ಲೋಕದ 'ಹಿ' ಶಬ್ದವು 'ಈ ವಿಷಯವು ಶಾಸ್ತ್ರಪ್ರಸಿದ್ಧವಾದುದು' ಎಂಬ ಅಭಿಪ್ರಾಯವನ್ನು ಸೂಚಿಸುತ್ತದೆ.

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ ॥ 32 ॥**

**ಅರ್ಥ**- ನಿನಗೆ ಅನಾಯಾಸವಾಗಿ ತೆರೆದುಕೊಂಡ ಸ್ವರ್ಗದ ಬಾಗಿಲು ಈ ಯುದ್ಧವಾಗಿದೆ. ಇಂತಹ ಯುದ್ಧದ ಅವಕಾಶವು ಪುಣ್ಯಶಾಲಿಗಳಾದ ಕೆಲವೇ ಕ್ಷತ್ರಿಯರಿಗೆ ದೊರಕುತ್ತದೆ.

**ಕಿಂಚ ಸ್ವಯಮೇವ ಮಹತಿ ಶ್ರೇಯಸಿ ಪ್ರಾಪ್ತೇ [1]ವಿಕಂಪೋಽನುಚಿತ ಇತ್ಯಾಹ– ಯದೃಚ್ಛಯೇತಿ ॥ ಯದೃಚ್ಛಯಾ= ಅಪ್ರಯತ್ನೇನ ಉಪಪನ್ನಂ= ಪ್ರಾಪ್ತಮ್ । 'ಯದೃಚ್ಛಾ ಹಿ ತದಿಚ್ಛಾ ಸ್ಯಾತ್' ಇತ್ಯುಕ್ತೇಃ ಈಶ್ವರೇಚ್ಛಾಪ್ರಾಪ್ತಮಿತಿ ವಾ । ಅಪಾವೃತಂ = ಅಪಗತಾವರಣಂ ಸ್ವರ್ಗದ್ವಾರಂ ಚ, ಪಾರತ್ರಿಕಸುಖ-ಸಾಧನಮಿತಿ ಯಾವತ್ । ಈದೃಶಂ = ಭಗವತ್ಪೂಜಾತ್ವೇನ ಸ್ವಧರ್ಮತ್ವೇನ ಸ್ಥಿತಂ ಯುದ್ಧಂ ಸುಖಿನಃ= ಸುಖಹೇತುಪುಣ್ಯವಂತಃ ಕ್ಷತ್ರಿಯಾಃ, ಹೇ ಪಾರ್ಥ, ಲಭಂತೇ= ಪ್ರಾಪ್ನುವಂತಿ । ಯದ್ವಾ ಈದೃಶಂ ಯುದ್ಧಂ ಯೇ ಕ್ಷತ್ರಿಯಾಃ ಲಭಂತೇ, ತೇ ಸುಖಿನ ಇತ್ಯರ್ಥಃ । ತೇನ 'ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ' ಇತಿ ನಿರಸ್ತಮ್ ॥ 32 ॥**

**ಅನುವಾದ** - ಹಿಂದೆ ಹೇಳಿದ ಕಾರಣವಷ್ಟೇ ಅಲ್ಲ; ಶ್ರೇಯಸ್ಸಿನ ದಾರಿಯು ತಾನಾಗಿಯೇ ಬಂದಿರುವಾಗ ಹೆದರಿ ನಡುಗುವುದು ಅನುಚಿತವಾಗಿದೆ ಎಂದು ಈ ಶ್ಲೋಕದಲ್ಲಿ ಶ್ರೀಕೃಷ್ಣ ಹೇಳಿದ್ದಾನೆ.

**ಯದೃಚ್ಛಯಾ** = ಅನಾಯಾಸವಾಗಿ, **ಉಪಪನ್ನಂ** = ಬಂದಿರುವ, ಅಥವಾ, 'ಯದೃಚ್ಛೆ ಎಂದರೆ ಹರೀಚ್ಛೆ ' ಎಂಬ ಪ್ರಮಾಣಕ್ಕೆ ಅನುಸಾರವಾಗಿ **ಯದೃಚ್ಛಯಾ ಪ್ರಾಪ್ತಂ** ಎಂದರೆ, 'ಭಗವದಿಚ್ಛೆಯಂತೆ ಬಂದೊದಗಿದ ' ಎಂದರ್ಥ.

**ಅಪಾವೃತಂ** = ಪ್ರತಿಬಂಧಕವನ್ನು ಕಳೆದುಕೊಂಡಿರುವ (ತೆರೆದಿರುವ) ಸ್ವರ್ಗದ ಬಾಗಿಲು ಈ ಯುದ್ಧ. ಈ ಯುದ್ಧವು ನಿನಗೆ ಪರಲೋಕದ ಸುಖಕ್ಕೆ ಕಾರಣವಾದುದು ಎಂದು ಅಭಿಪ್ರಾಯ.

**ಈದೃಶಂ** = ಭಗವಂತನ ಪೂಜಾರೂಪವಾಗಿ ಸ್ವಕರ್ತವ್ಯವಾಗಿ ಒದಗಿಬಂದಿರುವ ಇಂತಹ ಯುದ್ಧವನ್ನು , **ಸುಖಿನಃ** = ಸುಖಕ್ಕೆ ಕಾರಣವಾದ ಸುಕೃತವುಳ್ಳ ಕ್ಷತ್ರಿಯರು, ಎಲೈ ಅರ್ಜುನನೇ, **ಲಭಂತೇ** = ಹೊಂದುತ್ತಾರೆ .

ಅಥವಾ, ಈ ರೀತಿಯ ಯುದ್ಧದ ಅವಕಾಶವು ಯಾವ ಕ್ಷತ್ರಿಯರಿಗೆ ಒದಗುವುದೋ ಅಂತಹವರು ಭಾಗ್ಯಶಾಲಿಗಳು ಎಂದರ್ಥ.

---

1.ವಿಲಂಬೋ ನೋಚಿತ ಇತಿ ಕ್ವಚಿತ್

ಇದರಿಂದ, ಅರ್ಜುನ ಹಿಂದೆ ಮಾಡಿರುವ - 'ನಮ್ಮ ಬಂಧುಗಳನ್ನು ಕೊಂದರೆ ನಮಗೆ ಸುಖ ಹೇಗೆ ಸಿಕ್ಕೀತು ? ' ಎನ್ನುವ (1/37) ಆಕ್ಷೇಪಕ್ಕೆ ಉತ್ತರವು ದೊರಕಿದಂತಾಯಿತು. ॥ 32 ॥

**ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥ 33 ॥**

**ಅರ್ಥ**- ಆದರೂ ನೀನು ಕರ್ತವ್ಯವಾದ ಈ ಯುದ್ಧವನ್ನು ಮಾಡದೇ ಹೋದಲ್ಲಿ ಕರ್ತವ್ಯ-ಚ್ಯುತಿಯಾದಂತಾಗಿ ಕೀರ್ತಿಯನ್ನು ಕಳೆದುಕೊಂಡು ಪಾಪವನ್ನೂ ಹೊಂದಬೇಕಾದೀತು.

**ಯುದ್ಧಾಕರಣೇ ಅನರ್ಥಪ್ರಾಪ್ತ್ಯುಕ್ತ್ಯಾ ಚ ತತ್ಕರ್ತವ್ಯತಾಮಾಹ– ಅಥ ಚೇದಿತ್ಯಾದಿ ಚತುರ್ಭಿಃ ॥ ಅಥ ಚೇತ್ ಯದೃಚ್ಛಯಾ ಪಾರತ್ರಿಕಸುಖಹೇತುತ್ವೇನ ಚ ಪ್ರಾಪ್ತಮಪಿ । ಧರ್ಮ್ಯಂ ಪ್ರಾಗ್ವತ್ । ಇಮಂ ಸಂಗ್ರಾಮಂ= ಯುದ್ಧಂ, ನ ಕರಿಷ್ಯಸಿ= ನ ಕುರ್ಯಾಃ । ತರ್ಹಿ ತತಃ = ಸ್ವಧರ್ಮಭೂತಯುದ್ಧಾಕರಣಾತ್ ನ ಕೇವಲಂ ಧರ್ಮಕೀರ್ತ್ಯೋರ್ಹಾನಿಃ ಸ್ವವಿಹಿತಧರ್ಮತ್ಯಾಗಾತ್ ಪಾಪಂ ಚಾವಾಪ್ಸ್ಯಸಿ ॥ 33 ॥**

**ಅನುವಾದ** - ಯುದ್ಧವನ್ನು ಮಾಡದೇ ಹೋದರೆ ಅನರ್ಥವೂ ಇದೆ ಎನ್ನುತ್ತಾ, ನೀನು ಯುದ್ಧವನ್ನು ಮಾಡಲೇಬೇಕೆಂದು ಈ ಶ್ಲೋಕದಲ್ಲಿ ಕೃಷ್ಣ ಹೇಳುತ್ತಾನೆ.

**ಅಥ ಚೇತ್** = ಯಾದೃಚ್ಛಿಕವಾಗಿ ಪಾರತ್ರಿಕ ಸುಖಕ್ಕೆ ಕಾರಣವಾಗಿ ಒದಗಿ ಬಂದಿರುವ. **ಧರ್ಮ್ಯಂ** ಎಂಬ ಶಬ್ದಕ್ಕೆ ಹಿಂದಿನಂತೆಯೇ ಅರ್ಥವನ್ನು ತಿಳಿಯಬೇಕು. **ಇಮಂ ಸಂಗ್ರಾಮಂ**= ಈ ಯುದ್ಧವನ್ನು, **ನ ಕರಿಷ್ಯಸಿ** = ಮಾಡದೇ ಹೋದಲ್ಲಿ, **ತತಃ** = ಕರ್ತವ್ಯವಾದ ಯುದ್ಧವನ್ನು ಮಾಡದಿರುವ ಕಾರಣದಿಂದಾಗಿ, ಕೇವಲ ಪುಣ್ಯ ಮತ್ತು ಕೀರ್ತಿಯ ಹಾನಿಯಷ್ಟೇ ಅಲ್ಲ; ವಿಹಿತಕರ್ಮತ್ಯಾಗದಿಂದ ಪಾಪವೂ ಬರುತ್ತದೆ ॥ 33 ॥

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್ ।**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥ 34 ॥**

**ಅರ್ಥ** - ಅರ್ಜುನ, ನೀನು ಯುದ್ಧವನ್ನು ಮಾಡದೇ ಹೋದರೆ ಎಲ್ಲರೂ ನಿನಗೆ ಶಾಶ್ವತವಾದ ಅಪಕೀರ್ತಿಯನ್ನು ಹೊರಿಸುತ್ತಾರೆ. ಸಂಭಾವಿತನಿಗೆ ಅಪಕೀರ್ತಿಯು ಮರಣಕ್ಕಿಂತಲೂ ಮಿಗಿಲು.

**ಅಪಕೀರ್ತಿಂ ಚ ಅವಾಪ್ಸ್ಯಸೀತ್ಯಾಹ– ಅಕೀರ್ತಿಂ ಚೇತಿ ॥ ಅಪಿ ಚಾಕೀರ್ತಿಂ= ಅಪಕೀರ್ತಿಮ್ । ಅವ್ಯಯಾಂ = ಶಾಶ್ವತೀಮ್ । ಅಸ್ತು , ಕೋ ದೋಷ ಇತ್ಯತ ಆಹ– ಸಂಭಾವಿತಸ್ಯೇತಿ ॥ ಲೋಕೇ ಬಹುಮತಸ್ಯ, ಅತಿರಿಚ್ಯತೇ= ಅಧಿಕಾ ಭವತಿ ॥ 34 ॥**

**ಅನುವಾದ** - 'ಅಪಕೀರ್ತಿಯನ್ನೂ ಹೊಂದುವಿ' ಎಂದು ಈ ಶ್ಲೋಕದಲ್ಲಿ ಹೇಳಿದ್ದಾನೆ. **ಅಕೀರ್ತಿಂ** = ಅಯಶಸ್ಸನ್ನು . **ಅವ್ಯಯಾಂ** = ಶಾಶ್ವತವಾದ ಅಪಕೀರ್ತಿ ಬರಲಿ, ಅದರಿಂದೇನು? ಅದಕ್ಕುತ್ತರ **ಸಂಭಾವಿತಸ್ಯ** ಎಂಬ ಉತ್ತರಾರ್ಧ.

**ಸಂಭಾವಿತಸ್ಯ** = ಜನಾದರಣೀಯನಾದವನಿಗೆ , **ಅತಿರಿಚ್ಯತೇ** = ಹೆಚ್ಚಿನದ್ದಾಗುತ್ತದೆ.

॥ 34 ॥

**ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್ ॥ 35 ॥**

**ಅರ್ಥ**- ಮಹಾರಥಿಗಳು, ನೀನು ಕಾರುಣ್ಯದಿಂದ ಯುದ್ಧವನ್ನು ಬಿಟ್ಟುಹೋದಿ ಎನ್ನುವುದಿಲ್ಲ; ಹೊರತಾಗಿ ಹೆದರಿ ಓಡಿಹೋದಿ, ಎನ್ನುತ್ತಾರೆ. ಇದರಿಂದಾಗಿ ಯಾರ ಗೌರವಕ್ಕೆ ನೀನು ಪಾತ್ರನಾಗಿದ್ದೀಯೋ ಅವರ ಮುಂದೆ ಸಣ್ಣವನಾಗುವಿ.

**[1]ದಯಾಲುತ್ವಾನ್ನಿವೃತ್ತೋಽಯಮಿತಿ ಕೀರ್ತಿಮೇವ ಕಥಯಿಷ್ಯಂತೀತ್ಯತ ಆಹ– ಭಯಾದಿತಿ ॥ ಮಂಸ್ಯಂತೇ = ಜ್ಞಾಸ್ಯಂತೇ । ಮಹಾರಥಸ್ವರೂಪಮುಕ್ತಂ ಪೂರ್ವಾಧ್ಯಾಯೇ । ಮನ್ಯಂತಾಂ ತೇ, ತತಃ ಕಾ ಹಾನಿರಿತ್ಯತ ಆಹ– ಯೇಷಾಮಿತಿ ॥ ಯೇಷಾಂ ಮಹಾರಥಾನಾಂ ತ್ವಂ ಬಹುಮತೋ ಭೂತ್ವಾಽಸೀಃ ತೇಷಾಂ ಪುರತ ಏವ ಲಾಘವಂ ಯಾಸ್ಯಸೀತ್ಯರ್ಥಃ ॥ 35 ॥**

**ಅನುವಾದ** - 'ಯುದ್ಧ ಪರಾಙ್ಮುಖನಾದರೆ , ಅರ್ಜುನ ದಯೆತೋರಿ ಯುದ್ಧದಿಂದ ಹಿನ್ನಡೆದ , ಎಂದು ನನಗೆ ಕೀರ್ತಿಯೇ ಬರುತ್ತದೆ ' ಎಂಬ ಅರ್ಜುನನ ವಾದಕ್ಕೆ ಈ ಶ್ಲೋಕ ಉತ್ತರವಾಗಿದೆ.

---

1. ಬಂಧುಸ್ನೇಹಾತ್ ಕಾರುಣ್ಯಾಚ್ಚ ಯುದ್ಧಾನ್ನಿವೃತ್ತಸ್ಯ ಶೂರಸ್ಯಾಕೀರ್ತಿಃ ಕಥಮಾಗಮಿಷ್ಯತೀತ್ಯತ ಆಹ – ಕ.

**ಮಂಸ್ಯಂತೇ**= ತಿಳಿಯುವರು. ಮಹಾರಥರೆಂದರೆ ಯಾರು ಎನ್ನುವ ವಿವರವನ್ನು ಮೊದಲನೆಯ ಅಧ್ಯಾಯದಲ್ಲಿ ಕೊಡಲಾಗಿದೆ. (ಶ್ಲೋಕ-16)

ನಾನು ಭಯದಿಂದಾಗಿಯೇ ಯುದ್ಧಬಿಟ್ಟೆನು ಎಂದು ಮಹಾರಥಿಕರು ತಿಳಿದುಕೊಳ್ಳಲಿ; ಅದರಿಂದ ನನಗೇನು ನಷ್ಟ ? ಅದಕ್ಕುತ್ತರ **'ಯೇಷಾಂ ಚ ತ್ವಂ'** ಎಂಬ ಉತ್ತರಾರ್ಧ. **ಯೇಷಾಂ**= ಯಾವ ಮಹಾರಥಿಕರಿಗೆ ನೀನು ಈ ಹಿಂದೆ ಬಹುಮಾನ ಪಾತ್ರನಾಗಿದ್ದೀಯೋ ಅವರ ಮುಂದೆಯೇ ಚಿಕ್ಕವನಾಗುತ್ತೀಯ, ಎಂದರ್ಥ ॥ 35 ॥

**ಅವಾಚ್ಯವಾದಾಂಶ್ಚ ಬಹೂನ್ವದಿಷ್ಯಂತಿ ತವಾಹಿತಾಃ ।**
**ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥ 36 ॥**

**ಅರ್ಥ** - ನಿನ್ನ ಶತ್ರುಗಳು ನಿನಗೆ ಆಡಬಾರದ ಮಾತುಗಳನ್ನೆಲ್ಲ ಆಡುತ್ತಾರೆ. ನಿನ್ನ ಸಾಮರ್ಥ್ಯವನ್ನು ಹೀಗಳೆಯುತ್ತಾರೆ. ಅದಕ್ಕಿಂತಲೂ ಹೆಚ್ಚಿನ ದುಃಖ ಇನ್ನೇನು ಇದ್ದೀತು.

**ನ ಕೇವಲಂ ಲಾಘವಪ್ರಾಪ್ತಿಃ । ತವಾಹಿತಾಃ = ಶತ್ರವಃ , ಅವಾಚ್ಯವಾದಾನ್= ವಚನಾನರ್ಹಶಬ್ದಾನ್ ಬಹೂನ್ ವದಿಷ್ಯಂತಿ । ತತಃ= ಶತ್ರುಕೃತನಿಂದಾದಿ-ಶ್ರವಣಾತ್ ದುಃಖತರಂ= ಅತಿಶಯಿತದುಃಖಂ ಕಿಂ ನು ? ನ ಕಿಮಪೀತ್ಯರ್ಥಃ । ॥ 36 ॥**

**ಅನುವಾದ** - ನೀನು ಅಲ್ಪನಾಗುವುದಷ್ಟೇ ಅಲ್ಲ ; **ತವ ಅಹಿತಾಃ** = ನಿನ್ನ ಶತ್ರುಗಳು, **ಅವಾಚ್ಯವಾದಾನ್** = ಹೇಳಬಾರದ ಅನೇಕ ಮಾತುಗಳನ್ನು, ಹೇಳುತ್ತಾರೆ. **ತತಃ** = ಶತ್ರುಗಳು ಮಾಡಿದ ನಿಂದೆಯನ್ನು ಕೇಳುವುದಕ್ಕಿಂತ, **ದುಃಖತರಂ** = ಹೆಚ್ಚಿನ ದುಃಖವು **ಕಿಂನು** = ಏನು ತಾನೇ ಇದ್ದೀತು ? ಅದಕ್ಕಿಂತ ಹೆಚ್ಚಿನದು ಇನ್ನೊಂದಿಲ್ಲ ಎಂದರ್ಥ. ॥ 36 ॥

**ಹತೋ ವಾ ಪ್ರಾಪ್ಸ್ಯಸಿ(ಸೇ) ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ ।**
**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥ 37 ॥**

**ಅರ್ಥ** - ಅರ್ಜುನ, ಯುದ್ಧದಲ್ಲಿ ಸತ್ತರೆ ಸ್ವರ್ಗ ಸಿಗುತ್ತದೆ ; ಗೆದ್ದರೆ ರಾಜ್ಯ ಸಿಗುತ್ತದೆ. ಎಲೈ ಕುಂತೀಪುತ್ರನೇ, ಆದ್ದರಿಂದ ಯುದ್ಧ ಮಾಡಲು ನಿರ್ಧರಿಸಿ ಎದ್ದೇಳು.

**ಯಚ್ಚೋಕ್ತಂ 'ನ ಚೈತದ್ವಿದ್ಮಃ ಕತರನ್ನೋ ಗರೀಯೋ ಯದ್ವಾ ಜಯೇಮ ಯದಿ ವಾ ನೋ ಜಯೇಯುಃ' ಇತಿ ಜಯಃ ಸಂದಿಗ್ಧ ಇತಿ, ಪಕ್ಷದ್ವಯೇಽ-**

**ಪ್ಯಹಾನಿರಿತ್ಯಾಹ– ಹತೋ ವೇತಿ ॥ 'ಜಿತ್ವಾ ವಾ ಭೋಕ್ಷ್ಯಸೇ ಮಹೀಮ್' ಇತ್ಯತ್ರ ಸ್ವರ್ಗಂ ಚ ಪಶ್ಚಾತ್ ಪ್ರಾಪ್ಸ್ಯಸೀತ್ಯಪಿ ಧ್ಯೇಯಮ್ ।**

**ಅನುವಾದ** - ಹಿಂದೆ (2-6) ಅರ್ಜುನ 'ನಾವು ಗೆಲ್ಲುತ್ತೇವೋ, ಅವರೇ ಗೆಲ್ಲುತ್ತಾರೋ ಯಾರಿಗೆ ಗೊತ್ತು ?' ಎಂದು ಸಂದೇಹವನ್ನು ವ್ಯಕ್ತಪಡಿಸಿದ್ದ. ಅದಕ್ಕೆ ಶ್ರೀಕೃಷ್ಣ – ಏನಾದರೂ ನಿನಗೇನೂ ಹಾನಿ ಇಲ್ಲ ಎಂದು, ಈ ಶ್ಲೋಕದಲ್ಲಿ ಉತ್ತರ ಕೊಟ್ಟಿದ್ದಾನೆ .

'ಗೆದ್ದರೆ ರಾಜ್ಯ' ಎಂಬ ಪಕ್ಷದಲ್ಲೂ 'ರಾಜ್ಯಭಾರ ಮಾಡಿ ಮಡಿದ ಮೇಲೆ ಸ್ವರ್ಗವೂ ಲಭಿಸುತ್ತದೆ' ಎಂದೂ ತಿಳಿಯಬೇಕು.

**'ಯೇ ಯುದ್ಧ್ಯಂತೇ ಪ್ರಧನೇಷು ಶೂರಾಸೋ ಯೇ ತನುತ್ಯಜಃ ।**
**ಯೇ ವಾ ಸಹಸ್ರದಕ್ಷಿಣಾಸ್ತಾಂಶ್ಚಿದೇವಾಪಿ ಗಚ್ಛತಾತ್' (ಋ.10.154.3)**

**ಇತಿ ಶ್ರುತೌ ಯೇ ಶೂರಾಃ ಪ್ರಧನೇಷು = ಯುದ್ಧೇಷು ಯುದ್ಧ್ಯಂತೇ, ಯೇ ಚ ತತ್ರ ಮ್ರಿಯಂತೇ, ಯೇ ಚ ಸಹಸ್ರಸಂಖ್ಯಾಕದಕ್ಷಿಣಾದಾತಾರಃ ತಾನೇವಾऽಯಂ ಪ್ರೇತೋऽಪಿ ಗಚ್ಛತಾದಿತಿ ಯಮಂ ಪ್ರತಿ ಪ್ರೇತಸ್ಯ ಸ್ವರ್ಗಪ್ರಾರ್ಥನಾತ್ । ತತ್ರ ಚ 'ಯೇ ಯುದ್ಧ್ಯಂತೇ ತಾನ್ ಪ್ರೇತೋ ಗಚ್ಛತಾದಿತಿ' ಯುದ್ಧ [1]ಶೂರಾಣಾಂ ಜಯೇऽಪಿ ಸ್ವರ್ಗಪ್ರಾಪ್ತೇರತ್ರ ಶ್ರುತಾವವಗಮಾತ್ । ತಸ್ಮಾತ್ ಪಕ್ಷದ್ವಯೇऽಪಿ ಫಲಭಾವಾದ್ಯುದ್ಧಾಯ ಕೃತನಿಶ್ಚಯಃ ಸನ್ನುತ್ತಿಷ್ಠ = ಸನ್ನದ್ಧೋ ಭವೇತ್ಯರ್ಥಃ ॥ 37 ॥**

**ಅನುವಾದ** - **ಯೇ ಯುದ್ಧ್ಯಂತೇ** ಎಂಬ ಶ್ರುತಿಗೆ ಹೀಗೆ ಅರ್ಥ - 'ಯಾವ ಧೀರರು , **ಪ್ರಧನೇಷು** = ಯುದ್ಧಗಳಲ್ಲಿ ಹೋರಾಡುವರೋ, ಹೋರಾಡಿ ಮಡಿಯುವರೋ, ಅದರಂತೆಯೇ, ಯಾರು ಸಾವಿರ ಸಂಖ್ಯೆಯಲ್ಲಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡುವರೋ, ಅವರನ್ನೇ 'ಗತಿಸಿದ ಈ ವ್ಯಕ್ತಿಯು' ಹಿಂಬಾಲಿಸಲಿ . ಇದು ಸತ್ತವನನ್ನು ಸ್ವರ್ಗ ಸೇರಿಸಲು ಯಮನನ್ನು ಕುರಿತು ಮಾಡಿದ ಪ್ರಾರ್ಥನೆ.

ಈ ವೇದ ಮಂತ್ರದಲ್ಲಿ **'ಯೇ ಯುದ್ಧ್ಯಂತೇ ತಾನ್ ಪ್ರೇತಃ ಗಚ್ಛತಾತ್'** ಎನ್ನುವ ಮೂಲಕ ಯುದ್ಧದಲ್ಲಿ ಶೂರರು ಗೆದ್ದರೆ ಸ್ವರ್ಗವು ಸಿಗುತ್ತದೆ ಎಂದು ತಿಳಿಸಲಾಗಿದೆ.

---

1. ಶೂರಾಣಾಮಜಯೇऽಪಿ – ಗ.

ಹೀಗೆ ಗೆದ್ದರೂ, ಸೋತರೂ ಎರಡೂ ಪಕ್ಷಗಳಲ್ಲಿ ಸಾಫಲ್ಯವಿರುವ ಕಾರಣ ಯುದ್ಧಕ್ಕೆ ನಿರ್ಧರಿಸಿ **ಉತ್ತಿಷ್ಠ** = ಸಿದ್ಧನಾಗು, ಎಂದು ಶ್ಲೋಕಾರ್ಥ. ॥ 37 ॥

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥ 38 ॥**

**ಅರ್ಥ** - ಸುಖ-ದುಃಖ, ಲಾಭ-ನಷ್ಟ , ಗೆಲುವು-ಸೋಲು ಇವುಗಳನ್ನು ಸಮಾನವಾಗಿ ಕಂಡು ಯುದ್ಧಕ್ಕೆ ಸಿದ್ಧನಾಗು . ಈ ಸ್ವಕರ್ಮಾನುಷ್ಠಾನದಿಂದ ನಿನಗೆ ಪಾಪವೇನೂ ಬರುವುದಿಲ್ಲ. ॥ 38 ॥

**ಯಚ್ಚೋಕ್ತಂ 'ಪಾಪಮೇವಾಶ್ರಯೇದಸ್ಮಾನ್' ಇತಿ ತತ್ರಾಹ– ಸುಖೇತಿ ॥ ಯಥಾ ದುಃಖಮನುಪಾದೇಯಂ ತಥಾ ವೈಷಯಿಕಸುಖಮಪಿ ಅನುಪಾದೇಯ-ಮಿತ್ಯನುಪಾದೇಯತ್ವೇನ ದುಃಖಸಮಂ ಸುಖಂ ಕೃತ್ವಾ ಇತ್ಯರ್ಥಃ । ಲಾಭಾಲಾಭಾವಿತ್ಯಾದೌ ಅಪಿ ಸಮಾವಿತ್ಯನುಷಂಗಃ । ಅನುಪಾದೇಯತ್ವೇನಾ-ಲಾಭಸಮಂ ಲಾಭಂ ಕೃತ್ವೇತ್ಯರ್ಥಃ । ಜಯಾಜಯಾವಿತ್ಯತ್ರಾಪ್ಯೇವಮರ್ಥೋಽಧ್ಯೇಯಃ । ಸುಖಾದ್ಯಭಿಲಾಷಂ ಹಿತ್ವಾ 'ಭಗವತ್ಪೂಜಾರೂಪೋಽಯಂ ಸ್ವಧರ್ಮ' ಇತಿ ಬುದ್ಧ್ವೇತಿ ಯಾವತ್ । ಯುದ್ಧಾಯ ಯುಜ್ಯಸ್ವ= ಯುಂಕ್ಷ್ವ । ತತೋ= ಭಗವದ್ಭಕ್ತಿಪೂರ್ವಕಂ ಸ್ವಧರ್ಮತಯಾಽನುಷ್ಠಾನಾತ್ ಪಾಪಂ ನೈವಾಪ್ಸ್ಯಸಿ । ಪ್ರತ್ಯುತ ಪುಣ್ಯಮೇವಾಪ್ಸ್ಯಸೀತ್ಯರ್ಥಃ ॥ 38 ॥**

**ಅನುವಾದ** - 'ನಮಗೆ ಪಾಪವೇ ಬಂದೀತು' (1-36) ಎಂಬ ಅರ್ಜುನನ ಅಳಲಿಗೆ ಇಲ್ಲಿ ಕೃಷ್ಣ ಉತ್ತರಿಸುತ್ತಾನೆ.

'ಹೇಗೆ ದುಃಖವು ಬೇಡವೋ ಅದರಂತೆಯೇ ವಿಷಯಜನ್ಯವಾದ ಸುಖವೂ ಬೇಡ' ಹೀಗೆ ಸುಖ ಮತ್ತು ದುಃಖಗಳಲ್ಲಿ 'ಇದು ಬೇಡ ' ಎಂಬ ಸಮಾನ ಭಾವನೆಯನ್ನು ತಾಳುವುದೇ **'ಸುಖದುಃಖೇ ಸಮೇ ಕೃತ್ವಾ'** ಎಂಬುದರ ಅರ್ಥ.

**'ಲಾಭಾಲಾಭೌ'** ಎನ್ನುವ ಶಬ್ದದೊಂದಿಗೂ **'ಸಮ'** ಎಂಬ ಶಬ್ದವನ್ನು ಜೋಡಿಸಿ-ಕೊಳ್ಳಬೇಕು. ನಷ್ಟದಂತೆ ಲಾಭವೂ ನನಗೆ ಬೇಕಿಲ್ಲ ಎಂಬ ಸಮಭಾವವನ್ನು ತಾಳಿ ಎಂದರ್ಥ. ಜಯಾಜಯೌ ಎಂಬಲ್ಲೂ ಇದೇ ಅಭಿಪ್ರಾಯವನ್ನು ತಿಳಿಯಬೇಕು.

ಒಟ್ಟಿನಲ್ಲಿ, ಸುಖಾದಿಗಳ ಆಸೆಯನ್ನು ತೊರೆದು 'ಭಗವಂತನ ಆರಾಧನಾರೂಪವಾದ ಈ

ಯುದ್ಧವು ನನ್ನ ಕರ್ತವ್ಯ' ಎಂದು ತಿಳಿದು ಯುದ್ಧಕ್ಕಾಗಿ **ಯುಜ್ಯಸ್ವ** = ತೊಡಗು, ಎಂದರ್ಥ. **ತತಃ**= ದೇವರಲ್ಲಿ ಭಕ್ತಿಪೂರ್ವಕವಾಗಿ ಸ್ವಕರ್ತವ್ಯಾನುಷ್ಠಾನ ಮಾಡಿರುವ ಕಾರಣದಿಂದಾಗಿ ನೀನು ಪಾಪವನ್ನು ಹೊಂದುವುದಿಲ್ಲ; ಅಷ್ಟೇ ಅಲ್ಲ, ಪುಣ್ಯವೇ ನಿನಗೆ ಬರುತ್ತದೆ, ಎಂದು ಶ್ರೀಕೃಷ್ಣನ ಅಭಿಪ್ರಾಯ ॥ 38 ॥

## ಜ್ಞಾನಸಾಧನ ನಿರೂಪಣೆ

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇತ್ವಿಮಾಂ ಶೃಣು ।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ ॥ 39 ॥**

**ಅರ್ಥ** – ಅರ್ಜುನ, ಇದುವರೆಗೆ ನಿನಗೆ ಜೀವೇಶ್ವರರ ಸರಿಯಾದ ಜ್ಞಾನ ಬರಲು ಬೇಕಾದ ಕೆಲವು ಮಾತುಗಳನ್ನು ಆಡಿರುವೆ. ಮುಂದೆ ಆ ಜ್ಞಾನಕ್ಕೆ ಬೇಕಾದ ಸಾಧನವನ್ನು ಹೇಳುತ್ತೇನೆ. ನಾನು ಹೇಳಲಿರುವ ಜ್ಞಾನಸಾಧನವನ್ನು ತಿಳಿದು, ಅದರಂತೆ ನಡೆದರೆ ದೇವರ ಸಾಕ್ಷಾತ್ಕಾರವನ್ನು ಪಡೆದು, ಸಂಸಾರ ದುಃಖವನ್ನು ಕಳೆದುಕೊಂಡು ಮೋಕ್ಷವನ್ನು ಪಡೆಯುವಿ.

**'ನ ತ್ವೇವ' ಇತ್ಯಾದಿ ಗ್ರಂಥೋಕ್ತಾರ್ಥೋಪಸಂಹಾರಪೂರ್ವಕಂ ತತ್-ಸಂಗತತ್ವೇನ ಉತ್ತರಪ್ರಕರಣಾರಂಭಂ ಪ್ರತಿಜಾನೀತೇ– ಏಷೇತಿ ॥ ಅತ್ರ ಸಾಂಖ್ಯಶಬ್ದೋ ಜೀವೇಶ್ವರಜ್ಞಾನಪರಃ । 'ನ ತ್ವಂ ನೇಮೇ ಇತ್ಯಾದಿನಾ ಜೀವಸ್ಯ ಪ್ರಾಧಾನ್ಯೇನ, ತಾದರ್ಥ್ಯೇನ 'ನತ್ವೇವಾಹ'ಮಿತ್ಯಾದಿನಾ ಈಶ್ವರಸ್ಯೇತಿ ದ್ವಯೋರಪಿ ಪ್ರಕೃತತ್ವಾತ್ । ಬುದ್ಧಿಶಬ್ದಶ್ಚ ಬುದ್ಧ್ಯತೇ ಅನಯೇತಿ ಕರಣವ್ಯುತ್ಪತ್ತ್ಯಾ ಬೋಧ-ಜನಕವಾಕ್ಪರಃ । ಯೋಗಶಬ್ದಶ್ಚ ಯುಜ್ಯತೇ= ಪ್ರಾಪ್ಯತೇ ಫಲಮನೇನೇತಿ ಕರಣವ್ಯುತ್ಪತ್ತ್ಯಾ ಉಪಾಯಪರಃ ।**

**ಅನುವಾದ** – ಈ ಅಧ್ಯಾಯದಲ್ಲಿ **'ನ ತ್ವೇವಾಹಂ'** ಎಂಬಲ್ಲಿಂದ ಪ್ರಾರಂಭಿಸಿ ಇದುವರೆಗೆ ಮಾಡಿರುವ ಉಪದೇಶವನ್ನು ಉಪಸಂಹಾರ ಮಾಡುತ್ತಾ ಅದಕ್ಕೆ ಸಂಬಂಧಪಟ್ಟಂತೆ ಮುಂದೆ ಹೇಳಲಿರುವ ವಿಷಯವನ್ನು ಶ್ರೀಕೃಷ್ಣ ಈ ಶ್ಲೋಕದಲ್ಲಿ ಹೇಳಿರುತ್ತಾನೆ.

ಇಲ್ಲಿ **ಸಾಂಖ್ಯ** ಶಬ್ದಕ್ಕೆ ಜೀವ ಮತ್ತು ಪರಮಾತ್ಮರ ಜ್ಞಾನ ಎಂದರ್ಥ. **'ನ ತ್ವಂ, ನೇಮೇ'** ಎಂಬ ಶ್ಲೋಕದಲ್ಲಿ 'ನೀನು' 'ಇವರು' ಎಂದು ಜೀವನು ಮುಖ್ಯವಾಗಿ ಪ್ರಸ್ತುತನಾಗಿದ್ದಾನೆ. ಜೀವರ ನಿತ್ಯತ್ವವನ್ನು ಸಮರ್ಥನೆ ಮಾಡುವುದಕ್ಕಾಗಿ ನಿದರ್ಶನರೂಪದಿಂದ **'ನ ತ್ವೇವಾಹಂ'** ಎಂದು ಈಶ್ವರನೂ ಪ್ರಸ್ತುತನಾಗಿದ್ದಾನೆ. ಆದ್ದರಿಂದ ಅವರಿಬ್ಬರ ಜ್ಞಾನವು ಸಾಂಖ್ಯ ಶಬ್ದದಿಂದ ವಿವಕ್ಷಿತ.

ಬುದ್ಧಿ = ಜ್ಞಾನಕ್ಕೆ ಕಾರಣವಾದುದು ಎನ್ನುವ ಅರ್ಥದಲ್ಲಿ ಶ್ಲೋಕದಲ್ಲಿರುವ ಬುದ್ಧಿಶಬ್ದವನ್ನು ತೆಗೆದುಕೊಳ್ಳಬೇಕು. ಜೀವೇಶ್ವರ ಜ್ಞಾನಜನಕವಾದ ಮಾತುಗಳು ಎಂದು ಅದರ ತಾತ್ಪರ್ಯಾರ್ಥ. ಅದರಂತೆ '**ಯುಜ್ಯತೇ ಅನೇನ ಇತಿ ಯೋಗಃ**' ಎಂಬ ವ್ಯುತ್ಪತ್ತಿಯಿಂದ ಯೋಗ ಶಬ್ದಕ್ಕೆ ಜ್ಞಾನರೂಪವಾದ ಫಲ ಪ್ರಾಪ್ತಿಗೆ ಕಾರಣವಾದ ಸಾಧನ ಎಂದು ಅರ್ಥ.

**ಅಯಮರ್ಥಃ । ಹೇ ಪಾರ್ಥ, ಸಾಂಖ್ಯೇ= ಜೀವೇಶ್ವರಸ್ವರೂಪಜ್ಞಾನ-ವಿಷಯೇ ತಜ್ಜನನಾರ್ಥಮಿತಿ ಯಾವತ್ । ಏಷಾ= ನ ತ್ವೇವಾಹಮಿತ್ಯಾರಭ್ಯ 'ದೇಹೀ ನಿತ್ಯಮವಧ್ಯ' ಇತ್ಯಂತಾ, ಬುದ್ಧಿಃ = ತದುಭಯಸ್ವರೂಪಬೋಧ-ಜನಿಕಾ ವಾಕ್, ವಾಕ್ಯಾನೀತಿ ಯಾವತ್ । ತೇ = ತುಭ್ಯಂ ಅಭಿಹಿತಾ = ಉಕ್ತಾ । ಯೋಗೇ= ತಜ್‌ಜ್ಞಾನಹೇತೂಪಾಯವಿಷಯೇ ತು, ಉಪಾಯಜ್ಞಾನಾರ್ಥಮಿತಿ ಯಾವತ್ । ಇಮಾಂ= 'ತ್ರೈಗುಣ್ಯವಿಷಯಾ' ಇತ್ಯಾದಿನಾಽಽಷಷ್ಠಸಮಾಪ್ತಿ ವಕ್ಷ್ಯಮಾಣಾಂ ಬುದ್ಧಿಂ= ಉಪಾಯಬೋಧಜನಿಕಾಂ ವಾಚಂ ವಾಕ್ಯಾನೀತಿ ಯಾವತ್, ಶೃಣು । ಶ್ರವಣಮಾತ್ರಸ್ಯ ವಿಧಿನಾ ವಿನಾಪಿ ಸಂಭವಾತ್ ಶ್ರುತ್ವಾ ತತ್ರ ನಿಷ್ಠಾಂ ಕುರ್ವಿತ್ಯರ್ಥಃ ।**

**ಅತ್ರ ವಾಗಭಿಹಿತೇತಿ (ಅನುಕ್ತ್ವಾ) ಯೌಗಿಕಬುದ್ಧಿಪದೇನ ತದುಕ್ತಿರ್ನಾವಿಶದಂ ವಾಙ್‌ಮಾತ್ರಮುಕ್ತಮ್ । ಕಿಂತು ತದವಬೋಧೋ ಯಥೋತ್ಪದ್ಯೇತ ತಥೋಕ್ತಮಿತಿ ಜ್ಞಾಪನಾಯೇತಿ ಧ್ಯೇಯಮ್ ।**

**ಅನುವಾದ** - ಒಟ್ಟಿನಲ್ಲಿ ಶ್ಲೋಕಾರ್ಥ- ಎಲೈ ಪಾರ್ಥನೆ, **ಸಾಂಖ್ಯೇ** = ಜೀವೇಶ್ವರ ಸ್ವರೂಪ ಜ್ಞಾನದ ಬಗ್ಗೆ ಅರ್ಥಾತ್ ಅವರಿಬ್ಬರ ಜ್ಞಾನ ಬರಲು ಬೇಕಾಗಿರುವ, **ಏಷಾ**= '**ನ ತ್ವೇವಾಹಂ**'(2.12) ಎನ್ನುವ ಶ್ಲೋಕದಿಂದಾರಂಭಿಸಿ '**ದೇಹೀ ನಿತ್ಯಂ**' (2.30) ಎಂಬಲ್ಲಿಯ ವರೆಗೆ, **ಬುದ್ಧಿಃ** = (ಅವರಿಬ್ಬರ ಸ್ವರೂಪಜ್ಞಾನಕ್ಕೆ ಕಾರಣವಾದ) ಮಾತುಗಳು, **ತೇ** = ನಿನಗೆ, **ಅಭಿಹಿತಾ**= ಹೇಳಲ್ಪಟ್ಟವು.

**ಯೋಗೇ** = ಜೀವೇಶ್ವರ ಸ್ವರೂಪ ಜ್ಞಾನ ಬರಲು ಬೇಕಾಗಿರುವ ಸಾಧನಗಳ ಬಗ್ಗೆ ಅರ್ಥಾತ್ ಜ್ಞಾನ ಸಾಧನದ ಪರಿಜ್ಞಾನಕ್ಕೆ ಬೇಕಾದ, **ಇಮಾಂ** = ಮುಂದೆ '**ತ್ರೈಗುಣ್ಯವಿಷಯಾಃ**' ಎಂಬ ಶ್ಲೋಕದಿಂದ ಪ್ರಾರಂಭಿಸಿ ಆರನೆಯ ಅಧ್ಯಾಯ ಮುಗಿಯುವವರೆಗೆ ಹೇಳಬೇಕಾಗಿ ರುವ, **ಬುದ್ಧಿಂ** = ಮಾತುಗಳನ್ನು **ಶೃಣು** = ಕೇಳು . ಕೇಳಬೇಕಾದರೆ, 'ಕೇಳು', ಎಂದು ವಿಧಿಸ ಬೇಕಾಗಿಲ್ಲ, ಹೇಳಿದರೆ ಸಾಕು . ಆದ್ದರಿಂದ 'ಕೇಳಿ , ಆ ವಿಷಯದಲ್ಲಿ ಶ್ರದ್ಧೆಯನ್ನು ಬೆಳೆಸಿಕೋ' ಎಂದರ್ಥ.

ಈ ಶ್ಲೋಕದಲ್ಲಿ 'ವಾಕ್' ಎಂಬ ಶಬ್ದವನ್ನೇ ಹೇಳದೆ ಆ ಅರ್ಥ ಬರುವ 'ಬುದ್ಧಿ' ಶಬ್ದವನ್ನು ಹೇಳಿರುವ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು – 'ಜೀವೇಶ್ವರರನ್ನು ತಿಳಿಸುವ ಸಮ್ಮುಗ್ಧವಾದ ಮಾತುಗಳನ್ನು ಮಾತ್ರ ನಾನು ಆಡಿದ್ದಲ್ಲ. ಅವರ ಸ್ವರೂಪಜ್ಞಾನ ಸರಿಯಾಗಿ ಬರಲು ಬೇಕಾದ ಸ್ಪಷ್ಟವಾದ ಮಾತುಗಳನ್ನೇ ನಾನು ಆಡಿದ್ದೇನೆ'

**ಆದರಜನನಾಯ ಯೋಗಂ ಪ್ರಶಂಸತಿ– 'ಬುದ್ಧ್ಯಾ' ಇತ್ಯಾದಿ ಸಾರ್ಧ-ಶ್ಲೋಕೇನ । ಯಯಾ ಮದ್ವಾಕ್ಯಜನ್ಯಯಾ ಬುದ್ಧ್ಯಾ = ಜ್ಞಾನೋಪಾಯಬುದ್ಧ್ಯಾ ಯುಕ್ತಃ ಸನ್ ತದನುಷ್ಠಾನದ್ವಾರಾ ಬ್ರಹ್ಮಸಾಕ್ಷಾತ್ಕಾರಾತಿಶಯಂ ಪ್ರಾಪ್ಯ, ಕರ್ಮ-ಬಂಧಂ = ಸಂಸಾರಂ, ನಿಃಶೇಷತಃ ಪ್ರಹಾಸ್ಯಸಿ = ಮುಕ್ತೋ ಭವಿಷ್ಯಸಿ ॥ 39 ॥**

**ಅನುವಾದ** – ಆಸಕ್ತಿ ಹುಟ್ಟಿಸುವ ಸಲುವಾಗಿ ಯೋಗದ ಪ್ರಶಂಸೆಯನ್ನು ಮುಂದಿನ ಒಂದೂವರೆ ಶ್ಲೋಕದಲ್ಲಿ ಮಾಡಲಾಗಿದೆ.

**ಯಯಾ**= ನನ್ನ ಮಾತುಗಳಿಂದ ಉಂಟಾದ, **ಬುದ್ಧ್ಯಾ**= ಜ್ಞಾನಸಾಧನದ ತಿಳುವಳಿಕೆಯಿಂದ ಕೂಡಿದವನಾಗಿ (ತಿಳುವಳಿಕೆಯನ್ನು ಪಡೆದು) ಅದರಂತೆ ಅನುಷ್ಠಾನ ಮಾಡಿ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದು, **ಕರ್ಮಬಂಧಂ**= ಸಂಸಾರಬಂಧನವನ್ನು, **ಪ್ರಹಾಸ್ಯಸಿ**= ಪೂರ್ಣವಾಗಿ ಕಳೆದುಕೊಳ್ಳುವಿ ಅರ್ಥಾತ್, ಮುಕ್ತನಾಗುವಿ. ॥ 39 ॥

## ಅಲ್ಪ ನಿಷ್ಕಾಮಕರ್ಮವೂ ಮಹಾದುಃಖಪರಿಹಾರಕ

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥ 40 ॥**

**ಅರ್ಥ** – ಮುಂದೆ ಹೇಳಲಿರುವ ಜ್ಞಾನಸಾಧನವಾದ ನಿಷ್ಕಾಮಕರ್ಮಾನುಷ್ಠಾನವನ್ನು ಪ್ರಾರಂಭ ಮಾಡಿದರೂ ಸಾಕು. ಅದು ನಿಷ್ಫಲವಾಗುವುದಿಲ್ಲ, ಸಾರ್ಥಕವಾಗುತ್ತದೆ. ಅದನ್ನು ಮಾಡುತ್ತಿರುವಾಗ ವಿಘ್ನದಿಂದ ಮಧ್ಯದಲ್ಲಿ ಬಿಟ್ಟರೂ ಅಥವಾ ಅದಕ್ಕಾಗಿ ಇತರ ದೇವತಾರಾಧನ ಕರ್ಮಗಳನ್ನು ಬಿಟ್ಟರೂ ಪಾಪವೇನೂ ಬರುವುದಿಲ್ಲ, ಅಷ್ಟೇ ಅಲ್ಲ; ಈ ನಿಷ್ಕಾಮ ಕರ್ಮವನ್ನು ಅಲ್ಪ ಮಾಡಿದರೂ ಸಾಕು, ಆದರಿಂದ ದೊಡ್ಡದುಃಖ ಪರಿಹಾರವಾಗುತ್ತದೆ.

**ಕಿಂಚ, ಇಹ = ವಕ್ಷ್ಯಮಾಣೇ ಯೋಗಶಬ್ದಿತಜ್ಞಾನೋಪಾಯಭೂತ ನಿಷ್ಕಾಮವಿಷ್ಣ್ವಾರಾಧನರೂಪಕರ್ಮವಿಷಯೇ ಅಭಿಕ್ರಮಸ್ಯ= ಉಪಕ್ರಮಸ್ಯ ನಾಶೋ ನಾಸ್ತಿ। ಉಪಕ್ರಮಮಾತ್ರಸ್ಯಾಪಿ ನಿಷ್ಫಲತಾ ನಾಸ್ತೀತ್ಯರ್ಥಃ। 'ಪ್ರಾರಂಭ-**

**ಮಾತ್ರಮಿಚ್ಛಾ ವಾ' ಇತ್ಯಾದೇಃ ಉಪಕ್ರಾಂತವಿಷ್ಣುಧರ್ಮ ವಿಚ್ಛೇದೇ ವಾ ವಿಷ್ಣುಧರ್ಮವತೋಽನ್ಯಧರ್ಮಾಕರಣೇ ವಾ ಪ್ರತ್ಯವಾಯೋ ನ ವಿದ್ಯತೇ । ಅಸ್ಯ ಧರ್ಮಸ್ಯ= ವಿಷ್ಣುಪೂಜಾತ್ಮಕನಿಷ್ಕಾಮಕರ್ಮಣಃ ಸ್ವಲ್ಪಮಪಿ= ಏಕಾಂಶೋಽಪಿ ಮಹತೋ ಭಯಾತ್= ಸಂಸಾರಭಯಾತ್ ತ್ರಾಯತೇ= ರಕ್ಷತಿ । ತಸ್ಮಾತ್ ತತ್ರ ನಿಷ್ಠಾಂ ಕುರ್ವಿತಿ ಭಾವಃ ।**

**ಅನುವಾದ-** ಹಿಂದೆ ಹೇಳಿದಂತೆ ಸಾಧನಾನುಷ್ಠಾನದಿಂದ ಕರ್ಮಬಂಧವು ನಾಶ ವಾಗುವುದು. ಅಷ್ಟೇ ಅಲ್ಲದೆ, **ಇಹ** = ಮುಂದೆ ಹೇಳಲಿರುವ, '**ಯೋಗ** ' ಎಂಬ ಹೆಸರಿನಿಂದ ಕರೆಯಲ್ಪಡುವ, ಜ್ಞಾನಸಾಧನವಾದ, ನಿಷ್ಕಾಮವಾಗಿ ಆಚರಿಸಿದ, ವಿಷ್ಣುವಿನ ಆರಾಧನಾ ರೂಪವಾದ ಕರ್ಮದಲ್ಲಿ **ಅಭಿಕ್ರಮಸ್ಯ** = ಪ್ರಾರಂಭಕ್ಕೂ ನಾಶವಿಲ್ಲ. ಅದನ್ನು ಆರಂಭಿಸಿ ಬಿಟ್ಟರೂ ಅದು ನಿಷ್ಫಲವಾಗುವುದಿಲ್ಲ; ಮಾಡಿದ್ದಷ್ಟಕ್ಕೆ ಫಲವಿದ್ದೇ ಇದೆ.

'**ಪ್ರಾರಂಭಮಾತ್ರಮಿಚ್ಛಾ ವಾ ವಿಷ್ಣುಧರ್ಮೇ ನ ನಿಷ್ಫಲಾ** ' ಈ ಪ್ರಮಾಣವು ಹೇಳಿದಂತೆ ವೈಷ್ಣವಧರ್ಮವನ್ನು ಪ್ರಾರಂಭಿಸಿದರೂ ಅಥವಾ ಅದನ್ನು ಮಾಡುತ್ತೇನೆಂದು ಸಂಕಲ್ಪ ಮಾಡಿದರೂ ಅದು ನಿಷ್ಫಲವಾಗುವುದಿಲ್ಲ.

ಪ್ರಾರಂಭಿಸಿದ ವೈಷ್ಣವ ಕರ್ಮವನ್ನು ಅರ್ಧಕ್ಕೆ ನಿಲ್ಲಿಸಿದರೂ, ಅಂತಹ ಕರ್ಮವನ್ನು ಮಾಡುತ್ತಿರುವಾಗ ಇತರ ದೇವತೋದ್ದೇಶದ ಕರ್ಮಗಳನ್ನು ಬಿಟ್ಟರೂ ಅದರಿಂದ ಪಾಪಲೇಪವಿಲ್ಲ. **ಅಸ್ಯ ಧರ್ಮಸ್ಯ** = ವಿಷ್ಣುಪೂಜಾರೂಪವಾದ ನಿಷ್ಕಾಮಕರ್ಮದ, **ಅಲ್ಪಮಪಿ**= ಒಂದಂಶವೂ, **ಮಹತೋ ಭಯಾತ್** = ದೊಡ್ಡ ಸಂಸಾರಭಯದಿಂದ, **ತ್ರಾಯತೇ**= ರಕ್ಷಣೆ ಮಾಡುತ್ತದೆ. ಈ ಕಾರಣದಿಂದಾಗಿ, ವೈಷ್ಣವ ನಿಷ್ಕಾಮಕರ್ಮದಲ್ಲಿ ಶ್ರದ್ಧೆಯನ್ನು ತಾಳು ಎಂದು ಭಾವ.

**ನನು 'ಜ್ಞಾನಂ ಹಿ ಜೈವಮುಕ್ತಮ್' ಇತಿ ಭಾಷ್ಯೋಕ್ತೇಃ ಜೀವತತ್ತ್ವಂ ಪ್ರಾಗುಕ್ತಮ್ । ಬ್ರಹ್ಮಜ್ಞಾನೋಪಾಯಶ್ಚ ವಕ್ಷ್ಯತೇ । ನ ಹಿ ನಿವೃತ್ತ-ಕರ್ಮಾನುಷ್ಠಾನಾದಿರೂಪೋ ಯೋಗೋ ಜೀವಜ್ಞಾನಹೇತುಃ । ಅತಃ ಕಥಂ ಪೂರ್ವೋತ್ತರಪ್ರಕರಣಯೋಃ ಸಾಧ್ಯಸಾಧನವಿಷಯತಯಾ ಸಂಗತತ್ವಮ್ ?**

**ಅನುವಾದ** - ಗೀತಾಭಾಷ್ಯದಲ್ಲಿ ಶ್ರೀಮಧ್ವಾಚಾರ್ಯರು 'ಇದುವರೆಗೆ ಜೀವನ ವಿಷಯವನ್ನು ಹೇಳಲಾಗಿದೆ' ಎಂದು '**ಏಷಾ ತೇ ಅಭಿಹಿತಾ ಸಾಂಖ್ಯೇ**' ಎಂಬ ಗೀತಾವಾಕ್ಯಕ್ಕೆ ಅರ್ಥವನ್ನು ಹೇಳಿದ್ದಾರೆ. ಇನ್ನು ಮುಂದೆ ಭಗವದ್ಗೀತೆಯಲ್ಲಿ ಪರಮಾತ್ಮನ ಜ್ಞಾನಕ್ಕೆ ಸಾಧನವಾದ

ನಿಷ್ಕಾಮ ಕರ್ಮವನ್ನು ಹೇಳಲಾಗಿದೆ. ಈ ನಿಷ್ಕಾಮಕರ್ಮಾನುಷ್ಠಾನವು ಜೀವನ ಜ್ಞಾನಕ್ಕೆ ಕಾರಣವಲ್ಲ. ಹೀಗಿರುವಾಗ ಇದುವರೆಗಿನ ಪ್ರಕರಣಕ್ಕೂ ಮುಂದಿನ ಗೀತಾಭಾಗಕ್ಕೂ ಸಂಗತಿ ಹೇಳುವುದು ಹೇಗೆ ? (ಸಾಧ್ಯ-ಸಾಧನರೂಪವಾದ ಸಂಗತಿಯನ್ನು ಹೇಳಬೇಕು. ಆದರೆ, ನಿಷ್ಕಾಮಕರ್ಮದಿಂದ ಇದುವರೆಗೆ ನಿರೂಪಿಸಿದ ಜೀವಜ್ಞಾನವು 'ಸಾಧ್ಯ'ವಲ್ಲ. ಆದ್ದರಿಂದ ಇದುವರೆಗೆ ಹೇಳಿದ ವಿಷಯಕ್ಕೆ ಮುಂದಿನ ಭಾಗದೊಂದಿಗೆ ಸಾಧ್ಯಸಾಧನ- ರೂಪವಾದ ಸಂಗತಿ ಹೇಗೆ ?)

**ಮೈವಮ್ । 'ಶ್ರುತ್ವಾಽಪ್ಯೇನಂ' ಇತ್ಯತ್ರ ಭಗವತ್ಪ್ರತಿಬಿಂಬತ್ವಾದಿನಾ ಜೀವ-ಚೈತನ್ಯವೇದೀ ದುರ್ಲಭ ಇತ್ಯುಕ್ತ್ವಾ ತಾದೃಶತ್ವೇನ ತಜ್ಜ್ಞಾನೋಪಾಯಸ್ಯಾ-ಪ್ಯಾಕಾಂಕ್ಷಿತತ್ವೇನ ವಕ್ಷ್ಯಮಾಣ ನಿವೃತ್ತಕರ್ಮಾನುಷ್ಠಾನಾರಾಧಿತಭಗವತ್-ಪ್ರೀತೇರೇವ ಈಶ್ವರತತ್ತ್ವಜ್ಞಾನಸ್ಯೋಪಾಯತ್ವಾತ್ । ತಾದರ್ಥ್ಯೇನ ಪ್ರಕೃತಸ್ಯಾಪಿ ಈಶ್ವರಸ್ಯ 'ತಸ್ಮಾದೇವಂ ವಿದಿತ್ವೈನಮ್' ಇತ್ಯತ್ರ ಸ್ವಾತಂತ್ರ್ಯಾದಿನಾ ಜ್ಞಾನಸ್ಯ ಮೋಕ್ಷಾದಿಸರ್ವಪುಮರ್ಥಹೇತುತ್ವೋಕ್ತ್ಯಾ ತಜ್ಜ್ಞಾನೋಪಾಯಸ್ಯಾಪಿ ಆಕಾಂಕ್ಷಿತತ್ವಾತ್ । ವಕ್ಷ್ಯಮಾಣಸಾಧನಸ್ಯ ಚ ಯಥಾವತ್ತಯಾ ಪರಾಪರತತ್ತ್ವ-ಜ್ಞಾನೋಪಾಯತ್ವಾನ್ನ ಪೂರ್ವೋತ್ತರಪ್ರಕರಣಯೋರಸಂಗತಿಃ ।**

**ಅತ್ರ ಯೋಗಸ್ಯಾನೇಕಾಧ್ಯಾಯಪ್ರತಿಪಾದ್ಯತ್ವಾತ್ ಶ್ರೋತೃಮನಃಸಮಾ-ಧಾನಾಯ ಪೂರ್ವಸಂಗತತ್ವೇನ ಪ್ರತಿಜ್ಞಾಕರಣಸಾರ್ಥಕ್ಯಂ ಜ್ಞೇಯಮ್ ॥ 40 ॥**

**ಅನುವಾದ** – ಈ ಆಕ್ಷೇಪ ಸರಿಯಲ್ಲ – **'ಆಶ್ಚರ್ಯವತ್'** (2.29) ಎಂಬ ಶ್ಲೋಕದಲ್ಲಿ **'ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್'** 'ಜೀವಾತ್ಮನ ಬಗ್ಗೆ ಕೇಳಿ ತಿಳಿದರೂ ಅವನನ್ನು ಪರಮಾತ್ಮನ ಪ್ರತಿಬಿಂಬ ಎಂದು ಯಾರೂ ತಿಳಿದುಕೊಳ್ಳಲಾರರು' ಎಂದು ಹೇಳಲಾಗಿದೆ. ಹೀಗೆ ಹೇಳಿದಾಗ 'ಜೀವನನ್ನು ಆ ರೀತಿಯಾಗಿ ತಿಳಿಯಬೇಕಾದರೆ ಏನು ಮಾಡಬೇಕು?' ಎಂಬ ಜಿಜ್ಞಾಸೆ ಉಂಟಾಗುತ್ತದೆ. ಅದಕ್ಕೆ ಸಮಾಧಾನವಾಗಿ – ನಿಷ್ಕಾಮಕರ್ಮಾನುಷ್ಠಾನದಿಂದ ಪರಮಾತ್ಮನನ್ನು ಆರಾಧಿಸಿದರೆ ಅದರಿಂದ ಅವನು ಸಂತುಷ್ಟನಾಗುತ್ತಾನೆ . ಅವನ ಅನುಗ್ರಹದಿಂದ ಅವನ ತತ್ತ್ವಜ್ಞಾನ ಉಂಟಾಗುತ್ತದೆ , ಆಗ ಜೀವನ ಜ್ಞಾನ ಉಂಟಾಗುತ್ತದೆ ಎಂದು ಹೇಳಬೇಕು . ಹೀಗೆ ಜೀವಾತ್ಮನ ತತ್ತ್ವಜ್ಞಾನಕ್ಕಾಗಿ ಪರಮಾತ್ಮನೂ ಪ್ರಕೃತನಾಗಿದ್ದಾನೆ. ಆದ್ದರಿಂದಲೇ **'ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ -(2-25)'** ಎಂಬ ಗೀತಾಶ್ಲೋಕದಲ್ಲಿ 'ಪರಮಾತ್ಮನು ಸ್ವತಂತ್ರನಾಗಿದ್ದಾನೆ ಎಂಬ ಜ್ಞಾನವು ಮೋಕ್ಷಾದಿ ಸಕಲ ಪುರುಷಾರ್ಥಗಳಿಗೂ ಕಾರಣ' ಎಂದು ಹೇಳಲಾಗಿದೆ. ಹೀಗೆ ಜೀವ ಜ್ಞಾನದೊಂದಿಗೆ ಪರಮಾತ್ಮನ ಜ್ಞಾನವೂ ಪ್ರಸ್ತುತವಾಗಿರುವ ಕಾರಣ

ಪರಮಾತ್ಮ ಜ್ಞಾನಸಾಧನದ ಬಗ್ಗೆಯೂ ಜಿಜ್ಞಾಸೆ ಇದೆ. ಆದ್ದರಿಂದಲೇ ಮುಂದೆ ಹೇಳುವ ನಿಷ್ಕಾಮಕರ್ಮಾನುಷ್ಠಾನವು ಪರಮಾತ್ಮನ ತತ್ತ್ವಜ್ಞಾನಕ್ಕೂ ಆ ಮೂಲಕ ಜೀವಾತ್ಮನ ತತ್ತ್ವಜ್ಞಾನಕ್ಕೂ ಕಾರಣವಾಗಿದೆ. ಹೀಗಾಗಿ, ಇದುವರೆಗೆ ಹೇಳಿದ ವಿಷಯಕ್ಕೂ ಮುಂದೆ ಹೇಳುವ ವಿಷಯಕ್ಕೂ ಸಾಧ್ಯಸಾಧನರೂಪವಾದ ಸಂಗತಿಯು ಇದೆ.

ಶ್ರೀಕೃಷ್ಣ 'ಜ್ಞಾನೋಪಾಯವನ್ನು ಹೇಳುತ್ತೇನೆ' ಎಂದು ಇಲ್ಲಿ ಪ್ರತಿಜ್ಞೆ ಮಾಡಿದಂತೆ ಈ ಹಿಂದೆ 'ಜೀವನ ಕುರಿತು ಹೇಳುತ್ತೇನೆ' ಎಂದು ಪ್ರತಿಜ್ಞೆ ಮಾಡಿಲ್ಲ. ಮುಂದೆ ಜ್ಞಾನೋಪಾಯವನ್ನು ಆರು ಅಧ್ಯಾಯಗಳಲ್ಲಿ ವಿಸ್ತಾರವಾಗಿ ಹೇಳಲಾಗಿದೆ. ಇದರಿಂದಾಗಿ ಶ್ರೋತೃಗಳಿಗೆ ಎಲ್ಲಿಯವರೆಗೆ ಯಾವ ವಿಷಯವನ್ನು ಹೇಳಲಾಗಿದೆ ಎಂಬ ಕುತೂಹಲವು ಉಂಟಾಗುತ್ತದೆ. ಅದಕ್ಕಾಗಿ ಶ್ರೀಕೃಷ್ಣ ಇಲ್ಲಿಮಾತ್ರ ಇದುವರೆಗಿನ ವಿಷಯಕ್ಕೆ ಸಂಬಂಧಪಟ್ಟಂತೆ ಪ್ರತಿಜ್ಞೆ ಮಾಡಿದ್ದಾನೆ. ॥ 40 ॥

## ಪ್ರಮಾಣಸಿದ್ಧವಾದ ದಾರಿ ಒಂದೇ

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।**
**ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥ 41 ॥**

**ಅರ್ಥ** – ಲೋಕದಲ್ಲೇ ಆಗಲಿ ವೇದದಲ್ಲೇ ಆಗಲಿ, ಎಲೈ ಕುರುಪುತ್ರನೇ, ಪ್ರಮಾಣಸಮ್ಮತವಾದ ಮಾತು ನಾನು ಮುಂದೆ ಹೇಳುವ ಜ್ಞಾನೋಪಾಯ ಒಂದನ್ನೇ ಹೇಳುತ್ತದೆ. ಅದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಪ್ರಮಾಣಗಳು ಏನು ಹೇಳುತ್ತವೆ ? ಎನ್ನುವ ಬಗ್ಗೆ ನಿಶ್ಚಯವಿಲ್ಲದವರು ಮಾತ್ರ ಒಬ್ಬೊಬ್ಬರು ಒಂದೊಂದು ರೀತಿಯಾಗಿ ಮಾತನಾಡುತ್ತಾರೆ.

**ನನು ಜ್ಞಾನೋಪಾಯವಿಷಯಾ ವಾಚೋಽನ್ಯೋನ್ಯವಿರುದ್ಧಾ ಬಹ್ವ್ಯೋ ಮತಭೇದೇನ ಸಂತಿ । ಅತಃ ಕಥಮ್ ಏಕತ್ರ ತ್ವದೀಯಾಯಾಮೇವ ಉಪಾಯವಿಷಯವಾಚಿ ನಿಷ್ಠಾಶಬ್ದಿತಂ ವಿಶ್ವಾಸಂ ಕರೋಮೀತ್ಯತ ಆಹ– ವ್ಯವಸಾಯೇತಿ ॥**

**ಅನುವಾದ** – 'ಜ್ಞಾನಕ್ಕೆ ಸಾಧನ ಯಾವುದು ? ಎನ್ನುವ ಬಗ್ಗೆ ಒಬ್ಬೊಬ್ಬರು ಪರಸ್ಪರ ವಿರುದ್ಧವಾಗಿ, ಒಂದೊಂದು ರೀತಿಯಾಗಿ ಹೇಳುತ್ತಾರೆ. ಹೀಗಿರುವಾಗ ನೀನು (ಶ್ರೀಕೃಷ್ಣ) ಜ್ಞಾನಸಾಧನದ ಕುರಿತು ಹೇಳಿದ ಮಾತಿನಲ್ಲೇ ದೃಢವಾದ ವಿಶ್ವಾಸವನ್ನು ತಾಳುವುದು ಹೇಗೆ ? , ಅರ್ಜುನನ ಈ ಪ್ರಶ್ನೆಗೆ '**ವ್ಯವಸಾಯಾತ್ಮಿಕಾ**' ಎಂಬ ಶ್ಲೋಕದಲ್ಲಿ ಶ್ರೀಕೃಷ್ಣ ಉತ್ತರಿಸಿದ್ದಾನೆ.

**ವ್ಯವಸಾಯಾತ್ಮಿಕಾ= ಪ್ರಮಾಣನಿರ್ಣೀತಾರ್ಥನಿಶ್ಚಯಾತ್ಮಿಕಾ ನಿಶ್ಚಯಜನಿಕಾ ಬುದ್ಧಿಃ= ಕರಣವ್ಯುತ್ಪತ್ತ್ಯಾ ವಾಕ್ ಏಕೈವ = ಏಕೋಪಾಯವಿಷಯೈವ, ಇಹ=**

**ಲೋಕೇ ವೇದೇ ಚ । ನ ತತ್ರ ವಿಪ್ರತಿಪತ್ತಿರಸ್ತಿ । ಸ ಏವ ವೈಷ್ಣವಧರ್ಮಾ-ನುಷ್ಠಾನಹೇತುಃ । ಅವ್ಯವಸಾಯಿನಾಂ= ಪ್ರಮಾಣನಿರ್ಣೀತಾರ್ಥನಿಶ್ಚಯ-ಹೀನಾನಾಂ ಬುದ್ಧಯಃ= ಉಪಾಯವಿಷಯಾಃ ವಾಚಃ, ಬಹುಶಾಖಾಃ= ಬಹುಮುಖಾಃ = ವಿರುದ್ಧನಾನಾರ್ಥವಿಷಯಾಃ ಅನಂತಾಶ್ಚ । ತಥಾ ಚ ಕಥಮ್ ಅಪ್ರಾಮಾಣಿಕಮತವಿವಾದೇನ ಪ್ರಾಮಾಣಿಕೇಽರ್ಥೇ ಅವಿಶ್ವಾಸಃ । ಮಯಾ ವಕ್ಷ್ಯಮಾಣೋಪಾಯಸ್ತು ಪ್ರಾಮಾಣಿಕ ಇತಿ ತತ್ರ ತತ್ರ ವ್ಯಕ್ತೀಭವಿಷ್ಯತೀತಿ ಭಾವಃ ॥ 41 ॥**

**ಅನುವಾದ- ವ್ಯವಸಾಯಾತ್ಮಿಕಾ**= ಪ್ರಮಾಣಗಳಿಂದ ನಿರ್ಧಾರಾತ್ಮಕವಾಗಿ ಪ್ರತಿಪಾದಿಸಲ್ಪಟ್ಟ ವಿಷಯದ ನಿಶ್ಚಯವನ್ನು ತಂದುಕೊಡುವ, ಬುದ್ಧಿಃ= ಮಾತು, ಏಕೈವ= ಒಂದೇ ಉಪಾಯವನ್ನು ಹೇಳುತ್ತದೆ. ಇಹ = ಲೋಕದಲ್ಲಿ ಮತ್ತು ವೇದದ. ಆ ವಿಷಯದಲ್ಲಿ ಬೇರೆ ಮಾತಿಲ್ಲ. ಅಂತಹ ಜ್ಞಾನೋಪಾಯವೇ ವೈಷ್ಣವ ಧರ್ಮದ ಆಚರಣೆಗೆ ಹೇತು.

**ಅವ್ಯವಸಾಯಿನಾಂ** = ಪ್ರಮಾಣಗಳಿಂದ ನಿರ್ಧಾರಿತವಾದ ವಿಷಯ ಏನು ಎನ್ನುವ ಬಗ್ಗೆ ನಿಶ್ಚಯವಿಲ್ಲದವರ **ಬುದ್ಧಯಃ** = ಜ್ಞಾನಸಾಧನದ ಬಗ್ಗೆ ಆಡುವ ಮಾತುಗಳು **ಬಹುಶಾಖಾಃ** = ಅನೇಕ ರೀತಿಯಾದುದು, ಅವು ವಿರುದ್ಧವಾದ ಅನೇಕ ವಿಷಯಗಳನ್ನು ಹೇಳುತ್ತವೆ . ಅಂತಹ ಮಾತುಗಳು ನೂರಾರಿವೆ. ಹೀಗಿದ್ದ ಮೇಲೆ ಅಪ್ರಾಮಾಣಿಕವಾದ ಮತಗಳಲ್ಲಿ ವಿವಾದವಿರುವ ಮಾತ್ರದಿಂದ ಪ್ರಾಮಾಣಿಕವಾದ ವಿಷಯದಲ್ಲೂ ನಂಬಿಕೆಯನ್ನು ಕಳೆದುಕೊಳ್ಳುವುದು ಹೇಗೆ? ನಾನು (ಶ್ರೀಕೃಷ್ಣ) ಮುಂದೆ ಹೇಳಲಿರುವ ಜ್ಞಾನಸಾಧನಗಳು ಪ್ರಮಾಣ ಸಿದ್ಧವಾಗಿವೆ. ಹಾಗೆಂದು ಆಯಾಯ ಸಂದರ್ಭಗಳಲ್ಲಿ ಸ್ಪಷ್ಟವಾಗಲಿದೆ. ಇದು ಈ ಶ್ಲೋಕದ ಭಾವಾರ್ಥ. ॥ 41 ॥

## ಐಹಿಕಭೋಗ - ಸ್ವರ್ಗಾದಿಗಳನ್ನು ದೊರಕಿಸುವುದು ವೇದದ ಗುರಿಯಲ್ಲ

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥ 42 ॥**

**ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥ 43 ॥**

**ಅರ್ಥ** - ವೇದದಲ್ಲಿ ಆಪಾತತಃ ತೋರುವ ಅರ್ಥವನ್ನಷ್ಟೇ ತಿಳಿಯುವ ಅವಿದ್ವಾಂಸರು, ಸ್ವರ್ಗಬಿಟ್ಟು ಮೋಕ್ಷಾದಿ ಫಲಗಳೇ ಇಲ್ಲ ಎಂದು ಹೇಳುತ್ತಾ ಕಾಮ್ಯವಾದ ಸ್ವರ್ಗಾದಿ ಫಲದಲ್ಲೇ ಆಸಕ್ತಿ ತಾಳಿದವರಾಗಿ, ಸ್ವರ್ಗವೇ ಪರಮಪುರುಷಾರ್ಥವೆಂದು ತಿಳಿಯುತ್ತಾ 'ವೈದಿಕ ಮಂತ್ರಗಳು,

ಫಲರೂಪವಾದ ಮೋಕ್ಷದ ದೃಷ್ಟಿಯಿಂದ ಫಲಕ್ಕಿಂತ ಮೊದಲು ಹುಟ್ಟುವ ಹೂವಿನ ಸ್ಥಾನದಲ್ಲಿರುವ ಸ್ವರ್ಗಾದಿ ಕಾಮ್ಯಫಲಗಳನ್ನೇ ತಿಳಿಸುತ್ತವೆ' ಎನ್ನುತ್ತಾರೆ. ಅಂತಹವರು ಪುಣ್ಯ, ಪುನರ್ಜನ್ಮ, ಭೋಗ-ಐಶ್ವರ್ಯ ಮುಂತಾದ ನಶ್ವರಫಲಗಳಿಗೆ ಕಾರಣವಾದ ಯಜ್ಞ-ಯಾಗಾದಿ ಕ್ರಿಯೆಗಳನ್ನೇ ವೇದಗಳು ಹೇಳುತ್ತವೆ , ಎಂದು ತಿಳಿಯುತ್ತಾರೆ.

**ನನ್ವವೈದಿಕಮತಾನಾಮಪ್ರಾಮಾಣಿಕತ್ವೇನ ತತ್ರಾವಿಶ್ವಾಸೇऽಪಿ ವೈದಿಕೇಷ್ವಪಿ ಕೇಚಿತ್ ಕರ್ಮಾಣಿ ಸ್ವರ್ಗಫಲಾನ್ಯೇವಾಹುಃ । ತ್ವಯಾ ತು ಕಾಮ್ಯಾರ್ಥಾನ್ಯೇವ ಸ್ವರ್ಗಾದಿಫಲಾನಿ, ನಿಷ್ಕಾಮಾನೀಶ್ವರಾರ್ಪಣಬುದ್ಧ್ಯಾ ಅನುಷ್ಠಿತಾನಿ ತು ಜ್ಞಾನಾರ್ಥಾನೀತ್ಯಭಿಪ್ರೇಯತೇ । ತಥಾ ಚ ಕಥಂ ತ್ವದ್ವಚನೇ ನಿಷ್ಠಾ ಸ್ಯಾದಿತ್ಯತ-ಸ್ತೇಷಾಂ ವೈದಿಕಾಭಾಸತಾಪ್ರದರ್ಶನಾಯ ನಿಂದಾಮಾಹ ಯಾಮಿತ್ಯಾದಿ-ತ್ರಯೇಣ ॥**

**ಅನುವಾದ** - ಮತ್ತೆ ಅರ್ಜುನನ ಪ್ರಶ್ನೆ ಹೀಗಿದೆ– ವೇದದ ಆಧಾರವಿಲ್ಲದ ಸಿದ್ಧಾಂತಗಳಲ್ಲಿ ಜ್ಞಾನಸಾಧನದ ಬಗ್ಗೆ ವಿಭಿನ್ನತೆ ಇದ್ದರೂ ಅಂತಹ ಮಾತುಗಳು ಅಪ್ರಾಮಾಣಿಕಗಳೆಂದು ಅವುಗಳ ಬಗ್ಗೆ ಅನಾದರ ಮಾಡಬಹುದು. ಆದರೆ, ವೈದಿಕ ಸಿದ್ಧಾಂತಗಳಲ್ಲೇ ಆ ಬಗ್ಗೆ ವೈಮತ್ಯವಿದೆ. ಕೆಲವು ವೈದಿಕ ಸಿದ್ಧಾಂತಗಳು ಸತ್ಕರ್ಮಗಳ ಫಲ ಸ್ವರ್ಗಮಾತ್ರ ಎನ್ನುತ್ತವೆ. ಆದರೆ ನೀನು (ಶ್ರೀಕೃಷ್ಣ) 'ಕಾಮ್ಯಕರ್ಮಗಳ ಫಲಮಾತ್ರ ಸ್ವರ್ಗಾದಿಗಳು ; ನಿಷ್ಕಾಮಕರ್ಮವನ್ನು ಭಗವಂತನ ಪ್ರೀತಿಯ ಉದ್ದೇಶದಿಂದ ಮಾಡಿದರೆ ಭಗವಂತನ ಅಪರೋಕ್ಷವಾಗುವುದು' ಎನ್ನುತ್ತೀಯ. ಹೀಗಿರುವಾಗ ನಿನ್ನ ಮಾತಿನಲ್ಲಷ್ಟೇ ಶ್ರದ್ಧೆಯನ್ನು ನಾನು ಹೇಗೆ ಮಾಡಲಿ ?

ಈ ಪ್ರಶ್ನೆಗೆ ಶ್ರೀಕೃಷ್ಣ ಮುಂದಿನ ಮೂರು ಶ್ಲೋಕಗಳಲ್ಲಿ ತನ್ನ ಮಾತಿಗೆ ವಿರುದ್ಧವಾದ ಮಾತುಗಳು ವೈದಿಕಾಭಾಸಗಳು, ಎಂದು ತಿಳಿಸಲು ಹಾಗೆ ಹೇಳುವವರನ್ನು ನಿಂದಿಸಿರುತ್ತಾನೆ.

**ವೇದವಾದರತಾಃ = ವೇದೈರ್ಯದಾಪಾತತ ಉಚ್ಯತೇ ಕರ್ಮಾದಿ, ತತ್ರೈವ ರತಾಃ । ವೇದೋಕ್ತವಿಷ್ಣುಮಹಿಮಾವಿವಾದಪೂರ್ವಕಂ ವೇದಪಾಠಕಾ ವಾ, ನಿರರ್ಥಕವೇದಪಾಠಕಾ ವಾ । ಅತ ಏವಾವಿಪಶ್ಚಿತಃ= ವೇದತಾತ್ಪರ್ಯಾ[1]-ಪರಿಜ್ಞಾನಿನಃ ।**

**ಅನುವಾದ** - ವೇದವಾದರತರು ಎಂದರೆ, ವಿಚಾರಮಾಡದೆ ವೇದಗಳಲ್ಲಿ ಮೇಲ್ನೋಟಕ್ಕೆ ತಿಳಿಯಲ್ಪಡುವ ಯಜ್ಞ-ಯಾಗಾದಿ ಕರ್ಮಗಳಲ್ಲೇ ಆಸಕ್ತಿ ತಾಳಿದವರು ಅಥವಾ ವೇದಗಳಲ್ಲಿ

1.ತಾತ್ಪರ್ಯಾರ್ಥಾ.

ಹೇಳಿರುವ ವಿಷ್ಣುವಿನ ಮಹಿಮೆಯ ಬಗ್ಗೆ ವಿವಾದ ಮಾಡಿ ವೇದವನ್ನು ಓದುವವರು, ಅಥವಾ ಅರ್ಥ ತಿಳಿಯದೆ ವೇದವನ್ನು ಕಂಠಪಾಠ ಮಾಡುವವರು ವೇದವಾದರತರು.

ಈ ಕಾರಣದಿಂದಾಗಿಯೆ ಅಂತಹವರು **ಅವಿಪಶ್ಚಿತಃ** = ವೇದಗಳ ಅಭಿಪ್ರಾಯವನ್ನು ತಿಳಿಯದವರು.

**ಅನ್ಯನ್ಮೋಕ್ಷಾಖ್ಯಫಲಂ ವಾ ಬ್ರಹ್ಮಸ್ವರೂಪಂ ವಾ ನಾಸ್ತೀತಿ ವಾದಿನಃ, ಕಾಮಾತ್ಮಾನಃ = ಕಾಮ್ಯಫಲಮನಸ್ಕಾಃ ಭೋಗಚಿತ್ತಾ ಇತಿ ವಾ । ಸ್ವರ್ಗಪರಾಃ= ಸ್ವರ್ಗತಾತ್ಪರ್ಯಕಾಃ, ಸ್ವರ್ಗಮೇವ ಪರಮಪುಮರ್ಥಂ ಮನ್ಯಮಾನಾ ಇತಿ ಯಾವತ್ । ಜನ್ಮ ಚ ಕರ್ಮ ಚ ತತ್ಫಲಂ ಚ ಪ್ರದದಾತೀತಿ ತಥಾವಿಧಾಂ, ಕ್ರಿಯಾವಿಶೇಷಬಹುಲಾಂ= ಬಹುಕರ್ಮವಿಶೇಷಪ್ರತಿಪಾದಿಕಾಂ ಯಾಮಿಮಾಂ ವಾಚಂ ಪುಷ್ಪಿತಾಂ= ಸಂಜಾತಪುಷ್ಪಾಂ , ಮೋಕ್ಷಫಲಮಪೇಕ್ಷ್ಯ ಪುಷ್ಪಸ್ಥಾನೀಯ-ಸ್ವರ್ಗಾದಿಫಲಕಾಂ ಭೋಗೈಶ್ವರ್ಯಪ್ರಾಪ್ತಿಂ ಪ್ರತಿ ಪ್ರವದಂತಿ ।**

**ಅನುವಾದ- ನಾನ್ಯದಸ್ತೀತಿ ವಾದಿನಃ- ಅನ್ಯತ್**= ಸ್ವರ್ಗಕ್ಕಿಂತ ಬೇರೆಯಾದ ಮೋಕ್ಷವೆಂಬ ಪರಮಪುರುಷಾರ್ಥ ಅಥವಾ ಬ್ರಹ್ಮತತ್ತ್ವ ಇವುಗಳನ್ನು ಇಲ್ಲವೆಂದು ಹೇಳುವವರು.

**ಕಾಮಾತ್ಮಾನಃ**= ಕಾಮ್ಯವಾದ ಧನ-ಕನಕಾದಿಗಳ ಬಗ್ಗೆ ಆಸಕ್ತಿವುಳ್ಳವರು ಅಥವಾ ಭೋಗದಲ್ಲಿ ಆಸಕ್ತರಾದವರು.

**ಸ್ವರ್ಗಪರಾಃ** = ಸ್ವರ್ಗದಲ್ಲೇ ತಾತ್ಪರ್ಯವುಳ್ಳವರು, ಸ್ವರ್ಗವೇ ಪರಮ ಪುರುಷಾರ್ಥವೆಂದು ತಿಳಿದವರು, ಎಂದು ತಾತ್ಪರ್ಯ.

**ಜನ್ಮ-ಕರ್ಮ ಫಲಪ್ರದಾಂ**= ಹುಟ್ಟು , ಪುಣ್ಯ , ಪುಣ್ಯದ ಫಲಗಳನ್ನು ಕೊಡುವುದನ್ನಾಗಿಯೂ ಮತ್ತು, **ಕ್ರಿಯಾ ವಿಶೇಷ ಬಹುಲಾಂ** = ಯಜ್ಞಾದಿ ಅನೇಕ ಕರ್ಮಗಳನ್ನು ಪ್ರತಿಪಾದಿಸುತ್ತಿರುವುದನ್ನಾಗಿಯೂ ಯಾವ ಈ ವೇದವಾಕ್ಯಗಳನ್ನು , **ಪುಷ್ಪಿತಾಂ** = ಹೂ ಬಿಟ್ಟದ್ದನ್ನಾಗಿ, ಅರ್ಥಾತ್ ಮೋಕ್ಷವು ಫಲವಾದರೆ ಅದರ ಮುಂದೆ ಸ್ವರ್ಗಾದಿಫಲಗಳು ಹೂವಿನಂತೆ, ಅಂತಹ ಸ್ವರ್ಗಾದಿರೂಪವಾದ ಹೂವೇ ವೇದದ ಫಲವೆಂದು ತಿಳಿಯುತ್ತಾ ವೇದಗಳು ಭೋಗ-ಐಶ್ವರ್ಯಾದಿ ಪ್ರಾಪ್ತಿಗಾಗಿಯೇ ಇವೆ ಎಂದು ಹೇಳುತ್ತಾರೆ. ॥ 42-43 ॥

**ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಮ್ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ 44 ॥**

**ಅರ್ಥ** - ಭೋಗ-ಐಶ್ವರ್ಯಗಳಲ್ಲಿ ಆಸಕ್ತಿಯನ್ನು ತಾಳಿ ಅದರಿಂದ ವಿವೇಕವನ್ನು ಕಳೆದುಕೊಂಡು ಅವುಗಳ ಬೆನ್ನು ಹತ್ತಿದವರ ಬುದ್ಧಿಯು ಪ್ರಮಾಣಗಳಿಂದ ನಿರ್ಧರಿಸಲ್ಪಟ್ಟ ವಿಷಯದಲ್ಲಿ ನಿಶ್ಚಯಾತ್ಮಕವಾಗಿರುವುದಿಲ್ಲ. ಆದ್ದರಿಂದಲೆ ಅವರ ಮನಸ್ಸು ಭಗವಂತನ ಧ್ಯಾನದಲ್ಲಿ ಏಕಾಗ್ರವಾಗುವುದಿಲ್ಲ.

**ತಯಾ ವಾಚಾಽಪಹೃತಚೇತಸಾಂ ಭೋಗೈಶ್ವರ್ಯಯೋರಾಸಕ್ತಚಿತ್ತಾನಾಂ ವ್ಯವಸಾಯಾತ್ಮಿಕಾ= ಸಮ್ಯಕ್ ಪ್ರಮಾಣನಿರ್ಣೀತಾರ್ಥನಿಶ್ಚಯರೂಪಾ ಬುದ್ಧಿಃ ಸಮಾಧೌ= ಭಗವತಿ ಮನಃಸಮಾಧಾನಾರ್ಥಂ ನ ವಿಧೀಯತೇ । ತಸ್ಯೈವ ಪರಮಪುಮರ್ಥಹೇತುತ್ವಾದಿತಿ ಭಾವಃ ।**

**ಅನುವಾದ** - ಅಂತಹ ವೇದವಾಕ್ಯಗಳಿಂದ ವಿವೇಕವನ್ನು ಕಳೆದುಗೊಂಡ ಮನಸ್ಸುಳ್ಳ, ಭೋಗ-ಐಶ್ವರ್ಯಗಳಲ್ಲಿ ಆಸಕ್ತರಾದವರಿಗೆ **ವ್ಯವಸಾಯಾತ್ಮಿಕಾ** = ಸರಿಯಾದ ಪ್ರಮಾಣಗಳಿಂದ ಸಿದ್ಧವಾದ ವಿಷಯದಲ್ಲಿ ನಿರ್ಧಾರಾತ್ಮಕವಾದ ಬುದ್ಧಿಯು, **ಸಮಾಧೌ** = ಭಗವಂತನಲ್ಲಿ ಮನಸ್ಸನ್ನು ನೆಲೆಗೊಳಿಸಲು, **ನ ವಿಧೀಯತೇ** = ಉಂಟಾಗುವುದಿಲ್ಲ. ಆದರೆ, ಪರಮಾತ್ಮನ ಧ್ಯಾನವೇ ಪರಮಪುರುಷಾರ್ಥವಾದ ಮೋಕ್ಷಕ್ಕೆ ಕಾರಣವಾಗಿದೆ. ಭೋಗೈಶ್ವರ್ಯದಲ್ಲಿ ಆಸಕ್ತಿಯಲ್ಲ.

**ಯದ್ವಾ ಅವ್ಯವಸಾಯಬುದ್ಧಿಃ ಕೇನ ಕಾರಣೇನ ಭವತಿ ? ಯತ್ಪರಿತ್ಯಾಗಾತ್ಸಾ ಬುದ್ಧಿರ್ನ ಭವತಿ, ಇತ್ಯತೋಽವ್ಯವಸಾಯಬುದ್ಧೇಃ ಕಾರಣಮಾಹ– ಯಾಮಿತಿ ॥ ಯೋಜನಾ ತು ಪೂರ್ವವದೇವ । ವೇದತಾತ್ಪರ್ಯವಿಷಯೀಭೂತ-ಭಗವತ್ಸ್ವರೂಪಮೋಕ್ಷಸ್ವರೂಪಯೋಃ ಅಜ್ಞಾನಿನಾಮ್ ಆಪಾತಪ್ರತೀತಾರ್ಥ-ಮಾದಾಯ 'ಸ್ವರ್ಗಾದಿಫಲಕಾ ವೇದಾ' ಇತಿ ವಾದಿನಾಂ ಭೋಗೈಶ್ವರ್ಯ-ಸಕ್ತಾನಾಂ ಅಸದ್ವಾದಿನಾಂ ವಾಕ್ಯಾನ್ಯವ್ಯವಸಾಯಬುದ್ಧಿಕಾರಣಮ್ । ತತ್ತ್ಯಾಗೇ ಚ ಸಾ ಬುದ್ಧಿರ್ನ ಭವತೀತಿ ಭಾವಃ ।**

**ಅತ್ರ ಪಕ್ಷೇ ಸಮಾಧಾವಿತ್ಯಸ್ಯ ತತ್ತ್ವವಿಷಯತಯಾ ದಾರ್ಢ್ಯಾರ್ಥಮಿತ್ಯರ್ಥಃ । ತಸ್ಯೈವ ವಿಷ್ಣುಧರ್ಮಾನುಷ್ಠಾನಹೇತುತ್ವಾದಿತಿ ॥ 44 ॥**

**ಅನುವಾದ** - ಅಥವಾ ಈ ಮೂರು ಶ್ಲೋಕಗಳ ಅಭಿಪ್ರಾಯವನ್ನು ಹೀಗೂ ಗ್ರಹಿಸಬಹುದು. ಪ್ರಾಮಾಣಿಕ ವಿಷಯದ ಬಗ್ಗೆ ನಿರ್ಧಾರವಿಲ್ಲದವರನ್ನು ಹಿಂದಿನ ಶ್ಲೋಕದಲ್ಲಿ ದೂಷಿಸಲಾಯಿತು. ಇಂತಹ ನಿರ್ಧಾರವಿಲ್ಲದ ಬುದ್ಧಿಯು ಉಂಟಾಗಲು ಕಾರಣವೇನು ?

ಕಾರಣವನ್ನು ತಿಳಿದರೆ ಅಂತಹ ಕಾರಣವನ್ನು ಪರಿತ್ಯಜಿಸಿ ಆ ರೀತಿಯ ಬುದ್ಧಿಯು ಬರದಂತೆ ತಡೆಯಬಹುದು. ಅದಕ್ಕಾಗಿ ಅಂತಹ ಬುದ್ಧಿ ಬರಲು ಬೇಕಾದ ಕಾರಣವನ್ನು ಈ ಶ್ಲೋಕಗಳಲ್ಲಿ ತಿಳಿಸುತ್ತಿದ್ದಾರೆ. ಅನ್ವಯ ಶಬ್ದಾರ್ಥಗಳನ್ನೆಲ್ಲ ಹಿಂದಿನಂತೆಯೇ ತಿಳಿಯಬೇಕು. ತಾತ್ಪರ್ಯಾರ್ಥ ಹೀಗೆ- ವೇದಗಳ ತಾತ್ಪರ್ಯ ವಿಷಯವಾದುದು ಪರಮಾತ್ಮನ ಸ್ವರೂಪ ಹಾಗೂ ಮೋಕ್ಷ ರೂಪವಾದ ಪುರುಷಾರ್ಥ. ಇದನ್ನು ತಿಳಿಯದ ಕೆಲವರು ವೇದಗಳಲ್ಲಿ ಮೇಲ್ನೋಟಕ್ಕೆ ತೋರುವ ಅರ್ಥವನ್ನೇ ಪರಿಗ್ರಹಿಸಿ ಯಜ್ಞಾದಿಗಳಿಂದ ಸಿಗುವ ಸ್ವರ್ಗಾದಿ ನಶ್ವರಫಲಗಳೇ ವೇದಗಳ ಗುರಿ ಎಂದು ತಿಳಿಯುತ್ತಾರೆ . ಅಂತಹ ಭೋಗೈಶ್ವರ್ಯಾಸಕ್ತರ ಮಾತುಗಳೇ ಅವ್ಯವಸಾಯಾತ್ಮಕವಾದ ಬುದ್ಧಿಗೆ ಕಾರಣ. ಅವರ ಮಾತುಗಳನ್ನು ಕೇಳುವುದು ಬಿಟ್ಟರೆ ಅಂತಹ ಬುದ್ಧಿ ಬರುವುದಿಲ್ಲ. ಇದು ಶ್ಲೋಕಗಳ ಭಾವಾರ್ಥ.

ಈ ಅರ್ಥದಲ್ಲಿ **ಸಮಾಧೌ** ಎಂಬ ಪದಕ್ಕೆ ಹಿಂದಿನ ಅರ್ಥವನ್ನು ಬಿಟ್ಟು 'ತತ್ತ್ವದ ದಾರ್ಢ್ಯಕ್ಕಾಗಿ' ಎಂಬ ಅರ್ಥವನ್ನು ಮಾಡಬೇಕು. ಏಕೆಂದರೆ , ವೇದಗಳ ತಾತ್ಪರ್ಯವಾದ ವಿಷ್ಣುವಿನ ಬಗ್ಗೆ ದಾರ್ಢ್ಯವೇ ವೈಷ್ಣವಕರ್ಮಾನುಷ್ಠಾನಕ್ಕೆ ಕಾರಣವಾಗುತ್ತದೆ. ॥ 44 ॥

**ವಿವರಣೆ** – ವೇದದ ಮೇಲ್ನೋಟಕ್ಕೆ ತೋರುವ ಅರ್ಥವನ್ನು ತಿಳಿದು ಕೆಲವರು , ಯಜ್ಞಾದಿ ಕರ್ಮಗಳೇ ನಮ್ಮ ಕರ್ತವ್ಯಗಳು . ಅದರಿಂದ ಲಭಿಸುವ ಸ್ವರ್ಗವೇ ಸರ್ವೋತ್ತಮವಾದ ಫಲ, ಎನ್ನುತ್ತಾರೆ . ಇಂತಹವರ ಮಾತಿಗೆ ಮರುಳಾದರೆ ಸರ್ವೋತ್ತಮನಾದ ವಿಷ್ಣುವಿನ ಬಗ್ಗೆ ದೃಢವಾದ ನಂಬಿಕೆ ಬರುವುದಿಲ್ಲ . ಅದು ಬರದ ಹೊರತು ವೈಷ್ಣವಕರ್ಮಗಳನ್ನು ಅನುಷ್ಠಾನ ಮಾಡಲಾಗುವುದಿಲ್ಲ.

## ಪರದೇವತೆಯ ಅರಿವು ಮೂಡಿಸುವುದೇ ವೇದದ ಹೆಗ್ಗುರಿ

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥ 45 ॥**

**ಅರ್ಥ** - ಎಲೈ ಅರ್ಜುನನೆ, ವೇದಗಳು ತ್ರಿಗುಣಜನ್ಯ ಸ್ವರ್ಗಾದಿ ನಶ್ವರ ಪುರುಷಾರ್ಥ ಸಾಧನವಾದ ಕರ್ಮಾದಿಗಳನ್ನೇ ಪ್ರತಿಪಾದಿಸುತ್ತಿರುವಂತೆ ಭಾಸವಾಗುತ್ತದೆ. ಆದರೆ, ನೀನು, ವೇದಗಳಿಂದ ಆಪಾತತಃ ಪ್ರತೀತವಾಗುವ ಈ ವಿಷಯಗಳ ಬಗ್ಗೆ ಭ್ರಾಂತಿಯನ್ನು ತಾಳಬೇಡ.

ಅಥವಾ, ತ್ರಿಗುಣಸಂಬಂಧಿ ಸ್ವರ್ಗಾದಿ ನಶ್ವರಫಲ ಮತ್ತು ಸಂಸಾರದ ಬಂಧನ ಇವೆರಡು ವಿಷಗಳಂತೆ ಇವೆ. ಈ ವಿಷವನ್ನು ಪರಿಹಾರ ಮಾಡುತ್ತವೆ ವೇದಗಳು. ಅರ್ಜುನ, ನಿತ್ಯಪುರುಷಾರ್ಥಕ್ಕೆ ಕಾರಣವಾದ ಭಗವತ್ ಸ್ವರೂಪವನ್ನು ತಿಳಿಸುವ ಆ ವೇದಗಳನ್ನು

ಅವಲಂಬಿಸಿ ನೀನು ವೇದಗಳಿಂದ ಆಪಾತತಃ ಪ್ರತೀತವಾಗುವ ವಿಷಯಗಳ ಬಗ್ಗೆ ಭ್ರಾಂತಿಯನ್ನು ತಾಳಬೇಡ.

ಅಷ್ಟೇ ಅಲ್ಲ, ನೀನು ಸುಖದುಃಖಗಳಲ್ಲಿ ಸಮಭಾವವನ್ನು ತಾಳು . ಅಥವಾ ಸುಖ ಬಂದಾಗ ಉಬ್ಬದಿರು, ದುಃಖವಾದಾಗ ಕುಗ್ಗದಿರು. ಸದಾ 'ಶ್ರೀಹರಿಯು ನನ್ನನ್ನು ಪೊರೆವ ಒಡೆಯ' ಎಂದು ಧ್ಯಾನಿಸು . ಶಾಸ್ತ್ರವಿರುದ್ಧವಾದ ಆದಾಯವನ್ನಾಗಲೀ, ನಿನ್ನಲ್ಲಿರುವ ದ್ರವ್ಯದ ಪರಿರಕ್ಷಣೆಯನ್ನಾಗಲೀ ಮಾಡಲು ಯತ್ನಿಸಬೇಡ ; ಆ ಬಗ್ಗೆ ಇಚ್ಛೆಯನ್ನೂ ಮಾಡದಿರು. ॥ 45 ॥

**'ಏವಂ ಯೋಗೇ ತ್ವಿಮಾಂ ಶೃಣು' ಇತಿ ಯೋಗೋಕ್ತಿಂ ಪ್ರತಿಜ್ಞಾಯ ತತ್ರಾದರಜನನಾಯ ಸಾರ್ಧಶ್ಲೋಕೇನ ತಂ ಪ್ರಶಸ್ಯ , ಸ್ವೋಕ್ತೌ ನಿಷ್ಠಾಭಾವೇ ಕಾರಣೀಭೂತಮತಾಂತರವಿಧಾನಂ ಚ ಶ್ಲೋಕತ್ರಯೇಣ ತನ್ನಿಂದೋಕ್ತ್ಯಾ ನಿರಸ್ಯೇದಾನೀಂ ಪ್ರತಿಜ್ಞಾತಂ ಯೋಗಂ ಪ್ರಾಧಾನ್ಯೇನಾಹ– ತ್ರೈಗುಣ್ಯೇತ್ಯಾದಿನಾ ಆಷಷ್ಠಾಧ್ಯಾಯಸಮಾಪ್ತಿ ॥ 'ಬಹೂನಿ ಮೇ ವ್ಯತೀತಾನಿ' ಇತ್ಯಾದೇಃ ಪ್ರಾಸಂಗಿಕ-ತ್ವೇನಾಪ್ರಧಾನತ್ವಾತ್ ।**

**ಅನುವಾದ** – ಈ ಹಿಂದೆ **'ಯೋಗೇ ತ್ವಿಮಾಂ ಶ್ರುಣು'** (2.39) ಎಂದು 'ಜ್ಞಾನೋಪಾಯವನ್ನು ಮುಂದೆ ಹೇಳುವೆನು' ಎಂದು ಪ್ರತಿಜ್ಞೆ ಮಾಡಲಾಗಿದೆ. ಹೇಳಲಿರುವ ವಿಷಯದಲ್ಲಿ ಆಸಕ್ತಿ ಹುಟ್ಟುವ ಸಲುವಾಗಿ ಒಂದೂವರೆ ಶ್ಲೋಕದಲ್ಲಿ (39,40) ಅದನ್ನು ಪ್ರಶಂಸೆ ಮಾಡಲಾಯಿತು. ಮುಂದಿನ ಮೂರು ಶ್ಲೋಕಗಳಲ್ಲಿ ಶ್ರೀಕೃಷ್ಣ, ತನ್ನ ಮಾತಿನಲ್ಲಿ ಶ್ರದ್ಧೆ ಹುಟ್ಟಲು ಪ್ರತಿಬಂಧಕಗಳಾದ , ಜ್ಞಾನಸಾಧನದ ಬಗ್ಗೆ ಇತರ ಮತಗಳ ಅಭಿಪ್ರಾಯಗಳು, ವೇದದ ಮೇಲ್ಮೈಗೆ ತೋರುವ ಅರ್ಥವನ್ನು ಅವಲಂಬಿಸಿವೆ ಎಂದು ನಿರಾಕರಿಸಿರುತ್ತಾನೆ. ಇದೀಗ ಈ ಶ್ಲೋಕದಲ್ಲಿ (45ನೇ ಶ್ಲೋಕ) ಹಿಂದೆ ಪ್ರತಿಜ್ಞೆ ಮಾಡಿರುವ ಜ್ಞಾನಸಾಧನದ ಬಗ್ಗೆ ಹೇಳುತ್ತಿದ್ದಾನೆ. ಇಲ್ಲಿಂದ ಆರನೆಯ ಅಧ್ಯಾಯ ಮುಗಿಯುವವರೆಗೂ ಜ್ಞಾನಸಾಧನದ ಬಗ್ಗೆಯೇ ಹೇಳಲಾಗಿದೆ. ಮಧ್ಯದಲ್ಲಿ 'ಬಹೂನಿ ಮೇ ವ್ಯತೀತಾನಿ'(4.5). ಕೆಲವು ವಿಷಯಗಳು ಪ್ರಾಸಂಗಿಕವಾಗಿ ಬಂದಿವೆ.

**ತ್ರಯಾಣಾಂ ಸತ್ವರಜಸ್ತಮಸಾಮಿದಂ ತ್ರೈಗುಣ್ಯಮ್ ತ್ರಿಗುಣಸಂಬಂಧಿ । ಸಂಬಂಧಾರ್ಥೇ 'ವಿಚಿತ್ರಾ ಹಿ ತದ್ಧಿತಗತಿಃ' ಇತಿ ವಚನಾತ್ ಷ್ಯಞ್ ಪ್ರತ್ಯಯಃ । ತ್ರಿಗುಣಜನ್ಯಂ ಯತ್ಸ್ವರ್ಗಾದಿ ತದ್ವಿಷಯಾಃ ಆಪಾತತಃ ಸ್ವರ್ಗಾದಿಫಲಕಕರ್ಮಾದಿ-ಪ್ರತಿಪಾದಕಾಃ ಪ್ರತೀಯಂತೇ ವೇದಾಃ ।**

**'ವಾದೋ ವಿಷಯಕತ್ವಂ ಚ ಮುಖತೋ ವಚನಂ ತಥಾ' ಇತ್ಯುಕ್ತೇಃ ।**

**ಹೇ ಅರ್ಜುನ, ತ್ವಂ ತು ನಿಸ್ತ್ರೈಗುಣ್ಯಃ= ನಿಷ್ಕ್ರಾಂತಃ ತ್ರೈಗುಣ್ಯಾತ್ ತ್ರಿಗುಣ-ಸಂಬಂಧಿಸ್ವರ್ಗಾದಿತೋ ನಿಸ್ತ್ರೈಗುಣ್ಯಃ । ತ್ರೈಗುಣ್ಯಬುದ್ಧಿತೋ ನಿರ್ಗತೋ ಭವ । ಆಪಾತತಃ ಪ್ರತೀತಾರ್ಥೇ ಭ್ರಾಂತಿಂ ಮಾ ಕಾರ್ಷೀರಿತ್ಯರ್ಥಃ ।**

**ಯದ್ವಾ ತ್ರೈಗುಣ್ಯಂ= ತ್ರಿಗುಣಸಂಬಂಧಿ ಸ್ವರ್ಗಾದ್ಯಸ್ಥಿರಫಲಂ, ಸಂಸಾರಬಂಧನಂ ವಾ । ತದೇವ ವಿಷಂ- ತ್ರೈಗುಣ್ಯವಿಷಂ ಯಾಪಯಂತಿ= ಅಪಗಮಯಂತೀತಿ ತ್ರೈಗುಣ್ಯವಿಷಯಾಃ । 'ಯಾತೇರಂತರ್ಣೀತಣ್ಯರ್ಥಾತ್ ಆತೋಽನುಪಸರ್ಗೇ ಕಃ' (ಪಾ.ಸೂ.3.2.3.) ಇತಿ ಕಃ । ನಿತ್ಯಪುಮರ್ಥಹೇತುಭಗವತ್‌ಸ್ವರೂಪ-ವಿಷಯಾ ಇತಿ ಯಾವತ್ । ತಾನಾಶ್ರಿತ್ಯೇತಿ ಶೇಷಃ । ನಿಸ್ತ್ರೈಗುಣ್ಯೋ ಭವ ಪ್ರಾಗ್ವದೇವಾರ್ಥಃ । ವೇದತಾತ್ಪರ್ಯವಿಷಯೀಭೂತಾರ್ಥಂ ಬುದ್ಧ್ವಾ ಕ್ಷುದ್ರ-ಫಲಕಕರ್ಮಾದಿರೂಪಾಪಾತಪ್ರತೀತಾರ್ಥೇ ಭ್ರಾಂತಿಂ ಮಾ ಕಾರ್ಷೀರಿತಿ ಭಾವಃ ।**

**ಅನುವಾದ –** ತ್ರೈಗುಣ್ಯವೆಂದರೆ – ಸತ್ವ , ರಜಸ್, ತಮಸ್ ಈ ಮೂರು ಗುಣಗಳಿಗೆ ಸಂಬಂಧಿಸಿದ್ದು . ತ್ರಿಗುಣ ಸಂಬಂಧಿ ಎನ್ನುವ ಅರ್ಥದಲ್ಲಿ ಷ್ಯಞ್ ಎಂಬ ತದ್ಧಿತ ಪ್ರತ್ಯಯವು ಬಂದಿದೆ. ವಸ್ತುತಃ 'ಸಂಬಂಧ' ಎಂಬ ಅರ್ಥದಲ್ಲಿ ಈ ಪ್ರತ್ಯಯವನ್ನು ವಿಧಿಸುವ ಸೂತ್ರವಿಲ್ಲ. ಆದರೂ 'ತದ್ಧಿತ ಪ್ರತ್ಯಯಗಳು ಅನೇಕ ವಿಧವಾದ ಅರ್ಥಗಳಲ್ಲಿ ಬರುತ್ತವೆ' ಎಂದು ನಿಯಮವಿರುವ ಕಾರಣ 'ಸಂಬಂಧ ' ಎಂಬ ಅರ್ಥವನ್ನೂ ಅದಕ್ಕೆ ಹೇಳಬಹುದಾಗಿದೆ.

'ತ್ರಿಗುಣದ ಕಾರ್ಯವಾದ ಸ್ವರ್ಗಾದಿಫಲಗಳನ್ನು ಪಡೆಯಲು ಬೇಕಾದ ಯಜ್ಞಾದಿ ಕರ್ಮಗಳನ್ನೇ ವೇದವು ಪ್ರತಿಪಾದಿಸುತ್ತಿರುವಂತೆ ಮೇಲ್ಮೈಗೆ ತೋರುತ್ತದೆ' ಇದು '**ತ್ರೈಗುಣ್ಯ-ವಿಷಯಾಃ ವೇದಾಃ**' ಎಂಬ ಗೀತೆಯ ಮಾತಿನ ಅರ್ಥ. ಏಕೆಂದರೆ 'ವಾದ, ವಿಷಯಕತ್ವ ಎಂಬ ಪದಗಳಿಗೆ ಆಪಾತತಃ ವಿಷಯ ನಿರೂಪಣೆ ' ಎಂದು ಪ್ರಮಾಣವು ವಿಷಯ ಪದದ ಅರ್ಥವನ್ನು ನಿರೂಪಿಸಿದೆ.

ಎಲೈ ಅರ್ಜುನನೆ ! ನೀನು ನಿಸ್ತ್ರೈಗುಣ್ಯನಾಗು, ತ್ರಿಗುಣಸಂಬಂಧಿಯಾದ ಸ್ವರ್ಗಾದಿಗಳಿಂದ ವಿಮುಖನಾಗು . ಅರ್ಥಾತ್ ಸ್ವರ್ಗಾದಿಗಳನ್ನು ಬಿಟ್ಟು ಬೇರೆ ಫಲವೇ ಇಲ್ಲ ಎಂದು ತಿಳಿಯಬೇಡ. ವೇದಗಳಿಂದ ಆಪಾತತಃ ತಿಳಿಯಲ್ಪಡುವ ಅರ್ಥವೇ ಸರಿ ಎನ್ನುವ ಭ್ರಾಂತಿಯನ್ನು ತಾಳಬೇಡ, ಎಂದು ಶ್ರೀಕೃಷ್ಣನ ಆಶಯ .

ಅಥವಾ, ಹೀಗೂ ಅರ್ಥವನ್ನು ಮಾಡಬಹುದು– ತ್ರೈಗುಣ್ಯವೆಂದರೆ ತ್ರಿಗುಣಸಂಬಂಧಿಯಾದ ಸ್ವರ್ಗಾದಿ ಅಸ್ಥಿರ ಫಲಗಳು ಇಲ್ಲವೆ , ಸಂಸಾರಬಂಧನ. ಇದೇ ಒಂದು ವಿಷ. ಈ ವಿಷವನ್ನು **ಯಾಪಯಂತಿ** (ವಿಷ +ಯ ಎಂಬಲ್ಲಿ 'ಯ' ಪದದ ಅರ್ಥ, ) ಪರಿಹರಿಸುತ್ತವೆ ಎನ್ನುವ ಕಾರಣದಿಂದಾಗಿ ವೇದಗಳು '**ತ್ರೈಗುಣ್ಯವಿಷಯಾಃ**' ಎನಿಸಿವೆ.

'**ವಿಷಯ**' ಎಂಬ ಪದವನ್ನು **ವಿಷ + ಯ** ಎಂದು ವಿಭಾಗ ಮಾಡಬೇಕು . ಇಲ್ಲಿರುವ '**ಯ**' ಶಬ್ದವು '**ಯಾ**' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಅದನ್ನು ಪ್ರೇರಣಾರ್ಥದಲ್ಲಿ ತೆಗೆದುಕೊಳ್ಳಬೇಕು. ಆ ಧಾತುವಿಗೆ '**ಆತೋಽನುಪಸರ್ಗೇ ಕಃ**' ಎಂಬ ಸೂತ್ರದಿಂದ '**ಕ**' ಪ್ರತ್ಯಯ ಬಂದು '**ಯಃ**' ಎಂಬ ಶಬ್ದ ನಿಷ್ಪನ್ನವಾಗಿದೆ. ಒಟ್ಟಿನಲ್ಲಿ ವಿಷಯ ಶಬ್ದಕ್ಕೆ, ಸಂಸಾರವಿಷವನ್ನು ದೂರಮಾಡುವ, ನಿತ್ಯಪುರುಷಾರ್ಥವಾದ ಮೋಕ್ಷಕ್ಕೆ ಕಾರಣವಾದ, ಪರಮಾತ್ಮನ ಸ್ವರೂಪವನ್ನೇ ವೇದಗಳು ಪ್ರತಿಪಾದಿಸುತ್ತವೆ ಎಂದು ಅರ್ಥವಾಗುತ್ತದೆ.

ಗೀತೆಯಲ್ಲಿ **ವೇದಾಃ** ಎಂಬ ಪದದ ಅನಂತರ, '**ತಾನ್ ಆಶ್ರಿತ್ಯ**' ಎಂಬ ಪದವನ್ನು ಸೇರಿಸಿಕೊಳ್ಳಬೇಕು 'ಅಂತಹ ವೇದವನ್ನು ಅವಲಂಬಿಸಿ' ಎಂದು ಅರ್ಥ. '**ನಿಸ್ತ್ರೈಗುಣ್ಯೋ ಭವ**' ಎಂಬ ಶಬ್ದಕ್ಕೆ ಹಿಂದಿನದೇ ಅರ್ಥ.

ಒಟ್ಟಿನಲ್ಲಿ ಪೂರ್ವಾರ್ಧದ ಅಭಿಪ್ರಾಯ – ಸಂಸಾರವಿಷವನ್ನು ಪರಿಹರಿಸುವ ವೇದದ ಆಂತರಿಕ ಅಭಿಪ್ರಾಯವನ್ನು ತಿಳಿದುಕೊ . ಅವುಗಳಿಂದ ಮೇಲ್ನೋಟಕ್ಕೆ ತಿಳಿಯಲ್ಪಡುವ, ಕ್ಷುದ್ರವಾದ ಸ್ವರ್ಗಾದಿ ಫಲಗಳಿಗೆ ಕಾರಣವಾದ ಯಜ್ಞಾದಿ ಕರ್ಮಗಳೇ ವೇದಗಳ ತಾತ್ಪರ್ಯ ಎಂಬ ಭ್ರಾಂತಿಯನ್ನು ತಾಳಬೇಡ ಎಂದು.

**ಕಿಂಚ, ನಿರ್ದ್ವಂದ್ವಃ 'ಸುಖದುಃಖೇ ಸಮೇ ಕೃತ್ವಾ' ಇತ್ಯತ್ರೋಕ್ತದಿಶಾ ಸಮದುಃಖಸುಖಾದಿರಿತಿ ವಾ, ಸುಖದುಃಖಾದಿಪ್ರಾಪ್ತಾವುತ್ಸೇಕಾನುತ್ಸೇಕಹೀನ ಇತಿ ವಾಽರ್ಥಃ । ನಿತ್ಯಂ ಸತ್ವೇ = ಸಾಧುಗುಣೋಪೇತೇ ಹರೌ ತಿಷ್ಠತೀತಿ - ನಿತ್ಯಸತ್ವಸ್ಥಃ । ನಿತ್ಯಂ ಹರಿಸ್ಮೃತಿಮಾನ್ । ಭವೇತಿ ಸರ್ವತ್ರಾನ್ವೇತಿ । ಕಥಂ ನಿತ್ಯಂ ಹರಿಸ್ಮೃತಿರಿತ್ಯತ ಆತ್ಮವಾನ್ = ಪರಮಾತ್ಮವಾನ್ ತಥಾ ಸ್ಮೃತಿಮಾನಿತಿ । 'ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ' ಇತಿ (4-1-3) ಸೂತ್ರೋಕ್ತದಿಶಾ 'ಮಮ ಸ್ವಾಮೀ ಹರಿಃ' (ಅನುವ್ಯಾಖ್ಯಾನ–4.1.3) ಇತಿ ಸ್ಮೃತಿಮಾನಿತಿ ಯಾವತ್ ।**

**ಅಪ್ರಾಪ್ತಪ್ರಾಪ್ತಿರ್ಯೋಗಃ , ಪ್ರಾಪ್ತಪರಿರಕ್ಷಣಂ ಕ್ಷೇಮಃ । ಶಾಸ್ತ್ರವಿರುದ್ಧ-**

**ವಿಷಯೇ, ಯೋಗಕ್ಷೇಮಾಭ್ಯಾಂ ನಿಷ್ಕ್ರಾಂತೋ ನಿರ್ಯೋಗಕ್ಷೇಮಃ । ಶಾಸ್ತ್ರವಿರುದ್ಧವಿಷಯೇ ಯೋಗಕ್ಷೇಮಹೀನೋ ಭವೇತ್ಯರ್ಥಃ ।**[1]

**ಉಪಲಕ್ಷಣಮೇತತ್ । ತಾದೃಶಯೋಗಕ್ಷೇಮೇಚ್ಛಾಹೀನೋಽಪಿ ಭವೇತ್ಯರ್ಥಃ । 'ನಿರ್ದ್ವಂದ್ವತ್ವಾದಿವಿಶೇಷಣಯುಕ್ತಸ್ಯ ನಿತ್ಯಪುಮರ್ಥಹೇತುರ್ಭಗವಾನೇವ ವೇದತಾತ್ಪರ್ಯವಿಷಯೋ ನ ಕಾಮ್ಯಕರ್ಮೇತಿ ಜ್ಞಾತ್ವಾ ಕಾಮ್ಯಕರ್ಮತ್ಯಾಗೇನ ಸರ್ವತ್ರ ಸಂತತಃ ಸಾಧುಗುಣೋ ಹರಿಃ ಮಮ ಸ್ವಾಮೀತಿ ನಿತ್ಯಸ್ಮರಣಮೇವ ಜ್ಞಾನೋಪಾಯೋ ನ ತ್ವೈಕ್ಯಸ್ಮೃತಿರಿತ್ಯುಕ್ತಂ ಭವತಿ ॥ 45 ॥**

**ಅನುವಾದ** - ಅಷ್ಟೇ ಅಲ್ಲದೆ ಅರ್ಜುನ, ನೀನು ನಿರ್ದ್ವಂದ್ವನಾಗು. ದ್ವಂದ್ವ ಎಂದರೆ ಸುಖದುಃಖಗಳು. ಅವುಗಳಿಂದ ಅತೀತನಾಗುವುದು ಎಂದರೆ– **'ಸುಖದುಃಖೇ ಸಮೇ ಕೃತ್ವಾ'** ಎಂಬಲ್ಲಿ ಹೇಳಿದಂತೆ ದುಃಖ ಹೇಗೆ ತ್ಯಾಜ್ಯವೋ ಸುಖವೂ ಅದೇ ರೀತಿ ತ್ಯಾಜ್ಯ ಎಂಬ ಭಾವನೆಯನ್ನು ಮಾಡುವುದು. ಅಥವಾ, ಸುಖವಾದಾಗ ಉಬ್ಬದಿರುವುದು, ದುಃಖವಾದಾಗ ಕುಗ್ಗದಿರುವುದು, ಇದೇ ನಿರ್ದ್ವಂದ್ವತೆ.

**ನಿತ್ಯ-ಸತ್ವ-ಸ್ಥಃ** ಎಂದರೆ ಸದಾಕಾಲವೂ **ಸತ್ವೇ** = ಸದ್ಗುಣೋಪೇತನಾದ ಪರಮಾತ್ಮನಲ್ಲಿ, **ಸ್ಥಃ**= ಇರುವವನಾಗು. ಸದಾ ಶ್ರೀಹರಿಸ್ಮರಣೆಯನ್ನು ಮಾಡುತ್ತಿರು. **ಭವ** ಎಂಬ ಕ್ರಿಯಾಪದವನ್ನು ಮುಂದಿನ ಎಲ್ಲ ಪದಗಳೊಂದಿಗೂ ಅನ್ವಯಿಸಿಕೊಳ್ಳಬೇಕು. (**ನಿತ್ಯಸತ್ವಸ್ಥಃ ಭವ, ನಿರ್ಯೋಗಕ್ಷೇಮಃ ಭವ, ಆತ್ಮವಾನ್ ಭವ** ಎಂದು)

ಹರಿಯನ್ನು ಸದಾ ಏನೆಂದು ಚಿಂತಿಸಬೇಕು ಎನ್ನುವುದನ್ನು **'ಆತ್ಮವಾನ್'** ಎಂಬ ಶಬ್ದವು ತಿಳಿಸುತ್ತದೆ. **ಆತ್ಮವಾನ್**= 'ಶ್ರೀಹರಿಯೇ ನನ್ನ ಸ್ವಾಮಿ' ಎಂದು ಚಿಂತನೆಯನ್ನು ಮಾಡುತ್ತಿರುವವನಾಗಿ. **'ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ'** ಎಂಬ ಬ್ರಹ್ಮಸೂತ್ರದಲ್ಲಿ ವೇದವ್ಯಾಸರು ಹೇಳಿದಂತೆ 'ದೇವರು ನನ್ನ ರಕ್ಷಕ ' ಎಂಬ ಚಿಂತನೆಯನ್ನು ನಿರಂತರ ಮಾಡುತ್ತಿರು, ಎಂದು ಅರ್ಥ.

**ನಿರ್ಯೋಗಕ್ಷೇಮಃ** ಎಂಬ ಪದದಲ್ಲಿ **ಯೋಗ** ಎಂದರೆ ಇದುವರೆಗೆ ನಮ್ಮಲ್ಲಿ ಇಲ್ಲದ ದ್ರವ್ಯದ ಪ್ರಾಪ್ತಿ . ಈಗಾಗಲೇ ಇರುವ ದ್ರವ್ಯದ ಪರಿರಕ್ಷಣೆ **ಕ್ಷೇಮ** .ಶಾಸ್ತ್ರ- ವಿರುದ್ಧವಾದ ವಿಷಯದಲ್ಲಿ ಯೋಗ ಮತ್ತು ಕ್ಷೇಮದ ಪ್ರಯತ್ನವನ್ನು ಮಾಡದಿರು. ಅಷ್ಟೇ ಅಲ್ಲ, ಯೋಗಕ್ಷೇಮದ ಬಗ್ಗೆ ಇಚ್ಛೆಯನ್ನೂ ಬಿಟ್ಟುಬಿಡು, ಎಂದರ್ಥ.

---

1. ಇದಂ ವಾಕ್ಯಂ ನಾಸ್ತಿ । ಗ.ಘ.ಖ.

ಒಟ್ಟಿನಲ್ಲಿ ಗೀತೆಯ ಉತ್ತರಾರ್ಧದ ಭಾವ – ನಿರ್ದ್ವಂದ್ವನಾದವನು , ನಿತ್ಯಪುರುಷಾರ್ಥಕ್ಕೆ (ಮೋಕ್ಷಕ್ಕೆ) ಕಾರಣನಾದ ಪರಮಾತ್ಮನೇ ವೇದತಾತ್ಪರ್ಯ ವಿಷಯನಾಗಿದ್ದಾನೆ, ಕಾಮ್ಯ-ಕರ್ಮಗಳಲ್ಲ ಎಂದು ತಿಳಿದು ಕಾಮ್ಯಕರ್ಮಗಳನ್ನು ಪರಿತ್ಯಜಿಸಿ ಸರ್ವತ್ರವ್ಯಾಪ್ತನಾಗಿರುವ, 'ಸದ್ಗುಣ ಭರಿತನಾದ ಶ್ರೀಹರಿಯೇ ನನ್ನ ರಕ್ಷಕ' ಎಂದು ಚಿಂತಿಸುತ್ತಿರಬೇಕು . ಇದೇ ಭಗವಂತನ ಅಪರೋಕ್ಷಜ್ಞಾನಕ್ಕೆ ಕಾರಣ, ಹೊರತು ಜೀವಬ್ರಹ್ಮೈಕ್ಯಜ್ಞಾನವು ಕಾರಣವಲ್ಲ, ಎಂದು . ॥ 45 ॥

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ 46 ॥**

**ಅರ್ಥ** – ತುಂಬು ನೀರಿನ ಸಮುದ್ರದಲ್ಲಿ ಇತರ ಜಲಾಶಯದ ಎಲ್ಲ ಪ್ರಯೋಜನವೂ ದೊರಕುತ್ತದೆ. ಅದರಂತೆ, ಸಕಲವೇದಗಳಲ್ಲಿ ಹೇಳಿದ ಕಾಮ್ಯಕರ್ಮಗಳಿಂದ ದೊರೆಯಬಹುದಾದ ಸ್ವರ್ಗವೇ ಮುಂತಾದ ಎಲ್ಲ ಫಲಗಳೂ, ಮೊದಲು ಪರಮಾತ್ಮನನ್ನು ಪರೋಕ್ಷವಾಗಿ ತಿಳಿದು ಆಮೇಲೆ ಅಪರೋಕ್ಷೀಕರಿಸಿಕೊಂಡ ಜ್ಞಾನಿಗೆ ದೊರಕುವ ಫಲದಲ್ಲಿ ಸೇರಿಹೋಗುತ್ತವೆ.

ಅಥವಾ , ಪ್ರಲಯೋದಕದಲ್ಲಿ ಪವಡಿಸಿದ ಪರಮಾತ್ಮನು ಪ್ರಸನ್ನನಾದರೆ ಸ್ವರ್ಗ,ಮೋಕ್ಷ ಮುಂತಾದ ಎಷ್ಟು ಫಲವು ದೊರಕುವುದೋ ಅಷ್ಟೂ ಫಲವು, 'ಸಕಲವೇದಗಳ ಮುಖ್ಯಾರ್ಥ ಪರಮಾತ್ಮನೇ, ಅವುಗಳು ತಿಳಿಸುವ ಕರ್ಮಾದಿಗಳೂ ಪರಮಾತ್ಮನ ಜ್ಞಾನಕ್ಕಾಗಿ ಇವೆ, ಸ್ವರ್ಗಾದಿ ಅಸ್ಥಿರ ಫಲಗಳನ್ನು ವೇದಗಳು ಪರಮಾತ್ಮನಲ್ಲಿ ಶ್ರದ್ಧೆ-ಆಸಕ್ತಿಗಳನ್ನು ಹುಟ್ಟಿಸುವ ಉದ್ದೇಶಕ್ಕಾಗಿಯಷ್ಟೇ ಹೇಳುತ್ತಿವೆ' ಎಂದು ತಿಳಿಯುವ ಸಾಧಕನಿಗೆ ದೊರಕುತ್ತದೆ.

**ನನು 'ಯಾಮಿಮಾಮಿ'ತಿ ತ್ರಯೇಣ ಕಾಮ್ಯಕರ್ಮಿಣಾಂ ಸಮಾಧ್ಯಭಾವೇನ ಜ್ಞಾನಾಭಾವಾನ್ನ ಮೋಕ್ಷ ಇತಿ ನಿಂದಾಂ ಕೃತ್ವಾ 'ನಿಸ್ತ್ರೈಗುಣ್ಯೋ ಭವ' ಇತಿ ಕಾಮ್ಯಕರ್ಮತ್ಯಾಗೇನ ಯೋಗಾನುಷ್ಠಾನನಿಯಮ ಉಕ್ತಃ । ಸತ್ವಯುಕ್ತಃ । ಜ್ಞಾನಫಲಂ ಕರ್ಮಿಣಾಮಿವ ಕರ್ಮಫಲಂ ಸ್ವರ್ಗಾದಿಕಂ ಜ್ಞಾನಿನಾಂ ನಾಸ್ತೀತಿ ಜ್ಞಾನಕರ್ಮಮಾರ್ಗಯೋಃ ಸಾಮ್ಯಾದಿತ್ಯತ ಆಹ-ಯಾವಾನಿತಿ ॥**

**ಅನುವಾದ** – 'ಯಾಮಿಮಾಂ' ಇತ್ಯಾದಿ ಮೂರು ಶ್ಲೋಕಗಳಲ್ಲಿ ಕಾಮ್ಯಕರ್ಮವನು ಆಚರಿಸುವವರಿಗೆ ಚಿತ್ತಚಾಂಚಲ್ಯದಿಂದಾಗಿ ಭಗವಂತನ ಧ್ಯಾನವನ್ನು ಮಾಡಲು ಸಾಧ ವಾಗುವುದಿಲ್ಲ ; ಹೀಗಾಗಿ ಅವರಿಗೆ ಭಗವದಪರೋಕ್ಷ ಜ್ಞಾನ ಬರುವುದಿಲ್ಲವಾದುದರಿಂ ಮೋಕ್ಷವಿಲ್ಲ ಎಂದು ನಿಂದಿಸಲಾಗಿದೆ. ಮುಂದಿನ ಶ್ಲೋಕದಲ್ಲಿ '**ನಿಸ್ತ್ರೈಗುಣ್ಯೋ ಭವ**' ಎಂದ

ಅರ್ಜುನನಿಗೆ ಕಾಮ್ಯಕರ್ಮವನ್ನು ಪರಿತ್ಯಜಿಸಿ ಜ್ಞಾನಸಾಧನವನ್ನೇ ಅನುಸರಿಸುವಂತೆ ನಿರ್ಬಂಧಿಸಲಾಗಿದೆ. ಆದರೆ ಇದು ಸರಿಯಲ್ಲ. ಏಕೆಂದರೆ , ಜ್ಞಾನ ಫಲವಾದ ಮೋಕ್ಷವು ಹೇಗೆ ಸಕಾಮಕರ್ಮಿಗಳಿಗೆ ಸಿಗುವುದಿಲ್ಲವೋ ಹಾಗೆಯೇ ಸಕಾಮಕರ್ಮಿಗಳಿಗೆ ಸಿಗುವ ಸ್ವರ್ಗಾದಿಗಳು ಜ್ಞಾನಿಗಳಿಗೆ ದೊರಕುವುದಿಲ್ಲ. ಹೀಗೆ ಒಬ್ಬರಿಗೆ ಸಿಗುವ ಫಲ ಮತ್ತೊಬ್ಬರಿಗೆ ಇಲ್ಲವಾದುದರಿಂದ ಜ್ಞಾನ-ಕರ್ಮಮಾರ್ಗಗಳೆರಡೂ ಸಮಾನವಾಗಿರುವಾಗ ಅವೆರಡರಲ್ಲಿ ಒಂದನ್ನು ನಿಂದಿಸುವುದು ಹೇಗೆ ? ಈ ಪ್ರಶ್ನೆಗೆ ಉತ್ತರವನ್ನು 'ಯಾವಾನರ್ಥಃ' ಎಂಬ ಶ್ಲೋಕವು ಕೊಡುತ್ತದೆ.

**ಸಾಮರ್ಥ್ಯಾದ್ಯಥೈವಂಪದಯೋರಧ್ಯಾಹಾರಃ । ಯಾವಾನ್ ತಾವಾನ್ ಇತ್ಯನಯೋರಾವೃತ್ತಿಃ । ಅಯಮರ್ಥಃ । ಯಥಾ ಯಾವಾನರ್ಥಃ= ಪ್ರಯೋಜನಮ್ ಉದಪಾನೇ= ಉದಕಂ ಪೀಯತೇ ಅಸ್ಮಿನ್ನಿತಿ ವ್ಯುತ್ಪತ್ತ್ಯಾ ಕೂಪೇ ಭವತಿ ತಾವಾನ್ ಸ್ನಾನಪಾನಾದಿರೂಪೋಽರ್ಥಃ ಸರ್ವತಃ ಸಂಪ್ಲುತೋದಕೇ = ಮಹಾಸಮುದ್ರೇ ಅಂತರ್ಭವತಿ । ಏವಂ ಸರ್ವೇಷು ವೇದೇಷು ಸರ್ವವೇದೋಕ್ತಕಾಮ್ಯಕರ್ಮಿಣಾಂ ಯಾವಾನರ್ಥಃ= ಸ್ವರ್ಗಾದಿರೂಪಂ ಫಲಂ (ತಾವಾನಿತ್ಯರ್ಥಃ) ತಾವತ್ಫಲಂ ವಿಜಾನತಃ= ಪರೋಕ್ಷತೋ ಭಗವಂತಂ ಜಾನತೋ, ಬ್ರಾಹ್ಮಣಸ್ಯ = ಬ್ರಹ್ಮಾಪರೋಕ್ಷಜ್ಞಾನಿನಃ ಭವತ್ಯೇವೇತ್ಯರ್ಥಃ ।**

**ಜ್ಞಾನಿಕರ್ಮಿಣೋರನ್ಯೋನ್ಯಫಲಾಭಾವೇಽಪಿ ಜ್ಞಾನಿಫಲಂ ಮಹಾಸಮುದ್ರೋದಕಮಿವ ಮಹತ್ । ಕರ್ಮಿಫಲಂ ತು ಕೂಪೋದಕಮಿವ ಅತ್ಯಲ್ಪಮ್ । ಅತಃ ಕುತಃ ತಯೋಃ ಸಾಮ್ಯಮ್ ? ತಥಾ ಚ ಅಲ್ಪಾಸ್ಥಿರಫಲಕಕರ್ಮನಿಂದಯಾ ಮಹಾನಂತಫಲಜ್ಞಾನಸಾಧನೇ ಯೋಗೇ ಪ್ರೇರಣಂ ಪೂರ್ವಶ್ಲೋಕೋಕ್ತಂ ಯುಕ್ತಮಿತಿ ಭಾವಃ ।**

**ಅನುವಾದ** - ಈ ಶ್ಲೋಕದಲ್ಲಿ ಜ್ಞಾನದ ಫಲವನ್ನು ಮಹಾಸಮುದ್ರಕ್ಕೆ ಹೋಲಿಸಿರುವುದರಿಂದ ಅದಕ್ಕೆ ಅನುಗುಣವಾಗಿ '**ಯಥಾ**' '**ಏವಂ**' ಶಬ್ದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಶ್ಲೋಕದಲ್ಲಿರುವ '**ಯಾವಾನ್**' ಮತ್ತು '**ತಾವಾನ್**' ಪದಗಳನ್ನು ಆವೃತ್ತಿ ಮಾಡಿಕೊಳ್ಳಬೇಕು, ಅಂದರೆ , ದೃಷ್ಟಾಂತ ಮತ್ತು ದಾರ್ಷ್ಟಾಂತಿಕ ಎರಡಕ್ಕೂ ಅನ್ವಯಿಸಿಕೊಳ್ಳಲು ಅನುಗುಣವಾಗುವಂತೆ ಎರಡು ಬಾರಿ ಇಟ್ಟುಕೊಳ್ಳಬೇಕು.

ಶ್ಲೋಕಕ್ಕೆ ಹೀಗೆ ಅರ್ಥವಾಗುತ್ತದೆ – ಹೇಗೆ , **ಯಾವಾನ್ ಅರ್ಥಃ** = ಎಷ್ಟು ಪ್ರಯೋಜನವು **ಉದಪಾನೇ** = ಬಾವಿಯಲ್ಲಿ ದೊರಕುವುದೋ ಆ ಎಲ್ಲ ಸ್ನಾನ -

ಪಾನರೂಪವಾದ ಪ್ರಯೋಜನವೂ ತುಂಬಿ ತುಳುಕುವ ಸಮುದ್ರದಿಂದ ದೊರಕುವುದೋ. ಅದರಂತೆ, **ಸರ್ವೇಷು ವೇದೇಷು**= ವೇದೋಕ್ತವಾದ ಸಕಲ ಕಾಮ್ಯಕರ್ಮಗಳನ್ನು ಮಾಡುವವರಿಗೆ, **ಯಾವಾನರ್ಥಃ**= ಎಷ್ಟು ಸ್ವರ್ಗಾದಿರೂಪವಾದ ಪ್ರಯೋಜನವು ದೂರಕುವುದೋ, **ತಾವಾನ್ ಅರ್ಥಃ**= ಆ ಎಲ್ಲಾ ಫಲಗಳೂ , **ವಿಜಾನತಃ** = ಮೊದಲು ಪರೋಕ್ಷವಾಗಿ ಬ್ರಹ್ಮನನ್ನು ತಿಳಿದ, **ಬ್ರಾಹ್ಮಣಸ್ಯ** = ಬ್ರಹ್ಮಾಪರೋಕ್ಷಜ್ಞಾನಿಗೆ ಸಿಕ್ಕೇ ಸಿಗುತ್ತದೆ.

ಬ್ರಹ್ಮಜ್ಞಾನಿಗೂ ಕಾಮ್ಯಕರ್ಮಿಗಳಿಗೂ ಒಬ್ಬನಿಗೆ ಸಿಗುವ ಫಲ ಮತ್ತೊಬ್ಬರಿಗೆ ದೊರಕುವುದಿಲ್ಲ. ಆದರೂ, ಜ್ಞಾನಿಗೆ ಸಿಗುವ ಫಲ ಸಮುದ್ರದ ನೀರಿನಂತೆ ಮಹಾಫಲ, ಕಾಮ್ಯಕರ್ಮಿಗಳಿಗೆ ಸಿಗುವ ಫಲ ಬಾವಿಯ ನೀರಿನಂತೆ ಅಲ್ಪ . ಹೀಗಿರುವಾಗ ಆ ಎರಡು ಫಲಗಳಿಗೆ ಹೋಲಿಕೆ ಎಲ್ಲಿಯದು ? ಆದ್ದರಿಂದ ಹಿಂದಿನ ಶ್ಲೋಕದಲ್ಲಿ ಅಲ್ಪ ಹಾಗೂ ಅಸ್ಥಿರವಾದ ಕರ್ಮಫಲವನ್ನು ನಿಂದಿಸಿ ಬೃಹತ್ತಾದ ಹಾಗೂ ಸ್ಥಿರವಾದ ಫಲವನ್ನು ಕೊಡುವ ಜ್ಞಾನಕ್ಕೆ ಬೇಕಾಗಿರುವ ಸಾಧನವನ್ನು ಅನುಷ್ಠಾನ ಮಾಡು, ಎಂದು ಶ್ರೀಕೃಷ್ಣ ಮಾಡಿರುವ ಪ್ರೇರಣೆ ಉಚಿತವಾಗಿದೆ.

> **ಅತ್ರ 'ವಿಜಾನತ' ಇತಿ ಪರೋಕ್ಷಜ್ಞಾನಸ್ಯ ಬ್ರಾಹ್ಮಣಪದೋಕ್ತಾಪರೋಕ್ಷ-ಜ್ಞಾನಸ್ಯ ಚ ಹೇತುಹೇತುಮದ್ಭಾವೇನ ದ್ವಯೋರುಕ್ತಿಃ, ಪೂರ್ವತ್ರ ಸ್ವಾಮಿತ್ವೇನ ಹರಿಸ್ಮರಣಸ್ಯ ಯೋಗಶಬ್ದಿತಜ್ಞಾನೋಪಾಯತ್ವಪ್ರಕಟನಾಯ । ಸ್ವರೂಪಕಥನ-ಮಿತಿ ಟೀಕೋಕ್ತಿಸ್ತ್ವಭ್ಯುಪಗಮವಾದೇನೇತಿ ಜ್ಞೇಯಮ್ ।**

**ಅನುವಾದ** – ಈ ಶ್ಲೋಕದಲ್ಲಿ ವಿಜಾನತಃ ಎಂಬ ಪದದಿಂದ ಪರಮಾತ್ಮನ ಪರೋಕ್ಷ-ಜ್ಞಾನವನ್ನೂ ಬ್ರಾಹ್ಮಣಸ್ಯ ಎಂಬ ಪದದಿಂದ ಅಪರೋಕ್ಷಜ್ಞಾನವನ್ನೂ ಹೇಳಲಾಗಿದೆ. ಪರೋಕ್ಷ ಜ್ಞಾನವು ಅಪರೋಕ್ಷಜ್ಞಾನಕ್ಕೆ ಸಾಧನವಾಗಿದೆ ಎಂದು ತಿಳಿಸಲು ಇವೆರಡನ್ನೂ ಹೇಳಲಾಗಿದೆ.

'**ಯೋಗ** ' ಎಂದು ಕರೆಯಲ್ಪಡುವ ಜ್ಞಾನಸಾಧನವನ್ನು ಅನುಷ್ಠಾನ ಮಾಡುವಾಗ ಹಿಂದೆ ಹೇಳಿದಂತೆ, 'ನನ್ನ ಸ್ವಾಮಿ ಶ್ರೀಹರಿ' ಎಂಬ ಸ್ಮರಣೆ ಇರಬೇಕು, ಎಂಬ ವಿಷಯವನ್ನು ಸೂಚಿಸುವುದು ಹೀಗೆ ಹೇಳಿರುವುದರ ಉದ್ದೇಶವಾಗಿದೆ. ಗೀತಾಭಾಷ್ಯ ಪ್ರಮೇಯದೀಪಿಕಾ ಟೀಕೆಯಲ್ಲಿ 'ಹೀಗೆ ಹೇಳಿರುವುದು ವಸ್ತುಸ್ಥಿತಿಕಥನ, ಪ್ರಕೃತಕ್ಕೆ ಅದರಿಂದೇನೂ ಉಪಯೋಗ ವಿಲ್ಲ' ಎನ್ನಲಾಗಿದೆ. ಇದು ಅಭ್ಯುಪಗಮವಾದ ಎಂದು ತಿಳಿಯಬೇಕು. ಏಕೆಂದರೆ, ಹಿಂದೆ ಹೇಳಿರುವ ರೀತಿಯಲ್ಲಿ ಅದು ಪ್ರಕೃತಕ್ಕೆ ಸಂಗತವೇ ಆಗಿದೆ.

**ವಿವರಣೆ** – ಗೀತೆಯಲ್ಲಿ **ವಿಜಾನತಃ, ಬ್ರಾಹ್ಮಣಸ್ಯ** ಎಂಬ ಎರಡು ಪದಗಳಿಗೆ ಆಪಾತತಃ ಒಂದೇ ಅರ್ಥ. ಆದ್ದರಿಂದ ಪುನರುಕ್ತಿ. ಅದಕ್ಕಾಗಿ ವಿಜಾನತಃ ಎಂಬ ಪದವು ಪರೋಕ್ಷಜ್ಞಾನವನ್ನೂ

ಬ್ರಾಹ್ಮಣಸ್ಯ (ಬ್ರಹ್ಮ ಅನತಿ = ಗಚ್ಛತಿ ಇತಿ) ಎಂಬ ಪದವು ಅಪರೋಕ್ಷ ಜ್ಞಾನವನ್ನೂ ಹೇಳುತ್ತದೆ. ಪರೋಕ್ಷಜ್ಞಾನವನ್ನು ಪಡೆದು ಅಪರೋಕ್ಷ ಜ್ಞಾನವನ್ನು ಗಳಿಸಬೇಕು. ಆಮೇಲೆ ಮೋಕ್ಷ ಎಂದು ಇದರಿಂದ ತಿಳಿಯುತ್ತದೆ.

ಪರೋಕ್ಷಜ್ಞಾನದಿಂದ ಅಪರೋಕ್ಷಜ್ಞಾನವು ಲಭಿಸುತ್ತದೆ, ಎನ್ನುವ ವಿಷಯ ಪ್ರಕೃತಕ್ಕೆ ಅಗತ್ಯವಿಲ್ಲ. ಆದರೂ ವಸ್ತು ಸ್ಥಿತಿಯನ್ನಷ್ಟೇ ಆ ಪದಗಳಿಂದ ಹೇಳಲಾಗಿದೆ. ಹೀಗೆಂದು, '**ಏತಚ್ಚ ಸ್ವರೂಪಕಥನಂ**' ಎಂದು **ಗೀತಾಭಾಷ್ಯ ಪ್ರಮೇಯದೀಪಿಕಾ**ದಲ್ಲಿ ಶ್ರೀಜಯತೀರ್ಥರು ಹೇಳಿದ್ದಾರೆ. ಆದರೆ , ಈ ವಿಷಯವು ಪ್ರಕೃತಕ್ಕೆ ಅಸಂಗತವೇನೂ ಅಲ್ಲ . ಹಿಂದೆ 'ತ್ರೈಗುಣ್ಯ ವಿಷಯಾ ವೇದಾಃ' (ಶ್ಲೋಕ –45) ಎಂದು ಜ್ಞಾನೋಪಾಯವನ್ನು ಹೇಳುವಾಗ 'ಆತ್ಮವಾನ್' 'ಪರಮಾತ್ಮನು ನನ್ನ ಸ್ವಾಮಿ' ಎನ್ನುವ ಅನುಸಂಧಾನವಿರಬೇಕು ಎನ್ನಲಾಗಿದೆ. ಈ ಅನುಸಂಧಾನವೇ ಪರೋಕ್ಷಜ್ಞಾನ. ಹೀಗೆ ಪರೋಕ್ಷಜ್ಞಾನವು ಅಪರೋಕ್ಷಕ್ಕಾಗಿ ಅಗತ್ಯ ಎಂಬ ವಿಷಯವು ಸಂಗತವೇ ಆಗಿದೆ. ಆದ್ದರಿಂದ ಶ್ರೀಜಯತೀರ್ಥರು 'ಸ್ವರೂಪಕಥನಂ' ಎಂದಿರುವುದು ಅಭ್ಯುಪಗಮವಾದ ಎಂದು ತಿಳಿಯಬೇಕು. (ಇದು ಶ್ರೀರಾಘವೇಂದ್ರಸ್ವಾಮಿಗಳು ನೀಡಿರುವ ವಿವರಣೆ)

**ಯದ್ವಾ , ಪೂರ್ವತ್ರ ನಿಸ್ತ್ರೈಗುಣ್ಯೋ ಭವೇತಿ ಸ್ವರ್ಗಾದಿಕ್ಷಯಿಷ್ಣುಫಲಕ ಕಾಮ್ಯಕರ್ಮರೂಪೇ ಆಪಾತತಃ ಪ್ರತೀತೇ ವೇದಾರ್ಥೇ ಭ್ರಾಂತಿಂ ಮಾ ಕಾರ್ಷೀ-ರಿತ್ಯುಕ್ತಕಾಮ್ಯಕರ್ಮನಿವೃತ್ತೌ ತ್ರೈಗುಣ್ಯವಿಷಹಾರಿವೇದಾಶ್ರಯಣಂ ಕಾರ್ಯ-ಮಿತ್ಯುಕ್ತೇಽರ್ಥೇ ವೇದತಾತ್ಪರ್ಯಾರ್ಥಂ ನಿವೃತ್ತಕರ್ಮಾರಾಧ್ಯಂ ವಿಷ್ಣುಂ ಸಮ್ಯಗ್ ಜಾನತೋಽತಿಶಯಿತಫಲಾವಾಪ್ತಿರೂಪಯುಕ್ತಿಮಾಹ- ಯಾವಾನಿತಿ ||**

**ಅನುವಾದ** - ಅಥವಾ, ಈ ಶ್ಲೋಕಕ್ಕೆ ಹೀಗೂ ಅರ್ಥವನ್ನು ಹೇಳಬಹುದು – ಹಿಂದಿನ ಶ್ಲೋಕದಲ್ಲಿ '**ನಿಸ್ತ್ರೈಗುಣ್ಯೋ ಭವ**' ಎಂದು ಶ್ರೀಕೃಷ್ಣ ಅರ್ಜುನನಿಗೆ ಹೇಳಿದ್ದಾನೆ. ಅಂದರೆ, ವೇದಗಳಿಂದ ಆಪಾತತಃ ಪ್ರತೀತವಾದ ಕಾಮ್ಯ ಕರ್ಮಗಳಲ್ಲಿ ಆಸಕ್ತಿ ತಾಳಬೇಡ ಎಂದು ಅದರ ಅರ್ಥ. ಇಂತಹ ಕಾಮ್ಯ ಕರ್ಮಗಳನ್ನು ಪರಿತ್ಯಜಿಸುವುದಕ್ಕಾಗಿ ತ್ರೈಗುಣ್ಯವೆಂಬ ವಿಷವನ್ನು ಪರಿಹರಿಸುವ ವೇದವನ್ನು ಅವಲಂಬಿಸು ಎಂದೂ ಶ್ರೀಕೃಷ್ಣ ಹೇಳಿದ್ದಾನೆ. ಇದಕ್ಕೆ ಯುಕ್ತಿಯ ಸಮರ್ಥನೆಯನ್ನು ಶ್ರೀಕೃಷ್ಣ ಈ ಶ್ಲೋಕದಲ್ಲಿ ಹೇಳುತ್ತಿದ್ದಾನೆ- ವೇದಗಳ ತಾತ್ಪರ್ಯ-ವಿಷಯನಾದವನು ನಿಷ್ಕಾಮಕರ್ಮದಿಂದ ಆರಾಧ್ಯನಾದ ವಿಷ್ಣು. ಅವನನ್ನು ಸರಿಯಾಗಿ ತಿಳಿದರೆ ಕಾಮ್ಯಫಲಕ್ಕಿಂತ ಅತಿಶಯವಾದ ಮೋಕ್ಷಾಖ್ಯಫಲವು ಸಿಗುತ್ತದೆ, ಎನ್ನುವುದೇ ಈ ಶ್ಲೋಕದಲ್ಲಿ ಹೇಳಿರುವ ಯುಕ್ತಿ .

**ಸರ್ವತಃ ಸಂಪ್ಲುತೋದಕೇ= ಪ್ರಕೃತ್ಯಾತ್ಮಕೇ ಮಹಾಪ್ರಲಯೋದಕೇ । ಅಧಿಕರಣಸಪ್ತಮೀ । ತತ್ರಸ್ಥಿತ ಇತ್ಯರ್ಥಃ । ಉದಪಾನೇ= ಪರಮಾತ್ಮನಿ । ಉತ್= ಉದ್ರೇಕಾತ್ ಅಪಃ= ಪಾಲಕರಾಹಿತ್ಯಾತ್, ಅನಃ= ಚೇಷ್ಟಕತ್ವಾದ್ಧೇತೋಃ ಉಚ್ಚಾಸಾವಪಶ್ಚ ಅನಶ್ಚೇತ್ಯುದಪಾನಃ । ತಸ್ಮಿನ್ ಪ್ರಲಯೇऽಪ್ಯುದ್ರಿಕ್ತಗುಣತಯಾ ಪಾಲಕವರ್ಜಿತೇ(ಪಾಲಕವರ್ಜಿತಃ ಸನ್) ಕಾಲಾದಿಚೇಷ್ಟಕತಯಾ ಸ್ಥಿತೇ ಹರೌ ಪ್ರಸನ್ನೇ ಸತಿ ಯಾವಾನರ್ಥಃ ಧರ್ಮಮೋಕ್ಷಾದಿರ್ಭವತಿ ತಾವಾನ್ ಸರ್ವೇಷು ವೇದೇಷು ವಿಜಾನತೋ ವಿಶೇಷಜ್ಞಸ್ಯ, ಕರ್ಮಾಣಿ ಭಗವಜ್ಜ್ಞಾನಾರ್ಥಾನಿ, ಭಗವಾನೇವ ವೇದಮುಖ್ಯಾರ್ಥಃ, ಸ್ವರ್ಗಾದಿಫಲಶ್ರವಣಂ ರುಚ್ಯರ್ಥಮಿತ್ಯಾದಿ-ಜಾನತೋ ಬ್ರಾಹ್ಮಣಸ್ಯ ತಾವಾನರ್ಥೋ ಭವತಿ । ಅತಃ ಪ್ರತೀತಾರ್ಥೇ ತ್ರೈಗುಣ್ಯೇ ಭ್ರಾಂತಿಂ ಮಾ ಕಾರ್ಷೀರಿತಿ ॥ 46 ॥**

**ಅನುವಾದ - ಸರ್ವತಃ ಸಂಪ್ಲುತೋದಕೇ** ಎಂದರೆ ಪ್ರಲಯಕಾಲದ ನೀರಿನಲ್ಲಿ ಎಂದರ್ಥ. ಆ ನೀರು ಚಿತ್ ಪ್ರಕೃತ್ಯಾತ್ಮಕವಾದುದು. ಈ ಶಬ್ದ ಸಪ್ತಮೀವಿಭಕ್ತಿಯಲ್ಲಿದೆ. **ಅಧಿ ಕರಣ** ಎಂದು ಅದರ ಅರ್ಥ. ಪ್ರಲಯೋದಕದಲ್ಲಿರುವ ಎಂದು ಅರ್ಥ. ಉದಪಾನ ಎಂದರೆ ಪರಮಾತ್ಮ. **ಉತ್** = ಶ್ರೇಷ್ಠನಾದವನು. **ಅಪ** = ಮತ್ತೊಬ್ಬ ರಕ್ಷಕನಿಲ್ಲದವನು. **ಅನಃ** = ಕ್ರಿಯಾಶಕ್ತಿಯನ್ನು ಕೊಟ್ಟವನು. ಹೀಗೆ **ಉತ್ + ಅಪ + ಅನ** = ಉದಪಾನ ಎಂದರೆ ಪರಮಾತ್ಮ. ವ್ಯಕ್ತವಾದ ಗುಣಗಳುಳ್ಳವನಾಗಿರುವ ಕಾರಣದಿಂದಾಗಿ ರಕ್ಷಕರಾರೂ ಇಲ್ಲದೆಯೂ ಪ್ರಲಯ ಕಾಲದಲ್ಲೂಕಾಲಾದಿ ನಿತ್ಯಪದಾರ್ಥಗಳಿಗೆ ನಿಯಾಮಕನಾದ ಪರಮಾತ್ಮನು ಪ್ರಸನ್ನನಾದಾಗ ಧರ್ಮಮೋಕ್ಷಾದಿರೂಪವಾದ ಯಾವ ಪ್ರಯೋಜನವು ದೊರಕುವುದೋ ಆ ಪ್ರಯೋಜನವು ಸಕಲವೇದಗಳಲ್ಲೂ ವಿಶೇಷ ಜ್ಞಾನವುಳ್ಳವನಿಗೆ ಅಂದರೆ, 'ವೇದಗಳಲ್ಲಿ ಹೇಳಿರುವ ಕರ್ಮ ಗಳೆಲ್ಲವೂ ಪರಮಾತ್ಮನ ಅನುಗ್ರಹಸಂಪಾದನೆಗಾಗಿಯೇ ಇವೆ, ವೇದಗಳ ಮುಖ್ಯ ಪ್ರತಿಪಾದ್ಯ ಪರಮಾತ್ಮ , ಸ್ವರ್ಗಾದಿ ಫಲಗಳನ್ನು ವೇದಗಳಲ್ಲಿ ಹೇಳಿರುವುದು ಕರ್ಮದಲ್ಲಿ ಆಸಕ್ತಿಯನ್ನು ಉಂಟು ಮಾಡುವುದಕ್ಕಾಗಿ ಮಾತ್ರ' ಹೀಗೆ ತಿಳಿದಿರುವ ಬ್ರಹ್ಮಜ್ಞಾನಿಗೆ ದೊರಕುವುದು. ಆದ್ದರಿಂದ ವೇದಗಳಲ್ಲಿ ಆಪಾತತಃ ಪ್ರತೀತವಾದ ತ್ರಿಗುಣಸಂಬಂಧಿಯಾದ ಸ್ವರ್ಗಾದಿಫಲಗಳಲ್ಲಿ ಭ್ರಾಂತಿಯನ್ನು ತಾಳಬೇಡ , ಹೀಗೂ ಈ ಶ್ಲೋಕಕ್ಕೆ ಅರ್ಥಮಾಡಬಹುದು . ॥ 46 ॥

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋऽಸ್ತ್ವಕರ್ಮಣಿ ॥ 47 ॥**

**ಅರ್ಥ** – ಅರ್ಜುನನೆ ! ನಿನಗೆ ಹಾಗೂ ನಿನ್ನಂತಹ ಜ್ಞಾನಿಗಳಿಗೆ ಕರ್ಮಾಚರಣೆಯಲ್ಲಿ ಮಾತ್ರ ಅಧಿಕಾರ ; ಫಲವನ್ನು ಬಯಸುವಲ್ಲಿ ಅಧಿಕಾರವಿಲ್ಲ. ಆದ್ದರಿಂದ '**ಸ್ವರ್ಗಕಾಮಃ ಯಜೇತ**' ಎಂಬ ವೇದವಾಕ್ಯಗಳು ಯಾಗಾದಿಕರ್ಮಗಳನ್ನು ಮಾಡಬೇಕು ಎಂದು ವಿಧಿಸುತ್ತವೆ; ಸ್ವರ್ಗಾದಿಫಲಗಳನ್ನು ಬಯಸಬೇಕು ಎಂದು ವಿಧಿಸುವ ತಾತ್ಪರ್ಯ ಅವುಗಳಿಗೆ ಇಲ್ಲ. ಆದ್ದರಿಂದ ಸ್ವರ್ಗಾದಿ ಫಲ ಸಿಗುವುದಾದರೆ ಮಾತ್ರ ಸತ್ಕರ್ಮಗಳನ್ನು ಮಾಡುತ್ತೇನೆ ಎನ್ನಬೇಡ. ಅಂದಮಾತ್ರಕ್ಕೆ ಫಲಬೇಡವೆಂದು ಕರ್ಮ ಬೇಡ ಎನ್ನುವುದೂ ಸರಿಯಲ್ಲ. ಸ್ವರ್ಗಾದಿಫಲವಿಲ್ಲದಿದ್ದರೂ ಕರ್ಮ ನಿಷ್ಫಲವಲ್ಲ; ಮೋಕ್ಷರೂಪವಾದ ಮಹಾಫಲ ಕರ್ಮಕ್ಕಿದೆ.

ಅಥವಾ , ಹೀಗೂ ಅರ್ಥ ಹೇಳಬಹುದು – ಹಿಂದೆ '**ನಿರ್ಯೋಗಕ್ಷೇಮ ಆತ್ಮವಾನ್**' (ಶ್ಲೋಕ.45) ಎಂಬ ಶ್ಲೋಕದಲ್ಲಿ ಜೀವ–ಪರಮಾತ್ಮರಿಗೆ ಐಕ್ಯಭಾವನೆಯನ್ನು ಮಾಡಬಾರದು ಎಂದು ಹೇಳಲಾಗಿದೆ. ಅದಕ್ಕೆ ಕಾರಣವನ್ನು ಈ ಶ್ಲೋಕದಲ್ಲಿ ಹೇಳಲಾಗಿದೆ– ಅರ್ಜುನನೇ ! ನಿನ್ನಂತಹ ಜೀವರಿಗೆ ಕರ್ಮಗಳನ್ನು ಮಾಡುವಷ್ಟೇ ಶಕ್ತಿ ಇದೆ. ಅದಕ್ಕೆ ಫಲವನ್ನು ದೊರಕಿಸುವ ಶಕ್ತಿ ಇಲ್ಲ. ಆ ಶಕ್ತಿ ಪರಮಾತ್ಮನಿಗೆ ಮಾತ್ರವೇ ಇದೆ. ಆದ್ದರಿಂದ ನಿನ್ನಂತಹ ಜೀವರು ಈಶನಿಗಿಂತ ಭಿನ್ನರು. ಈ ಕಾರಣದಿಂದ ಕರ್ಮಫಲಕಾರಣನಾದ ಈಶನೇ ನಾನು ಎನ್ನುವ ಭಾವನೆಯನ್ನು ಎಂದೂ ಮಾಡಬೇಡ.

ಹಾಗಾದರೆ 'ಈಶ ನನ್ನ ಸ್ವಾಮಿ ' ಎನ್ನುವ ಅನುಸಂಧಾನ ಮಾತ್ರ ಸಾಕು ' ಕರ್ಮ ಬೇಡ ಎನ್ನಬೇಡ. ಈ ಅನುಸಂಧಾನಪೂರ್ವಕವಾಗಿ ಕರ್ಮವನ್ನೂ ಮಾಡುತ್ತಿರು. ಕರ್ಮವನ್ನು ಮಾಡದಿದ್ದರೆ ಪಾಪ ಬರುತ್ತದೆ. ॥ 47 ॥

**ನನು ಸಕಾಮತಯಾ ಕರ್ಮ ಕುರ್ವತಾಂ 'ಯಾಮಿಮಾಂ' ಇತ್ಯಾದಿನೋಕ್ತಾ ನಿಂದಾ ನ ಯುಕ್ತಾ । 'ಸ್ವರ್ಗಕಾಮೋ ಯಜೇತ ' ಇತ್ಯಾದೌ ಕಾಮನಾಯಾ ಅಪಿ ವಿಧಾನಾತ್ । ನ ಹಿ ವಿಹಿತಕೃತಾಂ ನಿಂದಾ ಯುಕ್ತಾ । ನ ಚ ಯಾಗಕಾಮನ-ಯೋರ್ದ್ವಯೋರಪಿ ವಿಧೌ, ವಾಕ್ಯಭೇದಃ । ಸ್ವರ್ಗಕಾಮನಾವಿಶಿಷ್ಟಯಾಗ-ವಿಧ್ಯಭ್ಯುಪಗಮಾದಿತ್ಯತ ಆಹ– ಕರ್ಮಣ್ಯೇವೇತಿ ॥**

**ಅನುವಾದ** – ಫಲದಾಸೆಯಿಂದ ಕರ್ಮ ಮಾಡುವವರನ್ನು '**ಯಾಮಿಮಾಂ ಪುಷ್ಪಿತಾಂ ವಾಚಂ**' ಎಂಬ ಶ್ಲೋಕದಲ್ಲಿ ನಿಂದಿಸಲಾಗಿದೆ . ಅದು ಯುಕ್ತವಲ್ಲ. ಏಕೆಂದರೆ '**ಸ್ವರ್ಗಕಾಮೋ ಯಜೇತ**' ಎಂಬ ಶ್ರುತಿಯಲ್ಲಿ ಯಾಗಾದಿಕರ್ಮಗಳನ್ನು ವಿಧಿಸಿರುವಂತೆ ಸ್ವರ್ಗಾದಿಕಾಮನೆಗಳನ್ನೂ ವಿಧಿಸಲಾಗಿದೆ. ಹೀಗೆ ವೇದವಿಹಿತವಾದ ಫಲದಾಸೆಯನ್ನು ನಿಂದಿಸುವುದು ಯುಕ್ತವಲ್ಲ.

ವೇದವಾಕ್ಯಗಳಿಗೆ ಹೀಗೆ ಅಭಿಪ್ರಾಯವನ್ನು ಹೇಳಿದಾಗ ವಾಕ್ಯಭೇದದೋಷ ಬರುತ್ತದೆ, ಎನ್ನಕೂಡದು . 'ಯಾಗವನ್ನೂ ಮಾಡು, ಫಲವನ್ನೂ ಬಯಸು' ಎಂದಾಗ ಮಾತ್ರ ವಾಕ್ಯಬೇಧ. 'ಫಲದಾಸೆಯ ಜೊತೆಗೆ ಯಾಗವನ್ನು ಮಾಡು' ಎಂದು ವಿಶಿಷ್ಟವಿಧಾನವನ್ನು ಮಾಡಿದರೆ ವಾಕ್ಯಭೇದ ದೋಷವಿಲ್ಲ.

ಈ ಆಕ್ಷೇಪಕ್ಕೆ 'ಕರ್ಮಣ್ಯೇವಾಧಿಕಾರಸ್ತೇ' ಎಂಬ ಗೀತಾಶ್ಲೋಕವು ಸಮಾಧಾನವನ್ನು ಕೊಡುತ್ತದೆ.

**ಅತ್ರ 'ತೇ' ಇತಿ ಜ್ಞಾನಿಭೂತಸರ್ವವರ್ಣಾಶ್ರಮೋಪಲಕ್ಷಣಂ । ಫಲೇಷ್ವಿತಿ ಪದಂ ಫಲಕಾಮೋಪಲಕ್ಷಣಮ್ । ಅಯಮರ್ಥಃ – ಹೇ ಪಾರ್ಥ, ತೇ = ತವ ತ್ವಾದೃಶಸ್ಯಾನ್ಯಸ್ಯ ಜ್ಞಾನಿನೋऽಪಿ ಕರ್ಮಣ್ಯೇವಾಧಿಕಾರೋ= ಯೋಗ್ಯತಾ । ಫಲೇಷು = ಸ್ವರ್ಗಾದಿಫಲಕಾಮನಾಸು 'ಮಾ = ನ ಅಧಿಕಾರಃ । ಅತಃ ಕರ್ಮೈವ ಕಾರ್ಯಂ, ವಿಧಿವಿಷಯ ಇತಿ ಯಾವತ್ । ನ ತು ಕಾಮನಾ ಕಾರ್ಯಾ । ಕುತಃ? 'ಕುರ್ವನ್ನೇವ' ಇತಿ (ಈಶಾವಾಸ್ಯ 2) ಶ್ರುತೌ 'ಏವಂ ತ್ವಯಿ' ಇತ್ಯುತ್ತರಾರ್ಧೇ ಕರ್ಮಾಕರಣೇ ಪ್ರತ್ಯವಾಯಸ್ಯೈವ, ಕಾಮನಾಯಾ ಅಕರಣೇ ಪ್ರತ್ಯವಾಯಾಶ್ರವಣಾತ್ । ತಥಾ ಚ ಕಾಮನಾನುವಾದೇನ ಯಾಗವಿಧಿರೇವಾಯಂ ನ ತು ವಿಶಿಷ್ಟವಿಧಿರಿತಿ ಭಾವಃ । ಅತಃ ಕಾಮನಾಯಾಃ ವಿಧ್ಯವಿಷಯತ್ವಾತ್, ಕರ್ಮಕೃತೌ ಫಲಂ ಹೇತುರ್ಯಸ್ಯ ಸ ಕರ್ಮಫಲಹೇತುಃ ಮಾ ಭೂರಿತ್ಯರ್ಥಃ । ಶಾಕಪಾರ್ಥಿವಾದಿವತ್ ಕೃತಿಪದಲೋಪೋऽತ್ರ ಧ್ಯೇಯಃ ।**

**ಅನುವಾದ –** ಈ ಶ್ಲೋಕದಲ್ಲಿ 'ತೇ' (ನಿನಗೆ) ಎಂದರೆ ಅರ್ಜುನ ಮಾತ್ರವಲ್ಲ. ಎಲ್ಲಾ ವರ್ಣಾಶ್ರಮಕ್ಕೆ ಸೇರಿದ ಜ್ಞಾನಿಗಳು. **ಫಲೇಷು** ಎಂದರೆ ಫಲದಾಸೆಯಲ್ಲಿ ಎಂದರ್ಥ.

ಒಟ್ಟು ಪೂರ್ವಾರ್ಧದ ಅರ್ಥ ಹೀಗೆ – ಎಲೈ ಪಾರ್ಥನೆ ! ತೇ = ನಿನಗೆ ಹಾಗೂ ನಿನ್ನಂತಹ ಜ್ಞಾನಿಗಳಿಗೆ ವೇದವಿಹಿತಕರ್ಮಗಳಲ್ಲಿ ಮಾತ್ರ ಅಧಿಕಾರ, ಅಂದರೆ ಅರ್ಹತೆ; **ಫಲೇಷು** = ಸ್ವರ್ಗಾದಿ ಫಲಗಳ ಬಯಸುವ ನಿರ್ಬಂಧ ಇಲ್ಲ . ಆದ್ದರಿಂದ ಕರ್ಮವೇ ವೇದವಿಹಿತ, ಫಲಕಾಮನೆಯಲ್ಲ. ಏಕೆ ಹೀಗೆ ? ಎಂದರೆ, **'ಕುರ್ವನ್ನೇವೇಹ ಕರ್ಮಾಣಿ'** ಎಂಬ ಈಶಾವಾಸ್ಯೋಪನಿಷತ್ತಿನಲ್ಲಿ ಕರ್ಮವನ್ನು ಮಾಡದಿದ್ದರೆ ಅನರ್ಥವನ್ನು ಹೇಳಲಾಗಿದೆ. ಫಲವನ್ನು ಬಯಸದೇ ಇದ್ದಲ್ಲಿ ಅನರ್ಥವನ್ನು ಹೇಳಲಾಗಿಲ್ಲ. ಆದ್ದರಿಂದ 'ಸ್ವರ್ಗದಾಸೆ ಇದ್ದರೆ ಯಾಗಮಾಡು' ಎಂದೇ **'ಸ್ವರ್ಗಕಾಮೋ ಯಜೇತ '** ಎಂಬ ವಿಧಿವಾಕ್ಯದ ತಾತ್ಪರ್ಯ. ಹೊರತು

'ಫಲಬಯಸು , ಯಾಗ ಮಾಡು' ಎಂದು ಫಲಕಾಮನೆಯನ್ನೂ ಯಾಗವನ್ನೂ ವಿಧಿಸುವ ಅಭಿಪ್ರಾಯ ವೇದಕ್ಕಿಲ್ಲ.

ಹೀಗೆ ಫಲಕಾಮನೆಯು ವಿಧಿವಿಹಿತವಲ್ಲದ ಕಾರಣ ನೀನು ಕರ್ಮಫಲಹೇತುವಾಗಬೇಡ. **ಕರ್ಮಫಲಹೇತು** ಎಂದರೆ ಫಲ ಇದ್ದರೆ ಮಾತ್ರ ಕರ್ಮಮಾಡುತ್ತೇನೆ, ಎನ್ನುವವನು. ಅಂತಹವನು ನೀನಾಗಬೇಡ.

**'ಶಾಕಪಾರ್ಥಿವ'** ಎಂದರೆ ಶಾಕವಸ್ತುಗಳನ್ನು ಇಷ್ಟಪಡುವ ರಾಜ ಎಂದರ್ಥ . **'ಶಾಕಪ್ರಿಯಃ ಪಾರ್ಥಿವಃ'** ಎಂದು ವಿಗ್ರಹ ಬಿಡಿಸಿದಾಗ ಪ್ರಿಯಶಬ್ದವು ಲೋಪವಾಗಿ **'ಶಾಕಪಾರ್ಥಿವ'** ಎಂಬ ಶಬ್ದವಾಗಿದೆ. ಅದರಂತೆ **'ಕರ್ಮಕೃತೌ ಫಲಂ ಹೇತುಃ ಯಸ್ಯ ಸಃ'** ಎಂಬ ವಿಗ್ರಹದಲ್ಲಿರುವ **'ಕೃತೌ'** ಎಂಬ ಶಬ್ದವು ಲೋಪವಾಗಿ **'ಕರ್ಮಫಲಹೇತು'** ಎಂಬ ಶಬ್ದವಾಗಿದೆ.

**ತರ್ಹಿ ಸ್ವಯಂ ಕ್ಲೇಶರೂಪತ್ವಾತ್ ಕರ್ಮ ನ ಕಾರ್ಯಮ್ ಇತ್ಯತ ಆಹ– ಮಾ ತ ಇತಿ ॥ ತೇ= ತವ, ತ್ವಾದೃಶಸ್ಯ ಸರ್ವಸ್ಯಾಪಿ ಜ್ಞಾನಿನೋಽಕರ್ಮಣಿ= ಕರ್ಮಾಕರಣೇ ಸಂಗಃ= ಸ್ನೇಹೋ ಮಾಽಭೂತ್ । ಸ್ವರ್ಗಾದಿರೂಪಾಲ್ಪಾಸ್ಥಿರ-ಫಲಾಭಾವೇಽಪಿ ಅನಲ್ಪಸ್ಥಿರಮೋಕ್ಷರೂಪಮಹಾಪುಮರ್ಥಹೇತುಭಗವಜ್ಜ್ಞಾನ-ಭಕ್ತಿಪ್ರಸಾದಾನಾಂ ಭಾವಾತ್, ತತ್ಕಾಮನಯಾ ಕರ್ಮಕರಣೋಪಪತ್ತೇಃ, ಜ್ಞಾನಭಕ್ತ್ಯಾದಿಕಾಮನಾಯಾಶ್ಚ ನಿಂದಾಽಭಾವಾತ್ । ಪ್ರತ್ಯುತ 'ವೃಣೀಮಹೇ ತೇ ಪರಿತೋಷಣಾಯ' (ಭಾಗ. 4.30.4) ಇತ್ಯಾದಿನಾ ಚತುರ್ಥಸ್ಕಂಧೇ ಪ್ರಚೇತಸಾಂ ಮಹತಾಮಾಚಾರಾಚ್ಚ । ತಥಾ ಚಸೂತ್ರಂ । 'ಓಂ ಬಹಿಸ್ತೂಭ-ಯಥಾಽಪಿ ಸ್ಮೃತೇರಾಚಾರಾಚ್ಚ ಓಂ' ಇತಿ (3-4-43) ।**

**ನ ಚ ಜ್ಞಾನಿನಃ 'ಓಂ ಅನಿಯಮಃ ಸರ್ವೇಷಾಂ ಅವಿರೋಧಾ-ಚ್ಛಬ್ದಾನುಮಾನಾಭ್ಯಾಮ್ ಓಂ' (3-3-32) ಇತ್ಯುಕ್ತದಿಶಾ ಮೋಕ್ಷಸ್ಯ ಸಿದ್ಧತಯಾ ಕಿಂ ಕರ್ಮಕರಣೇನ ಸಾಧ್ಯಮಿತಿ ಚೇನ್ನ । ಜ್ಞಾನೇ ಮೋಕ್ಷೇ ಚಾತಿ-ಶಯಾರ್ಥತ್ವಾತ್ । ಯಥೋಕ್ತಂ 'ಓಂ ಭಾವಂ ತು ಬಾದರಾಯಣೋಽಸ್ತಿ ಹಿ ಓಂ' (1-3-33) ಇತಿ ।**

**ಅನುವಾದ –** ಮಾಡಿದ ಕರ್ಮಕ್ಕೆ ಫಲವಿಲ್ಲವೆಂದಾದಲ್ಲಿ ಕಷ್ಟಪಟ್ಟು ಕರ್ಮವನ್ನು ಮಾಡುವುದು ಏಕೆ ? ಅದಕ್ಕೆ ಶ್ರೀಕೃಷ್ಣನ ಉತ್ತರ **'ಮಾ ತೇ ಸಂಗೋಽಸ್ತು ಅಕರ್ಮಣಿ'.**

**ತೇ**= ನಿನಗೆ ಮತ್ತು ನಿನ್ನಂತಿರುವ ಎಲ್ಲಾ ಜ್ಞಾನಿಗಳಿಗೂ, **ಅಕರ್ಮಣಿ**= ಕರ್ಮ ಮಾಡದಿರುವಲ್ಲಿ , **ಸಂಗಃ**= ಆಸಕ್ತಿಯು ಮೂಡದಿರಲಿ. 'ಫಲದಾಸೆ ಬೇಡ' ಎಂದರೆ ಸ್ವರ್ಗಾದಿರೂಪವಾದ ಅಲ್ಪವಾದ,ಅಸ್ಥಿರವಾದ ಫಲದ ಬಗ್ಗೆ ಆಸೆ ಬೇಡ , ಎಂದಿಷ್ಟೇ ಅರ್ಥ. ಅಂತಹ ಫಲದಾಸೆಯನ್ನು ತೊರೆದು ಕರ್ಮ ಮಾಡಿದರೆ ಅಲ್ಪ , ಅಸ್ಥಿರವಾದ ಸ್ವರ್ಗಾದಿ ಫಲಗಳು ದೊರೆಯದಿದ್ದರೂ ಬೃಹತ್ತಾದ, ಶಾಶ್ವತವಾದ ಮೋಕ್ಷರೂಪವಾದ ದೊಡ್ಡ ಪುರುಷಾರ್ಥಕ್ಕೆ ಕಾರಣವಾದ ಭಗವಂತನ ಜ್ಞಾನ ಮತ್ತು ಅವನ ಪ್ರಸಾದ ಎಂಬ ಫಲವು ದೊರಕುತ್ತದೆ . ಈ ರೀತಿಯ ಫಲದ ಅಭಿಲಾಷೆ ನಿಷಿದ್ಧವಲ್ಲ . ಆದ್ದರಿಂದ ಈ ಅಭಿಲಾಷೆಯನ್ನು ಇಟ್ಟುಕೊಂಡು ಕರ್ಮವನ್ನು ಮಾಡಬಹುದು.

ಚತುರ್ಥಸ್ಕಂಧ ಭಾಗವತದಲ್ಲಿ ದಶಪ್ರಾಚೇತಸರು ಪರಮಾತ್ಮನಲ್ಲಿ ಹೀಗೆ ಪ್ರಾರ್ಥಿಸಿದ್ದಾರೆ– 'ಭಗವಂತನೆ, ನಿನ್ನ ಸಂತೋಷಕ್ಕಾಗಿ ನಾವು ಕರ್ಮವನ್ನು ವರಿಸುತ್ತೇವೆ '. ಹೀಗೆ ಭಗವತ್ಪ್ರೀತಿಯ ಉದ್ದೇಶದಿಂದ ಕರ್ಮವನ್ನು ಆಚರಿಸುವುದು ಸಂಪ್ರದಾಯಸಿದ್ಧವೂ ಆಗಿದೆ. ಇದೇ ವಿಷಯವನ್ನು **'ಬಹಿಸ್ತೂಭಯಥಾಪಿ ಸ್ಮೃತೇರಾಚಾರಾಚ್ಚ'** (3.4.43) ಎಂಬ ಬ್ರಹ್ಮಸೂತ್ರದಲ್ಲೂ ಹೇಳಲಾಗಿದೆ.

ಓಂ **'ಅನಿಯಮಃ ಸರ್ವೇಷಾಮ್ ಅವಿರೋಧಾತ್ ಶಬ್ದಾನುಮಾನಾಭ್ಯಾಮ್'** (3.3.32) ಎಂಬ ಬ್ರಹ್ಮಸೂತ್ರದಲ್ಲಿ ಅಪರೋಕ್ಷಜ್ಞಾನಿಗಳಿಗೆ ಮೋಕ್ಷ ದೊರಕುವುದು ನಿಶ್ಚಿತ ಎಂದು ಹೇಳಲಾಗಿದೆ. ಹೀಗಿದ್ದ ಮೇಲೆ ಅಪರೋಕ್ಷಜ್ಞಾನ ಬಂದ ಮೇಲೆ ಕರ್ಮಾನುಷ್ಠಾನದಿಂದ ದೊರೆಯುವ ಲಾಭವೇನು ? ಎಂದರೆ, ಅಪರೋಕ್ಷಜ್ಞಾನಿಗಳಿಗೆ ಮೋಕ್ಷವು ನಿಶ್ಚಿತವಾದರೂ ಅವರು ಮಾಡಿದ ಕರ್ಮದಿಂದ ಜ್ಞಾನದಲ್ಲಿ ಸ್ಪಷ್ಟತೆಯೂ ಮೋಕ್ಷದಲ್ಲಿ ಆನಂದಾಭಿವೃದ್ಧಿಯೂ ಉಂಟಾಗುತ್ತದೆ. ಅದಕ್ಕಾಗಿ ಆದರೂ ಕರ್ಮವನ್ನು ಮಾಡಬೇಕು. ಈ ವಿಷಯವನ್ನು **'ಭಾವಂ ತು ಬಾದರಾಯಣೋऽಸ್ತಿ ಹಿ'** (1.3.33) ಎಂಬ ಬ್ರಹ್ಮಸೂತ್ರದಲ್ಲಿ ಹೇಳಿದ್ದಾರೆ .

**ವಿವರಣೆ –**

1. **ಓಂ 'ಬಹಿಸ್ತೂಭಯಥಾಪಿ ಸ್ಮೃತೇರಾಚಾರಾಚ್ಚ ' ಓಂ** (3.4.43)

ದೇವ–ಋಷಿ–ಗಂಧರ್ವ ಪದವಿಗಳನ್ನು ಬಯಸಬಾರದು . ಅವುಗಳ ಹೊರತಾಗಿ (ಬಹಿಃ) ಭಗವಂತನ ಜ್ಞಾನ–ಭಕ್ತಿ ಮೊದಲಾದ ಅಭೀಷ್ಟಗಳನ್ನು ಬಯಸಿದರೂ ಬಿಟ್ಟರೂ (ಉಭಯಥಾಪಿ) ಅಧಃಪಾತವಾಗುವುದಿಲ್ಲ. ಸ್ಮೃತಿಯು ಹೀಗೆಯೇ ಹೇಳುತ್ತದೆ–

ದೇವರ್ಷಿಗಂಧರ್ವಾಣಾಂ ಪದಾಕಾಂಕ್ಷೀ ಪತೇದ್ ಧ್ರುವಮ್ ।
ಅನ್ಯತ್ರ ಶುಭಮಾಕಾಂಕ್ಷನ್ ನ ಪತೇದವಿರೋಧತಃ ॥

ವಿರುದ್ಧವಲ್ಲದ ಜ್ಞಾನ ಭಕ್ತ್ಯಾದಿಗಳನ್ನು ಬಯಸಿ ಕರ್ಮವನ್ನು ಮಾಡಲು ಆಧಾರವೂ ಇದೆ –

ನಾನಾತ್ವಮೇವ ಕಾಮಾನಾಂ ನಾಕಾಮಃ ಕ್ವಚ ದೃಶ್ಯತೇ ।
ಅತೋಽವಿರುದ್ಧಕಾಮಃ ಸ್ಯಾತ್ ಅಕಾಮಸ್ತೇನ ಭಣ್ಯತೇ ॥

ಮೇಲಿನ ಬ್ರಹ್ಮಸೂತ್ರದಿಂದ, ನಿಷ್ಕಾಮಕರ್ಮವೆಂದರೆ ಯಾವ ಪ್ರತಿಫಲದ ಅಪೇಕ್ಷೆಯೂ ಇಲ್ಲದೆ, ಯಾಂತ್ರಿಕವಾಗಿ ಕರ್ಮವನ್ನು ಮಾಡುವುದು ಎಂದು ಅರ್ಥವಲ್ಲ . ಲೌಕಿಕ ಫಲದ ಆಕಾಂಕ್ಷೆಯನ್ನು ಮಾಡದೆ 'ಭಗವಂತನ ಜ್ಞಾನ ನನಗೆ ಬರಲಿ , ನಾನು ಮಾಡಿದ ಈ ಸತ್ಕರ್ಮದಿಂದ ಪರಮಾತ್ಮನು ಪ್ರೀತನಾಗಲಿ' ಎಂಬ ಸಾತ್ವಿಕ ಅಪೇಕ್ಷೆಯನ್ನು ಇಟ್ಟುಕೊಂಡು ಕರ್ಮವನ್ನು ಆಚರಿಸುವುದೇ ನಿಷ್ಕಾಮಕರ್ಮಾಚರಣೆ, ಎಂದು ತಿಳಿಯುತ್ತದೆ.

**2.ಓಂ 'ಅನಿಯಮಃ ಸರ್ವೇಷಾಮ್ ಅವಿರೋಧಾಚ್ಛಬ್ದಾನುಮಾನಾಭ್ಯಾಂ' ಓಂ** (3.3.32)

ಅಪರೋಕ್ಷಜ್ಞಾನಿಗಳಿಗೆ ಮೋಕ್ಷ ದೊರಕುವ ಬಗ್ಗೆ , ಕೆಲವರಿಗೆ ಮಾತ್ರ ಮೋಕ್ಷ , ಕೆಲವರಿಗೆ ಮೋಕ್ಷವಿಲ್ಲ , ಎಂಬ ನಿಯಮವು ಅನ್ವಯಿಸುವುದಿಲ್ಲ. ಅರ್ಥಾತ್ ಎಲ್ಲ ಅಪರೋಕ್ಷಜ್ಞಾನಿಗಳಿಗೂ ಮೋಕ್ಷವು ನಿಶ್ಚಿತ . ಏಕೆಂದರೆ , ಹಾಗೆ ಹೇಳಲು ಪ್ರಮಾಣಗಳ ವಿರೋಧವೇನೂ ಇಲ್ಲ (ಅವಿರೋಧಾತ್) ಅಷ್ಟೇ ಅಲ್ಲ – **ನ ಕಶ್ಚಿತ್ ಬ್ರಹ್ಮವಿತ್ ಸೃತಿಮನುಭವತಿ ಮುಕ್ತೋ ಹ್ಯೇವ ಭವತಿ ॥** ಎಂಬ **ಕೌಂಡಿನ್ಯಶ್ರುತಿ**ಯ ಆಧಾರವಿದೆ. 'ಅಪರೋಕ್ಷ ಜ್ಞಾನಿಯಾದ ಒಬ್ಬನಿಗೆ ಮೋಕ್ಷವಿದೆಯೆಂದಾದಲ್ಲಿ ಇತರರೂ ಅಪರೋಕ್ಷಜ್ಞಾನಿಗಳಾಗಿದ್ದಲ್ಲಿ ಮೋಕ್ಷಕ್ಕೆ ಅರ್ಹರಾಗಿರಲೇ ಬೇಕು' ಎಂಬ ಅನುಮಾನವೂ ಈ ವಿಷಯದಲ್ಲಿ ಪ್ರಮಾಣವಾಗಿದೆ.

ಹೀಗೆ ಈ ಬ್ರಹ್ಮಸೂತ್ರದಿಂದ ಎಲ್ಲ ಅಪರೋಕ್ಷಜ್ಞಾನಿಗಳಿಗೂ ಮೋಕ್ಷವು ನಿಯತ ಎಂದು ತಿಳಿಯುತ್ತದೆ.

**3. ಓಂ 'ಭಾವಂ ತು ಬಾದರಾಯಣೋಽಸ್ತಿ ಹಿ' ಓಂ** – (1.3.33)

ಉಪನಿಷತ್ತುಗಳಲ್ಲಿ ಹೇಳಿರುವ ಮಧುವಿದ್ಯೆಯೇ ಮುಂತಾದ ಉಪಾಸನೆಯಲ್ಲಿ ದೇವತೆಗಳಿಗೂ ಅಧಿಕಾರವಿದೆ . ಆ ಉಪಾಸನೆಯ ಫಲವಾದ ಪದವಿಗಳು ದೇವತೆಗಳಿಗೆ ದೊರಕಿದ್ದರೂ ಆ ವಿದ್ಯೆಯ ಉಪಾಸನೆಯಿಂದ ಮೋಕ್ಷದಲ್ಲಿ ಆನಂದವೃದ್ಧಿ ಎಂಬ ಫಲವು ಇದೆ ಎಂದು ಬಾದರಾಯಣರು ಹೇಳುತ್ತಾರೆ. ಈ ಸೂತ್ರದಿಂದ ಜ್ಞಾನಿಗಳು ಮಾಡಿರುವ ಕರ್ಮಕ್ಕೂ ಫಲವಿದೆ ಎಂದು ತಿಳಿಯುತ್ತದೆ .

ಯದ್ವಾ, ಪೂರ್ವಮಾತ್ಮವಾನಿತ್ಯನೇನೈಕ್ಯಭಾವನಂ ನ ಕಾರ್ಯಮಿತ್ಯುಕ್ತಮ್ । ತತ್ಕುತ ಇತ್ಯತೋ ಜೀವಬ್ರಹ್ಮೈಕ್ಯಸ್ಯೈವ ಅಭಾವಾದಿತಿ ಐಕ್ಯಾಭಾವರೂಪ-ಹೇತುಮಾಹ– **ಕರ್ಮಣ್ಯೇವೇತಿ** ॥ 'ತ' ಇತ್ಯುಪಲಕ್ಷಣಮ್ । ತ್ವದಾದಿಸರ್ವ-ಜೀವಾನಾಂ ಕರ್ಮಣ್ಯೇವಾಧಿಕಾರಃ । ಕರ್ಮಸಂಪಾದನ ಏವ ಸಾಮರ್ಥ್ಯ-ಮಿತ್ಯರ್ಥಃ । ಏವಕಾರವ್ಯವಚ್ಛೇದ್ಯಮಾಹ– **ಮಾ ಫಲೇಷ್ವಿತಿ** ॥ ಫಲೇಷು ಕದಾಚನಾಧಿಕಾರೋ ನಾಸ್ತಿ । ಫಲಸಂಪಾದನೇ ಸಾಮರ್ಥ್ಯಂ ನಾಸ್ತಿ । ಕಿಂ ತ್ವೀಶ್ವರ ಏವ ಫಲದಾನೇ ಸಮರ್ಥ ಇತಿ ಭಾವಃ । ತದಾಹ ಸೂತ್ರೇ 'ಓಂ ಫಲಮತ ಉಪಪತ್ತೇಃ ಓಂ' ಇತಿ (3-2-39)। ಏವಂ ಚ ಫಲಸಂಪಾದನೇ ಶಕ್ತತ್ವಾಶಕ್ತ-ತ್ವಾಭ್ಯಾಂ ಸರ್ವಜೀವಾನಾಂ ಈಶ್ವರೇಣೈಕ್ಯಾಭಾವಾದಿತಿ ಯುಕ್ತಿರುಕ್ತಾ ಭವತಿ ।

ತಸ್ಯಾಃ ಪ್ರತಿಜ್ಞಾಮಾಹ– **ಮಾ ಕರ್ಮಫಲಹೇತುರ್ಭೂರಿತಿ** ॥ ಉಕ್ತದಿಶಾ ಕರ್ಮಫಲಹೇತುರೀಶ್ವರಃ, ಮನಸಾ ಸ ಮಾ ಭೂಃ । ತದೈಕ್ಯಭಾವನಾ ನ ಕಾರ್ಯೇತಿ ಯಾವತ್ । ಮಿಥ್ಯೋಪಾಸನಾಯಾಃ 'ಓಂ ನ ಪ್ರತೀಕೇ ನ ಹಿ ಸಃ ಓಂ' ಇತಿ ವ್ಯಾಸಸೂತ್ರೇ (4.1.4), 'ಅಚೇತನಾಸತ್ಯಾಯೋಗ್ಯಾನ್ಯನುಪಾಸ್ಯಾನ್ಯ-ಫಲತ್ವವಿಪರ್ಯಯಾಭ್ಯಾಂ' ಇತಿ ಸಾಂಕರ್ಷಣಸೂತ್ರೇ ಚ ನಿಷೇಧಾತ್ ।

ತರ್ಹಿ ಸತ್ತ್ವಸ್ಥ ಇತ್ಯುಕ್ತದಿಶಾ ನಿತ್ಯಂ ಸ್ವಾಮಿತ್ವೇನ ಹರಿಸ್ಮೃತ್ಯೈವಾಲಂ, ಕಿಂ ಕರ್ಮಕರಣೇನೇತ್ಯತ ಆಹ– **ಮಾ ತ ಇತಿ** ॥ ತ್ವದಾದೇಃ ಸರ್ವಸ್ಯ ಅಕರ್ಮಣಿ= ಕರ್ಮಾಕರಣೇ ಸಂಗಃ= ಸ್ನೇಹೋ ಮಾಽಭೂತ್ । ತದಕರಣೇ ಪ್ರತ್ಯವಾಯ-ಶ್ರವಣಾದಿತಿ ಭಾವಃ ॥ 47 ॥

**ಅನುವಾದ**– ಅಥವಾ, ಗೀತೆಗೆ ಹೀಗೂ ಅರ್ಥವನ್ನು ಹೇಳಬಹುದು– ಹಿಂದೆ '**ನಿರ್ಯೋಗ-ಕ್ಷೇಮ ಆತ್ಮವಾನ್**' (ಶ್ಲೋಕ.45) ಎಂಬ ಶ್ಲೋಕದಲ್ಲಿ ಕರ್ಮವನ್ನು ಆಚರಿಸುತ್ತಿರುವಾಗ ಪರಮಾತ್ಮನು ನನ್ನ ಸ್ವಾಮಿ, ಎನ್ನುವ ಭಾವನೆ ಇರಬೇಕು ಎಂದು '**ಆತ್ಮವಾನ್**' ಎಂಬ ಶಬ್ದದಿಂದ ತಿಳಿಸಲಾಗಿದೆ. 'ನಾನೇ ದೇವರು' ಎನ್ನುವ ಭಾವವನ್ನು ತಾಳಬಾರದು ಎಂದು ಅದರ ಭಾವ. ಐಕ್ಯಭಾವನೆಯನ್ನು ಏಕೆ ಮಾಡಬಾರದು, ಎಂಬ ಜಿಜ್ಞಾಸೆಗೆ ಉತ್ತರವಾಗಿ ಅವರಿಬ್ಬರಿಗೆ ಐಕ್ಯವಿಲ್ಲ ಎನ್ನುವ ಕಾರಣವನ್ನು ಈ ಶ್ಲೋಕದಲ್ಲಿ ಹೇಳಲಾಗಿದೆ.

ಶ್ಲೋಕದಲ್ಲಿ 'ತೇ' ಎಂದರೆ 'ನಿನಗೆ' ಎಂದಿಷ್ಟೇ ಅರ್ಥವಲ್ಲ. ನಿನ್ನಂತಹ ಜ್ಞಾನಿಗಳಿಗೆ ಎಂದು ಅರ್ಥ. ಅಂತಹವರೆಲ್ಲರಿಗೂ ಕರ್ಮದಲ್ಲಷ್ಟೇ ಅಧಿಕಾರ, ಅಂದರೆ ಕರ್ಮ ಮಾಡುವುದರಲ್ಲಷ್ಟೇ ಸಾಮರ್ಥ್ಯ.

'**ಕರ್ಮಣ್ಯೇವ** ' ಎಂದರೆ ಕರ್ಮ ಮಾಡುವುದರಲ್ಲಿ ಮಾತ್ರ. ಇಲ್ಲಿ ಮಾತ್ರ ಎನ್ನುವ ಮೂಲಕ ಇನ್ನಾವುದರಲ್ಲೂ ಅಧಿಕಾರವಿಲ್ಲ ಎಂದು ಸೂಚಿಸಲಾಗಿದೆ.ಅದನ್ನು '**ಮಾ ಫಲೇಷು**' ಎಂದು ಸ್ಪಷ್ಟಪಡಿಸಲಾಗಿದೆ. ಫಲದಲ್ಲಿ ಎಂದೂ ಅಧಿಕಾರವಿಲ್ಲ. ಅರ್ಥಾತ್ ಫಲವನ್ನು ಕೊಡುವ ಸಾಮರ್ಥ್ಯ ಇಲ್ಲ; ದೇವರು ಮಾತ್ರ ಫಲವನ್ನು ಕೊಡಲು ಸಮರ್ಥ ಎಂದು ಭಾವ . '**ಫಲಮ್ ಅತ ಉಪಪತ್ತೇಃ**' (3.2.39) ಎಂಬ ಬ್ರಹ್ಮಸೂತ್ರದಲ್ಲೂ ಕರ್ಮಫಲಗಳು ಪರಮಾತ್ಮ ನಿಂದಲೇ ಸಿಗುತ್ತವೆ ಎಂದು ಹೇಳಲಾಗಿದೆ.

ಹೀಗೆ ಜೀವನು ಕರ್ಮಕ್ಕೆ ಫಲವನ್ನು ಕೊಡಲು ಅಸಮರ್ಥ, ಪರಮಾತ್ಮನು ಸಮರ್ಥ. ಈ ವಿರುದ್ಧ ಧರ್ಮವಿರುವ ಕಾರಣದಿಂದಾಗಿ ಜೀವೇಶ್ವರರಿಗೆ ಐಕ್ಯವಿಲ್ಲ . ಈ ಯುಕ್ತಿಯನ್ನು ಭಗವದ್ಗೀತೆಯ ಪೂರ್ವಾರ್ಧ ಶ್ಲೋಕದಲ್ಲಿ ಶ್ರೀಕೃಷ್ಣನು ಹೇಳಿದ್ದಾನೆ. ಇಂತಹ ಯುಕ್ತಿಯಿಂದ ಸಿದ್ಧವಾಗುವ ವಿಷಯವನ್ನು '**ಮಾ ಕರ್ಮಫಲಹೇತುರ್ಭೂಃ**' ಎಂಬ ಉತ್ತರಾರ್ಧದಲ್ಲಿ ಹೇಳಲಾಗಿದೆ.

ಈ ಹಿಂದೆ ಹೇಳಿರುವಂತೆ ಕರ್ಮದ ಫಲಕ್ಕೆ ಕಾರಣನಾದವನು ಪರಮಾತ್ಮನಾದುದರಿಂದ ಗೀತೆಯ '**ಕರ್ಮಫಲಹೇತುಃ**' ಎಂಬ ಶಬ್ದಕ್ಕೆ ಪರಮಾತ್ಮ ಎಂದರ್ಥ. 'ನೀನು ಮಾನಸಿಕವಾಗಿ ಪರಮಾತ್ಮನಾಗದಿರು , ಅರ್ಥಾತ್ ಪರಮಾತ್ಮನ ಐಕ್ಯಚಿಂತನೆಯನ್ನು ಮಾಡಬೇಡ' ಎಂದು '**ಮಾ ಕರ್ಮ ಫಲಹೇತುರ್ಭೂಃ**' ಎಂಬ ಶಬ್ದದ ಅರ್ಥ.

ಪ್ರತಿಮೆಯೇ ದೇವರಲ್ಲ ಎನ್ನುವ '**ನ ಪ್ರತೀಕೇ ನ ಹಿ ಸಃ** ' ಎಂಬ 'ವ್ಯಾಸರು' ರಚಿಸಿರುವ ಬ್ರಹ್ಮಸೂತ್ರ ಹಾಗೂ 'ನಿಷ್ಫಲ ಮತ್ತು ಅನರ್ಥಕ್ಕೆ ಕಾರಣವಾಗುವುದರಿಂದ ಅಚೇತನೋಪಾಸನೆ, ಅಸತ್ಯೋಪಾಸನೆ, ಅಯೋಗ್ಯೋಪಾಸನೆಗಳನ್ನು ಮಾಡಬಾರದು' ಎನ್ನುವ '**ಅಚೇತನ- ಅಸತ್ಯ - ಅಯೋಗ್ಯಾನ್ಯನುಪಾಸ್ಯಾನಿ ಅಫಲತ್ವ ವಿಪರ್ಯಯಾಭ್ಯಾಂ**' ಎಂಬ **ಸಾಂಕರ್ಷಣ ಸೂತ್ರ** ಇವುಗಳಲ್ಲಿ ಮಿಥ್ಯೋಪಾಸನೆಯನ್ನು ನಿಷೇಧ ಮಾಡಲಾಗಿದೆ. ಆದ್ದರಿಂದ ಅಸತ್ಯವಾದ ಜೀವೇಶಾಭೇದವನ್ನು ಉಪಾಸನೆ ಮಾಡಬಾರದು.

ಹಾಗಾದರೆ '**ನಿತ್ಯಸತ್ವಸ್ಥಃ**' ಎಂದು ಹಿಂದೆ (ಶ್ಲೋಕ 45) ಹೇಳಿರುವಂತೆ ಶ್ರೀಹರಿಯು ನನ್ನ ಸ್ವಾಮಿ, ಎಂಬ ಸ್ಮರಣೆಯನ್ನು ಮಾಡುತ್ತಿದ್ದರೆ ಸಾಕು . ಕರ್ಮವನ್ನು ಏಕೆ ಅನುಷ್ಠಾನ ಮಾಡ ಬೇಕು ? ಈ ಪ್ರಶ್ನೆಗೆ '**ಮಾ ತೇ ಸಂಗೋಸ್ತ್ವಕರ್ಮಣಿ**' ಎನ್ನುವುದು ಉತ್ತರ. ನಿನ್ನಂತಹ ಜ್ಞಾನಿಗಳಿಗೆ ಯಾರಿಗೂ , **ಅಕರ್ಮಣಿ** = ಕರ್ಮಮಾಡದಿರುವ ಬಗ್ಗೆ **ಸಂಗಃ** = ಆಸಕ್ತಿಯು ಬರದಿರಲಿ . ವಿಹಿತ ಕರ್ಮವನ್ನು ಮಾಡದಿದ್ದರೆ ಪಾಪವು ಬರುತ್ತದೆ ಎಂದು ಶ್ರುತಿಪುರಾಣಗಳು ತಿಳಿಸುತ್ತವೆ. ಆದ್ದರಿಂದ ಹರಿಸ್ಮೃತಿ ಪೂರ್ವಕವಾಗಿ ಕರ್ಮವನ್ನು ಆಚರಿಸಲೇಬೇಕು. ॥ 47 ॥

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥ 48 ॥**

**ಅರ್ಥ** - ಪರಮಾತ್ಮನ ಜ್ಞಾನಕ್ಕೆ ಬೇಕಾಗುವ ಸಾಧನವನ್ನು ಅನುಷ್ಠಾನ ಮಾಡುವವನಾಗಿ, ಫಲಾಸಕ್ತಿಯನ್ನು ತೊರೆದು, ಫಲವು ಸಿಕ್ಕರೂ ಸಿಗದಿದ್ದರೂ ಉದ್ವೇಗಕ್ಕೆ ಒಳಗಾಗದೆ, ಎಲೈ ಅರ್ಜುನನೇ ! ವಿಹಿತ ಕರ್ಮಗಳನ್ನು ಆಚರಿಸು. ಫಲದಾಸೆಯನ್ನು ತೊರೆದು ಫಲದ ಲಾಭಾಲಾಭಗಳಲ್ಲಿಸಮಾನಮನಸ್ಕನಾಗಿರುವುದೇ ಯೋಗ ಎನಿಸುತ್ತದೆ .

**'ಮಾ ತೇ ಸಂಗೋಽಸ್ತ್ವಕರ್ಮಣಿ' ಇತ್ಯುಕ್ತಮ್ । ತರ್ಹಿ ಕಿಂ ಕಾರ್ಯಮಿತ್ಯತ ಆಹ– ಯೋಗಸ್ಥ ಇತಿ ॥ ಯೋಗೋ = ಜ್ಞಾನೋಪಾಯಃ, ತತ್ರ ತಿಷ್ಠತೀತಿ ಯೋಗಸ್ಥಃ । ಜ್ಞಾನೋಪಾಯಮನುತಿಷ್ಠನ್, ಸಂಗಂ = ಫಲಸ್ನೇಹಂ ತ್ಯಕ್ತ್ವಾ ತತ ಏವ ಫಲರಾಗತ್ಯಾಗಾದೇವ ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಕರ್ಮಾಣಿ ಕುರು । ಈಶ್ವರಪ್ರಸತ್ತ್ಯೈ ಕರ್ಮಾಣಿ ಕುರ್ವಿತಿ ಅರ್ಥಃ ।**

**ಯೋಗಸ್ಥ ಇತ್ಯುಕ್ತಯೋಗಃ ಕ ಇತ್ಯತಃ ಸಂಗಂ ತ್ಯಕ್ತ್ವೇತ್ಯಾದಿನಾ ಯೋಗ-ಶಬ್ದಾರ್ಥೋ ವ್ಯಾಖ್ಯಾತಃ । ತತ್ರ ತ್ಯಾಗಸಮತ್ವಯೋಃ ಪ್ರತ್ಯೇಕಂ ಯೋಗತ್ವ-ಭ್ರಾಂತಿನಿರಾಸಾಯಾಹ– ಸಮತ್ವಮಿತಿ ॥ ಸಂಗತ್ಯಾಗಸ್ಯಾಪ್ಯುಪಲಕ್ಷಣಮ್ । ತ್ಯಾಗೋಪೇತಂ ಸಮತ್ವಂ ಯೋಗ ಇತ್ಯರ್ಥಃ ॥ 48 ॥**

**ಅನುವಾದ** - ಅಕರ್ಮದಲ್ಲಿ ಸಂಗ ಮಾಡಬೇಡ , ಎಂದು ಹಿಂದೆ ಹೇಳಲಾಗಿದೆ. ಹಾಗಿದ್ದರೆ ಏನು ಮಾಡಬೇಕು ? ಎನ್ನುವ ಪ್ರಶ್ನೆಗೆ ಈ ಶ್ಲೋಕವು ಉತ್ತರವಾಗಿದೆ.

ಯೋಗ ಎಂದರೆ ಜ್ಞಾನಸಾಧನ. ಅಂತಹ ಜ್ಞಾನಸಾಧನವನ್ನು ಅನುಷ್ಠಾನ ಮಾಡುವವನು ಯೋಗಸ್ಥನೆನಿಸುತ್ತಾನೆ. ಜ್ಞಾನಕ್ಕೆ ಬೇಕಾದ ಸಾಧನವನ್ನು ಅನುಷ್ಠಾನ ಮಾಡುವವನಾಗಿ, **ಸಂಗಂ** = ಫಲದ ಅಭಿಲಾಷೆಯನ್ನು ಬಿಟ್ಟು , ಆ ಕಾರಣದಿಂದಾಗಿಯೇ ಫಲದೊರೆತರೂ ದೊರೆಯದೇ ಇದ್ದರೂ ಸಮಚಿತ್ತನಾಗಿ, **ಕರ್ಮಾಣಿ ಕುರು** = ಈಶ ಪ್ರೀತ್ಯರ್ಥವಾಗಿ ಕರ್ಮಗಳನ್ನು ಮಾಡು.

'ಯೋಗಸ್ಥನಾಗಿ ಕರ್ಮ ಮಾಡು' ಎಂದು ಈ ಶ್ಲೋಕದ ಆರಂಭದಲ್ಲಿ ಹೇಳಲಾಗಿದೆ. ಯೋಗವೆಂದರೇನು ? ಎನ್ನುವ ಪ್ರಶ್ನೆ ಬಂದಾಗ **'ಸಂಗಂ ತ್ಯಕ್ತ್ವಾ , ಸಮೋ ಭೂತ್ವಾ'** ಎಂದು ಯೋಗಸ್ವರೂಪವನ್ನು ತಿಳಿಸಲಾಯಿತು. ಯೋಗದಲ್ಲಿ ಸೇರಿರುವ ಈ ಎರಡು ಅಂಶಗಳೂ ಪ್ರತ್ಯೇಕವಾಗಿ ಒಂದೊಂದೂ ಯೋಗವೆನಿಸುತ್ತವೆ ಎನ್ನುವ ತಪ್ಪು ಕಲ್ಪನೆಯನ್ನು ಪರಿಹರಿಸುವ

ಕಾರಣದಿಂದ ಯೋಗ ಸ್ವರೂಪವನ್ನು 'ಸಮತ್ವಂ ಯೋಗ ಉಚ್ಯತೇ' ಎಂದು ಶ್ರೀಕೃಷ್ಣನು ಸ್ಪಷ್ಟ ಪಡಿಸಿದ್ದಾನೆ . ಸಮತ್ವದ ಜೊತೆಯಲ್ಲಿ ಸಂಗತ್ಯಾಗವನ್ನೂ ಸೇರಿಸಿಕೊಳ್ಳಬೇಕು. ಆಗ ಫಲತ್ಯಾಗಸಹಿತ ಸಮಸ್ಥಿತಿಯೇ ಯೋಗ ಎಂದಂತಾಗುತ್ತದೆ.

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥ 49 ॥**

**ಅರ್ಥ** - ತತ್ತ್ವಜ್ಞಾನಕ್ಕಿಂತ ಕರ್ಮಾನುಷ್ಠಾನವು ಅತ್ಯಂತ ಕೆಳಗಿನ ಸ್ತರದಲ್ಲಿ ಬರುತ್ತದೆ. ಆದ್ದರಿಂದ, ಧನಂಜಯನೆ, ತತ್ತ್ವಜ್ಞಾನಕ್ಕೆ ಶರಣಾಗು. ಫಲಕ್ಕಾಗಿಯೇ ಕರ್ಮವನ್ನು ಮಾಡುವವರು ದುಃಖಭಾಜನರಾಗುತ್ತಾರೆ. ಅಥವಾ , ಅರ್ಜುನ, ಭಗವಂತನ ಅಪರೋಕ್ಷಜ್ಞಾನ ಬಂದ ಮೇಲೂ ವಿಷ್ಣುವಿಗೆ ತಲೆಬಾಗು. ಅವನೇ ನಾನು ಎನ್ನುವ ಐಕ್ಯಭಾವನೆಯನ್ನು ಸರ್ವಥಾ ಮಾಡಬೇಡ. ಏಕೆಂದರೆ, ಐಕ್ಯೋಪಾಸಕರು ತಮಸ್ಸಿಗೆ ಬೀಳುವರು (ಹೀಗೂ ಉತ್ತರಾರ್ಧಕ್ಕೆ ಅರ್ಥಮಾಡಬಹುದು) . ॥ 49 ॥

**ಕಿಂಚ ಕರ್ಮಫಲಸ್ಯ ಜ್ಞಾನಫಲಾದಲ್ಪತ್ವಾತ್ ಜ್ಞಾನೋಪಾಯಾನುಷ್ಠಾನಾಯ ಪ್ರಯತಸ್ವೇತಿ 'ಯಾವಾನರ್ಥ' ಇತ್ಯತ್ರ ಉಕ್ತೇಽರ್ಥೇ ಕರ್ಮರೂಪಸ್ಯ ಪುಮರ್ಥೋಪಾಯಸ್ಯ ಜ್ಞಾನರೂಪೋಪಾಯಾತ್ ಅಧಮತ್ವರೂಪಂ ಹೇತ್ವಂತರಮುಚ್ಯತೇ – ದೂರೇಣ ಹ್ಯವರಂ ಇತಿ ॥**

**ಬುದ್ಧಿಯೋಗಾತ್ ಜ್ಞಾನಲಕ್ಷಣಪುಮರ್ಥಸಾಧನಾತ್ ಕರ್ಮ ದೂರೇಣ= ಅತೀವಾವರಮ್= ಅಧಮಮ್ । ಅತೋ ಬುದ್ಧೌ = ಜ್ಞಾನೇ ಶರಣಮನ್ವಿಚ್ಛ, ಜ್ಞಾನಸ್ಯ ಉಪಾಯಭೂತಯೋಗಾನುಷ್ಠಾನಲಕ್ಷಣಾಂ ಜ್ಞಾನೇ ಸ್ಥಿತಿಮ್ ಅನ್ವಿಚ್ಛೇತ್ಯರ್ಥಃ । ಕಥಂ ಕರ್ಮ ಜ್ಞಾನಾದವರಮಿತ್ಯತ ಆಹ– ಕೃಪಣಾ ಇತಿ ॥ 'ಫಲಂ ಕರ್ಮಕೃತೌ ಹೇತುರ್ಯೇಷಾಂ ತೇ ಫಲಹೇತವಃ ।' ತೇ ಕೃಪಣಾಃ= ದೀನಾಃ । ಇಮಂ ಲೋಕಂ ಹೀನತರಂ ಲೋಕಂ ವಾ ವಿಶಂತೀತ್ಯರ್ಥಃ।**

**ಯದ್ವಾ ಉತ್ತರಾರ್ಧಸ್ಯೈವಮರ್ಥಃ – ಜ್ಞಾನಸ್ಯ ಕರ್ಮತ ಉತ್ತಮತ್ವೇ ಸತಿ ಉತ್ತಮಾಯಾಂ ಜ್ಞಾನಾವಸ್ಥಾಯಾಂ ಈಶ್ವರೈಕ್ಯಭಾವನಂ ಯುಕ್ತಮಿತ್ಯತ ಆಹ – ಬುದ್ಧಾವಿತಿ ॥ ಬುದ್ಧೌ= ಜ್ಞಾನೇ ಜಾತೇಽಪಿ ವಿಷ್ಣುಮೇವ ಶರಣಮನ್ವಿಚ್ಛ । ಕುತಃ? ಫಲಹೇತವಃ- ಫಲಹೇತುರೀಶ್ವರಃ। ಫಲಹೇತವಃ= ಈಶ್ವರೈಕ್ಯಭಾವಿನೋ ಯೇ ತೇ ಕೃಪಣಾಃ= ಕೃಪಾವಿಷಯಾಃ । ತಮಃಪ್ರಾಪ್ತಿಮಂತ ಇತ್ಯರ್ಥಃ ॥ 49 ॥**

**ಅನುವಾದ** – 'ಕರ್ಮದಿಂದ ಸಿಗುವ ಸ್ವರ್ಗಾದಿಫಲಗಳು ಜ್ಞಾನದಿಂದ ದೊರಕುವ ಮೋಕ್ಷ ಫಲಕ್ಕಿಂತ ಅಲ್ಪವಾದುದರಿಂದ ಜ್ಞಾನಸಾಧನವನ್ನೇ ಅರಸಬೇಕು' ಎಂದು '**ಯಾವಾನರ್ಥಃ**' ಎಂಬ ಶ್ಲೋಕದಲ್ಲಿ (46ನೇ ಶ್ಲೋಕದಲ್ಲಿ) ಹೇಳಲಾಗಿದೆ. ಈ ಶ್ಲೋಕದಲ್ಲಿ, ಸ್ವರ್ಗಾದಿ ಪುರುಷಾರ್ಥಸಾಧನವಾದ ಕರ್ಮವು ಮೋಕ್ಷಸಾಧನವಾದ ಜ್ಞಾನಕ್ಕಿಂತ ಅಧಮವಾಗಿರುವ ಕಾರಣದಿಂದಲೂ ನೀನು ಜ್ಞಾನಸಾಧನವನ್ನೇ ಅರಸಬೇಕು ಎಂದು ಶ್ರೀಕೃಷ್ಣ ಉಪದೇಶಿಸಿದ್ದಾನೆ.

**ಬುದ್ಧಿಯೋಗಾತ್**= ಜ್ಞಾನವೆಂಬ ಪುರುಷಾರ್ಥಸಾಧನಕ್ಕಿಂತಲೂ ಕರ್ಮವು **ದೂರೇಣ**= ಅತ್ಯಂತವಾಗಿ, **ಅವರಂ**= ಅಧಮವಾದುದು. ಆದ್ದರಿಂದ **ಬುದ್ಧೌ**= ಜ್ಞಾನದ ಬಗ್ಗೆ, **ಶರಣಂ ಅನ್ವಿಚ್ಛ**= ಜ್ಞಾನಕ್ಕೆ ಕಾರಣವಾದ ನಿಷ್ಕಾಮ ಕರ್ಮಾನುಷ್ಠಾನರೂಪವಾದ ಜ್ಞಾನಾಸಕ್ತಿಯನ್ನು ತಾಳು.

ಕರ್ಮವು ಜ್ಞಾನಕ್ಕಿಂತ ಅಧಮ ಏಕೆ ? ಅದಕ್ಕುತ್ತರ – '**ಕೃಪಣಾಃ ಫಲಹೇತವಃ**' ಕರ್ಮವನ್ನು ಮಾಡುವಲ್ಲಿ ಫಲವೇ ಪ್ರಧಾನವೆಂದು ತಿಳಿದವರು ಫಲಹೇತುಗಳು . ಅಂತಹವರು **ಕೃಪಣಾಃ** = ದುಃಖಿಗಳು. ಏಕೆಂದರೆ, ಉಪನಿಷತ್ತು 'ಕಾಮ್ಯಕರ್ಮಿಗಳು ಇದೇ ಲೋಕವನ್ನು ಅಥವಾ ಇದಕ್ಕಿಂತಲೂ ಹೀನಲೋಕವನ್ನು ಹೊಂದುತ್ತಾರೆ ' ಎಂದಿದೆ.

ಅಥವಾ, ಈ ಶ್ಲೋಕದ ಉತ್ತರಾರ್ಧಕ್ಕೆ ಹೀಗೂ ಅರ್ಥವನ್ನು ಹೇಳಬಹುದು – ಜ್ಞಾನವು ಕರ್ಮಕ್ಕಿಂತಲೂ ಉತ್ತಮವೆಂದಾದರೆ ಅಂತಹ ಉತ್ತಮಾವಸ್ಥೆಯನ್ನು ತಲುಪಿದ ಜ್ಞಾನಿಯು ಈಶ್ವರೈಕ್ಯಭಾವನೆಯನ್ನು ಮಾಡಬಹುದೇ, ಎಂಬ ಜಿಜ್ಞಾಸೆಗೆ '**ಬುದ್ಧೌ ಶರಣಂ** ಎಂಬ ಉತ್ತರಾರ್ಧವು ಉತ್ತರವನ್ನು ಕೊಡುತ್ತದೆ. **ಬುದ್ಧೌ** = ಜ್ಞಾನವು ಬಂದರೂ ವಿಷ್ಣುವಿಗೇ ಶರಣಾಗು. ಏಕೆ ? **ಫಲಹೇತವಃ**, ಇಲ್ಲಿ ಫಲಹೇತು ಎಂದರೆ ಪರಮಾತ್ಮ. **ಫಲಹೇತವಃ** ಎಂದರೆ ಅಂತಹ ಪರಮಾತ್ಮನಿಂದ (ಪರಮಾತ್ಮನೊಂದಿಗೆ) ಐಕ್ಯವನ್ನು ತಿಳಿದವರು, **ಕೃಪಣಾಃ** = ಅನುಕಂಪೆಗೆ ಅರ್ಹರು, ಅರ್ಥಾತ್ ತಮಸ್ಸಿಗೆ ಹೋಗುತ್ತಾರೆ. ॥ 49 ॥

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।**
**ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ॥ 50 ॥**

**ಅರ್ಥ** - ಪರಮಾತ್ಮನನ್ನು ಕಂಡ ಜ್ಞಾನಿಯು ಸಂಚಿತಪುಣ್ಯ - ಪಾಪಗಳನ್ನು ಕಳೆದುಕೊಳ್ಳುತ್ತಾನೆ. ಹೀಗೆ ಜ್ಞಾನವು ದುಃಖ ನಿವೃತ್ತಿಗೆ ಕಾರಣವಾದುದರಿಂದ ಅದಕ್ಕೆ ಕಾರಣವಾದ ನಿಷ್ಕಾಮ ಕರ್ಮವನ್ನು ಮಾಡಲು ಪ್ರಯತ್ನಿಸು. ಜ್ಞಾನಕಾರಣವಾದ ನಿಷ್ಕಾಮಕರ್ಮವು ಕರ್ಮಗಳಲ್ಲೆಲ್ಲ ಶ್ರೇಷ್ಠವಾದುದು.

**ಜ್ಞಾನಾತ್ಕರ್ಮಾವರಂ ಇತ್ಯೇತತ್ಕಾಮ್ಯಕರ್ಮಿಣಾಂ ಕೃಪಣತ್ವೋಕ್ತ್ಯಾ ಉಪಪಾದ್ಯ ಇದಾನೀಂ ಕರ್ಮಫಲಾತ್ ಜ್ಞಾನಫಲಸ್ಯ ವಿಲಕ್ಷಣತ್ವೋಕ್ತ್ಯಾಽಪ್ಯುಪಪಾದಯತಿ– ಬುದ್ಧಿಯುಕ್ತ ಇತಿ ॥ ಬುದ್ಧಿಯುಕ್ತೋ= ಭಗವಜ್ಜ್ಞಾನಯುಕ್ತಃ । ಉಭೇ ಸುಕೃತದುಷ್ಕೃತೇ= ಪುಣ್ಯಪಾಪೇ ಜಹಾತಿ= ತ್ಯಜತಿ । ಪುಣ್ಯಮಧ್ಯೇ ಯದನಿಷ್ಟಂ ಮಾನುಷ್ಯಾದಿಫಲಕಂ ತಜ್ಜಹಾತಿ । ಯತ್ತು ಉಪಾಸನಾದಿಜನ್ಯಂ ಜ್ಞಾನವೃದ್ಧಿಕರಂ ಮುಕ್ತಾವಾನಂದವೃದ್ಧಿಕರಂ ಚ ತತ್ಪುಣ್ಯಂ ನೈವ ಜಹಾತಿ । ದುಷ್ಕೃತಂ ತು ಸರ್ವಾತ್ಮನಾ ಜಹಾತಿ । ತಸ್ಮಾತ್= ಜ್ಞಾನಸ್ಯ ಸರ್ವಾನಿಷ್ಟನಿವೃತ್ತಿವಿಶಿಷ್ಟೋಭಯವೃದ್ಧಿರೂಪಮಹಾಫಲತ್ವಾತ್, ಯೋಗಾಯ= ಜ್ಞಾನೋಪಾಯಾಯ ಯುಜ್ಯಸ್ವ = ಸನ್ನದ್ಧೋ ಭವ, ಪ್ರಯತಸ್ವೇತಿ ವಾ । ಯೋಗಂ ಸ್ತೌತಿ– ಯೋಗ ಇತಿ ॥ ಯೋಗೋ = ಜ್ಞಾನೋಪಾಯಃ ಕರ್ಮಸು ಕೌಶಲಂ ಶ್ರೇಷ್ಠಮಿತ್ಯರ್ಥಃ ।**

**ಯದ್ವಾ ಅಸ್ತು ಜ್ಞಾನೋಪಾಯಾಯ ಪ್ರಯತ್ನಃ । ಕಿಂ ಫಲಸ್ನೇಹರಹಿತಕರ್ಮಣೇತ್ಯತ ಆಹ – ಯೋಗ ಇತಿ ॥ ಕರ್ಮಸು ಮಧ್ಯೇ ಭಗವಜ್ಜ್ಞಾನಪೂರ್ವಂ ಫಲಸ್ನೇಹರಹಿತಂ ಭಗವದರ್ಥತ್ವೇನ ಕ್ರಿಯಮಾಣಂ ಕರ್ಮ ಕೌಶಲಮುಚ್ಯತೇ । ಸ ಏವ ಯೋಗೋ ನಾಮ । ಅತಃ ಫಲಸ್ನೇಹಹೀನಂ ಕರ್ಮೈವ ಜ್ಞಾನೋಪಾಯ ಇತ್ಯರ್ಥಃ ॥ 50 ॥**

**ಅನುವಾದ**– ಜ್ಞಾನಕ್ಕಿಂತ ಕಾಮ್ಯಕರ್ಮವು ಅಧಮವಾದುದು. ಅದಕ್ಕೆ ಹಿಂದೆ ಕೊಟ್ಟ ಕಾರಣ ಕಾಮ್ಯಕರ್ಮಿಗಳು ಕೃಪಣರು – ದುಃಖಿಗಳು, ಎಂದು. ಈ ಶ್ಲೋಕದಲ್ಲಿ ಕರ್ಮದಿಂದ ಸಿಗುವ ಫಲಕ್ಕಿಂತಲೂ ಜ್ಞಾನದಿಂದ ಸಿಗುವ ಫಲ ವಿಲಕ್ಷಣವಾದುದು. ಇದರಿಂದಾಗಿಯೇ ಜ್ಞಾನಕ್ಕಿಂತ ಕಾಮ್ಯಕರ್ಮವು ಅಧಮ ಎಂದು ಹೇಳುತ್ತಿದ್ದಾರೆ.

**ಬುದ್ಧಿಯುಕ್ತಃ** = ಭಗವಂತನ ಅಪರೋಕ್ಷಜ್ಞಾನವುಳ್ಳವನು. **ಉಭೇ ಸುಕೃತ – ದುಷ್ಕೃತೇ**= ಪುಣ್ಯ ಮತ್ತು ಪಾಪಗಳೆರಡನ್ನೂ , **ಜಹಾತಿ** = ಬಿಡುತ್ತಾನೆ . (ಕಳೆದುಕೊಳ್ಳುತ್ತಾನೆ)

ಜ್ಞಾನಿಯು ಪುಣ್ಯಗಳೆಲ್ಲವನ್ನೂ ಕಳೆದುಕೊಳ್ಳುವುದಿಲ್ಲ . ಪುಣ್ಯಗಳಲ್ಲಿ ಅನಿಷ್ಟವಾದ, ಮನುಷ್ಯಾದಿ ಯೋನಿಗಳಲ್ಲಿ ಹುಟ್ಟಲು ಕಾರಣವಾದ ಪುಣ್ಯಗಳನ್ನು ಮಾತ್ರ ಕಳೆದುಕೊಳ್ಳುತ್ತಾನೆ. ಶ್ರವಣ–ಮನನಾದಿ ಉಪಾಸನೆಯಿಂದ ಸಂಚಿತವಾದ ಪುಣ್ಯವು ಅಪರೋಕ್ಷಜ್ಞಾನದ ವೃದ್ಧಿಗೆ ಹಾಗೂ ಮೋಕ್ಷದಲ್ಲಿ ಆನಂದದ ವೃದ್ಧಿಗೆ ಕಾರಣವಾಗುತ್ತದೆ. ಇಂತಹ ಪುಣ್ಯವನ್ನು ಕಳೆದುಕೊಳ್ಳುವುದಿಲ್ಲ . ಆದರೆ ಪಾಪವನ್ನು ಮಾತ್ರ ಸರ್ವಾತ್ಮನಾ ಕಳೆದುಕೊಳ್ಳುತ್ತಾನೆ. ಹೀಗೆ

ಜ್ಞಾನವು ಪಾಪನಾಶದ ಮೂಲಕ ಅನಿಷ್ಟನಿವೃತ್ತಿಗೂ ಪುಣ್ಯದ ಮೂಲಕ ಜ್ಞಾನ ಆನಂದಗಳ ವೃದ್ಧಿಗೂ ಕಾರಣವಾಗಿರುವ ಪ್ರಯುಕ್ತ , **ಯೋಗಾಯ** = ಜ್ಞಾನಸಾಧನೆಗಾಗಿ, **ಯುಜ್ಯಸ್ವ** = ಸನ್ನದ್ಧನಾಗು ಅಥವಾ ಪ್ರಯತ್ನಿಸು.

'**ಯೋಗಃ ಕರ್ಮಸು ಕೌಶಲಂ**' ಎಂದು ಗೀತೆಯಲ್ಲಿ ಯೋಗವನ್ನು ಪ್ರಶಂಸೆ ಮಾಡಲಾಗಿದೆ. ಇಲ್ಲಿ **ಯೋಗಃ** = ಜ್ಞಾನಕ್ಕೆ ಸಾಧನವಾದ ನಿಷ್ಕಾಮಕರ್ಮವು, ಕರ್ಮಗಳಲ್ಲಿ **ಕೌಶಲಂ**= ಶ್ರೇಷ್ಠವಾದುದು ಎಂದು ಅರ್ಥ.

ಅಥವಾ, ಉತ್ತರಾರ್ಧಕ್ಕೆ ಹೀಗೂ ಅರ್ಥವನ್ನು ಹೇಳಬಹುದು - ಜ್ಞಾನಕ್ಕೆ ಸಾಧನ-ವಾದುದನ್ನು ಮಾಡಲು ಪ್ರಯತ್ನಿಸೋಣ. ಆದರೂ ನಿಷ್ಕಾಮಕರ್ಮವು ಏಕೆ ಬೇಕು ? ಅದಕ್ಕೆ ಉತ್ತರ– '**ಯೋಗಃ ಕರ್ಮಸು ಕೌಶಲಂ**'. ಕರ್ಮಗಳಲ್ಲೆಲ್ಲ ಭಗವಂತನ ಜ್ಞಾನಪೂರ್ವಕವಾಗಿ, ಫಲದ ಆಸೆಯನ್ನು ಬಿಟ್ಟು, ಭಗವಂತನ ಪ್ರೀತಿಗಾಗಿ ಮಾಡಿದ ಕರ್ಮವು '**ಕೌಶಲ**' ಎನಿಸುತ್ತದೆ. ಇದನ್ನೇ ಯೋಗವೆಂದು ಕರೆಯಲಾಗುತ್ತದೆ. ಆದ್ದರಿಂದ ಇಂತಹ ನಿಷ್ಕಾಮಕರ್ಮವೇ ಜ್ಞಾನಸಾಧನವಾದುದರಿಂದ ಜ್ಞಾನವನ್ನು ಬಯಸುವವನು ಅದನ್ನು ಮಾಡಲೇಬೇಕು. ॥ 50 ॥

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥ 51 ॥**

**ಅರ್ಥ** - ಕರ್ಮದಿಂದ ಬರುವ ಫಲದ ಬಗ್ಗೆ ಅಭಿಲಾಷೆಯನ್ನು ತೊರೆದು. ಭಗವಂತನು ಪ್ರೀತನಾಗಲಿ, ಎಂಬ ಉದ್ದೇಶದಿಂದ ಕರ್ಮವನ್ನು ಮಾಡುವ ಸಾಧಕರು ಶಾಸ್ತ್ರದಿಂದ ಭಗವಂತನ ಸರಿಯಾದ ಜ್ಞಾನವನ್ನು ಪಡೆದು ಅಪರೋಕ್ಷ ಜ್ಞಾನಿಗಳಾಗಿ ಜನ್ಮ-ಬಂಧನಗಳಿಂದ ಮುಕ್ತರಾಗಿ ದುಃಖವಿಲ್ಲದ ಮೋಕ್ಷಸ್ಥಾನವನ್ನು ಹೊಂದುತ್ತಾರೆ.

**ಪೂರ್ವೋಕ್ತಂ ಜ್ಞಾನಸಾಧನಂ ಜ್ಞಾನಫಲಂ ಚ ವಿವೃಣೋತಿ– ಕರ್ಮಜ-ಮಿತಿ ॥ ಕರ್ಮಜಂ ಫಲಂ ತ್ಯಕ್ತ್ವಾ ಇತ್ಯುಪಲಕ್ಷಣಮ್ । ಕರ್ಮಜಫಲ-ಸಂಕಲ್ಪತ್ಯಾಗಾದಿಪೂರ್ವಕಂ ಭಗವದರ್ಪಣಬುದ್ಧ್ಯಾ ಕರ್ಮಾನುಷ್ಠಾನರೂಪಂ ಯೋಗಮಾಸ್ಥಾಯ, ಬುದ್ಧಿಯುಕ್ತಾಃ= ಸಮ್ಯಕ್ ಶಾಸ್ತ್ರಜನಿತಭಗವಜ್ಜ್ಞಾನಿನಃ ಇತ್ಯನೇನ ಜ್ಞಾನಸಾಧನಂ ಯೋಗೋ ವಿವೃತಃ । ತತಶ್ಚ ಮನೀಷಿಣಃ, 'ಪ್ರಶಂಸಾಯಾಂ ಮತುಬರ್ಥೇ ಇನಿಪ್ರತ್ಯಯಃ', ಅಪರೋಕ್ಷಜ್ಞಾನಿನೋ ಭೂತ್ವಾ ಜನ್ಮಬಂಧವಿನಿರ್ಮುಕ್ತಾಃ ಸಂತೋಽನಾಮಯಂ= ನಿರ್ದುಃಖಂ ಪದಂ= ಮೋಕ್ಷಂ ಗಚ್ಛಂತೀತ್ಯುಕ್ತ್ಯಾ ಜ್ಞಾನಫಲಂ ವಿವೃತಂ ಜ್ಞೇಯಮ್ ॥ 51 ॥**

**ಅನುವಾದ** - ಹಿಂದಿನ ಶ್ಲೋಕಗಳಲ್ಲಿ ಹೇಳಿರುವ ಜ್ಞಾನಸಾಧನವನ್ನೂ ಜ್ಞಾನದ ಫಲವನ್ನೂ ಈ ಶ್ಲೋಕದಲ್ಲಿ ವಿವರಿಸುತ್ತಿದ್ದಾರೆ.

ಈ ಶ್ಲೋಕದಲ್ಲಿ ಕರ್ಮದಿಂದ ಉಂಟಾಗುವ ಫಲದ ಬಗ್ಗೆ ಆಸೆಯನ್ನು ಬಿಡಬೇಕು ಎಂದಿಷ್ಟೇ ತೆಗೆದುಕೊಳ್ಳದೆ ಅದರ ಜೊತೆಯಲ್ಲಿ ಭಗವಂತನಿಗೆ ಅರ್ಪಣೆಯಾಗಲಿ ಎನ್ನುವ ಭಾವದಿಂದ ಕರ್ಮವನ್ನು ಆಚರಿಸಿ , ಎನ್ನುವ ಅಂಶವನ್ನೂ ಸೇರಿಸಿಕೊಳ್ಳಬೇಕು. ಈ ರೀತಿಯ ಕರ್ಮಯೋಗವನ್ನು ಮಾಡಿದರೆ, **ಬುದ್ಧಿಯುಕ್ತಾಃ** = ಶಾಸ್ತ್ರಗಳಿಂದ ಭಗವಂತನ ಬಗ್ಗೆ ಸರಿಯಾದ ಜ್ಞಾನವನ್ನು ಪಡೆಯುತ್ತಾರೆ. ಇದರಿಂದ ಜ್ಞಾನಕ್ಕೆ ಸಾಧನವಾದ ಯೋಗದ (ಕರ್ಮಯೋಗದ) ಸ್ವರೂಪವನ್ನು ವಿವರಿಸಿದಂತಾಯಿತು.

ಹೀಗೆ, ಶಾಸ್ತ್ರದಿಂದ ಪರೋಕ್ಷಜ್ಞಾನವನ್ನು ಪಡೆದ ಮೇಲೆ **ಮನೀಷಿಣಃ** = ಅಪರೋಕ್ಷ ಜ್ಞಾನವನ್ನು ಗಳಿಸಿದವರಾಗಿ **ಜನ್ಮಬಂಧವಿನಿರ್ಮುಕ್ತಾಃ** = ಜನ್ಮ ಮತ್ತು ಸಂಸಾರಬಂಧನದಿಂದ ಬಿಡುಗಡೆಹೊಂದಿದವರಾಗಿ, **ಅನಾಮಯಂ** = ದುಃಖವಿಲ್ಲದ , **ಪದಂ** = ಮೋಕ್ಷಸ್ಥಾನವನ್ನು ಕುರಿತು ಹೋಗುತ್ತಾರೆ. ಇದರಿಂದ ಜ್ಞಾನದಿಂದ ಸಿಗುವ ಫಲವನ್ನು ವಿವರಿಸಿದಂತಾಯಿತು.

**ಮನೀಷಿಣಃ** ಎಂಬುದಕ್ಕೆ ಅಪರೋಕ್ಷಜ್ಞಾನಿಗಳು ಎಂಬ ಅರ್ಥ ಹೇಗೆ ಎಂಬುದನ್ನು ರಾಯರು ವಿವರಿಸಿದ್ದಾರೆ – **ಮನೀಷಿಣಃ** ಎಂಬ ಪದವು 'ಇನಿ' ಪ್ರತ್ಯಯಾಂತವಾಗಿದೆ. ಪ್ರಶಂಸಾರ್ಥಕವಾದ **ಮತುಪ್** ಮುಂತಾದ ಪ್ರತ್ಯಯದ ಅರ್ಥವೇ ಆ ಪ್ರತ್ಯಯಕ್ಕೆ ಇದೆ. **ಮನೀಷಾ** ಎಂದರೆ ಜ್ಞಾನ. **ಮನೀಷೀ** ಎಂದರೆ ಪ್ರಶಸ್ತವಾದ ಜ್ಞಾನವುಳ್ಳವನು. ಅಪರೋಕ್ಷಜ್ಞಾನವೇ ಜ್ಞಾನಗಳಲ್ಲಿ ಪ್ರಶಸ್ತವಾದುದು. ಆದ್ದರಿಂದ **ಮನೀಷಿಣಃ** ಎಂದರೆ ಅಪರೋಕ್ಷಜ್ಞಾನಿಗಳು ಎಂದರ್ಥ. ॥ 51 ॥

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಽಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥ 52 ॥**

**ಅರ್ಥ**– ಯಾವಾಗ ನಿನ್ನ ಅಂತಃಕರಣವು ತಪ್ಪು ತಿಳುವಳಿಕೆಗಳನ್ನೆಲ್ಲ ಕಳೆದುಕೊಳ್ಳುವುದೋ ಆಗ ಇದುವರೆಗೆ ಕೇಳಿದ ಮತ್ತು ಕೇಳಲಿರುವ ಉಪದೇಶದಿಂದ ಮತ್ತು ಸರ್ವಕರ್ಮಗಳ ಅನುಷ್ಠಾನದಿಂದ ಪಡೆಯಬೇಕಾದ ಪೂರ್ಣಲಾಭವನ್ನು ನೀನು ಪಡೆಯುವಿ.

**ಫಲಕಾಮನಾದಿವರ್ಜಿತಾನಿ ಈಶ್ವರಾರಾಧನರೂಪಾಣಿ ಕರ್ಮಾಣಿ ಮೋಕ್ಷ-ಸಾಧನಜ್ಞಾನಾರ್ಥಿನಾ ಕಿಯತ್ಪರ್ಯಂತಂ ಕರ್ತವ್ಯಾನೀತ್ಯತ ಆಹ– ಯದಾ ತ**

**ಇತಿ ॥ ಯದಾ ತೇ= ತವ ಬುದ್ಧಿಃ= ಅಂತಃಕರಣಂ ಮೋಹಕಲಿಲಮ್= ಅನ್ಯಥಾಜ್ಞಾನಲಕ್ಷಣಂ ದೋಷಂ ವ್ಯತಿತರಿಷ್ಯತಿ= ಪರಿತ್ಯಕ್ಷ್ಯತಿ । ತದಾ ಮಹದ್ಭ್ಯಃ ಶ್ರುತಸ್ಯ ಶ್ರೋತವ್ಯಸ್ಯ ಚ । ಸರ್ವಕರ್ಮೋಪಲಕ್ಷಣಮೇತತ್ । ತಸ್ಯ ಸರ್ವಸ್ಯ ನಿರ್ವೇದಂ= ನಿತರಾಂ ಲಾಭಂ ಗಂತಾऽಸಿ= ಪ್ರಾಪ್ಸ್ಯಸಿ ।**

**ಮುಕ್ತಿಹೇತುಜ್ಞಾನಸಾಧನಭೂತೋ ನಿವೃತ್ತಕರ್ಮಾನುಷ್ಠಾನರೂಪೋ ಯೋಗಃ ನ ಸಾಕ್ಷಾಜ್ಜ್ಞಾನಹೇತುಃ ಶ್ರವಣಾದಿರೂಪಪ್ರಮಾಣಸ್ಯಾದೃಷ್ಟದ್ವಾರಾ ಸತ್ವಶುದ್ಧ್ಯುತ್ಪಾದನೇನೋಪಕಾರಕಃ ಸನ್ ಮಿಥ್ಯಾಜ್ಞಾನದೋಷನಿವೃತ್ತಿ-ಪರ್ಯಂತಂ ತತ್ತ್ವಜ್ಞಾನೋದಯಪರ್ಯಂತಂ ಚ ಕರ್ತವ್ಯ ಇತಿ ಭಾವಃ ॥52॥**

**ಅನುವಾದ** - ಫಲಕಾಮನೆಯನ್ನು ತೊರೆದು, ಭಗವದಾರಾಧನೆ ಎನ್ನುವ ಭಾವನೆಯಿಂದ ಕರ್ಮಗಳನ್ನು, ಮೋಕ್ಷಸಾಧನವಾದ ಜ್ಞಾನವನ್ನು ಬಯಸುವ ಸಾಧಕನು, ಎಲ್ಲಿಯವರೆಗೆ ಮಾಡಬೇಕು ಎನ್ನುವುದನ್ನು ಶ್ರೀಕೃಷ್ಣ ಈ ಶ್ಲೋಕದಲ್ಲಿ ಹೇಳುತ್ತಾನೆ.

ಯಾವಾಗ , **ತೇ**= ನಿನ್ನ , **ಬುದ್ಧಿಃ**= ಅಂತಃಕರಣವು, **ಮೋಹಕಲಿಲಂ**= ಭ್ರಾಂತಿರೂಪವಾದ ದೋಷವನ್ನು , **ವ್ಯತಿತರಿಷ್ಯತಿ** = ಬಿಟ್ಟುಬಿಡುವುದೋ ಆಗ ಮಹಾತ್ಮರಿಂದ ಇದುವರೆಗೆ ಮಾಡಿದ ಮುಂದೆ ಮಾಡಲಿರುವ ಶಾಸ್ತ್ರಶ್ರವಣದ **ನಿರ್ವೇದಂ**= ಪೂರ್ಣಲಾಭವನ್ನು, **ಗಂತಾಸಿ**= ಹೊಂದುವಿ.

ಇಲ್ಲಿ ಶ್ರವಣ ಎನ್ನುವುದು ಉಪಲಕ್ಷಣ. ಸಕಲ ಸತ್ಕರ್ಮಗಳ ಪೂರ್ಣಲಾಭವನ್ನು ಪಡೆಯುವಿ ಎಂದು ಗ್ರಹಿಸಬೇಕು.

ಅಪರೋಕ್ಷಜ್ಞಾನವು ಮೋಕ್ಷಕ್ಕೆ ಕಾರಣ. ಆ ಜ್ಞಾನಕ್ಕೆ ನಿಷ್ಕಾಮಕರ್ಮಾನುಷ್ಠಾನವು ನೇರವಾಗಿ ಕಾರಣವಲ್ಲ. ನೇರವಾಗಿ ಜ್ಞಾನಕ್ಕೆ ಕಾರಣವಾದುದು ಶ್ರವಣ-ಮನನ-ಧ್ಯಾನಗಳು. ಇವುಗಳು ಮನಸ್ಸಿನಲ್ಲಿ ಅಪರೋಕ್ಷವನ್ನು ಹುಟ್ಟಿಸಬೇಕಾದರೆ ಅಂತಃಕರಣವು ಮಿಥ್ಯಾಜ್ಞಾನವೆಂಬ ದೋಷದಿಂದ ಮುಕ್ತವಾಗಿ ಶುದ್ಧಗೊಳ್ಳಬೇಕು. ನಿವೃತ್ತ ಕರ್ಮದಿಂದಾದ ಪುಣ್ಯವು ಮನಸ್ಸನ್ನು ಶುದ್ಧಗೊಳಿಸುತ್ತದೆ. ಹೀಗೆ ಪರಂಪರಯಾ ಕರ್ಮವು ಜ್ಞಾನಕ್ಕೆ ಕಾರಣವಾಗುತ್ತದೆ. ಇಂತಹ ಕರ್ಮವನ್ನು ಮನಸ್ಸಿನಲ್ಲಿರುವ ಮಿಥ್ಯಾಜ್ಞಾನದೋಷ ನಿವೃತ್ತಿಪರ್ಯಂತವಾಗಿ ಮಾಡಬೇಕು . ಇದು ಒಂದು ಹಂತ. ಮುಂದೆ ಭಗವಂತನ ಅಪರೋಕ್ಷಜ್ಞಾನ ಉಂಟಾಗುವ-ವರೆಗೂ ಕರ್ಮಾನುಷ್ಠಾನ ನಡೆಯಬೇಕು . ಇದು ಎರಡನೆಯ ಹಂತ . ಹೀಗೆ ಶ್ಲೋಕದ ಭಾವ.

॥ 52 ॥

**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥ 53 ॥**

**ಅರ್ಥ** – ಮೊದಲು ವೇದೋಪನಿಷತ್ತುಗಳಿಗೆ ವಿರುದ್ಧವಾಗಿದ್ದ ನಿನ್ನ ಬುದ್ಧಿಯು ಯಾವಾಗ ತತ್ತ್ವದಲ್ಲಿ ದಾರ್ಢ್ಯವನ್ನು ಹೊಂದಿ ಸಂದೇಹಕ್ಕೊಳಗಾಗದೆ ನಿಶ್ಚಲವಾಗಿರುತ್ತದೋ ಆಗ ನೀನು ಧ್ಯಾನಕ್ಕೆ ಅರ್ಹತೆಯನ್ನು ಪಡೆಯುವಿ . ಧ್ಯಾನದಿಂದ ಬ್ರಹ್ಮದರ್ಶನವಾಗುತ್ತದೆ. ಬ್ರಹ್ಮದರ್ಶನದ ಪರಮಾನಂದದಲ್ಲಿ ಮುಳುಗಿದ ನಿನ್ನ ಮನಸ್ಸು ಬಾಹ್ಯಜಗತ್ತಿನ ಸದ್ದು ಗದ್ದಲಗಳಿಂದಲೂ ವಿಚಲಿತವಾಗದೆ ನಿಶ್ಚಲವಾಗಿದ್ದರೆ ಜ್ಞಾನಸಾಧನದ ಅನುಷ್ಠಾನದ ಪೂರ್ಣಲಾಭವನ್ನು ಗಳಿಸಿದಿ ಎಂದೇ ತಿಳಿ.

**ಕಿಂ ತನ್ಮೋಹಕಲಿಲಂ ? ಕೀದೃಶಂ ಚ ತದತಿತರಣಮಿತ್ಯಾಕಾಂಕ್ಷಾಯಾಂ ಪುಂಸಾಂ ಅಧಮಮಧ್ಯಮೋತ್ತಮಾವಸ್ಥಾದಿಪ್ರದರ್ಶನೇನ ಪೂರ್ವಶ್ಲೋಕೋಕ್ತ-ಮೇವ ಯೋಗಾನುಷ್ಠಾನಾವಧಿಂ ಸ್ಪಷ್ಟಯತಿ– ಶ್ರುತೀತಿ ॥**

**ಪರೋಕ್ಷನಿಶ್ಚಯಾತ್ಪೂರ್ವಾವಸ್ಥಾಯಾಂ ಶ್ರುತಿಭಿಃ = ವೇದೈರ್ವಿಪ್ರತಿಪನ್ನಾ= ವಿರುದ್ಧಾ ಸತೀ ಬುದ್ಧಿರ್ಯದಾ ವೇದಾರ್ಥಾನುಕೂಲೇನ ತತ್ತ್ವನಿಶ್ಚಯೇನಾ-ಸಚ್ಛಾಸ್ತ್ರೈಃ ಚಲನಹೀನಾ, ಇದಮದೋ ವೇತಿ ಸಂಶಯಾನಾಸ್ಕಂದಿತಾ ಸತೀ ಸ್ಥಾಸ್ಯತಿ, ತತಶ್ಚ ಸಮಾಧಿರ್ಭವತಿ । ಜಾತೇ ಚ ಸಮಾಧೌ ಅಸಂಪ್ರಜ್ಞಾತಧ್ಯಾನೇ ಅಪರೋಕ್ಷಜ್ಞಾನಂ ಭವತಿ । ತೇನ ಚ ಬ್ರಹ್ಮದರ್ಶನೇನ ಪರಮಾನಂದ-ಮಗ್ನತಯಾ ಭೇರೀತಾಡನಾದಿನಾಽಪಿ ಚಲನಹೀನಾ ಬುದ್ಧಿಃ = ಮನೋ ಯದಾ ಸ್ಥಾಸ್ಯತಿ ತದಾ ಯೋಗಂ= ಯೋಗಫಲಂ- ಜ್ಞಾನೋಪಾಯಾನುಷ್ಠಾನಸ್ಯ ಫಲಮವಾಪ್ಸ್ಯಸೀತ್ಯರ್ಥಃ।**

**ಅನುವಾದ** – **'ಯದಾ ತೇ ಮೋಹಕಲಿಲಂ'** ಎಂಬ ಹಿಂದಿನ ಶ್ಲೋಕದಲ್ಲಿ ಹೇಳಿರುವ ಮೋಹವೆಂಬ ಕಶ್ಮಲ ಎಂದರೇನು ? ಅದನ್ನು ದಾಟುವುದೆಂದರೇನು ? ಇದನ್ನು ವಿವರಿಸುತ್ತಾ ಸಾಧಕರ ಅಧಮ, ಮಧ್ಯಮ, ಉತ್ತಮ ಅವಸ್ಥೆಗಳನ್ನು ತಿಳಿಸಿ ಹಿಂದಿನ ಶ್ಲೋಕಗಳಲ್ಲಿ ಹೇಳಿದ ಜ್ಞಾನಸಾಧನಾನುಷ್ಠಾನದ ಸೀಮೆಯನ್ನು ಈ ಶ್ಲೋಕದಲ್ಲಿ ಸ್ಪಷ್ಟಪಡಿಸುತ್ತಾರೆ.

ಪರೋಕ್ಷವಾಗಿ ತತ್ತ್ವದ ನಿಶ್ಚಯವು ಬರುವುದಕ್ಕಿಂತ ಮೊದಲು **ಶ್ರುತಿಭಿಃ** = ವೇದಗಳಿಂದ, **ವಿಪ್ರತಿಪನ್ನಾ** = ವಿರುದ್ಧವಾಗಿದ್ದ ನಿನ್ನ ಬುದ್ಧಿಯು ಯಾವಾಗ ವೇದಗಳು ಹೇಳಿರುವ ಪ್ರಮೇಯಗಳಿಗೆ ಅನುಗುಣವಾದ ತತ್ತ್ವನಿಶ್ಚಯದ ಕಾರಣದಿಂದಾಗಿ ದುಃಶಾಸ್ತ್ರಗಳ ಶ್ರವಣ

ಮಾಡಿದಾಗಲೂ **ನಿಶ್ಚಲಾ=** ಚಲನೆ ಇಲ್ಲದ್ದಾಗಿ ಅಂದರೆ 'ಇದು ಸರಿಯೋ, ಅದು ಸರಿಯೋ ?' ಎಂಬ ಸಂಶಯಕ್ಕೆ ಒಳಗಾಗದೆ ಇರುವುದೋ ಆಗ ಧ್ಯಾನವು ಸುಲಭವಾಗುವುದು. ಧ್ಯಾನಾವಸ್ಥೆಯು ಪರಿಪಕ್ವವಾಗಿ ಅಸಂಪ್ರಜ್ಞಾತಾವಸ್ಥೆಗೆ ತಲುಪಿದಾಗ ಪರಮಾತ್ಮನ ಅಪರೋಕ್ಷ ಜ್ಞಾನವಾಗುತ್ತದೆ. ಅದರಿಂದ ಬ್ರಹ್ಮದರ್ಶನ ಪ್ರಯುಕ್ತವಾದ ಪರಮಾನಂದದಲ್ಲಿ ಮಗ್ನವಾಗಿ, ಜೋರಾಗಿ ನಗಾರಿ ಬಾರಿಸಿದರೂ ಬುದ್ಧಿಯು ಚಲನೆ ಇಲ್ಲದೆ ನಿಶ್ಚಲವಾಗಿದ್ದರೆ ಆಗ, **ಯೋಗಂ=** ಯೋಗದ ಫಲವನ್ನು ಅಂದರೆ ಜ್ಞಾನಸಾಧನವಾದ ನಿಷ್ಕಾಮಕರ್ಮಾನುಷ್ಠಾನದ ಫಲವನ್ನು ಹೊಂದುವಿ . ಇದು ಗೀತೆಯ ಅರ್ಥ.

**ಪೂರ್ವಾವಸ್ಥಾಯಾಂ ಅನುಷ್ಠಿತಯೋಗಸ್ಯ ಪರೋಕ್ಷಭಗವನ್ನಿಶ್ಚಯಾವಧಿತ್ವ-ಮುಕ್ತಮ್ । ಪರೋಕ್ಷನಿಶ್ಚಯಸ್ಯ ಕಾಷ್ಠಾ ತು ಅಸಚ್ಛಾಸ್ತ್ರೈರನೇಕಧಾ ಪರಿಲೋಡ್ಯ-ಮಾನತ್ವೇಽಪ್ಯಪ್ರಾಮಾಣ್ಯಶಂಕಾಕಲಂಕಿತತ್ವಶೂನ್ಯತ್ವಮ್ । ತದ್ದಶಾಯಾಮ್ ಅನುಷ್ಠಿತನಿವೃತ್ತಕರ್ಮರೂಪಯೋಗಸ್ಯ ತು ಸಮಾಧೌ ಭಗವದಪರೋಕ್ಷ-ಜ್ಞಾನಾವಧಿತ್ವಮ್ । ತಸ್ಯ ತು ಕಾಷ್ಠಾ ಭೇರೀತಾಡನಾದಿನಾಽಪ್ಯಪ್ರಬೋಧ-ಸಮಾಧಿಸ್ಥತ್ವಮ್ ।**

**ಏತೇನ ಬುದ್ಧೇರ್ಮನಸಃ ಮೋಹಕಲಿಲಂ ಶ್ರುತಿವಿರುದ್ಧತ್ವರೂಪೋ ದೋಷಃ । ತತ್ತರಣಂ ನಾಮ ವೇದಾರ್ಥಾನುಕೂಲೇನ ನಿಶ್ಚಯೇನ ದೃಢ-ತಯಾಽವಸ್ಥಾನಮ್ । 'ತದಾ ನಿರ್ವೇದಂ ಗಂತಾಽಸಿ' ಇತ್ಯಸ್ಯ ವಿವರಣಂ 'ಸಮಾಧೌ ಅಚಲಾ ಬುದ್ಧಿಃ' ಇತ್ಯುಕ್ತಂ ಭವತಿ । ಶ್ಲೋಕದ್ವಯಸ್ಯಾಪಿ ಅಚಂಚಲ-ಸಮಾಧ್ಯವಸ್ಥಾಪ್ರಾಪ್ತಿರ್ಯೋಗಾನುಷ್ಠಾನಾವಧಿರಿತಿ ತಾತ್ಪರ್ಯಂ ಧ್ಯೇಯಮ್ ।**

**ಅನುವಾದ** - ಪ್ರಾರಂಭದಲ್ಲಿ ಅನುಷ್ಠಾನ ಮಾಡಿದ ನಿಷ್ಕಾಮಕರ್ಮದ ಫಲ ಪರಮಾತ್ಮನ ಪರೋಕ್ಷನಿಶ್ಚಯ . ದುಷ್ಟಶಾಸ್ತ್ರಗಳಿಂದ ಅನೇಕವಿಧವಾಗಿ ಆಕ್ರಮಣವಾದರೂ ತಾನು ತಾಳಿದ ನಿರ್ಧಾರದಲ್ಲಿ ಶೈಥಿಲ್ಯವಾಗದಿರುವುದು ಪರೋಕ್ಷಜ್ಞಾನದ ಪರಾಕಾಷ್ಠೆ. ಈ ಸ್ಥಿತಿಯನ್ನು ತಲುಪುವವರೆಗೂ ನಿಷ್ಕಾಮಕರ್ಮಾನುಷ್ಠಾನ ನಡೆಯಬೇಕು. ಈ ಸ್ಥಿತಿ ತಲುಪಿದ ಮೇಲೆ ಮಾಡಿದ ಕರ್ಮಾನುಷ್ಠಾನವು ಧ್ಯಾನಾವಸ್ಥೆಯಲ್ಲಿ ಭಗವಂತನನ್ನು ಕಾಣುವವರೆಗೂ ನಡೆಯಬೇಕು. ನಗಾರಿ ಬಡಿದರೂ ವಿಚಲಿತನಾಗದೆ ಸಮಾಧಿಯಲ್ಲಿ ಭಗವದ್ರೂಪವನ್ನು ಕಾಣುತ್ತಾ ತಲ್ಲೀನನಾಗಿರುವುದು ಧ್ಯಾನದ ಪರಾಕಾಷ್ಠೆ.

ಈ ವಿವರಣೆಯಿಂದ , ಬುದ್ಧಿಯ ಅಂದರೆ ಮನಸ್ಸಿನ ಮೋಹವೆಂಬ ಕಶ್ಮಲವೆಂದರೆ (ಹಿಂದಿನ

ಶ್ಲೋಕದಲ್ಲಿ ಹೇಳಿದ '**ಮೋಹಕಲಿಲ**') ವೇದಕ್ಕೆ ವಿರುದ್ಧವಾದ ಭಾವವನ್ನು ತಾಳಿರುವುದು ಎಂದು ತಿಳಿಯಬಹುದು. ಇದನ್ನು ದಾಟುವುದು (ಹಿಂದಿನ ಶ್ಲೋಕದಲ್ಲಿ ಹೇಳಿದ '**ವ್ಯತಿತರಿಷ್ಯತಿ**')ಎಂದರೆ, ವೇದಾರ್ಥಕ್ಕೆ ವಿರೋಧವಿಲ್ಲದಂತೆ ಅದಕ್ಕೆ ಅನುಕೂಲವಾಗಿ ದೃಢವಾಗಿ ಬುದ್ಧಿಯು ನಿಲ್ಲುವುದು. '**ತದಾ ಗಂತಾಸಿ ನಿರ್ವೇದಂ**' ಎಂಬುದರ ವಿವರಣೆಯೇ ಈ ಶ್ಲೋಕದ '**ಸಮಾಧೌ ಅಚಲಾ ಬುದ್ಧಿಃ**' ಎಂಬುದು.

(ನಿಷ್ಕಾಮ ಕರ್ಮಾನುಷ್ಠಾನದ ಪೂರ್ಣಲಾಭ ದೊರಕುವುದು ನಮ್ಮ ಮನಸ್ಸು ಬಾಹ್ಯ ಪ್ರಪಂಚದ ಯಾವುದೇ ಶಬ್ದಕ್ಕೆ ಮಣಿಯದೆ ಭಗವದ್ದರ್ಶನದಲ್ಲಿ ತಲ್ಲೀನಗೊಂಡಾಗ ಎನ್ನುವುದು ಈ ಶ್ಲೋಕದಲ್ಲಿ ಸ್ಪಷ್ಟವಾಗುತ್ತದೆ . ಹೀಗೆ ಹಿಂದಿನ ಶ್ಲೋಕದ ವಿವರಣೆಯೇ ಈ ಶ್ಲೋಕವಾಗಿದೆ) ಎರಡೂ ಶ್ಲೋಕಗಳ ಒಟ್ಟು ತಾತ್ಪರ್ಯ– ನಿಶ್ಚಲವಾದ ಸಮಾಧ್ಯವಸ್ಥೆಯನ್ನು ತಲುಪುವುದೇ ಯೋಗಾನುಷ್ಠಾನದ ಅಂತಿಮಸೀಮೆ ಎಂದು.

**ಯದ್ವಾ , ಬುದ್ಧಿಃ = ಮನಃ ಶ್ರುತಿವಿಪ್ರತಿಪನ್ನಾ = ಶ್ರುತೌ ವಿಶೇಷೇಣ ಪ್ರತಿಪನ್ನಾ, ಶ್ರುತ್ಯರ್ಥನಿರ್ಣಯಂ ಪ್ರಾಪ್ತಾ ಸತೀ ಇದಮದೋವೇತಿ ಚಂಚಲತ್ವಹೀನಾ ಯದಾ ಸ್ಥಾಸ್ಯತಿ ತದಾ ಸಮಾಧೌ- ಸಮಾಧಿಃ= ಸಮಾಧಾನಂ । ಸತಿ ಸಪ್ತಮೀ । ಶ್ರುತ್ಯರ್ಥನಿಶ್ಚಯೇನ ನಿಶ್ಚಲತ್ವೇ ಸತಿ ಅಪರೋಕ್ಷಜ್ಞಾನಂ ಭವತೀತಿ ಯೋಜ್ಯಮ್ । ತೇನ ಚ ವಿಷ್ಣಾವಚಲಾ ಭವತಿ ಬುದ್ಧಿಃ । ತತಶ್ಚ ಯೋಗಂ - ಭಗವದ್ಯೋಗಂ= ಮುಕ್ತಿಮವಾಪ್ಸ್ಯಸಿ ಇತಿ ॥ 53 ॥**

**ಅನುವಾದ**- ಅಥವಾ, ಹೀಗೂ ಅರ್ಥವನ್ನು ಹೇಳಬಹುದು- **ಬುದ್ಧಿಃ** = ಮನಸ್ಸು, **ಶ್ರುತಿವಿಪ್ರತಿಪನ್ನಾ** = ಶ್ರುತಿಯನ್ನು ವಿಶೇಷವಾಗಿ ಒಪ್ಪಿಕೊಂಡಾಗ ಅರ್ಥಾತ್ ಶ್ರುತಿಯು ಹೇಳುವ ವಿಷಯದಲ್ಲಿ ನಿರ್ಧಾರವನ್ನು ತಾಳಿ 'ಹೀಗೋ, ಹಾಗೋ' ಎಂಬ ಸಂದೇಹವನ್ನು ಕಳೆದುಕೊಂಡಾಗ , **ಸಮಾಧೌ** = ಮನಸ್ಸು ಶ್ರುತ್ಯರ್ಥದಲ್ಲಿ ನಿರ್ಣಯಾತ್ಮಕವಾಗಿದ್ದು ನಿಶ್ಚಲವಾದಾಗ ಭಗವಂತನ ಅಪರೋಕ್ಷಜ್ಞಾನವು ಬರುತ್ತದೆ .

'**ಅಪರೋಕ್ಷ ಜ್ಞಾನಂ ಭವತಿ**' ಎಂಬ ಅಂಶವನ್ನು ಶ್ಲೋಕದಲ್ಲಿ ಸೇರಿಸಿಕೊಳ್ಳಬೇಕು. '**ಸಮಾಧೌ**' ಶಬ್ದವು ಸತಿಸಪ್ತಮೀ ಎಂದು ಭಾವಿಸಿದಾಗ ಅದಕ್ಕೆ ನಿಶ್ಚಲತ್ವ ಉಂಟಾದಾಗ ಎಂದು ಅರ್ಥವನ್ನು ಹೇಳಬೇಕು.

ಅಪರೋಕ್ಷಜ್ಞಾನದಿಂದ ಮನಸ್ಸು ವಿಷ್ಣುವಿನಲ್ಲಿ ನಿಶ್ಚಲವಾಗುತ್ತದೆ. ಇದರಿಂದಾಗಿ **ಯೋಗಂ**= ಭಗವಂತನ ಸಂಬಂಧವನ್ನು ಅಂದರೆ ಮೋಕ್ಷವನ್ನು ಹೊಂದುವಿ. ಇದು ಗೀತಾ ಶ್ಲೋಕದ ಅರ್ಥ. ॥ 53 ॥

**ವಿವರಣೆ –** ಶ್ರುತಿ ವಿಪ್ರತಿಪನ್ನಾ ಎಂಬ ಗೀತೆಯಲ್ಲಿರುವ ಶಬ್ದಕ್ಕೆ ಶ್ರೀಮಧ್ವಾಚಾರ್ಯರು ಭಾಷ್ಯದಲ್ಲಿ 'ಶ್ರುತಿಗೆ ವಿರುದ್ಧವಾಗಿರುವ' ಎಂದು ಅರ್ಥವನ್ನು ಹೇಳಿದ್ದಾರೆ . ಈ ಅರ್ಥವನ್ನು ಅನುಸರಿಸಿ ಶ್ರೀರಾಘವೇಂದ್ರಸ್ವಾಮಿಗಳು ಮೊದಲು ಒಂದು ಅರ್ಥವನ್ನು ಹೇಳಿದ್ದಾರೆ. ಆಚಾರ್ಯರೇ ಗೀತಾತಾತ್ಪರ್ಯದಲ್ಲಿ **'ಶ್ರುತೌ ವಿಶೇಷೇಣ ಪ್ರತಿಪನ್ನಾ'** 'ಶ್ರುತಿಗೆ ಹೊಂದಿಕೊಳ್ಳುವ (ಬುದ್ಧಿ)' ಎನ್ನುವ ಅರ್ಥವನ್ನು ಹೇಳಿದ್ದಾರೆ . ಅದಕ್ಕೆ ಅನುಗುಣವಾಗಿ ಎರಡನೆಯ ವ್ಯಾಖ್ಯಾನವನ್ನು ಶ್ರೀರಾಘವೇಂದ್ರತೀರ್ಥರು ಮಾಡಿದ್ದಾರೆ . ಈ ಅರ್ಥದಲ್ಲಿ ಯೋಗ ಶಬ್ದಕ್ಕೆ ಮೋಕ್ಷ ಎಂಬ ಅರ್ಥವನ್ನು ಮಾಡಲಾಗಿದೆ. ಈ ಅರ್ಥಕ್ಕೆ ಸಂವಾದಿಯಾಗಿ ಗೀತಾತಾತ್ಪರ್ಯದಲ್ಲಿ ಆಚಾರ್ಯರು ಪ್ರಮಾಣವನ್ನು ಉದಾಹರಿಸಿದ್ದಾರೆ—

'ಶ್ರುತಿ ಮಾರ್ಗಂ ಪ್ರಪನ್ನಾ ತು ತದರ್ಥಜ್ಞಾನನಿಶ್ಚಲಾ ।
ಸಮಾಧಾನೇನ ತು ಪುನರಾಪರೋಕ್ಷ್ಯಾಚ್ಚ ನಿಶ್ಚಲಾ ।
ವಿಷ್ಣೌ ಪ್ರಾಪ್ಸ್ಯತಿ ತದ್ಯೋಗಂ ಮುಕ್ತೋ ಭೂತ್ವಾ ತದಶ್ನುತೇ ॥'

**ಅಪರೋಕ್ಷಜ್ಞಾನಿಯ ಲಕ್ಷಣಗಳಾವುವು ?**

**ಅರ್ಜುನ ಉವಾಚ -**

**ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥ 54 ॥**

**ಅರ್ಥ -** ಅರ್ಜುನ ಹೇಳಿದನು– ಕೃಷ್ಣ ! ಸಮಾಧ್ಯವಸ್ಥೆಯನ್ನು ತಲುಪಿದ ಸ್ಥಿತಪ್ರಜ್ಞನ ಲಕ್ಷಣವೇನು ? ಸ್ಥಿತಪ್ರಜ್ಞನು ಯಾಕಾಗಿ ಮಾತನಾಡುತ್ತಾನೆ, ಕುಳಿತುಕೊಳ್ಳುತ್ತಾನೆ , ನಡೆಯುತ್ತಾನೆ ಅಥವಾ, ನಾನಾ ಲೋಕವ್ಯವಹಾರಗಳಲ್ಲಿ ತೊಡಗುತ್ತಾನೆ ?

**ಜ್ಞಾನಿನಿ ಪ್ರಕೃತೇ(ಸತಿ) ಲಬ್ಧಾವಸರೋಽರ್ಜುನಃ ಪ್ರಾಗುಕ್ತಲಕ್ಷಣಾನುವಾದ-ಪೂರ್ವಕಂ ಲಕ್ಷಣಾಂತರಾದಿಕಂ ಪೃಚ್ಛತಿ- ಸ್ಥಿತೇತಿ ॥ ಸ್ಥಿತಾ= ಪ್ರತಿಷ್ಠಾಂ ಪ್ರಾಪ್ತಾ ಪ್ರಜ್ಞಾ= ಅಪರೋಕ್ಷದೃಶಿರ್ಯಸ್ಯ ಸ ತಥಾ । ತಸ್ಯ ಸಮಾಧಿಸ್ಥಸ್ಯ= ಸಮಾಧ್ಯವಸ್ಥಾಂ ಗತಸ್ಯ , ಪ್ರಾಕ್ ತ್ವದುಕ್ತದಿಶಾಽಸಂಪ್ರಜ್ಞಾತಧ್ಯಾನಸ್ಥತ್ವಲಕ್ಷಣಂ ಗತಸ್ಯ । ಕಾ ಭಾಷಾ? ಭಾಷ್ಯತೇಽನಯೇತಿ ಭಾಷಾಶಬ್ದೋ ಲಕ್ಷಣವಚನಃ, ಕಿಂ ಲಕ್ಷಣಮಿತ್ಯರ್ಥಃ । ಯೇನ ಲಕ್ಷಣೇನಾಯಂ ಜ್ಞಾನೀತಿ ವ್ಯವಹ್ರಿಯತೇ ತತ್ಕಿಮಿತ್ಯರ್ಥಃ । ಕೇಶವ= ಬ್ರಹ್ಮರುದ್ರಪ್ರವರ್ತಕ । 'ಕೇಶಾದ್ವೋಽನ್ಯತರಸ್ಯಾಮ್' ಇತಿ ಮತ್ವರ್ಥೇ 'ವ '**

**ಪ್ರತ್ಯಯೋಕ್ತೇಃ ಪ್ರಶಸ್ತಕೇಶವಾನಿತಿ ವಾ । ಸ್ಥಿತಧೀಃ= ಅಪರೋಕ್ಷಜ್ಞಾನೀ ಕಿಂ ಪ್ರಭಾಷೇತ, ಕಿಂ ಪ್ರತ್ಯಾಸೀತ, ಕಿಮುದ್ದಿಶ್ಯ ವ್ರಜೇತ= ಪ್ರವೃತ್ತಿಂ ಕುರ್ಯಾದಿ-ತ್ಯರ್ಥಃ ।**

**ಅನುವಾದ** – ಜ್ಞಾನಿಯ ಪ್ರಸ್ತಾಪ ಬಂದಾಗ ಸಂದರ್ಭವನ್ನು ಬಳಸಿಕೊಂಡು ಅರ್ಜುನನು, ಶ್ರೀಕೃಷ್ಣನು ಜ್ಞಾನಿಗೆ ಈಗಾಗಲೇ ಹೇಳಿರುವ ಲಕ್ಷಣವನ್ನು (ಸಮಾಧಿಸ್ಥತ್ವ) ಅನುವಾದ ಮಾಡಿಕೊಂಡು ಇನ್ನೊಂದು ಲಕ್ಷಣವನ್ನು ಕೇಳುತ್ತಿದ್ದಾನೆ 'ಸ್ಥಿತಪ್ರಜ್ಞಸ್ಯ' ಇತ್ಯಾದಿ ಈ ಶ್ಲೋಕದಲ್ಲಿ.

**ಸ್ಥಿತಾ** = ಸ್ಥಿರತೆಯನ್ನು ಹೊಂದಿದ, **ಪ್ರಜ್ಞಾ** = ಅಪರೋಕ್ಷಜ್ಞಾನವು ಯಾರಿಗಿದೆಯೋ ಅವನು **ಸ್ಥಿತಪ್ರಜ್ಞ** . ಅಂತಹವನ, ಹಾಗೂ **ಸಮಾಧಿಸ್ಥಸ್ಯ** = ಧ್ಯಾನದ ಸ್ಥಿತಿಗೆ ತಲುಪಿರುವ, ಹಿಂದೆ ನೀನು ಹೇಳಿರುವಂತೆ ಅಸಂಪ್ರಜ್ಞಾತ ಸಮಾಧಿಸ್ಥಿತಿಯನ್ನು ತಲುಪಿರುವವನ, **ಕಾ ಭಾಷಾ**= ಲಕ್ಷಣ ವೇನು ?

**ಭಾಷ್ಯತೇ ಅನಯಾ ಇತಿ – ಭಾಷಾ** . 'ಇವನು ಇಂತಹವನು' ಎಂದು ನಿಖರವಾಗಿ ವ್ಯವಹರಿಸಲು ಕಾರಣವಾದುದು, ಅರ್ಥಾತ್ ಲಕ್ಷಣ ಎಂದು ಭಾಷಾಶಬ್ದಕ್ಕೆ ಅರ್ಥ. ಯಾವ ಧರ್ಮದಿಂದಾಗಿ ಇವನು ಜ್ಞಾನೀ ಎಂದು ಗುರುತಿಸಬಹುದೋ ಅಂತಹ ಲಕ್ಷಣವು ಯಾವುದು? ಎಂದರ್ಥ.

ಕೇಶವ ಎಂದರೆ ಬ್ರಹ್ಮ ಮತ್ತು ರುದ್ರರನ್ನು ನಿಯಂತ್ರಿಸುವವನು. (ಕ+ಈಶ+ ವ) ಅಥವಾ ಸುಂದರವಾದ ಕೂದಲುಳ್ಳವನು ಎಂದೂ ಅರ್ಥಮಾಡಬಹುದು. ಕೇಶ ಶಬ್ದಕ್ಕೆ **ಮತುಪ್** ಪ್ರತ್ಯಯದ ಅರ್ಥದಲ್ಲಿ (ಹೊಂದಿರುವವನು) 'ವ' ಎಂಬ ಪ್ರತ್ಯಯವನ್ನು **'ಕೇಶಾದ್ವೋ ಅನ್ಯತರಸ್ಯಾಮ್'** ಎಂಬ ಸೂತ್ರದಲ್ಲಿ ಪಾಣಿನಿಯು ಹೇಳಿರುತ್ತಾನೆ. **ಕೇಶ + ವ = ಕೇಶವ** = ಚೆಂದದ ಕೂದಲಿನವ.

**ಸ್ಥಿತಧೀಃ** = ಅಪರೋಕ್ಷಜ್ಞಾನಿಯು ಯಾಕಾಗಿ ಮಾತನಾಡುತ್ತಾನೆ, ಯಾಕಾಗಿ ಕುಳಿತು-ಕೊಳ್ಳುತ್ತಾನೆ, ಯಾವ ಉದ್ದೇಶದಿಂದ ಹೋಗುತ್ತಾನೆ, ಅಂದರೆ ನಾನಾಕಾರ್ಯಗಳಲ್ಲಿ ಪ್ರವೃತ್ತಿ ಮಾಡುತ್ತಾನೆ ? ಎಂದು ಅರ್ಜುನನ ಪ್ರಶ್ನೆ .

**ಅತ್ರ ಕಿಂ ಲಕ್ಷಣಮಿತಿ ವಕ್ತವ್ಯೇ ಯೌಗಿಕಭಾಷಾಶಬ್ದೇನ ತದುಕ್ತಿಃ ಪ್ರಾಗುಕ್ತಂ ಸಮಾಧಿಸ್ಥತ್ವಲಕ್ಷಣಮಯಾವದ್‌ದ್ರವ್ಯಭಾವಿತ್ವಾನ್ನ ಸಮ್ಯಗ್ವ್ಯವಹಾರೋಪ-ಯೋಗಿ, ಯಾವಲ್ಲಕ್ಷ್ಯಭಾವಿ ತು ಸಮ್ಯಕ್ ಸಾರ್ವತ್ರಿಕವ್ಯವಹಾರೋಪಯೋಗಿ,**

**ಅತಃ ಸಾರ್ವತ್ರಿಕವ್ಯವಹಾರಹೇತುಭೂತಂ ಯಾವಲ್ಲಕ್ಷ್ಯಭಾವಿಲಕ್ಷಣಂ ಕಿಮಿತಿ ಪ್ರಷ್ಟುಮಿತಿ ಜ್ಞೇಯಮ್ । ಸ್ಥಿತಪ್ರಜ್ಞಸ್ಯ ಕಾ ಭಾಷೇತ್ಯೇವ ಪೂರ್ತೌ ಸಮಾಧಿಸ್ಥಸ್ಯೇತಿ ಪ್ರಾಚೀನಲಕ್ಷಣಾನುವಾದಸ್ತು ತ್ವದುಕ್ತಂ ಲಕ್ಷಣಂ ಜ್ಞಾತಂ, ತನ್ನ ಪೃಚ್ಛ್ಯತೇ । ಯೇನ ಸಿದ್ಧಾರ್ಥತಾ ಪ್ರಶ್ನಸ್ಯ ಸ್ಯಾತ್ । ಕಿಂ ತು ಅನ್ಯದೇವ ಪೃಚ್ಛ್ಯತ ಇತಿ ಜ್ಞಾಪಯಿತುಮ್ ।**

**ಅನುವಾದ** – ಈ ಶ್ಲೋಕದಲ್ಲಿ (ಸ್ಥಿತ ಪ್ರಜ್ಞನ) ಲಕ್ಷಣವೇನು ? ಎಂಬ ಶಬ್ದದ ಬದಲು ಅದೇ ಅರ್ಥ ಬರುವ 'ಭಾಷಾ' ಶಬ್ದವನ್ನು ಬಳಸಿರುವ ಉದ್ದೇಶ ಇದು – ಹಿಂದೆ ಜ್ಞಾನಿಗೆ 'ಸಮಾಧಿ ಯಲ್ಲಿರುವವನು ' ಎಂಬ ಲಕ್ಷಣವನ್ನು ಹೇಳಿದ್ದಾಗಿದೆ. ಆದರೆ ಜ್ಞಾನಿಯು ಸದಾಕಾಲವೂ ಸಮಾಧಿ ಯಲ್ಲಿ ಇರುವುದಿಲ್ಲ. ಹೀಗಾಗಿ ಸಮಾಧಿಯಿಂದ ಎಚ್ಚರಗೊಂಡಾಗ ಅವನನ್ನು ಅಪರೋಕ್ಷಜ್ಞಾನಿ ಎಂದು ಇದರಿಂದ ತಿಳಿದುಕೊಳ್ಳಲಾಗುವುದಿಲ್ಲ. ಆದರೆ ಸದಾಕಾಲವೂ ಜ್ಞಾನಿಯಲ್ಲಿರುವ ಲಕ್ಷಣವೊಂದನ್ನು ಹೇಳಿದರೆ ಅದು ವ್ಯವಹಾರಕ್ಕೆ ಉಪಯುಕ್ತವಾಗುತ್ತದೆ. ಹೀಗೆ ಸರ್ವದಾ ವ್ಯವಹಾರಕ್ಕೆ ಉಪಯೋಗವಾಗುವ, ಜ್ಞಾನಿಯಲ್ಲಿ ಸದಾ ಇರುವ ಲಕ್ಷಣವನ್ನು ಅರ್ಜುನ ಕೇಳುತ್ತಿದ್ದಾನೆ ಎಂದು ತಿಳಿಸಲು '**ಭಾಷಾ**' ಶಬ್ದವನ್ನು ಗೀತೆಯಲ್ಲಿ ಬಳಸಲಾಗಿದೆ.

'ಸ್ಥಿತಪ್ರಜ್ಞನ ಲಕ್ಷಣವೇನು ?' ಎಂದಿಷ್ಟೇ ಕೇಳದೆ ಆ ಸ್ಥಿತಪ್ರಜ್ಞನಿಗೆ '**ಸಮಾಧಿಸ್ಥಸ್ಯ**' ಎಂಬ ವಿಶೇಷಣವನ್ನು ಕೊಡುವ ಮೂಲಕ ಹಿಂದೆ ಹೇಳಿರುವ ಲಕ್ಷಣವನ್ನು ಅನುವಾದ ಮಾಡಿರುವ ಉದ್ದೇಶ – 'ನೀನು ಈಗಾಗಲೇ ಹೇಳಿದ ಲಕ್ಷಣವು ನನಗೆ ತಿಳಿದಿದೆ. ಅದನ್ನೇ ಮತ್ತೆ ನಾನು ಕೇಳುತ್ತಿಲ್ಲ. ಹಾಗೆ ಕೇಳಿದರೆ ತಿಳಿದಿದ್ದನ್ನೇ ಏಕೆ ಕೇಳಬೇಕು ? ಎನ್ನುವ ಆಕ್ಷೇಪ ಬರಬಹುದು. ನಾನು ಕೇಳುತ್ತಿರುವುದು ಬೇರೆಯೇ ಲಕ್ಷಣವನ್ನು' . ಇದನ್ನು ತಿಳಿಸಲು ಹಿಂದೆ ಹೇಳಿದ ಲಕ್ಷಣವನ್ನು ಅರ್ಜುನ ಅನುವಾದ ಮಾಡಿದ್ದಾನೆ.

**ಯದ್ವಾ ಸಮಾಧಿಸ್ಥಸ್ಯ ವಿಷಮಬುದ್ಧಿವರ್ಜಿತಸ್ಯೇತ್ಯರ್ಥಃ । ಉತ್ತರಾರ್ಧೇ ಕಿಂಶಬ್ದಃ ಆಕ್ಷೇಪಾರ್ಥಃ । ಭೇರೀತಾಡನಾದಿನಾಽಪಿ ಅಪ್ರತಿಬುದ್ಧೋ ಬ್ರಹ್ಮದರ್ಶನೇನ ಪರಮಾನಂದಮಗ್ನತ್ವಾತ್, ಸ್ಥಿತಧೀಃ= ಅಪರೋಕ್ಷಜ್ಞಾನೀ ಭಾಷಣೋಪವೇಶನಗಮನಾದಿರೂಪಪ್ರವೃತ್ತಿಂ ಕಿಮರ್ಥಂ ಕುರ್ಯಾತ್ । ಕರೋತಿ ಚ ಶುಕಾದಿಃ । ಅತಃ 'ಸಮಾಧೌ ಅಚಲಾಬುದ್ಧಿಸ್ತದಾ ಯೋಗಮವಾಪ್ಸ್ಯಸೀ'ತಿ ಉಕ್ತಮಸದಿತಿ ॥ 54 ॥**

**ಅನುವಾದ** – ಅಥವಾ ಹೀಗೂ ಹೇಳಬಹುದು – **ಸಮಾಧಿಸ್ಥಸ್ಯ** = ವಿಷಮಬುದ್ಧಿ ಇಲ್ಲದ

ಜ್ಞಾನಿಯ ಎಂದರ್ಥ. ಶ್ಲೋಕದ ಉತ್ತರಾರ್ಧದಲ್ಲಿರುವ 'ಕಿಂ' ಶಬ್ದವು ಪ್ರಶ್ನಾರ್ಥಕವಲ್ಲ, ಆಕ್ಷೇಪಾರ್ಥಕ.

ಬ್ರಹ್ಮದರ್ಶನದ ಪರಮಾನಂದದಲ್ಲಿ ಮುಳುಗಿರುವುದರಿಂದ, ಭೇರಿವಾದನ ಮಾಡಿದಾಗಲೂ ಎಚ್ಚರಗೊಳ್ಳದೆ ಇರಬಲ್ಲ ಸ್ಥಿತಧೀಃ = ಅಪರೋಕ್ಷಜ್ಞಾನಿಯು ಬೇರೆ ಅಲ್ಪ ಪ್ರಯೋಜನದ ಉದ್ದೇಶದಿಂದ ಮಾತನಾಡುವುದು, ಕುಳಿತುಕೊಳ್ಳುವುದು, ನಡೆಯುವುದು ಮುಂತಾದ ಕ್ರಿಯೆಗಳನ್ನು ಏಕೆ ತಾನೆ ಮಾಡಬೇಕು ? ಆದರೆ ಜ್ಞಾನಿಗಳಾದ ಶುಕ-ವಾಮದೇವಾದಿಗಳು ಅವನ್ನೆಲ್ಲ ಮಾಡುತ್ತಾರೆ. ಆದ್ದರಿಂದ ಅವರು ನೀನು ಹೇಳಿದ ಸ್ಥಿತಿಯನ್ನು ತಲುಪಿಲ್ಲ ಎಂದೇ ಅರ್ಥ. ಅಂದಮೇಲೆ, 'ಮನಸ್ಸು ಪರಮಾತ್ಮನಲ್ಲಿ ನಿಶ್ಚಲಗೊಂಡಾಗ ಮುಕ್ತಿಯನ್ನು ಹೊಂದುವಿ' ಎಂದು ಹಿಂದೆ ಹೇಳಿದ್ದು ಸರಿಯಲ್ಲ. ಇದು ಅರ್ಜುನನ ಆಕ್ಷೇಪ. ॥ 54 ॥

## ಮನೋವಿಕಾರಗಳನ್ನು ತೊರೆದ, ಪರಮಾತ್ಮಧ್ಯಾನತೃಪ್ತನು 'ಸ್ಥಿತಪ್ರಜ್ಞ' ಎನಿಸುವನು

**ಶ್ರೀ ಭಗವಾನುವಾಚ -**

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥ 55 ॥**

**ಅರ್ಥ** - ಶ್ರೀಕೃಷ್ಣ ಹೇಳುತ್ತಾನೆ - ಯಾವಾಗ ಮನಸ್ಸಿನಲ್ಲಿರುವ ಕಾಮಕ್ರೋಧಾದಿ ದುರ್ಗುಣಗಳೆಲ್ಲವನ್ನೂ ಬಿಟ್ಟುಬಿಡುತ್ತಾನೋ ಯಾವಾಗ ಪರಮಾತ್ಮನಲ್ಲೇ ಏಕಾಗ್ರ ಚಿತ್ತನಾಗಿ ಪರಮಾತ್ಮನ ಪ್ರಸಾದದಿಂದ ಸಂತೃಪ್ತಿಯಿಂದ ಇರುವನೋ, ಆಗ ಅವನು ಅಪರೋಕ್ಷಜ್ಞಾನಿಯು.

**ಕಾ ಭಾಷೇತಿ ಕೃತಲಕ್ಷಣಪ್ರಶ್ನಸ್ಯ ಉತ್ತರಮಾಹ - ಪ್ರಜಹಾತೀತಿ ॥ ಉತ್ತರಾರ್ಧೇ ಕೃತಾಕ್ಷೇಪಸ್ಯ ತು ಸಮಾಧಿಂ 'ಯಾ ನಿಶಾ' ಇತ್ಯಗ್ರೇ ವಕ್ಷ್ಯತಿ । ಯದಾ ಮನೋಗತಾನ್ ಸರ್ವಾನ್ ಕಾಮಾನ್ ಪ್ರಜಹಾತಿ= ಪರಿತ್ಯಜತಿ । ಕಾಮಾನ್ ಇತ್ಯುಪಲಕ್ಷಣಂ ಕಾಮಕ್ರೋಧಾದೀನಿತ್ಯರ್ಥಃ । ಯದಾ ಚಾತ್ಮನ್ಯೇವ= ಪರಮಾತ್ಮನ್ಯೇವ ವ್ಯವಸ್ಥಿತಃ ಸನ್ ತದೇಕಚಿತ್ತಃ ಸನ್ನಿತಿ ಯಾವತ್, ಆತ್ಮನಾ= ಪರಮಾತ್ಮನಾ ತತ್ಪ್ರಸಾದೇನೇತ್ಯರ್ಥಃ, ತುಷ್ಟಃ= ಸಂತೋಷಯುಕ್ತಃ ತದಾ ಸ್ಥಿತಪ್ರಜ್ಞೋಽಪರೋಕ್ಷಜ್ಞಾನೀ ಉಚ್ಯತ ಇತ್ಯರ್ಥಃ ।**

**ಅನುವಾದ** - 'ಕಾ ಭಾಷಾ' ಎಂದು ಅರ್ಜುನನು ಲಕ್ಷಣದ ಬಗ್ಗೆ ಕೇಳಿದ ಪ್ರಶ್ನೆಗೆ 'ಪ್ರಜಹಾತಿ' ಎಂಬ ಶ್ಲೋಕದಲ್ಲಿ ಶ್ರೀಕೃಷ್ಣನು ಉತ್ತರವನ್ನು ಹೇಳುತ್ತಾನೆ. ಹಿಂದಿನ ಶ್ಲೋಕದ

ಉತ್ತರಾರ್ಧದಲ್ಲಿ ಅರ್ಜುನ ಮಾಡಿದ ಆಕ್ಷೇಪಕ್ಕೆ ಸಮಾಧಾನವನ್ನು **'ಯಾ ನಿಶಾ'** ಎಂಬ (69ನೇ ಶ್ಲೋಕ) ಶ್ಲೋಕದಲ್ಲಿ ಹೇಳುತ್ತಾನೆ.

ಜ್ಞಾನಿಯು ಯಾವಾಗ ಮನಸ್ಸಿನಲ್ಲಿರುವ ಸಕಲ ಕಾಮನೆಗಳನ್ನು , **ಪ್ರಜಹಾತಿ** = ಪರಿತ್ಯಜಿಸುವನೋ, ಇಲ್ಲಿ ಕಾಮನೆಗಳನ್ನು ಮಾತ್ರವಲ್ಲ, ಕಾಮ, ಕ್ರೋಧ, ಮುಂತಾದ ದುರ್ಗುಣಗಳೆಲ್ಲವನ್ನೂ ತೆಗೆದುಕೊಳ್ಳಬೇಕು. ಇವೆಲ್ಲವನ್ನು ಬಿಡುವನೋ ಹಾಗೂ, ಯಾವಾಗ, **ಆತ್ಮನ್ಯೇವ** = ಪರಮಾತ್ಮನಲ್ಲೇ, **ವ್ಯವಸ್ಥಿತಃ ಸನ್** = ತದೇಕಚಿತ್ತನಾಗಿ , **ಆತ್ಮನಾ** = ಪರಮಾತ್ಮನ ಅನುಗ್ರಹದಿಂದ, **ತುಷ್ಟಃ**= ಸಂತೋಷಪಡುವನೋ ಆಗ, **ಸ್ಥಿತಪ್ರಜ್ಞಃ**= ಅಪರೋಕ್ಷಜ್ಞಾನಿಯೆಂದು ಹೇಳಲ್ಪಡುತ್ತಾನೆ.

**ಅತ್ರ ಸರ್ವಾನ್ ಕಾಮಾನಿತ್ಯಸ್ಯ ವಿರುದ್ಧಕಾಮಾನಿತ್ಯರ್ಥಃ । ಕಾಮಾದೇರ್ಮನೋಗತತ್ವಾವ್ಯಭಿಚಾರೇಽಪಿ ಮನೋಗತಾನಿತ್ಯುಕ್ತಿರ್ವಿರುದ್ಧ ಸರ್ವಕಾಮಪ್ರಹಾಣಘಟನಾಯ । ಜ್ಞಾನಸ್ಯ ಕಾಮಾದೇಶ್ಚ ಮಾನಸೈಕನಿಷ್ಠತ್ವಾತ್ 'ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತ' ಇತಿ ವಕ್ಷ್ಯಮಾಣದಿಶಾಽನ್ಯೋನ್ಯಂ ವಿರುದ್ಧತ್ವಾತ್ ಮನಸಿ ಭಗವದ್‌ಜ್ಞಾನೇ ಜಾತೇ ತದ್ವಿರುದ್ಧಾಃ ಕಾಮಾದಯೋ ನ ಸ್ಥಾತುಮರ್ಹಂತೀತಿ ಯುಕ್ತಿಸೂಚನೇನ ತದ್ಘಟನಾತ್ । ಪ್ರಾಯಃ ಸರ್ವವಿರುದ್ಧ-ಕಾಮಾದಿತ್ಯಾಗವತ್ತ್ವೇ ಸತಿ ಭಗವದೇಕಚಿತ್ತತಯಾ ಸಂತುಷ್ಟತ್ವಂ ಜ್ಞಾನಿಲಕ್ಷಣ-ಮಿತ್ಯುಕ್ತಂ ಭವತಿ ।**

**ಅನುವಾದ** - ಈ ಶ್ಲೋಕದಲ್ಲಿ ಮನಸ್ಸಿನ ಎಲ್ಲಾ ಕಾಮನೆಗಳನ್ನೂ ಬಿಡಬೇಕು ಎಂದರೆ ಭಗವದ್ದರ್ಶನ, ಮೋಕ್ಷ ಮುಂತಾದ ವಿಷಯಗಳ ಸತ್ಕಾಮನೆಗಳನ್ನು ಬಿಡಬೇಕು ಎಂದು ಅರ್ಥವಲ್ಲ. ಮೋಕ್ಷವಿರೋಧಿಯಾದ ಐಹಿಕ ಸುಖದ ಕಾಮನೆಯನ್ನು ಬಿಡಬೇಕು ಎಂದಷ್ಟೇ ಅರ್ಥ.

ಕಾಮಾದಿ ದೋಷಗಳು ಮನಸ್ಸು ಬಿಟ್ಟು ಬೇರೆಲ್ಲೂ ಇರುವ ಸಂಭವವಿಲ್ಲ . ಹೀಗಿದ್ದರೂ **'ಮನೋಗತಾನ್'** ಎಂದು ವಿಶೇಷಣವನ್ನು ಕೊಟ್ಟಿರುವ ಉದ್ದೇಶ – ಅಪರೋಕ್ಷಜ್ಞಾನವೂ ಮನಸ್ಸಿನಲ್ಲೇ ಹುಟ್ಟುತ್ತದೆ, ಆಗ ಅಲ್ಲಿರುವ ವಿರುದ್ಧವಾದ ಕಾಮಗಳೆಲ್ಲವೂ ಸಹಜವಾಗಿಯೇ ನಾಶವಾಗುತ್ತವೆ. ಇದನ್ನು **'ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ'** ಎಂದು ಮುಂದಿನ (59ನೆಯ) ಶ್ಲೋಕದಲ್ಲೂ ಹೇಳಲಾಗಿದೆ. ಪರಮಾತ್ಮನ ಅಪರೋಕ್ಷಕ್ಕೂ ಲೌಕಿಕ ಕಾಮನೆಗಳಿಗೂ ಪರಸ್ಪರ ವಿರೋಧವಿದೆ. ಹೀಗಾಗಿ ಮನಸ್ಸಿನಲ್ಲಿ ಭಗವಂತನ ಅಪರೋಕ್ಷಜ್ಞಾನ ಉದಿಸಿದಾಗ ಅದಕ್ಕೆ

ವಿರುದ್ಧವಾದ ಕಾಮಾದಿದೋಷಗಳು ಮನಸ್ಸಿನಲ್ಲಿ ಇರಲು ಸಾಧ್ಯವಿಲ್ಲ . ಈ ಯುಕ್ತಿಯನ್ನು ಸೂಚಿಸಲೋಸುಗ '**ಮನೋಗತಾನ್**' ಎಂಬ ವಿಶೇಷಣವನ್ನು ಕೊಡಲಾಗಿದೆ.

ಈ ಶ್ಲೋಕದಿಂದ, ಪ್ರಾಯಃ 'ಸಕಲ ವಿರುದ್ಧ ಕಾಮನೆಗಳನ್ನು ಕಳೆದುಕೊಂಡು ಭಗವದೇಕ ಮನಸ್ಕನಾಗಿ ಸಂತುಷ್ಟನಾಗಿರುವುದೇ' ಜ್ಞಾನಿಯ ಲಕ್ಷಣ ಎಂದು ಹೇಳಿದಂತಾಯಿತು.

**ನ ಚ 'ಯೋಗೇ ತ್ವಿಮಾಂ ಶೃಣು' ಇತಿ ಜ್ಞಾನೋಪಾಯಂ ಪ್ರತಿಜ್ಞಾಯ ಜ್ಞಾನಿಲಕ್ಷಣೋಕ್ತಿರಸಂಗತೇತಿ ಶಂಕ್ಯಮ್ । ಪ್ರಾಯೋ ವಿರುದ್ಧಕಾಮತ್ಯಾಗ-ಭಗವದೇಕಚಿತ್ತ-ತತ್ಪ್ರಸಾದಾಯತ್ತಸಂತೋಷವತ್ತ್ವಾದೀನಾಂ ಜ್ಞಾನಿಲಕ್ಷಣತಯಾ ಉಕ್ತವಕ್ಷ್ಯಮಾಣಾನಾಮೇವ ಜ್ಞಾನೋಪಾಯಶಬ್ದಿತಯೋಗಸ್ವರೂಪತ್ವಾತ್ । ಪರಂತು ಜ್ಞಾನಾರ್ಥಿನ್ಯೇತಾನಿ ಯತ್ನಸಾಧ್ಯಾನಿ, ಜ್ಞಾನಿನಿ ತು ಸ್ವಭಾವಸಿದ್ಧಾನೀತಿ ವಿಶೇಷಃ ॥ 55 ॥**

**ಅನುವಾದ** – ಹಿಂದೆ (39ನೆಯ ಶ್ಲೋಕದಲ್ಲಿ) ಯೋಗದ ಬಗ್ಗೆ ಹೇಳುತ್ತೇನೆ , ಕೇಳು ಎಂದು ಶ್ರೀಕೃಷ್ಣ ಹೇಳಿದ್ದಾನೆ. ಇಲ್ಲಿ ಅದನ್ನು ಬಿಟ್ಟು ಜ್ಞಾನಿಗಳ ಲಕ್ಷಣವನ್ನು ಹೇಳುತ್ತಿದ್ದಾನೆ. ಇದು ಅಸಂಗತವಲ್ಲವೆ ? ಇಲ್ಲ . ಸಾಮಾನ್ಯವಾಗಿ ವಿರುದ್ಧ ಕಾಮಾದಿಗಳನ್ನು ತ್ಯಜಿಸುವುದು, ಭಗವಂತನಲ್ಲೇ ಮನಸ್ಸನ್ನು ನೆಲೆಗೊಳಿಸಿ ಅವನ ಅನುಗ್ರಹದಿಂದ ಸಂತೃಪ್ತನಾಗಿರುವುದು ಮುಂತಾಗಿ ಜ್ಞಾನಿಗಳಿಗೆ ಇಲ್ಲಿ ಹೇಳಿರುವ, ಇದಲ್ಲದೆ ಮುಂದೆ ಹೇಳಲಾಗುವ ಲಕ್ಷಣಗಳೇ, ಯೋಗ ಎಂದು ಕರೆಯಲ್ಪಡುವ ಜ್ಞಾನಸಾಧನಗಳೂ ಆಗಿವೆ. ಆದರೆ, ಒಂದು ವಿಶೇಷ, ಜ್ಞಾನವನ್ನು ಗಳಿಸಬೇಕಾಗಿರುವ ಸಾಧಕನು ಈ ಲಕ್ಷಣಗಳನ್ನು ಪ್ರಯತ್ನಪಟ್ಟು ಸಾಧಿಸಬೇಕಾಗುತ್ತದೆ. ಜ್ಞಾನಿಗೆ ಇವೆಲ್ಲವೂ ಸಹಜಸಿದ್ಧವಾಗಿರುತ್ತವೆ.

(ಹೀಗೆ ಜ್ಞಾನಿ ಲಕ್ಷಣಗಳೇ ಜ್ಞಾನೋಪಾಯಗಳಾಗಿರುವುದರಿಂದ ಅಸಂಗತಿ ಇಲ್ಲ.)

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥ 56 ॥**

**ಅರ್ಥ** – ಅಪರೋಕ್ಷ ಜ್ಞಾನಿಯ ಮನಸ್ಸು ದುಃಖ ಬಂದಾಗ ಉದ್ವೇಗಕ್ಕೆ ಒಳಗಾಗುವುದಿಲ್ಲ. ಅವನಿಗೆ ಪ್ರಾಪಂಚಿಕ ಸುಖದ ಬಗ್ಗೆ ಆಸಕ್ತಿಯೂ ಇರುವುದಿಲ್ಲ. ಆಸೆ, ಭಯ, ಕೋಪಗಳು ಅವನಿಗಿರುವುದಿಲ್ಲ. ಇಂತಹ ಜ್ಞಾನಿಯು ಸ್ಥಿತಪ್ರಜ್ಞನೆನಿಸುತ್ತಾನೆ.

**ಏತದೇವ ಕಾಮಶಬ್ದೋಪಲಕ್ಷಿತದೋಷಾಂತರತ್ಯಾಗಕಥನಾದಿನಾ ತ್ರಿಭಿಃ ಸ್ಪಷ್ಟಯತಿ– ದುಃಖೇಷ್ವಿತ್ಯಾದಿಭಿಃ ।। ದುಃಖೇಷು ಪ್ರಾಪ್ತೇಷು ಅನುದ್ವಿಗ್ನಂ= ಕ್ಷಾಂತಂ ಮನೋ ಯಸ್ಯ ಸ ತಥಾ । ಸುಖೇಷು ವಿಷಯೇ ವಿಗತೇಚ್ಛಃ । ಅಶೋಭನೇ ಶೋಭನಾಧ್ಯಾಸೋ ರಾಗಃ । ರಾಗಭಯಕ್ರೋಧಾಃ ವೀತಾಃ= ಅಪಗತಾ ಯಸ್ಮಾತ್ ಸ ತಥಾ ತಾದೃಶೋ ಮುನಿಃ ಸ್ಥಿತಧೀರುಚ್ಯತೇ ।। 56 ।।**

**ಅನುವಾದ** - ಮುಂದಿನ ಮೂರು ಶ್ಲೋಕಗಳಲ್ಲಿ ಸ್ಥಿತಪ್ರಜ್ಞನ ಈ ಲಕ್ಷಣವನ್ನೇ ಸ್ಪಷ್ಟಗೊಳಿಸುತ್ತಾರೆ. ಹಿಂದಿನ ಶ್ಲೋಕದಲ್ಲಿ '**ಕಾಮಾನ್ ಸರ್ವಾನ್ ಮನೋಗತಾನ್**' ಎಂದು ಕಾಮನೆಗಳನ್ನು ಬಿಟ್ಟವನು ಎನ್ನಲಾಗಿದೆ. ಕಾಮನೆ ಮಾತ್ರವಲ್ಲ, ಇತರ ದೋಷಗಳನ್ನೂ ಅವನು ಬಿಟ್ಟಿರುತ್ತಾನೆ ಎಂದು ಮುಂದಿನ ಶ್ಲೋಕಗಳಲ್ಲಿ ತಿಳಿಸಲಾಗಿದೆ.

ದುಃಖವು ಬಂದಾಗ **ಅನುದ್ವಿಗ್ನಂ** = ಶ್ರಾಂತವಾಗದ ಮನಸ್ಸು ಯಾರಿಗಿದೆಯೋ ಅಂತಹವನು '**ದುಃಖೇಷ್ವನುದ್ವಿಗ್ನಮನಾಃ**'. ಸುಖದ ಬಗ್ಗೆ ಆಸಕ್ತಿಯನ್ನು ಕಳೆದುಕೊಂಡವನು. ಹಿತವಲ್ಲದ ವಸ್ತುವಿನಲ್ಲಿ 'ಹಿತ ' ಎನ್ನು ವ ಭಾವನೆಯೇ 'ರಾಗ ' ಎನಿಸುತ್ತದೆ. ಇಂತಹ ರಾಗ , ಜೊತೆಯಲ್ಲಿ ಭಯ, ಕೋಪ ಇವುಗಳು , **ವೀತಾಃ** = ಯಾರಿಂದ ದೂರವಾಗಿವೆಯೋ ಅಂತಹ ಜ್ಞಾನಿಯು '**ಸ್ಥಿತಧೀಃ**' ಅಪರೋಕ್ಷಜ್ಞಾನಿ ಎನಿಸುತ್ತಾನೆ. ।। 56 ।।

**ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಮ್ ।**
**ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ।। 57 ।।**

**ಅರ್ಥ** - ಯಾರು ಎಲ್ಲವಸ್ತುಗಳಲ್ಲೂ ಸ್ನೇಹವನ್ನು ಕಳೆದುಕೊಂಡಿರುವ ಕಾರಣದಿಂದಾಗಿ ಒಳ್ಳೆಯ ವಸ್ತುವಿನ ಸಂಪರ್ಕವಾದಾಗ ಖುಷಿಪಡುವುದಿಲ್ಲ , ಕೆಟ್ಟವಸ್ತುಗಳ ಸಂಪರ್ಕವಾದಾಗ ದ್ವೇಷ ಮಾಡುವುದಿಲ್ಲವೋ ಅಂತಹವನು ಅಪರೋಕ್ಷಜ್ಞಾನಿ.

**ವೀತರಾಗಭಯಕ್ರೋಧತ್ವಂ ಕೇನ ಹೇತುನಾ ಭವತೀತ್ಯತ ಆಹ–ಯ ಇತಿ ।। ಅನಭಿಸ್ನೇಹ ಇತಿ ಹೇತುಗರ್ಭಮ್ । ಯಃ ಸರ್ವತ್ರಾಽನಭಿ-ಸ್ನೇಹತ್ವಾತ್ತತ್ತತ್ ಶುಭಾಶುಭಂ ಪ್ರಾಪ್ಯಾಪಿ ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ= ಅಪರೋಕ್ಷಧೀಃ ಪ್ರತಿಷ್ಠಿತಾ ।। 57 ।।**

**ಅನುವಾದ** - ಜ್ಞಾನಿಯು ರಾಗ ಕೋಪ ಮುಂತಾದ ದೋಷಗಳನ್ನು ಕಳೆದುಕೊಂಡಿರಲು ಕಾರಣವನ್ನು ಈ ಶ್ಲೋಕದಲ್ಲಿ ತಿಳಿಸುತ್ತಾನೆ. ಇಲ್ಲಿ '**ಅನಭಿಸ್ನೇಹಃ**' ಎಂಬ ವಿಶೇಷಣವು ಕಾರಣವನ್ನು

ತಿಳಿಸುತ್ತದೆ. ಆಗ ಶ್ಲೋಕದ ಅರ್ಥ- ಯಾರು ಎಲ್ಲ ವಸ್ತುಗಳಲ್ಲೂ ಸ್ನೇಹವನ್ನು ಕಳೆದು ಕೊಂಡಿರುವುದರಿಂದಾಗಿ ಒಳ್ಳೆಯದನ್ನೋ ಕೆಟ್ಟದ್ದನ್ನೋ ಹೊಂದಿದರೂ ಅಭಿನಂದಿಸುವುದೂ ಇಲ್ಲ, ದ್ವೇಷ ಮಾಡುವುದೂ ಇಲ್ಲವೋ ಅಂತಹವನಿಗೆ ,ಪ್ರಜ್ಞಾ= ಅಪರೋಕ್ಷಜ್ಞಾನವು ಬಂದಿದೆ. ॥ 57 ॥

**ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ 58 ॥**

**ಅರ್ಥ**- ಯಾರು, ಆಮೆಯು ತನ್ನ ಅವಯವಗಳನ್ನು ಅನಾಯಾಸವಾಗಿ ಒಳಗೆ ಸೆಳೆದುಕೊಳ್ಳುವಂತೆ ವಿಷಯವಸ್ತುಗಳೆಡೆಯಿಂದ ತನ್ನ ಇಂದ್ರಿಯಗಳನ್ನು ಶ್ರಮವಿಲ್ಲದೆ ಸೆಳೆದುಕೊಳ್ಳುವನೋ ಅವನು ಅಪರೋಕ್ಷಜ್ಞಾನಿ.

**ಕಿಂ ಚಾಯಂ= ಜ್ಞಾನೀ ಯದಾ ಇಂದ್ರಿಯಾರ್ಥೇಭ್ಯಃ= ಶಬ್ದಸ್ಪರ್ಶರೂಪ-ರಸಗಂಧೇಭ್ಯಃ ಸರ್ವಶಃ= ಸರ್ವಾಣಿ ಇಂದ್ರಿಯಾಣಿ= ಶ್ರೋತ್ರಾದೀನಿ, ಕೂರ್ಮಃ ಕರಚರಣಾದ್ಯಂಗಾನಿ ಸ್ವಭಾವೇನೋಪಸಂಹರತಿ ತದ್ವತ್ ಅನಾಯಾಸೇನ ಉಪ-ಸಂಹರತೇ ತಸ್ಯ ಪ್ರಜ್ಞಾ ಪ್ರತಿಷ್ಠಿತಾ । ಜ್ಞಾನಿನೋ ಜಿಜ್ಞಾಸೋರಿವೇಂದ್ರಿಯ-ಪ್ರತ್ಯಾಹರಣಂ ನ ಯತ್ನಸಾಧ್ಯಂ ಕಿಂ ತು ಅನಾಯಾಸೇನೈವ ಇತಿ ಜ್ಞಾಪನಾಯ 'ಕೂರ್ಮೋಽಂಗಾನೀವ' ಇತಿ ದೃಷ್ಟಾಂತಃ ॥ 58 ॥**

**ಅನುವಾದ** - ಇದಲ್ಲದೆ, ಇಂತಹ ಜ್ಞಾನಿಯು ಇಂದ್ರಿಯಗೋಚರವಾಗುವ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಈ ವಿಷಯವಸ್ತುಗಳಿಂದ ತನ್ನ ಕಿವಿಯೇ ಮೊದಲಾದ ಇಂದ್ರಿಯಗಳನ್ನು, ಆಮೆಯು ತನ್ನ ಕೈಕಾಲು ಮುಂತಾದ ಅವಯವಗಳನ್ನು ಹೇಗೆ ಅನಾಯಾಸವಾಗಿ ಒಳಗೆ ಸೆಳೆದುಕೊಳ್ಳುವುದೋ ಅದರಂತೆ, ಅನಾಯಾಸವಾಗಿ ಸೆಳೆದುಕೊಳ್ಳುವನೋ ಅಂತಹವನು ಅಪರೋಕ್ಷಜ್ಞಾನಿಯು .

ಜ್ಞಾನಿಯು ಸಾಧಕನಂತೆ ಇಂದ್ರಿಯ ನಿಗ್ರಹವನ್ನು ಪ್ರಯಾಸಪಟ್ಟು ಮಾಡಬೇಕಾಗಿಲ್ಲ. ಅದು ಅವನಿಗೆ ಸುಲಭವಾದುದು. ಇದನ್ನು ತಿಳಿಸಲು ಗೀತೆಯಲ್ಲಿ ಆಮೆಯ ದೃಷ್ಟಾಂತವನ್ನು ಕೊಡಲಾಗಿದೆ. ॥ 58 ॥

**ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ 59 ॥**

**ಅರ್ಥ-** ಉಪವಾಸ ಮಾಡುವುದರಿಂದ ಇಂದ್ರಿಯಗಳ ಭೋಗಶಕ್ತಿಯು ಮಾತ್ರ ಕುಂದುತ್ತದೆ. ಆದರೆ, ಮನಸ್ಸಿನಲ್ಲಿರುವ ವಿಷಯಾಭಿಲಾಷೆಯು ಕುಂದುವುದಿಲ್ಲ . ಅದು ಕುಂದುವುದು ಪರಮಾತ್ಮನ ದರ್ಶನವಾದಾಗ ಮಾತ್ರ.

**ನನ್ವೇವಂ ಕಾಮಪ್ರಹಾಣಾದಿಲಕ್ಷಣಸಾಧನಂ ಚೇತ್ ಜ್ಞಾನಂ ತರ್ಹಿ ಸರ್ವೋಽಪಿ ಜನಃ ಕಸ್ಮಾನ್ನ ತತ್ಸಾಧಯತಿ ? ಕಾಮಾದ್ಯುಪದ್ರವಪರಿಹಾರಾರ್ಥಂ ಕಿಂ ದಂದಹ್ಯಮಾನಶಿರಾಃ ಬಂಭ್ರಮೀತಿ ? ಇತ್ಯತೋ ನಿರಾಹಾರತ್ವೇನ ಇಂದ್ರಿಯ-ಜಯಃ, ತೇನೈವ ಚ ಜ್ಞಾನಮಿತ್ಯಾದಿ ದುಃಸಂಪಾದತ್ವಂ ಜ್ಞಾನಸ್ಯಾಹ– ವಿಷಯಾ ಇತ್ಯಾದಿಭಿಸ್ತ್ರಿಭಿಃ ॥**

**ತತ್ರ ಆದ್ಯೇನ ಇಂದ್ರಿಯಜಯ ಉಚ್ಯತೇ । ದೇಹಿನೋ ನಿರಾಹಾರಸ್ಯ । ಹೇತುಗರ್ಭಮಿದಮ್ । ನಿರಾಹಾರತ್ವೇನ ಹೇತುನಾ ವಿಷಯಾಃ= ರೂಪಾದಯಃ- ಇಂದ್ರಿಯಾಣಾಂ ತದ್ಭೋಗಶಕ್ತಯ ಉಪಲಕ್ಷ್ಯಂತೇ । ತಾ ನಿವರ್ತಂತೇ । ರಸವರ್ಜಂ- ರಸೋ= ರಾಗಃ । ಮಾನಸಿಕವಿಷಯಾಭಿಲಾಷವರ್ಜಮ್ । ನಿರಾಹಾರತ್ವೇನ ವಿಷಯಾಭಿಲಾಷೋ ನ ನಿವರ್ತತೇ । ರಸೋಽಪ್ಯಸ್ಯ= ದೇಹಿನಃ, ಪರಂ ದೃಷ್ಟ್ವಾ ನಿವರ್ತತೇ । ಪರಮಾತ್ಮದರ್ಶನೇನೈವ ವಿಷಯಾಭಿಲಾಷೋಽಪ-ಯಾತೀತ್ಯರ್ಥಃ ।**

**ಅನುವಾದ** - ಜ್ಞಾನದಿಂದ ಮನಸ್ಸಿನಲ್ಲಿರುವ ಕಾಮಕ್ರೋಧಾದಿ ದೋಷಗಳೆಲ್ಲ ನಾಶವಾಗುವುದಾದಲ್ಲಿ ಎಲ್ಲರೂ ಏಕೆ ಜ್ಞಾನ ಸಂಪಾದನೆಗಾಗಿ ಪ್ರಯತ್ನಿಸುತ್ತಿಲ್ಲ ? ಜ್ಞಾನ ಸಂಪಾದನೆಯ ಮಾರ್ಗವನ್ನು ಬಿಟ್ಟು ಮನಸ್ಸಿನ ಅದಮ್ಯ ಅಭಿಲಾಷೆಯನ್ನು ಈಡೇರಿಸು ವುದಕ್ಕಾಗಿ, ತಲೆಮೇಲೆ ಬೆಂಕಿ ಬಿದ್ದಂತೆ, ಊರೆಲ್ಲ ಸುತ್ತಾಡಿ ಏಕೆ ಕಷ್ಟಪಡುತ್ತಾರೆ ? ಈ ಪ್ರಶ್ನೆಗೆ ಮುಂದಿನ ಮೂರು ಶ್ಲೋಕಗಳು ಉತ್ತರವನ್ನು ಕೊಡುತ್ತವೆ. ಜ್ಞಾನ ಸಂಪಾದನೆ ಸುಲಭವಲ್ಲ. ಉಪವಾಸವಿದ್ದು ಇಂದ್ರಿಯಗಳನ್ನು ಗೆಲ್ಲಬೇಕು. ಅದರಿಂದ ಜ್ಞಾನವನ್ನು ಗಳಿಸಬೇಕು. ಹೀಗೆ ಜ್ಞಾನ ಸಂಪಾದನೆಯು ಕಷ್ಟಸಾಧ್ಯ , ಎಂದು ಮುಂದಿನ ಮೂರು ಶ್ಲೋಕಗಳಲ್ಲಿ ಹೇಳಲಾಗಿದೆ.

ಮೂರು ಶ್ಲೋಕಗಳಲ್ಲಿ ಮೊದಲನೆಯದಾದ ಈ ಶ್ಲೋಕದಲ್ಲಿ ಇಂದ್ರಿಯಜಯವನ್ನು ಹೇಳಲಾಗಿದೆ. 'ನಿರಾಹಾರನಾದ ವ್ಯಕ್ತಿಯ' ಎಂದು '**ನಿರಾಹಾರಸ್ಯ ದೇಹಿನಃ**' ಎಂಬ ಪದಗಳ ಅರ್ಥ. ಇಲ್ಲಿ ನಿರಾಹಾರಸ್ಯ ಎಂಬ ವಿಶೇಷಣವು ಇಂದ್ರಿಯಜಯಕ್ಕೆ ಕಾರಣವನ್ನು ಸೂಚಿಸುತ್ತದೆ. ಶ್ಲೋಕದ '**ವಿಷಯಾಃ**' ಎಂಬ ಪದಕ್ಕೆ 'ಇಂದ್ರಿಯಗಳಲ್ಲಿರುವ ರೂಪರಸಾದಿ ವಿಷಯಭೋಗಶಕ್ತಿ'

ಎಂದು ಅರ್ಥವನ್ನು ಮಾಡಬೇಕು. ಒಟ್ಟಿನಲ್ಲಿ , ನಿರಾಹಾರದಿಂದ ಇಂದ್ರಿಯಗಳಲ್ಲಿರುವ ವಿಷಯಭೋಗ ಶಕ್ತಿಯು ಕುಂದುತ್ತದೆ, ಎಂದರ್ಥವಾಗುತ್ತದೆ.

**ರಸವರ್ಜಂ** = ರಸವನ್ನು ಬಿಟ್ಟು , ರಸ ಎಂದರೆ ಆಸೆ. ಅಲ್ಲಿಗೆ **ರಸವರ್ಜಂ** ಎಂದರೆ ಮನಸ್ಸಿನಲ್ಲಿರುವ ವಿಷಯಾಸಕ್ತಿಯನ್ನು ಹೊರತಾಗಿ ಎಂದು ಅರ್ಥವಾಗುತ್ತದೆ. ಒಟ್ಟು ಭಾವ- ನಿರಾಹಾರದಿಂದ ಇಂದ್ರಿಯಗಳ ಶಕ್ತಿಯು ಕುಂದಿದರೂ ಮನಸ್ಸಿನಲ್ಲಿರುವ ವಿಷಯಾಸಕ್ತಿ ಕಡಿಮೆಯಾಗುವುದಿಲ್ಲ ಎಂದಾಗುತ್ತದೆ.

**ರಸೋಽಪಿ**= ಅಂತಹ ವಿಷಯಾಭಿಲಾಷೆಯೂ, **ಅಸ್ಯ**= ಸಾಧಕಜೀವಾತ್ಮನಿಗೆ, ಪರಮಾತ್ಮದರ್ಶನದಿಂದ ನಾಶವಾಗುತ್ತದೆ. ಒಟ್ಟಿನಲ್ಲಿ ಮಾನಸಿಕ ವಿಷಯಾಭಿಲಾಷೆಯು ನಿರಾಹಾರದಿಂದ ಹೋಗುವುದಿಲ್ಲ ; ಪರಮಾತ್ಮದರ್ಶನದಿಂದಲೇ ಅದು ಹೋಗುತ್ತದೆ, ಎಂದರ್ಥ.

**ಯದ್ವಾ , ರಸೇತರೇ ರೂಪಗಂಧಸ್ಪರ್ಶಶಬ್ದಾಃ ನಿವರ್ತಂತೇ । ಅತ್ರಾಪಿ ವಿಷಯಪದೇನ ಇಂದ್ರಿಯಾಣಾಂ ತದ್ಭೋಗಶಕ್ತ್ಯಾದಯೋ ಲಕ್ಷ್ಯಂತೇ । ಚಕ್ಷುರಾದೀಂದ್ರಿಯಾಣಾಂ ರೂಪಾದಿವಿಷಯಭೋಗಶಕ್ತಯೋ, ಮನಸಃ ತದಾ- ಕಾಂಕ್ಷಾಶ್ಚ ನಿವರ್ತಂತೇ ಇತ್ಯರ್ಥಃ । ರಸವರ್ಜಂ- ರಸಶಬ್ದಃ ಪ್ರಾಗ್ವಲ್ಲಾಕ್ಷಣಿಕಃ । ರಸನೇಂದ್ರಿಯಸ್ಯ ರಸಭೋಗಶಕ್ತಿವರ್ಜಂ, ಮಾನಸಿಕರಸಾಕಾಂಕ್ಷಾವರ್ಜಮಿತಿ ರಸವಿಷಯಕಮನೋಗತಾಕಾಂಕ್ಷಾ ರಸನೇಂದ್ರಿಯಗತರಸಭೋಗಶಕ್ತಿಶ್ಚ ನಿರಾ- ಹಾರತ್ವೇನ ಹೇತುನಾ ನ ನಿವರ್ತತ ಇತ್ಯರ್ಥಃ ।**

**ತದ್ದ್ವಯಂ ಕದಾ ನಿವರ್ತತ ಇತ್ಯತ ಉಕ್ತಮ್- ರಸೋಽಪೀತಿ ॥ ಅಸ್ಯ= ದೇಹಿನಃ, ರಸಃ= ಮಾನಸಿಕೋ ರಸವಿಷಯಕೋ ರಾಗಃ, ರಸನೇಂದ್ರಿಯಸ್ಯ ತದ್ಭೋಗಶಕ್ತಿಶ್ಚ ಪರಂ ದೃಷ್ಟ್ವಾ ನಿವರ್ತತೇ । ಅಚೇತನೇ ಚೇತನವದ್ ಉಪ- ಚಾರಾತ್ 'ರಸಃ ಪರಂ ದೃಷ್ಟ್ವಾ ನಿವರ್ತತ' ಇತ್ಯುಕ್ತಮಿತಿ ಜ್ಞೇಯಮ್ ।**

**ಅನುವಾದ** – ಅಥವಾ ಹೀಗೆ ಅರ್ಥ ಹೇಳಬಹುದು – **'ರಸವರ್ಜಂ'** ಎಂದರೆ ರಸವನ್ನು ಹೊರತಾದ ರೂಪ, ಗಂಧ, ಸ್ಪರ್ಶ, ಶಬ್ದಗಳು ಉಪವಾಸದಿಂದ ನಿವೃತ್ತಿಯಾಗುತ್ತವೆ. ಈ ಅರ್ಥ ಮಾಡುವಾಗಲೂ ಹಿಂದಿನಂತೆಯೇ ವಿಷಯವಾಚಕಗಳಾದ ರಸಾದಿ ಶಬ್ದಗಳಿಗೆ ಇಂದ್ರಿಯಗಳಲ್ಲಿ ಇರುವ ರಸಾದಿ ಭೋಗ ಶಕ್ತಿ ಎಂದೇ ಅರ್ಥ. ಒಟ್ಟಿನಲ್ಲಿ ಹೀಗರ್ಥವಾಯಿತು– ಉಪವಾಸದಿಂದ ಕಣ್ಣು, ಕಿವಿ, ಮೂಗು ಮತ್ತು ತ್ವಗಿಂದ್ರಿಯಗಳ , ತಮ್ಮ ರೂಪಾದಿ ವಿಷಯಗಳ ಭೋಗಶಕ್ತಿ ಮತ್ತು

ಮನಸ್ಸಿನಲ್ಲಿರುವ ಅವುಗಳ ಅಭಿಲಾಷೆ ನಿವೃತ್ತಿಹೊಂದುತ್ತದೆ. ಆದರೆ, '**ರಜವರ್ಜಂ**'. ಇಲ್ಲೂ ರಸಶಬ್ದಕ್ಕೆ ನಾಲಿಗೆಯ ಶಕ್ತಿ ಮತ್ತು ಮನಸ್ಸಿನಲ್ಲಿರುವ ರುಚಿಯ ಅಭಿಲಾಷೆ ಎಂದರ್ಥ. ನಾಲಿಗೆಯಲ್ಲಿರುವ ರಸಭೋಗಶಕ್ತಿ ಹಾಗೂ ಮನಸ್ಸಿನಲ್ಲಿರುವ ರಸಾಕಾಂಕ್ಷೆ ಇವೆರಡೂ ಉಪವಾಸದಿಂದ ನಿವೃತ್ತಿಯಾಗುವುದಿಲ್ಲ.

ಇವೆರಡು ಯಾವಾಗ ನಿವೃತ್ತಿಯಾಗುತ್ತವೆ ಎಂಬುದನ್ನು '**ರಸೋಽಪ್ಯಸ್ಯ**' ಎಂಬ ಉತ್ತರಾರ್ಧ ತಿಳಿಸುತ್ತದೆ. **ಅಸ್ಯ**= ಸಾಧಕನಾದ ವ್ಯಕ್ತಿಯ **ರಸೋಽಪಿ**= ಮಾನಸಿಕವಾದ ರಸಾಭಿಲಾಷೆ, ನಾಲಿಗೆಯ ರಸಭೋಗಶಕ್ತಿ ಇವೆರಡೂ ಪರಮಾತ್ಮನ ದರ್ಶನದಿಂದ ನಾಶವಾಗುತ್ತವೆ.

ಇಲ್ಲಿ ಅಚೇತನವಾದ ವಸ್ತುವನ್ನು ಚೇತನದಂತೆ ಪರಿಗಣಿಸಿ '**ರಸಃ ನಿವರ್ತತೇ**' ಎಂದು ಹೇಳಲಾಗಿದೆ.

**ವಿವರಣೆ** – ಈ ಶ್ಲೋಕಕ್ಕೆ ಭಾಷ್ಯದಲ್ಲಿ ಎರಡು ಅರ್ಥಗಳನ್ನು ಹೇಳಲಾಗಿದೆ. ಅವೆರಡನ್ನೂ ರಾಯರು ಸಂಗ್ರಹಿಸಿದ್ದಾರೆ .

**ಮೊದಲ ಅರ್ಥ** — ಉಪವಾಸದಿಂದ ಪಂಚ ಜ್ಞಾನೇಂದ್ರಿಯಗಳ ಭೋಗಶಕ್ತಿ ಕುಂದುತ್ತದೆ. ಆದರೆ ಮನಸ್ಸಿನಲ್ಲಿ ವಿಷಯ ವಸ್ತುಗಳ ಆಸಕ್ತಿ ಕಡಿಮೆಯಾಗುವುದಿಲ್ಲ . ಅದು ಪರಮಾತ್ಮನ ದರ್ಶನದಿಂದಲೇ ತಣಿಯುವುದು.

**ಎರಡನೆಯ ಅರ್ಥ** — ಕಣ್ಣು ಮೊದಲಾದ ನಾಲ್ಕು ಇಂದ್ರಿಯಗಳ ಭೋಗಶಕ್ತಿ ಮಾತ್ರವೇ ಉಪವಾಸದಿಂದ ಕ್ಷೀಣವಾಗುತ್ತದೆ. ನಾಲಿಗೆಯ ಭೋಗ ಶಕ್ತಿ ಹಾಗೇ ಇರುತ್ತದೆ. ಭಗವಂತನ ದರ್ಶನದಿಂದ ಮನಸ್ಸಿನ ಆಸೆಯ ಜೊತೆ ನಾಲಿಗೆಯ ಭೋಗ ಶಕ್ತಿಯೂ ಕಡಿಮೆಯಾಗುತ್ತದೆ .

**ಅಯಮರ್ಥಃ । ಯದಾ ಬಾಹ್ಯೇಂದ್ರಿಯಾಣಿ ವಿಷಯಸನ್ನಿಧಾನೇಽಪಿ ನ ತೈಃ ಸನ್ನಿಕೃಷ್ಯಂತೇ , ಸನ್ನಿಕೃಷ್ಟಾನ್ಯಪಿ [1]ಮನಸ್ತದಾಭಿಮುಖ್ಯೇನ ನಾಹರಂತಿ, ಆಹೃತೇಽಪಿ ಮನಸಿ ನ ವಿಷಯರಾಗೋ ಜಾಯತೇ, ತದಾ ನ ಆತ್ಮನಃ ಕ್ಷೋಭೋ ಭವತಿ ಇತ್ಯೇಷ ಇಂದ್ರಿಯಜಯಃ । ಸೋಽಯಂ ಸಂಗ್ರಹೇಣ ದ್ವೇಧಾ ಭವತಿ । ಬಾಹ್ಯೇಂದ್ರಿಯಾಣಾಂ ಶಕ್ತಿಕ್ಷಯಾನ್ಮನಸೋ ರಾಗಕ್ಷಯಾಚ್ಚ । ಏತದ್ ದ್ವಯಂ ಚ ಜಿಜ್ಞಾಸೋರ್ನಿರಾಹಾರತ್ವೇನ, ಜ್ಞಾನಿನೋ ಬ್ರಹ್ಮದರ್ಶನೇನ ಭವತೀತ್ಯೇವ-ಮಿಂದ್ರಿಯಜಯಸ್ಯ ಮಹಾಪ್ರಯತ್ನಸಾಧ್ಯತ್ವಮಿತಿ ॥ 59 ॥**

**ಅನುವಾದ** - ಒಟ್ಟು ಗೀತೆಯ ಅಭಿಪ್ರಾಯ ಇದು – ನಮ್ಮ ಬಾಹ್ಯೇಂದ್ರಿಯಗಳು, ಅವುಗಳು ಆಸ್ವಾದಿಸುವ ಭೋಗವಸ್ತುಗಳು ಎದುರುಗಡೆ ಇದ್ದಾಗಲೂ ಅವುಗಳೊಂದಿಗೆ ಸಂಪರ್ಕವನ್ನೇ ಮಾಡದಿರಬೇಕು. ಇಂದ್ರಿಯಗಳು ಅವುಗಳೊಂದಿಗೆ ಸಂಪರ್ಕಪಡೆದರೂ

1. ಮನಸ್ತದಾಭಿಮುಖ್ಯೇನ ನ ಹರಂತಿ ಅಪಹೃತೇಽಪಿ

ಮನಸ್ಸನ್ನು ಅವುಗಳೆಡೆಗೆ ಸೆಳೆಯಬಾರದು. ಮನಸ್ಸು ಅಭಿಮುಖವಾದರೂ ಮನಸ್ಸಿನಲ್ಲಿ ಅವುಗಳ ಬಗ್ಗೆ ಉತ್ಕಟವಾದ ಅಭಿಲಾಷೆ ಬರಬಾರದು. ಹೀಗಾದಾಗ ಮಾತ್ರ ವಿಷಯ ಸಂಪರ್ಕದಿಂದ ಆತ್ಮನಿಗೆ ಕ್ಷೋಭೆ ಉಂಟಾಗುವುದಿಲ್ಲ . ಈ ಸ್ಥಿತಿಯನ್ನು ಎರಡು ರೀತಿಯಲ್ಲಿ ತಲುಪಬಹುದು. ಒಂದು, ಬಾಹ್ಯೇಂದ್ರಿಯಗಳಲ್ಲಿ ಭೋಗ ಶಕ್ತಿಯು ಕುಂದುವುದರಿಂದ. ಎರಡು, ಮನಸ್ಸಿನಲ್ಲಿ ವಿಷಯಾಭಿಲಾಷೆ ನಿವೃತ್ತಿಯಾಗುವುದರಿಂದ. ಇವೆರಡೂ ಸಾಧಕನಿಗೆ ಉಪವಾಸದಿಂದ , ಜ್ಞಾನಿಗೆ ಬ್ರಹ್ಮದರ್ಶನದಿಂದ ಮಾತ್ರ ಸಾಧ್ಯವಾಗುತ್ತವೆ.

ಹೀಗೆ ಇಂದ್ರಿಯ ಜಯವು ಮಹಾಪ್ರಯತ್ನ ಸಾಧ್ಯವಾದುದರಿಂದ ಎಲ್ಲರೂ ಜ್ಞಾನ-ಸಾಧನಕ್ಕಾಗಿ ಪ್ರಯತ್ನಿಸಲು ಆಗುವುದಿಲ್ಲ. ॥ 59 ॥

**ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥ 60 ॥**

**ಅರ್ಥ** - ಇಂದ್ರಿಯಗಳು ಆತ್ಮನಿಗೆ ಕ್ಷೋಭೆಯನ್ನು ಉಂಟುಮಾಡುವ ಸ್ವಭಾವದವುಗಳು. ಪರೋಕ್ಷಜ್ಞಾನಿಯು ಪ್ರಯತ್ನಿಸಿದರೂ ಅವುಗಳು ಅವನ ಮನಸ್ಸನ್ನು ವಿಷಯಗಳ ಕಡೆಗೆ ಸೆಳೆದು ಅವುಗಳ ಬಗ್ಗೆ ಮನಸ್ಸಿಗೆ ಅಭಿಲಾಷೆ ಮೂಡುವಂತೆ ಮಾಡುತ್ತವೆ.

**ನನ್ವಿಂದ್ರಿಯಜಯಾರ್ಥಂ ಕಿಂ ನಿರಾಹಾರತ್ವರೂಪಮಹಾಪ್ರಯತ್ನೇನ ? ಪ್ರತ್ಯಾಹಾರಾದಿ ಸಾಧಾರಣಯತ್ನೇನಾಪಿ ತತ್ಸಂಭವಾತ್ । ತಥಾ, ಕಿಂ ಬ್ರಹ್ಮಾಪರೋಕ್ಷಜ್ಞಾನೇನ ? ನಿತ್ಯಾನಿತ್ಯವಿವೇಕಜ್ಞಾನೇನಾಪಿ ರಾಗನಿವೃತ್ತ್ಯುಪ-ಪತ್ತೇಃ ಇತ್ಯತ ಆಹ - ಯತತೋ ಹ್ಯಪೀತಿ ॥**

**ವಿಪಶ್ಚಿತಃ= ಪರೋಕ್ಷಜ್ಞಾನಿನಃ, ಯತತೋऽಪಿ= ಸಾಧಾರಣಪ್ರಯತ್ನ-ವತೋऽಪಿ, ಪುರುಷಸ್ಯ= ದೇಹಾಭಿಮಾನಿನಃ, ಇಂದ್ರಿಯಾಣಿ, ಮನಃ ಪ್ರಸಭಂ= ಬಲಾತ್ ಹರಂತಿ = ಸ್ವಯಂ ವಿಷಯಸನ್ನಿಕೃಷ್ಟಾನಿ ಸಂತಿ ತದಭಿಮುಖಂ ಕೃತ್ವಾ , ತದ್ರಾಗೀಕುರ್ವಂತೀತ್ಯರ್ಥಃ । ತಾವತಾ ಆತ್ಮನಃ ಕಥಂ ಇಂದ್ರಿಯಾವಿಜಯ ಇತ್ಯತ ಆಹ– ಪ್ರಮಾಥೀನೀತಿ ॥ ಪ್ರಮಥನಶೀಲಾನಿ ಪುರುಷಸ್ಯ ಕ್ಷೋಭಣಶೀಲಾನಿ= ನ ತೇನ ತಾನಿ ಜಿತಾನಿ । ಯೋ ಹಿ ಯಂ ವ್ಯಾಕುಲಂ ನ ಕರೋತಿ ಸ ತೇನ ವಿಜಿತ ಇತ್ಯುಚ್ಯತೇ । ಅತೋ ಮಹಾಪ್ರಯತ್ನಃ ಪ್ರಾಗುಕ್ತದಿಶಾ ಕಾರ್ಯ ಇತಿ ॥ 60 ॥**

**ಅನುವಾದ** - ಇಂದ್ರಿಯಜಯಕ್ಕಾಗಿ ಉಪವಾಸದಂತಹ ಪ್ರಯಾಸದ ಕೆಲಸವೇಕೆ ?

ಯೋಗ ಶಾಸ್ತ್ರದಲ್ಲಿ ಹೇಳಿರುವ ಪ್ರತ್ಯಾಹಾರಾದಿ ಸಾಮಾನ್ಯ ಯತ್ನದಿಂದಲೇ ಇಂದ್ರಿಯಗಳನ್ನು ಜಯಿಸಬಹುದು. ಅದರಂತೆ ಮನಸ್ಸಿನಲ್ಲಿರುವ ವಿಷಯಾಕಾಂಕ್ಷೆಯ ನಿವೃತ್ತಿಗಾಗಿ ಬ್ರಹ್ಮಾಪರೋಕ್ಷದ ಅಗತ್ಯವೂ ಇಲ್ಲ . ಈ ಪ್ರಪಂಚ ನಶ್ವರ, ಮೋಕ್ಷ ಶಾಶ್ವತ ಎಂಬ ವಿವೇಕ ದಿಂದಲೇ ವಿಷಯಾಭಿಲಾಷೆಯನ್ನು ಕಳೆದುಕೊಳ್ಳಬಹುದು . ಈ ಆಕ್ಷೇಪದ ಪರಿಹಾರಕ್ಕಾಗಿ **'ಯತತೋ ಹ್ಯಪಿ'** ಎಂಬ ಶ್ಲೋಕವಿದೆ.

**ವಿಪಶ್ಚಿತಃ**= ಪರೋಕ್ಷಜ್ಞಾನಿಯಾಗಿರುವ, **ಯತತೋಽಪಿ**= ಪ್ರತ್ಯಾಹಾರಾದಿ ಸಾಮಾನ್ಯ ಪ್ರಯತ್ನವನ್ನು ಮಾಡುವ **ಪುರುಷಸ್ಯ**= ದೇಹದ ಮೇಲೆ ಅಭಿಮಾನವಿರುವ ಸಾಧಕನ ಇಂದ್ರಿಯಗಳು , ಮನಸ್ಸನ್ನು , **ಪ್ರಸಭಂ**= ಬಲಾತ್ಕಾರವಾಗಿ , **ಹರಂತಿ**= ತಾವು ವಿಷಯಗಳ ಕಡೆ ಹರಿದು ಮನಸ್ಸನ್ನೂ ಆ ಕಡೆ ಸೆಳೆದು ಅದಕ್ಕೆ ವಿಷಯದಲ್ಲಿ ಅಭಿಲಾಷೆ ಹುಟ್ಟುವಂತೆ ಮಾಡುತ್ತವೆ.

ಇಂದ್ರಿಯಗಳು ಹೀಗಾದರೆ , ಅದರಿಂದ ಆತ್ಮನಿಗೆ ಅದೇಕೆ ಸೋಲು ? ಅದಕ್ಕೆ ಉತ್ತರ- **ಪ್ರಮಾಥೀನಿ.** ಇಂದ್ರಿಯಗಳು ಆತ್ಮನಿಗೆ ಕ್ಷೋಭೆಯನ್ನು ಉಂಟು ಮಾಡುವವುಗಳು. ಆದ್ದರಿಂದಲೇ ಅವುಗಳನ್ನು ಆತ್ಮನು ಗೆಲ್ಲಲಾಗಲಿಲ್ಲ, ಯಾರಿಂದ ಯಾರು ದುಃಖಕ್ಕೀಡಾಗುವು- ದಿಲ್ಲವೋ ಅಂತಹವರನ್ನೇ ಅವನು ಗೆದ್ದ ಎಂದು ಹೇಳಬಹುದು. ಇಂದ್ರಿಯಗಳಿಂದ ಆತ್ಮನು ತೊಂದರೆಗೀಡಾದರೆ ಅವುಗಳನ್ನು ಹೇಗೆ ತಾನೇ ಗೆದ್ದಂತಾದೀತು ? ಆದ್ದರಿಂದ ಇಂದ್ರಿಯ ಜಯಕ್ಕೆ ಸಾಮಾನ್ಯ ಪ್ರಯತ್ನ ಸಾಲದು ; ಹಿಂದೆ ಹೇಳಿದಂತೆ ಅತಿಪ್ರಯತ್ನವೇ ಬೇಕು. ॥ 60 ॥

**ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।**
**ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ 61 ॥**

**ಅರ್ಥ**- ಇಂತಹ ಇಂದ್ರಿಯಗಳನ್ನೆಲ್ಲ ನಿಯಂತ್ರಿಸಿ, ' ನಾನೇ (ಶ್ರೀಕೃಷ್ಣನೇ) ಸರ್ವಶ್ರೇಷ್ಠ' ಎಂಬ ಭಾವನೆಯಿಂದ ನನ್ನಲ್ಲಿ ಧ್ಯಾನಾಸಕ್ತನಾಗಬೇಕು . ಈ ಮಹಾಪ್ರಯತ್ನದಿಂದ ಯಾರ ಅಧೀನ- ದಲ್ಲಿ ಇಂದ್ರಿಯಗಳು ಬಂದಿರುತ್ತವೋ ಅಂತಹವನಿಗೆ ಮಾತ್ರ ಅಪರೋಕ್ಷಜ್ಞಾನವು ಸಿದ್ಧಿಸುತ್ತದೆ.

**ಯದಿ ಸಾಧಾರಣಯತ್ನವಿವೇಕಜ್ಞಾನಾಭ್ಯಾಂ ಇಂದ್ರಿಯಾಣಿ ನ ಜೀಯಂತೇ, ತರ್ಹಿ ಅಶಕ್ಯಾನ್ಯೇವ ತಾನಿ ಜೇತುಮ್ । ನಿರಾಹಾರತ್ವೇ ದೇಹಾವಸ್ಥಿತ್ಯಸಂಭ- ವಾತ್ । ಇಂದ್ರಿಯಜಯಸ್ಯ ಬ್ರಹ್ಮದೃಷ್ಟಿಸಾಧ್ಯತಯಾಽಭಿಮತತ್ವೇನ ತಸ್ಯ ತದ್ಧೇತುತ್ವೇ ವಿವಕ್ಷಿತೇ ಸತಿ ಅನ್ಯೋನ್ಯಾಶ್ರಯಪ್ರಸಂಗಾದಿತ್ಯತ ಆಹ– ತಾನೀತಿ ॥**

**ತಾನೀಂದ್ರಿಯಾಣಿ ಸರ್ವಾಣಿ ಸಂಯಮ್ಯ = ವಿಷಯೇಭ್ಯ ಉಪಸಂಹೃತ್ಯ, ಮತ್ಪರಃ = ಅಹಮೇವ, ಭಗವಾನ್ ಕೃಷ್ಣ ಏವ, ಪರಃ = ಸರ್ವೋತ್ಕೃಷ್ಟೋ ಯಸ್ಯ ಸ ಮತ್ಪರಃ । ಭಗವಾನೇವ ಸರ್ವೋತ್ತಮ ಇತಿ ಜ್ಞಾತ್ವಾ । ಯುಕ್ತಃ । ಸಮಾಧ್ಯರ್ಥಸ್ಯ ಯುಜೇಃ ರೂಪಮ್ । ಭಗವತಿ ಮನೋ ಯುಂಜಾನ ಇತ್ಯರ್ಥಃ । ಆಸೀತ = ತಿಷ್ಠೇತ್ ।**

**ಅನುವಾದ** - ಸಾಮಾನ್ಯವಾದ ಪ್ರಯತ್ನ , ನಿತ್ಯಾನಿತ್ಯ ವಿವೇಕಗಳಿಂದ ಇಂದ್ರಿಯಗಳನ್ನು ಗೆಲ್ಲುವುದು ಅಸಾಧ್ಯವೆಂದಾದರೆ ಅವುಗಳನ್ನು ಗೆಲ್ಲಲೇ ಆಗದು. ಹಿಂದೆ ಹೇಳಿದಂತೆ ಉಪವಾಸ ಮಾಡಿ ಗೆಲ್ಲಬೇಕು. ನಿರಂತರ ಉಪವಾಸವಿದ್ದರೆ ದೇಹ ಉಳಿಯುವುದೇ ಕಷ್ಟ . ಇನ್ನೊಂದು ಉಪಾಯ ಭಗವಂತನ ಅಪರೋಕ್ಷ . ಅದು ಇಂದ್ರಿಯವನ್ನು ಗೆದ್ದರೆ ಮಾತ್ರ ಬರುವುದು. ಹೀಗೆ ಇಂದ್ರಿಯ ಜಯವಾದರೆ ಅಪರೋಕ್ಷ , ಅಪರೋಕ್ಷವಾದರೆ ಇಂದ್ರಿಯ ಜಯ , ಹಾಗಾಗಿ ಅನ್ಯೋನ್ಯಾಶ್ರಯ ದೋಷ. ಆದ್ದರಿಂದ ಇಂದ್ರಿಯಜಯದ ಆಸೆಯನ್ನೇ ಬಿಡಬೇಕೇ ? ಈ ಪ್ರಶ್ನೆಗೆ– '**ತಾನಿ**' ಇತ್ಯಾದಿ ಮುಂದಿನ ಶ್ಲೋಕ ಉತ್ತರ.

**ತಾನಿ** = ಆ ಎಲ್ಲ ಇಂದ್ರಿಯಗಳನ್ನೂ , **ಸಂಯಮ್ಯ** = ವಿಷಯಗಳ ಕಡೆಯಿಂದ ಹಿಂದಕ್ಕೆ ಸೆಳೆದು , **ಮತ್ಪರಃ- ಮತ್** = ನಾನೇ ಅಂದರೆ ಶ್ರೀಕೃಷ್ಣನೇ, **ಪರಃ** = ಸರ್ವಶ್ರೇಷ್ಠನು ಎಂಬ ಅನುಸಂಧಾನವುಳ್ಳವನಾಗಿ ಅರ್ಥಾತ್ ಪರಮಾತ್ಮನೇ ಸರ್ವೋತ್ತಮ ಎಂದು ತಿಳಿದು, **ಯುಕ್ತಃ** = ಪರಮಾತ್ಮನಲ್ಲಿ ಮನಸ್ಸನ್ನು ಕೇಂದ್ರೀಕರಿಸಿ, **ಆಸೀತ** = ಇರಬೇಕು. ಇಲ್ಲಿ **ಯುಕ್ತಃ** ಎಂಬ ಶಬ್ದದ ಮೂಲಧಾತು 'ಯುಜಿರ್ ಯೋಗೇ' ಅಲ್ಲ ,'ಯುಜ ಸಮಾಧೌ' ಎಂದು . ಅದಕ್ಕೆ ಧ್ಯಾನ ಎಂದು ಅರ್ಥ. ಆದ್ದರಿಂದ **ಯುಕ್ತಃ** ಎಂದರೆ ಧ್ಯಾನಾಸಕ್ತನಾದವನು.

**ಅಯಂ ಭಾವಃ । ಯದ್ಯಪಿ ಇಂದ್ರಿಯಜಯೇ ಪರೋಕ್ತಃ ಪ್ರತ್ಯಾಹಾರಾದಿಃ ಸಾಧಾರಣಪ್ರಯತ್ನೋ ನ ಸಾಧನಮ್ । ನಾಪಿ ನಿರಾಹಾರತ್ವಾದಿಕಂ ಪ್ರಾಗುಕ್ತ-ಮಶಕ್ಯಮ್ । ತಥಾಽಪಿ ತತ್ಪ್ರತಿನಿಧಿನಾ ಮಹಾಪ್ರಯತ್ನೇನ ಜೇಯಾನಿ । ತತ್ರ ಭಗವತಃ ಸರ್ವೋತ್ತಮತ್ವಜ್ಞಾನಪೂರ್ವಂ ತಸ್ಮಿನ್ನೇವ ನಿರಂತರಂ ಮನೋ-ಯೋಜನಂ ಇಂದ್ರಿಯಜಯೇ ಮುಖ್ಯಂ ಸಾಧನಮ್ । ನಿರಾಹಾರತ್ವಾದಿಕಂ ತು ವಸ್ತುಗತಿಪ್ರದರ್ಶನಾರ್ಥಮೇವ ಉಕ್ತಮಿತಿ ।**

**ಅನುವಾದ** - ಒಟ್ಟಿನ ಅಭಿಪ್ರಾಯ ಇದು – ಪ್ರತ್ಯಾಹಾರಾದಿಸಾಧಾರಣ ಪ್ರಯತ್ನದಿಂದ ಇಂದ್ರಿಯಗಳನ್ನು ಗೆಲ್ಲುವುದು ಸಾಧ್ಯವಿಲ್ಲ. ಹಿಂದೆ ಹೇಳಿದಂತೆ ನಿರಾಹಾರವಿದ್ದರೆ ದೇಹವೇ

ಉಳಿಯಲಿಕ್ಕಿಲ್ಲ. ಆದರೂ ಉಪವಾಸಕ್ಕೆ ಪ್ರತಿನಿಧಿಯಾದ ಅತಿಪ್ರಯತ್ನದಿಂದ ಇಂದ್ರಿಯಜಯ ಸಾಧ್ಯವಿದೆ. 'ಪರಮಾತ್ಮನೇ ಸರ್ವೋತ್ತಮ' ಎಂದು ತಿಳಿದು ಅವನಲ್ಲೇ ಮನಸ್ಸನ್ನು ನಿರಂತರ ಕೇಂದ್ರೀಕರಿಸುವುದು ಇಂದ್ರಿಯಜಯಕ್ಕೆ ಪ್ರಧಾನವಾದ ಕಾರಣ. ನಿರಾಹಾರತ್ವ, ಅಪರೋಕ್ಷ ಜ್ಞಾನ ಇವುಗಳಿಂದಲೂ ಇಂದ್ರಿಯ ಜಯವು ಆಗುತ್ತದೆ ಎಂದು ವಸ್ತುಸ್ಥಿತಿಯನ್ನಷ್ಟೇ ಹಿಂದೆ ಹೇಳಲಾಗಿದೆ . ಹೊರತು , ಅದಿದ್ದರೆ ಮಾತ್ರ ಇಂದ್ರಿಯ ಜಯ ಎಂದು ಅಭಿಪ್ರಾಯವಲ್ಲ. ಹಿಂದೆ ಹೇಳಿದಂತೆ ಅದು ದುಃಸಾಧ್ಯವಾದ ಕೆಲಸವೇ ಸರಿ.

**ಯದರ್ಥಂ ಸಾರ್ಧಶ್ಲೋಕದ್ವಯೇನ ಇಂದ್ರಿಯಜಯರೂಪೋಪೋದ್ಘಾತ ಉಕ್ತಃ , ಅಥ ಇದಾನೀಂ ಮಹಾಪ್ರಯತ್ನೇನ ಸಾಧಿತೇಂದ್ರಿಯಜಯಸ್ಯ ಜ್ಞಾನಸಿದ್ಧಿಃ ಫಲಮಿತ್ಯಾಹ– ವಶೇ ಹೀತಿ ॥ ಯಸ್ಯ ವಶೇ ಇಂದ್ರಿಯಾಣಿ ವರ್ತಂತೇ ತಸ್ಯ ಪ್ರಜ್ಞಾ ಪ್ರತಿಷ್ಠಿತೇತಿ ।**

**ಯತ ಏವಂ ಮಹಾಯಾಸಸಾಧ್ಯೇಂದ್ರಿಯಜಯಫಲಂ ಜ್ಞಾನಮತ ಏವಾಯಾಸಭೀರುರ್ಜನೋ ನ ತತ್ಸಾಧಯತಿ, ನ ತು ಜ್ಞಾನಸ್ಯೋಕ್ತ-ಲಕ್ಷಣಾಭಾವಾದಿತಿ ಶ್ಲೋಕತ್ರಯತಾತ್ಪರ್ಯಾರ್ಥಃ । ಅತ್ರ ಉಕ್ತಮಿಂದ್ರಿಯ-ಜಯಸ್ಯ ಜ್ಞಾನರೂಪಂ ಫಲಂ ನ ಸಾಕ್ಷಾದಿತಿ 'ರಾಗದ್ವೇಷವಿಯುಕ್ತೈಃ ' ಇತ್ಯಾದೌ ವ್ಯಕ್ತೀಭವಿಷ್ಯತೀತಿ ಜ್ಞೇಯಮ್ ॥ 61 ॥**

**ಅನುವಾದ** - ಈ ಹಿಂದಿನ ಒಂದುವರೆ ಶ್ಲೋಕದಲ್ಲಿ ಇಂದ್ರಿಯಜಯವನ್ನು ಪೀಠಿಕಾರೂಪವಾಗಿ ಹೇಳಲಾಗಿದೆ. ಮುಂದಿನ ಅರ್ಧ ಶ್ಲೋಕದಲ್ಲಿ (ಶ್ಲೋಕ 61) ಅತಿ ಪ್ರಯತ್ನ ಮಾಡಿ ಇಂದ್ರಿಯಗಳನ್ನು ಜಯಿಸಿದವನಿಗೆ ಅಪರೋಕ್ಷಜ್ಞಾನರೂಪವಾದ ಫಲವು ಸಿದ್ಧಿಸುತ್ತದೆ ಎಂದು ಹೇಳಲಾಗಿದೆ.

ಯಾರ ಅಧೀನದಲ್ಲಿ ಇಂದ್ರಿಯಗಳು ಇರುತ್ತವೋ ಅವನಿಗೆ ಅಪರೋಕ್ಷವು ಸಿದ್ಧಿಸುತ್ತದೆ. ಇದು ಉತ್ತರಾರ್ಧದ ಭಾವ.

ಹೀಗೆ ಅಪರೋಕ್ಷಜ್ಞಾನವು ಅತಿಪ್ರಯಾಸಪಟ್ಟು ಇಂದ್ರಿಯಗಳನ್ನು ಗೆದ್ದರೆ ಮಾತ್ರ ಬರುತ್ತದೆ ಅದರಿಂದ ಪ್ರಯಾಸಕ್ಕೆ ಹಿಂಜರಿಯುವ ಜನರು ಇಂದ್ರಿಯಗಳನ್ನು ಗೆದ್ದು ಜ್ಞಾನವನ್ನು ಸಂಪಾದಿಸುವುದಿಲ್ಲ . ಅಂದಮಾತ್ರಕ್ಕೆ ಜ್ಞಾನದಿಂದ ಮನಸ್ಸಿನ ಕಾಮಾದಿ ದೋಷಗಳು ಪರಿಹಾರವಾಗುವುದಿಲ್ಲ ಎಂದು ತಿಳಿಯಬಾರದು. (59ನೇ ಶ್ಲೋಕದ ಆರಂಭದಲ್ಲಿ ಮಾಡಿರುವ ಆಕ್ಷೇಪಕ್ಕೆ ಇದು ಉತ್ತರ.) ಇದು ಮೂರು ಶ್ಲೋಕಗಳ (59,60,61) ತಾತ್ಪರ್ಯ.

ಈ ಶ್ಲೋಕದಲ್ಲಿ ಇಂದ್ರಿಯ ಜಯದಿಂದ ಅಪರೋಕ್ಷಜ್ಞಾನವು ಬರುತ್ತದೆ ಎನ್ನಲಾಗಿದ್ದರೂ, ಆ ಜ್ಞಾನವು ಇಂದ್ರಿಯಜಯ ಮಾತ್ರದಿಂದ ಬರುವುದಿಲ್ಲ. ಇಂದಿಯಗಳನ್ನು ಗೆದ್ದು 'ರಾಗ-ದ್ವೇಷವಿಯುಕ್ತೈಸ್ತು' (ಶ್ಲೋಕ - 64) ಇತ್ಯಾದಿ ಶ್ಲೋಕಗಳಲ್ಲಿ ಹೇಳಿದಂತೆ ನಡೆದರೆ ಮಾತ್ರ ಅಪರೋಕ್ಷ ಸಿದ್ಧಿಸುತ್ತದೆ ಎಂದು ತಿಳಿಯಬೇಕು .

**ವಿಷಯಪದಾರ್ಥಗಳ ಸಂಗ ಅನರ್ಥಸಾಧನ**

**ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।**
**ಸಂಗಾತ್ಸಂಜಾಯತೇ ಕಾಮಃ ಕಾಮಾತ್ ಕ್ರೋಧೋऽಭಿಜಾಯತೇ ॥ 62 ॥**

**ಕ್ರೋಧಾದ್ ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥ 63 ॥**

**ಅರ್ಥ** - ವಿಷಯ ವಸ್ತುಗಳನ್ನೇ ಧ್ಯಾನ ಮಾಡುವವನಿಗೆ ಅವುಗಳಲ್ಲೇ ಆಸಕ್ತಿಯು ಬೆಳೆಯುತ್ತದೆ. ಆಸಕ್ತಿಯಿಂದ ಅವುಗಳ ಕಾಮನೆ ಅಧಿಕಗೊಳ್ಳುತ್ತದೆ . ಕಾಮನೆಗೆ ತಡೆ ಬಂದಾಗ ಸಿಟ್ಟುಬರುತ್ತದೆ. ಸಿಟ್ಟಿನಿಂದಾಗಿ ಮಾಡಬಾರದ್ದನ್ನು ಮಾಡುವ ಮನಸ್ಸಾಗುತ್ತದೆ. ಇದರಿಂದ 'ಇಂತಹ ಕೆಟ್ಟಕೆಲಸ ಮಾಡಬಾರದು' ಎಂಬ ನಿಷೇಧವು ಸ್ಮರಣೆಗೇ ಬರುವುದಿಲ್ಲ. ಈ ವಿಸ್ಮೃತಿಯಿಂದ 'ಇದು ತಪ್ಪು 'ಎಂಬ ಪ್ರಜ್ಞೆಯು ನಾಶವಾಗುತ್ತದೆ. ಇದರಿಂದಾಗಿ ನಿಷಿದ್ಧವನ್ನು ಮಾಡಿ ನರಕಾದಿ ಅನರ್ಥಕ್ಕೆ ಈಡಾಗುತ್ತಾನೆ.

**'ಮತ್ಪರೋ ಯುಕ್ತ ಆಸೀತ' ಇತಿ ಹರಿಸರ್ವೋತ್ತಮತ್ವಜ್ಞಾನಪೂರ್ವಂ ತಸ್ಮಿನ್ನೇವ ಮನೋಯೋಜನಮಿಂದ್ರಿಯಜಯಸ್ಯ ಮುಖ್ಯಂ ಸಾಧನಮ್ । 'ರಾಗದ್ವೇಷವಿಯುಕ್ತೈಃ' ಇತಿ ವಕ್ಷ್ಯಮಾಣದಿಶಾ ರಾಗಾದಿಪರಿಹಾರೋऽಪ್ಯಪರಂ ಸಾಧನಮ್ । ತತ್ರ ರಾಗಾದೇರ್ಯತ್ಕಾರಣಂ, ಯಚ್ಚ ಫಲಂ, ತದುಭಯಜ್ಞಾನೇ ಸತಿ ತತ್ಪರಿತ್ಯಾಗೋ ಭವತಿ । ಅತಃ ತದುಪೋದ್ಘಾತತ್ವೇನ ತದುಭಯಮಾಹ-ಧ್ಯಾಯತ ಇತಿ ಶ್ಲೋಕದ್ವಯೇನ ॥**

**ಅನುವಾದ** - ಹಿಂದೆ 61ನೇ ಶ್ಲೋಕದಲ್ಲಿ '**ಯುಕ್ತ ಆಸೀತ ಮತ್ಪರಃ** ' ಎಂದು ಇಂದ್ರಿಯ ಜಯಕ್ಕೆ ಮುಖ್ಯವಾದ ಸಾಧನವನ್ನು ಹೇಳಲಾಗಿದೆ. 'ಹರಿಸರ್ವೋತ್ತಮತ್ವ- ಜ್ಞಾನಪೂರ್ವಕವಾಗಿ ಭಗವಂತನಲ್ಲೇ ಮನಸ್ಸನ್ನು ನೆಲೆಗೊಳಿಸುವುದರಿಂದ ಇಂದ್ರಿಯಗಳನ್ನು ಗೆಲ್ಲಬಹುದು 'ಎಂದು ಅದರ ಅರ್ಥ. ಇದರ ಜೊತೆಯಲ್ಲಿ ಮುಂದಿನ 64ನೆಯ ಶ್ಲೋಕದಲ್ಲಿ ರಾಗದ್ವೇಷರಹಿತವಾಗಿ

ಇಂದ್ರಿಯಗಳಿಂದ ವಿಷಯವಸ್ತುಗಳನ್ನು ಅನುಭವಿಸುತ್ತಿರಬೇಕು ಎಂಬ ಇನ್ನೊಂದು ಸಾಧನವನ್ನೂ ಹೇಳಲಾಗಿದೆ. ಅದಕ್ಕೆ ಪೂರಕವಾದ ಅಂಶವನ್ನು ಮುಂದಿನೆರಡು ಶ್ಲೋಕಗಳಲ್ಲಿ ಹೇಳಲಾಗಿದೆ. ಅದು ಹೀಗಿದೆ– ರಾಗದ್ವೇಷಗಳಿಗೆ ಕಾರಣವೇನು; ಅವುಗಳಿಂದಾಗುವ ಪರಿಣಾಮವಾದರೂ ಎಂತಹುದು ಎಂಬುದನ್ನು ಈ ಎರಡು ಶ್ಲೋಕಗಳಲ್ಲಿ ಹೇಳಲಾಗಿದೆ. ಇದರಿಂದ ರಾಗದ್ವೇಷಗಳನ್ನು ಪರಿತ್ಯಜಿಸುವುದು ಸುಲಭವಾಗುತ್ತದೆ. ಅದಕ್ಕಾಗಿ ಮುಂದಿನ ಶ್ಲೋಕಗಳಲ್ಲಿ ಈ ಎರಡಂಶಗಳನ್ನು ಉಪೋದ್ಘಾತವಾಗಿ ಹೇಳಲಾಗಿದೆ.

**ಯದ್ಯಪಿ 'ವೀತರಾಗಭಯಕ್ರೋಧ' ಇತಿ ರಾಗಾದಿರಾಹಿತ್ಯಂ ಜ್ಞಾನಿಲಕ್ಷಣ-ತ್ವೇನೋಕ್ತಮ್ । ತಥಾಽಪಿ ತಸ್ಯ ತತ್‌ಸಿದ್ಧಮ್ । ಜಿಜ್ಞಾಸುನಾ ಚ ಸಾಧ್ಯಮ್ । ಅತಃ ತತ್ಪರಿಹಾರಾಯ ತತ್ಕಾರಣಫಲಯೋರುಕ್ತಿರ್ನಾಯುಕ್ತೇತಿ ಜ್ಞೇಯಮ್ ।**

**ವಿಷಯಾನ್= ರೂಪಾದೀನ್ ಹಿತಬುದ್ಧ್ಯಾ ಧ್ಯಾಯತಃ ಪುಂಸಃ ತೇಷು= ವಿಷಯೇಷು ಸಂಗ ಆಸಕ್ತಿರ್ಭವತಿ । ಆಸಕ್ತ್ಯಾ ಚ ತೇಷು ಕಾಮಃ ಸಂಜಾಯತೇ = ಅಧಿಕೋ ಭವತಿ । ಕಾಮಾಚ್ಚ ಕೇನಚಿತ್ಪ್ರತಿಹತಾತ್ ಕ್ರೋಧೋ ಭವತಿ ॥ 62 ॥**

**ಅನುವಾದ** - 'ರಾಗ, ಭಯ, ಕ್ರೋಧ, ಇವುಗಳು ಇಲ್ಲದಿರುವುದು ಜ್ಞಾನಿಯ ಲಕ್ಷಣ' ಎಂದು 56ನೇ ಶ್ಲೋಕದಲ್ಲಿ ಹೇಳಲಾಗಿದೆ. ಆದರೂ, ಈ ಲಕ್ಷಣವು ಜ್ಞಾನಿಗೆ ಅನಾಯಾಸ ಸಿದ್ಧವಾಗಿರುತ್ತದೆ . ಸಾಧಕನು , ಪ್ರಯತ್ನಪೂರ್ವಕ ಈ ಸ್ಥಿತಿಯನ್ನು ತಲುಪಬೇಕು. ಹೀಗೆ , ಸಾಧಕನು ರಾಗ , ದ್ವೇಷ ಪರಿಹಾರಕ್ಕಾಗಿ ಪ್ರಯತ್ನಿಸಬೇಕಾಗಿರುವುದರಿಂದ ರಾಗದ್ವೇಷಗಳ ಕಾರಣವನ್ನೂ ಅವುಗಳ ಫಲವನ್ನೂ ಹೇಳುವುದು ಅಸಂಗತವಲ್ಲ.

**ವಿಷಯಾನ್**= ಕಣ್ಣು ಮುಂತಾದ ಐದು ಇಂದ್ರಿಯಗಳು ಗ್ರಹಿಸುವ ರೂಪರಸಾದಿಗಳನ್ನು, **ಧ್ಯಾಯತಃ** = ನನಗೆ ಅವೇ ಹಿತವಾಗಿವೆ ಎಂದು ಚಿಂತಿಸುವ ವ್ಯಕ್ತಿಗೆ , **ತೇಷು**= ಆ ವಿಷಯವಸ್ತುಗಳಲ್ಲಿ, **ಸಂಗಃ** = ಆಸಕ್ತಿಯು ಬೆಳೆಯುತ್ತದೆ. ಆಸಕ್ತಿಯಿಂದ ಅವುಗಳಲ್ಲಿ ಕಾಮವು, **ಸಂಜಾಯತೇ**= ಹೆಚ್ಚಾಗುತ್ತದೆ. ಅಂತಹ ಉತ್ಕಟಕಾಮವು ಯಾವುದೇ ಕಾರಣದಿಂದ ತಡೆಯಲ್ಪಟ್ಟಾಗ ಸಿಟ್ಟು ಬರುತ್ತದೆ.

**ಕಿಂಚ, ಕ್ರೋಧಾದ್ಭವತಿ ಸಮ್ಮೋಹಃ= ಅಕಾರ್ಯೇಚ್ಛಾ, ಪರವಿತ್ತಾಪಹರಣಾ-ದ್ಯಧರ್ಮೇ ಧರ್ಮಬುದ್ಧಿರಿತ್ಯಾದಿ ಮಿಥ್ಯಾಜ್ಞಾನಂ ವಾ । ಸಮ್ಮೋಹಾದುಕ್ತ-ದ್ವಿರೂಪಾತ್ ಸ್ಮೃತಿವಿಭ್ರಮಃ= ಕ್ರಮಾತ್ ಪ್ರತಿಷೇಧಾದಿಸ್ಮೃತಿನಾಶಃ, ಪರವಿತ್ತಾಪ-ಹರಣಾದೇರಧರ್ಮತ್ವಾದ್ಯಭಿಧಾಯಕಶ್ರುತ್ಯಾದ್ಯರ್ಥಸ್ಯ, ಪೂರ್ವಂ ಸ್ವಯಂ**

**ಜ್ಞಾತಸ್ಯಾಪಿ ಅನ್ಯಥಾ ಸ್ಮರಣಂ ವಾ । ಸ್ಮೃತಿಭ್ರಂಶಾದ್ ಬುದ್ಧಿನಾಶಃ, ಯೇನ , ಪೂರ್ವಂ ನಿರ್ಣೀತದೋಷಬುದ್ಧೇಃ ಸರ್ವಾತ್ಮನಾ ನಾಶೋ ಭವತಿ । ತನ್ನಾಶಾತ್ ತೇನ ಚ ಅಧರ್ಮಕರಣಾಚ್ಚ ಪ್ರಣಶ್ಯತಿ= ನರಕಾದ್ಯನರ್ಥಂ ಪ್ರಾಪ್ನೋತಿ ।**

**ಏತದುಕ್ತಂ ಭವತಿ ರಾಗದ್ವೇಷಯೋಃ ಪರಂಪರಯಾ ನರಕಾದ್ಯನರ್ಥ-ಪ್ರಾಪ್ತಿಃ ಫಲಮಿತಿ ಜ್ಞಾನೇನ ತತ್ಪರಿಜಿಹೀರ್ಷಾಯಾಂ, ವಿಷಯಧ್ಯಾನಂ ಪರಂಪರಯಾ ತತ್ಕಾರಣಮಿತಿ ಜ್ಞಾನೇನ ತದಕರಣಾತ್ ರಾಗದ್ವೇಷಯೋ-ರನುತ್ಪಾದ ಇತಿ ।। 63 ।।**

**ಅನುವಾದ** - ಅಲ್ಲದೆ, ಸಿಟ್ಟಿನಿಂದ **ಸಂಮೋಹಃ** = ನಿಷಿದ್ಧವಾದುದನ್ನು ಮಾಡಲು ಇಚ್ಛೆಯು ಉಂಟಾಗುತ್ತದೆ. ಅಥವಾ, ಸಮ್ಮೋಹ ಎಂದರೆ ಪರದ್ರವ್ಯವನ್ನು ಕಸಿಯುವುದೇ ಮುಂತಾದ ಅಕಾರ್ಯವೂ ಧರ್ಮವೇ ಆಗಿದೆ ಎನ್ನುವ ತಪ್ಪುಕಲ್ಪನೆ. ಈ ಕಲ್ಪನೆ ಕ್ರೋಧದಿಂದಾಗುವ ಪರಿಣಾಮ ಎಂದು ಅರ್ಥ.

ಹಿಂದೆ ಹೇಳಿರುವ ಎರಡು ವಿಧವಾದ ಸಮ್ಮೋಹದಿಂದ **ಸ್ಮೃತಿವಿಭ್ರಮಃ** = 'ಈ ಕೆಲಸ ಶಾಸ್ತ್ರನಿಷಿದ್ಧ ' ಎಂಬ ಸ್ಮರಣೆಯು ನಾಶವಾಗುತ್ತದೆ. ಅಥವಾ 'ಪರದ್ರವ್ಯಾಪಹಾರವು ತಪ್ಪು ' ಎಂದು ಹೇಳುವ ಧರ್ಮಶಾಸ್ತ್ರದ ಅರ್ಥವು ಅದುವರೆಗೆ ತಿಳಿದಿದ್ದರೂ ಸಿಟ್ಟಿನ ಭರದಲ್ಲಿ ಮರೆತುಹೋಗಿ ಅದಕ್ಕೆ ವಿರುದ್ಧವಾದ ಯೋಚನೆಯು ಮನಸ್ಸಿನಲ್ಲಿ ಬರುತ್ತದೆ.

ಸ್ಮೃತಿಯು ನಾಶವಾದಾಗ , **ಬುದ್ಧಿನಾಶಃ** = 'ಇದು ಕೆಟ್ಟ ಕೆಲಸ ' ಎಂಬ ಇದುವರೆಗಿದ್ದ ನಿರ್ಧಾರವು ನಿಃಶೇಷವಾಗಿ ನಾಶವಾಗುತ್ತದೆ. ಇದು ನಾಶವಾದಾಗ, ಅಕಾರ್ಯದಲ್ಲಿ ತೊಡಗುವುದರಿಂದ, **ಪ್ರಣಶ್ಯತಿ** = ನರಕಾದಿ ಅನರ್ಥಗಳಿಗೆ ಈಡಾಗುತ್ತಾನೆ.

ಶ್ಲೋಕಗಳ ಒಟ್ಟು ತಾತ್ಪರ್ಯ ಇದು – ರಾಗದ್ವೇಷಗಳಿಂದ ಕೊನೆಗಾಗುವ ಅನರ್ಥ ನರಕಾದಿಗಳು. ಇದನ್ನು ತಿಳಿದಾಗ 'ರಾಗದ್ವೇಷಗಳನ್ನು ಬಿಟ್ಟುಬಿಡಬೇಕು', ಎಂದು ಮನಸ್ಸಾಗುತ್ತದೆ. ಹಿಂದೆ ಹೇಳಿದಂತೆ, ವಿಷಯವಸ್ತುಗಳ ಧ್ಯಾನವೇ ರಾಗದ್ವೇಷಗಳಿಗೆ ಮೊದಲ ಕಾರಣ ಎಂದು ತಿಳಿದಾಗ ವಿಷಯಧ್ಯಾನವನ್ನು ತೊರೆಯುವ ಮೂಲಕ ರಾಗದ್ವೇಷಗಳು ಹುಟ್ಟದಂತೆ ಪ್ರಯತ್ನಿಸಲು ಅನುಕೂಲವಾಗುತ್ತದೆ . ।। 63 ।।

**ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ।। 64 ।।**

**ಅರ್ಥ** - ರಾಗದ್ವೇಷರಹಿತವಾದ, ಸ್ವಾಧೀನವಾದ ಇಂದ್ರಿಯಗಳಿಂದ ರೂಪರಸಾದಿ ವಿಷಯವಸ್ತುಗಳನ್ನು , ಕೇವಲ ದೇಹಧಾರಣೆಯ ಉದ್ದೇಶದಿಂದ ಅನುಭವಿಸುತ್ತಿದ್ದರೂ ಮನೋನಿಗ್ರಹವುಳ್ಳವನಾಗಿ ಮನಃಪ್ರಸಾದವನ್ನು ಹೊಂದುತ್ತಾನೆ.

**ಅಸ್ತ್ವೇವಮುಕ್ತದಿಶಾ ರಾಗದ್ವೇಷಪರಿಹಾರಃ । ತತಃ ಕಿಮಿತ್ಯತಸ್ತಸ್ಯೇಂದ್ರಿಯ-ಜಯಾಖ್ಯಂ ಫಲಮ್ ಇಂದ್ರಿಯಜಯಾತ್ ಜಾಯಮಾನಂ ಫಲಂ ಚಾಹ- ರಾಗದ್ವೇಷೇತಿ ॥ ಯದ್ಯಪಿ ಇಂದ್ರಿಯಜಯಸ್ಯ 'ವಶೇ ಹಿ' ಇತ್ಯತ್ರ ಜ್ಞಾನಂ ಫಲಮಿತ್ಯುಕ್ತಮ್ । ತಥಾಽಪಿ ತನ್ನ ಸಾಕ್ಷಾತ್ । ಕಿಂತು ಮನಃಪ್ರಸಾದದ್ವಾರೇತಿ ಅತ್ರ ಶ್ಲೋಕದ್ವಯೇನೋಚ್ಯತ ಇತ್ಯದೋಷಃ ।**

**ಅನುವಾದ** - ಹಿಂದೆ ಹೇಳಿದಂತೆ ಮಾಡಿದಾಗ ರಾಗದ್ವೇಷಗಳು ಉಂಟಾಗುವುದಿಲ್ಲ ಎಂದೇ ತಿಳಿಯೋಣ. ಅದರಿಂದ ಮುಂದೇನು ? ಮುಂದೆ ಅದರಿಂದ ಇಂದ್ರಿಯಜಯವೆಂಬ ಫಲವು ದೊರಕುತ್ತದೆ. ಇಂದ್ರಿಯಜಯದಿಂದ 'ಪ್ರಸಾದ 'ವೆಂಬ ಫಲವು ದೊರೆಯುತ್ತದೆ. ಈ ಎರಡು ವಿಷಯಗಳನ್ನು ಪ್ರಕೃತ ಶ್ಲೋಕವು ಹೇಳುತ್ತದೆ.

ಈ ಎರಡು ವಿಷಯಗಳಲ್ಲಿ ಎರಡನೆಯ ವಿಷಯವನ್ನು ಅಂದರೆ ಇಂದ್ರಿಯ ಜಯದಿಂದ ಸಿಗುವ ಫಲವನ್ನು '**ವಶೇ ಹಿ ಯಸ್ಯೇಂದ್ರಿಯಾಣಿ**' (ಶ್ಲೋಕ.61) ಎಂಬ ಶ್ಲೋಕದಲ್ಲಿ ಈಗಾಗಲೇ ಹೇಳಲಾಗಿದೆ. ಆದರೆ ಆ ಶ್ಲೋಕದಲ್ಲಿ ಅಪರೋಕ್ಷಜ್ಞಾನವು ಫಲ ಎನ್ನಲಾಗಿದೆ. ಆ ಅಪರೋಕ್ಷ ಜ್ಞಾನವು ಇಂದ್ರಿಯನಿಗ್ರಹ ಮಾಡಿದ ಕೂಡಲೇ ಬರುವುದಿಲ್ಲ. ಇಂದ್ರಿಯನಿಗ್ರಹದಿಂದ ಮನಃಶಾಂತಿ, ಅದರಿಂದ ಧ್ಯಾನ, ಧ್ಯಾನದಿಂದ ಅಪರೋಕ್ಷಜ್ಞಾನ. ಹೀಗೆ ಪರಂಪರಯಾ ಅಪರೋಕ್ಷ ಜ್ಞಾನಸಿದ್ಧಿಯಾಗುತ್ತದೆ ಎನ್ನುವ ಅಭಿಪ್ರಾಯದಿಂದ ಮುಂದಿನ ಎರಡು ಶ್ಲೋಕಗಳಲ್ಲಿ ಮನಃಪ್ರಸಾದವೇ ಇಂದ್ರಿಯಜಯದ ಸಾಕ್ಷಾತ್ ಫಲ ಎಂದು ಹೇಳಲಾಗಿದೆ.

**ಅಯಮರ್ಥಃ । ಯ ಉಕ್ತವಿಧಯಾ ತ್ಯಕ್ತರಾಗದ್ವೇಷಃ ಸ ಪುಮಾನ್ ರಾಗದ್ವೇಷವಿಯುಕ್ತೈಃ= ತಾಭ್ಯಾಂ ಅಪ್ರಯುಕ್ತೈರಿಂದ್ರಿಯೈಃ= ಚಕ್ಷುರಾದಿ-ಬಾಹ್ಯೇಂದ್ರಿಯೈಃ ಅತ ಏವಾತ್ಮವಶ್ಯೈಃ= ಸ್ವಾಧೀನೈಃ ರೂಪರಸಾದೀನ್ ವಿಷಯಾನ್ ಕೇವಲದೇಹಧಾರಣಮಾತ್ರಾರ್ಥಂ ಚರನ್ = ಅನುಭವನ್ನಪಿ, ವಿಧೇಯಾತ್ಮಾ - ವಿಧೇಯಃ= ಸ್ವಾಧೀನಃ ಆತ್ಮಾ = ಮನೋ ಯಸ್ಯ ಸ ತಥಾ ತಾದೃಶೋ ಭೂತ್ವಾ ಪ್ರಸಾದಂ= ಮನಸಃ ಸ್ವತೋಽಪಿ ಪ್ರಾಯೋ ವಿಷಯಾಗತಿಲಕ್ಷಣಂ ಪ್ರಸಾದಮ್ ಅಧಿಗಚ್ಛತಿ= ಪ್ರಾಪ್ನೋತಿ ।**

**ಅನುವಾದ** - ಒಟ್ಟಿನಲ್ಲಿ ಶ್ಲೋಕಾರ್ಥ– ಯಾರು ಹಿಂದೆ ಹೇಳಿದಂತೆ ರಾಗ-ದ್ವೇಷಗಳನ್ನು ತ್ಯಜಿಸಿರುವನೋ ಅಂತಹ ವ್ಯಕ್ತಿಯು , **ರಾಗದ್ವೇಷವಿಯುಕ್ತೈಃ** = ರಾಗ-ದ್ವೇಷಗಳ ಪ್ರೇರಣೆ ಇಲ್ಲದ, **ಇಂದ್ರಿಯೈಃ**= ಕಣ್ಣು ಮೊದಲಾದ ಇಂದ್ರಿಯಗಳಿಂದ, ಅದರಿಂದಾಗಿಯೇ, **ಆತ್ಮವಶ್ಯೈಃ**= ತನ್ನ ಅಧೀನಗಳಾದ (ಇಂದ್ರಿಯಗಳಿಂದ) ರೂಪ-ರಸ ಮುಂತಾದ ವಿಷಯಗಳನ್ನು, ಕೇವಲ ತನ್ನ ದೇಹಧಾರಣೆಯ ಉದ್ದೇಶಕ್ಕಾಗಿ (ಹೊರತು, ವಿಷಯಗಳನ್ನು ಸವಿಯುವ ಆಸೆಯಿಂದಲ್ಲ ) **ಚರನ್** = ಅನುಭವಿಸುತ್ತಿದ್ದರೂ, **ವಿಧೇಯಾತ್ಮಾ** - **ವಿಧೇಯಃ** = ತನ್ನ ಅಧೀನದಲ್ಲಿರುವ, **ಆತ್ಮಾ** = ಮನಸ್ಸುಳ್ಳವನಾಗಿ, **ಪ್ರಸಾದಂ**= ಮನಸ್ಸು , ಯಾವ ಪ್ರಯಾಸವೂ ಇಲ್ಲದೆ, ಸ್ವಾಭಾವಿಕವಾಗಿ ವಿಷಯಗಳ ಕಡೆಗೆ ಹರಿಯದಿರುವುದೇ ಪ್ರಸಾದ, ಇಂತಹ ಮನಃಸ್ಥಿತಿಯನ್ನು , **ಅಧಿಗಚ್ಛತಿ** = ಹೊಂದುತ್ತಾನೆ.

**ಅತ್ರ ಪಾದತ್ರಯೇಣ ರಾಗದ್ವೇಷಪರಿಹಾರಸ್ಯ ಇಂದ್ರಿಯಜಯಾಖ್ಯಂ ಫಲಮುಕ್ತಮ್ । ರಾಗದ್ವೇಷಾಪ್ರಯುಕ್ತತ್ವಾದೇವ ಇಂದ್ರಿಯಾಣಾಂ, ವಿಧೇಯಾತ್ಮ-ತ್ವಹೇತುನಾಽಽತ್ಮವಶ್ಯತ್ವಸ್ಯೇಂದ್ರಿಯಾಣಾಮುಕ್ತ್ಯಾ ತಜ್ಜಯಸ್ಯ ಪ್ರತೀತೇಃ । ಆತ್ಮ-ವಶ್ಯತ್ವಸ್ಯ ಸ್ವಾತ್ಮನಃ ಕ್ಷೋಭಾನಾಪಾದಕತ್ವರೂಪತ್ವಾತ್ ।**

**ವಿಷಯಾಂಶ್ಚರನ್ನಿತ್ಯುಕ್ತಿಸ್ತು, ಇಂದ್ರಿಯಜಯಕಾರಣತ್ವಂ ನಿರಾಹಾರತ್ವಸ್ಯ ಪ್ರಾಗುಕ್ತಮಯುಕ್ತಮ್, ಅಶಕ್ಯತ್ವಾದಿತ್ಯಾಶಂಕ್ಯ ದೇಹಧಾರಣಮಾತ್ರೋಪಯುಕ್ತ-ವಿಷಯಾನುಭವೋ ನ ದೋಷಾಯೇತಿ ವಕ್ತುಮ್ । ಇಂದ್ರಿಯಜಯಸ್ಯಾ-ವ್ಯವಹಿತಫಲೋಕ್ತಿಃ – ವಿಧೇಯಾತ್ಮಾ ಪ್ರಸಾದಮಧಿಗಚ್ಛತೀತಿ ॥ 64 ॥**

**ಅನುವಾದ** – ಈ ಶ್ಲೋಕದ ಪ್ರಾರಂಭದ ಮೂರುಪಾದಗಳಲ್ಲಿ ರಾಗದ್ವೇಷಗಳ ಪರಿಹಾರದ ಫಲ ಇಂದ್ರಿಯಜಯ ಎಂದು ಹೇಳಿದಂತಾಗಿದೆ.

ಇಂದ್ರಿಯಗಳು ರಾಗದ್ವೇಷಗಳಿಂದ ಪ್ರೇರಿತವಾಗಿಲ್ಲದ ಕಾರಣ ಮನಸ್ಸು ಆತ್ಮನ ನಿಯಂತ್ರಣದಲ್ಲಿರುತ್ತದೆ . ಮನಸ್ಸು ಆತ್ಮನ ನಿಯಂತ್ರಣದಲ್ಲಿರುವುದರಿಂದ ಇಂದ್ರಿಯಗಳೂ ಆತ್ಮನ ವಶದಲ್ಲಿರುತ್ತವೆ. ಹೀಗೆ ಹೇಳುವ ಮೂಲಕ ಈ ಶ್ಲೋಕದಲ್ಲಿ ಇಂದ್ರಿಯಜಯವು ಸೂಚಿತವಾದಂತಾಗಿದೆ. ಏಕೆಂದರೆ, ಇಂದ್ರಿಯಗಳು ಆತ್ಮನ ವಶದಲ್ಲಿ ಇರುವುದೆಂದರೆ ಇಂದ್ರಿಯಗಳಿಂದ ಆತ್ಮನಿಗೆ ಕ್ಷೋಭೆ ಉಂಟಾಗದಿರುವುದು. ಹೀಗೆ '**ಆತ್ಮವಶ್ಯೈಃ**' ಎಂಬ ಪದದಿಂದ ಇಂದ್ರಿಯಜಯವನ್ನು ಹೇಳಿದಂತಾಗಿದೆ.

'**ವಿಷಯಾನ್ ಚರನ್**' 'ಇಂದ್ರಿಯಗಳಿಂದ ವಿಷಯಪದಾರ್ಥಗಳನ್ನು ಅನುಭವಿಸುತ್ತಾ'

ಎಂದಿರುವುದಕ್ಕೆ ಕಾರಣ – ಉಪವಾಸವು ಇಂದ್ರಿಯಜಯಕ್ಕೆ ಕಾರಣ ಎಂದು ಹಿಂದೆ (ಶ್ಲೋಕ 59) ಹೇಳಲಾಗಿದೆ. ಆದರೆ ನಿರಂತರ ಉಪವಾಸವಿದ್ದರೆ ದೇಹವೇ ಉಳಿಯಲಾರದು. ಆದ್ದರಿಂದ ಉಪವಾಸವಿದ್ದು ಇಂದ್ರಿಯಗಳನ್ನು ಗೆಲ್ಲಬಹುದು ಎಂಬ ವಾದ ತಪ್ಪು ; ಹೀಗೆ ಹಿಂದೆ ಆಕ್ಷೇಪಿಸಲಾಗಿತ್ತು. ಅದಕ್ಕೆ ಉತ್ತರಿಸಲು ಶ್ಲೋಕದಲ್ಲಿ ಈ ಪದಗಳನ್ನು ಹೇಳಲಾಗಿದೆ. ಅದರ ಭಾವ– ಇಂದ್ರಿಯಜಯವನ್ನು ಸಾಧಿಸಬೇಕಾದರೆ ಏನೂ ತಿನ್ನದೆ ಉಪವಾಸ ಮಾಡಬೇಕಾದ ಅಗತ್ಯವಿಲ್ಲ . ದೇಹ ಉಳಿಯಲು ಅಗತ್ಯವಿದ್ದಷ್ಟೇ ಆಹಾರವನ್ನು ಸೇವಿಸಬಹುದು. ಅದರಿಂದಲೂ ಇಂದ್ರಿಯಗಳನ್ನು ಗೆಲ್ಲಬಹುದು. ಈ ಉತ್ತರ **'ವಿಷಯಾನ್ ಚರನ್'** ಎಂಬ ಪದಗಳಿಂದ ಸಿಗುತ್ತದೆ.

ಇಂದ್ರಿಯಜಯದಿಂದ ಕೂಡಲೇ ಸಿಗುವ ಫಲವನ್ನು **'ವಿಧೇಯಾತ್ಮಾ , ಪ್ರಸಾದಮ್ ಅಧಿ ಗಚ್ಛತಿ'** ಎಂಬ ಪದಗಳಿಂದ ಹೇಳಲಾಗಿದೆ – ಇಂದ್ರಿಯಗಳನ್ನು ಗೆದ್ದರೆ ಮನಸ್ಸು ಆತ್ಮನ ಹಿಡಿತಕ್ಕೆ ಸಿಗುತ್ತದೆ . ಅದರಿಂದ ಧ್ಯಾನಕ್ಕೆ ಅನುಕೂಲವಾಗುವ **'ಮನಃಪ್ರಸಾದ'** ಉಂಟಾಗುತ್ತದೆ.

**ವಿವರಣೆ** - ಇಂದ್ರಿಯಜಯಕ್ಕೆ ನಿರಂತರವಾಗಿ ಕಟ್ಟುನಿಟ್ಟಿನ ನಿರಾಹಾರ ಉಪವಾಸವನ್ನೇ ಮಾಡಬೇಕಾಗಿಲ್ಲ . ವಿಹಿತ ದಿನಗಳಲ್ಲಿ ನಿರಾಹಾರ ಮಾಡಿ ಉಳಿದಂತೆ ದೇಹಧಾರಣೆಗೆ ಬೇಕಾದಷ್ಟೇ ಆಹಾರವನ್ನು ಅನಾಸಕ್ತಿಯಿಂದ ಸ್ವೀಕರಿಸುತ್ತಿರಬೇಕು. ಇದರಿಂದ ನಾಲಿಗೆಯ ಜಯವನ್ನು ಸಂಪಾದಿಸಬಹುದು. ಉಳಿದ ಕಣ್ಣು , ಕಿವಿ ಮುಂತಾದ ಇಂದ್ರಿಯಗಳನ್ನೂ ಅಗತ್ಯವಿದ್ದಷ್ಟೇ, ಬಳಸಿಕೊಳ್ಳಬೇಕು. ಹೀಗೆ ಮಾಡಿ ಇತರ ಇಂದ್ರಿಯಗಳನ್ನೂ ಗೆಲ್ಲಬಹುದು.

ಇಂದ್ರಿಯಗಳನ್ನು ಗೆದ್ದರೆ ಮನಸ್ಸು ಹಿಡಿತಕ್ಕೆ ಸಿಗುತ್ತದೆ. ಅಂತಹ ಮನಸ್ಸು ನಮ್ಮ ಪ್ರಯತ್ನವಿಲ್ಲದೆಯೂ, ವಿಷಯಗಳ ಕಡೆಗೆ ಹರಿಯುವುದನ್ನು ನಿಲ್ಲಿಸಿಬಿಡುತ್ತದೆ. ಇದು ಧ್ಯಾನಕ್ಕೆ ಅನುಕೂಲವಾದ ಮನಃಸ್ಥಿತಿ. ಇದನ್ನೇ ಮನಃಪ್ರಸಾದ ಎನ್ನಲಾಗುತ್ತದೆ. ಇದರಿಂದ ಧ್ಯಾನ ; ಧ್ಯಾನದಿಂದ ಅಪರೋಕ್ಷ . ಹೀಗೆ ಇಂದ್ರಿಯಜಯದ ತಾತ್ಕಾಲಿಕ ಫಲ ಮನಃಪ್ರಸಾದ, ಅಂತಿಮಫಲ ಧ್ಯಾನ. ॥ 64 ॥

**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತಿ ॥ 65 ॥**

**ಅರ್ಥ** - ಮನಃಪ್ರಸಾದ ಸಿದ್ಧಿಸಿದರೆ ಅನತಿಕಾಲದಲ್ಲಿ ಭಗವಂತನ ಅಪರೋಕ್ಷಜ್ಞಾನ ವಾಗುತ್ತದೆ. ಅಪರೋಕ್ಷದಿಂದ ಸಕಲ ದುಃಖಗಳೂ ನಾಶವಾಗುತ್ತವೆ .

**ಪ್ರಸಾದೇ ಸತಿ ಕಿಂ ಸ್ಯಾದಿತ್ಯತ ಆಹ- ಪ್ರಸಾದ ಇತಿ ॥ ಪ್ರಾಗುಕ್ತ-ರೂಪಮನಃಪ್ರಸಾದೇ ಸತಿ ಅಸ್ಯ ಪ್ರಸನ್ನಚೇತಸಃ ಪುಂಸಃ ಆಶು= ಶೀಘ್ರಂ ಬುದ್ಧಿಃ= ಬ್ರಹ್ಮಾಪರೋಕ್ಷಜ್ಞಾನಂ ಪರ್ಯವತಿಷ್ಠತಿ= ಸಮ್ಯಗ್ಭವತಿ । ತತಶ್ಚ ಅಸ್ಯಾಪರೋಕ್ಷ-ಜ್ಞಾನಿನಃ ಸರ್ವದುಃಖಾನಾಂ ಹಾನಿರುಪಜಾಯತೇ, ಹಿ- ಪ್ರಸಿದ್ಧಮೇತತ್ 'ತರತಿ ಶೋಕಮಾತ್ಮವಿತ್' (ಛಾ. 7-1-3) ಇತ್ಯಾದೌ ಇತಿ ।**

**ಅತ್ರ ಪ್ರಸಾದೇ ಸತಿ ಬುದ್ಧಿಃ ಪರ್ಯವತಿಷ್ಠತೀತ್ಯೇತಾವತ್ಯೇವ ವಕ್ತವ್ಯೇ ಸರ್ವ-ದುಃಖಾನಾಂ ಹಾನಿರಿತಿ ಜ್ಞಾನಫಲಸ್ಯಾಪ್ಯುಕ್ತಿಃ- 'ಬುದ್ಧಿಯುಕ್ತೋ ಜಹಾತೀಹ' ಇತ್ಯತ್ರ ಸುಕೃತದುಷ್ಕೃತಹಾನಸ್ಯ ಜ್ಞಾನಫಲತ್ವೋಕ್ತಿರಯುಕ್ತಾ । ಸುಖದುಃಖ-ಪ್ರಾಪ್ತಿಪರಿಹಾರಯೋಃ ಅನ್ಯತರತ್ವಾಭಾವೇನಾಪುಮರ್ಥತ್ವಾತ್ ಇತ್ಯಾಶಂಕಾ-ನಿರಾಸಾಯ ಪ್ರಸಂಗಾತ್ ಪ್ರಾಪ್ತೇತಿ ಜ್ಞೇಯಮ್ ॥ 65 ॥**

**ಅನುವಾದ** - ಮನಃಪ್ರಸಾದ ಸಿದ್ಧಿಸಿದರೆ ಅದರಿಂದೇನಾಗುತ್ತದೆ ಎಂಬುದನ್ನು ಈ ಶ್ಲೋಕದಲ್ಲಿ ಹೇಳಲಾಗಿದೆ.

ಹಿಂದೆ ಹೇಳಿದ ಮನಃಪ್ರಸಾದವಾದರೆ , **ಅಸ್ಯ** = ಅಂತಹ ಮನಃಪ್ರಸಾದವನ್ನು ಪಡೆದ ಸಾಧಕನಿಗೆ , **ಆಶು** = ಕೂಡಲೇ, **ಬುದ್ಧಿಃ** = ಬ್ರಹ್ಮಾಪರೋಕ್ಷಜ್ಞಾನವು, **ಪರ್ಯವತಿಷ್ಠತಿ**= ಸರಿಯಾಗಿ ಆಗುತ್ತದೆ. ಅದರಿಂದ, **ಅಸ್ಯ** = ಅಂತಹ ಅಪರೋಕ್ಷಜ್ಞಾನಿಗೆ ಸಮಸ್ತ ದುಃಖಗಳ ಪರಿಹಾರವು ಆಗುತ್ತದೆ. **ಹಿ** = ಈ ವಿಷಯವು '**ತರತಿ ಶೋಕಂ ಆತ್ಮವಿತ್**' ಎಂಬ ಶ್ರುತಿಯಲ್ಲಿ ಪ್ರಸಿದ್ಧವಾಗಿದೆ.

ಈ ಶ್ಲೋಕದಲ್ಲಿ ಮನಃಪ್ರಸಾದದ ಫಲವನ್ನು ಹೇಳಬೇಕು. ಮನಃಪ್ರಸಾದದ ಫಲ ಅಪರೋಕ್ಷಜ್ಞಾನ. ಅದನ್ನಷ್ಟೇ ಹೇಳಿದರೆ ಸಾಕಿತ್ತು. ಆದರೆ, ಅದರ ಜೊತೆಯಲ್ಲಿ ಅಪರೋಕ್ಷ ಜ್ಞಾನದಿಂದಾಗುವ ಫಲವನ್ನು ಇಲ್ಲಿ ಹೇಳಲಾಗಿದೆ. ಅದನ್ನೇಕೆ ಹೇಳಬೇಕಾಗಿತ್ತು ? ಅದಕ್ಕೆ ಹೀಗೆ ಸಮಾಧಾನ –

ಹಿಂದೆ **'ಬುದ್ಧಿಯುಕ್ತೋ ಜಹಾತೀಹ'** (ಶ್ಲೋಕ.50) ಎಂಬ ಶ್ಲೋಕದಲ್ಲಿ ಅಪರೋಕ್ಷಜ್ಞಾನದಿಂದ ಅನಿಷ್ಟಪುಣ್ಯ ಹಾಗೂ ಪಾಪವು ನಾಶಹೊಂದುತ್ತದೆ ಎನ್ನಲಾಗಿದೆ. ಅಂದರೆ, ಅಪರೋಕ್ಷ ಜ್ಞಾನದ ಫಲ ಪುಣ್ಯಪಾಪಗಳ ನಾಶ. ಇದೊಂದು ಫಲವೇ ಅಲ್ಲ. ಸುಖಪ್ರಾಪ್ತಿ , ದುಃಖ ಪರಿಹಾರಗಳು ಮಾತ್ರ ನಾವು ಬಯಸುವ ಫಲಗಳು. ಪುಣ್ಯ-ಪಾಪಗಳ ನಾಶ ಸುಖಪ್ರಾಪ್ತಿಯೂ

ಅಲ್ಲ, ದುಃಖನಿವೃತ್ತಿಯೂ ಅಲ್ಲ. ಹೀಗಿರುವಾಗ, ಇದನ್ನು ಜ್ಞಾನದ ಪ್ರಯೋಜನವೆಂದು ಹೇಗೆ ಪರಿಗಣಿಸುವುದು ? ಈ ಪ್ರಶ್ನೆಯ ಪರಿಹಾರಕ್ಕಾಗಿ ಪ್ರಕೃತ ಶ್ಲೋಕವು 'ದುಃಖನಾಶವೇ ಜ್ಞಾನದ ಫಲ' ಎಂದಿದೆ. ಅದರ ಭಾವ – ಹಿಂದೆ ಹೇಳಿದಂತೆ ಪಾಪವು ನಾಶವಾದರೆ ಪಾಪದ ಫಲವಾದ ದುಃಖವು ಬರುವುದಿಲ್ಲ, ಎಂದು. ಅದನ್ನೇ ಈ ಶ್ಲೋಕ ಸ್ಪಷ್ಟಪಡಿಸಿದೆ. ಆದ್ದರಿಂದ ಈ ವಿಷಯ ಅಸಂಗತವಲ್ಲ.

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾಂತಿರಶಾಂತಸ್ಯ ಕುತಸ್ಸುಖಮ್ ॥ 66 ॥**

**ಅರ್ಥ** – ಮನಃಪ್ರಸಾದವಿಲ್ಲದಿದ್ದರೆ ಮನೋನಿಗ್ರಹವಿಲ್ಲ . ಅದಿಲ್ಲದವನಿಗೆ ಧ್ಯಾನವು ಸಾಧ್ಯವಾಗುವುದಿಲ್ಲ. ಧ್ಯಾನವಿಲ್ಲದವನಿಗೆ ಬ್ರಹ್ಮಾಪರೋಕ್ಷವಿಲ್ಲ. ಹೀಗೆ ಮನಃಪ್ರಸಾದವಿಲ್ಲದೆ ಬ್ರಹ್ಮಾಪರೋಕ್ಷ ಬರಲಾರದು. ಬ್ರಹ್ಮಾಪರೋಕ್ಷವಿಲ್ಲದಿದ್ದರೆ ಮೋಕ್ಷವಿಲ್ಲ. ಮೋಕ್ಷವಿಲ್ಲದೆ ಶಾಶ್ವತ ಸುಖವೆಲ್ಲಿ ?

ಶ್ರವಣಮನನಾಭ್ಯಾಮುಪಕೃತೇನ ಧ್ಯಾನೇನೈವ ಬ್ರಹ್ಮಾಪರೋಕ್ಷಜ್ಞಾನಸಿದ್ಧೇಃ ಕಿಮನೇನ ಪ್ರಸಾದೇನ ಇತ್ಯತಃ ಪ್ರಸಾದಾಭಾವೇ ದೋಷಮಾಹ – **ನಾಸ್ತೀತ್ಯಾದಿ ಶ್ಲೋಕದ್ವಯೇನ** ॥ ವಿಪಕ್ಷೇ ದೋಷೋಕ್ತಿಪರತ್ವಾತ್ ಮನಃಪ್ರಸಾದಾಭಾವೇ ಯುಕ್ತಿಶಬ್ದಿತಚಿತ್ತನಿರೋಧೋ ನ ಭವತೀತ್ಯೇತತ್ಪ್ರಕರಣಪ್ರಾಪ್ತಮಾದೌ ಯೋಜ್ಯಮ್ । 'ನಾಸ್ತಿ ಬುದ್ಧಿ'ರಿತ್ಯೇತದಗ್ರೇ ಯೋಜ್ಯಮ್ ।

ಅಯುಕ್ತಸ್ಯ= ಚಿತ್ತನಿರೋಧಹೀನಸ್ಯ ಭಾವನಾ= ಧ್ಯಾನಂ ನ ಭವತಿ । ಅಭಾವಯತಶ್ಚ= ಅಧ್ಯಾಯಿನಶ್ಚ ಬುದ್ಧಿಃ= ಅಪರೋಕ್ಷಜ್ಞಾನಂ ನ ಭವತಿ । ನ ಚಾಬುದ್ಧೇರಿತಿ ಶೇಷಃ । ಅಪರೋಕ್ಷಜ್ಞಾನಹೀನಸ್ಯ ಚ ಶಾಂತಿಃ= ಮುಕ್ತಿರ್ನಾಸ್ತಿ । ಅಶಾಂತಸ್ಯ= ಅಮುಕ್ತಸ್ಯ ಚ ಸುಖಂ ಕುತಃ ? ನ ಕುತೋಽಪೀತ್ಯರ್ಥಃ ।

ಅಬುದ್ಧೇಃ ಶಾಂತಿರ್ನೇತ್ಯೇತಾವತ್ಯೇವ ವಾಚ್ಯೇಽಶಾಂತಸ್ಯ ಕುತಃ ಸುಖಮಿತ್ಯುಕ್ತಿರ್ನ ಕೇವಲಮಪರೋಕ್ಷಿಣೋ ಮುಕ್ತೌ ಸರ್ವದುಃಖಪ್ರಹಾಣಮಾತ್ರಂ । ಕಿಂತು ಸಂಸಾರಿಭಿರಲಭ್ಯಂ ಪರಮಂ ಸುಖಂ ಚೇತಿ ಜ್ಞಾಪಯಿತುಂ ಪ್ರಸಂಗಾತ್ ಪ್ರಾಪ್ತೇತಿ ಜ್ಞೇಯಮ್ । ಯದ್ವಾ ಶಾಂತಿರ್ಭಗವದೇಕನಿಷ್ಠಬುದ್ಧಿತಾ । ಸುಖಂ ಮೋಕ್ಷಃ ॥ 66 ॥

**ಅನುವಾದ–** ಬ್ರಹ್ಮಾಪರೋಕ್ಷಕ್ಕೆ ಬೇಕಾದುದು ಶ್ರವಣ ಮನನಸಹಿತವಾದ ಧ್ಯಾನ. ಇವುಗಳಿಂದಲೇ ಅಪರೋಕ್ಷಜ್ಞಾನ ಬರುವಾಗ ಅನಾವಶ್ಯಕವಾದ ಈ ಮನಃಪ್ರಸಾದ ಏಕೆ ಬೇಕು ? ಈ ಆಕ್ಷೇಪಕ್ಕೆ ಉತ್ತರವಾಗಿ ಮನಃಪ್ರಸಾದ ಇಲ್ಲದಿದ್ದರೆ ಆಗುವ ಅನರ್ಥವನ್ನು ಈ ಎರಡು ಶ್ಲೋಕಗಳಲ್ಲಿ ಹೇಳಲಾಗಿದೆ.

ಮನಃ ಪ್ರಸಾದ ಇಲ್ಲದಿದ್ದರೆ ಆಗುವ ತೊಂದರೆಯನ್ನು ಹೇಳುವ ಸಲುವಾಗಿ ಈ ಶ್ಲೋಕವಿರುವುದರಿಂದ ಪ್ರಾರಂಭದಲ್ಲಿ ಸಾಂದರ್ಭಿಕವಾಗಿ ತಿಳಿಯುವ ಈ ಅಂಶವನ್ನು ಸೇರಿಸಿಕೊಳ್ಳಬೇಕು– 'ಮನಃ ಪ್ರಸಾದವಿಲ್ಲದೆ '**ಯುಕ್ತಿ**' ಎಂದು ಕರೆಯಲಾಗುವ ಮನೋ–ನಿಗ್ರಹವು ಸಾಧ್ಯವಾಗದು'. ಇದಾದ ಮೇಲೆ '**ನಾಸ್ತಿ ಬುದ್ಧಿಃ**' ಎಂಬ ಅಂಶವನ್ನು '**ನ ಚಾಭಾವಯತಃ**' ಎಂದಾದ ಬಳಿಕ ಸೇರಿಸಿಕೊಳ್ಳಬೇಕು.

**ಅಯುಕ್ತಸ್ಯ** = ಮನೋನಿಗ್ರಹವಿಲ್ಲದವನಿಗೆ , **ಭಾವನಾ** = ಧ್ಯಾನವು ಸಾಧ್ಯವಾಗುವುದಿಲ್ಲ. **ಅಭಾವಯತಃ**= ಧ್ಯಾನಮಾಡದವನಿಗೆ , **ಬುದ್ಧಿಃ** = ಅಪರೋಕ್ಷಜ್ಞಾನವು ಇಲ್ಲ . ಮುಂದೆ '**ನ ಚಾಬುದ್ಧೇಃ**' ಎಂಬಂಶವನ್ನು ಸೇರಿಸಿಕೊಳ್ಳಬೇಕು. ಅದರ ಅರ್ಥ– ಅಪರೋಕ್ಷಜ್ಞಾನ–ವಿಲ್ಲದವನಿಗೆ, **ಶಾಂತಿಃ**= ಮೋಕ್ಷವು ಸಿಗುವುದಿಲ್ಲ . **ಅಶಾಂತಸ್ಯ**= ಅಮುಕ್ತನಿಗೆ ಸುಖ ಎಲ್ಲಿ ? ಸುಖವು ಬರಲು ಸಾಧ್ಯವಿಲ್ಲ ಎಂದರ್ಥ.

ಈ ಶ್ಲೋಕವನ್ನು 'ಅಪರೋಕ್ಷವಿಲ್ಲದೆ ಮೋಕ್ಷವಿಲ್ಲ' ಎಂಬಲ್ಲೇ ಮುಗಿಸಬಹುದಿತ್ತು. 'ಮೋಕ್ಷವಿಲ್ಲದವನಿಗೆ ಸುಖವಿಲ್ಲ' ಎಂಬ ಅಂಶದ ಅಗತ್ಯವಿರಲಿಲ್ಲ. ಆದರೂ ಹಿಂದಿನ ಶ್ಲೋಕದಲ್ಲಿ ಅಪರೋಕ್ಷಜ್ಞಾನಿಗೆ ಸಮಸ್ತದುಃಖವೂ ಪರಿಹಾರವಾಗುತ್ತದೆ ಎಂದಿಷ್ಟೇ ಹೇಳಲಾಗಿದೆ. ಅಷ್ಟೇ ಅಲ್ಲ, ಸಂಸಾರಿಗಳಿಗೆ ದುರ್ಲಭವಾದ ಪರಮ ಸುಖವೂ ಇದೆ, ಎಂದು ತಿಳಿಸುವುದಕ್ಕಾಗಿ ಈ ಅಂಶವನ್ನು ಹೇಳಲಾಗಿದೆ.

ಅಥವಾ, ಶಾಂತಿ ಎಂದರೆ ಮೋಕ್ಷವಲ್ಲ; ಮನಸ್ಸು ಭಗವಂತನಲ್ಲಿ ಏಕಾಗ್ರವಾಗುವುದು. ಸುಖ ಎಂದರೆ ಮೋಕ್ಷ . ಧ್ಯಾನವಿಲ್ಲದೆ ಭಗವಂತನಲ್ಲಿ ಮನಸ್ಸು ಏಕಾಗ್ರವಾಗಲು ಸಾಧ್ಯವಿಲ್ಲ. ಆದಾಗದೆ ಮೋಕ್ಷ ಸಿಗುವುದಿಲ್ಲ , ಎಂದು ಅರ್ಥ.

**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ 67 ॥**

**ಅರ್ಥ** – ನಮ್ಮ ಇಂದ್ರಿಯಗಳು, ನಿಯಂತ್ರಣವಿಲ್ಲದೆ ವಿಷಯಗಳೆಡೆಗೆ ಹರಿದರೆ ಅವುಗಳ

ಬೆನ್ನಲ್ಲೇ ಮನಸ್ಸು ಹರಿಯುವಂತೆ ಪರಮಾತ್ಮನು ಮಾಡುತ್ತಾನೆ. ಇದರಿಂದಾಗಿ ಮನಸ್ಸಿನಲ್ಲಿ ಹುಟ್ಟಬಹುದಾದ ಪರೋಕ್ಷಜ್ಞಾನವು, ಸಮುದ್ರದಲ್ಲಿ ಗಾಳಿಗೆ ಸಿಕ್ಕ ನಾವೆಯಂತೆ, ಧ್ಯಾನಕ್ಕೆ ಉಪಯೋಗವಾಗದಂತೆ ತಡೆಯಲ್ಪಡುತ್ತದೆ.

**ಅಯುಕ್ತಸ್ಯ ಭಾವನಾ ನೇತ್ಯಯುಕ್ತಮ್ । ಕೃತಶ್ರವಣಮನನಸ್ಯ ಪುಂಸೋ ಧ್ಯಾನೋಪಪತ್ತೇರಿತ್ಯತ ಆಹ– ಇಂದ್ರಿಯಾಣಾಮಿತಿ ॥ ಚಕ್ಷುರಾದಿ ಇಂದ್ರಿ-ಯಾಣಾಂ ಸ್ವೈರಂ ವಿಷಯೇಷು ಚರತಾಂ= ಗಚ್ಛತಾಮನು= ಪೃಷ್ಠಭಾವಿತಯಾ ಮನೋ ವಿಷಯಾನ್ಪ್ರತಿ ವಿಧೀಯತೇ= ಈಶ್ವರೇಣ ಕ್ರಿಯತೇ । ಯತ್ತನ್ಮನಸ ಇಂದ್ರಿಯಾಣಾಂ ಪೃಷ್ಠಭಾವಿತಯಾ ಈಶ್ವರೇಣ ಕರಣಮ್ ಅಸ್ಯ ಪುಂಸಃ ಪ್ರಜ್ಞಾಂ= ಪರೋಕ್ಷನಿಶ್ಚಯಂ ಹರತಿ । ಉತ್ಪತ್ಸ್ಯತ್ಪರೋಕ್ಷಜ್ಞಾನಂ ನಿವಾರಯತಿ । ಉತ್ಪನ್ನಮಪಿ ಜ್ಞಾನಂ ಚಿತ್ತನಿರೋಧಹೀನಸ್ಯ ನ ಧ್ಯಾನೋಪಯೋಗಿ ಸದಪ-ರೋಕ್ಷಜ್ಞಾನಾಯ ಪ್ರಭವತೀತ್ಯರ್ಥಃ । ಕಥಮ್ ? ಅಂಭಸಿ ವಾಯುರ್ನಾವ-ಮಿವ= ಪ್ಲವಮಿವೇತಿ ॥ 67 ॥**

**ಅನುವಾದ**- ಇಂದ್ರಿಯನಿಗ್ರಹವಿಲ್ಲದವನು ಧ್ಯಾನಮಾಡಲಾಗದು ಎಂದು ಹಿಂದೆ ಹೇಳಲಾಯಿತು. ಆದರೆ ಇಂದ್ರಿಯನಿಗ್ರಹವಿಲ್ಲದೇ ಹೋದರೂ, ಶ್ರವಣ–ಮನನ ಮಾಡಿರು ವವನು ಧ್ಯಾನ ಮಾಡಬಹುದಲ್ಲವೆ ? ಈ ಪ್ರಶ್ನೆಗೆ ಉತ್ತರ– '**ಇಂದ್ರಿಯಾಣಾಂ**' ಇತ್ಯಾದಿ ಶ್ಲೋಕ.

ಕಣ್ಣು ಮೊದಲಾದ ಇಂದ್ರಿಯಗಳು ಸ್ವೇಚ್ಛೆಯಿಂದ ವಿಷಯಗಳೆಡೆಗೆ ಹರಿದಾಗ, **ಅನು** = ಅವುಗಳ ಹಿಂದೆಯೇ, ಮನಸ್ಸು ವಿಷಯಗಳ ಕಡೆಗೆ ಹರಿಯುವಂತೆ, **ವಿಧೀಯತೇ**= ಭಗವಂತನಿಂದ ಮಾಡಲ್ಪಡುತ್ತದೆ. ಅದು, ಇಂದ್ರಿಯಗಳ ಬೆನ್ನ ಹಿಂದೆ ಯಾರ ಮನಸ್ಸು ಹರಿಯುವಂತೆ ಭಗವಂತ ಮಾಡುವನೋ , ಅಂತಹವನ ಮನಸ್ಸಿನಲ್ಲಿ ಭಗವಂತನ ಬಗ್ಗೆ ಇರುವ ಮುಂದೆ ಹುಟ್ಟಬಹುದಾದ ಪರೋಕ್ಷನಿಶ್ಚಯವು ಬರದಂತೆ ತಡೆಯುತ್ತದೆ. ಹುಟ್ಟಿದ ಪರೋಕ್ಷವನ್ನೂ ಧ್ಯಾನಕ್ಕೆ ಉಪಯೋಗಿಯಾಗದಂತೆ ಮಾಡಿ ಅಪರೋಕ್ಷಕ್ಕೆ ಕಾರಣವಾಗದಂತೆ ಮಾಡುತ್ತದೆ.

ಹೀಗೆ, ಮನೋನಿಗ್ರಹವಿಲ್ಲದವನಿಗೆ ಪರೋಕ್ಷಜ್ಞಾನವು ಹುಟ್ಟಿದರೂ ಅದು ಧ್ಯಾನಕ್ಕೆ ಉಪಯೋಗವಾಗುವುದಿಲ್ಲ . ಧ್ಯಾನವಿಲ್ಲದೆ ಅಪರೋಕ್ಷಜ್ಞಾನ ಪಡೆಯುವುದಕ್ಕೆ ಸಾಧ್ಯ-ವಾಗುವುದಿಲ್ಲ. ಅದು ಹೇಗೆ ಅನ್ನುವುದಕ್ಕೆ ಉದಾಹರಣೆ– ನೀರಿನಲ್ಲಿ ಗಾಳಿಯ ಹೊಡೆತಕ್ಕೆ ಸಿಕ್ಕ **ನಾವಮಿವ** = ದೋಣಿಯಂತೆ. ॥ 67 ॥

**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ 68 ॥**

**ಅರ್ಥ** – ಎಲೈ ಬಾಹುಶಾಲಿಯೆ ! ಆದ್ದರಿಂದ ಯಾರು ತನ್ನ ಇಂದ್ರಿಯಗಳನ್ನು ವಿಷಯಗಳ ಕಡೆಗೆ ಹರಿಯಗೊಡದೆ ಹಿಡಿತದಲ್ಲಿ ಇಟ್ಟುಕೊಂಡಿರುವನೋ ಅಂತಹವನಿಗೆ ಅಪರೋಕ್ಷಜ್ಞಾನವು ಹುಟ್ಟುತ್ತದೆ.

**ಪ್ರಜಹಾತೀತ್ಯಾದಿನೋಕ್ತಜ್ಞಾನಿಲಕ್ಷಣಸ್ಯಾಸಂಭವನಿರಾಸಾಯ ಜ್ಞಾನಸ್ಯ ಮಹಾಪ್ರಯತ್ನಸಾಧ್ಯೇಂದ್ರಿಯನಿಗ್ರಹಸಾಧ್ಯತ್ವಂ 'ವಿಷಯಾ ವಿನಿವರ್ತಂತ' ಇತ್ಯಾದಿನಾ ಯದುಕ್ತಂ ತದುಪಸಂಹರತಿ– ತಸ್ಮಾದಿತಿ ॥ ಯಸ್ಮಾದೇವಂ ನಿಗೃಹೀತೇಂದ್ರಿಯಸ್ಯೈವ ಉಕ್ತರೂಪಃ ಪ್ರಸಾದಃ, ಪ್ರಸಾದವತ ಏವ ಚಿತ್ತನಿರೋಧರೂಪಾ ಯುಕ್ತಿಃ , ಯುಕ್ತಿಮತ ಏವ ಶ್ರವಣಮನನೇ, ತಾಭ್ಯಾಂ ತತ್ತ್ವನಿಶ್ಚಯಃ ತತ್ತ್ವ ನಿಶ್ಚಯವತ ಏವಾಪರೋಕ್ಷಸಾಧನಂ ಧ್ಯಾನಮ್, ತಸ್ಮಾತ್ ಹೇ ಮಹಾಬಾಹೋ, ಸರ್ವಶ ಇಂದ್ರಿಯಾಣಿ = ಸರ್ವಾಣ್ಯಪೀಂದ್ರಿಯಾಣಿ ಇಂದ್ರಿಯಾರ್ಥೇಭ್ಯಃ= ರೂಪಾದಿಸರ್ವೇಂದ್ರಿಯವಿಷಯೇಭ್ಯೋ ಯಸ್ಯ ನಿಗೃಹೀತಾನಿ, ತಸ್ಯ ಪ್ರಜ್ಞಾ ಪ್ರತಿಷ್ಠಿತಾ । ಪ್ರಸಾದ-ಯುಕ್ತಿ-ಶ್ರವಣ-ಮನನ-ತತ್ತ್ವನಿಶ್ಚಯ-ಧ್ಯಾನ-ಪ್ರಣಾಡ್ಯಾ ಅಪರೋಕ್ಷಧೀಃ ಪ್ರತಿಷ್ಠಿತಾ= ಪ್ರಕರ್ಷೇಣ ಜಾಯತ ಇತಿ ॥ 68 ॥**

**ಅನುವಾದ** - **'ಪ್ರಜಹಾತಿ ಯದಾ ಕಾಮಾನ್'** (ಶ್ಲೋಕ. 55) ಎಂಬ ಶ್ಲೋಕವನ್ನು ಆರಂಭಿಸಿ ಅನೇಕ ಶ್ಲೋಕಗಳಲ್ಲಿ ಜ್ಞಾನಿಗೆ ಹೇಳಿರುವ ಲಕ್ಷಣವು ಜ್ಞಾನಿಯಲ್ಲಿ ಇರಲು ಸಾಧ್ಯವೇ ಇಲ್ಲ , ಎಂಬ ಆಕ್ಷೇಪಕ್ಕೆ – ಜ್ಞಾನವು 'ಮಹಾಪ್ರಯತ್ನಪಟ್ಟು ಸಾಧಿಸಬೇಕಾಗಿರುವ ಇಂದ್ರಿಯನಿಗ್ರಹವು ಇದ್ದರೆ ಮಾತ್ರ ಬರುತ್ತದೆ ' ಎನ್ನುವ ಪರಿಹಾರವನ್ನು **'ವಿಷಯಾ ವಿನಿವರ್ತಂತೇ'** ಮುಂತಾದ ಶ್ಲೋಕಗಳಲ್ಲಿ ಹೇಳಲಾಯಿತು . ಅದರ ಉಪಸಂಹಾರವನ್ನು ಈ ಶ್ಲೋಕದಲ್ಲಿ ಮಾಡಲಾಗಿದೆ.

ಯಾವ ಕಾರಣದಿಂದ ಇಂದ್ರಿಯನಿಗ್ರಹವಿದ್ದವನಿಗೆ ಮಾತ್ರ ಹಿಂದೆ ಹೇಳಿದ ಮನಃಪ್ರಸಾದವು ಉಂಟಾಗುವುದೋ, ಅಂತಹ ಪ್ರಸಾದವಿದ್ದರೆ ಮಾತ್ರ ಮನಸ್ಸಿನ ಏಕಾಗ್ರತೆ ಎಂಬ ಯುಕ್ತಿಯು ಉಂಟಾಗುವುದೋ, ಇಂತಹ ಏಕಾಗ್ರತೆ ಇದ್ದರೆ ಮಾತ್ರ ಶ್ರವಣ, ಮನನಗಳನ್ನು ಮಾಡಲು ಸಾಧ್ಯವೋ, ಅವುಗಳಿಂದಲೇ ತತ್ತ್ವದಲ್ಲಿ ದೃಢನಿಶ್ಚಯ ಬರಲು ಸಾಧ್ಯವೋ, ತತ್ತ್ವನಿಶ್ಚಯವಿದ್ದಲ್ಲಿ

ಮಾತ್ರ ಅಪರೋಕ್ಷಜ್ಞಾನಕ್ಕೆ ಸಾಧನವಾದ ಧ್ಯಾನವನ್ನು ಮಾಡಬಹುದಾಗಿದೆಯೋ, **ತಸ್ಮಾತ್**= ಆ ಕಾರಣದಿಂದಾಗಿ, ಎಲೈ ಬಾಹುಶಾಲಿಯೇ ! ಯಾವ ಸಾಧಕನ , **ಸರ್ವಶಃ ಇಂದ್ರಿಯಾಣಿ**= ಎಲ್ಲ ಇಂದ್ರಿಯಗಳೂ, **ಇಂದ್ರಿಯಾರ್ಥೇಭ್ಯಃ** = ರೂಪವೇ ಮೊದಲಾದ ಇಂದ್ರಿಯವಿಷಯ ಗಳಿಂದ ಈಚೆಗೆ ಸೆಳೆಯಲ್ಪಟ್ಟಿವೆಯೋ (ಅರ್ಥಾತ್ ಯಾರಿಗೆ ಇಂದ್ರಿಯನಿಗ್ರಹವಿದೆಯೋ) ಅವನಿಗೇ ಅಪರೋಕ್ಷಜ್ಞಾನವು ಸಿದ್ಧಿಸುವುದು.

ಮನಃಪ್ರಸಾದ, ಚಿತ್ತೈಕಾಗ್ರತೆ, ಶ್ರವಣ, ಮನನ, ತತ್ತ್ವನಿಶ್ಚಯ, ಧ್ಯಾನ ಈ ಕ್ರಮದಿಂದ ಅಪರೋಕ್ಷಜ್ಞಾನವು, **ಪ್ರತಿಷ್ಠಿತಾ** = ಸರಿಯಾಗಿ ಹುಟ್ಟುತ್ತದೆ , ಎಂದು ಶ್ಲೋಕದ ಅಭಿಪ್ರಾಯ.

## ಎಲ್ಲರಿಗೆ ಕತ್ತಲೆನಿಸಿದ ಬ್ರಹ್ಮನಲ್ಲಿ ಜ್ಞಾನಿ ಸದಾ ಜಾಗೃತ.

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥ 69 ॥**

**ಅರ್ಥ**– ಎಲ್ಲ ಅಜ್ಞಾನಿಗಳ ರಾತ್ರಿಯಲ್ಲಿ ಜ್ಞಾನಿಯು ಎಚ್ಚರವಾಗಿರುತ್ತಾನೆ. ಎಲ್ಲ ಅಜ್ಞಾನಿಗಳು ಎಚ್ಚರದಿಂದಿರುವಲ್ಲಿ ಜ್ಞಾನಿಗೆ ರಾತ್ರಿಯಾಗಿರುತ್ತದೆ. ಅಂದರೆ, ಅಜ್ಞಾನಿಗಳಿಗೆ ಕತ್ತಲಾಗಿರುವ ಪರಮಾತ್ಮನ ಸ್ವರೂಪದ ಬಗ್ಗೆ ಜ್ಞಾನಿಗಳು ಸದಾ ಎಚ್ಚೆತ್ತಿರುತ್ತಾರೆ. ಅಜ್ಞಾನಿಗಳೆಲ್ಲರೂ ಎಚ್ಚರ ದಿಂದಿರುವ ಭೋಗ್ಯ ವಸ್ತುಗಳು ಮನನಶೀಲನಾದ ಅಪರೋಕ್ಷಜ್ಞಾನಿಗೆ ಕತ್ತಲಿನಂತಾಗಿರುತ್ತವೆ .

**'ಸ್ಥಿತಪ್ರಜ್ಞಸ್ಯ ಕಾ ಭಾಷೇತಿ' ಪೃಷ್ಟಂ ಜ್ಞಾನಿಲಕ್ಷಣಂ 'ಪ್ರಜಹಾತೀತ್ಯಾದಿ ಶ್ಲೋಕಚತುಷ್ಟಯೇನ ಉಕ್ತ್ವಾ , ತಸ್ಯ ಸಂಭವಂ ಚ 'ವಿಷಯಾ' ಇತ್ಯಾದಿ ಶ್ಲೋಕನವಕೇನೋಕ್ತ್ವಾ 'ತಸ್ಮಾದಿತ್ಯನೇನ' ತದುಪಸಂಹೃತ್ಯೇದಾನೀಂ 'ಸ್ಥಿತಧೀಃ ಕಿಂ ಪ್ರಭಾಷೇತ' ಇತ್ಯುತ್ತರಾರ್ಧೇ ಭಾಷಣಾದಿಪ್ರವೃತ್ತಿಂ ಪರಮಾನಂದತೃಪ್ತಃ ಕಿಮರ್ಥಂ ಕರೋತೀತಿ ಕೃತಜ್ಞಾನಿಪ್ರವೃತ್ತ್ಯಾದ್ಯಾಕ್ಷೇಪಸ್ಯ ಉತ್ತರಮ್ ಆಹ– ಯಾ ನಿಶೇತಿ ॥ ಯದ್ವಾ 'ಪ್ರಜಹಾತೀತ್ಯಾದಿ'ಶ್ಲೋಕಚತುಷ್ಟಯೇ ವಿಕ್ಷಿಪ್ಯೋಕ್ತಂ ಜ್ಞಾನಿಲಕ್ಷಣಂ ಪಿಂಡೀಕೃತ್ಯಾಹ– ಯಾ ನಿಶೇತಿ ॥**

**ಅನುವಾದ** – 'ಸ್ಥಿತಪ್ರಜ್ಞಸ್ಯ ಕಾ ಭಾಷಾ ' ಈ ಶ್ಲೋಕದಲ್ಲಿ ಜ್ಞಾನಿಯ ಲಕ್ಷಣದ ಕುರಿತು ಪ್ರಶ್ನಿಸಲಾಗಿತ್ತು . ಅದಕ್ಕೆ ಉತ್ತರವಾಗಿ **'ಪ್ರಜಹಾತಿ ಯದಾ ಕಾಮಾನ್ '** ಇತ್ಯಾದಿ ನಾಲ್ಕು ಶ್ಲೋಕಗಳಲ್ಲಿ ಜ್ಞಾನಿಯ ಲಕ್ಷಣವನ್ನು ಹೇಳಲಾಯಿತು. ಮುಂದಿನ ಒಂಭತ್ತು ಶ್ಲೋಕಗಳಲ್ಲಿ

---

1. ತಸ್ಯಾಸಂಭವಮ್

ಜ್ಞಾನಿಗಳಲ್ಲಿ ಅಂತಹ ಲಕ್ಷಣವು ಇರಲು ಸಾಧ್ಯವಿಲ್ಲ , ಎನ್ನುವ ಆಕ್ಷೇಪವನ್ನು ಮಾಡಿ ಪರಿಹರಿಸಲಾಯಿತು . 'ತಸ್ಮಾದ್ಯಸ್ಯ ' ಎಂಬ ಹಿಂದಿನ ಶ್ಲೋಕದಲ್ಲಿ ಜ್ಞಾನಿಯ ಲಕ್ಷಣವನ್ನು ಉಪಸಂಹಾರ ಮಾಡಲಾಯಿತು . ಇದೀಗ ಈ ಶ್ಲೋಕದಲ್ಲಿ **'ಸ್ಥಿತಧೀಃ ಕಿಂ ಪ್ರಭಾಷೇತ'** ಎಂದು 54ನೇ ಶ್ಲೋಕದ ಉತ್ತರಾರ್ಧದಲ್ಲಿ ಅರ್ಜುನ ಕೇಳಿದ ಪ್ರಶ್ನೆಗೆ ಉತ್ತರಿಸಲಾಗಿದೆ. ಜ್ಞಾನಿಯು ಬ್ರಹ್ಮದರ್ಶನದ ಪರಮಾನಂದದಲ್ಲಿ ಮುಳುಗಬಲ್ಲವನು ಅಲ್ಪಪ್ರಯೋಜನದ ಉದ್ದೇಶದಿಂದ ಮತ್ತೊಬ್ಬರೊಂದಿಗೆ ಮಾತುಕತೆ ಮುಂತಾದುವನ್ನು ಏಕೆ ಮಾಡುತ್ತಾನೆ ? ಎಂದು ಅರ್ಜುನ ಜ್ಞಾನಿಗಳ ಬಗ್ಗೆ ಮಾಡಿದ ಆಕ್ಷೇಪ. ಇದಕ್ಕೆ ಉತ್ತರ ಈ ಶ್ಲೋಕದಲ್ಲಿದೆ.

ಅಥವಾ, **'ಪ್ರಜಹಾತಿ ಯದಾ ಕಾಮಾನ್'** ಇತ್ಯಾದಿ ನಾಲ್ಕು ಶ್ಲೋಕಗಳಲ್ಲಿ ಜ್ಞಾನಿಯ ಲಕ್ಷಣಗಳನ್ನು ಅನುಸ್ಯೂತತೆ ಇಲ್ಲದೆ, ಅಲ್ಲಲ್ಲಿ ಹೇಳಲಾಗಿದೆ. ಈ ಶ್ಲೋಕದಲ್ಲಿ ಆ ಎಲ್ಲಾ ಲಕ್ಷಣಗಳನ್ನು ಸಂಗ್ರಹಿಸಿ ಹೇಳಲಾಗಿದೆ.

**ಯಾ ಭೂತಾನಾಂ= ಪ್ರಾಣಿನಾಂ ನಿಶೇವ ನಿಶಾ= ಪರಮೇಶ್ವರಸ್ವರೂಪ-ಲಕ್ಷಣಾ, ಯತ್ಪರಮೇಶ್ವರಸ್ವರೂಪಂ ಪ್ರಾಣಿನಾಂ ನಿಶಾಸ್ಥಾನೀಯಮಿತಿ ಯಾವತ್ । ನಿಶಾಯಾಂ ಸುಪ್ತಾನೀವ ನ ಕಿಂಚಿತ್ ಭಗವತ್‌ಸ್ವರೂಪಂ ಜಾನಂತೀತಿ ಭಾವಃ । ತಸ್ಯಾಂ = ಭಗವತ್‌ಸ್ವರೂಪಲಕ್ಷಣಾಯಾಂ ಪ್ರಾಣಿನಿಶಾಯಾಂ ಸಂಯಮೀ = ಇಂದ್ರಿಯಸಂಯಮಯುಕ್ತೋ ಜ್ಞಾನೀ ಜಾಗರ್ತಿ= ಭಗವತ್-ಸ್ವರೂಪಂ ಸಮ್ಯಗಾಪರೋಕ್ಷ್ಯೇಣ ಪಶ್ಯತಿ । ಯಸ್ಯಾಂ ವಿಷಯಲಕ್ಷಣಾಯಾಂ ಭೂತಾನಿ ಜಾಗ್ರತಿ = ರೂಪಾದಿವಿಷಯೇಷ್ವಾಸಕ್ತ್ಯಾಽನುಭವವಂತೋ ವರ್ತಂತೇ ಪ್ರಾಣಿನಃ ಸಾ ನಿಶಾ ಮುನೇಃ = ಮನನವತಃ, ಅತ ಏವ ಪಶ್ಯತಃ= ಅಪರೋಕ್ಷಿಣಃ ಸಾ ನಿಶೇವ ನಿಶಾ । ನ ಕಿಂಚಿಜ್ಜಾನಾತೀತ್ಯರ್ಥಃ ।**

**ಅನುವಾದ** - ಯಾವುದು **ಭೂತಾನಾಂ** = ಜೀವರಾಶಿಗೆ ರಾತ್ರಿಯಂತಿದೆಯೋ, ಅಂತಹ ಭಗವಂತನ ಸ್ವರೂಪವೇ **'ನಿಶಾ'** ಎಂದು ಈ ಶ್ಲೋಕದಲ್ಲಿ ಕರೆಯಲ್ಪಟ್ಟಿದೆ. ಅರ್ಥಾತ್ ಭಗವತ್ಸ್ವರೂಪವು ಅಜ್ಞಾನಿಗಳ ಪಾಲಿಗೆ ರಾತ್ರಿಯ ಸ್ಥಾನದಲ್ಲಿದೆ. ಏಕೆಂದರೆ, ರಾತ್ರಿಯಲ್ಲಿ ಮಲಗಿದವರಂತೆ, ಅಜ್ಞಾನಿಗಳು ಭಗವಂತನ ಸ್ವರೂಪದ ಬಗ್ಗೆ ಏನನ್ನೂ ತಿಳಿಯಲಾರರು ಎಂದು ಭಾವ.

ಇಂತಹ ಭಗವತ್ಸ್ವರೂಪವೆಂಬ ಅಜ್ಞಾನಿಗಳ ಪಾಲಿನ ರಾತ್ರಿಯಲ್ಲಿ , **ಸಂಯಮೀ**= ಇಂದ್ರಿಯ ನಿಗ್ರಹವುಳ್ಳ ಜ್ಞಾನಿಯು ಎಚ್ಚರವಾಗಿರುತ್ತಾನೆ. ಇದರರ್ಥ– ಭಗವಂತನ ಸ್ವರೂಪ ವನ್ನು ಜ್ಞಾನಿಯು ಕಣ್ಣೆದುರಿಗೆ ಸ್ಪಷ್ಟವಾಗಿ ನೋಡುತ್ತಾನೆ , ಎಂದು.

ಯಾವ ಭೋಗ್ಯಪದಾರ್ಥಗಳೆಂಬ ಹಗಲಿನ ಕಾಲದಲ್ಲಿ ಎಲ್ಲ ಅಜ್ಞಾನಿಗಳೂ ಎಚ್ಚರ-ವಾಗಿರುವರೋ , ಅರ್ಥಾತ್ ರೂಪ-ರಸಾದಿ ವಿಷಯಪದಾರ್ಥಗಳನ್ನು ಅತ್ಯಾಸಕ್ತಿಯಿಂದ ಅನುಭವಿಸುತ್ತಲೇ ಇರುವರೋ, ಅದು, **ಮುನೇಃ**= ಶಾಸ್ತ್ರಾರ್ಥಮನನ ಮಾಡಿರುವ, ಆ ಕಾರಣದಿಂದಲೇ, **ಪಶ್ಯತಃ**= ಅಪರೋಕ್ಷಜ್ಞಾನವನ್ನು ಪಡೆದವನಿಗೆ , **ನಿಶಾ**= ರಾತ್ರಿಯಂತೆ. ಅವನು ಅದರ ಬಗ್ಗೆ ಏನನ್ನೂ ತಿಳಿಯಲಾರ ಎಂದರ್ಥ.

**ತಥಾತ್ವೇ ಭಾಷಣಭಿಕ್ಷಾಟನಾದಿ ಪ್ರವೃತ್ತ್ಯನುಪಪತ್ತಿರಿತಿ ಚೇತ್ । ಪ್ರಾರಬ್ಧ-ಕರ್ಮಣಾ ಈಷತ್ತಿರೋಹಿತ ಬ್ರಹ್ಮಸ್ವರೂಪಸ್ಯ ವಾಸನಯಾ ಪ್ರಾಯೋಽ-ಲ್ಪಾಭಿಸಂಧಿಪೂರ್ವಕಪ್ರವೃತ್ತೀನಾಂ ಮತ್ತಸ್ಯೇವೋಪಪತ್ತೇರಿತಿ ಭಾವಃ ।**

**ಏತೇನ, 'ನಿತ್ಯಂ ಭಗವದೇಕಚಿತ್ತತಯಾ ತದಿತರತ್ರಾಭಿಸಂಧಿಹೀನತ್ವಂ' ಜ್ಞಾನಿ-ಲಕ್ಷಣಮಿತ್ಯುಕ್ತಂ ಭವತಿ । ಏತಚ್ಚ ದೇವೇತರಜ್ಞಾನಿಲಕ್ಷಣಂ ಬೋಧ್ಯಮ್ । ಅನ್ಯಥಾ ಸರ್ವಪ್ರೇರಕಾಣಾಂ ದೇವಾನಾಮಪಿ ಜ್ಞಾನಿತ್ವಾತ್ತೇಷಾಂ ಭಗವದಿತರತ್ರಾಭಿ-ಸಂಧ್ಯಭಾವೇ ಲೋಕಯಾತ್ರೋಚ್ಛೇದಾಪತ್ತೇಃ ।**

**ಶಬ್ದಕ್ರಮಾತ್ ಅರ್ಥಕ್ರಮಸ್ಯ ಬಲವತ್ತ್ವಾತ್, ಮುನೇಃ ಪಶ್ಯತ ಇತಿ ವ್ಯತ್ಯಾಸೇನ ಮುನೇಃ = ಮನನವತಃ ಪಶ್ಯತ ಇತಿ ಪೌರ್ವಾಪರ್ಯೇಣ ಯೋಜನಾ । ತತಶ್ಚ ತಯೋರ್ಹೇತುಹೇತುಮದ್ಭಾವಲಾಭಃ । ಸ ಚ ಮನನಾದೇಃ ಪ್ರಾಕ್ ದರ್ಶನ-ಸಾಧನತ್ವಸ್ಯ ಸ್ಪಷ್ಟಮನುಕ್ತೇಃ ಇಹ ಪ್ರಸಂಗಾದುಕ್ತ ಇತಿ ॥ 69 ॥**

**ಅನುವಾದ** - ಜ್ಞಾನಿಗೆ ಪ್ರಾಪಂಚಿಕ ಪರಿಜ್ಞಾನವೇ ಇಲ್ಲವೆಂದಾದರೆ ಮತ್ತೊಬ್ಬರೊಂದಿಗೆ ಮಾತುಕತೆ, ಹೊಟ್ಟೆತುಂಬಿಸಲು ಭಿಕ್ಷಾಟನೆ ಇವುಗಳಲ್ಲಿ ಅವನಿಗೆ ಪ್ರವೃತ್ತಿ ಹೇಗೆ ? ಅದಕ್ಕುತ್ತರ-ಪ್ರಾರಬ್ಧಕರ್ಮದಿಂದಾಗಿ ಜ್ಞಾನಿಗೆ ಭಗವಂತನ ಸ್ವರೂಪವು ಸ್ವಲ್ಪ ತಿರೋಹಿತವಾದಾಗ ಅವನು ಅದುವರೆಗಿನ ಸಂಸ್ಕಾರದಿಂದಾಗಿ, ಪ್ರಪಂಚದ ಬಗ್ಗೆ ಅಲ್ಪ ಅಭಿಮಾನಹೊಂದಿ, ಮಾದಕದ್ರವ್ಯ ಸೇವಿಸಿದವನು ಮಾಡುವಂತೆ ಅವನೂ ಪ್ರಾಪಂಚಿಕ ವ್ಯವಹಾರಗಳನ್ನು ನಡೆಸುತ್ತಾನೆ. ಇದೇ ಈ ಶ್ಲೋಕದ ಅಭಿಪ್ರಾಯವಾಗಿದೆ.

ಹೀಗೆ ಹೇಳುವ ಮೂಲಕ – ಸದಾ ಭಗವನ್ಮುಖವಾಗಿದ್ದು ಪ್ರಾಪಂಚಿಕ ವಿಷಯಗಳಲ್ಲಿ ಅನಾಸಕ್ತಿಯೇ ಜ್ಞಾನಿಗಳ ಲಕ್ಷಣ, ಎಂದು ತಿಳಿಸಿದಂತಾಗುತ್ತದೆ.

ಇದು ದೇವತೆಗಳನ್ನು ಬಿಟ್ಟು ಇತರ ಜ್ಞಾನಿಗಳ ಲಕ್ಷಣ . ಇತರ ಜ್ಞಾನಿಗಳಂತೆ ದೇವತೆಗಳೂ ಬ್ರಹ್ಮಾಪರೋಕ್ಷಜ್ಞಾನದಲ್ಲಿ ಮುಳುಗಿದ್ದು ಪ್ರಪಂಚದ ಪರಿಜ್ಞಾನವನ್ನೇ ಕಳೆದುಕೊಂಡರೆ ಲೋಕದ

ಎಲ್ಲ ಕ್ರಿಯೆಗಳೂ ಸ್ತಬ್ಧವಾಗಬೇಕಾದೀತು. (ಏಕೆಂದರೆ, ಪ್ರಪಂಚದ ಎಲ್ಲ ಕ್ರಿಯೆಗಳಿಗೂ ಕಾರಣರು ತತ್ತ್ವಾಭಿಮಾನಿ ದೇವತೆಗಳು. ಅವರಿಗೆ ಪ್ರಪಂಚದ ಅರಿವೇ ಇಲ್ಲವಾದರೆ ಪ್ರಪಂಚ ನಡೆಯುವುದು ಹೇಗೆ ಸಾಧ್ಯ ?) ಆದ್ದರಿಂದ ದೇವತೆಗಳಿಗೆ ಪ್ರಾಪಂಚಿಕ ಅರಿವು ಸದಾಕಾಲ ಇರುತ್ತದೆ .

ಗೀತೆಯಲ್ಲಿ 'ಪಶ್ಯತಃ ಮುನೇಃ' ಎಂದು ಶಬ್ದದ ಕ್ರಮವಿದೆ. ಮೊದಲು ಪಶ್ಯತಃ ಶಬ್ದ . ಆಮೇಲೆ ಮುನೇಃ ಶಬ್ದ. ಆದರೆ, ಅವೆರಡು ಶಬ್ದಗಳ ಅರ್ಥಕ್ರಮ ಶಬ್ದಕ್ರಮದಂತಿಲ್ಲ. ಮುನಿಶಬ್ದದ ಅರ್ಥವಾದ ಮನನ ಮೊದಲು , 'ಪಶ್ಯತಃ' ಶಬ್ದದ ಅರ್ಥವಾದ ಅಪರೋಕ್ಷಜ್ಞಾನವು ಆಮೇಲೆ. ಶಬ್ದಕ್ರಮ ಗೌಣ, ಅರ್ಥಕ್ರಮ ಪ್ರಧಾನ. ಆದ್ದರಿಂದ ಕ್ರಮವ್ಯತ್ಯಾಸ ಮಾಡಿಕೊಂಡು ಮನನ ಮಾಡಿ ಅಪರೋಕ್ಷಜ್ಞಾನ ಪಡೆದವನಿಗೆ, ಎಂದು ಅರ್ಥಮಾಡಿಕೊಳ್ಳಬೇಕು. ಇದರಿಂದ ಅವೆರಡಕ್ಕೆ ಪರಸ್ಪರ ಕಾರ್ಯಕಾರಣಭಾವವೂ ತಿಳಿಯುತ್ತದೆ. ಮನನವು ಕಾರಣ, ಅಪರೋಕ್ಷಜ್ಞಾನವು ಕಾರ್ಯ, ಎಂದು. ಹಿಂದೆಲ್ಲೂ ಮನನವು ಅಪರೋಕ್ಷಕ್ಕೆ ಕಾರಣ ಎಂದು ಸ್ಪಷ್ಟವಾಗಿ ಹೇಳಲಾಗಿಲ್ಲ. ಅದಕ್ಕಾಗಿ, ಇಲ್ಲಿ ಆ ವಿಷಯವನ್ನು ಪ್ರಾಸಂಗಿಕವಾಗಿ ಹೇಳಲಾಗಿದೆ, ಎಂದು ತಿಳಿಯಬೇಕು. ||69||

## ಭೋಗಗಳನ್ನು ಅನುಭವಿಸುವಾಗಲೂ ಅವುಗಳ ಬಗ್ಗೆ ಆಕರ್ಷಣೆ ತೋರೆದವನು ಮುಕ್ತನಾಗುವನು.

**ಆಪೂರ್ಯಮಾಣಮಚಲಪ್ರತಿಷ್ಠಂ**
**ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।**
**ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ**
**ಸ ಶಾಂತಿಮಾಪ್ನೋತಿ ನ ಕಾಮಕಾಮೀ || 70 ||**

**ಅರ್ಥ**- ಸಮುದ್ರವು ಅನೇಕ ನದಿಯ ನೀರುಗಳಿಂದ ತುಂಬಲ್ಪಟ್ಟರೂ ಹೇಗೆ ವಿಶೇಷ ವೃದ್ಧಿರಹಿತವಾಗಿ ತಾನು ಇದ್ದಂತೆಯೇ ಇರುವುದೋ ಅದೇ ರೀತಿಯಾಗಿ, ಯಾವ ಜ್ಞಾನಿಯನ್ನು ವಿಷಯ ಭೋಗಗಳು ಪ್ರವೇಶಿಸುವವೋ, ಅವನು ಮಾತ್ರ ಮೋಕ್ಷವನ್ನು ಹೊಂದಬಲ್ಲನು, ಹೊರತು ದುರ್ವಿಷಯಗಳಲ್ಲಿ ಆಸಕ್ತನಾದವನು ಮೋಕ್ಷ ಪಡೆಯಲಾರ.

**ನನು ಜ್ಞಾನಿನೋ ಬಾಹ್ಯಾನುಸಂಧಾನಹೀನಸ್ಯ ಮತ್ತಸ್ಯೇವ ಯುಜ್ಯೇತಾಪಿ ಕಥಂಚಿದ್ಗಮನಾದಿಕಮ್ । ವಿಷಯಾನುಭವಸ್ತು ದೃಶ್ಯಮಾನಃ ಕಥಂ ಸ್ಯಾತ್ ? ತಸ್ಯ ನಿಯತಸಾಧನಸಾಧ್ಯಸ್ಯಾನುಸಂಧಾನೇನ ವಿನಾಽನುದಯಾತ್, ಇತ್ಯತೋ**

**ಜ್ಞಾನಿನಾ ಕ್ರಿಯಮಾಣವಿಷಯಾನುಭವಪ್ರಕಾರಮಾಹ– ಆಪೂರ್ಯಮಾಣ-ಮಿತಿ ॥**

**ಅನುವಾದ** – ಬಾಹ್ಯ ಪ್ರಪಂಚದ ಅರಿವು ಇಲ್ಲದೆಯೂ ಜ್ಞಾನಿಯು ಮದವೇರಿದವನಂತೆ ಬಾಹ್ಯಪ್ರಜ್ಞೆ ಇಲ್ಲದೆ ಗಮನಾದಿ ವ್ಯವಹಾರಗಳನ್ನು ನಡೆಸಬಹುದು . ಆದರೆ, ಅಂತಹ ಜ್ಞಾನಿಗಳೂ ಉಣ್ಣುವುದು , ತಿನ್ನುವುದು ಮುಂತಾಗಿ ಭೋಗ್ಯ ಪದಾರ್ಥಗಳನ್ನು ಸೇವಿಸುವುದೂ ಕಂಡು ಬರುತ್ತದೆ. ಇದು ಆಯಾಯ ವಿಷಯಪದಾರ್ಥಗಳ ಸರಿಯಾದ ಪರಿಜ್ಞಾನವಿಲ್ಲದೆ ಸಾಧ್ಯವಿಲ್ಲ. ಏಕೆಂದರೆ, ಇಂತಹ ಪದಾರ್ಥಗಳನ್ನು ಸೇವಿಸಿದರೆ ಹೀಗಾಗುತ್ತದೆ, ಇಲ್ಲವಾದರೆ ಇಲ್ಲ ಎನ್ನುವ ಪ್ರಜ್ಞೆ ಇದಕ್ಕೆ ಅಗತ್ಯವಾಗಿದೆ. ಆದ್ದರಿಂದ ಅಪರೋಕ್ಷದ ಪರಮಾನಂದದಲ್ಲಿ ಮಗ್ನನಾದ ಜ್ಞಾನಿಗೆ ಬಾಹ್ಯವಿಷಯಪರಿಜ್ಞಾನವನ್ನು ಹೇಳಲೇಬೇಕಾಗುತ್ತದೆ.

ಈ ಆಕ್ಷೇಪದ ಪರಿಹಾರಕ್ಕಾಗಿ ಜ್ಞಾನಿಯ ವಿಷಯಾನುಭವ ಕ್ರಮವನ್ನು ಈ ಶ್ಲೋಕದಲ್ಲಿ ಹೇಳಲಾಗಿದೆ.

**ನಾನಾನದೀಜಲೈರಾಪೂರ್ಯಮಾಣಮಪಿ ಅಚಲಪ್ರತಿಷ್ಠಂ= ಸರಿತ್ ಪ್ರವೇಶಾದ್ ವೃದ್ಧಿವಿಶೇಷಹೀನತಯಾ ಸ್ವಭಾವತ ಏವ ಸ್ಥಿತಮ್, ಸರಿತಾಮ್ ಅಪ್ರವೇಶನಿಮಿತ್ತಶೋಷಹೀನಂ ಚ , ಸರಿತ್ಪ್ರವೇಶಾರ್ಥಂ ಯತ್ನಹೀನಂ ಚೇತ್ಯಪಿ ಧ್ಯೇಯಮ್ । ಸಮುದ್ರಮಾಪೋ ಯದ್ವತ್ = ಯಥಾ ಪ್ರವಿಶಂತಿ ತದ್ವತ್ = ತಥಾ ಯಂ = ಜ್ಞಾನಿನಂ ವಿಷಯೈರಾಪೂರ್ಯಮಾಣತ್ವೇ ವಾ ಅನಾಪೂರ್ಯಮಾಣತ್ವೇ ವಾ ಉತ್ಸೇಕಾನುತ್ಸೇಕಹೀನಂ ಕಾಮಾಃ = ವಿಷಯಾಃ ಪ್ರವಿಶಂತಿ ಸ ಜ್ಞಾನೀ ಶಾಂತಿಂ= ಮೋಕ್ಷಮ್ ಆಪ್ನೋತಿ । ನ ತು ಕಾಮಕಾಮೀ= ಕುತ್ಸಿತ-ವಿಷಯೇಚ್ಛಾವಾನ್ ಶಾಂತಿಮಾಪ್ನೋತೀತ್ಯರ್ಥಃ । ಯದ್ವಾ, ವಿಷಯಭೋಕ್ತಾ ಕ-ಕಾಮೀ ಕಥಮುಚ್ಯತ ಇತ್ಯತ ಉಕ್ತಮ್ – ನೇತಿ ॥ ಏವಂ ವಿಷಯಾನನುಭವನ್ ಸ ಜ್ಞಾನೀ ನ ಕಾಮಕಾಮೀ ॥ 70 ॥**

**ಅನುವಾದ** – ಅನೇಕ ನದಿಗಳ ನೀರಿನಿಂದ ತುಂಬಲ್ಪಟ್ಟರೂ ಸಮುದ್ರವು, **ಅಚಲಪ್ರತಿಷ್ಠಂ=** ನದಿಗಳ ಪ್ರವೇಶದಿಂದ ವಿಶೇಷ ವೃದ್ಧಿ ಇಲ್ಲದೆ ತಾನಿದ್ದಂತೆಯೇ ಇರುತ್ತದೆ. ನದಿಗಳು ಹರಿದು ಬರದಿದ್ದರೂ ಒಣಗುವುದೂ ಇಲ್ಲ, ನದಿಗಳ ಪ್ರವೇಶಕ್ಕಾಗಿ ವಿಶೇಷಪ್ರಯತ್ನವನ್ನೂ ಅದು ಮಾಡುವುದಿಲ್ಲ . **ತದ್ವತ್** = ಅದರಂತೆಯೇ, ಯಾವ ಜ್ಞಾನಿಯು ವಿಷಯ ವಸ್ತುಗಳನ್ನು ಸಿಕ್ಕಿದಾಗ ಉಬ್ಬದೆ ಸಿಗದಿದ್ದಾಗ ಕುಗ್ಗದೆ ಅನಾಸಕ್ತನಾಗಿ ಸೇವಿಸುವನೋ ಅಂತಹ ಜ್ಞಾನಿಯು,

**ಶಾಂತಿಂ=** ಮೋಕ್ಷವನ್ನು ಹೊಂದುತ್ತಾನೆ. ಹೊರತು, **ಕಾಮಕಾಮೀ=** ಕುತ್ಸಿತವಾದ ವಿಷಯಾಭಿಲಾಷೆ ಇರುವವನು ಮೋಕ್ಷವನ್ನು ಹೊಂದಲಾರ.

ಅಥವಾ , **'ನ ಕಾಮಕಾಮೀ'** ಎನ್ನುವುದಕ್ಕೆ ಹೀಗೂ ಅರ್ಥ ಹೇಳಬಹುದು – ವಿಷಯ ಪದಾರ್ಥಗಳನ್ನು ಅನುಭವಿಸುವ ಜ್ಞಾನಿಗೆ ವಿಷಯಾಭಿಲಾಷೆ ಇಲ್ಲದಿರುವುದು ಹೇಗೆ ಸಾಧ್ಯ ? ಎನ್ನುವ ಪ್ರಶ್ನೆಗೆ ಇದು ಉತ್ತರ– ಜ್ಞಾನಿಯು ವಿಷಯಗಳನ್ನು ಅನುಭವಿಸುತ್ತಿದ್ದರೂ ಅರ್ಥಾತ್ ಉಂಡು-ತಿನ್ನುತ್ತಿದ್ದರೂ ಅವನಿಗೆ ಆ ವಿಷಯ ವಸ್ತುಗಳಲ್ಲಿ ಕಾಮನೆ ಇರುವುದಿಲ್ಲ. ಅವುಗಳನ್ನು ಸೇವಿಸಿದರೂ, ಬಿಟ್ಟರೂ ಅವನು ಏರಿಳಿತವಿಲ್ಲದೆ, ಉದ್ವೇಗಕ್ಕೆ ಒಳಗಾಗದೆ ಒಂದೇ ರೀತಿಯಾಗಿರುತ್ತಾನೆ .

**ವಿವರಣೆ–** ಅಸಂಪ್ರಜ್ಞಾತ ಸಮಾಧಿಯಿಂದ ಎಚ್ಚೆತ್ತಾಗ ಜ್ಞಾನಿಗೆ ಬಾಹ್ಯಪ್ರಪಂಚದ ಪರಿಜ್ಞಾನವು ಇದ್ದೇ ಇದೆ. ಆದ್ದರಿಂದಲೇ ಅವನು ವಿಷಯಪದಾರ್ಥಗಳನ್ನು ಅನುಭವಿಸುತ್ತಾನೆ. ಆದರೆ, ಭೋಗ್ಯಪದಾರ್ಥಗಳು ದೊರೆತರೂ, ದೊರಕದೇ ಇದ್ದರೂ ಯಾವುದೇ ಉದ್ರೇಕಕ್ಕೆ ಅವನು ಒಳಗಾಗುವುದಿಲ್ಲ . ಸಮುದ್ರ ನದೀನೀರನ್ನು ಸ್ವೀಕರಿಸುವಂತೆ ಅವನು ವಿಷಯ-ವಸ್ತುಗಳನ್ನು ಸೇವಿಸುತ್ತಾನೆ. ಸಮುದ್ರವು ನದಿಗಳ ನೀರು ಸೇರಿದರೆ ಉಬ್ಬುವುದೂ ಇಲ್ಲ ; ಸೇರದಿದ್ದರೆ ಒಣಗುವುದೂ ಇಲ್ಲ . ಅಥವಾ, ನೀರನ್ನು ತುಂಬಿಕೊಳ್ಳಲು ತಾನಾಗಿ ಯಾವುದೇ ಪ್ರಯತ್ನವನ್ನೂ ಅದು ಮಾಡುವುದಿಲ್ಲ . ಅದರಂತೆಯೇ ಜ್ಞಾನಿಯೂ ಭೋಗ್ಯವಸ್ತುಗಳ ಸಂಗ್ರಹಕ್ಕಾಗಿ ಪ್ರಯತ್ನವನ್ನೇನೂ ಮಾಡುವುದಿಲ್ಲ . ಭೋಗ್ಯವಸ್ತುಗಳು ದೊರಕಿದರೂ ಇಲ್ಲದಿದ್ದರೂ ಉದ್ವೇಗಕ್ಕೆ ಒಳಗಾಗುವುದಿಲ್ಲ . ಇದು ಜ್ಞಾನಿಗಳ ವಿಷಯಭೋಗದ ಕ್ರಮವಾಗಿದೆ. ॥ 70 ॥

**ವಿಹಾಯ ಕಾಮಾನ್ಯಃ ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥ 71 ॥**

**ಅರ್ಥ** – ಯಾರು ನಿಷಿದ್ಧವಾದ ಆಕಾಂಕ್ಷೆಯನ್ನು ಪರಿತ್ಯಜಿಸಿ, 'ಇವೆಲ್ಲವೂ ನನ್ನದೇ' ಎಂಬ ಒಡೆತನದ ಭಾವನೆ ಹಾಗೂ 'ನಾನು ಈ ಕೆಲಸವನ್ನು ಮಾಡುತ್ತಿದ್ದೇನೆ ' ಎಂಬ ಸ್ವಾತಂತ್ರ್ಯ ಭಾವನೆಗಳನ್ನು ತೊರೆದು ಭೋಗ್ಯವಸ್ತುಗಳನ್ನು ಅನುಭವಿಸುವನೋ ಅವನೇ ನಿಜವಾದ ಮನುಷ್ಯ . ಉಳಿದವರು ಪಶುಗಳು. ಅಂತಹವನು ಮಾತ್ರ ಮೋಕ್ಷವನ್ನು ಪಡೆಯುತ್ತಾನೆ.

**ಏತತ್ ಶ್ಲೋಕೋಕ್ತಂ ಪ್ರಪಂಚಯತಿ – ವಿಹಾಯೇತಿ ॥ ಯೋ ನಿಃಸ್ಪೃಹೋ ನಿಷಿದ್ಧಸ್ಪೃಹಾಹೀನಃ, ನಿರ್ಮಮಃ= ಸ್ವಾಮಿತ್ವಾಭಿಮಾನಹೀನಃ ನಿರಹಂಕಾರಃ=**

**ಭಕ್ಷಯಾಮೀತಿ ಕರ್ತೃತ್ವಾಭಿಮಾನಹೀನಃ ಚರತಿ = ಭಕ್ಷಯತಿ । ಭಕ್ಷಯಾಮೀತಿ ಕರ್ತೃತ್ವಾದ್ಯಭಿಮಾನತ್ಯಾಗೇನ ವಿಷಯಾನನುಭವತೀತ್ಯರ್ಥಃ । ಸ ಏವ ಪುಮಾನ್, ಅನ್ಯಃ ಪಶುರಿತಿ ವಾ, ಸ ಪುಮಾನ್ ಶಾಂತಿಮಧಿಗಚ್ಛತೀತಿ ವಾ ಜ್ಞಾನಿನ ಇಯಂ ಸ್ತುತಿಃ ॥ 71 ॥**

**ಅನುವಾದ-** ಹಿಂದಿನ ಶ್ಲೋಕದಲ್ಲಿ ಹೇಳಿರುವ ವಿಷಯವನ್ನೇ ಈ ಶ್ಲೋಕದಲ್ಲಿ ವಿವರಿಸಲಾಗಿದೆ.

ಯಾರು, **ನಿಸ್ಪೃಹಃ**= ನಿಷಿದ್ಧ ಆಸೆಗಳನ್ನು ತೊರೆದವನಾಗಿ, **ನಿರ್ಮಮಃ**= ತನ್ನ ಒಡೆತನದ ಭ್ರಮೆಯನ್ನು ಬಿಟ್ಟವನಾಗಿ, **ನಿರಹಂಕಾರಃ**= ನಾನು ತಿನ್ನುತ್ತೇನೆ, ಉಣ್ಣುತ್ತೇನೆ ಎಂಬ ಸ್ವತಂತ್ರಕರ್ತೃತ್ವಭ್ರಮೆಯನ್ನೂ ತೊರೆದವನಾಗಿ, **ಚರತಿ** = ವಿಷಯಗಳನ್ನು ಭೋಗಿಸುವನೋ ಅಂತಹವನೇ ಮನುಷ್ಯನು , ಇತರರು ಪಶುಗಳು. ಅಥವಾ ಅಂತಹ ಮನುಷ್ಯನೇ ಮೋಕ್ಷವನ್ನು ಹೊಂದುತ್ತಾನೆ . ಹೀಗೆ , ಇದು ಜ್ಞಾನಿಯ ಸ್ತುತಿ .

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಽಸ್ಯಾಮಂತಕಾಲೇಽಪಿ ಬ್ರಹ್ಮ ನಿರ್ವಾಣಮೃಚ್ಛತಿ ॥ 72 ॥**

*॥ ಓಂತತ್ಸದಿತಿ ಶ್ರೀಮದ್‌ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ*
*ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಸಾಂಖ್ಯಯೋಗೋ ನಾಮ*
*ದ್ವಿತೀಯೋಽಧ್ಯಾಯಃ ॥*

**ಅರ್ಥ–** ಇದುವರೆಗೆ ಹೇಳಿರುವ ನಡವಳಿಕೆಯೇ ಜ್ಞಾನಿಯ ಬ್ರಹ್ಮವಿಷಯಕವಾದ ಸ್ಥಿತಿಯಾಗಿದೆ. ಅರ್ಥಾತ್ ಬ್ರಹ್ಮಜ್ಞಾನಿಯ ಲಕ್ಷಣವಾಗಿದೆ. ಈ ಸ್ಥಿತಿಯನ್ನು ತಲುಪಿದವನು ಸಾಂಸಾರಿಕ ದುಃಖವನ್ನು ಅನುಭವಿಸುವುದಿಲ್ಲ. ದೇಹತ್ಯಾಗಕಾಲದಲ್ಲಿಯೂ ಈ ಮಾನಸಿಕ ಸ್ಥಿತಿಯನ್ನು ತಲುಪಿದರೆ ಪ್ರಾಕೃತದೇಹರಹಿತನಾದ ಬ್ರಹ್ಮನನ್ನು ಹೊಂದುವನು.

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ ಭಗವದ್ಗೀತೆಯಲ್ಲಿ*
*ಸಾಂಖ್ಯಯೋಗವೆಂಬ ಎರಡನೆಯ ಅಧ್ಯಾಯವು ಮುಗಿಯಿತು.*

'ಪ್ರಜಹಾತಿ' ಇತ್ಯಾದಿನೋಕ್ತಂ ಜ್ಞಾನಿಲಕ್ಷಣಪ್ರಕರಣಂ ಸಮಾಪಯತಿ– **ಏಷೇತಿ ॥** ಏಷಾ 'ಪ್ರಜಹಾತೀ'ತ್ಯಾದಿನೋಪಕ್ರಾಂತಾ 'ಯಾ ನಿಶೇ'ತ್ಯತ್ರ ನಿಷ್ಪಷ್ಯೋಕ್ತಾ ಬ್ರಾಹ್ಮೀ= ಬ್ರಹ್ಮವಿಷಯಾ ಸ್ಥಿತಿಃ । ಸರ್ವಕಾಮಪ್ರಹಾಣ–

**ನಿತ್ಯಭಗವದನುಸ್ಮೃತ್ಯಾದಿರೂಪಬ್ರಹ್ಮಜ್ಞಾನಿಲಕ್ಷಣರೂಪಾ ಸ್ಥಿತಿರಿತಿ ಯಾವತ್ । ಏನಾಮ್= ಉಕ್ತರೂಪಾಂ ಸ್ಥಿತಿಂ ಪ್ರಾಪ್ಯ ನ ಮುಹ್ಯತಿ= ಭವವೇದನಾನುಭವವಾನ್ನ ಭವತಿ । ಅಂತಕಾಲೇऽಪಿ= ದೇಹತ್ಯಾಗಕಾಲೇऽಪಿ ಅಸ್ಯಾಂ= ಭಗವದನುಸ್ಮೃತಿರೂಪಸ್ಥಿತ್ಯಾಮ್ ಸ್ಥಿತ್ವಾ ನಿರ್ವಾಣಂ = ಪ್ರಾಕೃತಶರೀರಹೀನಂ ಬ್ರಹ್ಮ ಋಚ್ಛತಿ= ಪ್ರಾಪ್ನೋತಿ ।**

**ಅನುವಾದ - ಪ್ರಜಹಾತಿ** ಎಂಬಲ್ಲಿಂದ ಇಲ್ಲಿಯವರೆಗೆ ಹೇಳಿರುವ ಜ್ಞಾನಿಗಳ ಲಕ್ಷಣಪ್ರಕರಣವನ್ನು ಈ ಶ್ಲೋಕದಲ್ಲಿ ಮುಕ್ತಾಯಗೊಳಿಸಲಾಗಿದೆ.

**ಏಷಾ** = ಇದುವೆ, ಎಂದರೆ , **'ಪ್ರಜಹಾತಿ ಯದಾ ಕಾಮಾನ್'** ಎಂಬ ಶ್ಲೋಕದಿಂದ ಪ್ರಾರಂಭಿಸಿ, **'ಯಾ ನಿಶಾ'** ಎಂಬಲ್ಲಿ ಸಂಗ್ರಹಿಸಿ ಹೇಳಿರುವ ಸ್ಥಿತಿಯೇ , **ಬ್ರಾಹ್ಮೀ** = ಬ್ರಹ್ಮವಿಷಯಕವಾದ ಸ್ಥಿತಿಯು. ಅರ್ಥಾತ್, ಸರ್ವಕಾಮಪರಿತ್ಯಾಗ ಹಾಗೂ ಸದಾ ಭಗವಂತನ ಸ್ಮರಣಾದಿರೂಪವಾದ ಬ್ರಹ್ಮಜ್ಞಾನಿಯ ಲಕ್ಷಣರೂಪವಾದ ಸ್ಥಿತಿಯಾಗಿದೆ. **ಏನಾಂ** = ಈ ಸ್ಥಿತಿಯನ್ನು ಹೊಂದಿದ ಬಳಿಕ , **ನ ಮುಹ್ಯತಿ** = ಸಂಸಾರ ದುಃಖವನ್ನು ಅನುಭವಿಸುವುದಿಲ್ಲ.

**ಅಂತಕಾಲೇऽಪಿ** = ದೇಹತ್ಯಾಗಕಾಲದಲ್ಲೂ, **ಅಸ್ಯಾಂ** = ಭಗವಂತನ ಸ್ಮರಣೆ ರೂಪವಾದ ಈ ಅವಸ್ಥೆಯಲ್ಲಿ ಇದ್ದುದಾದರೆ **ನಿರ್ವಾಣಂ** = ಪ್ರಾಕೃತದೇಹವಿಲ್ಲದ ಬ್ರಹ್ಮನನ್ನು , **ಋಚ್ಛತಿ** = ಹೊಂದುತ್ತಾನೆ.

**ಪ್ರಾರಬ್ಧಕರ್ಮಾಭಾವೇ ಯದ್ದೇಹೇ ಜ್ಞಾನೋದಯಃ ತದ್ದೇಹತ್ಯಾಗಕಾಲೇ ಭಗವದನುಸ್ಮೃತ್ಯಾ ತದ್ದೇಹಪಾತಾನಂತರಮೇವ ಮುಕ್ತಿಃ । ಪ್ರಾರಬ್ಧಸತ್ವೇ ತು ದೇಹಾಂತರಂ ಪ್ರಾಪ್ಯೇತಿ ಭಾವಃ । ತಥಾ ಚ ಸೂತ್ರಮ್- 'ಓಂ ಭೋಗೇನ ತ್ವಿತರೇ ಕ್ಷಪಯಿತ್ವಾऽಥ ಸಂಪತ್ಸ್ಯತೇ ಓಂ' (4-1-19) ಇತಿ । ಬ್ರಹ್ಮಪದೇನ ವಿರಿಂಚೋಪಾದಾನವ್ಯಾವೃತ್ತ್ಯರ್ಥಂ ನಿರ್ವಾಣಮಿತಿ ವಿಶೇಷಣಮ್ । ಪರಬ್ರಹ್ಮಪ್ರಾಪ್ತೇರೇವ ಮೋಕ್ಷತ್ವಾದಿತಿ ಭಾವಃ ॥72॥**

*॥ ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ ದ್ವಿತೀಯೋऽಧ್ಯಾಯಃ ॥*

**ಅನುವಾದ**– ಪ್ರಾರಬ್ಧಕರ್ಮವು ಇಲ್ಲವಾದಲ್ಲಿ, ಯಾವ ದೇಹದಲ್ಲಿ ಅಪರೋಕ್ಷಜ್ಞಾನವು ಲಭಿಸುವುದೋ ಭಗವಂತನ ಸ್ಮರಣೆಯೊಂದಿಗೆ ಆ ದೇಹಪಾತವಾದ ಕೂಡಲೇ ಮೋಕ್ಷವು

ದೊರೆಯುತ್ತದೆ . ಪ್ರಾರಬ್ಧ ಕರ್ಮ ಉಳಿದಿದ್ದರೆ ಮಾತ್ರ ಈ ದೇಹವನ್ನು ತೊರೆದರೂ ದೇಹಾಂತರವನ್ನು ಪಡೆದು ಅನಂತರವೇ ಮೋಕ್ಷ. ಇದನ್ನು ಈ ಬ್ರಹ್ಮಸೂತ್ರವೂ ಹೇಳುತ್ತದೆ– 'ಜ್ಞಾನಿಯು ಪ್ರಾರಬ್ಧಕರ್ಮವನ್ನು ಭೋಗದಿಂದ ನಾಶಗೊಳಿಸಿ ಅನಂತರ ಬ್ರಹ್ಮನನ್ನು ಹೊಂದುತ್ತಾನೆ' (4–1–19)

ಈ ಶ್ಲೋಕದಲ್ಲಿ ಬ್ರಹ್ಮನಿಗೆ '**ನಿರ್ವಾಣಂ**' ಎಂಬ ವಿಶೇಷಣವನ್ನು ಕೊಡಲಾಗಿದೆ. (ಬಾಣ ಅಂದರೆ ಶರೀರ. ವಕಾರ, ಬಕಾರಗಳಿಗೆ ಭೇದವಿಲ್ಲ. ಆದಕಾರಣ '**ವಾಣ**' ಎಂದರೂ ಶರೀರ. **ನಿರ್ವಾಣ** ಎಂದರೆ ಶರೀರವಿಲ್ಲದವನು ). ಏಕೆಂದರೆ, ಬ್ರಹ್ಮಪದಕ್ಕೆ ಚತುರ್ಮುಖ ಬ್ರಹ್ಮ ಎಂಬ ಅರ್ಥವೂ ಇದೆ. ಅವನನ್ನು ಹೊಂದುವುದು ಮೋಕ್ಷವಲ್ಲ. ಆದಕ್ಕಾಗಿ ನಿರ್ವಾಣ ಎಂಬ ವಿಶೇಷಣ.ಪ್ರಾಕೃತಶರೀರವಿಲ್ಲದ ಪರಬ್ರಹ್ಮನ ಪ್ರಾಪ್ತಿಯೇ ಮೋಕ್ಷ. ಚತುರ್ಮುಖ ಬ್ರಹ್ಮನಿಗೆ ಪ್ರಾಕೃತ ಶರೀರ ಇದೆ . ಅವನ ಪ್ರಾಪ್ತಿಯು ಮೋಕ್ಷವಲ್ಲ. ಇದಕ್ಕಾಗಿ '**ನಿರ್ವಾಣಂ**'ಎಂಬ ವಿಶೇಷಣವಿದೆ.

**ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದ ಕನ್ನಡಾನುವಾದದ ಎರಡನೆಯ ಅಧ್ಯಾಯವು ಮುಗಿಯಿತು.**

# ಅಧ್ಯಾಯ – 3

## ಎನಗಿರಲಿ ಯತಿಗಳ ಜ್ಞಾನಮಾರ್ಗ, ಘೋರವಾದ ಯುದ್ಧವೇಕೆ ?

**ಅರ್ಜುನ ಉವಾಚ -**

**ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥ 1 ॥**

**ಅರ್ಥ-** ಅರ್ಜುನ ಹೇಳುತ್ತಾನೆ- ಜನಾರ್ದನನೇ, ಕರ್ಮಕ್ಕಿಂತ ಜ್ಞಾನವೇ ಶ್ರೇಷ್ಠ ಎಂಬುದು ನಿನ್ನ ಅಭಿಪ್ರಾಯವಾದರೆ, ಕೇಶವ, ಭಯಂಕರವಾದ ಯುದ್ಧವೆಂಬ ಕರ್ಮದಲ್ಲಿ ನನ್ನನ್ನು ಏಕೆ ತೊಡಗಿಸುವೆ ?

### ಗೀತಾವಿವೃತಿ

### ಅಧ್ಯಾಯದ ಸಂಗತಿ

‘ಏಷಾ ತೇಽಭಿಹಿತಾ ಸಾಂಖ್ಯೇ’ (2-39) ಇತ್ಯಂತೇನ ‘ನ ತ್ವೇವಾಹಮ್’ (2-12) ಇತ್ಯಾದಿನಾ ಗ್ರಂಥೇನ ಜೀವೇಶ್ವರಸ್ವರೂಪಮುಕ್ತ್ವಾ ತದ್‌ಜ್ಞಾನೋಪಾಯಂ ಚ ‘ಯೋಗೇ ತ್ವಿಮಾಂ ಶೃಣು’ ಇತಿ’ (2-39) ಪ್ರತಿಜ್ಞಾಪೂರ್ವಂ ‘ತ್ರೈಗುಣ್ಯವಿಷಯಾ ವೇದಾ’ (2-45) ಇತ್ಯಾದಿನೋಕ್ತ್ವಾ ‘ಕರ್ಮಜಂ ಬುದ್ಧಿಯುಕ್ತಾ ಹಿ’(2-51) ಇತ್ಯಾದಿನಾ ಕಿಂಚಿತ್‌ಪ್ರಪಂಚನಂ ತಸ್ಯ ಕೃತಂ ಪೂರ್ವಾಧ್ಯಾಯೇ । ಅತ್ರ ತು ಪೂರ್ವೋಕ್ತಸ್ಯೈವ ನಿವೃತ್ತಕರ್ಮರೂಪಜ್ಞಾನೋಪಾಯಶಬ್ದಿತಯೋಗಸ್ಯಾವಶ್ಯಕಾರ್ಯತಯಾ ಜ್ಞಾಪನರೂಪಂ ಪ್ರಪಂಚನಂ ಪ್ರಾಚುರ್ಯೇಣ ಕ್ರಿಯತ ಇತಿ ಪೂರ್ವೋತ್ತರಾಧ್ಯಾಯಯೋಃ, ಪೌರ್ವಾಪರ್ಯಂ ಧ್ಯೇಯಮ್ ।

**ಅನುವಾದ -** ‘ನ ತ್ವೇವಾಹಂ ’ ಎಂಬ ಎರಡನೇ ಅಧ್ಯಾಯದ 12ನೇ ಶ್ಲೋಕದಿಂದ ಆರಂಭಿಸಿ . ‘ಏಷಾ ತೇ’ ಎಂಬ 39ನೇ ಶ್ಲೋಕದವರೆಗೆ ಜೀವ ಮತ್ತು ಈಶ್ವರರ ಸ್ವರೂಪವನ್ನು ಹೇಳಿದ್ದಾರೆ. ನಂತರ ಆ ಜೀವನು ಈಶ್ವರನನ್ನು ಯಾವ ಉಪಾಯದಿಂದ ತಿಳಿಯಬೇಕು ಎಂಬ

ಪ್ರಶ್ನೆಗೆ '**ಯೋಗೇ ತ್ವಿಮಾಂ**' ಎಂದು, ಆ ಉಪಾಯವನ್ನು ಹೇಳುತ್ತೇನೆ ಎಂದು ಶ್ರೀಕೃಷ್ಣನು ಪ್ರತಿಜ್ಞೆ ಮಾಡುತ್ತಾನೆ. ಆ ಯೋಗ '**ನಿಷ್ಕಾಮ ಕರ್ಮ**' ಎಂದು '**ತ್ರೈಗುಣ್ಯ ವಿಷಯಾ ವೇದಾಃ**' ಎಂಬಲ್ಲಿ ನಿರೂಪಿಸಿ, '**ಕರ್ಮಜಂ ಬುದ್ಧಿಯುಕ್ತಾ ಹಿ**' ಇವೇ ಮೊದಲಾದ ಶ್ಲೋಕಗಳಲ್ಲಿ ಆ ನಿಷ್ಕಾಮ ಕರ್ಮವನ್ನು ಸ್ವಲ್ಪ ವಿವರಿಸಲಾಗಿದೆ. ಆ ನಿಷ್ಕಾಮ ಕರ್ಮ ರೂಪವಾದ ಉಪಾಯವು ಅವಶ್ಯ ಕರ್ತವ್ಯ ಎನ್ನುವ ವಿಷಯದಲ್ಲಿ ಹೆಚ್ಚಿನ ವಿವರಣೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಆದುದರಿಂದ ಪೂರ್ವಾಧ್ಯಾಯದ ನಂತರ ಈ ಅಧ್ಯಾಯ ಸಂಗತವಾಗಿದೆ.

**ಶ್ಲೋಕಾರ್ಥ**

**'ದೂರೇಣ ಹ್ಯವರಂ ಕರ್ಮ'(2-49) ಇತ್ಯುಕ್ತೇ ಲಬ್ಧಾವಸರೋಽರ್ಜುನಃ ಪೃಚ್ಛತಿ- ಜ್ಯಾಯಸೀ ಚೇದಿತಿ ॥ 'ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾತ್, ಕೃಪಣಾಃ ಫಲಹೇತವಃ' (2-49) ಇತ್ಯಾದಿನೋಕ್ತದಿಶಾ ಬುದ್ಧಿಃ ಕರ್ಮಣಃ ಸಕಾಶಾತ್ ಜ್ಯಾಯಸೀ ಚೇತ್= ಶ್ರೇಷ್ಠಾ ಯದಿ । ಹೇ ಜನಾರ್ದನ ! ತೇ = ತವ ಮತಾ ತತ್= ತರ್ಹಿ ಕರ್ಮಣಿ ಕಿಂ= ಕಿಮರ್ಥಂ ಮಾಂ ನಿಯೋಜಯಸೀತ್ಯೇಕಃ ಪ್ರಶ್ನಃ । ತತ್ರಾಪಿ ಘೋರೇ= ರಾಗದ್ವೇಷಾದ್ಯುಪೇತೇ ಯುದ್ಧಾಖ್ಯೇ ಕರ್ಮಣಿ ಕಿಮರ್ಥಂ ನಿಯೋಜಯಸೀತ್ಯನ್ಯಃ ।**

**ಅಯಂ ಭಾವಃ- 'ಸರ್ವ ಏತೇ ಪುಣ್ಯಲೋಕಾ ಭವಂತಿ' ಇತ್ಯಾದಿ ಫಲ-ಶ್ರವಣೇನ ಸರ್ವಕರ್ಮಣಾಂ 'ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಮ್'(2-37) ಇತ್ಯಾದಿ ಯುದ್ಧಸ್ಯಾಪಿ ಕಾಮ್ಯತ್ವಾತ್ತೇಷಾಂ ಚ ಬುದ್ಧಿಯೋಗಾದವರತ್ವಾತ್, ಯತ್ಯಾಶ್ರಮವಿಹಿತಾನಾಂ ಶಮಾದೀನಾಂ ಫಲಾಶ್ರವಣೇನಾಕಾಮ್ಯತ್ವಾತ್, 'ಶಾಂತೋ ದಾಂತ' ಇತ್ಯುಪಕ್ರಮ್ಯ 'ಆತ್ಮಾನಂ ಪಶ್ಯೇತ್' ಇತಿ ಜ್ಞಾನಾರ್ಥತ್ವ-ಶ್ರವಣಾಚ್ಚ ಯತ್ಯಾಶ್ರಮಂ ಸ್ವೀಕೃತ್ಯ ತದ್ಧರ್ಮನಿಷ್ಠೋ ಭವೇತ್ಯೇವ ನಿಯೋಕ್ತವ್ಯಮ್ । ನ ತು ಕಾಮ್ಯಕರ್ಮಣಿ ಯುದ್ಧೇ 'ಯುದ್ಧ್ಯಸ್ವ ಭಾರತೇ'ತಿ ನಿಯೋಜನಂ ಯುಕ್ತಮಿತಿ ।**

**ಅನುವಾದ - 'ದೂರೇಣ ಹ್ಯವರಂ ಕರ್ಮ'** ಎಂದು ಕರ್ಮವು ಜ್ಞಾನಕ್ಕಿಂತ ಕೆಳಸ್ತರದ್ದು ಎಂದು ತಿಳಿಸಿದಾಗ ಅರ್ಜುನ ಪ್ರಶ್ನೆ ಮಾಡುತ್ತಾನೆ. 'ಜ್ಯಾಯಸೀ ಚೇತ್' ಎಂದು ಮುಂತಾಗಿ ಎರಡು ಶ್ಲೋಕಗಳಲ್ಲಿ.

'ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।
ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥'

ಎಂದು ಫಲಾಭಿಲಾಷೆಯಿಂದ ಕರ್ಮ ಮಾಡುವವರು ಅನರ್ಥವನ್ನು ಪಡೆಯುತ್ತಾರೆ. ಆದುದರಿಂದ ಜ್ಞಾನ ಫಲವೇ ಶ್ರೇಷ್ಠವಾದುದು. ಹೀಗಾಗಿ ಜ್ಞಾನಮಾರ್ಗವನ್ನು ಅನುಸರಿಸು ಎಂದು ಹೇಳಿದ ರೀತಿಯಲ್ಲಿ ಕರ್ಮಕ್ಕಿಂತ ಜ್ಞಾನವು ಶ್ರೇಷ್ಠ ಎಂದು ನಿನ್ನ ಅಭಿಪ್ರಾಯವಾದರೆ, ಶ್ರೀಕೃಷ್ಣ , ಅಂತಹ ಕರ್ಮದಲ್ಲಿ ನನ್ನನ್ನು ಏಕೆ ತೊಡಗಿಸುವೆ ? ಎಂದು ಒಂದು ಪ್ರಶ್ನೆ. ಅದರಲ್ಲಿಯೂ ಇಂತಹ ಘೋರವಾದ ಅಂದರೆ ರಾಗದ್ವೇಷಾದಿಗಳಿಗೆ ಅವಕಾಶವಿರುವ ಈ ಯುದ್ಧಕರ್ಮದಲ್ಲಿ ಏಕೆ ತೊಡಗಿಸುವೆ ? ಎಂದು ಮತ್ತೊಂದು ಪ್ರಶ್ನೆ.

ಈ ಎರಡು ಪ್ರಶ್ನೆಗಳ ಅಭಿಪ್ರಾಯ ಹೀಗಿದೆ. ಎಲ್ಲ ಕರ್ಮಗಳಲ್ಲೂ **'ಸರ್ವ ಏತೇ ಪುಣ್ಯಲೋಕಾ ಭವಂತಿ'** ಎಂದು ಪುಣ್ಯಲೋಕರೂಪವಾದ ಫಲವನ್ನು ಹೇಳಲಾಗಿದೆ. ಹಾಗೆಯೇ, **'ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಮ್'** ಎಂದು ಯುದ್ಧಕ್ಕೆ ಸ್ವರ್ಗವನ್ನು ಫಲವೆಂದು ಕೃಷ್ಣ ಹೇಳಿದ್ದಾನೆ . ಹೀಗಾಗಿ ಅದು ಜ್ಞಾನಮಾರ್ಗಕ್ಕಿಂತ ಕಡಿಮೆಯದು ಮತ್ತು ಯತಿಗಳಿಗೆ ವಿಹಿತವಾದ ಭಗವದ್ಭಕ್ತಿ , ವೈರಾಗ್ಯ ಮುಂತಾದ ಕರ್ಮಗಳಿಗೆ ಸ್ವರ್ಗಾದಿ ಯಾವುದೇ ಫಲವನ್ನು ಹೇಳಿಲ್ಲ. ಅಷ್ಟೇ ಅಲ್ಲ , ಇದರ ಫಲ **'ಆತ್ಮಜ್ಞಾನ'** ಎಂದು **'ಆತ್ಮಾನಂ ಪಶ್ಯೇತ್'** ಎಂಬುದಾಗಿ ಹೇಳಿದ್ದಾರೆ. ಆದುದರಿಂದ ಯುದ್ಧಾದಿ ಕರ್ಮಗಳಿಗಿಂತ ಯತ್ಯಾಶ್ರಮ ವಿಹಿತ ಧರ್ಮಗಳು ಶ್ರೇಷ್ಠ ಎಂದು ಸಿದ್ಧವಾಯಿತು. ಹೀಗಾಗಿ 'ಯತ್ಯಾಶ್ರಮವನ್ನು ಸ್ವೀಕರಿಸಿ, ಯತಿಧರ್ಮವನ್ನು ಪಾಲಿಸು' ಎಂದು ಉಪದೇಶಿಸಬೇಕೆ ಹೊರತು, ಕಾಮ್ಯಕರ್ಮವಾದ ಯುದ್ಧದಲ್ಲಿ ತೊಡಗಿಸುವ **'ಯುಧ್ಯಸ್ವ ಭಾರತ'** ಎಂಬ ಉಪದೇಶ ಸರಿಯಲ್ಲ ಎಂದು ಅರ್ಜುನನ ಅಭಿಪ್ರಾಯ .

## ಭಗವನ್ನಾಮ ನಿರ್ವಚನೆ

**ಅತ್ರ ಕೇಶವಶಬ್ದಾರ್ಥ ಉಕ್ತಃ ಪ್ರಥಮಾಧ್ಯಾಯೇ । 'ನ ಜಾಯತೇ ಅರ್ದಯತಿ ಚ ಸಂಸಾರಮ್' ಇತಿ ದಶಮಭಾಷ್ಯೇ । ನಞಃ ಪರನಿಪಾತಃ । ಅತ ಏವ ನಲೋಪಾಭಾವಃ । 'ಉತ್ತರಪದೇ ಪರತಃ ತಸ್ಯ ಸ್ಮರಣಾತ್' ಇತಿ ತಟ್ಟೀಕೋಕ್ತದಿಶಾ ಚ ಜನಾರ್ದನಶಬ್ದಾರ್ಥೋ ಧ್ಯೇಯಃ ಇತಿ ॥ 1 ॥**

**ಅನುವಾದ-** ಈ ಮೊದಲ ಶ್ಲೋಕದಲ್ಲಿ ಭಗವಂತನ ಎರಡು ನಾಮಗಳು ಬಂದಿವೆ 1. **ಕೇಶವ, 2. ಜನಾರ್ದನ.** ಕೇಶವ ಶಬ್ದಾರ್ಥವನ್ನು ಮೊದಲ ಅಧ್ಯಾಯದಲ್ಲಿ ನಿರೂಪಿಸಲಾಗಿದೆ. (**'ವಿಪರೀತಾನಿ ಕೇಶವ '** ಎಂಬ 31ನೇ ಶ್ಲೋಕ) ಜನಾರ್ದನ ಎಂದರೆ ಜನ್ಮವಿಲ್ಲದವನು ಮತ್ತು ಸಂಸಾರವನ್ನು ನಾಶ ಮಾಡುವವನು ಎಂದು ಅರ್ಥ. ಈ ಅರ್ಥವನ್ನು **'ವಿಸ್ತರೇಣಾತ್ಮನೋ ಯೋಗಂ'** (10.18)ಎಂಬ ಶ್ಲೋಕದ ಭಾಷ್ಯದಲ್ಲಿ **'ನ ಜಾಯತೇ ಅರ್ದಯತಿ ಚ ಸಂಸಾರಮ್'** ಎಂದು ವಿವರಿಸಿದ್ದಾರೆ. **ನ ಜಾಯತೇ** ಎಂದು **'ನಞ್‌ತತ್ಪುರುಷ'** ಸಮಾಸ ಮಾಡಿದಾಗ 'ನ ' ಎಂಬುದು ಎರಡನೆ ಪದವಾಗುತ್ತದೆ. **ಜನಃ** ಎಂದು. ಒಂದು ವೇಳೆ ಅದು

ಮೊದಲ ಪದವಾಗಿದ್ದರೆ, ಆಗ ಅಲ್ಲಿರುವ 'ನ'ಕಾರ **ನ ಲೋಪೋ ನಞಃ** ಎಂಬ ಪಾಣಿನಿಸೂತ್ರದಿಂದ ಲೋಪವಾಗುತ್ತಿತ್ತು. ಆಗ 'ಅಜಃ' ಎಂದು ರೂಪವಾಗುತ್ತಿತ್ತು . ಇಲ್ಲಿ **ನಞ್**ಗೆ ಉತ್ತರ ಪದ ಪರದಲ್ಲಿ ಇಲ್ಲವಾದುದರಿಂದ 'ನ' ಲೋಪ ಆಗುವುದಿಲ್ಲ . ಈ ಅರ್ಥವನ್ನು ಟೀಕೆಯಲ್ಲಿ ವಿವರಿಸಿದ್ದಾರೆ. ॥ 1 ॥

**ವ್ಯಾಮಿಶ್ರೇಣೈವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥ 2 ॥**

**ಅರ್ಥ** – ಸಂದೇಹವನ್ನು ಉಂಟುಮಾಡುವ ಮಾತಿನಿಂದ ನನ್ನ ಬುದ್ಧಿಯು ಚಂಚಲ ವಾಗುವಂತೆ ಮಾಡುತ್ತಿರುವಿ . ಯಾವುದರಿಂದ ನಾನು ಶ್ರೇಯಸ್ಸನ್ನು ಹೊಂದುವೆನೋ ಅಂತಹ ಒಂದು ಮಾರ್ಗವನ್ನು ನಿಶ್ಚಯಿಸಿ ಹೇಳು.

**ನನು 'ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ' ಇತಿ (2-39) ಬುದ್ಧಿಪದೋಕ್ತಯುದ್ಧಾಖ್ಯ ಕರ್ಮಣೋಽಪಿ ಜ್ಞಾನಾರ್ಥತ್ವಮುಕ್ತ-ಮಿತಿ ಚೇತ್ । ತರ್ಹಿ ವ್ಯಾಮಿಶ್ರೇಣ = ಕ್ವಚಿತ್ಕರ್ಮಪ್ರಶಂಸಾ ಕ್ವಚಿದ್ಜ್ಞಾನ-ಪ್ರಶಂಸೇತ್ಯೇವಮ್, ಯದ್ವಾ ಯುದ್ಧಸ್ಯ ಕ್ವಚಿತ್ಸ್ವರ್ಗಾರ್ಥತ್ವಂ ಕ್ವಚಿದ್ಜ್ಞಾನಾರ್ಥ-ತ್ವಮಿತ್ಯೇವಂ ವ್ಯಾಮಿಶ್ರೇಣ ಸಂದೇಹೋತ್ಪಾದಕೇನ ವಾಕ್ಯೇನ ಮೇ ಬುದ್ಧಿಂ ಮೋಹಯಸೀವ= ಡೋಲಾಯಮಾನಂ ಕರೋಷೀವ । ಯದಿ ಕಾಮಿನೋ ಯುದ್ಧಂ ಸ್ವರ್ಗಾರ್ಥಂ ಅಕಾಮಿನೋ ಜ್ಞಾನಾರ್ಥಮ್ ಇತಿ ಚೇತ್ತಥಾಽಪಿ ಯತಿಧರ್ಮ ಏವ ನಿಯೋಗೋ ಯುಕ್ತೋ, ನ ತು ವೈಕಲ್ಪಿಕೇ ಯುದ್ಧೇ । ಅತೋ ಯೇನಾಽಹಂ ಶ್ರೇಯೋಽವಾಪ್ನುಯಾಂ, ತದೇಕಂ ನಿಶ್ಚಿತ್ಯ ವದೇತಿ ॥ 2 ॥**

**ಅನುವಾದ** – 'ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ' ಎಂಬುದಾಗಿ ಬುದ್ಧಿ (1) ಶಬ್ದದಿಂದ ಯುದ್ಧರೂಪ ಕರ್ಮವೂ ಕೂಡ ಜ್ಞಾನಸಾಧನ ಎಂದು ತಿಳಿಸಿರುವುದರಿಂದ, ಅರ್ಜುನನನ್ನು ಯುದ್ಧದಲ್ಲಿ ತೊಡಗಿಸುವಿಕೆ ಸರಿಯಾಗಿಯೇ ಇದೆಯಲ್ಲವೇ ? ಎಂಬ ಶಂಕೆಗೆ ಅರ್ಜುನ ತನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾ **ವ್ಯಾಮಿಶ್ರೇಣ**– ಕೆಲವು ಕಡೆ ಕರ್ಮವನ್ನು ಪ್ರಶಂಸಿಸುವುದು, ಕೆಲವು ಕಡೆ ಜ್ಞಾನವನ್ನು ಹೊಗಳುವುದು, ಅಥವಾ ಯುದ್ಧವು ಸ್ವರ್ಗವನ್ನು ಕೊಡುತ್ತದೆ ಎಂದು ಕೆಲವೆಡೆ, ಮತ್ತೆ ಕೆಲವೆಡೆ ಜ್ಞಾನಕ್ಕಾಗಿ ಯುದ್ಧ ಎಂದು, ಸಂದೇಹಕ್ಕೆ ಕಾರಣವಾದ, **ವಾಕ್ಯೇನ**= ಮಾತಿನಿಂದ, **ಮೇ**= ನನ್ನ **ಬುದ್ಧಿಂ**= ಬುದ್ಧಿಯನ್ನು , **ಮೋಹಯಸೀವ**= ಚಂಚಲವಾದದ್ದನ್ನಾಗಿ ಮಾಡುತ್ತಿರುವಿಯೆ ಎಂಬಂತಿದೆ. ಒಂದು ವೇಳೆ ಸಕಾಮಕರ್ಮ ಮಾಡುವವರಿಗೆ ಯುದ್ಧದಿಂದ ಸ್ವರ್ಗ, ನಿಷ್ಕಾ

ಕರ್ಮ ಮಾಡುವವರಿಗೆ ಯುದ್ಧದಿಂದ ಜ್ಞಾನ ಎಂದಾದರೆ, ನನ್ನನ್ನು ಯತಿಧರ್ಮದಲ್ಲಿಯೇ ತೊಡಗಿಸು . ಈ ವೈಕಲ್ಪಿಕ (2)ವಾದ ಯುದ್ಧದಲ್ಲಿ ಏಕೆ ತೊಡಗಿಸುವಿ . ಆದುದರಿಂದ 'ನಾನು ಯಾವುದರಿಂದ ಶ್ರೇಯಸ್ಸನ್ನು ಹೊಂದುವೆನೋ ಅದನ್ನು ನಿಶ್ಚಯಿಸಿ ಹೇಳು', ಎಂದು ಅರ್ಜುನನ ಅಳಲು. ।। 2 ।।

**ವಿವರಣೆ -**

(1) ಇಲ್ಲಿ 'ಬುದ್ಧಿ' ಎಂದರೆ ಕರ್ಮ ಮಾಡೆಂದು ಕೃಷ್ಣ ನೀಡಿದ ಉಪದೇಶ. ಅದರಿಂದ ಕರ್ಮವೂ ಬುದ್ಧಿಶಬ್ದದಿಂದ ಉಕ್ತವಾಗಿದೆ.

(2) ಹೀಗೂ ಆಗಬಹುದು ಹಾಗೂ ಆಗಬಹುದು ಎಂಬುದು ವಿಕಲ್ಪ .

## ಶಮಮಾರ್ಗದಿಂದ ಯತಿಗಳಿಗೆ ಮುಕ್ತಿ , ಕರ್ಮಯೋಗಿಗೆ ಕರ್ಮಾನುಷ್ಠಾನದಿಂದ ಮುಕ್ತಿ

**ಶ್ರೀ ಭಗವಾನುವಾಚ -**

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾಽನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್ ।। 3 ।।**

**ಅರ್ಥ-** ಶ್ರೀಭಗವಂತನು ಹೇಳುತ್ತಾನೆ – ಈ ಸಾಧಕವರ್ಗದಲ್ಲಿ ಎರಡು ವಿಧವಾಗಿ ಸಾಧನೆ ಮಾಡಿ ಮುಕ್ತಿಯನ್ನು ಪಡೆಯುವವರಿದ್ದಾರೆ ಎಂದು ಹಿಂದೆಯೇ ಹೇಳಿದ್ದೇನೆ. ಸನಕಾದಿ ಯತಿಗಳು, ಜ್ಞಾನಮಾರ್ಗದಿಂದ ಮುಕ್ತಿ ಪಡೆಯುವವರು, ಪ್ರಿಯವ್ರತಾದಿ ರಾಜರು, ಕರ್ಮಮಾರ್ಗದಿಂದ ಮೋಕ್ಷ ಪಡೆಯುವವರು. ನೀನು ಎರಡನೇ ವರ್ಗಕ್ಕೆ ಸೇರಿದವನಾದ್ದರಿಂದ ಕರ್ಮಮಾರ್ಗವನ್ನೇ ಅವಲಂಬಿಸು ಎನ್ನುತ್ತೇನೆ.

**ಯದ್ಯಪಿ ಯಜ್ಞಾದಿ ಸರ್ವಕರ್ಮಾಣ್ಯಾಶ್ರಮತ್ರಯವಿಹಿತಾನಿ ಕಾಮ್ಯಕಾಮಿ-ಭೇದೇನ ಕಾಮ್ಯಾನ್ಯಕಾಮ್ಯಾನಿ ಚೇತಿ ವೈಕಲ್ಪಿಕಾನಿ । ಯತಿಧರ್ಮಾಸ್ತು ಶಮಾದಯಃ ಕೇವಲಮಕಾಮ್ಯಾಃ, ಯುದ್ಧಕರ್ಮೇವ ನರಕಾದ್ಯನರ್ಥಹೇತು-ರಾಗದ್ವೇಷಾದ್ಯುಪೇತಾಶ್ಚ ನ ಭವಂತಿ । ತಥಾಽಪಿ ತೇಷಾಮ್ ಅನಾಧಿಕಾರಿಕ-ವಿಷಯತ್ವಾತ್ ತವ ಚ ಜನಕಪ್ರಿಯವ್ರತಾದೇರಿವ ಆಧಿಕಾರಿಕತ್ವಾತ್ 'ಸುಖದುಃಖೇ ಸಮೇ ಕೃತ್ವಾ' (2-38) ಇತ್ಯತ್ರೋಕ್ತದಿಶಾ ಭಗವದ್ಭಕ್ತ್ಯಾ ಸ್ವಧರ್ಮತ್ವೇನಾನು-ಷ್ಠಾನೇ ಪಾಪಾನವಾಪ್ತೇರ್ವೈಕಲ್ಪಿಕೇಽಪಿ ಯುದ್ಧಕರ್ಮಣ್ಯೇವ ನಿಯೋಜ್ಯ ಇತಿ ಭಾವೇನಾದ್ಯಪ್ರಶ್ನಸ್ಯೋತ್ತರಮಾಹ- ಲೋಕ ಇತ್ಯಾದಿನಾ ।। ದ್ವಿತೀಯಸ್ಯ ತು**

**ಶ್ರೇಯಾನಿತ್ಯಾದಿನಾಽಗ್ರೇ ಧ್ಯೇಯಮ್ । ಅಸ್ಮಿನ್ಲೋಕೇ= ಸಾಧಕವರ್ಗೇ । ನಿಷ್ಠಾ= ಸ್ವರೂಪೇಣ ಸ್ಥಿತಿಃ ಮುಕ್ತಿರಿತಿ ಯಾವತ್ । ಯದ್ವಾ ನಿಷ್ಠಾ= ನಿತರಾಂ ಸಂಸಾರಗತಿ ನಿವೃತ್ತಿಃ । ದ್ವಿವಿಧಾ = ದ್ವಿಪ್ರಕಾರಾ ದ್ವಿವಿಧಸಾಧನಸಾಧ್ಯೇತ್ಯರ್ಥಃ । ಪುರಾ ಮಯಾ ಪ್ರೋಕ್ತಾ । ಹೇ ಅನಘೇತಿ ಸಂಬುದ್ಧಿಃ ।**

**ಅನುವಾದ-** ಕಾಮಿಗಳು ಅಕಾಮಿಗಳೆಂದು ಅಧಿಕಾರಿಭೇದದಿಂದ ಬ್ರಹ್ಮಚರ್ಯಾದಿ ಆಶ್ರಮತ್ರಯಗಳಿಗೆ ವಿಹಿತವಾದ ಎಲ್ಲ ಕರ್ಮಗಳು ಕಾಮ್ಯವೂ ಆಗಬಹುದು ಅಕಾಮ್ಯವೂ ಆಗಬಹುದು . ಆದರೆ, ಯತಿಗಳಿಗೆ ವಿಹಿತವಾದ ಶಮಾದಿಗಳು ಕೇವಲ ಅಕಾಮ್ಯಗಳು. ಅಷ್ಟೇ ಅಲ್ಲ, ಯುದ್ಧದಂತೆ ನರಕಾದಿ ಅನರ್ಥಗಳಿಗೆ ಕಾರಣವಾದ ರಾಗದ್ವೇಷಗಳಿಂದ ಕೂಡಿದ್ದೂ ಅಲ್ಲ. ಆದರೂ ಕೂಡ ಆ ಯತಿಧರ್ಮಗಳು ಆಧಿಕಾರಿಕರಲ್ಲದವರಿಗೆ ವಿಹಿತವಾಗಿವೆ ಹೊರತು ಆಧಿಕಾರಿಕ ವರ್ಗದವರಿಗೆ ಅಲ್ಲ. ನೀನು, ಜನಕ ,ಪ್ರಿಯವ್ರತಾದಿಗಳಂತೆ ಆಧಿಕಾರಿಕ ವರ್ಗಕ್ಕೆ ಸೇರಿದವನಾದ್ದರಿಂದ ಕರ್ಮದಲ್ಲಿ ತೊಡಗಬೇಕು . '**ಸುಖದುಃಖೇ ಸಮೇ ಕೃತ್ವಾ**' (2-38) ಎಂಬಲ್ಲಿ ಹೇಳಿದಂತೆ ಭಗವಂತನಲ್ಲಿ ಭಕ್ತಿಯಿಂದ ಆಯಾಯ ಕರ್ಮಗಳನ್ನು '**ಸ್ವಧರ್ಮ**' ಎಂದು ಅನುಷ್ಠಾನ ಮಾಡಿದರೆ, ಯಾವ ರೀತಿಯ ಪಾಪವೂ ಬರಲಾರದು. ಆದುದರಿಂದ ವೈಕಲ್ಪಿಕ ವಾದರೂ ಕೂಡ ನೀನು ಯುದ್ಧವನ್ನೇ ಮಾಡಬೇಕು, ಎಂಬ ಅಭಿಪ್ರಾಯದಿಂದ ಮೊದಲ ಪ್ರಶ್ನೆಗೆ (1) ಉತ್ತರವನ್ನು - '**ಲೋಕೇಽಸ್ಮಿನ್**' ಎಂಬ ಶ್ಲೋಕದಲ್ಲಿ ಹೇಳಲಾಗಿದೆ. ಎರಡನೆ ಪ್ರಶ್ನೆಗೆ (2) '**ಶ್ರೇಯಾನ್ ಸ್ವಧರ್ಮೋ**'(3.35) ಮುಂತಾದ ಶ್ಲೋಕಗಳಲ್ಲಿ ಉತ್ತರವನ್ನು ಮುಂದೆ ಹೇಳಲಾಗುವುದು.

**ಅಸ್ಮಿನ್ ಲೋಕೇ** = ಈ ಸಾಧಕ ವರ್ಗದಲ್ಲಿ , **ನಿಷ್ಠಾ** = ಸ್ವರೂಪ ಅವಸ್ಥಾನ (ತಾನು ತಾನಾಗಿರುವುದು) ಅಂದರೆ ಮುಕ್ತಿಯು, ಅಥವಾ **ನಿಷ್ಠಾ** = ನಿತರಾಂ ಸಂಸಾರಗತಿ ನಿವೃತ್ತಿಯು (3) **ದ್ವಿವಿಧಾ**- ಎರಡು ಪ್ರಕಾರವಾಗಿದೆ. ಎರಡು ವಿಧವಾದ ಸಾಧನಗಳಿಂದ ಪಡೆಯಬಹುದು ಎಂದು ಅರ್ಥ. '**ಪುರಾ ಮಯಾ ಪ್ರೋಕ್ತಾ** ' ಎಂದು ಅನ್ವಯ. '**ಹೇ ಅನಘ**', ಎಂದು ಸಂಬೋಧನೆ.

**ವಿವರಣೆ -** (1) ಮೊದಲ ಪ್ರಶ್ನೆ , ಕರ್ಮದಲ್ಲಿ ಏಕೆ ತೊಡಗಿಸುವಿ ? ಎಂದು. ಅದಕ್ಕೆ, ನೀನು ಕರ್ಮದಲ್ಲಿ ಅಧಿಕಾರವುಳ್ಳವನು ಆದ್ದರಿಂದ ಎಂದು ಕೃಷ್ಣನ ಉತ್ತರ. (2) ರಾಗದ್ವೇಷಗಳಿಂ ಕೂಡಿದ ಈ ಯುದ್ಧದಲ್ಲಿ ಏಕೆ ತೊಡಗಿಸುವೆ ಎಂದು ಎರಡನೇ ಪ್ರಶ್ನೆ . ಅದಕ್ಕೆ ಯುದ್ಧ ಕ್ಷತ್ರಿಯ ಸ್ವಧರ್ಮ. ಆದ್ದರಿಂದ ಪಾಪಕರವಲ್ಲ ಅದನ್ನು ಅವಶ್ಯ ಮಾಡಲೇಬೇಕು ಎಂದು ಮುಂದೆ ಉತ್ತ ಕೊಡಲಾಗುತ್ತದೆ. (3) ಷ್ಠಾ ಧಾತುವಿಗೆ ಗತಿ ನಿವೃತ್ತಿ ಎಂದು ಅರ್ಥ. 'ನಿ' ಉಪಸರ್ಗ

ನಿತರಾಂ- ಹೆಚ್ಚಾಗಿ ಎಂದು ಅರ್ಥ. ಆದುದರಿಂದ ಪುನಃ ಸಂಸಾರಕ್ಕೆ ಬರದಂತಹ ಬಿಡುಗಡೆ, 'ಮುಕ್ತಿ' ಎಂಬರ್ಥದಲ್ಲಿ 'ನಿಷ್ಠಾ' ಶಬ್ದವನ್ನು ಬಳಸಲಾಗಿದೆ.

## ಸಾಧಕರು ಎರಡು ವಿಧದವರು

**ಕಥಮಿತ್ಯತ ಆಹ- ಸಾಂಖ್ಯಾನಾಂ= ಜ್ಞಾನಪ್ರಧಾನಾನಾಂ ದೇವಾನಾಂ= ಸನಕಾದಿಯತೀನಾಂ ಚ । ಜ್ಞಾನಯೋಗೇನ, ಪ್ರಾಚುರ್ಯಾದ್ ಜ್ಞಾನಸ್ಯೋಕ್ತಿಃ । ಅಪ್ರಚುರಕರ್ಮೋಪೇತ ಪ್ರಚುರಜ್ಞಾನೋಪಾಯೇನ ಜಪಧ್ಯಾನಾದಿನಾ ನಿಷ್ಠಾ ಮುಕ್ತಿಃ । ಯೋಗಿನಾಂ = ಕರ್ಮರೂಪೋಪಾಯವತಾಂ ಕರ್ಮಯೋಗೇನಾಪ್ರಚುರಜ್ಞಾನೋಪೇತೇನ ಪ್ರಚುರಕರ್ಮೋಪಾಯೇನ ನಿಷ್ಠಾ ಮುಕ್ತಿಃ । ಯೋಗಿನಾಮಿತ್ಯನಂತರಮಿತಿಶಬ್ದೋಽಧ್ಯಾಹಾರ್ಯಃ । ಅತ್ರ ಭಗವದ್‌ಜ್ಞಾನಿನಾಮಪ್ಯುಭಯೇಷಾಂ ನ ಜ್ಞಾನಮಾತ್ರೇಣ ಸ್ವಯೋಗ್ಯಯಾವದಾನಂದಾನುಭವರೂಪಸಂಪೂರ್ಣಮುಕ್ತಿಃ ,ಅಪಿ ತು ಕರ್ಮಸಮುಚ್ಚಿತೇನೈವ । ತತ್ರ ಕೇಚನ ಸನಕಾದಯೋ ಯತಯಃ ಸ್ವಗತಜ್ಞಾನಕರ್ಮಣೋರ್ಮಧ್ಯೇ ಜ್ಞಾನಪ್ರಚುರಾಃ ಸಂತೋ ಮುಕ್ತಿಭಾಜಃ । ಕೇಚಿತ್ತು ಜನಕಪ್ರಿಯವ್ರತಾದಯೋ ಗೃಹಸ್ಥಾಃ ಸ್ವಗತಜ್ಞಾನ ಕರ್ಮಣೋರ್ಮಧ್ಯೇ ಪ್ರಚುರಕರ್ಮಾಣಃ ಸಂತ ಏವ ಮುಕ್ತಿಭಾಜೋ ಭವಂತಿ । ಆಧಿಕಾರಿಕತಯಾ ತಥೈವ ಭಗವತಾ ಕ್ಲೃಪ್ತತ್ವಾತ್ । ತಥಾ ಚ ತ್ವಮಪ್ಯಾಧಿಕಾರಿಕ ಇತಿ ಕರ್ಮಣಿ ವಿನಿಯೋಜ್ಯ ಏವೇತಿ ಭಾವಃ । ಅತ್ರ ನೀರಮಿಶ್ರಕ್ಷೀರೇ ಕ್ಷೀರಶಬ್ದಪ್ರಯೋಗವತ್ ಪ್ರಾಚುರ್ಯಾಭಿಪ್ರಾಯೇಣ ಜ್ಞಾನಯೋಗೇನ ಕರ್ಮಯೋಗೇನೇತ್ಯೇಕೈಕೋಕ್ತಿರಿತಿ ಜ್ಞೇಯಮ್ ॥ 3 ॥**

**ಅನುವಾದ-** ಮುಕ್ತಿಯನ್ನು ಎರಡು ವಿಧವಾದ ಸಾಧನಗಳಿಂದ ಪಡೆಯಬಹುದು ಎಂದು ತಿಳಿಸಿ, ಅದು ಹೇಗೆ ಎಂಬ ಪ್ರಶ್ನೆಗೆ ಮುಂದಿನ ವಾಕ್ಯದಲ್ಲಿ ಉತ್ತರ ನೀಡುತ್ತಿದ್ದಾನೆ ಶ್ರೀಕೃಷ್ಣ. **ಸಾಂಖ್ಯಾನಾಂ=** ಮುಖ್ಯವಾಗಿ ಜ್ಞಾನದಿಂದ ಮುಕ್ತಿ ಪಡೆಯುವ ಯೋಗ್ಯತೆಯುಳ್ಳ ದೇವತೆಗಳಿಗೆ ಮತ್ತು ಸನಕಾದಿ ಯತಿಗಳಿಗೆ **ಜ್ಞಾನಯೋಗೇನ=** ಸ್ವಲ್ಪ ಕರ್ಮದಿಂದ ಕೂಡಿದ ಹೆಚ್ಚಾದ ಜ್ಞಾನರೂಪ ಉಪಾಯದಿಂದ ಜಪ, ಧ್ಯಾನ ಮುಂತಾದವುಗಳಿಂದ ನಿಷ್ಠಾ ಮುಕ್ತಿಯು. **ಯೋಗಿನಾಂ=** ಕರ್ಮಯೋಗಿಗಳಿಗೆ **'ಕರ್ಮಯೋಗೇನ'** ಸ್ವಲ್ಪಜ್ಞಾನದಿಂದ ಕೂಡಿದ ಹೆಚ್ಚು ಕರ್ಮದಿಂದ, ನಿಷ್ಠಾ = ಮುಕ್ತಿಯು. ಇಲ್ಲಿ ಎರಡೂ ಕಡೆ ಯಾವ ಉಪಾಯವು ಹೆಚ್ಚು ಇದೆಯೋ ಅದನ್ನು ಪ್ರಧಾನವಾಗಿ ಹೇಳಿದ್ದಾರೆ. ಉದಾಹರಣೆಗೆ- ಜ್ಞಾನಯೋಗಿಗಳಿಗೆ ಮೋಕ್ಷ ಆಗಲು ಜ್ಞಾನ ಹೆಚ್ಚುಬೇಕು. ಆದುದರಿಂದ ಜ್ಞಾನಯೋಗೇನ ಎಂದು ಹೇಳಿದ್ದಾರೆ. ಇಲ್ಲಿ ಜ್ಞಾನಯೋಗಿಗಳು, ಕರ್ಮಯೋಗಿಗಳು ಇಬ್ಬರೂ ಭಗವಂತನ ಜ್ಞಾನವುಳ್ಳವರೆ ಆದರೂ ಕೇವಲ

ಜ್ಞಾನದಿಂದ ಅವರವರಿಗೆ ಯೋಗ್ಯವಾದ ಆನಂದಾನುಭವ ಸಂಪೂರ್ಣವಾಗಿ ಆಗುವುದಿಲ್ಲ. ಹೊರತು ಕರ್ಮವನ್ನು ಆಚರಿಸಲೇ ಬೇಕು. ಹೀಗಾಗಿ ಕೆಲವು ಸನಕಾದಿ ಯತಿಗಳು ತಮ್ಮಲ್ಲಿರುವ ಜ್ಞಾನ ಮತ್ತು ಕರ್ಮ ಎಂಬ ಉಪಾಯಗಳಲ್ಲಿ ಜ್ಞಾನವನ್ನು ಹೆಚ್ಚು ಸಂಪಾದಿಸಿದ್ದರಿಂದ ಮುಕ್ತರಾಗುತ್ತಾರೆ. ಜನಕ , ಪ್ರಿಯವ್ರತನೇ ಮೊದಲಾದ ರಾಜರು ಜ್ಞಾನ, ಕರ್ಮಗಳ ಮಧ್ಯೆ ಕರ್ಮವನ್ನು ಹೆಚ್ಚಾಗಿ ಆಚರಿಸಿದ್ದರಿಂದ ಮುಕ್ತರಾಗುತ್ತಾರೆ. ಹೀಗೆಯೇ ಭಗವಂತನ ನಿಯಮ. ನೀನು ಕರ್ಮಾಧಿಕಾರ ಉಳ್ಳವನು ಆದುದರಿಂದ ಕರ್ಮದಲ್ಲಿಯೇ ತೊಡಗಬೇಕು.

ಜ್ಞಾನ, ಕರ್ಮ ಎರಡು ಉಪಾಯಗಳು ಇಬ್ಬರಲ್ಲಿಯೂ ಇವೆ. ಹಾಗಿದ್ದರೂ, ಜ್ಞಾನ ಯೋಗಿಗಳು ಎಂದು ಕರೆಯುವುದು ಜ್ಞಾನ ಹೆಚ್ಚು ಎಂಬ ಅಭಿಪ್ರಾಯದಿಂದ. ಇದಕ್ಕೆ ಉದಾಹರಣೆ ನೀರು ಸೇರಿದ ಹಾಲು. ನೀರು ಸ್ವಲ್ಪವಿದ್ದರೂ ಹಾಲು ಹೆಚ್ಚು ಎನ್ನುವ ಕಾರಣದಿಂದ ಹಾಲು ಎಂದೇ ಕರೆಯುವಂತೆ. ॥ 3 ॥

## ಕರ್ಮತ್ಯಾಗ ಮೋಕ್ಷ ಹೇತುವಲ್ಲ

**ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನ ಚ ಸಂನ್ಯಾಸನಾದೇವ ಸಿದ್ಧಿಂ ಸಮಧಿಗಚ್ಛತಿ ॥ 4 ॥**

**ಅರ್ಥ**- ಕೇವಲ ಕರ್ಮಗಳನ್ನು ಮಾಡದಿರುವಿಕೆಯಿಂದ 'ನೈಷ್ಕರ್ಮ್ಯ' ಎಂದು ಹೆಸರುಳ್ಳ ಮೋಕ್ಷವನ್ನು ಪುರುಷನು ಪಡೆಯುವುದಿಲ್ಲ. ಕೇವಲ ನಿಷ್ಕಾಮಕರ್ಮದಿಂದಲೂ ಮೋಕ್ಷ ಅಸಾಧ್ಯ.

**ಯತಿಧರ್ಮಾಃ ಶಮಾದಯ ಏವಾನುಷ್ಠೇಯಾಃ ನ ತು ಗೃಹಿಧರ್ಮಾಃ । ತತ್ರಾಪಿ ನ ಘೋರಂ ಯುದ್ಧಕರ್ಮೇತಿ ವಾದಿನಂ ಪಾರ್ಥಂ ಪ್ರತಿ ತವ ಜನಕಾದೇರಿವಾಧಿಕಾರಿಕತ್ವಾತ್ ವರ್ಣಾಶ್ರಮೋಚಿತಾಃ ಧರ್ಮಾಸ್ತ್ವಯಾಽನುಷ್ಠೇಯಾ ಏವೇತ್ಯುಕ್ತಮ್ । ಇದಾನೀಂ ಕರ್ಮ ನ ಕಾರ್ಯಮಿತಿ ವದತಃ ಕಿಂ ಕರ್ಮಾಕರಣಪ್ರಾಪ್ಯತ್ವಹೇತುನಾ ಮುಕ್ತೇರ್ನೈಷ್ಕರ್ಮ್ಯಶಬ್ದವಾಚ್ಯತ್ವಾತ್ ತದನ್ಯಥಾಽನುಪಪತ್ತ್ಯಾ ಕರ್ಮ ನ ಕಾರ್ಯಮಿತ್ಯಭಿಪ್ರಾಯಃ । ಉತ ಕರ್ಮಣಃ ಸಂಸಾರಬೀಜತ್ವಾತ್ತದಕರಣಂ ಮುಕ್ತಿಹೇತುರಿತಿ 'ಕರ್ಮಣಾ ಬಧ್ಯತೇ ಜಂತುಃ' ಇತಿ ಸ್ಮೃತೇಃ ಕರ್ಮಣೋ ಮುಕ್ತಿಪ್ರತಿಬಂಧಕತ್ವಾದ್ವಾ । ಆದ್ಯಂ ನಿರಾಹ- ನೇತಿ ॥ ಕರ್ಮಣಾಮನಾರಂಭಾತ್- ಅಕರಣಾನ್ನೈಷ್ಕರ್ಮ್ಯಂ- ಕರ್ಮಾಕರಣಪ್ರಾಪ್ಯತ್ವಹೇತುನಾ ನೈಷ್ಕರ್ಮ್ಯಶಬ್ದವಾಚ್ಯಂ ಮೋಕ್ಷಮಶ್ನುತ ಇತಿ ಯತ್ ತ್ವಯೋಕ್ತಮ್,**

**ತತ್ ನ ಭವತಿ । ಕುತ ಇತ್ಯತ ಉಕ್ತಮ್- ಪುರುಷ ಇತಿ ।। ಪುರಾಣಿ ಶರೀರಾಣಿ ಸರತಿ ಪ್ರಾಪ್ನೋತೀತಿ ಪುರುಸಃ । ಪುರುಸ ಏವ ಪುರುಷಃ । ಹೇತುಗರ್ಭ-ಮಿದಮ್ । ಸದಾ ಸೂಕ್ಷ್ಮೇಣ ಸ್ಥೂಲೇನ ವಾ ದೇಹೇನ ಯುಕ್ತತ್ವಾದಿತಿ । ಕರ್ಮಾಕರಣಮಾತ್ರೇಣ ಮೋಕ್ಷ ಇತಿ ಪಕ್ಷೇ ಕದಾಚಿತ್ಕರ್ಮಾನಧಿಕಾರಿ(ರ)-ಶರೀರಸ್ಯಾಪಿ ಸಂಭವೇನ ತದ್ದೇಹೇ ಕರ್ಮಾಕರಣನಿಮಿತ್ತಮೋಕ್ಷಪ್ರಾಪ್ತ್ಯಾಽ-ಧುನಾ ದೃಶ್ಯಮಾನಂ ಪುರುಷತ್ವಂ ನ ಸ್ಯಾದಿತಿ ಭಾವಃ । ನೈಷ್ಕರ್ಮ್ಯಶಬ್ದವಾಚ್ಯತ್ವಂ ತು ಕಾಮ್ಯಕರ್ಮಾಪ್ರಾಪ್ಯತ್ವನಿಮಿತ್ತೇನೋಪಪನ್ನಮ್ । ಮಯಾ ತು ನಿವೃತ್ತ-ಕರ್ಮಣ್ಯೇವ ನಿಯೋಗಃ ಕ್ರಿಯತ ಇತಿ ಭಾವಃ ।**

**ಅನುವಾದ**- ಯತಿಗಳಿಗೆ ವಿಹಿತವಾದ ಶಮಾದಿ ಧರ್ಮಗಳನ್ನು ಅನುಷ್ಠಾನ ಮಾಡಬೇಕು ಹೊರತು ಗೃಹಸ್ಥಧರ್ಮವನ್ನು ಅಲ್ಲ. ಅದರಲ್ಲಿಯೂ ಘೋರವಾದ ಯುದ್ಧವನ್ನು ಮಾಡಲೇ ಬಾರದು ಎಂದು ಹೇಳಿದ ಅರ್ಜುನನಿಗೆ, 'ನೀನು ಜನಕಾದಿಗಳಂತೆ ಕರ್ಮಯೋಗಿ ಯಾದುದರಿಂದ ವರ್ಣಾಶ್ರಮೋಚಿತವಾದ ಧರ್ಮಗಳನ್ನು ಆಚರಿಸಲೇ ಬೇಕು' ಎಂದು ಶ್ರೀಕೃಷ್ಣನು ಉತ್ತರಿಸಿದ್ದಾನೆ. ಈಗ, ಕರ್ಮವನ್ನು ಮಾಡಬಾರದು ಎಂದು ಹೇಳುತ್ತಿರುವ ಅರ್ಜುನನ ಅಭಿಪ್ರಾಯವನ್ನು ಪ್ರಶ್ನಿಸುತ್ತಾ ಇದ್ದಾನೆ ಶ್ರೀಕೃಷ್ಣ.

ಕರ್ಮ ಮಾಡದೇ ಇರುವುದರಿಂದ ಸಿದ್ಧಿಸುತ್ತದೆ ಎಂಬ ಕಾರಣದಿಂದ ಮೋಕ್ಷಕ್ಕೆ ನೈಷ್ಕರ್ಮ್ಯ ಎಂದು ಹೆಸರು. ಹೀಗಾಗಿ ನೈಷ್ಕರ್ಮ್ಯ ರೂಪವಾದ ಮೋಕ್ಷ ಪ್ರಾಪ್ತಿಯಾಗಲು ಕರ್ಮ ಮಾಡಬಾರದು ಎಂದು (1) ಅರ್ಥಾಪತ್ತಿಯಿಂದ ಕರ್ಮ ಬಿಡಬೇಕು ಎಂದು ಸಾಧಿಸುತ್ತಿರುವೆಯೋ, ಅಥವಾ ಕರ್ಮವು ಸಂಸಾರಕ್ಕೆ ಕಾರಣ ಆದುದರಿಂದ ಕರ್ಮ ಮಾಡದಿದ್ದರೆ ಮೋಕ್ಷ ಸಿಗುತ್ತದೆ ಎಂದು ಅಭಿಪ್ರಾಯವೋ ಅಥವಾ '**ಕರ್ಮಣಾ ಬಧ್ಯತೇ ಜಂತುಃ**' ಎಂಬ ಸ್ಮೃತಿ ಇರುವುದರಿಂದ ಕರ್ಮವು ಮೋಕ್ಷಕ್ಕೆ ಪ್ರತಿಬಂಧಕವಾದುದರಿಂದ ಕರ್ಮ ಮಾಡಬಾರದು ಎಂದು ನಿನ್ನ ಅಭಿಪ್ರಾಯವೋ ? ಎಂದು ಮೂರು ಪ್ರಶ್ನೆ ಮಾಡಿ ಮೊದಲ ಪ್ರಶ್ನೆಗೆ '**ನ ಕರ್ಮಣಾಮ್**' ಎಂದು ಉತ್ತರ ಕೊಡುತ್ತಿದ್ದಾನೆ.

'**ಕರ್ಮಣಾಮನಾರಂಭಾತ್**' ಕರ್ಮಗಳ ಮಾಡದಿರುವಿಕೆಯಿಂದ, **ನೈಷ್ಕರ್ಮ್ಯಮ್**- ಕರ್ಮ ಮಾಡದಿರುವಿಕೆಯಿಂದ ಲಭ್ಯವಾಗುತ್ತದೆ ಎಂಬ ಕಾರಣದಿಂದ, **ನೈಷ್ಕರ್ಮ್ಯ** ಪದ ವಾಚ್ಯವಾದ ಮೋಕ್ಷವನ್ನು '**ಅಶ್ನುತೇ**' ಅನುಭವಿಸುತ್ತಾನೆ ಎಂದು ನೀನು ಹೇಳಿದ್ದು ಸರಿ ಅಲ್ಲ. ಏಕೆ ? ಎಂಬ ಪ್ರಶ್ನೆಗೆ '**ಪುರುಷಃ**' ಎಂಬ ಹೇತುಗರ್ಭ ವಿಶೇಷಣದಿಂದ (2) ಉತ್ತರಿಸಲಾಗಿದೆ. ಪುರುಷ ಎಂದರೆ ಶರೀರಗಳನ್ನು ಪಡೆದವ ಎಂದರ್ಥ. '**ಪುರಾಣಿ ಸರತೀತಿ ಪುರುಸಃ ಪುರುಸ**

ಏವ ಪುರುಷಃ' ಎಂದು ವಿಗ್ರಹ. ಈ ಜೀವನು ಯಾವಾಗಲೂ ಸ್ಥೂಲವಾದ ಅಥವಾ ಸೂಕ್ಷ್ಮವಾದ ಯಾವುದಾದರೊಂದು ದೇಹವನ್ನು ಪಡೆದೆ ಇರುತ್ತಾನೆ. ಕರ್ಮ ಮಾಡದಿರುವಿಕೆಯಿಂದ ಮೋಕ್ಷ ಎನ್ನುವ ಪಕ್ಷದಲ್ಲಿ ಯಾವಾಗಲಾದರೊಮ್ಮೆ ಕರ್ಮಕ್ಕೆ ಯೋಗ್ಯವಲ್ಲದ ಶರೀರವನ್ನು ಪಡೆದಾಗ ಆ ದೇಹದಲ್ಲಿ ಯಾವುದೇ ಕರ್ಮ ಮಾಡದ ಕಾರಣ ಮೋಕ್ಷ ಸಿದ್ಧಿಸುವುದರಿಂದ ಈಗ ಕಾಣುವ ಶರೀರ ಇಲ್ಲದೇ ಹೋಗಬೇಕಾದೀತು. ಹಾಗಾದರೆ, ಮೋಕ್ಷವನ್ನು ನೈಷ್ಕರ್ಮ್ಯ ಎಂದು ಏಕೆ ಕರೆಯುವುದು ಎಂದರೆ, ಕಾಮ್ಯಕರ್ಮದಿಂದ ಹೊಂದಲು ಶಕ್ಯವಲ್ಲ ಎಂಬ ಕಾರಣದಿಂದ. ಈಗ ನಿನ್ನನ್ನು ನಾನು ನಿಷ್ಕಾಮ (ನಿವೃತ್ತ) ಕರ್ಮದಲ್ಲಿ ತೊಡಗಿಸುವುದರಿಂದ ಯಾವ ತೊಂದರೆಯೂ ಇಲ್ಲ ಎಂದು ಅಭಿಪ್ರಾಯ.

**ವಿವರಣೆ–** (1) ಅರ್ಥಾಪತ್ತಿ ಎಂದರೆ ಪ್ರಮಾಣ ಸಿದ್ಧವಾದ ಒಂದು ವಿಷಯವನ್ನು ಒಪ್ಪುವಾಗ ಮತ್ತೊಂದು ವಿಷಯವನ್ನು ಅನಿವಾರ್ಯವಾಗಿ ಒಪ್ಪಬೇಕಾಗುತ್ತದೆ. ಉದಾ– ಒಬ್ಬ ವ್ಯಕ್ತಿ ದಪ್ಪವಾಗಿದ್ದಾನೆ. ಆದರೆ ಹಗಲು ಊಟ ಮಾಡುವುದಿಲ್ಲ ಎಂಬ ವಿಷಯವನ್ನು ಒಪ್ಪಿದಾಗ, ಎಂದೂ ಊಟ ಮಾಡದಿದ್ದರೆ ದಪ್ಪವಾಗಿರಲು ಸಾಧ್ಯವಿಲ್ಲವಾದುದರಿಂದ ಅವನು ರಾತ್ರಿ ಊಟ ಮಾಡುತ್ತಾನೆ ಎಂಬುದು ಅರ್ಥಾಪತ್ತಿಯಿಂದ ಸಿದ್ಧವಾಗುವ ವಿಷಯ. ಈಗ ಮೋಕ್ಷವನ್ನು 'ನೈಷ್ಕರ್ಮ್ಯ' ಎಂದು ಕರೆಯಬೇಕಾದರೆ, ಕರ್ಮದಿಂದ ಅದು ಪ್ರಾಪ್ಯವಲ್ಲ ಎಂಬ ಕಾರಣದಿಂದ ಆ ಹೆಸರು ಬಂದಿರುವುದರಿಂದ 'ಕರ್ಮವನ್ನು ಮಾಡಬಾರದು' ಎಂದು ಅರ್ಥಾಪತ್ತಿಯಿಂದ ಸಿದ್ಧವಾಗುತ್ತದೆ.

(2) 'ದಪ್ಪನಾದ ವ್ಯಕ್ತಿ ಓಡಲು ಸಮರ್ಥನಲ್ಲ' ಎಂಬ ವಾಕ್ಯದಲ್ಲಿ 'ದಪ್ಪನಾದ ' ಎಂದು ವ್ಯಕ್ತಿಗೆ ವಿಶೇಷಣ. ಈ ದಪ್ಪವಾಗಿರುವಿಕೆ ಎಂಬುದು ಓಡಲು ಅಸಮರ್ಥತೆಗೆ ಕಾರಣ. ಅಂದರೆ ದಪ್ಪನಾಗಿರುವುದರಿಂದ ಓಡಲು ಅಸಮರ್ಥ ಎಂದು. ಆದುದರಿಂದ ಇದನ್ನು ಹೇತುಗರ್ಭ ವಿಶೇಷಣ ಎನ್ನುತ್ತಾರೆ.

**ದ್ವಿತೀಯಮಪಿ ನಿರಾಹ– ನೇತಿ ॥ ಕರ್ಮಣಾಮನಾರಂಭಾತ್ ಅಕರಣಾನ್ನೈಷ್ಕರ್ಮ್ಯಂ– ಕಾಮ್ಯಕರ್ಮಾಪ್ರಾಪ್ಯಂ ಮೋಕ್ಷಮಶ್ನುತೇ, ಸಂಸಾರಬೀಜಭೂತಕರ್ಮಾಭಾವಾದಿತಿ ತ್ವಯೋಕ್ತಂ ಯತ್ತನ್ನ । ಕುತಃ– ಪುರುಷ ಇತಿ । ಪ್ರಾಗ್ವದೇವಾರ್ಥಃ । ಅನಾದೌ ಸಂಸಾರೇ ಕರ್ಮಾಧಿಕೃತಾನಂತಜನ್ಮಸಂಭವೇನ ಸದಾ ಪುರುಷಶಬ್ದಿತದೇಹಯುತತ್ವಾತ್ತತ್ರ ಕೃತಾನಂತಕರ್ಮಣಾಂ ಭಾವೇನಾದ್ಯತನದೇಹಾವಚ್ಛೇದೇನ ಕರ್ಮಾಕರಣಮಾತ್ರೇಣ ಸಂಸಾರಬೀಜಾಭಾವಕೃತಮೋಕ್ಷಾಶಾ ಕುತಃ ಸ್ಯಾದಿತಿ ಭಾವಃ । ತೃತೀಯಪಕ್ಷನಿರಾಸಸ್ತು 'ಯಜ್ಞಾರ್ಥಾತ್ ಕರ್ಮಣೋಽನ್ಯತ್ರ' ಇತ್ಯಾದೌ ವಕ್ಷ್ಯತೇ ।**

**ಅನುವಾದ** - ಎರಡನೆಯ ಪಕ್ಷವನ್ನು (1) ಇದೇ ವಾಕ್ಯದಿಂದ ನಿರಾಕರಣೆ ಮಾಡುತ್ತಿದ್ದಾನೆ ಶ್ರೀಕೃಷ್ಣ. **ಕರ್ಮಣಾಂ** = ಕರ್ಮಗಳ **ಅನಾರಂಭಾತ್**- ಮಾಡದಿರುವಿಕೆಯಿಂದ **'ನೈಷ್ಕರ್ಮ್ಯಮ್'** ಸಕಾಮಕರ್ಮದಿಂದ ಪ್ರಾಪ್ತವಾಗದ ಮೋಕ್ಷವನ್ನು **ಅಶ್ನುತೇ**= ಅನುಭವಿಸುತ್ತಾನೆ . ಏಕೆಂದರೆ ಸಂಸಾರಕ್ಕೆ ಕಾರಣವಾದ ಯಾವ ಕರ್ಮಗಳು ಇರುವುದಿಲ್ಲ-ವಾದ್ದರಿಂದ. ಎಂದು ನಿನ್ನ ಅಭಿಪ್ರಾಯ. ಅದೂ ಸರಿಯಲ್ಲ ಏಕೆಂದರೆ, ಈ ಪಕ್ಷಕ್ಕೂ **'ಪುರುಷಃ'** ಎಂದೇ ಉತ್ತರ. ಅರ್ಥವೂ ಮೊದಲಿನಂತೆಯೇ. ಪುರುಷಶಬ್ದಕ್ಕೆ ದೇಹದಿಂದ ಸದಾ ಕೂಡಿದವನು ಎಂದರ್ಥ. ಅನಾದಿಯಾದ ಸಂಸಾರದಲ್ಲಿ ಕರ್ಮಾಧಿಕಾರವುಳ್ಳ ಅನಂತ ಜನ್ಮಗಳು ಬಂದಿವೆಯಾದ್ದರಿಂದ ಈ ಜೀವನು ಸದಾ ದೇಹಯುಕ್ತನೇ ಆಗಿದ್ದಾನೆ. ಈ ಅನಂತ ದೇಹಗಳಲ್ಲಿ ಮಾಡಿದ ಕರ್ಮವು ಇರುತ್ತದೆಯಾದುದರಿಂದ ಈ ಶರೀರದಲ್ಲಿ ಕರ್ಮವನ್ನು ಮಾಡದಿದ್ದ ಮಾತ್ರಕ್ಕೆ ಸಂಸಾರಕ್ಕೆ ಕಾರಣವಾದ ಕರ್ಮ ಇಲ್ಲ ಎಂದು ಹೇಳಲು ಬರುವುದಿಲ್ಲ. ಆದುದರಿಂದ ಮೋಕ್ಷವಾದೀತೆಂದು ನಿರೀಕ್ಷಿಸುವುದು ಹೇಗೆ ಸಾಧ್ಯ ?

ಮೂರನೇ ಪಕ್ಷದ (2) ನಿರಾಕರಣೆಯನ್ನು **'ಯಜ್ಞಾರ್ಥಾತ್ ಕರ್ಮಣೋಽನ್ಯತ್ರ'** ಎಂಬಲ್ಲಿ ಮಾಡಲಾಗುತ್ತದೆ.

**ವಿವರಣೆ**– (1) ಕರ್ಮಗಳು ಸಂಸಾರಕ್ಕೆ ಕಾರಣ ಆದುದರಿಂದ ಕರ್ಮ ಮಾಡದಿರುವಿಕೆ ಮೋಕ್ಷಹೇತು ಎಂದು ಎರಡನೇ ಪಕ್ಷ (2) ಕರ್ಮಗಳು ಮೋಕ್ಷಕ್ಕೆ ಪ್ರತಿಬಂಧಕ ಎಂದು ಮೂರನೇ ಪಕ್ಷ.

## ಕರ್ಮತ್ಯಾಗ ಮೋಕ್ಷಕ್ಕೆ ಸಾಧನ - ಪೂರ್ವಪಕ್ಷ - ಉತ್ತರ

**ನನು 'ನಿಷ್ಕಾಮಂ ಜ್ಞಾನಪೂರ್ವಂ ತು' ಇತಿ ಸ್ಮೃತೌ ನಿವೃತ್ತಕರ್ಮಣಾ (ಣೋ) ಮೋಕ್ಷ ಉಚ್ಯತೇ । ತಸ್ಯ ಮೋಕ್ಷಹೇತುತ್ವೇ ಫಲಾಂತರಾಭಾವ ಏವ ಯುಕ್ತಿರ್ನ ತ್ವನ್ಯಾ । ತಥಾ ಚ ಕರ್ಮಾಕರಣಸ್ಯಾಪಿ ಫಲಾಂತರಾಭಾವ-ರೂಪಯುಕ್ತಿಸಾಮ್ಯಾತ್, ಆಯಾಸಾಭಾವರೂಪಗುಣವತ್ತ್ವಾಚ್ಚ, ಕರ್ಮಾ-ಕರಣಾದಪಿ ಮೋಕ್ಷಃ ಸ್ಯಾತ್ । 'ಏವಂ ತ್ವಯಿ ನಾನ್ಯಥೇತೋಽಸ್ತಿ' ಇತ್ಯಾದೌ ಶ್ರುತಃ ಕರ್ಮಾಕರಣೇ ಪ್ರತ್ಯವಾಯಸ್ತು ಅಮುಮುಕ್ಷುವಿಷಯತಯೋಪಪನ್ನ ಇತ್ಯತ್ರಾಹ- ನಚೇತಿ ॥ ಸನ್ನ್ಯಸನಾತ್= ಕಾಮ್ಯಕರ್ಮಾಕರಣಾದೇವ, ತನ್ಮಾತ್ರಾದಿತಿ ಯಾವತ್ । ಅನೇನ ನಿವೃತ್ತಕರ್ಮಾಕರಣಮುಪಲಕ್ಷ್ಯತೇ । ನಿವೃತ್ತ-ಕರ್ಮಾಕರಣಮಾತ್ರಾತ್ ಸಿದ್ಧಿಂ = ಮೋಕ್ಷಂ ಪುರುಷೋ ನ ಸಮಧಿಗಚ್ಛತಿ ನ ಪ್ರಾಪ್ನೋತಿ । ಕಿಂತು ತೇನಾಂತಃಕರಣಶುದ್ಧಿವಿಷಯವೈರಾಗ್ಯಾದಿನಾ ಶ್ರವಣ-**

**ಮನನ-ಧ್ಯಾನ-ಜ್ಞಾನದ್ವಾರೈವ । 'ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ' ಇತಿ ಸ್ಮೃತೇರಪ್ಯಯಮೇವ ಅಭಿಪ್ರಾಯಃ । ತಥಾ ಚ ನ ತತ್ಪ್ರತಿಬಂದ್ಯಾ ಕರ್ಮಾಕರಣಸ್ಯ ಮೋಕ್ಷಹೇತುತ್ವಂ ಶಂಕ್ಯಮಿತಿ ಭಾವಃ ।**

**ನನು ಯತ್ಯಾಶ್ರಮಧರ್ಮಾಣಾಂ ಶ್ರುತ್ಯಾದಿಸಿದ್ಧೇ ಮುಕ್ತಿಹೇತುತ್ವೇ ಫಲಾಂತ-ರಾಭಾವ ಏವ ಯುಕ್ತಿರಿತಿ ತತ್ಪ್ರತಿಬಂದ್ಯಾऽಸ್ತು ಕರ್ಮಾಕರಣಸ್ಯ ಮುಕ್ತಿ-ಹೇತುತ್ವಮಿತ್ಯತೋऽಪ್ಯುಕ್ತಮ್- ನಚೇತಿ ॥ ಸನ್ನ್ಯಸನಾದ್ಯತ್ಯಾಶ್ರಮಾದೇವೇ-ತ್ಯರ್ಥಃ । ಸ ತು ಭಗವತಿ ಮನಃ ಸಮಾಧಾನದ್ವಾರಾ ತತ್ಪ್ರೀತಿವಿಶೇಷದ್ವಾರಾ ವಾ ಮುಕ್ತಿಹೇತುರ್ನ ಫಲಾಂತರಾಭಾವವತ್ತ್ವ ಹೇತುನಾ । ಯೇನ ತತ್ಪ್ರತಿಬಂದ್ಯಾऽಪಿ ಫಲಾಂತರಾಭಾವಯುಕ್ತ್ಯಾ ಕರ್ಮಾಕರಣಸ್ಯ ಮುಕ್ತಿಹೇತುತ್ವಂ ಶಂಕ್ಯೇತೇತಿ । ಏತೇನ 'ಲೋಕ' ಇತಿ ಪೂರ್ವಶ್ಲೋಕೋಕ್ತದಿಶಾ ನ ಕೇವಲಮಾಧಿಕಾರಿಕತ್ವಾತ್ತವ ಕರ್ಮಣಿ ನಿಯೋಗಃ, ಅಪಿ ತು ಕರ್ಮಾಕರಣಸ್ಯ ತ್ವದುಕ್ತರೀತ್ಯಾ ಮುಕ್ತಿಹೇತುತ್ವಾ-ಭಾವಾದಪೀತಿ ಹೇತ್ವಂತರಮುಕ್ತಂ ಭವತಿ ॥ 4 ॥**

**ಅನುವಾದ - 'ನಿಷ್ಕಾಮಂ ಜ್ಞಾನ ಪೂರ್ವಂ ತು'** (1) ಎಂಬ ಸ್ಮೃತಿಯು ನಿವೃತ್ತ ಕರ್ಮವು ಮೋಕ್ಷಕ್ಕೆ ಸಾಧನ ಎಂದು ಹೇಳುತ್ತಿದೆ. ಅದು ಏಕೆ ಮೋಕ್ಷಸಾಧನ ಎಂದರೆ ಬೇರೆ ಯಾವುದೇ ಫಲಗಳಿಲ್ಲದಿರುವುದರಿಂದ (2) ಎಂದೇ ಉತ್ತರಿಸಬೇಕು. ಕರ್ಮ ಮಾಡದಿರುವಿಕೆಯಲ್ಲಿಯೂ ಬೇರೆ ಫಲಗಳಿಲ್ಲದಿರುವಿಕೆಯು (3) ಸಮಾನವಾದುದರಿಂದ ಮತ್ತು ಯಾವುದೇ ಆಯಾಸ ವಿಲ್ಲದಿರುವುದರಿಂದ ಕರ್ಮಗಳ ಬಿಡುವಿಕೆಯೂ ಕೂಡ ಮೋಕ್ಷಕ್ಕೆ ಸಾಧನ. ಹಾಗಾದರೇ **'ಏವಂ ತ್ವಯಿ'** (4) ಎಂಬಲ್ಲಿ ಕರ್ಮ ಮಾಡದಿದ್ದರೆ ಪಾಪವನ್ನು ಹೇಳಿದ್ದಾರೆ. ಆದುದರಿಂದ ಕರ್ಮತ್ಯಾ[ಗ] ಹೇಗೆ ಯುಕ್ತವಾದೀತು ಎಂದರೆ, ಇದನ್ನು ಯಾರು ಮೋಕ್ಷವನ್ನು ಬಯಸುವುದಿಲ್ಲವೋ ಅವರನ್ನು ಕುರಿತು ಹೇಳಿದ್ದು. ಅಂತಹವರು ಕರ್ಮವನ್ನು ಬಿಟ್ಟರೆ ಪಾಪ ಸಂಭವಿಸುತ್ತದೆ ಎಂದು ಆದುದರಿಂದ ಮುಮುಕ್ಷುಗಳ ಕರ್ಮತ್ಯಾಗವೂ ಮೋಕ್ಷಕ್ಕೆ ಸಾಧನವೇ ಆಗಿದೆ ಎಂಬ ಪೂರ್ವಪಕ್ಷ[ಕ್ಕೆ] **'ನ ಚ ಸಂನ್ಯಸನಾದೇವ'** ಎಂದು ಉತ್ತರ ಕೊಡಲಾಗಿದೆ.

**'ಸಂನ್ಯಸನಾದೇವ '** ಕಾಮ್ಯಕರ್ಮಗಳನ್ನು ಮಾಡದಿರುವಿಕೆಯಿಂದ ಮಾತ್ರ, ಎಂಬ[ಲ್ಲಿ] ನಿವೃತ್ತಕರ್ಮ ಮಾಡುವಿಕೆಯಿಂದ ಮಾತ್ರ, ಎಂದೂ ಇಟ್ಟುಕೊಳ್ಳಬೇಕು. **'ಸಿದ್ಧಿಂ'** – ಮೋ[ಕ್ಷ]ವನ್ನು, **ಪುರುಷಃ** = ಮನುಷ್ಯನು **'ನ ಸಮಧಿಗಚ್ಛತಿ'** ಹೊಂದುವುದಿಲ್ಲ, ಹೊರತ[ು] ಕಾಮ್ಯಕರ್ಮಗಳನ್ನು ಬಿಡುವಿಕೆಯಿಂದ, ಮತ್ತು ನಿಷ್ಕಾಮಕರ್ಮವನ್ನು ಮಾಡು ವಿಕೆಯಿಂ[ದ] ಅಂತಃಕರಣ ಶುದ್ಧಿಯನ್ನು ಪಡೆದು . ವಿಷಯವೈರಾಗ್ಯವನ್ನು ಹೊಂದಿ, ಶ್ರವಣ, ಮನನ, ಧ್ಯಾ[ನ]

ಮತ್ತು ಜ್ಞಾನದ ಮಾರ್ಗದಿಂದಲೇ ಮೋಕ್ಷ ಪಡೆಯಲು ಸಾಧ್ಯ **'ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಮ್'** ಎನ್ನುವ ಸ್ಮೃತಿವಾಕ್ಯದ · ಅಭಿಪ್ರಾಯವೂ ಇದೇ ಆಗಿದೆ. ಆದುದರಿಂದ ನಿವೃತ್ತಕರ್ಮದ ದೃಷ್ಟಾಂತದಿಂದ ಕರ್ಮತ್ಯಾಗವು ಮೋಕ್ಷ ಸಾಧನ ಎಂದು ಶಂಕಿಸುವಂತಿಲ್ಲ.

ಯತಿಗಳಿಗೆ ವಿಹಿತವಾದ ಶಮಾದಿ ಧರ್ಮಗಳು ಮೋಕ್ಷ ಸಾಧನ ಎಂದು ಶ್ರುತಿ ಮುಂತಾದ ಪ್ರಮಾಣಗಳಿಂದ ಸಿದ್ಧವಾಗಿದೆ. ಇದಕ್ಕೆ ಕಾರಣ ಬೇರೆ ಫಲವಿಲ್ಲದಿರುವಿಕೆಯೇ ಆಗಿದೆ (5) ಇದರಂತೆ ಕರ್ಮತ್ಯಾಗವೂ ಕೂಡ ಬೇರೆ ಫಲವಿಲ್ಲದಿರುವುದರಿಂದ ಮೋಕ್ಷಕ್ಕೆ ಸಾಧನವೇ ಆಗಿದೆ ಎಂಬ ಆಕ್ಷೇಪಕ್ಕೂ ಕೂಡ **'ನ ಚ ಸಂನ್ಯಸನಾದೇವ'** ಎಂದು ಉತ್ತರಿಸಿದ್ದಾನೆ ಶ್ರೀಕೃಷ್ಣ. **'ಸಂನ್ಯಸನಾದೇವ'** ಯತ್ಯಾಶ್ರಮದಿಂದಲೇ, ಎಂದು ಅರ್ಥ, ಆ ಸಂನ್ಯಾಸವೂ ಕೂಡ ಫಲಾಂತರ ಇಲ್ಲ ಎನ್ನುವ ಕಾರಣದಿಂದ ನೇರವಾಗಿ ಮೋಕ್ಷಹೇತುವಲ್ಲ. ಹೊರತು ಯತಿ ಧರ್ಮಗಳಿಂದ ಮನಸ್ಸಿನ ಸ್ಥಿರತೆ (ನಿಶ್ಚಲವಾಗಿ ಭಗವಂತನಲ್ಲಿ ನೆಲೆನಿಲ್ಲುವಿಕೆ) ಉಂಟಾಗುತ್ತದೆ ಭಗವಂತನ ವಿಶೇಷ ಅನುಗ್ರಹ ಲಭ್ಯವಾಗುತ್ತದೆ. ಅದರಿಂದಾಗಿ ಮೋಕ್ಷ. ಹೀಗಾಗಿ ಯತಿಧರ್ಮಗಳಂತೆ ಎಂದು ಪ್ರತಿಬಂದಿಯನ್ನು ಹೇಳಿ ಫಲಾಂತರಾಭಾವ ಯುಕ್ತಿಯಿಂದ ಕರ್ಮತ್ಯಾಗವು ಮೋಕ್ಷಕ್ಕೆ ಕಾರಣ ಎಂದು ಸಾಧಿಸಲು ಬರುವುದಿಲ್ಲ.

ಹಿಂದಿನ ಶ್ಲೋಕದಲ್ಲಿ ಅರ್ಜುನನು ಕರ್ಮಾಧಿಕಾರಿಯಾದುದರಿಂದ ಅವನನ್ನು ಕರ್ಮದಲ್ಲಿ ತೊಡಗಿಸುತ್ತೇನೆ ಎಂದು ಉತ್ತರ ಕೊಡಲಾಗಿದೆ . ಅಷ್ಟು ಮಾತ್ರವಲ್ಲ . ಕರ್ಮತ್ಯಾಗದಿಂದ ಮೋಕ್ಷ ಸಾಧ್ಯವೂ ಇಲ್ಲ. ಆದುದರಿಂದ ಕರ್ಮವನ್ನು ಬಿಡಬಾರದು. ಹಾಗಾಗಿ ಕರ್ಮದಲ್ಲಿ ನಿಯೋಜಿಸುವಿಕೆ ಸರಿಯಾಗಿದೆ ಎಂದು ಈ ಶ್ಲೋಕದಲ್ಲಿ ಮತ್ತೊಂದು ಕಾರಣವನ್ನು ಹೇಳಲಾಗಿದೆ. ।। 4 ।।

**ವಿವರಣೆ** - (1)

ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿಹ ಚೋಚ್ಯತೇ ।
ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಮ್ ।।

ಎಂಬ ಮನುಸ್ಮೃತಿಯ ವಾಕ್ಯವನ್ನು ಆಚಾರ್ಯರು ಗೀತಾಭಾಷ್ಯದಲ್ಲಿ ಉದಾಹರಿಸಿದ್ದಾರೆ.

(2) **'ನಿವೃತ್ತಂ ಕರ್ಮ ಮೋಕ್ಷಫಲಕಂ ಸಫಲತ್ವೇಽಪಿ ಫಲಾಂತರಾಭಾವಾತ್'** ಎಂಬ ಅನುಮಾನದಿಂದ ನಿವೃತ್ತಕರ್ಮವು ಮೋಕ್ಷ ಸಾಧನ ಎಂದು ಸಿದ್ಧಿಸುತ್ತದೆ.

(3) **'ಕರ್ಮಾಕರಣಂ ಮೋಕ್ಷಸಾಧನಂ ಫಲಾಂತರಾಭಾವಾತ್ ನಿವೃತ್ತ ಕರ್ಮವತ್'** ಎಂದು ಅನುಮಾನ ಪ್ರಯೋಗಕ್ರಮ.

(4) 'ಏವಂ ತ್ವಯಿ' ಎಂಬ ಈಶಾವಾಸ್ಯದ ಮಾತಿಗೆ, ಅನ್ಯಥಾ – ಕರ್ಮಾಚರಣೆ ಮಾಡದಿದ್ದರೆ, ಕರ್ಮ ನ ಲಿಪ್ಯತೇ ಇತಿ ನ – ಪಾಪಲೇಪವಿಲ್ಲವೆಂದಿಲ್ಲ ಪಾಪವಿದ್ದೇ ಇದೆ ಎಂದು ಅರ್ಥ.

(5) **'ಯತಿಧರ್ಮಾಃ ಮೋಕ್ಷಫಲಕಾಃ ಫಲಾಂತರಾಭಾವಾತ್'** ಎಂದು ಅನುಮಾನ ಪ್ರಯೋಗ.

## ಕರ್ಮತ್ಯಾಗ ಅಸಾಧ್ಯ

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ** ॥ 5 ॥

**ಅರ್ಥ** – ಸಾಮಾನ್ಯ ಜನರಾಗಲಿ ಅಥವಾ ಪಂಡಿತರಾಗಲಿ, ಯಾವ ಅವಸ್ಥೆಯಲ್ಲಿಯೂ ಕೂಡ ಕ್ಷಣಕಾಲವೂ ಕರ್ಮವನ್ನು ಮಾಡದೇ ಇರುವುದಿಲ್ಲ. ಏಕೆಂದರೆ ಭಗವಂತನಿಂದ ಮತ್ತು ಪ್ರಾಕೃತಿಕವಾದ ಸತ್ವಾದಿ ಗುಣಗಳಿಂದ ಪ್ರೇರಿತನಾಗಿ ಯಾವಾಗಲೂ ಯಾವುದಾದರೊಂದು ಕರ್ಮವನ್ನು ಮಾಡುತ್ತಲೆ ಇರುತ್ತಾರೆ.

**ಕಿಂಚ ಕರ್ಮಣೇತ್ಯಾದಿಸ್ಮೃತಿಬಲಾತ್ ಕರ್ಮಣೋ ಮುಕ್ತಿಪ್ರತಿಬಂಧಕತ್ವಮಿತಿ ತೃತೀಯಪಕ್ಷೇ ಸ್ಮೃತೌ ಕರ್ಮಶಬ್ದಃ ಸಂಕುಚಿತವೃತ್ತಿರಿತಿ ವಕ್ಷ್ಯಮಾಣೋಪೋದ್ಘಾತತಯಾ ಕರ್ಮಾಣಿ ಸರ್ವಾತ್ಮನಾ ತ್ಯಕ್ತುಂ ನ ಶಕ್ಯಾನೀತ್ಯಾಹ- ನ ಹೀತಿ ॥ ಜಾತು= ಕಸ್ಯಾಂಚಿದವಸ್ಥಾಯಾಂ ಕ್ಷಣಮಾತ್ರಮಪಿ ಕಶ್ಚಿದಪಿ= ಜ್ಞೋಽಜ್ಞೋ ವಾ ಅಕರ್ಮಕೃತ್ಕರ್ಮಾಣ್ಯಕುರ್ವನ್ನ ತಿಷ್ಠತಿ । ಕುತ ಇತ್ಯತ ಉಕ್ತಮ್- ಕಾರ್ಯತ ಇತಿ ॥ ಸರ್ವಃ= ಸರ್ವೇಣ ಜನೇನ । ವ್ಯತ್ಯಯಾತ್ । ಅವಶಃ= ಅವಶೇನ 'ಅಃ ಇತಿ ಬ್ರಹ್ಮ' (ಐ.ಆ. 2-3-8) ಇತಿ ಶ್ರುತೇಃ ವಿಷ್ಣುವಶೇನೈವ ಸತಾ ಸ್ವತಂತ್ರಕರ್ತೃವಿಷ್ಣ್ವಧೀನಕರ್ತೃತಾಕೇನೈವ (ಸತಾ) ಕರ್ತ್ರಾ ಪ್ರಕೃತಿಜೈರ್ಗುಣೈಃ= ಸತ್ತ್ವಾದಿಭಿರ್ವಿಕಾರ(ಕರ್ತೃ)ಭೂತೈಃ ಕರ್ಮ ಕಾರ್ಯತೇ । ಸ್ವತಂತ್ರಕರ್ತ್ರಾ ಭಗವತಾ ವಿಕಾರಕರ್ತೃಸತ್ತ್ವಾದಿಭಿಶ್ಚ ಪ್ರೇರಿತೋ ಜನಃ ಸದಾ ಕಿಂಚಿತ್ಕರ್ಮ ಕರೋತೀತಿ ಹೇತೋರಕರ್ಮಕೃತ್ ಕೋಽಪಿ ನೇತ್ಯರ್ಥಃ ॥ 5 ॥**

**ಅನುವಾದ** – 'ಕರ್ಮಣಾ ಬಧ್ಯತೇ ಜಂತುಃ' ಇತ್ಯಾದಿ ಸ್ಮೃತಿಗಳಲ್ಲಿ ಕರ್ಮವನ್ನು ಮೋಕ್ಷ ಪ್ರತಿಬಂಧಕ ಎಂದಿದ್ದಾರೆ . ಆದುದರಿಂದ ಕರ್ಮವನ್ನು ಮಾಡಬಾರದು ಎಂಬ ಮೂರನೆಯ ಪಕ್ಷಕ್ಕೆ ಉತ್ತರವಾಗಿ ಈ ಸ್ಮೃತಿಯಲ್ಲಿ 'ಕರ್ಮ' ಎಂದರೆ ಎಲ್ಲಾ ಕರ್ಮಗಳು ಎಂದು ಅರ್ಥ

ಮಾಡಬಾರದು. ಹೊರತು, ಕೆಲವು ಕರ್ಮಗಳು ಎಂದು ಸಂಕುಚಿತವಾದ ಅರ್ಥವನ್ನು ಮಾಡಬೇಕೆಂದು ಮುಂದೆ 'ಯಜ್ಞಾರ್ಥಾತ್' ಎಂಬ 9ನೇ ಶ್ಲೋಕದಲ್ಲಿ ತಿಳಿಸಲು ಪೀಠಿಕಾ ರೂಪದಲ್ಲಿ ಎಲ್ಲಾ ಕರ್ಮಗಳನ್ನು ಬಿಡುವುದು ಅಸಾಧ್ಯ ಎಂಬುದನ್ನು ಈ ಶ್ಲೋಕದಲ್ಲಿ ಸ್ಪಷ್ಟಪಡಿಸಲಾಗಿದೆ.

**ಜಾತು**= ಯಾವ ಅವಸ್ಥೆಯಲ್ಲಿಯೂ ಕೂಡ **ಕ್ಷಣಮಪಿ**= ಕ್ಷಣಮಾತ್ರವೂ ಕೂಡ **ಕಶ್ಚಿದಪಿ**= ಜ್ಞಾನಿಯಾಗಲಿ ಅಜ್ಞಾನಿಯಾಗಲಿ ಯಾರೂ ಕೂಡ. **ಅಕರ್ಮಕೃತ್**= ಕರ್ಮಗಳನ್ನು ಮಾಡದೆ, **ನ ತಿಷ್ಠತಿ**= ಇರುವುದಿಲ್ಲ. ಏಕೆ ? ಎಂಬ ಪ್ರಶ್ನೆಗೆ **'ಕಾರ್ಯತೇ'**ಎಂಬ ಮುಂದಿನ ಭಾಗದಿಂದ ಉತ್ತರಿಸಿದ್ದಾನೆ. **ಅವಶಃ**= ವಿಷ್ಣುವಶರಾಗಿಯೇ ಇರುವ **ಸರ್ವಃ**= ಎಲ್ಲ ಜನರಿಂದ, ವಿಭಕ್ತಿ ವ್ಯತ್ಯಾಸ ಮಾಡಿಕೊಳ್ಳಬೇಕು (1) ಸ್ವತಂತ್ರ ಕರ್ತೃ ವಿಷ್ಣು. ಅವನ ಅಧೀನವಾಗಿ ಕರ್ತೃತ್ವ ಉಳ್ಳವನು ಜೀವ. ಅಂತಹ ಜೀವನು ಪ್ರಕೃತಿಯ ಗುಣಗಳಾದ ಸತ್ವಾದಿಗಳಿಂದ ಪ್ರೇರಿತನಾಗಿ ಕರ್ಮವನ್ನು ಮಾಡುತ್ತಾನೆ. ಅಂದರೆ, ಸ್ವತಂತ್ರ ಕರ್ತೃವಾದ ಭಗವಂತನಿಂದ ಮತ್ತು ಸತ್ವಾದಿಗುಣಗಳಿಂದ ಪ್ರೇರಿತರಾದ ಎಲ್ಲರೂ ಸದಾ ಯಾವುದಾದರೊಂದು ಕರ್ಮವನ್ನು ಮಾಡುತ್ತಲೇ ಇರುತ್ತಾರೆ. ಆದುದರಿಂದ ಕರ್ಮ ಮಾಡದೇ ಇರುವುದು ಅಸಾಧ್ಯ ಎಂದು ಭಾವ. ॥ 5 ॥

**ವಿವರಣೆ** - (1) **'ಅ ಇತಿ ಬ್ರಹ್ಮ'** ಎನ್ನುವ ಐತರೇಯ ಆರಣ್ಯಕದಂತೆ 'ಅ' ಎಂದರೆ ಬ್ರಹ್ಮ. ಆದುದರಿಂದ ಅವಶನಾಗಿ ಎಂದರೆ ವಿಷ್ಣುವಿಗೆ ವಶನಾಗಿ ಎಂದರ್ಥ.

**ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥ 6 ॥**

**ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ 7 ॥**

**ಅರ್ಥ**- ಕರ್ಮೇಂದ್ರಿಯ ಹಾಗು ಜ್ಞಾನೇಂದ್ರಿಯ ಇವುಗಳನ್ನು ನಿಗ್ರಹಿಸಿ. ವಿಷಯ ಪದಾರ್ಥಗಳನ್ನು ಮನಸ್ಸಿನಿಂದ ಸ್ಮರಿಸುತ್ತಿರುವವನು ಭ್ರಾಂತನು. ಅವನನ್ನು ಢಾಂಭಿಕ ಎಂದು ಕರೆಯಬೇಕು. ॥ 6 ॥

ಆದರೆ ಎಲ್ಲಾ ಜ್ಞಾನೇಂದ್ರಿಯಗಳನ್ನು ನಿಗ್ರಹಿಸಿ, ಕರ್ಮೇಂದ್ರಿಯಗಳಿಂದ ಕರ್ಮ-ರೂಪವಾದ ಉಪಾಯವನ್ನು ನಡೆಸುವವನು ವಿಶಿಷ್ಟನಾದ ಪುರುಷನೆನಿಸುತ್ತಾನೆ. ॥ 7 ॥

## ಮನಸ್ಸು ಪ್ರಧಾನ

ನನು ಶರೀರಯಾತ್ರಾದ್ಯರ್ಥಕರ್ಮಣಾಂ ತ್ಯಕ್ತುಮಶಕ್ಯತ್ವೇಽಪಿ ಯಜ್ಞಾದಿ-ಕರ್ಮಣಾಂ ತ್ಯಕ್ತುಂ ಶಕ್ಯತ್ವಾತ್ತೇಷಾಮಸ್ತು ತ್ಯಾಗಃ । ನ ಹ್ಯಶಕ್ಯವಿಷಯೇ ಶಾಸ್ತ್ರ-ಪ್ರವೃತ್ತಿರಸ್ತಿ । ಅತಃ 'ಕರ್ಮಣಾ ಬಧ್ಯತ' ಇತಿ ಕರ್ಮತ್ಯಾಗಪರೇ ಶಾಸ್ತ್ರೇ ಕರ್ಮಶಬ್ದೋ ಯಜ್ಞಾದಿಕರ್ಮಪರೋ ಭವಿಷ್ಯತೀತ್ಯತೋ ಮನ ಏವ ಬಂಧ-ಮೋಕ್ಷಯೋಃ ಪ್ರಯೋಜಕಂ ನ ಕರ್ಮಕರಣಾಕರಣೇ ಇತಿ ಭಾವೇನ ಮನಸ ಏವ ಪ್ರಾಧಾನ್ಯಮಾಹ- **ಕರ್ಮೇತ್ಯಾದಿ ಶ್ಲೋಕಾಭ್ಯಾಮ್** ॥ **ಕರ್ಮೇಂದ್ರಿ-ಯಾಣಿ**= ವಾಕ್‌ಪಾಣಿಪಾದಪಾಯೂಪಸ್ಥಾನಿ । ಚಕ್ಷುರಾದೀನ್ಯುಪಲಕ್ಷ್ಯಂತೇ । **ಸಂಯಮ್ಯ** ನಿಗೃಹ್ಯ [1]ಯ **ಇಂದ್ರಿಯಾರ್ಥಾನ್**= ರೂಪಾದೀನ್ **ಮನಸಾ ಸ್ಮರನ್ನಾಸ್ತೇ**= ವರ್ತತೇ । **ಸ ವಿಮೂಢಾತ್ಮಾ**= ಭ್ರಾಂತಃ **ಮಿಥ್ಯಾಚಾರಃ**= ಕಪಟಾ-ಚಾರಃ ಡಾಂಭಿಕ ಉಚ್ಯತ ಇತ್ಯರ್ಥಃ । **ಯಸ್ತ್ವಿಂದ್ರಿಯಾಣಿ**= ಚಕ್ಷುರಾದಿ-ಜ್ಞಾನೇಂದ್ರಿಯಾಣಿ **ಮನಸಾ ನಿಯಮ್ಯ ಅಸಕ್ತಃ** = ಫಲೇಚ್ಛಾಹೀನಃ ಸನ್ **ಕರ್ಮೇಂದ್ರಿಯೈಃ ಕರ್ಮಯೋಗಂ** ಸ್ವವರ್ಣಾಶ್ರಮೋಚಿತಕರ್ಮರೂಪ-ಜ್ಞಾನೋಪಾಯಂ **ಆರಭತೇ** = ಕರೋತಿ **ಸ ವಿಶಿಷ್ಯತೇ** । ಪೂರ್ವತನಾದಧಿಕೋ ಭವತಿ ।

**ಅನುವಾದ** - ಈ ದೇಹದ ರಕ್ಷಣೆಗಾಗಿ ಕರ್ಮಗಳನ್ನು ಮಾಡುವುದು ಅನಿವಾರ್ಯ-ವಾದುದರಿಂದ ಅವುಗಳನ್ನು ಬಿಡಲು ಸಾಧ್ಯವಿಲ್ಲ. ಆದರೆ, ಯಜ್ಞಾದಿ ಕರ್ಮಗಳನ್ನು ಬಿಡಲು ಶಕ್ಯವಿದೆ. ಆದುದರಿಂದ ಇಂತಹ ಕರ್ಮಗಳನ್ನು ಬಿಡಬೇಕು. '**ಕರ್ಮಣಾ ಬಧ್ಯತೇ**' ಇತ್ಯಾದಿ ಕರ್ಮಗಳನ್ನು ಬಿಡಬೇಕು ಎಂದು ಹೇಳುವ ಶಾಸ್ತ್ರದಲ್ಲಿಯೂ ಕೂಡ 'ಯಜ್ಞಾದಿ ಕರ್ಮಗಳು' ಎಂದೆ ಅರ್ಥ. ಏಕೆಂದರೆ ಶಾಸ್ತ್ರವು ಅಸಾಧ್ಯವಾದುದನ್ನು ವಿಧಾನ ಮಾಡುವುದಿಲ್ಲ. ಹೀಗಾಗಿ ಯಾವ ಕರ್ಮಗಳು ಬಂಧಕವಾಗುತ್ತವೆಯೋ ಅಂತಹ ಯಜ್ಞಾದಿ ಕರ್ಮಗಳನ್ನು ಬಿಡಬಹುದಲ್ಲವೇ ? ಎಂಬ ಪ್ರಶ್ನೆಗೆ, ನಮ್ಮ ಬಂಧನ - ಮೋಕ್ಷಗಳಿಗೆ ಮನಸ್ಸು ಕಾರಣ ಹೊರತು ಕರ್ಮ ಮಾಡುವಿಕೆ ಅಥವಾ ಬಿಡುವಿಕೆ ಅಲ್ಲ ಎಂದು ತಿಳಿಸಲು ಮನಸ್ಸು ಏಕೆ ಪ್ರಧಾನ ಕಾರಣ ಎಂಬ ಅಂಶವನ್ನು ಈ ಎರಡು ಶ್ಲೋಕಗಳಲ್ಲಿ ಸ್ಪಷ್ಟಪಡಿಸಲಾಗಿದೆ.

**ಕರ್ಮೇಂದ್ರಿಯಾಣಿ** = ವಾಕ್ - ಹಸ್ತ - ಪಾದ -ವಿಸರ್ಗೇಂದ್ರಿಯ - ಗುಹ್ಯೇಂದ್ರಿಯ ರೂಪವಾದ ಐದು ಕರ್ಮೇಂದ್ರಿಯಗಳನ್ನು ಜೊತೆಗೆ ಕಣ್ಣು-ಕಿವಿ - ಮೂಗು - ನಾಲಿಗೆ-ಚರ್ಮರೂಪವಾದ ಐದು ಜ್ಞಾನೇಂದ್ರಿಯಗಳನ್ನು ಇಟ್ಟುಕೊಳ್ಳಬೇಕು. **ಸಂಯಮ್ಯ** = ನಿಗ್ರಹಿಸಿ **ಇಂದ್ರಿಯಾರ್ಥಾನ್** = ಆಯಾ ಇಂದ್ರಿಯಗಳ ವಿಷಯಗಳಾದ ರೂಪ ಮೊದಲಾದ

1. ಯೋ ಮನಸಾ ಇಂದ್ರಿಯಾರ್ಥಾನ್

ಪದಾರ್ಥಗಳನ್ನು , **ಮನಸಾ**= ಮನಸ್ಸಿನಿಂದ **ಸ್ಮರನ್**= ಸ್ಮರಿಸುತ್ತಾ, **ಆಸ್ತೇ**= ಯಾರು ಇರುತ್ತಾನೋ, **ಸಃ**= ಅವನು , **ವಿಮೂಢಾತ್ಮಾ** = ಭ್ರಾಂತನು. **ಮಿಥ್ಯಾಚಾರಃ** = ಕಪಟವಾದ ಆಚಾರವುಳ್ಳವನು ಅಂದರೆ ಢಾಂಭಿಕ ಎಂಬುದಾಗಿ, **ಉಚ್ಯತೇ**= ಹೇಳಲ್ಪಡುತ್ತಾನೆ. **ಯಸ್ತು**= ಯಾರು, **ಇಂದ್ರಿಯಾಣಿ**= ಚಕ್ಷುರಾದಿ ಜ್ಞಾನೇಂದ್ರಿಯಗಳನ್ನು **ಮನಸಾ**= ಮನಸ್ಸಿನಿಂದ, **ನಿಯಮ್ಯ**= ನಿಗ್ರಹಿಸಿ, **ಅಸಕ್ತಃ**= ಫಲೇಚ್ಛೆ ಇಲ್ಲದವನಾಗಿ , **ಕರ್ಮೇಂದ್ರಿಯೈಃ**= ವಾಗಾದಿ ಕರ್ಮೇಂದ್ರಿಯಗಳಿಂದ **ಕರ್ಮಯೋಗಂ** = ಅವರವರ ವರ್ಣಾಶ್ರಮಗಳಿಗೆ ಯೋಗ್ಯವಾದ ಕರ್ಮರೂಪವಾದ ಜ್ಞಾನೋಪಾಯವನ್ನು (ಕರ್ಮಾಚರಣೆಯನ್ನು) **ಆರಭತೇ**= ಮಾಡು ತ್ತಾನೋ, **ಸಃ**= ಅವನು , **ವಿಶಿಷ್ಯತೇ**= ಹಿಂದಿನವನಿಗಿಂತ ಹೆಚ್ಚಿನವನು.

**ಏತೇನ ಪೂರ್ವಶ್ಲೋಕೇ ಮನಸೋ ನಿಗ್ರಹಾಭಾವೇ ಬಂಧ ಇತ್ಯನ್ವಯಃ, ದ್ವಿತೀಯೇ ತು ಮನಸೋ ನಿಗ್ರಹೇ ಬಂಧಾಭಾವ ಇತಿ ವ್ಯತಿರೇಕ ಉಕ್ತಃ । ತಥಾ ಪೂರ್ವತ್ರ ಮನಸೋಽನಿಗ್ರಹೇ ಮೋಕ್ಷಾಭಾವ ಇತಿ ವ್ಯತಿರೇಕಃ, ದ್ವಿತೀಯೇ ತು ಶ್ಲೋಕೇ ಮನಸೋ ನಿಗ್ರಹೇ ಮೋಕ್ಷ ಇತ್ಯನ್ವಯ ಇತಿ ಬಂಧಾಪೇಕ್ಷಯಾ ಮನಸೋಽನಿಗ್ರಹನಿಗ್ರಹಯೋರನ್ವಯವ್ಯತಿರೇಕೌ, ಮೋಕ್ಷಾಪೇಕ್ಷಯಾ ಚ ವ್ಯತಿ-ರೇಕಾನ್ವಯಾವಿತ್ಯುಕ್ತದಿಶಾಽಭಿಪ್ರೇತತಯಾ ಬಂಧಮೋಕ್ಷಯೋರ್ಮನೋಽನಿ-ಗ್ರಹನಿಗ್ರಹಾವೇವ ಪ್ರಯೋಜಕಾವಿತ್ಯುಕ್ತಂ ಭವತಿ । ಮನಸ ಏವ ಪ್ರಯೋ-ಜಕತ್ವಜ್ಞಾಪನಾಯ ಮನಸಾ ಸ್ಮರನ್ನಿತ್ಯುಕ್ತಿಃ । ಅನ್ಯಥಾ ಸ್ಮರಣಸ್ಯ ಮಾನಸತ್ವಾವ್ಯಭಿ-ಚಾರಾನ್ಮನಸೇತಿ ವ್ಯರ್ಥಂ ಸ್ಯಾದಿತಿ ಜ್ಞೇಯಮ್ ॥ 6-7 ॥**

**ಅನುವಾದ-** ಈ ಎರಡು ಶ್ಲೋಕಗಳಿಂದ ಬಂಧ ಮತ್ತು ಮನೋನಿಗ್ರಹ ಇಲ್ಲದಿರುವಿಕೆಗಳಿಗೆ, ಅದರಂತೆ ಮೋಕ್ಷ - ಮನೋನಿಗ್ರಹಗಳಿಗೆ (1) ಅನ್ವಯ ವ್ಯತಿರೇಕಗಳನ್ನು ಹೇಳುತ್ತಿದ್ದಾರೆ. ಅದು ಹೇಗೆಂದರೆ 6ನೇ ಶ್ಲೋಕದಲ್ಲಿ ಮನೋನಿಗ್ರಹವಿಲ್ಲದಿದ್ದರೆ ಬಂಧನ ಎಂದು ಅನ್ವಯ, 7ನೇ ಶ್ಲೋಕದಲ್ಲಿ ಮನೋನಿಗ್ರಹವಿದ್ದರೆ ಬಂಧನವಿಲ್ಲ ಎಂದು ವ್ಯತಿರೇಕ. ಅದರಂತೆಯೇ, 6ನೇ ಶ್ಲೋಕದಲ್ಲಿ ಮನೋನಿಗ್ರಹವಿಲ್ಲದಿದ್ದರೆ, ಮೋಕ್ಷವಿಲ್ಲ ಎಂದು ವ್ಯತಿರೇಕ, 7ನೇ ಶ್ಲೋಕದಲ್ಲಿ ಮನೋನಿಗ್ರಹವಿದ್ದರೆ, ಮೋಕ್ಷ ಎಂದು ಅನ್ವಯ. ಆದುದರಿಂದ ಬಂಧ-ಬಂಧಾಭಾವಗಳಿಗೆ, ಮತ್ತು ಮನೋನಿಗ್ರಹ-ಅನಿಗ್ರಹಗಳಿಗೆ ಅನ್ವಯ ವ್ಯತಿರೇಕವಿರುವ ಪ್ರಯುಕ್ತ ಹಾಗೆಯೇ ಮೋಕ್ಷಾಭಾವ - ಮೋಕ್ಷಗಳಿಗೆ ಮತ್ತು ಮನೋ ಅನಿಗ್ರಹ - ನಿಗ್ರಹಗಳಿಗೆ ವ್ಯತಿರೇಕ - ಅನ್ವಯವಿರುವ ಕಾರಣ, ಬಂಧ ಮೋಕ್ಷಗಳಿಗೆ ಮನೋ ಅನಿಗ್ರಹ ನಿಗ್ರಹಗಳೇ ಕಾರಣ ಎಂದು ಹೇಳಿದಂತೆ ಆಯಿತು.

ಇಲ್ಲಿ ಮನಸ್ಸು ಕಾರಣ ಎಂದು ಸ್ಪಷ್ಟಪಡಿಸಬೇಕಿದೆ. ಅದಕ್ಕಾಗಿ 'ಮನಸಾ ಸ್ಮರನ್' ಎಂದಿದ್ದಾರೆ ಇಲ್ಲದಿದ್ದರೆ 'ಸ್ಮರನ್' ಎಂದಷ್ಟೇ ಹೇಳಿದ್ದರೂ ಸ್ಮರಣೆ ಯಾವತ್ತೂ ಮನಸ್ಸಿನಿಂದಲೇ ಆದುದರಿಂದ ಯಾವ ಬಾಧಕವೂ ಇರುತ್ತಿರಲಿಲ್ಲ. ಹೀಗಾಗಿ 'ಮನಸಾ' ಎನ್ನುವ ಪದ ವ್ಯರ್ಥವಾಗುತ್ತಿತ್ತು . ॥ 6–7 ॥

**ವಿವರಣೆ** – (1) ಅನ್ವಯ ಸಹಚಾರ ಮತ್ತು ವ್ಯತಿರೇಕ ಸಹಚಾರ ಇವುಗಳನ್ನು ತಿಳಿದು ಕಾರ್ಯಕಾರಣಭಾವವನ್ನು ನಿಶ್ಚಯಿಸಬೇಕು. ಉದಾ : ಮಣ್ಣು ಇದ್ದರೆ ಮಡಿಕೆ ಎಂಬ ಜ್ಞಾನ ಅನ್ವಯ ಸಹಚಾರ ಜ್ಞಾನ. ಮಣ್ಣು ಇಲ್ಲದಿದ್ದರೆ ಮಡಿಕೆಯೂ ಇಲ್ಲ ಈ ಜ್ಞಾನ , ವ್ಯತಿರೇಕ ಸಹಚಾರ ಜ್ಞಾನ. ಈ ಎರಡು ಜ್ಞಾನ ನಮಗೆ ಇರುವುದರಿಂದ ಮಡಿಕೆಗೆ ಮಣ್ಣು ಕಾರಣ ಎಂದು ತೀರ್ಮಾನ ಮಾಡುತ್ತೇವೆ. ಅದರಂತೆ ಇಲ್ಲಿ.

## ನಿಯತ ಕರ್ಮಾಚರಣೆ ಅನಿವಾರ್ಯ

**ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।**
**ಶರೀರಯಾತ್ರಾऽಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥ 8 ॥**

**ಅರ್ಥ**– ಕರ್ಮಗಳ ಬಿಡುವಿಕೆಗಿಂತ ಕರ್ಮಾನುಷ್ಠಾನವೇ, ಶ್ರೇಷ್ಠ. ಆದುದರಿಂದ ನಿಯತವಾದ ವರ್ಣಾಶ್ರಮ ಉಚಿತವಾದ ಕರ್ಮವನ್ನು ನೀನು ಮಾಡು. ಅಷ್ಟೇ ಅಲ್ಲ, ಕರ್ಮ ಬಿಡುವುದರಿಂದ ದೇಹ ನಿರ್ವಾಹವೂ ಆಗುವುದಿಲ್ಲ. ಆದುದರಿಂದಲೂ ಕರ್ಮ ಆಚರಿಸು.

**ತತಃ ಕಿಮಿತ್ಯತ ಆಹ– ನಿಯತಮಿತಿ ॥ ಹಿ= ಯಸ್ಮಾದಕರ್ಮಣಃ= ಕರ್ಮಾ- ಕರಣಾತ್ಕರ್ಮಾನುಷ್ಠಾನಂ ಜ್ಯಾಯಃ = ಪ್ರಶಸ್ತತಮಮ್ ಅತೋ ನಿಯತಂ = ವರ್ಣಾಶ್ರಮೋಚಿತಂ ಕರ್ಮ ಕುರು । ಕಿಂಚಾಕರ್ಮಣಃ = ಕರ್ಮಾಕುರ್ವತಃ ತೇ= ತವ ಶರೀರಯಾತ್ರಾऽಪಿ= ದೇಹನಿರ್ವಾಹೋऽಪಿ ನ ಪ್ರಸಿದ್ಧ್ಯೇದಿತ್ಯರ್ಥಃ । ॥ 8 ॥**

**ಅನುವಾದ** – ಮನಸ್ಸೇ ಬಂಧ – ಮೋಕ್ಷಗಳಿಗೆ ಕಾರಣ. ಆದರಿಂದ ಪ್ರಕೃತಕ್ಕೆ ಏನು ಪ್ರಯೋಜನ ಎಂದರೆ ಈ ಶ್ಲೋಕದಲ್ಲಿ ಕೃಷ್ಣ ಉಪದೇಶ ಮಾಡುತ್ತಾನೆ. **ಹಿ**= ಯಾವ ಕಾರಣದಿಂದ **ಅಕರ್ಮಣಃ**= ಕರ್ಮಮಾಡದಿರುವಿಕೆಗಿಂತ **ಕರ್ಮ**= ಕರ್ಮಾನುಷ್ಠಾನವು **ಜ್ಯಾಯಃ** = ಅತ್ಯಂತ ಪ್ರಶಸ್ತವೋ, **ಅತಃ** = ಆದ್ದರಿಂದ, **ನಿಯತಂ**= ವರ್ಣಾಶ್ರಮೋಚಿತವಾದ, **ಕರ್ಮ**= ಕರ್ಮವನ್ನು, **ಕುರು**= ಮಾಡು. ಮತ್ತು **ಅಕರ್ಮಣಃ**= ಕರ್ಮ ಮಾಡದಿದ್ದರೆ, **ತೇ**=

ನಿನ್ನ ಶರೀರಯಾತ್ರಾಪಿ= ದೇಹ ನಿರ್ವಾಹವೂ ಕೂಡ, ನ ಪ್ರಸಿದ್ಧ್ಯೇತ್= ಆಗಲಾರದು ಎಂದು ಅಭಿಪ್ರಾಯ. ॥ 8 ॥

## ನಿಷ್ಕಾಮಕರ್ಮ ಬಂಧನಿವರ್ತಕ

**ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ ।**
**ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥ 9 ॥**

**ಅರ್ಥ**– ಭಗವದುದ್ದೇಶ ಹೊರತಾಗಿ ಬೇರೆ ಉದ್ದೇಶದಿಂದ ಕರ್ಮವನ್ನು ಮಾಡುವ ಜನರು ಕರ್ಮ ಬಂಧನಕ್ಕೆ ಒಳಗಾಗುತ್ತಾರೆ. ಆದುದರಿಂದ ಅರ್ಜುನನೆ, ಫಲಕಾಮನೆಯನ್ನು ಬಿಟ್ಟು, ಅಂದರೆ ವಿಷ್ಣುಪ್ರೀತಿಯ ಉದ್ದೇಶದಿಂದ ಕರ್ಮವನ್ನು ಆಚರಿಸು.

'ಕರ್ಮಣಾ ಬಧ್ಯತೇ ಜಂತುರ್ವಿದ್ಯಯಾ ಚ ವಿಮುಚ್ಯತೇ ।
ತಸ್ಮಾತ್ಕರ್ಮ ನ ಕುರ್ವಂತಿ ಯತಯಃ ಪಾರದರ್ಶಿನಃ ॥'

ಇತಿ ಸ್ಮೃತೇರ್ಮುಕ್ತಿಪ್ರತಿಬಂಧಕತ್ವಾತ್ ಕರ್ಮ ನ ಕಾರ್ಯಮಿತಿ ಪ್ರಾಗ್ವಿಕಲ್ಪಿತಂ ತೃತೀಯಂ ಪಕ್ಷಂ ನಿರಾಹ – **ಯಜ್ಞಾರ್ಥಾದಿತಿ ॥ ಯಜ್ಞೋ** = ವಿಷ್ಣುಃ 'ಯಜ್ಞೋ ವೈ ವಿಷ್ಣುಃ' ಇತಿ ಶ್ರುತೇಃ । **ತದರ್ಥಾತ್** = ವಿಷ್ಣ್ವರ್ಥಾತ್ । ಯದ್ವಾ ಜಾನಾತೀತಿ ಜ್ಞಃ । 'ಇಗುಪಧಜ್ಞಾಪ್ರೀಕಿರಃ ಕಃ' (ಪಾ.ಸೂ. 3.1.135) ಸ್ವಪರಗತಾಶೇಷ-ವಿಶೇಷಜ್ಞತ್ವಾತ್ । ಜ್ಞೋ ವಿಷ್ಣುಃ ಯೇನೋದ್ದೇಶೇನ ಯಾತೋ ವಿಷಯೀಕೃತಃ ಸ ಉದ್ದೇಶೋ ಯಜ್ಞಃ । ವಿಷ್ಣು ವಿಷಯೋದ್ದೇಶಾರ್ಥಾತ್ **ಕರ್ಮಣೋಽನ್ಯತ್ರ**= ವಿಷ್ಣ್ವನ್ಯವಿಷಯೇ ವಿಷ್ಣೂದ್ದೇಶಾದನ್ಯೋದ್ದೇಶವಿಷಯೇ ವಾ । **ಅಯಂ ಲೋಕಃ**= ಜನಃ **ಕರ್ಮಬಂಧನಃ** । 'ಕೃತ್ಯಲ್ಯುಟೋ ಬಹುಲಮ್' (ಪಾ.ಸೂ.3.3.113) ಇತಿ ಕರ್ತರಿ ಲ್ಯುಟ್ । ಕರ್ಮ ಬಂಧನಂ ಬಂಧಕಂ, ಯಸ್ಯ ಸ ಕರ್ಮಬಂಧನಃ । ಅವೈಷ್ಣವಕರ್ಮೈವ ಪ್ರತಿಬಂಧಕಂ ನ ವೈಷ್ಣವಂ ಕರ್ಮ । 'ಕರ್ಮಣಾ' ಇತಿ ಸ್ಮೃತೌ ಕರ್ಮಪದಮವೈಷ್ಣವಕರ್ಮಪರಂ ನ ತು ಕರ್ಮಮಾತ್ರಪರಮ್ । ಅತ ಏವ ಪ್ರಾಕ್ 'ನಹಿ ಕಶ್ಚಿದಿತಿ' ಶ್ಲೋಕೇ ಕರ್ಮಣೇತಿ ಸ್ಮೃತಿಬಲಾತ್ಕರ್ಮಮಾತ್ರಂ ನ ಕರೋಮೀತಿ ತ್ವಯಾ ವಕ್ತುಮಶಕ್ಯಮ್ । ಸ್ಮೃತೌ ಕರ್ಮಪದಸ್ಯ ಸಂಕೋಚಸ್ತ್ವಯಾಽಪ್ಯಭ್ಯುಪೇಯ ಇತಿ ಭಾವೇನಾಕರ್ಮಕೃತ್ ಕೋಽಪಿ ನಾಸ್ತಿ । ಸದಾ ಭಗವದಾದಿಪ್ರೇರಿತಃ ಕಿಂಚಿತ್ ಕರ್ಮ ಕುರ್ವನ್ನೇವ ಸರ್ವೋಽಪ್ಯಾಸ್ತೇ ಇತ್ಯಸಂಕುಚಿತವೃತ್ತಿತ್ವೇ ಬಾಧಕಮುಕ್ತಮ್ । ತಥಾ ಶರೀರಯಾತ್ರಾಽಪೀತ್ಯತ್ರಾಪಿ

**ದೇಹನಿರ್ವಾಹಾಭಾವೋ ಬಾಧಕ ಉಕ್ತಃ । ಅತಸ್ತದರ್ಥಂ = ಭಗವತ್ಪೂಜಾರ್ಥಂ ಮುಕ್ತಸಂಗಃ = ಫಲಕಾಮನಾಹೀನಃ ಸನ್ ಕರ್ಮ ಸಮಾಚರ = ಕುರ್ವಿತಿ । ॥ 9 ॥**

**ಅನುವಾದ -**

'ಕರ್ಮಣಾ ಬಧ್ಯತೇ ಜಂತುಃ ವಿದ್ಯಯಾ ಚ ವಿಮುಚ್ಯತೇ ।
ತಸ್ಮಾತ್ ಕರ್ಮ ನ ಕುರ್ವಂತಿ ಯತಯಃ ಪಾರದರ್ಶಿನಃ ॥'

ಎಂಬ ಸ್ಮೃತಿಯು, ಕರ್ಮವು ಬಂಧಕ , ಜ್ಞಾನವು ಮೋಕ್ಷಸಾಧಕ. ಆದುದರಿಂದ ಪೂರ್ಣನಾದ ಭಗವಂತನನ್ನು ಕಾಣುವ ಯೋಗ್ಯತೆಯುಳ್ಳ (1) ಸನ್ಯಾಸಿಗಳು ಕರ್ಮವನ್ನು ಮಾಡುವುದಿಲ್ಲ ಎಂದು ಹೇಳುತ್ತಿದೆ. ಆದುದರಿಂದ ಮೋಕ್ಷಕ್ಕೆ ಪ್ರತಿಬಂಧಕವಾದ ಈ ಕರ್ಮವನ್ನು ಮಾಡಬಾರದು ಎಂದು ಹಿಂದೆ (2) ವಿಕಲ್ಪ ಮಾಡಿದ ಮೂರನೆ ಪಕ್ಷಕ್ಕೆ ಈ ಶ್ಲೋಕದಲ್ಲಿ ಉತ್ತರ ನೀಡಲಾಗಿದೆ. ಇಲ್ಲಿ **'ಯಜ್ಞೋ ವೈ ವಿಷ್ಣುಃ'** ಎಂಬ ಶ್ರುತಿಯಂತೆ ಯಜ್ಞ ಎಂದರೆ ವಿಷ್ಣು ಎಂದರ್ಥ. **ಯಜ್ಞಾರ್ಥಾತ್** = ಭಗವಂತನಿಗೋಸ್ಕರ. ಅಥವಾ (3) ಜಾನಾತಿ – ತಿಳಿಯುತ್ತಾನೆ ಆದುದರಿಂದ ಜ್ಞಃ = ಅಂದರೆ ಸ್ವಪರಗತ ಎಲ್ಲಾ ವಿಶೇಷವನ್ನು ತಿಳಿದವ ವಿಷ್ಣು . ಅವನನ್ನು ಉದ್ದೇಶಿಸಿ ಇರುವಂತಹದ್ದು ಯಜ್ಞ . ಅಂದರೆ ವಿಹಿತ ಕರ್ಮಗಳು . ಆದುದರಿಂದ ವಿಷ್ಣು ಉದ್ದೇಶವಾಗಿವುಳ್ಳ ಕರ್ಮಕ್ಕಿಂತ, **ಅನ್ಯತ್ರ** = ವಿಷ್ಣು ಬಿಟ್ಟು ಬೇರೆಯ ಉದ್ದೇಶದಿಂದ ಮಾಡಿದ ಕರ್ಮ ಅಂದರೆ ಸ್ವರ್ಗಾದಿಗಳನ್ನು ಉದ್ದೇಶಿಸಿ ಮಾಡಿದ ಕರ್ಮ, ಅಥವಾ ವಿಷ್ಣುವಿಗಿಂತ ಬೇರೆಯವರಾದ ರುದ್ರಾದಿಗಳನ್ನು ವಿಷಯೀಕರಿಸುವ ಕರ್ಮ, ಇವುಗಳಲ್ಲಿ **ಅಯಂ ಲೋಕಃ** = ಈ ಜನರು, **ಕರ್ಮಬಂಧನಃ**= ಕರ್ಮವೇ ಬಂಧಕವಾಗಿವುಳ್ಳವರು (4) ಆಗುತ್ತಾರೆ. (ಇಲ್ಲಿ ಬಂಧನ ಎಂಬುದು ಲ್ಯುಟ್ ಪ್ರತ್ಯಯಾಂತ ಶಬ್ದ **'ಕೃತ್ಯಲ್ಯುಟೋ ಬಹುಲಮ್'** ಎಂಬ ಪಾಣಿನಿ ಸೂತ್ರದಿಂದ ಕರ್ತೃ ಎಂಬ ಅರ್ಥದಲ್ಲಿ ಲ್ಯುಟ್ ಪ್ರತ್ಯಯ ಬಂದಿದೆ) ಈ ಭಾಗದ ತಾತ್ಪರ್ಯ - ಅವೈಷ್ಣವ ಕರ್ಮವು ಮಾತ್ರ ಮೋಕ್ಷಕ್ಕೆ ಪ್ರತಿಬಂಧಕ, ಹೊರತು ವೈಷ್ಣವಕರ್ಮಗಳು ಅಲ್ಲ ಎಂಬುದಾಗಿ. ಆದುದರಿಂದ ಕರ್ಮಣಾ ಎಂಬ ಹಿಂದೆ ಹೇಳಿದ ಸ್ಮೃತಿಯಲ್ಲಿ ಕರ್ಮ ಪದಕ್ಕೆ ಅವೈಷ್ಣವ ಕರ್ಮ ಎಂದು ಅರ್ಥ ಮಾಡಬೇಕು. ಹೊರತು ಎಲ್ಲಾ ಕರ್ಮಗಳು ಎಂದು ಅರ್ಥವಲ್ಲ. ಆದುದರಿಂದಲೇ ಹಿಂದೆ ಹೇಳಿದ **'ನ ಹಿ ಕಶ್ಚಿತ್'** – ಎಂಬ ಶ್ಲೋಕದ ಅಭಿಪ್ರಾಯವೂ ಇದೇ ಆಗಿದೆ. **ಕರ್ಮಣಾ ಬಧ್ಯತೇ** - ಎಂಬ ಸ್ಮೃತಿ ಇದ್ದ ಮಾತ್ರಕ್ಕೆ ಯಾವ ಕರ್ಮವನ್ನು ಮಾಡುವುದಿಲ್ಲ ಎಂದು ನೀನು ಹೇಳಲು ಸಾಧ್ಯವಿಲ್ಲ. ಆ ಸ್ಮೃತಿಯಲ್ಲಿ ಕರ್ಮ ಪದಕ್ಕೆ ಅರ್ಥ ಸಂಕೋಚ(5) ಮಾಡಬೇಕು. ಕರ್ಮವನ್ನು ಮಾಡದೆ ಇರುವವನು ಯಾರೂ ಇಲ್ಲ ಯಾವಾಗಲೂ ಭಗವಂತ ಮತ್ತು ಪ್ರಕೃತಿಯ ಗುಣಗಳಿಂದ ಪ್ರೇರಿತರಾಗಿ ಯಾವುದಾದರೊಂದು

ಕರ್ಮವನ್ನು ಮಾಡುತ್ತಲೇ ಇರುತ್ತಾರೆ ಎಂಬುದು , ಸ್ಮೃತಿಗೆ ಅರ್ಥ ಸಂಕೋಚವನ್ನು ಮಾಡದಿದ್ದರೆ ಬಾಧಕ. ಹಾಗೆಯೆ **'ಶರೀರಯಾತ್ರಾ'** ಎಂಬಲ್ಲಿಯೂ ಕೂಡ ದೇಹ ನಿರ್ವಾಹವಾಗ ದಿರುವಿಕೆಯನ್ನು ಬಾಧಕವನ್ನಾಗಿ ಹೇಳಿದ್ದಾನೆ ಶ್ರೀಕೃಷ್ಣ. **ಅತಃ 'ತದರ್ಥಂ'** – ಭಗವಂತನ ಪೂಜೆಗಾಗಿ **ಮುಕ್ತಸಂಗಃ**= ಫಲದ ಬಯಕೆ ಇಲ್ಲದವನಾಗಿ **ಕರ್ಮ**= ಕರ್ಮವನ್ನು, **ಸಮಾಚರ**= ನಡೆಸು. ।। 9 ।।

**ವಿವರಣೆ**- (1) **'ಪಾರದರ್ಶಿನಃ'** ಎಂಬಲ್ಲಿ 'ಪಾರ ' ಎಂದರೆ ಪೂರ್ಣನಾದ ಭಗವಂತ, **ಪೃ-ಪಾಲನಪೂರಣಯೋಃ** ಎಂದು ಧಾತು. **ಪಾರಂ ದ್ರಷ್ಟುಂ ಶೀಲಂ ಏಷಾಮಸ್ತೀತಿ ಪಾರದರ್ಶಿನಃ** – ಎಂದು ವಿಗ್ರಹ. ಹೀಗಾಗಿ ಭಗವಂತನನ್ನು ಕಾಣುವ ಯೋಗ್ಯತೆಯುಳ್ಳವರು ಎಂದು ಅರ್ಥ.

(2) **'ನ ಕರ್ಮಣಾಮನಾರಂಭಾತ್ '** ಎಂಬ ಇದೇ ಅಧ್ಯಾಯದ ನಾಲ್ಕನೇ ಶ್ಲೋಕದಲ್ಲಿ

(3) ಗೀತಾ ತಾತ್ಪರ್ಯದಲ್ಲಿ ಉದಾಹರಿಸಿದ –

ಜ್ಞೋ ನಾಮ ಭಗವಾನ್ ವಿಷ್ಣುಃ ತಂ ಯಾತ್ಯುದ್ದೇಶ ಏಷ ಯಃ ।
ಸ ಯಜ್ಞ ಇತಿ ಸಂಪ್ರೋಕ್ತೋ ವಿಹಿತೇ ಕರ್ಮಣಿ ಸ್ಥಿತಃ ।।

ಎಂಬ ಬರ್ಕ ಶ್ರುತಿಯ ಆಧಾರದಲ್ಲಿ ಈ ಅರ್ಥವನ್ನು ಮಾಡಲಾಗಿದೆ.

(4) **ಕರ್ಮ ಬಂಧನಂ ಯಸ್ಯ ಸಃ** ಎಂದು ವಿಗ್ರಹ. ಬಂಧನ ಶಬ್ದಕ್ಕೆ ಬಂಧಕ ಎಂದು ಅರ್ಥ. ಆದುದರಿಂದ ಕರ್ಮವೇ ಬಂಧಕವಾಗಿಯುಳ್ಳವರು ಎಂದು ಭಾವ.

(5) ಕರ್ಮ ಪದಕ್ಕೆ ವಸ್ತುತಃ ಎಲ್ಲಾ ಕರ್ಮಗಳು ಎಂದು ಅರ್ಥ. ಇದನ್ನು ಬಿಟ್ಟು ಅವೈಷ್ಣವ ಕರ್ಮ ಎಂದು ಅರ್ಥ ಮಾಡಿದಾಗ ಸಂಕುಚಿತ ಅರ್ಥವನ್ನು ಮಾಡಿದಂತೆ ಆಗುತ್ತದೆ. ಸಾಮಾನ್ಯವಾಗಿ ಹೇಳಿದ ಮಾತಿಗೆ ವಿಶೇಷ ಬಾಧಕವಿದ್ದಾಗ ಹೀಗೆ ಅರ್ಥಸಂಕೋಚವನ್ನು ಮಾಡುವುದು ಶಾಸ್ತ್ರಸಂಪ್ರದಾಯ.

## ಯಜ್ಞಗಳನ್ನು ಮಾಡಿ ಸುಖ ಹೊಂದಿರಿ

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ।। 10 ।।**

**ಅರ್ಥ** - ಹಿಂದೆ ಪ್ರಜಾಪತಿಯು ಎಲ್ಲ ಪ್ರಜೆಗಳನ್ನು ಸೃಷ್ಟಿಸಿ, ಜೊತೆಗೆ ಯಜ್ಞಗಳನ್ನೂ ಸೃಷ್ಟಿಮಾಡಿ, ಪ್ರಜೆಗಳನ್ನು ಕುರಿತು ಹೇಳಿದನು. ಈ ಯಜ್ಞಗಳಿಂದ ಎಲ್ಲಾ ಇಷ್ಟಕಾಮನೆಗಳನ್ನು ಪಡೆದುಕೊಳ್ಳಿ. ಈ ಯಜ್ಞವು ಕಾಮಿತಾರ್ಥಪ್ರದವಾಗಲಿ ಎಂದು.

**ವರ್ಣಾಶ್ರಮೋಚಿತಕರ್ಮಣಃ ಸರ್ವಥಾ ಕರ್ತವ್ಯತ್ವೇ ಸ್ತುತಿನಿಂದಾಪರಕೃತಿ-ಪುರಾಕಲ್ಪರೂಪಾರ್ಥವಾದಂ ಚಾಹ - ಸಹೇತ್ಯಾದಿಚತುರ್ಭಿಃ ಶ್ಲೋಕೈಃ ॥ ಯಜ್ಞೈಃ ಸಹ ವರ್ತಂತ ಇತಿ ಸಹಯಜ್ಞಾಃ ಬ್ರಾಹ್ಮಣಾದಿಪ್ರಜಾಃ ಪುರಾ= ಸರ್ಗಾದೌ ಸೃಷ್ಟ್ವಾ ಪ್ರಜಾಪತಿರುವಾಚ । ಕಿಮುವಾಚೇತ್ಯತ ಆಹ- ಅನೇನೇ-ತ್ಯಾದಿನಾ ಕಾರಣಾದಿತ್ಯಂತೇನ ॥ ಹೇ ಪ್ರಜಾಃ ಅನೇನ= ಯಜ್ಞೇನ ಯೂಯಂ ಪ್ರಸವಿಷ್ಯಧ್ವಮ್ । ಇಷ್ಟಕಾಮಾನಿತಿ ಶೇಷಃ । ಸ್ವಸ್ವಾಭಿಮತಪುಮರ್ಥಾನ್ ಸಂಪಾದಯತ । ಏಷ ಯಜ್ಞಃ ವೋ = ಯುಷ್ಮಾಕಮಿಷ್ಟಕಾಮಧುಕ್ । ಕಾಮಾಃ= ಭೋಗಾಃ । ತಾನ್ದೋಗ್ಧೀತಿ ಕಾಮಧುಕ್ । ಇಚ್ಛಾವಿಷಯಭೋಗಪ್ರದೋಽಸ್ತು । ॥ 10 ॥**

**ಅನುವಾದ** - ವರ್ಣಾಶ್ರಮೋಚಿತವಾದ ಕರ್ಮಗಳನ್ನು ಮಾಡಲೇಬೇಕು ಎನ್ನುವುದಕ್ಕೆ ಸ್ತುತಿ, ನಿಂದಾ, ಪರಕೃತಿ, ಪುರಾಕಲ್ಪ ರೂಪವಾದ ಅರ್ಥವಾದವನ್ನು ಈ ನಾಲ್ಕು ಶ್ಲೋಕಗಳಲ್ಲಿ ನಿರೂಪಿಸಲಾಗಿದೆ. **ಸಹ ಯಜ್ಞಾಃ** (ಯಜ್ಞೈಃ ಸಹ ವರ್ತಂತೇ ಇತಿ) ಯಜ್ಞಗಳಿಂದ ಸಹಿತರಾದ, **ಪ್ರಜಾಃ**= ಬ್ರಾಹ್ಮಣಾದಿ ಪ್ರಜೆಗಳನ್ನು , **ಪುರಾ**= ಸೃಷ್ಟಿಯ ಆರಂಭದಲ್ಲಿ , **ಸೃಷ್ಟ್ವಾ**= ಸೃಷ್ಟಿಸಿ **ಪ್ರಜಾಪತಿಃ**= ಪ್ರಜಾಪತಿಯು **ಉವಾಚ**= ಹೇಳಿದನು. ಏನು ಹೇಳಿದ ಎಂದು 'ಅನೇನ ಪ್ರಸವಿಷ್ಯಧ್ವಂ' ಎಂಬಲ್ಲಿಂದ 'ಯೇ ಪಚಂತ್ಯಾತ್ಮಕಾರಣಾತ್' ಎಂಬಲ್ಲಿಯವರೆಗೆ ಮುಂದಿನ ನಾಲ್ಕು ಶ್ಲೋಕಗಳಲ್ಲಿ ಹೇಳಲಾಗಿದೆ, 'ಎಲೈ ಪ್ರಜೆಗಳೇ, ಈ ಯಜ್ಞದಿಂದ ನೀವು **ಪ್ರಸವಿಷ್ಯಧ್ವಮ್- ಇಷ್ಟಾನ್ ಭೋಗಾನ್** ಎಂದು ಸೇರಿಸಿಕೊಳ್ಳಬೇಕು. ನಿಮ್ಮ ನಿಮ್ಮ ಅಭಿಲಾಷೆಗಳನ್ನು ಪೂರೈಸಿಕೊಳ್ಳಿ ಅಭಿಮತ ಪುರುಷಾರ್ಥಗಳನ್ನು ಸಂಪಾದಿಸಿಕೊಳ್ಳಿ, **ಏಷ ಯಜ್ಞಃ**= ಈ ಯಜ್ಞವು, **ವಃ** = ನಿಮ್ಮ,. **ಇಷ್ಟಕಾಮ ಧುಕ್**= ಕಾಮಿತಾರ್ಥಗಳನ್ನು ಕೊಡತಕ್ಕದ್ದು **ಕಾಮಾಃ**= ಭೋಗಗಳು. **ಕಾಮಾನ್ ದೋಗ್ಧಿ ಇತಿ ಕಾಮಧುಕ್** ಎಂದು ವಿಗ್ರಹ ಬಯಸಿದ್ದೆಲ್ಲವನ್ನು ಕೊಡತಕ್ಕದ್ದು ಆಗಲಿ ಎಂದು ಭಾವ. ॥ 10 ॥

**ದೇವಾನ್ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ 11 ॥**

**ಅರ್ಥ**- ಪ್ರಜೆಗಳೇ, ನೀವು ಈ ಯಜ್ಞಗಳಿಂದ ದೇವತೆಗಳನ್ನು ತೃಪ್ತಿ ಪಡಿಸಿ, ಆ ದೇವತೆಗಳು ನಿಮ್ಮನ್ನು ತೃಪ್ತಿಪಡಿಸಲಿ. ಹೀಗೆ ನೀವಿಬ್ಬರು ಪರಸ್ಪರ ಸಂತೋಷಪಡಿಸುವಿಕೆಯಿಂದ ಮೋಕ್ಷರೂಪ ಶ್ರೇಯಸ್ಸನ್ನು ಪಡೆಯುವಿರಿ.

**ಕಥಮಭೀಷ್ಟಕಾಮದೋಗ್ಧೃತ್ವಂ ಯಜ್ಞಸ್ಯೇತ್ಯತ ಆಹ- ದೇವಾನಿತಿ ॥ ಹೇ ಪ್ರಜಾಃ ಅನೇನ = ಯಜ್ಞೇನ ಯೂಯಂ ದೇವಾನ್ ಭಾವಯತ = ಸಂಭಾವಯತ, ಹವಿರ್ಭಿಃ ತರ್ಪಯತ । ತೇ = ಹವಿರಾದಿಭಿಸ್ತೃಪ್ತಾ ದೇವಾ ವೋ = ಯುಷ್ಮಾನ್ ಭಾವಯಂತು । ಇಷ್ಟಕಾಮದಾನೇನ ತರ್ಪಯಂತು । ಏವಮನ್ಯೋನ್ಯಂ ಭಾವಯಂತೋ ದೇವಾಶ್ಚ ಯೂಯಂ ಚ ಪರಂ ಶ್ರೇಯೋ= ಮೋಕ್ಷಾಖ್ಯ-ಮವಾಪ್ಸ್ಯಥ ॥ 11 ॥**

**ಅನುವಾದ-** ಯಜ್ಞವು ಬಯಸಿದ್ದನ್ನು ಹೇಗೆ ಕೊಡುತ್ತದೆ ಎಂಬ ಪ್ರಶ್ನೆಗೆ ಈ ಶ್ಲೋಕ ಉತ್ತರಿಸುತ್ತದೆ. **ಹೇ ಪ್ರಜಾಃ**= ಎಲೈ ಪ್ರಜೆಗಳೆ, **ಅನೇನ ಯಜ್ಞೇನ** = ಈ ಯಜ್ಞದಿಂದ, **ಯೂಯಂ**= ನೀವು, **ದೇವಾನ್**= ದೇವತೆಗಳನ್ನು , **ಭಾವಯತ**= ಗೌರವಿಸಿರಿ. ಹವಿಸ್ಸುಗಳಿಂದ ತೃಪ್ತಿ ಪಡಿಸಿರಿ ಎಂದು ಅರ್ಥ. **ತೇ ದೇವಾಃ**= ಆ ಹವಿಸ್ಸುಗಳಿಂದ ತೃಪ್ತರಾದ ದೇವತೆಗಳು, **ವಃ**= ನಿಮ್ಮನ್ನು , **ಭಾವಯಂತು**= ಬಯಸಿದ್ದನ್ನು ಕೊಡುವ ಮೂಲಕ ತೃಪ್ತಿ ಪಡಿಸಲಿ. ಹೀಗೆ **ಪರಸ್ಪರಂ**= ಅನ್ಯೋನ್ಯವಾಗಿ, **ಭಾವಯಂತಃ**= ತೃಪ್ತಿಪಡಿಸುವ ನೀವು , **ಪರಂ ಶ್ರೇಯಃ**= ಮೋಕ್ಷರೂಪವಾದ ಶ್ರೇಯಸ್ಸನ್ನು , **ಅವಾಪ್ಸ್ಯಥ**= ಹೊಂದುವಿರಿ. ॥ 11 ॥

**ಇಷ್ಟಾನ್ ಭೋಗಾನ್ ಹಿ ವೋ ದೇವಾ**
**ದಾಸ್ಯಂತೇ ಯಜ್ಞಭಾವಿತಾಃ ।**
**ತೈರ್ದತ್ತಾನಪ್ರದಾಯೈಭ್ಯೋ**
**ಯೋ ಭುಂಕ್ತೇ ಸ್ತೇನ ಏವ ಸಃ ॥ 12 ॥**

**ಅರ್ಥ-** ಯಜ್ಞಗಳಿಂದ ತೃಪ್ತರಾದ ದೇವತೆಗಳು ಮನುಷ್ಯರಿಗೆ ಕಾಮಿತಾರ್ಥಗಳನ್ನು ಕೊಡುತ್ತಾರೆ. ಅವರು ಕೊಟ್ಟದ್ದನ್ನು ಅವರಿಗೆ ದಾನ ಮಾಡದೆ , ತಾನೊಬ್ಬನೆ ತಿಂದರೆ ಅವನು ಕಳ್ಳನೆನಿಸಿಕೊಳ್ಳುತ್ತಾನೆ.

**ಏತದೇವ ಸ್ಪಷ್ಟ (ಯನ್)ಯಿತುಂ ಕರ್ಮಾಕರಣೇ ದೋಷಮಾಹ- ಇಷ್ಟಾನಿತಿ ॥ ಯಜ್ಞೈರ್ಭಾವಿತಾ ದೇವಾ ವೋ = ಯುಷ್ಮಭ್ಯಂ ಇಷ್ಟಾನ್ ಭೋಗಾನ್ ದಾಸ್ಯಂತಿ । ತೈಃ ದೇವೈರ್ದತ್ತಾನ್ನಾದೀಂಸ್ತೇಭ್ಯೋ ಯಜ್ಞಾದಿಭಿರ-ಪ್ರದಾಯ ಯೋ ಭುಂಕ್ತೇ ಸಃ ಸ್ತೇನ ಏವ = ಚೋರ ಏವ ॥ 12 ॥**

**ಅನುವಾದ-** ಹಿಂದೆ ಹೇಳಿದ ವಿಷಯವನ್ನೇ ಸ್ಪಷ್ಟಪಡಿಸುತ್ತಾ ಕರ್ಮ ಮಾಡದಿದ್ದರೆ ದೋಷವನ್ನು ಈ ಶ್ಲೋಕದಲ್ಲಿ ಹೇಳಲಾಗಿದೆ. **ಯಜ್ಞ ಭಾವಿತಾಃ** = ಯಜ್ಞದಿಂದ ಸಂತುಷ್ಟರಾದ,

**ದೇವಾಃ**= ದೇವತೆಗಳು , **ವಃ**= ನಿಮಗೆ , **ಇಷ್ಟಾನ್ ಭೋಗಾನ್**= ಕಾಮಿತಾರ್ಥಗಳನ್ನು , **ದಾಸ್ಯಂತೇ**= ಕೊಡುತ್ತಾರೆ. **ತೈಃ**= ಆ ದೇವತೆಗಳಿಂದ **ದತ್ತಾನ್**= ಕೊಡಲ್ಪಟ್ಟ ಅನ್ನ ಮೊದಲಾದವು ಗಳನ್ನು , **ಏಭ್ಯಃ** = ಆ ದೇವತೆಗಳಿಗೆ ಯಜ್ಞಾದಿಗಳ ಮೂಲಕ , **ಅಪ್ರದಾಯ** = ಕೊಡದೆ, **ಯೋ ಭುಂಕ್ತೇ** = ಯಾರು ತಿನ್ನುತ್ತಾನೋ ಸ ಸ್ತೇನ ಏವ = ಅವನು ಕಳ್ಳನೇ. ॥ 12 ॥

## ಹರಿಗೆ ಅರ್ಪಿಸದ ಆಹಾರ ಉಣ್ಣುವವರು ಪಾಪವನ್ನೇ ಉಣ್ಣುತ್ತಾರೆ

**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।**
**ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥ 13 ॥**

**ಅರ್ಥ-** ಯಜ್ಞ ಮಾಡಿ ಉಳಿದ ಅನ್ನವನ್ನು ಊಟಮಾಡುವವನು ಎಲ್ಲಾ ಪಾಪ ಗಳಿಂದಲೂ ಮುಕ್ತನಾಗುತ್ತಾನೆ. ತನಗೋಸ್ಕರ ಮಾತ್ರ ಬೇಯಿಸಿ ತಿನ್ನುವವನ ಅನ್ನ ಅವನ ಪಾಪಕ್ಕೆ ಕಾರಣವಾಗುತ್ತದೆ.

ಏವಮಯಜತೋ ವಿನಿಂದ್ಯ ಯಜತಃ ಸ್ತೌತಿ- **ಯಜ್ಞೇತಿ ॥** ವಿಷ್ಣುತದಿತರ-ದೇವಾರಾಧನಾವಶಿಷ್ಟಭೋಜಿನಃ **ಸಂತಃ ಸರ್ವಕಿಲ್ಬಿಷೈಃ**= ಪಾಪೈಃ ಮುಚ್ಯಂತೇ । ಯದ್ವಾ ವೈಶ್ವದೇವಾದಿಯಜ್ಞಾವಶಿಷ್ಟಭೋಜಿನಃ ಸಂತಃ ಸರ್ವಕಿಲ್ಬಿಷೈಃ 'ಖಂಡಿನೀ ಪೇಷಿಣೀ ಚುಲ್ಲೀ ಉದಕುಂಭೀ ಚ ಮಾರ್ಜನೀ । ಪಂಚಸೂನಾ ಗೃಹಸ್ಥಸ್ಯ ತಾಭಿಃ ಸ್ವರ್ಗಂ ನ ವಿಂದತಿ' ಇತ್ಯುಕ್ತ ಪಂಚಸೂನಾಕೃತದೋಷೈರ್ಮುಚ್ಯಂತ ಇತ್ಯರ್ಥಃ । ಪುನರಯಜತೋ ನಿಂದತಿ- **ಭುಂಜತ ಇತಿ ॥ ಆತ್ಮಕಾರಣಾತ್ಸ್ವಾರ್ಥಮೇವ** ಯೇ ಪಚಂತಿ ತೇ ಪಾಪಾಃ **ಅಘಮೇವ**= ಅಘನಿಮಿತ್ತಮೇವ ಭುಂಜತೇ ತದ್ಭೋಜನಂ ಪಾಪಹೇತುರೇವೇತ್ಯರ್ಥಃ । ಇತಿ ಪ್ರಜಾಪತಿರುವಾಚೇತಿ ಇತಿ ಶಬ್ದೋ ಯೋಜ್ಯಃ। ॥ 13 ॥

**ಅನುವಾದ-** ಹೀಗೆ ಯಜ್ಞ ಮಾಡದವರನ್ನು ನಿಂದಿಸಿ ಈಗ ಯಜ್ಞ ಮಾಡುವವರನ್ನು ಹೊಗಳುತ್ತಾನೆ ಈ ಶ್ಲೋಕದಲ್ಲಿ. **ಯಜ್ಞಶಿಷ್ಟಾಶಿನಃ** = ವಿಷ್ಣು ಮತ್ತು ಇತರ ದೇವತೆಗಳ ಆರಾಧನೆಯ ನಂತರ ಉಳಿದದ್ದನ್ನು ಊಟ ಮಾಡುವ, **ಸಂತಃ** = ಸಜ್ಜನರು , **ಸರ್ವಕಿಲ್ಬಿಷೈಃ** = ಎಲ್ಲಾ ಪಾಪಗಳಿಂದ, ಅಥವಾ ವೈಶ್ವದೇವಾದಿ ಪಂಚಯಜ್ಞ ಶೇಷವನ್ನು ಉಣ್ಣುವ ಸಜ್ಜನರು ಎಲ್ಲಾ ಪಾಪಗಳಿಂದಲೂ ಮುಕ್ತರಾಗುತ್ತಾರೆ . ಅಂದರೆ **'ಖಂಡಿನೀ...'**. ಎಂಬ ಸ್ಮೃತಿಯಲ್ಲಿ (1 ಹೇಳಿದ ಐದು ಪಾತಕಗಳಿಂದ, **ಮುಚ್ಯಂತೇ**= ಮುಕ್ತರಾಗುತ್ತಾರೆ.

**ಭುಂಜತೇ** ಅನ್ನುವ ಭಾಗದಲ್ಲಿ ಪುನಃ ಯಾಗ ಮಾಡದವರ ನಿಂದನೆ ಇದ

**ಆತ್ಮಕಾರಣಾತ್**= ತನಗೋಸ್ಕರವೆ **ಯೇ**= ಯಾರು **ಪಚಂತಿ**= ಅಡುಗೆ ಮಾಡುತ್ತಾರೋ, **ತೇ**= ಅಂತಹ, **ಪಾಪಾಃ** = ಪಾಪಿಗಳು (2) **ಅಘಮೇವ** = ಪಾಪಕ್ಕೆ ಕಾರಣವಾದುದನ್ನೆ, **ಭುಂಜತೇ**= ತಿನ್ನುತ್ತಾರೆ. ಅವರು ಅನ್ನ ಉಣ್ಣುವುದು ಪಾಪಕ್ಕೇ ಕಾರಣವಾಗುತ್ತದೆ ಎಂದು ಭಾವ . II 13 II

**ವಿವರಣೆ-** (1) '**ಖಂಡಿನೀ ಪೇಷಿಣೀ ಚುಲ್ಲೀ ಉದಕುಂಭೀ ಚ ಮಾರ್ಜನೀ । ಪಂಚಸೂನಾ ಗೃಹಸ್ಥಸ್ಯ ತಾಭಿಃ ಸ್ವರ್ಗಂ ನ ವಿಂದತಿ**' ಎಂಬ ಸ್ಮೃತಿಯ ಪ್ರಕಾರ ಅನ್ನ ಬೇಯಿಸುವಾಗ ಗೃಹಸ್ಥನಿಗೆ ಐದು ಪಾಪಗಳು ಬರುತ್ತವೆ . ಇವು ಸ್ವರ್ಗಕ್ಕೆ ಪ್ರತಿಬಂಧಕಗಳು. ಇವುಗಳ ಪರಿಹಾರಕ್ಕೆ ಪ್ರತಿದಿನ ವೈಶ್ವದೇವ ಹೋಮ ಮಾಡಬೇಕು. ಆ ಐದು ದೋಷಗಳು, **ಖಂಡಿನೀ** = ಶಾಖಾದಿಗಳನ್ನು ತುಂಡು ಮಾಡುವಾಗ **ಪೇಷಿಣೀ**= ಪುಡಿಮಾಡಿದಾಗ , **ಚುಲ್ಲೀ**= ಒಲೆಮೇಲಿಟ್ಟು ಬೇಯಿಸುವಾಗ, **ಉದಕುಂಭೀ** = ನೀರಿನಲ್ಲಿ ಮುಳುಗಿಸುವಾಗ, **ಮಾರ್ಜನೀ** = ಬಿಸಿಲಿನಲ್ಲಿ ಒಣಗಿಸುವಾಗ ಬರುವ ಪಾಪಗಳು.

(2) **ಅಘಮೇವ** = ಎನ್ನುವ ಪದಕ್ಕೆ ಪಾಪಕ್ಕೆ ಕಾರಣವನ್ನು ಎಂದು ಅರ್ಥ ಮಾಡಲಾಗಿದೆ. '**ದಧಿ ತ್ರಪುಸಂ ಪ್ರತ್ಯಕ್ಷಂ ಜ್ವರಃ**' ಎಂಬ ಪ್ರಯೋಗವಿದೆ. ಇಲ್ಲಿ 'ದಧಿ ತ್ರಪುಸ' ಎಂದರೆ ಒಡೆದ ಹಾಲು . ಅದೆ ಜ್ವರವಲ್ಲ. ಅದು ಜ್ವರಕ್ಕೆ ಕಾರಣ. ಅದರಂತೆ ಇಲ್ಲಿಯೂ 'ಅಘ' ಎಂದರೆ ಅಘಕಾರಣ ಎಂಬ ಅರ್ಥ ಇಟ್ಟುಕೊಳ್ಳಬೇಕು.

**ಜಗಚ್ಚಕ್ರ**

**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ II 14 II**

**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।**
**ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ II 15 II**

**ಅರ್ಥ-** ಅನ್ನದಿಂದ ಎಲ್ಲಾ ಪ್ರಾಣಿಗಳ ಶರೀರ ಉತ್ಪತ್ತಿಯಾಗುತ್ತದೆ. ಅನ್ನವು ಆದಿತ್ಯನಿಂದ, ಆದಿತ್ಯನು ಯಜ್ಞದಿಂದ, ಯಜ್ಞವು ಕರ್ಮದಿಂದ ಉಂಟಾಗುತ್ತದೆ. ಕರ್ಮವು ಹುಟ್ಟಿದ್ದು ಬ್ರಹ್ಮನಿಂದ, ಬ್ರಹ್ಮ ಅಭಿವ್ಯಕ್ತನಾಗುವುದು ವೇದ ಮಂತ್ರಗಳಿಂದ. ಆ ವೇದಾಕ್ಷರ ಅಭಿವ್ಯಕ್ತಿಗೆ ಪ್ರಾಣಿ ಶರೀರ ಕಾರಣ. ಹೀಗೆ ಹಿಂದೆ ಹೇಳಿದ ಪರಂಪರೆಯಂತೆ ಯಜ್ಞ ಮಾಡಿದಾಗ ವೃಷ್ಟಿ ಮೊದಲಾದವುಗಳ ಮೂಲಕ ಬ್ರಹ್ಮನ ಅಭಿವ್ಯಕ್ತಿ ಆಗುತ್ತದೆಯಾದುದರಿಂದ ಸರ್ವಗತನಾದ ಬ್ರಹ್ಮನನ್ನು '**ಯಜ್ಞೇ ಪ್ರತಿಷ್ಠಿತಮ್**' ಎಂದು ಹೊಗಳಲಾಗಿದೆ.

**ವರ್ಣಾಶ್ರಮೋಚಿತಕರ್ಮಣಃ ಸರ್ವಥಾ ಕರ್ತವ್ಯತ್ವೇ ಸ್ತುತ್ಯಾದ್ಯಾತ್ಮಕಾರ್ಥ-ವಾದಂ ಚತುರ್ಭಿರುಕ್ತ್ವಾ, ಅಧುನಾ ಜಗಚ್ಚಕ್ರಪ್ರವರ್ತಕತ್ವರೂಪಂ ಹೇತ್ವಂತರಂ ವಿಪಕ್ಷೇಽನರ್ಥೋಕ್ತ್ಯಾಽಽಹ - ಅನ್ನಾದಿತ್ಯಾದಿ ತ್ರಿಭಿಃ ಶ್ಲೋಕೈಃ ॥ ಅನ್ನಾದ್ಭೂತಾನಿ ಭವಂತಿ= ರೇತೋದ್ವಾರಾ ಪ್ರಾಣಿನ ಉತ್ಪದ್ಯಂತೇ । ಪರ್ಜನ್ಯಾದಾದಿತ್ಯಾದನ್ನ-ಸಂಭವಃ= ವೃಷ್ಟಿದ್ವಾರಾ ಅನ್ನಸ್ಯೋತ್ಪತ್ತಿಃ । ಪರ್ಜನ್ಯೋ ಮೇಘಚಕ್ರಾಭಿಮಾನೀ ಆದಿತ್ಯಃ ಯಜ್ಞಾದ್ಭವತಿ । ಯಜ್ಞಶಬ್ದೋಽತ್ರಾಜ್ಯಾದಿಹವಿಃಪರಃ । ಯಜಮಾನ-ದತ್ತಾನಾಂ (ದತ್ತೇನ) ಆಜ್ಯಾದಿಹವಿಷಾಮುಪಭೋಜನೇನಾದಿತ್ಯಸ್ಯ ಬಲಾ-ದ್ಯುಪಚಯಾನ್ನಿಮಿತ್ತಾದುಪಚಾರೇಣ 'ಯಜ್ಞಾದ್ಭವತಿ ಪರ್ಜನ್ಯ' ಇತ್ಯುಚ್ಯತೇ । ಯದ್ವಾ ಪರ್ಜನ್ಯಶಬ್ದೇನಾದಿತ್ಯಾಭಿಮನ್ಯಮಾನಂ ಮೇಘಚಕ್ರಮೇವ ಲಕ್ಷಣಯಾ ವಾ, 'ಜನನಾತ್ಪರಸಸ್ಯಾದೇಃ ಪರ್ಜನ್ಯೋ ಮೇಘಸಂತತಿಃ' ಇತಿ (ನಾರದೀಯೇ) ಸ್ಮೃತ್ಯುಕ್ತಯೋಗವೃತ್ಯಾ ವಾ ಗ್ರಾಹ್ಯಮ್ । ತಚ್ಚ ಯಜ್ಞಾದ್ಭವತಿ= ಹವಿರ್ಭಾಗೇನ ಪರಿತುಷ್ಟಾದಾದಿತ್ಯಾದುತ್ಪದ್ಯತೇ । 'ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯ-ಮುಪತಿಷ್ಠತೇ । ಆದಿತ್ಯಾಜ್ಜಾಯತೇ ವೃಷ್ಟಿಃ' (ನಾರದೀಯೇ) ಇತ್ಯಾದೇಃ । ವೃಷ್ಟಿರ್ವಾರ್ಷಿಕಮೇಘಚಕ್ರಂ ಜಾಯತ ಇತ್ಯರ್ಥಃ । ಯಜ್ಞೋ= ದೇವತೋ-ದ್ದೇಶೇನ ದ್ರವ್ಯತ್ಯಾಗರೂಪೋ ಜ್ಯೋತಿಷ್ಟೋಮಾದಿಃ ಕರ್ಮಸಮುದ್ಭವಃ= ತದಂಗಕ್ರಿಯಯೋತ್ಪದ್ಯತೇ ॥ 14 ॥**

**ಅನುವಾದ** - ವರ್ಣಾಶ್ರಮೋಚಿತ ಕರ್ಮಗಳನ್ನು ಮಾಡಲೇಬೇಕು ಎಂಬ ವಿಷಯದಲ್ಲಿ ಸ್ತುತಿನಿಂದಾದಿರೂಪವಾದ ಅರ್ಥವಾದವನ್ನು ಹಿಂದಿನ ನಾಲ್ಕು ಶ್ಲೋಕಗಳಲ್ಲಿ ಹೇಳಿ ಈಗ ಈ ಕರ್ಮಗಳು ಜಗಚ್ಚಕ್ರಪ್ರವರ್ತಕವಾಗಿವೆ. ಆದುದರಿಂದ ಕರ್ಮ ಮಾಡಲೇಬೇಕು. ಇಲ್ಲದಿದ್ದರೆ ಅನರ್ಥವು ಇದೆ ಎಂದು ಮತ್ತೊಂದು ಹೇತುವನ್ನು ಹೇಳುತ್ತಿದ್ದಾನೆ ಶ್ರೀಕೃಷ್ಣ ಮುಂದಿನ ಮೂರು ಶ್ಲೋಕಗಳಿಂದ.

**ಅನ್ನಾತ್** = ಅನ್ನದಿಂದ, **ಭೂತಾನಿ ಭವಂತಿ** = ರೇತಸ್ಸಿನ ಮೂಲಕ ಪ್ರಾಣಿಗಳು ಹುಟ್ಟುತ್ತವೆ. **ಪರ್ಜನ್ಯಾತ್** = ಆದಿತ್ಯನಿಂದ **ಅನ್ನಸಂಭವಃ** = ಮಳೆಯ ಮೂಲಕ ಅನ್ನದ ಉತ್ಪತ್ತಿ ಆಗುತ್ತದೆ. **ಪರ್ಜನ್ಯಃ** = ಮೇಘ ಮಂಡಲಕ್ಕೆ ಅಭಿಮಾನಿಯಾದ ಆದಿತ್ಯನು **ಯಜ್ಞಾತ್ ಭವತಿ** = ಯಜ್ಞದಿಂದ ಬಲಿಷ್ಠನಾಗುತ್ತಾನೆ. ಇಲ್ಲಿ ಯಜ್ಞ ಎಂದರೆ ತುಪ್ಪವೆ ಮೊದಲಾದ ಹವಿಸ್ಸುಗಳು. ಯಜಮಾನನು ಕೊಟ್ಟ ಹವಿಸ್ಸುಗಳನ್ನು ಸ್ವೀಕರಿಸುವುದರಿಂದ ಆದಿತ್ಯನಿಗೆ ಬಲಾದಿಗಳು ಬರುತ್ತವೆ ಎನ್ನುವ ಕಾರಣದಿಂದ ಔಪಚಾರಿಕವಾಗಿ '**ಯಜ್ಞಾತ್ ಭವತಿ ಪರ್ಜನ್ಯಃ**' ಎಂದು ಹೇಳಲಾಗಿದೆ. ಅಥವಾ ಇಲ್ಲಿ ಪರ್ಜನ್ಯ ಶಬ್ದಕ್ಕೆ ಮೇಘಮಂಡಲ ಎಂದೇ ಅರ್ಥ. ಆದಿತ್ಯನು

ಮೇಘಮಂಡಲಕ್ಕೆ ಅಭಿಮಾನಿ. ಅವನಿಂದ ಅಭಿಮನ್ಯಮಾನವಾದದ್ದು ಮೇಘಮಂಡಲ. ಆದುದರಿಂದ ಇಲ್ಲಿಲಕ್ಷಣಾವೃತ್ತಿಯಿಂದ ಪರ್ಜನ್ಯಶಬ್ದಕ್ಕೆ ಮೇಘ ಮಂಡಲ ಎಂದು ಅರ್ಥ. ಅಥವಾ **'ಜನನಾತ್ ಪರಸಸ್ಯಾದೇಃ ಪರ್ಜನ್ಯೋ ಮೇಘ ಸಂತತಿಃ'** ಎಂಬ ನಾರದೀಯ ಸ್ಮೃತಿಯ ಪ್ರಕಾರ **'ಪರ'** ಎಂದರೆ ಸಸ್ಯಾದಿಗಳು. ಅವುಗಳ ಜನನ ಮೇಘಮಂಡಲದಿಂದ ಆಗುತ್ತದೆ. ಆದುದರಿಂದ ಮೇಘ ಮಂಡಲವು **ಪರ್ಜನ್ಯ** ಎಂದು ಯೋಗ ವೃತ್ತಿಯಿಂದ ಅರ್ಥ ಮಾಡಬೇಕು. ಈ ಮೇಘ ಮಂಡಲವು ಯಜ್ಞದಿಂದ ಆಗುತ್ತದೆ. ಅಂದರೆ, ಹವಿಸ್ಸನ್ನು ಸ್ವೀಕರಿಸಿ, ಸಂತುಷ್ಟನಾದ ಆದಿತ್ಯನಿಂದ ಹುಟ್ಟುತ್ತದೆ ಎಂದು ಭಾವ. ಈ ವಿಷಯವನ್ನು ನಾರದೀಯ ಸ್ಮೃತಿ ಸ್ಪಷ್ಟಪಡಿಸುತ್ತಿದೆ. **ಅಗ್ನೌ ಪ್ರಾಸ್ತಾಹುತಿಃ ....।** ಎಂದು. ಅಗ್ನಿಯಲ್ಲಿ ಕೊಟ್ಟ ಆಹುತಿಯು ಆದಿತ್ಯನಿಗೆ ಸೇರುತ್ತದೆ. ಆಹುತಿಯಿಂದ ತುಷ್ಟನಾದ ಆದಿತ್ಯನಿಂದ ವೃಷ್ಟಿಯಾಗುತ್ತದೆ. ಇಲ್ಲಿ ವೃಷ್ಟಿ ಎಂದರೆ ವಾರ್ಷಿಕ ಮೇಘಚಕ್ರ ಎಂದು ಅರ್ಥ.

**ಯಜ್ಞಃ**= ದೇವತೆಗಳನ್ನು ಉದ್ದೇಶಿಸಿ ದ್ರವ್ಯಗಳನ್ನು ಕೊಡುವಿಕೆ ರೂಪವಾದ ಜ್ಯೋತಿಷ್ಟೋಮಾದಿ ಯಜ್ಞವು **ಕರ್ಮಸಮುದ್ಭವಃ** = ಅಂಗಭೂತವಾದ ಕ್ರಿಯೆಯಿಂದ ಉಂಟಾಗುತ್ತದೆ. ॥ 14 ॥

**ಕರ್ಮ ಬ್ರಹ್ಮೋದ್ಭವಂ= ಪರಬ್ರಹ್ಮಜನ್ಯಂ ವಿದ್ಧಿ= ಜಾನೀಹಿ । ಬ್ರಹ್ಮ= ಪರಬ್ರಹ್ಮ ಚಾಕ್ಷರಸಮುದ್ಭವಮ್ । ಅಕ್ಷರಶಬ್ದಿತವೇದಾಭಿವ್ಯಂಗ್ಯಮ್ । ವೇದೇನ ಯಥಾ-ವದವಗತಮೇವ ಬ್ರಹ್ಮ ಸತ್ಕರ್ಮ ಕಾರಯತೀತಿ ಭಾವಃ । ತಾನಿ ಚಾಕ್ಷರಾಣಿ ಭೂತ ವ್ಯಂಗ್ಯಾನೀತಿ ಶೇಷೋಕ್ತ್ಯಾ ಚಕ್ರಂ ಧ್ಯೇಯಮ್ । ತಸ್ಮಾದುಕ್ತಪರಂಪರಯಾ ಯಜ್ಞಾಭಿವ್ಯಂಗ್ಯತ್ವಾತ್ಸರ್ವಗತಂ ಬ್ರಹ್ಮ 'ನಿತ್ಯಂ ಯಜ್ಞೇ ಪ್ರತಿಷ್ಠಿತಮ್' ಇತ್ಯು-ಚ್ಯತೇ । ಏವಂ ಚ ಭಗವತೋ ಯಜ್ಞೇ ಪ್ರತಿಷ್ಠಿತತ್ವಾತ್ ಯಜ್ಞಾನುಷ್ಠಾನೇನ ಚಕ್ರಪ್ರವೃತ್ತೌ ಭೂತಸ್ಥಿತಿಹೇತುತ್ವನಿಮಿತ್ತಸುಕೃತಮಿವ ಭಗವದಭಿವ್ಯಕ್ತಿನಿಮಿತ್ತಂ ಚ ಸುಕೃತಂ ಭವತೀತಿ ಭಾವಃ ॥ 15 ॥**

**ಅನುವಾದ**- **ಕರ್ಮ**= ಕರ್ಮವು **ಬ್ರಹ್ಮೋದ್ಭವಂ**= ಪರಬ್ರಹ್ಮನಿಂದ ಹುಟ್ಟಿದ್ದು ಎಂದು **ವಿದ್ಧಿ**= ತಿಳಿ. **ಬ್ರಹ್ಮ**= ಪರಬ್ರಹ್ಮನು **ಅಕ್ಷರ ಸಮುದ್ಭವಂ**= ಅಕ್ಷರಶಬ್ದದಿಂದ ಹೇಳಲ್ಪಡುವ ವೇದದಿಂದ ಅಭಿವ್ಯಕ್ತನಾಗುತ್ತಾನೆ. ವೇದಗಳಿಂದ ಸರಿಯಾಗಿ ಬ್ರಹ್ಮಜ್ಞಾನ ಪಡೆದವನಿಂದ ಭಗವಂತನು ಸತ್ಕರ್ಮಗಳನ್ನು ಮಾಡಿಸುತ್ತಾನೆ ಎಂದು ತಾತ್ಪರ್ಯ. ಈ ವೇದಗಳು ಪ್ರಾಣಿಗಳಿಂದ ವ್ಯಕ್ತವಾಗುತ್ತವೆ ಎಂದು ಇಟ್ಟುಕೊಂಡು ಚಕ್ರವನ್ನು ಮುಗಿಸಬೇಕು.

ಆದುದರಿಂದ ಹಿಂದೆ ಹೇಳಿದ ಕ್ರಮದಂತೆ ಯಜ್ಞದಿಂದ ವ್ಯಕ್ತನಾಗುತ್ತಾನೆ

ಭಗವಂತ. ಹೀಗಾಗಿ ಸರ್ವಗತನಾದ ಅವನನ್ನು 'ಯಜ್ಞದಲ್ಲಿ ಪ್ರತಿಷ್ಠಿತನು' ಎಂದು ಹೇಳುತ್ತಾರೆ. ಭಗವಂತನು ಯಜ್ಞದಲ್ಲಿ ಪ್ರತಿಷ್ಠಿತನಾದುದರಿಂದ ಯಜ್ಞವನ್ನು ಅನುಷ್ಠಾನ ಮಾಡುವ ಮೂಲಕ ಚಕ್ರದ ಪ್ರವೃತ್ತಿಗೆ ಕಾರಣರಾಗುತ್ತೇವೆ. ಇದರಿಂದ ಎಲ್ಲಾ ಪ್ರಾಣಿಗಳ ಸ್ಥಿತಿಗೆ ಕಾರಣರಾಗುವುದರಿಂದ ಒಂದು ಪುಣ್ಯ ನಮಗೆ ಬರುತ್ತದೆ. ಅದರಂತೆ ಭಗವಂತನ ಅಭಿವ್ಯಕ್ತಿಗೆ ಕಾರಣರಾದುದರಿಂದ ಆ ಪ್ರಯುಕ್ತ ಪುಣ್ಯವೂ ಬರುತ್ತದೆ ಎಂದು ಭಾವ. ॥ 15 ॥

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**
**ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥ 16 ॥**

**ಅರ್ಥ**– ಈ ರೀತಿಯಾಗಿ ಪ್ರಾಚೀನರಿಂದ ಅಥವಾ ಭಗವಂತನಿಂದ ಎಲ್ಲಾ ಜೀವಿಗಳ ಇಷ್ಟ ಸಿದ್ಧಿಗಾಗಿ ಪ್ರವರ್ತಿತವಾದ ಚಕ್ರವನ್ನು ಯಾರು ಅನುಸರಿಸುವುದಿಲ್ಲವೋ ಅವನ ಜೀವನ ಪಾಪ ಸಾಧನವೆ ಆಗಿದೆ. ಅವನು ವಿಷಯ ಪದಾರ್ಥಗಳಲ್ಲಿಯೇ ಆಸಕ್ತನಾಗಿದ್ದಾನೆ. ಅವನ ಜೀವನ ವ್ಯರ್ಥ.

**ಚಕ್ರ ಪ್ರವರ್ತನೆ ಚತುರಾಶ್ರಮಿಗಳಿಗೂ ವಿಹಿತ**

**ಏವಂ ಪುರಾತನೈಃ ಪ್ರವರ್ತಿತಂ ಭಗವತೈವ ವಾ ಪ್ರಾಣಿನಾಮಿಷ್ಟಸಿದ್ಧಯೇ ಪ್ರವರ್ತಿತಂ ಜಗಚ್ಚಕ್ರಮ್ ಇಹ ಲೋಕೇ ಯೋ ನಾನುವರ್ತಯತಿ ಕರ್ಮ ನ ಕರೋತೀತಿ ಯಾವತ್ । ವಿಶ್ವಸ್ಯ ಚಕ್ರೇಽಂತರ್ಭಾವಾತ್ ಕರ್ಮಾಕರಣೇನ (ಕರ್ಮಾಕರಣೇ) ಚಕ್ರಾಪ್ರವೃತ್ತೌ ಚಕ್ರವಿನಾಶಕತ್ವೇನ ವಿಶ್ವಹಂತೃತ್ವಾತ್ ಸ ಅಘಾಯುಃ - ತಾದರ್ಥ್ಯಾತ್ತಾಚ್ಛಬ್ದ್ಯಮ್ । ಅಘನಿಮಿತ್ತಮಾಯುರ್ಯಸ್ಯ ಸ ತಥಾ । ಇಂದ್ರಿಯಾರಾಮಃ = ಇಂದ್ರಿಯೈರ್ವಿಷಯೇಷು ರತಿಮಾನ್ । ಹೇ ಪಾರ್ಥ, ವ್ಯರ್ಥಮೇವ ಜೀವತಿ ನರಕೇ ಮಜ್ಜತೀತ್ಯರ್ಥಃ । ಯಜ್ಞದಾನ-ತಪೋರೂಪತ್ರಿವಿಧಕರ್ಮಣಾಂ ಗೃಹಸ್ಥಾನಾಮಿವ ಬ್ರಹ್ಮಚರ್ಯಾದ್ಯಾಶ್ರಮ-ತ್ರಯಸ್ಯಾಪಿ ವಿದ್ಯಾದಾನಾಭಯದಾನಸ್ವಭೋಕ್ತವ್ಯಾನ್ನದಾನಸ್ಯ ಚ ತಥಾಽಧ್ಯ-ಯನಪ್ರವಚನಧ್ಯಾನಾದಿರೂಪವಾಚಿಕಮಾನಸಿಕಯಜ್ಞಸ್ಯ ತಥಾ ಕೃಚ್ಛ್ರಚಾಂದ್ರಾ-ಯಣಾದಿತಪಸಃ ಸತ್ವೇನ ತೇಷಾಮಪಿ ಚಕ್ರಪ್ರವರ್ತನ ಸಂಭವೋ ಜ್ಞೇಯಃ । ಉಕ್ತಂ ಹಿ 'ವಾಚಿಕೋ ಮಾನಸೋ ಯಜ್ಞೋ ನ್ಯಾಸಿನಾಂ ತು ವಿಶೇಷತಃ' ಇತ್ಯಾದಿ (ನಾರದೀಯೇ) ॥ 16 ॥**

**ಅನುವಾದ** - **ಏವಂ** - ಈ ರೀತಿಯಾಗಿ **ಪುರಾತನೈಃ** = ಪ್ರಾಚೀನರಿಂದ **ಪ್ರವರ್ತಿತಂ**=

ಅಥವಾ ಭಗವಂತನಿಂದಲೇ ಜೀವಿಗಳ ಇಷ್ಟಾರ್ಥಸಿದ್ಧಿಗಾಗಿ ನಿರ್ಮಿಸಲ್ಪಟ್ಟ , **ಚಕ್ರಮ್**= ಜಗಚ್ಚಕ್ರವನ್ನು, **ಇಹ**= ಈ ಲೋಕದಲ್ಲಿ, **ಯಃ**= ಯಾರು, **ನಾನುವರ್ತಯತಿ**= ಅನುಸರಿಸುವುದಿಲ್ಲವೋ. ಅಂದರೆ ಕರ್ಮವನ್ನು ಮಾಡುವುದಿಲ್ಲವೋ ಎಂದು ಅಭಿಪ್ರಾಯ. ಅವನು, 'ಸಕಲ ಜಗತ್ತು' ಚಕ್ರದಲ್ಲಿ ಸೇರಿದೆಯಾದ್ದರಿಂದ ಕರ್ಮಾಚರಣೆ ಮಾಡದಿದ್ದರೆ ಚಕ್ರ ಪ್ರವೃತ್ತಿಗೆ ಕಾರಣನಾಗುವುದಿಲ್ಲ ಹೊರತಾಗಿ ಚಕ್ರದ ವಿನಾಶಕ್ಕೆ ಕಾರಣನಾಗುತ್ತಾನೆ. ಆಗ ವಿಶ್ವದ ನಾಶಕ್ಕೆ ಕಾರಣನಾದುದರಿಂದ ಅವನು **ಅಘಾಯುಃ (ಅಘನಿಮಿತ್ತಂ ಆಯುಃ ಯಸ್ಯ ಸಃ** ಎಂದು ವಿಗ್ರಹ ಮಾಡಬೇಕು) ಅಂದರೆ ಪಾಪಕ್ಕೆ ಕಾರಣವಾದ ಆಯುಷ್ಯವುಳ್ಳವನು , ಇಲ್ಲಿ 'ಅಘ' ಶಬ್ದಕ್ಕೆ 'ಅಘನಿಮಿತ್ತ' ಎಂದು ಅರ್ಥ. ಅದಕ್ಕೆ ನಿಮಿತ್ತವಾಗಿರುವುದನ್ನು ಅದೇ ಎನ್ನುವುದುಂಟು, **ಇಂದ್ರಿಯಾರಾಮಃ** = ಇಂದ್ರಿಯಗಳಿಂದ ವಿಷಯ ಪದಾರ್ಥಗಳನ್ನು ಅನುಭವಿಸುವುದರಲ್ಲಿ ಆಸಕ್ತಿವುಳ್ಳವನು. **ಹೇ ಪಾರ್ಥ**= ಅರ್ಜುನನೆ, **ಮೋಘಂ**= ವ್ಯರ್ಥವಾಗಿ **ಜೀವತಿ**= ಬದುಕುತ್ತಾನೆ. ಬದುಕು ವ್ಯರ್ಥ ಅಂದರೆ ನರಕದಲ್ಲಿ ಬೀಳುತ್ತಾನೆ ಎಂದು ಅರ್ಥ.

ಗೃಹಸ್ಥರಿಗೆ ಯಜ್ಞದಲ್ಲಿ ಅಧಿಕಾರವಿರುವುದರಿಂದ ಅವರು ಚಕ್ರಪ್ರವರ್ತಕರಾಗಬಹುದು. ಆದರೆ ಬ್ರಹ್ಮಚಾರಿ – ಸಂನ್ಯಾಸಿ – ವಾನಪ್ರಸ್ಥರು ಇವರಿಗೆ ಯಜ್ಞದಲ್ಲಿ ಅಧಿಕಾರವಿರುವುದಿಲ್ಲ, ಹೀಗಾಗಿ ಅವರು ಚಕ್ರ ಪ್ರವರ್ತಕರಾಗುವುದು ಹೇಗೆ ಎಂದು ಪ್ರಶ್ನಿಸಬಾರದು. ಏಕೆಂದರೆ ಗೃಹಸ್ಥರಿಗೆ ಯಜ್ಞ–ದಾನ–ತಪಸ್ಸು ಎಂದು ಕರ್ಮಗಳು ಹೇಗೆ ವಿಹಿತವಾಗಿವೆಯೋ ಅದರಂತೆ ಉಳಿದ ಮೂರು ಆಶ್ರಮದವರಿಗೂ ಕರ್ಮಗಳು ವಿಹಿತವಾಗಿವೆ. ಅವು ಯಾವುವೆಂದರೆ ವಿದ್ಯಾದಾನ – ಅಭಯದಾನ – ತಾನು ತಿನ್ನುವ ಅನ್ನದ ದಾನ. ಅಧ್ಯಯನ–ಪ್ರವಚನ–ಧ್ಯಾನ ರೂಪವಾದ ವಾಚಿಕ ಮಾನಸಿಕ ಯಜ್ಞ. ಹಾಗೆಯೇ ಕೃಚ್ಛ್ರ ಚಾಂದ್ರಾಯಣಾದಿ ವ್ರತ ರೂಪವಾದ ತಪಸ್ಸು. ಆದುದರಿಂದ ಅವರೂ ಇವುಗಳನ್ನು ಆಚರಿಸುತ್ತಾ ಜಗಚ್ಚಕ್ರಪ್ರವರ್ತಕರಾಗಲು ಸಾಧ್ಯ. ಇದನ್ನೇ ನಾರದೀಯ ಸ್ಮೃತಿ **'ವಾಚಿಕೋ ಮಾನಸೋ ಯಜ್ಞಃ'**– ಎಂದು ಹೇಳಿದೆ. ಅಂದರೆ ಸಂನ್ಯಾಸಿಗಳಿಗೂ ಕೂಡ ವಾಚಿಕವಾದ ಮತ್ತು ಮಾನಸಿಕವಾದ ಯಜ್ಞ ವಿಹಿತವಾಗಿದೆ ಎಂದು ಭಾವ. || 16 ||

## ಧ್ಯಾನರತನಿಗೆ ಕರ್ಮ ಬಂಧನವಿಲ್ಲ

**ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ || 17 ||**

**ಅರ್ಥ** – ಯಾವ ಅಪರೋಕ್ಷ ಜ್ಞಾನಿಯು ಪರಮಾತ್ಮನ ದರ್ಶನದಿಂದ ಉಂಟಾದ ಸುಖವನ್ನಷ್ಟೇ ಅನುಭವಿಸುತ್ತಾ , ಪರಮಾತ್ಮ ಪ್ರಸಾದದಿಂದಲೇ ಬೇರೆ ವಿಷಯಪದಾರ್ಥಗಳಲ್ಲಿ

ಅಲಂಬುದ್ಧಿಯುಳ್ಳವನಾಗಿ, ಅಸಂಪ್ರಜ್ಞಾತ ಸಮಾಧಿಯೋಗದಲ್ಲಿ ಭಗವಂತನನ್ನು ಕಂಡು ಸಂತುಷ್ಟನಾಗುತ್ತಾನೋ ಅವನು ಸಂಧ್ಯಾವಂದನಾದಿ ಕರ್ಮಗಳನ್ನೂ ಮಾಡಬೇಕಿಲ್ಲ.

ಏವಂ 'ನ ಕರ್ಮಣಾಮನಾರಂಭಾತ್' ಇತ್ಯಾದಿನಾ 'ಸಹಯಜ್ಞಾ' ಇತ್ಯಾದಿನಾ ಚೋಕ್ತದಿಶಾ ಕರ್ಮಾಕರಣತತ್ಕರಣಯೋರ್ಹಾನಿಲಾಭೌ ಚೇತ್ತರ್ಹಿ ಪರಮೇಶ್ವರೇ ಅಸಂಪ್ರಜ್ಞಾತಸಮಾಧಿರೂಪಂ ಮನಃಸಮಾಧಾನಮಪಿ ನ ಕಾರ್ಯಂ ಪ್ರಸಜ್ಯೇತ । ತತ್ರ ಕರ್ಮಲೋಪಸ್ಯಾವಶ್ಯಕತ್ವಾದಿತ್ಯತ ಆಹ- **ಯಸ್ತ್ವಿತಿ** ॥ ತು ಶಬ್ದಃ ಸಮಾಧಿಸ್ಥತ್ವವಿಶೇಷಸೂಚಕಃ । ಯಸ್ತ್ವಸಂಪ್ರಜ್ಞಾತ-ಸಮಾಧಿಸ್ಥಃ ಮಾನವೋಽಪರೋಕ್ಷಜ್ಞಾನೀ । ಮನುತೇರವಣ್ । ಆತ್ಮರತಿರೇವ । ಅತ್ರಾತ್ಮಶಬ್ದಃ ಸರ್ವೋಽಪಿ ಪರಮಾತ್ಮಪರಃ । ಆತ್ಮನಿ ಆತ್ಮನೋ ವಾ ರತಿಮಾನ್ ದರ್ಶನಜನ್ಯಸುಖವಾನ್ । ಪರಮಾತ್ಮವಿಷಯಕದರ್ಶನಜನ್ಯಸುಖವಾನೇವ ನ ತ್ವನ್ಯತ್ರ ರತಿಮಾನಿತ್ಯೇವಕಾರಾರ್ಥಃ । ಭಗವತೋಽನ್ಯತ್ರ ರತಿರಾಹಿತ್ಯಂ ನ ಪ್ರಾಯೇಣೇತಿ ಮಂತವ್ಯಂ ಕಿಂತು ಸರ್ವಾತ್ಮನೇತ್ಯಾಹ - **ಆತ್ಮತೃಪ್ತ ಇತಿ** ॥ ಆತ್ಮನಾ ತೃಪ್ತಃ ಪರಮಾತ್ಮಪ್ರಸಾದೇನೈವ । ತದನ್ಯತ್ರ ಸರ್ವಾತ್ಮನಾಽಲಂಬುದ್ಧಿಮಾನಿ-ತ್ಯರ್ಥಃ । ಅನ್ಯತ್ರಾಲಂಬುದ್ಧಿರಪಿ ಭಗವತ್ಪ್ರಸಾದಾಯತ್ತೇತಿ ಭಾವಃ । ಕಿಂಚಾತಿ-ಶಯಿತಂ ಸುಖಂ ದತ್ವಾ ಭಗವಾನನ್ಯತ್ರ ಸರ್ವಾತ್ಮನಾಽಲಂಬುದ್ಧಿಂ ಉತ್ಪಾದ-ಯತೀತ್ಯತೋಽನ್ಯತ್ರಾಲಂಬುದ್ಧೌ ಹೇತುತಯಾ ಪ್ರಾಗುಕ್ತರತ್ಯಾಖ್ಯಮೇವ ಸುಖ-ಮಾಹ- **ಆತ್ಮನ್ಯೇವ ಚ ಸಂತುಷ್ಟ ಇತಿ** ॥ ಸಮ್ಯಕ್ ತುಷ್ಟಿಮಾನ್ ಸಂತುಷ್ಟಃ ಮಹಾಸುಖವಾನಿತ್ಯರ್ಥಃ । ಹೇತುಗರ್ಭಮಿದಮ್ । ಭಗವದ್ದರ್ಶನನಿಮಿತ್ತಕ-ಮಹಾಸುಖವತ್ತ್ವಾದನ್ಯತ್ರಾಲಂಬುದ್ಧಿಮಾನಿತಿ । ಭಗವದ್ದರ್ಶನನಿಮಿತ್ತಕಂ ಮಹಾಸುಖಂ ಕೇನ ಹೇತುನಾ ಸ್ಯಾದಿತ್ಯತಸ್ಸಂತುಷ್ಟತ್ವೇ ಹೇತುಃ- **ಆತ್ಮನ್ಯೇವೇತಿ** ॥ ಅಧಿಕರಣಸಪ್ತಮೀ । ಆತ್ಮನಿ ಸ್ಥಿತ ಏವ ಸನ್ ಸಂತುಷ್ಟ ಇತಿ । ಅಸಂಪ್ರಜ್ಞಾತ-ಸಮಾಧಿರೂಪಯಾಽಽತ್ಮನಿ ಸ್ಥಿತ್ಯೈವ ಸಂತುಷ್ಟೋ ನ ತ್ವನ್ಯೇನ ಕೇನಾಪೀತ್ಯೇವ-ಕಾರಾರ್ಥಃ । ಅತ್ರ ಮಾನವ ಇತಿ ಉಕ್ತಿಃ ಅಪರೋಕ್ಷಿಣ ಏವಾಸಂಪ್ರಜ್ಞಾತಸಮಾಧಿ ರಿತಿ ದ್ಯೋತಯಿತುಮ್ । ಯಸ್ತ್ವೇವಂರೂಪಃ **ತಸ್ಯ ಕಾರ್ಯಂ**= ಕರ್ತವ್ಯಂ ಸಂಧ್ಯಾವಂದನಾದಿಕಂ ಕಿಮಪಿ ಕರ್ಮ ನ ವಿದ್ಯತೇ ॥ 17 ॥

ಅನುವಾದ - ಹೀಗೆ 'ನ ಕರ್ಮಣಾಮನಾರಂಭಾತ್' ಇತ್ಯಾದಿಗಳಿಂದ ಮತ್ತು 'ಸಹಯಜ್ಞಾಃ' ಇತ್ಯಾದಿಗಳಿಂದ ಕರ್ಮ ಮಾಡದಿದ್ದರೆ ಏನು ಹಾನಿ, ಮಾಡಿದರೆ ಏನು ಲಾಭ

ಎಂದು ವಿವರಿಸಲಾಗಿದೆ . ಹಾಗಿದ್ದರೆ ಅಸಂಪ್ರಜ್ಞಾತ ಸಮಾಧಿ ರೂಪವಾದ ಮನಃಸಮಾಧಾನವೂ ಕೂಡ ಕಾರ್ಯವಲ್ಲ ಎಂದಾಗುತ್ತದೆ. ಏಕೆಂದರೆ ಇಂತಹ ಸಮಾಧಿ ಸ್ಥಿತಿಯಲ್ಲಿ ಯಾವ ಕರ್ಮವನ್ನೂ ಮಾಡಲಾಗುವುದಿಲ್ಲವಾದ್ದರಿಂದ ಕರ್ಮಲೋಪವಾಗಬೇಕಾಗುತ್ತದೆ ಎಂಬ ಆಕ್ಷೇಪಕ್ಕೆ ಇಲ್ಲಿ ಉತ್ತರಿಸಲಾಗಿದೆ.

ಇಲ್ಲಿರುವ '**ತು**' ಎಂಬ ಶಬ್ದವು 'ಸಮಾಧಿಸ್ಥಿತಿಯಲ್ಲಿರುವ' ಎಂಬ ವಿಶೇಷವನ್ನು ತಿಳಿಸುತ್ತದೆ. ಆದುದರಿಂದ, **ಯಸ್ತು** = ಯಾರು ಅಸಂಪ್ರಜ್ಞಾತ ಸಮಾಧಿಸ್ಥಿತಿಯಲ್ಲಿರುವ, **ಮಾನವಃ**= ಅಪರೋಕ್ಷ ಜ್ಞಾನಿಯೋ (ಮನುಧಾತುವಿಗೆ ಅವಣ್ ಪ್ರತ್ಯಯ ಬಂದು ಮಾನವ ಎಂದು ರೂಪ) ಈ ಶ್ಲೋಕದಲ್ಲಿರುವ ಎಲ್ಲಾ ಆತ್ಮ ಶಬ್ದಕ್ಕೆ ಪರಮಾತ್ಮ ಎಂದೆ ಅರ್ಥ. **ಆತ್ಮರತಿಃ ಏವ (ಆತ್ಮನಿ ಆತ್ಮನೋ ವಾ ರತಿಃ ಯಸ್ಯ ಸಃ** ಎಂದು ವಿಗ್ರಹ) ಅಂದರೆ ಭಗವಂತನ ಕಾಣುವಿಕೆಯಿಂದ ಉಂಟಾದ ಸುಖವನ್ನಷ್ಟೇ ಅನುಭವಿಸುವವನು, ಹೊರತು ಬೇರೆಡೆ ಆಸಕ್ತಿ ಇರುವವನಲ್ಲ. ಭಗವಂತ ಬಿಟ್ಟುಬೇರೆ ಪದಾರ್ಥಗಳಲ್ಲಿ ಆಸಕ್ತಿ ಇಲ್ಲ ಎಂದರೆ ಕೆಲವು ಪದಾರ್ಥಗಳಲ್ಲಿ ಮಾತ್ರ ಎಂದು ತಿಳಿಯಬಾರದು. ಯಾವ ವಸ್ತುವಿನಲ್ಲಿಯೂ ಸರ್ವಾತ್ಮನಾ ಆಸಕ್ತಿ ಇಲ್ಲದವನು ಎಂದೆ ಅರ್ಥ. ಇದನ್ನು **ಆತ್ಮತೃಪ್ತಃ** ಎನ್ನುವ ಪದ ತಿಳಿಸುತ್ತದೆ. (**ಆತ್ಮನಾ ತೃಪ್ತಃ** ಎಂದು ವಿಗ್ರಹವಾಕ್ಯ) ಪರಮಾತ್ಮನ ಪ್ರಸಾದದಿಂದಲೇ **ತೃಪ್ತಃ** = ಭಗವಂತ ಬಿಟ್ಟು ಬೇರೆ ವಿಷಯ ಪದಾರ್ಥಗಳಲ್ಲಿ ಸರ್ವ ಪ್ರಕಾರದಿಂದಲೂ ಅಲಂಬುದ್ಧಿಯುಳ್ಳವನು. ಬೇರೆಡೆ ಅಲಂಬುದ್ಧಿ ಬರಲು ಭಗವಂತನ ಪ್ರಸಾದವೇ ಕಾರಣ ಎಂದು ಭಾವ.

ಭಗವಂತನು ಅತಿಶಯವಾದ ಸುಖವನ್ನು ಕೊಟ್ಟು ಬೇರೆ ಪದಾರ್ಥಗಳಲ್ಲಿ ಸರ್ವಾತ್ಮನಾ ವಿರಕ್ತಿಯನ್ನು ಉಂಟು ಮಾಡುತ್ತಾನೆ. ಅನ್ಯತ್ರ ಅಲಂಬುದ್ಧಿ ಬರಲು ಅತಿಶಯವಾದ ಸುಖವೇ ಕಾರಣ ಎಂದು '**ಆತ್ಮನ್ಯೇವ ಚ ಸಂತುಷ್ಟಃ**' ಎಂದು ಹೇಳಲಾಗಿದೆ. **ಸಂತುಷ್ಟಃ**= ಎಂದರೆ **ಸಮ್ಯಕ್ ತುಷ್ಟಿಮಾನ್** ಅಂದರೆ ಮಹಾ ಸುಖವುಳ್ಳವನು ಎಂದರ್ಥ. ಇದು ಹೇತುಗರ್ಭ ವಿಶೇಷಣ. ಭಗವಂತನ ದರ್ಶನದಿಂದ ಉಂಟಾದ ಮಹಾಸುಖವುಳ್ಳವನಾದ್ದರಿಂದ ಬೇರೆಡೆ ವಿರಕ್ತಿವುಳ್ಳವನು ಎಂದರ್ಥ. ಭಗವದ್ದರ್ಶನದಿಂದ ಮಹಾಸುಖ ಹೇಗೆ ಬರಲು ಸಾಧ್ಯ ಎಂದರೆ ಈ ಸಂತುಷ್ಟಿಗೆ ಹೇತುವನ್ನಾಗಿ **ಆತ್ಮನ್ಯೇವ** ಎಂದು ಹೇಳಿದ್ದಾರೆ. ಇಲ್ಲಿ **ಆತ್ಮನಿ** ಎಂದು ಸಪ್ತಮೀವಿಭಕ್ತಿಯು ಅಧಿಕರಣ ಎಂಬರ್ಥದಲ್ಲಿ ಬಂದಿದೆ. ಅಂದರೆ ಪರಮಾತ್ಮನಲ್ಲಿ ಇರುವವನಾಗಿಯೇ ಸಂತುಷ್ಟನು ಎಂದರ್ಥ. ಪರಮಾತ್ಮನಲ್ಲಿ ಇರುವಿಕೆ ಎಂದರೆ ಭಗವಂತನಲ್ಲಿ ಮನಸ್ಸನ್ನು ನಿರಂತರ ನೆಲೆನಿಲ್ಲಿಸುವಿಕೆ. ಅಂದರೆ; ಅಸಂಪ್ರಜ್ಞಾತ ಸಮಾಧಿ ಎಂದೆ ಅರ್ಥ. ಇದರಿಂದಷ್ಟೆ ಅಪರೋಕ್ಷ ಜ್ಞಾನಿಯು ಸಂತುಷ್ಟವಾಗುತ್ತಾನೆ ಬೇರೆ ಯಾವ ಕಾರಣದಿಂದಲೂ ಅಲ್ಲ ಎಂದು **ಏವ** ಶಬ್ದದ ಅರ್ಥ. ಈ ಶ್ಲೋಕದಲ್ಲಿ **ಮಾನವಃ** ಎಂದು ಹೇಳಿದ್ದರಿಂದ ಅಪರೋಕ್ಷ

ಜ್ಞಾನಿಯು ಮಾತ್ರ ಅಸಂಪ್ರಜ್ಞಾತ ಸಮಾಧಿ ಸ್ಥಿತಿಯನ್ನು ಹೊಂದಬಲ್ಲ ಎಂದು ತಿಳಿಸಿದಂತೆ ಆಯಿತು. ಇಂತಹವನಿಗೆ **ಕಾರ್ಯಂ** = ಕರ್ತವ್ಯವಾದ ಸಂಧ್ಯಾವಂದನಾದಿ ಯಾವ ಕರ್ಮವೂ ಕೂಡ, ನ ವಿದ್ಯತೇ= ಇರುವುದಿಲ್ಲ. ॥ 17 ॥

## ಸಮಾಧಿಸ್ಥನು ಕರ್ಮ ಮಾಡದಿದ್ದರೂ ಅನರ್ಥವಿಲ್ಲ

**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥ 18 ॥**

**ಅರ್ಥ** - ಅಸಂಪ್ರಜ್ಞಾತ ಸಮಾಧಿ ಸ್ಥಿತಿಯಲ್ಲಿರುವವನು ಮಧ್ಯದಲ್ಲಿ ಎಚ್ಚರಗೊಂಡು ಮಾಡಿದ ಕರ್ಮಕ್ಕೆ ಹೆಚ್ಚಿನ ಫಲವಿಲ್ಲ. ಅಥವಾ ಅವನು ಕರ್ಮ ಮಾಡದಿರುವುದರಿಂದ ಯಾವ ದೋಷವೂ ಬರುವುದಿಲ್ಲ. ಗುರು-ಹಿರಿಯರ ನಮಸ್ಕಾರ ಮೊದಲಾದ ಪುರುಷಾರ್ಥ ಸಾಧನಗಳೂ ಅವನಿಗೆ ಇಲ್ಲ.

ನನು ಕರ್ಮಕರಣಾಕರಣಯೋರ್ಲಾಭಹಾನೀ ಚೇತ್ತರ್ಹಿ ಸಮಾಧಿರ್ನ ಕಾರ್ಯಃ ಪ್ರಸಜ್ಯೇತೇತಿ ಚೋದಿತೇ ಸಮಾಧಿಸ್ಥಸ್ಯ ಕಾರ್ಯಂ ನ ವಿದ್ಯತೇ ಇತ್ಯುತ್ತರಂ ಕಸ್ಮಾದುಕ್ತಮ್ । ಕರ್ಮಕೃತಿಕಾಲೇ ತ್ವಯಾऽಹಮುದ್ಬೋಧನೀಯ ಇತಿ ಕಂಚಿತ್ಪ್ರತ್ಯುಕ್ತ್ವಾ ಸಮಾಧೌ ಸ್ಥಿತಃ ಸನ್, ತೇನ ಯೋಗಶಾಸ್ತ್ರೋಕ್ತೈರುಪಾಯೈರುದ್ಬೋಧಿತಃ ಕರ್ಮ ಕರೋತೀತ್ಯೇವೋತ್ತರಂ ಕುತೋ ನೋಕ್ತಮಿತ್ಯತ ಆಹ- **ನೈವೇತಿ** ॥ ತಸ್ಯಾಸಂಪ್ರಜ್ಞಾತಸಮಾಧಿಸ್ಥಸ್ಯ ಸಮಾಧಿಂ ವಿನೇಹ **ಕೃತೇನ**= ಯಜ್ಞಾದಿಕರ್ಮಣಾऽऽತ್ಮರತ್ಯಧಿಕಸ್ತತ್ಸಮೋ **ವಾऽರ್ಥಃ**= ಪುಮರ್ಥೋ ನಾಸ್ತಿ । ನನು ಯಜ್ಞಾದಿಕರಣಾರ್ಥಂ ಉತ್ಥಾನಾಭಾವೇऽಪಿ ನಿತ್ಯನೈಮಿತ್ತಿಕಕರ್ಮಾಕರಣೇ ಪ್ರತ್ಯವಾಯಾತ್ ತತ್ಕರಣಾರ್ಥಂ ಸಮಾಧಿತ ಉದ್ಬೋಧನಂ ಆವಶ್ಯಕಮಿತ್ಯತ ಆಹ- **ನಾಕೃತೇನೇತಿ** ॥ ತಸ್ಯ ಸಮಾಧಿಸ್ಥಸ್ಯಾಕೃತೇನ **ಕರ್ಮಣಾ**= ಸಂಧ್ಯಾವಂದನಾದಿ ತತ್ತತ್ಕಾಲಾನುಷ್ಠೇಯಕರ್ಮಾಭಾವೇನ ಕಶ್ಚನ ದೋಷ ಇತಿ ಶೇಷಃ, ನಾಸ್ತಿ । ನನು ಸಮಾಧಿಸ್ಥಸ್ಯಾಲ್ಪಸ್ಯ ಯಜ್ಞಾದೇರನುಷ್ಠಾನೇ ಫಲಾಭಾವೇऽಪಿ ಸಂಧ್ಯಾದ್ಯಕೃತೌ ಪ್ರತ್ಯವಾಯಾಭಾವೇऽಪಿ ಗುರುದೇವತಾದಿಷು ಪೂಜಾಕರಣಾಕರಣಯೋರರ್ಥಪ್ರತ್ಯವಾಯೌ ಸ್ಯಾತಾಮೇವಾತಸ್ತತ್ಸನ್ನಿಧಾನಪ್ರಾಪ್ತೌ ಉದ್ಬೋಧನಮಾವಶ್ಯಕಮಿತ್ಯತ ಆಹ- **ನ ಚೇತಿ** ॥ **ಅಸ್ಯಾ**ಸಂಪ್ರಜ್ಞಾತಸಮಾಧಿಸ್ಥಸ್ಯ । **ಸರ್ವಭೂತೇಷು** । ವಿಷಯಸಪ್ತಮೀಯಮ್ । **ಅರ್ಥವ್ಯಪಾಶ್ರಯಃ**= ಅರ್ಥಸ್ಯ ವ್ಯಪಾಶ್ರಯಃ ಪ್ರಾಪ್ತಿಃ ಯೇನ ದರ್ಶನಸಂಭಾಷಣಪೂಜನಾದಿವ್ಯಾಪಾರೇಣ

**ಭವತಿ ಸೋऽರ್ಥವ್ಯಪಾಶ್ರಯ ಇತಿ ವ್ಯಧಿಕರಣಬಹುವ್ರೀಹಿಃ । ಗುರ್ವಾದಿ ವಿಷಯಕದರ್ಶನ (ಸಂ)ಭಾಷಣವಂದನಾದಿವ್ಯಾಪಾರಃ ಪುಮರ್ಥಪ್ರಾಪ್ತಿ-ಹೇತುಭೂತಃ ಸಮಾಧಿಸ್ಥಸ್ಯ ನಾಸ್ತೀತ್ಯರ್ಥಃ । ಚಶಬ್ದಃ ಪೂರ್ವಾರ್ಧೋಕ್ತ ಸಮುಚ್ಚಯೇ । ಗುರ್ವಾದಿವಿಷಯವ್ಯಾಪಾರೇಣಾಪ್ಯಾತ್ಮರತಿತುಲ್ಯಂ ಸುಖಂ ನ ಲಭ್ಯತ ಇತ್ಯಭಿಪ್ರಾಯಃ। ಏವಂ ತತ್ಪೂಜಾದ್ಯಕರಣಮಪಿ ಸಮಾಧಿಸ್ಥಸ್ಯ ನಾನರ್ಥ-ಪ್ರಾಪ್ತಿಹೇತುರಿತ್ಯುಪಲಕ್ಷ್ಯತೇ।**

**ಅನುವಾದ-** ಕರ್ಮ ಮಾಡುವಿಕೆಯಿಂದ ಲಾಭ ಅಥವಾ ಬಿಡುವಿಕೆಯಿಂದ ನಷ್ಟ ಇವುಗಳನ್ನು ವಿವರಿಸಿದಾಗ ಹಾಗಾದರೆ ಸಮಾಧಿಸ್ಥಿತಿಯಲ್ಲಿ ಕರ್ಮ ಲೋಪವಾಗುತ್ತದೆ ಯಾದುದರಿಂದ ಸಮಾಧಿ ಸ್ಥಿತಿಯನ್ನು ಸಾಧಕನು ಪಡೆಯುವಂತೆಯೆ ಇಲ್ಲ ಎಂಬ ಆಕ್ಷೇಪಕ್ಕೆ, ಅವನು ಯಾವ ಕರ್ಮವನ್ನು ಮಾಡಬೇಕಿಲ್ಲ ಎಂದು ಉತ್ತರವನ್ನು ಕೊಡಲಾಗಿದೆ. ಹೀಗೆ ಏಕೆ ಉತ್ತರ ? 'ಕರ್ಮಮಾಡುವ ಕಾಲ ಪ್ರಾಪ್ತವಾದಾಗ ನನ್ನನ್ನು ಎಚ್ಚರಿಸು' ಎಂದು ಯಾರಿಗಾದರೂ ಹೇಳಿ ಸಮಾಧಿ ಅವಸ್ಥೆಯನ್ನು ತಲುಪಬಹುದು. ಆಗ ಯೋಗ ಶಾಸ್ತ್ರದಲ್ಲಿ ಹೇಳಿದ ರೀತಿಯಲ್ಲಿ ಅವರು ಎಚ್ಚರಿಸಿದಾಗ ಕರ್ಮ ಮಾಡುತ್ತಾನೆ ಎಂದು ಉತ್ತರವನ್ನು ಏಕೆ ಹೇಳಬಾರದು ಎಂಬ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರಿಸಲಾಗಿದೆ. **ತಸ್ಯ**= ಅಸಂಪ್ರಜ್ಞಾತ ಸಮಾಧಿ ಅವಸ್ಥೆಯಲ್ಲಿರುವ ಸಾಧಕನಿಗೆ, **ಇಹ**= ಸಮಾಧಿ ಇಲ್ಲದ ಅವಸ್ಥೆಯಲ್ಲಿ, **ಕೃತೇನ**= ಮಾಡಿದ ಯಜ್ಞಾದಿ ಕರ್ಮಗಳಿಂದ, **ಅರ್ಥಃ** = ಭಗವಂತನ ದರ್ಶನಾದಿಗಳಿಂದ ಉಂಟಾದ ಸುಖಕ್ಕಿಂತ ಹೆಚ್ಚಿನ ಅಥವಾ ಸಮವಾದ ಪುರುಷಾರ್ಥವು **ನಾಸ್ತಿ** = ಇರುವುದಿಲ್ಲ. ಯಾಗಾದಿಗಳಿಂದ ಯಾವುದೆ ವಿಶೇಷ ಫಲವಿಲ್ಲ. ಆದುದರಿಂದ ಸಮಾಧಿ ಸ್ಥಿತಿಯಿಂದ ಜಾಗ್ರತನಾಗುವುದು ಬೇಡ. ಆದರೆ ನಿತ್ಯನೈಮಿತ್ತಿಕ ಸಂಧ್ಯಾವಂದನೆ ಮುಂತಾದ ಕರ್ಮ ಮಾಡದಿದ್ದರೆ ಪಾಪ ಬರುತ್ತದೆ ಹೀಗಾಗಿ ಅದಕ್ಕೋಸ್ಕರ ಎಚ್ಚರದ ಸ್ಥಿತಿಗೆ ಬರುವುದು ಅನಿವಾರ್ಯವಲ್ಲವೇ ? ಎಂಬ ಆಕ್ಷೇಪವೂ ಸರಿಯಲ್ಲ. **ತಸ್ಯ**= ಸಮಾಧಿಸ್ಥನಾದ ಸಾಧಕನಿಗೆ **ಅಕೃತೇನ**= ಸಂಧ್ಯಾವಂದನಾದಿ ತತ್ತತ್ಕಾಲ ದಲ್ಲಿ ಮಾಡಬೇಕಾದ ಕರ್ಮಗಳನ್ನು ಮಾಡದಿರುವುದರಿಂದ, **ಕಶ್ಚನ**= ಯಾವುದೇ ದೋಷವು **ನಾಸ್ತಿ**= ಇರುವುದಿಲ್ಲ.

ಸಮಾಧಿಸ್ಥನಾದವನು ಸ್ವಲ್ಪವಾದ ಯಜ್ಞಾದಿಗಳ ಅನುಷ್ಠಾನ ಮಾಡುವುದರಿಂದ ಅವನಿಗೆ ಫಲವಿಲ್ಲದೇ ಇರಬಹುದು. ಅಥವಾ ಸಂಧ್ಯಾವಂದನಾದಿಗಳನ್ನು ಮಾಡದೇ ಇರುವುದರಿಂದ ಪಾಪವೂ ಬಾರದಿರಬಹುದು; ಆದರೆ ಗುರುದೇವತಾದಿಗಳ ಪೂಜೆ ಮಾಡದಿರುವುದರಿಂದ ಪಾಪ ಮತ್ತು ಮಾಡುವುದರಿಂದ ಪುಣ್ಯ ವಿಶೇಷವಿದ್ದೇಯಿದೆ ಯಾದುದರಿಂದ ಗುರು ಹಿರಿಯರು

ಬಂದಾಗ, ಅವನು ಸಮಾಧಿಸ್ಥಿತಿಯಿಂದ ಎಚ್ಚರ ಗೊಳ್ಳಲೇಬೇಕು ಎಂಬ ಆಕ್ಷೇಪಕ್ಕೆ 'ನ ಚಾಸ್ಯ...' ಎಂದು ಉತ್ತರ ಕೊಡಲಾಗಿದೆ.

**ಅಸ್ಯ** = ಅಸಂಪ್ರಜ್ಞಾತ ಸಮಾಧಿಸ್ಥಿತಿಯಲ್ಲಿರುವವನಿಗೆ , **ಸರ್ವಭೂತೇಷು** = (ಇಲ್ಲಿರುವ ಸಪ್ತಮೀವಿಭಕ್ತಿಗೆ ವಿಷಯ ಎಂದು ಅರ್ಥ) **ಅರ್ಥವ್ಯಪಾಶ್ರಯಃ**= ಅರ್ಥ ಎಂದರೆ ಪುರುಷಾರ್ಥ. ಇದರ ಪ್ರಾಪ್ತಿ ಯಾವುದರಿಂದ ಆಗುತ್ತದೆಯೋ ಅದು ಅರ್ಥವ್ಯಪಾಶ್ರಯ. (**ಅರ್ಥಸ್ಯ ವ್ಯಪಾಶ್ರಯಃ ಯೇನ**- ಎಂದು ಬಹುವ್ರೀಹಿಸಮಾಸ) ಅಂದರೆ ದರ್ಶನ ಸಂಭಾಷಣ ಪೂಜನಾದಿಗಳು ಎಂದು ಅರ್ಥ. ಗುರು ದೇವತಾದಿಗಳ ವಂದನೆ, ಸಂಭಾಷಣ ದರ್ಶನ ಇವೆ ಮೊದಲಾದ ಕರ್ಮಗಳೂ ಕೂಡ ಪುರುಷಾರ್ಥಕ್ಕೆ ಕಾರಣವಾಗುವುದಿಲ್ಲ ಎಂದು ತಾತ್ಪರ್ಯ. 'ಚ ' ಶಬ್ದಕ್ಕೆ ಹಿಂದೆ ಶ್ಲೋಕದ ಪೂರ್ವಾರ್ಧದಲ್ಲಿ ಹೇಳಿದ್ದರ ಜೊತೆಗೆ ಎಂದು ಅರ್ಥ. ಗುರುವಂದನೆ ಮೊದಲಾದವುಗಳೂ ಕೂಡ ಭಗವದ್ದರ್ಶನಾದಿಗಳಿಂದ ಉಂಟಾದ ಸುಖಕ್ಕೆ ಸಮವಾಗಲಾರದು ಎಂದು ಅಭಿಪ್ರಾಯ. ಆದುದರಿಂದಲೇ ಗುರುಪೂಜಾದಿಗಳನ್ನು ಮಾಡದಿರುವಿಕೆ ಸಮಾಧಿ ಸ್ಥಿತಿಯಲ್ಲಿರುವವನಿಗೆ ಅನರ್ಥಕಾರಿಯಾಗುವುದಿಲ್ಲ.

## ಮುಕ್ತರು ಮಾತ್ರ ಅಕರ್ಮಿಗಳು

**ಯದ್ವಾ ನ ಕೇವಲಂ ಚಕ್ರಪ್ರವರ್ತಕತ್ವೇನ ಭೂತಸ್ಥಿತಿಹೇತುತ್ವಾತ್ಕರ್ಮ ಕರ್ತವ್ಯಮ್ । ಕಿಂತು ಮುಕ್ತಸ್ಯೈವಾಕರ್ಮತ್ವಾದಮುಕ್ತೇನಾವಶ್ಯಂ ಕರ್ಮ ಕಾರ್ಯಮಿತಿ ತಸ್ಮಾದಿತ್ಯನೇನ ವಕ್ತುಮ್ ಅಕರ್ಮತ್ವಂ ಮುಕ್ತಸ್ಯೈವೇತ್ಯಾಹ- ಯಸ್ತ್ವಿತಿ ॥ ಯಸ್ತು ಮಾನವಃ = ಪ್ರಾಪ್ತಜ್ಞಾನಫಲೋ ಮುಕ್ತಃ ಆತ್ಮರತಿಃ ಆತ್ಮನಾ= ಪರಮಾತ್ಮನಾ ರತಿಃ = ಅಭಿವ್ಯಕ್ತಸ್ವರೂಪಾನಂದೋ ಯಸ್ಯ ಸಃ ತಥಾ । ಆತ್ಮನಾ= ಪರಮಾತ್ಮನಾ ತೃಪ್ತಃ = ಕೃತಕೃತ್ಯಃ ಆತ್ಮತೃಪ್ತಃ । ಆತ್ಮನ್ಯೇವ ಚ ಸಂತುಷ್ಟಃ= ಪ್ರೀತಿಮಾನ್ । ಯದ್ವಾ ತೃಪ್ತಿಸಂತೋಷಶಬ್ದಯೋಃ ಪ್ರೀತಿರೂಪೈಕಾರ್ಥತ್ವೇಽಪ್ಯಾತ್ಮನಾ ತೃಪ್ತಃ ಪ್ರೀತಿಮಾನ್ ಆತ್ಮನ್ಯೇವ ಚ ಸಂತುಷ್ಟಃ ಇತ್ಯೇವ (ಇತ್ಯೇತಾವತಾ) ಅರ್ಥಭೇದೋ ಧ್ಯೇಯಃ । ತಸ್ಯ ತು= ತಸ್ಯೈವೇತಿ ತು-ಶಬ್ದೋಽತ್ರ ಯೋಜ್ಯಃ । ಮುಕ್ತಸ್ಯೈವ ಕಾರ್ಯಂ ನ ವಿದ್ಯತೇ । ನನು 'ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ ' ಇತ್ಯುಕ್ತೇರ್ಮುಕ್ತಸ್ಯಾಪಿ ಕರ್ಮ ಕರ್ತವ್ಯಮಿತ್ಯತ ಆಹ- ನೈವೇತಿ ॥ ಪ್ರಾಗ್ವದೇವಾರ್ಥಃ ಸ್ವೇಚ್ಛಯೈವ ಕರಣಂ ನ ವಿಧಿಬದ್ಧತ್ವೇನ । ನ ವಾ ಫಲಾಪೇಕ್ಷಯಾ, ತಸ್ಯೈವ ಫಲರೂಪತ್ವೇನ ಫಲಾಂತರಾಭಾವಾದಿತಿ ಭಾವಃ। ॥ 17-18 ॥**

**ಅನುವಾದ- ಯಸ್ತ್ವಾತ್ಮರತಿಃ** ಎಂಬ ಈ ಎರಡು ಶ್ಲೋಕಗಳಿಗೆ ಮತ್ತೊಂದು ರೀತಿಯ ವ್ಯಾಖ್ಯಾನವನ್ನು ಮಾಡುತ್ತಾರೆ. ಜಗಚ್ಚಕ್ರ ಪ್ರವರ್ತಕರಾಗಿ ಎಲ್ಲಾ ಭೂತಗಳ ಇರುವಿಕೆಗೆ ನಾವು ಕಾರಣರಾಗಬೇಕು. ಆದುದರಿಂದ ಕರ್ಮವನ್ನು ಮಾಡಬೇಕು ಎಂದು ತಿಳಿಸಿದ್ದಾರೆ. ಅಷ್ಟೇ ಅಲ್ಲ, ಕರ್ಮವಿಲ್ಲದಿರುವಿಕೆ ಮುಕ್ತರಿಗೆ ಮಾತ್ರ. ಆದುದರಿಂದ ಅಮುಕ್ತರು ಅವಶ್ಯವಾಗಿ ಕರ್ಮವನ್ನು ಮಾಡಲೇಬೇಕು ಎಂದು, **ತಸ್ಮಾತ್ ಅಸಕ್ತಃ** ಎಂದು ಮುಂದೆ ತಿಳಿಸಬೇಕು ಅದಕ್ಕಾಗಿ ಕರ್ಮವಿಲ್ಲದಿರುವಿಕೆ ಮುಕ್ತರಿಗೆ ಮಾತ್ರ ಎಂದು ಈ ಶ್ಲೋಕಗಳಲ್ಲಿ ತಿಳಿಸಲಾಗಿದೆ.

**ಯಸ್ತು ಮಾನವಃ**= ಜ್ಞಾನದ ಫಲವನ್ನು ಪಡೆದ ಮುಕ್ತನು, **ಆತ್ಮರತಿಃ**= ಪರಮಾತ್ಮನಿಂದಾಗಿ ಸ್ವರೂಪಾನಂದದ ಅಭಿವ್ಯಕ್ತಿಯನ್ನು ಪಡೆದಿದ್ದಾನೋ, **ಆತ್ಮತೃಪ್ತಃ**= ಪರಮಾತ್ಮನಿಂದಾಗಿಯೇ ಕೃತಕೃತ್ಯನಾಗಿದ್ದಾನೋ, **ಆತ್ಮನ್ಯೇವ ಸಂತುಷ್ಟಃ** = ಪರಮಾತ್ಮನಲ್ಲಿಯೇ ಪ್ರೀತಿಯುಳ್ಳವನೋ, **ತಸ್ಯ ತು** = ಅಂತಹ ಮುಕ್ತನಿಗೆ ಮಾತ್ರ **ಕಾರ್ಯಂ ನ ವಿದ್ಯತೇ**= ಯಾವುದೇ ಕರ್ಮವಿರುವುದಿಲ್ಲ. ಇಲ್ಲಿ ರತಿ ಶಬ್ದಕ್ಕೆ ಆನಂದ ಎಂದು, ತೃಪ್ತಿ ಶಬ್ದಕ್ಕೆ ಕೃತಕೃತ್ಯತೆ ಎಂದು, ಸಂತೋಷ ಶಬ್ದಕ್ಕೆ ಸ್ನೇಹ ಎಂದು ಅರ್ಥವ್ಯತ್ಯಾಸವಿದೆ . ತೃಪ್ತಿ ಸಂತೋಷ ಶಬ್ದಗಳಿಗೆ ಸ್ನೇಹ ಎಂಬ ಒಂದೇ ಅರ್ಥ ಎಂದು ಇಟ್ಟುಕೊಂಡರೂ **ಆತ್ಮನಾ ತೃಪ್ತಃ**= ಭಗವಂತನ ಪ್ರಸಾದದಿಂದ ತೃಪ್ತಿಯುಳ್ಳವನು. **ಆತ್ಮನಿ ಸಂತುಷ್ಟಃ**= ಭಗವಂತನಲ್ಲಿ ತೃಪ್ತಿವುಳ್ಳವನು ಎಂದು ಅರ್ಥಭೇದವನ್ನು ಹೇಳಬೇಕು. ಇಲ್ಲಿ '**ತಸ್ಯ ತು**' ಎಂದು ಅನ್ವಯವನ್ನು ಹೇಳಿ '**ತಸ್ಯೈವ**' ಎಂದು ಅರ್ಥವನ್ನು ಹೇಳಬೇಕು . ಆದುದರಿಂದ ಮುಕ್ತನಿಗೆ ಮಾತ್ರ ಯಾವುದೇ ಕರ್ಮವಿರುವುದಿಲ್ಲ ಎಂದು ಅರ್ಥವಾಗುತ್ತದೆ. ಹಾಗಾದರೆ, '**ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ**' ಎಂದು ಮುಕ್ತರಿಗೂ ಕರ್ಮವನ್ನು ಹೇಳುವ ವಾಕ್ಯಗಳ ಅರ್ಥ ಏನು ಎಂಬ ಪ್ರಶ್ನೆಗೆ '**ನೈವ** ' ಎಂಬ ಶ್ಲೋಕ ಉತ್ತರಿಸುತ್ತದೆ. ಈ ಶ್ಲೋಕಕ್ಕೆ ಹಿಂದೆ ವಿವರಿಸಿದಂತೆಯೇ ಅರ್ಥ. ಅಂದರೆ ಮುಕ್ತನು ಕರ್ಮವನ್ನು ಮಾಡುವುದು ಸ್ವ ಇಚ್ಛೆಯಿಂದಲೆ ಹೊರತು ವಿಧಿಗೆ ಬದ್ಧನಾಗಿ ಅಲ್ಲ. ಅಥವಾ ಫಲಾಪೇಕ್ಷೆಯಿಂದಲೂ ಕರ್ಮ ಮಾಡುವುದಲ್ಲ. ಏಕೆಂದರೆ ಆ ಕರ್ಮವೇ ಫಲರೂಪವಾದ್ದರಿಂದ ಅದಕ್ಕೆ ಮತ್ತೊಂದು ಫಲವಿರುವುದಿಲ್ಲ ಎಂದು ತಾತ್ಪರ್ಯ. || 17-18 ||

## ಬಾಹ್ಯ ಪ್ರಜ್ಞೆ ಇರುವವನಿಗೆ ವರ್ಣಾಶ್ರಮೋಚಿತ ಕರ್ಮಾನುಷ್ಠಾನ ಅತ್ಯಗತ್ಯ

**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।**
**ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ || 19 ||**

**ಅರ್ಥ** - ಅಸಂಪ್ರಜ್ಞಾತ ಸಮಾಧಿಸ್ಥಿತಿಯಲ್ಲಿರುವವರು, ಮತ್ತು ಮುಕ್ತರು ಇವರಿಗೆ ಮಾತ್ರ ಕರ್ತವ್ಯಕರ್ಮಗಳು ಇರುವುದಿಲ್ಲ, ಆದುದರಿಂದ ಫಲಾಪೇಕ್ಷೆ ಇಲ್ಲದವನಾಗಿ ನೀನು ಕರ್ಮವನ್ನು

ಮಾಡು .ಮುಮುಕ್ಷುವು ಫಲಾಪೇಕ್ಷೆ ಇಲ್ಲದೆ ಕರ್ಮ ಮಾಡುವುದರಿಂದ (ಜ್ಞಾನದ್ವಾರಾ) ಭಗವಂತನನ್ನು ಪಡೆಯುತ್ತಾನೆ.

**ತಸ್ಮಾದಸಂಪ್ರಜ್ಞಾತಸಮಾಧಿಸ್ಥಸ್ಯ ವಾ ಮುಕ್ತಸ್ಯೈವ ವಾಽಕರ್ಮತ್ವೇನ ತ್ವಾದೃಶೇನಾವಶ್ಯಂ ಕರ್ಮಣಃ ಕರ್ತವ್ಯತ್ವಾದಸಕ್ತಃ= ಫಲಸ್ನೇಹರಹಿತಃ ಸನ್ ಕಾರ್ಯಮವಶ್ಯಕರ್ತವ್ಯಂ ಕರ್ಮ ಸತತಂ ಸಮಾಚರ= ಭಗವತ್ಪೂಜಾತ್ವೇ-ನಾನುತಿಷ್ಠ । ನನು ಮುಕ್ತಸ್ಯ ಕರ್ಮಣಾ ಪ್ರಯೋಜನಾಭಾವಾತ್ (ಯಥಾ) ಕಾರ್ಯಾಭಾವಃ ಏವಂ ಮುಮುಕ್ಷೋರಪಿ ಕರ್ಮಣಾ ಫಲಾಭಾವಾತ್ಕಾರ್ಯಾ-ಭಾವಃ ಕಿಂ ನ ಸ್ಯಾದಿತ್ಯತ ಆಹ- ಅಸಕ್ತ ಇತಿ ॥ ಪೂರುಷಃ ಅಸಕ್ತಃ ಕರ್ಮಾಚರನ್ನೇವ ಜ್ಞಾನದ್ವಾರಾ ಪರಮಾಪ್ನೋತಿ ಹಿ ಯಸ್ಮಾತ್ ತಸ್ಮಾತ್ ಮುಕ್ತಸಮಾಧಿಸ್ಥಾಭ್ಯಾಮನ್ಯಸ್ಯ ಕರ್ಮಣಾ ಫಲಸತ್ವಾದಸ್ಯೇವ ಕಾರ್ಯಮಿತಿ ಭಾವಃ ॥ 19 ॥**

**ಅನುವಾದ - ತಸ್ಮಾತ್** = ಅಸಂಪ್ರಜ್ಞಾತ ಸ್ಥಿತಿಯಲ್ಲಿರುವವನಿಗೆ ಮತ್ತು ಮುಕ್ತನಿಗೆ ಮಾತ್ರ ಕರ್ಮವಿರುವುದಿಲ್ಲವಾದುದರಿಂದ, ನಿನ್ನಂತಹವರು ಅವಶ್ಯವಾಗಿ ಕರ್ಮವನ್ನು ಮಾಡಲೇಬೇಕು ಆದುದರಿಂದ **ಅಸಕ್ತಃ** = ಫಲಾಪೇಕ್ಷೆ ಇಲ್ಲದವನಾಗಿ **ಕಾರ್ಯಂ** = ಅವಶ್ಯ ಮಾಡಬೇಕಿರುವ, **ಕರ್ಮ** = ಕರ್ಮವನ್ನು , **ಸತತಂ** = ಯಾವಾಗಲೂ, **ಸಮಾಚರ** = ಭಗವಂತನ ಪೂಜೆ ಎಂದು ಮಾಡು.

ಮುಕ್ತರಿಗೆ ಕರ್ಮಾಚರಣೆಯಿಂದ ಯಾವುದೇ ಫಲವಿಲ್ಲ. ಹೀಗಾಗಿ ಅವರು ಕರ್ಮ ಮಾಡಬೇಕಿಲ್ಲ . ಅದರಂತೆ ಮುಮುಕ್ಷುವಿಗೂ ಕೂಡ ಕರ್ಮದಿಂದ ಯಾವುದೇ ಫಲವಿಲ್ಲದಿರುವುದರಿಂದ ಅವನೂ ಕರ್ಮ ಮಾಡಬೇಕಿಲ್ಲ ಎಂಬ ಆಕ್ಷೇಪಕ್ಕೆ, **ಅಸಕ್ತಃ** ಎಂದು ಉತ್ತರಿಸಲಾಗಿದೆ.

**ಪೂರುಷಃ** = ಮನುಷ್ಯನು **ಅಸಕ್ತಃ** = ಫಲೇಚ್ಛಾರಹಿತನಾಗಿ, **ಕರ್ಮ ಆಚರನ್ನೇವ** = ಕರ್ಮವನ್ನು ಆಚರಿಸುತ್ತಲೆ ಜ್ಞಾನ ಸಂಪಾದನೆಯ ಮೂಲಕ, **ಪರಂ** = ಭಗವಂತನನ್ನು **ಆಪ್ನೋತಿ ಹಿ** = ಪಡೆಯುತ್ತಾನಷ್ಟೆ . ಆದುದರಿಂದ ಮುಕ್ತರು ಮತ್ತು ಸಮಾಧಿಸ್ಥಿತಿಯಲ್ಲಿರುವವರು ಇವರನ್ನು ಬಿಟ್ಟು ಬೇರೆ ಎಲ್ಲರಿಗೂ ಕರ್ಮದಿಂದ ಫಲವಿದೆ. ಆದುದರಿಂದ ಅವರು ಕರ್ಮವನ್ನು ಮಾಡಲೇ ಬೇಕು. ॥ 19 ॥

## ಸುಜನರಿಗೆ ಮಾರ್ಗದರ್ಶನ ಮಾಡಲು ಉತ್ತಮರ ಅನುಷ್ಠಾನ ಆವಶ್ಯಕ

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥ 20 ॥**

ಅರ್ಥ- ಜನಕ, ಪ್ರಿಯವ್ರತನೇ ಮೊದಲಾದ ಜ್ಞಾನಿಗಳೂ ಕೂಡ ಕರ್ಮವನ್ನು ಮಾಡುತ್ತಲೇ ಮೋಕ್ಷರೂಪವಾದ ಸಿದ್ಧಿಯನ್ನು ಪಡೆದಿದ್ದಾರೆ. ಅಜ್ಞಜನರನ್ನು ಕರ್ಮದಲ್ಲಿ ತೊಡಗಿಸುವುದಕ್ಕಾಗಿಯೂ ಕೂಡ ಕರ್ಮವನ್ನು ಮಾಡಬೇಕು.

ನನು ಜ್ಞಾನಾದೇವ ಮೋಕ್ಷಸಿದ್ಧೇಃ ಕಥಮ್ 'ಅಸಕ್ತೋ ಹ್ಯಾಚರನ್ನೇವ ಇತಿ ಉಚ್ಯತ ಇತ್ಯತೋ ಮುಕ್ತಾವಾನಂದಾತಿಶಯಾರ್ಥಂ ವಿಹಿತಕರ್ಮಣೋಽವಶ್ಯಕರ್ತವ್ಯತಾಯಾಂ ಜ್ಞಾನಿನಾಮಾಚಾರಮಪಿ ಪ್ರಮಾಣಯತಿ– **ಕರ್ಮಣೈವೇತಿ ॥** ಸಹಯೋಗೇ ತೃತೀಯಾ । ಜನಕಾದಯೋ = ಜನಕಪ್ರಿಯವ್ರತಾದಯೋ ಜ್ಞಾನಿನಃ ಕರ್ಮಣೈವ= ಕರ್ಮಸಹಿತಾ ಏವ ಕರ್ಮ ಕುರ್ವಂತ ಏವ ಸಂಸಿದ್ಧಿಂ= ಸಂಪೂರ್ಣಮೋಕ್ಷಮಾಸ್ಥಿತಾಃ= ಪ್ರಾಪ್ತಾಃ । ಜ್ಞಾನಮಾತ್ರಾತ್ ಮುಕ್ತಿಸಿದ್ಧಾವಪಿ ತತ್ರಾನಂದಾತಿಶಯಾರ್ಥಂ ಕರ್ಮ ಕುರ್ವಂತೀತ್ಯರ್ಥಃ । ತೃತೀಯಾಯಾಃ ಕರಣಾರ್ಥತ್ವೇಽಪಿ ಕರ್ಮಣಾ ಕರಣೇನ ಸಂಸಿದ್ಧಿಂ= ಮೋಕ್ಷಮಾಪ್ತಾ ಇತ್ಯರ್ಥಃ। ಲಾಂಗಲೇನ ಜೀವಾಮ ಇತಿವತ್ ಜ್ಞಾನದ್ವಾರಕತ್ವಾಭಿಪ್ರಾಯಂ ಕರಣತ್ವಮಿತಿ । ಯದ್ವಾ ಸಂಸಿದ್ಧಿಂ= ಜ್ಞಾನಂ ಕರ್ಮಣಾ ಪ್ರಾಪ್ತಾ ಇತ್ಯರ್ಥಃ । ನ ಕೇವಲಂ ಜ್ಞಾನಿನಾಮಾಚಾರಾತ್ಕರ್ಮ ಕರ್ತವ್ಯಮ್ । ಕಿಂ ತ್ವೀಶ್ವರಪ್ರೀತಿದ್ವಾರಾ ಮುಕ್ತಿಹೇತುಲೋಕಸಂಗ್ರಹಾರ್ಥತ್ವಾಚ್ಚ ಕರ್ಮ ಕಾರ್ಯಮಿತ್ಯಾಹ - **ಲೋಕೇತಿ ॥** ಲೋಕಾನಾಮಜ್ಞಜನಾನಾಂ ಕರ್ಮಣಿ ಪ್ರವೃತ್ತಿರೂಪಂ ಸಂಗ್ರಹಮೇವಾಪಿ । ನ ಕೇವಲಂ ಜ್ಞಾನ್ಯಾಚಾರಮಿತ್ಯಪೇರರ್ಥಃ । ಏವಕಾರಸ್ತು ತಿಷ್ಠತು ತಾವತ್ಕರ್ಮಕರಣೇಽನ್ಯೋ ಹೇತುರಿತ್ಯರ್ಥಸೂಚಕಃ । ಸಂಪಶ್ಯನ್ ಕರ್ಮ ಕರ್ತುಮರ್ಹಸಿ । ಜನಸ್ಯ ಕರ್ಮಣಿ ಪ್ರವರ್ತನೇನ ಭಗವತ್ಪ್ರೀತಿಃ ತಥಾ ಚ ಮೋಕ್ಷೇ ಸುಖಾತಿಶಯಃ ಇತಿ ಜ್ಞೇಯಮ್ । ತದುಕ್ತಮ್ । 'ಅಜ್ಞಾನಾಂ ಜ್ಞಾನದಂ ಕರ್ಮ ಜ್ಞಾನಿನಾಂ ಲೋಕಸಂಗ್ರಹಾತ್ । ಅದ್ವೈವ ತುಷ್ಟಿದಂ ಮಹ್ಯಂ ಸಾ ಮುಕ್ತಾನಂದಪೂರ್ತಿದಾ' ಇತಿ ॥ 20 ॥

ಅನುವಾದ - ಜ್ಞಾನದಿಂದಲೇ ಮೋಕ್ಷಸಿದ್ಧಿ . ಹೀಗಿರುವಾಗ ಫಲೇಚ್ಛೆ ಇಲ್ಲದ ಕರ್ಮದಿಂದ ಮೋಕ್ಷ ಎಂದು ಹೇಗೆ ಹೇಳುವುದು ? ಎನ್ನುವ ಪ್ರಶ್ನೆಗೆ ಮುಕ್ತಿಯಲ್ಲಿ ಆನಂದ

ವೃದ್ಧಿಗಾಗಿ ವಿಹಿತ ಕರ್ಮಗಳನ್ನು ಅವಶ್ಯ ಮಾಡಬೇಕು ಎಂದು ಉತ್ತರ. ಈ ವಿಷಯದಲ್ಲಿ ಜ್ಞಾನಿಗಳ ಆಚರಣೆಯೇ ಪ್ರಮಾಣ ಎಂದು ಈ ಶ್ಲೋಕದಲ್ಲಿ ಹೇಳಲಾಗಿದೆ. **ಕರ್ಮಣಾ** ಎಂಬಲ್ಲಿ ತೃತೀಯಾ ವಿಭಕ್ತಿಯು 'ಸಹಿತ ' (1) ಎಂಬ ಅರ್ಥದಲ್ಲಿ ಇದೆ. **ಜನಕಾದಯಃ**= ಜನಕ, ಪ್ರಿಯವ್ರತನೇ ಮೊದಲಾದ ಜ್ಞಾನಿಗಳು **ಕರ್ಮಣೈವ**= ಕರ್ಮ ಸಹಿತರಾಗಿಯೇ ಅಂದರೆ ಕರ್ಮವನ್ನು ಮಾಡುವವರಾಗಿಯೇ , **ಸಂಸಿದ್ಧಿಂ**= ಸಂಪೂರ್ಣ ಮೋಕ್ಷವನ್ನು **ಆಸ್ಥಿತಾಃ**= ಪಡೆದಿದ್ದಾರೆ. ಜ್ಞಾನದಿಂದಲೆ ಮೋಕ್ಷ ಸಿದ್ಧಿಸುವುದಾದರೂ ಮೋಕ್ಷದಲ್ಲಿ ಆನಂದ ಅತಿಶಯಕ್ಕಾಗಿ ಕರ್ಮ ಮಾಡುತ್ತಾರೆ ಎಂದು ಭಾವ. ತೃತೀಯಾ ವಿಭಕ್ತಿಗೆ '**ಕರಣ**' ಎಂಬ ಅರ್ಥ ಇಟ್ಟುಕೊಂಡರೂ ಕೂಡ ಕರ್ಮದಿಂದಲೆ ಮೋಕ್ಷರೂಪ ಸಿದ್ಧಿಯನ್ನು ಪಡೆದಿದ್ದಾರೆ ಎಂದು ಅರ್ಥ. '**ಲಾಂಗಲೇನ ಜೀವಾಮಃ**' ಎಂಬ ಪ್ರಯೋಗವಿದೆ. ಇಲ್ಲಿ ಲಾಂಗಲ ಎಂದರೆ ನೇಗಿಲು. ಇದು ನಮ್ಮ ಜೀವನಕ್ಕೆ ಸಾಕ್ಷಾತ್ತಾಗಿ ಸಾಧನವಲ್ಲ. ಹೊರತು ನೇಗಿಲಿನಿಂದ ಉತ್ತು-ಬಿತ್ತಿ ಬೆಳೆ ಬೆಳೆದು ಬದುಕುವುದು. ಹಾಗೆಯೇ ಇಲ್ಲಿಯೂ ಕರ್ಮದಿಂದ ಜ್ಞಾನ, ಅದರ ಮೂಲಕ ಮೋಕ್ಷ. ಈ ಅಭಿಪ್ರಾಯದಿಂದ ಇಲ್ಲಿ ಕರ್ಮವು ಮೋಕ್ಷಕ್ಕೆ ಸಾಧನ ಎಂದು ಅರ್ಥ ಮಾಡಬಹುದು. ಅಥವಾ **ಸಂಸಿದ್ಧಿ** ಎಂದರೆ ಜ್ಞಾನ ಎಂದು ಅರ್ಥ. ಇದಕ್ಕೆ ಕರ್ಮವು ಸಾಧನವೆ ಆಗಿದೆ.

ಜ್ಞಾನಿಗಳು ಕರ್ಮವನ್ನು ಮಾಡುತ್ತಾರೆ ಎಂಬ ಕಾರಣದಿಂದ ಕರ್ಮವನ್ನು ಮಾಡಬೇಕು. ಇಷ್ಟೆ ಅಲ್ಲ ತಾನು ಕರ್ಮ ಮಾಡುವುದರಿಂದ ಅದನ್ನು ನೋಡಿ ಉಳಿದವರೂ ಕರ್ಮದಲ್ಲಿ ತೊಡಗುತ್ತಾರೆ. ಇದರಿಂದ ಭಗವಂತನ ಪ್ರೀತಿ - ಮೋಕ್ಷ . ಇದಕ್ಕಾಗಿ ಕರ್ಮ ಮಾಡಬೇಕು ಎಂದು '**ಲೋಕಸಂಗ್ರಹಂ**' ಎಂಬಲ್ಲಿ ಹೇಳಲಾಗಿದೆ. 'ಲೋಕ ಸಂಗ್ರಹ ' ಎಂದರೆ ಜನರಿಗೆ ಕರ್ಮದಲ್ಲಿ ಪ್ರವೃತ್ತಿ . ಕೇವಲ 'ಜ್ಞಾನಿಗಳ ಆಚಾರ ' ಮಾತ್ರ ಕರ್ಮ ಮಾಡಬೇಕು ಎಂಬ ವಿಷಯದಲ್ಲಿ ಪ್ರಮಾಣವಲ್ಲ. ಹೊರತು ಲೋಕಸಂಗ್ರಹವೂ ಪ್ರಮಾಣ ಎಂದು ಅಭಿಪ್ರಾಯ, 'ಅಪಿ' ಶಬ್ದದಿಂದ ಬರುತ್ತದೆ. ಬೇರೆ ಕಾರಣಗಳಿಂದಾಗಿ ಕರ್ಮ ಮಾಡುವುದು ನಂತರದ ವಿಚಾರ. ಲೋಕ ಸಂಗ್ರಹಕ್ಕಾಗಿಯಾದರೂ ಕರ್ಮ ಮಾಡಲೇ ಬೇಕು ಎನ್ನುವುದು ಏವ ಶಬ್ದದ ಭಾವ. ನೀನು ಕರ್ಮ ಮಾಡುವುದನ್ನು ನೋಡಿ ಉಳಿದ ಅಜ್ಞಜನರು ಕರ್ಮದಲ್ಲಿ ತೊಡಗುತ್ತಾರೆ ಇದರಿಂದಾಗಿ ಭಗವಂತನ ಪ್ರೀತಿ , ತನ್ಮೂಲಕ ನಿನಗೆ ಮೋಕ್ಷದಲ್ಲಿ ಅತಿಶಯಸುಖ ಎಂದು ಅಭಿಪ್ರಾಯ. ಇದನ್ನೆ 'ಕೃಷ್ಣ ಸಂಹಿತೆ 'ಯಲ್ಲಿ ಹೇಳಿದ್ದಾರೆ. '**ಅಜ್ಞಾನಾಂ**' ಇತ್ಯಾದಿಯಾಗಿ. ಅಂದರೆ ಅಜ್ಞಜನರು ಕರ್ಮ ಮಾಡುವುದರಿಂದ ಜ್ಞಾನ ಪ್ರಾಪ್ತಿಯಾಗುತ್ತದೆ. ಜ್ಞಾನಿಗಳಿಗೆ ಕರ್ಮವು ಲೋಕಸಂಗ್ರಹ ಮೂಲಕ ಭಗವಂತನ ಅತಿಶಯ ಪ್ರೀತಿಗೆ ಕಾರಣವಾಗುವ ಮೂಲಕ ಮುಕ್ತಿಯಲ್ಲಿ ಅತಿಶಯ ಆನಂದಕ್ಕೆ ಕಾರಣವಾಗುತ್ತದೆ ಎಂದು. ॥ 20 ॥

**ವಿವರಣೆ**– (1) ತೃತೀಯಾ ವಿಭಕ್ತಿಯು '**ಕರಣಾ**'ರ್ಥದಲ್ಲಿ ಸಾಮಾನ್ಯವಾಗಿ ಬರುತ್ತದೆ. '**ಬಾಣೇನ ಹತಃ**' ಎಂಬಲ್ಲಿ ಕೊಲ್ಲುವಿಕೆಗೆ ಬಾಣವು ಸಾಧನ. ಆದುದರಿಂದ ಇಲ್ಲಿ ತೃತೀಯಾ ಬಂದಿದೆ. ಹೀಗೆ ಇಲ್ಲಿಯೂ **ಕರ್ಮಣಾ** ಎಂದು ಕರಣಾರ್ಥದಲ್ಲಿ ತೃತೀಯಾ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಮುಕ್ತಿಗೆ ಕರ್ಮವು ಸಾಧನವಲ್ಲ. ಆದುದರಿಂದ '**ಸಹಯೋಗೇ ತೃತೀಯಾ**' ಎಂದಿದ್ದಾರೆ. ಕರಣಾರ್ಥತ್ವವನ್ನು ಇಟ್ಟುಕೊಂಡರೂ, ಹೇಗೆ ಯೋಜನೆ ಮಾಡ ಬಹುದು ಎನ್ನುವುದನ್ನೂ ಎರಡು ರೀತಿಯಿಂದ ತೋರಿಸಿದ್ದಾರೆ.

## ಸಾಮಾನ್ಯರು ಶ್ರೇಷ್ಠರನ್ನು ಅನುಸರಿಸುತ್ತಾರೆ

**ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ 21 ॥**

**ಅರ್ಥ** - ಶ್ರೇಷ್ಠರು ಯಾವ ಆಚರಣೆಯನ್ನು ಮಾಡುತ್ತಾರೋ ಅದನ್ನು ಉಳಿದವರೂ ಅನುಸರಿಸುತ್ತಾರೆ. ಯಾವುದನ್ನು ಪ್ರಮಾಣ ಎಂದು ತೋರಿಸುವರೋ ಅಜ್ಞರೂ ಅದನ್ನೇ ಪ್ರಮಾಣವೆಂದು ಸ್ವೀಕರಿಸುತ್ತಾರೆ.

**ಕಥಂ ಕರ್ಮಕರಣೇನ ಲೋಕಸಂಗ್ರಹ ಇತ್ಯತ ಆಹ- ಯದ್ಯದಿತಿ ॥ ಶ್ರೇಷ್ಠೋ= ಮಹಾತ್ಮಾ ಯತ್ಪ್ರಮಾಣಂ ಕುರುತೇ ಯದ್ವಾಕ್ಯಾದಿಕಂ ಪ್ರಮಾಣಂ ಸದಪಿ ಲೋಕೇ ಪ್ರಮಾಣತ್ವೇನಾನವಗತಂ ಪ್ರಮಾಣತಯಾ ಜ್ಞಾಪಯತೀತ್ಯರ್ಥಃ । ಯದ್ವಾ ಯತ್ಪ್ರಮಾಣಮಿತ್ಯೇಕಂ ಪದಂ ಬಹುವ್ರೀಹಿಃ । ಯತ್ಪ್ರಮಾಣಂ= ಲೌಕಿಕಂ ವೈದಿಕಂ ವಾ ಕರ್ಮ ಕುರುತೇ ತದೇವ ಲೋಕೋಽನುವರ್ತತೇ= ಅನುಸರತಿ ॥ 21 ॥**

**ಅನುವಾದ**- ಜ್ಞಾನಿಗಳು ಕರ್ಮ ಮಾಡುವುದರಿಂದ '**ಲೋಕಸಂಗ್ರಹ**'ವಾಗುವುದು ಹೇಗೆ ಎಂಬ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರಿಸಿದ್ದಾರೆ. **ಶ್ರೇಷ್ಠಃ**= ಮಹಾತ್ಮನು, **ಯತ್ ಪ್ರಮಾಣಂ ಕುರುತೇ**= ಯಾವ ವಾಕ್ಯ ಮೊದಲಾದವುಗಳು ಪ್ರಮಾಣವಾಗಿದ್ದರೂ, ಅವುಗಳು ಪ್ರಮಾಣವೆಂದು, ಈ ಮೊದಲು ತಿಳಿಯದಿದ್ದಾಗ, ಅವುಗಳನ್ನು ಪ್ರಮಾಣ ಎಂದು ಲೋಕಕ್ಕೆ ತಿಳಿಸುತ್ತಾನೋ, ಅಥವಾ '**ಯತ್ಪ್ರಮಾಣಂ**' ಎಂಬುದು ಒಂದೇ ಪದ. '**ಯತ್ ಪ್ರಮಾಣಂ ಯಸ್ಮಿನ್ ತತ್** ' ಎಂದು ಬಹುವ್ರೀಹಿ ಸಮಾಸ. ಯಾವುದನ್ನು ಪ್ರಮಾಣವನ್ನಾಗಿಟ್ಟುಕೊಂಡು ಲೌಕಿಕ ವೈದಿಕ ಕರ್ಮಗಳನ್ನು ಮಾಡುತ್ತಾನೋ, **ತದೇವ**= ಅದನ್ನೇ, **ಲೋಕಃ** = ಜನರು , **ಅನುವರ್ತತೇ** = ಅನುಸರಿಸುತ್ತಾರೆ.

## ಶ್ರೀ ಕೃಷ್ಣನ ಕರ್ಮಾಚರಣೆಯೂ ಲೋಕಶಿಕ್ಷಣಕ್ಕಾಗಿ

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ 22 ॥**

**ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥ 23 ॥**

**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್ ।**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥ 24 ॥**

ಅರ್ಥ - ಅರ್ಜುನನೇ, ನನಗೆ ಯಾವುದೆ ಕರ್ತವ್ಯವಿಲ್ಲ . ಏಕೆಂದರೆ ಈ ಹಿಂದೆ ಪಡೆಯದಿದ್ದದ್ದು , ಕರ್ಮದಿಂದ ಪಡೆಯಬಹುದಾದದ್ದು ಯಾವುದೂ ಇಲ್ಲ. ಆದರೂ ಕರ್ಮವನ್ನು ಮಾಡುತ್ತಲೆ ಇರುತ್ತೇನೆ. ॥ 22 ॥

ಒಂದು ವೇಳೆ ನಾನು ಆಲಸ್ಯರಹಿತನಾಗಿ ಕರ್ಮ ಮಾಡದಿದ್ದರೇ, ಆಗ ಎಲ್ಲಾ ಮನುಷ್ಯರೂ ನನ್ನ ಮಾರ್ಗವನ್ನು ಅನುಸರಿಸುತ್ತಾರೆ. ॥ 23 ॥

ನಾನು ಕರ್ಮ ಮಾಡಲಿಲ್ಲ ಎಂದು ಈ ಜನರೂ ಕರ್ಮ ಮಾಡದೇ ನರಕಾದಿ ಅನರ್ಥಗಳನ್ನು ಪಡೆಯುತ್ತಾರೆ. ಅಷ್ಟೆ ಅಲ್ಲದೆ ಕರ್ಮಲೋಪದಿಂದಾಗಿ ಬ್ರಾಹ್ಮಣ, ಕ್ಷತ್ರಿಯಾದಿವರ್ಣವ್ಯವಸ್ಥೆಯೂ ಇಲ್ಲದೆ ಈ ಸಾಂಕರ್ಯಕ್ಕೂ ನಾನೇ ಕಾರಣನಾಗುತ್ತೇನೆ. ಆ ಮೂಲಕ ಎಲ್ಲ ಜನರನ್ನು ಕೊಂದವನಾಗುತ್ತೇನೆ. ॥ 24 ॥

ಕಿಂಚ ಪ್ರಯೋಜನಮಾತ್ರಹೀನೇನಾಪಿ ಮಯಾ ಕೇವಲಾನುಗ್ರಹೇಣ ಲೋಕಸಂಗ್ರಹಾರ್ಥಂ ಕರ್ಮ ಕ್ರಿಯತೇ । ಮುಕ್ತಾವಾನಂದವೃದ್ಧಿ-ಪ್ರಯೋಜನವತಾ ಜ್ಞಾನಿನಾ ತತ್ಕರ್ತವ್ಯಮಿತಿ ಕಿಂ ವಾಚ್ಯಮಿತಿ ಭಾವೇನಾಹ- **ನ ಮ** ಇತ್ಯಾದಿ ತ್ರಿಭಿಃ ॥ ಹೇ ಪಾರ್ಥ ! ಕಿಂಚನ ಕರ್ತವ್ಯಂ ನಾಸ್ತಿ । ಯತಸ್ತ್ರಿಷು ಲೋಕೇಷು ಪ್ರಾಗಪ್ರಾಪ್ತಂ ಪಶ್ಚಾತ್ ಪ್ರಾಪ್ತವ್ಯಂ ನಾಸ್ತಿ । ತಥಾಽಪಿ **ಕರ್ಮಣಿ ವರ್ತ ಏವ** = ಕರ್ಮ ಕರೋಮ್ಯೇವ ॥ 22 ॥

**ಅನುವಾದ** - ಯಾವುದೇ ರೀತಿಯ ಪ್ರಯೋಜನವಿಲ್ಲದಿದ್ದರೂ ನಾನು ಕೇವಲ ಜನರ ಅನುಗ್ರಹಕ್ಕಾಗಿ ಅವರನ್ನು ಕರ್ಮದಲ್ಲಿ ತೊಡಗಿಸುವುದಕ್ಕಾಗಿ ಕರ್ಮ ಮಾಡುತ್ತೇನೆ. ಹೀಗಿರುವಾಗ ಮೋಕ್ಷದಲ್ಲಿ ಆನಂದಾತಿಶಯರೂಪವಾದ ಪ್ರಯೋಜನವುಳ್ಳ ಜ್ಞಾನಿಗಳು

ಕರ್ಮವನ್ನು ಮಾಡಬೇಕು ಎಂದು ಸಹಜವಾಗಿಯೇ ಸಿದ್ಧವಾಗುತ್ತದೆ ಎಂದು ಶ್ರೀಕೃಷ್ಣ ಈ ಮೂರು ಶ್ಲೋಕಗಳಲ್ಲಿ ಹೇಳುತ್ತಿದ್ದಾನೆ.

**ಹೇ ಪಾರ್ಥ**= ಎಲೈ ಅರ್ಜುನನೇ ! **ಮೇ** = ನನಗೆ, **ಕಿಂಚನ ಕರ್ತವ್ಯಂ**= ಮಾಡಬೇಕಾದ್ದು ಯಾವುದೂ, **ನಾಸ್ತಿ** = ಇಲ್ಲ, ಏಕೆಂದರೆ, **ತ್ರಿಷು ಲೋಕೇಷು**= ಮೂರು ಲೋಕಗಳಲ್ಲಿ , **ಅನವಾಪ್ತಂ**= ಹಿಂದೆ ಪಡೆಯದೇ ಇದ್ದದ್ದು , **ಅವಾಪ್ತವ್ಯಂ**=ಮುಂದೆ ಪಡೆಯಬೇಕಾದ್ದು , **ನಾಸ್ತಿ**= ಇರುವುದಿಲ್ಲ. ಹಾಗಿದ್ದರೂ, **ಕರ್ಮಣಿ- ವರ್ತೇ**= ಕರ್ಮವನ್ನು ಮಾಡಿಯೇ ಮಾಡುತ್ತೇನೆ. ॥ 22 ॥

**ಯದಿ ಹ್ಯಹಂ ಜಾತು= ಕದಾಚಿದತಂದ್ರಿತೋಽನಲಸಃ ಕರ್ಮಣಿ ನ ವರ್ತೇಯಂ= ನ ಕರ್ಮ ಕುರ್ಯಾಂ ತರ್ಹಿ ಮಮ ವರ್ತ್ಮ= ಮಾರ್ಗಂ ಕರ್ಮಾಕರಣರೂಪಂ ಮನುಷ್ಯಾಃ ಸರ್ವಶಃ= ಸರ್ವೇಽಪಿ ಅನುವರ್ತಂತೇ ಅನುಸರೇಯುಃ । ಮದ್ ದೃಷ್ಟಾಂತೇನ ಕರ್ಮ ನ ಕುರ್ಯುರಿತ್ಯರ್ಥಃ ॥ 23॥**

**ಅನುವಾದ- ಯದಿ**= ಒಂದು ವೇಳೆ **ಅಹಂ** = ನಾನು, **ಜಾತು** = ಒಂದೊಮ್ಮೆ, **ಅತಂದ್ರಿತಃ**= ಆಲಸ್ಯವಿಲ್ಲದವನಾಗಿ **ಕರ್ಮಣಿ ನ ವರ್ತೇಯಮ್** = ಕರ್ಮ ಮಾಡದವನಾದರೆ, ಆಗ, **ಮಮ**= ನನ್ನ , ವರ್ತ್ಮ = ಮಾರ್ಗವನ್ನು ಅಂದರೆ ಕರ್ಮ ಮಾಡದಿರುವಿಕೆಯನ್ನು **ಸರ್ವಶಃ** = ಎಲ್ಲಾ, **ಮನುಷ್ಯಾಃ**= ಮನುಷ್ಯರು, **ಅನುವರ್ತಂತೇ**= ಅನುಸರಿಸುತ್ತಾರೆ. ನನ್ನನ್ನು ದೃಷ್ಟಾಂತವನ್ನಾಗಿ ಇಟ್ಟುಕೊಂಡು ಕರ್ಮಮಾಡದೆ ಇರಬಹುದು ಎಂದು ಭಾವ. ॥ 23 ॥

**ತತಃ ಕೋ ದೋಷ ಇತ್ಯತ ಉಚ್ಯತೇ । ಅಹಂ ಚೇತ್ಕರ್ಮ ನ ಕುರ್ಯಾಂ ತದಾ ಇಮೇ ಲೋಕಾಃ ಉತ್ಸೀದೇಯುಃ = ನಶ್ಯೇಯುಃ ಕರ್ಮಲೋಪೇನ ನರಕಂ ಪ್ರಾಪ್ನುಯುಃ । ಕಿಂಚ ಕರ್ಮಲೋಪೇ ಸತಿ ಬ್ರಹ್ಮಕ್ಷತ್ರಾದಿವರ್ಣವಿವೇಕೋ ನ ಸ್ಯಾತ್ । ಅತೋ ವರ್ಣಸಂಕರಸ್ಯ ಚ ಕರ್ತಾ ಸ್ಯಾಮ್= ಭವೇಯಮ್ । ಏವಮಹಮೇವ ಪ್ರಜಾಃ ಉಪಹನ್ಯಾಂ = ಹತವಾನ್ ಭವೇಯಮ್ ॥ 24 ॥**

**ಅನುವಾದ** - ಜನರು ಕರ್ಮ ಮಾಡದಿರುವುದರಿಂದ ಏನು ದೋಷ ಎಂದು ಇಲ್ಲಿ ಹೇಳುತ್ತಾನೆ. '**ಅಹಂ ಚೇತ್ ಕರ್ಮ ನ ಕುರ್ಯಾಂ**= ನಾನು ಕರ್ಮ ಮಾಡದಿದ್ದರೆ, ಆಗ **ಇಮೇ ಲೋಕಾಃ**= ಈ ಎಲ್ಲಾ ಜನರು **ಉತ್ಸೀದೇಯುಃ**= ನಾಶ ಹೊಂದಿಯಾರು. ಕರ್ಮ ಲೋಪದಿಂದಾಗಿ ನರಕವನ್ನು ಪಡೆಯಬಹುದು. ಅಷ್ಟೆ ಅಲ್ಲ ಕರ್ಮಲೋಪದಿಂದಾಗಿ ಬ್ರಾಹ್ಮಣ ಕ್ಷತ್ರಿಯ ಮೊದಲಾದ ವರ್ಣ ವ್ಯವಸ್ಥೆ ಇಲ್ಲದಂತಾದೀತು. ಆದುದರಿಂದ ಈ **ಸಂಕರಸ್ಯ**=

ವರ್ಣಸಂಕರಕ್ಕೆ, **ಕರ್ತಾ ಸ್ಯಾಮ್** = ಕಾರಣನಾದೇನು. ಹೀಗೆಯೇ **ಅಹಮೇವ** = ನಾನೇ, **ಇಮಾಃ ಪ್ರಜಾಃ** = ಈ ಜನರನ್ನು **ಉಪಹನ್ಯಾಂ**= ಕೊಂದವನು ಆದೇನು ॥ 24 ॥

## ಫಲದ ಆಸೆ ತೊರೆದು ಕರ್ಮದಲ್ಲಿ ಸಕ್ತನಾಗು

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।**
**ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ॥ 25 ॥**

**ಅರ್ಥ**- ಅಜ್ಞ ಜನರು ಕರ್ಮಫಲದಲ್ಲಿ ಇಚ್ಛೆಯುಳ್ಳವರಾಗಿ ಹೇಗೆ ಕರ್ಮವನ್ನು ಮಾಡುತ್ತಾರೋ ಹಾಗೆ ಜ್ಞಾನಿಯಾದವನು ಫಲದ ಬಯಕೆ ಇಲ್ಲದವನಾಗಿ ಕೇವಲ ಲೋಕಸಂಗ್ರಹಕ್ಕಾಗಿ ಕರ್ಮ ಮಾಡಬೇಕು.

**ನನು ಅಜ್ಞವದಾಗ್ರಹೇಣ ಜ್ಞಾನಿನಾಽಪಿ ಕರ್ಮ ಕಾರ್ಯಂ ಚೇದ್ ವಿದ್ವದವಿದ್ವತ್ಕರ್ಮಣೋರವಿಶೇಷಪ್ರಸಂಗ ಇತ್ಯತ ಆಹ- ಸಕ್ತಾ ಇತಿ ॥ ಹೇ ಭಾರತ ! ಅವಿದ್ವಾಂಸೋಽಜ್ಞಾಃ ಕರ್ಮಣಿ ಸಕ್ತಾಃ= ಅಭಿನಿವಿಷ್ಟಾಃ ಫಲೇಚ್ಛಾವಂತಃ ಸಂತೋ ಯಥಾ ಕರ್ಮ ಕುರ್ವಂತಿ ತಥಾ ವಿದ್ವಾನ್ ಜ್ಞಾನ್ಯಪಿ ಅಸಕ್ತಃ= ಫಲೇಚ್ಛಾಹೀನಃ ಸನ್ ಲೋಕಸಂಗ್ರಹಂ ಚಿಕೀರ್ಷುಃ ಕರ್ಮ ಕುರ್ಯಾದಿ-ತ್ಯರ್ಥಃ । ಸಕ್ತ್ಯಸಕ್ತಿಪೂರ್ವಕತ್ವೇನ ಕರ್ಮಾನುಷ್ಠಾನಂ ತಯೋರ್ವಿಶೇಷ ಇತಿ ಭಾವಃ ॥ 25 ॥**

**ಅನುವಾದ** - ಅಜ್ಞ ಜನರಂತೆ ಜ್ಞಾನಿಯೂ ಕರ್ಮ ಮಾಡಲೇ ಬೇಕು ಎಂದಾದರೆ, ವಿದ್ವಾಂಸರ ಮತ್ತು ಅಜ್ಞರ ಕರ್ಮಗಳಲ್ಲಿ ಯಾವುದೇ ವ್ಯತ್ಯಾಸ ಇರುವುದಿಲ್ಲ ಎಂಬ ಶಂಕೆಗೆ ಇಲ್ಲಿ ಉತ್ತರಿಸಲಾಗಿದೆ.

**ಭಾರತ** = ಅರ್ಜುನನೇ !, **ಅವಿದ್ವಾಂಸಃ** = ಅಜ್ಞಾನಿಗಳು, **ಕರ್ಮಣಿ** = ಕರ್ಮದಲ್ಲಿ, **ಸಕ್ತಾಃ**= ಅಭಿನಿವೇಶ ಉಳ್ಳವರಾಗಿ ಅಂದರೆ ಫಲದ ಬಯಕೆಯುಳ್ಳವರಾಗಿ **ಯಥಾ ಕರ್ಮ ಕುರ್ವಂತಿ**= ಹೇಗೆ ಕರ್ಮ ಮಾಡುತ್ತಾರೋ ಹಾಗೆ , **ವಿದ್ವಾನ್ ಅಪಿ** = ಜ್ಞಾನಿಯೂ ಕೂಡ, **ಅಸಕ್ತಃ**= ಫಲದ ಬಯಕೆ ಇಲ್ಲದವನಾಗಿ , **ಲೋಕಸಂಗ್ರಹಂ ಚಿಕೀರ್ಷುಃ**= ಲೋಕ ಸಂಗ್ರಹವನ್ನು ಮಾಡುವವನಾಗಿ, **ಕರ್ಮ ಕುರ್ಯಾತ್** = ಕರ್ಮವನ್ನು ಮಾಡಬೇಕು. ಫಲದ ಬಯಕೆ ಇರುವಿಕೆ, ಇಲ್ಲದಿರುವಿಕೆ ಇವುಗಳೆ, ಜ್ಞಾನಿ ಅಜ್ಞಾನಿಗಳ ಕರ್ಮದಲ್ಲಿರುವ ವ್ಯತ್ಯಾಸ ಎಂದು ಉತ್ತರದ ಅಭಿಪ್ರಾಯ . ॥ 25 ॥

## ಜ್ಞಾನಿಗಳ ಅನುಷ್ಠಾನ ; ಅಜ್ಞಾನಿಗೆ ಶಿಕ್ಷಣ

**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।**
**ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ಯುಕ್ತಃ ಸಮಾಚರನ್ ॥ 26 ॥**

**ಅರ್ಥ-** ಅಜ್ಞಾನಿಗಳು ಕರ್ಮದಲ್ಲಿ ಆಸಕ್ತರಾಗಿರುತ್ತಾರೆ. ಅವರ ಬುದ್ಧಿಯಲ್ಲಿ ಚಂಚಲತೆಯನ್ನು ಉಂಟು ಮಾಡಬಾರದು. ಜ್ಞಾನಿಯಾದವನು ಪರಮಾತ್ಮನಲ್ಲಿ ಮನಸ್ಸಿಟ್ಟು, ಕರ್ಮಗಳನ್ನು ಭಗವಂತನ ಪೂಜೆ ಎಂದು ಮಾಡುತ್ತಾ ಅಜ್ಞರನ್ನು ಕರ್ಮದಲ್ಲಿ ತೊಡಗಿಸಬೇಕು.

**ಅಜ್ಞಾನಾಂ ಕರ್ಮಣಿ ಸಕ್ತಿಂ ಜನಯಿತುಮಪಿ ಜ್ಞಾನಿನಾ ಕರ್ಮ ಕಾರ್ಯ-ಮಿತ್ಯಾಹ- ನ ಬುದ್ಧೀತಿ ॥ ಅಜ್ಞಾನಾಂ= ಭಗವತ್ಸ್ವರೂಪಮಜಾನತಾಂ ಕರ್ಮ-ಸಂಗಿನಾಂ= ಕರ್ಮಾಭಿನಿವೇಶಿನಾಂ ಬುದ್ಧೇರ್ಭೇದಂ= ವಿಪರ್ಯಾಸಂ ನ ಜನಯೇತ್= ಕರ್ಮಾನುಷ್ಠಾನಾದ್ ಬುದ್ಧೇಶ್ಚಾಲನಂ ನ ಕುರ್ಯಾತ್ । ವಿದ್ವಾನ್ ಯುಕ್ತೋ= ಭಗವತಿ ಮನೋಯೋಗವಾನ್ ತತ್ಪೂಜಾತ್ವೇನೇತಿ ಯಾವತ್, ಕರ್ಮ ಸಮಾಚರನ್ ಸರ್ವಕರ್ಮಾಣಿ ಜೋಷಯೇತ್= ಸೇವಯೇತ್ । ಅಜ್ಞಾನಿತಿ ಶೇಷಃ ॥ 26 ॥**

**ಅನುವಾದ-** ಅಜ್ಞಜನರಿಗೆ ಕರ್ಮದಲ್ಲಿ ಆಸಕ್ತಿಯನ್ನು ಉಂಟು ಮಾಡಲು ಕರ್ಮಾಚರಣೆಯನ್ನು ಜ್ಞಾನಿಗಳು ಮಾಡಬೇಕು ಎಂದು ಈ ಶ್ಲೋಕದಲ್ಲಿ ಹೇಳಲಾಗಿದೆ. **ಅಜ್ಞಾನಾಂ** = ಭಗವಂತನ ಸ್ವರೂಪವನ್ನು ತಿಳಿಯದವರಿಗೆ **ಕರ್ಮಸಂಗಿನಾಂ** = ಕರ್ಮದಲ್ಲಿ ಆಸಕ್ತರಾದವರಿಗೆ **ಬುದ್ಧಿಭೇದಂ** = ಬುದ್ಧಿಯಲ್ಲಿ ಚಂಚಲತೆಯನ್ನು , **ನ ಜನಯೇತ್** = ಹುಟ್ಟಿಸಬಾರದು. ಕರ್ಮಾನುಷ್ಠಾನದಿಂದ ವಿಚಲಿತಗೊಳಿಸಬಾರದು. **ವಿದ್ವಾನ್** = ಜ್ಞಾನಿಯು, **ಯುಕ್ತಃ** = ಭಗವಂತನಲ್ಲಿ ಮನಸ್ಸಿಟ್ಟವನಾಗಿ, ಅಂದರೆ ಭಗವತ್ಪೂಜಾರೂಪವಾಗಿ **ಕರ್ಮ ಸಮಾಚರನ್** = ಕರ್ಮ ಮಾಡುತ್ತಾ (ಅಜ್ಞರು) **ಸರ್ವಕರ್ಮಾಣಿ** = ಎಲ್ಲಾ ಕರ್ಮಗಳನ್ನು , **ಜೋಷಯೇತ್** = ಸೇವಿಸುವಂತೆ ಮಾಡಬೇಕು. ॥ 26 ॥

## ಜ್ಞಾನಿ-ಅಜ್ಞಾನಿಗಳ ಕರ್ಮ ವ್ಯತ್ಯಾಸದ ವಿವರಣೆ

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಽಹಮಿತಿ ಮನ್ಯತೇ ॥ 27 ॥**

**ಅರ್ಥ -** ಪ್ರಕೃತಿಯ ಗುಣಗಳಿಂದ ಆಗುವ ಕರ್ಮಗಳನ್ನೆಲ್ಲ ಅಹಂಕಾರದಿಂದ ಮೋಹಗೊಂಡವನಾಗಿ ನಾನೇ ಮಾಡಿದ್ದು ಎಂದು ಅಜ್ಞಾನಿಗಳು ತಿಳಿಯುತ್ತಾರೆ.

**ಜ್ಞಾನ್ಯಜ್ಞಾನಿನೋಃ ಸಕ್ತಾ ಇತ್ಯಾದಿಶ್ಲೋಕದ್ವಯೋಕ್ತಂ ಕರ್ಮಾನುಷ್ಠಾನ-ವೈಲಕ್ಷಣ್ಯಂ ಪ್ರಪಂಚಯತಿ- ಪ್ರಕೃತೇರಿತ್ಯಾದಿ ಶ್ಲೋಕತ್ರಯೇಣ ॥ ಅತ್ರ ಪ್ರಕೃತಿ-ಶಬ್ದೇನ ಜೀವಸ್ವಭಾವೇಶ್ವರಜಡಪ್ರಕೃತಯೋ ಗ್ರಾಹ್ಯಾಃ । ಪ್ರಕೃತೇಃ= ಪ್ರಕೃಷ್ಟ-ಕೃತಿಮತ್ತ್ವಹೇತುನಾ ಪ್ರಕೃತಿಪದವಾಚ್ಯಸ್ಯ ಹರೇಃ, ಗುಣೈರಿಚ್ಛಾಜ್ಞಾನಪ್ರಯತ್ನಾದಿ-ರೂಪಗುಣೈರ್ಧರ್ಮೈಃ ಸ್ವತಂತ್ರೈಃ । ತಥಾ ಪ್ರಕೃತೇಃ= ಉತ್ತಮಮಧ್ಯಮಾಧಮ-ರೂಪಜೀವರಾಶಿಸ್ವಭಾವಸ್ಯ, ಗುಣೈರನುಗುಣೈಃ ತತ್ತ್ವಜ್ಞಾನ-ಮಿಶ್ರಜ್ಞಾನ-ಮಿಥ್ಯಾಜ್ಞಾನಾದಿರೂಪಧರ್ಮೈರೀಶಾಧೀನೈಃ । ತಥಾ ಪ್ರಕೃತೇಃ= ಜಡಪ್ರಕೃತೇಃ ಸಂಬಂಧಿಭಿಃ ಗುಣೈಸ್ತತ್ಕಾರ್ಯಭೂತೈಃ ಸತ್ತ್ವರಜಸ್ತಮೋಗುಣೈಃ ಪ್ರಕೃತೇರ್ವಿಕಾರ-ಭೂತೈರ್ದೇಹೇಂದ್ರಿಯಾಂತಃಕರಣರೂಪಗುಣೈಃ ಕ್ರಿಯಮಾಣಾನಿ ಕರ್ಮಾಣಿ= ಸಾಧುಕರ್ಮಮಿಶ್ರಕರ್ಮಾಸಾಧುಕರ್ಮಾಣಿ ಪ್ರತಿ ಅಹಂಕಾರವಿಮೂಢಾತ್ಮಾ ಸನ್ ಕರ್ತಾಽಹಂ ಸ್ವತಂತ್ರಕರ್ತಾಽಹಮಿತಿ ಮನ್ಯತೇ । ಈಶ್ವರಃ ಸ್ವತಂತ್ರಕರ್ತಾ ಸನ್ ಸ್ವಜ್ಞಾನೇಚ್ಛಾದಿನಾ ಸ್ವಾಧೀನಕರ್ತ್ರಾ ತ್ರಿವಿಧಜೀವಸ್ವಭಾವಮನುಸೃತ್ಯ ಪ್ರಕೃತಿವಿಕಾರಜೀವಕರಣೈಃ ಪ್ರಕೃತಿಕಾರ್ಯಸತ್ತ್ವಾದಿಗುಣರೂಪೋಪಾದಾನ-ಕಾರಣೇನ ಕರ್ಮ ಕಾರಯತಿ । ತತ್ಕ್ರಿಯಮಾಣಕರ್ಮಣಾಮಹಮೇವ ಸ್ವತಂತ್ರಕರ್ತೇತ್ಯಾತ್ಮಾನಂ ಅಜ್ಞೋ ಜನೋ ಮನ್ಯತ ಇತ್ಯರ್ಥಃ ॥ 27 ॥**

**ಅನುವಾದ-** ಜ್ಞಾನಿ ಮತ್ತು ಅಜ್ಞಾನಿಗಳ ಕರ್ಮದಲ್ಲಿರುವ ವ್ಯತ್ಯಾಸವನ್ನು **'ಸಕ್ತಾಃ ಕರ್ಮಣಿ'** ಎಂಬ ಶ್ಲೋಕದಲ್ಲಿ ನಿರೂಪಿಸಲಾಗಿದೆ. ಅದನ್ನೇ ವಿಸ್ತೃತವಾಗಿ ಇಲ್ಲಿ ಹೇಳಲಾಗುತ್ತಿದೆ. ಇಲ್ಲಿ ಪ್ರಕೃತಿ ಶಬ್ದದಿಂದ ಜೀವಸ್ವಭಾವ , ಈಶ್ವರ ಮತ್ತು ಜಡ ಪ್ರಕೃತಿಯನ್ನು ಇಟ್ಟುಕೊಳ್ಳಬೇಕು. ಪ್ರಕೃಷ್ಟವಾದ ಅಂದರೆ ಉತ್ತಮವಾದ ಕೃತಿಯುಳ್ಳವನು. ಆದ್ದರಿಂದ ಪ್ರಕೃತಿ ಎಂದರೆ ಪರಮಾತ್ಮ . ಅವನ ಗುಣಗಳು ಅಂದರೆ ಇಚ್ಛೆ , ಜ್ಞಾನ ಮತ್ತು ಪ್ರಯತ್ನ ಮೊದಲಾದವುಗಳು, ಕರ್ಮಕ್ಕೆ ಸ್ವತಂತ್ರ ಕಾರಣಗಳು . ಹಾಗೆಯೇ ಪ್ರಕೃತಿ ಎಂದರೆ ಸ್ವಭಾವ. ಉತ್ತಮ ಮಧ್ಯಮ ಅಧಮರೂಪವಾದ ಜೀವಸ್ವಭಾವ. ಇವುಗಳಿಗೆ ಅನುಗುಣವಾದ ಧರ್ಮ-ಗಳು – ತತ್ತ್ವಜ್ಞಾನ , ಮಿಶ್ರಜ್ಞಾನ ಮತ್ತು ಮಿಥ್ಯಾಜ್ಞಾನ. ಇವುಗಳು ಭಗವಂತನ ಅಧೀನ-ವಾದವುಗಳಾಗಿ ಸರ್ವಕಾರ್ಯಗಳಿಗೆ ಕಾರಣವಾಗುತ್ತವೆ. ಜಡಪ್ರಕೃತಿಗೆ ಸಂಬಂಧಿಸಿದ ಗುಣಗಳು ಅಂದರೆ ಜಡಪ್ರಕೃತಿಯ ಕಾರ್ಯವಾದ ಸತ್ತ್ವ- ರಜಸ್ಸು – ತಮಸ್ಸು ಎಂಬ ಗುಣಗಳು ಮತ್ತು ಪ್ರಕೃತಿಯ ವಿಕಾರಗಳಾದ ದೇಹ. ಇಂದ್ರಿಯ ಅಂತಃಕರಣಗಳು ಭಗವಂತನಿಂದ ಪ್ರೇರಿತವಾಗಿ ಕಾರಣಗಳಾಗುತ್ತವೆ. ಈ ಪ್ರಕೃತಿಯ ಗುಣಗಳಿಂದ **ಕ್ರಿಯಮಾಣಾನಿ** = ಮಾಡಲ್ಪಡುವ **ಕರ್ಮಾಣಿ** = ಸಾಧು- ಮಿಶ್ರ – ಮತ್ತು ಅಧಮ ಕರ್ಮಗಳನ್ನು ಕುರಿತು

**ಅಹಂಕಾರವಿಮೂಢಾತ್ಮಾ ಸನ್**= ಅಹಂಕಾರದಿಂದ ಮೋಹಕ್ಕೊಳಗಾದವನಾಗಿ **ಕರ್ತಾ ಅಹಮಿತಿ ಮನ್ಯತೇ** = ನಾನೇ ಮಾಡಿದವ ಎಂದು ತಿಳಿಯುತ್ತಾನೆ.

ಭಗವಂತನು ಎಲ್ಲಾ ಕರ್ಮಗಳಲ್ಲೂ ಸ್ವತಂತ್ರಕರ್ತೃ. ಅವನ ಅಧೀನರಾದ ಜೀವರಿಂದ ಅವರವರ ಸ್ವಭಾವಕ್ಕೆ ಅನುಗುಣವಾಗಿ ಕರ್ಮವನ್ನು ಮಾಡಿಸುತ್ತಾನೆ. ಇದಕ್ಕೆ ಮೂಲ ಕಾರಣ (ಉಪಾದಾನ) ಪ್ರಕೃತಿಯ ಕಾರ್ಯವಾದ ಸತ್ವಾದಿಗುಣಗಳು , ಹಾಗು ಸಾಧನ, ಜೀವರ ಇಂದ್ರಿಯಾಂತಃಕರಣಾದಿಗಳು. ಇಂತಹ ಕರ್ಮಗಳನ್ನು 'ನಾನೇ ಸ್ವತಂತ್ರನಾಗಿ ಮಾಡಿದೆ' ಎಂದು ಅಜ್ಞಾನಿಗಳು ತಿಳಿಯುತ್ತಾರೆ ಎಂದು ಅರ್ಥ.॥ 27 ॥

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥ 28 ॥**

**ಅರ್ಥ**- ಗುಣವಿಭಾಗ ಮತ್ತು ಕರ್ಮವಿಭಾಗ ಇವುಗಳ ತತ್ತ್ವವನ್ನು ಅರಿತ ಜ್ಞಾನಿಯು, ಭಗವಂತನ ಇಚ್ಛೆಗೆ ಅನುಸಾರಿಯಾಗಿ ಇಂದ್ರಿಯಗಳು ಶಬ್ದಾದಿ ವಿಷಯಪದಾರ್ಥಗಳಲ್ಲಿ ಆಸಕ್ತವಾಗುತ್ತವೆ ಎಂದು ತಿಳಿದು , ಸಂಸಾರದಲ್ಲಿ ಮುಳುಗುವುದಿಲ್ಲ.

**ಏವಮವಿದ್ವಾನ್ ಕರೋತಿ ಚೇತ್ ವಿದ್ವಾನ್ ಕಥಮಿತ್ಯತ ಆಹ- ತತ್ತ್ವವಿದಿತಿ ॥ ಗುಣಕರ್ಮವಿಭಾಗಯೋಃ ಗುಣಾನಾಮಿಚ್ಛಾದಿಭಗವದ್ಗುಣಾನಾಂ ಸತ್ತ್ವಾದಿಪ್ರಕೃತಿಗುಣಾನಾಂ ಪ್ರಕೃತಿವಿಕಾರತಯಾ ಪ್ರಕೃತ್ಯುಪಸರ್ಜನಭೂತಚಕ್ಷು-ರಾದೀಂದ್ರಿಯಶರೀರಮನಸಾಂ ಚಾನ್ಯೋನ್ಯಮುಕ್ತವಿಧಯಾ ವಿಭಾಗಸ್ಯ, ತಥಾ ಕರ್ಮ ಚ ಸ್ವತಂತ್ರಭಗವತ್ಕರ್ತೃಕಂ ತದಾಯತ್ತಜೀವಕರ್ತೃಕಂ ವಿಕಾರರೂಪ-ಪ್ರಕೃತಿಕರ್ತೃಕಂ ಚೇತಿ ಕರ್ಮವಿಭಾಗಸ್ಯ ತತ್ತ್ವವಿತ್ತು ತತ್ತ್ವಜ್ಞಾನೀ ತು ಗುಣಾ ಭಗವದಿಚ್ಛಾದಯಃ ಗುಣೇಷು ಜೀವಸ್ವಭಾವಕರ್ಮಾದಿಷು ಪ್ರೇರಕತ್ವೇನ ವರ್ತಂತೇ । ಭಗವದಿಚ್ಛಾದ್ಯನುಸಾರೇಣ ಚ ಗುಣಾ ಇಂದ್ರಿಯಾಣಿ ಗುಣೇಷು ಶಬ್ದಾದಿ ವಿಷಯೇಷು ವರ್ತಂತೇ । ಅತೋ ಜೀವಸ್ಯ ನ ಕ್ವಾಪಿ ಸ್ವಾತಂತ್ರ್ಯಮಿತಿ ಮತ್ವಾ ನ ಸಜ್ಜತೇ । ಸ್ವಾತ್ಮನಃ ಕರ್ತೃತ್ವಾಭಿಮಾನೇನ ಸಂಸಾರಮಗ್ನೋ ನ ಭವತೀತ್ಯರ್ಥಃ ॥ 28 ॥**

**ಅನುವಾದ** – ಅಜ್ಞಾನಿಗಳು ಹಿಂದೆ ಹೇಳಿದಂತೆ ಸ್ವತಂತ್ರರೆಂಬ ಭ್ರಮೆಗೆ ಒಳಗಾದವರಾದರೆ ವಿದ್ವಾಂಸರು ಹೇಗಿರುತ್ತಾರೆ ಎಂದು ಈ ಶ್ಲೋಕದಲ್ಲಿ ಹೇಳಿದ್ದಾರೆ. **ಗುಣ ಕರ್ಮವಿಭಾಗಯೋಃ** = ಗುಣ ವಿಭಾಗ ಮತ್ತು ಕರ್ಮ ವಿಭಾಗಗಳ, ಗುಣ ಎಂದರೆ ಹಿಂದೆ ಹೇಳಿದಂತೆ ಭಗವಂತನ ಇಚ್ಛೆಮೊದಲಾದ ಗುಣಗಳು, ಸತ್ವಾದಿ ಪ್ರಕೃತಿಯ ಗುಣಗಳು ಮತ್ತು

ಗುಣ ಎಂದರೆ (ಅಪ್ರಧಾನ) ಉಪಸರ್ಜನ. ಪ್ರಕೃತಿಯ ಪರಿಣಾಮರೂಪವಾದ ಚಕ್ಷುಷ್ ಮೊದಲಾದ ಇಂದ್ರಿಯಗಳು ಶರೀರ ಮನಸ್ಸು ಇವುಗಳು ಪ್ರಕೃತಿಗೆ ಉಪಸರ್ಜನವಾದ್ದರಿಂದ ಗುಣ. ಈ ಎಲ್ಲ ಗುಣಗಳ ವಿಭಾಗವನ್ನು ಅವುಗಳ ಸ್ವರೂಪ ಮತ್ತು ಕರ್ಮದಲ್ಲಿ ಅವುಗಳ ಪಾತ್ರವನ್ನು , ಹಾಗೆಯೇ ಕರ್ಮ ವಿಭಾಗವನ್ನು ಅಂದರೆ ಸ್ವತಂತ್ರನಾದ ಭಗವಂತನೆ ಎಲ್ಲಾ ಕರ್ಮಗಳಿಗೆ ಕರ್ತೃ. ಅವನ ಅಧೀನನಾದ ಜೀವನು ಪರಾಧೀನ ಕರ್ತೃ. ಮತ್ತು ವಿಕಾರರೂಪವಾದ ಪ್ರಕೃತಿಯು ಭಗವಂತನಿಂದ ಪ್ರೇರಿತವಾಗಿ ಕರ್ತೃ ಎಂಬ ವಿಭಾಗಗಳ **ತತ್ತ್ವವಿತ್ ತು** = ರಹಸ್ಯವನ್ನು ತಿಳಿದ ವಿದ್ವಾಂಸನು, **ಗುಣಾಃ** = ಭಗವದಿಚ್ಛಾದಿಗುಣಗಳು **ಗುಣೇಷು** = ಜೀವಸ್ವಭಾವ, ಕರ್ಮ ಇವುಗಳಲ್ಲಿ ಪ್ರೇರಕವಾಗಿ **ವರ್ತಂತೇ** = ಇರುತ್ತವೆ. **ಗುಣಾಃ**= ಇಂದ್ರಿಯಾದಿಗಳು ಭಗವಂತನ ಇಚ್ಛೆ, ಜೀವಸ್ವಭಾವ ಇವುಗಳಿಗೆ ಅನುಸಾರಿಯಾಗಿ, **ಗುಣೇಷು** = ಶಬ್ದಾದಿ ವಿಷಯಪದಾರ್ಥಗಳಲ್ಲಿ , **ವರ್ತಂತೇ** = ಇರುತ್ತವೆ. ಆದುದರಿಂದ ಜೀವನಿಗೆ ಯಾವ ವಿಷಯದಲ್ಲಿಯೂ ಸ್ವಾತಂತ್ರ್ಯ ವಿಲ್ಲ, ಇತಿ = ಎಂದು , **ಮತ್ವಾ** = ತಿಳಿದು, **ನ ಸಜ್ಜತೇ** = ತನಗೆ ಕರ್ತೃತ್ವವನ್ನು ಭ್ರಮಿಸಿ ಸಂಸಾರದಲ್ಲಿ ಮಗ್ನನಾಗುವುದಿಲ್ಲ ಎಂದು ಅರ್ಥ. ॥ 28 ॥

**ಪ್ರಕೃತೇರ್ಗುಣಸಮ್ಮೂಢಾಃ ಸಜ್ಜಂತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ ॥ 29 ॥**

**ಅರ್ಥ**- ಪ್ರಕೃತಿಯ ಪರಿಣಾಮರೂಪವಾದುದರಿಂದ, ಅದರ ಗುಣವೆನಿಸುತ್ತವೆ ಇಂದ್ರಿಯ ಗಳು. ಈ ಇಂದ್ರಿಯ ವಿಷಯದಲ್ಲಿ ಇವುಗಳು ನನ್ನಿಂದಲೆ ಭೋಗಸಾಧನಗಳಾಗಿವೆ ಎಂದು ಭ್ರಮೆಗೊಳಗಾಗುವವರು ವಿಷಯಪದಾರ್ಥಗಳಲ್ಲಿ ಆಸಕ್ತರಾಗುತ್ತಾರೆ. ಇಂತಹ ಗುಣಕರ್ಮಗಳ ಸರಿಯಾದ ಜ್ಞಾನವಿಲ್ಲದ ಅಯೋಗ್ಯಜನರನ್ನು ಸರಿಯಾಗಿ ತಿಳಿದಿರುವವನು ಸರಿಯಾದ ದಾರಿಗೆ ತರಲು ಪ್ರಯತ್ನಿಸಬಾರದು . ಅದರಿಂದ ಫಲವಿಲ್ಲ.

**ಸ್ವಾತ್ಮನಃ ಸ್ವತಂತ್ರಕರ್ತೃತಾಂ ಮನ್ಯಮಾನಾಃ ಅವಿದ್ವಾಂಸಃ ಜ್ಞಾನಿನಾ ಬೋಧ- ನೀಯಾ ಇತ್ಯತ ಆಹ- ಪ್ರಕೃತೇರಿತಿ ॥ ಪ್ರಕೃತೇರೀಶ್ವರಸ್ಯೇಚ್ಛಾದಿಗುಣೈಃ ಕರ್ತೃ- ಭೂತೈಃ । ಪ್ರಕೃತೇರ್ಜಡಸ್ಯ ಕಾರ್ಯಭೂತಸತ್ತ್ವಾದಿಗುಣೈರ್ನಿಮಿತ್ತೈಃ ಪ್ರಕೃತೇರ್ಜಡಸ್ಯ ವಿಕಾರಭೂತಗುಣೇಷ್ವಿಂದ್ರಿಯೇಷು ಸಮ್ಮೂಢಾಃ= ಮಮೈವೈ- ತಾನಿ ಕರಣಾನಿ ಇತಿ ತೇಷು ಸ್ವಾತಂತ್ರ್ಯಾಭಿಮಾನಿನಃ ಅತ ಏವ ಗುಣಕರ್ಮಸು ಗುಣೇಷು= ಶಬ್ದಾದಿವಿಷಯೇಷು ಸಜ್ಜಂತೇ= ಸ್ನೇಹಾತಿಶಯವಂತೋ ಭವಂತಿ, ಸ್ವಕರ್ಮಸು ಚ ಸಜ್ಜಂತೇ ಸ್ವಾತಂತ್ರ್ಯಭ್ರಮವಂತೋ ಯೇ ತಾನಕೃತ್ಸ್ನವಿದಃ=**

**ಗುಣಕರ್ಮವಿಭಾಗಾಜ್ಞಾನ್ ಮಂದಾನಯೋಗ್ಯಜನಾನ್ ಸ್ವಯಂ ಕೃತ್ಸ್ನವಿದ್= ಜ್ಞಾನೀ ನ ವಿಚಾಲಯೇತ್= ಗುಣಕರ್ಮಸು ಸಂಗಂ ತ್ಯಾಜಯಿತ್ವಾ ಸನ್ಮಾರ್ಗೇ ನ ಪ್ರವರ್ತಯೇದಿತ್ಯರ್ಥಃ । 'ಶಬ್ದಾದ್ಯಾ ಇಂದ್ರಿಯಾದ್ಯಾಶ್ಚ ಸತ್ತ್ವಾದ್ಯಾಶ್ಚ ಶುಭಾನಿ ಚ' ಇತ್ಯಾದೇಃ ಗುಣಶಬ್ದೋಽನೇಕಾರ್ಥೋ ಧ್ಯೇಯಃ ॥ 29 ॥**

**ಅನುವಾದ** - ತನ್ನನ್ನು ಸ್ವತಂತ್ರ ಕರ್ತೃ ಎಂದು ತಿಳಿದಿರುವ ಅಯೋಗ್ಯ ಜನರನ್ನು ಕುರಿತು ಪ್ರಾಜ್ಞರು ಉಪದೇಶಿಸಬಹುದೇ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಕೊಡುತ್ತಿದ್ದಾರೆ. **ಪ್ರಕೃತೇಃ**= ಭಗವಂತನ, **ಗುಣೈಃ** = ಇಚ್ಛೆ ಇವೇ ಮೊದಲಾದ ಗುಣಗಳಿಂದ ಮತ್ತು ಪ್ರಕೃತಿಯ ಗುಣಗಳಾದ ಸತ್ವಾದಿಗಳಿಂದ ನಿರ್ಮಿತವಾದ, ಜಡಪ್ರಕೃತಿಯ ವಿಕಾರವಾದ ಇಂದ್ರಿಯಾದಿಗಳಲ್ಲಿ **ಸಮ್ಮೂಢಾಃ**= ಇವು ನನ್ನ ಕರಣಗಳೇ ಆಗಿವೆ ಎಂದು ಸ್ವಾತಂತ್ರ್ಯ ಭ್ರಮೆಗೆ ಒಳಗಾದವರು, ಆ ಭ್ರಮೆಯಿಂದಾಗಿಯೇ, **ಗುಣಕರ್ಮಸು-ಗುಣೇಷು**= ಇಂದ್ರಿಯಗಳ ವಿಷಯಪದಾರ್ಥಗಳಲ್ಲಿ **ಸಜ್ಜಂತೇ**= ಅತ್ಯಂತ ಸ್ನೇಹವುಳ್ಳವರು ಆಗುತ್ತಾರೆ. **ಕರ್ಮಸು**= ತಮ್ಮ ಕೆಲಸದಲ್ಲಿ, **ಸಜ್ಜಂತೇ**= ಸ್ವಾತಂತ್ರ್ಯದ ಭ್ರಮೆಯುಳ್ಳವರು ಆಗುತ್ತಾರೆ. **ತಾನ್**= ಅಂತಹ, **ಅಕೃತ್ಸ್ನವಿದಃ**= ಗುಣಕರ್ಮ ವಿಭಾಗವನ್ನು ತಿಳಿಯದ, **ಮಂದಾನ್**= ಅಯೋಗ್ಯಜನರನ್ನು, **ಸ್ವಯಂ ಕೃತ್ಸ್ನವಿತ್**= ಎಲ್ಲವನ್ನು ತಿಳಿದವನು, **ನ ವಿಚಾಲಯೇತ್**= ಗುಣಕರ್ಮಗಳಲ್ಲಿ ಸಂಗವನ್ನು ಬಿಡಿಸಿ ಸನ್ಮಾರ್ಗದಲ್ಲಿ ತೊಡಗಿಸಬಾರದು . **'ಶಬ್ದಾದ್ಯಾ ಇಂದ್ರಿಯಾದ್ಯಾಶ್ಚ'** ಎಂದು ಪ್ರಮಾಣವಿರುವುದರಿಂದ ಗುಣ ಶಬ್ದಕ್ಕೆ ಅನೇಕ ಅರ್ಥಗಳಿವೆ ಆದುದರಿಂದ ಇಲ್ಲಿ **'ಇಂದ್ರಿಯ'** ಎಂದು ಅರ್ಥೈಸಲಾಗಿದೆ.

॥ 29 ॥

## ವಿಷ್ಣುಪೂಜಾರೂಪವಾದ ಕರ್ಮಾನುಷ್ಠಾನ ಬಂಧಕವಲ್ಲ

**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ 30 ॥**

**ಅರ್ಥ** - ನೀನೂ ಕೂಡ ಹೀಗೆ ಪರಮಾತ್ಮನಲ್ಲಿ ನೆಲೆನಿಂತ ಮನಸ್ಸುಳ್ಳವನಾಗಿ, ಭಗವದ್ಭಕ್ತಿ , ಜ್ಞಾನ ಬಿಟ್ಟು ಬೇರೆ ಫಲದ ಆಸೆ ಬಿಟ್ಟವನಾಗಿ, ಕರ್ತವ್ಯ ಕರ್ಮಗಳನ್ನು ಮಾಡಬೇಕು, ನಾನೆ ಮಾಡಿದೆ ಎಂಬ ಅಹಂಕಾರವನ್ನು ಬಿಡಬೇಕು ಮತ್ತು ತನ್ನ ಒಳಗೆ ಭಗವಂತನಿದ್ದು ಎಲ್ಲ ಕೆಲಸ ಮಾಡಿಸುವವ ಎಂದು ತಿಳಿದು ಎಲ್ಲ ಕರ್ಮಗಳನ್ನು ಭಗವಂತನ ಪೂಜೆ ಎಂದು ಭಾವಿಸ ಬೇಕು. ಹೀಗೆ ಬಂಧು ಶೋಕವನ್ನು ತೊರೆದು ಯುದ್ಧವನ್ನು ಮಾಡು.

**ಏವಮವಿದ್ವತ್ಕರ್ಮಣೋ ವಿದ್ವತ್ಕರ್ಮಣೋಽನಭಿಮಾನೇನಾನುಷ್ಠಾನ-ರೂಪವೈಲಕ್ಷಣ್ಯಮುಕ್ತ್ವೇದಾನೀಂ ತವಾಪಿ ಜ್ಞಾನಿತ್ವಾತ್ತಥೈವಾನುಷ್ಠೇಯಂ**

**ಕರ್ಮೇತ್ಯಾಹ- ಮಯೀತಿ ॥ ಅಧ್ಯಾತ್ಮಚೇತಸಾ ಆತ್ಮಾನಂ ಪರಮಾತ್ಮಾನಂ ಮಾಮಧಿಕೃತ್ಯ ಸ್ಥಿತಮಧ್ಯಾತ್ಮಂ, ಅಧ್ಯಾತ್ಮಂ ಚ ತತ್ ಚೇತಶ್ಚ ತದಧ್ಯಾತ್ಮಚೇತಃ ತೇನೇತಿ ವಾ । 'ಅಧಿ' ಅಧಿಕಂ ಸ ಚಾಸಾವಾತ್ಮಾ ಚಾಧ್ಯಾತ್ಮಾ । ಅಧ್ಯಾತ್ಮನಿ ಚೇತೋಽಧ್ಯಾತ್ಮಚೇತಃ ತೇನೇತಿ ವಾ । ಸರ್ವಾಧಿಕಪರಮಾತ್ಮಭೂತಮನ್ನಿಷ್ಠ-ಮನಸಾ ನಿರಾಶೀಃ= ವಿಷ್ಣುಭಕ್ತಿಜ್ಞಾನಾದ್ಯನ್ಯಕಾಮರಹಿತಃ ನಿರ್ಮಮಃ= ಕರ್ಮಣ್ಯಹಮೇವ ಸ್ವಾತಂತ್ರ್ಯೇಣ ಕರೋಮೀತಿ ಸ್ವತಂತ್ರಕರ್ತೃತಾಽಭಿಮಾನ-ಹೀನೋ ಭೂತ್ವಾ , ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ= ಭಗವಾನ್ ಕೃಷ್ಣ ಏವ ಮಯಿ ಸ್ಥಿತ್ವಾ ಸರ್ವಕರ್ಮಾಣಿ ಕರೋತೀತಿ ಜ್ಞಾತ್ವಾ , ತಾನಿ ಚ ಶ್ರೀಕೃಷ್ಣ ಪೂಜಾರೂಪಾಣೀತಿ ಮಯಿ ಸಮರ್ಪ್ಯ ವಿಗತಜ್ವರಃ ತ್ಯಕ್ತಶೋಕಃ ಸನ್ ಯುಧ್ಯಸ್ವೇತಿ । ತದುಕ್ತಮ್- 'ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮ ಚಾಖಿಲಮ್' (ಬ್ರಹ್ಮತರ್ಕೇ) ಇತ್ಯಾದಿ ॥ 30 ॥**

**ಅನುವಾದ** - ಹೀಗೆ ಅಜ್ಞಾನಿಗಳ ಕರ್ಮ ಆಚರಣೆಗಿಂತ ಜ್ಞಾನಿಗಳ ಕರ್ಮ ಆಚರಣೆಯಲ್ಲಿ 'ನಾನೆ ಮಾಡಿದೆ' ಎನ್ನುವ ಸ್ವಾತಂತ್ರ್ಯ, ಅಭಿಮಾನವಿಲ್ಲದಿರುವಿಕೆ' ಎಂಬ ವೈಲಕ್ಷಣ್ಯವನ್ನು ಹೇಳಿ ನೀನೂ ಕೂಡ (ಅರ್ಜುನ) ಜ್ಞಾನಿಯಾದುದರಿಂದ ಸ್ವಾತಂತ್ರ್ಯಾಭಿಮಾನ ಬಿಟ್ಟು ಕರ್ಮ ಮಾಡಬೇಕು ಎಂದು ಶ್ರೀಕೃಷ್ಣ ಆದೇಶ ಮಾಡುತ್ತಿದ್ದಾನೆ **'ಮಯಿ'** ಎಂಬ ಶ್ಲೋಕದಲ್ಲಿ. **ಅಧ್ಯಾತ್ಮ ಚೇತಸಾ** - ಎಂಬ ಪದಕ್ಕೆ ಎರಡು ರೀತಿಯ ವಿಗ್ರಹವಾಕ್ಯ ತೋರಿಸಬಹುದು (1) **ಆತ್ಮಾನಂ ಅಧಿ(ಅಧಿಕೃತ್ಯ ಸ್ಥಿತಂ) ಅಧ್ಯಾತ್ಮಮ್ । ಅಧ್ಯಾತ್ಮಂ ಚ ತತ್ ಚೇತಶ್ಚ ಅಧ್ಯಾತ್ಮಚೇತಃ ತೇನ ಅಧ್ಯಾತ್ಮ ಚೇತಸಾ (2) ಅಧಿ (ಅಧಿಕಂ) ಚಾಸೌ ಆತ್ಮಾ ಚ ಅಧ್ಯಾತ್ಮಾ । ಅಧ್ಯಾತ್ಮನಿ ಚೇತಃ ಅಧ್ಯಾತ್ಮ ಚೇತಃ ತೇನ ಅಧ್ಯಾತ್ಮಚೇತಸಾ** ಎಂದು. ಎರಡರ ತಾತ್ಪರ್ಯವೂ ಸರ್ವೋತ್ತಮನಾದ ಪರಮಾತ್ಮನಾದ ನನ್ನಲ್ಲಿ (ಶ್ರೀಕೃಷ್ಣನಲ್ಲಿ) ನೆಟ್ಟ ಮನಸ್ಸುಳ್ಳವನಾಗಿ **ನಿರಾಶೀಃ** = ವಿಷ್ಣುಭಕ್ತಿ ಮತ್ತು ಜ್ಞಾನ ಹೊರತು ಬೇರೆ ಆಸೆ ಇಲ್ಲದವನಾಗಿ **ನಿರ್ಮಮಃ**= ನಾನೇ ಎಲ್ಲ ಕರ್ಮಗಳನ್ನೂ ಸ್ವತಂತ್ರವಾಗಿ ಮಾಡುವೆ' ಎಂಬ ಸ್ವತಂತ್ರ-ಕರ್ತೃತ್ವಭ್ರಮೆ ಇಲ್ಲದವನಾಗಿ, **ಸರ್ವಾಣಿ**= ಎಲ್ಲಾ, **ಕರ್ಮಾಣಿ** = ಕರ್ಮಗಳನ್ನು , **ಮಯಿ** = ನನ್ನಲ್ಲಿ (ಶ್ರೀ ಕೃಷ್ಣನಲ್ಲಿ) **ಸಂನ್ಯಸ್ಯ**= ಭಗವಂತನಾದ ಶ್ರೀಕೃಷ್ಣನೇ ನನ್ನಲ್ಲಿ ನಿಂತು ಎಲ್ಲವನ್ನು ಮಾಡಿಸುತ್ತಾನೆ ಎಂದು ತಿಳಿದು, ಮಾಡುವ ಎಲ್ಲಾ ಕಾರ್ಯಗಳನ್ನೂ ಶ್ರೀಕೃಷ್ಣನ ಪೂಜೆ ಎಂದು ಅವನಿಗೆ ಸಮರ್ಪಿಸಿ, **ವಿಗತಜ್ವರಃ**= ಬಂಧು ಶೋಕವನ್ನು ತೊರೆದು, **ಯುಧ್ಯಸ್ವ**= ಯುದ್ಧ ಮಾಡು. ಎಲ್ಲಾ ಕರ್ಮಗಳೂ ಭಗವತ್ಪೂಜಾರೂಪ ಎಂದು **ನಾಹಂ ಕರ್ತಾ** ಎಂಬ ಬ್ರಹ್ಮತರ್ಕ ಹೇಳುತ್ತದೆ. ॥ 30 ॥

## ಶ್ರೀಕೃಷ್ಣನ ಮಾತಿನಲ್ಲಿ ವಿಶ್ವಾಸವಿಡಬೇಕು

**ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।**
**ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥ 31 ॥**

**ಅರ್ಥ** – ಯಾರು ನನ್ನ ಮಾತಿನಲ್ಲಿ ವಿಶ್ವಾಸವುಳ್ಳವರಾಗಿ, ನನ್ನಲ್ಲಿ ದೋಷದೃಷ್ಟಿ ಇಲ್ಲದವರಾಗಿ ನಾನು ಹಿಂದೆ ಹೇಳಿದಂತೆ ಅನುಷ್ಠಾನ ಮಾಡುತ್ತಾರೋ ಅಂತಹ ಅಜ್ಞರಾದ ಮನುಷ್ಯರೂ ಕೂಡ ಈ ಕರ್ಮ ಬಂಧನದಿಂದ ಮುಕ್ತರಾಗುತ್ತಾರೆ.

**ವಿದ್ವಾಂಸ ಏವಂ ಕರ್ಮ ಕುರ್ವಂತೀತ್ಯೇತಾವತಾ ಮಯಾಽಪ್ಯಕ್ತವಿಧಯಾ ಕಾರ್ಯಮಿತಿ ಕುತ ಇತ್ಯತಃ ಸ್ವೋಕ್ತಸ್ಯ ಕರಣೇ ಅಕರಣೇ ಚ ಫಲಮಾಹ- ಯೇ ಮ ಇತ್ಯಾದಿ ಶ್ಲೋಕದ್ವಯೇನ ॥ ಯೇ ಮಾನವಾಃ ಶ್ರದ್ಧಾವಂತಃ= ಮದ್ವಾಕ್ಯೇಷ್ವಾಸ್ತಿಕ್ಯಬುದ್ಧಿಮಂತಃ, ಅನಸೂಯಂತಃ= ಕಷ್ಟೇ ಕರ್ಮಣಿ ಪ್ರವರ್ತಯತೀತಿ ಮಯಿ ದೋಷದೃಷ್ಟಿಮಕುರ್ವಂತಃ ಸಂತಃ ಇದಂ= [1]ಪೂರ್ವೋಕ್ತರೀತ್ಯಾ ಕರ್ಮಾನುಷ್ಠಾನರೂಪಂ ಮೇ ಮತಂ ನಿತ್ಯಮನುತಿಷ್ಠಂತಿ ತೇಽಪಿ ಕರ್ಮಭಿರ್ನಿವೃತ್ತಕರ್ಮಭಿರ್ಮುಚ್ಯಂತೇ, ಜ್ಞಾನದ್ವಾರೇತಿ ಯೋಜ್ಯಮ್ । ಕಿಮುತಾಪರೋಕ್ಷಜ್ಞಾನಿನೋ ಮುಚ್ಯಂತ ಇತಿ ಕೈಮುತ್ಯಸೂಚನಾರ್ಥೋಽಪಿ ಶಬ್ದಃ । ಏತತ್ಸೂಚನಂ ಚ ಪ್ರಾಸಂಗಿಕಂ ಧ್ಯೇಯಮ್ ॥ 31 ॥**

**ಅನುವಾದ** – ವಿದ್ವಾಂಸರು ಕರ್ಮ ಮಾಡುತ್ತಾರೆ. ಇಷ್ಟೇ ಕಾರಣದಿಂದ ನಾನು ಏಕೆ ಕರ್ಮ ಆಚರಿಸಬೇಕು ಎಂಬ ಸಂದೇಹಕ್ಕೆ ಉತ್ತರವಾಗಿ ಕರ್ಮ ಮಾಡುವುದರಿಂದ ಏನು ಫಲ. ಮಾಡದಿದ್ದರೆ ಏನು ಅನಿಷ್ಟಫಲ ಎಂದು ಮುಂದಿನ ಎರಡು ಶ್ಲೋಕಗಳಲ್ಲಿ ನಿರೂಪಿಸಲಾಗಿದೆ.

**ಯೇ**= ಯಾವ , **ಮಾನವಾಃ** =ಮನುಷ್ಯರು , **ಶ್ರದ್ಧಾವಂತಃ** = ಭಗವಂತನ ಮಾತುಗಳಲ್ಲಿ ಆಸ್ತಿಕ್ಯಬುದ್ಧಿಯುಳ್ಳವರಾಗಿ, **ಅನಸೂಯಂತಃ**= ಕ್ಲಿಷ್ಟವಾದ ಕೆಲಸಗಳಲ್ಲಿ ನಮ್ಮನ್ನು ತೊಡಗಿಸುತ್ತಿದ್ದಾನೆಂದು ನನ್ನಲ್ಲಿ (ಭಗವಂತನಲ್ಲಿ) ದೋಷ ಕಾಣದವರಾಗಿ **ಇದಂ ಮೇ ಮತಂ**= ಹಿಂದಿನ ಶ್ಲೋಕದಲ್ಲಿ ನಿರೂಪಿಸಿದ ಭಗವಂತನಿಗೆ ಅಭಿಪ್ರೇತವಾದ ಕರ್ಮಾನುಷ್ಠಾನವನ್ನು **ನಿತ್ಯಂ**= ಯಾವಾಗಲೂ **ಅನುತಿಷ್ಠಂತಿ** = ಅನುಸರಿಸುತ್ತಾರೋ, **ತೇಽಪಿ** = ಅವರೂ ಕೂಡ, **ಕರ್ಮಭಿಃ** = ನಿವೃತ್ತ ಕರ್ಮಗಳಿಂದ, **ಮುಚ್ಯಂತೇ**= ಬಿಡುಗಡೆಹೊಂದುತ್ತಾರೆ. ನಿವೃತ್ತ ಕರ್ಮವೆಂದರೆ ನಿಷ್ಕಾಮ ಕರ್ಮ, ಅದರಿಂದ ಜ್ಞಾನ, ತನ್ಮೂಲಕ ಮೋಕ್ಷ , ಎಂದು ಭಾವ. ಇಂತಹ ಸಾಮಾನ್ಯರೆ ಮುಕ್ತರಾಗುತ್ತಾರೆ ಎಂದಾದ ಮೇಲೆ ಅಪರೋಕ್ಷಜ್ಞಾನಿಗಳು ಮುಕ್ತರಾಗುತ್ತಾರೆ ಎಂದು ಸರ್ವಥಾ ಸಿದ್ಧವಾಗುತ್ತದೆ ಇದನ್ನು 'ಅಪಿ' ಶಬ್ದ ಹೇಳುತ್ತಿದೆ. ಇದೂ ಕೂಡ ಪ್ರಾಸಂಗಿಕವಾಗಿ ಹೇಳಿದ್ದು (1).॥31॥

---

1. ಪೂರ್ವೋಕ್ತಶ್ಲೋಕೋಕ್ತರೀತ್ಯಾ

**ವಿವರಣೆ** - (1) ಒಂದು ಮುಖ್ಯವಾದ ವಿಷಯವನ್ನು ನಿರೂಪಿಸುವ ಸಂದರ್ಭದಲ್ಲಿ ಅನೇಕ ವಿಷಯಗಳು ನೆನಪಿಗೆ ಬರುತ್ತವೆ. ಅವುಗಳನ್ನು ಅಲ್ಲಿ ನಿರೂಪಿಸುವುದು ಸಾಂದರ್ಭಿಕ ವಲ್ಲದಿದ್ದರೂ, ಹೇಳದೆ ಇರಬಾರದು ಎಂದು ನಿರೂಪಣೆ ಮಾಡುತ್ತಾರೆ. ಇದನ್ನು ಪ್ರಾಸಂಗಿಕ ವೆನ್ನುತ್ತಾರೆ. **ಸ್ಮೃತಸ್ಯೋಪೇಕ್ಷಾನರ್ಹತ್ವಂ ಪ್ರಸಂಗಃ** ಎಂದು. ಪ್ರಕೃತದಲ್ಲಿ ಅರ್ಜುನನನ್ನು ಯುದ್ಧದಲ್ಲಿ ತೊಡಗಿಸಬೇಕು. ಈ ಸಂದರ್ಭದಲ್ಲಿ ಕರ್ಮಾಚರಣೆಯಿಂದ ಏನು ಫಲ ಎಂಬ ಪ್ರಶ್ನೆಗೆ ಇಲ್ಲಿ ಉತ್ತರಿಸುವಾಗ ಅಪರೋಕ್ಷ ಜ್ಞಾನಿಗಳಿಗೆ ಮೋಕ್ಷ ನಿಶ್ಚಿತವೆನ್ನುವುದರಲ್ಲಿ ಸಂದೇಹ ವಿಲ್ಲ ಎಂದು ತಿಳಿಸುವುದು ಪ್ರಾಸಂಗಿಕ ಎಂದು ಭಾವ.

## ಅಜ್ಞಾನಿಗೆ ದುಃಖ ನಿಶ್ಚಿತ

**ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ ।**
**ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ ॥ 32 ॥**

**ಅರ್ಥ** - ಯಾರು 'ಇವನು ನಮ್ಮನ್ನು ಕಷ್ಟವಾದ ಕೆಲಸದಲ್ಲಿ ತೊಡಗಿಸಿದ್ದಾನೆ ' ಎಂದು ಭಾವಿಸಿ , ನನ್ನಲ್ಲಿ ದೋಷವನ್ನು ಕಾಣುತ್ತಾ ನನಗೆ ಅಭಿಮತವಾದ ಕರ್ಮಾಚರಣೆಯನ್ನು ಮಾಡುವುದಿಲ್ಲವೋ, ಅವರು ವಿವೇಕಶೂನ್ಯರು. ಆದುದರಿಂದ, ಏನನ್ನು ಅವಶ್ಯವಾಗಿ ತಿಳಿಯಬೇಕೋ ಆ ವಿಷಯವನ್ನು ತಪ್ಪಾಗಿ ತಿಳಿದವರು. ಆದುದರಿಂದಲೇ ನರಕಾದಿ ಅನರ್ಥಗಳನ್ನು ಪಡೆಯುತ್ತಾರೆ ಎಂದು ತಿಳಿ.

**ಯೇ ತು ಏತನ್ಮೇ ಮತಮ್ ಅಭ್ಯಸೂಯಂತಃ= ಕಷ್ಟಂ ಕರ್ಮೇತಿ ದೋಷ- ದೃಷ್ಟಿಮಂತಃ ಸಂತೋ ನಾನುತಿಷ್ಠಂತಿ ತಾನಚೇತಸಃ= ವಿವೇಕಶೂನ್ಯಾನ್ ಅತ ಏವ ಜ್ಞಾತವ್ಯಸರ್ವಜ್ಞಾನವಿಷಯೇ ವಿಮೂಢಾನ್= ವಿಶೇಷೇಣ ಮಿಥ್ಯಾಜ್ಞಾನಿನಃ ಅತ ಏವ ನಷ್ಟಾನ್ =ನರಕಾದ್ಯನರ್ಥಭಾಜೋ ವಿದ್ಧಿ = ಜಾನೀಹಿ ॥ 32 ॥**

**ಅನುವಾದ- ಯೇ ತು**= ಯಾರು , **ಏತತ್ ಮೇ ಮತಂ**= ನನಗೆ ಅಭಿಮತವಾದ ಕರ್ಮಾಚರಣೆಯನ್ನು , **ಅಭ್ಯಸೂಯಂತಃ** = ಕಷ್ಟವಾದ ಕೆಲಸದಲ್ಲಿ ತಮ್ಮನ್ನು ತೊಡಗಿಸಿದ್ದಾನೆ ಎಂದು ದೋಷದೃಷ್ಟಿಯುಳ್ಳವರಾಗಿ, **ನ ಅನುತಿಷ್ಠಂತಿ** = ಅನುಸರಿಸುವುದಿಲ್ಲವೋ, **ತಾನ್** = ಅಂತಹವರನ್ನು, **ಅಚೇತಸಃ**= ವಿವೇಕ ಶೂನ್ಯರನ್ನಾಗಿ, ಆದುದರಿಂದಲೇ, **ಸರ್ವಜ್ಞಾನ ವಿಮೂಢಾನ್**= ಏನನ್ನು ತಿಳಿಯಲೇ ಬೇಕೋ ಅಂತಹ ವಿಷಯದಲ್ಲಿ ತಪ್ಪು ತಿಳುವಳಿಕೆ ಯುಳ್ಳವರನ್ನಾಗಿ, ಆದುದರಿಂದಲೇ **ನಷ್ಟಾನ್** = ನರಕಾದಿ ಅನರ್ಥವನ್ನು ಹೊಂದುವವರನ್ನಾಗಿ, **ವಿದ್ಧಿ** = ತಿಳಿ. ॥ 32 ॥

## ಸ್ವಭಾವವನ್ನು ಯಾರೂ ಬಿಡುವುದಿಲ್ಲ

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ 33 ॥**

**ಅರ್ಥ** - ಎಲ್ಲ ಜೀವಿಯೂ ತನ್ನ ಪೂರ್ವಸಂಸ್ಕಾರಕ್ಕೆ ಅನುಗುಣವಾಗಿಯೇ ಕರ್ಮವನ್ನು ಮಾಡುತ್ತಾನೆ. ತನ್ನ ಸ್ವಭಾವವನ್ನು ಬಿಡುವುದಿಲ್ಲವಾದ್ದರಿಂದ ಮನೋನಿಗ್ರಹವು ಪ್ರಯೋಜನಕ್ಕೆ ಬರಲಾರದು.

**ಯದಿ ತ್ವನ್ಮತಾನುಷ್ಠಾನೇ ಮೋಕ್ಷಃ , ಅನ್ಯಥಾ ತು ನಾಶಃ, ತರ್ಹಿ ತೇ ಮತಂ ಕಿಮಿತಿ ಲೋಕೋ ನಾನುತಿಷ್ಠತೀತ್ಯತ ಆಹ- ಸದೃಶಮಿತಿ ॥ ಪ್ರಕೃತಿಶಬ್ದೋಽತ್ರ ಪೂರ್ವಸಂಸ್ಕಾರಾರ್ಥಃ ಸನ್ ತತ್ಕಾರ್ಯ ರಾಗದ್ವೇಷೋಪಲಕ್ಷಕಃ । ಜ್ಞಾನವಾನಪಿ= ಮನ್ಮತಕರಣಾಕರಣಯೋರಿಷ್ಟಾನಿಷ್ಟಜ್ಞಾನವಾನಪಿ । ಸ್ವಸ್ಯಾಃ ಪ್ರಕೃತೇಃ= ಸ್ವಕೀಯ ಪೂರ್ವಸಂಸ್ಕಾರಕಾರ್ಯರಾಗದ್ವೇಷಯೋಃ ಸದೃಶಮನು-ಗುಣಮೇವ ಚೇಷ್ಟತೇ ಕರ್ಮ ಕರೋತಿ । ಕಿಮುತಾಜ್ಞ ಇತ್ಯಪೇರರ್ಥಃ । ನನು ಮನೋನಿಗ್ರಹೇ ಸ್ವಭಾವಾನುಗತಚೇಷ್ಟೋಪರತಿಃ ಸ್ಯಾದಿತ್ಯತ ಆಹ- ಪ್ರಕೃತಿ-ಮಿತಿ ॥ ಪ್ರಕೃತಿಂ= ಸ್ವಭಾವಂ ಯಾಂತಿ ಪ್ರಾಣಿನಃ । ತತ್ರ ಮನೋನಿಗ್ರಹಃ ಕಿಂ ಕರಿಷ್ಯತಿ ನ ಕಿಮಪೀತ್ಯರ್ಥಃ । ತದುಕ್ತಮ್- 'ಬುಧ್ವಾಽಪ್ಯಸೌ ಯತೋ ನಿತ್ಯಂ ಸ್ವಭಾವಾನುಗಚೇಷ್ಟಿತಃ । ಸ್ವಭಾವಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ' (ಪ್ರಕಾಶಸಂಹಿತಾಯಾಂ) ಇತಿ । ಯದ್ವಾ 'ಮಂದಾನ್ನ ವಿಚಾಲಯೇತ್' ಇತ್ಯಯೋಗ್ಯೇಷು ತತ್ತ್ವಬೋಧೋ ನ ಕಾರ್ಯ ಇತ್ಯುಕ್ತಮ್, ತತ್ಕುತ ಇತ್ಯತ ಆಹ- ಸದೃಶಮಿತಿ ॥ ಪ್ರಾಗಿವಾರ್ಥಃ । ತತ್ತ್ವೋಪದೇಶೇನೋತ್ಪನ್ನಜ್ಞಾನವಾನಪಿ ಸ್ವಭಾವಾನುಗುಣಚೇಷ್ಟಾವಾನೇವ ಭವತಿ । ನ ತೂಪದೇಶಜನ್ಯಜ್ಞಾನಾನು-ರೂಪಚೇಷ್ಟಾವಾನಪಿ ಭವತಿ । ಅತಸ್ತತ್ರ ತತ್ತ್ವೋಪದೇಶೋ ವ್ಯರ್ಥ ಇತಿ ಭಾವಃ। ॥ 33 ॥**

**ಅನುವಾದ** - ಒಂದು ವೇಳೆ ನಿನಗೆ (ಕೃಷ್ಣನಿಗೆ) ಅಭಿಮತವಾದ ಕರ್ಮವನ್ನು ಆಚರಿಸಿದರೆ ಮುಕ್ತಿ, ಇಲ್ಲದಿದ್ದರೆ ನಾಶ ಎಂದಾದರೆ, ಜನರು ಏಕೆ ನಿನ್ನ ಮತವನ್ನು ಅನುಸರಿಸುವುದಿಲ್ಲ ಎಂಬ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರಿಸಲಾಗಿದೆ. ಈ ಶ್ಲೋಕದಲ್ಲಿ ಪ್ರಕೃತಿ ಶಬ್ದಕ್ಕೆ ಪೂರ್ವಸಂಸ್ಕಾರ ಎಂದು ಅರ್ಥಮಾಡಿ, ಆ ಸಂಸ್ಕಾರದಿಂದ ಉಂಟಾಗುವ ರಾಗದ್ವೇಷಗಳನ್ನು ಪ್ರಕೃತಿ ಶಬ್ದದ ಅರ್ಥ ಎಂದು ತಿಳಿಯಬೇಕು. **ಜ್ಞಾನವಾನ್ ಅಪಿ** = ಭಗವದಭಿಮತವಾದ ಕರ್ಮಗಳನ್ನು ಮಾಡಿದರೆ

ಇಷ್ಟಪ್ರಾಪ್ತಿ, ಮಾಡದಿದ್ದರೆ ಅನಿಷ್ಟ ಎನ್ನುವ ಜ್ಞಾನವಿರುವವನಾದರೂ ಕೂಡ, **ಸ್ವಸ್ಯಾಃ** = ತನ್ನ , **ಪ್ರಕೃತೇಃ** = ಪೂರ್ವ ಸಂಸ್ಕಾರ ಜನ್ಯವಾದ ರಾಗದ್ವೇಷಗಳಿಗೆ **ಸದೃಶಂ** = ಅನುಗುಣವಾದುದನ್ನೇ, **ಚೇಷ್ಟತೇ** = ಮಾಡುತ್ತಾನೆ. ಜ್ಞಾನಿಯೇ ಹೀಗೆ ಅಂದ ಮೇಲೆ ಅಜ್ಞಾನಿಯೂ ಹೀಗೆ ಎಂದು ಹೇಳಬೇಕಿಲ್ಲ ಎಂಬುದು '**ಅಪಿ**' ಶಬ್ದದ ಅರ್ಥ.

ಮನೋನಿಗ್ರಹದಿಂದ ಸ್ವಭಾವಕ್ಕೆ ಅನುಗುಣವಾದ ಕರ್ಮಗಳನ್ನು ನಿಲ್ಲಿಸಬಹುದಲ್ಲವೇ ಎಂದು ಶಂಕಿಸಿದರೆ, **ಪ್ರಕೃತಿಂ** ಎಂದು ಶ್ಲೋಕ ಖಂಡದಲ್ಲಿ ಉತ್ತರಿಸುತ್ತಾರೆ. **ಪ್ರಾಣಿನಃ**= ಜೀವರು, **ಪ್ರಕೃತಿಂ**= ಸ್ವಭಾವವನ್ನು **ಯಾಂತಿ**= ಅನುಸರಿಸುತ್ತಾರೆ. **ನಿಗ್ರಹಃ**= ಮನೋ ನಿಗ್ರಹವು, **ಕಿಂ ಕರಿಷ್ಯತಿ**= ಏನು ಮಾಡೀತು. ಏನೂ ಇಲ್ಲ ಎಂದು ಭಾವ. ಇದನ್ನೇ ಪ್ರಕಾಶಸಂಹಿತೆಯಲ್ಲಿ '**ಬುಧ್ವಾಪ್ಯಸೌ**' ಎಂದು ಹೇಳಿದ್ದಾರೆ.

ಅಥವಾ ಈ ಶ್ಲೋಕಕ್ಕೆ ಮತ್ತೊಂದು ರೀತಿಯಲ್ಲಿ ಸಂಗತಿಯನ್ನು ಹೇಳಬಹುದು. '**ಮಂದಾನ್ ನ ವಿಚಾಲಯೇತ್**' ಎಂದು ಅಯೋಗ್ಯರಿಗೆ ತತ್ವಬೋಧನೆಯನ್ನು ಮಾಡ ಬಾರದು ಎಂದು ಹೇಳಿದ್ದಾರೆ. ಅದು ಏಕೆ ? ಎಂಬ ಪ್ರಶ್ನೆಗೆ ಈ ಶ್ಲೋಕ ಉತ್ತರ ಹೇಳುತ್ತದೆ. ತತ್ತ್ವೋಪದೇಶದಿಂದ ಸರಿಯಾದ ಜ್ಞಾನವನ್ನು ಪಡೆದವನಾದರೂ ಕೂಡ ಸ್ವಭಾವಕ್ಕೆ ಅನುಗುಣವಾಗಿಯೇ ಕರ್ಮ ಮಾಡುತ್ತಾನೆ ಹೊರತು ಉಪದೇಶದಿಂದ ಬಂದ ಜ್ಞಾನಕ್ಕೆ ಅನುಗುಣವಾಗಿ ನಡೆದುಕೊಳ್ಳುವುದಿಲ್ಲ. ಹೀಗಾಗಿ ಉಪದೇಶ ವ್ಯರ್ಥ. ಆದುದರಿಂದ ಅಯೋಗ್ಯರಿಗೆ ಉಪದೇಶ ಮಾಡಬಾರದು ಎಂದು ತಾತ್ಪರ್ಯ. || 33 ||

## ರಾಗದ್ವೇಷಗಳು ಶ್ರೇಯಸ್ಸಿಗೆ ಪ್ರತಿಬಂಧಕ

**ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ || 34 ||**

**ಅರ್ಥ** - ಕಣ್ಣು, ಕಿವಿ ಮೊದಲಾದ ಇಂದ್ರಿಯಗಳಿಗೆ ರೂಪ, ಶಬ್ದ ಮೊದಲಾದ ವಿಷಯ ಪದಾರ್ಥಗಳಲ್ಲಿ ರಾಗದ್ವೇಷಗಳು ಸಹಜವಾಗಿಯೇ ಇರುವಂತಹದ್ದು . ಆದರೆ, ಸಾಧಕನು ಅತಿಪ್ರಯತ್ನದಿಂದ ಮನೋನಿಗ್ರಹ ಮಾಡಿಕೊಳ್ಳಬೇಕು. ಈ ರಾಗದ್ವೇಷಗಳ ಹಿಡಿತಕ್ಕೆ ಒಳಗಾಗಬಾರದು. ಏಕೆಂದರೆ ಈ ರಾಗದ್ವೇಷಗಳೇ ಎಲ್ಲ ಶ್ರೇಯಸ್ಸಿಗೂ ಪ್ರತಿಬಂಧಕವಾಗಿವೆ.

**ಯದಿ ಸರ್ವಾಣಿ ಭೂತಾನಿ ಸ್ವಭಾವಾನುಗುಣಮೇವ ಚೇಷ್ಟಂತೇ, ನಿಗ್ರಹೋಽಕಿಂಚಿತ್ಕರಃ, ತರ್ಹಿ 'ಮಯಿ ಸರ್ವಾಣಿ' ಇತ್ಯತ್ರ ಇತಿಕರ್ತವ್ಯತಾ-ಪೂರ್ವಂ ಕರ್ಮವಿಧಾನಂ 'ಯೇ ಮೇ ಮತಮ್' ಇತ್ಯಾದಿನಾ ತಸ್ಯ ಫಲೋಕ್ತಿಶ್ಚ**

**ವ್ಯರ್ಥೇತ್ಯತ ಆಹ - ಇಂದ್ರಿಯಸ್ಯೇತಿ ।। ಜಾತ್ಯೇಕವಚನಮ್ । ಇಂದ್ರಿಯಾಣಾಂ= ಚಕ್ಷುರಾದೀನಾಮರ್ಥೇಷು= ರೂಪಾದಿಷು ಇಂದ್ರಿಯಾಣಾಂ ರಾಗದ್ವೇಷೌ ಅನುಕೂಲೇ ರಾಗಃ ಪ್ರತಿಕೂಲೇ ದ್ವೇಷಶ್ಚೇತ್ಯೇವಂ ರಾಗದ್ವೇಷೌ ವ್ಯವಸ್ಥಿತೌ= ಅವಶ್ಯಂಭಾವಿನೌ । ಲೋಭಮೋಹಮದಮತ್ಸರಾಣಾಮುಪಲಕ್ಷಣಮ್ । ಪ್ರಾಧಾನ್ಯಾದ್‌ದ್ವಯೋರೇವೋಕ್ತಿಃ । ತದನುರೂಪಾ ಚ ಪ್ರಾಣಿನಾಂ ಚೇಷ್ಟೇತಿ ನಿಗ್ರಹೋಽಕಿಂಚಿತ್ಕರೋ ಯದ್ಯಪಿ, ತಥಾಽಪಿ ತಯೋಃ= ರಾಗದ್ವೇಷಯೋಃ ರಾಗಾದಿಷಡ್ವರ್ಗವಶಂ ನ ಗಚ್ಛೇತ್= ನ ಪ್ರಾಪ್ನುಯಾತ್ । ಕುತಃ ? ಹಿ= ಯಸ್ಮಾದಸ್ಯ= ಶ್ರೇಯೋಽರ್ಥಿನಃ ತೌ ಪರಿಪಂಥಿನೌ = ಶ್ರೇಯೋವಿಘಾತಕೌ ಪಾಪಹೇತೂ ಚಾತ ಇತ್ಯರ್ಥಃ । ನಿಗ್ರಹಾತ್ಸದ್ಯಃ ಫಲಾಭಾವೇಽಪ್ಯತಿಪ್ರಯತ್ನ-ವತೋ ಭವತ್ಯೇವ ಫಲಮಿತಿ ಭಾವಃ । ಉಕ್ತಂ ಹಿ 'ಸಂಸ್ಕಾರೋ ಬಲವಾನೇವ' ಇತ್ಯಾದಿ, ಏತಚ್ಚ , ಯೋಗ್ಯಜನವಿಷಯಂ ಧ್ಯೇಯಮ್ ।। 34 ।।**

**ಅನುವಾದ** - ಎಲ್ಲಾ ಜೀವಿಗಳೂ ಸ್ವಭಾವಕ್ಕೆ ಅನುಗುಣವಾಗಿಯೇ ನಡೆದು ಕೊಳ್ಳುತ್ತವೆ. ಆದುದರಿಂದ ಮನೋನಿಗ್ರಹದಿಂದ ಯಾವ ಪ್ರಯೋಜನವೂ ಇಲ್ಲ ಎನ್ನುವುದಾದರೆ '**ಮಯಿ ಸರ್ವಾಣಿ**' ಇವೇ ಮೊದಲಾದ ಮಾತುಗಳಲ್ಲಿ ಕರ್ಮವನ್ನು ಹೀಗೆ ಆಚರಿಸಬೇಕು ಎಂದು ಕರ್ಮವಿಧಾನ ಮಾಡಿ '**ಯೇ ಮೇ ಮತಮ್**' ಎಂದು ಆ ಕರ್ಮಾಚರಣೆಗೆ ಫಲವನ್ನು ಹೇಳಿದ್ದು ವ್ಯರ್ಥವಲ್ಲವೇ ಎಂಬ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರ ನೀಡಲಾಗಿದೆ. ಇಲ್ಲಿ ಇಂದ್ರಿಯಸ್ಯ ಎಂಬಲ್ಲಿ ಏಕವಚನವಿದೆ ಇಂದ್ರಿಯಗಳ ಸಮೂಹ ಒಂದು ಎಂಬರ್ಥದಲ್ಲಿ. **ಇಂದ್ರಿಯಸ್ಯ**= ಚಕ್ಷುರಾದಿ ಇಂದ್ರಿಯಗಳಿಗೆ, **ಇಂದ್ರಿಯಸ್ಯಾರ್ಥೇ**= ವಿಷಯಗಳಾದ ರೂಪಾದಿಗಳಲ್ಲಿ **ರಾಗದ್ವೇಷೌ**= ಇಷ್ಟವಾದವುಗಳಲ್ಲಿ ಅನುರಾಗ, ವಿರುದ್ಧವಾದವುಗಳಲ್ಲಿ ದ್ವೇಷ, ಎಂಬುದು **ವ್ಯವಸ್ಥಿತೌ**= ಅವಶ್ಯವಾಗಿ ಇರುವಂತಹದೆ. ಇಲ್ಲಿ ರಾಗ ದ್ವೇಷಗಳ ಜೊತೆಗೆ ಲೋಭ, ಮೋಹ, ಮದ, ಮಾತ್ಸರ್ಯಗಳನ್ನೂ ಇಟ್ಟುಕೊಳ್ಳಬೇಕು. ರಾಗದ್ವೇಷಗಳು ಪ್ರಧಾನವಾದುದರಿಂದ ಎರಡನ್ನೇ ಹೇಳಿದ್ದಾರೆ. ಈ ರಾಗದ್ವೇಷಗಳಿಗೆ ಅನುಗುಣವಾಗಿ ಜನರ ಪ್ರವೃತ್ತಿ . ಆದುದರಿಂದ ನಿಗ್ರಹವನ್ನು ಅಪ್ರಯೋಜಕ ಎಂದು ಸಹಜವಾಗಿ ಭಾವಿಸಬಹುದು. ಆದರೆ, **ತಯೋಃ** = ಈ ರಾಗದ್ವೇಷಗಳ ಅಂದರೆ ಕಾಮವೇ ಮೊದಲಾದ ಆರು ದೋಷಗಳ, **ವಶಂ** = ಅಧೀನತೆಯನ್ನು, **ನ ಗಚ್ಛೇತ್** - ಹೊಂದಬಾರದು. ಏಕೆಂದರೇ, **ಹಿ** = ಯಾವ ಕಾರಣದಿಂದ **ಅಸ್ಯ** = ಶ್ರೇಯಸ್ಸನ್ನು ಬಯಸುವವನಿಗೆ , **ತೌ** = ಈ ರಾಗ-ದ್ವೇಷಗಳು , **ಪರಿಪಂಥಿನೌ** = ಶ್ರೇಯಸ್ಸಿಗೆ ನಾಶಕಗಳು ಆಗಿವೆ. ಅಷ್ಟೇ ಅಲ್ಲದೆ ಪಾಪಕ್ಕೆ ಕಾರಣಗಳೂ ಆಗಿವೆ.

ಇಂದ್ರಿಯ ನಿಗ್ರಹದಿಂದ ಕೂಡಲೆ ಯಾವುದೇ ಫಲವಿಲ್ಲದಿದ್ದರೂ ಅತ್ಯಂತ ಪ್ರಯತ್ನದಿಂದ ಫಲವಿದ್ದೆ ಇದೆ ಎಂದು ತಾತ್ಪರ್ಯ. ಈ ವಿಷಯದಲ್ಲಿ 'ಸಂಸ್ಕಾರೋ' ಎಂಬ ಪ್ರಮಾಣವೂ ಇದೆ. ಇಲ್ಲಿ ಹೇಳಿದ 'ಇಂದ್ರಿಯಗಳ ವಶವಾಗದಿರುವಿಕೆ ' ಯೋಗ್ಯ ಜನರಿಗೆ ಮಾತ್ರ.

|| 34 ||

## ಸ್ವಧರ್ಮಾಚರಣೆ ಶ್ರೇಷ್ಠ

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ || 35 ||**

**ಅರ್ಥ** - ಸ್ವವರ್ಣಾಶ್ರಮಕ್ಕೆ ಉಚಿತವಾದ ಧರ್ಮವನ್ನು ಆಚರಿಸುವಾಗ ಅದರಲ್ಲಿ ಸ್ವಲ್ಪ ನ್ಯೂನತೆ ಬಂದರೂ ಅದು ಸರಿಯಾಗಿ ಆಚರಿಸಿದ ಸ್ವವರ್ಣಾಶ್ರಮ ವಿರುದ್ಧವಾದ ಧರ್ಮಕ್ಕಿಂತ ಶ್ರೇಷ್ಠ . ಸ್ವಧರ್ಮವಾದ ಯುದ್ಧದಲ್ಲಿ, ಮರಣವಾದರೂ ಸರಿ ಅದು ಶ್ರೇಷ್ಠ. ಪರಧರ್ಮ ನರಕಾದಿ ಭಯವನ್ನು ಉಂಟು ಮಾಡುತ್ತದೆ.

**'ಜ್ಯಾಯಸೀ ಚೇತ್' ಇತ್ಯತ್ರಾರ್ಜುನೇನ ಕರ್ಮೈವ ನ ಕಾರ್ಯಮ್ । ತತ್ರಾಪಿ ನರಕಾದ್ಯನರ್ಥ ಹೇತುರಾಗದ್ವೇಷೋಪೇತತಯಾ ಘೋರಂ ಯುದ್ಧಾಖ್ಯಂ ಕರ್ಮ ತು ನೈವ ಕಾರ್ಯಮಿತಿ ಕೃತಾಕ್ಷೇಪದ್ವಯಮಧ್ಯೇ ಪ್ರಾಥಮಿಕೋ 'ಲೋಕೇಽಸ್ಮಿನ್' ಇತ್ಯಾದಿನೋತ್ತರಿತಃ । ದ್ವಿತೀಯಸ್ತು ಅಧುನಾ 'ಯುಧ್ಯಸ್ವ ವಿಗತಜ್ವರಃ' 'ತಯೋರ್ನ ವಶಮಾಗಚ್ಛೇತ್' ಇತ್ಯಾದ್ಯುಕ್ತ್ಯಾ ಸ್ಮಾರಿತಃ ಸನ್ ಪರಿಹ್ರಿಯತೇ- ಶ್ರೇಯಾನಿತಿ || ಸ್ವಧರ್ಮಃ= ಸ್ವವರ್ಣಾಶ್ರಮೋಚಿತೋ ಧರ್ಮಃ ವಿಗುಣಃ= ಅಂಗಹೀನೋಽಪಿ ಸ್ವನುಷ್ಠಿತಾತ್= ಸರ್ವಾಂಗಸಾಕಲ್ಯೇನ ಕೃತಾತ್ ಪರಧರ್ಮಾತ್ ಅನ್ಯ ವರ್ಣಾಶ್ರಮೋಚಿತ ಧರ್ಮಾದಪಿ ಶ್ರೇಯಾನಧಿಕತರಃ । ಕುತಃ । ಸ್ವಧರ್ಮೇ ಯುದ್ಧಾದೌ ನಿಧನಮಪಿ ಶ್ರೇಯಃ= ಶ್ರೇಷ್ಠತರಮ್ । ಪರಧರ್ಮಃ= ವರ್ಣಾಶ್ರಮಾಂತರಧರ್ಮಸ್ತು ಭಯಾವಹಃ । ನಿಷಿದ್ಧತ್ವಾತ್ ಅನರ್ಥಪ್ರಾಪಕೋ ಯತೋಽತ ಇತ್ಯರ್ಥಃ || 35 ||**

**ಅನುವಾದ- ಜ್ಯಾಯಸೀ ಚೇತ್**- ಎಂಬಲ್ಲಿ ಅರ್ಜುನನು ಎರಡು ಪ್ರಶ್ನೆಯನ್ನು ಮಾಡಿದ್ದನು. (1) ಜ್ಞಾನವೇ ಶ್ರೇಷ್ಠವೆಂದಾದರೆ ಕರ್ಮವನ್ನೇಕೆ ಮಾಡಬೇಕು ? ಹಾಗು (2) ಕರ್ಮ ಮಾಡುವುದಾದರೂ ನರಕಾದಿ ಅನರ್ಥಗಳಿಗೆ ಕಾರಣವಾದ ರಾಗ-ದ್ವೇಷಗಳಿಗೆ ಅವಕಾಶವಿರುವ ಈ ಘೋರವಾದ ಯುದ್ಧದಲ್ಲಿ ಏಕೆ ತೊಡಗಿಸುವೆ? ಎಂದು. ಅವುಗಳಲ್ಲಿ

ಮೊದಲನೆಯ ಪ್ರಶ್ನೆಗೆ '**ಲೋಕೇಽಸ್ಮಿನ್** ' ಎಂದು ಉತ್ತರವನ್ನು ಕೊಡಲಾಗಿದೆ. ಎರಡನೆ ಪ್ರಶ್ನೆಗೆ ಹಿಂದೆ **ಯುಧ್ಯಸ್ವ**= ಯುದ್ಧಕ್ಕೆ ತೊಡಗು, '**ತಯೋರ್ನ ವಶಮಾಗಚ್ಛೇತ್**' ರಾಗ-ದ್ವೇಷಗಳ ವಶನಾಗಬೇಡ ಎಂದು ಇಷ್ಟೇ ಉಪದೇಶಿಸಿ 'ಏಕೆ ತೊಡಗಬೇಕು' ? ಎಂಬ ಮೂಲ ಪ್ರಶ್ನೆಗೆ ಉತ್ತರವನ್ನು ಈ ಶ್ಲೋಕದಲ್ಲಿ ನೀಡಲಾಗಿದೆ.

**ಸ್ವಧರ್ಮಃ**= ತಮ್ಮ ತಮ್ಮ ವರ್ಣಾಶ್ರಮಗಳಿಗೆ ವಿಹಿತವಾದ, ಧರ್ಮವು, **ವಿಗುಣಃ** = ಅಂಗಹೀನವಾದರೂ, **ಸ್ವನುಷ್ಠಿತಾತ್**= ಎಲ್ಲಾ ಅಂಗಗಳಿಂದ ಕೂಡಿದ್ದಾಗಿ ಮಾಡಿದ, **ಪರಧರ್ಮಾತ್**= ಅನ್ಯವರ್ಣ ಆಶ್ರಮಗಳ ಧರ್ಮಕ್ಕಿಂತಲೂ, **ಶ್ರೇಯಾನ್**= ಹೆಚ್ಚಾದದ್ದು, (ಶ್ರೇಷ್ಠವಾದುದು) ಏಕೆಂದರೆ, **ಸ್ವಧರ್ಮೇ**= ತನ್ನ ಧರ್ಮವಾದ ಯುದ್ಧ ಮೊದಲಾದವುಗಳಲ್ಲಿ **ನಿಧನಮಪಿ**= ಸಾಯುವಿಕೆಯೂ ಕೂಡ, **ಶ್ರೇಯಃ**= ಶ್ರೇಷ್ಠವಾದುದು. **ಪರಧರ್ಮಃ**= ಬೇರೆ ವರ್ಣಾಶ್ರಮ ಧರ್ಮಗಳು , **ಭಯಾವಹಃ** = ಭಯ ಉಂಟು ಮಾಡುವಂತಹದ್ದು. ಶಾಸ್ತ್ರನಿಷಿದ್ಧ ವಾದುದರಿಂದ ನರಕಾದಿ ಅನರ್ಥಗಳಿಗೆ ಕಾರಣವಾಗುತ್ತದೆ ಎಂದು ಅಭಿಪ್ರಾಯ. ॥ 35 ॥

**ಪಾಪಾಚರಣೆಗೆ ಏನು ಕಾರಣ ?**

**ಅರ್ಜುನ ಉವಾಚ –**

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥ 36 ॥**

**ಅರ್ಥ** – ಅರ್ಜುನನು ಪ್ರಶ್ನಿಸುತ್ತಾನೆ – ಶ್ರೀಕೃಷ್ಣನೇ ! ಮನುಷ್ಯನಿಗೆ ಪಾಪಕರ್ಮವನ್ನು ಮಾಡಬೇಕೆಂದು ಇಚ್ಛೆ ಇಲ್ಲದಿದ್ದರೂ ಬಲಾತ್ಕಾರದಿಂದ ಯಾರೋ ತೊಡಗಿಸುವಂತೆ ಪಾಪವನ್ನಾಚರಿಸುತ್ತಾನೆ. ಇದಕ್ಕೆ ಏನು ಕಾರಣ ಎಂದು.

'ತಯೋರ್ನ ವಶಮಾಗಚ್ಛೇತ್' ಇತ್ಯತ್ರಾತಿಪ್ರಯತ್ನವತಃ ಪಾಪಹೇತ್ವರಿ-ಷಡ್ವರ್ಗಜಯಃ ಶಕ್ಯ ಇತ್ಯುಕ್ತಮ್ । ತೇಷು ಕೋ ಬಲವಾನ್ ? ತಂ ಮಹಾಪ್ರಯತ್ನೇನ ಜೇಷ್ಯಾಮೀತಿ ಭಾವೇನ ಪೃಚ್ಛತಿ – **ಅಥೇತಿ** ॥ 'ಮಯಿ ಸಂನ್ಯಸ್ಯ ಕರ್ಮಾಣಿ' ಇತ್ಯಾದಾವುಕ್ತಸೇತಿಕರ್ತವ್ಯತಾಕಕರ್ಮ ಕರ್ತವ್ಯತಾರೂಪಪ್ರಕೃತ-ಪ್ರಮೇಯೇ ಪಾಪಹೇತು ಪ್ರಶ್ನೋಽನುಪಯುಕ್ತಃ । ತಥಾಽಪಿ 'ತಯೋರ್ನ ವಶಮ್' ಇತ್ಯರ್ಥೇ ಕಾಮಾದ್ಯರಿಷಡ್ವರ್ಗಸ್ಯ ಪಾಪಹೇತುತ್ವೋಕ್ತ್ಯಾ ಸ್ಮಾರಿತಸ್ತೇಷು ಪ್ರಬಲಪಾಪಹೇತುಪ್ರಶ್ನೋಽಯಂ ಪ್ರಾಸಂಗಿಕ ಇತಿ ಭಾವೇನ ಗೀತಾಕೃತಾ ಪ್ರಕೃತಾದರ್ಥಾದರ್ಥಾಂತರದ್ಯೋತಕೋಽಥಶಬ್ದಃ ಪ್ರಯುಕ್ತಃ ।

**ಯದ್ವಾ 'ಪ್ರಕೃತೇಃ ಕ್ರಿಯಮಾಣಾನಿ' ಇತ್ಯತ್ರೇಶ್ವರಸ್ಯ ಸರ್ವಪ್ರೇರಕತ್ವೋಕ್ತ್ಯಾ ತತ್ಪ್ರೇರಕತ್ವಸ್ಯ, ಪಾರ್ಥಸ್ಯ ದೇವತ್ವೇನ ದೇವಾನಾಂ ಪ್ರೇರಕತ್ವಸ್ಯ ಚ ಜ್ಞಾತತಯಾ ತತ್ರ ಪ್ರಶ್ನಾಯೋಗಾತ್, ಇಂದ್ರಿಯಸ್ಯೇತ್ಯತ್ರ ರಾಗಶಬ್ದಿತಕಾಮಾದ್ಯರಿಷಡ್ವರ್ಗಸ ಪ್ರವರ್ತಕತ್ವೋಕ್ತ್ಯಾ ಪರಮೇಶ್ವರಾತ್ ದೇವಜಾತಾಚ್ಚಾಥಾನಂತರಂ ಕಾಮಾದಿ-ಷಟ್‌ಸು ಬಲವತ್ತ್ವಶ್ನೋಽಯಮಿತಿ ದ್ಯೋತನಾದಾನಂತರ್ಯ ವಾಚೀ ಏವಾ-ಯಮಥಶಬ್ದಃ । ತಥಾ ಚಾಯಮರ್ಥಃ । ಅಥ= ಪರಮೇಶ್ವರಾದ್ದೇವೇಭ್ಯ-ಶ್ಚಾನಂತರಂ । ಅಯಂ ಪುರುಷಃ ಪಾಪಾಚಾರಮನಿಚ್ಛನ್ನಪಿ ಬಲಾನ್ನಿಯೋಜಿತ ಇವ ಪಾಪಂ ಚರತಿ । ಸ ಕಾಮಾದಿಷು ಕೇನ ಬಲವತಾ ಪ್ರಯುಕ್ತಃ= ಪ್ರೇರಿತಶ್ಚರತಿ । ಹೇ ವಾರ್ಷ್ಣೇಯ= ವೃಷ್ಣಿಕುಲೋದ್ಭವ ಇತಿ ॥ 36 ॥**

**ಅನುವಾದ - 'ತಯೋರ್ನ ವಶಮಾಗಚ್ಛೇತ್'** ಎಂಬಲ್ಲಿ ಅತ್ಯಂತ ಪ್ರಯತ್ನದಿಂದ ಅರಿಷಡ್ವರ್ಗಗಳನ್ನು ಗೆಲ್ಲಬಹುದು ಎಂದು ಹೇಳಿದಾಗ ಅವುಗಳಲ್ಲಿ ಯಾವುದು ಅತ್ಯಂತ ಬಲಿಷ್ಠವಾದುದು . ಅದನ್ನು ಮಹಾಪ್ರಯತ್ನದಿಂದ ಗೆಲ್ಲುವೆನು ಎಂಬ ಅಭಿಪ್ರಾಯದಿಂದ ಇಲ್ಲಿ ಅರ್ಜುನನ ಪ್ರಶ್ನೆ. ಪ್ರಕೃತ ಮುಖ್ಯವಾಗಿ ಈಗ ನಿರೂಪಿಸಲು ಹೊರಟಿರುವುದು ಇತಿಕರ್ತವ್ಯತಾ (ಸಾಧನ) ಸಹಿತವಾದ ಕರ್ಮವನ್ನು ಅವಶ್ಯ ಮಾಡಲೇ ಬೇಕು ಎಂಬುದಾಗಿ. **'ಮಯಿ ಸಂನ್ಯಸ್ಯ'** ಎಂಬಲ್ಲಿ ಇದನ್ನು ಹೇಳಿದ್ದಾರೆ. ಅದಕ್ಕೆ ಪಾಪ ಹೇತು ಯಾವುದು ಎನ್ನುವ ಪ್ರಶ್ನೆ ಅನುಪಯುಕ್ತ. ಹಾಗಿದ್ದರೂ **'ತಯೋರ್ನ ವಶಂ'**– ಎಂಬ ಶ್ಲೋಕದಲ್ಲಿ ಕಾಮಾದಿ ಆರು ದೋಷಗಳು ಪಾಪಕ್ಕೆ ಕಾರಣ ಎಂದು ಹೇಳಿರುವುದರಿಂದ ಪಾಪಹೇತುವಿನ ಸ್ಮರಣೆ ಬಂದಿದೆ. ಆದುದರಿಂದ ಈ ಪ್ರಶ್ನೆ ಪ್ರಾಸಂಗಿಕವಾದುದು ಎಂಬ ಅಭಿಪ್ರಾಯದಿಂದ ಗೀತಾಚಾರ್ಯನು **'ಅಥ'** ಎಂಬ ಶಬ್ದವನ್ನು ಪ್ರಯೋಗಿಸಿದ್ದಾನೆ . ಇದಕ್ಕೆ 'ಪ್ರಕೃತ ವಿಷಯಕ್ಕಿಂತ ಬೇರೆ ವಿಷಯ' ಎಂದು ಅರ್ಥ.

ಅಥವಾ ಇಲ್ಲಿ **'ಅಥ '** ಶಬ್ದಕ್ಕೆ 'ಅನಂತರ ' ಎಂದೆ ಅರ್ಥ. **'ಪ್ರಕೃತೇಃ ಕ್ರಿಯಮಾಣಾನಿ'** ಎಂಬಲ್ಲಿ ಭಗವಂತನು ಸರ್ವಪ್ರೇರಕ ಎಂದು ಹೇಳಿದ್ದಾನೆ. ಅದು ಅರ್ಜುನನಿಗೆ ಗೊತ್ತಿದೆ. ಅರ್ಜುನನು ದೇವತೆಯಾದುದರಿಂದ ಭಗವಂತನ ನಂತರ ಪ್ರೇರಕರು ದೇವತೆಗಳು ಎಂದೂ ತಿಳಿದಿದೆ. **'ಇಂದ್ರಿಯಸ್ಯ'** ಎಂಬ ಶ್ಲೋಕದಲ್ಲಿ **'ರಾಗಾದಿ'** ಶಬ್ದಗಳಿಂದ ಕಾಮವೇ ಮೊದಲಾದ ಆರು ದೋಷಗಳು ಪ್ರವರ್ತಕ ಎಂದು ಹೇಳಿದ್ದಾನೆ . ಹೀಗಾಗಿ ಭಗವಂತ ಮತ್ತು ದೇವತೆಗಳು ಇವರ ನಂತರ ಪ್ರವರ್ತಕಗಳಾದ ಕಾಮ, ಕ್ರೋಧ ಮೊದಲಾದ ಆರು ದೋಷಗಳಲ್ಲಿ ಯಾವುದು ಪ್ರಬಲ ಎಂದು ಅರ್ಜುನನ ಪ್ರಶ್ನೆ. ಇದನ್ನು ತಿಳಿಸಲು 'ಅನಂತರ ' ಎಂಬ ಅರ್ಥದಲ್ಲಿ 'ಅಥ ' ಶಬ್ದ ಇಲ್ಲಿ ಪ್ರಯುಕ್ತವಾಗಿದೆ. ಈಗ ಶ್ಲೋಕದ ಅರ್ಥ ಹೀಗಿದೆ. **'ಅಥ '** = ಭಗವಂತ ಮತ್ತು

ದೇವತೆಗಳ ನಂತರ , **ಅಯಂ ಪುರುಷಃ**= ಈ ಮನುಷ್ಯನು, **ಅನಿಚ್ಛನ್ನಪಿ** = ಪಾಪಾಚಾರದಲ್ಲಿ ಇಚ್ಛೆಇಲ್ಲದಿದ್ದರೂ , **ಬಲಾತ್** = ಬಲಾತ್ಕಾರದಿಂದ **ನಿಯೋಜಿತಃ ಇವ** = ಪ್ರೇರಿಸಲ್ಪಟ್ಟವನಂತೆ, **ಪಾಪಂ ಚರತಿ**= ಪಾಪವನ್ನಾಚರಿಸುತ್ತಾನೆ. ಆ ಮನುಷ್ಯನು, **ಕೇನ**= ಕಾಮಾದಿಗಳಲ್ಲಿ ಪ್ರಬಲ ವಾದ ಯಾವ ದೋಷದಿಂದ, **ಪ್ರಯುಕ್ತಃ**= ಪ್ರೇರಿತನಾಗಿದ್ದಾನೆ. **ವಾರ್ಷ್ಣೇಯ**= ವೃಷ್ಣಿಗಳ ವಂಶದಲ್ಲಿ ಹುಟ್ಟಿದ ಶ್ರೀಕೃಷ್ಣನೇ ಎಂದು ಸಂಬೋಧನೆ . ।। 36 ।।

## ರಜೋಗುಣದ ವಿಕಾರವಾದ ಕಾಮ-ಕ್ರೋಧಗಳು ಪಾಪಕಾರಣಗಳು

**ಭಗವಾನುವಾಚ ।**

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ।। 37 ।।**

**ಅರ್ಥ** – ಪರಮಾತ್ಮನ ಮಾತು – ರಜೋಗುಣದ ಪರಿಣಾಮವಾದ ಕ್ರೋಧಕ್ಕೆ ನಿಮಿತ್ತವಾದ ಈ ಕಾಮವೇ ಬಲವತ್ತರವಾದದ್ದು . ಇದಕ್ಕೆ ಭೋಗ್ಯವಿಷಯಗಳು ಬಹಳ. ಇದರಿಂದಾಗಿ ಬ್ರಹ್ಮಹತ್ಯಾದಿ ಮಹಾಪಾಪಗಳು ಘಟಿಸುತ್ತವೆ . ಆದುದರಿಂದ ಈ ಕಾಮವನ್ನು ವೈರಿ ಎಂದು ತಿಳಿಯಬೇಕು.

**ಕಾಮಮೂಲತ್ವಾತ್ ಸರ್ವೇಷಾಂ ಸ ಏವ ಬಲವಾನಿತ್ಯಾಹ- ಕಾಮ ಏಷ ಇತಿ ।। ಏಷ ತ್ವಯಾ ಪೃಷ್ಟಃ ಪುರುಷಸ್ಯ ಪಾಪೇಷು ಬಲವಾನ್ ಪ್ರವರ್ತಕ ಇತ್ಯನೂದ್ಯ ಕಾಮ ಇತಿ ವಿಧೀಯತೇ । ಏಷ ಕಾಮಃ । ಏಷ ಕ್ರೋಧಃ । 'ಕಾಮಾತ್ ಕ್ರೋಧೋಽಭಿಜಾಯತ' (2-62) ಇತ್ಯುಕ್ತೇಃ ಕಾಮಜತ್ವಾತ್ ಕ್ರೋಧಸ್ಯ, ಕಾರ್ಯಕಾರಣಯೋಃ, 'ಗೋಭಿಃ ಶ್ರೀಣೀತ ಮತ್ಸರಮ್' ಇತ್ಯಾದಾವಿವಾ-ಭೇದೋಪಚಾರೇಣೇಯಮುಕ್ತಿಃ । ಸ ಚ ಕ್ರೋಧೋ ರಜೋಗುಣಾತ್ ಸಮುದ್ಭವತೀತಿ ಸ ತಥಾ । ಕಾಮನಿಮಿತ್ತಕೋ ರಜೋಗುಣಪರಿಣಾಮ ಇತ್ಯರ್ಥಃ । ಕ್ರೋಧ ಇತ್ಯುಪಲಕ್ಷಣಮ್ । ತಥಾ ಚ ಕಾಮನಿವೃತ್ತೌ ತನ್ಮೂಲಾಃ ಕ್ರೋಧಾದಯಃ ಪಾಪಹೇತವೋ ನಿವರ್ತಿತುಂ ಶಕ್ಯಂತ ಇತಿ ಕಾಮನಿವೃತ್ತಾ-ವೇವಾತಿಪ್ರಯತ್ನಃ ಕಾರ್ಯ ಇತಿ ಭಾವಃ । ಕಾಮಸ್ಯ ಯಾವದಪೇಕ್ಷಿತಂ ದತ್ವಾ , ಜೇತವ್ಯಃ ಸ, ಇತ್ಯತಃ ಕಾಮಂ ವಿಶಿನಷ್ಟಿ । ಮಹಾಶನಃ ಮಹದಶನಂ ಭೋಗ್ಯಂ ವಿಷಯೋ ಯಸ್ಯ ಸ ತಥಾ । ಮಹಾನ್ ಪಾಪ್ಮಾ ಪಾಪಂ ಬ್ರಹ್ಮಹತ್ಯಾದಿರೂಪಂ ಯಸ್ಮಾತ್ಸ ತಥಾ । ಇಹ= ಐಹಿಕಾಮುಷ್ಮಿಕಪುರುಷಾರ್ಥವಿಷಯೇ । ಏನಂ=**

**ಕಾಮಂ ವೈರಿಣಂ ನಿತ್ಯಂ ಅಶುಭೇಷ್ವೇವ ಪ್ರವರ್ತಕತಯಾ ಮೋಕ್ಷವಿರೋಧಿತ್ವಾತ್ ಶತ್ರುಭೂತಂ ವಿದ್ಧಿ = ಜಾನೀಹಿ । ಕಾಮಾಭಿಮಾನೀ ಕಾಲನೇಮಿರ್ಜ್ಞೇಯಃ ।**
**॥ 37 ॥**

**ಅನುವಾದ** - ಎಲ್ಲದಕ್ಕೂ ಮೂಲಭೂತವಾದುದು ಕಾಮ. ಆದುದರಿಂದ ಈ ಕಾಮವೇ ಪ್ರಬಲ ಎಂದು ಭಗವಂತ ಹೇಳಿದ್ದಾನೆ. **ಏಷಃ**= ಮನುಷ್ಯರು ಪಾಪಕರ್ಮಗಳಲ್ಲಿ ತೊಡಗುವುದಕ್ಕೆ ಬಲವತ್ತರವಾದ ಪ್ರವರ್ತಕ ಯಾವುದು ಎಂದು ಕೇಳಿದೆಯಲ್ಲ ಅದು **ಕಾಮಃ** = ಕಾಮವು. **ಏಷಃ**= ಅದು, **ಕ್ರೋಧಃ**= ಕ್ರೋಧವು.

**'ಕಾಮಾತ್ ಕ್ರೋಧೋಽಭಿಜಾಯತೇ'** ಎಂಬಂತೆ ಕ್ರೋಧಕ್ಕೆ ಕಾರಣವಾದುದು ಕಾಮ. ಕಾರ್ಯ-ಕಾರಣಗಳನ್ನು ಒಂದೆ ಎಂದು ವ್ಯವಹಾರ ಮಾಡುತ್ತಾರೆ. **ಗೋಭಿಃ ಶ್ರೀಣೀತ ಮತ್ಸರಂ**= ಸೋಮರಸವನ್ನು ಹಾಲಿನಿಂದ ಬೆರೆಸಬೇಕು ಎಂಬಲ್ಲಿ ಈ ರೀತಿ ಅಭೇದ ವ್ಯವಹಾರ ಕಂಡಿದೆ. ಇಲ್ಲಿ **ಗೋಭಿಃ** ಎಂದರೆ ಗೋವಿನಿಂದ ಉತ್ಪನ್ನವಾದ ಹಾಲಿನಿಂದ ಎಂದರ್ಥ.

ಈ ಕ್ರೋಧವು **ರಜೋಗುಣಸಮುದ್ಭವಃ**= ರಜೋಗುಣದಿಂದ ಹುಟ್ಟಿದ್ದು. ಅದಕ್ಕೆ ಕಾಮವು ನಿಮಿತ್ತ , ರಜೋಗುಣವು ಪರಿಣಾಮಿಕಾರಣ ಎಂದು ಅರ್ಥ. ಇಲ್ಲಿ ಕ್ರೋಧ ಎಂದರೆ ಲೋಭಾದಿಗಳನ್ನು ಇಟ್ಟುಕೊಳ್ಳಬೇಕು. ಹೀಗಾಗಿ ಕಾಮ ಹೊರಟು ಹೋದಾಗ ಅದರಿಂದಾಗಿ ಉಂಟಾಗುವ ಕೋಪವೇ ಮೊದಲಾದ ಎಲ್ಲ ಪಾಪಹೇತುಗಳೂ ಹೊರಟು ಹೋಗುತ್ತವೆ ಆದುದರಿಂದ ಕಾಮದ ನಿವೃತ್ತಿಗೆ ಹೆಚ್ಚಿನ ಪ್ರಯತ್ನ ಮಾಡಬೇಕು ಎಂದು ಅಭಿಪ್ರಾಯ.

ಕಾಮಕ್ಕೆ ಅಪೇಕ್ಷಿತವಾದ ವಿಷಯಗಳನ್ನು ಪೂರೈಸಿ ಅದನ್ನು ಗೆಲ್ಲಬಹುದು ಎಂಬ ಆಕ್ಷೇಪ ಸರಿಯಲ್ಲ. ಏಕೆಂದರೆ ಅದು **'ಮಹಾಶನ '** ಎಂದರೆ ಎಷ್ಟು ವಿಷಯಗಳನ್ನು ಪೂರೈಸಿದರೂ ಶಾಂತವಾಗದು. ಅದರಿಂದಾಗಿ ಬ್ರಹ್ಮಹತ್ಯಾದಿ ಪಾಪಗಳು ಘಟಿಸುತ್ತವೆ. ಈ ಕಾಮವು ಎಲ್ಲಾ ಐಹಿಕ - ಆಮುಷ್ಮಿಕ ಪುರುಷಾರ್ಥಗಳಿಗೆ ವೈರಿ. ಅಂದರೆ ಯಾವಾಗಲೂ ಕೆಟ್ಟಕೆಲಸಗಳಲ್ಲಿಯೇ ನಮ್ಮನ್ನು ತೊಡಗಿಸುತ್ತದೆಯಾದುದರಿಂದ ಮೋಕ್ಷವಿರೋಧಿ. ಹೀಗಾಗಿ ಈ ಕಾಮವನ್ನು ವೈರಿ ಎಂದು ತಿಳಿ . ಕಾಮಾಭಿಮಾನಿ ಕಾಲನೇಮಿ ಎಂದು ತಿಳಿಯಬೇಕು. ॥ 37 ॥

## ತ್ರಿವಿಧ ಜೀವರಿಗೂ ಕಾಮ ಆವಶ್ಯಕ

**ಧೂಮೇನಾವ್ರಿಯತೇ ವಹ್ನಿರ್ಯಥಾಽಽದರ್ಶೋ ಮಲೇನ ಚ ।**
**ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥ 38 ॥**

**ಅರ್ಥ** - ಬೆಂಕಿಯನ್ನು ಹೊಗೆ ಆವರಿಸುವಂತೆ, ಕನ್ನಡಿಯನ್ನು ಕೊಳೆ ಮುಚ್ಚುವಂತೆ, ಗರ್ಭವನ್ನು ಗರ್ಭಚೀಲವು ಸುತ್ತುವರೆಯುವಂತೆ, ಈ ಕಾಮದಿಂದ ಎಲ್ಲವೂ ಸುತ್ತುವರಿಯಲ್ಪಟ್ಟಿದೆ.

**ಅಶುಭಪ್ರೇರಕೇಷು ಕ್ರೋಧಾದ್ಯಭಿಮಾನ್ಯಸುರೇಷು ಕಾಮಃ ಕಥಂ ಬಲವಾನಿತ್ಯತ ಆಹ- ಧೂಮೇನೇತ್ಯಾದಿ ಶ್ಲೋಕದ್ವಯೇನ ॥ ವಹ್ನಿರ್ಯಥಾ ಧೂಮೇನಾವ್ರಿಯತೇ ತಥಾ ತೇನ= ಕಾಮೇನ ಇದಂ= ಉತ್ತಮಜೀವಜಾತಂ ಕಿಂಚಿದಾವೃತಮ್ । ಯಥಾ ಚಾದರ್ಶೋ= ದರ್ಪಣೋ ಮಲೇನಾವೃತಃ ತಥೇದಂ= ಮಧ್ಯಮಜೀವಜಾತಂ ತೇನ= ಕಾಮೇನಾಧಿಕಮಾವೃತಮ್ । ಯಥಾ ಚ ಗರ್ಭ ಉಲ್ಬೇನ= ಗರ್ಭವೇಷ್ಟನಚರ್ಮಣಾಽಽವ್ರಿಯತೇ= ಆಚ್ಛಾದ್ಯತೇ ತಥೇದಮಧಮಜೀವಜಾತಂ ತೇನ ಕಾಮೇನಾತ್ಯಂತಮಾವೃತಮ್ । ತ್ರಿವಿಧಸ್ಯಾಪಿ ಜೀವಜಾತಸ್ಯ ಯಥಾಯೋಗ್ಯಂ ಯಥಾವತ್ತಯಾ ಪರಾಪರತತ್ತ್ವಜ್ಞಾನ ಪ್ರತಿಬಂಧಕಃ ಕಾಮ ಇತ್ಯರ್ಥಃ । ಯದ್ವಾ ಇದಮಿತ್ಯನೇನ ಈಶ್ವರಾಂತಃಕರಣಜೀವಾಖ್ಯಂ ವಸ್ತುತ್ರಯಂ ಗ್ರಾಹ್ಯಮ್ ॥ ವಹ್ನಿರ್ಯಥಾ ಧೂಮೇನಾವ್ರಿಯತೇ ತಥೇಶ್ವರೋ ಜೀವಗತಕಾಮೇನಾವೃತಃ । ಪ್ರಕಾಶರೂಪೋಽಪ್ಯಗ್ನಿರ್ಧೂಮೇನಾವೃತೋಽನ್ಯೈರ್ಯಥಾ ನ ದೃಶ್ಯತೇ ತಥೇಶ್ವರಃ ಸ್ವಯಂ ಸರ್ವಂ ಜಾನನ್ನಪಿ ನಾನ್ಯೈರ್ಜ್ಞಾಯತ ಇತ್ಯರ್ಥಃ । ಆದರ್ಶೋ ಮಲೇನೇವಾಂತಃಕರಣಂ ಕಾಮೇನಾವೃತಮ್ । ಯಥಾಽಽದರ್ಶೋ ಮಲೇನಾವೃತೋ ಮುಖಾದ್ಯಭಿವ್ಯಕ್ತಿಹೇತುರ್ನ ಭವತಿ, ತಥಾ ಜೀವಾಂತಃಕರಣಂ ಕಾಮಾವೃತಂ ಸದೀಶ್ವರಂ ಜೀವಂ ವಾ ನ ಪ್ರಕಾಶಯತೀತ್ಯರ್ಥಃ । ಯಥೋಲ್ಬೇನಾವೃತೋ ಗರ್ಭಃ ತಥಾ ಕಾಮೇನಾವೃತೋ ಜೀವಃ, ಉಲ್ಬೇನ ವೇಷ್ಟಿತೋ ಗರ್ಭೋ ಯಥಾ ವ್ಯಾಪಾರಾಕ್ಷಮಸ್ತಥಾ ಜೀವೋಽಪಿ ಕಾಮೇನಾವೃತೋ ನೇಶ್ವರಾದಿಜ್ಞಾನೇ ಕ್ಷಮ ಇತ್ಯರ್ಥಃ ॥ 38 ॥**

**ಅನುವಾದ** - ಕೆಟ್ಟ ಕೆಲಸಗಳಲ್ಲಿ ಪ್ರೇರಕರಾದ ಕ್ರೋಧಾದಿ ಅಭಿಮಾನಿಗಳಲ್ಲಿ ಕಾಮನೇ (ಕಾಲನೇಮಿ) ಪ್ರಬಲ ಹೇಗೆ ಎನ್ನುವುದನ್ನು ಈ ಶ್ಲೋಕದಲ್ಲಿ ಸಮರ್ಥಿಸುತ್ತಾರೆ. **ವಹ್ನಿಃ** = ಬೆಂಕಿಯು, **ಯಥಾ** = ಹೇಗೆ **ಧೂಮೇನ** = ಹೊಗೆಯಿಂದ, **ಆವ್ರಿಯತೇ** = ಆವರಿಸಲ್ಪಟ್ಟದೆಯೋ **ತಥಾ** = ಹಾಗೆ, **ತೇನ** = ಕಾಮದಿಂದ, **ಇದಂ** = ಉತ್ತಮಜೀವರ ಸಮೂಹ **ಆವೃತಂ** = ಸ್ವಲ್ಪ ಆವರಿಸಲ್ಪಟ್ಟಿದೆ. **ಯಥಾ ಚ** = ಹೇಗೆ , **ಆದರ್ಶಃ** = ಕನ್ನಡಿಯು,

**ಮಲೇನ**= ಕೊಳೆಯಿಂದ **ಆವೃತಃ**= ಆವರಿಸಲ್ಪಟ್ಟಿದೆಯೋ **ತಥಾ**= ಹಾಗೆ, **ಇದಂ**= ಮಧ್ಯಮಜೀವರ ಗುಂಪು **ತೇನ** = ಕಾಮದಿಂದ **ಆವೃತಂ**= ಹೆಚ್ಚಾಗಿ ಆವರಿಸಲ್ಪಟ್ಟಿದೆ. **ಯಥಾ ಚ**= ಹೇಗೆ, **ಗರ್ಭಃ**= ಗರ್ಭವು, **ಉಲ್ಬೇನ**= ಗರ್ಭಚೀಲದಿಂದ **ಆವ್ರಿಯತೇ**= ಆವರಿಸಲ್ಪಟ್ಟಿದೆಯೋ **ತಥಾ**= ಹಾಗೆ, **ಇದಂ** = ಅಧಮ ಜೀವರ ಗುಂಪು, **ತೇನ**= ಕಾಮದಿಂದ, **ಆವೃತಂ**= ಅತ್ಯಂತವಾಗಿ ಆವರಿಸಲ್ಪಟ್ಟಿದೆ. ಮೂರು ವಿಧವಾದ ಜೀವರಿಗೆ ಅವರವರ ಯೋಗ್ಯತೆಯಂತೆ ಕಾಮವು ಆವರಿಸಿರುವುದರಿಂದ ಅವರಿಗೆ ಪರ-ಅಪರ ತತ್ತ್ವದ ಜ್ಞಾನ ಬರದಂತೆ ತಡೆಯುತ್ತದೆ ಈ ಕಾಮ ಎಂದು ಅಭಿಪ್ರಾಯ.

ಅಥವಾ - 'ಇದಂ' ಎಂಬ ಪದದಿಂದ ಈಶ್ವರ, ಅಂತಃಕರಣ ಮತ್ತು ಜೀವ ಎಂಬ ಮೂರು ವಸ್ತುಗಳನ್ನು ಇಟ್ಟುಕೊಳ್ಳಬೇಕು . ಬೆಂಕಿಯನ್ನು ಹೊಗೆ ಆವರಿಸಿದಾಗ ಪ್ರಕಾಶಮಾನವಾಗಿದ್ದರೂ ಬೆಂಕಿ ಹೇಗೆ ಮತ್ತೊಬ್ಬರಿಗೆ ಕಾಣುವುದಿಲ್ಲವೋ ಅದರಂತೆ ಜೀವನಲ್ಲಿರುವ ಕಾಮವು ಭಗವಂತನಿಗೆ ಆವರಕವಾದಾಗ ಸ್ವಪ್ರಕಾಶನಾದ ಭಗವಂತನನ್ನು ಜೀವ ತಿಳಿಯಲಾರ. ಕನ್ನಡಿಯಲ್ಲಿ ಕೊಳೆ ತುಂಬಿದಾಗ ಅದರಲ್ಲಿ ಮುಖದ ಪ್ರತಿಬಿಂಬ ಹೇಗೆ ಮೂಡಲಾರದೋ ಅದರಂತೆ ಕಾಮದಿಂದ ಮನಸ್ಸು ಆವರಿಸಲ್ಪಟ್ಟಾಗ ಆ ಮನಸ್ಸಿನಲ್ಲಿ ಜೀವನಾಗಲೀ ಈಶ್ವರನಾಗಲೀ ಮೂಡಲು ಸಾಧ್ಯವಿಲ್ಲ. ಗರ್ಭಚೀಲವು ಗರ್ಭಕ್ಕೆ ಸುತ್ತುವರೆದಿದೆ. ಹೀಗಾಗಿ, ಈ ಗರ್ಭವು ಯಾವುದೇ ಕೆಲಸ ಮಾಡಲು ಸಮರ್ಥವಾಗಿಲ್ಲ. ಅದರಂತೆ ಕಾಮವು ಜೀವನಿಗೆ ಆವರಕವಾಗಿದೆಯಾದುದರಿಂದ ಜೀವನು ಈಶ್ವರನ ಜ್ಞಾನವನ್ನು ಪಡೆಯಲು ಅಸಮರ್ಥನಾಗಿದ್ದಾನೆ ಎಂದು ಅರ್ಥ. ॥ 38 ॥

**ಕಾಮವು ಅಪರೋಕ್ಷಜ್ಞಾನವನ್ನೂ ತಡೆಯುತ್ತದೆ.**

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥ 39 ॥**

**ಅರ್ಥ**- ಶಾಸ್ತ್ರಾಭ್ಯಾಸದಿಂದ ಜ್ಞಾನವನ್ನು ಪಡೆದಿದ್ದರೂ ಕೂಡ ಆ ಜ್ಞಾನವು ಕಾಮದಿಂದ ಆವೃತವಾದಾಗ ಅಪರೋಕ್ಷ ಜ್ಞಾನಕ್ಕೆ ಕಾರಣವಾಗುವುದಿಲ್ಲ. ಈ ಕಾಮ ಸದಾ ಅಪಕಾರವನ್ನೇ ಮಾಡುತ್ತದೆ ಮತ್ತು ಎಷ್ಟು ವಿಷಯಪದಾರ್ಥ ಒದಗಿಸಿದರೂ ಸಾಲದು . ಅಷ್ಟೇ ಅಲ್ಲ ತೃಪ್ತಿಯೇ ಇಲ್ಲದಂತಹದು.

**ಏವಂ ಜ್ಞೇಯಸ್ಯೇಶ್ವರಾದೇಃ ಜ್ಞಾನಕರಣಸ್ಯ ಮನಸಃ ಜ್ಞಾತುರ್ಜೀವಸ್ಯ ಪ್ರತಿಬಂಧಕಃ ಕಾಮ ಇತ್ಯುಕ್ತ್ವಾ ಜ್ಞಾನೋತ್ಪತ್ತಿಪ್ರತಿಬಂಧಕತ್ವಮುಕ್ತಮ್ । ಇದಾನೀಂ ಶಾಸ್ತ್ರತೋ ಜಾತಮಪಿ ಜ್ಞಾನಂ ಸ್ವಕಾರ್ಯಾಪರೋಕ್ಷಜ್ಞಾನಾಯ ನ ಪ್ರಭವತೀ-**

**ತ್ಯಾಹ- ಆವೃತಮಿತಿ ॥ ಜ್ಞಾನಿನಃ=** ಶಾಸ್ತ್ರಜನಿತಜ್ಞಾನಿನೋಽಪಿ **ಜ್ಞಾನಂ** ಕಾಮಾವೃತಂ ಭಗವದಪರೋಕ್ಷಜ್ಞಾನಾಯ ನ ಪ್ರಭವತಿ । ಕಿಮು ಗುರೂಪದೇಶ-ಮಾತ್ರಜಜ್ಞಾನವತ ಇತಿ ಸೂಚನಾಯ ಜ್ಞಾನಿನ ಇತ್ಯುಕ್ತಮ್ । ಅನ್ಯಥಾ ಜ್ಞಾನಸ್ಯ ಜ್ಞಾನಿಸಂಬಂಧಾವ್ಯಭಿಚಾರಾತ್ ಜ್ಞಾನಿನ ಇತ್ಯುಕ್ತಿರ್ವ್ಯರ್ಥಾ ಸ್ಯಾತ್ । ಕೇನಾವೃತಂ ಜ್ಞಾನಮಿತ್ಯತ ಉಕ್ತಮ್- **ಕಾಮರೂಪೇಣೇತಿ ॥ ರೂಪ್ಯತೇ=** ನಿರೂಪ್ಯತೇ ಅನೇನೇತಿ ರೂಪಮಾಖ್ಯಾ, ಕಾಮ ಇತಿ ರೂಪಮಾಖ್ಯಾ ಯಸ್ಯ ತೇನ **ಕಾಮ-ರೂಪೇಣ=** ಕಾಮಾಖ್ಯೇನ **ನಿತ್ಯವೈರಿಣಾ=** ಸದಾಽಪಕಾರಿಣಾ **ದುಷ್ಪೂರೇಣ =** ದುಃಖೇನ ಪೂರಯಿತವ್ಯೇನ । ನ ಕೇವಲಂ ದುಷ್ಪೂರಃ ಕಿಂ ತ್ವನಲೇನ ನ ವಿದ್ಯತೇಽಲಂ ತೃಪ್ತಿರ್ಯಸ್ಯ ಸೋಽನಲಃ । ತೇನ ಮಹತೋ ಭೋಗಸ್ಯ ವಿಷಯಸ್ಯ ಪ್ರಾಪ್ತಾವಪಿ ಅಧಿಕೇಚ್ಛಯಾಽಲಂಬುದ್ಧಿಹೀನೇನೇತ್ಯರ್ಥಃ ॥ 39 ॥

ಅನುವಾದ - ಜ್ಞಾನಕ್ಕೆ ವಿಷಯನಾದ ಈಶ್ವರ, ಜ್ಞಾನ ಪಡೆಯುವ ಜೀವ, ಮತ್ತು ಜ್ಞಾನಕ್ಕೆ ಸಾಧನವಾದ ಮನಸ್ಸು ಈ ಮೂರಕ್ಕೂ ಕಾಮವು ಆವರಕವಾಗಿದೆಯಾದುದರಿಂದ ಕಾಮವು ಜ್ಞಾನಕ್ಕೆ ಪ್ರತಿಬಂಧಕ ಎಂದು ಹಿಂದೆ ಹೇಳಿದ್ದಾರೆ. ಈಗ ಶಾಸ್ತ್ರಾಧ್ಯಯನದಿಂದ ಜ್ಞಾನಬಂದರೂ ಕೂಡ ಅದು ಅಪರೋಕ್ಷ ಜ್ಞಾನಕ್ಕೆ ಸಾಧನವಾಗಲಾರದು ಎಂದು ಈ ಶ್ಲೋಕದಲ್ಲಿ ಹೇಳುತ್ತಿದ್ದಾರೆ.

**ಜ್ಞಾನಿನಃ** = ಶಾಸ್ತ್ರದಿಂದ ಜ್ಞಾನವನ್ನು ಪಡೆದವನ, **ಜ್ಞಾನಂ** = ಜ್ಞಾನವು, **ಆವೃತಂ** = ಕಾಮದಿಂದ ಆವೃತವಾದದ್ದಾಗಿ ಭಗವಂತನ ಅಪರೋಕ್ಷ ಜ್ಞಾನಕ್ಕೆ ಸಮರ್ಥವಾಗುವುದಿಲ್ಲ. ಶಾಸ್ತ್ರಾಭ್ಯಾಸದಿಂದ ಬಂದ ಜ್ಞಾನವೇ ಪ್ರಯೋಜನಕ್ಕೆ ಬಾರದು ಎಂದ ಮೇಲೆ ಕೇವಲ ಗುರೂಪದೇಶದಿಂದ ಬರುವ ಜ್ಞಾನ ಅಪರೋಕ್ಷಜ್ಞಾನ ಸಮರ್ಥವಾಗುವುದಿಲ್ಲ ಎಂದು ಪ್ರತ್ಯೇಕ ಹೇಳಬೇಕಾಗಿಲ್ಲ ಎಂದು ತಿಳಿಸಲು 'ಜ್ಞಾನಿನಃ' ಎಂದು ಹೇಳಲಾಗಿದೆ. ಇಲ್ಲದಿದ್ದರೆ **ಜ್ಞಾನಿನಃ ಜ್ಞಾನಂ** ಎಂದು ಹೇಳಬೇಕಾಗಿಲ್ಲ. ಏಕೆಂದರೆ ಜ್ಞಾನವು ಜ್ಞಾನಿಗಳಲ್ಲಿಯೇ ಇರುವುದು ಹೊರತು ಬೇರೆಯವರಲ್ಲಿ ಅಲ್ಲ . ಆದುದರಿಂದ 'ಜ್ಞಾನಿನಃ' ಎಂದರೆ ಶಾಸ್ತ್ರಾಭ್ಯಾಸದಿಂದ ಜ್ಞಾನ ಪಡೆದವರು ಎಂದು ಅರ್ಥ. ಜ್ಞಾನಕ್ಕೆ ಆವರಕವಾದದ್ದು ಯಾವುದೆಂದರೆ ಕಾಮ ಎಂಬ ಹೆಸರುಳ್ಳ ನಿತ್ಯವೈರಿ. ಇಲ್ಲಿ **ರೂಪ್ಯತೇ ನಿರೂಪ್ಯತೇ ಅನೇನ** ಎಂದು ವಿಗ್ರಹ ಮಾಡಿದಾಗ ರೂಪ ಎಂದರೆ ಹೆಸರು. **ಕಾಮರೂಪೇಣ** ಎಂದರೆ ಕಾಮ ಎಂದು ಹೆಸರುಳ್ಳದ್ದು ಎಂದು ಅರ್ಥ. ಇದು **ನಿತ್ಯವೈರಿ** ಎಂದರೆ 'ಸದಾ ಅಪಕಾರಿ' ಎಂದು ಅರ್ಥ ಮತ್ತು, **ದುಷ್ಪೂರಃ=** ಕಷ್ಟಪಟ್ಟು ತುಂಬಿಸಲ್ಪಡಬೇಕಾದದ್ದು. ಕೇವಲ ದುಷ್ಪೂರ ಅಷ್ಟೇ ಅಲ್ಲ. ಇದು **ಅನಲಃ** = ಅಲಂ ಎಂದರೆ ತೃಪ್ತಿ ಎಂದರ್ಥ. **ನ ವಿದ್ಯತೇ ಅಲಂ ಯಸ್ಯ ಸಃ ಅನಲಃ** ಎಂದರೆ ಎಷ್ಟು ಪೂರೈಸಿದರೂ ತೃಪ್ತಿಯೇ

ಇಲ್ಲದ ಎಂದರ್ಥ. ಆದುದರಿಂದ ಬಹಳಷ್ಟು ವಿಷಯ ಪದಾರ್ಥ ಒದಗಿಸಿದರೂ ಮತ್ತಷ್ಟು ಬೇಕೆಂಬಾಸೆಯಿಂದ ತೃಪ್ತಿಯೇ ಇಲ್ಲದ್ದು ಕಾಮ ಎಂದರ್ಥ. ಈ ಕಾಮದಿಂದ ಜ್ಞಾನ ಆವರಿಸಲ್ಪಟ್ಟಾಗ ಅದು ಅಪರೋಕ್ಷಜ್ಞಾನವನ್ನು ಉಂಟುಮಾಡುವುದಿಲ್ಲ. ।। 39 ।।

## ಜ್ಞಾನೇಂದ್ರಿಯ ಮನಸ್ಸುಗಳನ್ನು ಆಶ್ರಯಿಸದ ಕಾಮವು ಜ್ಞಾನ ಬರಲು ತಡೆಯಾಗಿದೆ

**ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ।। 40 ।।**

**ಅರ್ಥ** - ಇಂದ್ರಿಯಗಳು ಮತ್ತು ಮನಸ್ಸು ಈ ಕಾಮಕ್ಕೆ ಆಶ್ರಯತಾಣ. ಈ ಇಂದ್ರಿಯಾದಿಗಳು ವಿಷಯ ಸಂಪರ್ಕಕ್ಕೆ ಬಂದಾಗ ಅಲ್ಲಿ ಕಾಮ ಎಂಬ ಶತ್ರು ಇದ್ದು ಜ್ಞಾನ ಬರದಂತೆ ತಡೆಯುತ್ತದೆ . ಅಥವಾ ಬಂದ ಜ್ಞಾನವು ಕಾರ್ಯಸಮರ್ಥವಾಗದಂತೆ ತಡೆಯುತ್ತದೆ ಹೀಗಾಗಿ ಈ ಕಾಮ ಮನುಷ್ಯನನ್ನು ಅವಿವೇಕಿಯನ್ನಾಗಿಸುತ್ತದೆ.

**ಯದರ್ಥಮರ್ಜುನೇನ ಪಾಪಪ್ರವರ್ತಕೇಷು ಬಲವಾನ್ ಪೃಷ್ಟಃ, ಉತ್ತರಿತಶ್ಚ ತಸ್ಯ ಬಲವತಃ ಕಾಮಸ್ಯ ಶತ್ರೋರ್ವಧಾರ್ಥಮಧಿಷ್ಠಾನಮಾಹ- ಇಂದ್ರಿಯಾಣೀತಿ ।। ಅಸ್ಯ= ಕಾಮಾಖ್ಯಶತ್ರೋರಿಂದ್ರಿಯಾಣಿ= ಚಕ್ಷುರಾದೀನಿ ಮನೋ ಬುದ್ಧಿಶ್ಚಾಧಿಷ್ಠಾನಮ್ । ಪ್ರಾಧಾನ್ಯಜ್ಞಾಪನಾಯ ಮನೋಬುದ್ಧ್ಯೋಃ ಪೃಥಗುಕ್ತಿಃ । ಅಧಿಷ್ಠಾನತಾಂ ವ್ಯನಕ್ತಿ- ಏತೈರಿತಿ ।। ಏತೈರ್ಮನೋಬುದ್ಧೀಂದ್ರಿಯೈರ್ವಿಷಯಸಂಸೃಷ್ಟೈರೇಷ= ಕಾಮಾಖ್ಯಶತ್ರುರ್ಜ್ಞಾನಮಾವೃತ್ಯ= ಜ್ಞಾನಜನ್ಮ ಪ್ರತಿಬಧ್ಯೇತಿ ವಾ, ಜಾತಮಪಿ ಜ್ಞಾನಂ ಕಾರ್ಯಾಕ್ಷಮಂ ಕೃತ್ವೇತಿ ವಾಽರ್ಥಃ । ದೇಹಿನಂ= ಜೀವಂ ವಿಮೋಹಯತಿ ।। 40 ।।**

**ಅನುವಾದ** - ಅರ್ಜುನನು ಪಾಪ ಪ್ರವರ್ತಕಗಳಾದ ಕಾಮಾದಿಗಳಲ್ಲಿ ಯಾವುದು ಪ್ರಬಲ ಎಂದು ಪ್ರಶ್ನಿಸಿದ್ದೂ , ಕಾಮವೇ ಪ್ರಬಲ ಎಂದು ಶ್ರೀಕೃಷ್ಣ ಉತ್ತರಿಸಿದ್ದೂ ಪ್ರಬಲವಾದ ಕಾಮದ ನಿಗ್ರಹಕ್ಕಾಗಿ . ಹೀಗಾಗಿ ಕಾಮವನ್ನು ನಿಗ್ರಹಿಸಲು ಕಾಮದ ಆಶ್ರಯಸ್ಥಾನವನ್ನು ಈ ಶ್ಲೋಕದಲ್ಲಿ ತಿಳಿಸಲಾಗಿದೆ. **ಅಸ್ಯ** = ಈ ಕಾಮನೆಂಬ ಶತ್ರುವಿಗೆ **ಇಂದ್ರಿಯಾಣಿ** = ಕಣ್ಣು , ಇವೇ ಮೊದಲಾದ ಇಂದ್ರಿಯಗಳು , **ಮನಃ ಬುದ್ಧಿಶ್ಚ** = ಮನಸ್ಸು , ಬುದ್ಧಿ ಇವುಗಳು , **ಅಧಿಷ್ಠಾನಂ** = ಆಶ್ರಯಗಳು. ಇಲ್ಲಿ ಬುದ್ಧಿಯೂ ಮನಸ್ಸಿನ ಒಂದು ಪ್ರಭೇದ. ಹಾಗಿದ್ದರೂ ಪ್ರತ್ಯೇಕವಾಗಿ ಹೇಳಿದ್ದು ಕಾಮದ ಮುಖ್ಯವಾಸಸ್ಥಾನ ಅದು ಎಂದು ಪ್ರಾಧಾನ್ಯವನ್ನು ತಿಳಿಸುವುದಕ್ಕಾಗಿ . ಅದು ಹೇಗೆ **ಅಧಿಷ್ಠಾನಂ**

ಎಂದರೆ 'ಏತೈಃ' = ವಿಷಯ ಸಂಬಂಧವುಳ್ಳ ಈ ಮನಸ್ಸು, ಬುದ್ಧಿ, ಇಂದ್ರಿಯಗಳಿಂದ, **ಏಷಃ**= ಈ ಕಾಮವೆಂಬ ಶತ್ರುವು, **ಜ್ಞಾನಂ ಆವೃತ್ಯ** = ಜ್ಞಾನವನ್ನು ಹುಟ್ಟದಂತೆ ಮಾಡಿ, ಅಥವಾ ಹುಟ್ಟಿದ ಜ್ಞಾನವನ್ನು ಕಾರ್ಯಸಾಧಕವಾಗದಂತೆ ಮಾಡಿ , **ದೇಹಿನಂ** = ಜೀವನನ್ನು , **ವಿಮೋಹಯತಿ** = ಅವಿವೇಕಿಯನ್ನಾಗಿಸುತ್ತದೆ. ।। 40 ।।

## ಇಂದ್ರಿಯ ನಿಗ್ರಹದಿಂದ ಕಾಮನಾಶ

**ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ।। 41 ।।**

**ಅರ್ಥ**- ಆದುದರಿಂದ ಭರತಶ್ರೇಷ್ಠನಾದ ಅರ್ಜುನನೇ ! ನೀನು ಮೊದಲು ಇಂದ್ರಿಯಗಳನ್ನು ನಿಗ್ರಹಿಸಿ, ಜ್ಞಾನ, ವಿಜ್ಞಾನಗಳಿಗೆ ನಾಶಕವಾದ ಈ, ಪಾಪಕ್ಕೆ ಕಾರಣವಾದ ಕಾಮವನ್ನು ನಾಶ ಮಾಡು.

**ತಸ್ಮಾತ್ ಹೇ ಭರತರ್ಷಭ ತ್ವಮಿಂದ್ರಿಯಾಣ್ಯಾದೌ ನಿಯಮ್ಯ= ವಿಷಯ-ಸಂಗತಾನ್ಯಕೃತ್ವಾ , ಸಂಗತತ್ವೇ ವಾ ಮನೋಬುದ್ಧ್ಯೋರ್ವಿಷಯಸ್ಪರ್ಶಂ ಅಕೃತ್ವಾ, ತಯೋರ್ವಿಷಯಸಂಸ್ಪರ್ಶೇಽಪಿ ಕ್ಷೋಭಮ್ ಅಪ್ರಾಪ್ಯೇತಿ ವಾಽರ್ಥಃ । ಜ್ಞಾನ-ವಿಜ್ಞಾನಯೋರ್ನಾಶನಂ ಯಸ್ಮಾತ್ ತಂ ಪಾಪ್ಮಾನಂ= ಪಾಪಹೇತುಮೇನಂ= ಕಾಮಂ ಪ್ರಜಹಿ= ಹತಂ ಕುರು । ಹೃತಾಧಿಷ್ಠಾನೋ ಹಿ ಶತ್ರುರ್ನಾಶಯಿತುಂ ಶಕ್ಯ ಇತಿ ಪ್ರಸಿದ್ಧಿದ್ಯೋತಕೋ ಹಿ ಶಬ್ದಃ । 'ಇಂದ್ರಿಯಜಯಃ ಕಾಮಹನನೋಪಾಯ' ಇತಿ ಭಾವಃ ।। 41।।**

**ಅನುವಾದ**- ಆದುದರಿಂದ, **ಹೇ ಭರತರ್ಷಭ**= ಭರತಕುಲಶ್ರೇಷ್ಠನಾದ ಅರ್ಜುನನೇ ! ನೀನು **ಇಂದ್ರಿಯಾಣಿ** = ಚಕ್ಷುರಾದಿ ಇಂದ್ರಿಯಗಳನ್ನು , **ಆದೌ** = ಮೊದಲು, **ನಿಯಮ್ಯ** = ವಿಷಯ ಸಂಬಂಧವನ್ನು ಪಡೆಯದಂತೆ ಮಾಡು, ಅಥವಾ ಇಂದ್ರಿಯಗಳು ವಿಷಯ ಸಂಬಂಧವನ್ನು ಹೊಂದಿದ್ದರೂ ಮನಸ್ಸು ವಿಷಯ ಸಂಬದ್ಧವಾಗದಂತೆ ತಡೆ. ಅಥವಾ ಮನಸ್ಸು ವಿಷಯ ಸಂಬದ್ಧವಾಗಿದ್ದರೂ ಅದನ್ನು ಕ್ಷೋಭೆಗೊಳಗಾಗದಂತೆ ಮಾಡು ಎಂದು ಅರ್ಥ. **ಜ್ಞಾನವಿಜ್ಞಾನನಾಶನಂ**= ಜ್ಞಾನ ಮತ್ತು ವಿಜ್ಞಾನಕ್ಕೆ ನಾಶಕವಾದ, **ಪಾಪ್ಮಾನಂ**= ಪಾಪಕ್ಕೆ ಕಾರಣವಾದ, **ಏನಂ**= ಈ ಕಾಮವನ್ನು **ಪ್ರಜಹಿ**= ಕೊಲ್ಲು. ಆಶ್ರಯ ನಾಶವಾದಾಗ ಆಶ್ರಿತವಾದದ್ದು ನಾಶವಾಗುತ್ತದೆ ಎನ್ನುವ ಪ್ರಸಿದ್ಧಿಯನ್ನು 'ಹಿ' ಶಬ್ದ ತಿಳಿಸುತ್ತದೆ. ಇಂದ್ರಿಯಗಳ ನಿಗ್ರಹವೇ ಕಾಮವನ್ನು ಜಯಿಸಲು ಸಾಧನ ಎಂದು ಹೇಳಿದಂತೆ ಆಯಿತು. ।। 41 ।।

## ತಾರತಮ್ಯ ಜ್ಞಾನ ಆವಶ್ಯಕ

**ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ 42 ॥**

ಅರ್ಥ - ಇಂದ್ರಿಯಗಳು ಅಂದರೆ ಇಂದ್ರಿಯಾಭಿಮಾನಿ ದೇವತೆಗಳು ಶ್ರೇಷ್ಠರಾದವರು. ಅವರಿಗಿಂತ ಮನೋಭಿಮಾನಿಗಳು ಉತ್ತಮರು. ಮನಸ್ಸಿಗಿಂತ, ಬುದ್ಧ್ಯಭಿಮಾನಿಗಳು ಉತ್ಕೃಷ್ಟರಾದವರು. ಇವರಿಗಿಂತಲೂ ಶ್ರೇಷ್ಠನಾದವನು ಪರಮಾತ್ಮ.

**ಶತ್ರುಹನನೇ ಆಯುಧರೂಪಂ ಜ್ಞಾನಂ 'ಏವಂ ಬುದ್ಧೇಃ' ಇತ್ಯುತ್ತರಶ್ಲೋಕೇ ವಕ್ತುಂ ಜ್ಞಾನವಿಷಯಮಾಹ- ಇಂದ್ರಿಯಾಣೀತಿ ॥ ಶರೀರಾದಿಂದ್ರಿಯಾಣಿ ಪರಾಣಿ । ಉತ್ಕೃಷ್ಟಾನೀತ್ಯರ್ಥಃ । 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ' ಇತ್ಯಧ್ಯಾಹಾರೇಣ ಯೋಜನಾ ಧ್ಯೇಯಾ । ತಥಾ 'ಯೋ ಬುದ್ಧೇಃ ಪರತಸ್ತು ಸ' ಇತ್ಯತ್ರ 'ಬುದ್ಧೇರಾತ್ಮಾ ಮಹಾನ್ ಪರಃ । ಮಹತಃ ಪರಮವ್ಯಕ್ತಂ ಯೋಽವ್ಯಕ್ತಾತ್ಪರತಸ್ತು ಸಃ' ಇತ್ಯಪಿ ಧ್ಯೇಯಮ್ । ಸ ಪರಮಾತ್ಮೇತ್ಯರ್ಥಃ । 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಇತ್ಯಾದಿ ಕಾಠಕಶ್ರುತೇಃ (3-10) । ಅಸ್ಯಾರ್ಥಸ್ತು -**

**'ದೇವೇಭ್ಯ ಇಂದ್ರಿಯಾತ್ಮಭ್ಯೋ ಜ್ಯಾಯಾಂಸೋಽರ್ಥಾಭಿಮಾನಿನಃ ।**
**ಸೋಮವಿತ್ತಪಸೂರ್ಯಾಪ್ಪಾ ಅಶ್ವ್ಯಗ್ನೀಂದ್ರೇಂದ್ರಸೂನವಃ ॥**

**ಯಮೋ ದಕ್ಷಶ್ಚೇಂದ್ರಿಯೇಶಾಃ ಸೌಪರ್ಣೀ ವಾರುಣೀ ತಥಾ ।**
**ಉಮೇತಿ ಚಾರ್ಥಮಾನಿನ್ಯಸ್ತಿಸ್ರೋ ದ್ವಿದ್ವ್ಯೇಕದೇವತಾಃ ॥**

**ಮನೋಽಭಿಮಾನಿನೋ ರುದ್ರವೀಂದ್ರಶೇಷಾಸ್ತ್ರಯೋಽಪಿ ತು ।**
**ತೇ ಶ್ರೇಷ್ಠಾ ಅರ್ಥಾಭಿಮಾನಿಭ್ಯಸ್ತೇಭ್ಯೋ ಬುದ್ಧಿಃ ಸರಸ್ವತೀ ॥**

**ತಸ್ಯಾ ಬ್ರಹ್ಮಾ ಮಹಾನಾತ್ಮಾ ತತೋಽವ್ಯಕ್ತಾಭಿಧಾ ರಮಾ ।**
**ತಸ್ಯಾಸ್ತು ಪುರುಷೋ ವಿಷ್ಣುಃ ಪೂರ್ಣತ್ವಾನ್ನೈವ ತತ್ಸಮಃ ॥ '**

**ಇತ್ಯಾದಿ ಕಾಠಕಭಾಷ್ಯಾತ್, ತಥಾ 'ಸರ್ವೇಭ್ಯಃ ಪ್ರವರಾ ದೇವಾಃ' ಇತ್ಯಾದಿ ತಾತ್ಪರ್ಯವಾಕ್ಯಾಚ್ಚಾವಸೇಯಃ ॥ 42 ॥**

**ಅನುವಾದ** - ಮುಂದಿನ ಶ್ಲೋಕದಲ್ಲಿ ಶತ್ರುವಾದ ಕಾಮನ ನಿಗ್ರಹಕ್ಕೆ ಜ್ಞಾನವನ್ನು ಆಯುಧ ಎಂದು ಹೇಳುತ್ತಾರೆ. ಆ ಜ್ಞಾನಕ್ಕೆ ವಿಷಯವಾದುದು ಯಾವುದು ಎಂದು ಇಲ್ಲಿ ಹೇಳುತ್ತಾರೆ. ಶರೀರಕ್ಕಿಂತ **ಇಂದ್ರಿಯಾಣಿ**= ಚಕ್ಷುರಾದಿಗಳು, **ಪರಾಣಿ**= ಉತ್ಕೃಷ್ಟವಾದವುಗಳು ಇಲ್ಲಿ **ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ** ಎನ್ನುವ ಕಾಠಕದ ಮಾತಿಗೆ ಅನುಗುಣವಾಗಿ ಮಧ್ಯದಲ್ಲಿ **'ಅರ್ಥ'**ಗಳನ್ನು ಅಧ್ಯಾಹಾರ ಮಾಡಬೇಕು. ಹಾಗೆಯೇ **ಯೋ ಬುದ್ಧೇಃ ಪರತಸ್ತು ಸಃ** ಎಂಬಲ್ಲಿ **ಬುದ್ಧೇರಾತ್ಮಾ ಮಹಾನ್ ಪರಃ, ಮಹತಃ ಪರಮವ್ಯಕ್ತಂ**- ಎಂಬ ಉಪನಿಷತ್ತಿಗೆ ಅನುಗುಣವಾಗಿ ಮಹತ್ತತ್ತ್ವ ಮತ್ತು ಅವ್ಯಕ್ತವನ್ನು ಇಟ್ಟುಕೊಳ್ಳಬೇಕು. **'ಸಃ'** ಎಂದರೆ ಪರಮಾತ್ಮ ಎಂದು ಅರ್ಥ. ಇವುಗಳ ಅರ್ಥವನ್ನು ಆಚಾರ್ಯರು ಕಾಠಕ ಭಾಷ್ಯದಲ್ಲಿ , **ದೇವೇಭ್ಯ ಇಂದ್ರಿಯಾತ್ಮಭ್ಯಃ** ಇತ್ಯಾದಿಯಾಗಿ ವರ್ಣಿಸಿದ್ದಾರೆ. ಇಂದ್ರಿಯ ಅಭಿಮಾನಿ ದೇವತೆಗಳು - ಸೋಮ, ಕುಬೇರ, ಸೂರ್ಯ, ವರುಣ,ಅಶ್ವಿನೀದೇವತೆಗಳು, ಅಗ್ನಿ , ಇಂದ್ರ, ಜಯಂತ, ಯಮ, ದಕ್ಷ, ಇವರು . ಇವರಿಗಿಂತ ಅರ್ಥಾಭಿಮಾನಿಗಳು ಸೌಪರ್ಣೀ, ವಾರುಣೀ , ಪಾರ್ವತೀ ಇವರು ಶ್ರೇಷ್ಠರು. ಇವರು ಇಂದ್ರಿಯಾಭಿಮಾನಿ ದೇವತೆಗಳಿಗಿಂತ ಉತ್ತಮರು . ಮನೋಭಿಮಾನಿಗಳು ಗರುಡ, ರುದ್ರ, ಶೇಷರು . ಇವರು ಅರ್ಥಾಭಿಮಾನಿಗಳಿಗಿಂತ ಶ್ರೇಷ್ಠರು. ಇವರುಗಳಿಗಿಂತ ಬುದ್ಧಿಗೆ ಅಭಿಮಾನಿಯಾದ ಸರಸ್ವತಿ ಉತ್ತಮಳು . ಇವಳಿಗಿಂತ ಮಹತ್ತತ್ವಾಭಿಮಾನಿ ಬ್ರಹ್ಮ-ವಾಯುಗಳು, ಇವರಿಗಿಂತ ಅವ್ಯಕ್ತ ಅಭಿಮಾನಿ ಲಕ್ಷ್ಮೀದೇವಿ ಶ್ರೇಷ್ಠಳು . ಇವಳಿಗಿಂತ ಪೂರ್ಣನಾದ ಪುರುಷ ಶ್ರೀಹರಿ ಶ್ರೇಷ್ಠ . ಇವನು ಪೂರ್ಣನಾದುದರಿಂದ ಇವನಿಗೆ ಸಮಾನರೂ ಇಲ್ಲ' ಎಂದು.

ಹಾಗೆಯೇ **'ಸರ್ವೇಭ್ಯಃ ಪ್ರವರಾ ದೇವಾಃ'** ಎಂದು ಗೀತಾತಾತ್ಪರ್ಯದಲ್ಲಿಯೂ ವರ್ಣಿಸಿದ್ದಾರೆ. ।। 42 ।।

## ಹರಿಸರ್ವೋತ್ತಮತ್ವ ಜ್ಞಾನವೇ ಕಾಮಜಯಕ್ಕೆ ಸಾಧನ

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ।। 43 ।।**

*।। ಓಂತತ್ಸದಿತಿ ಶ್ರೀಮದ್‌ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಕರ್ಮಯೋಗೋ ನಾಮ ತೃತೀಯೋಽಧ್ಯಾಯಃ ।।*

**ಅರ್ಥ** - ಮಹಾಬಾಹು ಅರ್ಜುನನೇ ! ಹೀಗೆ ಬುದ್ಧ್ಯಾದಿಗಳಿಗಿಂತ ಶ್ರೇಷ್ಠನಾದ ಪರಮಾತ್ಮನನ್ನು ತಿಳಿದು ಈ ಜ್ಞಾನದಿಂದ ಮನಸ್ಸನ್ನು ನಿಶ್ಚಲವನ್ನಾಗಿ ಮಾಡಿ ಈ ಕಾಮವೆಂಬ ಶತ್ರುವನ್ನು ಕೊಲ್ಲು.

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ*
*ಭಗವದ್ಗೀತೆಯಲ್ಲಿ ಕರ್ಮಯೋಗವೆಂಬ ಮೂರನೇ*
*ಅಧ್ಯಾಯವು ಮುಗಿಯಿತು.*

**ಏವಂ ತಾರತಮ್ಯಾಂತಗತತ್ವೇನ ಜ್ಞೇಯಮುಕ್ತ್ವಾ ತದ್‍ಜ್ಞಾನಮಾಹ- ಏವಮಿತಿ ।। ಏವಮುಕ್ತದಿಶಾ ಬುದ್ಧೇರ್ಮಹತೋಽವ್ಯಕ್ತಾಚ್ಚ ಪರಂ ಬುದ್ಧ್ವಾ, ಆತ್ಮಾನಂ= ಮನಃ ಆತ್ಮನಾ= ಬುದ್ಧ್ಯಾ ಸಂಸ್ತಭ್ಯ= ನಿಶ್ಚಲಂ ಕೃತ್ವಾ ದುರಾಸದಂ ದುಃಖೇನಾಸಾದನೀಯಂ ನಿವರ್ತನೀಯಮಿತಿ ಯಾವತ್ । ಕಾಮರೂಪಂ ಶತ್ರುಂ ಜಹಿ ಹತಂ ಕುರು ಹೇ ಮಹಾಬಾಹೋ ಇತಿ ।। 43 ।।**

*।। ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ*
*ತೃತೀಯೋಽಧ್ಯಾಯಃ ।।*

**ಅನುವಾದ** - ಈ ರೀತಿಯಾಗಿ ತಾರತಮ್ಯದ ತುದಿಯಲ್ಲಿರುವ ಭಗವಂತನು ಜ್ಞಾನಕ್ಕೆ ವಿಷಯನೆಂದು ನಿರೂಪಿಸಿ ಈಗ ಭಗವಂತನ ಜ್ಞಾನ ಕಾಮಹನನಕ್ಕೆ ಸಾಧನ ಎಂದು ಹೇಳುತ್ತಾರೆ. **ಏವಂ** = ಹಿಂದೆ ಹೇಳಿದಂತೆ, **ಬುದ್ಧೇಃ** = ಬುದ್ಧಿ, ಮಹತ್ತತ್ತ್ವ ಮತ್ತು ಅವ್ಯಕ್ತತತ್ತ್ವ ಇವುಗಳಿಗಿಂತ, **ಪರಂ** = ಶ್ರೇಷ್ಠನಾದ ಪರಮಾತ್ಮನನ್ನು, **ಬುದ್ಧ್ವಾ** = ತಿಳಿದು, **ಆತ್ಮಾನಂ** = ಮನಸ್ಸನ್ನು, **ಆತ್ಮನಾ** = ಈ ಭಗವಂತನ ಜ್ಞಾನದಿಂದ, **ಸಂಸ್ತಭ್ಯ** = ನಿಶ್ಚಲವನ್ನಾಗಿ ಮಾಡಿ, **ದುರಾಸದಂ** = ಕಷ್ಟಪಟ್ಟು ಹೋಗಲಾಡಿಸಲು ಶಕ್ಯವಾದ, **ಕಾಮರೂಪಂ ಶತ್ರುಂ** = ಕಾಮವೆಂಬ ಶತ್ರುವನ್ನು **ಜಹಿ** = ಸಂಹಾರಮಾಡು. **ಹೇ ಮಹಾಬಾಹೋ** ಎಂದು ಅರ್ಜುನನಿಗೆ ಸಂಬೋಧನೆ. ।। 43 ।।

*ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ*
*ಮೂರನೇ ಅಧ್ಯಾಯವು ಮುಗಿಯಿತು.*

# ಅಧ್ಯಾಯ - 4

## ಉಪದೇಶಪರಂಪರೆ

**ಶ್ರೀ ಭಗವಾನುವಾಚ -**

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।**
**ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥ 1 ॥**

ಅರ್ಥ - ನಾಶರಹಿತವಾದ ಮೋಕ್ಷಫಲವನ್ನು ಜ್ಞಾನಯೋಗದ ಮೂಲಕ ನೀಡುವ ಈ ನಿಷ್ಕಾಮಕರ್ಮಯೋಗವನ್ನು ನಾನು ಸೂರ್ಯನಿಗೆ ಹೇಳಿದೆನು. ಸೂರ್ಯನು ತನ್ನ ಮಗನಾದ ವೈವಸ್ವತ ಮನುವಿಗೆ ಅದನ್ನು ಹೇಳಿದನು. ವೈವಸ್ವತ ಮನುವು ಇಕ್ಷ್ವಾಕುವಿಗೆ ಹೇಳಿದನು.

### ಗೀತಾವಿವೃತಿ

ಪೂರ್ವಾಧ್ಯಾಯೇ 'ನಿಯತಂ ಕುರು ಕರ್ಮ ತ್ವಮ್' (3-8) ಇತ್ಯಾದಿನಾ ಕಿಂಚಿದ್ವಿವೃತಸ್ಯ ನಿವೃತ್ತಕರ್ಮಣಃ ತಥಾ 'ಯೋ ಬುದ್ಧೇಃ ಪರತಸ್ತು ಸಃ' (3-42) ಇತ್ಯಾದಿನಾ ತಾರತಮ್ಯಾಂತಗತ್ವೇನೋಕ್ತವಿಷ್ಣೋಸ್ತದ್‌ಜ್ಞಾನಸ್ಯ ಚ ವಿಸ್ತರೇಣ ನಿರೂಪಣಮತ್ರಾಧ್ಯಾಯೇ ಕ್ರಿಯತೇ । 'ಏವಂ ಜ್ಞಾತ್ವಾ ಕೃತಂ ಕರ್ಮ'(4-15) ಇತ್ಯತಃ ಪ್ರಾಕ್ತನಗ್ರಂಥೇನ ಬುದ್ಧೇಃ ಪರಸ್ಯ ವಿಷ್ಣೋರ್ಮಾಹಾತ್ಮ್ಯಮುಚ್ಯತೇ । 'ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ '(4-33) ಇತ್ಯತಃ ಪೂರ್ವೇಣ ನಿವೃತ್ತಸ್ಯ ಕರ್ಮಣೋಽನ್ಯಸ್ಮಾದ್ಭೇದಃ, ನಿವೃತ್ತಕರ್ಮಣ್ಯೇವೋಪಾಸನಾ ಯಜ್ಞಾದಿ-ರೂಪೇಣ ಭೇದ ಇತ್ಯೇವಂ ಕರ್ಮವಿಸ್ತಾರೋಕ್ತಿಃ । ಶೇಷೇಣ ಜ್ಞಾನ-ಮಾಹಾತ್ಮ್ಯೋಕ್ತಿರಿತಿ ವಿವೇಕಃ । 'ಮಯಿ ಸರ್ವಾಣಿ' (3-30) ಇತ್ಯುಕ್ತ ನಿವೃತ್ತಕರ್ಮಲಕ್ಷಣಜ್ಞಾನೋಪಾಯಾನುಷ್ಠಾನಾನನುಷ್ಠಾನಾಭ್ಯಾಂ 'ಯೇ ಮೇ ಮತಮ್' (3-31) ಇತ್ಯಾದಿನಾ ಅರ್ಥಾನರ್ಥಯೋರುಕ್ತ್ಯಾ ಅವಶ್ಯಮನು-ಷ್ಠೇಯಮಿತ್ಯುಕ್ತಮ್ । ಪುನಸ್ತದನುಷ್ಠಾನೇ ರುಚ್ಯುತ್ಪಾದನಾಯ ಪೂರ್ವಾನು-

ಷ್ಠಿತಶ್ಚಾಯಂ ಧರ್ಮ ಇತ್ಯಾಹ- ಇಮಮಿತ್ಯಾದಿ ತ್ರಯೇಣ ॥ ಅವ್ಯಯಫಲ-ತ್ವಾದವ್ಯಯಮ್ । ಇಮಂ ಯೋಗಂ 'ಮಯಿ ಸರ್ವಾಣಿ' (3-30) ಇತ್ಯನೇನೋಕ್ತಮ್ । ನಿವೃತ್ತಕರ್ಮಲಕ್ಷಣಂ ಜ್ಞಾನೋಪಾಯಂ ವಿವಸ್ವತೇ ಆದಿತ್ಯಾಯ । ಸಚ ಸ್ವಪುತ್ರಾಯ ಮನವೇ ಶ್ರಾದ್ಧದೇವಾಯ ಸ ಚ ಮನುಃ ಸ್ವಪುತ್ರಾಯೇಕ್ಷ್ವಾಕವೇ ॥ 1 ॥

## ನಾಲ್ಕನೆಯ ಅಧ್ಯಾಯ ಏನನ್ನು ಹೇಳುತ್ತದೆ ?

**ಅನುವಾದ**-ಹಿಂದಿನ ಅಧ್ಯಾಯದಲ್ಲಿ **'ನಿಯತಂ ಕುರು ಕರ್ಮ ತ್ವಂ...'** (3.8) ಇತ್ಯಾದಿಯಾಗಿ ಸ್ವಲ್ಪಮಾತ್ರವೇ ವಿವರಿಸಿದ ನಿಷ್ಕಾಮಕರ್ಮವನ್ನು ಹಾಗೆಯೇ, **'ಯೋ ಬುದ್ಧೇಃ ಪರತಸ್ತು ಸ'**(3-42) ಇತ್ಯಾದಿಯಾಗಿ ತಾರತಮ್ಯದ ಅವಧಿಯಾಗಿ ವರ್ಣಿತನಾದ ವಿಷ್ಣುವನ್ನು ಮತ್ತು ಅವನ ಜ್ಞಾನವನ್ನು ಈ ಅಧ್ಯಾಯದಲ್ಲಿ ವಿಸ್ತಾರವಾಗಿ ನಿರೂಪಿಸಲಾಗಿದೆ.

ಪ್ರಾರಂಭದಿಂದ **'ಏವಂ ಜ್ಞಾತ್ವಾ ಕೃತಂ ಕರ್ಮ ....'** (4.15) ಎಂಬ ಹದಿನೈದನೆಯ ಶ್ಲೋಕದವರೆಗೆ ಬುದ್ಧಿತತ್ತ್ವಕ್ಕಿಂತ ಮಿಗಿಲಾದ ವಿಷ್ಣುವಿನ ಮಾಹಾತ್ಮ್ಯವನ್ನು ನಿರೂಪಿಸಲಾಗಿದೆ. ಹದಿನೈದನೆಯ ಶ್ಲೋಕದಿಂದ **'ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್'** (4-33) ಎಂಬ 33ನೆಯ ಶ್ಲೋಕದವರೆಗೆ ನಿಷ್ಕಾಮಕರ್ಮಕ್ಕೆ ಬೇರೆ ಕರ್ಮಗಳಿಗಿಂತ ವ್ಯತ್ಯಾಸವನ್ನು ಹಾಗೂ ನಿಷ್ಕಾಮಕರ್ಮದ ಒಳ ಪ್ರಭೇದಗಳಾದ ಉಪಾಸನೆ, ಯಜ್ಞ ಮೊದಲಾದವನ್ನು ನಿರೂಪಿಸಲಾಗಿದೆ. ಅಧ್ಯಾಯದ ಉಳಿದ ಭಾಗದಲ್ಲಿ ಜ್ಞಾನದ ಮಾಹಾತ್ಮ್ಯೆಯು ನಿರೂಪಿತವಾಗಿದೆ.

## ನಾಲ್ಕನೆಯ ಅಧ್ಯಾಯದ ಪ್ರಾರಂಭಕ್ಕೆ ಪೀಠಿಕೆ

**'ಮಯಿ ಸರ್ವಾಣಿ...'** ಇತ್ಯಾದಿ ಶ್ಲೋಕದಿಂದ (3.30) ಶ್ರೀಕೃಷ್ಣನು ಅಪರೋಕ್ಷಜ್ಞಾನಃ ಸಾಧನವಾದ ನಿಷ್ಕಾಮ ಕರ್ಮಯೋಗವನ್ನು ಹೇಳಿದ್ದಾನೆ. ಮುಂದೆ **'ಯೇ ಮೇ ಮತಂ..** (3-31) ಇತ್ಯಾದಿ ಶ್ಲೋಕದಿಂದ ನಿಷ್ಕಾಮಕರ್ಮಯೋಗದ ಆಚರಣೆಯಿಂದ ದೊರಕು ಪ್ರಯೋಜನವನ್ನು ಹಾಗೂ ನಿಷ್ಕಾಮಕರ್ಮಯೋಗವನ್ನು ಆಚರಿಸದಿರುವುದರಿಂದ ಆಗು ಅನರ್ಥವನ್ನೂ ಹೇಳಿ, ಅದನ್ನು ಅವಶ್ಯವಾಗಿ ಆಚರಿಸಲೇಬೇಕು ಎಂದು ಹೇಳಿರುವನು. ಪುನಃ ನಿಷ್ಕಾಮಕರ್ಮಾಚರಣೆಯಲ್ಲಿ ಅಭಿರುಚಿಯನ್ನು ಹುಟ್ಟಿಸಲು 'ಹಿಂದಿನವರೂ ಈ ನಿಷ್ಕಾ ಕರ್ಮವನ್ನು ಆಚರಿಸಿದ್ದರು' ಎಂದು **'ಇಮಂ ...'** (4.1)ಇತ್ಯಾದಿ ಮೂರು ಶ್ಲೋಕಗಳಿಂ ಶ್ರೀಕೃಷ್ಣನು ಹೇಳುತ್ತಾನೆ.

'ಶಾಶ್ವತ ಫಲವಾದ ಮೋಕ್ಷಕ್ಕೆ ನಿಷ್ಕಾಮಕರ್ಮವು ಜ್ಞಾನದ ಮೂಲಕ ಕಾರಣವಾದ್ದರಿಂ ನಿಷ್ಕಾಮಕರ್ಮವನ್ನು **'ಅವ್ಯಯ'**= ಶಾಶ್ವತ ' ಎಂದು ಹೇಳಲಾಗಿದೆ.

**'ಇಮಂ ಯೋಗಂ'** ಎಂದರೆ **'ಮಯಿ ಸರ್ವಾಣಿ'** (3.30) ಇತ್ಯಾದಿ ಶ್ಲೋಕದಿಂದ ಹೇಳಿದ 'ನಿಷ್ಕಾಮಕರ್ಮರೂಪವಾದ ಜ್ಞಾನದ ಸಾಧನ ' ಎಂದು ಅರ್ಥ.

**'ವಿವಸ್ವತೇ'** = ಸೂರ್ಯನಿಗೆ. ಆ ಸೂರ್ಯನು ತನ್ನ ಮಗನಾದ ಶ್ರಾದ್ಧದೇವನಾದ ಮನುವಿಗೆ ಈ ಯೋಗವನ್ನು ಹೇಳಿದನು. ಮನುವು ಅದನ್ನು ಇಕ್ಷ್ವಾಕುವಿಗೆ ಹೇಳಿದನು. ‖ 1 ‖

**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ‖ 2 ‖**

**ಅರ್ಥ-** ಶತ್ರುಸಂಹಾರಕನಾದ ಅರ್ಜುನನೇ ! ಹೀಗೆ ಮನುವಿನ ಪರಂಪರೆಯಲ್ಲಿ ಬಂದ ಈ ಯೋಗವನ್ನು 'ನಿಮಿ' ಮುಂತಾದ ರಾಜರ್ಷಿಗಳು ತಿಳಿದಿದ್ದಾರೆ, ಅನುಷ್ಠಾನವನ್ನೂ ಮಾಡಿದ್ದಾರೆ. ಮಧ್ಯದಲ್ಲಿ ಬಹುಕಾಲ ವ್ಯವಧಾನದಿಂದ ಆ ಕರ್ಮಯೋಗವು ಈ ಲೋಕದಲ್ಲಿ ಕಾಣದಾಗಿದೆ.

**ರಾಜಾನಶ್ಚ ಋಷಯಶ್ಚೇತಿ ವಾ, ರಾಜರ್ಷಯೋ ರಾಜಶ್ರೇಷ್ಠಾಃ ನಿಮಿ-ಪ್ರಭೃತಯಃ ಸ್ವಪಿತ್ರಿಕ್ಷ್ವಾಕುಪ್ರಭೃತಿಭಿರ್ವಿದುರಿತಿ ವಾ । ಅತ್ರ ಪ್ರವಚನವೇದನ ಶಬ್ದೈಃ ವಿವಸ್ವದಾದೀನಾಮನುಷ್ಠಾನಮಪ್ಯುಪಲಕ್ಷ್ಯಮ್ । ಅದ್ಯತನಾನಾಮಜ್ಞಾನೇ ಕಾರಣಮಾಹ- ಸ ಇತಿ ‖ ಹೇ ಪರಂತಪ ! ಶತ್ರುತಾಪನ ! ಸ ಚ ಯೋಗಃ ಮಹತಾ ಕಾಲೇನ ಇಹ ಲೋಕೇ ನಷ್ಟಃ ಅದರ್ಶನಂ ಗತಃ ‖ 2 ‖**

**ಅನುವಾದ -** 'ರಾಜರ್ಷಯಃ' ಎಂಬ ಪದಕ್ಕೆ ಎರಡು ರೀತಿ ಅರ್ಥವನ್ನು ಹೇಳಬಹುದು.

1. ರಾಜರು ಹಾಗೂ ಋಷಿಗಳು (**ರಾಜಾನಶ್ಚ ಋಷಯಶ್ಚ** = ರಾಜರ್ಷಯಃ ಎಂದು ವಿಗ್ರಹವಾಕ್ಯ)

2. ರಾಜರಲ್ಲಿ ಶ್ರೇಷ್ಠರು (**ರಾಜಸು ಋಷಯಃ** = ರಾಜರ್ಷಯಃ) ನಿಮಿಯೇ ಮೊದಲಾದ ಶ್ರೇಷ್ಠರಾಜರು ತಮ್ಮ ತಂದೆ ಇಕ್ಷ್ವಾಕು ಮೊದಲಾದವರಿಂದ ತಿಳಿದರು ಎಂದೂ ಅರ್ಥವಾಗುವುದು. **ವಿದುಃ** = ತಿಳಿದರು ಎಂಬ ಪದದಿಂದ ಸೂರ್ಯ ಮೊದಲಾದವರ ಆಚರಣೆಯನ್ನೂ ಇಟ್ಟುಕೊಳ್ಳಬೇಕು . ಹೀಗೆ ಪರಂಪರೆಯಲ್ಲಿ ಬಂದ ಈ ನಿಷ್ಕಾಮ-ಕರ್ಮಯೋಗ ಇಂದಿನವರಿಗೆ ಏಕೆ ತಿಳಿದಿಲ್ಲವೆಂಬ ಪ್ರಶ್ನೆಗೆ ಉತ್ತರವನ್ನು ಉತ್ತರಾರ್ಧದಿಂದ ಶ್ರೀಕೃಷ್ಣನು ತಿಳಿಸಿದ್ದಾನೆ.

**ಶಬ್ದಗಳ ಅರ್ಥ- ಪರಂತಪ** = ಶತ್ರುತಾಪನನಾದ ಅರ್ಜುನನೇ, **ಸಃ**= ಆ ನಿಷ್ಕಾಮ ಕರ್ಮಯೋಗವು, **'ಮಹತಾ ಕಾಲೇನ'**= ಬಹುಕಾಲದ ವ್ಯವಧಾನದಿಂದ, **ಇಹ**= ಈ ಲೋಕದಲ್ಲಿ, **ನಷ್ಟಃ**= ಕಾಣದಾಯಿತು. ‖ 2 ‖

**ಸ ಏವಾಯಂ ಮಯಾ ತೇऽದ್ಯ ಯೋಗಃ ಪ್ರೋಕ್ತಃ ಪುರಾತನಃ ।**
**ಭಕ್ತೋऽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥ 3 ॥**

**ಅರ್ಥ**– ಪುರಾತನವಾದ ಈ ಕರ್ಮಯೋಗವನ್ನೇ ನಾನು ಈಗ ನಿನಗೆ ಉಪದೇಶಿಸಿರುವೆನು. ನೀನು ನನಗೆ ಭಕ್ತನಾಗಿರುವಿ, ಗೆಳೆಯನೂ ಆಗಿರುವಿಯೆಂದೇ ಅನುಷ್ಠಾನಕ್ಕಾಗಿ ಇದನ್ನು ಉಪದೇಶಿಸಿದೆನು. ಆದ್ದರಿಂದ ನಾನು ಉಪದೇಶಿಸಿರುವ ಯೋಗವು ಉತ್ತಮವೂ ಹೌದು, ರಹಸ್ಯವೂ ಹೌದು. ಮತ್ತು ಉತ್ತಮವೂ ರಹಸ್ಯವೂ ಆದುದರಿಂದಲೇ ಭಕ್ತನೂ, ಗೆಳೆಯನೂ ಆದ ನಿನಗೆ ಅನುಷ್ಠಾನಕ್ಕಾಗಿ ನಾನು ಉಪದೇಶಿಸಿರುವೆನು.

**ಕುತಃ ಪ್ರೋಕ್ತ ಇತ್ಯತ ಉಕ್ತಮ್- ಭಕ್ತೋऽಸೀತ್ಯಾದಿ ॥ ಹಿಶಬ್ದೋ ಹೇತೌ । ಭಕ್ತತ್ವಾದಿಹೇತುನಾ ಹಿ ಯತಸ್ತೇ ಪ್ರೋಕ್ತೋऽತ ಏತದ್ರಹಸ್ಯಮ್ ಉತ್ತಮಂ ಚೇತಿ । ಹಿ ಯತೋ ರಹಸ್ಯಂ ಉತ್ತಮಂ ಚಾತೋ ಭಕ್ತತ್ವಾತ್ ತೇ ಪ್ರೋಕ್ತಃ ಅವಶ್ಯಾನುಷ್ಠಾನಾಯೇತಿ ವಾ । 'ಕರ್ಮಣೈವ ಹಿ ಸಂಸಿದ್ಧಿಂ' (3-20) ಇತ್ಯತ್ರ ಗೃಹಸ್ಥಧರ್ಮಸ್ತ್ವಯಾ ನ ತ್ಯಾಜ್ಯ ಇತ್ಯತ್ರ ಜನಕಾದಿಜ್ಞಾನ್ಯಾಚಾರ ಉಕ್ತಃ । ಅತ್ರ ತು ನಿವೃತ್ತಕರ್ಮಾನುಷ್ಠಾನೇ ಮಹದಾಚಾರಃ ಪ್ರಮಾಣತ್ವೇನೋಚ್ಯತ ಇತಿ ನ ತೇನ ಗತಾರ್ಥತ್ವಂ ಶಂಕ್ಯಮ್ ॥ 3॥**

**ಅನುವಾದ** – ಪುರಾತನವಾದ ಈ ಯೋಗವನ್ನು ಅರ್ಜುನನಿಗೆ ಹೇಳಲು ಕಾರಣವನ್ನು '**ಭಕ್ತೋऽಸಿ**' ಎಂಬುದಾಗಿ ಹೇಳಿರುವನು. 'ಹಿ' ಎಂದರೆ ಕಾರಣವೆಂದರ್ಥ. 'ಹಿ' ಎಂಬುದನ್ನು ಎರಡು ರೀತಿ ಅನ್ವಯಿಸಿ ಅರ್ಥ ಹೇಳಬಹುದು –

(1) **'ಹಿ ಭಕ್ತೋऽಸಿ ಮೇ ಸಖಾ ಚೇತಿ ಮಯಾ ಪ್ರೋಕ್ತಃ' ಹಿ ಯತಃ ಅತಃ ಏತದ್ ರಹಸ್ಯಮುತ್ತಮಂ ಚ ।**

ನೀನು ನನ್ನ ಭಕ್ತನೂ , ಗೆಳೆಯನೂ ಆಗಿರುವಿಯೆಂದೇ ಈ ಯೋಗವನ್ನು ನಿನಗೆ ಉಪದೇಶಿಸಿರುವೆನು. ಆದರಿಂದ ಇದು ರಹಸ್ಯ , ಉತ್ತಮ .

(2) **'ಹಿ ಏತತ್ ಉತ್ತಮಂ ರಹಸ್ಯಂ ಚ (ಅತಃ) ಭಕ್ತೋऽಸಿ ಮೇ ಸಖಾ ಚೇತಿ ಮಯಾ ಪ್ರೋಕ್ತಃ'** –

ಪುರಾತನವಾದ ಯೋಗವು ಉತ್ತಮವೂ ರಹಸ್ಯವೂ ಆಗಿದೆ. ಆದ್ದರಿಂದ ಭಕ್ತನೂ ಗೆಳೆಯನೂ ಆಗಿರುವ ನಿನಗೆ ಅನುಷ್ಠಾನಕ್ಕೋಸ್ಕರ ಉಪದೇಶಿಸಿರುವೆನು.

**ಪುನರುಕ್ತಿಪರಿಹಾರ -**

**'ಕರ್ಮಣೈವ ಹಿ ಸಂಸಿದ್ಧಿಂ...'** (3.20) ಎಂಬ ಶ್ಲೋಕದಲ್ಲಿ 'ಗೃಹಸ್ಥಧರ್ಮವನ್ನು ನೀನು ಬಿಡಬಾರದು' ಎಂದು ತಿಳಿಸಲು ಜನಕಾದಿಗಳ ಆಚರಣೆಯನ್ನು ನಿದರ್ಶನವನ್ನಾಗಿ ಹೇಳಲಾಯಿತು . ಪ್ರಕೃತ ಮೂರು ಶ್ಲೋಕಗಳಲ್ಲಿ ನಿಷ್ಕಾಮಕರ್ಮಾನುಷ್ಠಾನದಲ್ಲಿ ಮಹಾತ್ಮರ ಆಚರಣೆಯೂ ಪ್ರಮಾಣವೆಂದು ಹೇಳಲಾಗಿದೆ. ಆದ್ದರಿಂದ ಪುನರುಕ್ತಿ ಇಲ್ಲ . ॥ 3 ॥

**ಪ್ರಾಚೀನನಾದ ಸೂರ್ಯನಿಗೆ ನೀನು ಉಪದೇಶಿಸಿದ್ದು ಹೇಗೆ ?**

**ಅರ್ಜುನ ಉವಾಚ -**

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥ 4 ॥**

**ಅರ್ಥ** - ಅರ್ಜುನ ಹೇಳುತ್ತಾನೆ - ಶ್ರೀಕೃಷ್ಣನೇ, ನಿನ್ನ ಜನ್ಮ ಇತ್ತೀಚಿನದು . ಸೂರ್ಯನ ಜನ್ಮವಾದರೋ ಬಹಳ ಹಿಂದಿನದು. ಆದ್ದರಿಂದ ಸೃಷ್ಟಿಯ ಪ್ರಾರಂಭದಲ್ಲಿ ನೀನೇ ಸೂರ್ಯನಿಗೆ ಉಪದೇಶಿಸಿದಿ ಎಂದು ನಾನು ಹೇಗೆ ತಿಳಿಯಲಿ ? ಅಂದರೆ , ಭಗವಂತನ ಪೂಜಾರೂಪವಾಗಿ ನಿಷ್ಕಾಮಕರ್ಮಾನುಷ್ಠಾನ ಮಾಡಬೇಕೆಂದು ಹಿಂದೆ ಹೇಳಿದೆ ಮತ್ತು ಭಗವಂತ ಸ್ವತಂತ್ರ ಕರ್ತನೆಂದೂ ಹೇಳಿದೆ. ಆಗ ಅಸ್ವತಂತ್ರನಾದ ಪೂಜಕನಾದ ಜೀವನಿಗಿಂತ ಭಗವಂತ ಭಿನ್ನನಾಗಿರಬೇಕಲ್ಲವೇ ? ಆ ಭೇದದಲ್ಲಿ ಪ್ರಮಾಣವೇನು ?

**'ಮಯಿ ಸರ್ವಾಣಿ' (3-30) ಇತ್ಯತ್ರ ಹರೇಃ ಪೂಜ್ಯತ್ವಂ ಅರ್ಜುನಸ್ಯ ಪೂಜಕತ್ವಮಿತ್ಯುಕ್ತಮ್ । ತಥಾ ತಸ್ಯೈವ ಸ್ವತಂತ್ರಕರ್ತೃತ್ವಮನ್ಯಸ್ಯ ತದಧೀನ-ಕರ್ತೃತ್ವಮುಕ್ತಮ್ । ಏವಂ ಚ ಪೂಜ್ಯಪೂಜಕತ್ವಾದಿನಾ ತತ್ರಾಭಿಪ್ರೇತಂ ಜೀವೇಶ್ವರಭೇದಂ ಪ್ರಮಾಣೇನ ಜ್ಞಾತುಂ ಪೃಚ್ಛತಿ - ಅಪರಮಿತ್ಯಾದಿನಾ॥ ಏವಂ ಚ 'ನ ತ್ವೇವಾಹಂ' (2-12) ಇತ್ಯಾದಿನಾ ಸರ್ವಪ್ರಕಾರೇಣೋತ್ಪತ್ತಿನಾಶ-ರಾಹಿತ್ಯಂ ಭಗವತಃ ಶ್ರುತವಾನ್ ಕಥಮೇವಂ ಅಪರಂ ಪಶ್ಚಾತ್ತನಂ ಭವತೋ ಜನ್ಮೇತಿ ಪೃಚ್ಛತೀತಿ ಚೋದ್ಯಾನವಕಾಶಃ ॥ 4 ॥**

**ಅನುವಾದ- 'ಮಯಿ ಸರ್ವಾಣಿ...'** (3.30) ಎಂಬ ಶ್ಲೋಕದಲ್ಲಿ 'ನನ್ನ ಪೂಜಾರೂಪವಾಗಿ ಕರ್ಮವನ್ನು ಆಚರಿಸು' ಎಂದು ಶ್ರೀಕೃಷ್ಣ ಹೇಳಿದ. ಅದರಿಂದ ಶ್ರೀಕೃಷ್ಣನು ಪೂಜ್ಯ, ಅರ್ಜುನನು ಪೂಜಕ ಎಂದು ಹೇಳಿದಂತಾಯಿತು. ಹಾಗೆಯೇ ಅದೇ ಶ್ಲೋಕದಲ್ಲಿ ಶ್ರೀಕೃಷ್ಣನೇ ಸ್ವತಂತ್ರಕರ್ತೃ, ಬೇರೆಯವರು ಅವನ ಅಧೀನರಾದ ಕರ್ತೃಗಳು ಎಂದೂ

ಹೇಳಲಾಗಿದೆ. ಹೀಗೆ ಪೂಜ್ಯನಾದ, ಸ್ವತಂತ್ರಕರ್ತೃವಾದ ಈಶ್ವರನಿಗೂ, ಪೂಜಕರಾದ ಅಧೀನ ಕರ್ತೃಗಳಾದ ಜೀವರಿಗೂ ಭೇದವಿರಬೇಕೆಂದೂ ಹೇಳಿದಂತಾಯಿತು. ಈ ಜೀವ-ಈಶ್ವರ ಭೇದಕ್ಕೆ ಪ್ರಮಾಣವೇನೆಂದು ಅರ್ಜುನನು ಈ ಶ್ಲೋಕದ ಮೂಲಕ ಪ್ರಶ್ನಿಸುತ್ತಿದ್ದಾನೆ. ಈ ಶ್ಲೋಕಕ್ಕೆ ಹೀಗೆ ಅಭಿಪ್ರಾಯ ವಿಲ್ಲದಿರುತ್ತಿದ್ದರೆ '**ನ ತ್ವೇವಾಹಂ....**'(2.12) ಇತ್ಯಾದಿ ಶ್ಲೋಕದಿಂದ ಎಲ್ಲಾ ವಿಧವಾದ ಹುಟ್ಟು-ನಾಶಗಳಿಲ್ಲದಿರುವವನೇ ಭಗವಂತನು' ಎಂದು ತಿಳಿದಿರುವ ಅರ್ಜುನನು' **ಅಪರಂ ಭವತೋ ಜನ್ಮ** = ನಿನ್ನ ಜನ್ಮ ಇತ್ತೀಚಿನದು' ಮುಂತಾಗಿ ಹೇಗೆ ಪ್ರಶ್ನಿಸುತ್ತಾನೆ ? ಆದ್ದರಿಂದ ಅರ್ಜುನನ ಪ್ರಶ್ನೆ ಭಗವಂತನ ಜನ್ಮದ ಕುರಿತು ಅಲ್ಲ , ಜೀವೇಶ್ವರ ಭೇದದ ವಿಷಯದಲ್ಲಿ ಪ್ರಮಾಣದ ಬಗ್ಗೆಯೇ ಅವನ ಪ್ರಶ್ನೆ.

**ವಿಶೇಷವಿವರಣೆ**– ಅರ್ಜುನನಿಗೆ ಶ್ರೀಕೃಷ್ಣನ ಅನಾದಿತ್ವ ವಿಷಯದಲ್ಲಿ ಅಜ್ಞಾನವಿರುವಂತೆ ಕಂಡುಬರುವುದು. ಆದರೆ ಅರ್ಜುನನಿಗೆ ಆ ರೀತಿ ಅಜ್ಞಾನವಿರಲಿಲ್ಲ. ಜೀವೇಶ್ವರ ಭೇದದ ಬಗ್ಗೆ ಇನ್ನೂ ಹೆಚ್ಚಿನ ಜ್ಞಾನವನ್ನು ಪಡೆಯುವ ದೃಷ್ಟಿಯಿಂದ ಅರ್ಜುನ ಈ ಪ್ರಶ್ನೆಯನ್ನು ಕೇಳಿರುತ್ತಾನೆ. ಇದಕ್ಕೆ ಸಂಬಂಧಿಸಿದಂತೆ ಆಚಾರ್ಯರು ತಾತ್ಪರ್ಯದಲ್ಲಿ ಉದಾಹರಿಸುವ ಆಗ್ನೇಯಪುರಾಣದ ಮಾತು ಹೀಗಿದೆ –

ಜಾನಂತೋಽಪಿ ವಿಶೇಷಾರ್ಥಜ್ಞಾನಾಯ ಸ್ಥಾಪನಾಯ ವಾ ।
ಪೃಚ್ಛಂತಿ ಸಾಧವಃ ಸರ್ವೇ ತೇನ ಪೃಚ್ಛಸಿ ಪಾರ್ಥಿವ ॥

ಈ ಶ್ಲೋಕದ ಅಭಿಪ್ರಾಯ ಹೀಗಿದೆ – ಸಜ್ಜನರು ತಮಗೆ ತಿಳಿದಿದ್ದ ವಿಷಯಗಳಲ್ಲಿಯೂ, ವಿಶೇಷಜ್ಞಾನವನ್ನು ಪಡೆಯಲು ಅಥವಾ ತಮಗಿದ್ದ ಜ್ಞಾನವನ್ನೇ ದೃಢಪಡಿಸಿಕೊಳ್ಳಲು ಪ್ರಶ್ನೆಗಳನ್ನು ಕೇಳುವರು . ಅರ್ಜುನ, ನೀನು ಇಂಥ ಉದ್ದೇಶದಿಂದಲೇ ಪ್ರಶ್ನೆಗಳನ್ನು ಕೇಳುತ್ತಿರುವಿ. ॥ 4 ॥

## ಸರ್ವಜ್ಞನೂ ಅನಂತರೂಪಿಯೂ ಆದ ನಾನು ಸೂರ್ಯನಿಗಿಂತ ಹಿಂದಿನವ

**ಶ್ರೀ ಭಗವಾನುವಾಚ –**

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥ 5 ॥**

**ಅರ್ಥ**– ಶತ್ರುಗಳಿಗೆ ತಾಪವನ್ನು ಉಂಟುಮಾಡುವ ಅರ್ಜುನನೇ, ನನಗೂ ನಿನಗೂ ಅನೇ ಜನ್ಮಗಳು ಆಗಿಹೋಗಿವೆ . ನಾನು (ಕೃಷ್ಣನು) ಆ ಎಲ್ಲಾ ಜನ್ಮಗಳನ್ನೂ ತಿಳಿದಿದ್ದೇನೆ. ಆದರೆ ನೀನ ತಿಳಿದಿಲ್ಲ.

**ಅತ ಏವ ವಿದಿತಪ್ರಶ್ನಾಭಿಪ್ರಾಯೋ ಭಗವಾನ್ 'ತವ ಚೇತಿ, 'ನ ತ್ವಂ ವೇತ್ಥೇತಿ'**

**ಪರಾಕ್ತ್ವಾಜ್ಞತ್ವಯೋರುಕ್ತಿಂ ಕೃತವಾನ್ । ಅನ್ಯಥಾ 'ಬಹೂನಿ ಮೇ ವ್ಯತೀತಾನಿ ಜನ್ಮಾನಿ' ಇತ್ಯೇತಾವತಾ ಪ್ರಶ್ನಪರಿಹಾರಾತ್ತವ ಚೇತ್ಯಾದ್ಯುಕ್ತಿರ್ವ್ಯರ್ಥಾ ಸ್ಯಾದಿತಿ ಜ್ಞೇಯಮ್ ॥ 5 ॥**

**ಅನುವಾದ** - ಅರ್ಜುನನ ಪ್ರಶ್ನೆಯ ಅಭಿಪ್ರಾಯವನ್ನು ಬಲ್ಲ ಭಗವಂತನು 'ತವ ಚ ' ಎಂಬುದಾಗಿ ಅರ್ಜುನನ ಪರಾಕ್ ಚೇತನತ್ವವನ್ನು, 'ನ ತ್ವಂ ವೇತ್ಥ ' ಎಂದು ಅರ್ಜುನನ ಅಜ್ಞಾನವನ್ನೂ ತಿಳಿಸಿದ್ದಾನೆ . ಹಾಗಿಲ್ಲದಿದ್ದಲ್ಲಿ 'ಬಹೂನಿ ಮೇ ವ್ಯತೀತಾನಿ' ಎಂಬ ಭಾಗದಿಂದಲೇ ಅರ್ಜುನನ ಪ್ರಶ್ನೆಗೆ ಉತ್ತರ ದೊರಕಿದ ಮೇಲೆ 'ತವ ಚ ' 'ನ ತ್ವಂ ವೇತ್ಥ ' ಇತ್ಯಾದಿ ಭಾಗಗಳು ವ್ಯರ್ಥವಾಗಬೇಕಾದೀತು.

**ವಿಶೇಷವಿವರಣೆ** – ಅರ್ಜುನ, ನನಗೂ ನಿನಗೂ ಬಹಳ ಜನ್ಮಗಳು ಕಳೆದು ಹೋಗಿವೆ. ಆ ಜನ್ಮಗಳನ್ನು ನಾನು ತಿಳಿದಿರುವೆನು. ನೀನು ತಿಳಿದಿಲ್ಲ' ಇದು ಈ ಶ್ಲೋಕದ ಅಭಿಪ್ರಾಯ. ಇದರಲ್ಲಿ 'ನನಗೆ ಅನೇಕ ಜನ್ಮಗಳು ಕಳೆದುಹೋಗಿವೆ. ಕಳೆದು ಹೋದ ಜನ್ಮಗಳಲ್ಲಿ ಯಾವುದೋ ಒಂದು ಜನ್ಮದಲ್ಲಿ ನಾನೇ ಸೂರ್ಯನಿಗೆ ಉಪದೇಶಿಸಿರುವೆನು' ಎಂದು ಮೊದಲನೆಯ ಪಾದದ ಅಭಿಪ್ರಾಯವೇ – 'ಈಚಿನವನಾದ ನೀನು ಪೂರ್ವಜನ್ಮದ ಸೂರ್ಯನಿಗೆ ಹೇಗೆ ಉಪದೇಶ ಮಾಡಿದೆ ' ಎಂಬ ಅರ್ಜುನನ ಆಪಾತತಃ ಪ್ರಶ್ನೆಗೆ ಸಮಂಜಸವಾದ ಉತ್ತರವಾಗುವುದು. ಆದರೆ ಶ್ರೀಕೃಷ್ಣನಾದರೊ ತನ್ನ ಉತ್ತರವನ್ನು ಅಲ್ಲಿಯೇ ನಿಲ್ಲಿಸದೇ, 'ನಿನಗೂ ಅನೇಕ ಜನ್ಮಗಳು ಕಳೆದಿವೆ . ನಾನು ಆ ಜನ್ಮಗಳನ್ನು ಬಲ್ಲೆ . ನೀನಾದರೊ ತಿಳಿದಿಲ್ಲ' ಎಂಬುದಾಗಿ ಉಳಿದ ಮೂರು ಪಾದಗಳಲ್ಲಿ ಸೇರಿಸಿರುವನು. ಆದುದರಿಂದ ಹಿಂದೆ ತಿಳಿಸಿದಂತೆ, ಜೀವೇಶ್ವರ ಭೇದವನ್ನು ಇನ್ನೂ ಹೆಚ್ಚಾಗಿ ತಿಳಿಯುವುದರ ಮೂಲಕ, ಈಶ್ವರನ ಮಾಹಾತ್ಮ್ಯಜ್ಞಾನವೇ ಅರ್ಜುನನಿಂದ ಜಿಜ್ಞಾಸಿತವೆಂದು ತಿಳಿಯುವುದು.

ಶ್ರೀಕೃಷ್ಣನ ಉತ್ತರವನ್ನು ಹೀಗೆ ವಿವರಿಸಬಹುದು. ಈ ಶ್ಲೋಕದಲ್ಲಿ '**ಮೇ**' ಹಾಗೂ '**ತವ**' ಎಂಬುದಾಗಿ ಎರಡು ಪದಗಳಿವೆ. 'ನನ್ನ ' ಹಾಗೂ 'ನಿನ್ನ ' ಎಂಬುದಾಗಿ ಆ ಪದಗಳಿಗೆ ಸಾಮಾನ್ಯವಾದ ಅರ್ಥವಿದೆ. ಆದರೆ ಆ ಪದಗಳ ಶಾಸ್ತ್ರೀಯವಾದ ಅರ್ಥವನ್ನು ಶ್ರೀರಾಘವೇಂದ್ರರು ಇಲ್ಲಿ ಸ್ವೀಕರಿಸಿದ್ದಾರೆ. ಅದರಂತೆ '**ಮೇ**' ಎಂದರೆ ಎಲ್ಲಾ ಜೀವರಿಗೂ ಬಿಂಬರೂಪಿಯಾದ ಪ್ರತ್ಯಕ್ ಚೇತನವೆಂದರ್ಥ. '**ತವ**' ಎಂದರೆ ಪ್ರತಿಬಿಂಬರಾಗಿ ಎದುರು ಇರುವ ಅರ್ಜುನನಂತಹ ಎಲ್ಲ ಪರಾಕ್ ಜೀವ ಚೇತನರೆಂದರ್ಥ. ಇದರಿಂದ ಈಶ್ವರ-ಜೀವರಿಗೆ ಬಿಂಬ-ಪ್ರತಿಬಿಂಬಭಾವವನ್ನು ಹೇಳಿದಂತಾಯಿತು. ಪ್ರತಿಬಿಂಬವು ಬಿಂಬದ ಅಧೀನ-ವೆಂಬುದು ಲೋಕಸಿದ್ಧವಾಗಿದೆ.

ಆದುದರಿಂದ ಪ್ರತಿಬಿಂಬರಾದ ಜೀವರ ಚಲನ-ವಲನಗಳೆಲ್ಲವೂ ಬಿಂಬನಾದ ಈಶ್ವರನ ಅಧೀನವೆಂದು ತಿಳಿಯುವುದು . ಇದರಿಂದ ಎಲ್ಲಾ ಜೀವರಿಗೂ ಈಶ್ವರನು ನಿಯಾಮಕ. ಜೀವರೆಲ್ಲರೂ ಈಶ್ವರನಿಂದ ನಿಯಮ್ಯರು ಎಂಬುದಾಗಿ ಜೀವೇಶ್ವರ ಭೇದವು ತಿಳಿಯುವುದು.

ಈ ಶ್ಲೋಕದ 'ನಾನು ಆ ಜನ್ಮಗಳನ್ನು ಬಲ್ಲೆ, ನೀನು ತಿಳಿದಿಲ್ಲ' ಎಂಬ ಉತ್ತರಾರ್ಧದಿಂದ ಶ್ರೀಕೃಷ್ಣನ ಸರ್ವಜ್ಞತೆಯೂ ಹಾಗೂ ಅರ್ಜುನಾದಿ ಜೀವರ ಅಲ್ಪಜ್ಞತೆಯೂ ತಿಳಿಯುವುದು. ಹೀಗೆ ನಿಯಾಮಕತ್ವ-ನಿಯಮ್ಯತ್ವ, ಸರ್ವಜ್ಞತ್ವ-ಅಲ್ಪಜ್ಞತ್ವ ಮುಂತಾದ ವಿರುದ್ಧ ಧರ್ಮಗಳಿರುವುದರಿಂದ ಜೀವೇಶ್ವರರು ಅತ್ಯಂತ ಭಿನ್ನರೆಂದೂ ತಿಳಿಯುವುದು. ಹೀಗೆ ಜೀವೇಶ್ವರ ಭೇದಕ್ಕೆ ಪ್ರಮಾಣವೇನೆಂಬ ಅರ್ಜುನನ ಪ್ರಶ್ನೆಗೆ ಉತ್ತರಿಸಿದಂತಾಗುವುದು. ॥ 5 ॥

## ಭಗವಂತನ ಅವತಾರ ಸ್ವೇಚ್ಛೆಯಿಂದಲೇ

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥ 6 ॥**

**ಅರ್ಥ**- ನಾನು ಸ್ವರೂಪದಿಂದ ಹಾಗೂ ದೇಹದಿಂದ ಜನ್ಮರಹಿತನು . ನಾಶವಿಲ್ಲದ ಸ್ವರೂಪ ಮತ್ತು ದೇಹವುಳ್ಳವನು. ಜೀವಿಗಳಿಗೆ ನಿಯಾಮಕನೂ ಹೌದು. ಆದರೂ ನಾನು ನನ್ನ ಅಧೀನವಾದ ಪ್ರಕೃತಿಯಿಂದ ದೇವಕಿ ಮೊದಲಾದವರ ಶರೀರಗಳನ್ನು ಸೃಷ್ಟಿಮಾಡಿ, ಅದನ್ನು ಪ್ರವೇಶಿಸಿ ಸ್ವೇಚ್ಛೆಯಿಂದಲೇ ಪ್ರಾದುರ್ಭವಿಸುತ್ತೇನೆ. ನನಗೆ ಅಧೀನಳಾದ ತಮೋಗುಣಕ್ಕೆ ಅಭಿಮಾನಿನಿಯಾದ ದುರ್ಗೆಯನ್ನು ಪ್ರವೇಶಿಸಿ ಅವಳ ಮೂಲಕ ನಾನೂ ಎಲ್ಲರಂತೆ ಹುಟ್ಟಿದೆನೆಂಬ ಭ್ರಮೆಯನ್ನು ಲೋಕಕ್ಕೆ ಉಂಟು ಮಾಡುತ್ತೇನೆ. ಈ ರೀತಿಯ ಅವತಾರದಿಂದ ನನಗೆ ಏನೂ ಪ್ರಯೋಜನವಿಲ್ಲ. ಆದರೂ ನನ್ನ ಸ್ವಭಾವಕ್ಕನುಗುಣವಾಗಿ ಪ್ರಾದುರ್ಭವಿಸುವೆನು. ಹೀಗೆ ನನ್ನ ಜನ್ಮವು ಜೀವರ ಜನ್ಮಕ್ಕಿಂತ ಬಹಳ ವಿಲಕ್ಷಣವಾಗಿದ್ದು, ಜೀವೇಶ್ವರ ಭೇದಕ್ಕೆ ಇದುವೇ ಆಧಾರವಾಗಿದೆ. ಆದ್ದರಿಂದ ನನ್ನ ಪ್ರೀತಿಗಾಗಿ ನಿವೃತ್ತಕರ್ಮಾನುಷ್ಠಾನವನ್ನು ನೀನು ಮಾಡಬೇಕು.

**ಜನ್ಮಾನ್ಯತೀತಾನಿ ಚೇತ್ತರ್ಹಿ ನ ಜನನಮರಣರಾಹಿತ್ಯಮೀಶ್ವರತ್ವಂ ವಾ ತವ ಸ್ಯಾತ್ । ತಥಾ ಚ 'ಅವಿನಾಶಿ ತ್ವಿತಿ' (2-17) ಉಕ್ತಿ(ಕ್ತ)ವಿರೋಧ ಇತ್ಯತ ಆಹ- ಅಜೋಽಪೀತಿ ॥ [1]ದೇಹತೋಽಪ್ಯುತ್ಪತ್ತಿಹೀನೋಽಪಿ ಅವ್ಯಯೋಽವಿನಾಶೀ ಆತ್ಮಾ ಸ್ವರೂಪಂ ದೇಹಶ್ಚ ಯಸ್ಯ ಸೋಽವ್ಯಯಾತ್ಮಾ ಸನ್ನಪಿ ಭೂತಾನಾಮೀಶ್ವರಃ ಸನ್ನಪಿ ಸಂಭವಾಮೀತ್ಯನ್ವಯಃ । ಸ್ವರೂಪತೋ ದೇಹತಶ್ಚ ಅನಾದಿನಿತ್ಯಸ್ಯ ಕಥಂ**

1 . 'ದೇಹತೋಽಪೀತಿ ನಾಸ್ತಿ'. ಪ್ರ.

**ಜನಿರಿತ್ಯತ ಉಕ್ತಮ್- ಪ್ರಕೃತಿಮಧಿಷ್ಠಾಯೇತಿ ॥ ಪ್ರಕೃತಿಶಬ್ದಃ ಪ್ರಾಕೃತಪರಃ । ಪ್ರಾಕೃತಾನ್ ಪ್ರಕೃತಿಜಾನ್ ವಸುದೇವಾದೀನಧಿಷ್ಠಾಯಾನುಪ್ರವಿಶ್ಯಾತ್ಮ-ಮಾಯಯಾ ಸ್ವೇಚ್ಛಯಾ ಸ್ವಜ್ಞಾನೇನ ವಾ ಸಂಭವಾಮಿ ಪ್ರಾದುರ್ಭವಾಮಿ । ಅತೋ ಜಾತ ಇತಿ ಲೋಕಸ್ಯ ಭ್ರಾಂತೋ ವ್ಯವಹಾರ ಇತಿ ಭಾವಃ । ಯದ್ವಾ ಸ್ವಾಂ ಸ್ವಕೀಯಾಂ ಮದಧೀನಾಂ ಪ್ರಕೃತಿಂ ತಮೋರೂಪಾಮಧಿಷ್ಠಾಯ ಆಶ್ರಿತ್ಯ ಸಂಭವಾಮಿ ಸಂಭೂತೋ ಜಾತ ಇತಿ ಭ್ರಮವಿಷಯೋ ಭವಾಮಿ ಲೋಕ-ಸ್ಯೇತ್ಯರ್ಥಃ । ಸ್ವಾಧೀನಪ್ರಕೃತ್ಯಾ ವಸುದೇವಾದಿದೇಹಾನ್ನಿರ್ಮಾಯ ತೇಷ್ವನುಪ್ರವಿಶ್ಯ ಪ್ರಾದುರ್ಭಾವಕರಣೇ ಕಿಂ ಪ್ರಯೋಜನಮಿತ್ಯತೋಽಪ್ಯುಕ್ತಮ್- ಸ್ವಾಂ ಪ್ರಕೃತಿಮಧಿಷ್ಠಾಯೇತಿ ॥ ಸ್ವಸ್ವಭಾವಮನುಸೃತ್ಯ ಸಂಭವಾಮೀತಿ । ದೇವಸ್ಯೈಷ ಸ್ವಭಾವ ಏವ ನ ಪ್ರಯೋಜನಾಪೇಕ್ಷ ಇತಿ[1] ಭಾವಃ । ಏತೇನ ಜೀವಜನ್ಮ-ವಿಲಕ್ಷಣಜನ್ಮವತ್ತ್ವಾದ್ಧರೇಃ ಪೂಜ್ಯತ್ವಾದಿನಾ [2]ಜೀವಭೇದ ಉಪಪಾದಿತ ಇತಿ ಜ್ಞೇಯಮ್ ॥ 6 ॥**

**ಅನುವಾದ** – ಕೃಷ್ಣ, ನನ್ನಂತೆ ನಿನಗೂ ಅನೇಕ ಜನ್ಮಗಳು ಕಳೆದಿರುವುದಾದರೆ, ನೀನೂ ನನ್ನಂತೆ ಹುಟ್ಟು, ಸಾವುಗಳಿಗೆ ತುತ್ತಾಗುವ ಜೀವಿಯೆಂದಾಯಿತು. 'ನಾನು ಹುಟ್ಟು-ಸಾವಿಲ್ಲದವನು, ಈಶ್ವರನು' ಎನ್ನಲು ಸಾಧ್ಯವಿಲ್ಲ. ಆದ್ದರಿಂದ '**ಅವಿನಾಶಿ ತು**' (2-17) ಎಂದು ಹಿಂದೆ ನಿನಗೆ ಹುಟ್ಟುಸಾವುಗಳಿಲ್ಲವೆಂದು ಹೇಳಿದ್ದೂ ವಿರುದ್ಧವಾಗುವುದೆಂದರೆ ಹೇಳುತ್ತಾನೆ. '**ಅಜೋಽಪೀತಿ**' – '**ಅಜೋಽಪಿ ಅವ್ಯಯಾತ್ಮಾ ಸನ್ನಪಿ ಭೂತಾನಾಂ ಈಶ್ವರಃ ಸನ್ನಪಿ ಸ್ವಾಂ ಪ್ರಕೃತಿಂ ಅಧಿಷ್ಠಾಯ ಆತ್ಮಮಾಯಯಾ ಸಂಭವಾಮಿ**' ಎಂದು ಅನ್ವಯ.

**ಶಬ್ದಗಳ ಅರ್ಥ –**

**ಅಜಃ** = (**ನ ಜಾಯತೇ ಇತಿ = ಅಜಃ**) ದೇಹದಿಂದಲೂ ಹುಟ್ಟಿಲ್ಲದವನು ಎಂದು ಅರ್ಥ.

**ಅವ್ಯಯಾತ್ಮಾ** = (**ಅವ್ಯಯಃ ಆತ್ಮಾ ಯಸ್ಯ ಸಃ**) = ನಾಶವಾಗದ ಸ್ವರೂಪ ಹಾಗೂ ದೇಹ ಉಳ್ಳವನು.

**ಭೂತಾನಾಂ ಈಶ್ವರಃ** = ಜೀವರುಗಳಿಗೆ ನಿಯಾಮಕ.

**ಆತ್ಮಮಾಯಯಾ** = ತನ್ನ ಇಚ್ಛೆಯಿಂದ ಅಥವಾ ಜ್ಞಾನದಿಂದ.

**ಸ್ವಾಂ ಪ್ರಕೃತಿಂ ಅಧಿಷ್ಠಾಯ** ಈ ಪದಗಳಿಗೆ ಮೂರು ಅರ್ಥಗಳನ್ನು ಶ್ರೀರಾಘವೇಂದ್ರರು ವಿವೃತಿಯಲ್ಲಿ ಸಂಗ್ರಹಿಸಿದ್ದಾರೆ.

---

1. ನ ಪ್ರಯೋಜನಾಪೇಕ್ಷೇತಿ
2. 'ಅನಾದಿ' ಇತಿ ಕ್ವಚಿತ್

**ವ್ಯಾಖ್ಯಾನ 1-** ನನ್ನ ಅಧೀನವಾದ ಪ್ರಕೃತಿಯಿಂದ ದೇಹವನ್ನು ಪಡೆಯುವ ವಸುದೇವ-ದೇವಕಿ ಮೊದಲಾದವರಲ್ಲಿ ಪ್ರವೇಶಿಸಿ ಪ್ರಾದುರ್ಭವಿಸುತ್ತೇನೆ.

**ವ್ಯಾಖ್ಯಾನ 2-** ನನ್ನ ಅಧೀನಳಾದ ತಮೋರೂಪಳಾದ ದುರ್ಗೆಯನ್ನು ಆಶ್ರಯಿಸಿ ಜನಿಸಿದಂತೆ ತೋರಿಸಿಕೊಳ್ಳುತ್ತೇನೆ .

**ವ್ಯಾಖ್ಯಾನ 3-** ನನ್ನ ಸ್ವಭಾವವನ್ನು ಅನುಸರಿಸಿ ಈ ಎರಡನ್ನೂ ಮಾಡುತ್ತೇನೆ.

ಮೇಲಿನ ಮೂರು ವ್ಯಾಖ್ಯಾನಗಳು ಮೂರು ಪ್ರಶ್ನೆಗಳಿಗೆ ಉತ್ತರಗಳೂ ಆಗಿವೆ. ಆ ಪ್ರಶ್ನೋತ್ತರಗಳು ಕೆಳಕಂಡಂತಿವೆ.

**ಪ್ರಶ್ನೆ 1 :** ಅನಾದಿಕಾಲದಿಂದ- ಸ್ವರೂಪದಿಂದಲೂ ದೇಹದಿಂದಲೂ ನಿತ್ಯನಾದ ನಿನಗೆ ಜನ್ಮವಾದರೂ ಹೇಗೆ ?

**ಉತ್ತರ :** ಪ್ರಕೃತಿ ನನ್ನ ಅಧೀನವಾಗಿದೆ . ಆ ಪ್ರಕೃತಿಯಿಂದ ವಸುದೇವ-ದೇವಕಿ ಮೊದಲಾದ ಜೀವರು ಪ್ರಾಕೃತ ದೇಹವನ್ನು ಪಡೆಯುತ್ತಾರೆ. ಆ ಪ್ರಾಕೃತ ದೇಹಗಳಲ್ಲಿ ನಾನು ಪ್ರವೇಶಿಸಿ ಚಿನ್ಮಯ ಶರೀರದಿಂದಲೆ ಹೊರಗೆ ಆವಿರ್ಭವಿಸುತ್ತೇನೆ.

ನನ್ನ ಅವತಾರ ರೂಪಗಳು ಅನಾದಿನಿತ್ಯಗಳು. ಆದರೆ ಜನರಿಗೆ ಯಾವಾಗಲೂ ತೋರುವುದಿಲ್ಲ. ಅನಾದಿ ನಿತ್ಯಗಳಾದ ಆ ಅವತಾರ ರೂಪಗಳನ್ನು ಜನಸಾಮಾನ್ಯರಿಗೆ ತೋರಿಸುವ ಬಯಕೆಯು ನನಗೆ ಬಂದಾಗ, ನಾನೇ ದೇವಕಿ ಮೊದಲಾದವರ ಮೂಲಕ ಜನರೂ ನೋಡುವಂತೆ ಮಾಡುತ್ತೇನೆ. ಆಗ ಜನರು ನನ್ನನ್ನು ಹುಟ್ಟಿದನೆಂದು ವ್ಯವಹರಿಸುತ್ತಾರೆ.

**ಪ್ರಶ್ನೆ 2 :** ಜನರು ಆ ರೀತಿ ಮೋಹಕ್ಕೆ ಒಳಗಾಗಲು ಕಾರಣವೇನು ?

**ಉತ್ತರ :** ನನ್ನ ಅಧೀನಳಾದ ತಮೋರೂಪಳಾದ ದುರ್ಗೆಯ ಮೂಲಕ ನಾನೇ ಜನರಿಗೆ 'ನಾನು ಹುಟ್ಟಿದೆ ' ಎಂಬ ಭ್ರಾಂತಿಯನ್ನು ಉಂಟುಮಾಡುತ್ತೇನೆ.

**ಪ್ರಶ್ನೆ 3 :** ನಿನ್ನ ಅಧೀನವಾದ ಪ್ರಕೃತಿಯಿಂದ ವಸುದೇವ-ದೇವಕಿ ಮೊದಲಾದ ದೇಹಗಳನ್ನು ನಿರ್ಮಿಸಿ, ಅದರಲ್ಲಿ ಪ್ರವೇಶ ಮಾಡಿ ಪ್ರಾದುರ್ಭಾವಗೊಳ್ಳುವುದರಿಂದ ನಿನಗೆ ದೊರಕುವ ಪ್ರಯೋಜನವೇನು ?

**ಉತ್ತರ :** ಸ್ವೇಚ್ಛೆಯಿಂದ ಹೀಗೆ ಅವತರಿಸುವುದು ನನ್ನ ಸ್ವಭಾವ. ಸ್ವಾಭಾವಿಕವಾಗಿ ನಡೆಯುವ ಕಾರ್ಯಗಳಿಗೆ ಸ್ವಪ್ರಯೋಜನದ ಉದ್ದೇಶವಿರುವುದಿಲ್ಲ.

ಹೀಗೆ ಜೀವರು ಪ್ರಾಕೃತದೇಹವನ್ನು ಪಡೆಯುವುದರ ಮೂಲಕ ಹುಟ್ಟುತ್ತಾರೆ. ಭಗವಂತನಾದರೂ ತನ್ನ ಸ್ವರೂಪದೇಹದಿಂದಲೇ ಜನರಿಗೆ ಗೋಚರನಾಗಿ ಜನ್ಮವನ್ನು ಪಡೆಯುತ್ತಾನೆ. ಜೀವೇಶರ ಜನ್ಮದಲ್ಲಿ ಈ ರೀತಿಯ ವೈಲಕ್ಷಣ್ಯವಿರುವುದರಿಂದಲೇ ಈಶ್ವರನು ಪೂಜ್ಯನಾಗಿದ್ದಾನೆ. ಜೀವನು ಪೂಜಕನಾಗಿದ್ದಾನೆ.

ಹೀಗೆ ಹಿಂದೆ ಹೇಳಿದ ಜೀವ-ಈಶ್ವರಭೇದವನ್ನು ಮತ್ತಷ್ಟು ಆಧಾರಗಳಿಂದ ಸಮರ್ಥಿಸಿದ್ದಾರೆ. ॥ 6 ॥

## ಧರ್ಮಕ್ಕೆ ಅವನತಿಯಾದಾಗ ನಾನು ಅವತರಿಸುವೆ

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾಽಽತ್ಮಾನಂ ಸೃಜಾಮ್ಯಹಮ್ ॥ 7 ॥**

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥ 8 ॥**

**ಅರ್ಥ**- ಭರತಕುಲೋತ್ಪನ್ನನಾದ ಅರ್ಜುನನೇ ! ಯಾವಾಗ ಧರ್ಮದ ಹಾನಿಯಾಗುವುದೋ, ಅಧರ್ಮದ ವೃದ್ಧಿಯಾಗುವುದೋ, ಆಗ ನಾನು ನನ್ನನ್ನು ಪ್ರಾದುರ್ಭಾವಗೊಳಿಸುತ್ತೇನೆ.

ಸಜ್ಜನರ ರಕ್ಷಣೆಗಾಗಿ, ದುಷ್ಟರ ವಿನಾಶಕ್ಕಾಗಿ, ಧರ್ಮದ ಸ್ಥಾಪನೆಗಾಗಿಯೂ ನಾನು ಪ್ರತಿಯುಗದಲ್ಲಿಯೂ ಅವತರಿಸುತ್ತೇನೆ.

**ಕಿಂಚ ಸ್ವಪ್ರಯೋಜನಾಭಾವೇಽಪಿ ಲೋಕಾಪೇಕ್ಷಿತಧರ್ಮಾಧರ್ಮಸ್ಥಾಪನೋತ್ಸಾದನಾದ್ಯರ್ಥಮವತಾರ ಇತಿ ಸಂಭವಕಾಲೋಕ್ತಿಪೂರ್ವಕಮಾಹ-ಯದೇತ್ಯಾದಿ ಶ್ಲೋಕದ್ವಯೇನ ॥ ಯುಗೇ ಯುಗ ಇತಿ ಧರ್ಮಹಾನ್ಯ-ಧರ್ಮವೃದ್ಧಿಕಾಲ ಇತ್ಯರ್ಥಃ । ಅವತಾರಂ ವಿನಾ ಸಾಧುಪರಿತ್ರಾಣಾದಿ-ಸಂಭವೇಽಪಿ ಲೀಲಯೈವಾವತಾರದ್ವಾರಾ ಪರಿತ್ರಾಣಾದಿಕಂ ಸ್ವಭಾವಾದೇವ ತಸ್ಯೇತಿ ಜ್ಞೇಯಮ್ ॥ 7-8 ॥**

**ಅನುವಾದ** - ಅವತಾರ ಮಾಡುವುದರಿಂದ ತನಗೆ ಯಾವ ಪ್ರಯೋಜನವಿಲ್ಲದಿದ್ದರೂ, ಈ ಲೋಕದ ಜನರಿಗೆ ಅಪೇಕ್ಷಿತವಾದ ಧರ್ಮದ ಸ್ಥಾಪನೆ, ಅಧರ್ಮದ ನಾಶ ಮೊದಲಾದ ಪ್ರಯೋಜನಕ್ಕೋಸ್ಕರ ತನ್ನ ಅವತಾರವೆನ್ನುತ್ತಾ , ತನ್ನ ಅವತಾರದ ಕಾಲವನ್ನೂ ಹೇಳುತ್ತಾನೆ – **'ಯದಾ ಯದಾ'** ಮೊದಲಾದ ಎರಡು ಶ್ಲೋಕಗಳಿಂದ.

**'ಯುಗೇ ಯುಗೇ'** ಎಂದರೆ ಧರ್ಮಹಾನಿಯಾಗುವ , ಅಧರ್ಮವೃದ್ಧಿಯಾಗುವ ಕಾಲದಲ್ಲಿ ಎಂದರ್ಥ.

ಅವತಾರವಿಲ್ಲದೇ ಭಗವಂತನು ಸಜ್ಜನರ ರಕ್ಷಣೆಯನ್ನೂ ದುಷ್ಟಜನರ ಸಂಹಾರವನ್ನೂ ಮಾಡಬಲ್ಲನು. ಆದರೂ ಭಗವಂತನು ಈ ಲೋಕದಲ್ಲಿ ಅವತರಿಸಿ ಈ ಕಾರ್ಯಗಳನ್ನು ಮಾಡುವುದು ಅವನ ಸ್ವಾಭಾವಿಕಲೀಲೆಯೆಂದು ತಿಳಿಯಬೇಕು. ॥ 7-8 ॥

**ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥ 9 ॥**

**ಅರ್ಥ** - ಎಲೈ ಅರ್ಜುನನೇ ! ಹೀಗೆ ನನ್ನ ಲೋಕವಿಲಕ್ಷಣವಾದ ಪ್ರಾದುರ್ಭಾವವನ್ನು ಹಾಗೂ ಕರ್ಮವನ್ನು ಯಾರು ಸರಿಯಾಗಿ ತಿಳಿಯುವನೋ ಅವನು ಈ ದೇಹವನ್ನು ತ್ಯಜಿಸಿ ಪುನಃ ಜನ್ಮವನ್ನು ಹೊಂದುವುದಿಲ್ಲ.

**ಏವಂ ಸ್ವಭಾವಾದೇವಾವತಾರಾದಿ ಸ್ವವ್ಯಾಪಾರಮುಕ್ತ್ವಾ ತದ್‌ಜ್ಞಾನ ಫಲಮಾಹ- ಜನ್ಮೇತಿ ॥ ಏವಮುಕ್ತಪ್ರಕಾರೇಣ ದಿವ್ಯಮಲೌಕಿಕಂ ಮೇ ಜನ್ಮ ಕರ್ಮ ಚ ತತ್ತ್ವತೋ ಯಥಾವತ್ತಯಾ ಯೋ ವೇತ್ತಿ ಸ ಜ್ಞಾನೀ ದೇಹಂ ತ್ಯಕ್ತ್ವಾ ಪುನರ್ಜನ್ಮ ನೈತಿ ನ ಪ್ರಾಪ್ನೋತಿ । ಕಿಂತು ಮಾಮೇತಿ । ಅತ್ರ ಜನ್ಮಕರ್ಮರೂಪೈಕದೇಶಜ್ಞಾನೇನ ಮುಕ್ತ್ಯುಕ್ತಿರ್ಯೋಗ್ಯಗುಣಜ್ಞಾನೋಪಲಕ್ಷಣಾರ್ಥಾ ಜ್ಞೇಯಾ ॥ 9 ॥**

**ಅನುವಾದ**- ಅವತಾರಾದಿ ತನ್ನ ಕಾರ್ಯಗಳೆಲ್ಲವೂ ಸ್ವಭಾವವೆಂದು ಹೇಳಿ, ಅದನ್ನು ತಿಳಿಯುವುದರಿಂದ ಆಗುವ ಫಲವನ್ನು ಹೇಳುತ್ತಾನೆ- **'ಜನ್ಮ ಕರ್ಮ ಚ...'** ಎಂದು.

**ಶಬ್ದಾರ್ಥ**- **ಏವಂ**= ಹಿಂದೆ ಹೇಳಿದ ರೀತಿಯಲ್ಲಿ. **ದಿವ್ಯಂ**= ಅಲೌಕಿಕ, **ತತ್ತ್ವತಃ**= ಯಥಾರ್ಥವಾಗಿ, **ನ ಏತಿ** = ಹೊಂದುವುದಿಲ್ಲ .

**ಶ್ಲೋಕದ ಭಾವ** – ಲೋಕವಿಲಕ್ಷಣವಾದ, ಅಪ್ರಾಕೃತವಾದ ನನ್ನ ಅವತಾರವನ್ನು ಹಾಗೂ ಕರ್ಮವನ್ನು ಯಾರು ಹಿಂದೆ ಹೇಳಿದ ರೀತಿಯಲ್ಲಿ ಯಥಾರ್ಥವಾಗಿ ತಿಳಿಯುತ್ತಾನೋ ಅಂತಹ ಜ್ಞಾನಿಯು ಈ ದೇಹವನ್ನು ಬಿಟ್ಟಮೇಲೆ ಪುನಃ ಹುಟ್ಟನ್ನು ಪಡೆಯುವುದಿಲ್ಲ. ಆದ ನನ್ನನ್ನೇ ಹೊಂದುತ್ತಾನೆ.

## ಮುಕ್ತಿಗೆ ಜನ್ಮ-ಕರ್ಮರಹಸ್ಯ ಜ್ಞಾನವು ಆವಶ್ಯಕ, ಆದರೆ ಅದೊಂದೇ ಅಲ್ಲ.

ಈ ಶ್ಲೋಕದಲ್ಲಿ ಭಗವಂತನ ಜನ್ಮ-ಕರ್ಮರಹಸ್ಯವನ್ನು ತಿಳಿದವನು ಮುಕ್ತನಾಗುತ್ತಾನೆ ಎಂದ

ಹೇಳಿರುವುದು ಮುಕ್ತಿಯನ್ನು ಪಡೆಯಲು ಈ ಜ್ಞಾನವು ಆವಶ್ಯಕ, ಇದಿಲ್ಲದೇ ಮುಕ್ತಿಯಾಗುವುದಿಲ್ಲವೆಂದು ತಿಳಿಸುವುದೇ ಹೊರತು ಇತರ ಗುಣಪೂರ್ಣತ್ವಾದಿ ಜ್ಞಾನಗಳು ಮುಮುಕ್ಷುವಿಗೆ ಅನಾವಶ್ಯಕವೆಂದು ತಿಳಿಸುವುದಲ್ಲ. ಎಲ್ಲಾ ಮುಮುಕ್ಷುಗಳೂ ಅವರವರ ಯೋಗ್ಯತೆಗೆ ಅನುಗುಣವಾಗಿ ಭಗವಂತನ ಎಲ್ಲ ಗುಣಗಳನ್ನು ತಿಳಿಯಲೇಬೇಕು. ॥ 9 ॥

**ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥ 10 ॥**

**ಅರ್ಥ**- ರಾಗ (ಸುಂದರವಸ್ತುಗಳ ಅಭಿಲಾಷೆ) ಭಯ, ಕ್ರೋಧಗಳನ್ನು ಕಳೆದುಕೊಂಡಿರುವ, ನನ್ನನ್ನೇ (ಶ್ರೀಕೃಷ್ಣನನ್ನು) ಸರ್ವೋತ್ತಮನೆಂದೂ, ಎಲ್ಲಾ ಪದಾರ್ಥಗಳಲ್ಲಿ ಇದ್ದು ಅಸ್ತಿತ್ವಾದಿಗಳನ್ನು ಕೊಡುವವನೆಂದೂ ತಿಳಿದಿರುವ, ನನ್ನನ್ನೇ ಶರಣು ಹೊಂದಿರುವ, ಬಹಳ ಜ್ಞಾನಿಗಳು ಜ್ಞಾನವೆಂಬ ತಪಸ್ಸಿನಿಂದ ಅಥವಾ ಜ್ಞಾನ ಹಾಗೂ ತಪಸ್ಸುಗಳಿಂದ ಕರ್ಮದ ಕೊಳೆಯನ್ನು ನೀಗಿಕೊಂಡು ಪವಿತ್ರರಾಗಿ ನನ್ನ ಸಾಯುಜ್ಯದ ಸ್ಥಿತಿಯನ್ನು ಪಡೆದಿರುತ್ತಾರೆ.

**ಏವಂ ಜ್ಞಾತ್ವಾ ಮುಕ್ತಾಃ ಸಂತಿ ಕಿಮಿತ್ಯತಃ ಸಂತೀತ್ಯಾಹ- ವೀತರಾಗೇತಿ ॥ ತದ್‌ಜ್ಞಾನಸ್ಯ ಮುಕ್ತಿಹೇತುತ್ವಂ ಕುತ ಇತ್ಯತೋ ವಾಽಽಹ- ವೀತೇತಿ ॥ ಅಪಗತರಾಗಭಯಕ್ರೋಧಾಃ ಮನ್ಮಯಾಃ ಮತ್ಪ್ರಧಾನಾಃ । ಅಹಮೇವ ಪ್ರಧಾನ ಇತಿ ಜಾನಂತ ಇತಿ ಯಾವತ್ । ಯದ್ವಾ ಮನ್ಮಯಾ ಮತ್ಪ್ರಚುರಾ ಮಾಮೇವ ಸರ್ವಭೂತೇಷು ಸತ್ತಾಪ್ರತೀತ್ಯಾದಿಪ್ರದಂ ಜಾನಂತ ಇತಿ ಯಾವತ್ । ಮಾಮುಪಾಶ್ರಿತಾಃ ಮದೇಕಶರಣಾಃ ಬಹವೋ ಜ್ಞಾನಾಖ್ಯತಪಸಾ ಜ್ಞಾನೇನ ತಪಸಾ ಚೇತಿ ವಾ, ಪೂತಾಃ ದಗ್ಧಕರ್ಮಾಣಃ ಮದ್ಭಾವಂ ಮಯಿ ಸಾಯುಜ್ಯ-ಲಕ್ಷಣಂ ಭಾವಂ ಸ್ಥಿತಿಮಾಗತಾಃ ಪ್ರಾಪ್ತಾಃ ॥ 10 ॥**

## ಹತ್ತನೆಯ ಶ್ಲೋಕಕ್ಕೆ ಅವತಾರಿಕೆ

**ಅನುವಾದ**- ರಾಯರು ಈ ಶ್ಲೋಕಕ್ಕೆ ಎರಡುವಿಧದ ಅವತಾರಿಕೆಗಳನ್ನು ನೀಡುತ್ತಾರೆ –

1. ಭಗವಂತನ ಜನ್ಮ-ಕರ್ಮರಹಸ್ಯಾದಿಗಳನ್ನು ತಿಳಿದು ಯಾರಾದರೂ ಮುಕ್ತರಾಗಿರುವರೆ? ಎಂಬ ಶಂಕೆಗೆ ಉತ್ತರವಾಗಿ ಈ ಶ್ಲೋಕವು ಹೊರಟಿದೆ.
2. ಭಗವಂತನ ಜನ್ಮಕರ್ಮರಹಸ್ಯಾದಿಗಳ ಜ್ಞಾನವು ಮುಕ್ತಿಗೆ ಹೇಗೆ ಸಾಧನವಾಗುವುದು? ಎಂಬ ಶಂಕೆಗೆ ಉತ್ತರವಾಗಿ ಈ ಶ್ಲೋಕವು ಹೊರಟಿದೆ.

**ವಿವರಣೆ** - ಭಗವಂತನ ಜನ್ಮಕರ್ಮರಹಸ್ಯ ಜ್ಞಾನದಿಂದ ಮುಕ್ತರಾದವರು ಬಹಳ ಜನರು ಇದ್ದಾರೆಂದು ಮೊದಲನೆಯ ಶಂಕೆಗೆ ಉತ್ತರ. ಭಗವಂತನ ಜನ್ಮಕರ್ಮಗಳ ರಹಸ್ಯಜ್ಞಾನವು ಶರಣಾಗತಿ ಹಾಗೂ ಭಕ್ತಿಯ ಮೂಲಕ ಮೋಕ್ಷಕ್ಕೆ ಸಾಧನವಾಗುವುದು ಎಂದು ಎರಡನೆಯ ಶಂಕೆಗೆ ಉತ್ತರ.

**ಶಬ್ದಾರ್ಥ** - **ವೀತರಾಗಭಯಕ್ರೋಧಾಃ** = ರಾಗ , ಭಯ, ಕ್ರೋಧಗಳನ್ನು ಬಿಟ್ಟವರು. **ಮನ್ಮಯಾಃ** = ನಾನೇ ಸರ್ವೋತ್ತಮನು ಎಂದು ತಿಳಿದವರು. ಅಥವಾ ಎಲ್ಲಾ ಪದಾರ್ಥಗಳಿಗೆ ಅಸ್ತಿತ್ವಾದಿಗಳನ್ನು ನೀಡುತ್ತಾ ಅಂತರ್ಯಾಮಿಯಾಗಿರುವವನು ನಾನೇ ಎಂದು ತಿಳಿದವರು. **ಮಾಂ ಉಪಾಶ್ರಿತಾಃ** = ನನ್ನನ್ನೇ ಶರಣು ಹೊಂದಿದವರು. **ಜ್ಞಾನ ತಪಸಾ** = ಜ್ಞಾನವೆಂಬ ತಪಸ್ಸಿನಿಂದ ಅಥವಾ ಜ್ಞಾನದಿಂದಲೂ ತಪಸ್ಸಿನಿಂದಲೂ. **ಪೂತಾಃ** = ಕರ್ಮದ ಕೊಳೆಯನ್ನು ನೀಗಿಕೊಂಡು ಪವಿತ್ರರಾದವರು. || 10 ||

## ಸೇವೆಗೆ ಅನುಗುಣವಾಗಿ ಫಲದಾತೃ

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ || 11 ||**

**ಅರ್ಥ** - ಅರ್ಜುನ, ಜ್ಞಾನಿಗಳಾಗಲೀ, ತ್ರೈವಿದ್ಯರಾಗಲೀ, ಯಾರು ನನ್ನನ್ನು ಹೇಗೆ ಆರಾಧಿಸುತ್ತಾರೋ ಹಾಗೆಯೇ ಅಂದರೆ ಅವರ ಆರಾಧನೆಗೆ ಅನುಗುಣವಾಗಿ ಮೋಕ್ಷವನ್ನಾಗಲೀ ಸ್ವರ್ಗವನ್ನಾಗಲೀ ಕೊಡುತ್ತಾ ಅವರನ್ನು ಸೇವಿಸುತ್ತೇನೆ ಹೊರತು ಅವರ ಅಧೀನನಾಗಿ ಅಲ್ಲ. ಜ್ಞಾನಿಗಳಾದ, ತ್ರೈವಿದ್ಯರಾದ ಮಾನವರೆಲ್ಲರೂ ನನ್ನ ದಾರಿಯನ್ನೇ ಅನುಸರಿಸುತ್ತಾರೆ. ತೋರಿಕೆಗೆ ತ್ರೈವಿದ್ಯರು ಇತರ ದೇವತೆಗಳನ್ನು ಆರಾಧಿಸುವಂತೆ ಕಂಡರೂ, ನನ್ನ ದಾರಿಯನ್ನೇ ಅನುಸರಿಸುತ್ತಾರೆ. ಏಕೆಂದರೆ -

1. ತ್ರೈವಿದ್ಯರಿಂದ ಇತರ ದೇವತೆಗಳ ಆರಾಧನೆಯನ್ನು ಮಾಡಿಸುವವನು ನಾನೇ ಆಗಿದ್ದೇನೆ.
2. ತ್ರೈವಿದ್ಯರು ಇತರ ದೇವತೆಗಳಿಗೆ ಯಜ್ಞಾದಿಗಳಲ್ಲಿ ನೀಡುವ ಹವಿಸ್ಸು ಮೊದಲಾದವನ್ನು ಮುಖ್ಯವಾಗಿ ಸ್ವೀಕರಿಸುವವನು ನಾನೇ.
3. ತ್ರೈವಿದ್ಯರಿಗೆ ಅವರ ಆರಾಧನೆಗೆ ಅನುಗುಣವಾಗಿ ಅಮುಖ್ಯವಾದ ಸ್ವರ್ಗಾದಿ ಫಲಗಳನ್ನು ನೀಡುವವನೂ ನಾನೇ. ಇದೆಲ್ಲವನ್ನೂ ಜ್ಞಾನಿಗಳು ಅರಿತಿದ್ದಾರೆ. ಆದರೆ ತ್ರೈವಿದ್ಯರು ಅರಿತಿಲ್ಲ. ಆದ್ದರಿಂದ ಫಲದಲ್ಲಿ ವ್ಯತ್ಯಾಸ.

**ನನು ಸಾಮಾನ್ಯತೋ ವಿಷ್ಣುಂ ಸರ್ವೋತ್ತಮಂ ಜ್ಞಾತ್ವಾ ಅನ್ಯದೇವತಾಃ ಪಿತೄಂಶ್ಚೇಷ್ಟ್ವಾ ವಂತೇ ತತ್ಕರ್ಮ ವಿಷ್ಣೌ ಸಮರ್ಪಯಂತಿ ಯೇ ತ್ರೈವಿದ್ಯಾಃ, ತೇಷಾಮಪಿ ಮೋಕ್ಷಶ್ಚೇತ್ಕೋ ವಿಶೇಷಸ್ತ್ವಾಮುಪಾಶ್ರಿತಾನಾಮಿತ್ಯತೋ ನ ಜ್ಞಾನಿನಾಂ ತ್ರೈವಿದ್ಯಾನಾಂ ಚ ಫಲಸಾಮ್ಯಮ್, ತತ್ತತ್ಸೇವಾನುಸಾರೇಣೈವ ಮೋಕ್ಷಸ್ವರ್ಗರೂಪಭಿನ್ನಫಲದಾನಾತ್ಸೇವಾಯಾಶ್ಚ ವೈಷಮ್ಯಾದತೋ ನ ವೈಷಮ್ಯಾದಿದೋಷ ಇತಿ ಭಾವೇನಾಹ- ಯೇ ಯಥೇತಿ ॥ ಯೇ ಜ್ಞಾನಿನಃ ತ್ರೈವಿದ್ಯಾ ವಾ ಯಥಾ ಯೇನ ಪ್ರಕಾರೇಣ ಮೋಕ್ಷೇಚ್ಛಯಾ ಮದ್ ಯಜನಪ್ರಕಾರೇಣ, ಸ್ವರ್ಗಾದೀಚ್ಛಯಾ ಅನ್ಯದೇವತಾಯಜನಪ್ರಕಾರೇಣ ಮಾಂ ಪ್ರಪದ್ಯಂತೇ ತಾಂಸ್ತಥೈವ ತತ್ತದ್ಭಜನಾನುಸಾರೇಣಾಹಂ ಭಜಾಮಿ ಮೋಕ್ಷಸ್ವರ್ಗ-ಫಲದಾನೇನ ಸೇವೇ । ನ ಗುಣಭಾವೇನೇತ್ಯರ್ಥಃ । ಫಲತಾರತಮ್ಯಹೇತುರಯಂ ಜ್ಞಾನಿಭ್ಯಃ ತ್ರೈವಿದ್ಯಾನಾಂ ಸೇವಾಯಾಂ ವಿಶೇಷಃ ಕಿಂ ಪ್ರಕಾರ ಇತ್ಯತ ಆಹ-ಮಮೇತಿ ॥ ಹೇ ಪಾರ್ಥ ! ಸರ್ವಶಃ ಸರ್ವೇ ಜ್ಞಾನಿನಃ ತ್ರೈವಿದ್ಯಾಶ್ಚ ಮನುಷ್ಯಾ ಮಮ ವರ್ತ್ಮಾನುವರ್ತಂತೇ । ಮಮ ತತ್ಕರ್ಮ ಕರ್ತೃತ್ವಾತ್ತದ್ಯಾಗೀಯ-ಹವಿರಾದಿಭೋಕ್ತೃತ್ವಾತ್ ಮಮ ವರ್ತ್ಮಾನುವರ್ತಿನ ಏವ ಸರ್ವ ಇತ್ಯರ್ಥಃ । ॥ 11 ॥**

**ಅನುವಾದ -** ಭಗವಂತನ ಭಕ್ತರು ಎರಡು ಬಗೆಯವರಿದ್ದಾರೆ – 1. ಜ್ಞಾನಿಗಳು, 2. ತ್ರೈವಿದ್ಯರು . ವಿಷ್ಣುವೇ ಸರ್ವೋತ್ತಮನೆಂದು ತಿಳಿದು, ಮೋಕ್ಷಕ್ಕಾಗಿ ಅವನನ್ನೇ ಶರಣುಹೊಂದಿ, ಅವನ ಪ್ರೀತ್ಯರ್ಥವಾಗಿ ಸಕಲ ಕರ್ಮಗಳನ್ನೂ ಆಚರಿಸುವವರು ಜ್ಞಾನಿಗಳು. ಸಾಮಾನ್ಯವಾಗಿ ವಿಷ್ಣುವು ಸರ್ವೋತ್ತಮನೆಂದು ತಿಳಿದು, ಸ್ವರ್ಗಾದಿ ಲೌಕಿಕಫಲಾಪೇಕ್ಷೆಯಿಂದ ಅನ್ಯ ದೇವತೆಗಳನ್ನೂ, ಪಿತೃಗಳನ್ನೂ ಆರಾಧಿಸಿ, ಆ ಸತ್ಕರ್ಮಗಳನ್ನು ಕೊನೆಗೆ 'ಶ್ರೀಕೃಷ್ಣಾರ್ಪಣಮಸ್ತು' ಎಂದು ಅರ್ಪಿಸುವವರು ಅನ್ಯದೇವತಾಭಕ್ತರು. ಅವರನ್ನೇ ಶಾಸ್ತ್ರಗಳಲ್ಲಿ 'ತ್ರೈವಿದ್ಯ'ರೆಂದು ಕರೆಯುತ್ತಾರೆ. ಈ ಎರಡೂ ಬಗೆಯ ಭಕ್ತರಲ್ಲಿ ಜ್ಞಾನಿಗಳಿಗೆ ಮೋಕ್ಷವನ್ನು ಭಗವಂತ ಕೊಡುತ್ತಾನೆಂದು ಹಿಂದಿನ ಶ್ಲೋಕದಲ್ಲಿ ಹೇಳಲಾಗಿದೆ. ಎರಡನೆಯ ಪಂಗಡಕ್ಕೆ ಸೇರುವ ತ್ರೈವಿದ್ಯರಿಗೂ ಭಗವಂತನು ಮೋಕ್ಷವನ್ನು ಕೊಡುತ್ತಾನೆಯೇ ? ಅಥವಾ ಇಲ್ಲವೇ ? ತ್ರೈವಿದ್ಯರಿಗೂ ಮೋಕ್ಷವನ್ನು ಕೊಡುವುದಾದರೆ ಭಗವಂತನನ್ನೇ ವಿಶೇಷವಾಗಿ ಆಶ್ರಯಿಸಿದ ಜ್ಞಾನಿಗಳಿಗೂ ತ್ರೈವಿದ್ಯರಿಗೂ ವ್ಯತ್ಯಾಸವಿಲ್ಲದಂತಾಗುವುದು. ಭಗವಂತನು ತ್ರೈವಿದ್ಯರಿಗೆ ಮೋಕ್ಷವನ್ನು ಕೊಡುವುದಿಲ್ಲವೆಂದಾದರೆ ಇಬ್ಬರೂ ಭಕ್ತರಾಗಿರುವಾಗ ಫಲ ವ್ಯತ್ಯಾಸ ಮಾಡಲು

ಕಾರಣವೇನು? ಭಗವಂತನಿಗೆ ವೈಷಮ್ಯಾದಿ ದೋಷವೂ ಬರುವುದು ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರವು ಈ ರೀತಿಯಾಗಿದೆ.

ಭಗವಂತನು ಜ್ಞಾನಿಭಕ್ತರಿಗೆ ಮಾತ್ರವೇ ಮೋಕ್ಷವನ್ನು ನೀಡುತ್ತಾನೆ. ತ್ರೈವಿದ್ಯಭಕ್ತರಿಗೆ ಮೋಕ್ಷವನ್ನು ನೀಡುವುದಿಲ್ಲ. ಬದಲು ಸ್ವರ್ಗಫಲವನ್ನೇ ನೀಡುತ್ತಾನೆ. ಇಬ್ಬರು ಭಕ್ತರ ಸೇವಾಭಾವನೆಯಲ್ಲಿ ಇರುವ ವ್ಯತ್ಯಾಸವೇ ಈ ಫಲ ವ್ಯತ್ಯಾಸಕ್ಕೆ ಕಾರಣವಾಗಿದೆ. ಆದ್ದರಿಂದಲೇ ಭಗವಂತನಿಗೆ ಪಕ್ಷಪಾತದೋಷವೂ ಇಲ್ಲ. ಈ ಎಲ್ಲಾ ಅಭಿಪ್ರಾಯಗಳನ್ನೂ **'ಯೇ ಯಥಾ ಮಾಂ'** ಎಂಬ ಶ್ಲೋಕದಿಂದ ಶ್ರೀಕೃಷ್ಣನು ಪ್ರಕಟಗೊಳಿಸುತ್ತಾನೆ.

**ಶಬ್ದಾರ್ಥ- ಯೇ** = ಜ್ಞಾನಿಗಳು ಹಾಗೂ ತ್ರೈವಿದ್ಯರು. **ಯಥಾ** = ಯಾವರೀತಿಯಿಂದ ಸೇವಿಸುವರೋ, **ತಥಾ ಏವ**= ಅವರವರ ಸೇವೆಗೆ ಅನುಗುಣವಾಗಿ, **ಭಜಾಮಿ**= ಮೋಕ್ಷ-ಸ್ವರ್ಗರೂಪವಾದ ಫಲಗಳನ್ನು ನೀಡುತ್ತಾ ಸೇವಿಸುತ್ತೇನೆ ಹೊರತು ಭಕ್ತರ ಅಧೀನನಾಗಿ ಸೇವಿಸುವುದಿಲ್ಲ. **ಸರ್ವಶಃ** = ಎಲ್ಲರೂ ಅಂದರೆ ಜ್ಞಾನಿಗಳೂ ತ್ರೈವಿದ್ಯರೂ ಆದ ಮಾನವರೆಲ್ಲರೂ, **ಮಮ ವರ್ತ್ಮ ಅನುವರ್ತಂತೇ** = ನನ್ನ ದಾರಿಯನ್ನೇ ಅನುಸರಿಸುತ್ತಾರೆ. ಇತರ ದೇವತೆಗಳ ಆರಾಧನೆಯ ಮೂಲಕವಾಗಿಯಾದರೂ ನನ್ನನ್ನೇ ಆರಾಧಿಸುತ್ತಾರೆ.

**ಶ್ಲೋಕದ ಭಾವ** - ಜ್ಞಾನಿಗಳು ಮೋಕ್ಷದ ಕಾಮನೆಯಿಂದಲೇ ನನ್ನನ್ನು ಭಜಿಸುವರು. ತ್ರೈವಿದ್ಯರು ಸ್ವರ್ಗದ ಬಯಕೆಯಿಂದಲೇ ಇಂದ್ರಾದಿ ಇತರ ದೇವತೆಗಳ ಆರಾಧನಾ-ಮಾರ್ಗವಾಗಿ ನನ್ನನ್ನು ಭಜಿಸುವರು. ನಾನು ಆಯಾಯ ಭಕ್ತರ ಅಭಿಲಾಷೆಗೆ ಅನುಗುಣವಾಗಿ, ಅವರ ಸೇವಾಭಾವನೆಯ ವ್ಯತ್ಯಾಸಕ್ಕೆ ತಕ್ಕಂತೆ, ಜ್ಞಾನಿಗಳಿಗೆ ಮೋಕ್ಷವನ್ನೂ, ತ್ರೈವಿದ್ಯರಿಗೆ ಸ್ವರ್ಗವನ್ನೂ ನೀಡುತ್ತೇನೆ. ಇದೇ ನಾನು ಮಾಡುವ ಭಜನೆ, ಸೇವೆ . ಹೊರತು ನಾನು ಅವರಿಗೆ ಅಡಿಯಾಳಾಗಿ ಸೇವಿಸುವುದಿಲ್ಲ, ಹೀಗೆ ಅವರವರ ಕರ್ಮಾನುಸಾರವಾಗಿ ಅವರವರಿಗೆ ಇಷ್ಟವಾದ ಫಲವನ್ನೇ ನಾನು ನೀಡುತ್ತಿರುವುದರಿಂದ ಪಕ್ಷಪಾತ ದೋಷಕ್ಕೆ ಅವಕಾಶವಿಲ್ಲ. ॥ 11 ॥

ಭಾಗವತರಿಗಿಂತ ತ್ರೈವಿದ್ಯರಲ್ಲಿ ಅವರ ಫಲ ತಾರತಮ್ಯಕ್ಕೆ ಹೇತುವಾಗಬಲ್ಲ, ಸೇವಾ ವೈಲಕ್ಷಣ್ಯವು ಯಾವ ರೀತಿಯದು ಎಂಬ ಪ್ರಶ್ನೆಗೆ **'ಮಮ ವರ್ತ್ಮ'** ಎಂದು ಉತ್ತರಿಸುತ್ತಾನೆ. ಅರ್ಜುನ, ಎಲ್ಲ ಭಾಗವತರೂ, ತ್ರೈವಿದ್ಯರೂ ನನ್ನ ದಾರಿಯನ್ನೇ ಅನುಸರಿಸುತ್ತಾರೆ . ಏಕೆಂದರೆ ಅವರ ಕರ್ಮಗಳ ಪ್ರೇರಕನೂ ನಾನೇ. ಅವರ ಯಾಗದ ಹವಿಸ್ಸನ್ನು ಉಣ್ಣುವವನೂ ನಾನೇ.

**ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ** ॥ 12 ॥

**ಅರ್ಥ-** ತ್ರೈವಿದ್ಯರು ಕರ್ಮಫಲವನ್ನು ಅಪೇಕ್ಷಿಸಿ ಬೇರೆ ದೇವತೆಗಳನ್ನು ಆರಾಧಿಸುತ್ತಾರೆ. ಆದರೆ ಅವರು ಮಾಡುವ ಅನ್ಯದೇವತೆಗಳ ಆರಾಧನೆಯೂ ನನಗೇ ಸೇರುತ್ತದೆ ಎಂಬುದನ್ನು, ಅವರು ಅರಿಯರು. ಇತರ ದೇವತೆಗಳ ಆರಾಧನೆಯಿಂದಲೂ ತ್ರೈವಿದ್ಯರು ಬೇಗನೇ ಫಲಸಿದ್ಧಿಯನ್ನು ಮಾನವಲೋಕದಲ್ಲಿ ಪಡೆಯುತ್ತಿದ್ದಾರೆನ್ನುವುದೇ,ಅವರ ಆರಾಧನೆ ನನಗೆ ಸೇರುತ್ತಿದೆ ಎಂಬುದಕ್ಕೆ ಜ್ಞಾಪಕವಾಗಿದೆ.

**ಏತಾವಾನ್ ವಿಶೇಷಃ । ಅಹಮೇವ ಸರ್ವಯಜ್ಞಾನಾಂ ಭೋಕ್ತಾ ಪ್ರೇರಕಶ್ಚ । ತದೇತದ್‌ಜ್ಞಾತ್ವಾ ಭಾಗವತಾ ನಿಷ್ಕಾಮಾಃ ಮಾಮೇವ ಯಜಂತೇ । ತ್ರೈವಿದ್ಯಾಸ್ತೇ ತತ್ತತ್ತ್ವಮಜಾನಾನಾಃ ಕರ್ಮಣಾಂ ಸಿದ್ಧಿಂ ಕಾಂಕ್ಷಂತಃ, ಅನ್ಯದೇವತಾ ಇಹ ಯಜಂತ ಇತಿ । ನನು ಮಮ ವರ್ತ್ಮಾನುವರ್ತಂತ ಇತಿ ಯತ್ಸರ್ವಕರ್ಮಕರ್ತೃತ್ವಂ ಸರ್ವಕರ್ಮಭೋಕ್ತೃತ್ವಂ ಚೋಕ್ತಂ ತತ್ರ ಸರ್ವಕರ್ಮಕರ್ತೃತ್ವಂ ಜೀವಾನಾಮ್ ಆಸ್ವಾತಂತ್ರ್ಯದರ್ಶನಾತ್ ಸಿದ್ಧಮ್ । ಯಜ್ಞಾದಿಭೋಕ್ತೃತ್ವಂ ಕುತೋ ಮಾನಾತ್ ಜ್ಞೇಯಮಿತ್ಯತ ಆಹ- ಕ್ಷಿಪ್ರಂ ಹೀತಿ ।। ಯಸ್ಮಾನ್ಮಾನುಷೇ ಲೋಕೇ ಕರ್ಮಜಾ ಸಿದ್ಧಿಃ ಕರ್ಮಜಂ ಫಲಂ ಕ್ಷಿಪ್ರಂ ಶೀಘ್ರಂ ಭವತಿ ತಸ್ಮಾನ್ಮಮ ವರ್ತ್ಮಾನುವರ್ತಂತೇ, ಅಹಂ ಸರ್ವಯಜ್ಞಭೋಕ್ತೇತಿ ಯಾವತ್ । ಭಗವತಃ ಸರ್ವಯಜ್ಞಭೋಕ್ತೃತ್ವಾದೇವ ತತ್ಫಲಮಿಹ ಯಜಮಾನಸ್ಯ ಕ್ಷಿಪ್ರಮುಪಲಭ್ಯತೇ । ನಾನ್ಯಥಾ । 'ತಸ್ಮಾತ್ತೇ ಧನಸನಯಃ' (ಛಾಂ. 1-7-6), 'ಫಲಮತ ಉಪಪತ್ತೇಃ' (ಸೂ.2-2-39) ಇತಿ ಶ್ರುತಿಸೂತ್ರಾದಿನಾ ಹರೇರೇವ ಫಲದಾತೃತ್ವಾದಿತಿ ಭಾವಃ । ಯದ್ವಾ ತ್ರೈವಿದ್ಯಾನಾಮನ್ಯದೇವತಾಯಾಜಿತ್ವಾತ್ ಕಥಮುಚ್ಯತೇ ಮಾಂ ಪ್ರಪದ್ಯಂತ ಇತ್ಯತಃ ಇಹ ಲೋಕೇ ಅನ್ಯದೇವತಾ ಯಜಂತಃ ಯಜ್ಞಕರ್ಮಣಾಂ ಸಿದ್ಧಿಂ ಕಾಂಕ್ಷಂತಃ ಸರ್ವಶೋ ಮನುಷ್ಯಾಸ್ತ್ರೈವಿದ್ಯಾ ಅಂತೇ ಮಯಿ ತತ್ಕರ್ಮ ಸಮರ್ಪಣೇನ ಮಮ ವರ್ತ್ಮಾನುವರ್ತಂತೇ ವೈಷ್ಣವಮಾರ್ಗಮೇವ ಅನುಸೃತಾ ಭವಂತಿ । ಕುತ ಏತತ್ । ಹಿ ಯಸ್ಮಾತ್ಕರ್ಮಜಾ ಸಿದ್ಧಿರಿಹ ಲೋಕೇ ಕ್ಷಿಪ್ರಂ ಭವತಿ ಅತ ಇತಿ । ಅನ್ಯಥಾ ತನ್ನ ಸ್ಯಾದಿತಿ ಭಾವಃ ।। 12 ।।**

**ಅನುವಾದ-** ತ್ರೈವಿದ್ಯರಿಗೂ ಭಾಗವತರಿಗೂ ನನ್ನ ಸೇವೆಯಲ್ಲಿ ವೈಲಕ್ಷಣ್ಯವು ಈ ತೆರನಾಗಿದೆ- ನಾನೇ (ಶ್ರೀಕೃಷ್ಣನೇ) ಎಲ್ಲಾ ಯಜ್ಞಗಳನ್ನು ಭೋಗಿಸುವವನು ಹಾಗೂ ಯಜ್ಞಗಳ ಪ್ರೇರಕನು. ಈ ಮರ್ಮವನ್ನು ಅರಿತು ಭಾಗವತರು ನಿಷ್ಕಾಮವಾಗಿ ನನ್ನನ್ನೇ (ಶ್ರೀಕೃಷ್ಣನನ್ನೇ) ಆರಾಧಿಸುತ್ತಾರೆ . ತ್ರೈವಿದ್ಯರಾದರೋ ಈ ತತ್ತ್ವವನ್ನು ಅರಿಯದೇ ಕರ್ಮಫಲಗಳನ್ನು ಬಯಸಿ ಬೇರೆ ದೇವತೆಗಳನ್ನು ಈ ಭೂಮಿಯಲ್ಲಿ ಆರಾಧಿಸುತ್ತಾರೆ.

ಹಿಂದಿನ ಶ್ಲೋಕದಲ್ಲಿ 'ನನ್ನ ದಾರಿಯನ್ನೇ ಅನುಸರಿಸುತ್ತಾರೆ ' ಎಂದು ಸರ್ವಕರ್ಮಗಳ ಕರ್ತೃತ್ವವನ್ನು ಹಾಗೂ ಸರ್ವಯಜ್ಞಗಳ ಫಲಭೋಕ್ತೃತ್ವವನ್ನೂ ಶ್ರೀಕೃಷ್ಣನಿಗೇ ಹೇಳಲಾಗಿದೆ. ಅದರಲ್ಲಿ ಸರ್ವಕರ್ಮಕರ್ತೃತ್ವವು ಜೀವರಿಗೆ ಅಸ್ವಾತಂತ್ರ್ಯ ಕಂಡು ಬರುವುದರಿಂದ ಸಿದ್ಧವಾಗುವುದು . ಆದರೆ ಯಜ್ಞಾದಿ ಫಲಭೋಕ್ತೃತ್ವವನ್ನು ಯಾವ ಪ್ರಮಾಣದಿಂದ ತಿಳಿಯ ಬೇಕೆಂಬ ಆಶಂಕೆಗೆ **'ಕ್ಷಿಪ್ರಂ ಹಿ..'** ಎಂಬ ಉತ್ತರಾರ್ಧದಿಂದ ಉತ್ತರಿಸಲಾಗಿದೆ.

**ಯಸ್ಮಾತ್ ಮಾನುಷೀ ಲೋಕೇ ಕರ್ಮಜಾ ಸಿದ್ಧಿಃ ಕ್ಷಿಪ್ರಂ ಭವತಿ ತಸ್ಮಾತ್ ಮಮ ವರ್ತ್ಮ ಅನುವರ್ತಂತೇ'** ಎಂದು ಹಿಂದಿನ ಶ್ಲೋಕದೊಂದಿಗೆ ಅನ್ವಯಿಸಿಕೊಳ್ಳಬೇಕು. ಯಜ್ಞಾದಿ ಕರ್ಮದಿಂದ ಹುಟ್ಟುವ ಫಲವು ಬೇಗನೆ ಸಿಗುವುದರಿಂದ ಭಗವಂತನೇ ಎಲ್ಲ ಯಜ್ಞಗಳನ್ನು ಭೋಗಿಸುತ್ತಾನೆ ಎಂದು ತಿಳಿಯುತ್ತದೆ. ಭಗವಂತನು ಎಲ್ಲಾ ಯಜ್ಞಗಳನ್ನು ಭೋಗಿಸುತ್ತಿರುವುದರಿಂದಲೇ ಅದರ ಫಲವೂ ಯಜಮಾನನಿಗೆ ಶೀಘ್ರವಾಗಿ ದೊರೆಯುತ್ತದೆ. ಇಲ್ಲದಿದ್ದರೆ ಯಜ್ಞಫಲವು ಶೀಘ್ರವಾಗಿ ದೊರೆಯುತ್ತಿರಲಿಲ್ಲ.

**'ತಸ್ಮಾತ್ತೇ ಧನಸನಯಃ '**ಎಂಬ ವೇದವಾಕ್ಯ– **' ಫಲಮತ ಉಪಪತ್ತೇಃ'** ಎಂಬ ಬ್ರಹ್ಮಸೂತ್ರ ಮೊದಲಾದ ಆಧಾರಗಳಿಂದ ಶ್ರೀಹರಿಯೇ ಎಲ್ಲರಿಗೂ ಫಲವನ್ನು ಕೊಡುವವನೆಂದು ಒಪ್ಪಬೇಕು.

**ತದ್ಯ ಇಮೇ ವೀಣಾಯಾಂ ಗಾಯಂತಿ ಏತಂ ತೇ ಗಾಯಂತಿ । ತಸ್ಮಾತ್ತೇ ಧನಸನಯಃ**– (ಛಾಂದೋಗ್ಯ 1–7–6) ಇದರ ಭಾವ– ಯಾರು ರಾಜಾದಿಗಳ ಮುಂದೆ ವೀಣೆಯನ್ನು ನುಡಿಸುವರೋ, ಅವರು ವಸ್ತುತಃ ರಾಜನ ಅಂತರ್ಯಾಮಿಯಾದ ಶ್ರೀಹರಿಯ ಮುಂದೆ ವೀಣೆಯನ್ನು ನುಡಿಸುತ್ತಾರೆ. ಆದುದರಿಂದ ರಾಜಾದಿಗಳ ಮೂಲಕ ಶ್ರೀಹರಿಯಿಂದಲೇ ಅವರು ಧನವನ್ನು ಹೊಂದುವರು.

**ಫಲಮತ ಉಪಪತ್ತೇಃ** – ಬ್ರಹ್ಮಸೂತ್ರ – 3–2–39. **ಫಲಂ** = ಸ್ವರ್ಗಾದಿಫಲವು, **ಅತಃ** = ಈ ಶ್ರೀಹರಿಯಿಂದಲೇ ಆಗುವುದು. ಜಡವಾದ ಯಜ್ಞಾದಿಕರ್ಮದಿಂದಲಾಗಲೀ, ಅಸ್ವತಂತ್ರರಾದ ಬ್ರಹ್ಮಾದಿದೇವತೆಗಳಿಂದಲೂ ಅಲ್ಲ . ಏಕೆಂದರೆ– **ಉಪಪತ್ತೇಃ** ಸರ್ವತಂತ್ರ–ಸ್ವತಂತ್ರನೂ ಚೇತನರಿಗೂ ಚೇತನನಾದ ಶ್ರೀಹರಿಗೇ ಯಜ್ಞಫಲದಾಯಕತ್ವವು ಯುಕ್ತಿ–ಯುಕ್ತ ವಾಗಿದೆ.

**ಶ್ಲೋಕಕ್ಕೆ ಇನ್ನೊಂದು ವಿವರಣೆ** – ತ್ರೈವಿದ್ಯರು ಬೇರೆ ದೇವತೆಗಳ ಆರಾಧಕರು. ಅವರ ಆರಾಧನೆ ಶ್ರೀಕೃಷ್ಣನನ್ನು ಸೇರುತ್ತದೆ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ್ದು ಹೇಗೆ ಸರಿ ? ಈ ಪ್ರಶ್ನೆಗೆ ಉತ್ತರ ರೂಪವಾಗಿ 12ನೇ ಶ್ಲೋಕ ಹೊರಟಿದೆ.

ತ್ರೈವಿದ್ಯರು ಸ್ವರ್ಗಾದಿ ಕರ್ಮಫಲವನ್ನು ಬಯಸುತ್ತಾ, ಬೇರೆ ದೇವತೆಗಳನ್ನು ಆರಾಧಿಸಿ, ಕಡೆಯಲ್ಲಿ ಅದೆಲ್ಲವನ್ನೂ 'ಶ್ರೀಕೃಷ್ಣಾರ್ಪಣಮಸ್ತು' ಎಂದು ನನಗೇ ಅರ್ಪಿಸುತ್ತಾರೆ. ಆದ್ದರಿಂದ ಅವರು ನನ್ನ ದಾರಿಯನ್ನು ಅಂದರೆ ವೈಷ್ಣವಮಾರ್ಗವನ್ನು ಅನುಸರಿಸಿದರೆಂದೇ ಅರ್ಥ. ಹಾಗಿಲ್ಲದಿದ್ದಲ್ಲಿ ಕರ್ಮಫಲವು ಅವರಿಗೆ ಶೀಘ್ರವಾಗಿ ದೊರಕುತ್ತಿರಲಿಲ್ಲ. **ಮಮ ವರ್ತ್ಮ ಅನುವರ್ತಂತೇ** = ವೈಷ್ಣವಮಾರ್ಗವನ್ನು ಅನುಸರಿಸುತ್ತಾರೆ. ॥ 12 ॥

## ಗುಣ-ಕರ್ಮಗಳನ್ನಾಧರಿಸಿದ ವರ್ಣವ್ಯವಸ್ಥೆ

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥ 13 ॥**

**ಅರ್ಥ** - ಬ್ರಾಹ್ಮಣಾದಿ ನಾಲ್ಕು ವರ್ಣಗಳ ಜನರನ್ನು ಸತ್ತ್ವಾದಿಗುಣಗಳ ಹಾಗೂ ಶಮದಮಾದಿ ಕರ್ಮಗಳ ವಿಭಾಗಪೂರ್ವಕವಾಗಿ ನಾನೇ ಸೃಷ್ಟಿಮಾಡಿರುವೆನು. ಇವರೆಲ್ಲರ ಸೃಷ್ಟಿಕರ್ತ ನಾನಾದರೂ ನನಗೆ ಮತ್ತೊಬ್ಬ ಸೃಷ್ಟಿಕರ್ತನಿಲ್ಲ. ಜೀವರಲ್ಲಿರುವಂತೆ ಕರ್ಮಲೇಪಕ್ಕೆ ಕಾರಣವಾದ ಕರ್ತೃತ್ವವೂ ನನ್ನಲ್ಲಿಲ್ಲ. ನನ್ನನ್ನು ನಾಶರಹಿತನೆಂದೂ ತಿಳಿ.

ಭಗವದ್ಭಜನಂ ವಿನಾ ಕುತೋ ನ ಫಲಮಿತ್ಯತೋ ವಾ, ಜ್ಞಾನಿನಾಮಿವ ತ್ರೈವಿದ್ಯಾನಾಮಪಿ ಕುತೋ ನ ಮಹಾಫಲಮಿತ್ಯತೋ ವಾ, ತಸ್ಯ ಪಿತೃತ್ವಾತ್ಪಿತರಂ ಪರಿತ್ಯಜ್ಯಾನ್ಯದೇವತಾಯಾಜಿನಾಂ ಫಲಪ್ರಾಪ್ತಿರೇವ ನಾಸ್ತಿ, ಕುತೋ ಮಹಾಫಲ-ಪ್ರಾಪ್ತಿರಿತಿ ಭಾವೇನಾಹ- **ಚಾತುರ್ವರ್ಣ್ಯಮಿತಿ ॥** ಚತ್ವಾರೋ ವರ್ಣಾಶ್ಚಾತು-ರ್ವರ್ಣ್ಯಮ್ । 'ಚತುರ್ವರ್ಣಾದಿಭ್ಯಃ ಸ್ವಾರ್ಥ ಉಪಸಂಖ್ಯಾನಮ್' ಇತ್ಯುಕ್ತೇಃ ಸ್ವಾರ್ಥೇ ಷ್ಯಞ್ । ಯದ್ವಾ ಚತುರ್ಣಾಂ ವರ್ಣಾನಾಂ ಸಮೂಹ-ಶ್ಚಾತುರ್ವರ್ಣ್ಯಮ್ । ವಿಚಿತ್ರಾ ಹಿ ತದ್ಧಿತಗತಿರಿತಿ' ಸಮೂಹಾರ್ಥೇ ಷ್ಯಞ್ । ಗುಣಕರ್ಮವಿಭಾಗಶಃ ಸತ್ತ್ವಾದಿಗುಣವಿಭಾಗೇನ ಕರ್ಮವಿಭಾಗೇನ ಚ ಚಾತುರ್ವರ್ಣ್ಯಂ ಚತುರ್ವರ್ಣಸಂಘೋ ಮಯಾ ಸೃಷ್ಟಃ । ಜನಾಃ ಸಾತ್ತ್ವಿಕ-ಸಾತ್ತ್ವಿಕಾಃ ರಾಜಸಸಾತ್ತ್ವಿಕಾಸ್ತಾಮಸಸಾತ್ತ್ವಿಕಾಶ್ಚೇತಿ ತ್ರಿವಿಧಾಃ । ತತ್ರ ರಾಜಸ-ಸಾತ್ತ್ವಿಕಾನಾಮತ್ರ ಗ್ರಹಣಮ್ । 'ರಾಜಸಾಸ್ತು ನರಾಸ್ತತ್ರ ವಿಪ್ರಾ' ಇತ್ಯಷ್ಟಾದಶ-ತಾತ್ಪರ್ಯೋಕ್ತೇಃ । 'ಸಾತ್ತ್ವಿಕೋ ಬ್ರಾಹ್ಮಣ' ಇತ್ಯಾದ್ಯೈತದ್ಭಾಷ್ಯೋಕ್ತೇಶ್ಚ । ತಥಾ ಚ ಅತಿಸತ್ತ್ವಾಧಿಕರಜೋಗುಣಯುಕ್ತಾಃ ಬ್ರಾಹ್ಮಣಾಃ । ಕಿಂಚಿತ್ಸತ್ತ್ವಾಧಿಕರಜೋ-ಗುಣಯುಕ್ತಾಃ ಕ್ಷತ್ರಿಯಾಃ । ತಮೋಽಪೇಕ್ಷಯಾಽಧಿಕಂ ಸಮಸತ್ತ್ವಂ ಯದ್

**ರಜಸ್ತದ್ಯುಕ್ತಾ ವೈಶ್ಯಾಃ । ರಜೋಽಪೇಕ್ಷಯಾಽಧಿಕತಮ ಉಪೇತಾಃ, ತಮೋ-ಪೇಕ್ಷಯಾಽಧಿಕಸತ್ತ್ವೋಪೇತಾಶ್ಚ ಶೂದ್ರಾ ಇತಿ ಗುಣವಿಭಾಗಕೃತೋ ಬ್ರಾಹ್ಮಣಾದಿವರ್ಣಾಃ । ಬ್ರಾಹ್ಮಣಾದಿಯೋಗ್ಯಕರ್ಮವಿಭಾಗಸು ಅಷ್ಟಾದಶಾ-ಧ್ಯಾಯೇ 'ಶಮೋ ದಮ' (18-42) ಇತ್ಯಾದಿ ಶ್ಲೋಕತ್ರಯೇಣ ವಕ್ಷ್ಯತೇ । ನನು ಯಥಾ ಭವಾನ್ ಸರ್ವಸ್ಯ ಕರ್ತಾ ತಥಾ ತವಾಪ್ಯನ್ಯಃ ಕರ್ತಾಽಸ್ತಿ ಕಿಮಿತ್ಯತ ಆಹ- ತಸ್ಯೇತಿ ॥ ತಸ್ಯ ಚಾತುರ್ವರ್ಣ್ಯಸ್ಯಾವ್ಯಯಂ ಕರ್ತಾರಂ ಮಾಂ ವಿದ್ಧಿ । ತಥಾಽಕರ್ತಾರಮಪಿ ಕರ್ತ್ರಂತರಹೀನಮಪಿ ವಿದ್ಧಿ । ಮೇಽನ್ಯಃ ಕರ್ತಾ ನಾಸ್ತೀತ್ಯಪಿ ವಿದ್ಧೀತ್ಯರ್ಥಃ । ಯದ್ವಾ ಯದಿ ತ್ವಯಾ ಚತ್ವಾರೋ ವರ್ಣಾಃ ಸೃಷ್ಟಾಃ ತರ್ಹಿ ಕರ್ತೃತ್ವಾಜ್ಜೀವವತ್ತವಾಪಿ ಕರ್ಮಲೇಪಃ ಸ್ಯಾದಿತ್ಯತಃ ಕರ್ಮಲೇಪಾಭಾವಂ 'ನ ಮಾಂ' ಇತ್ಯಾದಿನಾ [1]ವಕ್ತುಂ ಲೇಪಾಭಾವೇ ಹೇತುಂ ತಾವದಾಹ- ತಸ್ಯೇತಿ ॥ ತಸ್ಯ ಕರ್ತಾರಮಪಿ ಮಾಂ [2]ಜೀವವಿಲಕ್ಷಣಕರ್ತೃತ್ವಾದಕರ್ತಾರಂ ಕರ್ತೃತ್ವಹೀನಂ ವಿದ್ಧೀತಿ ॥ 13 ॥**

## 13ನೇ ಶ್ಲೋಕಕ್ಕೆ ಅವತಾರಿಕೆ

**ಅನುವಾದ-** ಹರಿಯ ಸೇವೆ ಇಲ್ಲದೇ ಫಲವೇಕಿಲ್ಲ ? ಭಾಗವತರಾದ ಜ್ಞಾನಿಗಳಿಗೆ ಮಹಾಫಲವಾದ ಮೋಕ್ಷ ಸಿಗುವಂತೆ ತ್ರೈವಿದ್ಯರಿಗೆ ಮೋಕ್ಷವೇಕಿಲ್ಲ ? ಎಂದರೆ– ಶ್ರೀಹರಿಯು ಎಲ್ಲರಿಗೂ ತಂದೆಯು. ತಂದೆಯ ಸೇವೆ ಮಕ್ಕಳಿಗೆ ಅವಶ್ಯಕರ್ತವ್ಯ. ಅದನ್ನು ಮಾಡದ ಮಕ್ಕಳಿಗೆ ತಂದೆ –ಶ್ರೀಹರಿ ಫಲವನ್ನು ಕೊಡುವುದಿಲ್ಲವೆಂದು ಮೊದಲನೆಯ ಪ್ರಶ್ನೆಗೆ ಉತ್ತರ. ತಂದೆಯಾದ ಶ್ರೀಹರಿಯನ್ನು ಬಿಟ್ಟು ಇತರೆ ದೇವತೆಗಳನ್ನು ಸೇವಿಸುವ ತ್ರೈವಿದ್ಯರಿಗೆ ಫಲವನ್ನು ಕೊಡುವುದೇ ಯುಕ್ತವಲ್ಲ. ಮಹಾಫಲವಾದ ಮೋಕ್ಷವನ್ನು ಹೇಗೆ ಶ್ರೀಹರಿ ಕೊಟ್ಟಾನು, ಎಂದು ಎರಡನೆಯ ಪ್ರಶ್ನೆಗೆ ಉತ್ತರವೆಂಬ ಭಾವದಿಂದ **'ಚಾತುರ್ವರ್ಣ್ಯಂ'** ಮುಂತಾಗಿ ಹೇಳುತ್ತಾನೆ. **ಚಾತುರ್ವರ್ಣ್ಯಮ್** ಎಂಬ ಪದಕ್ಕೆ ಎರಡು ರೀತಿ ಅರ್ಥವನ್ನು ಹೇಳಬಹುದು.

1. **ಚತ್ವಾರಃ ವರ್ಣಾಃ** = ಚಾತುರ್ವರ್ಣ್ಯಮ್. ನಾಲ್ಕುವರ್ಣಗಳು ಎಂಬರ್ಥದಲ್ಲಿ **'ಚತ್ವಾರಃ ವರ್ಣಾಃ'** ಎಂದು ಹೇಳುವಂತೆ, ಅದೇ ಅರ್ಥದಲ್ಲಿ **'ಚಾತುರ್ವರ್ಣ್ಯಮ್'** ಎಂದೂ ಹೇಳಬಹುದು. ಈ ಅರ್ಥದಲ್ಲಿ **'ಚತುರ್ವರ್ಣಾದಿಭ್ಯಃ ಸ್ವಾರ್ಥೇ ಉಪಸಂಖ್ಯಾನಮ್'** ಎಂಬ ವಾರ್ತಿಕದಿಂದ (**'ಚತುರ್ವರ್ಣ** ಮೊದಲಾದ ಶಬ್ದಗಳ ಮೇಲೆ ಸ್ವಾರ್ಥದಲ್ಲಿ **'ಷ್ಯಞ್'** ಪ್ರತ್ಯಯವು ಬರುವುದು) **'ಷ್ಯಞ್'** ಪ್ರತ್ಯಯವು ಬಂದು, ಆದಿವೃದ್ಧಿ ಬಂದು **'ಚಾತುರ್ವರ್ಣ್ಯಮ್'** ಎಂದು ರೂಪವಾಗುವುದು.

---

1. 'ವಕ್ತುಂ' ಇತಿ ನಾಸ್ತಿ'. ಪ್ರ. 2. ಜೀವವಿಲಕ್ಷಣಮಕರ್ತೃತ್ವಾದಕರ್ತಾರಂ

2. **'ಚತುರ್ಣಾಂ ವರ್ಣಾನಾಂ ಸಮೂಹಃ = ಚಾತುರ್ವರ್ಣ್ಯಮ್'** ನಾಲ್ಕುವರ್ಣಗಳ ಗುಂಪು 'ಚಾತುರ್ವರ್ಣ್ಯ' ಎಂಬ ಅರ್ಥದಲ್ಲಿ **'ವಿಚಿತ್ರಾ ಹಿ ತದ್ಧಿತಗತಿಃ'** (ತದ್ಧಿತ ಪ್ರತ್ಯಯಗಳ ನಡೆ ವಿಚಿತ್ರವಾಗಿದೆ) ಎಂಬ ನಿಯಮದಂತೆ **'ಸಮೂಹ'** ಎಂಬ ಅರ್ಥದಲ್ಲಿ 'ಚತುರ್ವರ್ಣ' ಶಬ್ದದ ಮೇಲೆ **'ಷ್ಯಞ್'** ಪ್ರತ್ಯಯವು ಬಂದು, ಆದಿವೃದ್ಧಿ ಬಂದು 'ಚಾತುರ್ವರ್ಣ್ಯಮ್' ಎಂದಾಗುವುದು.

**'ಗುಣಕರ್ಮ ವಿಭಾಗಶಃ'** = ಸತ್ತ್ವ ಮೊದಲಾದ ಗುಣಗಳು ಹಾಗು ಶಮ ,ದಮ ಮೊದಲಾದ ಕರ್ಮಗಳ ವಿಭಾಗ ಪೂರ್ವಕವಾಗಿ ಎಂದರ್ಥ.

**'ಚಾತುರ್ವರ್ಣ್ಯಮ್'** = ನಾಲ್ಕು ವರ್ಣಗಳ ಗುಂಪು ಎಂದರ್ಥ.

ಸತ್ತ್ವ ರಜಸ್ಸು, ತಮಸ್ಸು, ಎಂಬ ಮೂರು ಗುಣಗಳನ್ನು ನಿಮಿತ್ತೀಕರಿಸಿಕೊಂಡು, ಶಮ, ದಮ ಮೊದಲಾದ ಆಯಾಯಾ ವರ್ಣಕ್ಕೆ ಉಚಿತವಾದ ಕರ್ಮ ವಿಭಾಗ ಪೂರ್ವಕವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕುವರ್ಣದವರೂ ನನ್ನಿಂದಲೇ ಸೃಷ್ಟಿಸಲ್ಪಟ್ಟಿದ್ದಾರೆ.

ಜೀವಿಗಳು ಸಾತ್ತ್ವಿಕ, ರಾಜಸ, ತಾಮಸ ಎಂದು ಮೂರು ವಿಧವಾಗಿದ್ದಾರೆ. ಅವರಲ್ಲಿ ರಾಜಸರು– ರಾಜಸ ಸಾತ್ವಿಕ, ರಾಜಸರಾಜಸ, ರಾಜಸತಾಮಸ ಎಂದು ಮೂರು ವಿಧವಾಗಿದ್ದಾರೆ. ಇಲ್ಲಿ ಹೇಳಿರುವ ವರ್ಣವಿಭಾಗವು ರಾಜಸಸಾತ್ವಿಕರಿಗೆ ಸಂಬಂಧಿಸಿದ್ದಾಗಿದೆ.

**'ರಾಜಸಾಸ್ತು ನರಾಸ್ತತ್ರ'** ಎಂದು ಹದಿನೆಂಟನೆಯ ಅಧ್ಯಾಯದ ತಾತ್ಪರ್ಯದಲ್ಲಿಯೂ, **'ಸಾತ್ವಿಕೋ ಬ್ರಾಹ್ಮಣಃ'** ಎಂದು ಈ ಶ್ಲೋಕದ ಭಾಷ್ಯದಲ್ಲಿಯೂ ಈ ವಿಚಾರವನ್ನು ಆಚಾರ್ಯರು ಸ್ಪಷ್ಟಪಡಿಸಿದ್ದಾರೆ.

ರಜೋಗುಣಕ್ಕಿಂತ ಬಹಳ ಅಧಿಕ ಸತ್ತ್ವಗುಣವುಳ್ಳವರು ಬ್ರಾಹ್ಮಣರು. ರಜೋಗುಣಕ್ಕಿಂತ ಸ್ವಲ್ಪ ಹೆಚ್ಚು ಸತ್ತ್ವಗುಣವುಳ್ಳವರು ಕ್ಷತ್ರಿಯರು. ತಮೋಗುಣಕ್ಕಿಂತ ಅಧಿಕವಾದ ಸತ್ತ್ವರಜೋ-ಗುಣಗಳು ಸಮವಾಗಿದ್ದರೆ ವೈಶ್ಯರು . ರಜೋಗುಣಕ್ಕಿಂತ ಹೆಚ್ಚು ತಮೋಗುಣ, ತಮೋಗುಣಕ್ಕಿಂತ ಹೆಚ್ಚು ಸತ್ತ್ವಗುಣ ವುಳ್ಳವರು ಶೂದ್ರರು . ಗುಣ ವಿಭಾಗಕ್ಕೆ ಅನುಗುಣವಾಗಿ ಬ್ರಾಹ್ಮಣಾದಿ ವರ್ಣವಿಭಾಗ ಆಚಾರ್ಯರಿಂದ ಹೀಗೆ ನಿರೂಪಿತವಾಗಿದೆ . ಬ್ರಾಹ್ಮಣಾದಿ ವರ್ಣದವರು ಆಚರಿಸಬೇಕಾದ ಕರ್ತವ್ಯ ಕರ್ಮಗಳ ವಿವರಣೆಯನ್ನು ಹದಿನೆಂಟನೆಯ ಅಧ್ಯಾಯದಲ್ಲಿ **'ಶಮೋ ದಮ'** (18–42) ಮೊದಲಾದ ಮೂರು ಶ್ಲೋಕಗಳಿಂದ ಶ್ರೀಕೃಷ್ಣನೇ ಹೇಳುವನು.

### ಉತ್ತರಾರ್ಧಕ್ಕೆ ಅವತಾರಿಕೆ

ನೀನು ಎಲ್ಲರಿಗೂ ಸೃಷ್ಟಿಕರ್ತ. ನಿನಗೂ ಮತ್ತೊಬ್ಬ ಸೃಷ್ಟಿಕರ್ತನಿರುವನೇ ? ಎಂಬ ಪ್ರಶ್ನೆಗೆ ಉತ್ತರವಾಗಿ **'ತಸ್ಯ ಕರ್ತಾರಂ.....'** ಎಂಬ ಉತ್ತರಾರ್ಧ ಹೊರಟಿದೆ.

ನನ್ನನ್ನು ನಾಲ್ಕು ವರ್ಣಸಮುದಾಯಗಳ ನಾಶರಹಿತನಾದ ಕರ್ತೃವೆಂದು ತಿಳಿ. ಹಾಗೆಯೇ ನನ್ನನ್ನು ಹುಟ್ಟಿಸಬಲ್ಲ ಮತ್ತೊಬ್ಬ ಕರ್ತೃವಿಲ್ಲದವನನ್ನಾಗಿಯೂ ತಿಳಿ ಎಂದು ಅಭಿಪ್ರಾಯ.

## ಎರಡನೆಯ ರೀತಿಯಿಂದ ಉತ್ತರಾರ್ಧಕ್ಕೆ ಅವತಾರಿಕೆ

ನಾಲ್ಕುವರ್ಣದವರ ಸೃಷ್ಟಿಕರ್ತನಾಗಿರುವೆಯಾದರೆ ನಿನಗೆ ಜೀವರಂತೆ ಕರ್ಮಲೇಪವಾದೀತೆ ? ಎಂಬ ಆಶಂಕೆಗೆ – '**ನ ಮಾಂ**' ಎಂಬ ಮುಂದಿನ ಶ್ಲೋಕದಿಂದ ಕರ್ಮಲೇಪಾಭಾವವನ್ನು ಹೇಳುತ್ತಾ ಅದಕ್ಕೆ ಕಾರಣವನ್ನು ಈಗ ಹೇಳುತ್ತಿದ್ದಾನೆ – '**ತಸ್ಯ....**' ಎಂದು. ನಾನು ನಾಲ್ಕು ವರ್ಣಗಳ ಸೃಷ್ಟಿಕರ್ತನು. ಆದರೂ ನನ್ನಲ್ಲಿರುವ ಕರ್ತೃತ್ವವು ಜೀವವಿಲಕ್ಷಣವಾದುದು. ಆದುದರಿಂದ ನನ್ನನ್ನು ಕರ್ಮಲೇಪಕ್ಕೆ ಕಾರಣವಾಗುವ ಕರ್ತೃತ್ವವಿಲ್ಲದವನೆಂದೂ ತಿಳಿ.

ಹಿಂದಿನ ಅವತಾರಿಕೆಯಲ್ಲಿ '**ಅಕರ್ತಾರಂ**' ಎಂಬ ಪದಕ್ಕೆ 'ಮತ್ತೊಬ್ಬ ಕರ್ತೃವಿಲ್ಲದವನೆಂದು' ಅರ್ಥ. ಈ ಅವತಾರಿಕೆಯಲ್ಲಿ 'ಕರ್ತೃತ್ವವಿಲ್ಲದವನು' ಎಂದು ಅರ್ಥ. ಈ ಎರಡೂ ಅವತಾರಿಕೆಗಳಲ್ಲಿ '**ತಸ್ಯ**' ಎಂಬ ಪದಕ್ಕೆ 'ನಾಲ್ಕುವರ್ಣಗಳ ಸಮುದಾಯಕ್ಕೆ;' ಎಂದು ಅರ್ಥ. ॥ 13 ॥

## ಎನಗಿಲ್ಲ ಕರ್ಮಲೇಪ

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥ 14 ॥**

**ಅರ್ಥ**– ನನ್ನದು ಲೋಕವಿಲಕ್ಷಣವಾದ ಕರ್ತೃತ್ವ . ಆದ್ದರಿಂದ ನನ್ನಲ್ಲಿ ಕರ್ಮಗಳು ಅಂಟಿಕೊಳ್ಳುವುದಿಲ್ಲ. ನನಗೆ ಕರ್ಮದ ಫಲದಲ್ಲಿ ಅತೀವ ಆಸಕ್ತಿಯೂ ಇಲ್ಲ. ಆದ್ದರಿಂದಲೂ ನನ್ನಲ್ಲಿ ಕರ್ಮಗಳು ಅಂಟಿಕೊಳ್ಳುವುದಿಲ್ಲ. ನನಗೆ ಕರ್ಮಲೇಪವಿಲ್ಲ. ಕರ್ಮಫಲದಲ್ಲಿ ಅತಿಯಾದ ಆಸೆಯೂ ಇಲ್ಲವೆಂದು ಯಾರು ತಿಳಿಯುತ್ತಾನೋ, ಅವನಿಗೂ ಕರ್ಮಗಳು ಅಂಟಿಕೊಳ್ಳುವುದಿಲ್ಲವೆಂದ ಮೇಲೆ ನನಗೆ ಅಂಟಿಕೊಳ್ಳುವುದಿಲ್ಲವೆಂದು ಹೇಳಬೇಕೇನು? ಜೀವನು ಕೃಷ್ಣಪರಮಾತ್ಮನಿಗೆ ಕರ್ಮಲೇಪವಿಲ್ಲವೆಂದು ತಿಳಿಯಬೇಕೇ ಹೊರತು ತನಗೆ ಅಲ್ಲ.

**ತತಃ ಕಿಮಿತ್ಯತ ಆಹ – ನ ಮಾಮಿತಿ ॥ ಜೀವವಿಲಕ್ಷಣಕ್ರಿಯಾವತ್ತ್ವೇನಾಕರ್ತೃತ್ವಾನ್ಮಾಂ ಕರ್ಮಾಣಿ ನ ಲಿಂಪಂತಿ । ಕಿಂಚ ಜೀವಾನಾಂ ಕರ್ಮಲೇಪೇ ಅಭಿನಿವೇಶೋ ಹೇತುಃ, ನಚ ಮೇಽಸಾವಸ್ತೀತ್ಯಾಹ – ನ ಮೇ ಕರ್ಮಫಲೇ ಸ್ಪೃಹೇತಿ ॥ ಫಲಪ್ರಾಪ್ತಿಪರ್ಯಂತಂ ಮನೋವಿಕ್ಷೇಪಶಬ್ದಿತೋಽಭಿನಿವೇಶಃ ಕರ್ಮಫಲೇ ಮೇ ನಾಸ್ತಿ । ಅತೋಽಪಿ ನ ಲಿಂಪಂತಿ ಕರ್ಮಾಣೀತ್ಯರ್ಥಃ । ಕೈಮುತ್ಯೇನಾಪಿ ಸ್ವಸ್ಯ ಕರ್ಮಾಲೇಪಮಾಹ– ಇತೀತಿ ॥ ಕರ್ಮಲೇಪೋ ಮೇ ನಾಸ್ತಿ**

**ತತ್ಫಲೇ ಸ್ಪೃಹಾऽಪಿ ನೇತ್ಯೇವಂ ಮಾಂ ಯೋऽಭಿಜಾನಾತಿ ಸೋऽಪಿ ಕರ್ಮಭಿರ್ನ ಬಧ್ಯತೇ । ಕಿಮ್ವಹಮಿತಿ ? ಇತಿ ಯೋऽಭಿಜಾನಾತೀತಿ ವಾಚ್ಯೇ 'ಮಾಮಿತಿ' ಪುನರ್ವಚನಂ ಸ್ವಸ್ಯ ಈಶ್ವರಾಭೇದಾಭಿಪ್ರಾಯೇಣ । ಸ್ವಾತ್ಮಾನಮುದ್ದಿಶ್ಯ 'ನ ಮಾಂ ಕರ್ಮಾಣಿ ಲಿಂಪಂತಿ' ಇತ್ಯಾದಿ ಯೋ ಜಾನಾತೀತಿ ಜೀವಾಭೇದ-ಪ್ರತೀತಿನಿರಾಸಾಯ ಮಾಂ ಯೋऽಭಿಜಾನಾತಿ ನ ಸ್ವಾತ್ಮಾನಮಿತಿ ॥ 14 ॥**

**ಅನುವಾದ -** ಹಿಂದಿನ ಶ್ಲೋಕದಲ್ಲಿ '**ಅಕರ್ತಾರಂ**' ಎಂಬ ಪದದಿಂದ ಶ್ರೀಕೃಷ್ಣನ ಕರ್ತೃತ್ವ ಲೋಕವಿಲಕ್ಷಣವೆಂದು ಹೇಳಲಾಗಿತ್ತು. ಅದರಿಂದೇನೆಂದರೆ ಹೇಳುತ್ತಾನೆ– '**ನ ಮಾಂ**' ಎಂದು. ನನ್ನಲ್ಲಿರುವ ಕರ್ತೃತ್ವವು ಜೀವವಿಲಕ್ಷಣವಾದುದರಿಂದ '**ಅಕರ್ತಾ**' ಎನಿಸಿದ್ದೇನೆ. ಆದ್ದರಿಂದ ನನಗೆ ಕರ್ಮಗಳ ಲೇಪವಿಲ್ಲ, ಮತ್ತೂ ಜೀವನಿಗೆ ಕರ್ಮಲೇಪವಾಗಲು ಫಲದಲ್ಲಿ ಆಗ್ರಹವು ಕಾರಣವು. ನನಗೆ ಆ ಆಗ್ರಹವು ಇಲ್ಲವೆನ್ನುತ್ತಾನೆ. '**ನ ಮೇ ಕರ್ಮಫಲೇ ಸ್ಪೃಹಾ**' ಎಂದು. ಫಲವನ್ನು ಹೊಂದುವವರೆಗೂ ಜೀವನಲ್ಲಿರುವ , '**ಮನೋವಿಕ್ಷೇಪ**' ಎಂಬ ಶಬ್ದದಿಂದಲೂ ಕರೆಯಲ್ಪಡುವ , ಆಗ್ರಹವು ಕರ್ಮಫಲದ ವಿಷಯದಲ್ಲಿ ನನಗೆ ಇಲ್ಲ. ಆ ಕಾರಣದಿಂದಲೂ ಕರ್ಮಗಳು ನನಗೆ ಅಂಟಿಕೊಳ್ಳುವುದಿಲ್ಲ. ಕೈಮುತ್ಯನ್ಯಾಯದಿಂದಲೂ ತನಗೆ ಕರ್ಮಲೇಪ ವಿಲ್ಲವೆನ್ನುತ್ತಾನೆ. '**ಇತಿ**' ಎಂದು. ನನಗೆ ಕರ್ಮಲೇಪವಿಲ್ಲ, ಕರ್ಮಫಲದಲ್ಲಿ ಆಸೆಯೂ ಇಲ್ಲವೆಂದು ಯಾರು ನನ್ನನ್ನು ತಿಳಿಯುತ್ತಾನೋ , ಅವನೂ ಕರ್ಮಗಳಿಂದ ಬದ್ಧನಾಗುವುದಿಲ್ಲ ಎಂದ ಮೇಲೆ ನಾನು ಕರ್ಮಗಳಿಂದ ಬದ್ಧನಲ್ಲವೆಂದು ಹೇಳಬೇಕೇನು?

'ಈ ರೀತಿ ಯಾರು ತಿಳಿಯುವನೋ' ಎಂದು ಮಾತ್ರ ಹೇಳದೇ '**ಮಾಂ** = ನನ್ನನ್ನು' ಎಂದು ಪುನಃ ಹೇಳಿರುವುದು ತನಗೂ (ಕೃಷ್ಣನಿಗೂ) ಭಗವಂತನಿಗೂ ಅಭೇದವಿದೆಯೆಂಬ ಅಭಿಪ್ರಾಯ ವನ್ನು ಸೂಚಿಸುತ್ತದೆ.

ಜೀವನು ತನ್ನನ್ನು ಉದ್ದೇಶಿಸಿಕೊಂಡು 'ನಾನು ಬ್ರಹ್ಮನಾದ್ದರಿಂದ ನನ್ನನ್ನು ಕರ್ಮಗಳು ಲೇಪಿಸುವುದಿಲ್ಲವೆಂದು ಮುಂತಾಗಿ ತಿಳಿಯಬಹುದು . ಆ 'ಜೀವಬ್ರಹ್ಮ ಅಭೇದ ಪ್ರತೀತಿಯನ್ನು ದೂರ ಮಾಡಲು, '**ಮಾಂ** = ನನ್ನನ್ನು (ಅಂದರೆ ಕೃಷ್ಣನನ್ನು) **ಅಭಿಜಾನಾತಿ**= ಯಾರು ತಿಳಿಯುತ್ತಾನೋ ಎಂದು ಹೇಳಿದ್ದಾನೆ. ಯಾರು '**ಮಾಂ**' ನನ್ನನ್ನು ಕರ್ಮಲೇಪವಿಲ್ಲದವನೆಂದು ತಿಳಿಯುತ್ತಾನೋ, ತನ್ನನ್ನಲ್ಲ' ಎಂದರ್ಥ. ॥ 14 ॥

**ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥ 15 ॥**

**ಅರ್ಥ-** ನನ್ನನ್ನು ಹೀಗೆ ತಿಳಿದಿದ್ದರೂ, ಪೂರ್ವಿಕರು ಮೋಕ್ಷದಲ್ಲಿ ಆನಂದವೃದ್ಧಿಯನ್ನು ಬಯಸುತ್ತಾ ಕರ್ಮವನ್ನು ಆಚರಿಸಿದ್ದಾರೆ. ಹೀಗೆ ಹಿಂದಿನವರು ಬಹುಹಿಂದಿನ ಕಾಲದಿಂದಲೂ ಮಾಡಿಕೊಂಡು ಬಂದಿರುವ ಕರ್ಮವನ್ನು ನೀನು ಅವಶ್ಯವಾಗಿ ಮಾಡು. ಜ್ಞಾನಿಗೆ ಕರ್ಮಬಂಧವಿಲ್ಲವೆಂದು ಮಾಡದಿರಬೇಡ.

**ಯದಿ ಜ್ಞಾನೀ ಕರ್ಮಭಿರ್ನ ಬಧ್ಯತೇ ತರ್ಹಿ ಮಮಾಪಿ ಜ್ಞಾನಿತ್ವಾತ್ ಕರ್ಮಬಂಧಾಭಾವರೂಪಮುಕ್ತಿಸತ್ತ್ವಾತ್ ಕಥಂ ಕರ್ಮವಿಧಾನಮಿತ್ಯತೋ ಜ್ಞಾನಿನಾಮಪ್ಯಧಿಕಮೋಕ್ಷಾಕಾಂಕ್ಷಯಾ ಕರ್ಮಕರಣೇ ಆಚಾರೋಽಪ್ಯಸ್ತೀ-ತ್ಯಾಹ- ಏವಮಿತಿ ॥ ಪ್ರಾಕ್ ಜನಕಾದೀನಾಂ ವಿವಸ್ವದಾದೀನಾಂ ಚ ವಿದ್ಯಮಾನಮಪಿ ಜ್ಞಾನಿತ್ವಂ ಭಗವತೋ ನ ವಿವಕ್ಷಿತಮ್ । ಅತ್ರ ತು ವಿವಕ್ಷಿತಮಿತಿ ನ ತೇನ ಪೌನರುಕ್ತ್ಯಂ ಶಂಕ್ಯಮ್ । ಪೂರ್ವೈರ್ಮುಮುಕ್ಷುಭಿಃ । 'ಆಕ್ವೇಸ್ತಚ್ಛೀಲತದ್ಧರ್ಮತತ್ಸಾಧುಕಾರಿಷ್ವಿ'ತಿ ತತ್ಸಾಧುಕಾರಿಣ್ಯುಪ್ರತ್ಯಯಃ । ಅಧಿಕ-ಮೋಕ್ಷೇಚ್ಛಾವದ್ಭಿಃ ಏವಂ ಉಕ್ತಪ್ರಕಾರೇಣ ಹರಿಂ ಜ್ಞಾತ್ವಾಽಪಿ ಕರ್ಮ ಕೃತಮ್ । ತಸ್ಮಾತ್ತ್ವಮಪಿ ಪೂರ್ವೈಃ ಕೃತಂ ಪೂರ್ವತರಂ ತತೋಽಪಿ ಪೂರ್ವಭಾವಿ ಕರ್ಮ ಕುರ್ವಿತಿ ॥ 15 ॥**

**ಅನುವಾದ** - ಜ್ಞಾನಿಗೆ ಕರ್ಮದ ಬಂಧನವಿಲ್ಲವೆನ್ನುವುದಾದರೆ, ತಾನೂ (ಅರ್ಜುನನೂ) ಜ್ಞಾನಿಯಾದ್ದರಿಂದ ತನಗೂ ಕರ್ಮಬಂಧನವಿಲ್ಲ. ಆದ್ದರಿಂದ ತನ್ನನ್ನು ಕುರಿತು 'ಕರ್ಮ ಮಾಡು' ಎಂದು ಹೇಳುವುದು ಹೇಗೆ ಸರಿ ? ಎಂಬ ಆಶಂಕೆಗೆ ಜ್ಞಾನಿಗಳೂ ಮೋಕ್ಷದಲ್ಲಿ ಆನಂದ ವೃದ್ಧಿಯನ್ನು ಬಯಸಿ ಕರ್ಮಬಂಧನವಿರದಿದ್ದರೂ ಕರ್ಮವನ್ನು ಆಚರಿಸುತ್ತಾರೆ. ಈ ವಿಚಾರದಲ್ಲಿ ಶಿಷ್ಟಾಚಾರವೂ ಇದೆಯೆನ್ನುತ್ತಾನೆ - **'ಏವಂ ಜ್ಞಾತ್ವಾ'** ಮುಂತಾಗಿ.

**'ಕರ್ಮಣೈವ ಹಿ ಸಂಸಿದ್ಧಿಂ..'** (3ನೇ ಅಧ್ಯಾಯ, ಶ್ಲೋಕ -20) ಎಂಬ ಶ್ಲೋಕದಲ್ಲಿ ಹೇಳಿದ ವಿಷಯವನ್ನೇ ಈ ಶ್ಲೋಕದಲ್ಲಿಯೂ ಹೇಳಿದ್ದಾರೆ . ಆದ್ದರಿಂದ ಪುನರುಕ್ತಿ-ದೋಷವಿಲ್ಲವೇ ಎಂಬ ಆಶಂಕೆಗೆ ಶ್ರೀರಾಘವೇಂದ್ರರು ಹೀಗೆ ಉತ್ತರಿಸುತ್ತಾರೆ. ಜನಕಾದಿಗಳು, ವಿವಸ್ವಾನ್ ಮೊದಲಾದವರು ವಸ್ತುತಃ ಜ್ಞಾನಿಗಳೇ. ಆದರೂ ಶ್ರೀಕೃಷ್ಣನು ಅವರ ಜ್ಞಾನಿತ್ವವನ್ನು ವಿವಕ್ಷೆಮಾಡದೇ, ವಿಹಿತಕರ್ಮಾನುಷ್ಠಾನವಿಷಯದಲ್ಲಿ ಜನಕಾದಿಗಳ ಶಿಷ್ಟಾಚಾರವೂ ಪ್ರಮಾಣವೆಂದು ಅಲ್ಲಿ ಹೇಳಿದ್ದಾನೆ. ಪ್ರಕೃತ ಶ್ಲೋಕದಲ್ಲಿ ಶ್ರೀಕೃಷ್ಣನಿಗೆ ಜನಕಾದಿಗಳಲ್ಲಿರುವ ಜ್ಞಾನಿತ್ವವು ವಿವಕ್ಷಿತವಾಗಿದೆ. ಅದನ್ನು ಅವನು **'ಪೂರ್ವೈಃ ಏವಂ ಜ್ಞಾತ್ವಾ'** ಎಂದು ತಿಳಿಸಿದ್ದಾನೆ. ಜ್ಞಾನಿಗಳಾದರೂ ಮೋಕ್ಷದಲ್ಲಿ ಆನಂದ ವೃದ್ಧಿಗೋಸ್ಕರ ಕರ್ಮವನ್ನು ಆಚರಿಸುತ್ತಾರೆ ಎಂಬ ವಿಷಯದಲ್ಲಿ ಶಿಷ್ಟಾಚಾರವನ್ನು ಈ ಮೂಲಕ ಹೇಳಲಾಗಿದೆ. ಆದ್ದರಿಂದ ಪುನರುಕ್ತಿದೋಷವಿಲ್ಲ.

**'ಮುಮುಕ್ಷುಃ'** ಎನ್ನುವುದು 'ಉ'ಪ್ರತ್ಯಯಾಂತವಾದ ಶಬ್ದ. **'ಆಕ್ವೇಸ್ತಚ್ಛೀಲತದ್ಧರ್ಮ-ತತ್ಸಾಧುಕಾರಿಷು '** ಎಂಬ ಸೂತ್ರದಂತೆ **'ತತ್ಸಾಧುಕಾರಿಷು'**- ಎಂದರೆ ಒಳ್ಳೆಯರೀತಿಯಿಂದ ಆಚರಿಸುವವನು' ಎಂಬ ಅರ್ಥದಲ್ಲಿ 'ಉ' ಪ್ರತ್ಯಯವು ಬಂದಿದೆ.

ಹಿಂದೆ ಹೇಳಿದಂತೆ ಹರಿಯ ಅಪರೋಕ್ಷಜ್ಞಾನವನ್ನು ಪಡೆದ ಜನಕಾದಿಗಳೂ ಮೋಕ್ಷದಲ್ಲಿ ಆನಂದ ವೃದ್ಧಿಯ ಅಭಿಲಾಷೆಯಿಂದ ಕರ್ಮಾಚರಣೆಯನ್ನು ಮಾಡಿದ್ದಾರೆ. ಹಿಂದಿನವರು ಬಹುಹಿಂದಿನ ಕಾಲದಿಂದಲೂ ಮಾಡಿಕೊಂಡು ಬಂದಿರುವ ಕರ್ಮಾ-ಚರಣೆಯನ್ನು ನೀನು ಬಿಡದೇ ಮಾಡು ಎಂದು ಅಭಿಪ್ರಾಯ. ।। 15 ।।

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯದ್‌ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ।। 16 ।।**

**ಅರ್ಥ**- ಯಾವುದು ಸತ್ಕರ್ಮ ? ಯಾವುದು ದುಷ್ಕರ್ಮ ? ಕರ್ಮದ ಹೀನತೆ ಯಾವುದು? ಎಂಬ ವಿಷಯದಲ್ಲಿ ಜ್ಞಾನಿಗಳೂ ಮೋಹಕ್ಕೊಳಗಾಗಿದ್ದಾರೆ. ಆದ್ದರಿಂದ ಆ ಕರ್ಮದ ಬಗ್ಗೆ ನಿನಗೆ ಹೇಳುವೆನು . ಅದನ್ನು ತಿಳಿಯುವುದರಿಂದ ಅಶುಭವಾದ ಕರ್ಮಬಂಧನದಿಂದ ನೀನು ಬಿಡುಗಡೆ ಹೊಂದುವಿ.

**ಕುರ್ವಿತಿ ಕರ್ತವ್ಯತಯೋಕ್ತಕರ್ಮಸ್ವರೂಪಂ ವಕ್ತುಂ ತತ್ರ ಜಿಜ್ಞಾಸಾ-ಜನನಾಯ ಕರ್ಮಣೋ ದುರ್ಜ್ಞೇಯತ್ವಮಾಹ- ಕಿಮಿತಿ ।। ಅಕರ್ಮಪದೇನ ಕರ್ಮಾಭಾವೋ ವಿರುದ್ಧಕರ್ಮ ಚ ಗ್ರಾಹ್ಯಮ್ । ಅತ್ರ ಕರ್ಮವಿಷಯೇ ಕವಯೋಽಪಿ ಮೋಹಿತಾಃ ವಿಭ್ರಮವಂತಃ । ತರ್ಹಿ, ಕಿಂ ತತ್ಸ್ವರೂಪಂ, ಬ್ರೂಹೀತ್ಯತ ಆಹ- ತದಿತಿ ।। ತಸ್ಮಾತ್ಕವೀನಾಮಪಿ ಮೋಹವಿಷಯತ್ವಾದಿತಿ ವಾ ಯತ್ಕರ್ತವ್ಯತ್ವಾದಿನೋಕ್ತಂ ತತ್ಕರ್ಮೇತಿ ವಾ ತೇ ಜಿಜ್ಞಾಸವೇ [1]ಪ್ರವಕ್ಷ್ಯಾಮಿ । ಯದ್‌ಜ್ಞಾತ್ವಾಽಶುಭಾತ್ಕರ್ಮಬಂಧಾನ್ಮೋಕ್ಷ್ಯಸೇ ತತ್ಕರ್ಮೇತಿ ವಾ । ಕರ್ಮ ಪ್ರವಕ್ಷ್ಯಾಮೀತ್ಯಕರ್ಮವಿಕರ್ಮಣೋರಪ್ಯುಪಲಕ್ಷಣಮ್ । ಅನುಷ್ಠೇಯತಯಾ ಪ್ರಾಧಾನ್ಯಾತ್ಕರ್ಮೇತ್ಯೇವೋಕ್ತಮ್ । ಯದ್ವಾ ತೇಽಕರ್ಮೇತ್ಯತ್ರಾಕಾರ-ಪ್ರಶ್ಲೇಷೇಣಾಕರ್ಮೇತ್ಯಪಿ ಪದಚ್ಛೇದೋ ಜ್ಞೇಯಃ ।। 16 ।।**

---

1 . 'ಇದಂ ಇತಿ ಕ್ವಚಿತ್' . ಪ್ರ.

**ಅನುವಾದ** - '**ಕುರು ಕರ್ಮೈವ** = ಕರ್ಮವನ್ನು ಮಾಡಲೇಬೇಕು' ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ ಆ ಕರ್ಮದ ಸ್ವರೂಪವನ್ನು ಹೇಳಲು ಹೊರಟ ಕೃಷ್ಣನು, ಅದರ ಬಗ್ಗೆ ಕುತೂಹಲವನ್ನು ಹುಟ್ಟಿಸಲು , ಕರ್ಮಸ್ವರೂಪವು ಸುಲಭವಾಗಿ ತಿಳಿಯುವಂತಹುದಲ್ಲವೆಂದು ಹೇಳುತ್ತಾನೆ. '**ಕಿಂ**' ಎಂದು .

ಪದಗಳ ಅರ್ಥಗಳು - '**ಅಕರ್ಮ**' ಎಂಬ ಪದದಿಂದ ಕರ್ಮಹೀನತೆಯನ್ನೂ , ವಿರುದ್ಧ ಕರ್ಮವನ್ನೂ ಸ್ವೀಕರಿಸಬೇಕು. '**ಅತ್ರ**' ಎಂದರೆ ಈ ಕರ್ಮದ ವಿಷಯದಲ್ಲಿ ಎಂದು ಅರ್ಥ. **ಮೋಹಿತಾಃ** = ಭ್ರಮೆಗೊಳಗಾದರು. '**ತತ್**' ಎಂದರೆ ಆ ಕಾರಣದಿಂದ ಎಂದೂ, ಅದನ್ನು ಎಂದೂ ಎರಡು ರೀತಿಯಾಗಿ ಅರ್ಥ.

ಈ ಕರ್ಮದ ವಿಷಯದಲ್ಲಿ ಜ್ಞಾನಿಗಳೂ ಭ್ರಮೆಗೊಳಗಾಗಿದ್ದಾರೆ. ಹಾಗಾದರೆ ಅದರ ಸ್ವರೂಪವನ್ನು ಹೇಳು ಎಂಬ ಪ್ರಶ್ನೆಗೆ ಉತ್ತರಾರ್ಧ ಹೊರಟಿದೆ - '**ತತ್**' ಎಂಬುದಾಗಿ. '**ತತ್**' ಎಂಬುದನ್ನು ಮೂರು ಬಗೆಯಲ್ಲಿ ವ್ಯಾಖ್ಯಾನಿಸಬಹುದು.

1. ಕರ್ಮದ ವಿಷಯದಲ್ಲಿ ಜ್ಞಾನಿಗಳೂ ಮೋಹಕ್ಕೊಳಗಾಗಿದ್ದಾರೆ- ಆದುದರಿಂದ (**ತತ್**= ಆದುದರಿಂದ)
2. ಯಾವುದನ್ನು ಮಾಡಬೇಕೆಂದು ಹಿಂದಿನ ಶ್ಲೋಕದಲ್ಲಿ ಹೇಳಿದೆನೋ ಅದನ್ನು (**ತತ್**= ಅದನ್ನು = ಕರ್ಮವನ್ನು)
3. ಯಾವುದನ್ನು ತಿಳಿದರೆ ಅಶುಭವಾದ ಕರ್ಮಬಂಧದಿಂದ ಬಿಡುಗಡೆ ಹೊಂದುವಿಯೋ ಆ ಕರ್ಮವನ್ನು . '**ಕರ್ಮ ಪ್ರವಕ್ಷ್ಯಾಮಿ**' ಎಂಬಲ್ಲಿರುವ 'ಕರ್ಮ'ಪದವು ಅಕರ್ಮ ಅಂದರೆ ಕರ್ಮಹೀನತೆ ಹಾಗೂ ವಿಕರ್ಮ ಎಂದರೆ ವಿರುದ್ಧ ಕರ್ಮಕ್ಕೆ ಉಪಲಕ್ಷಣವಾಗಿದೆ. ಅನುಷ್ಠಾನ ಮಾಡಬೇಕಾದದ್ದು ಕರ್ಮವನ್ನೇ ಹೊರತು 'ಅಕರ್ಮ' ವಿಕರ್ಮಗಳನ್ನಲ್ಲ. ಆದ್ದರಿಂದ ಕರ್ಮಕ್ಕೆ ಪ್ರಾಧಾನ್ಯ. ಆದ್ದರಿಂದ ಕರ್ಮವನ್ನೇ ಹೇಳುವೆನೆಂದು ಶ್ರೀಕೃಷ್ಣ ಹೇಳಿದ್ದಾನೆ.

ಅಥವಾ '**ತೇ ಕರ್ಮ**' ಎಂಬಲ್ಲಿ ಅಕಾರಪ್ರಶ್ಲೇಷದಿಂದ '**ಅಕರ್ಮ**' ಎಂದೂ ಪದವಿಭಾಗವನ್ನು ಮಾಡಬಹುದು. 'ತೇ' ಎಂದರೆ ಜಿಜ್ಞಾಸುವಾದ ನಿನಗೆ (ಅರ್ಜುನನಿಗೆ) ಎಂದು ಅರ್ಥ.

**ಒಟ್ಟು ಶ್ಲೋಕದ ಭಾವ** - ಸತ್ಕರ್ಮ, ದುಷ್ಕರ್ಮ, ಕರ್ಮಹೀನತೆಗಳ ಬಗ್ಗೆ ಜ್ಞಾನಿಗಳಿಗೂ ಗೊಂದಲವಿದೆ. ಆ ಕರ್ಮ ಸ್ವರೂಪವನ್ನು ತಿಳಿಯದೇ ಅಶುಭ ಕರ್ಮಬಂಧನದಿಂದ ಬಿಡುಗಡೆ ಅಸಾಧ್ಯ. ಆದ್ದರಿಂದ ಕರ್ಮ, ಅಕರ್ಮ, ವಿಕರ್ಮಗಳ ಬಗ್ಗೆ ಜಿಜ್ಞಾಸುವಾದ ನಿನಗೆ ಹೇಳುತ್ತೇನೆ.

## ಕರ್ಮದ ಅರಿವು ದುಷ್ಕರ

**ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥ 17 ॥**

ಅರ್ಥ- ಸತ್ಕರ್ಮಕ್ಕಿಂತ ದುಷ್ಕರ್ಮ ಹಾಗೂ ಕರ್ಮಹೀನತೆಯನ್ನು ಬೇರೆಯಾಗಿ ತಿಳಿಯಬೇಕು. ದುಷ್ಕರ್ಮಕ್ಕಿಂತ ಸತ್ಕರ್ಮ ಹಾಗೂ ಕರ್ಮಹೀನತೆಯನ್ನು ಬೇರೆಯಾಗಿ ತಿಳಿಯಬೇಕು. ಕರ್ಮಹೀನತೆಗಿಂತ ಸತ್ಕರ್ಮ ಹಾಗೂ ದುಷ್ಕರ್ಮಗಳನ್ನು ಬೇರೆಯಾಗಿ ತಿಳಿಯಬೇಕು. ಕರ್ಮದ ಪರಿಜ್ಞಾನವು ಕಷ್ಟಸಾಧ್ಯವಾದರೂ ಅದಕ್ಕೆ ಶಾಪಾದಿಗಳು ಪ್ರಬಲಕಾರಣವಲ್ಲ. ದುರ್ಜ್ಞೇಯತೆ ಕರ್ಮದ ಸ್ವಭಾವವೇ ಆಗಿದೆ.

ಅಥವಾ, ಬಹುರೂಪಿಯಾದ ನನ್ನಿಂದಲೇ (ಶ್ರೀಕೃಷ್ಣನಿಂದಲೇ) ಸತ್ಕರ್ಮ, ದುಷ್ಟಕರ್ಮ, ಕರ್ಮಹೀನತೆಯೆಂಬ ಮೂರೂ ಉಂಟಾಗುತ್ತವೆ. ಆದ್ದರಿಂದ ಈ ಮೂರನ್ನೂ ನನ್ನ ಅಧೀನವೆಂದು ತಿಳಿಯಬೇಕು.

ಕರ್ಮಾದಿಸ್ವರೂಪಜ್ಞಾನಮಾವಶ್ಯಕಮಿತಿ ಭಾವೇನಾಹ- **ಕರ್ಮಣೋ ಹೀತಿ** ॥ ಪೂರ್ವಸ್ಮಾತ್ಕರ್ಮಾಕರ್ಮಪದಯೋರನುವೃತ್ತಿಃ । ಕರ್ಮಣಃ ಸಕಾಶಾದಕರ್ಮ ಕರ್ಮಾಕರಣಂ ವಿರುದ್ಧಕರ್ಮ ಚ ವಿವಿಚ್ಯ ಬೋದ್ಧವ್ಯಮ್ । ವಿಕರ್ಮಣೋ ನಿಷಿದ್ಧಕರ್ಮಣಶ್ಚ ಕರ್ಮಾಕರ್ಮ ಚ ವಿವಿಚ್ಯ ಬೋದ್ಧವ್ಯಮ್ । ಅಕರ್ಮಣಶ್ಚ ಕರ್ಮ ವಿಕರ್ಮ ಚ ವಿವಿಚ್ಯ ಬೋದ್ಧವ್ಯಮ್ । ಕುತ ಇತ್ಯತ ಆಹ- **ಗಹನೇತಿ** ॥ ಪೂರ್ವತ್ರ ದುರ್ಜ್ಞೇಯತ್ವೋಕ್ತಾವಪಿ ತಚ್ಛಾಪಾದಿ ಪ್ರಬಲನಿಮಿತ್ತಂ ನ ಭವತಿ । ಕಿಂತು ಸ್ವಭಾವತ ಏವೇತಿ ವಕ್ತುಂ 'ಗಹನಾ ಕರ್ಮಣೋ ಗತಿಃ' ಇತಿ ಪುನರ್ವಚನಮ್ । ಯದ್ವಾ 'ಕರ್ಮ ಪ್ರವಕ್ಷ್ಯಾಮಿ' ಇತಿ ಪ್ರತಿಜ್ಞಾತಂ ಕರ್ಮಾದಿಸ್ವರೂಪಮಾಹ- **ಕರ್ಮಣೋ ಹೀತಿ** ॥ ಅತ್ರ ಕರ್ಮ ನ ಇತಿ ವಿಕರ್ಮ ನ ಇತಿ ಅಕರ್ಮ ನ ಇತಿ ಪದವಿಭಾಗಃ । 'ಬ್ರಹ್ಮಾ ಣ ಇಂದ್ರ ಉಪಯಾಹಿ ವಿದ್ವಾನ್' ಇತ್ಯತ್ರ ಬ್ರಹ್ಮಾ ಣ ಇತ್ಯಸ್ಯೇವ ಭಿನ್ನಪದಸ್ಯಾಪಿ ನ ಇತ್ಯಸ್ಯ ರೇಫೋತ್ತರಸ್ಯ ಣತ್ವಮ್ । ತೇನ 'ರಷಾಭ್ಯಾಂ ನೋ ಣಃ ಸಮಾನಪದೇ' ಇತ್ಯುಕ್ತಾವಪಿ ಛಾಂದಸಂ ಣತ್ವಮತ್ರ ಧ್ಯೇಯಮ್ । ಕರ್ಮ ನೋ ಮತ್ತೋ ಭವತೀತಿ, ವಿಕರ್ಮ ಅಕರ್ಮ ಚ ನೋ ಮತ್ತೋ ಭವತೀತ್ಯೇವಂ ಯೋಜನಾ । ಕರ್ಮಾದಿಸ್ವರೂಪಂ ನ ಸ್ವತಂತ್ರಂ ಕಿಂತು ಭಗವದಧೀನಂ ಬೋದ್ಧವ್ಯಮಿತ್ಯರ್ಥಃ । ನ ಇತಿ ಬಹುವಚನಂ

**ಬಹುರೂಪತ್ವಾತ್ । ಏವಂರೂಪೇಣ ಕರ್ಮಸ್ವರೂಪಜ್ಞಾನಂ ದುಃಶಕಮಿತ್ಯಾಹ-ಗಹನೇತಿ ॥ ಏತಚ್ಚ ಶ್ರೋತುರಧಿಕಾದರಜನನಾಯೋಕ್ತಮ್ ॥ 17 ॥**

**ಅನುವಾದ** – ಕರ್ಮಾದಿಗಳ ಸ್ವರೂಪಜ್ಞಾನವು ಆವಶ್ಯಕವೆಂದು ಹೇಳುತ್ತಾನೆ. '**ಕರ್ಮಣೋ ಹಿ ..**' ಎಂಬುದಾಗಿ. ಹಿಂದಿನ ಶ್ಲೋಕದಿಂದ '**ಕರ್ಮ**', '**ಅಕರ್ಮ**' ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು . '**ಅಕರ್ಮ**' ಪದಕ್ಕೆ ಕರ್ಮಹೀನತೆ ಹಾಗೂ ವಿರುದ್ಧವಾದ ದುಷ್ಟಕರ್ಮ ಎಂದು ಹಿಂದಿನಂತೆ ಎರಡೂ ಅರ್ಥಗಳನ್ನು ಸ್ವೀಕರಿಸಬೇಕು. ಈ ಎರಡೂ ಪದಗಳನ್ನು ಮೂರು ಪ್ರತ್ಯೇಕ ವಾಕ್ಯಗಳಲ್ಲಿಯೂ ಅನ್ವಯಿಸಿಕೊಂಡು ಮುಂದೆ ಹೇಳಿದಂತೆ ಅರ್ಥೈಸಬೇಕು.

1. **ಕರ್ಮಣಃ (ಸಕಾಶಾತ್) ಅಕರ್ಮ = ಕರ್ಮಾಕರಣಂ, ವಿರುದ್ಧಕರ್ಮ ಚ (ವಿವಿಚ್ಯ) ಬೋದ್ಧವ್ಯಮ್'.**

ಸತ್ಕರ್ಮಕ್ಕಿಂತ ಕರ್ಮಹೀನತೆ ಹಾಗೂ ವಿರುದ್ಧಕರ್ಮಗಳನ್ನು ಬೇರೆಯಾಗಿ ತಿಳಿಯಬೇಕು.

2. **ವಿಕರ್ಮಣಃ = ನಿಷಿದ್ಧಕರ್ಮಣಶ್ಚ ಕರ್ಮ ಅಕರ್ಮ ಚ ವಿವಿಚ್ಯ ಬೋದ್ಧವ್ಯಮ್.**

ನಿಷಿದ್ಧ ಅಥವಾ ದುಷ್ಟಕರ್ಮಕ್ಕಿಂತ ಸತ್ಕರ್ಮ ಹಾಗೂ ಕರ್ಮಹೀನತೆಗಳನ್ನು ಬೇರೆಯಾಗಿ ತಿಳಿಯಬೇಕು.

3. **ಅಕರ್ಮಣಃ ಚ ಕರ್ಮ ವಿಕರ್ಮ ಚ ವಿವಿಚ್ಯ ಬೋದ್ಧವ್ಯಮ್.**

ಕರ್ಮಹೀನತೆಗಿಂತ ಸತ್ಕರ್ಮ ಹಾಗೂ ದುಷ್ಕರ್ಮಗಳನ್ನು ಬೇರೆಯಾಗಿ ತಿಳಿಯಬೇಕು. ಹಿಂದೆ ತಿಳಿಸಿದಂತೆ ಸತ್ಕರ್ಮ, ಕರ್ಮಹೀನತೆ, ನಿಷಿದ್ಧಕರ್ಮಗಳನ್ನು ವಿವೇಚಿಸಿ ಏಕೆ ತಿಳಿಯಬೇಕು ? ಎಂಬ ಪ್ರಶ್ನೆಗೆ ಉತ್ತರವಾಗಿ '**ಗಹನಾ ಕರ್ಮಣೋ ಗತಿಃ**' ಎಂಬ ವಾಕ್ಯ ಹೊರಟಿದೆ.

ಹಿಂದೆಯೂ ಕರ್ಮವು ದುರ್ಜ್ಞೇಯ ಎಂದು ಹೇಳಲಾಗಿದೆ. ಆದರೆ ಕರ್ಮದ ದುರ್ಜ್ಞೇಯತೆಗೆ ಶಾಪಾದಿ ಪ್ರಬಲಕಾರಣವೇನೂ ಇಲ್ಲ. ಅದು ಕರ್ಮದ ಸ್ವಭಾವವೇ ಆಗಿದೆ ಎಂದು ತಿಳಿಸಲು '**ಗಹನಾ ಕರ್ಮಣೋ ಗತಿಃ**' ಎಂದು ಮತ್ತೊಮ್ಮೆ ಕರ್ಮದ ದುರ್ಜ್ಞೇಯತೆಯನ್ನು ಈ ಶ್ಲೋಕದಲ್ಲಿ ಹೇಳಲಾಗಿದೆ.

**ವಿವರಣೆ** – ದ್ವಾಪರಯುಗದಲ್ಲಿ ವಿಪ್ರರಿಗೆ ಗೌತಮ ಋಷಿಯ ಶಾಪದಿಂದ ಅಜ್ಞಾನ ಆವರಿಸಿದಂತೆ, ಕರ್ಮದ ವಿಷಯದಲ್ಲಿ ಜ್ಞಾನಿಗಳಿಗಿರುವ ಮೋಹಕ್ಕೆ ಶಾಪಾದಿಗಳು ಕಾರಣವಲ್ಲ. ಕರ್ಮದ ಸ್ವರೂಪ ಸ್ವಾಭಾವಿಕವಾಗಿಯೇ ಗಹನವಾದುದು. ಆದ್ದರಿಂದ ಕರ್ಮದ ವಿಷಯದಲ್ಲಿ ಜ್ಞಾನಿಗಳಿಗೂ ಮೋಹ ಉಂಟಾಗುವುದು.

## 17ನೇ ಶ್ಲೋಕಕ್ಕೆ ಗೀತಾತಾತ್ಪರ್ಯದಂತೆ ವಿವರಣೆ

ಹದಿನಾರನೆಯ ಶ್ಲೋಕದಲ್ಲಿ 'ಕರ್ಮದ ಬಗ್ಗೆ ಹೇಳುತ್ತೇನೆ ' ಎಂದು ಪ್ರತಿಜ್ಞೆ ಮಾಡಿದ ಕರ್ಮ ಮೊದಲಾದವುಗಳ ಬಗ್ಗೆ ಹೇಳಲು ಈ ಶ್ಲೋಕ ಹೊರಟಿದೆ. ಈ ವಿವರಣೆಯಂತೆ **'ಕರ್ಮಣಃ' 'ವಿಕರ್ಮಣಃ', 'ಅಕರ್ಮಣಃ'** ಎಂಬ ಪದಗಳು ಹಿಂದಿನ ವಿವರಣೆಯಲ್ಲಿ ಬಂದಂತೆ ಪಂಚಮೀಷಷ್ಠೀವಿಭಕ್ತಿ ಏಕವಚನದ ರೂಪಗಳಲ್ಲ. ಇಲ್ಲಿ **'ಕರ್ಮ+ ನಃ', 'ವಿಕರ್ಮ+ನಃ', 'ಅಕರ್ಮ+ನಃ'** ಎಂಬುದಾಗಿ ಪದವಿಭಾಗ ಮಾಡಿಕೊಳ್ಳಬೇಕು. ಮೇಲಿನ ಮೂರು ಪದಗಳ ಗುಂಪಿನಲ್ಲಿ 'ನಃ' ಎಂಬುದು ಭಿನ್ನಪದವಾಗಿದೆ. ಆದುದರಿಂದಲೇ **'ರಷಾಭ್ಯಾಂ ನೋ ಣಃ ಸಮಾನಪದೇ'** (ರ.ಷ.ಗಳಿಂದ ಪರದಲ್ಲಿರುವ 'ನ 'ಕಾರಕ್ಕೆ ಸಮಾನಪದವಾದಾಗ 'ಣ'ಕಾರವು ಬರುತ್ತದೆ) ಎಂಬ ಸೂತ್ರ ಪ್ರಕಾರ 'ಣ'ಕಾರ ಬರಲು ಅವಕಾಶವಿಲ್ಲ ಆದರೂ **'ಬ್ರಹ್ಮಾ ಣ ಇಂದ್ರ ಉಪಯಾಹಿ ವಿದ್ವಾನ್ '** ಎಂಬ ವೇದದ ಉದಾಹರಣೆಯಲ್ಲಿ 'ಬ್ರಹ್ಮಾ + ನಃ' ಎಂದು ಭಿನ್ನಪದವಾಗಿದ್ದರೂ 'ನ ' ಕಾರಕ್ಕೆ 'ಣ'ಕಾರವು ಬಂದಂತೆ **'ಕರ್ಮ +ನಃ' , 'ಅಕರ್ಮ + ನಃ'** ಎಂಬಲ್ಲಿಯೂ 'ಣ' ಕಾರವು ಬಂದಿದೆ. ಇಲ್ಲಿ 'ನಃ' ಎಂದರೆ ನಮ್ಮಿಂದ ಅಂದರೆ 'ಪರಮಾತ್ಮನಿಂದ' ಎಂದು ಅರ್ಥ. ಪರಮಾತ್ಮನ ರೂಪಗಳು ಬಹುಸಂಖ್ಯೆಯಲ್ಲಿರುವುದರಿಂದ 'ನಃ' ಎಂದು ಬಹುವಚನವನ್ನು ಪ್ರಯೋಗಿಸಲಾಗಿದೆ. **'ಕರ್ಮ, ನಃ (ಭವತಿ) ವಿಕರ್ಮ, ನಃ (ಭವತಿ) ಅಕರ್ಮ, ನಃ (ಭವತಿ)** ಎಂದು ಅನ್ವಯಿಸಿಕೊಳ್ಳಬೇಕು ಕರ್ಮವೂ ನನ್ನಿಂದಲೇ ಆಗುವುದು. ವಿಕರ್ಮವೂ ನನ್ನಿಂದಲೇ ಆಗುವುದು ,ಅಕರ್ಮವೂ ನನ್ನಿಂದಲೇ ಆಗುವುದು. ಕರ್ಮ, ವಿಕರ್ಮ, ಅಕರ್ಮಗಳು ಭಗವಂತನ ಅಧೀನವೇ ಹೊರತು ಸ್ವತಂತ್ರವಲ್ಲ ಎಂದು ಅಭಿಪ್ರಾಯ.

ಈ ರೀತಿಯಾಗಿ ಕರ್ಮಸ್ವರೂಪದ ಜ್ಞಾನವು ಕಷ್ಟದಿಂದ ಮಾತ್ರ ಸಾಧ್ಯವೆನ್ನುತ್ತಾನೆ- **'ಗಹನಾ'** ಎಂಬುದಾಗಿ. ಕೇಳುಗರಿಗೆ **'ಕರ್ಮ'**ದ ವಿಷಯದಲ್ಲಿ ಹೆಚ್ಚಿನ ಆದರವನ್ನು ಹುಟ್ಟಿಸಲು ಈ ಶ್ಲೋಕ ಹೊರಟಿದೆ.

## ಕರ್ಮ-ಅಕರ್ಮ-ವಿಕರ್ಮಗಳ ಮರ್ಮಬಲ್ಲವನೇ ಜ್ಞಾನಿ

**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥ 18 ॥**

**ಅರ್ಥ-** ಕರ್ಮವನ್ನು ಆಚರಿಸುವಾಗ ನಾನು ಸ್ವತಂತ್ರನಾಗಿ ಮಾಡುತ್ತಿಲ್ಲವೆಂದೂ, ಸ್ವಪ್ನ , ಸುಷುಪ್ತಿ ಮೊದಲಾದ ಅವಸ್ಥೆಗಳಲ್ಲಿ ತಾನು ಕರ್ಮವನ್ನು ಆಚರಿಸದಿರುವಾಗ ಭಗವಂತನೇ ಸ್ವಪ್ನಪದಾರ್ಥಗಳ ಹಾಗೂ ಪ್ರಪಂಚದ ಸೃಷ್ಟ್ಯಾದಿಕರ್ಮವನ್ನು ಆಚರಿಸುತ್ತಿರುವನೆಂದೂ, ಯಾರು ತಿಳಿಯುತ್ತಾನೋ ಅವನೇ ಮನುಷ್ಯರಲ್ಲಿ ಜ್ಞಾನಿಯಾಗಿದ್ದಾನೆ. ಅವನು ಜ್ಞಾನಸಾಧನ

ಉಳ್ಳವನು. ಅವನೇ ಕರ್ಮವನ್ನು ಪೂರ್ತಿಗೊಳಿಸಿದವನು. ಏಕೆಂದರೆ ಅವನು ಕರ್ಮಫಲವಾದ ಜ್ಞಾನವನ್ನೂ, ಮೋಕ್ಷವನ್ನೂ ಪಡೆದಿರುತ್ತಾನೆ.

ಅಥವಾ, ವಿಧಿಬದ್ಧನಾದ ಜೀವನಲ್ಲಿ ಸ್ವತಂತ್ರವಾಗಿ ಕರ್ಮಾಚರಣೆ ಇಲ್ಲವೆಂದೂ, ವಿಧಿ ಬದ್ಧನಲ್ಲದ ಭಗವಂತನಲ್ಲಿ ಸ್ವತಂತ್ರವಾಗಿ ಕರ್ಮಾಚರಣೆ ಇದೆಯೆಂದೂ ಯಾರು ತಿಳಿಯುವನೋ. ಅವನೇ ಜ್ಞಾನಿಯು. ಅವನು ಜ್ಞಾನ ಸಾಧನ ಉಳ್ಳವನು ಹಾಗೂ ಕರ್ಮವನ್ನು ಪೂರ್ಣಗೊಳಿಸಿದವನು.

ಕರ್ಮಾದಿಸ್ವರೂಪಂ ಪ್ರಪಂಚಯಂಸ್ತದ್‌ಬೋಧಂ ಸ್ತೌತಿ- ಕರ್ಮಣೀತಿ ॥ ವರ್ಣಾಶ್ರಮೋಚಿತಕರ್ಮಣಿ ಕ್ರಿಯಮಾಣೇ ಸತಿ ಅಕರ್ಮ ಕರ್ಮಾಭಾವಂ ಸ್ವಸ್ಯ ಯಃ ಪಶ್ಯೇತ್ । ಭಗವಾನೇವ ಕರ್ತಾ ನಾಹಂ ಸ್ವತಂತ್ರಃ ಕಿಂತು ತದಧೀನ-ಕರ್ತೃಶಕ್ತಿಕಃ ಸನ್ ಕರೋಮೀತಿ ಯಃ ಪಶ್ಯೇದಿತ್ಯರ್ಥಃ । ಅಕರ್ಮಣಿ ಜೀವಕರ್ತೃಕಕರ್ಮಕರಣಹೀನೇ ಸುಪ್ತ್ಯಾದೌ । ಜೀವಸ್ಯ ಕರ್ಮಾಕರಣಾ-ವಸ್ಥಾಯಾಮಿತಿ ಯಾವತ್ । ಕರ್ಮ ಯಃ ಪಶ್ಯೇತ್ । ಜೀವವ್ಯಾಪಾರಸ್ಯ ಭಾವೇ ಅಭಾವೇ ಚ ಸದಾ ಭಗವಾನೇವ ಮಹದಾದಿ ಸ್ವಪ್ನಾದೌ ಗಜಾದಿ ಕರೋತೀತಿ ಪಶ್ಯೇದಿತ್ಯರ್ಥಃ । ಅನೇನ ಹರೇಃ ಪರಾನಪೇಕ್ಷಯಾ ಕರ್ತೃತ್ವಂ ಸ್ವಸ್ಯ ತದಧೀನ-ಕರ್ತೃತ್ವಂ ಜ್ಞಾತ್ವಾ ವರ್ಣಾಶ್ರಮವಿಹಿತಾನುಷ್ಠಾನಂ ಕರ್ಮೇತ್ಯುಕ್ತಂ ಭವತಿ । ಏತೇನ ಕರ್ಮಾಕರಣಮಕರ್ಮ, ನಿಷಿದ್ಧಂ ಕರ್ಮ ವಿಕರ್ಮೇತ್ಯುಕ್ತಪ್ರಾಯಮ್ । ಕರ್ಮಾದಿಬೋಧಂ ಸ್ತೌತಿ - ಸ ಇತಿ ॥ ಯ ಏವಂ ಪಶ್ಯೇತ್ಸ ಬುದ್ಧಿಮಾನ್ ಜ್ಞಾನೀ । ಪ್ರಶಂಸಾಯಾಂ ಮತುಪ್ । ಸ ಏವ ಯುಕ್ತಃ ಜ್ಞಾನೋಪಾಯ-ವಾನ್ । ಸ ಏವ ಕೃತ್ಸ್ನಕರ್ಮಕೃತ್ । ಸ್ವಯೋಗ್ಯಕೃತ್ಸ್ನಕರ್ಮಫಲಸ್ಯ ಜ್ಞಾನಸ್ಯ ಮೋಕ್ಷಸ್ಯ ಪ್ರಾಪ್ತಪ್ರಾಯತ್ವಾದಿತಿ ಭಾವಃ । ಯದ್ವಾ ಕರಶ್ಶಬ್ದಃ ಸಕಾರಾಂತಃ ಕರ್ಮವಿಧಿವಾಚೀ, ತೇನ ಮೀಯತೇ ವಿಷಯೀಕ್ರಿಯತೇ ಇತಿ ಕರ್ಮ । ಉಪಪದಸ್ಯ ಟಿಲೋಪೋ ಮಾತೇಃ ಕನಿನ್ಪ್ರತ್ಯಯಃ । '[1]ಕರೋಽಸ್ಮಿನ್ಮೀಯತ ಇತಿ ಕರ್ಮ ಜೀವ ಉದಾಹೃತಃ' (ನಾರದೀಯೇ) ಇತಿ ನಿರ್ವಚನಾತ್ । ವಿಧಿ ಬದ್ಧತ್ವಾತ್ಕರ್ಮಶಬ್ದಾರ್ಥೋ ಜೀವಃ । ಕರ್ಮವಿಧೇಸ್ತತ್ಫಲಸ್ಯ ಚಾಭಾವಾದ-ಕರ್ಮಪದೇನೇಶ್ವರೋ ಗ್ರಾಹ್ಯಃ । ತಥಾ ಚ ಕರ್ಮಣಿ ವಿಧಿಬದ್ಧೇ ಜೀವೇ ಅಸ್ವಾತಂತ್ರ್ಯದ್ಧೇತೋರಕರ್ಮ ಕರ್ಮಾಭಾವಂ ಯಃ ಪಶ್ಯೇತ್ । ತಥಾಽ-ಕರ್ಮಣಿ ವಿಷ್ಣೌ ಕರ್ಮ ಯಃ ಪಶ್ಯೇತ್ ಸರ್ವಕರ್ಮಕರ್ತೃತ್ವಾತ್ತದೀಯಮೇವ

1. 'ಕರೋಸ್ಮಿನ್' ಪ್ರ.

**ಸರ್ವಕರ್ಮೇತಿ ಪಶ್ಯೇತ್ ಸ ಬುದ್ಧಿಮಾನ್ ಜ್ಞಾನೀತ್ಯೇವಂ ಪ್ರಾಗ್ವದೇವ ಸ್ತುತಿಪರತಾऽರ್ಥ(ರ್ಥ)ಸ್ಯ ಧ್ಯೇಯಾ ॥ 18 ॥**

**ಅನುವಾದ -** ಕರ್ಮಾದಿಗಳ ಸ್ವರೂಪವನ್ನು ವಿಸ್ತಾರವಾಗಿ ತಿಳಿಸುತ್ತಾ ಅದರ ಜ್ಞಾನವನ್ನು ಸ್ತುತಿಸುತ್ತಾನೆ. 'ಕರ್ಮಣಿ.....' ಮುಂತಾದ ಶ್ಲೋಕದಿಂದ .

**'ಕರ್ಮಣಿ (ಕ್ರಿಯಮಾಣೇ ಸತಿ) ಅಕರ್ಮ ಯಃ ಪಶ್ಯೇತ್'**, ಎಂಬ ಈ ಶ್ಲೋಕ ಭಾಗದ ಅಭಿಪ್ರಾಯ ಭಾಷ್ಯದಂತೆ ಈ ರೀತಿ ಇದೆ . ಯಾರು ವರ್ಣ, ಆಶ್ರಮಗಳಿಗೆ ಉಚಿತವಾದ ಕರ್ಮವನ್ನು ತಾನು ಮಾಡುವಾಗಲೂ, ತನಗೆ ಕರ್ಮಾಭಾವವನ್ನು ತಿಳಿಯುವನೋ ಎಂದರೆ. ಭಗವಂತನೇ ಕರ್ಮ ಕರ್ತನು . ನಾನು ಸ್ವತಂತ್ರನಲ್ಲ. ಅವನು ಕೊಟ್ಟ ಕರ್ತೃತ್ವ ಶಕ್ತಿಯಿಂದ ಅವನ ಪ್ರೇರಣೆಗೆ ಅನುಸಾರವಾಗಿ ಮಾಡುತ್ತಿರುವೆನು ಎಂದು ತಿಳಿಯುವನೋ, **'ಅಕರ್ಮಣಿ ಚ ಕರ್ಮ ಯಃ ಪಶ್ಯೇತ್'** ಎಂಬ ಶ್ಲೋಕ ಭಾಗದ ಭಾವ ಭಾಷ್ಯದಂತೆ ಈ ರೀತಿ ಇದೆ- ಯಾರು ಜೀವನು ಕರ್ಮವನ್ನು ಆಚರಿಸದಿರುವ ಸ್ವಪ್ನ , ಸುಷುಪ್ತಿ ಮೊದಲಾದ ಅವಸ್ಥೆಗಳಲ್ಲಿ ಸ್ವತಂತ್ರನಾದ ಭಗವಂತನೇ ಕರ್ಮವನ್ನು ಮಾಡುತ್ತಿರುವನು ಎಂದರೆ ಜೀವನ ಚಟುವಟಿಕೆ ಇರಲಿ ಇಲ್ಲದಿರಲಿ ಸರ್ವದಾ ಭಗವಂತನೇ ಕರ್ಮವನ್ನು ಮಾಡುವವನು ; ಸ್ವಪ್ನದಲ್ಲಿ ಅವನೇ ಆನೆ, ಕುದುರೆ ಮುಂತಾದ ಪದಾರ್ಥಗಳನ್ನು ಸೃಷ್ಟಿಸಿ ತೋರಿಸುವವನು, ಮಹತ್ತತ್ವ ಮೊದಲಾದ ಬಾಹ್ಯ ಪ್ರಪಂಚವನ್ನು ಸೃಷ್ಟಿಸುವವನು ಎಂದು ತಿಳಿಯುತ್ತಾನೋ , ಮೇಲಿನ ಪೂರ್ವಾರ್ಧ- ಶ್ಲೋಕದಿಂದ ಕರ್ಮಸ್ವರೂಪವನ್ನು ಹೇಳಿದಂತೆ ಆಯಿತು . ಹೇಗೆಂದರೆ ಭಗವಂತನೇ ಸ್ವತಂತ್ರ ಕರ್ತನು. ನಾನು ಅವನು ಕೊಟ್ಟ ಕರ್ತೃತ್ವಶಕ್ತಿಯಿಂದ , ಅವನ ಪ್ರೇರಣೆಗೆ ಅನುಸಾರವಾಗಿ ಕರ್ಮವನ್ನು ಮಾಡುತ್ತೇನೆ' ಎಂದು ತಿಳಿದು ಆಚರಿಸುವ ವರ್ಣಾಶ್ರಮಗಳಿಗೆ ವಿಹಿತವಾದ ಅನುಷ್ಠಾನವೇ 'ಕರ್ಮ'ವು ಎಂದು. ಹಿಂದೆ ಹೇಳಿದ ಅನುಸಂಧಾನವಿಲ್ಲದೇ ಮಾಡುವ ಅನುಷ್ಠಾನವು '**ಅಕರ್ಮ**'ವೆನಿಸುವುದು. ನಿಷಿದ್ಧವಾದ ಕರ್ಮವೇ '**ವಿಕರ್ಮ**'ವೆನಿಸುವುದು ಎಂದೂ ಹೇಳಿದಂತಾಯಿತು .

ಪೂರ್ವಾರ್ಧದಲ್ಲಿ ಹೇಳಿದ ಕರ್ಮಾದಿಗಳ ಜ್ಞಾನವನ್ನು ಉತ್ತರಾರ್ಧದಿಂದ ಸ್ತುತಿಸುತ್ತಾನೆ- **'ಸ ಬುದ್ಧಿಮಾನ್.......'** ಮುಂತಾಗಿ .

**'ಸಃ ಬುದ್ಧಿಮಾನ್ '** = ಹಿಂದೆ ತಿಳಿಸಿದಂತೆ ಯಾರು ತಿಳಿಯುತ್ತಾನೋ ಅವನೇ ಮನುಷ್ಯರಲ್ಲಿ ಜ್ಞಾನಿಯು . **'ಬುದ್ಧಿಮಾನ್ '** ಎಂಬಲ್ಲಿ ಪ್ರಶಸ್ತವಾದ ಬುದ್ಧಿ ಉಳ್ಳವನು ಎಂಬರ್ಥದಲ್ಲಿ **'ಮತುಪ್'** ಪ್ರತ್ಯಯ ಬಂದಿದೆ.

**'ಸಃ ಏವ ಯುಕ್ತಃ'** = ಅವನೇ ಜ್ಞಾನೋಪಾಯ ಸಿದ್ಧಿ ಉಳ್ಳವನು. **'ಸಃ (ಏವ)**

**ಕೃತ್ಸ್ನಕರ್ಮಕೃತ್'** = ಅವನೇ ಕರ್ಮವನ್ನು ಪೂರ್ತಿಗೊಳಿಸಿದವನು . ತನಗೆ ಯೋಗ್ಯವಾದ ಸಮಗ್ರಕರ್ಮಾನುಷ್ಠಾನದ ಫಲವಾದ ಜ್ಞಾನವನ್ನೂ , ಆ ಜ್ಞಾನದ ಫಲವಾದ ಮುಕ್ತಿಯನ್ನೂ ಅವನು ಹೊಂದಿದಂತೆ. ಆದ್ದರಿಂದ ಕರ್ಮವನ್ನು ಪೂರ್ತಿಗೊಳಿಸಿದವನು.

**ತಾತ್ಪರ್ಯದಂತೆ ವಿವರಣೆ -** 'ಕರ್ಮವಿಧಿ'ಯನ್ನು ಹೇಳುವ ಸಕಾರಾಂತವಾದ 'ಕರಸ್' ಶಬ್ದವೂ ಇದೆ. **'ಕರಸಾ ಮೀಯತೇ'** = **'ವಿಷಯೀಕ್ರಿಯತೇ ಇತಿ ಕರ್ಮ'** ಎಂದು ನಿಷ್ಪತ್ತಿಯು.

ಕರ್ಮವಿಧಿಯಿಂದ ವಿಷಯೀಕರಿಸಲ್ಪಡುವವನೇ 'ಕರ್ಮ' ಎಂದು ಅಭಿಪ್ರಾಯ. ಕರ್ಮವಿಧಿ ಬದ್ಧನಾದ ಜೀವನನ್ನೇ 'ಕರ್ಮ' ಶಬ್ದವು ಹೇಳುತ್ತದೆ . **'ಕರೋಽಸ್ಮಿನ್ ಮೀಯತೇ ಇತಿ ಕರ್ಮ ಜೀವ ಉದಾಹೃತಃ'** ಎಂಬ ನಾರದೀಯ ಪುರಾಣದ ಮಾತು 'ಕರ್ಮ' ಶಬ್ದದ ನಿಷ್ಪತ್ತಿಯನ್ನೂ, ಅರ್ಥವನ್ನೂ ತಿಳಿಸುತ್ತದೆ.

**'ಕರಸ್'** ಎಂಬ ಉಪಪದದಲ್ಲಿರುವ **'ಅಸ್'** ಎಂಬ **'ಟಿ'** ಸಂಜ್ಞೆಯುಳ್ಳದ್ದಕ್ಕೆ ಲೋಪವಾಗಿ; **'ಮಾ'** (ಮೀಯತೇ) ಧಾತುವಿನ ಅನಂತರ **'ಕನಿನ್'** ಪ್ರತ್ಯಯ ಬಂದಾಗ 'ಕರ್ಮ' ಶಬ್ದದ ಸಿದ್ಧಿಯಾಗುವುದು . ಭಗವಂತನಿಗೆ ಕರ್ಮವಿಧಿಯ ಬಂಧನವೂ ಇಲ್ಲ ; ಅದರಿಂದಾಗುವ ಫಲವೂ ಇಲ್ಲ . ಆದ್ದರಿಂದ ಭಗವಂತನು **'ಅಕರ್ಮ'** ನೆನಿಸಿದ್ದಾನೆ. ಈ ವಿವಕ್ಷೆಯಲ್ಲಿ ಪೂರ್ವಾರ್ಧದ ಅರ್ಥ ಈ ರೀತಿ ಆಗುವುದು. **'ಕರ್ಮಣಿ'** = ವಿಧಿಬದ್ಧನಾದ ಜೀವನಲ್ಲಿ **'ಅಕರ್ಮ'** = ಸ್ವಾತಂತ್ರ್ಯವಿಲ್ಲದಿರುವುದರಿಂದ ಕರ್ಮಾಭಾವವನ್ನು **'ಯಃ ಪಶ್ಯೇತ್'** = ಯಾರು ತಿಳಿಯುತ್ತಾನೋ, **'ಅಕರ್ಮಣಿ'**= ಕರ್ಮಬಂಧನ ಹಾಗೂ ಫಲಲೇಪವಿಲ್ಲದ ಶ್ರೀಹರಿಯಲ್ಲಿ , **'ಕರ್ಮ'**= ಎಲ್ಲಾ ಕರ್ಮಗಳನ್ನು ಅವನೇ ಮಾಡುವನಾದ್ದರಿಂದ, ಎಲ್ಲಾ ಕರ್ಮವೂ ಅವನದೇ ಎಂಬುದಾಗಿ , **'ಯಃ ಪಶ್ಯೇತ್'** = ಯಾರು ತಿಳಿಯುತ್ತಾನೋ, 'ಅವನೇ ಮನುಷ್ಯರಲ್ಲಿ ಜ್ಞಾನಿಯು' ಎಂದು ಪ್ರಶಂಸೆ ಮಾಡಲು ಹೊರಟಿರುವ ಉತ್ತರಾರ್ಧದ ಅರ್ಥವು ಹಿಂದಿನಂತೆ.

## ಫಲದ ಆಕರ್ಷಣೆ ತೊರೆದು ಹರಿಯ ಸ್ವತಂತ್ರಕರ್ತೃತ್ವದ ಅರಿವಿರುವವ ಜ್ಞಾನಿ

**ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ ।**
**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥ 19 ॥**

**ಅರ್ಥ-** ಯಾರ ಸಕಲ ಕರ್ಮಾನುಷ್ಠಾನಗಳು ಫಲದ ಅಭಿಲಾಷೆ ಹಾಗೂ ಕರ್ಮದಿಂದ ಈ ಫಲವನ್ನು ಪಡೆಯುವೆನು' ಎಂಬ ಸಂಕಲ್ಪದಿಂದ ರಹಿತವಾಗಿದೆಯೋ, ಭಗವಂತನ ಸ್ವತಂತ್ರಕರ್ತೃತ್ವ ಜ್ಞಾನದಿಂದ ತನ್ನಲ್ಲಿ ಯಾವ ಸ್ವತಂತ್ರಕರ್ಮವೂ ಇಲ್ಲವೆಂದು ತಿಳಿದಿರುವ ಅವನನ್ನು , ಜ್ಞಾನಿಗಳು 'ತತ್ತ್ವಜ್ಞಾನಿ'ಎನ್ನುತ್ತಾರೆ .

ನ ಕೇವಲಂ ಕರ್ತೃತ್ವಾಭಿಮಾನತ್ಯಾಗೇನ ವರ್ಣಾಶ್ರಮೋಚಿತಕೃತ್ಸ್ನಕರ್ಮ-ಕೃತ್ತ್ವಮ್ । ಕಿಂತು ಕಾಮಾದಿಪರಿತ್ಯಾಗೇನಾಪಿ ಭಾವ್ಯಮಿತಿ ಭಾವೇನ ಕರ್ಮ-ಸ್ವರೂಪಮೇವ ಪ್ರಪಂಚಯತಿ - ಯಸ್ಯೇತ್ಯಾದಿಶ್ಲೋಕಪಂಚಕೇನ । ಯಸ್ಯ ಪುಂಸಃ ಸರ್ವೇ ಸಮಾರಂಭಾಃ । ಸರ್ವೇ ಕರ್ಮೋಪಕ್ರಮಾಃ ಕಾಮಸಂಕಲ್ಪವರ್ಜಿತಾಃ । ಕಾಮಃ ಫಲೇಚ್ಛಾ । ಅನೇನೇದಂ ಸ್ವರ್ಗಾದಿ ಸಾಧಯಿಷ್ಯಾಮೀತಿ ಸಂಕಲ್ಪಃ । ತಾಭ್ಯಾಂ ಹೀನಾಃ । ತಂ ಜ್ಞಾನಾಗ್ನಿದಗ್ಧಕರ್ಮಾಣಂ ಹರೇರೇವ ಸ್ವತಂತ್ರಕರ್ತೃತ್ವಂ ಜ್ಞಾತ್ವಾ ಪಶ್ಚಾತ್ ಸ್ವಸ್ಯ ಸ್ವಾತಂತ್ರ್ಯೇಣ ಕರ್ಮಾಭಾವಜ್ಞಾನಿತ್ವಂ ಜ್ಞಾನಾಗ್ನಿ-ದಗ್ಧಕರ್ಮತ್ವಂ, ತಾದೃಶಂ । ಬುಧಾಃ ಜ್ಞಾನಿನಃ ಪಂಡಿತಂ ತತ್ತ್ವಜ್ಞಾನಿನಮಾಹುಃ । ॥ 19 ॥

**ಅನುವಾದ**- 'ನಾನೇ ಕರ್ತಾ' ಎಂಬ ಅಹಂಕಾರವನ್ನು ಬಿಟ್ಟು ವಿಹಿತ ಕರ್ಮಾನುಷ್ಠಾನವನ್ನು ಮಾಡುವುದರಿಂದ ಮಾತ್ರವೇ ವರ್ಣಾಶ್ರಮೋಚಿತ ಸಕಲಕರ್ಮಗಳ ಫಲವನ್ನು ಹೊಂದಲು ಸಾಧ್ಯವಿಲ್ಲ. ಫಲಕಾಮನೆಯನ್ನು ಬಿಡುವುದೂ ಆವಶ್ಯಕವೆಂಬ ಅಭಿಪ್ರಾಯದಿಂದ ಇನ್ನೂ ಐದು ಶ್ಲೋಕಗಳಿಂದ ಕರ್ಮಸ್ವರೂಪವನ್ನೇ ವಿಸ್ತರಿಸುತ್ತಾನೆ- **'ಯಸ್ಯ ಸರ್ವೇ...'** ಮುಂತಾಗಿ.

**'ಯಸ್ಯ ಸರ್ವೇ ಸಮಾರಂಭಾಃ'**= ಯಾರ ಸಕಲ ಕರ್ಮಾಚರಣೆಗಳೂ, **'ಕಾಮ ಸಂಕಲ್ಪವರ್ಜಿತಾಃ'**= ಕಾಮವೆಂದರೆ ಫಲಾಭಿಲಾಷೆಯು, ಸಂಕಲ್ಪವೆಂದರೆ 'ಈ ಕರ್ಮದಿಂದ ಸ್ವರ್ಗಾದಿಫಲಗಳನ್ನು ಪಡೆಯುವೆನು' ಎಂಬ ಮಾನಸಿಕ ಕ್ರಿಯೆ, ಈ ಎರಡರಿಂದ ರಹಿತವಾಗಿವೆಯೋ, ಅಂತಹ , **'ಜ್ಞಾನಾಗ್ನಿದಗ್ಧಕರ್ಮಾಣಂ'** = 'ಭಗವಂತನೇ ಸ್ವತಂತ್ರವಾಗಿ ಎಲ್ಲಾ ಕರ್ಮಗಳನ್ನು ಮಾಡುವವನು' ಎಂದು ತಿಳಿದು ತನಗೆ ಸ್ವತಂತ್ರವಾಗಿ ಮಾಡುವ ಕರ್ಮವೇ ಇಲ್ಲವೆಂದು ತಿಳಿದಿರುವವನನ್ನು **'ಬುಧಾಃ'**= ಜ್ಞಾನಿಗಳು **'ಪಂಡಿತಂ'**= ತತ್ತ್ವಜ್ಞಾನಿಯನ್ನಾಗಿ, **'ಆಹುಃ'** = ಹೇಳುತ್ತಾರೆ .

**ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।**
**ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥ 20 ॥**

**ಅರ್ಥ**- ಕರ್ಮದಲ್ಲಿಯೂ ಫಲದಲ್ಲಿಯೂ ಆಸೆಯನ್ನು ತೊರೆದವನು , ನಿತ್ಯತೃಪ್ತನು, ತನಗೆ ಬೇರೆ ಆಶ್ರಯವಿಲ್ಲದವನೂ ಆದ ಶ್ರೀಹರಿಯ ಪ್ರತಿಬಿಂಬನು ತಾನೆಂದು ತಿಳಿದವನು, ಕರ್ಮಾಚರಣೆಯಲ್ಲಿ ತೊಡಗಿದರೂ ಯಾವ ಕರ್ಮವನ್ನೂ ಮಾಡದವನೆನಿಸುವನು.

**ಕಾಮಸಂಕಲ್ಪವರ್ಜಿತತ್ವಮಾತ್ರೇಣ ನ ಕರ್ಮಸ್ವರೂಪಂ ಪೂರ್ಣಮ್ । ಕಿಂತು ಕರ್ಮಫಲಸ್ನೇಹತ್ಯಾಗೇನಾಪಿ [1]ಭಾವ್ಯಮಿತ್ಯಾಹ- ತ್ಯಕ್ತ್ವೇತಿ ॥ ಕರ್ಮಣಿ ಫಲೇ ಚಾಸಂಗಂ ಸ್ನೇಹಂ ಚ ತ್ಯಕ್ತ್ವಾ ನಿತ್ಯತೃಪ್ತೋ ನಿರಾಶ್ರಯಃ ನಿತ್ಯತೃಪ್ತನಿರಾಶ್ರಯ-ಭಗವತ್ಸರೂಪೋಽಸ್ಮೀತಿ ಜ್ಞಾನವಾನ್ । ಕರ್ಮಣ್ಯಭಿ- ಪ್ರವೃತ್ತೋಽಪಿ ಸ ನೈವ ಕಿಂಚಿತ್ಕರೋತಿ ಸ್ವಾತಂತ್ರ್ಯಾಭಾವಾತ್ । ಅನಿರಾಶ್ರಯ ಇತಿ ವಾ ಪದವಿಭಾಗಃ । ಭಗವದಾಶ್ರಯತ್ವಾದನಿರಾಶ್ರಯ ಇತ್ಯರ್ಥಃ ॥ 20 ॥**

**ಅನುವಾದ**- ಹಿಂದಿನ ಶ್ಲೋಕದಲ್ಲಿ ಹೇಳಿದ ಕಾಮ , ಸಂಕಲ್ಪಗಳನ್ನು ಬಿಡುವುದರಿಂದ ಮಾತ್ರವೇ ಕರ್ಮಸ್ವರೂಪವು ಪೂರ್ಣವಾಗುವುದಿಲ್ಲ. ಕರ್ಮ ಹಾಗೂ ಫಲದಲ್ಲಿ ಆಸೆಯನ್ನು ತೊರೆಯುವುದೂ ಆವಶ್ಯಕವೆಂದು ಹೇಳುತ್ತಾನೆ. 'ತ್ಯಕ್ತ್ವಾ' ಎಂಬ ಶ್ಲೋಕದಲ್ಲಿ ಕರ್ಮದಲ್ಲಿ ಹಾಗೂ ಫಲದಲ್ಲಿ ಅಸಂಗವನ್ನು ಎಂದರೆ ಸ್ನೇಹವನ್ನು ತೊರೆದವನು, ನಿತ್ಯತೃಪ್ತನೂ ನಿರಾಶ್ರಯನೂ ಆದವನು ಎಂದರೆ– 'ನಿತ್ಯತೃಪ್ತನಾದ, ತನಗೆ ಬೇರೆ ಆಶ್ರಯರಿಲ್ಲದ ಭಗವಂತನ ಪ್ರತಿಬಿಂಬ ನಾನು' ಎಂದು ತಿಳಿದವನು . ಕರ್ಮದಲ್ಲಿ ತೊಡಗಿದರೂ, ಅವನು ಏನನ್ನೂ ಮಾಡುವುದಿಲ್ಲ, ಏನನ್ನಾದರೂ ಮಾಡಲು ಅವನಿಗೆ ಸ್ವಾತಂತ್ರ್ಯವಿಲ್ಲ. ಸ್ವಾತಂತ್ರ್ಯದ ಅಭಿಮಾನವಿಲ್ಲದಿರುವುದರಿಂದ ಅವನು ಮಾಡಿದ ಕರ್ಮ ಬಂಧಕವಾಗದೇ ಈಶ್ವರಾನುಗ್ರಹಕ್ಕೆ ಸಾಧಕವಾಗುವುದೆಂದು ತಾತ್ಪರ್ಯ.

'**ಅನಿರಾಶ್ರಯಃ**' ಎಂದೂ ಪದವಿಭಾಗ ಮಾಡಬಹುದು. ಭಗವಂತನ ಆಶ್ರಯವನ್ನು ಜೀವನು ಪಡೆದಿರುವುದರಿಂದ – ಆಶ್ರಯವನ್ನು ಹೊಂದಿಲ್ಲವೆಂದಿಲ್ಲ– ಆಶ್ರಯವನ್ನು ಪಡೆದೇ ಇದ್ದಾನೆ. ಆದ್ದರಿಂದ 'ಅನಿರಾಶ್ರಯ'ವೆನಿಸುತ್ತಾನೆ.

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ ನಾಪ್ನೋತಿ ಕಿಲ್ಬಿಷಮ್ ॥ 21 ॥**

**ಅರ್ಥ** – ಚಿತ್ತವನ್ನೂ , ಮನಸ್ಸನ್ನೂ ನಿಗ್ರಹಿಸಿಕೊಂಡವನು ಕಾಮನೆ ಇಲ್ಲದವನಾಗುತ್ತಾನೆ. ಅವನು ದೇಹೇಂದ್ರಿಯಾದಿಗಳಲ್ಲಿ ಅಭಿಮಾನರಹಿತನೂ ಆಗುತ್ತಾನೆ. ಹೀಗೆ ಕಾಮನೆ ಇಲ್ಲದೇ ಶರೀರ ಪೋಷಣೆಗೆ ಬೇಕಾದ ಕರ್ಮವನ್ನು ಶರೀರ ಇಂದ್ರಿಯಾದಿಗಳಿಂದ ಮಾಡುತ್ತಿದ್ದರೂ ಪಾಪವನ್ನು ಹೊಂದುವುದಿಲ್ಲ.

**ಕಾಮಸಂಕಲ್ಪಾದಿತ್ಯಾಗೋಪಾಯಮಾಹ- ನಿರಾಶೀರಿತಿ ॥ ಆತ್ಮಾ ಮನಃ । ಯತೌ ನಿಯತೌ ಚಿತ್ತಾತ್ಮಾನೌ ಯಸ್ಯ ಸ ಯತಚಿತ್ತಾತ್ಮಾ ಭೂತ್ವಾ**

1. ಭಾವ್ಯಮಿತ್ಯತ ಆಹ–

**ನಿರಾಶೀಃ ನಿಷ್ಕಾಮಃ ತ್ಯಕ್ತಸರ್ವಪರಿಗ್ರಹಶ್ಚ ಭವತೀತ್ಯರ್ಥಃ । ಮನೋನಿಗ್ರಹೇಣೈವ ಕಾಮಾದಿತ್ಯಾಗ ಇತಿ ಭಾವಃ । ಪರಿಗ್ರಹತ್ಯಾಗೋ ನಾಮ ದೇಹೇಂದ್ರಿಯಾದಿ ಪರಿಗ್ರಹೇ ಅಭಿಮಾನತ್ಯಾಗೋ ಜ್ಞೇಯಃ । ಕೇವಲಂ ಶಾರೀರಂ ಶರೀರ-ಯಾತ್ರಾರ್ಥಮ್ । ಯದ್ವಾ ಕೇವಲಂ ಕಾಮಾದಿರಹಿತಂ ಶಾರೀರಂ ಶರೀರೇಂದ್ರಿ-ಯಾದಿಕರಣಕಂ ಕರ್ಮ ಕುರ್ವನ್ ಕಿಲ್ಬಿಷಂ ಕರ್ಮಬಂಧಂ ನಾಪ್ನೋತಿ । 'ನೈವ ಕಿಂಚಿತ್ಕರೋತೀತಿ' ಪ್ರಾಗುಕ್ತಸ್ಯ ಕರ್ಮಣಾಂ ಮಿಥ್ಯಾತ್ವಾದಿತಿ ವಿಪರೀತಭ್ರಮಸ್ಯ ನಿರಾಸಾಯ 'ನಾಪ್ನೋತಿ ಕಿಲ್ಬಿಷಮಿ'ತಿ ತದಭಿಪ್ರಾಯೋಽತ್ರ ಗೌಣ್ಯಾ ವೃತ್ತ್ಯಾ ವರ್ಣಿತಃ ॥ 21 ॥**

**ಅನುವಾದ**- ಕಾಮ-ಸಂಕಲ್ಪಾದಿಗಳನ್ನು ಬಿಡಲು ಉಪಾಯವನ್ನು ಹೇಳುತ್ತಾನೆ- **'ನಿರಾಶೀಃ'** ಎಂಬುದಾಗಿ. **ಆತ್ಮಾ**= ಮನಸ್ಸು, **ಪರಿಗ್ರಹಃ**= ದೇಹೇಂದ್ರಿಯಾದಿ ಸಾಧನಗಳು. **ಪರಿಗ್ರಹ-ತ್ಯಾಗಃ**= ದೇಹೇಂದ್ರಿಯಾದಿ ಸಾಧನಗಳಲ್ಲಿ ಅಭಿಮಾನವಿಲ್ಲದಿರುವುದು **'ಯತೌ ಚಿತ್ತಾತ್ಮಾನೌ ಯಸ್ಯ ಸಃ'**= **'ಯತಚಿತ್ತಾತ್ಮಾ'** ಎಂದು ವಿಗ್ರಹ ವಾಕ್ಯ .

ಪೂರ್ವಾರ್ಧದ ಭಾವ ಹೀಗಿದೆ- ಚಿತ್ತವನ್ನೂ ಮನಸ್ಸನ್ನೂ ಹತೋಟಿಯಲ್ಲಿಟ್ಟುಕೊಂಡವನು ವಿಷಯ ಪದಾರ್ಥಗಳ ಅಭಿಲಾಷೆ ಇಲ್ಲದವನಾಗುತ್ತಾನೆ . ಅವನು ದೇಹೇಂದ್ರಿಯಾದಿಗಳಲ್ಲಿ ಅಭಿಮಾನರಹಿತನೂ ಆಗುವನು .ಮನಸ್ಸಿನ ನಿಗ್ರಹವೇ ಕಾಮಾದಿ ತ್ಯಾಗಕ್ಕೆ ಸಾಧನವೆಂದು ಈ ಶ್ಲೋಕದಿಂದ ಹೇಳಿದಂತಾಯಿತು

**'ಕೇವಲಂ ಶಾರೀರಂ'**= ಶರೀರನಿರ್ವಹಣೆಗೆ ಎಷ್ಟು ಬೇಕೋ ಅಷ್ಟು ಎಂದು ಅರ್ಥ. ಅಥವಾ ಕಾಮನೆ ಇಲ್ಲದೆ ಶರೀರ ಇಂದ್ರಿಯಾದಿಗಳಿಂದ ಮಾಡುವ ಕರ್ಮದಿಂದ ಕರ್ಮಬಂಧವನ್ನು ಹೊಂದುವುದಿಲ್ಲ ಎಂದೂ ಅರ್ಥವನ್ನು ಹೇಳಬಹುದು . ಉತ್ತರಾರ್ಧದ ಅಭಿಪ್ರಾಯ ಹೀಗಿದೆ - ಪೂರ್ವಾರ್ಧದಲ್ಲಿ ಬಂದಂತಹ ಸಾಧಕನು ಶರೀರ ನಿರ್ವಹಣೆಗೆ ಬೇಕಾಗುವ ಕರ್ಮವನ್ನು ಕಾಮನೆ ಇಲ್ಲದೇ ಕೇವಲ ಶರೀರದಿಂದ ಆಚರಿಸಿದರೂ ಪಾಪವನ್ನು ಹೊಂದುವುದಿಲ್ಲ . ಆದ್ದರಿಂದಲೇ ಕರ್ಮಬಂಧವನ್ನೂ ಹೊಂದುವುದಿಲ್ಲ. ಹಿಂದಿನ ಶ್ಲೋಕದಲ್ಲಿ ಹೇಳಿದ 'ಕರ್ಮದಲ್ಲಿ ತೊಡಗಿದ್ದರೂ ಜ್ಞಾನಿಯು ಏನನ್ನೂ ಮಾಡುತ್ತಿಲ್ಲ' ಎಂಬುದರ ಅಭಿಪ್ರಾಯ 'ಕರ್ಮ ಸುಳ್ಳು , ಆದ್ದರಿಂದ ಏನನ್ನೂ ಮಾಡುತ್ತಿಲ್ಲ ಎಂದಲ್ಲ, ಕರ್ಮ ಮಾಡುತ್ತಿದ್ದರೂ ಫಲಾಭಿಲಾಷೆ ಇಲ್ಲದ ಪ್ರಯುಕ್ತ ಪಾಪವನ್ನು ಹೊಂದುವುದಿಲ್ಲ ಎಂದು ಅಮುಖ್ಯ ವೃತ್ತಿಯಿಂದ ಅಭಿಪ್ರಾಯ. ಆದನ್ನೇ 'ನಾಪ್ನೋತಿ ಕಿಲ್ಬಿಷಂ' ಎಂಬುದಾಗಿ ತಿಳಿಸಿದ್ದಾರೆ.

## ಸಂತೃಪ್ತ ಹಾಗೂ ನಿರ್ವಿಕಾರಿಗೆ ಕರ್ಮ ಬಂಧಕವಾಗದು

**ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಽಪಿ ನ ನಿಬಧ್ಯತೇ ॥ 22 ॥**

**ಅರ್ಥ**- ತನ್ನ ಪ್ರಯತ್ನವಿಲ್ಲದೇ ಭಗವಂತನ ಇಚ್ಛೆಯಿಂದ ದೊರೆತ ಪದಾರ್ಥಗಳಿಂದಲೇ ತೃಪ್ತನಾದ, ದ್ವಂದ್ವರಹಿತನಾದ ಅಂದರೆ ಫಲವು ಸಿದ್ಧಿಸಲಿ ಸಿದ್ಧಿಸದಿರಲಿ ಹಿಗ್ಗು - ಕುಗ್ಗುಗಳಿಲ್ಲದೇ ಒಂದೇ ರೀತಿಯಾಗಿರುವ, ಭೋಗಪದಾರ್ಥಗಳು ಸಿಗಲಿಲ್ಲವೆಂದು ದುಃಖಿಸದಿರುವ, ಸಾಧಕನು ಕರ್ಮವನ್ನು ಆಚರಿಸಿಯೂ ಕರ್ಮಬಂಧಕ್ಕೆ ಒಳಗಾಗುವುದಿಲ್ಲ.

**ಯತಚಿತ್ತಾತ್ಮಾ ಕೀದೃಶ ಇತ್ಯತಸ್ತಸ್ಯ ಲಕ್ಷಣಮಾಹ - ಯದೃಚ್ಛೇತಿ ॥ ಅಪ್ರಯತ್ನಲಬ್ಧೇನ ತೃಪ್ತಿಮಾನ್ । ಸುಖದುಃಖಲಾಭಾಲಾಭಾದಿದ್ವಂದ್ವಾನ್ಯ-ತೀತೋ ದ್ವಂದ್ವಾತೀತಃ । ವಿಮತ್ಸರಃ ಸ್ವಾನಧೀನತ್ವನಿಮಿತ್ತಮನಃ ಖೇದಹೀನಃ । ದ್ವಂದ್ವಾತೀತತ್ವಂ ಕಿಂ ಪ್ರಕಾರಮಿತಿ ಜಿಜ್ಞಾಸಾಯಾಂ ತದ್ವಿವೃಣೋತಿ- ಸಮ ಇತ್ಯಾದಿನಾ ॥ ಸಿದ್ಧ್ಯಸಿದ್ಧ್ಯೋರುತ್ಸೇಕಾನುತ್ಸೇಕಹೀನತ್ವರೂಪಸಮತ್ವಮೇವ ದ್ವಂದ್ವಾತೀತತ್ವಮಿತ್ಯರ್ಥಃ । ಏವಂವಿಧಃ ಕರ್ಮ ಕೃತ್ವಾಽಪಿ ತೇನ ನ ನಿಬಧ್ಯತ ಇತಿ । ಯದೃಚ್ಛಾಲಾಭಸಂತುಷ್ಟತ್ವಾದಿಕಂ ಯತಚಿತ್ತಾತ್ಮನೋ ಲಕ್ಷಣಮಿತ್ಯುಕ್ತಂ ಭವತಿ ॥ 22 ॥**

**ಅನುವಾದ** - ಮನಸ್ಸು ಹಾಗೂ ಚಿತ್ತವನ್ನು ನಿಗ್ರಹಿಸಿದವನು ಹೇಗಿರುತ್ತಾನೆಂದರೆ ಅವನ ಲಕ್ಷಣವನ್ನು ಹೇಳುತ್ತಾನೆ ' '**ಯದೃಚ್ಛೇತಿ**' ಎಂದು .

1. '**ಯದೃಚ್ಛಾಲಾಭಸಂತುಷ್ಟಃ** ' = ತನ್ನ ಪ್ರಯತ್ನವಿಲ್ಲದೇ ಭಗವಂತನ ಇಚ್ಛೆಯಿಂದ ದೊರೆತ ಪದಾರ್ಥಗಳಿಂದಲೇ ತೃಪ್ತಿಯನ್ನು ಪಡೆದವನು .

2. '**ದ್ವಂದ್ವಾತೀತಃ**' = ಸುಖ, ದುಃಖ, ಲಾಭ-ಅಲಾಭ ಮೊದಲಾದ ದ್ವಂದ್ವಗಳನ್ನು ಮೀರಿದವನು .

3. '**ವಿಮತ್ಸರಃ**'= ಭೋಗಪದಾರ್ಥಗಳು ಬೇರೆಯವರಿಗೆ ದೊರಕುವುದು, ತನಗೆ ದೊರಕಲಿಲ್ಲವೆಂದು ದುಃಖಿಸದವನು. '**ದ್ವಂದ್ವಾತೀತತ್ವ**' ಯಾವ ರೀತಿಯದು? ಎಂಬ ಜಿಜ್ಞಾಸೆಗೆ ಉತ್ತರವನ್ನು '**ಸಮಃ ಸಿದ್ಧೌ ಅಸಿದ್ಧೌ ಚ** ' ಎಂದು ವಿವರಿಸಿದ್ದಾರೆ. ಫಲವು ಸಿದ್ಧಿಸಲಿ, ಸಿದ್ಧಿಸದಿರಲಿ ಹಿಗ್ಗುವಿಕೆ - ಕುಗ್ಗುವಿಕೆಗಳಿಲ್ಲದ ಸಮತೆಯೇ '**ದ್ವಂದ್ವಾತೀತತೆ**' ಎಂದರ್ಥ. ಈ ಶ್ಲೋಕದಲ್ಲಿ ವಿವರಿಸಿದ ಮೂರೂ ಗುಣಗಳನ್ನು ಹೊಂದಿದವನು ಕರ್ಮವನ್ನು ಆಚರಿಸಿದರೂ ಅದರಿಂದ ಬಂಧಕ್ಕೆ ಸಿಕ್ಕುವುದಿಲ್ಲ .

ಯದೃಚ್ಛಾಲಾಭ ಸಂತುಷ್ಟತೆ , ದ್ವಂದ್ವಾತೀತತೆ , ವಿಮತ್ಸರತೆ ಈ ಮೂರು ಮನಸ್ಸು-ಚಿತ್ತಗಳನ್ನು ನಿಗ್ರಹಿಸಿದವನ ಲಕ್ಷಣಗಳೆಂದು ಹೇಳಿದಂತಾಯಿತು .

**ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥ 23 ॥**

**ಅರ್ಥ**- ಕರ್ಮಫಲದಲ್ಲಿ ಆಸಕ್ತಿ ಇಲ್ಲದೆ, ದೇಹಾದಿಗಳಲ್ಲಿ ಅಭಿಮಾನವನ್ನು, ಸ್ವಾತಂತ್ರ್ಯಾಭಿಮಾನವನ್ನೂ ಬಿಟ್ಟು , ವಿಷ್ಣು ಜ್ಞಾನದಲ್ಲಿಯೇ ಆಸಕ್ತವಾದ ಮನಸ್ಸುಳ್ಳವನಾಗಿ, 'ವಿಷ್ಣುವು ಸಂತುಷ್ಟನಾಗಲಿ' ಎಂಬ ಉದ್ದೇಶದಿಂದಲೇ ಕರ್ಮವನ್ನು ಆಚರಿಸುವವನ ಕರ್ಮವೆಲ್ಲವೂ ಲಯವಾಗುವುದು ಎಂದರೆ ಬಂಧಕವಾಗದೇ ಸಾಧಕವೇ ಆಗುವುದು.

ವಿಕ್ಷಿಪ್ಯ ಪ್ರಾಗುಕ್ತಂ ಪಿಂಡೀಕೃತ್ಯ ದರ್ಶಯತಿ – **ಗತಸಂಗಸ್ಯೇತಿ ॥** ಗತಸಂಗಸ್ಯ ಫಲಸ್ನೇಹರಹಿತಸ್ಯ । ಮುಕ್ತಸ್ಯ ದೇಹಾದ್ಯಭಿಮಾನಹೀನಸ್ಯ । ಸ್ವಾತಂತ್ರ್ಯಾಭಿಮಾನ-ಹೀನಸ್ಯೇತಿ ವಾ । ಜ್ಞಾನಾವಸ್ಥಿತಚೇತಸಃ ವಿಷ್ಣುಜ್ಞಾನೇಽಭಿನಿವಿಷ್ಟಚಿತ್ತಸ್ಯ । ಯಜ್ಞಾಯ ವಿಷ್ಣವೇ ತತ್ಪ್ರೀತ್ಯರ್ಥಂ ಕರ್ಮಾಚರತಃ ಕುರ್ವತಃ ಕರ್ಮ ಪ್ರವಿಲೀ-ಯತೇ ಬಂಧಕಂ ನ ಭವತೀತ್ಯರ್ಥಃ । 'ಯಸ್ಯೇತ್ಯಾದಿನಾ' ಯತ್ಕಾಮಾದಿ-ವರ್ಜನಮುಕ್ತಂ 'ತದ್, 'ಗತಸಂಗಸ್ಯೇ'ತ್ಯನೇನ 'ತ್ಯಕ್ತಸರ್ವಪರಿಗ್ರಹ' ಇತ್ಯೇತತ್' 'ಮುಕ್ತ'ಸ್ಯೇತ್ಯನೇನ 'ಕರ್ಮಣ್ಯಕರ್ಮೇತಿ', 'ನಿತ್ಯತೃಪ್ತ' ಇತಿ ಚ 'ಜ್ಞಾನಾವಸ್ಥಿತ-ಚೇತಸ' ಇತ್ಯನೇನ ಪಿಂಡೀಕೃತ್ಯ ಪ್ರದರ್ಶಿತಂ ಧ್ಯೇಯಮ್ ॥ 23 ॥

**ಅನುವಾದ** – ಹಿಂದಿನ ಶ್ಲೋಕಗಳಲ್ಲಿ ಬೇರೆ ಬೇರೆಯಾಗಿ ಹೇಳಿದ ಸತ್ಕರ್ಮಸ್ವರೂಪವನ್ನು ಒಟ್ಟುಗೂಡಿಸಿ ಹೇಳುತ್ತಾನೆ – '**ಗತಸಂಗಸ್ಯ**......' ಮುಂತಾದ ಶ್ಲೋಕದಿಂದ.

'**ಗತಸಂಗಸ್ಯ**'= ಕರ್ಮಫಲದಲ್ಲಿ ಆಸಕ್ತಿ ಇಲ್ಲದವನಿಗೆ '**ಮುಕ್ತಸ್ಯ**'= ದೇಹ ಇಂದ್ರಿಯಾದಿ ಗಳಲ್ಲಿ ಅಭಿಮಾನವಿಲ್ಲದವನಿಗೆ , ಅಥವಾ ತಾನೇ ಸ್ವತಂತ್ರಕರ್ತಾ ಎಂಬ ಅಭಿಮಾನವಿಲ್ಲದವನಿಗೆ '**ಜ್ಞಾನಾವಸ್ಥಿತ ಚೇತಸಃ**'= ವಿಷ್ಣು ಜ್ಞಾನದಲ್ಲಿಯೇ ಆಸಕ್ತವಾದ ಮನಸ್ಸುಳ್ಳವನಿಗೆ , '**ಯಜ್ಞಾಯ**' ವಿಷ್ಣುವಿನ ಪ್ರೀತಿಗಾಗಿ '**ಕರ್ಮ ಆಚರತಃ**' = ಕರ್ಮಾನುಷ್ಠಾನವನ್ನು ಮಾಡುವವನಿಗೆ '**ಸಮಗ್ರಂ ಕರ್ಮ ಪ್ರವಿಲೀಯತೇ**'= ಎಲ್ಲಾ ಕರ್ಮವೂ ಲಯ ಹೊಂದುವುದು ಎಂದರೆ ಸಂಸಾರ ಬಂಧಕವಾಗುವುದಿಲ್ಲ.

'**ಯಸ್ಯ ಸರ್ವೇ ಸಮಾರಂಭಾಃ**' ಎಂಬುವುದರಿಂದ (19ನೇ ಶ್ಲೋಕದಿಂದ) ಹೇಳಿದ ಕಾಮಸಂಕಲ್ಪಾದಿಗಳ ತ್ಯಾಗಗಳನ್ನು ಈ ಶ್ಲೋಕದಲ್ಲಿ '**ಗತಸಂಗಸ್ಯ**' ಎಂಬ ಪದದಿಂದ

ಸಂಗ್ರಹಿಸಲಾಗಿದೆ. 'ತ್ಯಕ್ತಸರ್ವಪರಿಗ್ರಹಃ' (ಶ್ಲೋಕ 21) ಎಂದು ಹೇಳಿದ ಶರೀರ ಇಂದ್ರಿಯಗಳ ಅಭಿಮಾನ ರಾಹಿತ್ಯವನ್ನು ಈ ಶ್ಲೋಕದಲ್ಲಿ 'ಮುಕ್ತಸ್ಯ' ಎಂಬ ಪದದಿಂದ ಹೇಳಲಾಗಿದೆ.

'ಕರ್ಮಣ್ಯಕರ್ಮ' (ಶ್ಲೋಕ 20) ಎಂಬುದರಿಂದ ಹೇಳಿದ 'ಭಗವಂತನೇ ಸ್ವತಂತ್ರಕರ್ತಾ, ನಿತ್ಯತೃಪ್ತನು. ಅವನ ಪ್ರತಿಬಿಂಬನಾದ ನಾನೂ ಅವನ ಅಧೀನವಾದ ಕರ್ತೃತ್ವವನ್ನು , ನಿತ್ಯತೃಪ್ತಿಯನ್ನೂ ಪಡೆದಿದ್ದೇನೆಂಬ' ವಿಚಾರವನ್ನು ಈ ಶ್ಲೋಕದಲ್ಲಿ 'ಜ್ಞಾನಾವಸ್ಥಿತ ಚೇತಸಃ' ಎಂಬ ಪದದಿಂದ ಸಂಗ್ರಹಿಸಲಾಗಿದೆ.

## ಯಜ್ಞ ಸಾಧನಗಳಲ್ಲಿ ಬ್ರಹ್ಮಾನುಸಂಧಾನ ಇರುವವಗೆ - ಬ್ರಹ್ಮಪ್ರಾಪ್ತಿ

**ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥ 24 ॥**

**ಅರ್ಥ** - ಯಜ್ಞದಲ್ಲಿ ಹವಿಸ್ಸನ್ನು ಅರ್ಪಿಸುವ ಪಾತ್ರೆ , ಸೌಟು, ಮುಂತಾದುದು ಬ್ರಹ್ಮನ ಅಧೀನವಾಗಿದೆ. ಹವಿಸ್ಸೂ ಅವನ ಅಧೀನ. ಅಗ್ನಿಯಲ್ಲಿಯೂ ಆ ಬ್ರಹ್ಮನೇ ಇರುವನು. ಆಹುತಿಯನ್ನು ಹೋಮಿಸುವುದೂ ಆ ಬ್ರಹ್ಮನಲ್ಲಿಯೇ. ಧ್ಯಾನಸಹಿತವಾದ ಹೋಮಾದಿಕರ್ಮವೂ ಕೂಡಾ ಬ್ರಹ್ಮನ ಅಧೀನವಾಗಿದೆ. ಈ ರೀತಿ ಎಲ್ಲವೂ ಬ್ರಹ್ಮನ ಅಧೀನವಾಗಿದೆ ಎಂದು ತಿಳಿದು ಯಾರು ಕರ್ಮಾನುಷ್ಠಾನವನ್ನು ಮಾಡುವನೋ ಅವನು ಮಾತ್ರವೇ ಬ್ರಹ್ಮನನ್ನು ಹೊಂದುವನು.

**ಏವಂ 'ತತ್ತೇ ಕರ್ಮ ಪ್ರವಕ್ಷ್ಯಾಮೀತಿ' ಪ್ರತಿಜ್ಞಾತಂ ಕರ್ಮಸ್ವರೂಪಂ ಸಂಕ್ಷೇಪವಿಸ್ತಾರಾಭ್ಯಾಂ ಪ್ರತಿಪಾದ್ಯ 'ಗತಸಂಗಸ್ಯ' ಇತ್ಯನೇನೋಪಸಂಹೃತ್ಯಾಧುನಾ ಜ್ಞಾನಾವಸ್ಥಿತಚೇತಸ್ತ್ವಂ ಸ್ಪಷ್ಟಯತಿ- ಬ್ರಹ್ಮೇತಿ ॥ ಅರ್ಪ್ಯತೇ ಸಮರ್ಪ್ಯತೇಽ-ನೇನೇತ್ಯರ್ಪಣಂ ದರ್ವೀಪಿಠರಾದಿ । ಅರ್ಪಣಹವಿರಗ್ನೀನಾಂ ಬ್ರಹ್ಮಾಭೇದ ಉಚ್ಯತೇ ಬ್ರಹ್ಮ ಚ ತದರ್ಪಣಂ ಚೇತ್ಯಾದಿವ್ಯುತ್ಪತ್ತೇಃ । ತಥಾ ಸಮಾಧಿನಾ ಸಹ ಸಹಿತಂ ಕರ್ಮ ಚಾಗ್ನಿಹೋತ್ರಾದಿ ಬ್ರಹ್ಮೇತಿ ಕರ್ಮಸಮಾಧ್ಯೋರಪಿ । ತಥಾ ಬ್ರಹ್ಮಣಾ ಹುತಮಿತ್ಯತ್ರಾಪಿ ಪ್ರಾಯಪಾಠಾದ್ಬ್ರಹ್ಮೈವ ಹುತಮಿತಿ ಹೋಮಸ್ಯಾಪಿ ಬ್ರಹ್ಮಾಭೇದಃ । ಸ ತು ಅರ್ಪಣಾದಿಸತ್ತಾಪ್ರತೀತ್ಯಾದೇರ್ಬ್ರಹ್ಮಾಧೀನತ್ವಾಭಿ-ಪ್ರಾಯೇಣ । 'ತ್ವದಧೀನಂ ಯತಸ್ಸರ್ವಮತಃ ಸರ್ವೋ ಮತೋ ಭವಾನ್' (ಪಾದ್ಮೇ) ಇತ್ಯಾದೇಃ ।' ಇತಿ ಮಾಂ ಯೋಽಭಿಜಾನಾತೀತಿ ಶ್ಲೋಕಾಂತೇ ಶೇಷಃ । ತೇನೈವ ಬ್ರಹ್ಮ ಗಂತವ್ಯಮಿತ್ಯನ್ವಯಃ । ಏತೇನ ಜ್ಞಾನಾವಸ್ಥಿತಚೇತಃ-ಪದೋಕ್ತಂ ಪರಮೇಶ್ವರಜ್ಞಾನಮೇವಂ ರೂಪಮಿತಿ ಸ್ಪಷ್ಟೀಕೃತಂ ಭವತಿ । ಯದ್ವಾ**

**ಬ್ರಹ್ಮಣಾ ಹುತಮಿತಿ ಅಸಾಮಾನಾಧಿಕರಣ್ಯನಿರ್ದೇಶಪ್ರಾಯಪಾಠಾತ್ ಬ್ರಹ್ಮಣ್ಯರ್ಪಣಂ ಬ್ರಹ್ಮಣೋ ಹವಿಃ ಬ್ರಹ್ಮಣೋಽಗ್ನೌ । ಬ್ರಹ್ಮಣಃ ಕರ್ಮ ಬ್ರಹ್ಮ-ಕರ್ಮ । ನ ಕೇವಲಂ ಕರ್ಮಮಾತ್ರಂ ಬ್ರಹ್ಮಣಃ ಕಿಂತು ಸಮಾಧಿನಾ ಸಹಿತಂ ಕರ್ಮ ಬ್ರಹ್ಮಣ ಇತ್ಯರ್ಥಃ । ಅರ್ಪಣಾದಿಕಂ ಸರ್ವಂ ತತ್ಸ್ವಾಮಿಕಮಿತಿ ಯೋ ಜಾನಾತಿ ತೇನ ಬ್ರಹ್ಮ ಗಂತವ್ಯಮಿತಿ ಯೋಜನಾ । ಏತೇನ ಪ್ರಾಙ್‌ಮುಕ್ತಪದೇನೋಕ್ತ-ಸ್ವಾತಂತ್ರ್ಯಾಭಿಮಾನತ್ಯಾಗಃ ಕರ್ಮಾಂಗಮುಕ್ತಃ ಸ ಕುತ್ರ ಕಾರ್ಯಃ । ತ್ಯಕ್ತ-ಸ್ವಾತಂತ್ರ್ಯಾಭಿಮಾನಂ ಚ ವಸ್ತು ಕಿಮಧೀನಂ ಜ್ಞೇಯಮ್ । ಯಜ್ಞಾಯೇತ್ಯುಕ್ತ-ಯಜ್ಞಾರ್ಥತ್ವಂ ಚ ಕಿಮಿತಿ ಶಂಕಾತ್ರಯಂ ನಿರಸ್ತಮ್ । ಹವಿರಾದೌ ಸ್ವಾತಂತ್ರ್ಯಾ-ಭಿಮಾನತ್ಯಾಗಬ್ರಹ್ಮಾಧೀನತ್ವಯೋಃ, ವಿಷ್ಣ್ವರ್ಪಣಮೇವ ಯಜ್ಞಾರ್ಥತ್ವಮಿತ್ಯಸ್ಯ ಚಾತ್ರ ಪ್ರತೀತೇರಿತಿ ॥ 24 ॥**

**ಅನುವಾದ** – ಹೀಗೆ '**ತತ್ತೇ ಕರ್ಮ ಪ್ರವಕ್ಷ್ಯಾಮಿ**' ಎಂದು ಹದಿನಾರನೇ ಶ್ಲೋಕದಲ್ಲಿ ಪ್ರತಿಜ್ಞೆ ಮಾಡಿದ ಕರ್ಮಸ್ವರೂಪ ನಿರೂಪಣೆಯನ್ನು, ಸಂಕ್ಷೇಪ ಹಾಗೂ ವಿಸ್ತಾರವಾಗಿ ಮುಂದಿನ ಶ್ಲೋಕಗಳಲ್ಲಿ ನಿರೂಪಿಸಿ, '**ಗತಸಂಗಸ್ಯ** ' (23ನೇ ಶ್ಲೋಕ) ಎಂಬ ಶ್ಲೋಕದಿಂದ ಉಪಸಂಹಾರ ಮಾಡಿ , ಆ ಶ್ಲೋಕದಲ್ಲಿ ಬಂದ '**ಜ್ಞಾನಾವಸ್ಥಿತ ಚೇತಸಃ**'ಎಂಬುದರ ವಿವರಣೆಯನ್ನು ಈ ಶ್ಲೋಕದಲ್ಲಿ ಮಾಡುತ್ತಿದ್ದಾನೆ– 'ಬ್ರಹ್ಮ ' ಎಂದು.

1. '**ಬ್ರಹ್ಮಾರ್ಪಣಮ್**' – ಹೋಮದಲ್ಲಿ ಹವಿಸ್ಸನ್ನು ಅರ್ಪಿಸಲು ಬಳಸುವ ಸೌಟು, ಪಾತ್ರೆ, ಮೊದಲಾದವುಗಳನ್ನು 'ಅರ್ಪಣ'ವೆನ್ನುತ್ತಾರೆ . ಹೀಗೆ 'ಅರ್ಪಣ' ವೆನಿಸುವ ಸೌಟು , ಪಾತ್ರೆ ಮೊದಲಾದವುಗಳಿಗೆ ಬ್ರಹ್ಮನಿಂದ ಅಭೇದವನ್ನು 'ಬ್ರಹ್ಮಾರ್ಪಣಮ್' ಪದದಿಂದ ಹೇಳಲಾಗಿದೆ. (**ಅರ್ಪ್ಯತೇ = ಸಮರ್ಪ್ಯತೇ ಅನೇನ ಇತಿ 'ಅರ್ಪಣಮ್' ಬ್ರಹ್ಮ ಚ ತತ್ ಅರ್ಪಣಂ ಚ 'ಬ್ರಹ್ಮಾರ್ಪಣಮ್'** ಎಂದು ವಿಗ್ರಹವಾಕ್ಯ).

2. **ಬ್ರಹ್ಮಹವಿಃ** – ಹೋಮದಲ್ಲಿ ಅರ್ಪಿಸುವ ಹವಿಸ್ಸಿಗೂ ಬ್ರಹ್ಮನಿಗೂ ಅಭೇದವನ್ನು ಇಲ್ಲಿ ಹೇಳಲಾಗಿದೆ. (ಬ್ರಹ್ಮ ಚ ತತ್ ಹವಿಃ ಚ = ಬ್ರಹ್ಮಹವಿಃ)

3. **ಬ್ರಹ್ಮಾಗ್ನೌ** – (ಬ್ರಹ್ಮ ಚಾಸೌ ಅಗ್ನಿಶ್ಚ = ಬ್ರಹ್ಮಾಗ್ನಿಃ , ತಸ್ಮಿನ್ = ಬ್ರಹ್ಮಾಗ್ನೌ) ಯಜ್ಞ ಕುಂಡದ ಅಗ್ನಿಗೂ ಬ್ರಹ್ಮನಿಗೂ ಅಭೇದವನ್ನು ಇಲ್ಲಿ ಹೇಳಲಾಗಿದೆ.

4. **ಬ್ರಹ್ಮಕರ್ಮಸಮಾಧಿನಾ** – ಸಮಾಧಿ ಎಂದರೆ ಧ್ಯಾನ . ಧ್ಯಾನದಿಂದ ಕೂಡಿದ ಅಗ್ನಿಹೋತ್ರಾದಿ ಕರ್ಮವು 'ಕರ್ಮಸಮಾಧಿ' ಎನಿಸುವುದು. ಇಂತಹ ಕರ್ಮಸಮಾಧಿಗೂ ಬ್ರಹ್ಮನಿಗೂ ಅಭೇದವನ್ನು ಇಲ್ಲಿ ಹೇಳಲಾಗಿದೆ.

5. **'ಬ್ರಹ್ಮಣಾ ಹುತಮ್'** – ಬ್ರಹ್ಮನಿಂದ ಹೋಮಿಸಲ್ಪಟ್ಟದ್ದು ಎಂದು ಅಭಿಪ್ರಾಯ. ಇಲ್ಲಿ ಹೋಮ(ಹುತ)ಕ್ಕೂ ಬ್ರಹ್ಮನಿಗೂ ಅಭೇದವನ್ನು ಹೇಳಿಲ್ಲ. ಆದರೂ ಹಿಂದಿನ ನಾಲ್ಕೂ ಪದಗಳಲ್ಲಿ ಬ್ರಹ್ಮನಿಗೂ ಆಯಾಯಾ ಪದಾರ್ಥಗಳಿಗೂ ಅಭೇದವನ್ನು ಹೇಳಿರುವುದರಿಂದ , ಅದಕ್ಕೆ ವಿರೋಧ ಬಾರದಂತೆ ಇಲ್ಲಿಯೂ ಬ್ರಹ್ಮಾಭೇದವನ್ನೇ ಹೇಳಬೇಕು . ಆಗ **'ಬ್ರಹ್ಮಣಾ ಹುತಮ್'** ಎಂದರೆ ಹೋಮವೂ ಬ್ರಹ್ಮವಾಗಿದೆ ಎಂದು ಅರ್ಥವಾಗುತ್ತದೆ .

ಹೀಗೆ, ಸೌಟು, ಪಾತ್ರೆ, ಮೊದಲಾದ ಹೋಮಸಾಧನಗಳಿಗೂ, ಹವಿಸ್ಸಿಗೂ, ಹೋಮಾಗ್ನಿಗೂ, ಹೋಮಕ್ಕೂ , ಧ್ಯಾನಸಹಿತ ಅಗ್ನಿಹೋತ್ರಾದಿ ಕರ್ಮಕ್ಕೂ ಬ್ರಹ್ಮನಿಂದ ಅಭೇದವನ್ನು ಹೇಳಿದ್ದು. ಆ ಜಡವಾದ ಪದಾರ್ಥಗಳ ಅಸ್ತಿತ್ವ , ಪ್ರವೃತ್ತಿ ಮೊದಲಾದವುಗಳು ಬ್ರಹ್ಮನ ಅಧೀನವಾಗಿವೆ ಎಂಬ ಅಭಿಪ್ರಾಯದಿಂದ. **'ತ್ವದಧೀನಂ ಯತಃ ಸರ್ವಂ ಅತಃ ಸರ್ವೋ ಮತೋ ಭವಾನ್'** (ಎಲ್ಲವೂ ನಿನ್ನ ಅಧೀನವಾದ್ದರಿಂದ ನೀನೇ ಎಲ್ಲವೂ ಆಗಿರುವಿ) ಎಂಬ ಪಾದ್ಮಪುರಾಣದ ಮಾತು ಈ ಅಭಿಪ್ರಾಯವನ್ನು ಪುಷ್ಟೀಕರಿಸುತ್ತದೆ.

**'ಇತಿ ಮಾಂ ಯಃ ಅಭಿಜಾನಾತಿ'** (ಈ ರೀತಿ ಯಾರು ನನ್ನನ್ನು ತಿಳಿಯುತ್ತಾರೋ) ಎಂಬ ಪದಪುಂಜವನ್ನು ಈ ಶ್ಲೋಕದ ಕಡೆಯಲ್ಲಿ ಸೇರಿಸಿಕೊಂಡು, ಆ ಪದಪುಂಜಕ್ಕೆ **'ಬ್ರಹ್ಮ ಏವ ತೇನ ಗಂತವ್ಯಮ್'** ಎಂಬಲ್ಲಿ ಅನ್ವಯವನ್ನು ಹೇಳಬೇಕು.

(ಒಟ್ಟು ಶ್ಲೋಕದ ಅಭಿಪ್ರಾಯವನ್ನು ಶ್ಲೋಕದ ಆರಂಭದಲ್ಲಿ ನೀಡಲಾಗಿದೆ.)

ಹೋಮ–ಪಾತ್ರಾದಿ ಸಕಲ ಸಾಧನ–ಸಾಧ್ಯಗಳೆಲ್ಲವೂ ಭಗವಂತನ ಅಧೀನವೆಂದು ತಿಳಿಯುವುದೇ ಜ್ಞಾನವು. ಅದನ್ನು ಮನಸ್ಸಿನಲ್ಲಿ ದೃಢಪಡಿಸಿಕೊಂಡವನೇ, **'ಜ್ಞಾನಾವಸ್ಥಿತ ಚೇತಸ'** ಎಂದು ವಿವರಿಸಿದಂತಾಯಿತು .

**ತಾತ್ಪರ್ಯದ ಕ್ರಮದಲ್ಲಿ ವಿವರಣೆ–**

**'ಬ್ರಹ್ಮಣಾ ಹುತಮ್'** ಎಂದು ವಿಭಿನ್ನ ವಿಭಕ್ತಿ ಪದಗಳ ನಿರ್ದೇಶಕ್ಕೆ ಅನುಗುಣವಾಗಿ, **'ಬ್ರಹ್ಮಾರ್ಪಣಮ್'** ಮೊದಲಾದ ಸಮಸ್ತಪದದಲ್ಲಿ ವಿಭಿನ್ನ ವಿಭಕ್ತಿಗಳನ್ನು ಸ್ವೀಕರಿಸಿ ಅರ್ಥ ಹೇಳಬೇಕು . ಹೇಗೆಂದರೆ –

**'ಬ್ರಹ್ಮಾರ್ಪಣಮ್'** – **ಬ್ರಹ್ಮಣಿ +ಅರ್ಪಣಮ್ = ಬ್ರಹ್ಮಾರ್ಪಣಮ್** . ಸೌಟು, ಪಾತ್ರೆ, ಮೊದಲಾದ ಹೋಮ ಸಾಧನಗಳು ಬ್ರಹ್ಮನಲ್ಲಿ ಆಶ್ರಯಿಸಿಕೊಂಡಿವೆ ಎಂದು ಅರ್ಥ.

**'ಬ್ರಹ್ಮಹವಿಃ'** – **ಬ್ರಹ್ಮಣಃ + ಹವಿಃ = ಬ್ರಹ್ಮಹವಿಃ** , ತುಪ್ಪ ಮೊದಲಾದ ಹವಿಸ್ಸುಗಳಿಗೆ ಬ್ರಹ್ಮನೇ ಸ್ವಾಮಿ ಎಂದರ್ಥ.

**'ಬ್ರಹ್ಮಾಗ್ನೌ'** – **ಬ್ರಹ್ಮಣಃ + ಅಗ್ನಿಃ = ಬ್ರಹ್ಮಾಗ್ನಿಃ , ತಸ್ಮಿನ್ = ಬ್ರಹ್ಮಾಗ್ನೌ** , ಹೋಮದಲ್ಲಿ ಉಪಯೋಗಿಸುವ ಅಗ್ನಿಗೂ ಬ್ರಹ್ಮನೇ ಸ್ವಾಮಿ ಎಂದರ್ಥ.

**'ಬ್ರಹ್ಮಣಾ ಹುತಮ್'**– ಇದು ಸಮಸ್ತ ಪದವಲ್ಲ . ಎರಡೂ ಪದಗಳು ಕ್ರಮವಾಗಿ ತೃತೀಯಾ ಹಾಗೂ ಪ್ರಥಮಾ ವಿಭಕ್ತಿಯಲ್ಲಿವೆ. ಯಜ್ಞಯಾಗಾದಿಗಳು ಬ್ರಹ್ಮನಿಂದಲೇ ನಡೆಯುತ್ತವೆ ಎಂದು ಅಭಿಪ್ರಾಯ.

**'ಬ್ರಹ್ಮಕರ್ಮಸಮಾಧಿನಾ'** – **'ಬ್ರಹ್ಮಣಃ ಕರ್ಮ ಸಮಾಧಿನಾ '** ಧ್ಯಾನ ಸಹಿತವಾದ ಅಗ್ನಿಹೋತ್ರಾದಿಗಳಿಗೂ ಬ್ರಹ್ಮನೇ ಸ್ವಾಮಿ ಎಂದು ಅಭಿಪ್ರಾಯ.

ಹೀಗೆ ಯಜ್ಞಸಾಧನ – ಸಾಧ್ಯಗಳಿಗೆಲ್ಲಾ ಬ್ರಹ್ಮನೇ ಸ್ವಾಮಿ ಎಂದು ಅರಿತವನು ಮಾತ್ರವೇ ಬ್ರಹ್ಮನನ್ನು ಹೊಂದುವನು . ಶ್ಲೋಕದ ಪದಗಳಿಗೆ ಹೀಗೆ ಯೋಜನೆಯನ್ನು ಹೇಳಬೇಕು.

ಹಿಂದಿನ ಶ್ಲೋಕದಲ್ಲಿ ಬರುವ ಮೂರು ಪ್ರಶ್ನೆಗಳಿಗೆ ಸಮಾಧಾನವನ್ನು ಈ ಶ್ಲೋಕದಿಂದ ಹೇಳಿದಂತೆ ಆಗುವುದು . ಆ ಪ್ರಶ್ನೆಗಳೂ ಹಾಗೂ ಉತ್ತರಗಳೂ ಕೆಳಕಂಡಂತೆ ಇವೆ.

**ಪ್ರಶ್ನೆ 1** ಹಿಂದಿನ ಶ್ಲೋಕದಲ್ಲಿ **'ಮುಕ್ತಃ'** ಎಂಬ ಪದದಿಂದ ಸ್ವಾತಂತ್ರ್ಯ ಅಭಿಮಾನವನ್ನು ಬಿಡುವುದು ಸತ್ಕರ್ಮದ ಅಂಗವೆಂದು ಹೇಳಲಾಗಿದೆ. ಯಾವ ವಿಷಯದಲ್ಲಿ ಸ್ವಾತಂತ್ರ್ಯ ಅಭಿಮಾನವನ್ನು ಬಿಡಬೇಕು ?

**ಉತ್ತರ–** ಯಜ್ಞಸಾಧನವಾದ ಸೌಟು, ಪಾತ್ರೆ ಮೊದಲಾದವುಗಳಲ್ಲಿ, ತುಪ್ಪ ಮೊದಲಾದ ಹವಿಸ್ಸುಗಳಲ್ಲಿ , ಯಜ್ಞದ ಅಗ್ನಿಯಲ್ಲಿ , ಯಜ್ಞದಲ್ಲಿ , ಧ್ಯಾನಸಹಿತವಾದ ಅಗ್ನಿಹೋತ್ರಾದಿ ಕರ್ಮಗಳಲ್ಲಿ ಸ್ವಾತಂತ್ರ್ಯಾಭಿಮಾನವನ್ನು ಬಿಡಬೇಕು. **ಬ್ರಹ್ಮಾರ್ಪಣಮ್, ಬ್ರಹ್ಮಹವಿಃ, ಬ್ರಹ್ಮಾಗ್ನೌ , ಬ್ರಹ್ಮಣಾ ಹುತಮ್, ಬ್ರಹ್ಮಕರ್ಮ ಸಮಾಧಿನಾ**'ಎಂಬ ಪದಗಳಿಂದ ಮೇಲಿನ ಉತ್ತರವನ್ನು ತಿಳಿಸಲಾಗಿದೆ.

**ಪ್ರಶ್ನೆ 2** ಯಜ್ಞಸಾಧನ–ಸಾಧ್ಯಗಳಲ್ಲಿ ನಾವು ಸ್ವಾತಂತ್ರ್ಯ–ಅಭಿಮಾನವನ್ನು ತೊರೆದು ಬಳಿಕ, ಆ ವಸ್ತುಗಳನ್ನು ಯಾರ ಅಧೀನವೆಂದು ತಿಳಿಯಬೇಕು ?

**ಉತ್ತರ–** ಯಜ್ಞಸಾಧನ–ಸಾಧ್ಯಗಳೆಲ್ಲವೂ ಬ್ರಹ್ಮನ ಅಧೀನವೆಂದು ತಿಳಿಯಬೇಕು. ಮೊದಲನೆಯ ಉತ್ತರದಲ್ಲಿ ಹೇಳಿದ ಪದಗಳೇ ಈ ಅಭಿಪ್ರಾಯವನ್ನು ಸೂಚಿಸುತ್ತವೆ.

**ಪ್ರಶ್ನೆ 3** ಹಿಂದಿನ ಶ್ಲೋಕದಲ್ಲಿ **'ಯಜ್ಞಾಯ ಆಚರತಃ ಕರ್ಮ'** ಎಂದು ಕರ್ಮಗಳನ್ನು ಯಜ್ಞನ ಪ್ರೀತಿಗಾಗಿ ಆಚರಿಸಿ, ಯಜ್ಞನಿಗೆ ಅರ್ಪಿಸಬೇಕೆಂದು ಹೇಳಲಾಗಿದೆ. ಆ ಯಜ್ಞ ಯಾರು ?

ಉತ್ತರ– ಬ್ರಹ್ಮಪದವಾಚ್ಯನಾದ ವಿಷ್ಣುವೇ 'ಯಜ್ಞ'ನಾಗಿದ್ದಾನೆ. 'ಬ್ರಹ್ಮಾರ್ಪಣಮ್' ಮುಂತಾದ ಪದಗಳು ಇದನ್ನು ಸೂಚಿಸುತ್ತವೆ.

## ಯಜ್ಞದ ಪ್ರಭೇದಗಳು

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥ 25 ॥**

**ಅರ್ಥ**– ಯತಿಗಳೆಂಬ ಕೆಲವು ಯೋಗಿಗಳು ಭಗವಂತನ ಉಪಾಸನೆಯನ್ನೇ ಯಜ್ಞವೆಂದು ಆಚರಿಸುವರು ಮತ್ತು ಪರಮಾತ್ಮನನ್ನೇ ಯಜ್ಞರೂಪನೆಂದು ಉಪಾಸನೆ ಮಾಡುತ್ತಾರೆ. ಇನ್ನು ಕೆಲವು ಯೋಗಿಗಳು ಭಗವಂತನೆಂಬ ಅಗ್ನಿಯಲ್ಲಿ ಅಗ್ನಿಹೋತ್ರಾದಿ ಹೋಮಗಳನ್ನು ಮಾಡುತ್ತಾ, ಆ ಹೋಮಾದಿಗಳು ಪರಮಾತ್ಮನ ಅಧೀನವೆಂದು ಚಿಂತಿಸುತ್ತಾ, ಆ ಭಗವಂತನಿಗೇ ಸಮರ್ಪಿಸುತ್ತಾರೆ.

ಪೂರ್ವಂ ಭಗವದಧೀನಕರ್ತೃತ್ವಾನುಸಂಧಾನಪೂರ್ವಂ ತತ್ಪ್ರೀತ್ಯುದ್ದೇಶೇನ ವರ್ಣಾಶ್ರಮವಿಹಿತಾನುಷ್ಠಾನಂ ಕರ್ಮೇತಿ ಸಾಮಾನ್ಯತಃ ಕರ್ಮಸ್ವರೂಪಮುಕ್ತಂ ತದ್ಯಜ್ಞಾದಿಭೇದಭಿನ್ನಮಿತ್ಯಾಹ– **ದೈವಮಿತಿ** ॥ ದೈವಂ ವಿಷ್ಣುಂ ಯಜ್ಞಂ ಯಥಾ ಭವತಿ ತಥಾಽಽಪರೇ ಕೇಚನ ಯೋಗಿನೋ ಯತಯಃ ಪರ್ಯುಪಾಸತೇ । ಯಜ್ಞಪದಮತ್ರೋಪಾಸನರೂಪಕ್ರಿಯಾವಿಶೇಷಣಮ್ । ದೈವಮೇವೇತ್ಯೇವಕಾರೋಽಪಿ ಕ್ರಿಯಯೈವಾನ್ವೇತಿ । ಭಗವದುಪಾಸನಮೇವ ಯಜ್ಞತಯಾಽನುತಿಷ್ಠಂತಿ ಕೇಚಿದ್ಯತಯ ಇತ್ಯರ್ಥಃ । ಏತೇನಾಯಜ್ಞಸ್ಯೇತ್ಯಾದಿನಾ ಯಜ್ಞಾದಿಹೀನಸ್ಯ 'ನಾಯಂ ಲೋಕೋಽಸ್ತೀತಿ' ವಕ್ಷ್ಯಮಾಣತಯಾ ಯತ್ಯಾಶ್ರಮವಿಲೋಪಪ್ರಸಂಗ ಇತಿ ಶಂಕಾ ನಿರಸ್ತಾ । ತೇಷಾಮಪಿ ಭಗವದುಪಾಸನಾರೂಪಯಜ್ಞಸತ್ತ್ವಾದಿತಿ । ಯದ್ವಾ ದೈವಂ ಯಜ್ಞಮಿತಿ ಸಾಮಾನಾಧಿಕರಣ್ಯಮ್ । ಯಜ್ಞರೂಪಂ ಭಗವಂತಂ ಯೋಗಿನಃ ಪರ್ಯುಪಾಸತೇ ಯಜ್ಞತ್ವೇನೋಪಾಸತೇ । ತೇಷಾಂ ತಥೋಪಾಸನಮೇವ ಯಜ್ಞ ಇತಿ ಭಾವಃ । ಭಗವತಃ ಸ್ವಾನಂದರೂಪಹವಿರ್ಭೋಕ್ತೃತ್ವಾತ್ಸ್ವಸ್ಯೈವಾಗ್ನಿರೂಪತ್ವಾಚ್ಚೇತಿ ಜ್ಞೇಯಮ್ । ಬ್ರಹ್ಮಾಗ್ನೌ ಬ್ರಹ್ಮಾಖ್ಯಾಗ್ನೌ ಯಜ್ಞೇನಾಗ್ನಿಹೋತ್ರಾದಿಯಜ್ಞೇನ ಯಜ್ಞಂ ಭಗವಂತಂ ಪ್ರತಿ ಜುಹ್ವತಿ । ಯದ್ವಾ ಬ್ರಹ್ಮಾಗ್ನೌ ಯಜ್ಞಮಗ್ನಿಹೋತ್ರಾದಿಕಂ ಯಜ್ಞೇನೈವ ಯಜ್ಞನಾಮಕೇನ ಭಗವತಾ ನಿಮಿತ್ತೇನ ಜುಹ್ವತಿ ಸಮರ್ಪಯಂತಿ । ಸರ್ವಂ ಯಜ್ಞನಾಮಕವಿಷ್ಣ್ವಧೀನಂ ಜ್ಞಾತ್ವಾ

**ಸ್ವಸ್ಯ ಸ್ವಾತಂತ್ರ್ಯಾಭಿಮಾನತ್ಯಾಗೇನ ಕೃತಂ ಕರ್ಮ ವಿಷ್ಣೌ ಸಮರ್ಪಯಂತೀತಿ ಯಾವತ್ । ಯಜ್ಞೇನೈವೇತ್ಯಗ್ರೇ ಸರ್ವತ್ರಾನ್ವೇತಿ ॥ 25 ॥**

**ಅನುವಾದ -** ಹಿಂದೆ ಭಗವಂತನ ಅಧೀನವಾದ ಕರ್ತೃತ್ವದ ಅನುಸಂಧಾನದೊಂದಿಗೆ, ಭಗವಂತನ ಪ್ರೀತಿಯ ಉದ್ದೇಶದಿಂದ ಮಾಡುವ, ವರ್ಣಾಶ್ರಮಗಳಿಗೆ ವಿಹಿತವಾದ ಅನುಷ್ಠಾನವೇ 'ಕರ್ಮ'ವೆಂದು , ಸಾಮಾನ್ಯವಾಗಿ ಕರ್ಮಸ್ವರೂಪವನ್ನು ವಿವರಿಸಿ, 'ಯಜ್ಞ'ವೆಂದು ಕರೆಯುವ ಆ ಕರ್ಮದ ಪ್ರಭೇದಗಳನ್ನು ವಿವರಿಸುತ್ತಾನೆ 'ದೈವಮೇವಾಪರೆ.....' ಮುಂತಾದ ಶ್ಲೋಕದಿಂದ . **'ದೈವಂ'** = ವಿಷ್ಣು , **'ಯಜ್ಞಮ್'** ಎಂಬುದು **'ಪರ್ಯುಪಾಸತೇ'** ಎಂಬ ಪದದಿಂದ ತಿಳಿಯುವ ಉಪಾಸನಾರೂಪ ಕ್ರಿಯೆಗೆ ವಿಶೇಷಣವು. **'ದೈವಮೇವ'** ಎಂಬಲ್ಲಿರುವ 'ಏವ'ಕಾರಕ್ಕೂ ಉಪಾಸನಾರೂಪ ಕ್ರಿಯೆಯಲ್ಲಿ ಅನ್ವಯವು. ಕೆಲವು ಯತಿಗಳಾದ ಯೋಗಿಗಳು ವಿಷ್ಣುವನ್ನು ಯಜ್ಞ ಹೇಗೋ ಹಾಗೆ ಚೆನ್ನಾಗಿ ಉಪಾಸನೆ ಮಾಡುತ್ತಾರೆ. ಅಂದರೆ ಭಗವಂತನ ಉಪಾಸನೆಯನ್ನೇ ಯಜ್ಞರೂಪವಾಗಿ ಅನುಷ್ಠಾನ ಮಾಡುತ್ತಾರೆ .

ಮುಂದೆ 31ನೇ ಶ್ಲೋಕದಲ್ಲಿ **'ನಾಯಂ ಲೋಕಃ ಅಸ್ತಿ ಅಯಜ್ಞಸ್ಯ'** ಎಂದು ಯಜ್ಞವಿಲ್ಲದವನಿಗೆ ಇಹಲೋಕವೂ, ಪರಲೋಕವೂ ಇಲ್ಲವೆಂದು ಹೇಳಲಾಗುತ್ತದೆ. ಯತಿಗಳಿಗಾದರೋ ಯಜ್ಞವಿಲ್ಲ . ಆದ್ದರಿಂದಲೇ ಅವರಿಗೆ ಇಹ-ಪರಲೋಕಗಳಿಲ್ಲ . ಅಂತಹ ಯತ್ಯಾಶ್ರಮವನ್ನು ಯಾರೂ ಸ್ವೀಕರಿಸಲಾರರು. ಹೀಗೆ ಯತ್ಯಾಶ್ರಮಲೋಪವಾಗುವ ಸಂದರ್ಭ ಬಂದೀತು ಎಂಬ ಆಶಂಕೆಯು ಈ ಶ್ಲೋಕದಿಂದ ನಿರಸ್ತವಾಯಿತು. ಯತಿಗಳಿಗೂ ಕೂಡ ಭಗವಂತನ ಉಪಾಸನೆಯೆಂಬ ಯಜ್ಞವಿರುವುದರಿಂದ ಯಾವ ಆಶಂಕೆಗೂ ಅವಕಾಶವಿಲ್ಲ.

## 'ದೈವಮೇವಾಪರೇ ಯಜ್ಞಮ್' ಎಂಬ ಶ್ಲೋಕಭಾಗಕ್ಕೆ ತಾತ್ಪರ್ಯದ ವಿವರಣೆ

'ದೈವಂ, ಯಜ್ಞಂ'- ಎಂಬೀಪದಗಳು ಸಮಾನವಿಭಕ್ತಿಯಲ್ಲಿ ಇವೆ. (ಎರಡೂ ದ್ವಿತೀಯಾ ವಿಭಕ್ತಿಯಲ್ಲಿವೆ.) **'ಅಪರೇ ಯೋಗಿನಃ' ಯಜ್ಞಂ ದೈವಂ ಯಜ್ಞತ್ವೇನ ಪರ್ಯುಪಾಸತೇ'** ಎಂದು ಅನ್ವಯ. ಮತ್ತೆ ಕೆಲವು ಯತಿಗಳು ಯಜ್ಞರೂಪಿಯಾದ ಭಗವಂತನನ್ನೇ ಯಜ್ಞ ದೃಷ್ಟಿಯಿಂದ ಆರಾಧಿಸುತ್ತಾರೆ . ಯಜ್ಞರೂಪೀ ಭಗವಂತನ ಉಪಾಸನೆಯೇ ಅವರ ಪಾಲಿಗೆ ಯಜ್ಞವೆಂದು ಅಭಿಪ್ರಾಯ.

ತನ್ನ ಸ್ವರೂಪಭೂತವಾದ ಆನಂದವೆಂಬ ಹವಿಸ್ಸನ್ನು ಉಣ್ಣುವ ಭಗವಂತ ತಾನೇ ಅಗ್ನಿಯಾಗಿದ್ದಾನೆಂದೂ ತಿಳಿಯಬೇಕು.

## ಉತ್ತರಾರ್ಧಕ್ಕೆ ಭಾಷ್ಯದಂತೆ ವಿವರಣೆ

'ಅಪರೇ ಬ್ರಹ್ಮಾಗ್ನೌ ಯಜ್ಞಂ ಯಜ್ಞೇನೈವ ಜುಹ್ವತಿ' ಎಂದು ಉತ್ತರಾರ್ಧವಾಕ್ಯದ ಅನ್ವಯ. ಮತ್ತೆ ಕೆಲವು ನಿವೃತ್ತಕರ್ಮಿಗಳಾದ ಗೃಹಸ್ಥರು ಪರಬ್ರಹ್ಮನೆಂಬ ಅಗ್ನಿಯಲ್ಲಿ ಅಗ್ನಿಹೋತ್ರಾದಿ ಯಜ್ಞದ ಮೂಲಕ ಯಜ್ಞರೂಪಿಯಾದ ಭಗವಂತನನ್ನು ಕುರಿತು ಹೋಮಿಸುತ್ತಾರೆ ಎಂದು ಗೀತಾಭಾಷ್ಯದಂತೆ ಅಭಿಪ್ರಾಯವಾಗಿದೆ.

ಅಥವಾ, ಮತ್ತೆ ಕೆಲವರು ಪರಮಾತ್ಮನೆಂಬ ಅಗ್ನಿಯಲ್ಲಿ , ಯಜ್ಞರೂಪಿ ಭಗವಂತನ ಅನುಗ್ರಹದಿಂದ, ಅವನ ಪ್ರೀತ್ಯರ್ಥವಾಗಿ ಮಾಡುತ್ತಿದ್ದೇವೆಂಬ ಅನುಸಂಧಾನದಿಂದ, ಅಗ್ನಿಹೋತ್ರಾದಿಯಜ್ಞವನ್ನು ಆಚರಿಸಿ, ಆ ಭಗವಂತನಿಗೇ ಸಮರ್ಪಿಸುತ್ತಾರೆ. ಎಲ್ಲವೂ ಯಜ್ಞನಾಮಕನಾದ ವಿಷ್ಣುವಿನ ಅಧೀನವೆಂದು ತಿಳಿದು , ತನ್ನ ಸ್ವಾತಂತ್ರ್ಯ ಅಭಿಮಾನವನ್ನು ತ್ಯಾಗ ಮಾಡಿ, ಆಚರಿಸಿದ ಕರ್ಮವನ್ನು ವಿಷ್ಣುವಿಗೇ ಸಮರ್ಪಿಸುತ್ತಾರೆಂದು ಭಾವ . ಈ ವಿವರಣೆಯು ಗೀತಾತಾತ್ಪರ್ಯಕ್ಕೆ ಅನುಗುಣವಾಗಿದೆ.

ಈ ವಿವರಣೆಯಲ್ಲಿ 'ಯಜ್ಞೇನ ಏವ' ಎಂಬ ಪದಗಳಿಗೆ 'ಯಜ್ಞರೂಪಿಯಾದ ಭಗವಂತನ ಅನುಗ್ರಹದಿಂದಲೇ' ಎಂದು ಅರ್ಥ. ಈ ಅಭಿಪ್ರಾಯದ 'ಯಜ್ಞೇನ ಏವ ' ಎಂಬ ಎರಡು ಪದಗಳನ್ನು ಮುಂದಿನ ಐದು ಶ್ಲೋಕಗಳಿಗೆ ಅನ್ವಯಿಸಿಕೊಳ್ಳಬೇಕು.

**ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।**
**ಶಬ್ದಾದೀನ್ವಿಷಯಾನನ್ಯೇ ಇಂದ್ರಿಯಾಗ್ನಿಷು ಜುಹ್ವತಿ ॥ 26 ॥**

**ಅರ್ಥ**- ಮತ್ತೆ ಕೆಲವರು ಕಣ್ಣು , ಕಿವಿ, ನಾಲಿಗೆ, ಮೂಗು, ಚರ್ಮ ಎಂಬ ಐದು ಜ್ಞಾನೇಂದ್ರಿಯಗಳನ್ನು ಭಗವಂತನ ಅಧೀನವೆಂದು ತಿಳಿದು, ಅಭಿಮಾನವನ್ನು ತೊರೆದು, ಆಯಾ ಇಂದ್ರಿಯಗಳ ಸಂಯಮಗಳೆಂಬ ಅಗ್ನಿಗಳಲ್ಲಿ ಹೋಮಿಸುತ್ತಾರೆ . ಮತ್ತೆ ಕೆಲವರು ರೂಪ, ರಸ, ಶಬ್ದ , ಸ್ಪರ್ಶ, ಗಂಧಗಳೆಂಬ ಐದು ವಿಷಯಪದಾರ್ಥಗಳನ್ನು ಭಗವಂತನ ಅಧೀನ-ವೆಂದು ತಿಳಿದು, ಅಭಿಮಾನವನ್ನು ತೊರೆದು, ಕಣ್ಣು , ನಾಲಿಗೆ, ಕಿವಿ, ಚರ್ಮ, ಮೂಗುಗಳೆಂಬ ಐದು ಇಂದ್ರಿಯಗಳೆಂಬ ಅಗ್ನಿಗಳಲ್ಲಿ ಹೋಮಿಸುತ್ತಾರೆ .

**ಅನ್ಯೇ ಯೋಗಿನಃ ಶ್ರೋತ್ರಾದೀನಿ ಜ್ಞಾನೇಂದ್ರಿಯಾಣಿ ಸಂಯಮಾಗ್ನಿಷು ಜುಹ್ವತಿ । ಭಗವತ್ಪೂಜಾತ್ವೇನೇಂದ್ರಿಯನಿಯಮನಂ ಕುರ್ವಂತಿ । ಪ್ರತ್ಯಾ-ಹಾರಾದಿನಾ । ಸರ್ವಂ ಯಜ್ಞಾಖ್ಯಹರ್ಯಧೀನಂ, ನ ಕ್ವಚಿದಪಿ ಸ್ವಾತಂತ್ರ್ಯಮಿತಿ ಜ್ಞಾತ್ವೇತ್ಯರ್ಥಃ । ಏತದಪಿ ಬ್ರಹ್ಮಾರ್ಪಣರೂಪಮೇವ ವಿವಕ್ಷಿತಮ್ ।**

**ಏವಮಗ್ರೇऽಪಿ । ಅತ ಏವ ವಕ್ಷ್ಯತಿ 'ಏವಂ ಬಹುವಿಧಾ ಯಜ್ಞಾ' ಇತಿ ಜ್ಞೇಯಮ್ । ಅನ್ಯೇ ಯೋಗಿನಃ ಶಬ್ದಾದೀನ್ ಶಬ್ದಸ್ಪರ್ಶರೂಪರಸಗಂಧಾನ್ ವಿಷಯಾನ್ ಶ್ರೋತ್ರಾದೀಂದ್ರಿಯಾಖ್ಯಾಗ್ನಿಷು ಜುಹ್ವತಿ । ಯಜ್ಞೇನೈವ ಯಜ್ಞಾ-ಧೀನಂ ಜ್ಞಾತ್ವಾ ಸ್ವಸ್ವಾತಂತ್ರ್ಯಾಭಿಮಾನತ್ಯಾಗೇನ ಭಗವತ್ಪೂಜಾತ್ವೇನ ವಿಷಯಾನ್ ಭುಂಜತ ಇತ್ಯರ್ಥಃ ॥ 26 ॥**

**ಅನುವಾದ** - ಮತ್ತೆ ಕೆಲವು ಯೋಗಿಗಳು ಕಿವಿ ಮೊದಲಾದ ಜ್ಞಾನೇಂದ್ರಿಯಗಳನ್ನು ಇಂದ್ರಿಯ ನಿಯಂತ್ರಣವೆಂಬ ಅಗ್ನಿಯಲ್ಲಿ ಹೋಮಿಸುತ್ತಾರೆ. ಅಂದರೆ ಭಗವಂತನ ಪೂಜಾ ರೂಪವಾಗಿ ಇಂದ್ರಿಯ ನಿಗ್ರಹವನ್ನು ಕೈಗೊಳ್ಳುತ್ತಾರೆ . ವಿಷಯ ಪದಾರ್ಥಗಳೆಡೆ ಸಾಗಿದ ಇಂದ್ರಿಯಗಳನ್ನು ಭಗವಂತನೆಡೆಗೆ ಸೆಳೆಯುತ್ತಾರೆ . ಇಂದ್ರಿಯ ಸಂಯಮನವೂ ಯಜ್ಞರೂಪಿ ಭಗವಂತನ ಅಧೀನವಾಗಿದೆ. ಈ ವಿಷಯದಲ್ಲಿ ತನಗೆ ಸ್ವಾತಂತ್ರ್ಯವಿಲ್ಲವೆಂದು ತಿಳಿದು ಹೀಗೆ ಮಾಡುತ್ತಾರೆ. ಈ ರೀತಿ ಆಚರಿಸಿದ ಇಂದ್ರಿಯನಿಗ್ರಹವನ್ನು ಭಗವಂತನಿಗೇ ಸಮರ್ಪಿಸುತ್ತಾರೆಂದೂ ಇಟ್ಟುಕೊಳ್ಳಬೇಕು. ಮುಂದಿನ ಶ್ಲೋಕಗಳಲ್ಲಿಯೂ ಈ ಅನುಸಂಧಾನವನ್ನು ಇಟ್ಟುಕೊಳ್ಳಬೇಕು. ಆದ್ದರಿಂದಲೇ '**ಏವಂ ಬಹುವಿಧಾ ಯಜ್ಞಾ**' ಎಂದು (32ನೇ ಶ್ಲೋಕ) ಹೇಳುತ್ತಾನೆ.

ಮತ್ತೆ ಕೆಲವರು ಶಬ್ದ , ಸ್ಪರ್ಶ, ರೂಪ, ರಸ, ಗಂಧಗಳೆಂಬ ವಿಷಯಗಳನ್ನು ಕಿವಿ ಮೊದಲಾದ ಇಂದ್ರಿಯಗಳೆಂಬ ಅಗ್ನಿಗಳಲ್ಲಿ ಹೋಮಿಸುತ್ತಾರೆ. ಯಜ್ಞರೂಪಿ ಭಗವಂತನ ಅನುಗ್ರಹದಿಂದ, ಎಲ್ಲವೂ ಯಜ್ಞಾಧೀನವೆಂದು ತಿಳಿದು, ಸ್ವಾತಂತ್ರ್ಯಾಭಿಮಾನವನ್ನು ತೊರೆದು, ಭಗವಂತನ ಪೂಜಾರೂಪವಾಗಿ ವಿಷಯ ಪದಾರ್ಥಗಳನ್ನು ಅನುಭವಿಸುತ್ತಾರೆಂದು ಭಾವ.

**ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥ 27 ॥**

**ಅರ್ಥ**- ಮತ್ತೆ ಕೆಲವು ಯೋಗಿಗಳು ವಾಕ್, ಪಾಣಿ,ಪಾದ, ಪಾಯು, ಉಪಸ್ಥ ಎಂಬ ಐದು ಕರ್ಮೇಂದ್ರಿಯಗಳ ಚಟುವಟಿಕೆಗಳನ್ನು ಮತ್ತು ಪ್ರಾಣ, ಅಪಾನ, ವ್ಯಾನ, ಉದಾನ , ಸಮಾನ ಎಂಬ ಐದು ವಾಯುಗಳ ಚಟುವಟಿಕೆಗಳನ್ನೂ ಮನೋನಿಗ್ರಹ ರೂಪವಾದ ಉಪಾಯವೆಂಬ ಅಗ್ನಿಯಲ್ಲಿ ಹೋಮಿಸುತ್ತಾರೆ .

**ಅಪರೇ ಯೋಗಿನಃ ಸರ್ವಾಣೀಂದ್ರಿಯಕರ್ಮಾಣಿ ವಾಕ್‌ಪಾಣಿಪಾದ-ಪಾಯೂಪಸ್ಥರೂಪಕರ್ಮೇಂದ್ರಿಯವ್ಯಾಪಾರಾನ್ ತಥಾ ಪ್ರಾಣಕರ್ಮಾಣಿ ಪ್ರಾಣಾ**

**ಪಾನಾದಿವ್ಯಾಪಾರಾಂಶ್ಚ ಆತ್ಮಸಂಯಮಯೋಗಾಗ್ನೌ ಜುಹ್ವತಿ । ಆತ್ಮನೋ ಮನಸೋ ಯಃ ಸಂಯಮಃ ಸ ಏವ ಯೋಗ ಉಪಾಯಃ । ಸ ಏವಾಗ್ನಿಃ । ಜ್ಞಾನದೀಪಿತೇ ತತ್ರ ಜುಹ್ವತಿ, ಯಜ್ಞೇನೈವ । ಭಗವದಧೀನತಾಜ್ಞಾನಪೂರ್ವಂ ಸ್ವಾತಂತ್ರ್ಯಾಭಿಮಾನ-ತ್ಯಾಗೇನ ಮನೋ ನಿಗೃಹ್ಯ ಕರ್ಮೇಂದ್ರಿಯಾದಿ ವ್ಯಾಪಾರಾನ್ ಭಗವತ್ಪೂಜಾತ್ವೇನ ನಿಯಚ್ಛಂತೀತ್ಯರ್ಥಃ ॥ 27 ॥**

**ಅನುವಾದ -** **'ಅಪರೇ'**= ಕೆಲವು ಯೋಗಿಗಳು, **ಸರ್ವಾಣಿ ಇಂದ್ರಿಯ ಕರ್ಮಾಣಿ**= ಮಾತು, ಕೈ, ಕಾಲು, ಪಾಯು (ಮಲವಿಸರ್ಜನ ಇಂದ್ರಿಯ) ಉಪಸ್ಥ (ಮೂತ್ರ ವಿಸರ್ಜನ ಇಂದ್ರಿಯ ಹಾಗೂ ರೇತೋ ವಿಸರ್ಜನ ಇಂದ್ರಿಯ)ಗಳೆಂಬ ಐದು ಕರ್ಮೇಂದ್ರಿಯಗಳಿಂದ ನಡೆಯುವ ಚಟುವಟಿಕೆಗಳನ್ನು, **'ತಥಾ ಪ್ರಾಣ ಕರ್ಮಾಣಿ'** = ಪ್ರಾಣಾಪಾನಾದಿ ವಾಯುಗಳ ಚಟುವಟಿಕೆಗಳನ್ನೂ **'ಜ್ಞಾನ ದೀಪಿತೇ'**= ಸರಿಯಾದ ಅರಿವಿನಿಂದ ಪ್ರಜ್ವಲಿಸುವ **'ಆತ್ಮ-ಸಂಯಮಯೋಗಾಗ್ನೌ ಜುಹ್ವತಿ'**= ಮನೋನಿಯಂತ್ರಣ- ಉಪಾಯವೆಂಬ ಅಗ್ನಿಯಲ್ಲಿ ಹೋಮಿಸುತ್ತಾರೆ.

ಯಜ್ಞನ ಅನುಗ್ರಹದಿಂದಲೇ, ಎಲ್ಲವೂ ಅವನ ಅಧೀನವೆಂಬ ಜ್ಞಾನದೊಂದಿಗೆ, ಸ್ವಾತಂತ್ರ್ಯಾಭಿಮಾನವನ್ನು ತೊರೆದು, ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು, ಕರ್ಮೇಂದ್ರಿಯಗಳ ಹಾಗೂ ವಾಯುಗಳ ಚಟುವಟಿಕೆಗಳನ್ನು ಭಗವಂತನ ಪೂಜಾರೂಪವಾಗಿ ನಿಗ್ರಹಿಸುತ್ತಾರೆ.

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಽಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥ 28 ॥**

**ಅರ್ಥ-** ಕೆಲವರು ದ್ರವ್ಯಯಜ್ಞ ಮಾಡುವವರು. ಅವರು ತಮ್ಮಲ್ಲಿರುವ ಸಂಪತ್ತನ್ನು ಸತ್ಪಾತ್ರರಿಗೆ ದಾನ ಮಾಡಿ, ಆ ದಾನವನ್ನೇ ಯಜ್ಞವೆಂದು ಭಗವಂತನಿಗೆ ಅರ್ಪಿಸುತ್ತಾರೆ. ಮತ್ತೆ ಕೆಲವರು ತಪೋಯಜ್ಞವನ್ನು ಮಾಡುವವರು- ಅವರು ಕಷ್ಟಕರವಾದ ಚಾಂದ್ರಾಯಣ ಮೊದಲಾದ ವ್ರತಗಳನ್ನು ಆಚರಿಸಿ, ಅದನ್ನೆ ಯಜ್ಞವೆಂದು ಭಗವಂತನಿಗೆ ಅರ್ಪಿಸುತ್ತಾರೆ. ಕೆಲವರು ಯೋಗಯಜ್ಞ ಮಾಡುವವರು- ಅವರು ಧ್ಯಾನವನ್ನು ಆಚರಿಸಿ ಅದನ್ನೇ ಯಜ್ಞವೆಂಬ ಅನುಸಂಧಾನದಿಂದ ಭಗವಂತನಿಗೆ ಅರ್ಪಿಸುತ್ತಾರೆ. ಮತ್ತೆ ಕೆಲವರು ಸ್ವಾಧ್ಯಾಯ ಯಜ್ಞವನ್ನು ಮಾಡುವವರು- ಅವರು ವೇದಾಧ್ಯಯನವನ್ನು ಮಾಡಿ, ಅದನ್ನೇ ಯಜ್ಞದೃಷ್ಟಿಯಿಂದ ಭಗವಂತನಿಗೆ ಅರ್ಪಿಸುತ್ತಾರೆ. ಮತ್ತೆ ಕೆಲವರು ಜ್ಞಾನಯಜ್ಞರು- ಅವರು ಸಚ್ಛಾಸ್ತ್ರ ಶ್ರವಣ,ಮನನಗಳನ್ನು ಮಾಡಿ, ಅದನ್ನೇ ಯಜ್ಞವೆಂದು ತಿಳಿದು ಭಗವಂತನಿಗೆ ಅರ್ಪಿಸುವರು. ಇವರೆಲ್ಲರೂ ಮಹಾಪ್ರಯತ್ನವನ್ನು ಮಾಡುವವರು ಹಾಗೂ ಪ್ರಶಸ್ತವಾದ ವ್ರತ ಮಾಡುವವರು.

**ಅಪರೇ ದ್ರವ್ಯಯಜ್ಞಾಃ ದ್ರವ್ಯಸ್ಯ ಯಾಜಕಾಃ । ಕರ್ತ್ರರ್ಥೋಽಯಂ ಯಜ್ಞ-ಶಬ್ದಃ । ತಪೋಯಜ್ಞಾಃ ಕೃಚ್ಛ್ರಚಾಂದ್ರಾಯಣಾದಿತಪೋ ಹರ್ಯರ್ಪಣ-ಬುದ್ಧ್ಯಾ ಹರೌ ಜುಹ್ವತೀತಿ ತಪೋಯಜ್ಞಾಃ । ಭಗವತ್ಪೂಜಾತ್ವೇನ ಧ್ಯಾನಂ ಕುರ್ವಂತೀತಿ ಯೋಗಯಜ್ಞಾಃ । ವಿಷ್ಣುಪೂಜಾತ್ವೇನ ಸ್ವಾಧ್ಯಾಯಮಧೀಯತ ಇತಿ ಸ್ವಾಧ್ಯಾಯಯಜ್ಞಾಃ । ಯಜ್ಞೇನೈವೇತಿ ಸರ್ವತ್ರಾನ್ವೇತೀತ್ಯುಕ್ತಮ್ । ತದರ್ಥಃ ಪ್ರಾಗ್ವತ್ । ಜ್ಞಾನಯಜ್ಞಾಃ ಭಗವತ್ಪೂಜಾತ್ವೇನ ಶ್ರವಣಾದಿ ಕುರ್ವಂತೀತಿ । ಸಂಶಿತವ್ರತಾಃ ತೀಕ್ಷ್ಣವ್ರತಾಃ ಯತಯೋ ಯತ್ನಶೀಲಾಃ ॥ 28 ॥**

**ಅನುವಾದ-** **'ಅಪರೇ' ದ್ರವ್ಯಯಜ್ಞಾಃ'**= ಕೆಲವರು ಹವಿಸ್ಸನ್ನು ಹೋಮಿಸುವವರು. ಇಲ್ಲಿ 'ಯಜ್ಞ' ಶಬ್ದವು 'ಯಜ್ಞದ ಕರ್ತೃಗಳು' ಎಂಬ ಅರ್ಥದಲ್ಲಿದೆ. **'ತಪೋಯಜ್ಞಾಃ'** ಮತ್ತೆ ಕೆಲವರು ಕಷ್ಟಕರವಾದ ಚಾಂದ್ರಾಯಣಾದಿವ್ರತಗಳನ್ನು ಮಾಡಿ ಭಗವದರ್ಪಣ ಬುದ್ಧಿಯಿಂದ ಭಗವಂತನಲ್ಲಿ ಹೋಮಿಸುವವರು **'ಯೋಗಯಜ್ಞಾಃ'**= ಭಗವಂತನ ಪೂಜಾರೂಪವಾಗಿ ಧ್ಯಾನವನ್ನು ಮಾಡುವವರು.

**'ಸ್ವಾಧ್ಯಾಯ ಯಜ್ಞಾಃ'** = ವಿಷ್ಣುಪೂಜಾರೂಪವಾಗಿ ವೇದಾಧ್ಯಯನವನ್ನು ಮಾಡುವವರು.

**'ಯಜ್ಞೇನ'** (ಯಜ್ಞರೂಪ ವಿಷ್ಣುವಿನ ಅನುಗ್ರಹದಿಂದ) ಎಂಬ ಪದವನ್ನು ಎಲ್ಲೆಡೆ ಇಟ್ಟುಕೊಳ್ಳಬೇಕೆಂದು ಹಿಂದೆಯೇ ಹೇಳಿದೆ ಆ ಶಬ್ದದ ಅರ್ಥವನ್ನೂ ಹಿಂದೆ ಹೇಳಲಾಗಿದೆ. **'ಜ್ಞಾನಯಜ್ಞಾಃ'** = ಭಗವಂತನ ಪೂಜಾರೂಪವಾಗಿ ಶ್ರವಣ, ಮನನಗಳನ್ನು ಮಾಡುವವರು.

**'ಸಂಶಿತ ವ್ರತಾಃ'**= ತೀಕ್ಷ್ಣವಾದ ವ್ರತ ಮಾಡುವವರು.

**'ಯತಯಃ'**= ಪ್ರಯತ್ನ ಶೀಲರು.

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಽಪರೇ ।**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥ 29 ॥**

**ಅರ್ಥ-** ಪ್ರಾಣಾಯಾಮದಲ್ಲಿ ಆಸಕ್ತರಾದ ಕೆಲವರು ಪ್ರಾಣಾಪಾನಗಳ ಗತಿಗಳನ್ನು ತಡೆಹಿಡಿದು, ಪ್ರಾಣದಲ್ಲಿ ಅಪಾನವನ್ನೂ, ಅಪಾನದಲ್ಲಿ ಪ್ರಾಣವನ್ನೂ ಪ್ರವೇಶಗೊಳಿಸಿ, ಕುಂಭಕವನ್ನು ಅನುಷ್ಠಾನ ಮಾಡುತ್ತಾರೆ. ಕುಂಭಕವನ್ನೇ ಯಜ್ಞವೆಂದು ಭಗವಂತನಿಗೆ ಅರ್ಪಿಸುತ್ತಾರೆ.

**ಅಪರೇ ಪ್ರಾಣಾಯಾಮಪರಾಯಣಾಃ ಪ್ರಾಣಾಪಾನಗತೀ ರುದ್ಧ್ವಾ ನಿರುಧ್ಯ**

**ಅಪಾನೇ ಪ್ರಾಣಂ ಜುಹ್ವತಿ ತತ್ರ ಪ್ರವೇಶಯಂತಿ । ಪ್ರಾಣೇ ಚಾಪಾನಂ ಜುಹ್ವತಿ । ಕುಂಭಕಸ್ಥಾ ಏವೇತ್ಯರ್ಥಃ ।। 29 ।।**

**ಅನುವಾದ** – ಪ್ರಾಣಾಯಾಮ ಪರಾಯಣರಾದ ಕೆಲವರು ಪ್ರಾಣ, ಅಪಾನಗಳ ಗತಿಗಳನ್ನು ತಡೆದು ಪ್ರಾಣನಲ್ಲಿ ಅಪಾನವನ್ನು ಹೋಮಿಸುತ್ತಾರೆ ಎಂದರೆ ಪ್ರವೇಶಗೊಳಿಸುತ್ತಾರೆ. ಅಪಾನದಲ್ಲಿ ಪ್ರಾಣವನ್ನು ಹೋಮಿಸುತ್ತಾರೆ ಎಂದರೆ ಪ್ರವೇಶಗೊಳಿಸುತ್ತಾರೆ. ಕುಂಭಕದಲ್ಲಿ ನಿರತರಾಗುತ್ತಾರೆಂದು ಭಾವ.

**ಅಪರೇ ನಿಯತಾಹಾರಾಃ ಪ್ರಾಣಾನ್ಪ್ರಾಣೇಷು ಜುಹ್ವತಿ ।**
**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ।। 30 ।।**

**ಅರ್ಥ**– ಕೆಲವರು ಆಹಾರನಿಯಂತ್ರಣವನ್ನು ಮಾಡುತ್ತಾ ಕಿವಿ ಮೊದಲಾದ ಜ್ಞಾನೇಂದ್ರಿಯಗಳ ಪ್ರವೃತ್ತಿಗಳನ್ನು ಕಿವಿ ಮೊದಲಾದ ಇಂದ್ರಿಯಗಳಲ್ಲಿ ಹೋಮಿಸುತ್ತಾರೆ. ಅಂದರೆ ಆಹಾರವನ್ನು ಕಡಿಮೆ ಮಾಡಿ ಕ್ರಮೇಣ ಇಂದ್ರಿಯಗಳ ಬಲವನ್ನು ಕುಗ್ಗಿಸುತ್ತಾ, ಅದನ್ನೇ ಭಗವಂತನಿಗೆ ಪೂಜೆ ಎಂದು ಅರ್ಪಿಸುತ್ತಾರೆ. ಅಥವಾ 'ವಾಕ್' ಮುಂತಾದ ಇಂದ್ರಿಯಗಳ ಅಭಿಮಾನಿ ದೇವತೆಗಳನ್ನು ಮನೋಭಿಮಾನಿ ಮುಂತಾದ ಉತ್ತಮ ದೇವತೆಗಳ ಅಧೀನವೆಂದು ಧ್ಯಾನಿಸುತ್ತಾರೆ ಮತ್ತು ಆಹಾರ ಸಂಯಮವನ್ನೇ ಯಜ್ಞವೆಂದು ಭಗವಂತನಿಗೆ ಅರ್ಪಿಸುತ್ತಾರೆ. ಇವರೆಲ್ಲರೂ ಯಜ್ಞತತ್ತ್ವವನ್ನು ಬಲ್ಲವರು. ಯಜ್ಞದಿಂದ ಪಾಪಗಳನ್ನು ಪರಿಹಾರ ಮಾಡಿಕೊಂಡವರು.

**ಅಪರೇ ನಿಯತಾಹಾರಾಃ ಸಂತಃ ಪ್ರಾಣಾನಿಂದ್ರಿಯಾಣಿ ಶ್ರೋತ್ರಾದೀಂದ್ರಿಯವೃತ್ತೀಃ ಪ್ರಾಣೇಷ್ವಿಂದ್ರಿಯೇಷು ಜುಹ್ವತಿ ಸಂಕುಚಿತವೃತ್ತೀನ್ ಪ್ರಾಣಾನ್ ಕುರ್ವಂತಿ । ನಿಯತಾಹಾರತ್ವೇನೇಂದ್ರಿಯಾಣಾಂ ಶಕ್ತಿಹ್ರಾಸಾದಿತಿ ಭಾವಃ । ಯದ್ವಾ ಪ್ರಾಣಾನ್ವಾಗಾದೀಂದ್ರಿಯದೇವಾನ್ ಮನಃಪ್ರಭೃತ್ಯುತ್ತಮದೇವತಾಧೀನಾನ್ ಧ್ಯಾಯಂತೀತ್ಯರ್ಥಃ । ಅಸ್ಮಿನ್ ಪಕ್ಷೇ ಭಗವತ್ಪೂಜಾತ್ವೇನ ನಿಯತಾಹಾರಃ ಪೃಥಗ್ಯಜ್ಞೋ ಜ್ಞಾತವ್ಯಃ । ತಾನ್ ಸ್ತೌತಿ ಸರ್ವೇಽಪ್ಯೇತ ಇತಿ ।। ಯಜ್ಞವಿದೋ ಯಜ್ಞಜ್ಞಾಃ ಯಜ್ಞಕ್ಷಪಿತಕಲ್ಮಷಾಃ ಯಜ್ಞಾನುಷ್ಠಾನನಾಶಿತಪಾಪಾಃ ।। 30 ।।**

**ಅನುವಾದ** – 'ಅಪರೇ ನಿಯತಾಹಾರಾಃ' ಮತ್ತೆ ಕೆಲವರು ಆಹಾರ ನಿಯಂತ್ರಣವನ್ನು ಮಾಡುತ್ತಾ , '**ಪ್ರಾಣಾನ್**' = ಇಂದ್ರಿಯಗಳನ್ನು ಅಂದರೆ ಕಿವಿ ಮೊದಲಾದ ಇಂದ್ರಿಯಗಳ ಪ್ರವೃತ್ತಿಗಳನ್ನು '**ಪ್ರಾಣೇಷು ಜುಹ್ವತಿ**' = ಕಿವಿ ಮೊದಲಾದ ಇಂದ್ರಿಯಗಳಲ್ಲಿ ಹೋಮಿಸುತ್ತಾರೆ ಎಂದರೆ ಅಲ್ಪಾಹಾರ ಸ್ವೀಕಾರ ಮೂಲಕ ಇಂದ್ರಿಯಗಳ ವಿಷಯ ಭೋಗಶಕ್ತಿಯನ್ನು

ಹ್ರಾಸಗೊಳಿಸಿ, ಬಾಹ್ಯವಿಷಯಗಳ ಕಡೆ ಇಂದ್ರಿಯಗಳು ಹೋಗದಂತೆ ತಡೆಯುತ್ತಾ , ಆ ಇಂದ್ರಿಯ ನಿಯಂತ್ರಣವನ್ನೇ ಯಜ್ಞವೆಂದು ಭಗವಂತನಿಗೆ ಅರ್ಪಿಸುತ್ತಾರೆ.

ಅಥವಾ '**ಅಪರೇ ನಿಯತಾಹಾರಾಃ**' ಎಂಬುದರಿಂದ ಬೇರೆ ಒಂದು ಯಜ್ಞವನ್ನು ಹೇಳುತ್ತಾನೆ . ಕೆಲವರು ಆಹಾರ ನಿಯಂತ್ರಣವನ್ನು ಮಾಡಿ, ಅದನ್ನೇ ಯಜ್ಞವೆಂದು ಭಾವಿಸಿ ಭಗವಂತನಿಗೆ ಸಮರ್ಪಿಸುತ್ತಾರೆಂದು ಭಾವ. '**ಪ್ರಾಣಾನ್ ಪ್ರಾಣೇಷು ಜುಹ್ವತಿ**' ಎಂಬುದರಿಂದ ಮತ್ತೊಂದು ಯಜ್ಞವನ್ನು ಹೇಳುತ್ತಾನೆ. ಅದರ ಅಭಿಪ್ರಾಯ ಹೀಗಿದೆ- **ಪ್ರಾಣಾನ್**= ವಾಕ್ ಮೊದಲಾದ ಇಂದ್ರಿಯಗಳ ಅಭಿಮಾನಿದೇವತೆಗಳಾದ ಅಗ್ನಿ ಮೊದಲಾದವರನ್ನು, '**ಪ್ರಾಣೇಷು**' ಮನೋಭಿಮಾನಿ ರುದ್ರ ಮೊದಲಾದ ಉತ್ತಮ ದೇವತೆಗಳಲ್ಲಿ '**ಜುಹ್ವತಿ**'= ಹೋಮಿಸುತ್ತಾರೆ ಎಂದರೆ ತಾರತಮ್ಯದಲ್ಲಿ ಕೆಳಹಂತದಲ್ಲಿರುವ ದೇವತೆಗಳನ್ನು ತಾರತಮ್ಯದಲ್ಲಿ ಮೇಲಿನ ಹಂತ ದಲ್ಲಿರುವ ದೇವತೆಗಳ ಅಧೀನರೆಂದು ಧ್ಯಾನಿಸುತ್ತಾ, ಆ ಧ್ಯಾನವನ್ನೇ ಯಜ್ಞವೆಂದು ಭಗವಂತನಿಗೆ ಅರ್ಪಿಸುತ್ತಾರೆ.

ಈ ಆರು ಶ್ಲೋಕಗಳಲ್ಲಿ ಬಂದ ಯಜ್ಞಸಾಧಕರನ್ನು ಉತ್ತರಾರ್ಧದಿಂದ ಸ್ತೋತ್ರ ಮಾಡುತ್ತಾನೆ – '**ಸರ್ವೇಽಪಿ ಏತೇ**' ಎಂಬುದಾಗಿ. ಈ ಯಜ್ಞ ಸಾಧಕರೆಲ್ಲರೂ ಯಜ್ಞಗಳನ್ನು ಸರಿಯಾಗಿ ಬಲ್ಲವರು . ಯಜ್ಞಾನುಷ್ಠಾನದಿಂದ ಪಾಪವನ್ನು ಕಳೆದುಕೊಂಡವರು.

## ಇಹ-ಪರಗಳಿಲ್ಲ ಯಜ್ಞ ತೊರೆದವನಿಗೆ

**ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಮ್ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥ 31 ॥**

**ಅನುವಾದ** – ಕುರುಗಳಲ್ಲಿ ಶ್ರೇಷ್ಠನಾದ ಅರ್ಜುನನೇ ! ಯಜ್ಞದಲ್ಲಿ ದೇವತೆಗಳಿಗೆ ಕೊಟ್ಟು ಉಳಿದ ಹವಿಸ್ಸನ್ನು 'ಅಮೃತ 'ವೆನ್ನುತ್ತಾರೆ. ಆ ಅಮೃತವನ್ನು ಉಣ್ಣುವವರು ಅಂದರೆ ಯಜ್ಞ ಮಾಡುವವರು ಅನಾದಿನಿತ್ಯವಾದ ಪರಬ್ರಹ್ಮವನ್ನು ಹೊಂದುತ್ತಾರೆ. ಯಜ್ಞ ಮಾಡದವನಿಗೆ ಈ ಲೋಕವೇ ಇಲ್ಲ. ಪರಲೋಕವೆಲ್ಲಿಯದು ?

**ಏವಂ ಯಜ್ಞಭೇದಾನ್ ಜ್ಞಾತ್ವಾ ತಾನನುತಿಷ್ಠತಾಮನನುತಿಷ್ಠತಾಂ ಚ ಫಲ-ಭೇದಮಾಹ- ಯಜ್ಞೇತಿ ॥ ಯಜ್ಞೇ ದೇವತಾಯೈ ದತ್ತಹವಿಃಶೇಷೋಽ-ಮೃತಮುಚ್ಯತೇ । ತದ್‌ಭುಜಃ ಯಜ್ಞಾನುಷ್ಠಾತಾರ ಇತಿ ಯಾವತ್ । ಸನಾತನಮನಾದಿನಿತ್ಯಂ ಬ್ರಹ್ಮ ಯಾಂತಿ ಪ್ರಾಪ್ನುವಂತಿ । ಅಯಜ್ಞಸ್ಯ ತು ಅಯಂ ಲೋಕಃ ಅಲ್ಪಸುಖೋಽಪಿ ಮಾನುಷೋ ಲೋಕೋ ನಾಸ್ತಿ । ಕುತೋಽನ್ಯಃ ಸ್ವರ್ಗಾದಿಃ । ಅತೋ ಯಜ್ಞಾಃ ಸರ್ವಥಾ ಕಾರ್ಯಾ ಇತಿ ಭಾವಃ ॥ 31 ॥**

**ಅನುವಾದ** - ಇಲ್ಲಿಯವರೆಗೆ ಯಜ್ಞಗಳಲ್ಲಿ ಇರುವ ಪ್ರಭೇದಗಳನ್ನು ನಿರೂಪಿಸಿ, ಆ ಯಜ್ಞಗಳನ್ನು ಅನುಷ್ಠಾನ ಮಾಡುವವರಿಗೆ ಮತ್ತು ಮಾಡದವರಿಗೆ ಫಲದಲ್ಲಿ ವ್ಯತ್ಯಾಸವನ್ನು ಹೇಳುತ್ತಾನೆ. '**ಯಜ್ಞಶಿಷ್ಟಾ...**' ಎಂದು . ಯಜ್ಞದಲ್ಲಿ ದೇವತೆಗಳಿಗೆ ಹವಿಸ್ಸನ್ನು ಕೊಟ್ಟ ಮೇಲೆ ಉಳಿಯುವ ಹವಿಸ್ಸನ್ನು 'ಅಮೃತ 'ವೆಂದು ಕರೆಯುತ್ತಾರೆ. ಆ ಅಮೃತವನ್ನು ಉಣ್ಣುವವರು ಅಂದರೆ ಯಜ್ಞಾನುಷ್ಠಾನ ಮಾಡುವವರು ಸನಾತನನಾದ ಎಂದರೆ ಅನಾದಿನಿತ್ಯನಾದ ಭಗವಂತ ನನ್ನು ಹೊಂದುತ್ತಾರೆ.

ಯಜ್ಞಮಾಡದವನಿಗೆ ಈ ಲೋಕ ಎಂದರೆ ಅಲ್ಪಸುಖವುಳ್ಳ ಮನುಷ್ಯಲೋಕವೂ ಇಲ್ಲ. ಉತ್ತಮವಾದ ಸ್ವರ್ಗಾದಿಗಳು ಏನಾದಾವು ? ಆದ್ದರಿಂದ ಯಜ್ಞವನ್ನು ಅವಶ್ಯವಾಗಿ ಮಾಡಬೇಕು .

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥ 32 ॥**

**ಅರ್ಥ**- ಹೀಗೆ ಅನೇಕ ವಿಧವಾದ ಯಜ್ಞಗಳು ಭಗವಂತನ ಮುಖದಲ್ಲಿ ಅರ್ಪಿತವಾಗುತ್ತಿವೆ. ಇವೆಲ್ಲವೂ ಮಾನಸಿಕ , ವಾಚಿಕ, ಕಾಯಿಕ ಕರ್ಮಗಳಿಂದ ಹುಟ್ಟಿವೆ ಎಂದು ತಿಳಿ. ಆ ರೀತಿ ತಿಳಿಯುವುದರಿಂದ ಸಂಸಾರದಿಂದ ಬಿಡುಗಡೆ ಹೊಂದುವಿ.

ಉಕ್ತಾನ್ ಕರ್ಮಭೇದಾನುಪಸಂಹರತಿ- **ಏವಮಿತಿ ॥** ಏವಂ 'ದೈವಮೇವೇ-ತ್ಯಾದಿನಾ' ಶ್ಲೋಕಷಟ್ಕೇನೋಕ್ತದಿಶಾ ಮಾನಸಿಕವಾಚಿಕಕಾಯಿಕಭೇದೇನ ಬಹು-ಪ್ರಕಾರಾಃ ಯಜ್ಞಾಃ ಬ್ರಹ್ಮಣೋ ಹರೇರ್ಮುಖೇ ವಿತತಾ ವಿಸ್ತೃತಾಃ ತಸ್ಯ ಸರ್ವಯಜ್ಞಭೋಕ್ತೃತ್ವಾತ್ । 'ಅಹಂ ಹಿ ಸರ್ವ ಯಜ್ಞಾನಾಂ ಭೋಕ್ತಾ' (9-24) ಇತ್ಯಾದೇಃ । 'ಶ್ರೋತ್ರಾದಿ' ಇತ್ಯಾದಿನೋಕ್ತೇಂದ್ರಿಯನಿಯಮನಾದಿ-ರೂಪಯಜ್ಞೇಷು ತದಾರಾಧ್ಯಸ್ಯಾನುಕ್ತೇರ್ಬ್ರಹ್ಮಣೋಽನ್ಯಸ್ತದಾರಾಧ್ಯ ಇತಿ ಶಂಕಾನಿರಾಸಾಯ ಬ್ರಹ್ಮಣೋ ಮುಖೇ ವಿತತಾ ಇತ್ಯುಕ್ತಮ್ । ನನು ಯಜ್ಞಾನಾಂ ಬಹುವಿಧತ್ವೇ ಜ್ಞಾನಯಜ್ಞಾದಿನೈವಾಲಂ ಕಿಂ ಕರ್ಮಾತ್ಮಕೇನ ಯುದ್ಧೇನೇತ್ಯತ ಆಹ- **ಕರ್ಮಜಾನಿತಿ ॥** ತಾನ್ ಪ್ರಾಗುಕ್ತಾನ್ ಸರ್ವಾನ್ ಯಜ್ಞಾನ್ ಕರ್ಮಜಾನ್ ಕರ್ಮರೂಪಾನ್ ವಿದ್ಧಿ ಜಾನೀಹಿ । ಮಾನಸಿಕವಾಚಿಕಕಾಯಿಕ-ಕರ್ಮಜಾನ್‌ವಿದ್ಧೀತಿ ವಾಽರ್ಥಃ । ತತಃ ಕಿಮಿತ್ಯತ ಆಹ- **ಏವಮಿತಿ ॥** ಮಾನಸಿಕವಾಚಿಕಾದಿ ಸರ್ವಯಜ್ಞಾಃ ಕರ್ಮಾತ್ಮಕಾ ಇತಿ ಜಾನಾಸಿ ಚೇತ್ ತರ್ಹಿ

**ಯುದ್ಧಾದಿ ಸ್ವವಿಹಿತಕರ್ಮಾಣಿ ಕೃತ್ವೈವ ವಿಮೋಕ್ಷ್ಯಸೇ । ಸಂಸಾರಾದಾತ್ಮಾನಂ ಮೋಕ್ತು(ಮೋಚಯಿತು)ಮಿಚ್ಛಸಿ । ಸರ್ವೇಷಾಂ ಕರ್ಮಜತ್ವಜ್ಞಾನೇ ಸತಿ ಮೋಕ್ಷಾರ್ಥಂ ಯುದ್ಧಾದಿಕಂ ಕರ್ತವ್ಯಮಿತಿ ತವೈವೇಚ್ಛಾ ಭವಿಷ್ಯತೀತ್ಯರ್ಥಃ । ಸರ್ವೇಷಾಂ ಯಜ್ಞತ್ವೇ ಜ್ಞಾನೋಪಾಸನಸ್ವಾಧ್ಯಾಯಾದ್ಯಕರ್ಮರೂಪಯಜ್ಞೇನೈವ ಭಗವತ್ಪ್ರೀತಿಸಿದ್ಧೇಃ ಕಿಂ ಕರ್ಮಾತ್ಮಕಯುದ್ಧೇನೇತಿ ಪಾರ್ಥಾಭಿಪ್ರಾಯಸ್ಯೇದಮುತ್ತರಂ ಜ್ಞಾತ್ವೇತಿ (ಜ್ಞಾತ್ವೇತ್ಯಾದಿ) ॥ ತಸ್ಯಾಯಂ ಭಾವಃ । ಯುದ್ಧಂ ಹಿತ್ವಾ ಮೋಕ್ಷಾರ್ಥಂ ಯದುಪಾಸನಾದಿಕಂ ಕರಿಷ್ಯಸಿ ತದಪಿ ಕರ್ಮಾತ್ಮಕಮೇವ । ತಥಾ ಚ ಯುದ್ಧತ್ಯಾಗೇ ವಿಹಿತಧರ್ಮತ್ಯಾಗ ಏವ ಕೃತಃ ಸ್ಯಾತ್ । ನ ತು ಕರ್ಮತ್ಯಾಗಃ । ಅತ ಏವಂ ಜಾನತಃ ತವ ವಿಹಿತಂ ಯುದ್ಧಾದಿಕಂ ನ ತ್ಯಾಜ್ಯಮಿತಿ । ಏವಮಭಿಪ್ರಾಯಾಭಾವೇ ಕರ್ಮಜಾನಿತ್ಯರ್ಧಸ್ಯ ಪ್ರಕೃತಾನುಪಯೋಗಃ ಸ್ಯಾತ್ । ನನು ಸತ್ಯಮೇವಮಥಾಪ್ಯಯಮರ್ಥೋ ಲೃಡಂತಶಬ್ದೇನ ಕಥಂ ಲಭ್ಯತೇ ಇತಿ ಚೇತ್ । ನಾಯಂ ಲೃಡಂತಃ ಕಿಂತು ಮುಚ್‌ಲೃ ಮೋಕ್ಷಣ ಇತ್ಯತಃ ಸನ್ನಂತಾತ್ ಕರ್ಮಕರ್ತರಿ ಲಟ್‌ಪ್ರತ್ಯಯೇ ಸತಿ ವಿಮೋಕ್ಷ್ಯಸ ಇತಿ ರೂಪಮ್ । ಯದ್ಯಪಿ ಧಾತೋಃ ಕರ್ಮಣ ಇತಿ ಸನ್‌ಪ್ರತ್ಯಯೇ ಸನ್ ಯಙೋರಿತಿ ದ್ವಿರ್ವಚನೇ ಹಲಂತಾಚ್ಚೇತಿ ಸನಃ ಕಿತ್ತ್ವೇನ ಗುಣಾಭಾವೇ ಚ [1]ಮುಮುಕ್ಷ್ಯಸ ಇತಿ ಭಾವ್ಯಮ್ । ತಥಾಽಪಿ ಗುಣಾಭ್ಯಾಸಲೋಪೌ ಛಾಂದಸಾವಿತ್ಯುಪೇತ್ಯ ಸನ್ನಂತಾನ್ ಮೋಕ್ಷಶಬ್ದಾದ್- ವರ್ತಮಾನೇ ಲಡಿತಿ ಲಟ್‌ಪ್ರತ್ಯಯೇ ತಸ್ಯ ಸಿಬಾದೇಶೇ 'ಕರ್ಮವತ್ಕರ್ಮಣಾ ತುಲ್ಯಕ್ರಿಯ' ಇತಿ ಸೂತ್ರೇಣ ಕರ್ತುಃ ಕರ್ಮವದ್ಭಾವೇ ಕರ್ಮಕಾರಕನಿಮಿತ್ತಯಗಾತ್ಮನೇಪದಚಿಣ್ವದ್ಭಾವಾದಿಕಾರ್ಯಾಣಿ ಲಭತ ಇತ್ಯುಕ್ತೇರ್ಯಕಿ ಸತ್ಯತೋ ಲೋಪೇ ಮೋಕ್ಷ್ಯಸ ಇತಿ ರೂಪಸಿದ್ಧಿರ್ಜ್ಞೇಯಾ । ಲೃಡಂತತ್ವಪಕ್ಷೇ ತ್ವಯಮರ್ಥಃ । ಸರ್ವೇಷಾಂ ಕರ್ಮಜತ್ವಂ ಜ್ಞಾತ್ವಾ ತಾನ್ಯನುಷ್ಠಾಯ ಮುಕ್ತೋ ಭವಿಷ್ಯಸೀತಿ ॥ 32 ॥**

**ಅನುವಾದ** – ಹಿಂದೆ ಹೇಳಿದ ಯಜ್ಞರೂಪವಾದ ಕರ್ಮದ ಭೇದಗಳನ್ನು ಉಪಸಂಹಾರ ಮಾಡುತ್ತಾನೆ '**ಏವಮ್**'ಮುಂತಾಗಿ.

'**ಏವಮ್**' = '**ದೈವಮೇವಾಪರೇ ಯಜ್ಞಂ**' ಮುಂತಾದ ಆರು ಶ್ಲೋಕಗಳಲ್ಲಿ ಹೇಳಿದ ರೀತಿಯಲ್ಲಿ, '**ಬಹುವಿಧಾಃ ಯಜ್ಞಾಃ**' = ಮಾನಸಿಕ, ವಾಚಿಕ, ಕಾಯಿಕಭೇದದಿಂದ ಅನೇಕ ಬಗೆಯಾದ ಯಜ್ಞಗಳು. '**ಬ್ರಹ್ಮಣಃ ಮುಖೇ ವಿತತಾಃ**' = ಪರಬ್ರಹ್ಮನ ಮುಖದಲ್ಲಿ ಸಮರ್ಪಿತವಾಗಿವೆ. ಏಕೆಂದರೆ ಅವನೇ ಎಲ್ಲಾ ಯಜ್ಞಗಳನ್ನು ಭೋಗಿಸುವವನಾದ್ದರಿಂದ

*1.* ಮುಮುಕ್ಷ್ಯೇತಿ

**'ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ** '(ಗಿ.ತಾ.9.24)

(ನಾನೇ ಎಲ್ಲಾ ಯಜ್ಞ ಫಲಗಳನ್ನು ಭೋಗಿಸುವವನು ಹಾಗೂ ಎಲ್ಲಾ ಯಜ್ಞಗಳ ಸ್ವಾಮಿಯು) ಎಂದು ಮುಂದೆ ಗೀತೆಯಲ್ಲಿಯೇ ಈ ವಿಚಾರವನ್ನು ತಿಳಿಸಲಾಗುವುದು.

**'ಶ್ರೋತ್ರಾದೀನೀಂದ್ರಿಯಾಣ್ಯನ್ಯೇ'** ಮುಂತಾಗಿ ಹಿಂದೆ ಹೇಳಿದ ಇಂದ್ರಿಯ ಸಂಯಮನ ಮುಂತಾದ ಯಜ್ಞಗಳಲ್ಲಿ ಆ ಯಜ್ಞಗಳಲ್ಲಿ ಆರಾಧ್ಯನಾಗುವವನ ಬಗ್ಗೆ ಹೇಳದಿರುವುದರಿಂದ, 'ಪರ ಬ್ರಹ್ಮನಿಗಿಂತ ಬೇರೆಯವನು ಆ ಯಜ್ಞಗಳಿಂದ ಆರಾಧ್ಯ' ಎಂಬ ಸಂದೇಹ ನಿವಾರಣೆ ಗಾಗಿ **'ಬ್ರಹ್ಮಣಃ ಮುಖೇ ವಿತತಾಃ'** (ಪರ ಬ್ರಹ್ಮನ ಮುಖದಲ್ಲಿ ಸಮರ್ಪಿತವಾಗಿದೆ) ಎಂದು ಹೇಳಲಾಗಿದೆ.

ಯಜ್ಞಗಳು ಬಹುವಿಧವಾಗಿರುವಾಗ ಉಪಾಸನಾದಿ ಜ್ಞಾನಯಜ್ಞದಿಂದಲೇ ಮುಕ್ತಿಯನ್ನು ಪಡೆಯಲು ಅವಕಾಶವಿರುವಾಗ, ಕರ್ಮಯಜ್ಞವಾದ ಯುದ್ಧವನ್ನೇ ಮಾಡಬೇಕೆಂದು ಏಕೆ ನಿರ್ಬಂಧಿಸುವಿ ' ಎಂಬ ಪ್ರಶ್ನೆಗೆ ಉತ್ತರಿಸುತ್ತಾನೆ **'ಕರ್ಮಜಾನ್.....'** ಮುಂತಾಗಿ **'ತಾನ್ ಸರ್ವಾನ್ ಕರ್ಮಜಾನ್ ವಿದ್ಧಿ '** ಹಿಂದೆ ಹೇಳಿದ ಎಲ್ಲಾ ಯಜ್ಞಗಳನ್ನು ಕರ್ಮರೂಪ-ಗಳೆಂದೇ ತಿಳಿ. ಅಥವಾ ಹಿಂದೆ ಹೇಳಿದ ಎಲ್ಲಾ ಯಜ್ಞಗಳನ್ನು ಮಾನಸಿಕ, ವಾಚಿಕ, ಕಾಯಿಕ ಕರ್ಮಗಳಿಂದ ಹುಟ್ಟಿವೆ ಎಂದು ತಿಳಿ.

ಆ ರೀತಿ ತಿಳಿಯುವುದರಿಂದ ಏನು ಪ್ರಯೋಜನವೆಂದರೆ ಹೇಳುತ್ತಾನೆ . **'ಏವಮಿತಿ'** ಮಾನಸಿಕ, ವಾಚಿಕ, ಕಾಯಿಕ ಮೊದಲಾದ ಎಲ್ಲಾ ಯಜ್ಞಗಳನ್ನು ಕರ್ಮರೂಪಗಳೆಂದು ತಿಳಿದಿ ಎಂದಾದರೆ, ಯುದ್ಧ ಮೊದಲಾದ ಸ್ವವಿಹಿತಕರ್ಮಗಳನ್ನು ಮಾಡಿಯೇ ಸಂಸಾರದಿಂದ ನಿನ್ನನ್ನೂ ಬಿಡುಗಡೆ ಮಾಡಿಸಲು ಬಯಸುವಿ. 'ಎಲ್ಲವೂ ಕರ್ಮದಿಂದ ಹುಟ್ಟಿದವು' ಎಂಬ ಜ್ಞಾನ ಬಂದಾಗ, ಮೋಕ್ಷಕ್ಕೋಸ್ಕರ ಯುದ್ಧಾದಿಗಳು ಕರ್ತವ್ಯವೆಂದು ನಿನಗೇ ಇಚ್ಛೆಯು ಬರುವುದು ಎಂದು ಅಭಿಪ್ರಾಯ.

ಎಲ್ಲವೂ ಯಜ್ಞರೂಪಗಳೇ ಆಗಿರುವಾಗ ಜ್ಞಾನಯಜ್ಞದಿಂದಲೇ ಭಗವಂತನ ಪ್ರೀತಿಯು ಸಿದ್ಧಿಸುವಾಗ ಕರ್ಮಯಜ್ಞವಾದ ಯುದ್ಧವನ್ನೇ ಮಾಡು ಎಂದು ಏಕೆ ನಿರ್ಬಂಧಿಸುವಿ? ಎಂಬ ಅರ್ಜುನನ ಪ್ರಶ್ನೆಗೆ ಉತ್ತರವಾಗಿ **'ಜ್ಞಾತ್ವಾ'** ಎಂದು ಹೇಳಿದ್ದಾನೆ . ಅದರ ಅಭಿಪ್ರಾಯ ಹೀಗಿದೆ – ಮೋಕ್ಷಕ್ಕೋಸ್ಕರ ಯುದ್ಧವನ್ನು ಬಿಟ್ಟು , ಉಪಾಸನೆ ಮೊದಲಾದದ್ದನ್ನು ಮಾಡುವಿ ಎಂದಾದರೆ, ಅದೂ – ಅಂದರೆ ಉಪಾಸನಾದಿಗಳೂ ಕರ್ಮರೂಪವೇ ಆಗಿದೆ. ಆದ್ದರಿಂದ ಯುದ್ಧವನ್ನು ತೊರೆದಾಗ, ಕ್ಷತ್ರಿಯನಾದ ನಿನಗೆ ವಿಹಿತವಾದ ಯುದ್ಧಧರ್ಮವನ್ನು ಬಿಟ್ಟಂತಾಯಿತೇ ಹೊರತು, ಕರ್ಮವನ್ನು ಬಿಟ್ಟಂತೆ ಆಗಲಿಲ್ಲ . ಆದ್ದರಿಂದ ಇದೆಲ್ಲವನ್ನೂ ಬಲ್ಲವನಾದುದರಿಂದ ನಿನಗೆ

ವಿಹಿತವಾದ ಯುದ್ಧವನ್ನು ಬಿಡುವುದು ಸರಿಯಲ್ಲ . ಮೇಲೆ ತಿಳಿಸಿದ ಅಭಿಪ್ರಾಯವು ಇಲ್ಲದಿರುತ್ತಿದ್ದರೆ. '**ಕರ್ಮಜಾನ್ ತಾನ್ ವಿದ್ಧಿ ಸರ್ವಾನ್**' ಎಂಬ ಉತ್ತರಾರ್ಧದಿಂದ ಪ್ರಕೃತಕ್ಕೆ ಯಾವ ಉಪಯೋಗವೂ ಇಲ್ಲಾಂತಾದೀತು.

## 'ವಿಮೋಕ್ಷ್ಯಸೇ' ಎಂಬಲ್ಲಿ ಲಕಾರ ಯಾವುದು ? ರೂಪ ನಿಷ್ಪತ್ತಿ ಹೇಗೆ ?

'ವಿಮೋಕ್ಷ್ಯಸೇ' ಎಂಬ ಪದಕ್ಕೆ 'ಮೋಕ್ತುಂ (ಮೋಚಯಿತುಂ) ಇಚ್ಛಸಿ'= 'ಬಿಡುಗಡೆ ಮಾಡಿಸಲು ಬಯಸುವಿ' ಎಂಬ ಅರ್ಥವನ್ನು ಹೇಳಲಾಗಿದೆ. '**ಲೃಟ್**' ಲಕಾರಾಂತವಾದ '**ವಿಮೋಕ್ಷ್ಯಸೇ**' ಎಂಬ ಪದಕ್ಕೆ ಆ ಅರ್ಥವು ಹೇಗೆ ಕೂಡುವುದು ? ಈ ಪ್ರಶ್ನೆಗೆ ಸಮಾಧಾನ ಕೆಳಕಂಡಂತೆ ಇದೆ- '**ವಿಮೋಕ್ಷ್ಯಸೇ**' ಎಂಬುದು '**ಲೃಟ್**' ಲಕಾರಾಂತವಲ್ಲ. 'ಸನ್' ಪ್ರತ್ಯಯಾಂತ ವಾದ '**ಮುಚ್‌ಲೃ ಮೋಕ್ಷಣೇ**' ಎಂಬ ಧಾತುವಿನ ಮೇಲೆ ಕರ್ಮಕರ್ತೃ ಅರ್ಥದಲ್ಲಿ, ಲಟ್ ಪ್ರತ್ಯಯವು ಬಂದಾಗ' 'ವಿಮೋಕ್ಷ್ಯಸೇ' ಎಂದು ರೂಪವಾಗುವುದು. ವಸ್ತುತಃ '**ಧಾತೋಃ ಕರ್ಮಣಃ**' ಸೂತ್ರಪ್ರಕಾರ '**ಸನ್**'ಪ್ರತ್ಯಯವು ಬಂದ ಮೇಲೆ, '**ಸನ್ ಯಙೋಃ**' ಸೂತ್ರಪ್ರಕಾರ ದ್ವಿತ್ವವು ಬಂದು, 'ಹಲಂತಾಚ್ಚ' ಸೂತ್ರಪ್ರಕಾರ ಕಿತ್ತಾದ ಸನ್‌ಗೆ ಗುಣ ಬಾರದಿರುವಾಗ '**ಮುಮುಕ್ಷ್ಯಸೇ**' ಎಂದು ರೂಪವಾಗಬೇಕಿತ್ತು. ಆದರೂ ವಿಮೋಕ್ಷ್ಯಸೇ'ಎಂಬಲ್ಲಿ ಆಗಿರುವ ಗುಣ ಹಾಗೂ ಅಭ್ಯಾಸಲೋಪಗಳು ಛಾಂದಸಗಳೆಂದು ಒಪ್ಪಿಕೊಂಡು, 'ಸನ್' ಪ್ರತ್ಯಯಾಂತ ವಾದ 'ಮೋಕ್ಷ' ಶಬ್ದದ ಅನಂತರ, 'ವರ್ತಮಾನೇ ಲಟ್' ಸೂತ್ರಪ್ರಕಾರ 'ಲಟ್' ಪ್ರತ್ಯಯವು ಬಂದು , ಅದಕ್ಕೆ ಸಿಬಾದೇಶವು ಬಂದು , '**ಕರ್ಮವತ್-ಕರ್ಮಣಾ ತುಲ್ಯಕ್ರಿಯ**' ಎಂಬ ಸೂತ್ರದಲ್ಲಿ ಕರ್ತೃವಿಗೆ ಕರ್ಮವದ್ ಭಾವವು ಬಂದಾಗ , ಕರ್ಮಕಾರಕ ನಿಮಿತ್ತವಾದ 'ಯಕ್', ಆತ್ಮನೇಪದ, 'ಚಿಣ್ವದ್'ಭಾವ ಮೊದಲಾದ ಕಾರ್ಯಗಳನ್ನು ಹೊಂದುತ್ತದೆ ಎಂದು ಹೇಳಿದ್ದರಿಂದ 'ಯಕ್' ಪ್ರತ್ಯಯವು ಬಂದು, '**ಅತೋ ಲೋಪಃ**' ಸೂತ್ರದ ಪ್ರಕಾರ ಲೋಪವಾದಾಗ '**ಮೋಕ್ಷ್ಯಸೇ**' ಎಂದು ರೂಪವಾಗುವುದು . '**ವಿಮೋಕ್ಷ್ಯಸೇ**' ಎಂಬುದು ಲೃಟ್ ಪ್ರತ್ಯಯಾಂತ ಎಂದಿಟ್ಟುಕೊಂಡಲ್ಲಿ ಕೆಳಕಂಡಂತೆ ಅರ್ಥ ಹೇಳಬೇಕು- ಎಲ್ಲಾ ಯಜ್ಞಗಳೂ ಕರ್ಮದಿಂದ ಹುಟ್ಟಿದವುಗಳೆಂದು ತಿಳಿದು , ಅವುಗಳನ್ನು ಅನುಷ್ಠಾನ ಮಾಡಿ, ಮುಕ್ತನು ಆಗುವಿ ಎಂದು .

## ಜ್ಞಾನಯಜ್ಞದಿಂದ ಕರ್ಮದ ಪೂರ್ಣತೆ

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾದ್‌ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥ 33 ॥**

**ಅರ್ಥ**- ಅರ್ಜುನನೇ ! ಹಿಂದೆ ಹೇಳಿದ ದ್ರವ್ಯಯಜ್ಞ ಮುಂತಾದ ಎಲ್ಲಾ ಯಜ್ಞಗಳಿಗಿಂತಲೂ

ಭಗವಂತನ ತತ್ತ್ವಜ್ಞಾನ ಸಂಪಾದನ ರೂಪವಾದ ಜ್ಞಾನಯಜ್ಞವೇ ಶ್ರೇಷ್ಠವಾದದ್ದು. ಏಕೆಂದರೆ ಅಂಗಸಹಿತವಾದ ಎಲ್ಲಾ ಕರ್ಮವೂ ಜ್ಞಾನ ಬಂದಾಗಲೇ ಸಫಲವಾಗುವುದು. ಅತ್ಯಂತ ಅಲ್ಪವಾದ ಕರ್ಮವೂ ಜ್ಞಾನದಿಂದ ಸಫಲವೇ ಆಗುವುದು.

**ಉಕ್ತಯಜ್ಞೇಷು ಕೋ ಯಜ್ಞಃ ಶ್ರೇಷ್ಠ ಇತಿ ಜಿಜ್ಞಾಸಾಯಾಮಾಹ- ಶ್ರೇಯಾನಿತಿ ॥ ದ್ರವ್ಯಮಯಾದಿತಿ ಪ್ರಾಗುಕ್ತಯಜ್ಞಾಂತರಾಣಾಮುಪಲಕ್ಷಣಮ್ । ದೇವತೋದ್ದೇಶೇನ ದ್ರವ್ಯತ್ಯಾಗಾದಿರೂಪಾದ್ಯಜ್ಞಾದ್ ಭಗವದ್ ಜ್ಞಾನ- ಸಂಪಾದನರೂಪೋ ಯಜ್ಞಃ ಶ್ರೇಯಾನ್ ಶ್ರೇಷ್ಠಃ । ಕುತ ಇತ್ಯತ ಉಕ್ತಂ ಸರ್ವ- ಮಿತಿ ॥ ಅಖಿಲಂ ಖಿಲಂ ಸಶೇಷಂ ನ ಭವತೀತ್ಯಖಿಲಮ್ । ಸಮುದ್ರಂ ಮನಸಾ ಧ್ಯಾಯೀತೇತ್ಯಾದಿಕರ್ಮಸಮೃದ್ಧ್ಯರ್ಥೋಪಾಸನಾದ್ಯಂಗಸಹಿತಂ ಸರ್ವಂ ಕರ್ಮ ಜ್ಞಾನೇ ಪರಿಸಮಾಪ್ಯತೇ ಪೂರ್ಯತೇ । ಜ್ಞಾನೇ ಜಾತೇ ಜ್ಞಾನಲಕ್ಷಣಫಲೇನ ಸಫಲಂ ಭವತೀತ್ಯರ್ಥಃ । ಯದ್ವಾ ಆಖಿಲಮಿತಿ ವಿಭಾಗಃ । ಆ ಸಮಂತಾತ್ ಖಿಲಮಲ್ಪಮತ್ಯಲ್ಪಮಪಿ ಸರ್ವಂ ಕರ್ಮ ಜ್ಞಾನೇ ಜಾತೇ ಪರಿಸಮಾಪ್ಯತೇ । ಫಲವದ್ಭವತೀತ್ಯರ್ಥಃ ॥ 33 ॥**

**ಅನುವಾದ** - ಹಿಂದೆ ಹೇಳಿದ ಯಜ್ಞಗಳಲ್ಲಿ ಯಾವ ಯಜ್ಞವು ಶ್ರೇಷ್ಠ ಎಂಬ ಜಿಜ್ಞಾಸೆಗೆ ಉತ್ತರರೂಪವಾಗಿ ಹೇಳುತ್ತಾನೆ. '**ಶ್ರೇಯಾನ್......**' ಮುಂತಾಗಿ. '**ದ್ರವ್ಯಮಯಾತ್**' ಎಂಬ ಪದವು ಹಿಂದೆ ಹೇಳಿದ ಎಲ್ಲಾ ಯಜ್ಞಗಳಿಗೂ ಉಪಲಕ್ಷಣವಾಗಿದೆ. ದೇವತೆಗಳ ಉದ್ದೇಶದಿಂದ ದ್ರವ್ಯವನ್ನು ದಾನ ಮಾಡುವುದೆಂಬ ದ್ರವ್ಯಯಜ್ಞಕ್ಕಿಂತಲೂ, ಭಗವಂತನ ತತ್ತ್ವಜ್ಞಾನ ಸಂಪಾದನಾರೂಪವಾದ ಜ್ಞಾನಯಜ್ಞವೇ ಶ್ರೇಷ್ಠವಾದದ್ದು . ಅದಕ್ಕೆ ಕಾರಣವನ್ನು '**ಸರ್ವಂ**' ಇತ್ಯಾದಿ ಉತ್ತರಾರ್ಧದಿಂದ ಹೇಳುತ್ತಾನೆ.

'ಖಿಲಂ' ಎಂದರೆ ಉಳಿಕೆಯಿಂದ ಕೂಡಿದ್ದು ಅದಕ್ಕೆ ವಿರುದ್ಧವಾಗಿ 'ಅಖಿಲಂ' ಎಂದರೆ ಉಳಿಕೆ ಇಲ್ಲದ್ದು . '**ಸಮುದ್ರಂ ಮನಸಾ ಧ್ಯಾಯೀತ** ' ಇದೇ ಮೊದಲಾದ ಕರ್ಮಸಮೃದ್ಧಿಯೇ ಪ್ರಯೋಜನವಾಗಿ ಉಳ್ಳ , ಉಪಾಸನಾದಿ ಅಂಗಗಳಿಂದ ಸಹಿತವಾದ ಎಲ್ಲಾ ಕರ್ಮವೂ ಜ್ಞಾನ ಬಂದಾಗ ಪೂರ್ಣವಾಗುತ್ತದೆ. ಜ್ಞಾನ ಬಂದಾಗ, ಜ್ಞಾನರೂಪವಾದ ಫಲದಿಂದ ಎಲ್ಲಾ ಕರ್ಮವೂ ಸಫಲವಾಗುತ್ತದೆಂದು ಭಾವ.

**ಗೀತಾತಾತ್ಪರ್ಯದಂತೆ ಅಭಿಪ್ರಾಯ –**

'**ಕರ್ಮ + ಆಖಿಲಂ**', ಎಂದು ಪದ ವಿಭಾಗ. 'ಆ' ಎಂದರೆ – ಸುತ್ತಲೂ , 'ಖಿಲಂ' ಎಂದರೆ

ಚಿಕ್ಕದು. ಅತ್ಯಲ್ಪವಾದುದೆಂದು ಅಭಿಪ್ರಾಯ . ಅತ್ಯಲ್ಪವಾದ ಎಲ್ಲಾ ಕರ್ಮವೂ ಜ್ಞಾನ ಬಂದಾಗ ಸಫಲವಾಗುವುದು ಎಂದು ಭಾವ.

**ವಿವರಣೆ– 'ಪರಿಸಮಾಪ್ಯತೇ'** ಎಂಬ ಪದಕ್ಕೆ **'ಸಮಾಪ್ತಿ ಹೊಂದುತ್ತದೆ'** ಎಂಬ ಅರ್ಥವನ್ನು ಇಟ್ಟುಕೊಂಡು , 'ಎಲ್ಲಾ ಕರ್ಮಗಳೂ ಜ್ಞಾನ ಬಂದಾಗ ಸಮಾಪ್ತಿ ಹೊಂದುತ್ತವೆ, ಜ್ಞಾನ ಬಂದ ಮೇಲೆ ಕರ್ಮಗಳು ಬೇಡ, ಎಂದು ಕೆಲವರು ವ್ಯಾಖ್ಯಾನ ಮಾಡುತ್ತಾರೆ. ಆ ವ್ಯಾಖ್ಯಾನ ಸರಿಯಿಲ್ಲ. ಏಕೆಂದರೆ ಅಧ್ಯಾಯದ ಕೊನೆಯಲ್ಲಿ 42ನೆಯ ಶ್ಲೋಕದಲ್ಲಿ ಜ್ಞಾನಬಂದ ಮೇಲೂ ಕರ್ಮವನ್ನು ಮಾಡಬೇಕೆಂದು ಹೇಳಿದ್ದಾನೆ.

ಆದ್ದರಿಂದ 'ಪರಿಸಮಾಪ್ಯತೇ' ಎಂಬ ಪದಕ್ಕೆ ಪೂರ್ಣಗೊಳ್ಳುತ್ತದೆ ಅಥವಾ ಸಫಲವಾಗುತ್ತದೆ ಎಂದು ಅರ್ಥವನ್ನು ಅಂಗೀಕರಿಸಬೇಕು.

## ಗುರುವಿನ ಗುಲಾಮನಾಗದ ತನಕ ದೊರೆಯದಣ್ಣ ಅರಿವು

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥ 34 ॥**

**ಅರ್ಥ–** ಜ್ಞಾನವು ಕರ್ಮಕ್ಕಿಂತ ಶ್ರೇಷ್ಠವಾಗಿದೆ, ಕರ್ಮವು ಸಫಲವೆನಿಸುವುದೂ ಜ್ಞಾನ ದಿಂದಲೇ. ಆದ್ದರಿಂದ ತತ್ತ್ವವನ್ನು ಬಲ್ಲವರಾದ ನಾವು, ಶಿಷ್ಯನಾದ ನೀನು ನಮ್ಮನ್ನು ನಮಸ್ಕರಿಸುವುದರಿಂದ, ಪ್ರಶ್ನೆ ಮಾಡುವುದರಿಂದ, ಸೇವಿಸುವುದರಿಂದ, ನಿನಗೆ ಶಾಸ್ತ್ರವನ್ನು ಉಪದೇಶಿಸುತ್ತೇವೆ. ನಾವು ಉಪದೇಶಿಸುವ ತತ್ತ್ವವನ್ನು ತಿಳಿ.

**ಕರ್ಮಣೋ ಜ್ಞಾನಮಧಿಕಮಿತ್ಯುಕ್ತ್ವಾ ತತ್ಸಂಪಾದಯೇತ್ಯಾಹ– ತದಿತಿ ॥ ತಸ್ಮಾದ್‌ಜ್ಞಾನಸ್ಯಾಧಿಕತ್ವಾತ್ ಕರ್ಮಣಾಂ ಜ್ಞಾನೇನೈವ ಫಲವತ್ತ್ವಾದಿತಿ ವಾ । ತತ್ತ್ವದರ್ಶಿನೋ ಜ್ಞಾನಿನಃ ಪ್ರಣಿಪಾತೇನ ತ್ವತ್ಕೃತವಂದನೇನ ತ್ವತ್ಸೇವಯಾ ತ್ವತ್ಕೃತ-ಪರಿಪ್ರಶ್ನೇನ ಚ ತೇ ತುಭ್ಯಂ ಜ್ಞಾನಂ ಜ್ಞಾನಜನಕಂ ಶಾಸ್ತ್ರಮುಪದೇಕ್ಷ್ಯಂತಿ । ತೇಭ್ಯಃ ತದ್‌ಜ್ಞಾತವ್ಯಮರ್ಥಂ ವಿದ್ಧಿ ಜಾನೀಹಿ । ತದಿತ್ಯಸ್ಯಾವೃತ್ತಿಃ । ಅರ್ಜುನಸ್ಯ ಜ್ಞಾನಿತ್ವೇಽಪಿ ಜ್ಞಾನತಿರೋಭಾವನಿವೃತ್ತ್ಯರ್ಥಂ ವಿದ್ಧೀತ್ಯುಕ್ತಿಃ । ಪಾರ್ಥಂ ಪ್ರತಿ ಜ್ಞಾನೋಪದೇಶಾರ್ಥಮೇವ ಕೃಷ್ಣಸ್ಯ ಪ್ರವೃತ್ತತ್ವಾತ್ 'ನ ತ್ವೇವಾಹಂ' (2–12) ಇತ್ಯಾದಿನಾ ಸಂಕ್ಷೇಪೇಣೋಪದಿಷ್ಟತ್ವಾತ್ 'ಜ್ಞಾನಂ ತೇಽಹಂ ಸವಿಜ್ಞಾನಂ' (7–2) ಇತ್ಯಾದಿನಾ ವಿಸ್ತರೇಣೋಪದೇಕ್ಷ್ಯಮಾಣತ್ವಾತ್ ತದವಿರೋಧಾ-ಯೋಪದೇಕ್ಷ್ಯಂತೀತ್ಯಸ್ಯೋಪದೇಕ್ಷ್ಯಾಮ ಇತ್ಯರ್ಥೋ ಜ್ಞೇಯಃ ॥ 34 ॥**

**ಅನುವಾದ** - ಕರ್ಮಕ್ಕಿಂತ ಜ್ಞಾನಕ್ಕೆ ಶ್ರೇಷ್ಠತೆಯನ್ನು ಹೇಳಿ, ಅದನ್ನು ಸಂಪಾದಿಸು ಎಂದು ಹೇಳುತ್ತಾನೆ- 'ತದ್ವಿದ್ಧಿ ...' ಮುಂತಾಗಿ. '**ತತ್**'= **ತಸ್ಮಾತ್**= ಕರ್ಮಕ್ಕಿಂತಲೂ ಜ್ಞಾನವೇ ಶ್ರೇಷ್ಠವಾದ್ದರಿಂದ . ಅಥವಾ ಕರ್ಮದ ಸಫಲತೆಯು ಜ್ಞಾನದಿಂದಲೇ ಆಗುವುದರಿಂದ ಈ '**ತತ್**' ಪದವನ್ನು ಆವೃತ್ತಿ ಮಾಡಿಕೊಳ್ಳಬೇಕು. ಆವೃತ್ತವಾದ '**ತತ್**' ಶಬ್ದಕ್ಕೆ - 'ಅದನ್ನು' ಅಂದರೆ ತಿಳಿಯಬೇಕಾದ ವಿಚಾರವನ್ನು ಎಂದು ಅರ್ಥ. '**ವಿದ್ಧಿ**' ತಿಳಿ ಎಂಬ ಕ್ರಿಯಾಪದದೊಂದಿಗೆ ಆವೃತ್ತ ತದ್ ಶಬ್ದಕ್ಕೆ ಅನ್ವಯ. ಒಟ್ಟು ಶ್ಲೋಕಾರ್ಥ ಹೀಗಿದೆ- ಜ್ಞಾನವು ಕರ್ಮಕ್ಕಿಂತ ಶ್ರೇಷ್ಠವಾದ್ದರಿಂದ, ಕರ್ಮದ ಸಫಲತೆಯು ಜ್ಞಾನದಿಂದ ಆಗುವುದಾದ್ದರಿಂದ, ಆ ಜ್ಞಾನವನ್ನು ಸಂಪಾದಿಸಲು ತತ್ತ್ವದ್ರಷ್ಟಾರರಾದ ಜ್ಞಾನಿಗಳನ್ನು ನಮಸ್ಕರಿಸು, ಸೇವಿಸು. ಅವರ ಬಳಿ ಪ್ರಶ್ನಿಸು. ಆ ರೀತಿ ನೀನು ಅವರ ಬಳಿ ಹೋದಾಗ ಶಾಸ್ತ್ರವನ್ನು ಉಪದೇಶಿಸುವರು . ಅವರು ಉಪದೇಶಿಸುವ ಶಾಸ್ತ್ರವನ್ನು ನೀನು ತಿಳಿ.

ಅರ್ಜುನ ಜ್ಞಾನಿಯಾಗಿದ್ದರೂ, ಅವನ ಜ್ಞಾನವು ಈಗ ತಿರೋಹಿತವಾಗಿ, ಮೋಹ ಉಂಟಾಗಿದೆ . ಆ ಮೋಹದ ನಿರಾಸಕ್ಕಾಗಿ '**ವಿದ್ಧಿ**'= ತಿಳಿ, ಎಂಬುದಾಗಿ ಅರ್ಜುನನನ್ನು ಕುರಿತು ಹೇಳಲಾಗಿದೆ. '**ಉಪದೇಕ್ಷ್ಯಂತಿ ತೇ ಜ್ಞಾನಂ**' ಎಂದರೆ- ಅರ್ಜುನನಿಗೆ ಕೃಷ್ಣನನ್ನು ಬಿಟ್ಟು ಬೇರೆ ಯಾರೋ ಉಪದೇಶಿಸುತ್ತಾರೆ ಎಂದು ಅರ್ಥವಾಗುವುದು. ಆದರೆ ಅದು ಸರಿಯಲ್ಲ . ಅರ್ಜುನನ ಉಪದೇಶಕ್ಕಾಗಿ ಕೃಷ್ಣ ಪ್ರವೃತ್ತನಾಗಿದ್ದಾನೆ. '**ನ ತ್ವೇವಾಹಂ**' (2.12) ಎಂದು ಸಂಕ್ಷೇಪವಾಗಿ ಉಪದೇಶಿಸಿದ್ದಾನೆ. '**ಜ್ಞಾನಂ ತೇಽಹಂ ಸವಿಜ್ಞಾನಂ ....**'(7.2) ಮುಂತಾಗಿ ಮುಂದೆ ಉಪದೇಶಿಸಲಿದ್ದಾನೆ. ಆದ್ದರಿಂದ '**ಉಪದೇಕ್ಷ್ಯಂತಿ**' ಪದಕ್ಕೆ '**ಉಪದೇಕ್ಷ್ಯಾಮಃ**' = ಉಪದೇಶಿಸುತ್ತೇವೆ ಎಂಬ ಅರ್ಥವನ್ನು ಇಟ್ಟುಕೊಳ್ಳಬೇಕು.

**ಯದ್‌ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥ 35 ॥**

**ಅರ್ಥ**- ನಾವು ಮುಂದೆ ಹೇಳುವ ಆ ತತ್ತ್ವವನ್ನು ತಿಳಿದ ಮೇಲೆ ತಿರುಗಿ ಹೀಗೆ ಬಂಧು ಮೋಹವನ್ನು ಹೊಂದಲಾರೆ. ಅರ್ಜುನ ! ಈ ಜ್ಞಾನದಿಂದ ಮೋಹ ದೂರವಾಗುವುದರಿಂದ, ಸರ್ವಾಂತರ್ಯಾಮಿಯೂ, ಸರ್ವವ್ಯಾಪ್ತನೂ ಆದ ನನ್ನಲ್ಲಿ ಎಲ್ಲಾ ಜೀವಿಗಳೂ ಆಶ್ರಯಿಸಿ ರುವುದನ್ನು ನೀನು ನೋಡುವಿ . ಅಂಥ ಜ್ಞಾನವನ್ನು ಪಡೆ.

**ಸ್ವೇನೋಪದೇಕ್ಷ್ಯಮಾಣಂ ಜ್ಞಾನಂ ಸ್ತೌತಿ ಭಗವಾನ್ - ಯದ್ ಜ್ಞಾತ್ವೇತಿ ॥ ಯತ್ ಮಯಾ ವಕ್ಷ್ಯಮಾಣಂ ಜ್ಞಾತ್ವಾ ಪುನಃ**

**ಏವಮಾದ್ಯಾಧ್ಯಾಯೋಕ್ತದಿಶಾ ಬಂಧುವಿಷಯಮೋಹಂ ನ ಯಾಸ್ಯಸಿ । ಹೇ ಪಾಂಡವ ! ಯೇನ ಜ್ಞಾನೇನ ಅಥೋ ಮೋಹನಾಶಾದ್ಧೇತೋರಾತ್ಮನಿ ಸರ್ವಾಂತರ್ಯಾಮಿಣಿ ಮಯಿ ಭೂತಾನ್ಯಶೇಷೇಣ ದ್ರಕ್ಷ್ಯಸಿ ಮದಾಧಾರತ್ವೇನ ಸರ್ವಭೂತಾನಿ ತಿಷ್ಠಂತೀತಿ ದ್ರಕ್ಷ್ಯಸೀತ್ಯರ್ಥಃ । ಯದ್ವಾ ಆತ್ಮನಿ ಸರ್ವತ್ರ ವ್ಯಾಪ್ತೇ ಮಯಿ ಅಥೋ ವ್ಯಾಪ್ತತ್ವಾದೇವ ಸರ್ವಭೂತಾನ್ಯಶೇಷೇಣ ದ್ರಕ್ಷ್ಯಸಿ । ಯೇನ ಜ್ಞಾನೇನ ತದ್ವಿದ್ಧಿ ತದ್‌ಜ್ಞಾನವಿಷಯಂ ಜಾನೀಹೀತಿ । ವಿದ್ಧಿ ಪ್ರಾಪ್ನುಹೀತಿ ವಾಽನ್ವಯಃ ॥ 35 ॥**

**ಅನುವಾದ** - ತಾನು ಉಪದೇಶ ಮಾಡಲಿರುವ ಜ್ಞಾನವನ್ನು ಭಗವಂತನು ಸ್ತುತಿಸುತ್ತಾನೆ- '**ಯತ್ ಜ್ಞಾತ್ವಾ**' ಮುಂತಾದ ಶ್ಲೋಕದಿಂದ. '**ಯತ್ ಜ್ಞಾತ್ವಾ**' ನಾನು ಮುಂದೆ ಹೇಳಲಿರುವುದನ್ನು ತಿಳಿದು, **ಪುನಃ ಏವಂ** = ಮೊದಲನೆಯ ಅಧ್ಯಾಯದಲ್ಲಿ ಹೇಳಿದಂತೆ, **ಮೋಹಂ ನ ಯಾಸ್ಯಸಿ** = ಬಂಧು ವಿಷಯಕವಾದ ಮೋಹವನ್ನು ಹೊಂದುವುದಿಲ್ಲ. **ಪಾಂಡವ** = ಎಲೈ ಅರ್ಜುನನೇ, **ಯೇನ** = ಯಾವ ಜ್ಞಾನದಿಂದ, **ಅಥೋ** = ಮೋಹನಾಶವಾಗುವ ಕಾರಣದಿಂದ '**ಆತ್ಮನಿ**' '**ಮಯಿ**' = ಎಲ್ಲರಲ್ಲಿ ಪ್ರೇರಕನಾಗಿರುವ ನನ್ನಲ್ಲಿ ಆಶ್ರಿತವಾಗಿ '**ಭೂತಾನಿ ಅಶೇಷೇಣ ದ್ರಕ್ಷ್ಯಸಿ**' - ಎಲ್ಲಾ ಜೀವಿಗಳೂ ಇವೆ ಎಂದು ಕಾಣುವಿ.

**ತಾತ್ಪರ್ಯದಂತೆ ವಿವರಣೆ -**

**ಆತ್ಮನಿ ಮಯಿ** = ಸರ್ವತ್ರ ವ್ಯಾಪ್ತನಾದ ನನ್ನಲ್ಲಿ , **ಅಥೋ** = ವ್ಯಾಪ್ತನಾದ ಕಾರಣದಿಂದಲೇ, **ಸರ್ವಭೂತಾನಿ ಅಶೇಷೇಣ ದ್ರಕ್ಷ್ಯಸಿ** = ಎಲ್ಲಾ ಜೀವಿಗಳನ್ನೂ ಕಾಣುವಿ. **ಯೇನ** = ಯಾವ ಜ್ಞಾನದಿಂದ, **ತದ್ ವಿದ್ಧಿ** = ಆ ಜ್ಞಾನ ವಿಷಯವಾದದ್ದನ್ನೂ ತಿಳಿದುಕೋ ಅಥವಾ 'ವಿದ್ಧಿ' ಜ್ಞಾನವನ್ನು ಹೊಂದು ಎಂದು ಅನ್ವಯ.

## ಪಾಪಸಾಗರ ದಾಟಲು ಜ್ಞಾನನೌಕೆ ಬೇಕು

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥ 36 ॥**

**ಅರ್ಥ**- ಎಲ್ಲಾ ಪಾಪಿಗಳಿಗಿಂತ ಹೆಚ್ಚಿನ ಪಾಪಿ ನೀನಾಗಿದ್ದರೂ , ಆ ಎಲ್ಲಾ ಪಾಪಗಳನ್ನು ಜ್ಞಾನವೆಂಬ ನೌಕೆಯಿಂದಲೇ ದಾಟುವಿ.

**ಯೇನೇತಿ ಕರಣತಯಾ ನಿರ್ದಿಷ್ಟಂ ಜ್ಞಾನಮೇವ ಸ್ತೌತಿ ಪುನಃ- ಅಪಿ ಚೇದಸೀತ್ಯಾದಿತ್ರಯೇಣ ॥ ಸರ್ವೇಭ್ಯಃ ಪಾಪೇಭ್ಯಃ ಪಾಪಕೃದ್ಭ್ಯೋಽಪಿ**

**ಪಾಪಕೃತ್ತಮಶ್ಚೇದಸಿ ಅತಿಶಯೇನ ಪಾಪಕಾರೀ ಚೇದಸೀತಿ ಯಾವತ್ । ತಥಾಽಪಿ ಸ ಸರ್ವಂ ವೃಜಿನಂ ಜ್ಞಾನಪ್ಲವೇನೈವ ಜ್ಞಾನಾಖ್ಯನಾವಾ ಸಂತರಿಷ್ಯಸಿ । ಪಾಪಾದತಿಕ್ರಾಂತೋ ಭವಿಷ್ಯಸೀತ್ಯರ್ಥಃ ॥ 36 ॥**

**ಅನುವಾದ**- ಹಿಂದಿನ ಶ್ಲೋಕದಲ್ಲಿ 'ಯೇನ' ಎಂಬ ಪದದಿಂದ ಕರಣವಾಗಿ ನಿರ್ದಿಷ್ಟವಾದ ಜ್ಞಾನವನ್ನೇ ಸ್ತುತಿಸುತ್ತಾನೆ 'ಅಪಿ ಚೇದಸಿ' ಮುಂತಾಗಿ ಮುಂದಿನ ಮೂರು ಶ್ಲೋಕಗಳಿಂದ.

**ಸರ್ವೇಭ್ಯಃ ಪಾಪೇಭ್ಯಃ**– ಎಲ್ಲಾ ಪಾಪಿಗಳಿಗಿಂತಲೂ, **'ಪಾಪಕೃತ್ತಮಃ'**

**ಅಪಿ ಚೇದಸಿ'**– ಅತಿಶಯವಾಗಿ ಪಾಪವನ್ನು ಮಾಡಿರುವವನಾದರೂ,

**'ಸರ್ವಂ ವೃಜಿನಂ'** – ಎಲ್ಲಾ ಪಾಪವನ್ನೂ **'ಜ್ಞಾನಪ್ಲವೇನ ಏವ'** ಜ್ಞಾನವೆಂಬ ನೌಕೆಯಿಂದಲೇ, **ಸಂತರಿಷ್ಯಸಿ** = ದಾಟುವಿ. ಎಲ್ಲಾ ಪಾಪಗಳಿಂದ ದೂರನಾಗುವಿ ಎಂದು ಅಭಿಪ್ರಾಯ.

## ಪ್ರಾರಬ್ಧವಲ್ಲದ ಕರ್ಮವು ಜ್ಞಾನಾಗ್ನಿಯಿಂದ ಭಸ್ಮವಾಗುವುದು

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥ 37 ॥**

**ಅರ್ಥ**- ಪ್ರಜ್ವಲಿಸುವ ಅಗ್ನಿಯು ಯಾವ ರೀತಿ ಎಲ್ಲಾ ಕಟ್ಟಿಗೆಗಳನ್ನೂ ಭಸ್ಮ ಮಾಡುತ್ತದೋ, ಅದೇ ರೀತಿ ಜ್ಞಾನವೆಂಬ ಅಗ್ನಿಯು ಪ್ರಾರಬ್ಧವಲ್ಲದ ಎಲ್ಲಾ ಕರ್ಮಗಳನ್ನು ಬೂದಿ ಮಾಡುತ್ತದೆ. ಆದ್ದರಿಂದ ಜ್ಞಾನವು ಪ್ರಶಸ್ತವಾಗಿದೆ.

**ಯಥಾ ಏಧಾಂಸಿ ದಾರೂಣಿ ಸಮಿದ್ಧಃ ಪ್ರದೀಪ್ತಃ ಅಗ್ನಿಃ ಭಸ್ಮಸಾತ್ಕುರುತೇ । ತಥಾ ಜ್ಞಾನಾಖ್ಯೋಽಗ್ನಿಃ ಸರ್ವಕರ್ಮಾಣ್ಯಪ್ರಾರಬ್ಧಾನಿ ಭಸ್ಮಸಾತ್ಕುರುತೇ । ಅತಃ ಪ್ರಶಸ್ತಂ ಜ್ಞಾನಮಿತಿ ॥ 37 ॥**

**ಅನುವಾದ - ಯಥಾ ಏಧಾಂಸಿ** = ಯಾವ ರೀತಿ ಕಟ್ಟಿಗೆಗಳನ್ನು , **ಸಮಿದ್ಧಃ ಅಗ್ನಿಃ**= ಪ್ರಜ್ವಲಿಸುವ ಅಗ್ನಿಯು **'ಭಸ್ಮಸಾತ್ ಕುರುತೇ'** ಭಸ್ಮ ಮಾಡುತ್ತದೆ. **ತಥಾ ಜ್ಞಾನಾಗ್ನಿಃ**= ಅದೇ ರೀತಿ ಅಪರೋಕ್ಷಜ್ಞಾನವೆಂಬ ಅಗ್ನಿಯು , **ಸರ್ವಕರ್ಮಾಣಿ** = ಪ್ರಾರಬ್ಧ ಬಿಟ್ಟು ಉಳಿದ ಕರ್ಮಗಳನ್ನು , **ಭಸ್ಮಸಾತ್ಕುರುತೇ** = ಭಸ್ಮಮಾಡುತ್ತದೆ. ಆದ್ದರಿಂದ ಜ್ಞಾನವು ಪ್ರಶಸ್ತವಾಗಿದೆ.

## ಜ್ಞಾನಕ್ಕೆ ಸಮವಾದ ಪವಿತ್ರವಸ್ತುವಿಲ್ಲ

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥ 38 ॥**

**ಅರ್ಥ**– ಈ ಲೋಕದಲ್ಲಿ ಜ್ಞಾನಕ್ಕೆ ಸಮಾನವಾದ ಪವಿತ್ರವಾದ ವಸ್ತು ಮತ್ತೊಂದಿಲ್ಲ. ಅಂತಹ ಜ್ಞಾನವನ್ನು , ಜ್ಞಾನೋಪಾಯ ಸಂಪಾದನೆಯಲ್ಲಿ ಸ್ವಯಂ ಸಿದ್ಧಿಪಡೆದವನು ಬಹುಕಾಲಾನಂತರ ಪಡೆಯುತ್ತಾನೆ .

**ಇಹ ಲೋಕೇ ಜ್ಞಾನೇನ ಸದೃಶಂ ಪವಿತ್ರಂ ನ ಹಿ ವಿದ್ಯತೇ । ತದ್ ಜ್ಞಾನಂ ಸ್ವಯಂ ಯೋಗಸಂಸಿದ್ಧಃ ಯೋಗವಿಷಯೇ ಸಮ್ಯಕ್ ಸಿದ್ಧಿಮಾನ್ ಸಂಸಿದ್ಧ-ಜ್ಞಾನೋಪಾಯಃ ಸನ್ ಕಾಲೇನ ಬಹುನಾ ಆತ್ಮನಿ ವಿಂದತಿ ಪ್ರಾಪ್ನೋತಿ ॥ 38 ॥**

**ಅನುವಾದ**- **ಇಹ**= ಈ ಲೋಕದಲ್ಲಿ, **ಜ್ಞಾನೇನ ಸದೃಶಂ ಪವಿತ್ರಂ ನ ಹಿ ವಿದ್ಯತೇ**= ಜ್ಞಾನಕ್ಕೆ ಸಮಾನವಾದ ಪರಿಶುದ್ಧವಾದ ವಸ್ತು ಮತ್ತೊಂದಿಲ್ಲ. **ತತ್**= ಆ ಜ್ಞಾನವನ್ನು, **ಸ್ವಯಂ ಯೋಗಸಂಸಿದ್ಧಃ**= ಸಾಧನವಾದ ನಿವೃತ್ತಕರ್ಮಾದಿಗಳನ್ನು ಚೆನ್ನಾಗಿ ಆಚರಿಸಿ ಸಿದ್ಧಿ ಹೊಂದಿದವನು, **ಕಾಲೇನ** = ಬಹುಕಾಲದ ನಂತರ, **ಆತ್ಮನಿ ವಿಂದತಿ**= ತನ್ನ ಮನಸ್ಸಿನಲ್ಲಿ ಪಡೆಯುತ್ತಾನೆ.

## ಶ್ರದ್ಧಾವಂತನಾದ ಇಂದ್ರಿಯನಿಗ್ರಹವುಳ್ಳವನಿಗೆ ಮಾತ್ರವೇ ಬ್ರಹ್ಮಸಾಕ್ಷಾತ್ಕಾರ

**ಶ್ರದ್ಧಾವಾನ್‌ಲಭತೇ ಜ್ಞಾನಂ ಮತ್ಪರಃ ಸಂಯತೇಂದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥ 39 ॥**

**ಅನುವಾದ** – ಶ್ರದ್ಧಾವಂತನಾದ , ಇಂದ್ರಿಯ ನಿಗ್ರಹವನ್ನು ಪಡೆದಿರುವ, ನನ್ನಲ್ಲೇ (ಕೃಷ್ಣನಲ್ಲೇ) ನಿಷ್ಠೆ ಉಳ್ಳ ಸಾಧಕನು ಅಪರೋಕ್ಷ ಜ್ಞಾನವನ್ನು ಹೊಂದುತ್ತಾನೆ . ಆ ಅಪರೋಕ್ಷ ಜ್ಞಾನವನ್ನು ಹೊಂದಿದ ಮೇಲೆ, ಉತ್ತಮವಾದ ಮೋಕ್ಷವನ್ನು ಪ್ರಾರಬ್ಧಕರ್ಮವಿಲ್ಲದಿದ್ದಲ್ಲಿ ಬೇಗನೇ, ಇದ್ದಲ್ಲಿ ಅದು ತೀರಿದೊಡನೆ ಹೊಂದುತ್ತಾನೆ.

**ಏವಂ ಜ್ಞಾನಂ ಪ್ರಶಸ್ಯ ತಸ್ಯಾಂತರಂಗಸಾಧನಂ ಫಲಂ ಚಾಹ- ಶ್ರದ್ಧಾ-ವಾನಿತಿ ॥ ಆಸ್ತಿಕ್ಯಬುದ್ಧಿಮಾನ್‌ಮತ್ಪರೋ ಮದೇಕನಿಷ್ಠಃ ಸಂಯತೇಂದ್ರಿಯೋ ಜಿತೇಂದ್ರಿಯಶ್ಚ ಜ್ಞಾನಂ ಲಭತೇ । ಜ್ಞಾನಂ ಲಬ್ಧ್ವಾ ಪರಾಂ ಶಾಂತಿಂ ಮೋಕ್ಷ-**

**ಮಚಿರೇಣಾವಿಲಂಬೇನಾಧಿಗಚ್ಛತಿ ಪ್ರಾಪ್ನೋತಿ ಅಸತಿ ಪ್ರಾರಬ್ಧೇ । ಸತಿ ತು ತಸ್ಮಿನ್ ತದ್ಭೋಗಾನಂತರಮಿತಿ ॥ 39 ॥**

**ಅನುವಾದ-** ಈ ರೀತಿಯಾಗಿ ಜ್ಞಾನವನ್ನು ಸ್ತುತಿಸಿ, ಅದರ ಅಂತರಂಗ ಸಾಧನವನ್ನು, ಫಲವನ್ನೂ ಹೇಳುತ್ತಾನೆ. '**ಶ್ರದ್ಧಾವಾನ್**' ಮುಂತಾದ ಶ್ಲೋಕದಿಂದ. '**ಶ್ರದ್ಧಾವಾನ್**'= ಆಸ್ತಿಕ್ಯ ಬುದ್ಧಿ ಉಳ್ಳವನು , **ಮತ್ಪರಃ** = ನನ್ನಲ್ಲಿಯೇ ನಿಷ್ಠೆಯನ್ನು ಹೊಂದಿದವನು, **ಸಂಯತೇಂದ್ರಿಯಃ**= ಇಂದ್ರಿಯ ನಿಗ್ರಹ ಉಳ್ಳವನು, **ಜ್ಞಾನಂ ಲಭತೇ** = ಅಪರೋಕ್ಷ ಜ್ಞಾನವನ್ನು ಹೊಂದುತ್ತಾನೆ. '**ಜ್ಞಾನಂ ಲಬ್ಧ್ವಾ**'= ಅಂತಹ ಜ್ಞಾನವನ್ನು ಪಡೆದ ಮೇಲೆ **ಪರಾಂ ಶಾಂತಿಂ**= ಮೋಕ್ಷವನ್ನು, **ಅಚಿರೇಣ ಅಧಿಗಚ್ಛತಿ**= ಪ್ರಾರಬ್ಧ ಕರ್ಮವಿಲ್ಲದಿದ್ದಲ್ಲಿ ಕೂಡಲೇ ಹೊಂದುತ್ತಾನೆ. ಪ್ರಾರಬ್ಧ ಕರ್ಮವಿದ್ದಲ್ಲಿ ಅದು ತೀರಿದೊಡನೆ ಹೊಂದುತ್ತಾನೆ.

**ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥ 40 ॥**

**ಅರ್ಥ-** ಅಜ್ಞಾನ, ವಿಪರೀತಜ್ಞಾನ ಉಳ್ಳವನೂ , ಶ್ರದ್ಧೆ ಇಲ್ಲದವನೂ , ತತ್ತ್ವದ ಬಗ್ಗೆ ಸಂದೇಹ ಪಡುವವನೂ ನರಕವನ್ನು ಪಡೆಯುತ್ತಾನೆ. ಸಂಶಯ ಪಡುವವನಿಗೆ ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ, ಸುಖವೂ ಇಲ್ಲ .

**ಜ್ಞಾನತತ್ಸಾಧನಯೋರಭಾವೇ ತದ್ವಿರೋಧಿವಿಪರೀತಜ್ಞಾನಾದೌ ಚಾನಿಷ್ಟ-ಮಾಹ- ಅಜ್ಞಶ್ಚೇತಿ ॥ ನಞೋಽಭಾವವಿರೋಧರೂಪಾರ್ಥದ್ವಯಂ ಧ್ಯೇಯಮ್ । ತತ್ತ್ವವಿಷಯಸಂಶಯಾತ್ಮಾ ಚ ವಿನಶ್ಯತಿ । ನರಕಂ ಪ್ರತಿಪದ್ಯತೇ । ಕಿಂಚ ಸಂಶಯಾತ್ಮನೋ ಅಯಂ ಮಾನುಷೋ ಲೋಕಃ ಪರಃ ಸ್ವರ್ಗಾದಿರ್ವಾ ನಾಸ್ತಿ । ಕಿಂ ಬಹುನಾ ? ಸುಖಂ ನಾಸ್ತೀತ್ಯರ್ಥಃ ॥ 40 ॥**

**ಅನುವಾದ** - ಜ್ಞಾನ ಹಾಗೂ ಅದರ ಸಾಧನಗಳು ಇಲ್ಲದಿದ್ದರೆ , ಜ್ಞಾನಕ್ಕೆ ವಿರುದ್ಧವಾದ ವಿಪರೀತಜ್ಞಾನ –ಅಜ್ಞಾನಾದಿಗಳು, ಅದರಿಂದಾಗುವ ಅನಿಷ್ಟವನ್ನು ಹೇಳುತ್ತಾನೆ. '**ಅಜ್ಞಶ್ಚ...**' ಮುಂತಾದ ಶ್ಲೋಕದಿಂದ .

'**ಅಜ್ಞ**' ಎಂಬಲ್ಲಿ 'ನಞ್'ಗೆ 'ಅಭಾವ ' ಹಾಗೂ 'ವಿರೋಧ ' ಎಂಬ ಎರಡೂ ಅರ್ಥಗಳನ್ನು ಇಟ್ಟುಕೊಳ್ಳಬೇಕು . **ಅಜ್ಞಶ್ಚ**= ಜ್ಞಾನವಿಲ್ಲದವನು ಹಾಗೂ ಜ್ಞಾನಕ್ಕೆ ವಿರುದ್ಧವಾದ ಅಜ್ಞಾನ ಉಳ್ಳವನು, **ಅಶ್ರದ್ಧಧಾನಶ್ಚ** = ಶ್ರದ್ಧೆ ಇಲ್ಲದವನು, **ಸಂಶಯಾತ್ಮಾ**= ತತ್ತ್ವ ವಿಷಯದಲ್ಲಿ ಸಂಶಯ ಉಳ್ಳವನೂ ಕೂಡಾ, **ವಿನಶ್ಯತಿ** = ನರಕವನ್ನು ಹೊಂದುತ್ತಾನೆ. **ಸಂಶಯಾತ್ಮನಃ** =

ಸಂಶಯ ಉಳ್ಳವನಿಗೆ, **'ಅಯಂ ಲೋಕಃ'** = ಈ ಮನುಷ್ಯ ಲೋಕವು, **ಪರಃ** = ಸ್ವರ್ಗಾದಿಲೋಕವಾಗಲೀ , **'ನಾಸ್ತಿ'** = ಇಲ್ಲ, **'ನ ಸುಖಮ್'**= ಹೆಚ್ಚೇನು? ಸುಖವೂ ಇಲ್ಲ.

**ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಮ್ ।**
**ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥ 41 ॥**

**ಅರ್ಥ-** ಅರ್ಜುನನೇ ! ಪರಮಾತ್ಮನಲ್ಲಿ ನಿಷ್ಠೆಯಿಂದ ಎಲ್ಲಾ ಕರ್ಮಗಳನ್ನೂ ಸಮರ್ಪಿಸಿರುವ, ತತ್ತ್ವಜ್ಞಾನದಿಂದ ಸಂಶಯಗಳನ್ನು ದೂರ ಮಾಡಿರುವ, ಪರಮಾತ್ಮನ ಭಕ್ತನಾದ ಜ್ಞಾನಿಯನ್ನು ಕರ್ಮಗಳು ಬಂಧಿಸುವುದಿಲ್ಲ.

**ಜ್ಞಾನಸಾಧನಮನುವದನ್ ಜ್ಞಾನಫಲಂ ಪ್ರಪಂಚಯತಿ-ಯೋಗೇತಿ ॥ ಭಗವತಿ ಮನೋಯೋಗೇನ ತಸ್ಮಿನ್ ಸಂನ್ಯಸ್ತಂ ಸಮರ್ಪಿತಂ ಕರ್ಮ ಯೇನ ತಂ ಯೋಗಸಂನ್ಯಸ್ತಕರ್ಮಾಣಮ್ । ಜ್ಞಾನೇನ ಛಿನ್ನಸಂಶಯಂ । ಆತ್ಮವಂತಂ ಪರಮಾತ್ಮಭಕ್ತಮ್ । ಹೇ ಧನಂಜಯ ಕರ್ಮಾಣಿ ನ ನಿಬಧ್ನಂತಿ ಮುಕ್ತೋ ಭವತೀತ್ಯರ್ಥಃ ॥ 41 ॥**

**ಅನುವಾದ** – ಹಿಂದೆ ಹೇಳಿದ ಜ್ಞಾನ ಸಾಧನವನ್ನು ಅನುವಾದ ಮಾಡಿ, ಜ್ಞಾನ ಫಲವನ್ನು ಸ್ಪಷ್ಟ ಪಡಿಸುತ್ತಾನೆ. **'ಯೋಗಸಂನ್ಯಸ್ತ...'** ಮುಂತಾದ ಶ್ಲೋಕದಿಂದ.

**'ಯೋಗ ಸಂನ್ಯಸ್ತಕರ್ಮಾಣಂ'** = ಭಗವಂತನಲ್ಲಿ ಮನಸ್ಸನ್ನು ಇಟ್ಟು ಕರ್ಮವನ್ನು ಸಮರ್ಪಿಸಿರುವ **(ಯೋಗೇನ ಸಂನ್ಯಸ್ತಂ ಕರ್ಮ ಯೇನ ಸಃ = ತಂ) ಜ್ಞಾನ ಸಂಛಿನ್ನ ಸಂಶಯಂ** = ತತ್ತ್ವಜ್ಞಾನದಿಂದ ಸಂದೇಹಗಳನ್ನು ದೂರ ಮಾಡಿಕೊಂಡಿರುವ , **ಆತ್ಮವಂತಮ್**= ಪರಮಾತ್ಮ ಭಕ್ತನನ್ನು , **ಹೇ ಧನಂಜಯ** = ಎಲೈ ಅರ್ಜುನನೇ, **ಕರ್ಮಾಣಿ** = ಕರ್ಮಗಳು, **ನ ನಿಬಧ್ನಂತಿ** = ಕಟ್ಟಿಹಾಕುವುದಿಲ್ಲ. ಮುಕ್ತನಾಗುತ್ತಾನೆಂದು ಭಾವ.

## ನಿಷ್ಕಾಮಕರ್ಮ ಬಿಡದಿರು

**ತಸ್ಮಾದಜ್ಞಾನಸಂಭೂತಂ ಹೃತ್‌ಸ್ಥಂ ಜ್ಞಾನಾಸಿನಾऽऽತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥ 42 ॥**

*॥ ಓಂತತ್ಸದಿತಿ ಶ್ರೀಮದ್‌ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಜ್ಞಾನಯೋಗೋ ನಾಮ ಚತುರ್ಥೋऽಧ್ಯಾಯಃ ॥*

**ಅರ್ಥ-** ಅರ್ಜುನನೇ ! ಜ್ಞಾನ ಸಾಧನವಾದ ನಿಷ್ಕಾಮ ಕರ್ಮವನ್ನು ಆಚರಿಸಿದರೆ ಪುರುಷಾರ್ಥವು, ಅದನ್ನು ಆಚರಿಸದಿದ್ದರೆ ಅನರ್ಥವೂ ಇರುವುದರಿಂದ. ಕರ್ಮಾನುಷ್ಠಾನದ ವಿಷಯದಲ್ಲಿ ತನ್ನ ಹೃದಯದಲ್ಲಿ ಇರುವ ಅಜ್ಞಾನಜನ್ಯವಾದ ಸಂಶಯವನ್ನು , ಜ್ಞಾನವೆಂಬ ಖಡ್ಗದಿಂದ ತುಂಡರಿಸಿ, ಜ್ಞಾನ ಸಾಧನವಾದ ನಿಷ್ಕಾಮ ಕರ್ಮವನ್ನು ಮಾಡು, ಎದ್ದೇಳು .

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ*
*ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ*
*ನಾಲ್ಕನೆಯ ಅಧ್ಯಾಯವು ಮುಗಿಯಿತು.*

**ಉಪಪಾದಿತಂ ಕರ್ಮಣಃ ಕರ್ತವ್ಯತ್ವಮುಪಸಂಹರತಿ- ತಸ್ಮಾದಿತಿ ॥ ಜ್ಞಾನೋಪಾಯಾನುಷ್ಠಾನಾನನುಷ್ಠಾನಯೋರರ್ಥಾನರ್ಥವತ್ತ್ವಾದಜ್ಞಾನ-ಸಂಭೂತಂ ಹೃದ್ಗತಮಾತ್ಮನಃ ಸಂಶಯಂ ಜ್ಞಾನಾಸಿನಾ ಜ್ಞಾನಾಖ್ಯಖಡ್ಗೇನ ಛಿತ್ವಾ ಯೋಗಂ ಜ್ಞಾನೋಪಾಯಂ ಕರ್ಮಾತಿಷ್ಠ ಕುರು ಹೇ ಭಾರತ ಉತ್ತಿಷ್ಠ ಉದ್ಯುಕ್ತೋ ಭವೇತಿ ॥ 42 ॥**

*॥ ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿ ಕೃತೇ*
*ಚತುರ್ಥೋಽಧ್ಯಾಯಃ ॥*

**ಅನುವಾದ -** ಹಿಂದೆ ತಿಳಿಸಿದ ನಿಷ್ಕಾಮಕರ್ಮವು ಕರ್ತವ್ಯವೆಂದು ಉಪಸಂಹಾರವನ್ನು ಮಾಡುತ್ತಾನೆ. **'ತಸ್ಮಾತ್'** ಮುಂತಾದ ಶ್ಲೋಕದಿಂದ. **ತಸ್ಮಾತ್** = ಜ್ಞಾನ ಸಾಧನವಾದ ನಿಷ್ಕಾಮಕರ್ಮವನ್ನು ಅನುಷ್ಠಾನ ಮಾಡಿದಾಗ ಪುರುಷಾರ್ಥವು, ಅದನ್ನು ಮಾಡದಿದ್ದಾಗ ಅನರ್ಥವೂ ಇರುವುದರಿಂದ, **ಅಜ್ಞಾನ ಸಂಭೂತಂ** = ಅಜ್ಞಾನದಿಂದ ಹುಟ್ಟಿದ, **ಆತ್ಮನಃ ಹೃದ್ಗತಂ** = ತನ್ನ ಹೃದಯದಲ್ಲಿರುವ , **ಸಂಶಯಂ** = ಸಂಶಯವನ್ನು , **'ಜ್ಞಾನಾಸಿನಾ'** = ಜ್ಞಾನವೆಂಬ ಖಡ್ಗದಿಂದ , **ಛಿತ್ವಾ**= ತುಂಡರಿಸಿ, **'ಯೋಗಂ'** = ಜ್ಞಾನೋಪಾಯವಾದ ಕರ್ಮವನ್ನು, **ಆತಿಷ್ಠ** = ಮಾಡು. **ಹೇ ಭಾರತ** = ಎಲೈ ಭರತಕುಲದಲ್ಲಿ ಜನಿಸಿದ, ಅರ್ಜುನನೇ, **ಉತ್ತಿಷ್ಠ** = ಪ್ರವೃತ್ತನಾಗು.

*ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ ನಾಲ್ಕನೇ*
*ಅಧ್ಯಾಯವು ಮುಗಿಯಿತು.*

# ಅಧ್ಯಾಯ - 5

## ಸಂನ್ಯಾಸ-ಯೋಗಗಳಲ್ಲಿ ಯಾವುದು ಶ್ರೇಷ್ಠ ?

**ಅರ್ಜುನ ಉವಾಚ -**

**ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥ 1 ॥**

**ಅರ್ಥ** - ಅರ್ಜುನ ಹೇಳಿದನು - ಕೃಷ್ಣ , ಕಾಮಾದಿತ್ಯಾಗರೂಪವಾದ ಸನ್ಯಾಸವನ್ನೂ ಹೇಳುತ್ತಿದ್ದಿ ,ಭಗವದರ್ಪಣ ಬುದ್ಧಿಯಿಂದ ವರ್ಣಾಶ್ರಮವಿಹಿತ ಕರ್ಮಗಳ ಆಚರಣೆರೂಪದ ಯೋಗವನ್ನೂ ಹೇಳುತ್ತಿದ್ದಿ , ಕಾಮನಾತ್ಯಾಗರೂಪವಾದ ಸನ್ಯಾಸ ಮತ್ತು ವಿಹಿತಕರ್ಮಗಳ ಭಗವದರ್ಪಣ ಬುದ್ಧಿಯಿಂದ ಆಚರಣೆ , ಈ ಎರಡರಲ್ಲಿ ಯಾವುದು ಶ್ರೇಷ್ಠವೋ ಅದೊಂದನ್ನೇ ನಿಶ್ಚಯವಾಗಿ ನನಗೆ ಹೇಳು.

ಅಥವಾ , ಕೃಷ್ಣ ! ಸರ್ವಕರ್ಮತ್ಯಾಗ ರೂಪವಾದ ಸಂನ್ಯಾಸವನ್ನೂ , ಜೊತೆಗೆ (ಯತಿಗಳಿಗೆ ಜ್ಞಾನದಲ್ಲಿ ಮಾತ್ರ ಅಧಿಕಾರ) ಜ್ಞಾನ ತ್ಯಾಗ ಪೂರ್ವಕ ಕರ್ಮಾಚರಣೆ ರೂಪವಾದ ಯೋಗವನ್ನೂ (ಗೃಹಸ್ಥಾಶ್ರಮಿಗಳಿಗೆ ಕರ್ಮಾಚರಣೆಯಲ್ಲಿ ಮಾತ್ರ ಅಧಿಕಾರ) ಹೇಳುತ್ತಿದ್ದಿ . ಇಂಥಹ ಸಂನ್ಯಾಸ ಮತ್ತು ಯೋಗ ಈ ಎರಡರಲ್ಲಿ ಯಾವುದು ಶ್ರೇಷ್ಠವೋ ಅದೊಂದನ್ನೇ ನಿಶ್ಚಯವಾಗಿ ನನಗೆ ಹೇಳು.

### ಗೀತಾವಿವೃತಿ

**'ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ '(2-48) ಇತ್ಯಾದಿನಾ ದ್ವಿತೀಯೇ ಸಂಕ್ಷೇಪೇಣೋಕ್ತಸ್ಯ ತೃತೀಯಾದೌ ವಿಶೇಷತಃ ಸ್ಪಷ್ಟೀಕೃತಸ್ಯ ಫಲ-ಕಾಮನಾದಿತ್ಯಾಗೇನೇಶ್ವರಾರ್ಪಣಬುದ್ಧ್ಯಾ ವರ್ಣಾಶ್ರಮವಿಹಿತಕರ್ಮಾನು-ಷ್ಠಾನರೂಪಸ್ಯ ಕರ್ಮಯೋಗಸ್ಯ ಯದಂಶದ್ವಯಂ ಕಾಮಾದಿವರ್ಜನರೂಪಂ ಉಕ್ತರೂಪಕರ್ಮಾನುಷ್ಠಾನಾಖ್ಯಂ ಚೇತಿ ತದಂಶದ್ವಯರೂಪಂ ತೃತೀಯೋಕ್ತ-ಮತ್ರಾಧ್ಯಾಯೇ ಪ್ರಪಂಚ್ಯತೇ - ಸಂನ್ಯಾಸಮಿತಿ ॥**

**ಅನುವಾದ** - ಫಲದ ಆಸೆಯನ್ನು ತೊರೆದು , ಭಗವದರ್ಪಣ ಬುದ್ಧಿಯಿಂದ ವರ್ಣಾಶ್ರಮ

ವಿಹಿತಕರ್ಮಗಳನ್ನು ಮಾಡುವುದೇ ಕರ್ಮಯೋಗ. ಈ ಕರ್ಮಯೋಗವನ್ನು ಎರಡನೇ ಅಧ್ಯಾಯದಲ್ಲಿ '**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ**' (2-48) (ಜ್ಞಾನ ಸಾಧನವನ್ನು ಅನುಷ್ಠಾನ ಮಾಡುತ್ತಾ ಫಲದ ಆಸೆಯನ್ನು ತೊರೆದು ಕರ್ಮಗಳನ್ನು ಮಾಡು) ಎಂಬಿವೇ ಮೊದಲಾದ ಶ್ಲೋಕಗಳಲ್ಲಿ ಸಂಕ್ಷೇಪವಾಗಿ ಹೇಳಿದೆ. ಹೀಗೆ ಸಂಕ್ಷೇಪವಾಗಿ ಹೇಳಿದ ಕರ್ಮ ಯೋಗವನ್ನು ಮೂರನೇ ಅಧ್ಯಾಯದಲ್ಲಿ ವಿಶೇಷವಾಗಿ ವಿವರಿಸಲಾಗಿದೆ. ಇಂಥಹ ಕರ್ಮಯೋಗದಲ್ಲಿಎರಡು ಅಂಶ (1) ಫಲದ ಆಸೆಯನ್ನು ತೊರೆಯುವಿಕೆ. (2) ಭಗವದರ್ಪಣ ಬುದ್ಧಿಯಿಂದ ವರ್ಣಾಶ್ರಮ ವಿಹಿತ ಕರ್ಮಗಳನ್ನು ಆಚರಿಸುವಿಕೆ. ಮೂರನೇ ಅಧ್ಯಾಯದಲ್ಲಿ ಹೇಳಿದ ಈ ಎರಡು ಅಂಶಗಳನ್ನು ಈ ಅಧ್ಯಾಯದಲ್ಲಿ '**ಸಂನ್ಯಾಸಂ**' ಎಂಬ ಶ್ಲೋಕಗಳಿಂದ ವಿವರಿಸಲಾವುದು.

**ಪೂರ್ವಾಧ್ಯಾಯೇ 'ಯದೃಚ್ಛಾಲಾಭಸಂತುಷ್ಟ' (4-22) ಇತ್ಯಾದಿನಾ ಕಾಮಾದಿವರ್ಜನರೂಪಂ ಸಂನ್ಯಾಸಂ 'ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಂ' ಇತ್ಯಾದಿನಾ (4-15) ವರ್ಣಾಶ್ರಮವಿಹಿತಕರ್ಮಣಾಂ ಯೋಗಂ ಈಶ್ವರಾರ್ಪಣಬುದ್ಧ್ಯಾನುಷ್ಠಾನರೂಪಂ ಕರ್ಮಯೋಗಂ ಚ ಹೇ ಕೃಷ್ಣ ಶಂಸಸಿ ಕಥಯಸಿ । ಏತಯೋರುಕ್ತಲಕ್ಷಣಯೋಃ- ಸಂನ್ಯಾಸಕರ್ಮ-ಯೋಗಯೋಃ ಯಚ್ಛ್ರೇಯಃ- ಅಧಿಕಂ ಭವತಿ ತದೇಕಂ ಮೇ- ಮಮ ಸುನಿಶ್ಚಿತಂ ಬ್ರೂಹಿ । ಸಂನ್ಯಾಸಸ್ಯಾಧಿಕತ್ವೇ ತಮೇವ ಗ್ರಹೀ(ಹಿ)ಷ್ಯಾಮಿ ಕಿಂ ತದ್ವಿರೋಧಿನಾ ಕಾಮದ್ವೇಷಾದಿಯುತೇನ ಯುದ್ಧಾಖ್ಯಕರ್ಮಯೋಗೇನೇತಿ ಭಾವಃ ।**

**ಅನುವಾದ**- ಕೃಷ್ಣ! ಹಿಂದಿನ ಅಧ್ಯಾಯದಲ್ಲಿಫಲಾಶೆ ಮೊದಲಾದವುಗಳ ತ್ಯಾಗರೂಪ ವಾದ ಸಂನ್ಯಾಸವನ್ನು '**ಯದೃಚ್ಛಾಲಾಭಸಂತುಷ್ಟಃ** (4-22) (ಪ್ರಯತ್ನವಿಲ್ಲದೇ ಪ್ರಾಪ್ತವಾದು ದರಲ್ಲಿ ತೃಪ್ತಿಯಿಂದಿರು) ಇವೇ ಮೊದಲಾದ ಶ್ಲೋಕಗಳಲ್ಲಿ ಹೇಳಿರುವಿ. ವರ್ಣಾಶ್ರಮವಿಹಿತ ಕರ್ಮಗಳ ಯೋಗವನ್ನು ಅಂದರೆ ಭಗವದರ್ಪಣ ಬುದ್ಧಿಯಿಂದ ಅನುಷ್ಠಾನ ರೂಪದ ಕರ್ಮಯೋಗವನ್ನೂ '**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಂ**' (4-15) (ಪೂರ್ವಿಕರು ಬಹಳ ಹಿಂದಿನಿಂದ ಕರ್ಮಗಳನ್ನು ಮಾಡಿಕೊಂಡು ಬಂದಿದ್ದಾರೆ. ಆದ್ದರಿಂದ ನೀನೂ ಕರ್ಮಗಳನ್ನು ಮಾಡು) ಇವೇ ಮೊದಲಾದ ಶ್ಲೋಕಗಳಿಂದ ಹೇಳಿರುವಿ. ಇಂಥಹ ಹಿಂದೆ ಹೇಳಿದ ಲಕ್ಷಣವುಳ್ಳ ಸಂನ್ಯಾಸ ಮತ್ತು ಕರ್ಮಯೋಗಗಳಲ್ಲಿ ಯಾವುದು ಶ್ರೇಷ್ಠ - ಉತ್ತಮವೋ ಅಂತಹ ಒಂದನ್ನು ನನಗೆ ನಿಶ್ಚಯವಾಗಿ ತಿಳಿಸು. ಸಂನ್ಯಾಸವು ಉತ್ತಮವಾಗಿದ್ದರೆ ಅದನ್ನೇ ಸ್ವೀಕರಿಸುತ್ತೇನೆ. ಸಂನ್ಯಾಸಕ್ಕೆ ವಿರೋಧಿಯಾದ ರಾಗದ್ವೇಷಗಳಿಂದ ಕೂಡಿದ ಯುದ್ಧವೆಂಬ ಕರ್ಮಯೋಗದಿಂದ ಏನು ಪ್ರಯೋಜನ ? ಎಂದು ಅಭಿಪ್ರಾಯ.

**ಯದ್ವಾ ಪೂರ್ವತ್ರ 'ಯೋಗಸಂನ್ಯಸ್ತಕರ್ಮಾಣಂ' (4-41) ಇತ್ಯಾದೌ ಪಠಿತಃ ಸಂನ್ಯಾಸಶಬ್ದೋ ಯತ್ಯಾಶ್ರಮವಿಷಯಃ 'ಯೋಗಮಾತಿಷ್ಠ '(4-42) ಇತ್ಯಾದೌ ಶ್ರುತೋ ಯೋಗಶಬ್ದೋ ಗೃಹಿವಿಷಯ ಇತಿ ಪ್ರಕಲ್ಪ್ಯ ಯತೀನಾಂ ಸರ್ವಕರ್ಮತ್ಯಾಗೇನ ಜ್ಞಾನಮಾತ್ರಾಧಿಕಾರಿತ್ವಾತ್, ಗೃಹಿಣಾಂ ಚ ಜ್ಞಾನತ್ಯಾಗೇನ ಕರ್ಮಮಾತ್ರಾಧಿಕಾರಿತ್ವಾತ್, ತಯೋರೇಕಪುನ್ನಿಷ್ಠತ್ವಂ ನ ಯುಕ್ತಮಿತಿ ಭಾವೇನ ಯೋಗಸಂನ್ಯಾಸಯೋರ್ಮಧ್ಯೇ ಯತ್ಶ್ರೇಯಃ ತದೇಕಂ ಗ್ರಹಿಷ್ಯಾಮೀತಿ ಭಾವೇನ ತಯೋರ್ಮಧ್ಯೇ ಶ್ರೇಯಃ ಪೃಚ್ಛತಿ - ಸಂನ್ಯಾಸಮಿತಿ ||**

**ಅನುವಾದ** - ಅಥವಾ ಹಿಂದಿನ ಅಧ್ಯಾಯದಲ್ಲಿ **'ಯೋಗಸಂನ್ಯಸ್ತ ಕರ್ಮಾಣಂ'** (4-41) (ಪರಮಾತ್ಮನಲ್ಲಿ ನಿಷ್ಠೆಯಿಂದ ಕರ್ಮಗಳನ್ನು ಸಮರ್ಪಿಸಿದ) ಇವೇ ಮೊದಲಾದ ಶ್ಲೋಕಗಳಲ್ಲಿ ಸಂನ್ಯಾಸ ಶಬ್ದವು ಸಂನ್ಯಾಸಿಗಳನ್ನು ಹೇಳುತ್ತಿದೆ, **'ಯೋಗಮಾತಿಷ್ಠ '** (4-42) (ಕರ್ಮವನ್ನು ಮಾಡು) ಇವೇ ಮೊದಲಾದ ಶ್ಲೋಕಗಳಲ್ಲಿ ಇರುವ ಯೋಗಶಬ್ದವು ಗೃಹಸ್ಥಾಶ್ರಮಿಗಳನ್ನು ಹೇಳುತ್ತಿದೆ ಎಂದು ಅಭಿಪ್ರಾಯವಿಟ್ಟುಕೊಂಡು ಯತಿಗಳು ಸಕಲಕರ್ಮ ತ್ಯಾಗ ಮಾಡುವುದರಿಂದ ಕೇವಲ ಜ್ಞಾನದಲ್ಲಿ ಮಾತ್ರ ಅಧಿಕಾರವುಳ್ಳವರು, ಗೃಹಸ್ಥಾಶ್ರಮಿಗಳು ಜ್ಞಾನತ್ಯಾಗ ಮಾಡುವುದರಿಂದ ಕೇವಲ ಕರ್ಮದಲ್ಲಿ ಮಾತ್ರ ಅಧಿಕಾರವುಳ್ಳವರು. ಆದ್ದರಿಂದ ಯೋಗ ಮತ್ತು ಸಂನ್ಯಾಸಗಳು ಒಬ್ಬ ಪುರುಷನಲ್ಲಿ ಇರಲು ಸಾಧ್ಯವಿಲ್ಲ ಎಂದು ತಿಳಿದು ಯೋಗ ಮತ್ತು ಸಂನ್ಯಾಸಗಳ ಮಧ್ಯದಲ್ಲಿ ಯಾವುದು ಶ್ರೇಷ್ಠವೋ ಅದೊಂದನ್ನು ಸ್ವೀಕರಿಸುತ್ತೇನೆ ಎಂಬ ಅಭಿಪ್ರಾಯದಿಂದ ಯೋಗ ಮತ್ತು ಸಂನ್ಯಾಸಗಳಲ್ಲಿ ಯಾವುದು ಶ್ರೇಷ್ಠ ಎಂದು ಅರ್ಜುನ **'ಸಂನ್ಯಾಸಂ'** ಎಂಬ ಶ್ಲೋಕದಿಂದ ಕೇಳುತ್ತಿದ್ದಾನೆ.

**ಕರ್ಮಣಾಂ ಸಂನ್ಯಾಸಂ- ಯತ್ಯಾಶ್ರಮಂ 'ಸಂನ್ಯಸ್ತಕರ್ಮಾಣಂ' (4-41) ಇತ್ಯನೇನ ಶಂಸಸಿ । ಪುನಃ ಕರ್ಮಣಾಂ ಯೋಗಮನುಷ್ಠಾನಲಕ್ಷಣಂ ಗೃಹಸ್ಥಾಶ್ರಮಂ ಚ 'ಯೋಗಮಾತಿಷ್ಠೋತ್ತಿಷ್ಠ' (4-41)ಇತ್ಯನೇನ ಶಂಸಸಿ । ಏತಯೋರ್ಯತ್ಯಾಶ್ರಮಗೃಹಸ್ಥಾಶ್ರಮಯೋಃ । ಶಿಷ್ಟಂ ಪ್ರಾಗ್ವತ್ । ಏತೇನಾ-ಸ್ಯಾಧ್ಯಾಯಸ್ಯ ತೃತೀಯೋಕ್ತಕರ್ಮಯೋಗ ಪ್ರಪಂಚನಪರತ್ವೇ (ಅಸ್ಯಾ-ಧ್ಯಾಯಸ್ಯ) ತದಾನಂತರ್ಯಂ ಸ್ಯಾದಿತಿ ನಿರಸ್ತಮ್ । ಯೋಜನಾದ್ವಯೇಽಪಿ ಪೂರ್ವಾಧ್ಯಾಯೋಕ್ತೋಪಜೀವನೇನೈವ ಪ್ರಶ್ನಸ್ಯೋತ್ಥಾನೇನ ಚತುರ್ಥಾ-ನಂತರ್ಯಸ್ಯೋಚಿತತ್ವಾದಿತಿ || 1 ||**

**ಅನುವಾದ** - ಕರ್ಮಗಳ ತ್ಯಾಗವನ್ನು ಅಂದರೆ ಸಂನ್ಯಾಸಾಶ್ರಮವನ್ನು 'ಸಂನ್ಯಸ್ತ-

**ಕರ್ಮಾಣಂ'** (4-41) (ಬಿಡಲ್ಪಟ್ಟ ಕರ್ಮವುಳ್ಳ) ಎಂಬ ಶ್ಲೋಕದಿಂದ ಹೇಳುತ್ತಿದ್ದಿ ಮತ್ತು ಕರ್ಮಗಳ ಯೋಗವನ್ನು - ಆಚರಣೆಯನ್ನು - ಗೃಹಸ್ಥಾಶ್ರಮವನ್ನು **'ಯೋಗಮಾತಿಷ್ಠೋತ್ತಿಷ್ಠ'** (4-42) (ಏಳು , ಕರ್ಮಮಾಡು) ಎಂಬ ಶ್ಲೋಕದಿಂದ ಹೇಳುತ್ತಿದ್ದಿ . ಇವೆರಡಲ್ಲಿ- ಯತ್ಯಾಶ್ರಮ - ಗೃಹಸ್ಥಾಶ್ರಮಗಳಲ್ಲಿ. (ಯಾವುದು ಶ್ರೇಷ್ಠ ಎಂದು ಶ್ಲೋಕದ ಅರ್ಥ.) ಉಳಿದ ಅಂಶ ಹಿಂದಿನಂತೆ. ಇದರಿಂದ ಈ ಅಧ್ಯಾಯದಲ್ಲಿ ಮೂರನೇ ಅಧ್ಯಾಯದಲ್ಲಿ ಹೇಳಿದ ಕರ್ಮಯೋಗವನ್ನು ವಿವರಿಸುವುದಾದರೆ ಈ ಅಧ್ಯಾಯವು ಮೂರನೇ ಅಧ್ಯಾಯದ ಅನಂತರ ಬರಬೇಕಿತ್ತು ಎಂಬ ಆಕ್ಷೇಪ ಪರಿಹಾರವಾಯಿತು. ಹೇಗೆಂದರೆ ಎರಡು ರೀತಿಯಾದ ಈ ಶ್ಲೋಕದ ಅವತಾರಿಕೆಯಲ್ಲಿಯೂ 4ನೇ ಅಧ್ಯಾಯದಲ್ಲಿ ಹೇಳಿದ ವಿಚಾರವನ್ನು ಅವಲಂಬಿಸಿ ಕೊಂಡೇ ಪ್ರಶ್ನೆಯನ್ನು ಕೇಳುತ್ತಿರುವುದರಿಂದ ನಾಲ್ಕನೆಯ ಅಧ್ಯಾಯದ ಅನಂತರದಲ್ಲಿಯೇ ಈ ಅಧ್ಯಾಯ ಇರುವುದು ಯೋಗ್ಯವಾಗಿದೆ. ॥ 1 ॥

## ಕರ್ಮಯೋಗದ ಹಿರಿಮೆ

**ಶ್ರೀಭಗವಾನುವಾಚ-**

**ಸಂನ್ಯಾಸಃ ಕರ್ಮಯೋಗಶ್ಚ ನಿಶ್ಶ್ರೇಯಸಕರಾವುಭೌ ।**
**ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ॥ 2 ॥**

**ಅರ್ಥ-** ಕಾಮಕ್ರೋಧಾದಿಗಳ ತ್ಯಾಗರೂಪವಾದ ಸಂನ್ಯಾಸ ಮತ್ತು ಭಗವದರ್ಪಣ ಬುದ್ಧಿಯಿಂದ ಕರ್ಮಾಚರಣೆ ರೂಪವಾದ ಕರ್ಮಯೋಗ ಇವೆರಡೂ ಸೇರಿಯೇ ಮೋಕ್ಷಕ್ಕೆ ಸಾಧನವಾಗಿದೆ . ಆದರೆ ಇವೆರಡರಲ್ಲಿ ಕಾಮಕ್ರೋಧಾದಿಗಳ ತ್ಯಾಗರೂಪವಾದ ಸಂನ್ಯಾಸಕ್ಕಿಂತ ಭಗವದರ್ಪಣ ಬುದ್ಧಿಯಿಂದ ಕರ್ಮಾಚರಣ ರೂಪವಾದ ಕರ್ಮಯೋಗವು ಶ್ರೇಷ್ಠ.

**ಸಂನ್ಯಾಸಯೋಗಶಬ್ದೌ ನ ಸರ್ವಕರ್ಮತ್ಯಾಗತದನುಷ್ಠಾನ ಲಕ್ಷಣಯತಿ- ಗೃಹಿಪರೌ । ತಥಾ ಚ ತಯೋರನ್ಯತರಶ್ರೇಯಃಪ್ರಶ್ನೋ ನ ಯುಕ್ತಃ । ಕಿಂತು ಕಾಮಾದಿವರ್ಜನಕರ್ಮಾನುಷ್ಠಾನಾರ್ಥಕೌ । ತಯೋಶ್ಚೈಕಪುಂಯೋಗ್ಯ- ತ್ವಾನ್ನಿಃಶ್ರೇಯಸಕರತ್ವಾಚ್ಚಾನುಷ್ಠೇಯತ್ವಾತ್ ಅನ್ಯತರಶ್ರೇಷ್ಠತ್ವಪ್ರಶ್ನೋ ವ್ಯರ್ಥ ಏವ । ಅಥ ಸ್ವರೂಪಜ್ಞಾನಮಾತ್ರಾರ್ಥಂ ಪ್ರಶ್ನಶ್ಚೇದ್ಯೋಗ ಏವ ಶ್ರೇಷ್ಠ ಇತಿ ಭಾವೇನ ಪರಿಹಾರಮಾಹ- ಸಂನ್ಯಾಸ ಇತಿ ॥**

**ಅನುವಾದ** - ಸಂನ್ಯಾಸ ಶಬ್ದವು ಎಲ್ಲಾ ಕರ್ಮಗಳ ತ್ಯಾಗರೂಪವಾದ ಯತ್ಯಾಶ್ರಮವನ್ನು ಹೇಳುತ್ತಿಲ್ಲ. ಯೋಗ ಶಬ್ದವು ಸಕಲ ಕರ್ಮಾನುಷ್ಠಾನರೂಪವಾದ ಗೃಹಸ್ಥಾಶ್ರಮವನ್ನೂ ಹೇಳುತ್ತಿಲ್ಲ. ಆದ್ದರಿಂದ ಸಂನ್ಯಾಸ ಮತ್ತು ಯೋಗ ಇವರೆಡರಲ್ಲಿ ಯಾವುದು ಶ್ರೇಷ್ಠ ಎಂಬ ಪ್ರಶ್ನೆ ಸರಿಯಲ್ಲ.

ಆದರೆ ಸಂನ್ಯಾಸ ಎಂದರೆ ಕಾಮಕ್ರೋಧಾದಿಗಳ ತ್ಯಾಗ ಎಂದು ಅರ್ಥ. ಯೋಗ ಎಂದರೆ ಭಗವದರ್ಪಣ ಬುದ್ಧಿಯಿಂದ ಕರ್ಮಾನುಷ್ಠಾನ ಎಂದು ಅರ್ಥ. ಇಂಥಹ ಸಂನ್ಯಾಸ ಮತ್ತು ಯೋಗಗಳು ಒಬ್ಬನೇ ಪುರುಷನಲ್ಲಿ ಇರಲು ಸಾಧ್ಯ ಮತ್ತು ಮೋಕ್ಷಸಾಧನವಾದ್ದರಿಂದ ಇವೆರಡನ್ನೂ ಆಚರಿಸಬೇಕು. ಆದ್ದರಿಂದ ಇವೆರಡರಲ್ಲಿ ಯಾವುದು ಶ್ರೇಷ್ಠ ? ಎಂಬ ಪ್ರಶ್ನೆ ವ್ಯರ್ಥ. ಸಂನ್ಯಾಸ ಮತ್ತು ಯೋಗಗಳ ಸ್ವರೂಪವನ್ನು ತಿಳಿಯುವುದೇ ಪ್ರಶ್ನೆಯ ಉದ್ದೇಶವಾಗಿದ್ದರೆ ಕರ್ಮಾನುಷ್ಠಾನರೂಪವಾದ ಯೋಗವೇ ಶ್ರೇಷ್ಠ ಎಂದು ಉತ್ತರವನ್ನು 'ಸಂನ್ಯಾಸಃ' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ.

**ವಿವರಣೆ** - ಸಂನ್ಯಾಸ ಶಬ್ದಕ್ಕೆ ಯತ್ಯಾಶ್ರಮ ಎಂದು ಅರ್ಥ, ಯೋಗ ಶಬ್ದಕ್ಕೆ ಗೃಹಸ್ಥಾಶ್ರಮ ಎಂದು ಅರ್ಥ ಇಟ್ಟುಕೊಂಡರೆ ಸಂನ್ಯಾಸ ಮತ್ತು ಯೋಗ ಇವುಗಳಲ್ಲಿ ಯಾವುದು ಶ್ರೇಷ್ಠ ಎಂಬ ಅರ್ಜುನನ ಪ್ರಶ್ನೆ ಸರಿ. ಯೋಗಕ್ಕಿಂತ ಸಂನ್ಯಾಸ ಶ್ರೇಷ್ಠವೆಂದಾದರೆ ಯೋಗವನ್ನು ತೊರೆದು ಸಂನ್ಯಾಸವನ್ನೇ ಸ್ವೀಕರಿಸುತ್ತೇನೆ. ರಾಗದ್ವೇಷಗಳಿಗೆ ಅವಕಾಶವಿರುವ ಈ ಯುದ್ಧ ಕರ್ಮದಲ್ಲಿ ಏಕೆ ನನ್ನನ್ನು ತೊಡಗಲು ಒತ್ತಾಯ ಮಾಡುತ್ತಿ ಎಂದು ಅರ್ಜುನನ ಪ್ರಶ್ನೆ. ಯೋಗ ಮತ್ತು ಸಂನ್ಯಾಸಗಳು ಒಬ್ಬನಲ್ಲೇ ಇರಲು ಸಾಧ್ಯವಿಲ್ಲ. ಯೋಗದಲ್ಲಿ ಕರ್ಮಮಾತ್ರವಿದೆ ಜ್ಞಾನವಿಲ್ಲ. ಸಂನ್ಯಾಸದಲ್ಲಿ ಕರ್ಮವಿಲ್ಲ ಜ್ಞಾನ ಮಾತ್ರ ಇದೆ .ಆದ್ದರಿಂದ ಪರಸ್ಪರ ವಿರುದ್ಧವಾದ ಇವುಗಳಲ್ಲಿ ಯಾವುದು ಶ್ರೇಯಃಸಾಧನ ಎಂಬ ಪ್ರಶ್ನೆ ಉಚಿತ. ಆದರೆ ಇಲ್ಲಿ ಸಂನ್ಯಾಸ ಎಂದರೆ ಯತ್ಯಾಶ್ರಮವಲ್ಲ, ಯೋಗ ಎಂದರೆ ಗೃಹಸ್ಥಾಶ್ರಮವೂ ಅಲ್ಲ. ಇಲ್ಲಿ ಹೇಳಿರುವ ಸಂನ್ಯಾಸಯೋಗಗಳಿಗೆ ವಿರೋಧ ಇಲ್ಲ. ಸಂನ್ಯಾಸಯೋಗಗಳು ಒಬ್ಬನಲ್ಲೇ ಇದ್ದು ಶ್ರೇಯಃಸಾಧನಗಳಾಗಿವೆ . ಆದ್ದರಿಂದ ಸಂನ್ಯಾಸ ಮತ್ತು ಯೋಗ ಇವೆರಡೂ ಬೇಕು ಯಾವುದು ಶ್ರೇಷ್ಠ ಎಂಬ ಪ್ರಶ್ನೆಯೇ ಸರಿಯಲ್ಲ ಎಂದು ಶ್ರೀಕೃಷ್ಣ ಉತ್ತರಿಸುತ್ತಿದ್ದಾನೆ.

**ಸಂನ್ಯಾಸಃ-ಕಾಮಾದಿವರ್ಜನರೂಪಃ ಕರ್ಮಯೋಗೋ - ಭಗವದರ್ಪಣ-ಬುದ್ಧ್ಯಾ ಕರ್ಮಾನುಷ್ಠಾನರೂಪಶ್ಚ ಉಭೌ ಸಮುಚ್ಚಿತೌ ಸಂತೌ ನಿಃಶ್ರೇಯಸ-ಕರೌ । ತಯೋಸ್ತು ಮಧ್ಯೇ ಕರ್ಮಸಂನ್ಯಾಸಾತ್ ಕರ್ಮಣಿ ಸಂನ್ಯಾಸಃ ಕರ್ಮಸಂನ್ಯಾಸಃ ಕರ್ಮಾನುಷ್ಠಾನವಿಷಯೇ ಯಃ ಕಾಮಕ್ರೋಧದ್ವೇಷಾದಿ-ವರ್ಜನರೂಪಸಂನ್ಯಾಸಃ ತಸ್ಮಾದ್ । ಭಗವದರ್ಪಣಬುದ್ಧ್ಯಾ ಕರ್ಮಾನುಷ್ಠಾನ-ರೂಪೋ ಯಃ ಕರ್ಮಯೋಗಃ ಸ ತು ವಿಶಿಷ್ಯತೇ- ಶ್ರೇಷ್ಠೋ ಭವತಿ । 'ದ್ವಂದ್ವತ್ಯಾಗಾತ್ತು ಸಂನ್ಯಾಸಾನ್ಮತ್ತೂಷ್ಟೈವ ಗರೀಯಸೀ' ಇತ್ಯುಕ್ತೇಃ ॥ 2 ॥**

**ಅನುವಾದ** - ಸಂನ್ಯಾಸ - ಎಂದರೆ ಕಾಮಾದಿಗಳ ತ್ಯಾಗ. ಕರ್ಮಯೋಗ - ಎಂದರೆ

ಭಗವದರ್ಪಣ ಬುದ್ಧಿಯಿಂದ ವಿಹಿತ ಕರ್ಮಾಚರಣೆ. ಇವೆರಡು ಸೇರಿಯೇ ಮೋಕ್ಷಸಾಧನಗಳಾಗಿವೆ. ಆದರೂ ಕರ್ಮಗಳಲ್ಲಿಕಾಮನಾದಿಗಳ ತ್ಯಾಗರೂಪ ಸಂನ್ಯಾಸ ಮತ್ತು ಭಗವದರ್ಪಣ ಬುದ್ಧಿಯಿಂದ ಕರ್ಮಾಚರಣ ರೂಪವಾದ ಯೋಗ ಇವುಗಳಲ್ಲಿ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವು ಶ್ರೇಷ್ಠ . ಕರ್ಮಸಂನ್ಯಾಸ ಎಂದರೆ ಕರ್ಮದ ವಿಷಯದಲ್ಲಿ ಕಾಮ-ಕ್ರೋಧಾದಿಗಳ ತ್ಯಾಗರೂಪವಾದ ಸಂನ್ಯಾಸ ಎಂದರ್ಥ. ಇದಕ್ಕಿಂತ ಕರ್ಮಯೋಗ ಎಂದರೆ ಭಗವದರ್ಪಣ ಬುದ್ಧಿಯಿಂದ ಕರ್ಮಾಚರಣೆ ರೂಪವಾದ ಯೋಗ ಶ್ರೇಷ್ಠ . ಏಕೆಂದರೆ ಕಾಮ-ಕ್ರೋಧಗಳ ತ್ಯಾಗರೂಪವಾದ ಸಂನ್ಯಾಸಕ್ಕಿಂಥ ಭಗವಂತ ಪ್ರೀತನಾಗಲಿ ಎಂಬ ಭಾವನೆಯಿಂದ ತನ್ನ ವಿಹಿತ ಕರ್ಮಗಳನ್ನು ಮಾಡುವ ನನ್ನ ಪೂಜೆಯೇ ಉತ್ತಮ ಎಂದು ಪ್ರಮಾಣವಿದೆ. ॥ 2 ॥

## ಸಂನ್ಯಾಸಿಯ ಲಕ್ಷಣ

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ ಪ್ರಮುಚ್ಯತೇ ॥ 3 ॥**

**ಅರ್ಥ** - ಮಹಾಬಾಹು ! ಅರ್ಜುನ ! ಯಾರು ಯಾರನ್ನೂ ದ್ವೇಷಿಸುವುದಿಲ್ಲವೋ, ಯಾವುದನ್ನೂ ಆಶಿಸುವುದಿಲ್ಲವೋ, ದ್ವಂದ್ವಾತೀತನಾಗಿದ್ದಾನೋ (ಕಾಮ್ಯಕರ್ಮ ಮಾಡುವುದಿಲ್ಲವೋ) ಅವನು ನಿತ್ಯ ಸಂನ್ಯಾಸಿ ಎಂದು ತಿಳಿ. ಇಂಥಹ ನಿತ್ಯ ಸಂನ್ಯಾಸಿಯು ಅನಾಯಾಸವಾಗಿ ಬಂಧವನ್ನು ಕಳೆದು ಕೊಳ್ಳುತ್ತಾನೆ.

**ಸಂನ್ಯಾಸಶಬ್ದೋ ನ ಯತ್ಯಾಶ್ರಮಪರ ಇತಿ ಭಾವೇನ ತದರ್ಥಮಾಹ- ಜ್ಞೇಯ ಇತಿ ॥ ಯದ್ಯಪಿ 'ಯದೃಚ್ಛಾಲಾಭೇ'ತ್ಯಾದಿನೋಕ್ತಂ ಕಾಮಾದಿತ್ಯಾಗರೂಪಂ ಸಂನ್ಯಾಸಂ 'ಸಂನ್ಯಾಸಂ ಕರ್ಮಣಾಂ' ಇತ್ಯನೂದ್ಯಾರ್ಜುನೇನ ಪ್ರಶ್ನಸ್ಯ ಕೃತತ್ವಾತ್ ಅಸ್ತ್ಯೇವ ತಸ್ಯ ಸಂನ್ಯಾಸ ಶಬ್ದಾರ್ಥಜ್ಞಾನಂ, ಅತೋಽಸೌ ತಂ ಪ್ರತಿ ನ ವಾಚ್ಯಃ । ತಥಾಽಪಿ ಸಂನ್ಯಾಸಸ್ಯೋಕ್ತಂ ನಿಃಶ್ರೇಯಸಕರತ್ವಮುಪಪಾದಯಿತುಂ ಜ್ಞಾತಮಪಿ ತದರ್ಥಂ ಸ್ಮಾರಯತ್ಯನೇನೇತ್ಯದೋಷಃ ।**

ಸಂನ್ಯಾಸ ಶಬ್ದವು ಯತ್ಯಾಶ್ರಮ ಎಂಬ ಅರ್ಥವುಳ್ಳದ್ದಲ್ಲ ಎಂಬ ಅಭಿಪ್ರಾಯದಿಂದ ಸಂನ್ಯಾಸ ಶಬ್ದದ ಅರ್ಥವನ್ನು 'ಜ್ಞೇಯಃ ಸ ' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. ವಸ್ತುತಃ ಅರ್ಜುನನು **'ಯದೃಚ್ಛಾಲಾಭ'** ಇವೇ ಮೊದಲಾದ ಶ್ಲೋಕಗಳಿಂದ ಹೇಳಿದ ಕಾಮ-ಕ್ರೋಧಾದಿಗಳ ತ್ಯಾಗರೂಪವಾದ ಸಂನ್ಯಾಸವನ್ನು **'ಸಂನ್ಯಾಸಂ ಕರ್ಮಣಾಂ'** ಎಂಬ ಶ್ಲೋಕದಲ್ಲಿ ಅನುವಾದ ಮಾಡಿ , ಪ್ರಶ್ನೆ ಮಾಡುತ್ತಿದ್ದಾನೆ. ಆದ್ದರಿಂದ ಅರ್ಜುನನಿಗೆ ಸಂನ್ಯಾಸ ಶಬ್ದದ

ಅರ್ಥಜ್ಞಾನ ಇದ್ದೇ ಇದೆ. ಆದ್ದರಿಂದ ಅರ್ಜುನನನ್ನು ಕುರಿತು ಸಂನ್ಯಾಸ ಶಬ್ಧ ಅರ್ಥವನ್ನು ಹೇಳಬೇಕಾಗಿಲ್ಲ, ಆದರೂ ಸಂನ್ಯಾಸವು ಶ್ರೇಯಸ್ಸಿಗೆ ಸಾಧನ ಎಂದು ಹೇಳಿರುವುದನ್ನು ಸಮರ್ಥಿಸಲು, ಸಂನ್ಯಾಸಶಬ್ದದ ಅರ್ಥ ಅರ್ಜುನನಿಗೆ ತಿಳಿದಿದ್ದರೂ ಜ್ಞಾಪಿಸುತ್ತಿದ್ದಾನೆ. ಆದ್ದರಿಂದ ದೋಷವಿಲ್ಲ.

**ಹೇ ಮಹಾಬಾಹೋ ! ಯೋ ದ್ವೇಷಾಕಾಂಕ್ಷಾದಿಹೀನಃ । ಕಾಮ್ಯಕರ್ಮ-ತ್ಯಾಗೀ ಚೇತ್ಯುಪಲಕ್ಷ್ಯತೇ । ಸ ನಿತ್ಯಸಂನ್ಯಾಸೀ ಜ್ಞೇಯಃ-ಸ್ಮರ್ತವ್ಯಃ ಇತ್ಯರ್ಥಃ । ಸ ಏವ ಸುಖಂ ಯಥಾ ಭವತಿ ತಥಾ ಅನಾಯಾಸೇನ ಬಂಧಾತ್ ಪ್ರಮುಚ್ಯತೇ । ಹಿ ಪ್ರಸಿದ್ಧಮಿತಿ ಯುದ್ಧಕರ್ಮ ತ್ವಯಾ ನ ತ್ಯಾಜ್ಯಮಿತಿ ॥ 3 ॥**

**ಅನುವಾದ-** ಎಲೈ ದೀರ್ಘಬಾಹುವೇ ! ಯಾರು ದ್ವೇಷ-ಆಸೆ ಇಲ್ಲದವನೋ, ಕಾಮ್ಯಕರ್ಮಗಳನ್ನೂ ಬಿಟ್ಟವನೋ ಎಂದೂ ಸೇರಿಸಿಕೊಳ್ಳಬೇಕು, ಅವನು ನಿತ್ಯಸಂನ್ಯಾಸಿಯು ಎಂದು, **ಜ್ಞೇಯಃ**= ನೆನಪಿಗೆ ತಂದುಕೊಳ್ಳಬೇಕು. ಅವನೇ ಸುಖವಾಗಿ ಅಂದರೆ ಅನಾಯಾಸದಿಂದ ಬಂಧವನ್ನು ಕಳೆದುಕೊಳ್ಳುತ್ತಾನೆ. ಹಿ ಎಂದರೆ ಪ್ರಸಿದ್ಧ. ಆದ್ದರಿಂದ ಯುದ್ಧರೂಪವಾದ ಕರ್ಮವನ್ನು ನೀನು ಬಿಡಬಾರದು . ॥ 3 ॥

## ಕರ್ಮಯೋಗ ಜ್ಞಾನವಿರೋಧಿಯಲ್ಲ

**ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ ॥ 4 ॥**

**ಅರ್ಥ -** ಅವಿವೇಕಿಗಳು ಜ್ಞಾನ ಮತ್ತು ಭಗವದರ್ಪಣ ಬುದ್ಧಿಯಿಂದ ಕರ್ಮಾಚರಣೆ ಇವೆರಡನ್ನು ಕಾರ್ಯಕಾರಣ ಭಾವಸಂಬಂಧವಿಲ್ಲದ ಎರಡು ಪದಾರ್ಥಗಳು ಎಂದು ಹೇಳುತ್ತಾರೆ. ಜ್ಞಾನಿಗಳು ಈ ರೀತಿ ಹೇಳುವುದಿಲ್ಲ. ಜ್ಞಾನಮಾರ್ಗವನ್ನಾಗಲೀ, ಕರ್ಮಮಾರ್ಗ-ವನ್ನಾಗಲೀ ಯಾವುದಾದರೂ ಒಂದನ್ನು ಸರಿಯಾಗಿ ಅನುಸರಿಸಿದರೂ, ಮುಮುಕ್ಷುವು ಜ್ಞಾನ ಮತ್ತು ಕರ್ಮ ಇವೆರಡರ ಫಲವನ್ನೂ ಹೊಂದುತ್ತಾನೆ.

**ವಿವರಣೆ -** ಅವಿವೇಕಿಗಳು ಭಗವತ್ಪೂಜಾರೂಪವಾದ ಕರ್ಮಾಚರಣೆಯು ಜ್ಞಾನಕ್ಕೆ ಸಾಧನ ಎಂದು ಒಪ್ಪುವುದಿಲ್ಲ. ಆದ್ದರಿಂದ ಗೃಹಸ್ಥಾಶ್ರಮಿಗಳಿಗೆ ಕರ್ಮದಲ್ಲಿ ಮಾತ್ರ ಅಧಿಕಾರ. ಜ್ಞಾನಸಂಪಾದನೆಯಲ್ಲಿ ಅಧಿಕಾರವಿಲ್ಲ ಎನ್ನುತ್ತಾರೆ . ಅಪರೋಕ್ಷಜ್ಞಾನಾನಂತರದ ಕರ್ಮ ಮುಕ್ತಿಯಲ್ಲಿ ಆನಂದದ ವೃದ್ಧಿಗೆ ಕಾರಣ ಎಂದೂ ಒಪ್ಪುವುದಿಲ್ಲ . ಆದ್ದರಿಂದ ಯತಿಗಳಿಗೆ ಜ್ಞಾನದಲ್ಲಿ ಮಾತ್ರ ಅಧಿಕಾರ, ಕರ್ಮಾನುಷ್ಠಾನದಲ್ಲಿ ಅಧಿಕಾರವಿಲ್ಲ ಎನ್ನುತ್ತಾರೆ. ಹೀಗೆ ಜ್ಞಾನ

ಮತ್ತು ನಿಷ್ಕಾಮಕರ್ಮಗಳು ಪರಸ್ಪರ ಪೂರಕಗಳಲ್ಲ. ಪ್ರತ್ಯೇಕ ಎರಡು ವಿಧರಾದ ಜನಗಳಿಗೆ ವಿಹಿತವಾದವು ಎಂದು ಹೇಳುತ್ತಾರೆ. ಆದರೆ ಜ್ಞಾನಿಗಳು ಹೀಗೆ ಹೇಳುವುದಿಲ್ಲ. ಜ್ಞಾನಮಾರ್ಗದಲ್ಲಿ ಹೋಗುವವರಿಗೆ ಕರ್ಮದ ಸಹಾಯ ಬೇಕು. ಕರ್ಮಾನುಷ್ಠಾನವು ಜ್ಞಾನಿಗಳಿಗೆ ಮುಕ್ತಿಯಲ್ಲಿ ಆನಂದದ ವೃದ್ಧಿಗೆ ಕಾರಣ . ಕರ್ಮಯೋಗಿಗಳಿಗೆ ಜ್ಞಾನದ ಸಹಾಯ ಬೇಕು. ಜ್ಞಾನವಿಲ್ಲದ ಕರ್ಮ ಪರಿಪೂರ್ಣವಾಗಲಾರದು. ಕರ್ಮಾನುಷ್ಠಾನದಿಂದ ಅಂತಃಕರಣ ಶುದ್ಧಿದ್ವಾರಾ ಅಪರೋಕ್ಷಜ್ಞಾನ ಪಡೆಯುವುದರಿಂದ ಕರ್ಮವು ಜ್ಞಾನಕ್ಕೆ ಸಾಧನ. ಹೀಗೆ ಜ್ಞಾನ ಮತ್ತು ಕರ್ಮಗಳಿಗೆ ಕಾರ್ಯಕಾರಣಭಾವಸಂಬಂಧ ಇದೆ.

**ನನು 'ನ ತಸ್ಯ ತತ್ತ್ವಗ್ರಹಣಾಯ ಸಾಕ್ಷಾದಿತಿ' ಪಂಚಮಸ್ಕಂಧಸ್ಥಶ್ಲೋಕೇ ವಿಷಯವೈರಾಗ್ಯಾಭಾವೇ ಜ್ಞಾನಾನುತ್ಪತ್ತ್ಯುಕ್ತ್ಯಾ ತತ ಏವ ತದುತ್ಪತ್ತಿರಿತಿ ಲಾಭೇನ ವೈರಾಗ್ಯಶಬ್ದಿತ ಕಾಮಾದಿಸರ್ವವರ್ಜನರೂಪಸಂನ್ಯಾಸೋ ಜ್ಞಾನೋತ್ಪತ್ತೌ ಆವಶ್ಯಕತ್ವೇನೋಕ್ತ ಇತಿ ಪ್ರತೀಯತೇ । ಕರ್ಮಯೋಗಸ್ತು ಜ್ಞಾನವಿರೋಧಿತ್ವೇನೋಕ್ತಃ 'ಅಗ್ನಿಮುಗ್ಧಾ ಧೂಮತಾಂತಾಃ ಸ್ವಂ ಲೋಕಂ ನ ವಿದಂತಿ ತೇ' ಇತ್ಯೇಕಾದಶಸ್ಕಂಧೇ ಏಕವಿಂಶೇಽಧ್ಯಾಯೇ, '[1]ಅಗ್ನಿಮುಗ್ಧೋ ಹ್ಯೆವ ಧೂಮತಾಂತಃ ಸ್ವ(ಸ್ವಂ)ಲೋಕಂ ನ [2]ಪ್ರತಿಪ್ರಜಾನಾತಿ' ಇತಿ [3]ತೈತ್ತಿರೀಯೇ [4]ಸಂಜ್ಞಾನಾಖ್ಯೇ ಪ್ರಶ್ನೇ ಕಶ್ಚಿದನುವಾಕೇ । ಅಗ್ನ್ಯುಪಲಕ್ಷಿತೇ ಕರ್ಮಣಿ ಮುಗ್ಧಃ ಶ್ರೇಯಸ್ಕರಮೇತದಿತಿ ಭ್ರಾಂತಃ ಧೂಮತಾಂತೋ ಹೋಮಧೂಮೇನ ಗ್ಲಾನಃ ಸ್ವಲೋಕಂ ಸ್ವೀಯಮಾಶ್ರಯಂ (ಪರಮಾಶ್ರಯಂ) ಪರಮಾತ್ಮಾನಂ ನ ಪ್ರತಿಪ್ರಜಾನಾತೀತ್ಯರ್ಥಃ ।**

**ಅನುವಾದ** - ಯಾರಿಗೆ ವಿಷಯವೈರಾಗ್ಯ ಇಲ್ಲವೋ ಅವನಿಗೆ ತತ್ತ್ವಜ್ಞಾನವೂ ಆಗುವುದಿಲ್ಲ' ಎಂದು ಭಾಗವತದ ಐದನೇ ಸ್ಕಂಧದ '**ನ ತಸ್ಯ ತತ್ತ್ವಗ್ರಹಣಾಯ**,' ಎಂಬ ಶ್ಲೋಕ ಹೇಳುತ್ತಿದೆ. ಆದ್ದರಿಂದ ವೈರಾಗ್ಯದಿಂದಲೇ ಜ್ಞಾನವು ಹುಟ್ಟುತ್ತದೆ ಎಂದು ಅರ್ಥವಾಗುತ್ತದೆ. ತತ್ತ್ವಜ್ಞಾನ ಬರಬೇಕಾದರೆ ವೈರಾಗ್ಯಶಬ್ದದಿಂದ ಹೇಳಿದ ಕಾಮಕ್ರೋಧಾದಿ ಸಕಲ ವಿಷಯಗಳ ತ್ಯಾಗ ರೂಪವಾದ ಸಂನ್ಯಾಸವು ಅತ್ಯಾವಶ್ಯಕ ಎಂದು ತಿಳಿದು ಬರುತ್ತದೆ. ಕರ್ಮಯೋಗವಾದರೂ ಜ್ಞಾನವಿರೋಧಿ ಎಂದು '**ಅಗ್ನಿಮುಗ್ಧಾ ಧೂಮತಾಂತಾಃ ಸ್ವಂ ಲೋಕಂ ನ ವಿದಂತಿ ತೇ**' (ಅಗ್ನಿಯಲ್ಲಿ - ಉಪಲಕ್ಷಣದಿಂದ ಅಗ್ನಿಸಾಧ್ಯವಾದ ಕರ್ಮದ ವಿಷಯದಲ್ಲಿ , ಕರ್ಮವೇ ಶ್ರೇಯಸ್ಕರ ಎಂದು ಭ್ರಾಂತರಾದವರು, ಹೋಮಗಳ ಧೂಮದಿಂದ ಆಯಾಸ ಹೊಂದಿದವರು

1. ಅಗ್ನಿಮುಗ್ಧೋ ಹ ವೈ
2. ಪ್ರತಿಜಾನಾತಿ
3. ತೈತ್ತರೀಯೇ
4. ಸಂಜ್ಞಾನಾಖ್ಯಪ್ರಶ್ನಃ

ತನಗೆ ಉತ್ತಮ ಆಶ್ರಯನಾದ ಭಗವಂತನನ್ನು ತಿಳಿಯುವುದಿಲ್ಲ) ಎಂದು ಭಾಗವತದ ಹನ್ನೊಂದನೆಯ ಸ್ಕಂಧದ 21ನೆಯ ಅಧ್ಯಾಯದಲ್ಲಿಯೂ **'ಅಗ್ನಿಮುಗ್ಧೋ ಹ್ಯೆವ ಧೂಮತಾಂತಃ ಸ್ವಂಲೋಕಂ ನ ಪ್ರತಿಪ್ರಜಾನಾತಿ'** ಎಂದು ತೈತ್ತಿರೀಯದಲ್ಲಿ **'ಸಂಜ್ಞಾನಂ'** ಎಂದು ಪ್ರಾರಂಭವಾಗುವ ಪ್ರಶ್ನದ **'ಕಶ್ಚಿತ್'** ಎಂದು ಪ್ರಾರಂಭವಾಗುವ ಅನುವಾಕದಲ್ಲಿಯೂ ಹೇಳಿದೆ. ಅಗ್ನಿಯಲ್ಲಿ ಅಂದರೆ , ಉಪಲಕ್ಷಣದಿಂದ ಅಗ್ನಿಸಾಧ್ಯವಾದ ಕರ್ಮದ ವಿಷಯದಲ್ಲಿ, **ಮುಗ್ಧ**= ಎಂದರೆ ಇದೇ ಶ್ರೇಯಸ್ಕರ ಎಂದು ಭ್ರಾಂತನಾದವನು, **ಧೂಮತಾಂತಃ**= ಹೋಮದ ಹೊಗೆಯಿಂದ ಆಯಾಸ ಹೊಂದಿದವನು , **ಸ್ವಂಲೋಕಂ**= ತನಗೆ ಆಶ್ರಯನಾದ ಭಗವಂತನನ್ನು, **ನ ಪ್ರತಿಪ್ರಜಾನಾತಿ** = ತಿಳಿಯುವುದಿಲ್ಲ.

**ವಿವರಣೆ-** ಉಪಲಕ್ಷಣವೆಂದರೆ- 'ರೊಟ್ಟಿಯನ್ನು ಕಾಗೆ ತಿನ್ನದಂತೆ ನೋಡಿಕೋ' ಎಂದು ಹೇಳಿದಾಗ ಕಾಗೆ ಬಂದರೆ ಅದನ್ನು ಓಡಿಸು, ನಾಯಿ ಬಂದರೆ ಪರವಾಗಿಲ್ಲ ಎಂದು ಅರ್ಥವಲ್ಲ. ಕಾಗೆ ಬಂದರೆ ಓಡಿಸು ಎಂದರೆ ನಾಯಿ ಬಂದರೂ ಓಡಿಸು, ಬೆಕ್ಕು ಬಂದರೂ ಓಡಿಸು ಎಂದು ಅರ್ಥ. ಇಲ್ಲಿ ನಾಯಿ, ಬೆಕ್ಕುಗಳನ್ನು ಶಬ್ದದಿಂದ ಹೇಳಿರದಿದ್ದರೂ, ನಾಯಿ, ಬೆಕ್ಕುಗಳು ಕಾಗೆ ಶಬ್ದದ ಅರ್ಥವಲ್ಲದಿದ್ದರೂ ಕಾಗೆ ಎಂದರೆ ರೊಟ್ಟಿಯನ್ನು ತಿನ್ನುವ ಪ್ರಾಣಿ ಎಂದರ್ಥ. ಆದ್ದರಿಂದ ಇಲ್ಲಿ - ಕಾಗೆಶಬ್ದದಿಂದ ಉಪಲಕ್ಷಣದಿಂದ ರೊಟ್ಟಿ ತಿನ್ನುವ ಪ್ರಾಣಿ ಎಂದು ಹೇಳುತ್ತೇವೆ. ಅದರಂತೆ ಅಗ್ನಿಯ ವಿಷಯದಲ್ಲಿ ಮುಗ್ಧರು ಎಂದರೆ ಉಪಲಕ್ಷಣದಿಂದ ಅಗ್ನಿಯಲ್ಲಿ ಮಾಡುವ ಯಾಗಾದಿ ಕರ್ಮದ ವಿಷಯದಲ್ಲಿ ಮುಗ್ಧರು ಎಂದು ಅರ್ಥ.

**ತಥಾ ಚ ಕಥಂ ಕರ್ಮಯೋಗಾತ್ಸಂನ್ಯಾಸೋऽವರ ಇತ್ಯುಚ್ಯತ ಇತ್ಯತಃ ಸಂನ್ಯಾಸ ಇವ ಕರ್ಮಯೋಗೋऽಪಿ ಜ್ಞಾನೋತ್ಪತ್ತಾವಾವಶ್ಯಕ ಏವೇತ್ಯಾಹ ಕೃಷ್ಣಃ- ಸಾಂಖ್ಯೇತಿ ॥**

**ಅನುವಾದ -** ಆದ್ದರಿಂದ ಕರ್ಮಯೋಗಕ್ಕಿಂತ ಸಂನ್ಯಾಸವು ಕೀಳು ಎಂದು ಹೇಗೆ ಹಿಂದೆ ಹೇಳಿದಿ ? ಎಂದು ಆಕ್ಷೇಪ ಬಂದರೆ ಶ್ರೀಕೃಷ್ಣನು ಸಂನ್ಯಾಸದಂತೆ ಕರ್ಮಯೋಗವು ಕೂಡ ತತ್ತ್ವ ಜ್ಞಾನಕ್ಕೆ ಸಾಧನ ಎಂದು **ಸಾಂಖ್ಯಯೋಗೌ** ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ.

**ವಿವರಣೆ-** ಈ ಅಧ್ಯಾಯದ ಎರಡನೇ ಶ್ಲೋಕದಲ್ಲಿ ಕರ್ಮಯೋಗಕ್ಕಿಂತ ಸಂನ್ಯಾಸ ಕೀಳು, ಸಂನ್ಯಾಸಕ್ಕಿಂತ ಕರ್ಮಯೋಗವು ಶ್ರೇಷ್ಠ ಎಂದು ಶ್ರೀಕೃಷ್ಣ ಹೇಳಿದ್ದಾನೆ. ಇಲ್ಲಿ ಒಂದು ಆಕ್ಷೇಪ. ಸಂನ್ಯಾಸ ಎಂದರೆ ಕಾಮಾದಿಗಳ ತ್ಯಾಗರೂಪವಾದ ವೈರಾಗ್ಯ . ಈ ವೈರಾಗ್ಯ ತತ್ತ್ವಜ್ಞಾನ ಹುಟ್ಟಲು ಅತ್ಯಾವಶ್ಯಕ ಎಂದು ಭಾಗವತದಲ್ಲಿ 5ನೇ ಸ್ಕಂಧದಲ್ಲಿ ಹೇಳಿದ್ದಾರೆ. ಆದ್ದರಿಂದ ವೈರಾಗ್ಯರೂಪ ವಾದ ಸಂನ್ಯಾಸ ಜ್ಞಾನಸಾಧನ ಎಂದು ಹೇಳಿದಂತಾಯಿತು. ಆದರೆ ಭಾಗವತದ 11ನೇ ಸ್ಕಂಧದ

21ನೇ ಅಧ್ಯಾಯದಲ್ಲಿ ಮತ್ತು ತೈತ್ತಿರೀಯ ಸಂಜ್ಞಾನ ಪ್ರಶ್ನದ ಕಶ್ಚಿದನುವಾಕದಲ್ಲಿ ಕರ್ಮವೇ ನಮಗೆ ಸುಖವನ್ನು ಕೊಡುತ್ತದೆ ಎಂದು ಭ್ರಾಂತರಾಗಿ ಕರ್ಮದಲ್ಲಿ ಆಸಕ್ತರಾಗಿ, ಹೋಮ ಹವನಗಳನ್ನು ಮಾಡಿ ಹೊಗೆ ಕುಡಿದು ಆಯಾಸಗೊಂಡವರು ಪರಮಾತ್ಮನನ್ನು ತಿಳಿಯಲಾರರು ಎಂದು ಕರ್ಮಯೋಗವನ್ನು ನಿಂದಿಸಿದ್ದಾರೆ, ಜ್ಞಾನ ವಿರೋಧಿ ಎಂದಿದ್ದಾರೆ. ಆದ್ದರಿಂದ ಸಂನ್ಯಾಸವು ಕರ್ಮಯೋಗಕ್ಕಿಂತ ಶ್ರೇಷ್ಠ ಆಗಬೇಕು. ಸಂನ್ಯಾಸವು ಕರ್ಮಯೋಗಕ್ಕಿಂತ ಕೀಳು ಆಗಲು ಹೇಗೆ ಸಾಧ್ಯ ? ಈ ಆಕ್ಷೇಪಕ್ಕೆ ಶ್ರೀಕೃಷ್ಣ ಈ ಶ್ಲೋಕದಲ್ಲಿ ಉತ್ತರಿಸಿದ್ದಾನೆ .

**ಸಾಂಖ್ಯಂ ಜ್ಞಾನಂ ಯೋಗೋ ಭಗವದರ್ಪಣಬುದ್ಧ್ಯಾ ಕರ್ಮಾನುಷ್ಠಾನಂ ತಾವುಭೌ ಬಾಲಾಃ ಅವಿವೇಕಿನಃ ಪೃಥಕ್ ಸಾಧ್ಯಸಾಧನಭಾವಹೀನೌ ಪ್ರವದಂತಿ । ನ ಪಂಡಿತಾಃ । ಯೋಗಸ್ಯ ಜ್ಞಾನಹೇತುತ್ವಂ ಕುತ ಇತ್ಯತ ಉಚ್ಯತೇ- ಏಕಮಪೀತಿ ॥ ಏಕಮಪಿ ಜ್ಞಾನಮಾರ್ಗಂ ಕರ್ಮಮಾರ್ಗಂ ವಾ ಏಕಮಪಿ ಸಮ್ಯಗಾಸ್ಥಿತೋಽನುತಿಷ್ಠನ್ ಉಭಯೋರ್ಜ್ಞಾನಕರ್ಮಣೋರುಭಯೋರಪಿ ಫಲಂ ವಿಂದತ ಇತ್ಯರ್ಥಃ ॥ 4 ॥**

**ಅನುವಾದ- ಸಾಂಖ್ಯಂ**= ಜ್ಞಾನ, **ಯೋಗಃ**= ಭಗವದರ್ಪಣಬುದ್ಧಿಯಿಂದ ಕರ್ಮಾ-ಚರಣೆ. **ತಾವುಭೌ**= ಅವೆರಡನ್ನು, **ಬಾಲಾಃ**= ಅವಿವೇಕಿಗಳು, **ಪೃಥಕ್**= ಸಾಧ್ಯಸಾಧನ ಭಾವ ರಹಿತವಾದವುಗಳು ಎಂದು, **ಪ್ರವದಂತಿ**= ಹೇಳುತ್ತಾರೆ. **ನ ಪಂಡಿತಾಃ**= ಜ್ಞಾನಿಗಳು ಹೀಗೆ ಹೇಳುವುದಿಲ್ಲ. ಕರ್ಮಯೋಗವು ಜ್ಞಾನಕ್ಕೆ ಸಾಧನ ಏಕೆ ಎಂದರೆ 'ಏಕಮಪಿ' ಎಂಬ ವಾಕ್ಯದಿಂದ ಉತ್ತರಿಸುತ್ತಾನೆ. **ಏಕಮಪಿ**= ಜ್ಞಾನಮಾರ್ಗವನ್ನು ಅಥವಾ ಕರ್ಮಮಾರ್ಗವನ್ನು ಯಾವುದಾದರೂ ಒಂದನ್ನಾದರೂ, **ಸಮ್ಯಗಾಸ್ಥಿತಃ**= ಸರಿಯಾಗಿ ಅನುಸರಿಸಿದವನು, **ಉಭಯೋಃ**= ಜ್ಞಾನಕರ್ಮಗಳೆರಡರ ಫಲವನ್ನೂ ಹೊಂದುತ್ತಾನೆ. ॥ 4 ॥

**ವಿವರಣೆ** - ಸಂನ್ಯಾಸ ಮತ್ತು ಕರ್ಮಯೋಗ ಇವೆರಡೂ ತತ್ತ್ವಜ್ಞಾನದ ಹುಟ್ಟಿಗೆ ಕಾರಣ. ಆದ್ದರಿಂದ ಅತ್ಯಾವಶ್ಯಕ. ಇವುಗಳಲ್ಲಿ ವಿರೋಧವಿಲ್ಲ. ಭಾಗವತದಲ್ಲಿ 11 ನೇ ಸ್ಕಂಧದಲ್ಲಿ ಮತ್ತು ವೇದದ ಕಶ್ಚಿದನುವಾಕದಲ್ಲಿ ಕರ್ಮನಿಂದನೆಯ ವಾಕ್ಯಗಳು ಇದ್ದರೂ ಅವು ಸಕಾಮಕರ್ಮಗಳನ್ನು ನಿಂದಿಸುತ್ತಿವೆ ಹೊರತು ನಿಷ್ಕಾಮಕರ್ಮಗಳನ್ನಲ್ಲ. ಆದ್ದರಿಂದ ಕರ್ಮಯೋಗವು ಜ್ಞಾನವಿರೋಧಿಯಲ್ಲ.

## ಜ್ಞಾನಯೋಗಿಗಳಿಗೆ ಕರ್ಮಯೋಗಿಗಳಿಗೆ ಫಲವ್ಯತ್ಯಾಸವಿಲ್ಲ

**ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥ 5 ॥**

**ಅರ್ಥ**- ಜ್ಞಾನಿಗಳು ಯಾವ ಭಗವಂತನನ್ನು ಹೊಂದುತ್ತಾರೋ ಕರ್ಮಯೋಗಿಗಳೂ ಜ್ಞಾನದ್ವಾರಾ ಅದೇ ಭಗವಂತನನ್ನು ಹೊಂದುತ್ತಾರೆ. ಸಾಂಖ್ಯ ಮತ್ತು ಯೋಗಗಳು ಕಾರ್ಯ-ಕಾರಣಭಾವ ಸಂಬಂಧವುಳ್ಳವುಗಳು ಎಂದು ಯಾರು ತಿಳಿಯುತ್ತಾನೋ ಅವನು ಸರಿಯಾದ ಜ್ಞಾನಿ.

ಅಥವಾ , ಸಂನ್ಯಾಸಿಗಳು ಯಾವ ಭಗವಂತನನ್ನು ಹೊಂದುತ್ತಾರೋ ಅಂತಹ ಜ್ಞಾನದಿಂದ ಮಾತ್ರ ಹೊಂದಲು ಸಾಧ್ಯವಾದ ಭಗವಂತನನ್ನು ಗೃಹಸ್ಥಾಶ್ರಮಿಗಳೂ ಹೊಂದುತ್ತಾರೆ. ಜ್ಞಾನ ಮತ್ತು ಯೋಗಗಳು ಒಬ್ಬನೇ ಪುರುಷನಲ್ಲಿ ಇರುತ್ತವೆ. ಕರ್ಮಯೋಗಿಯಾದ ಗೃಹಸ್ಥಾಶ್ರಮಿಯಲ್ಲಿ ಜ್ಞಾನ, ಜ್ಞಾನಯೋಗಿಯಾದ ಸಂನ್ಯಾಸಿಯಲ್ಲಿ ಕರ್ಮ ಹೀಗೆ ಎರಡನ್ನು ಒಂದೇ ನೆಲೆಯಲ್ಲಿ ಯಾರು ಕಾಣುತ್ತಾನೋ ಅವನು ಜ್ಞಾನಿ.

**ನನ್ವೇತಾವತಾ ದ್ವಯಂ ಕಿಂಚಿತ್ಫಲಂ ಪ್ರತಿ ಸ್ವತಂತ್ರಸಾಧನಮಿತ್ಯುಚ್ಯತೇ । ಯೋಗಸ್ಯ ಜ್ಞಾನಹೇತುತ್ವಂ ನ ಪ್ರಾಪ್ತಮಿತ್ಯತಃ ತದಭಿಪ್ರಾಯಂ ಸ್ವಯಮೇವ ವ್ಯನಕ್ತಿ- ಯತ್ಸಾಂಖ್ಯೈರಿತಿ ॥ ಸಾಂಖ್ಯೈರ್ಜ್ಞಾನಿಭಿರ್ಯತ್ ಸ್ಥಾನಂ ಭಗವತ್-ಸ್ವರೂಪಲಕ್ಷಣಂ ತದ್ಯೋಗೈಃ । ಅರ್ಶ ಆದ್ಯಚ್‌ಪ್ರತ್ಯಯಾಂತಾವತ್ರ ಸಾಂಖ್ಯ-ಯೋಗಶಬ್ದೌ । ಕರ್ಮಯೋಗವದ್ಭಿರಪಿ ಜ್ಞಾನದ್ವಾರಾ ಗಮ್ಯತ ಇತ್ಯರ್ಥಃ । ತಥಾ ಚ ಸಾಂಖ್ಯಂ ಚ ಯೋಗಂ ಚ ಏಕಂ ಸಾಧ್ಯಸಾಧನಭಾವವತ್ ಯಃ ಪಶ್ಯತಿ ಸ ಏವ ಜ್ಞಾನೀತ್ಯರ್ಥಃ । ಸಂನ್ಯಾಸಯೋಗಯೋರ್ದ್ವಯೋರಪಿ ಜ್ಞಾನಹೇತುತ್ವಾನ್ನ ಕೋಽಪಿ ವಿರೋಧಃ । 'ಅಗ್ನಿಮುಗ್ಧ 'ಇತ್ಯಾದಿ ತು ಕಾಮಕರ್ಮವಿಷಯಮಿತಿ ಭಾವಃ ।ಯದ್ವಾ ಸಂನ್ಯಾಸಯೋಗಶಬ್ದಯೋಃ ಯತಿಗೃಹಿಪರತ್ವಮುಪೇತ್ಯ ತಯೋರಧಿಕಾರಿಭೇದಾದೇಕತ್ರ ಸಂನ್ಯಾಸಯೋಗಯೋಃ ಸಮಾವೇಶಾಯೋಗ-ಶ್ಚೋದಿತಃ । ಅಸೌ ಸಂನ್ಯಾಸಯೋಗಶಬ್ದಯೋಸ್ತದರ್ಥತ್ವಾನಂಗೀಕಾರೇಣ ಪೂರ್ವಶ್ಲೋಕೇ ಪರಿಹೃತಃ । ಅಧುನಾ ಸಂನ್ಯಾಸಯೋಗಯೋರಧಿಕಾರಿ-ಭೇದೋಽಪಿ ನ ಯುಜ್ಯತ ಇತ್ಯಾಹ- ಸಾಂಖ್ಯೇತಿ ॥**

**ಅನುವಾದ** – ಜ್ಞಾನ, ಕರ್ಮ ಇವುಗಳಲ್ಲಿ ಒಂದನ್ನು ಸರಿಯಾಗಿ ಅನುಸರಿಸಿದರೆ ಜ್ಞಾನಕರ್ಮಗಳ ಫಲವನ್ನು ಪಡೆಯುತ್ತಾನೆ ಎಂದು ಹೇಳಿದ್ದರಿಂದ ಜ್ಞಾನ ಮತ್ತು ಕರ್ಮ ಇವೆರಡು ಒಂದು ಫಲವನ್ನು ಕುರಿತು ಸ್ವತಂತ್ರಕಾರಣಗಳಾಗಿವೆ ಎಂದು ಹೇಳಿದಂತಾಯಿತು. ಕರ್ಮಯೋಗವು ಜ್ಞಾನಕ್ಕೆ ಕಾರಣ ಎಂದು ಹೇಳಿದಂತಾಗಲಿಲ್ಲ. ಆದ್ದರಿಂದ ಹಿಂದಿನ ಶ್ಲೋಕದ ಅಭಿಪ್ರಾಯವನ್ನು ಸ್ವತಃ ಕೃಷ್ಣನೇ '**ಯತ್ ಸಾಂಖ್ಯೈಃ**' ಎಂಬ ಶ್ಲೋಕದಿಂದ ವಿವರಿಸುತ್ತಾನೆ.

**ಸಾಂಖ್ಯೈಃ** - ಜ್ಞಾನಿಗಳಿಂದ ಯಾವ ಸ್ಥಾನವು- ಭಗವಂತನ ಸ್ವರೂಪವೆಂಬ ಸ್ಥಾನವು (ಹೊಂದಲ್ಪಡುತ್ತದೋ) ಅದು ಕರ್ಮಯೋಗಿಗಳಿಂದಲೂ ಜ್ಞಾನದ್ವಾರಾ (ಹೊಂದಲ್ಪಡುತ್ತದೆ). ಇಲ್ಲಿ ಸಾಂಖ್ಯ ಎಂದರೆ ಜ್ಞಾನವುಳ್ಳವರು, ಯೋಗ ಎಂದರೆ ಯೋಗವುಳ್ಳವರು ಎಂದು ಅರ್ಥ. ಸಾಂಖ್ಯ ಮತ್ತು ಯೋಗ ಶಬ್ದಗಳಿಗೆ ಅದನ್ನು ಹೊಂದಿದವರು ಎಂಬ ಅರ್ಥದಲ್ಲಿ '**ಅರ್ಶ ಆದ್ಯಚ್**' ಎಂಬ ಸೂತ್ರದಿಂದ 'ಅಚ್' ಪ್ರತ್ಯಯ ಬಂದಿದೆ. ಕರ್ಮಯೋಗವುಳ್ಳವರೂ ಜ್ಞಾನದ್ವಾರಾ ಅದೇ ಸ್ಥಾನವನ್ನು ಹೊಂದುತ್ತಾರೆ ಎಂದು ಅರ್ಥ. ಆದ್ದರಿಂದ ಸಾಂಖ್ಯ ಮತ್ತು ಯೋಗ ಇವುಗಳನ್ನು **ಏಕಂ**- ಸಾಧ್ಯ-ಸಾಧನಭಾವವುಳ್ಳವುಗಳು ಎಂದು ಯಾರು ತಿಳಿಯುತ್ತಾನೋ ಅವನೇ ಜ್ಞಾನೀ ಎಂದು ಅರ್ಥ. ಸಂನ್ಯಾಸ ಮತ್ತು ಯೋಗ ಇವೆರಡೂ ಜ್ಞಾನಕ್ಕೆ ಕಾರಣಗಳಾದ್ದರಿಂದ ಯಾವ ವಿರೋಧವೂ ಇಲ್ಲ. 'ಅಗ್ನಿಮುಗ್ಧ' ಇವೇ ಮೊದಲಾದ ವಾಕ್ಯಗಳಲ್ಲಿ ಕರ್ಮ ನಿಂದನೆಯು ಕಾಮ್ಯಕರ್ಮ ವಿಷಯ ಎಂದು ಅಭಿಪ್ರಾಯ . ಅಥವಾ ಸಂನ್ಯಾಸ ಮತ್ತು ಯೋಗ ಶಬ್ದಗಳಿಗೆ ಯತಿಗಳು ಮತ್ತು ಗೃಹಸ್ಥಾಶ್ರಮಿಗಳು ಎಂದು ಅರ್ಥವನ್ನು ಇಟ್ಟುಕೊಂಡು, ಯತ್ಯಾಶ್ರಮ ಮತ್ತು ಗೃಹಸ್ಥಾಶ್ರಮ ಇವೆರಡಕ್ಕೂ ಅಧಿಕಾರಿಗಳು ಬೇರೆ ಬೇರೆ ಆದ್ದರಿಂದ ಸಂನ್ಯಾಸ ಮತ್ತು ಯೋಗಗಳು ಒಟ್ಟಿಗೆ ಒಬ್ಬನಲ್ಲಿಯೇ ಇರಲು ಸಾಧ್ಯವಿಲ್ಲ ಎಂಬ ಆಕ್ಷೇಪವನ್ನು ಹಿಂದಿನ ಶ್ಲೋಕದಲ್ಲಿ, (ಸಂನ್ಯಾಸ ಮತ್ತು ಯೋಗ ಶಬ್ದಗಳಿಗೆ ಯತ್ಯಾಶ್ರಮ ಮತ್ತು ಗೃಹಸ್ಥಾಶ್ರಮ ಎಂಬ ಅರ್ಥ ಅಲ್ಲ ಎಂದು) ಪರಿಹರಿಸಲಾಯಿತು. ಈಗ ಸಂನ್ಯಾಸ ಮತ್ತು ಯೋಗ ಇವುಗಳಿಗೆ ಅಧಿಕಾರಿಗಳು ಬೇರೆ ಎಂಬುದೂ ಸರಿಯಲ್ಲ ಎಂದು '**ಸಾಂಖ್ಯಯೋಗೌ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ.

**ಬಾಲಾಃ ಅವಿವೇಕಿನಃ ಸಾಂಖ್ಯಯೋಗೌ ಜ್ಞಾನಕರ್ಮಯೋಗೌ ಪೃಥಕ್ ಭಿನ್ನಾಧಿಕಾರಿಕೌ ನೈಕತ್ರ ಸಮಾವಿಷ್ಟೌ । ಯತ್ಯಾಶ್ರಮಿಣಾಂ ಸಾಂಖ್ಯಪದೋಕ್ತ-ಜ್ಞಾನಾಧಿಕಾರ ಏವ, ನ ಕರ್ಮಣಿ । ಗೃಹಿಣಾಂ ತು ಯೋಗ- ಪದೋಕ್ತಕರ್ಮಾ-ಧಿಕಾರ ಏವ, ನ ಜ್ಞಾನ ಇತಿ ಪ್ರವದಂತಿ । ಜ್ಞಾನಮಾರ್ಗಂ ಸಮ್ಯಗಾಸ್ಥಿತ ಏವ ಜ್ಞಾನಫಲಂ ಪ್ರಾಪ್ನೋತಿ । ಕರ್ಮಮಾರ್ಗಂ ಸಮ್ಯಗಾಸ್ಥಿತ ಏವ ಕರ್ಮಫಲಂ ಪ್ರಾಪ್ನೋತೀತಿ ಪ್ರವದಂತೀತಿ ಯಾವತ್ । ನ ಪಂಡಿತಾಃ ಕುತಃ ಜ್ಞಾನಕರ್ಮ-ಮಾರ್ಗಯೋರೇಕಮಪಿ ಸಮ್ಯಗಾಸ್ಥಿತಃ ಉಭಯೋಃ ಫಲಂ ವಿಂದತೇ ಯತಃ ಅತೋ ನ ಪಂಡಿತಾ ಬಾಲಾ ಇವ ಪ್ರವದಂತೀತ್ಯರ್ಥಃ ।**

**ಅನುವಾದ** - **ಬಾಲಾಃ** = ಅವಿವೇಕಿಗಳು, **ಸಾಂಖ್ಯಯೋಗೌ** = ಜ್ಞಾನಯೋಗ ಮತ್ತು ಕರ್ಮಯೋಗಗಳು, **ಪೃಥಕ್** - ಪ್ರತ್ಯೇಕ ಅಧಿಕಾರಿಗಳಿಗೆ ಸಂಬಂಧಪಟ್ಟವು ಒಬ್ಬನಲ್ಲಿಯೇ

ಇರಲಾರವು. ಸಂನ್ಯಾಸಿಗಳಿಗೆ ಸಾಂಖ್ಯಶಬ್ದದಿಂದ ಹೇಳಿದ ಜ್ಞಾನದಲ್ಲಿ ಮಾತ್ರ ಅಧಿಕಾರ. ಕರ್ಮದಲ್ಲಿ ಅಧಿಕಾರ ಇಲ್ಲ. ಗೃಹಸ್ಥಾಶ್ರಮಿಗಳಿಗೆ ಯೋಗಶಬ್ದದಿಂದ ಹೇಳಿದ ಕರ್ಮದಲ್ಲಿ ಮಾತ್ರ ಅಧಿಕಾರ, ಜ್ಞಾನದಲ್ಲಿ ಇಲ್ಲ ಎಂದು ಹೇಳುತ್ತಾರೆ. ಅಂದರೆ ಜ್ಞಾನಮಾರ್ಗವನ್ನು ಸರಿಯಾಗಿ ಆಶ್ರಯಿಸಿದವನು ಮಾತ್ರ ಜ್ಞಾನದ ಫಲವನ್ನು ಪಡೆಯುತ್ತಾನೆ. ಕರ್ಮಮಾರ್ಗವನ್ನು ಸರಿಯಾಗಿ ಆಶ್ರಯಿಸಿದವನು ಮಾತ್ರ ಕರ್ಮದ ಫಲವನ್ನು ಪಡೆಯುತ್ತಾನೆ ಎಂದು ಹೇಳುತ್ತಾರೆ ಎಂದು ಅರ್ಥ. ಪಂಡಿತರು ಹೇಳುವುದಿಲ್ಲ. ಏಕೆ ಹೇಳುವುದಿಲ್ಲ ಎಂದರೆ- ಜ್ಞಾನಮಾರ್ಗ ಅಥವಾ ಕರ್ಮಮಾರ್ಗ ಇವೆರಡರಲ್ಲಿ ಒಂದನ್ನು ಸರಿಯಾಗಿ ಅನುಸರಿಸಿದರೂ ಜ್ಞಾನ ಮತ್ತು ಕರ್ಮಗಳೆರಡರ ಫಲವನ್ನೂ ಹೊಂದುತ್ತಾನೆ. ಆದ್ದರಿಂದ ಜ್ಞಾನಿಗಳು ಅವಿವೇಕಿಗಳಂತೆ ಹೇಳುವುದಿಲ್ಲ ಎಂದು ಅರ್ಥ.

**ಅತ್ರ ಮಾರ್ಗದ್ವಯಸ್ಯ ಸಮ್ಯಕ್ತ್ವವಿಶೇಷಣಾತ್ ಕರ್ಮಣೋ ಜ್ಞಾನ-ಸಾಹಿತ್ಯಮ್ । ತೇನ ವಿನಾ ಸಮ್ಯಗನುಷ್ಠಾನಾಸಿದ್ಧೇಃ । ಕರ್ಮಣಾ ವಿನಾ ಸಂಪೂರ್ಣಾನಂದಹೇತುತ್ವರೂಪಸಮ್ಯಕ್ತ್ವಸ್ಯ ಜ್ಞಾನೇಽನುಪಪತ್ತೇಃ ತದರ್ಥಂ ತಸ್ಯ ಕರ್ಮಸಾಹಿತ್ಯಮಿತಿ ಸೂಚಿತಮ್ । ಜ್ಞಾನೈಕಗಮ್ಯಯತಿಪ್ರಾಪ್ಯಸ್ಥಾನಪ್ರಾಪ್ತಿ-ಸದ್ಭಾವಾಚ್ಚ ಗೃಹಿಣಾಂ ಜ್ಞಾನಾಧಿಕಾರೋಽಸ್ತೀತಿ ಸ್ಪಷ್ಟಂ ವದನ್ನುಕ್ತಮುಪ-ಸಂಹರತಿ- ಯದಿತ್ಯಾದಿನಾ ॥ ಯತಃ ಸಾಂಖ್ಯೈರ್ಜ್ಞಾನಿಭಿರ್ಯತಿಭಿಃ ಪ್ರಾಪ್ಯಂ ಸ್ಥಾನಂ ಯೋಗೈರ್ಯೋಗವದ್ಭಿರ್ಗೃಹಿಭಿರ್ಗಮ್ಯತೇ ತಸ್ಮಾತ್ಸಾಂಖ್ಯಂ ಯೋಗಂ ಚೈಕಂ ಏಕಾಧಿಕರಣಕಮ್ । ಕರ್ಮಿಣ್ಯಪಿ ಗೃಹಿಣಿ ಜ್ಞಾನಂ, ಜ್ಞಾನಿನ್ಯಪಿ ಕರ್ಮೇತ್ಯೇವಮೇಕತ್ರ ತಯೋಃ ಸಮಾವೇಶಂ ಯಃ ಪಶ್ಯತಿ ಸ ಪಶ್ಯತಿ ಜ್ಞಾನೀತ್ಯರ್ಥಃ ॥ 5 ॥**

**ಅನುವಾದ** - ಇಲ್ಲಿ ಜ್ಞಾನಮಾರ್ಗ ಮತ್ತು ಕರ್ಮಮಾರ್ಗ ಈ ಎರಡೂ ಮಾರ್ಗಗಳಿಗೂ **ಸಮ್ಯಕ್**- ಚೆನ್ನಾಗಿ ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ. ಆದ್ದರಿಂದ ಕರ್ಮವು ಜ್ಞಾನಸಹಿತವಾಗಿರಬೇಕು. ಜ್ಞಾನವಿಲ್ಲದೆ ಕರ್ಮಗಳ ಸರಿಯಾದ ಅನುಷ್ಠಾನಸಲ್ಲದು. ಕರ್ಮವಿಲ್ಲದೆ ಜ್ಞಾನವು ಪರಿಪೂರ್ಣ ಆನಂದ ಆವಿರ್ಭಾವಕ್ಕೆ ಕಾರಣವಾಗುವುದಿಲ್ಲ. ಆದ್ದರಿಂದ ಜ್ಞಾನದಲ್ಲಿ ಸಮ್ಯಕ್ತ್ವ (ಚೆನ್ನಾಗಿ ಎಂಬ ಅಂಶ) ಬರುವುದಿಲ್ಲ. ಜ್ಞಾನವು ಪರಿಪೂರ್ಣ ಆನಂದದ ಆವಿರ್ಭಾವಕ್ಕೆ ಕಾರಣವಾಗಲು ಕರ್ಮಸಹಿತವಾಗಿರಬೇಕು ಎಂದು ಸೂಚಿಸಿದ್ದಾನೆ. ಜ್ಞಾನದಿಂದ ಮಾತ್ರ ಹೊಂದಲು ಸಾಧ್ಯವಾದ, ಸಂನ್ಯಾಸಿಗಳು ಹೊಂದುವ ಸ್ಥಾನವನ್ನು ಗೃಹಸ್ಥಾಶ್ರಮಿಗಳೂ ಹೊಂದುತ್ತಾರೆ. ಆದ್ದರಿಂದ ಗೃಹಸ್ಥಾಶ್ರಮಿಗಳಿಗೂ ಜ್ಞಾನಾಧಿಕಾರ ಇದೆ ಎಂದು ಸ್ಪಷ್ಟವಾಗಿ

ಹೇಳುತ್ತಾ ಕರ್ಮಯೋಗಕ್ಕೆ ಜ್ಞಾನದ ಸಹಕಾರ, ಜ್ಞಾನಯೋಗಕ್ಕೆ ಕರ್ಮದ ಸಹಕಾರ ಬೇಕು ಎಂದು ಹೇಳಿರುವುದನ್ನು '**ಯತ್‌ಸಾಂಖ್ಯೈಃ**' ಎಂಬ ಶ್ಲೋಕದಿಂದ ಉಪಸಂಹಾರ ಮಾಡುತ್ತಾನೆ. ಯಾವ ಕಾರಣದಿಂದ **ಸಾಂಖ್ಯೈಃ**= ಜ್ಞಾನಿಗಳಿಂದ- ಸಂನ್ಯಾಸಿಗಳಿಂದ ಹೊಂದಲು ಯೋಗ್ಯವಾದ ಸ್ಥಾನವು, **ಯೋಗೈಃ**= ಯೋಗಿಗಳಿಂದ- ಗೃಹಸ್ಥಾಶ್ರಮಿಗಳಿಂದಲೂ ಹೊಂದಲ್ಪ-ಡುತ್ತದೋ ಆದ್ದರಿಂದ.ಜ್ಞಾನ ಮತ್ತು ಯೋಗಗಳು **ಏಕಂ** – ಅಂದರೆ ಒಬ್ಬನಲ್ಲಿ ಇರುತ್ತವೆ. ಕರ್ಮಯೋಗಿಗಳಾದ ಗೃಹಸ್ಥಾಶ್ರಮಿಗಳಲ್ಲಿ ಜ್ಞಾನ ಇರುತ್ತದೆ. ಜ್ಞಾನಯೋಗಿಗಳಾದ ಸಂನ್ಯಾಸಿಗಳಲ್ಲಿ ಕರ್ಮ ಇರುತ್ತದೆ. ಈ ರೀತಿಯಾಗಿ ಜ್ಞಾನ ಮತ್ತು ಕರ್ಮಗಳಿಗೆ ಒಂದೇ ನೆಲೆಯನ್ನು ಯಾರು ತಿಳಿಯುತ್ತಾನೋ ಅವನು ಜ್ಞಾನಿ ಎಂದು ಅರ್ಥ. || 5 ||

## ಯೋಗವಿಲ್ಲದ ಸಂನ್ಯಾಸ ದುಃಖಕ್ಕೆ ಕಾರಣ

**ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ** || 6 ||

**ಅರ್ಥ**- ಆಜಾನುಬಾಹುವುಳ್ಳ ಅರ್ಜುನ ! ಭಗವದರ್ಪಣಬುದ್ಧಿಯಿಂದ ಕರ್ಮಾಚರಣ ರೂಪವಾದ ಯೋಗ ಇಲ್ಲದಿದ್ದಲ್ಲಿ ಕಾಮಗಳ ತ್ಯಾಗರೂಪವಾದ ಸಂನ್ಯಾಸ ಕೇವಲ ದುಃಖಕ್ಕೆ ಕಾರಣ. ಭಗವದರ್ಪಣ ಬುದ್ಧಿಯಿಂದ ಕರ್ಮಾಚರಣರೂಪವಾದ ಯೋಗದಿಂದ ಕೂಡಿದ ಸಂನ್ಯಾಸಿಯು ಶೀಘ್ರವಾಗಿ ಭಗವಂತನನ್ನು ಹೊಂದುತ್ತಾನೆ.

ಅಥವಾ, ಕಾಮಾದಿತ್ಯಾಗರೂಪವಾದ ಸಂನ್ಯಾಸವು ಯೋಗದ ಒಂದು ಅಂಶ, ಭಗವದರ್ಪಣಬುದ್ಧಿಯಿಂದ ಕರ್ಮಾಚರಣೆಯೂ ಒಂದು ಅಂಶ . ಕಾಮಾದಿತ್ಯಾಗಸಹಿತವಾದ, ಭಗವದರ್ಪಣ ಬುದ್ಧಿಯಿಂದ ಕರ್ಮಾಚರಣೆಯು ಯೋಗ ಎನಿಸುತ್ತದೆ. ಭಗವದರ್ಪಣ ಬುದ್ದಿಯಿಂದ ಕರ್ಮಾಚರಣರೂಪವಾದ ಯೋಗ ಎಂಬ ಅಂಶವಿಲ್ಲದೆ. ಯೋಗಸ್ವರೂಪವನ್ನು ಪಡೆಯದ ಕೇವಲ ಸಂನ್ಯಾಸವು (ಕರ್ಮತ್ಯಾಗವು) ದುಃಖಕ್ಕೆ ಕಾರಣ. ಯೋಗ ಎಂಬ ಅಂಶದಿಂದ ಕೂಡಿದ ಸಂನ್ಯಾಸವನ್ನು ಸ್ವೀಕರಿಸಿದವನು ಶೀಘ್ರವಾಗಿ ಭಗವಂತನನ್ನು ಹೊಂದುತ್ತಾನೆ.

**ಪೂರ್ವಂ 'ಜ್ಞೇಯ' ಇತ್ಯತ್ರ ಸ್ವಾಭಿಮತ ಸಂನ್ಯಾಸ ಶಬ್ದಾರ್ಥಂ ಸ್ಮಾರಯಿತ್ವಾ ತಸ್ಯ ಯೋಗಾದವರತ್ವೇ ಜ್ಞಾನಾಂತರಂಗತ್ವರೂಪಂ [1]ಬಾಧಕಂ 'ಸಾಂಖ್ಯ' ಇತಿ ಶ್ಲೋಕಾಭ್ಯಾಂ ಪರಿಹೃತ್ಯೇದಾನೀಂ ತಸ್ಯ ಯೋಗಾದವರತ್ವೇ ಸಾಧಕಮಾಹ-ಸಂನ್ಯಾಸಸ್ತ್ವಿತಿ ||**

1. ಬಾಧಕಂ 'ಯತ್ ಸಾಂಖ್ಯೈಃ' ಇತಿ ಶ್ಲೋಕಾಭ್ಯಾಮ್

**ಅನುವಾದ** - ಹಿಂದೆ **ಜ್ಞೇಯಃ ಸ ನಿತ್ಯಸಂನ್ಯಾಸೀ** (ಶ್ಲೋ.3) ಎಂಬ ಶ್ಲೋಕದಲ್ಲಿ ಶ್ರೀಕೃಷ್ಣನು ತನಗೆ ಅಭಿಪ್ರೇತವಾದ ಸಂನ್ಯಾಸಶಬ್ದಾರ್ಥವನ್ನು ತಿಳಿಸಿ, 'ಸಂನ್ಯಾಸವು ಯೋಗಕ್ಕಿಂತ ಕೀಳು' ಎಂದು ಹೇಳಲು ಸಾಧ್ಯವಿಲ್ಲ, ಏಕೆಂದರೆ ವೈರಾಗ್ಯರೂಪವಾದ ಸಂನ್ಯಾಸವು ಜ್ಞಾನಕ್ಕೆ ಮುಖ್ಯ ಸಾಧನ ಎಂಬ ಆಕ್ಷೇಪವನ್ನು **ಸಾಂಖ್ಯಯೋಗೌ** (ಶ್ಲೋ.5) ಮತ್ತು **ಯತ್ ಸಾಂಖ್ಯೈಃ** (ಶ್ಲೋ-6) ಎಂಬ ಶ್ಲೋಕಗಳಿಂದ ಪರಿಹರಿಸಿದ್ದಾನೆ. ಈಗ **ಸಂನ್ಯಾಸಸ್ತು** ಎಂಬ ಈ ಶ್ಲೋಕದಲ್ಲಿ ಸಂನ್ಯಾಸವು ಯೋಗಕ್ಕಿಂತ ಕೀಳು ಎಂಬ ವಿಷಯದಲ್ಲಿ ಸಾಧಕಯುಕ್ತಿಯನ್ನು ಹೇಳುತ್ತಿದ್ದಾನೆ.

**ಅಯೋಗತಃ ಭಗವದರ್ಪಣಬುದ್ಧ್ಯಾ ಕರ್ಮಾನುಷ್ಠಾನರೂಪಯೋಗಾ-ಭಾವೇ ಕಾಮಾದಿವರ್ಜನರೂಪಸಂನ್ಯಾಸಸ್ತು ದುಃಖಮಾಪ್ತುಮೇವ ಪರಮ-ಪುಮರ್ಥಾಹೇತುತ್ವಾತ್, ಸ್ವೋಚಿತಕರ್ಮಾನನುಷ್ಠಾನೇನ ನರಕಪ್ರಾಪ್ತೇಶ್ಚೇತಿ ಭಾವಃ । ತಾತ್ಕಾಲಿಕಾಪಮಾನಾದಿಕೃತದುಃಖಾಭಾವಸ್ತ್ವಲ್ಪತ್ವಾನ್ನ ಫಲಮಿತಿ ಭಾವಃ। ಮುನಿಃ ಸಂನ್ಯಾಸೀ । 'ಸ ಹಿ ಲೋಕೇ ಮುನಿರ್ನಾಮ ಯಃ ಕಾಮಕ್ರೋಧವರ್ಜಿತ' ಇತ್ಯುಕ್ತೇಃ । ಯೋಗಯುಕ್ತೋ ನ ಚಿರೇಣ ಶೀಘ್ರಂ ಬ್ರಹ್ಮಾಧಿಗಚ್ಛತೀತ್ಯರ್ಥಃ । ಏತೇನ ಯೋಗಾಭಾವೇ ಪುಮರ್ಥಹೇತುತ್ವಾಭಾವಃ, ಸತಿ ತು ತಸ್ಮಿಂಸ್ತದ್ಧೇತುತ್ವಂ ಸಂನ್ಯಾಸಸ್ಯೇತಿ ಯೋಗಸ್ಯ ವರತ್ವೇ ವ್ಯತಿರೇಕಾನ್ವಯರೂಪಂ ಸಾಧಕಮುಕ್ತಂ ಭವತಿ ।**

**ಅನುವಾದ - ಅಯೋಗತಃ** = ಭಗವದರ್ಪಣಬುದ್ಧಿಯಿಂದ ಕರ್ಮಾನುಷ್ಠಾನ ರೂಪವಾದ ಯೋಗ ಇಲ್ಲದಿದ್ದರೆ, ಕಾಮಾದಿತ್ಯಾಗರೂಪವಾದ ಸಂನ್ಯಾಸವು ಪರಮಪುರುಷಾರ್ಥಕ್ಕೆ ಕಾರಣವಾಗದು , ಮತ್ತು ಸ್ವವರ್ಣಾಶ್ರಮವಿಹಿತ ಕರ್ಮಾನುಷ್ಠಾನವನ್ನು ಮಾಡದಿರುವುದರಿಂದ ನರಕ ಪ್ರಾಪ್ತಿಯಾಗುತ್ತದೆ, ಹೀಗಾಗಿ ದುಃಖಕ್ಕೇ ಕಾರಣವಾಗುತ್ತದೆ ಎಂದು ಅಭಿಪ್ರಾಯ. ಕಾಮನಿಗ್ರಹದಿಂದ ಸಮಾಜದಲ್ಲಿಸನ್ಯಾಸಿಗೆ ಅಪಮಾನಾದಿದುಃಖಗಳು ಬಾರದಿರಬಹುದು. ತಾತ್ಕಾಲಿಕವಾಗಿ ಇಂಥ ಫಲ ಇದ್ದರೂ ಅದು ಅಲ್ಪಫಲವಾದ್ದರಿಂದ ಫಲ ಎಂದು ಗಣನೆಗೆ ತೆಗೆದುಕೊಳ್ಳಲು ಸಾಧ್ಯವಿಲ್ಲ. **ಮುನಿಃ** = ಸಂನ್ಯಾಸಿಯು, ಯಾರು ಕಾಮಕ್ರೋಧರಹಿತನೋ ಅವನೇ 'ಮುನಿ' ಎಂದು (ಪದ್ಮಪುರಾಣ) ಹೇಳಿದೆ. ಯೋಗಾನುಷ್ಠಾನ ಮಾಡಿದ ಸಂನ್ಯಾಸಿಯು ಬಹುಬೇಗನೆ ಭಗವಂತನನ್ನು ಹೊಂದುತ್ತಾನೆ ಎಂದರ್ಥ. ಆದ್ದರಿಂದ ಯೋಗಸಹಿತವಾಗದ ಸಂನ್ಯಾಸವು ಪುರುಷಾರ್ಥಕ್ಕೆ ಕಾರಣವಾಗುವುದಿಲ್ಲ. ಯೋಗಸಹಿತವಾದ ಸಂನ್ಯಾಸವು ಪುರುಷಾರ್ಥಕ್ಕೆ ಕಾರಣವಾಗುತ್ತದೆ. ಹೀಗೆ ಯೋಗವು ಸಂನ್ಯಾಸಕ್ಕಿಂತ ಉತ್ತಮ ಎಂಬ ವಿಷಯದಲ್ಲಿ ವ್ಯತಿರೇಕ ಅನ್ವಯ ಸಹಚಾರ ರೂಪವಾದ ಯುಕ್ತಿಯನ್ನು ಹೇಳಿದಂತಾಯಿತು.

**ವಿವರಣೆ** - ವ್ಯತಿರೇಕ ಅನ್ವಯಸಹಚಾರ-ವ್ಯತಿರೇಕಸಹಚಾರ ಮತ್ತು ಅನ್ವಯಸಹಚಾರ ಎಂದು ಶಾಸ್ತ್ರದಲ್ಲಿ ಸಹಚಾರವನ್ನು ಎರಡು ವಿಧವಾಗಿ ಗುರುತಿಸಿದ್ದಾರೆ. ಯಾವುದೊಂದು ಇಲ್ಲದಿರುವುದರಿಂದ ಇನ್ನೊಂದನ್ನೂ ಇಲ್ಲ ಎಂದು ಹೇಳಲು ಸಾಧ್ಯವೋ ಅದು ವ್ಯತಿರೇಕ ಸಹಚಾರ, **ಉದಾ** - 'ಕಟ್ಟಿಗೆ ಹಸಿಯಾಗಿರದಿದ್ದರೆ ಹೊಗೆ ಇಲ್ಲ ಎಂದು ಹೇಳಲು ಸಾಧ್ಯ. ಇದನ್ನೇ ವ್ಯತಿರೇಕಸಹಚಾರ ಎನ್ನುತ್ತಾರೆ. ಹಾಗೆ ಇಲ್ಲಿಯೂ ಸಂನ್ಯಾಸವು ಯೋಗಸಹಿತವಾಗದಿದ್ದರೆ ಮೋಕ್ಷ ಎಂಬ ಪುರುಷಾರ್ಥಕ್ಕೆ ಕಾರಣ ಆಗಲಾರದು ಎಂದು ಹೇಳಲು ಬರುತ್ತದೆ. ಆದ್ದರಿಂದ ಇದು ವ್ಯತಿರೇಕ ಸಹಚಾರ. ಯಾವುದೊಂದು ಇರುವುದರಿಂದ ಇನ್ನೊಂದನ್ನೂ ಇದೆ ಎಂದು ಹೇಳಲು ಸಾಧ್ಯವೋ ಅದು ಅನ್ವಯಸಹಚಾರ. ಉದಾ- ಕಟ್ಟಿಗೆ ಹಸಿಯಾಗಿದ್ದರೆ ಹೊಗೆ ಇರುತ್ತದೆ ಎಂದು ಹೇಳಲು ಸಾಧ್ಯ. ಇದನ್ನು ಅನ್ವಯಸಹಚಾರ ಎನ್ನುತ್ತಾರೆ. ಇಲ್ಲಿಯೂ ಸಂನ್ಯಾಸವು ಯೋಗ ಸಹಿತವಾದರೆ ಮೋಕ್ಷರೂಪಪುರುಷಾರ್ಥಕ್ಕೆ ಕಾರಣ ಆಗುತ್ತದೆ ಎಂದು ಹೇಳಲು ಬರುತ್ತದೆ. ಆದ್ದರಿಂದ ಇದು ಅನ್ವಯ ಸಹಚಾರ.

**ಯದ್ವಾ ಯೋಗಸಂನ್ಯಾಸಯೋಃ ಸಮುಚ್ಚಿತಯೋರೇವ ನಿಃಶ್ರೇಯಸಕರತ್ವ-ಮುಭಾವಿತ್ಯನೇನೋಕ್ತಮ್ । ಇದಾನೀಮಸಮುಚ್ಚಯೇ ಬಾಧಕಮಾಹ- ಸಂನ್ಯಾಸಸ್ತ್ವಿತಿ ॥ ಕಾಮಾದಿವರ್ಜನರೂಪಸಂನ್ಯಾಸಸ್ತು ಅಯೋಗತಃ । ಭಾವ-ಪ್ರಧಾನಮ್ । ಯೋಗರೂಪತ್ವಾಭಾವೇ ಕೇವಲಸಂನ್ಯಾಸಸ್ತು ದುಃಖಮಾಪ್ತು-ಮೇವ । ವಿಷ್ಣ್ವರ್ಪಿತತ್ವಾದಿಯೋಗರೂಪತ್ವಂ ವಿನಾ ಕೇವಲಕರ್ಮತ್ಯಾಗೋ ನರಕಫಲ ಏವೇತಿ ಭಾವಃ ।**

**ಅನುವಾದ**- ಅಥವಾ ಭಗವದರ್ಪಣ ಬುದ್ಧಿಯಿಂದ ಕರ್ಮಾಚರಣರೂಪವಾದ ಕರ್ಮಯೋಗ ಮತ್ತು ಕಾಮನಾದಿತ್ಯಾಗ ರೂಪವಾದ ಸಂನ್ಯಾಸ ಇವೆರಡು ಸೇರಿಯೇ ಮೋಕ್ಷಕ್ಕೆ ಸಾಧನ ಎಂಬ ವಿಷಯವನ್ನು **'ಸಂನ್ಯಾಸಃ ಕರ್ಮಯೋಗಶ್ಚ'** (ಶ್ಲೋ.2) ಎಂಬ ಶ್ಲೋಕದಲ್ಲಿ **'ಉಭೌ'** ಎಂಬ ಶಬ್ದದಿಂದ ಹೇಳಿದೆ. ಅವುಗಳು ಸೇರದೇ ಪ್ರತ್ಯೇಕವಾಗಿ ಮೋಕ್ಷಕ್ಕೆ ಕಾರಣವೆಂದರೆ ಬಾಧಕವನ್ನು ಈಗ **'ಸಂನ್ಯಾಸಸ್ತು'** ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. ಕಾಮಾದಿ ತ್ಯಾಗರೂಪವಾದ ಸಂನ್ಯಾಸವು ಯೋಗರೂಪವನ್ನು ಪಡೆಯದಿದ್ದರೆ. **ಅಯೋಗತಃ** ಎಂಬ ಶಬ್ದವನ್ನು ಭಾವಪ್ರಧಾನವಾಗಿ ನಿರ್ದೇಶ ಮಾಡಿದ್ದಾನೆ. ಯೋಗ ರೂಪವಲ್ಲದ ಕೇವಲ ಸಂನ್ಯಾಸವು ದುಃಖಕ್ಕೆ ಕಾರಣ. ಭಗವದರ್ಪಣ ಮೊದಲಾದ ರೂಪವಾದ ಯೋಗ ರೂಪವನ್ನು ಪಡೆಯದ ಕೇವಲ (ಸಂನ್ಯಾಸವು) ಕರ್ಮತ್ಯಾಗವು ನರಕಕ್ಕೆ ಕಾರಣವಾಗಿದೆ. ಆದ್ದರಿಂದ ಕೇವಲ ಕರ್ಮತ್ಯಾಗಕ್ಕೆ ನರಕವೇ ಫಲ ಎಂದು ತಾತ್ಪರ್ಯ.

**ವಿವರಣೆ**- ಭಾವಪ್ರಧಾನನಿರ್ದೇಶ- ಧರ್ಮವನ್ನು ತಿಳಿಸುವ ಉದ್ದೇಶದಿಂದ ಧರ್ಮಿವಾಚಕ ಶಬ್ದ ಪ್ರಯೋಗವನ್ನು ಮಾಡಿರುತ್ತಾರೆ . ಅದನ್ನು ಭಾವಪ್ರಧಾನ ನಿರ್ದೇಶ ಎಂದು ಕರೆಯುತ್ತಾರೆ.

**ಯೋಗರೂಪತ್ವಂ ವಿನಾ ಸಂನ್ಯಾಸಸ್ಯಾನರ್ಥಹೇತುತ್ವಮುಕ್ತ್ವಾ ಯೋಗ-ರೂಪಸಂನ್ಯಾಸಸ್ಯ ಮುಕ್ತಿಹೇತುತ್ವಮಾಹ - ಯೋಗಯುಕ್ತ ಇತಿ ॥ ಮುನಿಃ ಸಂನ್ಯಾಸೀ । ಸಂನ್ಯಾಸಸ್ಯ ಯೋಗಾವಾಂತರಭೇದತ್ವಾದ್ಯೋಗರೂಪತ್ವೋಕ್ತಿಃ । 'ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ' (6-2) ಇತಿ ವಕ್ಷ್ಯಮಾಣ-ಗೀತೋಕ್ತಿರಪ್ಯೇತದಭಿಪ್ರಾಯಾ । ಅತಃ 'ಸಂನ್ಯಾಸಃ ಕರ್ಮಯೋಗಶ್ಚೆ'ತಿ ಭೇದೋಕ್ತಿಃ ಕುರುಪಾಂಡವವನ್ನ ವಿರುದ್ಧೇತಿ ಜ್ಞೇಯಮ್ ॥ 6 ॥**

**ಅನುವಾದ**- ಯೋಗ ರೂಪವನ್ನು ಪಡೆಯದ ಸಂನ್ಯಾಸವು ದುಃಖ ಪ್ರಾಪ್ತಿ ರೂಪವಾದ ಅನರ್ಥಕ್ಕೆ ಕಾರಣ ಎಂದು ಹೇಳಿ ಯೋಗ ರೂಪವಾದ ಸಂನ್ಯಾಸವು ಮುಕ್ತಿಗೆ ಕಾರಣ ಎಂದು **'ಯೋಗಯುಕ್ತ'** ಎಂಬ ಭಾಗದಿಂದ ಹೇಳುತ್ತಿದ್ದಾನೆ. **ಮುನಿಃ**= ಸಂನ್ಯಾಸಿಯು. (ಕಾಮನಾತ್ಯಾಗ, ಭಗವದರ್ಪಣ ಬುದ್ಧಿ, ಕರ್ಮಾಚರಣೆ ಇವು ಮೂರು ಸೇರಿದರೆ ಅದನ್ನೇ ಯೋಗ ಎಂದು ಕರೆಯುತ್ತಾರೆ.) ಕಾಮನಾತ್ಯಾಗರೂಪವಾದ ಸಂನ್ಯಾಸವು ಯೋಗದಲ್ಲಿ ಒಂದು ಅಂಶವಾದ್ದರಿಂದ ಸಂನ್ಯಾಸವು ಯೋಗ ರೂಪ ಎಂದು ಹೇಳಿದ್ದಾನೆ. ಯಾವುದನ್ನು ಕಾಮನಾತ್ಯಾಗರೂಪವಾದ ಸಂನ್ಯಾಸ ಎನ್ನುವರೋ ಅದನ್ನೇ ಯೋಗದ ಒಂದು ಅಂಶ ಎಂದು ತಿಳಿ ಎಂಬುದಾಗಿ **'ಯಂ ಸಂನ್ಯಾಸಮಿತಿ ಪ್ರಾಹುಃ ಯೋಗಂ ತಂ ವಿದ್ಧಿ'** ಎಂದು (ಅ.6. ಶ್ಲೋ.2) ಮುಂದೆ ಹೇಳುವ ಗೀತೆಯ ಶ್ಲೋಕಕ್ಕೂ ಇದೇ ಅಭಿಪ್ರಾಯ. ಆದ್ದರಿಂದ ಸಂನ್ಯಾಸ ಮತ್ತು ಕರ್ಮಯೋಗ ಎಂದು ಪ್ರತ್ಯೇಕವಾಗಿ ಇದ್ದರೂ ಕೌರವರು ಪಾಂಡವರು ಎಂಬ ಪ್ರಯೋಗದಂತೆ ಆ ಪ್ರಯೋಗವು ವಿರುದ್ಧವಲ್ಲ ಎಂದು ತಿಳಿಯಬೇಕು.

**ವಿವರಣೆ**- ಯೋಗ ಎಂದರೆ- ಕಾಮನಾತ್ಯಾಗ, ಭಗವದರ್ಪಣ ಬುದ್ಧಿ ಮತ್ತು ಕರ್ಮಾಚರಣೆ ಎಂದೇ ಅರ್ಥ. ಈ ಮೂರು ಸೇರಿದರೆ ಇದನ್ನೇ ಯೋಗ ಎಂಬ ಶಬ್ದದಿಂದ ಜ್ಞಾನಿಗಳು ಕರೆಯುತ್ತಾರೆ. ಯೋಗದಲ್ಲಿ ಸಂನ್ಯಾಸವು ಸೇರಿದೆ. ಆದ್ದರಿಂದ ಯೋಗ ರೂಪವಲ್ಲದ ಸಂನ್ಯಾಸ, ಯೋಗದಿಂದ ಕೂಡಿದ ಸಂನ್ಯಾಸ ಎಂದು ಸಂನ್ಯಾಸ ಮತ್ತು ಯೋಗಗಳನ್ನು ಪ್ರತ್ಯೇಕವಾಗಿ ಹೇಳಲು ಹೇಗೆ ಸಾಧ್ಯ ? ಎಂದು ಸಂದೇಹ ಬರಬಹುದು. ಅದಕ್ಕೆ ರಾಯರು **'ಕುರು ಪಾಂಡವ'** ಶಬ್ದ ಪ್ರಯೋಗ ಇದ್ದಂತೆ ಎಂದು ಉತ್ತರಿಸಿದ್ದಾರೆ. ವಸ್ತುತಃ ಪಾಂಡವರೂ ಕುರು ವಂಶದಲ್ಲೇ ಬಂದವರಾದ್ದರಿಂದ ಕುರುಗಳೇ, ಆದರೂ, ಪಾಂಡವರನ್ನು ಬಿಟ್ಟು ಉಳಿದ ಕೌರವರು ಎಂಬ ಅರ್ಥದಲ್ಲಿ ಕೌರವರು ಎಂದು ಶಬ್ದಪ್ರಯೋಗ ಮಾಡುತ್ತೇವೆ. ಹಾಗೆ ಸಂನ್ಯಾಸವನ್ನು ಬಿಟ್ಟು ಉಳಿದ ಯೋಗ ಎಂಬ ಅರ್ಥದಲ್ಲಿ ಯೋಗ ಎಂಬ ಶಬ್ದಪ್ರಯೋಗ ಎಂದು ತಿಳಿಯಬೇಕು.

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥ 7 ॥**

**ಅರ್ಥ** - ಕರ್ಮಯೋಗದಿಂದ ಕೂಡಿದ, ಶುದ್ಧ ಸ್ವಭಾವವುಳ್ಳ , ಮನೋನಿಗ್ರಹವುಳ್ಳ, ಇಂದ್ರಿಯ ನಿಗ್ರಹವುಳ್ಳ, ಎಲ್ಲರಿಗೂ ನಿಯಾಮಕನಾದ ಪರಮಾತ್ಮನೇ ತನಗೂ ಸ್ವಾಮಿ ಎಂದು ತಿಳಿದವನು, ಅಥವಾ ಎಲ್ಲರ ಅಂತರ್ಯಾಮಿಯಾದ ಭಗವಂತನಲ್ಲಿ ಆಸಕ್ತವಾದ ಮನಸ್ಸುಳ್ಳವನು ಕರ್ಮಾನುಷ್ಠಾನ ಮಾಡುತ್ತಿದ್ದರೂ ಕರ್ಮದ ಲೇಪವನ್ನು ಪಡೆಯುವುದಿಲ್ಲ, ಮುಕ್ತನಾಗುತ್ತಾನೆ.

**ಯೋಗಯುಕ್ತಸಂನ್ಯಾಸಸ್ಯ ಮಹಾಫಲಹೇತುತ್ವಂ ಪ್ರಪಂಚಯತಿ-ಯೋಗೇತಿ ॥ ಪ್ರಪಂಚನಂ ಚ 'ಯೋ ನ ದ್ವೇಷ್ಟೀ'ತ್ಯತ್ರ ಉಕ್ತದ್ವೇಷಾದಿವರ್ಜನರೂಪ-ಸಂನ್ಯಾಸಸ್ಯ ಪೂರ್ವಾರ್ಧೇ ಕಾರಣೋಪನ್ಯಾಸೇನ ಬ್ರಹ್ಮಾಧಿಗಚ್ಛತೀತಿ ಪ್ರಾಗುಕ್ತ-ಮುಕ್ತಿಫಲಂ ಪ್ರತಿ ಉತ್ತರಾರ್ಧೇ ಬ್ರಹ್ಮಜ್ಞಾನರೂಪಾವಾಂತರಫಲೋಕ್ತ್ಯಾ ಚೇತಿ ಧ್ಯೇಯಮ್ । ಯೋಗಯುಕ್ತಃ ಕರ್ಮಯೋಗಯುಕ್ತಃ ವಿಶುದ್ಧಾತ್ಮಾ ವಿಶುದ್ಧ-ಸ್ವಭಾವಃ, ಅತ ಏವ ವಿಜಿತಮನಸ್ಕೋ ಜಿತೇಂದ್ರಿಯಃ ಸರ್ವಭೂತಾತ್ಮಾ ಸರ್ವಭೂತಾನಾಮಾದಾನಾದಿಕರ್ತಾ ಸ್ವಾಮೀತಿ ಯಾವತ್ । ಸರ್ವಭೂತಾತ್ಮ-ಭೂತಃ ಸರ್ವಪ್ರಾಣಿನಾಂ ಸ್ವಾಮಿಭೂತಃ ಸ ಏವ ಸ್ವಸ್ಯಾತ್ಮಾ ಆದಾನಾದಿಕರ್ತಾ ಸ್ವಾಮೀ ಯಸ್ಯ ಸ ಸರ್ವಭೂತಾತ್ಮಭೂತಾತ್ಮಾ । ಜ್ಞಾನೋಪಲಕ್ಷಣಮೇತತ್ । ಸರ್ವಭೂತಾತ್ಮಭೂತಾತ್ಮೇತಿ ಜ್ಞಾನೀತ್ಯರ್ಥಃ ।**

**ಅನುವಾದ** - ಯೋಗಸಹಿತವಾದ ಸಂನ್ಯಾಸವು ಶ್ರೇಷ್ಠ ಫಲವಾದ ಮೋಕ್ಷಕ್ಕೆ ಕಾರಣ ಎಂಬ ವಿಷಯವನ್ನು '**ಯೋಗಯುಕ್ತಃ**' ಎಂಬ ಈ ಶ್ಲೋಕದಲ್ಲಿ ವಿವರಿಸುತ್ತಿದ್ದಾನೆ. ವಿವರಿಸುವ ಬಗೆ :- '**ಯೋ ನ ದ್ವೇಷ್ಟಿ**' ಎಂಬ ಶ್ಲೋಕದಲ್ಲಿ ಹೇಳಿದ ದ್ವೇಷಾದಿಗಳ ತ್ಯಾಗರೂಪವಾದ ಸಂನ್ಯಾಸಕ್ಕೆ ಈ ಶ್ಲೋಕದ ಪೂರ್ವಾರ್ಧದಲ್ಲಿ ಕಾರಣವನ್ನು ಹೇಳುತ್ತಿದ್ದಾನೆ. ಮತ್ತು 'ಬ್ರಹ್ಮಾಧಿಗಚ್ಛತಿ' ಎಂಬ ಹಿಂದಿನ ಶ್ಲೋಕದಲ್ಲಿ ಹೇಳಿದ ಮೋಕ್ಷರೂಪ ಫಲಕ್ಕೆ ಈ ಶ್ಲೋಕದ ಉತ್ತರಾರ್ಧದಲ್ಲಿ ಬ್ರಹ್ಮಜ್ಞಾನ ರೂಪ ಅಮುಖ್ಯಫಲವನ್ನು ಹೇಳುತ್ತಿದ್ದಾನೆ ಎಂದು ತಿಳಿಯಬೇಕು. **ಯೋಗಯುಕ್ತಃ**= ಕರ್ಮಯೋಗಸಹಿತನಾದ, **ವಿಶುದ್ಧಾತ್ಮಾ**= ಪರಿಶುದ್ಧವಾದ ಸ್ವಭಾವವುಳ್ಳ, ಆದ್ದರಿಂದಲೇ ಮನೋನಿಗ್ರಹವುಳ್ಳ, ಇಂದ್ರಿಯನಿಗ್ರಹವುಳ್ಳ, **ಸರ್ವಭೂತಾತ್ಮಾ**= ಎಲ್ಲಾ ಜೀವರ **ಆದಾನಾದಿ-ಕರ್ತಾ**= ತನ್ನ ವಶಕ್ಕೆ ತೆಗೆದುಕೊಳ್ಳುವವನು ಎಂದರೆ ಸ್ವಾಮಿ ಎಂದು ಅರ್ಥ. **ಸರ್ವ-ಭೂತಾತ್ಮಭೂತಃ** = ಎಲ್ಲಾ ಜೀವರಿಗೆ ಸ್ವಾಮಿಯಾದ ಆ ಭಗವಂತನೇ ತನಗೂ **ಆತ್ಮಾ** = **ಆದಾನಾದಿಕರ್ತಾ** = ಸ್ವಾಮಿಯಾಗಿದ್ದಾನೆ. ಎಲ್ಲರಿಗೂ ಸ್ವಾಮಿಯಾದ ಭಗವಂತನು ತನಗೂ

ಸ್ವಾಮಿಯಾಗಿವುಳ್ಳವನನ್ನು ಸರ್ವಭೂತಾತ್ಮ ಭೂತಾತ್ಮಾ ಎಂದು ಕರೆಯುತ್ತಾರೆ. ಸರ್ವಭೂತಾತ್ಮ-ಭೂತಾತ್ಮಾ ಎಂಬ ಶಬ್ದವನ್ನು ಜ್ಞಾನ ಎಂಬ ಅರ್ಥದಲ್ಲಿ ಪ್ರಯೋಗಿಸಿದ್ದಾರೆ. (ಉಪಲಕ್ಷಣ ಶಬ್ದ ಅರ್ಥವನ್ನು 4ನೇ ಶ್ಲೋಕದಲ್ಲಿ ವಿವರಿಸಲಾಗಿದೆ) ಎಲ್ಲ ಜೀವರಿಗೂ ಸ್ವಾಮಿಯಾದ ಭಗವಂತನು ತನಗೂ, ಸ್ವಾಮಿ ಎಂದು ಜ್ಞಾನವುಳ್ಳವನು 'ಸರ್ವಭೂತಾತ್ಮಭೂತಾತ್ಮಾ' ಶಬ್ದದ ಅರ್ಥ.

**ಕುರ್ವನ್ನಪಿ ನ ಲಿಪ್ಯತೇ ಮುಕ್ತೋ ಭವತೀತ್ಯರ್ಥಃ । ಜಿತೇಂದ್ರಿಯತ್ವಾದಿ ದ್ವೇಷಾದಿವರ್ಜನಕಾರಣಂ 'ಸರ್ವಸ್ವಾಮೀ ಮಮಸ್ವಾಮಿ' ಇತಿ ಜ್ಞಾನಂ ಬ್ರಹ್ಮಾ-ಧಿಗತಾವವಾಂತರಫಲಮಿತ್ಯುಕ್ತಂ ಭವತಿ । ಯದ್ವಾ 'ಯೋಗಯುಕ್ತ' ಇತ್ಯತ್ರ ಭಗವದರ್ಪಣಬುದ್ಧ್ಯಾ ಕರ್ಮಾನುಷ್ಠಾನರೂಪೋ ಯೋಗ ಉಕ್ತಃ । 'ಸರ್ವೇ'-ತ್ಯಾದಿನಾ ತು ಸರ್ವಭೂತಾತ್ಮನಿ ಹರೌ ಭೂತಮನಾಃ [1]ಸ್ಥಿತಮನಾ ಇತಿ ಧ್ಯಾನಯೋಗ ಉಕ್ತ ಇತ್ಯರ್ಥಃ ॥ 7 ॥**

**ಅನುವಾದ** - ಕರ್ಮ ಮಾಡುತ್ತಿದ್ದರೂ ಲೇಪ ಹೊಂದುವುದಿಲ್ಲ = ಮುಕ್ತನಾಗುತ್ತಾನೆ ಎಂದು ಅರ್ಥ. ಮನಸ್ಸು, ಇಂದ್ರಿಯಗಳ ನಿಗ್ರಹ ಮೊದಲಾದವು ದ್ವೇಷಾದಿಗಳ ತ್ಯಾಗಕ್ಕೆ ಕಾರಣವಾದ 'ಎಲ್ಲರಿಗೂ ಸ್ವಾಮಿಯಾದ ಭಗವಂತನೇ ನನಗೂ ಸ್ವಾಮಿ' ಎಂಬ ಜ್ಞಾನವು ಬ್ರಹ್ಮನ ತಿಳಿಯುವಿಕೆಯ ಅಮುಖ್ಯಫಲ ಎಂದು ಹೇಳಿದಂತಾಯಿತು. ಅಥವಾ **'ಯೋಗಯುಕ್ತಃ'** ಎಂಬ ಪೂರ್ವಾರ್ಧದಲ್ಲಿ ಭಗವದರ್ಪಣ ಬುದ್ಧಿಯಿಂದ ಕರ್ಮಾಚರಣರೂಪವಾದ ಯೋಗ ವನ್ನು ಹೇಳಿದ್ದಾರೆ. **'ಸರ್ವಭೂತಾತ್ಮಭೂತಾತ್ಮಾ'** ಎಂಬ ಉತ್ತರಾರ್ಧದಿಂದ ಎಲ್ಲಾ ಜೀವರಿಗೆ ಸ್ವಾಮಿಯಾದ ಭಗವಂತನಲ್ಲಿ **ಭೂತಮನಾಃ**= ಆಸಕ್ತವಾದ ಮನಸ್ಸುಳ್ಳವನು ಎಂದು ಧ್ಯಾನ ಯೋಗವನ್ನು ಹೇಳಿದ್ದಾರೆ ಎಂದು ಅರ್ಥ. ॥ 7 ॥

## ತತ್ತ್ವಜ್ಞಾನಿಯ ಅನುಸಂಧಾನ

**ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ಗಚ್ಛನ್ಸ್ವಪನ್ ಶ್ವಸನ್ ॥ 8 ॥**
**ಪ್ರಲಪನ್ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥ 9 ॥**

**ಅರ್ಥ**- ನೋಡುತ್ತಾ, ಕೇಳುತ್ತಾ, ಸ್ಪರ್ಶಜ್ಞಾನವನ್ನು ಪಡೆಯುತ್ತಾ , ಆಘ್ರಾಣಿಸುತ್ತಾ, ತಿನ್ನುತ್ತಾ, ನಡೆಯುತ್ತಾ , ನಿದ್ರಿಸುತ್ತಾ , ಉಸಿರಾಡುತ್ತಾ , ಮಾತಾಡುತ್ತಾ , ಮಲಮೂತ್ರವಿಸರ್ಜನೆ

---
1. ಸ್ಥಿತಮನಾ ಇತ್ಯರ್ಥಃ

ಮಾಡುತ್ತಾ, ಬೇಕಾದದ್ದನ್ನು ತೆಗೆದುಕೊಳ್ಳುತ್ತಾ , ಕಣ್ಣುಮುಚ್ಚುತ್ತಾ , ಕಣ್ಣುಬಿಡುತ್ತಾ ಇದ್ದರೂ, ಕರ್ಮಯೋಗವನ್ನು ಅನುಷ್ಠಾನ ಮಾಡುತ್ತಿರುವ ತತ್ತ್ವಜ್ಞಾನಿಯು, ಇಂದ್ರಿಯಗಳು ಭಗವಂತನ ಇಚ್ಛೆಯಿಂದಲೇ ತಮ್ಮ ತಮ್ಮ ವಿಷಯಗಳಲ್ಲಿ ಪ್ರವೃತ್ತಿ ಮಾಡುತ್ತಿವೆ, (ತಾನು ಅಸ್ವತಂತ್ರನಾದ್ದರಿಂದ) ನಾನು ಮಾಡುತ್ತಿಲ್ಲ ಎಂಬುದಾಗಿ ತಿಳಿಯಬೇಕು.

**'ಜ್ಞೇಯ' ಇತ್ಯಾದಿನಾ 'ವಿಶುದ್ಧಾತ್ಮ' ಇತ್ಯಾದಿನಾ ಚ ಸ್ಪಷ್ಟೀಕೃತಮಪಿ ಸಂನ್ಯಾಸಂ ಸಂಕಲ್ಪತ್ಯಾಗೋಕ್ತ್ಯಾ ಪುನಃ ಸ್ಪಷ್ಟಯತಿ- ನೈವೇತ್ಯಾದಿಶ್ಲೋಕ-ದ್ವಯೇನ ॥ ಯುಕ್ತಃ ಕರ್ಮಯೋಗಾನುಷ್ಠಾತಾ । ತತ್ತ್ವವಿತ್ ತತ್ತ್ವಜ್ಞಾನೀ । ದರ್ಶನಶ್ರವಣಸ್ಪರ್ಶನಾದಿಜ್ಞಾನೇಂದ್ರಿಯಕರ್ಮೇಂದ್ರಿಯವ್ಯಾಪಾರಂ ಕುರ್ವನ್ನಪಿ ಇಂದ್ರಿಯಾಣೀಂದ್ರಿಯಾರ್ಥೇಷು ಹರೀಚ್ಛಯಾ ವರ್ತಂತ ಇತಿ ಧಾರಯನ್ ಮನಸಾಽವಮೃಶನ್ ಸ್ವಸ್ಯ ಸ್ವಾತಂತ್ರ್ಯಾಭಾವಾತ್, ನೈವ ಕಿಂಚಿತ್ಕರೋಮೀತಿ ಮನ್ಯೇತೇತ್ಯರ್ಥಃ । ಸಂಕಲ್ಪತ್ಯಾಗೋಽಪಿ ಸಂನ್ಯಾಸಶಬ್ದಾರ್ಥ ಇತಿ ಭಾವಃ ।**

**ಅನುವಾದ** – 'ಜ್ಞೇಯ' ಎಂಬ 3ನೇ ಶ್ಲೋಕದಿಂದ ಮತ್ತು 'ವಿಶುದ್ಧಾತ್ಮಾ' ಎಂಬ 7ನೇ ಶ್ಲೋಕದಿಂದ ಸಂನ್ಯಾಸ ಎಂದರೆ ಏನು ಎಂಬುದಾಗಿ ಸ್ಪಷ್ಟಪಡಿಸಲಾಗಿದೆ. ಆದರೂ ಹಿಂದೆ ಹೇಳಿದ ಸಂನ್ಯಾಸವನ್ನೇ ಸಂಕಲ್ಪತ್ಯಾಗವನ್ನು ಹೇಳುವ ಮೂಲಕ **'ನೈವಕಿಂಚಿತ್-ಕರೋಮಿ'** ಎಂಬ ಎರಡು ಶ್ಲೋಕಗಳಿಂದ ಸ್ಪಷ್ಟಪಡಿಸುತ್ತಿದ್ದಾನೆ . **ಯುಕ್ತಃ** = ಕರ್ಮಯೋಗವನ್ನು ಅನುಷ್ಠಾನ ಮಾಡುವ , **ತತ್ತ್ವವಿತ್** = ತತ್ತ್ವಜ್ಞಾನಿಯು, ನೋಡುವಿಕೆ, ಕೇಳುವಿಕೆ, ಮುಟ್ಟುವಿಕೆ ಮೊದಲಾದ ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳ ವ್ಯಾಪಾರವನ್ನು ಮಾಡುತ್ತಿದ್ದರೂ, ಇಂದ್ರಿಯಗಳು ಇಂದ್ರಿಯ ವಿಷಯಗಳಲ್ಲಿ ಭಗವಂತನ ಇಚ್ಛೆಯಿಂದಲೇ ಪ್ರವರ್ತಿಸುತ್ತವೆ ಎಂದು, **ಧಾರಯನ್**= ಮನಸ್ಸಿನಿಂದ ವಿಮರ್ಶೆಮಾಡುತ್ತಾ , ನನಗೆ ಸ್ವಾತಂತ್ರ್ಯ ಇಲ್ಲದಿರುವುದರಿಂದ ನಾನು ಏನನ್ನೂ ಮಾಡುವುದಿಲ್ಲ ಎಂದು ತಿಳಿಯಬೇಕು. ಸಂನ್ಯಾಸ ಎಂದರೆ ಸಂಕಲ್ಪತ್ಯಾಗ ಎಂದೂ ಅರ್ಥವೆಂದು ಅಭಿಪ್ರಾಯ.

**ಸಂನ್ಯಾಸೋ ಯೋಗರೂಪಃ ಸನ್ ಪರಮಪುಮರ್ಥಹೇತುರಿತ್ಯುಕ್ತಮ್ । ಕಥಂ ತಸ್ಯ ಯೋಗರೂಪತೇತ್ಯತೋ ವಾಽಽಹ- ನೈವೇತಿ ॥ ಸರ್ವವ್ಯಾಪಾರಂ ಕುರ್ವನ್ನಪೀಂದ್ರಿಯಾಣೀಶಪ್ರೇರಿತಾನಿ ಇಂದ್ರಿಯಾರ್ಥೇಷು ವರ್ತಂತೇ, ಸ ಏವ ಸ್ವತಂತ್ರಃ, ನೈವ ಕಿಂಚಿದಹಂ ಕರೋಮೀತ್ಯನುಸಂಧಾನಮೇವ ದ್ವೇಷಾದಿವರ್ಜನ-ರೂಪಸಂನ್ಯಾಸಸ್ಯ ಯೋಗರೂಪತ್ವಂ ನಾಮೇತಿ ಶ್ಲೋಕದ್ವಯತಾತ್ಪರ್ಯಾರ್ಥಃ ।**

**॥ 8-9 ॥**

**ಅನುವಾದ -** ಅಥವಾ ಸಂನ್ಯಾಸವು ಯೋಗರೂಪವಾದಾಗ ಪರಮಪುರುಷಾರ್ಥವಾದ ಮೋಕ್ಷಕ್ಕೆ ಕಾರಣವಾಗುತ್ತದೆ ಎಂದು ಹಿಂದೆ ಹೇಳಿದೆ. (6ನೇ ಶ್ಲೋಕದಲ್ಲಿ) ಸಂನ್ಯಾಸವು ಯೋಗರೂಪವಾಗುವುದು ಹೇಗೆ ಎಂಬುದನ್ನು 'ನೈವ ' ಎಂಬ ಈ ಎರಡು ಶ್ಲೋಕಗಳಿಂದ ಹೇಳುತ್ತಿದ್ದಾನೆ. ಎಲ್ಲಾ ವಿಧವಾದ ವ್ಯಾಪಾರಗಳನ್ನು ಮಾಡುತ್ತಿದ್ದರೂ, ಇಂದ್ರಿಯಗಳು ವಿಷಯ ಪದಾರ್ಥಗಳಲ್ಲಿ ಭಗವಂತನ ಪ್ರೇರಣೆಯಿಂದಲೇ ಪ್ರವರ್ತಿಸುತ್ತವೆ . ಆ ಭಗವಂತನೇ ಸ್ವತಂತ್ರ, ನಾನು ಏನನ್ನೂ ಮಾಡುವುದಿಲ್ಲ (ಸ್ವತಂತ್ರವಾಗಿ) ಎಂಬ ಅನುಸಂಧಾನವೇ ದ್ವೇಷಾದಿಗಳ ತ್ಯಾಗರೂಪವಾದ ಸಂನ್ಯಾಸದ ಯೋಗರೂಪತ್ವ ಎಂದು ಎರಡೂ ಶ್ಲೋಕಗಳ ತಾತ್ಪರ್ಯ.

**ಪಾಪಲೇಪವಾಗದಿರುವ ಪರಿ**

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥ 10 ॥**

**ಅರ್ಥ -** ನಾನು ಸ್ವತಂತ್ರ ಕರ್ತೃ ಎಂಬ ಅಭಿಮಾನವನ್ನೂ , ಫಲದ ಆಸೆಯನ್ನೂ ಬಿಟ್ಟು ಭಗವಂತನು ನನ್ನ ಒಳಿತಿಗಾಗಿ ವಿಹಿತಕರ್ಮಗಳನ್ನು ಭಗವತ್ಪೂಜಾರೂಪವಾಗಿ ನನ್ನಿಂದ ಮಾಡಿಸುತ್ತಿದ್ದಾನೆ ಎಂದು ತಿಳಿದು ಯಾರು ಸ್ವವಿಹಿತ ಕರ್ಮಗಳನ್ನು ಮಾಡುತ್ತಾನೋ ಅವನು ಕಮಲದ ಎಲೆಯು ಹೇಗೆ ನೀರಿನ ಲೇಪಹೊಂದುವುದಿಲ್ಲವೋ ಹಾಗೆ ಪಾಪದ ಲೇಪ ಹೊಂದುವುದಿಲ್ಲ. ಅಂದರೆ ಜ್ಞಾನವನ್ನು ಪಡೆದು ಮುಕ್ತನಾಗುತ್ತಾನೆ.

**ಯೋಗಮಪಿ ಕಿಂಚಿತ್ ವಿವೃಣ್ವನ್ ಸಂನ್ಯಾಸಯೋಗಾಭ್ಯಾಂ ಯುಕ್ತ ಏವ ಕರ್ಮಣಾ ನ ಲಿಪ್ಯತ ಇತಿ ಸಾಧನನಿಯಮಮಾಹ-ಬ್ರಹ್ಮಣೀತಿ ॥ ಯದ್ಯಪಿ 'ಸಂನ್ಯಾಸಸ್ತು ತ್ವನೇನೈವ' । ಸಂನ್ಯಾಸಯೋಗೌ ಮಿಲಿತಾವೇವ ಫಲಂ ಸಾಧಯತ ಇತಿ ನಿಯಮೋ ಲಬ್ಧ ಏವ, 'ಕುರ್ವನ್ನಪಿ ನ ಲಿಪ್ಯತ' ಇತಿ ಫಲಂ ಚೋಕ್ತ-ಮೇವ । ತಥಾಽಪಿ ಸಂನ್ಯಾಸಯೋಗೌ ಮಿಲಿತಾವೇವ ಫಲಸಾಧನಮಿತಿ ನಿಯಮೋಕ್ತೇರುಪಚಾರತ್ವನಿವೃತ್ತ್ಯರ್ಥಂ 'ಲಿಪ್ಯತೇ ನ ಸ ಪಾಪೇನೇತಿ' ಪುನಃ ಫಲೋಕ್ತ್ಯಾ ನಿಯಮಸ್ಯ ಫಲಸಾಧನತಾಽತ್ರೋಚ್ಯತ ಇತ್ಯದೋಷಃ ।**

**ಅನುವಾದ-** ಯೋಗವನ್ನು ಸ್ವಲ್ಪ ವಿವರಿಸುತ್ತಾ ಸಂನ್ಯಾಸ ಮತ್ತು ಯೋಗ ಇವುಗಳಿಂದ ಕೂಡಿದ ಸಾಧಕನೇ ಕರ್ಮದ ಲೇಪ ಹೊಂದುವುದಿಲ್ಲ ಎಂದರೆ- ಸಂನ್ಯಾಸ ಮತ್ತು ಯೋಗಗಳು ಮಿಲಿತವಾಗಿಯೇ ಮೋಕ್ಷಸಾಧನಗಳಾಗುತ್ತವೆ ಎಂದು ಸಾಧನ ನಿಯಮವನ್ನು (ಕೇವಲ ಸಂನ್ಯಾಸವಾಗಲೀ ಕೇವಲ ಯೋಗವಾಗಲೀ ಮೋಕ್ಷಸಾಧನವಲ್ಲ) ಬ್ರಹ್ಮಣ್ಯಾಧಾಯ ಎಂಬ

ಶ್ಲೋಕದಿಂದ ಹೇಳುತ್ತಿದ್ದಾನೆ. ವಸ್ತುತಃ '**ಸಂನ್ಯಾಸಸ್ತು**' ಎಂಬ (6ನೇ) ಶ್ಲೋಕದಲ್ಲಿಯೇ ಸಂನ್ಯಾಸ ಮತ್ತು ಯೋಗ ಇವುಗಳು ಮಿಲಿತವಾಗಿಯೇ ಮೋಕ್ಷ ಫಲಕ್ಕೆ ಸಾಧನವಾಗಿವೆ ಎಂಬ ನಿಯಮವು ಪ್ರಾಪ್ತವಾಗಿದೆ. '**ಕುರ್ವನ್ನಪಿ ನ ಲಿಪ್ಯತೇ**' ಎಂಬ (7ನೇ) ಶ್ಲೋಕದಲ್ಲಿ ಫಲವನ್ನೂ ಹೇಳಿಯಾಗಿದೆ. ಆದರೂ ಸಂನ್ಯಾಸ ಮತ್ತು ಯೋಗ ಇವುಗಳು ಮಿಲಿತವಾಗಿಯೇ ಮೋಕ್ಷಕ್ಕೆ ಸಾಧನ ಎಂಬ ನಿಯಮವು ಔಪಚಾರಿಕ ಎಂಬ ಭ್ರಾಂತಿಯನ್ನು ಪರಿಹರಿಸಲು '**ಲಿಪ್ಯತೇ ನ ಸ ಪಾಪೇನ**' ಎಂಬ (10ನೇ) ಶ್ಲೋಕದಲ್ಲಿ ಪುನಃ (ಕರ್ಮಲೇಪಾಭಾವ)ಹೇಳಿ ಸಂನ್ಯಾಸ ಮತ್ತು ಯೋಗ ಎರಡು ಸೇರಿದರೆ ಮಾತ್ರ (ನಿಯಮ) ಮೋಕ್ಷಫಲಸಾಧನಗಳಾಗುತ್ತವೆ ಎಂದು ಹೇಳುತ್ತಿರುವುದರಿಂದ ಪುನರುಕ್ತಿದೋಷ ಇಲ್ಲ.

**ವಿವರಣೆ- ಬ್ರಹ್ಮಣ್ಯಾಧಾಯ** ಎಂಬ ಶ್ಲೋಕದಲ್ಲಿ ಸಂನ್ಯಾಸ ಮತ್ತು ಯೋಗ ಇವುಗಳು ಮಿಲಿತವಾಗಿಯೇ ಮೋಕ್ಷಕ್ಕೆ ಸಾಧನ ಎಂದು ವಿವರಿಸುತ್ತಿದ್ದಾನೆ. ಆದರೆ ಹಿಂದೆ **ಸಂನ್ಯಾಸಸ್ತು** ಎಂಬ ಶ್ಲೋಕದಲ್ಲಿ ಯೋಗದ ಸಹಾಯವಿಲ್ಲದ ಕೇವಲ ಸಂನ್ಯಾಸ ದುಃಖಕ್ಕೆ ಕಾರಣ ಎಂದು ಹೇಳಿ ಸಂನ್ಯಾಸ ಮತ್ತು ಯೋಗಮಿಲಿತವಾಗಿಯೇ ಮೋಕ್ಷಸಾಧನ ಎಂದು ಈಗಾಗಲೇ ಹೇಳಿರುವುದರಿಂದ ಪುನರುಕ್ತಿದೋಷ ಬರುತ್ತದೆ. ಸಂನ್ಯಾಸ ಮತ್ತು ಯೋಗ ಇವುಗಳ ಮಿಲನವನ್ನು ಸಾಧಿಸಿದ ಸಾಧಕನಿಗೆ ಕರ್ಮಲೇಪವಿಲ್ಲ ಎಂದು ಸಂನ್ಯಾಸ ಮತ್ತು ಯೋಗ ಇವುಗಳ ಮಿಲನದ ಪ್ರಯೋಜನವನ್ನು ಇಲ್ಲಿ ವಿವರಿಸುವುದರಿಂದ ಪುನರುಕ್ತಿ ಇಲ್ಲ ಎಂಬ ಪರಿಹಾರವೂ ಸರಿಯಲ್ಲ. ಏಕೆಂದರೆ '**ಯೋಗಯುಕ್ತಃ**' ಎಂಬ ಶ್ಲೋಕದಲ್ಲಿ **ಕುರ್ವನ್ನಪಿ ನ ಲಿಪ್ಯತೇ** ಎಂದು ಹೇಳಿರುವುದರಿಂದ ಸಂನ್ಯಾಸ ಮತ್ತು ಯೋಗ ಇವುಗಳ ಮಿಲನದ ಫಲವನ್ನೂ ಹೇಳಿಯಾಗಿದೆ. ಆದ್ದರಿಂದ ಮಿಲನದ ಫಲವನ್ನು ಹೇಳಿದರೂ ಪುನರುಕ್ತಿ ಇದ್ದೇ ಇದೆ ಎಂದು ಆಕ್ಷೇಪ ಬರಬಹುದು. ಈ ಆಕ್ಷೇಪಕ್ಕೆ ಸಮಾಧಾನವನ್ನು ಇಲ್ಲಿ ಕಾಣಬಹುದು . ಸಂನ್ಯಾಸ ಮತ್ತು ಯೋಗ ಇವುಗಳು ಮಿಲಿತವಾಗಿಯೇ ಮೋಕ್ಷಸಾಧನ ಎಂದು ಹೇಳಿದ್ದರೂ ಔಪಚಾರಿಕವಾಗಿ ಹೇಳಿದ್ದಾರೆ ಎಂದು ಭ್ರಮಿಸಿದರೆ ಇಂಥಹ ಭ್ರಮ ಉಚಿತವಲ್ಲ. ಸಂನ್ಯಾಸ ಮತ್ತು ಯೋಗಗಳ ಮಿಲನವೇ ಕರ್ಮಲೇಪಾಭಾವಕ್ಕೆ ಕಾರಣ ಎಂದರೆ ಮೋಕ್ಷ ಫಲಕ್ಕೆ ಸಾಧನ ಎಂದು ಸಮರ್ಥಿಸುತ್ತಿರುವುದ ರಿಂದ ಪುನರುಕ್ತಿದೋಷ ಇಲ್ಲ.

**ಸಂಗಂ ಫಲಕಾಮನಾಂ ತ್ಯಕ್ತ್ವಾ ಬ್ರಹ್ಮಣ್ಯಾಧಾಯ ಮಮ ಶುಭಾರ್ಥಂ ಸ್ವಪೂಜಾತ್ಮಕಾನಿ ಮಯಾ ಕಾರಿತಾನೀತ್ಯನುಸಂಧಾಯ ಕರ್ಮಾಣಿ ಯಃ ಕರೋತಿ ಭಗವದಧೀನಕರ್ತೃತ್ವಶಕ್ತಿಕಃ ಸನ್‌ಕರೋತಿ ಸೋಽಂಭಸಾ ಪದ್ಮಪತ್ರಮಿವ ಪಾಪೇನ ನ ಲಿಪ್ಯತೇ ಜ್ಞಾನದ್ವಾರಾ ಮುಕ್ತೋ ಭವತಿ ಇತ್ಯರ್ಥಃ ॥ 10 ॥**

**ಅನುವಾದ- ಸಂಗಂ** = ಫಲದ ಆಸೆಯನ್ನು **ತ್ಯಕ್ತ್ವಾ** = ಬಿಟ್ಟು **ಬ್ರಹ್ಮಣ್ಯಾಧಾಯ**= ನನ್ನ ಒಳಿತಿಗಾಗಿ ತನ್ನ ಪೂಜಾರೂಪವಾಗಿ ಕರ್ಮಗಳನ್ನು ನನ್ನಿಂದ ಮಾಡಿಸುತ್ತಾನೆ ಎಂದು ಅನುಸಂಧಾನ ಮಾಡಿಕೊಂಡು, **ಕರ್ಮಾಣಿ**= ವಿಹಿತ ಕರ್ಮಗಳನ್ನು **ಯಃ**= ಯಾವ ಸಾಧಕನು **ಕರೋತಿ**= ಭಗವದಧೀನವಾದ ಕರ್ತೃತ್ವ ಶಕ್ತಿವುಳ್ಳವನಾಗಿ ಮಾಡುತ್ತಾನೋ, **ಸಃ**= ಆ ಸಾಧಕನು, **ಅಂಭಸಾ**= ನೀರಿನಿಂದ, **ಪದ್ಮಪತ್ರಮಿವ**= ತಾವರೆಯ ಎಲೆಯಂತೆ, **ಪಾಪೇನ**= ಪಾಪದಿಂದ, **ನ ಲಿಪ್ಯತೇ**= ಲಿಪ್ತನಾಗುವುದಿಲ್ಲ. ಜ್ಞಾನವನ್ನು ಪಡೆದು ಮುಕ್ತನಾಗುತ್ತಾನೆ ಎಂದರ್ಥ. ॥ 10 ॥

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾಽಽತ್ಮಶುದ್ಧಯೇ ॥ 11 ॥**

**ಅರ್ಥ** – ಯೋಗಿಗಳು ದೇಹದಿಂದ, ಮನಸ್ಸಿನಿಂದ, ಬುದ್ಧಿ ಇಂದ್ರಿಯದಿಂದ, ಕಾಮ ಅಹಂಕಾರಗಳಿಲ್ಲದ ಅಥವಾ ಸ್ವಾತಂತ್ರ್ಯಾಭಿಮಾನ ರಹಿತವಾದ ಇಂದ್ರಿಯಗಳಿಂದ ಫಲಾಸೆ ಯನ್ನು ಬಿಟ್ಟು ಮನಸ್ಸಿನ ಪರಿಶುದ್ಧಿಗಾಗಿ (ಜ್ಞಾನೋದಯಕ್ಕಾಗಿ ಅಥವಾ ಪಾಪದ ಲೇಪವಾಗ ದಿರುವುದಕ್ಕಾಗಿ) ಕರ್ಮಗಳನ್ನು ಆಚರಿಸುತ್ತಾರೆ.

**ಸಂನ್ಯಾಸಯೋಗೌ ಮಿಲಿತಾವೇವ ಫಲಹೇತುರಿತ್ಯತ್ರಾಚಾರೋಽಸ್ತೀತ್ಯಾಹ-ಕಾಯೇನೇತಿ ॥ ದೇಹೇನ ಮನಸಾ 'ಮನೋಬುದ್ಧೀ ತು ದ್ವಾದಶೇ'ತ್ಯುಕ್ತೇರ್ಬುದ್ಧಿ-ರೂಪೇಂದ್ರಿಯೇಣ ಕೇವಲೈಃ ಕಾಮಾಹಂಭಾವಹೀನೈಃ ಸ್ವಾತಂತ್ರ್ಯಾಭಿಮಾನ-ರಹಿತೈರ್ವಾ ಇಂದ್ರಿಯೈರ್ಯೋಗಿನೋಽಪಿ ಸಂಗಂ ತ್ಯಕ್ತ್ವಾಽಽತ್ಮನೋ ಮನಸಃ ಶುದ್ಧಯೇ ತತ್ರ ಜ್ಞಾನೋತ್ಪತ್ತ್ಯರ್ಥಂ ಪಾಪಾಲೇಪಾಯೇತಿ ವಾ ಕರ್ಮ ಕುರ್ವಂತೀತ್ಯರ್ಥಃ । ಪೂರ್ವಾರ್ಧೇನ ಸಂನ್ಯಾಸಃ ಉತ್ತರಾರ್ಧೇನ ಯೋಗಃ ಆತ್ಮಶುದ್ಧಯ ಇತಿ ಫಲೋಕ್ತಿಃ ॥ 11 ॥**

**ಅನುವಾದ** - ಸಂನ್ಯಾಸ ಮತ್ತು ಯೋಗಗಳು ಮಿಲಿತವಾಗಿಯೇ ಮೋಕ್ಷ ಸಾಧನ ಗಳಾಗಿವೆ ಎಂಬ ವಿಷಯದಲ್ಲಿ ಸದಾಚಾರವೂ ಇದೆ ಎಂದು '**ಕಾಯೇನ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. **ದೇಹೇನ**= ಶರೀರದಿಂದ, **ಮನಸಾ**= ಮನಸ್ಸಿನಿಂದ **ಬುದ್ಧ್ಯಾ**= '**ಮನೋ ಬುದ್ಧೀ ತು ದ್ವಾದಶ** ', ಎಂಬ ಪ್ರಮಾಣದಂತೆ ಬುದ್ಧಿರೂಪ ಇಂದ್ರಿಯದಿಂದ, **ಕೈವಲೈಃ**= ಕಾಮ ಅಹಂಕಾರ ರಹಿತವಾದ ಅಥವಾ ಸ್ವಾತಂತ್ರ್ಯಾಭಿಮಾನರಹಿತವಾದ **ಇಂದ್ರಿಯೈಃ**= ಇಂದ್ರಿಯ ಗಳಿಂದ **ಯೋಗಿನೋಽಪಿ**= ಯೋಗಿಗಳೂ ಕೂಡ, **ಸಂಗಂ ತ್ಯಕ್ತ್ವಾ**= ಫಲಾಸೆಯನ್ನು ಬಿಟ್ಟು **ಆತ್ಮನಃ**= ಮನಸ್ಸಿನ, **ಶುದ್ಧಯೇ**= ಪರಿಶುದ್ಧಿಗಾಗಿ, **ತತ್ರ**= ಆ ಮನಸ್ಸಿನಲ್ಲಿ, **ಜ್ಞಾನೋತ್ಪತ್ತ್ಯರ್ಥಂ**=

ಜ್ಞಾನದ ಉತ್ಪತ್ತಿಗಾಗಿ ಅಥವಾ ಪಾಪದ ಲೇಪವಾಗದಿರುವುದಕ್ಕಾಗಿ **ಕರ್ಮ** = ವಿಹಿತಕರ್ಮವನ್ನು, **ಕುರ್ವಂತಿ**= ಮಾಡುತ್ತಾರೆ. ಈ ಶ್ಲೋಕದಲ್ಲಿ ಪೂರ್ವಾರ್ಧದಿಂದ ಸಂನ್ಯಾಸವನ್ನೂ, ಉತ್ತರಾರ್ಧ ದಿಂದ ಯೋಗವನ್ನೂ **ಆತ್ಮಶುದ್ಧಯೇ** ಎಂಬ ಶಬ್ದದಿಂದ ಫಲವನ್ನೂ ಹೇಳಿದ್ದಾನೆ. ॥ 11 ॥

## ಯೋಗ, ಸಂನ್ಯಾಸಗಳೇ ಮುಕ್ತಿಗೆ ಕಾರಣ

**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್ ।**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥ 12 ॥**

**ಅರ್ಥ**- ಫಲಕಾಮನಾತ್ಯಾಗರೂಪವಾದ ಸಂನ್ಯಾಸವುಳ್ಳ, ಭಗವದರ್ಪಣ ಬುದ್ಧಿಯಿಂದ ಕರ್ಮಾಚರಣರೂಪವಾದ ಯೋಗದಿಂದ ಕೂಡಿದ ಸಾಧಕನು ಸ್ವಾಭಾವಿಕವಾದ ಸ್ವರೂಪಾನಂದಾವಿರ್ಭಾವರೂಪವಾದ ಮುಕ್ತಿಯನ್ನು ಹೊಂದುತ್ತಾನೆ. ಯೋಗರಹಿತನಾದ ಜೀವನು ಫಲಕಾಮನೆಯಿಂದ ಕರ್ಮಾಚರಣೆಯನ್ನು ಮಾಡಿ ಅಲ್ಪವಾದ ನಶ್ವರವಾದ ಫಲದಲ್ಲಿ ಆಸಕ್ತನಾಗಿ ಪುನಃ ಪುನಃ ಸಂಸಾರವನ್ನು ಹೊಂದುತ್ತಾನೆ.

**ಪ್ರಾಕ್ 'ಸಂನ್ಯಾಸಸ್ತು' ಇತ್ಯಾದಿನಾ ಸಂನ್ಯಾಸಯೋಗೌ ಮಿಲಿತಾವೇವ ಫಲಂ ಸಾಧಯತಃ ನಾನ್ಯತರಪರಿತ್ಯಾಗೇನಾನ್ಯತರ ಇತಿ ನಿಯಮಜ್ಞಾಪನಾರ್ಥಂ ತಯೋಃ ಫಲಮುಕ್ತಂ 'ಬ್ರಹ್ಮಾಧಿಗಚ್ಛತಿ' 'ಕುರ್ವನ್ನ ಲಿಪ್ಯತ' ಇತ್ಯಾದಿನಾ । ಇದಾನೀಂ ತು ತಾವೇವ ಮೋಕ್ಷಸಾಧನಂ ನ ತು ತದುಭಯತ್ಯಾಗೇನಾನ್ಯದಿತಿ ನಿಯಮಜ್ಞಾಪನಾಯ ಯೋಗಸಂನ್ಯಾಸವತಸ್ತದುಭಯಾಭಾವವತಶ ಮುಕ್ತಿ-ಸಂಸಾರವಿಸ್ತಾರಲಕ್ಷಣಂ ಫಲಮಾಹ- ಯುಕ್ತ ಇತಿ ॥**

**ಅನುವಾದ** - ಹಿಂದೆ **'ಸಂನ್ಯಾಸಸ್ತು'** ಎಂಬಿವೇ (6ನೇ) ಮೊದಲಾದ ಶ್ಲೋಕಗಳಲ್ಲಿ ಸಂನ್ಯಾಸ ಮತ್ತು ಯೋಗ ಇವುಗಳು ಮಿಲಿತವಾಗಿಯೇ ಮೋಕ್ಷಫಲವನ್ನು ನೀಡುತ್ತವೆ. ಸಂನ್ಯಾಸವನ್ನು ಬಿಟ್ಟು ಕೇವಲ ಯೋಗವಾಗಲೀ, ಯೋಗವನ್ನು ಬಿಟ್ಟು ಕೇವಲ ಸಂನ್ಯಾಸವಾಗಲೀ ಮೋಕ್ಷಫಲಕ್ಕೆ ಕಾರಣಗಳಲ್ಲ ಎಂಬ ನಿಯಮವನ್ನು ತಿಳಿಸಲು 'ಗುಣಪೂರ್ಣನಾದ ಬ್ರಹ್ಮನನ್ನು ಹೊಂದುತ್ತಾನೆ' (**ಬ್ರಹ್ಮಾಧಿಗಚ್ಛತಿ**) ಕರ್ಮಾಚರಣೆಯಿದ್ದರೂ ಅವನಿಗೆ ಕರ್ಮಲೇಪವಿಲ್ಲ (**ಕುರ್ವನ್ನಲಿಪ್ಯತೇ**) ಎಂಬ ಶ್ಲೋಕಗಳಿಂದ ಮಿಲಿತವಾದ ಸಂನ್ಯಾಸ ಮತ್ತು ಯೋಗಗಳ ಫಲವನ್ನು ಹೇಳಿದ್ದಾನೆ. ಈಗ ಸಂನ್ಯಾಸ ಮತ್ತು ಯೋಗ ಇವೆರಡೇ ಮೋಕ್ಷಸಾಧನ. ಈ ಎರಡನ್ನು ಬಿಟ್ಟು ಬೇರೆ ಮೋಕ್ಷಸಾಧನ ಇಲ್ಲ ಎಂಬ ನಿಯಮವನ್ನು ತಿಳಿಸಲು ಯೋಗ, ಸಂನ್ಯಾಸ ಯುಕ್ತನಾದವನಿಗೆ

ಮೋಕ್ಷರೂಪಫಲ, ಯೋಗಸಂನ್ಯಾಸ ರಹಿತನಾದವನಿಗೆ ಸಂಸಾರರೂಪ ಫಲ ಹೀಗೆ ವಿಲಕ್ಷಣ ಫಲವನ್ನು '**ಯುಕ್ತ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ.

**'ಕರ್ಮಫಲಂ ತ್ಯಕ್ತ್ವೇ'ತ್ಯನೇನ ಪ್ರಾಗುಕ್ತಕಾಮಾದಿವರ್ಜನರೂಪಸಂನ್ಯಾಸೀ ಜ್ಞೇಯಃ । ಯುಕ್ತಃ ಭಗವದರ್ಪಣಬುದ್ಧ್ಯಾ ಕರ್ಮಾನುಷ್ಠಾನರೂಪಯೋಗ-ಯುಕ್ತಃ ನೈಷ್ಠಿಕೀಂ ಸ್ವಾಭಾವಿಕೀಂ ಶಾಂತಿಂ ಸ್ವರೂಪಾನಂದಾವಿರ್ಭಾವಲಕ್ಷಣಾಂ ಮುಕ್ತಿಮಾಪ್ನೋತಿ । ಅಯುಕ್ತಃ ಯೋಗಹೀನಃ । ಕಾಮಕಾರೇಣ ಫಲಕಾಮಾದಿನಾ ಕರ್ಮಾನುಷ್ಠಾನೇನ ಸಂನ್ಯಾಸಾಭಾವೇನೇತಿ ಯಾವತ್ । ಫಲೇ ಕ್ಷುದ್ರಫಲೇ ಸಕ್ತೋ ನಿಬಧ್ಯತೇ ನಿತರಾಂ ಸಂಸಾರಮನುಭವತೀತ್ಯರ್ಥಃ ॥ 12 ॥**

**ಅನುವಾದ**- **'ಕರ್ಮಫಲಂ ತ್ಯಕ್ತ್ವಾ'** ಎಂಬ ವಾಕ್ಯಕ್ಕೆ ಹಿಂದೆ ಹೇಳಿದ ಫಲಕಾಮನಾ ತ್ಯಾಗರೂಪವಾದ ಸಂನ್ಯಾಸವುಳ್ಳವನು ಎಂದು ಅರ್ಥ. **ಯುಕ್ತಃ** = ಭಗವದರ್ಪಣ ಬುದ್ಧಿಯಿಂದ ಕರ್ಮಾಚರಣರೂಪವಾದ ಯೋಗದಿಂದ ಕೂಡಿದವನು, **ನೈಷ್ಠಿಕೀಂ**= ಸ್ವಾಭಾವಿಕವಾದ, **ಶಾಂತಿಂ** = ಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷವನ್ನು, **ಆಪ್ನೋತಿ** = ಹೊಂದುತ್ತಾನೆ. **ಅಯುಕ್ತಃ** = ಯೋಗರಹಿತನು, **ಕಾಮಕಾರೇಣ** = ಫಲದ ಆಸೆಯಿಂದ ಕರ್ಮಗಳನ್ನು ಆಚರಿಸಿ, ಅಂದರೆ ಸಂನ್ಯಾಸ ಇಲ್ಲದೇನೆ , **ಫಲೇ** = ಕ್ಷುದ್ರ ಫಲದಲ್ಲಿ, **ಸಕ್ತಃ** = ಆಸಕ್ತನಾಗಿ , **ನಿಬಧ್ಯತೇ**= ಬಹಳವಾಗಿ ಸಂಸಾರವನ್ನು ಅನುಭವಿಸುತ್ತಾನೆ. ॥ 12 ॥

### 'ನಾಹಂ ಕರ್ತಾ' ಎಂಬ ಅನುಸಂಧಾನ

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥ 13 ॥**

**ಅರ್ಥ**- ಎಲ್ಲಾ ವಿಹಿತಕರ್ಮಗಳನ್ನು ಮನಸ್ಸಿನಿಂದ ತ್ಯಾಗಮಾಡಿ, ಎಂದರೆ ಕರ್ಮಾನುಷ್ಠಾನ ಮಾಡುತ್ತಿದ್ದರೂ ನನ್ನ ಒಳಿತಿಗಾಗಿ ನನ್ನಿಂದ ತನ್ನ ಪೂಜಾರೂಪವಾದ ಕರ್ಮಗಳನ್ನು ಭಗವಂತ ಮಾಡಿಸುತ್ತಿದ್ದಾನೆ, ನನ್ನ ಕರ್ತೃತ್ವಶಕ್ತಿಯೂ ಭಗವಂತನ ಅಧೀನ ಎಂದು ತಿಳಿದು, ಇಂದ್ರಿಯ ನಿಗ್ರಹವುಳ್ಳ ಸಾಧಕನು ಸ್ವತಂತ್ರವಾಗಿ ನಾನು ಕರ್ಮಗಳನ್ನು ಮಾಡುತ್ತಿದ್ದೇನೆ ಅಥವಾ ಮಾಡಿಸುತ್ತಿದ್ದೇನೆ ಎಂದು ಭಾವಿಸದೆ ನವದ್ವಾರಗಳುಳ್ಳ ಈ ದೇಹದಲ್ಲಿ ಕರ್ಮಲೇಪ ಇಲ್ಲದವನಾಗಿ ಇರುತ್ತಾನೆ.

**ಪೂರ್ವಂ 'ನೈವ ಕಿಂಚಿತ್ಕರೋಮೀ'ತ್ಯಾದಿನಾ ಕರ್ತೃತ್ವಾಭಿಮಾನತ್ಯಾಗೇನ ಸಂನ್ಯಾಸಃ ವಿವೃತಃ । ಅಧುನಾ ಕಾರಯಿತೃತ್ವಾಭಿಮಾನತ್ಯಾಗೇನ ಸಂನ್ಯಾಸ-**

**ಶಬ್ದಾರ್ಥಂ ಸ್ಪಷ್ಟಯತಿ- ಸರ್ವಕರ್ಮಾಣೀತಿ ॥ ಯದ್ವಾ ಪ್ರಾಕ್‌ಕರ್ಮಾಣಿ ಬ್ರಹ್ಮಣ್ಯಾಧಾಯ ಯಃ ಕರೋತೀತ್ಯತ್ರ ಕರ್ಮಣಾಂ ಬ್ರಹ್ಮಣ್ಯಾಧಾನಂ ನಾಮ ನ ಕರ್ಮಣಾಂ ಸ್ವರೂಪೇಣ ತ್ಯಾಗೋಽಪಿ ತು ಸರ್ವಕರ್ಮಾಣಿ ಮನಸಾ ಸಂನ್ಯಸ್ಯ ಭಗವಾನೇವ ಸ್ವಪೂಜಾತ್ಮಕಾನಿ ಮಚ್ಛುಭಾರ್ಥಂ ಮಯಾ ಕಾರಯತಿ ಮಮ ಕರ್ತೃತಾಶಕ್ತಿರಪೀಶಾಧೀನೈವ ಇತ್ಯನುಸಂಧಾಯೇತ್ಯೇವಂರೂಪಮಿತ್ಯರ್ಥಃ । ಸ್ವರೂಪೇಣ ಕರ್ಮಾಣಿ ಪರಿತ್ಯಜ್ಯೇತ್ಯರ್ಥಪಕ್ಷೇ ಮನಸೇತಿ ವ್ಯರ್ಥಮಿತಿ ಭಾವಃ ।**

**ಅನುವಾದ** – ಹಿಂದೆ **'ನೈವ ಕಿಂಚಿತ್‌ಕರೋಮಿ'** ಎಂಬ (ಶ್ಲೋಕ – 8–9) ಶ್ಲೋಕಗಳಿಂದ ಕರ್ತೃತ್ವ ಅಭಿಮಾನತ್ಯಾಗದಿಂದ ಸಂನ್ಯಾಸವನ್ನು ವಿವರಿಸಿದ್ದಾನೆ. ಈಗ 'ಕಾರಯಿತೃತ್ವ (ಮಾಡಿಸುವಿಕೆ) ಅಭಿಮಾನತ್ಯಾಗದಿಂದಲೂ ಸಂನ್ಯಾಸವನ್ನು **ಸರ್ವಕರ್ಮಾಣಿ** ಎಂಬ ಶ್ಲೋಕದಿಂದ ಸ್ಪಷ್ಟಪಡಿಸುತ್ತಿದ್ದಾನೆ. ಅಥವಾ ಹಿಂದೆ **'ಕರ್ಮಾಣಿ ಬ್ರಹ್ಮಣ್ಯಾಧಾಯ ಯಃ ಕರೋತಿ'** ಎಂಬಲ್ಲಿ (ಶ್ಲೋಕ–10) ಕರ್ಮಗಳನ್ನು ಭಗವಂತನಲ್ಲಿತ್ಯಾಗ ಮಾಡುವುದು ಎಂದರೆ ಸರ್ವಥಾ ಕರ್ಮಗಳನ್ನೇ ಬಿಡುವುದಲ್ಲ . 'ಸರ್ವಕಮಾಣಿ ಮನಸಾ ಸಂನ್ಯಸ್ಯ' ಅಂದರೆ ಭಗವಂತನೇ ತನ್ನ ಪೂಜಾರೂಪವಾಗಿ ಕರ್ಮಗಳನ್ನು ನನ್ನ ಒಳಿತಿಗಾಗಿ ನನ್ನಿಂದ ಮಾಡಿಸುತ್ತಾನೆ, ನನ್ನ ಕರ್ತೃತ್ವಶಕ್ತಿಯೂ ಭಗವಂತನ ಅಧೀನ ಎಂದು ಅನುಸಂಧಾನ ಮಾಡಿಕೊಂಡು ಎಂದು ಅರ್ಥ. ಸರ್ವಥಾ ಕರ್ಮಗಳನ್ನೇ ಬಿಡುವುದು ಎಂದರ್ಥ ಹೇಳಿದರೆ ಮನಸ್ಸಿನಿಂದ (ಬಿಟ್ಟು) ಎಂಬ ಶಬ್ದ ವ್ಯರ್ಥವಾಗುತ್ತದೆ.

**ವಿವರಣೆ** – ಹಿಂದೆ **'ನೈವಕಿಂಚಿತ್ ಕರೋಮಿ'** ಎಂಬ ಶ್ಲೋಕದಲ್ಲಿಸಾಧಕನು ನೋಡುವಿಕೆ, ಕೇಳುವಿಕೆ, ಮೊದಲಾದ ಕರ್ಮಗಳನ್ನು ಮಾಡುತ್ತಿದ್ದರೂ- ಕರ್ತೃತ್ವ ಅಭಿಮಾನತ್ಯಾಗ ಮಾಡುವುದರಿಂದ ಅವನನ್ನು ಸಂನ್ಯಾಸಿ ಎಂದು ಕರೆಯುತ್ತಾರೆ ಎಂದು ವಿವರಿಸಲಾಗಿದೆ. ಈಗ ಸಾಧಕನು ಇನ್ನೊಬ್ಬರಿಂದ ಕರ್ಮಗಳನ್ನು ಮಾಡಿಸುತ್ತಿದ್ದರೂ ತಾನು ಮಾಡಿಸುತಿದ್ದೇನೆ ಎಂಬ ಕಾರಯಿತೃತ್ವ ಅಭಿಮಾನ ತ್ಯಾಗ ಮಾಡುವುದರಿಂದಲೂ ಅವನನ್ನು ಸಂನ್ಯಾಸಿ ಎಂದು ಕರೆಯುತ್ತಾರೆ ಎಂದು ಸ್ಪಷ್ಟಪಡಿಸುತ್ತಿದ್ದಾನೆ.

**ವಶೀ ಜಿತೇಂದ್ರಿಯಃ ಸ್ವಾತಂತ್ರ್ಯೇಣ ನೈವ ಕುರ್ವನ್ನ ಕಾರಯಂಶ್ಚ ನವದ್ವಾರೇ ಚಕ್ಷುಃಶ್ರೋತ್ರಘ್ರಾಣಾನಾಂ ಷಡ್‌ದ್ವಾರಾಣಿ ಮುಖಂ ಪಾಯೂಪಸ್ಥೇ ಚೇತ್ಯೇವಂ ನವದ್ವಾರವತಿ ಪುರೇ ದೇಹೇ ಸುಖಂ ಯಥಾ ತಥಾ ಆಸ್ತೇ । ಕರ್ಮಲೇಪಹೀನೋ ವರ್ತತ ಇತ್ಯರ್ಥಃ ॥ 13 ॥**

**ಅನುವಾದ- ವಶೀ=** ಜಿತೇಂದ್ರಿಯನಾದವನು ಸ್ವತಂತ್ರವಾಗಿ ಮಾಡುವುದಿಲ್ಲ ಮಾಡಿಸುವುದಿಲ್ಲ ಎಂಬ ಅನುಸಂಧಾನವುಳ್ಳವನಾಗಿ **ನವದ್ವಾರೇ** = ಎರಡು ಕಣ್ಣು, ಎರಡು ಕಿವಿ, ಎರಡು ಮೂಗು ಹೀಗೆ ಆರು, ಬಾಯಿ, ಮಲ ಮೂತ್ರ ವಿಸರ್ಜಿಸುವ ದ್ವಾರಗಳು ಎಂಬ ಮೂರು, ಒಟ್ಟು ಒಂಭತ್ತು ದ್ವಾರವುಳ್ಳ , **ಪುರೇ=** ಶರೀರದಲ್ಲಿ, **ಸುಖಂ ಆಸ್ತೇ=** ಸುಖದಿಂದ ಇರುತ್ತಾನೆ. ಕರ್ಮಲೇಪರಹಿತನಾಗಿರುತ್ತಾನೆ ಎಂದು ತಾತ್ಪರ್ಯ. ॥ 13 ॥

## ಪರಮಾತ್ಮನೇ ಸರ್ವ ಕಾರಣ

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥ 14 ॥**

**ಅರ್ಥ-** ಜಡಪದಾರ್ಥಗಳಿಗಿಂತ ಹೆಚ್ಚಿನ ಸಾಮರ್ಥ್ಯವುಳ್ಳ ಜೀವನು ಸ್ವತಂತ್ರವಾಗಿ ಯಾವ ಜನರಿಂದಲೂ ಕರ್ಮಗಳನ್ನು ಮಾಡಿಸುವುದಿಲ್ಲ. ಸ್ವತಂತ್ರವಾಗಿ ತಾನೂ ಕರ್ಮಗಳನ್ನು ಮಾಡುವುದಿಲ್ಲ. ಜನರಿಗೆ ಕರ್ಮದ ಫಲವನ್ನು ತಂದುಕೊಡುವ ವಿಷಯದಲ್ಲಿ ಅಥವಾ ತಾನು ಕರ್ಮಫಲವನ್ನು ಪಡೆಯುವ ವಿಷಯದಲ್ಲಿ ಜೀವನಿಗೆ ಸ್ವಾತಂತ್ರ್ಯ ಇಲ್ಲ. ಸ್ವತಂತ್ರವಾದ ಭಗವಂತನೇ ಕರ್ಮಗಳನ್ನು ಜೀವರಿಂದ ಮಾಡಿಸಿ ಫಲಕೊಡುತ್ತಾನೆ.

**ನನು ದರ್ಶನಾದಿ ಕುರ್ವನ್ನೈವ ಕರೋಮೀತಿ ಮನ್ಯೇತೇತ್ಯುಕ್ತಿರಯುಕ್ತಾ । ತಥಾತ್ವೇ ಮಿಥ್ಯಾಜ್ಞಾನಿತ್ವಪ್ರಸಂಗಾದಿತ್ಯತಃ ಸ್ವಾಭಿಪ್ರಾಯಮಾಹ- ನೇತಿ ॥ ಜಡಮಪೇಕ್ಷ್ಯ ಪ್ರಭುಃ ಸಮರ್ಥೋ ಜೀವಃ ಲೋಕಸ್ಯ ಕರ್ತೃತ್ವಂ ಲೋಕೇನ ಕರ್ಮ ನ ಸೃಜತಿ ನ ಕಾರಯತಿ । ಸ್ವಾತಂತ್ರ್ಯೇಣೇತ್ಯರ್ಥಃ । ಸ್ವಯಂ ಚ ಕರ್ಮಾಣಿ ನ ಸೃಜತಿ ನ ಕರೋತಿ । ಕರ್ಮಣ್ಯಸ್ವಾತಂತ್ರ್ಯೇ ಫಲೇ ಸುತರಾಂ ತದಿತ್ಯಾಹ- ನ ಕರ್ಮೇತಿ ॥ ಸೃಜತೀತ್ಯನುಷಂಗಃ । ಕರ್ಮಫಲಪ್ರಾಪ್ತಿಂ ಲೋಕಸ್ಯ ನ ಸೃಜತಿ । ಲೋಕಸ್ಯ ಫಲಪ್ರಾಪ್ತಿಸಂಪಾದನೇ ಸ್ವಸ್ಯ ವಾ [1]ಫಲಸಂಪಾದನೇ ನ ಸ್ವತಂತ್ರ ಇತ್ಯರ್ಥಃ । ಸ್ವಾತಂತ್ರ್ಯಾಭಾವಾಪೇಕ್ಷಯಾ ನ ಕರೋಮೀತಿ ಮನ್ಯೇತೇತ್ಯುಕ್ತಿರಿತಿ ಭಾವಃ ।**

**ಅನುವಾದ-** ಜೀವನು ನೋಡುವ, ಕೇಳುವ ಕ್ರಿಯೆಗಳನ್ನು ಮಾಡುತ್ತಿದ್ದರೂ ತಾನು ಮಾಡುತ್ತಿಲ್ಲ ಎಂದು ತಿಳಿಯಬೇಕು ಎಂದು (8-9 ಶ್ಲೋಕದಲ್ಲಿ) ಹೇಳಿದ್ದು ಸರಿಯಲ್ಲ. ಹಾಗೆ

---
1. ಕರ್ಮಸಂಪಾದನೇ

ತಿಳಿದರೆ ಅವನು ಮಿಥ್ಯಾಜ್ಞಾನಿ ಎಂದು ಆಗಬೇಕಾದೀತು ಎಂದು ಆಕ್ಷೇಪಿಸಿದರೆ ಕೃಷ್ಣನು ತನ್ನ ಅಭಿಪ್ರಾಯವನ್ನು '**ನ ಕರ್ತೃತ್ವಂ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. ಜಡದ ದೃಷ್ಟಿಯಿಂದ **ಪ್ರಭುಃ**= ಸಮರ್ಥನಾದ (ಜಡಕ್ಕಿಂತಲೂ ಹೆಚ್ಚಿನ ಸಾಮರ್ಥ್ಯವುಳ್ಳ) ಜೀವನು **ಲೋಕಸ್ಯ ಕರ್ತೃತ್ವಂ**= ಜನರಿಂದ ಕರ್ಮಗಳನ್ನು **ನ ಸೃಜತಿ**= ಮಾಡಿಸುವುದಿಲ್ಲ, ಸ್ವತಂತ್ರವಾಗಿ ಮಾಡಿಸುವುದಿಲ್ಲ ಎಂದು ಅರ್ಥ. ತಾನೂ ಕರ್ಮಗಳನ್ನು , **ನ ಸೃಜತಿ** (ಸ್ವತಂತ್ರವಾಗಿ) ಮಾಡುವುದಿಲ್ಲ. ಕರ್ಮಾಚರಣೆಯಲ್ಲಿಯೇ ಅಸ್ವತಂತ್ರನಾದ ಜೀವನಿಗೆ ಫಲದಲ್ಲಿ ಅಸ್ವಾತಂತ್ರ್ಯ ಇದ್ದೇ ಇದೆ ಎಂದು '**ನ ಕರ್ಮ ಫಲಸಂಯೋಗಂ**' ಎಂಬ ವಾಕ್ಯದಿಂದ ಹೇಳುತ್ತಿದ್ದಾನೆ. ಇಲ್ಲಿ ಸೃಜತಿ ಎಂಬ ಕ್ರಿಯಾಪದವನ್ನು ಅನ್ವಯ ಮಾಡಿಕೊಳ್ಳಬೇಕು. ಜನರಿಗೆ ಕರ್ಮಫಲಗಳಾದ ಸುಖದುಃಖಾದಿಗಳನ್ನು ಕೊಡುವುದಿಲ್ಲ. ಜನರು ಸುಖದುಃಖಾದಿಗಳನ್ನು ಪಡೆಯುವಂತೆ ಮಾಡಲು ಅಥವಾ ತಾನೇ ಸುಖದುಃಖಾದಿಗಳನ್ನು ಪಡೆಯಲು ಸ್ವತಂತ್ರನಲ್ಲ ಎಂದು ಅರ್ಥ. ಸ್ವಾತಂತ್ರ್ಯ ಇಲ್ಲವೆಂಬ ಅಭಿಪ್ರಾಯದಿಂದ ಕರ್ಮಗಳನ್ನು ತಾನು ಮಾಡುತ್ತಿದ್ದರೂ ಮಾಡುತ್ತಿಲ್ಲ ಎಂದು ತಿಳಿಯಬೇಕೆಂದಿದೆ ಎಂದು ತಾತ್ಪರ್ಯ.

**ಯದ್ವಾ ಜೀವಸ್ಯ ಸ್ವತಂತ್ರಕರ್ತೃತ್ವಾಭಾವೇಽಪೀಶ್ವರದತ್ತಂ ಕ್ರಿಯಾಯಾಂ ಕ್ರಿಯಾಜನ್ಯಾದೃಷ್ಟೇ ಕರ್ಮಫಲಪ್ರಾಪ್ತೌ ಚಾಸ್ಯೇವ ಸ್ವಾತಂತ್ರ್ಯಮತಃ ಕಥಂ 'ಬ್ರಹ್ಮಣ್ಯಾಧಾಯ ಕರ್ಮಾಣಿ' ಇತಿ 'ಸರ್ವಾಣಿ ಕರ್ಮಾಣಿ ಸಂನ್ಯಸ್ಯ' ಇತಿ ಚೋಕ್ತಿರಿತ್ಯತ ಆಹ- ನೇತಿ ॥ ಪ್ರಭುರೀಶ್ವರಃ । ಲೋಕಸ್ಯ ಜೀವಸ್ಯ ಕರ್ತೃತ್ವಂ ಅಗ್ನಿಹೋತ್ರಾದಿಕ್ರಿಯಾಯಾಂ ಸ್ವಾತಂತ್ರ್ಯಂ ನ ಸೃಜತಿ ನ ಪ್ರಯಚ್ಛತಿ । ಕರ್ಮಾಣಿ ಕ್ರಿಯಾಜನ್ಯಾದೃಷ್ಟಾನಿ ಲೋಕಸ್ಯ ನ ಸೃಜತಿ । ತೇಷು ಸ್ವಾತಂತ್ರ್ಯಂ ನ ಪ್ರಯಚ್ಛತಿ । ಕರ್ಮಫಲಸಂಯೋಗಂ ಚ ಲೋಕಸ್ಯ ನ ಸೃಜತಿ । ಫಲಪ್ರಾಪ್ತಾವಪಿ ಲೋಕಸ್ಯ ಸ್ವಾತಂತ್ರ್ಯಂ ನ ಪ್ರಯಚ್ಛತೀತ್ಯರ್ಥಃ ।**

**ಅನುವಾದ** - ಅಥವಾ ಜೀವನು ಸ್ವತಂತ್ರಕರ್ತೃವಾಗಿರದಿದ್ದರೂ, ಕರ್ಮಾಚರಣೆಯಲ್ಲಿ, ಕರ್ಮಜನ್ಯವಾದ ಪಾಪಪುಣ್ಯಗಳಲ್ಲಿ , ಕರ್ಮಫಲವನ್ನು ಹೊಂದುವಿಕೆಯಲ್ಲಿ ಜೀವನಿಗೆ ಭಗವದ್ದತ್ತವಾದ ಸ್ವಾತಂತ್ರ್ಯ ಇದೆ. ಆದ್ದರಿಂದ '**ಬ್ರಹ್ಮಣ್ಯಾಧಾಯ ಕರ್ಮಾಣಿ** ' '**ಸರ್ವಾಣಿ ಕರ್ಮಾಣಿ ಸಂನ್ಯಸ್ಯ**' (ಸ್ವಾತಂತ್ರ್ಯ ಅಭಿಮಾನ, ಫಲಾಸೆ ಇವುಗಳನ್ನು ಬಿಟ್ಟು , ನನ್ನ ಒಳತಿಗಾಗಿ ವಿಹಿತಕರ್ಮಗಳನ್ನು ಭಗವತ್ಪೂಜಾರೂಪವಾಗಿ ನನ್ನಿಂದ ಭಗವಂತನೇ ಮಾಡಿಸುತ್ತಾನೆ ನಾನು ಕರ್ತೃವಲ್ಲ) ಎಂದು ಹೇಗೆ ಹೇಳಲು ಸಾಧ್ಯ ಎಂಬ ಆಕ್ಷೇಪಕ್ಕೆ '**ನ ಕರ್ತೃತ್ವಂ**' ಎಂಬ ಶ್ಲೋಕದಿಂದ ಸಮಾಧಾನವನ್ನು ಹೇಳುತ್ತಿದ್ದಾನೆ. **ಪ್ರಭುಃ** = ಸರ್ವ ನಿಯಾಮಕನಾದ ಭಗವಂತನು ಜೀವನಿಗೆ ,

**ಕರ್ತೃತ್ವಂ** = ಅಗ್ನಿಹೋತ್ರ ಮೊದಲಾದ ಕರ್ಮಾಚರಣೆಯಲ್ಲಿಸ್ವಾತಂತ್ರ್ಯವನ್ನು, **ನ ಸೃಜತಿ** = ಕೊಡುವುದಿಲ್ಲ. **ಕರ್ಮಾಣಿ** = ಕರ್ಮಜನ್ಯವಾದ ಪಾಪಪುಣ್ಯಗಳನ್ನು ಅಂದರೆ ಪಾಪಪುಣ್ಯಗಳ ವಿಷಯದಲ್ಲಿಸ್ವಾತಂತ್ರ್ಯವನ್ನು, **ಲೋಕಸ್ಯ**= ಜನರಿಗೆ, **ನ ಸೃಜತಿ**= ಕೊಡುವುದಿಲ್ಲ. **ಕರ್ಮಫಲ-ಸಂಯೋಗಂ ಚ**= ಕರ್ಮ ಫಲಪ್ರಾಪ್ತಿಯನ್ನೂ, **ಲೋಕಸ್ಯ**= ಜನರಿಗೆ **ನ ಸೃಜತಿ**= ಕೊಡುವುದಿಲ್ಲ. ಅಂದರೆ ಕರ್ಮಫಲಪಡೆಯುವಲ್ಲಿಯೂ ಜನರಿಗೆ ಸ್ವಾತಂತ್ರವನ್ನು ಕೊಡುವುದಿಲ್ಲಎಂದು ಅರ್ಥ.

**ವಿವರಣೆ** - **'ಬ್ರಹ್ಮಣ್ಯಾಧಾಯ ಕರ್ಮಾಣಿ'** ಮತ್ತು **'ಸರ್ವಾಣಿ ಕರ್ಮಾಣಿ ಸಂನ್ಯಸ್ಯ'** ಎಂಬಲ್ಲಿ ಜೀವನು ಕರ್ತೃತ್ವ ಅಭಿಮಾನ, ಫಲಾಸೆಗಳನ್ನು ಬಿಟ್ಟು, ತನ್ನ ಒಳಿತಿಗಾಗಿ ಭಗವಂತ ಎಲ್ಲಾ ಕರ್ಮಗಳನ್ನು ತನ್ನಿಂದ ಮಾಡಿಸುತ್ತಿದ್ದಾನೆ ಎಂದು ಅನುಸಂಧಾನವುಳ್ಳವನಾಗಿ ಕರ್ಮಾಚರಣೆಯನ್ನು ಮಾಡಬೇಕು ಎಂದು ಹೇಳುತ್ತಾ ಜೀವನಿಗೆ ಕರ್ಮದಲ್ಲಿ, ಪುಣ್ಯಪಾಪಗಳಲ್ಲಿ, ತಾನು ಪಡೆಯುವ ಫಲದಲ್ಲಿ ಸ್ವಾತಂತ್ರ್ಯ ಇಲ್ಲ ಎಂದು ಹೇಳಿದ್ದಾರೆ. ಆದರೆ ನಾವು ಜೀವನಿಗೆ ಕರ್ಮಾಚರಣೆಯಲ್ಲಿ ಕರ್ಮಜನ್ಯವಾದ ಪುಣ್ಯಪಾಪಗಳಲ್ಲಿ ಕರ್ಮಫಲಪ್ರಾಪ್ತಿಯಲ್ಲಿಸ್ವಾತಂತ್ರ್ಯವನ್ನು ಕಾಣುತ್ತಿದ್ದೇನೆ. ಆದ್ದರಿಂದ ಹಿಂದೆ ಹೇಳಿದ್ದು ಸರಿಯಲ್ಲಎಂದು ಆಕ್ಷೇಪ. ಇದಕ್ಕೆ ಸಮಾಧಾನ ಹೀಗಿದೆ. ಜೀವನು ಪರಮಾತ್ಮನಿಂದ ಪ್ರೇರಿತನಾಗಿ ಕರ್ಮಾದಿಗಳನ್ನು ಮಾಡುತ್ತಾನೆ, ಭಗವಂತನಿಂದಲೇ ಪುಣ್ಯಪಾಪಗಳನ್ನೂ, ಕರ್ಮದ ಫಲವನ್ನೂ ಪಡೆಯುತ್ತಾನೆ. ಇಲ್ಲಿ ಜೀವ ಅಸ್ವತಂತ್ರ, ಭಗವಂತ ಸ್ವತಂತ್ರ. ಜೀವನಲ್ಲಿ ಕರ್ಮಾಚರಣೆ ಕಂಡುಬಂದರೂ ಕರ್ಮಾಚರಣೆಯಲ್ಲಿ ಜೀವನಿಗೆ ಸ್ವಾತಂತ್ರ್ಯ ಇಲ್ಲ. ಸ್ವತಂತ್ರವಾಗಿ ಏನೂ ಮಾಡಲು, ಪಡೆಯಲು ಅವನಿಂದ ಸಾಧ್ಯವಿಲ್ಲ. ಇಲ್ಲಿ **'ಪ್ರಭುಃ'** ಎಂದರೆ ಭಗವಂತ ಎಂದು ಅರ್ಥ (ಹಿಂದೆ ಪ್ರಭು ಎಂದರೆ ಜಡಕ್ಕಿಂತ ಹೆಚ್ಚಿನ ಸಾಮರ್ಥ್ಯವುಳ್ಳ ಜೀವ ಎಂದು ಅರ್ಥ ಹೇಳಿದೆ.)

**ನನು ಕ್ರಿಯಾಯಾಮದೃಷ್ಟೇಷು ಫಲಸಂಯೋಗೇ ಚ ಜೀವಸ್ಯ ಸ್ವಾತಂತ್ರ್ಯಾ-ಭಾವೇ ಕಥಂ ಕ್ರಿಯಾದಿನಿಷ್ಪತ್ತಿರಿತ್ಯತ ಆಹ- ಸ್ವಭಾವಸ್ತ್ವಿತಿ ॥ ಸ್ವಂ ಸ್ವಯಮೇವ ಭವತಿ ಪರಾನಪೇಕ್ಷಂ ತಿಷ್ಠತಿ । ತಥಾ ಸ್ವಯಮೇವ ಭಾವಯತಿ ಜಗದುತ್ಪಾದ-ಯತೀತಿ ಸ್ವಭಾವಃ । ಸ್ವೇತಿ ಪದೇ ಉಪಪದೇ ಭವತೇರ್ಣ್ಯಂತಾತ್ಕಪ್ರತ್ಯಯಃ । ಸ್ವಸ್ಥಿತಾವನ್ಯಕರಣೇ ಚ ಪರಾನಪೇಕ್ಷಃ ಸ್ವತಂತ್ರೋ ಭಗವಾನ್‌ಸ್ವಭಾವ ಶಬ್ದಾರ್ಥಃ । ಸ ಏವ ಚ ಪ್ರವರ್ತತೇ ಕ್ರಿಯಾಕರ್ತೃತ್ವೇ ಕರ್ಮಶಬ್ದಿತಾದೃಷ್ಟೇಷು ಫಲಸಂಯೋಗೇ ಚೇತಿ ಧ್ಯೇಯಮ್ । ಕದಾಽಪಿ ಕುತ್ರಾಪಿ ನಾನ್ಯಸ್ಯ ಸ್ವಾತಂತ್ರ್ಯಂ ದದಾತಿ । ಕಿಂತು ಸರ್ವತ್ರ ಸರ್ವದಾ ಸ್ವಯಮೇವ ಪ್ರವರ್ತತ ಇತಿ ಭಾವಃ ॥ 14 ॥**

**ಅನುವಾದ** - ಜೀವನಿಗೆ ಕರ್ಮಾಚರಣೆಯಲ್ಲಿ, ಕರ್ಮಜನ್ಯಪುಣ್ಯ ಪಾಪಗಳಲ್ಲಿ, ಕರ್ಮಜನ್ಯ

ಫಲಪ್ರಾಪ್ತಿಯಲ್ಲಿ ಸ್ವಾತಂತ್ರ್ಯವಿಲ್ಲವಾದರೆ ಕರ್ಮಾಚರಣೆ ಮೊದಲಾದವುಗಳು ಜೀವನಿಂದ ನಡೆಯಲು ಹೇಗೆ ಸಾಧ್ಯ ಎಂಬ ಶಂಕೆಗೆ 'ಸ್ವಭಾವಸ್ತು' ಎಂದು ಉತ್ತರಿಸುತ್ತಿದ್ದಾನೆ. **ಸ್ವಂ**= ತಾನೆ, **ಭವತಿ**= ಇದ್ದಾನೆ, ಇವನ ಅಸ್ತಿತ್ವ ಪರಾಧೀನವಲ್ಲ. ಮತ್ತು ಭಗವಂತ ತಾನೇ **ಭಾವಯತಿ**= ಜಗತ್ತನ್ನು ಸೃಷ್ಟಿಮಾಡುತ್ತಾನೆ. ಆದ್ದರಿಂದಲೂ ಅವನೇ ಸ್ವಭಾವ. ಇಲ್ಲಿ 'ಸ್ವ' ಪದದ ನಂತರ ಇರುವ ಭೂಧಾತುವಿಗೆ '**ಣಿಚ್**' (ಮಾಡಿಸುತ್ತಾನೆ) ಪ್ರತ್ಯಯ ಬಂದು ನಂತರ ಕಪ್ರತ್ಯಯ ಬಂದಿದೆ. ತನ್ನ ಇರುವಿಕೆಯಲ್ಲಿಯೂ , ಬೇರೆ ಕರ್ಮಗಳನ್ನು ಮಾಡುವಿಕೆಯಲ್ಲಿಯೂ ಪರರ ಅಪೇಕ್ಷೆ ಇಲ್ಲ. ಅಂದರೆ ಸ್ವತಂತ್ರ. ಅವನೇ ಭಗವಂತ. ಇದು ಸ್ವಭಾವ ಶಬ್ದದ ಅರ್ಥ. **ಸ ಏವ**= ಆ ಭಗವಂತನೇ, **ಪ್ರವರ್ತತೇ**= ಕರ್ಮಾಚರಣೆಯಲ್ಲಿ, ಕರ್ಮಜನ್ಯ ಪುಣ್ಯಪಾಪಗಳಲ್ಲಿ , ಫಲಪ್ರಾಪ್ತಿಯಲ್ಲಿ ಸ್ವತಂತ್ರ ಪ್ರವೃತ್ತಿವುಳ್ಳವನಾಗಿದ್ದಾನೆ. ಯಾವಾಗಲೂ ಎಲ್ಲಿಯೂ ಬೇರೆಯಾವ ಚೇತನರಿಗೂ ಸ್ವಾತಂತ್ರ್ಯವನ್ನು ಕೊಡುವುದಿಲ್ಲ. ಎಲ್ಲಾ ಕಡೆಯಲ್ಲಿಯೂ ಯಾವಾಗಲೂ ತಾನೇ ಸ್ವತಂತ್ರ ಪ್ರವೃತ್ತಿವುಳ್ಳವನಾಗಿದ್ದಾನೆ ಎಂದು ತಾತ್ಪರ್ಯ. ॥ 14 ॥

### ಜೀವನು ಸ್ವತಂತ್ರಕರ್ತೃ ಅಲ್ಲ

**ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ ।**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ॥ 15 ॥**

**ಅರ್ಥ** - ಜಡಕ್ಕಿಂತ ಹೆಚ್ಚಿನ ಸಾಮರ್ಥ್ಯವುಳ್ಳ ಜೀವನು ದುಷ್ಕರ್ಮಾಚರಣೆಯಿಂದ ಹುಟ್ಟಿದ ಪಾಪವನ್ನು , ಸತ್ಕರ್ಮಾಚರಣೆಯಿಂದ ಹುಟ್ಟಿದ ಪುಣ್ಯವನ್ನು ಸ್ವತಂತ್ರವಾಗಿ ಹೊಂದುವುದಿಲ್ಲ. ಕರ್ಮಾಚರಣೆ ಮತ್ತು ಕರ್ಮ ಫಲಪ್ರಾಪ್ತಿಯಲ್ಲಿಯೂ ಅವನಿಗೆ ಸ್ವಾತಂತ್ರ್ಯವಿಲ್ಲ.

ಅಥವಾ, ಸ್ವತಂತ್ರನಾದ ಭಗವಂತನು ಜೀವನ ದುಷ್ಕರ್ಮಜನ್ಯಪಾಪವನ್ನು , ಸತ್ಕರ್ಮಜನ್ಯವಾದ ಪುಣ್ಯವನ್ನು ಪಡೆಯುವುದಿಲ್ಲ. ಜೀವರ ಬುದ್ಧಿಯು ಅಜ್ಞಾನದಿಂದ ಆವೃತವಾಗಿದೆ. ಆದ್ದರಿಂದ ಎಲ್ಲಾಕಡೆಯಲ್ಲಿ ಇರುವ ಸ್ವತಂತ್ರನಾದ ಭಗವಂತನನ್ನು ಜೀವರು ತಿಳಿಯಲಾರರು.

**ಫಲಸಂಯೋಗೇ ಸ್ವಾತಂತ್ರ್ಯಾಭಾವಂ ಜೀವಸ್ಯ ವ್ಯನಕ್ತಿ- ನಾದತ್ತ ಇತಿ ॥ ವಿಭುಃ ಜಡಾಪೇಕ್ಷಯಾ ಸಮರ್ಥೋ ಜೀವಃ ಕಸ್ಯಚಿದ್‌ದುರಾಚಾರಸ್ಯ ಸಕಾಶಾತ್ ತಜ್ಜನ್ಯಂ ಪಾಪಂ ಸ್ವಾತಂತ್ರ್ಯೇಣ ನಾದತ್ತೇ । ಸುಕೃತಂ ಪುಣ್ಯಂ ಚ ಸ್ವಾತಂತ್ರ್ಯೇಣ ನೈವಾದತ್ತೇ । ಏವಂ ಕ್ರಿಯಾಯಾಮದೃಷ್ಟೇ ಚ ಜ್ಞೇಯಮ್ ।**

**ಅನುವಾದ** - ಫಲಪ್ರಾಪ್ತಿಯಲ್ಲಿ ಜೀವನಿಗೆ ಸ್ವಾತಂತ್ರ್ಯ ಇಲ್ಲ ಎನ್ನುವುದನ್ನು 'ನಾದತ್ತೇ' ಎಂಬ ಶ್ಲೋಕದಲ್ಲಿ ವಿವರಿಸುತ್ತಿದ್ದಾನೆ. **ವಿಭುಃ** = ಜಡಕ್ಕಿಂತ ಹೆಚ್ಚಿನ ಸಾಮರ್ಥ್ಯವುಳ್ಳ ಜೀವನು ,

**ಕಸ್ಯಚಿತ್** = ದುರಾಚಾರದಿಂದ ಹುಟ್ಟಿದ , **ಪಾಪಂ** = ಪಾಪವನ್ನು , **ನಾದತ್ತೇ** = ಸ್ವತಂತ್ರವಾಗಿ ಪಡೆಯುವುದಿಲ್ಲ . **ಸುಕೃತಂ**= ಪುಣ್ಯವನ್ನೂ ಸ್ವತಂತ್ರವಾಗಿ ಪಡೆಯುವುದಿಲ್ಲ . ಹಾಗೆಯೇ ಕರ್ಮಾಚರಣೆಯಲ್ಲಿಯೂ ಕರ್ಮಜನ್ಯ ಅದೃಷ್ಟದಲ್ಲಿಯೂ ಜೀವನಿಗೆ ಸ್ವಾತಂತ್ರ್ಯವಿಲ್ಲ ಎಂದು ತಿಳಿಯಬೇಕು.

**ಯದ್ವಾ ಭಗವತ ಏವ ಕರ್ತೃತ್ವೇ ಕರ್ಮಲೇಪಃ ಸ್ಯಾದಿತ್ಯತ ಆಹ- ನಾದತ್ತ ಇತಿ ॥ ವಿಭುಃ ಸ್ವತಂತ್ರ ಈಶ್ವರಃ ವಿಭುತ್ವಾದೇವ ಕಸ್ಯಚಿತ್ಕರ್ಮಣಃ ಸಕಾಶಾತ್ಪಾಪಂ ಸುಕೃತಂ ವಾ ನಾದತ್ತ ಇತ್ಯರ್ಥಃ । ನ ಪುಣ್ಯಪಾಪಲೇಪವಾನ್-ಭವತೀತ್ಯರ್ಥಃ । ನನ್ವೇವಂ ಸರ್ವತ್ರ ಸ್ಥಿತ್ವಾ ಸ್ವಾತಂತ್ರ್ಯೇಣ ಕರ್ತಾ ಈಶ್ವರೋಽಸ್ತಿ ಚೇತ್ ಕಥಂ ನ ದೃಶ್ಯತ ಇತ್ಯತ ಆಹ- ಅಜ್ಞಾನೇನೇತಿ ॥ ತೇನಾಜ್ಞಾನೇನಾವೃತ ಬುದ್ಧಿತ್ವೇನ ಮುಹ್ಯಂತಿ ಭಗವಂತಂ ನ ಜಾನಂತಿ ॥ 15 ॥**

**ಅನುವಾದ-** ಅಥವಾ ಭಗವಂತನೆ ಸ್ವತಂತ್ರ ಕರ್ತೃವಾದರೆ ಅವನಿಗೆ ಕರ್ಮಲೇಪವಾಗ ಬೇಕಾಗುತ್ತದೆ ಎಂಬ ಶಂಕೆಯನ್ನು 'ನಾದತ್ತೇ' ಎಂಬ ಶ್ಲೋಕದಲ್ಲಿ ಪರಿಹರಿಸುತ್ತಿದ್ದಾನೆ. **ವಿಭುಃ** = ಸ್ವತಂತ್ರನಾದ ಭಗವಂತನು ಸರ್ವಸಮರ್ಥನಾದ್ದರಿಂದಲೇ ಯಾವುದೇ ಕರ್ಮಗಳಿಂದ ಹುಟ್ಟಿದ ಪುಣ್ಯ ಅಥವಾ ಪಾಪಗಳನ್ನು ಪಡೆಯುವುದಿಲ್ಲ. ಅವನಿಗೆ ಪುಣ್ಯಪಾಪಗಳ ಲೇಪವಿಲ್ಲ ಎಂದು ಅರ್ಥ. ಹಾಗಾದರೆ ಭಗವಂತ ಎಲ್ಲಾಕಡೆಯಲ್ಲಿ ಇದ್ದು ಸ್ವತಂತ್ರವಾಗಿ ಕರ್ಮಗಳನ್ನೂ ಮಾಡುವವನಾದರೆ ಏಕೆ ಕಣ್ಣಿಗೆ ಕಾಣಿಸುವುದಿಲ್ಲ ಎಂಬ ಶಂಕೆಗೆ ಸಮಾಧಾನವನ್ನು **'ಅಜ್ಞಾನೇನ'** ಎಂಬ ವಾಕ್ಯದಿಂದ ಹೇಳುತ್ತಿದ್ದಾನೆ. **ತೇನ**= ಅಜ್ಞಾನಾವೃತವಾದ ಬುದ್ಧಿವುಳ್ಳವನಾದ್ದರಿಂದ, **ಮುಹ್ಯಂತಿ**= ಭಗವಂತನನ್ನು ತಿಳಿಯುವುದಿಲ್ಲ. ॥ 15 ॥

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವದ್‌ಜ್ಞಾನಂ ಪ್ರಕಾಶಯತಿ ತತ್ಪರಮ್ ॥ 16 ॥**

**ಅರ್ಥ-** ಯಾರ ಆವರಕವಾದ ಅಜ್ಞಾನವು, ಶಾಸ್ತ್ರಜನ್ಯವಾದ ಪರಬ್ರಹ್ಮನ ಜ್ಞಾನದಿಂದ ಶಿಥಿಲವಾಗಿದೆಯೋ, ಅಂಥವರ ಅಪರೋಕ್ಷಜ್ಞಾನವು ಪರಬ್ರಹ್ಮನನ್ನು ಸೂರ್ಯನಂತೆ ಪ್ರಕಾಶಗೊಳಿಸುತ್ತದೆ.

**ನನು ಜ್ಞಾನಸ್ಯಾಜ್ಞಾನಾವೃತತ್ವೇ ತೇನಾಜ್ಞಾನನಾಶಾಯೋಗಾತ್, ವಿನಾಶಕಾಂತರಸ್ಯ ಚಾಭಾವಾತ್, ಜ್ಞಾನಾರ್ಥಯೋರ್ಯೋಗಸಂನ್ಯಾಸಯೋ-ರ್ವೈಯರ್ಥ್ಯಮಿತ್ಯತ ಆಹ- ಜ್ಞಾನೇನೇತಿ ॥ ದ್ವಿವಿಧಂ ಹಿ ಜ್ಞಾನಂ ಸ್ವರೂಪಂ**

**ವೃತ್ತಿರೂಪಂ ಚೇತಿ । ಯದ್ಯಪಿ ಸ್ವರೂಪಜ್ಞಾನಮಜ್ಞಾನಾವೃತಂ ನಾಜ್ಞಾನ-ನಾಶಕಮ್ । ತಥಾಽಪ್ಯಾತ್ಮನೋ ಭಗವತೋ ಜ್ಞಾನೇನ ಪರೋಕ್ಷವೃತ್ತಿಜ್ಞಾನೇನ ಯೇಷಾಮಜ್ಞಾನಂ ನಾಶಿತಂ ಶಿಥಿ(ಲಿತಂ)ಲಂ ತೇಷಾಮೇವ ಜ್ಞಾನಂ ಭಗವದಪ-ರೋಕ್ಷಜ್ಞಾಂ ತತ್ ಪರಂ ಬ್ರಹ್ಮ ಆದಿತ್ಯವತ್ ಪ್ರಕಾಶಯತಿ ಇತ್ಯರ್ಥಃ ॥ 16 ॥**

**ಅನುವಾದ -** ಜ್ಞಾನವು ಅಜ್ಞಾನದಿಂದ ಆವೃತವಾಗಿದ್ದರೆ, ಜ್ಞಾನದಿಂದ ಅಜ್ಞಾನದ ನಾಶ ಸಾಧ್ಯವಿಲ್ಲ. ಅಜ್ಞಾನವನ್ನು ನಾಶಗೊಳಿಸುವ ಇನ್ನೊಂದು ಸಾಧನ ಇಲ್ಲ, ಆದ್ದರಿಂದ ಜ್ಞಾನಕ್ಕೋಸ್ಕರ ಹೇಳಿದ ಯೋಗ, ಸಂನ್ಯಾಸಗಳು ವ್ಯರ್ಥ ಎಂಬ ಶಂಕೆಗೆ ಉತ್ತರವನ್ನು 'ಜ್ಞಾನೇನ' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. ಜ್ಞಾನವು ಸ್ವರೂಪ ಜ್ಞಾನ ಮತ್ತು ಶಾಸ್ತ್ರಜನ್ಯವಾದ ವೃತ್ತಿಜ್ಞಾನ ಎಂಬುದಾಗಿ ಎರಡುವಿಧ. ಇದರಲ್ಲಿ ಸ್ವರೂಪಜ್ಞಾನವು ಅಜ್ಞಾನದಿಂದ ಆವೃತವಾಗಿದ್ದು ಅಜ್ಞಾನಕ್ಕೆ ನಾಶಕವಾಗುವುದಿಲ್ಲ. ಆದರೂ **ಆತ್ಮನಃ**= ಭಗವಂತನ, **ಜ್ಞಾನೇನ**= ಪರೋಕ್ಷವಾದ ವೃತ್ತಿಜ್ಞಾನದಿಂದ, **ಯೇಷಾಂ**= ಯಾರ ಅಜ್ಞಾನವು, **ನಾಶಿತಂ**= ಶಿಥಿಲವಾಗಿದೆಯೋ, **ತೇಷಾಮೇವ**= ಅವರ, **ಜ್ಞಾನಂ**= ಭಗವಂತನ ಅಪರೋಕ್ಷಜ್ಞಾನವು, **ತತ್**= ಆ, **ಪರಂ**= ಭಗವಂತನನ್ನು , **ಆದಿತ್ಯವತ್** = ಸೂರ್ಯನಂತೆ **ಪ್ರಕಾಶಯತಿ** = ಪ್ರಕಾಶಿಸುತ್ತದೆ. ॥ 16 ॥

**ವಿವರಣೆ -** ಹಿಂದಿನ ಶ್ಲೋಕದಲ್ಲಿ ಜೀವರ ಜ್ಞಾನವು ಅಜ್ಞಾನಾವೃತವಾಗಿದೆ. ಆದ್ದರಿಂದ ಭಗವಂತ ಸರ್ವತ್ರವ್ಯಾಪ್ತನಾಗಿ ಇದ್ದರೂ ಜೀವ ಭಗವಂತನನ್ನು ಕಾಣುವುದಿಲ್ಲ ಎಂದು ಹೇಳಿದ್ದಾರೆ. ಇಲ್ಲಿ ಒಂದು ಆಕ್ಷೇಪ. ಒಂದು ವೇಳೆ ಜೀವನ ಜ್ಞಾನವು ಅಜ್ಞಾನದಿಂದ ಆವೃತವಾಗಿದ್ದರೆ ಜೀವನ ಅಜ್ಞಾನ ನಾಶವಾಗಲು ಸಾಧ್ಯವೇ ಇಲ್ಲ. ಅಜ್ಞಾನದ ನಾಶ, ಬೆಳಕಿನಿಂದ ಕತ್ತಲೆ ನಾಶ ಇದ್ದಹಾಗೆ ಜ್ಞಾನದಿಂದಲೇ ಸಾಧ್ಯ . ಜ್ಞಾನವು ಅಜ್ಞಾನಾವೃತವಾದರೆ ಆ ಜ್ಞಾನವು ಅಜ್ಞಾನ ನಾಶಕತ್ವಶಕ್ತಿಯನ್ನು ಕಳೆದುಕೊಂಡಿದೆ. ಇಂಥಹ ಜ್ಞಾನದಿಂದ ಅಜ್ಞಾನ ನಾಶ ಹೇಗೆ ಸಾಧ್ಯ ? ಆದ್ದರಿಂದ ಜ್ಞಾನವನ್ನು ಪಡೆಯಲು ಸಾಧನ ಎಂದು ಹೇಳಿದ ಯೋಗ ಮತ್ತು ಸಂನ್ಯಾಸಗಳು ವ್ಯರ್ಥ. ಇದಕ್ಕೆ ಸಮಾಧಾನ. ಜೀವನಿಗೆ ಎರಡು ಜ್ಞಾನ ಇದೆ. ಒಂದು ಸ್ವರೂಪಜ್ಞಾನ ಇನ್ನೊಂದು ಶಾಸ್ತ್ರದಿಂದ ಬರುವ ಪರೋಕ್ಷ ಜ್ಞಾನ ಅಂದರೆ ವೃತ್ತಿ ಜ್ಞಾನ. ಇದರಲ್ಲಿ ಸ್ವರೂಪಜ್ಞಾನವು ಅಜ್ಞಾನಾವೃತವಾಗಿದೆ. ಆದ್ದರಿಂದ ಆ ಸ್ವರೂಪಜ್ಞಾನವು ಅಜ್ಞಾನ ನಾಶಕತ್ವ ಶಕ್ತಿಯನ್ನು ಕಳೆದು ಕೊಂಡಿರುವುದರಿಂದ ಅಜ್ಞಾನನಾಶಕವಾಗುವುದಿಲ್ಲ. ಆದರೆ ಪರೋಕ್ಷಜ್ಞಾನ ಅಂದರೆ ಶಾಸ್ತ್ರದಿಂದ ಬರುವ ವೃತ್ತಿಜ್ಞಾನವು ಅಜ್ಞಾನವನ್ನು ಶಿಥಿಲಗೊಳಿಸುತ್ತದೆ. ಇಂಥಹ ಪರೋಕ್ಷಜ್ಞಾನವನ್ನು ಪಡೆಯಲು ಸಂನ್ಯಾಸ, ಯೋಗಗಳು ಆವಶ್ಯಕ. ಸಂನ್ಯಾಸ, ಯೋಗಗಳಿಂದ ಪರೋಕ್ಷ ಜ್ಞಾನವನ್ನು ಪಡೆದು , ಅದರಿಂದ ಅಜ್ಞಾನವನ್ನು ಕಳೆದುಕೊಂಡು ಭಗವಂತನ ಅಪರೋಕ್ಷವನ್ನು ಪಡೆಯಬೇಕು.

**ತದ್‌ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ।**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥ 17 ॥**

**ಅರ್ಥ** - ಶ್ರವಣ ಮನನಾದಿಗಳನ್ನು ಪುನಃ ಪುನಃ ಮಾಡುತ್ತ ಭಗವಂತನಲ್ಲಿ ಆಸಕ್ತವಾದ ಬುದ್ಧಿವುಳ್ಳ, ಭಗವಂತನೇ ನನಗೆ ಸ್ವಾಮಿ ಎಂದು ತಿಳಿದಿರುವ, ಭಗವಂತನಲ್ಲಿಯೇ ಸ್ಥಿರವಾದ ಮನಸ್ಸುಳ್ಳ , ಭಗವಂತನನ್ನೇ ಮುಖ್ಯ ಆಶ್ರಯ ಎಂದು ತಿಳಿದಿರುವ ಜ್ಞಾನಿಗಳು, ಅಪರೋಕ್ಷ ಜ್ಞಾನದಿಂದ ಸಂಪೂರ್ಣವಾಗಿ ಪಾಪಗಳನ್ನು ಕಳೆದುಕೊಂಡು ಮುಕ್ತಿಯನ್ನು ಹೊಂದುತ್ತಾರೆ.

**ಅಪರೋಕ್ಷಜ್ಞಾನಾವ್ಯವಹಿತಸಾಧನಮಾಹ- ತದ್‌ಬುದ್ಧಯ ಇತಿ ॥ ನ ಸಕೃತ್ಪರೋಕ್ಷಜ್ಞಾನೇನಾಲಂ ಕಿಂತು 'ಓಂ ಆವೃತ್ತಿರಸಕೃದುಪದೇಶಾತ್ ಓಂ' (ಬ್ರ.ಸೂ.4-1-1) ಇತ್ಯುಕ್ತದಿಶಾ ಪುನಃ ಪುನಸ್ತತ್ರ ಹರೌ ಬುದ್ಧಿರ್ಯೇಷಾಂ ತೇ ತದ್‌ಬುದ್ಧಯಃ । ಸ ಏವ ಆತ್ಮಾ ಆದಾನಾದಿಕರ್ತಾ ಸ್ವಾಮೀ ಯೇಷಾಂ ತೇ ತದಾತ್ಮಾನಃ । ತನ್ನಿಷ್ಠಾಸ್ತಸ್ಮಿನ್ನಚಂಚಲಾಃ । ಸ ಏವ ಪರಮಯನಂ ಯೇಷಾಂ ತೇ ತತ್ಪರಾಯಣಾಃ । ತಥಾ ಜ್ಞಾನಿನಃ ಸಂತಃ । ಅತ ಏವ ಚ ಜ್ಞಾನನಿರ್ಧೂತಕಲ್ಮಷಾಃ ಭಗವದಪರೋಕ್ಷಜ್ಞಾನೇನ ನಿರ್ಧೂತ- ಪಾಪ್ಮಾನೋಽಪುನರಾವೃತ್ತಿಂ ಮುಕ್ತಿಂ ಗಚ್ಛಂತಿ ॥ 17 ॥**

**ಅನುವಾದ**- ಅಪರೋಕ್ಷಜ್ಞಾನಕ್ಕೆ ಸಾಕ್ಷಾತ್ ಸಾಧನವನ್ನು **'ತದ್‌ಬುದ್ಧಯ'** ಎಂಬ ಶ್ಲೋಕ ದಿಂದ ಹೇಳುತ್ತಿದ್ದಾನೆ. ಒಂದು ಬಾರಿ ಶಾಸ್ತ್ರಗಳ ಶ್ರವಣ ಮನನಗಳು ಸಾಲದು. **'ಆವೃತ್ತಿರಸಕೃದುಪದೇಶಾತ್'** ಎಂಬ ಬ್ರಹ್ಮಸೂತ್ರದಲ್ಲಿ ಹೇಳಿದಂತೆ, **ಪುನಃ ಪುನಃ**= ಮತ್ತೆ ಮತ್ತೆ, **ತತ್ರ**= ಭಗವಂತನಲ್ಲಿ , **ಯೇಷಾಂ ಬುದ್ಧಿಃ**= ಯಾರ ಬುದ್ಧಿ ಇದೆಯೋ, **ತೇ**= ಅವರೇ ಭಗವಂತನಲ್ಲಿ ಆಸಕ್ತವಾದ ಬುದ್ಧಿವುಳ್ಳವರು. ಯಾರಿಗೆ ಆ ಭಗವಂತನೇ, **ಆತ್ಮಾ**= ಆದಾನಾದಿ ಕರ್ತೃ ಆಗಿದ್ದಾನೋ ಅಂದರೆ ಸ್ವಾಮಿಯೋ ಅವರು ತದಾತ್ಮರು, **ತನ್ನಿಷ್ಠಾಃ**= ಭಗವಂತನಲ್ಲಿ ಸ್ಥಿರವಾದ ಮನಸ್ಸುಳ್ಳವರು. ಆ ಭಗವಂತನೇ ಯಾರಿಗೆ ಮುಖ್ಯ ಆಶ್ರಯನೋ ಅವರು ತತ್ಪರಾಯಣರು. ಅಂದರೆ ಹಾಗೇ ತಿಳಿದು ಆ ಜ್ಞಾನದಿಂದ, **ಜ್ಞಾನನಿರ್ಧೂತಕಲ್ಮಷಾಃ**= ಭಗವಂತನ ಅಪರೋಕ್ಷಜ್ಞಾನದಿಂದ ಸಂಪೂರ್ಣವಾಗಿ ಪಾಪವನ್ನು ಕಳೆದುಕೊಂಡವರು, **ಅಪುನರಾವೃತ್ತಿಂ**= ಮೋಕ್ಷವನ್ನು , **ಗಚ್ಛಂತಿ** = ಹೊಂದುತ್ತಾರೆ. ॥ 17 ॥

**ವಿವರಣೆ**- ಹಿಂದಿನ ಶ್ಲೋಕದಲ್ಲಿ ಅಪರೋಕ್ಷಜ್ಞಾನಕ್ಕೆ ಪರೋಕ್ಷಜ್ಞಾನವು ಕಾರಣ ಎಂದು ಹೇಳಿದ್ದಾನೆ. ಆದರೆ ಪರೋಕ್ಷಜ್ಞಾನ ಬಂದ ಕೂಡಲೇ ಅಂದರೆ ಶಾಸ್ತ್ರವನ್ನು ಓದಿ ತಿಳಿದಕೂಡಲೇ

ಭಗವಂತನ ಅಪರೋಕ್ಷ ಜ್ಞಾನ ಆಗುವುದಿಲ್ಲ. ಆದ್ದರಿಂದ ಶಾಸ್ತ್ರದಿಂದ ಬರುವ ಜ್ಞಾನವು ಭಗವಂತನ ಅಪರೋಕ್ಷಜ್ಞಾನಕ್ಕೆ ನೇರಕಾರಣವಲ್ಲ. ಪರೋಕ್ಷಜ್ಞಾನವನ್ನು ಪಡೆದು ಈ ಶ್ಲೋಕದಲ್ಲಿ ಹೇಳಿದ ಸಾಧನಗಳನ್ನು ಹೊಂದಿದಾಗ ಭಗವಂತನ ದರ್ಶನವಾಗುತ್ತದೆ.

## ಜ್ಞಾನಿಗಳ ಸಮದರ್ಶನ

**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥ 18 ॥**

**ಅರ್ಥ** – ಪರೋಕ್ಷ ಜ್ಞಾನಿಗಳು ವಿದ್ಯಾ ವಿನಯಗಳಿಂದ ಕೂಡಿದ ಬ್ರಾಹ್ಮಣನಲ್ಲಿ, ಗೋವುಗಳಲ್ಲಿ, ಆನೆಗಳಲ್ಲಿ, ನಾಯಿಯಲ್ಲಿ ಮತ್ತು ಚಂಡಾಲನಲ್ಲಿಯೂ ಇರುವ ಭಗವಂತನನ್ನು , ಗುಣಪೂರ್ಣ ಎಂಬ ವಿಷಯದಲ್ಲಿ ಮತ್ತು ದೋಷರಹಿತ ಎಂಬ ವಿಷಯದಲ್ಲಿಯೂ ತಾರತಮ್ಯ ಇಲ್ಲದವನು ಎಂದು ತಿಳಿಯುತ್ತಾರೆ.

**ಪರಮೇಶ್ವರರೂಪಾಣಾಂ ಸರ್ವತ್ರ ಸಾಮ್ಯದರ್ಶನಂ ಚಾಪರೋಕ್ಷಜ್ಞಾನ-ಸಾಧನಮಿತ್ಯಾಶಯವಾನಾಹ- ವಿದ್ಯೇತಿ ॥ ಪಂಡಿತಾಃ ಪರೋಕ್ಷಜ್ಞಾನಿನಃ ವಿದ್ಯಾ-ವಿನಯಸಂಪನ್ನಬ್ರಾಹ್ಮಣಾದಿಷು ವಿಷಮೇಷು ಸ್ಥಿತಂ ಹರಿಂ ಸಮಂ ಗುಣೇಷು ದೋಷಾಭಾವೇ ಚ ಸಮಂ ತಾರತಮ್ಯಾಭಾವಂ ಚ ಪಶ್ಯಂತೀತಿ ಸಮದರ್ಶಿನ ಇತ್ಯರ್ಥಃ । ಅಸ್ಯ ಶ್ಲೋಕಸ್ಯ ಭಗವದ್ವಿಷಯತಾ 'ನಿರ್ದೋಷಂ ಹೀತ್ಯು'ತ್ತರ-ವಾಕ್ಯಗಮ್ಯಾ, ಅಪರೋಕ್ಷಜ್ಞಾನಹೇತುತಾ ಚ ಪ್ರಕರಣಗಮ್ಯೇತಿ ಜ್ಞೇಯಮ್ ।**
**॥ 18 ॥**

**ಅನುವಾದ**- ಭಗವಂತನ ರೂಪಗಳಿಗೆ ಎಲ್ಲಾಕಡೆಯಲ್ಲಿಯೂ ಸಾಮ್ಯವನ್ನು ತಿಳಿಯುವಿಕೆಯು ಅಪರೋಕ್ಷಸಾಧನ ಎಂಬ ಅಭಿಪ್ರಾಯದಿಂದ '**ವಿದ್ಯಾವಿನಯ**' ಎಂಬ ಶ್ಲೋಕವನ್ನು ಹೇಳುತ್ತಿದ್ದಾನೆ. **ಪಂಡಿತಾಃ** = ಪರೋಕ್ಷಜ್ಞಾನಿಗಳು ವಿದ್ಯಾವಿನಯಗಳಿಂದ ಕೂಡಿದ ಬ್ರಾಹ್ಮಣಾದಿಗಳಲ್ಲಿ ಗೋ, ಗಜ, ನಾಯಿ, ಚಂಡಾಲ ಎಂಬ ವಿಷಮ ಜೀವಿಗಳಲ್ಲಿ ಇರುವ ಭಗವಂತನನ್ನು (ಸಮದರ್ಶಿನಃ) **ಸಮಂ** = ಗುಣಗಳ ವಿಷಯದಲ್ಲಿ ಮತ್ತು ದೋಷರಹಿತ ಎಂಬ ವಿಷಯದಲ್ಲಿ **ಸಮಂ**= ತಾರತಮ್ಯ ಇಲ್ಲದವನು ಎಂದು ತಿಳಿಯುವವರು ಸಮದರ್ಶಿಗಳು ಎಂದು ಅರ್ಥ. ಈ ಶ್ಲೋಕದಲ್ಲಿ ಭಗವಂತನಿಗೆ ಸಂಬಂಧಪಟ್ಟ ವಿಚಾರವನ್ನು ಹೇಳುತ್ತಿದ್ದಾರೆ ಎಂಬ ವಿಷಯವು '**ನಿರ್ದೋಷಂ**' ಎಂಬ ಮುಂದಿನ ಶ್ಲೋಕದಿಂದ ತಿಳಿಯುತ್ತದೆ. (ಸಾಮ್ಯವನ್ನು ತಿಳಿಯುವಿಕೆಯು) ಅಪರೋಕ್ಷಜ್ಞಾನಕ್ಕೆ ಸಾಧನ ಎಂಬ ವಿಷಯವು ಪ್ರಕರಣದಿಂದ ಗೊತ್ತಾಗುತ್ತದೆ. ॥ 18 ॥

**ವಿವರಣೆ** – ಈ ಶ್ಲೋಕದಲ್ಲಿ ಯಾವ ವಿಷಯವನ್ನು ಹೇಳುತ್ತಿದ್ದಾರೆ ಏಕೆ ಹೇಳುತ್ತಿದ್ದಾರೆ ಎಂದು ತಿಳಿಯುವುದಿಲ್ಲ. ಆದರೆ ಗುರುರಾಜರು ಇಲ್ಲಿ ಎರಡೂ ಪ್ರಶ್ನೆಗಳಿಗೆ ಉತ್ತರವನ್ನು ನೀಡಿದ್ದಾರೆ. ಈ ಶ್ಲೋಕದಲ್ಲಿ ಭಗವಂತನ ವಿಚಾರವನ್ನೇ ಹೇಳುತ್ತಿದ್ದಾರೆ . ಮುಂದಿನ ಶ್ಲೋಕದಲ್ಲಿ 'ಭಗವಂತನನ್ನು ದೋಷದೂರ ಎಂಬ ವಿಷಯದಲ್ಲಿ ಗುಣಪೂರ್ಣ ಎಂಬ ವಿಷಯದಲ್ಲಿ ತಾರತಮ್ಯ ಇಲ್ಲದವನು ಎಂದು ತಿಳಿದವರು' ಎಂಬುದಾಗಿ ಹೇಳುತ್ತಿರುವುದರಿಂದ ಈ ವಿಷಯ ಸ್ಪಷ್ಟವಾಗುತ್ತದೆ. ಹಿಂದಿನ ಶ್ಲೋಕದಲ್ಲಿ ಅಪರೋಕ್ಷ ಜ್ಞಾನಕ್ಕೆ ಸಾಕ್ಷಾತ್ ಕಾರಣ ಯಾವುದು ಎಂಬುದಾಗಿ ಹೇಳಿದ್ದರಿಂದ ಈ ಶ್ಲೋಕದಲ್ಲಿಯೂ ಅದೇ ವಿಚಾರವನ್ನು ಹೇಳುತ್ತಿದ್ದಾರೆ. ಆದ್ದರಿಂದ ಭಗವದ್ರೂಪಗಳಲ್ಲಿ ಸಾಮ್ಯದ ತಿಳಿಯುವಿಕೆಯೂ ಅಪರೋಕ್ಷಜ್ಞಾನಕ್ಕೆ ಸಾಧನ ಎಂದು ತಿಳಿದು ಬರುತ್ತದೆ.

**ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್‌ಬ್ರಹ್ಮಣಿ ತೇ ಸ್ಥಿತಾಃ ॥ 19 ॥**

**ಅರ್ಥ** – ಯಾರ ಮನಸ್ಸು ಭಗವಂತನ ರೂಪಗಳ ಸಾಮ್ಯದಲ್ಲಿಯೇ ಆಸಕ್ತವಾಗಿದೆಯೋ, ಅವರು ಈ ಜನ್ಮದಲ್ಲಿಯೇ ಹುಟ್ಟು, ಸಾವು, ಸುಖ, ದುಃಖ ರೂಪವಾದ ಸಂಸಾರವನ್ನು ಗೆಲ್ಲುತ್ತಾರೆ. ಭಗವಂತನೇ 'ಸಮ' ಎನಿಸಿದ್ದಾನೆ. ಭಗವಂತನು ಎಲ್ಲಿಯೇ ಇದ್ದರೂ ಒಂದೇ ರೀತಿಯಾಗಿ ದೋಷದೂರನೇ ಆಗಿರುತ್ತಾನೆ. ಇದನ್ನು 'ಸಾಮ್ಯ' ಎನ್ನುತ್ತಾರೆ. ಆದ್ದರಿಂದ ಸಮನಾದ ಭಗವಂತನನ್ನು ತಿಳಿದವರು ಬ್ರಹ್ಮಜ್ಞಾನಿಗಳು.

**ಸಮದರ್ಶಿನಂ ಸ್ತೌತಿ- ಇಹೈವೇತಿ ॥ ಯೇಷಾಂ ಸಾಮ್ಯೇ ಮನಃ ಸ್ಥಿತಂ ತೈರಿಹೈವಾಸ್ಮಿನ್ನೇವ ಜನ್ಮನಿ ಸರ್ಗೋ ಜನ್ಮಾದಿರೂಪಃ ಸಂಸಾರಃ ಜಿತಃ । ದೃಶ್ಯತ್ವೇ-ನೋಕ್ತಂ ಸಮಂ ವಸ್ತು ಕಿಂ, ಕೇನ ಸಾಮ್ಯಮಿತ್ಯತ ಆಹ- ನಿರ್ದೋಷಮಿತಿ ॥ ಸಮಂ ವಸ್ತು ಬ್ರಹ್ಮ, ನಿರ್ದೋಷತ್ವೇನ ಚ ಸಾಮ್ಯಮಿತ್ಯುಕ್ತಂ ಭವತಿ । ತಸ್ಮಾತ್ ಸಮತಯಾ ಸರ್ವತ್ರ ಸ್ಥಿತಸ್ಯ ಬ್ರಹ್ಮತ್ವಾತ್ತೇ ಸಮದರ್ಶಿನೋ ಬ್ರಹ್ಮಣಿ ಸ್ಥಿತಾ ಏವೇತ್ಯರ್ಥಃ । ಬ್ರಹ್ಮಜ್ಞಾನಿನ ಇತಿ ಯಾವತ್ ॥ 19 ॥**

**ಅನುವಾದ**- ಸಾಮ್ಯವನ್ನು ತಿಳಿದ ಜ್ಞಾನಿಗಳನ್ನು 'ಇಹೈವ' ಎಂಬ ಶ್ಲೋಕದಲ್ಲಿ ಶ್ಲಾಘಿಸುತ್ತಿದ್ದಾನೆ. ಯಾರ ಮನಸ್ಸು, ಎಲ್ಲಾಕಡೆಯಲ್ಲಿಯೂ ಭಗವಂತ ಸಮನಾಗಿದ್ದಾನೆ ಎಂಬ ವಿಷಯದಲ್ಲಿ ಸ್ಥಿರವಾಗಿದೆಯೋ ಅವರು , **ಇಹೈವ** = ಈ ಜನ್ಮದಲ್ಲಿಯೇ **ಸರ್ಗಃ**= ಹುಟ್ಟು , ಸಾವು ಮೊದಲಾದ ಸಂಸಾರವನ್ನು ಗೆಲ್ಲುತ್ತಾರೆ. ಸಮನಾಗಿ ತಿಳಿಯಬೇಕು ಎಂದು ಹೇಳಿದ ವಸ್ತು ಯಾವುದು ? ಯಾವ ಧರ್ಮದಿಂದ ಸಾಮ್ಯವನ್ನು ತಿಳಿಯಬೇಕು ಎಂಬುದನ್ನು '**ನಿರ್ದೋಷಂ**' ಎಂಬ ವಾಕ್ಯದಿಂದ

ಹೇಳುತ್ತಿದ್ದಾನೆ. 'ಸಮ ' ಎಂದು ತಿಳಿಯಬೇಕಾದ ವಸ್ತು ಭಗವಂತ. ನಿರ್ದೋಷತ್ವಗುಣದಿಂದ ಸಾಮ್ಯವನ್ನು ತಿಳಿಯಬೇಕು. ಆದ್ದರಿಂದ ಎಲ್ಲಾಕಡೆಗಳಲ್ಲಿ ಗುಣಗಳಿಂದ ಸಮನಾಗಿರುವ ವಸ್ತು ಭಗವಂತನಾದುದರಿಂದ, ತೇ = ಸಾಮ್ಯವನ್ನು ತಿಳಿದವರು ಭಗವಂತನಲ್ಲಿ ಸ್ಥಿತರು ಅಂದರೆ ಬ್ರಹ್ಮಜ್ಞಾನಿಗಳು ಎಂದು ಅರ್ಥ. ॥ 19 ॥

## ಜ್ಞಾನಿ ದ್ವಂದ್ವಾತೀತ

**ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಮ್ ।**
**ಸ್ಥಿರಬುದ್ಧಿರಸಮ್ಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥ 20 ॥**

**ಅರ್ಥ-** ಕಾಮತ್ಯಾಗ ಮಾಡಿದ ಸಂನ್ಯಾಸಿಯು ಭಗವಂತನೇ ಸ್ವತಂತ್ರ ಎಂದು ತಿಳಿದು, ಯಾವಾಗಲೂ ಭಗವಂತನನ್ನು ಸ್ಮರಿಸುತ್ತಾ, ಸ್ಥಿರಬುದ್ಧಿವುಳ್ಳವನಾಗಿ, ತಾನು ಸುಖದುಃಖಗಳನ್ನು ಹೊಂದಲು ಲೌಕಿಕಜನರು ಕಾರಣರು ಎಂಬ ಭ್ರಾಂತಿ ಇಲ್ಲದವನಾಗಿ ಸುಖಸಾಧನವು ಪ್ರಾಪ್ತವಾದರೆ ಹಿಗ್ಗುವುದಿಲ್ಲ. ದುಃಖಸಾಧನವು ಪ್ರಾಪ್ತವಾದರೆ ಉದ್ವೇಗವನ್ನೂ ಹೊಂದುವುದಿಲ್ಲ.

**ಪುನಃ ಸಂನ್ಯಾಸಂ ಪ್ರಪಂಚಯತಿ- ನ ಪ್ರಹೃಷ್ಯೇದಿತಿ ॥ ಪ್ರಿಯಂ ಸುಖಸಾಧನಂ ಪ್ರಾಪ್ಯ ನ ಪ್ರಹೃಷ್ಯೇತ್ ಹರ್ಷಂ ನ ಪ್ರಾಪ್ನುಯಾತ್ । ಅಪ್ರಿಯಂ ಚ ಪ್ರಾಪ್ಯ ನೋದ್ವಿಜೇತ್ ದುಃಖಹೇತುಪ್ರಾಪ್ತಾವಪಿ [1]ಉದ್ವೇಗರೂಪಮನೋಽಧೈರ್ಯಂ ನ ಪ್ರಾಪ್ನುಯಾತ್ । ತತ್ರೋಪಾಯಮಾಹ- ಸ್ಥಿರಬುದ್ಧಿರಿತಿ ॥ ಬುದ್ಧೇಃ- ಸ್ಥೈರ್ಯೇ ಹೇತುರಸಮ್ಮೂಢ ಇತಿ । ಪ್ರಿಯಾಪ್ರಿಯಪ್ರಾಪಣೇ ಲೌಕಿಕೋ ಜನ ಏವ ಸ್ವತಂತ್ರ ಇತಿ ಮಿಥ್ಯಾಜ್ಞಾನಹೀನಃ, ತತ್ರ ಹೇತುರ್ಬ್ರಹ್ಮವಿದಿತಿ । ಬ್ರಹ್ಮೈವ ಸ್ವತಂತ್ರಮಿತಿ ವಿದ್ವಾನ್ । ನೈತಾವತಾಲಂ ಕಿಂತು ಬ್ರಹ್ಮಣಿ ಸ್ಥಿತಃ । ನಿತ್ಯಂ ಬ್ರಹ್ಮಸ್ಮೃತಿಮಾನಿತ್ಯರ್ಥಃ। ॥ 20 ॥**

**ಅನುವಾದ-** ಪುನಃ ಸಂನ್ಯಾಸವನ್ನು '**ನ ಪ್ರಹೃಷ್ಯೇತ್**' ಎಂಬ ಶ್ಲೋಕದಿಂದ ವಿವರಿಸುತ್ತಿದ್ದಾನೆ. **ಪ್ರಿಯಂ**= ಸುಖಸಾಧನವನ್ನು ಹೊಂದಿ, **ನ ಪ್ರಹೃಷ್ಯೇತ್**= ಸಂತೋಷ ಪಡಬಾರದು. **ಅಪ್ರಿಯಂ ಚ ಪ್ರಾಪ್ಯ**= ದುಃಖಸಾಧನವು ಪ್ರಾಪ್ತವಾದರೂ, **ನೋದ್ವಿಜೇತ್**= ಉದ್ವೇಗರೂಪವಾದ ಮನಸ್ಸಿನ ಅಧೈರ್ಯವನ್ನು ಹೊಂದಬಾರದು. ಆ ಅವಸ್ಥೆಗೆ ಉಪಾಯವನ್ನು '**ಸ್ಥಿರಬುದ್ಧಿ**' ಎಂಬ ಭಾಗದಿಂದ ಹೇಳುತ್ತಿದ್ದಾನೆ. ಬುದ್ಧಿಸ್ಥಿರವಾಗಿರಲು ಅಸಂಮೂಢತ್ವವು ಕಾರಣ- ಅಂದರೆ- ನನಗೆ

---
1. ಉದ್ವೇಗರೂಪಮನೋಧೈರ್ಯಮ್

ಸುಖ ದುಃಖಗಳನ್ನು ಉಂಟು ಮಾಡಲು ಲೌಕಿಕ ಜನರೇ ಸ್ವತಂತ್ರರು ಎಂಬ ಭ್ರಮೆ ಇಲ್ಲದಿರುವಿಕೆಯು ಕಾರಣ. ಭ್ರಮೆ ಇಲ್ಲದಿರಲು ಬ್ರಹ್ಮಜ್ಞಾನವು ಕಾರಣ. ಭಗವಂತನೇ ಸ್ವತಂತ್ರ ಎಂದು ತಿಳಿದವನಿಗೆ ಭ್ರಮೆ ಇರುವುದಿಲ್ಲ. ಸ್ವತಂತ್ರ ಎಂದು ಜ್ಞಾನ ಮಾತ್ರಸಾಲದು, **ಬ್ರಹ್ಮಣಿ ಸ್ಥಿತಃ**= ಯಾವಾಗಲೂ ಭಗವಂತನ ಸ್ಮರಣೆವುಳ್ಳವನಾಗಬೇಕು. ।। 20 ।।

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ ।**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ।। 21 ।।**

**ಅರ್ಥ** - ಶಬ್ದ,ರೂಪ, ರಸಾದಿ ವಿಷಯ ಪದಾರ್ಥಗಳನ್ನು ಶ್ರೋತ್ರ, ಚಕ್ಷುರಸನಾದಿ ಇಂದ್ರಿಯಗಳಿಗೆ ಗೋಚರವಾಗದಂತೆ ಮಾಡಿ, ಆ ವಿಷಯ ಪದಾರ್ಥಗಳಲ್ಲಿ ಮನಸ್ಸನ್ನು ಇಡದಿರುವ ಸಂನ್ಯಾಸಿಯು ಯಾವ ಸ್ವರೂಪಸುಖವನ್ನು ಅನುಭವಿಸುತ್ತಾನೋ (ಕೆಲವೊಮ್ಮೆ) ಅಂತಹ ಸ್ವರೂಪಸುಖವನ್ನೇ ಭಗವಂತನ ಧ್ಯಾನರೂಪಯೋಗವುಳ್ಳವನು ಯಾವಾಗಲೂ ಅಭಿವ್ಯಕ್ತವಾದದ್ದನ್ನಾಗಿ ಅನುಭವಿಸುತ್ತಾನೆ.

**'ಸಂನ್ಯಾಸಸ್ತ್ವಿ'ತ್ಯಾದಿನಾ ಸಂನ್ಯಾಸಾದ್ಯೋಗಸ್ಯಾಧಿಕ್ಯೋಕ್ತ್ಯರ್ಥಂ ಯೋಗ-ಹೀನಸಂನ್ಯಾಸಸ್ಯ ವ್ಯರ್ಥತ್ವಂ ಯದುಕ್ತಂ ತದಯುಕ್ತಮ್ । ಕಾಮಾದ್ಯುಪ-ದ್ರವಕ್ಷಯೇ ಸ್ವರೂಪಸುಖಾವಿರ್ಭಾವಸತ್ತ್ವಾದಿತ್ಯತಃ ಸತ್ಯಂ ತದೇವ ಸುಖಂ ಭಗವದ್ಧ್ಯಾನರೂಪಯೋಗೇ ಸತ್ಯಕ್ಷಯಂ ಭವತೀತಿ ಸಂನ್ಯಾಸಾದ್ಯೋಗಸ್ಯ ಪುನರಾಧಿಕ್ಯಮಾಹ- ಬಾಹ್ಯೇತಿ ।। ಸ್ಪೃಶ್ಯಂತ ಇತಿ ಸ್ಪರ್ಶಾಃ ಶಬ್ದಾದ್ಯಾಃ । ತೇಷಾಂ ಬಾಹ್ಯತ್ವಂ ಶ್ರೋತ್ರಾದ್ಯವಿಷಯತ್ವಸಂಪಾದನಂ ತಥಾಕೃತವಿಷಯೇಷು ಅಸಕ್ತ-ಮನಸ್ಕಃ ಸಂನ್ಯಾಸೀತಿ ಯಾವತ್ । ಆತ್ಮನಿ ಸ್ವರೂಪೇ ಯತ್ಸುಖಂ ವಿಂದತ್ಯನು-ಭವತಿ । ಆತ್ಮಸ್ವರೂಪಸ್ಯಾಪಿ ನ ನಿರ್ವಿಶೇಷತ್ವಮಿತಿ ಜ್ಞಾಪನಾಯ ಯತ್ಸುಖಮಿತ್ಯೇವ ವಾಚ್ಯೇ ಆತ್ಮನೀತ್ಯಪ್ಯುಕ್ತಿಃ । ಯದಿತ್ಯುಕ್ತೇಸ್ತದಿತಿ ಲಭ್ಯತೇ । ಸ ಸಂನ್ಯಾಸೀ ಬ್ರಹ್ಮಯೋಗಯುಕ್ತಾತ್ಮಾ ಬ್ರಹ್ಮಣಿ ಯೋಗೋ ಬ್ರಹ್ಮಯೋಗಃ ಧ್ಯಾನಂ ತದ್ಯುಕ್ತಾತ್ಮಾ ತತ್ಸುಖಂ ಕಾಮಾದ್ಯುಪದ್ರವಕ್ಷಯರೂಪಸಂನ್ಯಾಸಾದಾವಿರ್ಭೂತಂ ಸುಖಂ ಅಕ್ಷಯ್ಯಂ ಪುನಸ್ತಿರೋಭಾವಹೀನಮಶ್ನುತೇ ಪ್ರಾಪ್ನೋತೀತ್ಯರ್ಥಃ ।**

**ಅನುವಾದ** - 'ಸಂನ್ಯಾಸಸ್ತು' ಎಂಬ ಆರನೇ ಶ್ಲೋಕದಲ್ಲಿ ಸಂನ್ಯಾಸಕ್ಕಿಂತ ಯೋಗವು ಶ್ರೇಷ್ಠ ಎಂದು ಹೇಳಲು ಯೋಗವಿಲ್ಲದ ಸಂನ್ಯಾಸವು ವ್ಯರ್ಥ ಎಂದು ಹೇಳಿದೆ. ಆದರೆ ಇದು ಸರಿಯಲ್ಲ ಏಕೆಂದರೆ ಕಾಮ ಮೊದಲಾದ ದೋಷಗಳ ನಾಶರೂಪವಾದ ಸಂನ್ಯಾಸದಿಂದಲೂ ಸ್ವರೂಪ

ಆನಂದ ಆವಿರ್ಭಾವ ಆಗುತ್ತದೆ ಎಂದು ಆಕ್ಷೇಪಿಸಿದರೆ- ದೋಷಗಳ ನಾಶರೂಪವಾದ ಸಂನ್ಯಾಸದಿಂದ ಸ್ವರೂಪಸುಖದ ಆವಿರ್ಭಾವವಾದರೂ ಆ ಸುಖವು ಅಕ್ಷಯವಾಗಲು ಭಗವದ್ಧ್ಯಾನರೂಪವಾದ ಯೋಗವು ಆವಶ್ಯಕ ಎಂದು, ಸಂನ್ಯಾಸಕ್ಕಿಂತಲೂ ಯೋಗವು ಶ್ರೇಷ್ಠ ಎಂಬುದನ್ನು ಪುನಃ '**ಬಾಹ್ಯ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. **ಸ್ಪೃಶ್ಯಂತೇ ಇತಿ ಸ್ಪರ್ಶಾಃ** = ಶಬ್ದ ಮೊದಲಾದ ವಿಷಯಗಳು, ಅವುಗಳು, **ಬಾಹ್ಯ**= ಎಂದರೆ ಕಿವಿಮೊದಲಾದ ಇಂದ್ರಿಯಗಳಿಗೆ ವಿಷಯವಾಗದಿರುವಿಕೆ. ಇಂಥಹ ಶ್ರವಣಾದಿ ಇಂದ್ರಿಯಗಳಿಗೆ ವಿಷಯಗಳಾಗದ ಶಬ್ದಾದಿಗಳಲ್ಲಿ ಆಸಕ್ತವಾಗದ ಮನಸ್ಸುಳ್ಳ ಎಂದರೆ ಸಂನ್ಯಾಸೀ ಎಂದು ಅರ್ಥ. **ಆತ್ಮನಿ** = ತನ್ನ ಸ್ವರೂಪದಲ್ಲಿ ಯಾವ ಸುಖವನ್ನು , **ವಿಂದತಿ**= ಅನುಭವಿಸುತ್ತಾನೋ, ಆತ್ಮ ಸ್ವರೂಪವಾದ ಸುಖವೂ ನಿರ್ವಿಶೇಷವಲ್ಲ (ಭೇದ ಕಾರ್ಯಕಾರಿಯಾದ ವಿಶೇಷವುಳ್ಳದ್ದು) ಎಂದು ತಿಳಿಸಲು 'ಯಾವ ಸುಖವನ್ನು' ಎಂದಿಷ್ಟೇ ಹೇಳದೆ 'ತನ್ನ ಸ್ವರೂಪದಲ್ಲಿ' ಎಂದೂ ಹೇಳಿದ್ದಾನೆ. **ಯತ್** ಎಂಬ ಶಬ್ದವನ್ನು ಹೇಳಿದ್ದರಿಂದ, **ತತ್** ಎಂಬುದಾಗಿ ಅರ್ಥಾತ್ ಲಬ್ಧವಾಗುತ್ತದೆ. ಆ ಸಂನ್ಯಾಸಿಯು, **ಬ್ರಹ್ಮಯೋಗಯುಕ್ತಾತ್ಮಾ**= ಬ್ರಹ್ಮನಲ್ಲಿ ಯೋಗವೇ ಬ್ರಹ್ಮಯೋಗ ಅಂದರೆ ಧ್ಯಾನ, ಅದರಿಂದ ಕೂಡಿದ ಮನಸ್ಸುಳ್ಳವನು, **ತತ್ ಸುಖಂ**= ಕಾಮಾದಿ ಉಪದ್ರವಗಳ ನಾಶರೂಪ ಸಂನ್ಯಾಸದಿಂದ ಆವಿರ್ಭೂತವಾದ ಸುಖವನ್ನು , **ಅಕ್ಷಯ್ಯಂ**= ಯಾವಾಗಲೂ ಅಭಿವ್ಯಕ್ತವಾದುದನ್ನಾಗಿ ಹೊಂದುತ್ತಾನೆ.

**ವಿವರಣೆ-** ಶಬ್ದಾದಿವಿಷಯಗಳಲ್ಲಿ ಆಸಕ್ತವಾಗದ ಮನಸ್ಸುಳ್ಳ ಸಂನ್ಯಾಸಿಯು ತನ್ನ ಸ್ವರೂಪಸುಖವನ್ನು ಪಡೆಯುತ್ತಾನೆ. ಆದರೆ ಆ ಸ್ವರೂಪಸುಖವು ಯಾವಾಗಲೂ ಸಂನ್ಯಾಸಿಗೆ ಅಭಿವ್ಯಕ್ತವಾಗುವುದಿಲ್ಲ. ಯೋಗದಿಂದ- ಧ್ಯಾನದಿಂದ ಕೂಡಿದ ಮನಸ್ಸುಳ್ಳ ಯೋಗಿಗೆ ಕಾಮಾದಿ ಉಪದ್ರವನಾಶರೂಪ ಸಂನ್ಯಾಸದಿಂದ ಆವಿರ್ಭೂತವಾದ ಸುಖ ಯಾವಾಗಲೂ ಅಭಿವ್ಯಕ್ತವಾಗುತ್ತದೆ. ಆದ್ದರಿಂದ ಸಂನ್ಯಾಸಕ್ಕಿಂತ ಯೋಗ ಶ್ರೇಷ್ಠ .

**ಯದ್ವಾ 'ಯೋಗಯುಕ್ತೋ ಮುನಿರ್ಬ್ರಹ್ಮೇ'ತ್ಯಾದಿನಾ ಯೋಗರೂಪ-ಸಂನ್ಯಾಸಸ್ಯ ಯನ್ನಿಶ್ಶ್ರೇಯಸಕರತ್ವಮುಕ್ತಂ ತದುಪಪಾದ್ಯತೇ- ಬಾಹ್ಯೇತಿ ॥ ಸಂಸಾರೇಽಪ್ಯಾತ್ಮಸ್ಮರಣರೂಪಾಲ್ಪಯೋಗಯುಕ್ತಃ ಸಂನ್ಯಾಸೀ ಸುಖಂ ವಿಂದತಿ ಯದಾ ತದಾ ಧ್ಯಾನಾದಿಮಹಾಯೋಗಾದಿಯುಕ್ತೋ ಮೋಕ್ಷಾದಿನಿಶ್ಶ್ರೇಯಸಂ ವಿಂದತೀತಿ ಕಿಮು ವಾಚ್ಯಮಿತ್ಯರ್ಥಃ ॥ 21 ॥**

**ಅನುವಾದ** - ಅಥವಾ '**ಯೋಗಯುಕ್ತೋ ಮುನಿರ್ಬ್ರಹ್ಮ**' ಎಂಬಿವೇ ಮೊದಲಾದ ಶ್ಲೋಕಗಳಲ್ಲಿ ಯೋಗಸ್ವರೂಪ ಪಡೆದ ಸಂನ್ಯಾಸವು ಮೋಕ್ಷಕ್ಕೆ ಸಾಧನ ಎಂದು ಹೇಳಿದೆ. ಅದನ್ನು

'ಬಾಹ್ಯಸ್ಪರ್ಶ' ಎಂಬ ಈ ಶ್ಲೋಕದಿಂದ ಸಮರ್ಥಿಸುತ್ತಿದ್ದಾನೆ. ಸಂಸಾರಾವಸ್ಥೆಯಲ್ಲಿಯೂ ಭಗವಂತನ ಸ್ಮರಣರೂಪವಾದ ಅಲ್ಪಯೋಗದಿಂದ ಕೂಡಿದ ಸಂನ್ಯಾಸಿಯೇ ಸುಖವನ್ನು ಹೊಂದುತ್ತಾನೆ ಎಂದ ಮೇಲೆ ಧ್ಯಾನಾದಿ ಮಹಾಯೋಗದಿಂದ ಕೂಡಿದವನು ಮೋಕ್ಷಾದಿ ಫಲವನ್ನೇ ಹೊಂದುತ್ತಾನೆ ಎಂದು ಏನು ಹೇಳಬೇಕು ? ॥ 21 ॥

## ವಿಷಯಸುಖ ದುಃಖಕ್ಕೆ ಕಾರಣ

**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ॥**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥ 22 ॥**

**ಅರ್ಥ** – ಕುಂತಿಯ ಕುಮಾರ ! ಯಾವ ಸುಖಾನುಭವಗಳು ವಿಷಯಗಳ ಸಂಪರ್ಕದಿಂದ ಹುಟ್ಟಿದ್ದಾವೋ, ಆ ಸುಖಾನುಭವಗಳು ಉತ್ಪತ್ತಿನಾಶವುಳ್ಳವುಗಳಾದ್ದರಿಂದ ದುಃಖಕ್ಕೆ ಕಾರಣಗಳಾಗಿವೆ. ಜ್ಞಾನಿಯಾದವನು ವಿಷಯಸಂಪರ್ಕದಿಂದ ಹುಟ್ಟುವ ಸುಖಗಳಲ್ಲಿ ಆಸಕ್ತಿಯನ್ನು ಹೊಂದುವುದಿಲ್ಲ.

**ಕಾಮಾದಿವರ್ಜನರೂಪಸಂನ್ಯಾಸಾರ್ಥಂ ಕಾಮಭೋಗಂ ನಿಂದತಿ- ಯೇ ಹೀತಿ ॥ ಯೇ ಹಿ ಸಂಸ್ಪರ್ಶಜಾಃ ವಿಷಯಸಂಬಂಧಸಂಭೂತಾಃ ಭೋಗಾಃ ಸುಖಾನುಭವಾಃ ತೇ ದುಃಖಯೋನಯ ಏವ । ಕುತ ಇತ್ಯತ ಉಕ್ತಮ್- ಆದ್ಯಂತವಂತ ಇತಿ ॥ ಉತ್ಪತ್ತಿವಿನಾಶವತ್ತ್ವಾದಿತ್ಯರ್ಥಃ । ಬುಧೋ ಜ್ಞಾನೀ ತೇಷು ವಿಷಯಭೋಗೇಷು ನ ರಮತೇ ಸಕ್ತಿಂ ನ ಕರೋತೀತ್ಯರ್ಥಃ ॥ 22 ॥**

**ಅನುವಾದ** – ವಿಷಯಪದಾರ್ಥಗಳ ತ್ಯಾಗರೂಪ ಸಂನ್ಯಾಸಕ್ಕಾಗಿ ವಿಷಯಪದಾರ್ಥಗಳ ಭೋಗವನ್ನು **'ಯೇ ಹಿ'** ಎಂಬ ಶ್ಲೋಕದಿಂದ ನಿಂದಿಸುತ್ತಾನೆ. ಯಾವುಗಳು, **ಸಂಸ್ಪರ್ಶಜಾಃ** = ವಿಷಯಸಂಪರ್ಕದಿಂದ ಹುಟ್ಟಿದ, **ಭೋಗಾಃ** = ಸುಖಾನುಭವಗಳೋ ಅವುಗಳು ದುಃಖಕ್ಕೆ ಕಾರಣಗಳು.ಏಕೆ ? ಅದನ್ನು ವಿವರಿಸಲು **'ಆದ್ಯಂತವಂತಃ'** ಎಂದು ಹೇಳುತ್ತಿದ್ದಾನೆ. ಉತ್ಪತ್ತಿ-ನಾಶವುಳ್ಳವುಗಳಾದ್ದರಿಂದ ಎಂದರ್ಥ. **ಬುಧಃ**= ಜ್ಞಾನಿಯು **ತೇಷು**= ವಿಷಯಸಂಪರ್ಕದಿಂದ ಹುಟ್ಟಿದ ಭೋಗಗಳಲ್ಲಿ , **ನ ರಮತೇ**= ಆಸಕ್ತನಾಗುವುದಿಲ್ಲ ॥ 22 ॥

## ಸಾಧನೆಯಲ್ಲಿ ವಿಲಂಬ ಸಲ್ಲ

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥ 23 ॥**

**ಅರ್ಥ-** ಯಾವ ಸಾಧಕನು ಈ ಮನುಷ್ಯ ಶರೀರದಲ್ಲಿಯೇ ಮರಣಕ್ಕಿಂತ ಮೊದಲು ಕಾಮಕ್ರೋಧಗಳಿಂದ ಉಂಟಾದ ಮನಸ್ಸಿನ ಚಾಂಚಲ್ಯವನ್ನು ಸಹಿಸಲು ಶಕ್ತನಾಗುತ್ತಾನೋ ಅಂಥಹ ಜ್ಞಾನೋಪಾಯವುಳ್ಳ ಸಾಧಕನು ಸುಖಿಯಾಗುತ್ತಾನೆ.

**ಉಕ್ತರೂಪಸಂನ್ಯಾಸಾರ್ಥಂ ಕಾಮಭೋಗತ್ಯಾಗಂ ಪ್ರಶಂಸತಿ- ಶಕ್ನೋತೀತಿ ॥ ಯಃ ಇಹೈವ ಮಾನುಷೇ ದೇಹೇ ಶರೀರವಿಮೋಕ್ಷಣಾತ್ ಪ್ರಾಕ್ ಕಾಮ-ಕ್ರೋಧೋದ್ಭವಂ ವೇಗಂ ಮನಸೋಽನವಸ್ಥಾನಂ ಸೋಢುಂ ಶಕ್ನೋತಿ , ಸ ನರಃ ಯುಕ್ತಃ ಜ್ಞಾನೋಪಾಯವಾನ್ ಸುಖೀ ಚ ಭವತಿ । ಮಾನುಷದೇಹ ಏವ ಕಾಮಾದಿಜವೇಗಃ ಸೋಢುಂ ಸುಕರೋ ನಾನ್ಯದೇಹ ಇತಿ ಜ್ಞಾಪನಾಯ ಇಹೈ-ವೇತ್ಯುಕ್ತಿಃ । ಅತೋಽತ್ರೈವ ತತ್ಸಹನಾಯ ಪ್ರಯತಿತವ್ಯಮಿತಿ ಭಾವಃ ॥ 23 ॥**

**ಅನುವಾದ-** ಹಿಂದೆ ಹೇಳಿದ ಸಂನ್ಯಾಸಕ್ಕಾಗಿ ವಿಷಯ ಪದಾರ್ಥಗಳ ಭೋಗದ ತ್ಯಾಗವನ್ನು **'ಶಕ್ನೋತಿ'** ಎಂಬ ಶ್ಲೋಕದಿಂದ ಪ್ರಶಂಸಿಸುತ್ತಿದ್ದಾನೆ. ಯಾವ ಸಾಧಕನು **ಇಹೈವ**= ಮನುಷ್ಯ ದೇಹದಲ್ಲಿ ದೇಹತ್ಯಾಗರೂಪ ಮರಣಕ್ಕಿಂತ ಮೊದಲು ಕಾಮ-ಕ್ರೋಧಗಳಿಂದ ಹುಟ್ಟಿದ , **ವೇಗಂ**= ಮನಸ್ಸಿನ ಚಾಂಚಲ್ಯವನ್ನು ಸಹಿಸಲು ಶಕ್ತನಾಗುತ್ತಾನೋ ಅಂಥಹ ಜ್ಞಾನೋಪಾಯವುಳ್ಳ ಸಾಧಕನು ಸುಖಿಯಾಗುತ್ತಾನೆ. ಮನುಷ್ಯದೇಹದಲ್ಲಿಯೇ ಕಾಮಾದಿಜನ್ಯವಾದ ಮನಸ್ಸಿನ ಚಾಂಚಲ್ಯವನ್ನು ತಡೆಯಲು ಸುಲಭ. ಇತರ ಪ್ರಾಣಿಗಳ ದೇಹದಲ್ಲಿ ಸುಲಭವಲ್ಲ ಎಂದು ತಿಳಿಸಲು **'ಇಹೈವ'** ಎಂದು ಹೇಳಲಾಗಿದೆ. ಆದ್ದರಿಂದ ಈ ಮನುಷ್ಯ ದೇಹದಲ್ಲಿಯೇ ಮನಸ್ಸಿನ ಚಾಂಚಲ್ಯವನ್ನು ತಡೆಯಲು ಪ್ರಯತ್ನಿಸಬೇಕು ಎಂದು ತಾತ್ಪರ್ಯ. ॥ 23 ॥

**ಯೋಽಂತಃಸುಖೋಽಂತರಾರಾಮಸ್ತಥಾಽಂತರ್ಜ್ಯೋತಿರೇವ ಯಃ ।**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥ 24 ॥**

**ಅರ್ಥ-** ಯಾರು ಕಾಮಾದಿ ಉಪದ್ರವಗಳ ನಾಶದಿಂದ ಅಭಿವ್ಯಕ್ತವಾದ ಸ್ವರೂಪ ಸುಖವುಳ್ಳವನೋ, ಯಾರು ಅಂತಃಕರಣದಲ್ಲಿ ಭಗವಂತನ ದರ್ಶನದಿಂದ ಉಂಟಾದ ಸುಖವುಳ್ಳವನೋ, ಯಾರು ಅಂತರಂಗದಲ್ಲಿ ಭಗವಂತನನ್ನೇ ಕಾಣುತ್ತಿದ್ದಾನೋ, ಅಂತಹ ಯೋಗಿಯು ಭಗವಂತನಲ್ಲಿಯೇ ಮನಸ್ಸನ್ನು ಇಟ್ಟವನಾಗಿ ಪ್ರಾಕೃತ ಶರೀರರಹಿತನಾದ ಪರಮಾತ್ಮನನ್ನು ತಿಳಿಯುತ್ತಾನೆ.

**ಜ್ಞಾನಿಲಕ್ಷಣಂ ಪ್ರಪಂಚಯತ್ಯುತ್ತರೈಃ ಶ್ಲೋಕೈಃ । ಯೋಽಂತಃ-ಸುಖಃ ಕಾಮಾದ್ಯುಪದ್ರವಕ್ಷಯಾಭಿವ್ಯಕ್ತಸ್ವರೂಪಸುಖಃ ಅಂತರಾರಾಮಃ**

**ಭಗವದ್ದರ್ಶನ ಜನ್ಯಸುಖವಾನ್ । ಉಕ್ತಜ್ಞಾನಿಲಕ್ಷಣದ್ವಯೇ ಹೇತುಮಾಹ- ಅಂತರ್ಜ್ಯೋತಿರಂತರಭಿವ್ಯಕ್ತಭಗವತ್ಸ್ವರೂಪೋ ಯತ ಇತಿ ॥ ಏತೇನಾಂತ- ರ್ಜ್ಯೋತಿಷ್ಟ್ವಮೇವ ಜ್ಞಾನಿತ್ವಮೇತತ್ಕಥಂ ಜ್ಞಾನಿಲಕ್ಷಣಮಿತಿ ನಿರಸ್ತಮ್ । ತತ್ರ ಹೇತುಸಮರ್ಪಕತ್ವಾದಸ್ಯೇತಿ । ಅಸಂಪ್ರಜ್ಞಾತಸಮಾಧಿಸ್ಥಸ್ಯ ಬಾಹ್ಯಾದರ್ಶನಾ- ದೇವಶಬ್ದಃ । ಸಂಪ್ರಜ್ಞಾತಸಮಾಧೌ ಅನ್ಯದರ್ಶನಸತ್ವೇಽಪಿ ತಸ್ಯ ವಿಕ್ಷೇಪಾಹೇತು- ತ್ವಾದದರ್ಶನಕಲ್ಪಮೇವ ತದಿತಿ ಭಾವಃ । ಏವಂ ಚಾಸ್ಯಾನ್ಯವ್ಯವಚ್ಛೇದ- ಪ್ರಧಾನತ್ವಾದನ್ಯದರ್ಶನಹೀನಾಂತರ್ಜ್ಯೋತಿಷ್ಟ್ವಮಿತ್ಯೇವಂ ಲಕ್ಷಣೋಕ್ತಿಪರ- ತ್ವೇಽಪಿ ನ ದೋಷಃ । ಅಂತಃಸುಖತ್ವಾದೌ ಹೇತುಸ್ತು 'ಸ ಯೋಗೀ ಬ್ರಹ್ಮಭೂತೋ ಬ್ರಹ್ಮಣಿ ಸ್ಥಿತೋ ನಿರ್ವಾಣಮಶರೀರಂ ಬ್ರಹ್ಮಾಧಿಗಚ್ಛತಿ ಯತೋಽತೋಽಂತಃ- ಸುಖಾದಿರಿ'ತ್ಯೇವಮುತ್ತರಾರ್ಧೋಕ್ತೋ ಜ್ಞೇಯಃ ।**

**ಅನುವಾದ** - ಜ್ಞಾನಿಯ ಲಕ್ಷಣವನ್ನು ಮುಂದಿನ ಶ್ಲೋಕಗಳಿಂದ ವಿವರಿಸುತ್ತಿದ್ದಾನೆ. ಯಾರು **ಅಂತಃಸುಖಃ**= ಕಾಮಾದಿ ಉಪದ್ರವ ನಾಶದಿಂದ ಅಭಿವ್ಯಕ್ತವಾದ ಸ್ವರೂಪ ಸುಖವುಳ್ಳವನೋ, **ಅಂತರಾರಾಮಃ**= (ಅಂತಃ ಕರಣದಲ್ಲಿ) ಭಗವಂತನ ದರ್ಶನದಿಂದ ಹುಟ್ಟಿದ ಸುಖವುಳ್ಳವನೋ ಅವನು ಜ್ಞಾನಿ. ಜ್ಞಾನಿಯಲ್ಲಿ ಈ ಎರಡು ಲಕ್ಷಣಗಳೂ ಬರಲು ಕಾರಣವನ್ನು ತಿಳಿಸುತ್ತಾನೆ **'ಅಂತರ್ಜ್ಯೋತಿಃ'** ಎಂಬ ಶಬ್ದದಿಂದ. ಯಾವ ಕಾರಣದಿಂದ, **ಅಂತರ್ಜ್ಯೋತಿಃ**= ಅಂತರಂಗ ದಲ್ಲಿ ಅಭಿವ್ಯಕ್ತವಾದ ಭಗವಂತನ ಸ್ವರೂಪವುಳ್ಳವನೋ. (ಆದ್ದರಿಂದ ಅಭಿವ್ಯಕ್ತವಾದ ಸ್ವರೂಪಸುಖವುಳ್ಳವನು ಮತ್ತು ಭಗವದ್ದರ್ಶನಜನ್ಯಸುಖವುಳ್ಳವನೂ ಆಗುತ್ತಾನೆ.) ಹೀಗೆ ಕಾರ್ಯಕಾರಣ ಭಾವವನ್ನು ಹೇಳಿದ್ದರಿಂದ 'ಅಂತರಂಗದಲ್ಲಿ ಅಭಿವ್ಯಕ್ತವಾದ ಭಗವತ್ಸ್ವರೂಪ ದರ್ಶನವೇ ಜ್ಞಾನಿತ್ವ. ಅದು ಅಪರೋಕ್ಷ ಜ್ಞಾನಿಯ ಲಕ್ಷಣವೆನಿಸುವುದು ಹೇಗೆ ಎಂಬ ಶಂಕೆಯನ್ನು ಪರಿಹರಿಸಿದಂತಾಯಿತು. ಸ್ವರೂಪಸುಖದ ಅಭಿವ್ಯಕ್ತಿಗೆ, ಭಗವದ್ದರ್ಶನಜನ್ಯಸುಖಕ್ಕೆ ಅಂತರಂಗದಲ್ಲಿ ಭಗವದ್ದರ್ಶನವು ಕಾರಣವಾಗಿದೆ ಎನ್ನಲಾಗಿದೆ ಹೊರತು ಭಗವದ್ದರ್ಶನವನ್ನು ಜ್ಞಾನಿಯ ಲಕ್ಷಣವೆಂದು ಹೇಳಿಲ್ಲ . ಅಸಂಪ್ರಜ್ಞಾತ ಸಮಾಧಿಯಲ್ಲಿರುವ ಸಾಧಕನಿಗೆ ಬಾಹ್ಯವಸ್ತುಗಳ ಜ್ಞಾನವೇ ಇಲ್ಲದಿರುವುದರಿಂದ **'ಅಂತರ್ಜ್ಯೋತಿರೇವ** 'ಎಂಬಲ್ಲಿ ಏವ ಶಬ್ದವನ್ನು ಹೇಳಿದ್ದಾರೆ. ಸಂಪ್ರಜ್ಞಾತ ಸಮಾಧಿಯಲ್ಲಿ ಬಾಹ್ಯ ವಸ್ತುಗಳ ಜ್ಞಾನ ಇದ್ದರೂ ಆ ಬಾಹ್ಯವಸ್ತು ಜ್ಞಾನವು ಮನಸ್ಸಿನ ಚಾಂಚಲ್ಯಕ್ಕೆ ಕಾರಣವಲ್ಲದಿರುವುದರಿಂದ ಇಲ್ಲದಂತೆಯೇ ಎಂದು ತಾತ್ಪರ್ಯ. ಆದ್ದರಿಂದ 'ಏವ' ಶಬ್ದಕ್ಕೆ ಅನ್ಯವ್ಯವಚ್ಛೇದವು ಮುಖ್ಯವಾದ ಅರ್ಥ ವಾದ್ದರಿಂದ, ಇತರ ವಸ್ತು ಜ್ಞಾನವಿಲ್ಲದ ಅಂತರಂಗದಲ್ಲಿ ಭಗವಂತನ ಸ್ವರೂಪವನ್ನು ಕಾಣುವಿಕೆಯೇ ಅಪರೋಕ್ಷಜ್ಞಾನಿಗಳ ಲಕ್ಷಣ ಎಂದು ಹೇಳಿದರೂ ಸಂಪ್ರಜ್ಞಾತ ಸಮಾಧಿಸ್ಥನಲ್ಲಿ

ಮತ್ತು ಅಸಂಪ್ರಜ್ಞಾತ ಸಮಾಧಿಸ್ಥನಲ್ಲಿ ಲಕ್ಷಣ ಬರುವುದಿರಂದ ದೋಷವಿಲ್ಲ. ಸ್ವರೂಪಸುಖದ ಅಭಿವ್ಯಕ್ತಿ ಮತ್ತು ಭಗವದ್ದರ್ಶನ ಜನ್ಯಸುಖಗಳಿಗೆ ಕಾರಣವನ್ನು ಉತ್ತರಾರ್ಧದಲ್ಲಿ ಹೇಳುತ್ತಿದ್ದಾನೆ. 'ಆ ಯೋಗಿಯು, **ಬ್ರಹ್ಮಭೂತಃ** = ಭಗವಂತನಲ್ಲಿಯೇ ಮನಸ್ಸುಳ್ಳವನಾಗಿ, **ನಿರ್ವಾಣಂ**= ಪ್ರಾಕೃತಶರೀರ ರಹಿತನಾದ ಭಗವಂತನನ್ನು ಹೊಂದುತ್ತಾನೆ . ಯೋಗಿಯು ಭಗವಂತನಲ್ಲಿಯೇ ಮನಸ್ಸುಳ್ಳವನಾಗಿ, ಅಪ್ರಾಕೃತ ಶರೀರವುಳ್ಳ ಭಗವಂತನನ್ನು ತಿಳಿದಿದ್ದಾನೆ ಆ ಕಾರಣದಿಂದ ಅವನು ಅಭಿವ್ಯಕ್ತವಾದ ಸ್ವರೂಪಸುಖವುಳ್ಳವನು ಮತ್ತು ಭಗವದ್ದರ್ಶನಜನ್ಯಸುಖವುಳ್ಳವನು' ಎಂದು ಉತ್ತರಾರ್ಧದಲ್ಲಿ ಹೇಳಿದೆ ಎಂದು ತಿಳಿಯಬೇಕು.

**ವಿವರಣೆ-** ಇಲ್ಲಿ ಜ್ಞಾನಿಯ ಲಕ್ಷಣವನ್ನು ವಿವರಿಸುತ್ತಿದ್ದಾರೆ. ಈ ಲಕ್ಷಣವು ಅಸಂಪ್ರಜ್ಞಾತ ಸಮಾಧಿಯಲ್ಲಿರುವ ಜ್ಞಾನಿಗೂ ಮತ್ತೂ ಸಂಪ್ರಜ್ಞಾತ ಸಮಾಧಿಯಲ್ಲಿರುವ ಜ್ಞಾನಿಗೂ ಅನ್ವಯಿಸುತ್ತದೆ. ವಸ್ತುತಃ ಸಂಪ್ರಜ್ಞಾತ ಸಮಾಧಿಯಲ್ಲಿರುವ ಜ್ಞಾನಿಗೆ ಬಾಹ್ಯ ವಸ್ತು ಜ್ಞಾನ ಇರುತ್ತದೆ. ಆದರೂ ತನ್ನಿಮಿತ್ತವಾದ ಮನಸ್ಸಿನ ವಿಕಾರ, ಚಾಂಚಲ್ಯ ಇರುವುದಿಲ್ಲ. ಆದ್ದರಿಂದ ಬಾಹ್ಯಜ್ಞಾನ ಇದ್ದರೂ ಅದರ ಕಾರ್ಯವಾದ ಮನೋವಿಕಾರ ಇಲ್ಲದಿರುವುದರಿಂದ ಬಾಹ್ಯಜ್ಞಾನ ಇಲ್ಲದಂತೆಯೇ ಆಯಿತು . ಅಂತರ್ಜ್ಯೋತಿರೇವ ಎಂಬಲ್ಲಿ 'ಏವ ' ಶಬ್ದವಿದೆ. ಅಂತರಂಗದಲ್ಲಿ ಭಗವತ್ಸ್ವರೂಪವನ್ನು ಮಾತ್ರ ಕಾಣುವವನು. ಭಗವತ್ಸ್ವರೂಪಕ್ಕಿಂತ ಬೇರೆ ಏನನ್ನೂ ಕಾಣುವುದಿಲ್ಲ, ನೋಡುತ್ತಿದ್ದರೂ ವಿಕಾರವಿಲ್ಲ ಎಂದು ಅದರ ಅರ್ಥ. ಇದೇ ಜ್ಞಾನಿಯ ಲಕ್ಷಣ. ಈ ಲಕ್ಷಣವು ಸಂಪ್ರಜ್ಞಾತ ಸಮಾಧಿಯಲ್ಲಿರುವ ಜ್ಞಾನಿಯಲ್ಲಿಯೂ ಅಸಂಪ್ರಜ್ಞಾತ ಸಮಾಧಿಯಲ್ಲಿರುವ ಜ್ಞಾನಿಯಲ್ಲಿಯೂ ಬರುತ್ತದೆ

'ಏವ ' ಎಂಬ ಶಬ್ದಕ್ಕೆ ಅನ್ಯವ್ಯವಚ್ಛೇದವು ಮುಖ್ಯ ಅರ್ಥ. 'ಪಾರ್ಥ ಏವ ಧನುರ್ಧರಃ' ಎಂಬಲ್ಲಿ 'ಏವ ' ಶಬ್ದ ಇದೆ. ಅದಕ್ಕೆ ಅರ್ಜುನನ ಹೊರತು ಬೇರೆ ಯಾರೂ ಧನುರ್ಧರರಲ್ಲ ಎಂದು ಅರ್ಥ. ಇದನ್ನು ಅನ್ಯವ್ಯವಚ್ಛೇದ ಎಂದು ಕರೆಯುತ್ತಾರೆ. ಬೇರೆಯವರನ್ನು ನಿಷೇಧಿಸುವುದು ತಾತ್ಪರ್ಯ. ಅಂತರ್ಜ್ಯೋತಿರೇವ ಎಂಬಲ್ಲಿಯೂ ಏವ ಶಬ್ದಕ್ಕೆ, ಅನ್ಯವ್ಯವಚ್ಛೇದ ಅರ್ಥವನ್ನು ಹೇಳಿದರೆ ಭಗವತ್ಸ್ವರೂಪವನ್ನು ಮಾತ್ರ ಕಾಣುವವನು,ಬೇರೆ ಏನನ್ನೂ ಕಾಣದವನು ಕಂಡರೂ ವಿಕಾರವಿಲ್ಲದವನು ಎಂದು ಅರ್ಥವಾಗುತ್ತದೆ.

**ನನ್ವೇವಂ ಬ್ರಹ್ಮಭೂತೋ [1]ಬ್ರಹ್ಮಾಧಿಗಚ್ಛತೀತ್ಯುಕ್ತ್ಯಾಽರ್ಥಾದ್ಬ್ರಹ್ಮಭೂತತ್ವಸ್ಯ ಬ್ರಹ್ಮಾಧಿಗತಿರೂಪಬ್ರಹ್ಮಜ್ಞಾನಹೇತುತ್ವಮುಕ್ತಮ್ । ತಚ್ಚ 'ತದ್‌ಬುದ್ಧಯ' ಇತ್ಯಾದಿನೋಕ್ತಮೇವ । ಬ್ರಹ್ಮಭೂತತ್ವಸ್ಯ ತದ್‌ಬುದ್ಧಿತ್ವಾದಿ-**

1. ಬ್ರಹ್ಮಾಧಿಗಚ್ಛತೀತ್ಯುಕ್ತ್ವಾ ವ

**ರೂಪತ್ವಾತ್ । ಸತ್ಯಮ್ । ಅಯಮಪ್ಯನುವಾದ ಏವ, ಯೋಽಂತಃಸುಖೋ ಯೋಽಂತರಾರಾಮೋ ಯೋಽಂತರ್ಜ್ಯೋತಿರೇವ ಯಶ್ಚ ತದ್‌ಬುದ್ಧಿತ್ವಾದಿ-ರೂಪಬ್ರಹ್ಮಭೂತಃ ನಿರ್ವಾಣಂ ಬ್ರಹ್ಮಾಧಿಗಚ್ಛತಿ ಸ ಯೋಗೀ ಜ್ಞಾನೀತ್ಯೇವಂ ಬ್ರಹ್ಮಭೂತಪದಂ ಪ್ರಾಗುಕ್ತತದ್‌ಬುದ್ಧಿತ್ವಾದಿರೂಪಜ್ಞಾನಸಾಧನಾನುವಾದಃ । ಯಸ್ಯ ಜ್ಞಾನಸ್ಯ ತದ್‌ಬುದ್ಧಿತ್ವಾದಿರೂಪಂ ಬ್ರಹ್ಮಭೂತತ್ವಂ ಸಾಧನಂ ತಾದೃಶ-ಜ್ಞಾನವಾನಂತಃಸುಖತ್ವಾದಿಲಕ್ಷಣಕ ಇತಿ ತಾತ್ಪರ್ಯಾರ್ಥಃ । ಅತ್ರ ಯ ಇತಿ ಪುನರುಕ್ತಿಃ ಸರ್ವತ್ರಾನ್ವಯಾರ್ಥಾ ॥ 24 ॥**

**ಅನುವಾದ**- ಹೀಗೊಂದು ಆಕ್ಷೇಪ, ಭಗವಂತನಲ್ಲಿಯೇ ಮನಸ್ಸನ್ನು ಇಟ್ಟವನು ಭಗವಂತನನ್ನು ಹೊಂದುತ್ತಾನೆ ಎಂದು ಹೇಳಿರುವುದರಿಂದ ಅರ್ಥಾತ್ ಭಗವಂತನಲ್ಲಿ ಮನಸ್ಸನ್ನು ಇಡುವಿಕೆಯು ಭಗವಂತನ ಅಧಿಗತಿಗೆ ಅಂದರೆ ಭಗವಂತನ ಅಪರೋಕ್ಷಜ್ಞಾನಕ್ಕೆ ಕಾರಣ ಎಂದು ಹೇಳಿದಂತಾಯಿತು. ಈ ವಿಷಯವನ್ನು '**ತದ್‌ಬುದ್ಧಯಃ**' ಎಂಬ 17ನೇ ಶ್ಲೋಕದಲ್ಲಿ ಹೇಳಿಯಾಗಿದೆ. **ತದ್‌ಬುದ್ಧಿ** ಎಂದರೂ **ಬ್ರಹ್ಮಭೂತ** ಎಂದರೂ ಒಂದೇ ಅರ್ಥ. ಆದ್ದರಿಂದ ಪುನರುಕ್ತಿದೋಷ ಬರುತ್ತದೆ. ಇದಕ್ಕೆ ಸಮಾಧಾನ ಹೀಗೆ- **ತದ್‌ಬುದ್ಧಿ** ಎಂದರೂ **ಬ್ರಹ್ಮಭೂತ** ಎಂದರೂ ಒಂದೇ. ಅದನ್ನೇ ಇಲ್ಲಿ ಅನುವಾದ ಮಾಡಿದ್ದಾರೆ. ಯಾರು ಕಾಮಾದಿ ಉಪದ್ರವ ನಾಶಪ್ರಯುಕ್ತ ಅಭಿವ್ಯಕ್ತವಾದ ಸ್ವರೂಪಸುಖವುಳ್ಳವನೋ, ಯಾರು ಅಂತಃಕರಣದಲ್ಲಿ ಭಗವದ್ದರ್ಶನ ಜನ್ಯಸುಖವುಳ್ಳವನೋ, ಯಾರು ಅಂತರಂಗದಲ್ಲಿ ಭಗವಂತನನ್ನೇ ಕಾಣುತ್ತಿದ್ದಾನೋ, ಯಾರು ಭಗವಂತನಲ್ಲಿಯೇ ಮನಸ್ಸನ್ನು ಇಟ್ಟವನಾಗಿ ಅಂದರೆ ಬ್ರಹ್ಮಭೂತನಾಗಿ ಪ್ರಾಕೃತಶರೀರ ರಹಿತನಾದ ಭಗವಂತನನ್ನು ತಿಳಿಯುತ್ತಾನೋ ಆ ಯೋಗಿಯೇ ಅಪರೋಕ್ಷ ಜ್ಞಾನಿಯು ಎಂಬುದಾಗಿ '**ಬ್ರಹ್ಮಭೂತ**' ಎಂಬ ಶಬ್ದವು ಹಿಂದೆ 17ನೇ ಶ್ಲೋಕದಲ್ಲಿ ಹೇಳಿದ '**ತದ್‌ಬುದ್ಧಿತ್ವ**' ಮೊದಲಾದ ಜ್ಞಾನಸಾಧನವನ್ನು ಅನುವಾದಮಾಡುತ್ತಿದೆ. ಯಾವ ಜ್ಞಾನಕ್ಕೆ ತದ್‌ಬುದ್ಧಿತ್ವ ರೂಪವಾದ ಬ್ರಹ್ಮಭೂತತ್ವ ಕಾರಣವೋ, ಅಂತಹ ಜ್ಞಾನವನ್ನು ಪಡೆದವನು ಸ್ವರೂಪಸುಖದ ಅಭಿವ್ಯಕ್ತಿ ಮುಂತಾದ ಲಕ್ಷಣವುಳ್ಳವನಾಗುತ್ತಾನೆ ಎಂದು ತಾತ್ಪರ್ಯ. ಈ ಶ್ಲೋಕದಲ್ಲಿ, **ಯಃ** ಎಂಬ ಶಬ್ದವನ್ನು ಎರಡು ಬಾರಿ ಹೇಳಿದ್ದಾರೆ. ಅದಕ್ಕೆ **ಯಃ** ಎಂಬುದನ್ನು ಎಲ್ಲಾ ಪದಗಳ ಜೊತೆಗೆ ಅನ್ವಯ ಮಾಡಿಕೊಳ್ಳಬೇಕು ಎಂದು ಅಭಿಪ್ರಾಯ . ॥ 24 ॥

**ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾಽಽಯತಾತ್ಮಾನಃ ಸರ್ವಭೂತಹಿತೇ ರತಾಃ ॥ 25 ॥**

**ಅರ್ಥ** - ಜ್ಞಾನಿಗಳು ಪಾಪಗಳನ್ನು ಕಳೆದುಕೊಂಡು, ಸಂಶಯ ಮತ್ತು ವಿಪರೀತ

ಜ್ಞಾನಗಳನ್ನು ಪರಿಹರಿಸಿಕೊಂಡವರಾಗಿ ಶ್ರವಣ, ಮನನಗಳಿಂದ ಸಕಲ ತತ್ತ್ವಗಳನ್ನು ಅರಿತವರಾಗಿ, ಸಕಲ ಜೀವಿಗಳ ಒಳಿತಿನಲ್ಲಿ ಆಸಕ್ತರಾಗಿ, ಮನಸ್ಸನ್ನು ನಿಗ್ರಹಿಸಿದವರಾಗಿ ಅಪ್ರಾಕೃತ ಶರೀರವುಳ್ಳ ಭಗವಂತನನ್ನು ನೋಡುತ್ತಾರೆ.

**ಅಂತಃಸುಖತ್ವಾದಿಲಕ್ಷಣಸಂಪಾದಕೋ ಬ್ರಹ್ಮಾಧಿಗಮೋ ನ ಬ್ರಹ್ಮಭೂತತ್ವ-ಮಾತ್ರಾದ್‌ಭವತಿ । ಕಿಂತು ಪಾಪಕ್ಷಯಾಚ್ಚೇತ್ಯಾಹ- ಲಭಂತ ಇತಿ ॥ ದ್ವೈಧ-ಶಬ್ದೋಽತ್ರ ದ್ವೇಧಾಭಾವೋ ದ್ವೈಧಮಿತಿ ವಿಷಯಾಪೇಕ್ಷಯಾಽನ್ಯಪ್ರಕಾರತ್ವ-ರೂಪಾಯಥಾರ್ಥತ್ವಪರಃ ಸನ್ನಯಾಥಾರ್ಥ್ಯೋಪೇತಜ್ಞಾನಲಕ್ಷಣೋ ಭೂತ್ವಾ ಸಂಶಯವಿಪರ್ಯಯಪರಃ । ಋಷಯೋ ಜ್ಞಾನಿನಃ ಕ್ಷೀಣಕಲ್ಮಷಾಃ ನಿವೃತ್ತ-ಪಾಪ್ಮಾನೋ ಭೂತ್ವಾ ಛಿನ್ನದ್ವೈಧಾಽಽಯತಾತ್ಮಾನಃ ಸರ್ವಭೂತಹಿತೇ ರತಾಶ್ಚ ಭವಂತೀತಿ ಶೇಷಃ । ಛಿನ್ನೌ ದ್ವೈಧೌ ಸಂಶಯವಿಪರ್ಯಯೌ ಯೇಷಾಂ ತೇ ಛಿನ್ನದ್ವೈಧಾಃ ತೇ ಚ ತೇ ಆಯತಾತ್ಮಾನಶ್ಚ ದೀರ್ಘಮನಸ್ಕಾಃ । ಶ್ರವಣಾದಿನಾ ವಿದಿತಸರ್ವವೇದ್ಯಾ ಇತಿ ಯಾವತ್ । ಛಿನ್ನದ್ವೈಧಾಽಽಯತಾತ್ಮಾನಃ । ಛಿನ್ನ-ದ್ವೈಧತ್ವೇ ಕ್ಷೀಣಕಲ್ಮಷತ್ವಮಿವಾಯತಾತ್ಮತ್ವಮಪಿ ಬುದ್ಧ್ಯಾ ವಿವಿಚ್ಯ ಹೇತುತ್ವೇನ ಯೋಜ್ಯಮ್ ।**

**ಅನುವಾದ-** ಸ್ವರೂಪಸುಖದ ಅಭಿವ್ಯಕ್ತಿಯನ್ನು ತಂದುಕೊಡುವ ಬ್ರಹ್ಮಜ್ಞಾನವು ಕೇವಲ ಭಗವಂತನಲ್ಲಿ ಮನಸ್ಸನ್ನು ಇಡುವುದರಿಂದ ಮಾತ್ರ ಬರುವುದಿಲ್ಲ. ಪಾಪನಾಶವೂ ಬ್ರಹ್ಮಜ್ಞಾನಕ್ಕೆ ಕಾರಣ ಎಂಬುದನ್ನು '**ಲಭಂತೇ**' ಎಂಬ ಶ್ಲೋಕದಿಂದ ವಿವರಿಸುತ್ತಿದ್ದಾನೆ. ಇಲ್ಲಿ **ದ್ವೇಧಾಭಾವೋ ದ್ವೈಧಂ** ಎಂದು '**ದ್ವೈಧ**' ಶಬ್ದದ ನಿಷ್ಪತ್ತಿ. ವಸ್ತುಸ್ವರೂಪಕ್ಕಿಂತ ಬೇರೆಯಾದ ರೂಪ ಅಂದರೆ ಅಯಥಾರ್ಥತ್ವ ಎಂದು ಅರ್ಥ. ಅಯಥಾರ್ಥತ್ವ ಎಂದರೆ ಅಯಥಾರ್ಥಜ್ಞಾನ ಎಂದು ಇಟ್ಟುಕೊಳ್ಳಬೇಕು. ಆದ್ದರಿಂದ ದ್ವೈಧ ಎಂದರೆ ಸಂಶಯ ಮತ್ತು ಭ್ರಮೆ ಎಂದು ಅರ್ಥ. **ಋಷಯಃ**= ಜ್ಞಾನಿಗಳು, **ಕ್ಷೀಣಕಲ್ಮಷಾಃ**= ಪಾಪಗಳನ್ನು ಕಳೆದುಕೊಂಡು, ಸಂಶಯ, ಭ್ರಮೆಗಳನ್ನು ಕಳೆದುಕೊಂಡವರು, ಶ್ರವಣಾದಿಗಳಿಂದ ತತ್ತ್ವವನ್ನು ತಿಳಿದವರು, ಸಕಲ ಜೀವಿಗಳ ಒಳಿತಿನಲ್ಲಿ ಆಸಕ್ತರೂ ಆಗುತ್ತಾರೆ ಎಂದು ಇಟ್ಟುಕೊಳ್ಳಬೇಕು. ಯಾರ ಸಂಶಯ ಮತ್ತು ಭ್ರಮೆಗಳು ನಾಶವಾಗಿದೆಯೋ ಅವರು ಛಿನ್ನದ್ವೈಧರು. ಅವರೇ **ಆಯತಾತ್ಮರು**= ದೀರ್ಘ ಮನಸ್ಸುಳ್ಳವರೂ ಆಗಿದ್ದಾರೆ. ಅಂದರೆ ಶ್ರವಣ ಮನನಾದಿಗಳಿಂದ ತಿಳಿಯಬೇಕಾದ ತತ್ತ್ವಗಳನ್ನು ತಿಳಿದವರು. ಹೀಗೆ '**ಛಿನ್ನದ್ವೈಧಾಽ-ಯತಾತ್ಮಾನಃ**' ಎಂದು ಒಂದು ಪದ. ಈ ಪದವನ್ನು **ಛಿನ್ನಧ್ವೈಧಾಃ, ಆಯತಾತ್ಮಾನಃ** ಎಂದು ಬುದ್ಧಿಯಲ್ಲಿ ಪದ ವಿಭಾಗ ಮಾಡಿಕೊಂಡು, ಸಂಶಯ, ಭ್ರಮೆಗಳ ನಾಶಕ್ಕೆ ಪಾಪನಾಶವು ಕಾರಣವಾದಂತೆ ಶ್ರಮಣಾದಿಗಳಿಂದ ಉಂಟಾದ ತತ್ತ್ವನಿಶ್ಚಯವೂ ಕಾರಣ ಎಂದು ಹೇಳಬೇಕು.

**ಯತಾತ್ಮಾನೋ ವಶೀಕೃತಮನಸ್ಕಾ ಇತಿ ಭಿನ್ನಂ ಪದಮ್ । ತತಶ್ಚ ನಿರ್ವಾಣ-ಮಶರೀರಂ ಬ್ರಹ್ಮ ಲಭಂತೇ । ಉಪಶಬ್ದೋಽತ್ರ ಯೋಜ್ಯಃ । ಉಪಲಭಂತೇ ಪಶ್ಯಂತೀತ್ಯರ್ಥಃ । ಅತ್ರ ಜ್ಞಾನಸ್ಯ ಪ್ರತಿಬಂಧಕಪಾಪಕ್ಷಯಾಖ್ಯಕಾರಣೋಕ್ತಾವಪಿ 'ಅಸಾಧಾರಣಂ ಕಾರಣಂ ಕಾರ್ಯಸ್ಯ ಲಕ್ಷಣಂ ಭವತಿ' ಇತ್ಯಸ್ಯ ಲಕ್ಷಣ-ಪ್ರಪಂಚನಪರತ್ವಮವಿರುದ್ಧಂ ಧ್ಯೇಯಮ್ ॥ 25 ॥**

**ಅನುವಾದ-** ಅಥವಾ **ಛಿನ್ನದ್ವೈಧಾಽಽಯತಾತ್ಮಾನಃ** ಎಂದು ಸಮಸ್ತಪದವಲ್ಲ. **ಛಿನ್ನದ್ವೈಧಾಃ- ಯತಾತ್ಮಾನಃ** ಎಂದು ಎರಡು ಪದ. **ಯತಾತ್ಮಾನಃ** = ಮನೋನಿಗ್ರಹವುಳ್ಳವರು ಎಂದರ್ಥ. ಆದ್ದರಿಂದ (ಪಾಪಗಳನ್ನು ಕಳೆದುಕೊಂಡು, ಸಂಶಯ ಭ್ರಮೆಗಳನ್ನು ನಾಶ ಮಾಡಿಕೊಂಡವರಾಗಿ, ತತ್ತ್ವನಿಶ್ಚಯವುಳ್ಳವರಾಗಿ, ಜೀವಿಗಳ ಒಳಿತಿನಲ್ಲಿ ಆಸಕ್ತರಾಗಿ, ಮನೋ-ನಿಗ್ರಹವುಳ್ಳವರಾದ್ದರಿಂದ) **ನಿರ್ವಾಣಂ=** ಪ್ರಾಕೃತಶರೀರರಹಿತನಾದ ಭಗವಂತನನ್ನು, **ಲಭಂತೇಃ=** ನೋಡುತ್ತಾರೆ. **ಲಭಂತೇ** ಎಂಬ ಕ್ರಿಯಾಪದಕ್ಕೆ '**ಉಪ**' ಎಂಬ ಉಪಸರ್ಗವನ್ನು ಜೋಡಿಸಿಕೊಳ್ಳಬೇಕು . **ಉಪಲಂಭತೇ** = ನೋಡುತ್ತಾರೆ ಎಂದು ಅರ್ಥ. ಇಲ್ಲಿ ಜ್ಞಾನ ಹುಟ್ಟಲು ಪ್ರತಿಬಂಧಕವಾದ ಪಾಪಗಳ ನಾಶರೂಪಕಾರಣವನ್ನು ಹೇಳಿದ್ದಾರೆ. ಆದರೂ 'ಅಸಾಧಾರಣ ಕಾರಣವು ಕಾರ್ಯದ ಲಕ್ಷಣ ಆಗುತ್ತದೆ' ಎಂಬ ನಿಯಮದಂತೆ ಪಾಪಕ್ಷಯವನ್ನೂ ಜ್ಞಾನಿಗಳ ಲಕ್ಷಣದಲ್ಲಿ ಸೇರಿಸಿರುವುದು ತಪ್ಪಲ್ಲ ಎಂದು ತಿಳಿಯಬೇಕು. ॥ 25 ॥

**ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥ 26 ॥**

**ಅರ್ಥ-** ಕಾಮಕ್ರೋಧಗಳನ್ನು ಬಿಟ್ಟಿರುವ , ಪ್ರಯತ್ನ ಶೀಲರಾದ, ಮನೋನಿಗ್ರಹವುಳ್ಳ ಬ್ರಹ್ಮ ಜ್ಞಾನಿಗಳಿಗೆ ಅಪ್ರಾಕೃತ ಶರೀರವುಳ್ಳ ಭಗವಂತನು ಎಲ್ಲಾ ಕಡೆಯಲ್ಲಿಯೂ ಕಾಣುತ್ತಾನೆ ಅಥವಾ ರಕ್ಷಕನಾಗಿರುತ್ತಾನೆ.

**ನ ಕೇವಲಮಂತಃಸುಖತ್ವಾದಿಕಮೇವ ಜ್ಞಾನಿಲಕ್ಷಣಂ ಕಿಂ ತು ಸರ್ವದೇಶ-ಕಾಲೇಷು ಸುಖೇನ ಬ್ರಹ್ಮಲಬ್ಧಿಮತ್ತ್ವಮಪೀತ್ಯಾಹ- ಕಾಮಕ್ರೋಧೇತಿ ॥ ಯತೀನಾಂ ಪ್ರಯತ್ನವತಾಂ ಯತಚೇತಸಾಂ ವಶೀಕೃತಮನಸ್ಕಾನಾಂ ಅಭಿತಃ ಸರ್ವದೇಶಕಾಲೇಷು ವರ್ತತೇ ರಕ್ಷಕತ್ವೇನ ಜ್ಞಾನವಿಷಯತ್ವೇನ ವೇತ್ಯರ್ಥಃ । ವಿದಿತಾತ್ಮನಾಂ ಬ್ರಹ್ಮಜ್ಞಾನಿನಾಮ್ । ಶಿಷ್ಟಂ ವ್ಯಕ್ತಮ್ ॥ 26 ॥**

**ಅನುವಾದ-** ಸ್ವರೂಪಸುಖಾನುಭವವನ್ನು ಪಡೆಯುವಿಕೆಯು ಮಾತ್ರ ಜ್ಞಾನಿಗಳ ಲಕ್ಷಣವಲ್ಲ, ಎಲ್ಲಾ ದೇಶಕಾಲಗಳಲ್ಲಿ ಅನಾಯಾಸವಾಗಿ ಭಗವಂತನನ್ನು ಪಡೆಯುವಿಕೆಯೂ ಜ್ಞಾನಿಲಕ್ಷಣ

ಎಂದು '**ಕಾಮಕ್ರೋಧ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. **ಯತೀನಾಂ**= ಪ್ರಯತ್ನಶೀಲರಾದ, **ಯತಚೇತಸಾಂ**= ಮನೋನಿಗ್ರಹವುಳ್ಳವರಿಗೆ, **ಅಭಿತಃ**= ಎಲ್ಲಾ ದೇಶಕಾಲಗಳಲ್ಲಿ (ಭಗವಂತ) ಇರುತ್ತಾನೆ. ರಕ್ಷಕನಾಗಿ ಅಥವಾ ಜ್ಞಾನಗೋಚರನಾಗಿ ಎಂದು ಅರ್ಥ. **ವಿದಿತಾತ್ಮನಾಂ** = ಬ್ರಹ್ಮಜ್ಞಾನಿಗಳಿಗೆ ಉಳಿದ ಪದಗಳ ಅರ್ಥ ಸ್ಪಷ್ಟ. ॥ 26 ॥

## ಧ್ಯಾನ ಸ್ವರೂಪ

**ಸ್ಪರ್ಶಾನ್ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ ।**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ** ॥ 27 ॥

**ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ** ॥ 28 ॥

**ಅರ್ಥ**- ಯಾರು ದುಃಖಕ್ಕೆ ಕಾರಣಗಳಾದ ಭೋಗ ವಸ್ತುಗಳನ್ನು 'ಪ್ರತ್ಯಾಹಾರ' ರೂಪ ಉಪಾಯದಿಂದ ಕಿವಿ ಮೊದಲಾದ ಇಂದ್ರಿಯಗಳಿಗೆ ಗೋಚರವಾಗದಂತೆ ಮಾಡಿ, ಹುಬ್ಬುಗಳ ಮಧ್ಯವನ್ನು ನೋಡುತ್ತಾ, ಮೂಗಿನಲ್ಲಿ ಸಂಚರಿಸುವ ಪ್ರಾಣಾಪಾನಗಳನ್ನು ಕುಂಭಕದಲ್ಲಿ ನಿಲ್ಲಿಸಿ, ಇಂದ್ರಿಯ, ಮನಸ್ಸು, ಬುದ್ಧಿ, ಇವುಗಳ ನಿಗ್ರಹವುಳ್ಳವನಾಗಿ, ಮನನಶೀಲನಾಗಿ, ಮೋಕ್ಷದಲ್ಲಿ ಆಸಕ್ತನಾಗಿ ಕಾಮ,ಭಯ, ಕ್ರೋಧಗಳನ್ನು ಬಿಟ್ಟಿದ್ದಾನೋ ಅವನು ಮುಕ್ತನೇ. (ಅಮುಕ್ತನಾದರೂ ಅಭಿಮಾನ ಇಲ್ಲವಿರುವುದರಿಂದ ಮುಕ್ತ ಸದೃಶ.)

'ಸ ಬ್ರಹ್ಮಯೋಗಯುಕ್ತಾತ್ಮೇ'ತ್ಯಾದೌ ಬ್ರಹ್ಮಯೋಗಾದಿಪದೇನ ಪ್ರಕೃತಧ್ಯಾನ-ಪ್ರಕಾರಮಾಹ- **ಸ್ಪರ್ಶಾನಿತ್ಯಾದಿದ್ವಯೇನ** ॥ ಸ್ಪೃಶ್ಯಂತ ಇತಿ ಸ್ಪರ್ಶಾಃ ಶಬ್ದಾದ್ಯಾಃ ಶ್ರೋತ್ರಾದೀಂದ್ರಿಯವಿಷಯಾಃ । ತೇಷಾಂ ಬಾಹ್ಯತ್ವಂ ದುಃಖಸಂಪಾದಕತ್ವಂ । ಬಾಹ್ಯಾನ್ ಸ್ಪರ್ಶಾನ್ ಶಬ್ದಾದೀನ್ ಬಹಿಃ ಶ್ರೋತ್ರಾದ್ಯವಿಷಯಾನ್ ಕೃತ್ವಾ । ಪ್ರತ್ಯಾಹಾರೇಣೇಂದ್ರಿಯಾಣಿ ನಿಯಮ್ಯೇತಿ ಯಾವತ್ । ಭ್ರುವೋರಂತರೇ ಮಧ್ಯೇ ಚಕ್ಷುಶ್ಚ ಕೃತ್ವಾ । ಭ್ರುವೋರ್ಮಧ್ಯಮವಲೋಕಯನ್ನಿತ್ಯರ್ಥಃ । 'ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಮಿ'ತ್ಯಾದೇರ್ವಕ್ಷ್ಯಮಾಣಸ್ಯೋಪಲಕ್ಷಣಮ್ । ಪ್ರಾಣಾಪಾನೌ ಸಮೌ ಸಮಾನೌ ನಿರ್ವಿಕಾರೌ ನಾಸಾಭ್ಯಂತರಚಾರಿಣೌ ಕೃತ್ವಾ ಕುಂಭಕೇ ಸ್ಥಿತ್ವೇತಿ ಯಾವತ್ ॥ 27 ॥

**ಅನುವಾದ**- 'ಸ ಬ್ರಹ್ಮಯೋಗಯುಕ್ತಾತ್ಮಾ' ಎಂಬ 21 ನೇ ಶ್ಲೋಕದಲ್ಲಿ ಬ್ರಹ್ಮಯೋಗ ಶಬ್ದದಿಂದ ಪ್ರಸ್ತಾಪಿಸಿದ ಧ್ಯಾನಪ್ರಕಾರವನ್ನು '**ಸ್ಪರ್ಶಾನ್**' ಎಂಬ ಎರಡು ಶ್ಲೋಕಗಳಿಂದ

ವಿವರಿಸುತ್ತಿದ್ದಾನೆ. **ಸ್ಪೃಶ್ಯಂತೇ ಇತಿ ಸ್ಪರ್ಶಾಃ** ಎಂದು ಸಮಾಸ. **ಸ್ಪರ್ಶಾಃ**= ಕಿವಿಮೊದಲಾದ ಇಂದ್ರಿಯಗೋಚರವಾದ ಶಬ್ದ ಮೊದಲಾದ ಭೋಗವಸ್ತುಗಳು. ಅವುಗಳು ಬಾಹ್ಯವಾಗಿವೆ ಎಂದರೆ ದುಃಖಕ್ಕೆ ಕಾರಣಗಳು ಎಂದು ಅರ್ಥ. ದುಃಖ- ಕಾರಣಗಳಾದ, **ಸ್ಪರ್ಶಾನ್**= ಶಬ್ದ ಮೊದಲಾದ ಭೋಗವಸ್ತುಗಳನ್ನು , **ಬಹಿಃ**= ಇಂದ್ರಿಯಗಳಿಗೆ ಗೋಚರವಾಗದಂತೆ ಮಾಡಿ ಅಂದರೆ ಪ್ರತ್ಯಾಹಾರ ರೂಪ ಉಪಾಯದಿಂದ ಇಂದ್ರಿಯಗಳನ್ನು ನಿಗ್ರಹಿಸಿ ಎಂದು ಅರ್ಥ. ಹುಬ್ಬುಗಳ ಮಧ್ಯದಲ್ಲಿ ಕಣ್ಣನ್ನು ಇಟ್ಟು ಹುಬ್ಬುಗಳ ಮಧ್ಯವನ್ನು ನೋಡುತ್ತ ಎಂದು ಅರ್ಥ. ಮುಂದೆ ( 6ನೇ ಅಧ್ಯಾಯದ 13ನೇ ಶ್ಲೋಕದಲ್ಲಿ) ಹೇಳುವ ರೀತಿಯಲ್ಲಿ ತನ್ನ ಮೂಗಿನ ತುದಿಯನ್ನು ನೋಡುತ್ತಾ ಎಂಬುದನ್ನು ಇಟ್ಟುಕೊಳ್ಳಬೇಕು. ಮೂಗಿನ ಮಧ್ಯದಲ್ಲಿ ಸಂಚರಿಸುವ ಪ್ರಾಣಾಪಾನಗಳನ್ನು, ,**ಸಮೌ** = ಸಮಾನವನ್ನಾಗಿ = ಚಲನರಹಿತಗಳನ್ನಾಗಿ ಮಾಡಿ ಅಂದರೆ ಕುಂಭಕದಲ್ಲಿ ನಿಲ್ಲಿಸಿ ಎಂದು ಅರ್ಥ. ॥ 27 ॥

**ಯತೇಂದ್ರಿಯಮನೋಬುದ್ಧಿಃ ಮುನಿಃ ಮನನಶೀಲಃ । ಏವಂಭೂತೋ ಯಃ ಸ ಮುಕ್ತ ಏವೇತಿ ಸ್ತುತಿಃ । ಯದ್ವಾ ಅಭಿಮಾನಾದಿಪರಿತ್ಯಾಗೇನ ಮುಕ್ತ-ಸಾದೃಶ್ಯಾನ್ಮುಕ್ತ ಏವೇತಿ ಗೌಣಪ್ರಯೋಗಃ ॥ 28 ॥**

**ಅನುವಾದ**- ಇಂದ್ರಿಯ ಮನಸ್ಸು ಬುದ್ಧಿ ಇವುಗಳ ನಿಗ್ರಹವುಳ್ಳ , **ಮುನಿಃ**= ಮನನಶೀಲನಾದವನು. ಯಾರು ಹಿಂದೆ ಹೇಳಿದ ಗುಣಗಳುಳ್ಳ ಸಾಧಕನೋ ಅವನು ಮುಕ್ತನೇ ಎಂದು ಸ್ತೋತ್ರ ಮಾಡಿದ್ದಾನೆ. ಅಥವಾ ಅಭಿಮಾನಾದಿಗಳ ತ್ಯಾಗ ಮಾಡಿದ್ದರಿಂದ ಮುಕ್ತನಿಗೆ ಸದೃಶನಾದರಿಂದ (ದುಃಖ ಇಲ್ಲದಿರುವುದರಿಂದ) ಮುಕ್ತನೇ ಎಂದು ಗೌಣ ಪ್ರಯೋಗ. ॥ 28 ॥

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥ 29 ॥**

*॥ ಓಂತತ್ಸದಿತಿ ಶ್ರೀಮದ್‌ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಸಂನ್ಯಾಸಯೋಗೋ ನಾಮ ಪಂಚಮೋಽಧ್ಯಾಯಃ ॥*

**ಅರ್ಥ** - ಜ್ಯೋತಿಷ್ಟೋಮಾದಿ ಯಜ್ಞಗಳನ್ನು ಕೃಚ್ಛ್ರ-ಚಾಂದ್ರಾಯಣಾದಿ ವ್ರತರೂಪವಾದ ತಪಸ್ಸನ್ನು ಭೋಗಿಸುವ, ಎಲ್ಲಾ ಲೋಕಗಳಿಗೂ ಮುಖ್ಯಸ್ವಾಮಿಯಾದ, ಎಲ್ಲಾ ಜೀವಿಗಳಿಗೆ ಉಪಕಾರಕನಾದ, ಮೋಕ್ಷ ಕೊಡುವ ನನ್ನನ್ನು ಜ್ಞಾನಿಯು ಧ್ಯಾನಿಸಿ, ಸಾಕ್ಷಾತ್ಕರಿಸಿಕೊಳ್ಳುತ್ತಾನೆ.

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ ಭಗವದ್ಗೀತೆಯಲ್ಲಿ ಸಂನ್ಯಾಸಯೋಗವೆಂಬ ಐದನೆಯ ಅಧ್ಯಾಯವು ಮುಗಿಯಿತು.*

**ಧ್ಯಾನಮುಕ್ತ್ವಾ ಧ್ಯೇಯಮಾಹ- ಭೋಕ್ತಾರಮಿತಿ ॥ ಯಜ್ಞೋ ಜ್ಯೋತಿ-ಷ್ಟೋಮಾದಿಃ । ತಪಃ ಕೃಚ್ಛ್ರ ಚಾಂದ್ರಾಯಣಾದಿಃ । ಮಹಾಂಶ್ಚಾಸಾವೀಶ್ವರಶ್ಚ ಮಹೇಶ್ವರಸ್ತಮ್ । ಸುಹೃದಮುಪಕಾರಿಣಮ್ । ಶಾಂತಿಂ ಶಾಂತಿಸಾಧನಮ್ । ಮುಕ್ತಿಹೇತುಮಿತಿ ಈಶ್ವರವಿಶೇಷಣಮ್ । ಜ್ಞಾತ್ವಾ ಧ್ಯಾತ್ವೇತ್ಯರ್ಥಃ । ಋಚ್ಛತಿ ಸಾಕ್ಷಾತ್ಕರೋತೀತ್ಯರ್ಥಃ ॥ 29 ॥**

*॥ ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ ಪಂಚಮೋಽಧ್ಯಾಯಃ ॥*

**ಅನುವಾದ** - ಧ್ಯಾನದ ಪ್ರಕಾರವನ್ನು ತಿಳಿಸಿ ಧ್ಯಾನಕ್ಕೆ ವಿಷಯವನ್ನು '**ಭೋಕ್ತಾರಂ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. (ಯಜ್ಞತಪಸಾಂ) **ಯಜ್ಞಃ**= ಜ್ಯೋತಿಷ್ಟೋಮ ಮೊದಲಾದವುಗಳು, **ತಪಃ** = ಕೃಚ್ಛ್ರ ಚಾಂದ್ರಾಯಣಾದಿಗಳು. ಮಹಾತ್ಮನೂ ನಿಯಾಮಕನೂ ಆದವನೇ ಮಹೇಶ್ವರ. **ಸುಹೃದಂ** = ಉಪಕಾರಿಯಾದ, **ಶಾಂತಿಂ**= ಶಾಂತಿಗೆ ಸಾಧನನಾದ ಮುಕ್ತಿಗೆ ಕಾರಣನಾದ ಎಂದು ಭಗವಂತನಿಗೆ ವಿಶೇಷಣ. **ಜ್ಞಾತ್ವಾ** = ಧ್ಯಾನಿಸಿ, **ಋಚ್ಛತಿ**= ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ॥ 29 ॥

*ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ ಐದನೆಯ ಅಧ್ಯಾಯವು ಮುಗಿಯಿತು.*

# ಅಧ್ಯಾಯ – 6

## ಸಂನ್ಯಾಸಿ ಮತ್ತು ಯೋಗಿ

**ಭಗವಾನುವಾಚ-**

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥ 1 ॥**

ಅರ್ಥ- ಶ್ರೀಕೃಷ್ಣ ಹೇಳುತ್ತಾನೆ- ಯಾರು ಕರ್ಮಫಲಗಳನ್ನು ಬಯಸದೆ ಸ್ವಸ್ವವರ್ಣಾಶ್ರಮಕ್ಕೆ ವಿಹಿತವಾದ ಕರ್ತವ್ಯ ಕರ್ಮಗಳನ್ನು ಮಾಡುತ್ತಾನೋ ಅವನು ಸಂನ್ಯಾಸಿಯೂ ಹೌದು, ಯೋಗಿಯೂ ಹೌದು. ಕೇವಲ ಯಾಗಯಜ್ಞಗಳ ಅಗ್ನಿತ್ಯಾಗಿ ಮತ್ತು ಕ್ರಿಯಾತ್ಯಾಗಿ ಸಂನ್ಯಾಸಿಯೂ ಅಲ್ಲ, ಯೋಗಿಯೂ ಅಲ್ಲ.

### ಗೀತಾವಿವೃತಿ

'ಬುದ್ಧಿರ್ಯೋಗೇ ತ್ವಿಮಾಂ ಶೃಣು' (2-39) ಇತಿ ಯೋಗವಚನಂ ಪ್ರತಿಜ್ಞಾತಂ ದ್ವಿತೀಯೇ । ಸ ಚ ಯೋಗ ಉತ್ತರಷಟ್ಕೇ ವಕ್ಷ್ಯಮಾಣ ಭಗವದ್‌ಜ್ಞಾನಂ ಪ್ರತಿ ಉಪಾಯಃ । ಸ ಚ ದ್ವಿವಿಧಃ । ಕರ್ಮಯೋಗೋ ಧ್ಯಾನಯೋಗಶ್ಚೇತಿ । ತತ್ರ ಕರ್ಮಯೋಗೋ ಜ್ಞಾನಂ ಪ್ರತಿ ಬಹಿರಂಗೋಪಾಯತ್ವಾತ್ 'ತ್ರೈಗುಣ್ಯವಿಷಯಾ ವೇದಾ'(2-45)ಇತ್ಯಾದಿನಾ ದ್ವಿತೀಯೇ ಸಂಕ್ಷೇಪೇಣ, ತೃತೀಯಾಧ್ಯಾಯಾದಾವತೀತಗ್ರಂಥೇ ವಿಸ್ತರೇಣ ಚ ಪೂರ್ವಂ ನಿರೂಪಿತಃ । ಅಧುನಾ ಕರ್ಮಯೋಗಸಾಧ್ಯತ್ವಾದ್ ವಕ್ಷ್ಯಮಾಣಜ್ಞಾನಾಂತರಂಗಸಾಧನತ್ವಾಚ್ಚ ಅವಸರಪ್ರಾಪ್ತಂ ಸಮಾಧಿಯೋಗಂ 'ಸ್ಪರ್ಶಾನ್' (5-27) ಇತ್ಯಾದಿನಾ ಪೂರ್ವಾಧ್ಯಾಯಾಂತೇ ಸಂಕ್ಷೇಪೇಣ ಪ್ರಕೃತಂ ವಿಸ್ತರೇಣಾಸ್ಮಿನ್ನಧ್ಯಾಯೇ ವಕ್ತಿ । ಆಸನಾದೀನಾಮಂಗಾನಾಂ ವಕ್ಷ್ಯಮಾಣತ್ವೇಽಪಿ ತೇಷಾಂ ಧ್ಯಾನಾರ್ಥತ್ವೇನ ಧ್ಯಾನಸ್ಯೈವ ಪ್ರಾಧಾನ್ಯಾತ್ । 'ಉದ್ಧರೇದಾತ್ಮನಾತ್ಮಾನಮಿ'ತ್ಯಾದಿನಾ ಧ್ಯಾನಯೋಗಂ ವಿಧಾತುಂ ತತ್ರ ಧ್ಯಾನೇ ಸಂನ್ಯಾಸಯೋಗಯುಕ್ತ ಏವಾಧಿಕಾರೀತಿ ಜ್ಞಾಪನಾಯ ಕಾಮಾದಿವರ್ಜನರೂಪಸಂನ್ಯಾಸಮ್ ಈಶ್ವರಾರಾಧನರೂಪಸ್ವಕರ್ಮಾನುಷ್ಠಾನ ಲಕ್ಷಣಯೋಗಂ ಚಾಹ ಅನಾಶ್ರಿತ ಇತಿ ॥

**ಅನುವಾದ** – '**ಬುದ್ಧಿರ್ಯೋಗೇ ತ್ವಿಮಾಂ ಶೃಣು**' ಎಂದು ಎರಡನೇ ಅಧ್ಯಾಯದ 39ನೇ ಶ್ಲೋಕದಲ್ಲಿ, ಯೋಗವಿಷಯವನ್ನು ಹೇಳುತ್ತೇನೆ ಕೇಳು ಎಂದು ಶ್ರೀಕೃಷ್ಣ ತಿಳಿಸಿದ್ದಾನೆ. ಆ ಯೋಗವು ಏಳನೇ ಅಧ್ಯಾಯದಿಂದ ಮುಂದಿನ ಆರು ಅಧ್ಯಾಯಗಳಲ್ಲಿ ಹೇಳುವ ಭಗವಂತನ ಮಾಹಾತ್ಮ್ಯ ಜ್ಞಾನಕ್ಕೆ ಸಾಧನವಾಗಿದೆ. ಆ ಯೋಗವು ಕರ್ಮಯೋಗ ಮತ್ತು ಧ್ಯಾನಯೋಗ ಎಂದು ಎರಡು ವಿಧವಾಗಿದೆ. ಅವುಗಳಲ್ಲಿ ಕರ್ಮಯೋಗವು ಜ್ಞಾನಕ್ಕೆ ಬಹಿರಂಗ ಸಾಧನ. ಆ ಕರ್ಮಯೋಗವನ್ನು '**ತ್ರೈಗುಣ್ಯವಿಷಯಾ ವೇದಾಃ**' ಎಂಬ ಶ್ಲೋಕಗಳಿಂದ ಎರಡನೇ ಅಧ್ಯಾಯದಲ್ಲಿ ಸಂಕ್ಷೇಪವಾಗಿಯೂ, ಮೂರನೇ ಅಧ್ಯಾಯದಿಂದ ತೊಡಗಿ ಹಿಂದಿನ ಅಧ್ಯಾಯಗಳಲ್ಲಿ ವಿಸ್ತಾರವಾಗಿಯೂ ವಿವರಿಸಲಾಗಿದೆ. ಕರ್ಮಯೋಗದ ವಿವರಣೆಯ ನಂತರ ಈಗ ಧ್ಯಾನಯೋಗದ ವಿವರಣೆಯ ಆವಶ್ಯಕತೆಯು ಪ್ರಾಪ್ತವಾಗಿದೆ. ಧ್ಯಾನಯೋಗವು ಕರ್ಮಯೋಗದಿಂದ ಜನ್ಯವಾಗಿದ್ದು ಮುಂದಿನ ಅಧ್ಯಾಯಗಳಲ್ಲಿ ವಿವರಿಸುವ ಜ್ಞಾನಯೋಗಕ್ಕೆ ಅಂತರಂಗ ಸಾಧನವೂ ಆಗಿದೆ. ಹಿಂದಿನ 5ನೇ ಅಧ್ಯಾಯದಲ್ಲಿ '**ಸ್ಪರ್ಶಾನ್**' ಎಂಬ (27ನೇ) ಶ್ಲೋಕದಲ್ಲಿ ಈ ಧ್ಯಾನಯೋಗವನ್ನು ಸಂಕ್ಷೇಪವಾಗಿ ಹೇಳಿರುವುದರಿಂದ ಪ್ರಕೃತವೂ ಆಗಿದೆ. ಅಂಥಹ ಧ್ಯಾನಯೋಗವನ್ನು ಈಗ ಈ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳುತ್ತಿದ್ದಾನೆ. ಧ್ಯಾನಯೋಗಕ್ಕಿಂತ ಭಿನ್ನವಾದ, ಅಂಗಭೂತವಾದ ಆಸನಾದಿಗಳ ವಿಚಾರವನ್ನು ಈ ಅಧ್ಯಾಯದಲ್ಲಿ ಹೇಳುತ್ತಿದ್ದರೂ ಅವುಗಳೆಲ್ಲವನ್ನು ಧ್ಯಾನಕ್ಕಾಗಿಯೇ ವರ್ಣಿಸಿರುವುದರಿಂದ ಧ್ಯಾನವೇ ಮುಖ್ಯವಿಷಯ. '**ಉದ್ಧರೇತ್ ಆತ್ಮನಾತ್ಮಾನಂ**' ಇತ್ಯಾದಿ ಶ್ಲೋಕಗಳಿಂದ ಧ್ಯಾನಯೋಗವನ್ನು ಹೇಳುತ್ತಿದ್ದಾನೆ. ಆ ಧ್ಯಾನಯೋಗದಲ್ಲಿ (ಕಾಮನಾತ್ಯಾಗರೂಪ) ಸಂನ್ಯಾಸ ಮತ್ತು (ಕರ್ಮಾನುಷ್ಠಾನರೂಪ) ಯೋಗದಿಂದ ಕೂಡಿದವನೇ ಅಧಿಕಾರಿ ಎಂದು ತಿಳಿಸಲು ಕಾಮಾದಿಗಳ ತ್ಯಾಗರೂಪ ಸಂನ್ಯಾಸವನ್ನು ಮತ್ತು ಭಗವದಾರಾಧನಬುದ್ಧಿಯಿಂದ ಸ್ವವಿಹಿತ ಕರ್ಮಾಚರಣೆ ರೂಪ ಯೋಗವನ್ನೂ '**ಅನಾಶ್ರಿತ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ.

**ಯಃ ಕರ್ಮಫಲಮನಾಶ್ರಿತಃ ಕಾರ್ಯಂ ಸ್ವಸ್ವವರ್ಣಾಶ್ರಮೋಚಿತತಯಾ ಕರ್ತವ್ಯಂ ಕರ್ಮ ಕರೋತಿ ಸ ಸಂನ್ಯಾಸೀ ಯೋಗೀ ಚ । ಸ ಏವ ಚ ಧ್ಯಾನಾಧಿಕಾರೀತಿ ಭಾವಃ । ಆಹವನೀಯಾದ್ಯಗ್ನಿತ್ಯಾಗೇನ ಅಗ್ನಿಹೋತ್ರಾದಿಕ್ರಿಯಾತ್ಯಾಗೇನ ಚ ನಿಃಸಂಗತಯಾ ವರ್ತಮಾನ ಏವ ಧ್ಯಾನಾಧಿಕಾರೀತಿ ಸಾಂಖ್ಯಮತಮಪಾಕರೋತಿ- ನೇತಿ ॥ ನಿರಗ್ನಿರಕ್ರಿಯಶ್ಚ ಸಂನ್ಯಾಸೀ ಯೋಗೀ ಚ ನೇತ್ಯರ್ಥಃ । ಯತೇರಪಿ 'ದೈವಮೇವಾಪರೇ ಯಜ್ಞಂ' (4-25) ಇತ್ಯಾದಿನಾಽಗ್ನಿಕ್ರಿಯಯೋರುಕ್ತತ್ವಾತ್ ಸಂನ್ಯಾಸಾಶ್ರಮಸ್ವೀಕಾರಕಾಲೇ ಪೂರ್ವಾಶ್ರಮಸ್ವೀಕೃತಾಗ್ನೇರಾತ್ಮನಿ ಸಮಾರೋಪಣಾಚ್ಚ ಸೋಽಪಿ ಸಂನ್ಯಾಸೀ ಯೋಗೀ ಚ ಭವತ್ಯೇವೇತಿ ಭಾವಃ ॥ 1 ॥**

**ಅನುವಾದ-** ಯಾರು ಕರ್ಮಫಲವನ್ನು ಬಯಸದೆ, **ಕಾರ್ಯಂ**= ತಮ್ಮ ತಮ್ಮ ವರ್ಣಾಶ್ರಮ ಗಳಿಗೆ ಯೋಗ್ಯವಾದ, ವಿಹಿತಕರ್ಮಗಳನ್ನು ಮಾಡುತ್ತಾನೋ, ಅವನು ಸಂನ್ಯಾಸಿಯೂ ಹೌದು, ಯೋಗಿಯೂ ಹೌದು, ಅವನೇ ಧ್ಯಾನಕ್ಕೆ ಅಧಿಕಾರಿ ಎಂದು ತಾತ್ಪರ್ಯ. ಆಹವನೀಯಾದಿ ಅಗ್ನಿ ತ್ಯಾಗಮಾಡಿ, ಅಗ್ನಿಹೋತ್ರಾದಿ ಯಜ್ಞತ್ಯಾಗ ಮಾಡಿ ಸಂಗರಹಿತನಾಗಿ ಇರುವವನೇ ಧ್ಯಾನಕ್ಕೆ ಅಧಿಕಾರಿ ಎಂದು ಸಾಂಖ್ಯಮತ. ಅದನ್ನು ನಿರಾಕರಿಸಲು **'ನ ನಿರಗ್ನಿಃ'** ಎಂದು ಹೇಳುತ್ತಿದ್ದಾನೆ. ಆಹವನೀಯಾದಿ ಅಗ್ನಿತ್ಯಾಗ ಮಾಡಿದವನು ಮತ್ತು ಯಜ್ಞತ್ಯಾಗ ಮಾಡಿದವನು ಸಂನ್ಯಾಸಿಯೂ ಅಲ್ಲ ಯೋಗಿಯೂ ಅಲ್ಲ ಎಂದು ಅರ್ಥ. ಯತಿಗಳಿಗೂ ಅಗ್ನಿ ಮತ್ತು ಯಜ್ಞಗಳು ಇವೆ ಎಂದು **'ದೈವಮೇವಾಪರೇ ಯಜ್ಞಂ'** (4-25) ಇತ್ಯಾದಿ ಶ್ಲೋಕಗಳಲ್ಲಿ ಹೇಳಿದ್ದಾನೆ. ಅಲ್ಲದೆ ಸಂನ್ಯಾಸಾಶ್ರಮವನ್ನು ಸ್ವೀಕರಿಸುವ ಕಾಲದಲ್ಲಿ ಪೂರ್ವಾಶ್ರಮದಲ್ಲಿ ಸ್ವೀಕೃತವಾದ ಅಗ್ನಿಯನ್ನು ತನ್ನಲ್ಲಿ ಸಮಾರೋಪ ಮಾಡಿಕೊಳ್ಳುತ್ತಾನೆ. ಆದ್ದರಿಂದ ಅಗ್ನಿ ಉಳ್ಳವನು ಮತ್ತು ಯೋಗಕ್ರಿಯೆ ಉಳ್ಳವನಾದರೂ ಅವನು ಸಂನ್ಯಾಸಿಯೂ ಆಗುತ್ತಾನೆ. ಯೋಗಿಯೂ ಆಗುತ್ತಾನೆ. ॥ 1 ॥

## ಯೋಗವಿಶೇಷ ಸಂನ್ಯಾಸ

**ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।**
**ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥ 2 ॥**

**ಅರ್ಥ -** ಪಾಂಡುನಂದನ ! ಯಾವ ಕಾಮಕ್ರೋಧಾದಿಗಳ ತ್ಯಾಗವನ್ನು ಸಂನ್ಯಾಸ ಎಂದು ಹೇಳುತ್ತಾರೋ ಅಂಥಹ ಸಂನ್ಯಾಸವನ್ನೇ, ಕಾಮಕ್ರೋಧಾದಿತ್ಯಾಗ ಸಹಿತ ಕರ್ಮಾಚರಣರೂಪ ವಾದ ಯೋಗದ ಒಂದು ಅಂಶ ಎಂದು ತಿಳಿ. ಕಾಮಕ್ರೋಧಾದಿಗಳನ್ನು ತ್ಯಾಗಮಾಡದೆ ಕೇವಲ ಕರ್ಮಗಳನ್ನು ಆಚರಿಸುವ ಯಾರೂ ಯೋಗಿಯಾಗುವುದಿಲ್ಲ.

**'ಸ ಸಂನ್ಯಾಸೀ ಚ ಯೋಗೀ ಚೇ'ತ್ಯುಕ್ತ್ಯಾ ಪ್ರಾಪ್ತಾಂ ತಯೋರತ್ಯಂತ-ಭೇದಶಂಕಾಂ ನಿರಸಿತುಂ ಅಮುಖ್ಯಯೋಗಾಪೇಕ್ಷಯಾ ಪೃಥಗುಕ್ತೋಽಪಿ ಸಂನ್ಯಾಸೋ ಮುಖ್ಯಯೋಗಾಂತರ್ಭೂತ ಇತ್ಯಾಹ– ಯಮಿತಿ ॥ 'ಜ್ಞೇಯಃ ಸ ನಿತ್ಯಸಂನ್ಯಾಸೀ' ಇತ್ಯಾದಿನೋಕ್ತಪ್ರಕಾರೇಣ ಯಂ ಕಾಮಕ್ರೋಧಾದಿವರ್ಜನ-ರೂಪಂ ಸಂನ್ಯಾಸಂ ಯೋಗಂ ಮುಖ್ಯಯೋಗಂ ಜ್ಞಾನೋಪಾಯಭೂತ-ಕಾಮಾದಿ ವರ್ಜನವಿಶಿಷ್ಟನಿವೃತ್ತಕರ್ಮಾನುಷ್ಠಾನರೂಪಯೋಗಾಂತರ್ಭೂತಂ ವಿದ್ಧಿ ಜಾನೀಹಿ ।**

**ಅನುವಾದ - 'ಸ ಸಂನ್ಯಾಸೀ ಚ ಯೋಗೀ ಚ'** ಅವನೇ ಸಂನ್ಯಾಸಿಯೂ ಹೌದು,

ಯೋಗಿಯೂ ಹೌದು ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದೆ. ಆದ್ದರಿಂದ ಸಂನ್ಯಾಸ ಮತ್ತು ಯೋಗ ಎಂದರೆ ಬೇರೆ ಬೇರೆ ಎಂಬ ಶಂಕೆ ಬರುತ್ತದೆ. ಆ ಶಂಕೆಯನ್ನು ಪರಿಹರಿಸಲು ಸಂನ್ಯಾಸವು ಅಮುಖ್ಯಯೋಗಕ್ಕಿಂತ ಬೇರೆಯಾದರೂ ಮುಖ್ಯಯೋಗದಲ್ಲಿ ಒಂದು ಅಂಶ ಎಂದು **'ಯಂ'** ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. **'ಜ್ಞೇಯಃ ಸ ನಿತ್ಯಸಂನ್ಯಾಸೀ'** (5–3) ಇತ್ಯಾದಿ ಶ್ಲೋಕಗಳಲ್ಲಿ ಹೇಳಿದ ರೀತಿಯಲ್ಲಿಯಾವ ಕಾಮಕ್ರೋಧಾದಿತ್ಯಾಗವನ್ನು ಸಂನ್ಯಾಸವೆಂದು ಹೇಳುತ್ತಾರೋ ಆ ಸಂನ್ಯಾಸವನ್ನು **ಯೋಗಂ** = ಮುಖ್ಯಯೋಗ ಎಂಬುದಾಗಿ ಅಂದರೆ ಜ್ಞಾನಕ್ಕೆ ಸಾಧನವಾದ ಕಾಮಕ್ರೋಧಾದಿಗಳ ತ್ಯಾಗಸಹಿತವಾದ ನಿವೃತ್ತಕರ್ಮಾಚರಣರೂಪವಾದ ಯೋಗದಲ್ಲಿಒಂದು ಅಂಶ ಎಂದು, **ವಿದ್ಧಿ** = ತಿಳಿ.

**ವಿವರಣೆ** - ಯೋಗವು ಮುಖ್ಯ ಅಮುಖ್ಯ ಎಂಬುದಾಗಿ ಎರಡುವಿಧ. ಫಲಾಪೇಕ್ಷೆಯನ್ನು ಬಿಟ್ಟು ಮಾಡುವ ಕರ್ಮಾಚರಣೆಯನ್ನು ಮುಖ್ಯಯೋಗ ಎನ್ನುತ್ತಾರೆ. ಫಲಾಪೇಕ್ಷೆಯಿಂದ ಮಾಡುವ ಕರ್ಮಾಚರಣೆಯನ್ನು ಅಮುಖ್ಯಯೋಗ ಎನ್ನುತ್ತಾರೆ. ಕಾಮಕ್ರೋಧಾದಿಗಳ ತ್ಯಾಗ ಹಾಗೂ ಸಂಕಲ್ಪ ತ್ಯಾಗವು ಸಂನ್ಯಾಸ. ಈ ಸಂನ್ಯಾಸವು ಅಮುಖ್ಯಯೋಗಕ್ಕಿಂತ ಅತ್ಯಂತ ಭಿನ್ನವಾಗಿದೆ. ಆದರೆ ಫಲಾಪೇಕ್ಷೆ ಇಲ್ಲದ ಕರ್ಮಾಚರಣ ರೂಪವಾದ ಯೋಗದಲ್ಲಿ (ಸಂನ್ಯಾಸವು) ಒಂದು ಅಂಶ. ಮುಖ್ಯಯೋಗದಲ್ಲಿ ಅಂತರ್ಭೂತ. ಆದ್ದರಿಂದ ಸಂನ್ಯಾಸವನ್ನೇ ಯೋಗ ಎಂದು ಹೇಳಿದ್ದಾನೆ.

**ಹೇ ಪಾಂಡವ ! ಕುತಃ । ಕಶ್ಚನ ಕೋಽಪಿ ಅಸಂನ್ಯಸ್ತಸಂಕಲ್ಪಃ ಅತ್ಯಕ್ತಸಂಕಲ್ಪಾದಿಃ ಸಂನ್ಯಾಸಹೀನಕರ್ಮಾನುಷ್ಠಾನಮಾತ್ರವಾನಿತಿ ಯಾವತ್ । ಯೋಗೀ ಜ್ಞಾನೋ-ಪಾಯವಾನ್ನ ಭವತಿ । ನ ಹಿ ಸಾಮಗ್ರ್ಯೇಕದೇಶಃ ಕಾರ್ಯಜನಕೋ ಭವತಿ । ಕ್ವಚಿತ್ಪೃಥಗುಕ್ತಿಸ್ತು ಜ್ಞಾನಭಕ್ತ್ಯೋಃ ಪೃಥಗುಕ್ತಿರಿವೈಕದೇಶಾಪೇಕ್ಷಯೇತಿ ಭಾವಃ । ॥ 2 ॥**

**ಅನುವಾದ**- ಎಲೈ ! ಪಾಂಡುನಂದನ ! ಏಕೆಂದರೆ, **ಕಶ್ಚನ**= ಯಾರು, **ಅಸಂನ್ಯಸ್ತಸಂಕಲ್ಪಃ** = ಸಂಕಲ್ಪವನ್ನು ತ್ಯಾಗಮಾಡದವನೋ ಸಂನ್ಯಾಸವಿಲ್ಲದ ಕೇವಲ ಕರ್ಮಾನುಷ್ಠಾನವುಳ್ಳವನೋ ಎಂದು ಅರ್ಥ. **ಯೋಗೀ** = ಜ್ಞಾನಸಾಧನವುಳ್ಳವನು ಆಗುವುದಿಲ್ಲ . ಕೇವಲ ಸಾಮಗ್ರಿಯ ಒಂದು ಅಂಶವು ಕಾರ್ಯವನ್ನು ಹುಟ್ಟಿಸಲು ಶಕ್ತವಾಗುವುದಿಲ್ಲ. ಕೆಲವುಕಡೆ ಸಂನ್ಯಾಸವನ್ನು ಯೋಗಕ್ಕಿಂತ ಪ್ರತ್ಯೇಕವಾಗಿ ಹೇಳಿದ್ದರೂ ಜ್ಞಾನ ಭಕ್ತಿಗಳನ್ನು ಪ್ರತ್ಯೇಕವಾಗಿ ಹೇಳುವಂತೆ ಒಂದಂಶವನ್ನು ಮಾತ್ರ ಹೇಳಿದ್ದಾರೆ ಎಂದು ತಾತ್ಪರ್ಯ.

**ವಿವರಣೆ**- ಒಂದು ಕಾರ್ಯ ಹುಟ್ಟಲು ಬೇಕಾದ ಎಲ್ಲಾ ಕಾರಣಗಳ ಸಮೂಹವನ್ನು ಸಾಮಗ್ರಿ

ಎನ್ನುವರು. **ಉದಾ-** ಮಡಕೆ ಆಗಲು ಮಣ್ಣು, ನೀರು, ಚಕ್ರ, ದಂಡ, ಕುಂಬಾರ ಇಷ್ಟೂ ಕಾರಣಗಳು. ಇವುಗಳನ್ನೆಲ್ಲ ಸೇರಿಸಿದಾಗ ಸಮೂಹವನ್ನೇ ಸಾಮಗ್ರಿ ಎಂದು ಕರೆಯುತ್ತಾರೆ. ಮಣ್ಣು ಮಡಕೆಗೆ ಕಾರಣವಾದರೂ ಸಾಮಗ್ರಿ ಅಲ್ಲ. ಅಂದರೆ ಮಣ್ಣು ಮಾತ್ರ ಇದ್ದರೆ ಮಡಕೆ ಆಗುವುದಿಲ್ಲ. ಇಲ್ಲಿ ಜ್ಞಾನಕ್ಕೆ ಸಾಮಗ್ರಿ ಕಾಮಸಂಕಲ್ಪತ್ಯಾಗ ಹಾಗೂ ವಿಹಿತಕರ್ಮಾನುಷ್ಠಾನ. ಇದರಲ್ಲಿ ಸಾಮಗ್ರಿಯ ಒಂದಂಶವಾದ ಸಂಕಲ್ಪ ತ್ಯಾಗಾದಿಗಳು ಇಲ್ಲದೆ ಕರ್ಮಾನುಷ್ಠಾನ ಮಾತ್ರ ಇದ್ದರೆ ಕಾರಣ ಇದ್ದರೂ ಸಾಮಗ್ರಿ ಇಲ್ಲ. ಕರ್ಮಗಳನ್ನು ಮಾತ್ರ ಆಚರಿಸುವವನು ಜ್ಞಾನಸಾಧನ ವುಳ್ಳವನಾಗುವುದಿಲ್ಲ. ಕೇವಲ ಕರ್ಮ ಜ್ಞಾನಕ್ಕೆ ಕಾರಣ ಆಗುವುದಿಲ್ಲ ಎಂದು ಅರ್ಥ. ॥ 2 ॥

## ಸಾಧಕನಿಗೆ ನಾನಾಜನಶುಶ್ರೂಷೆಯ ಅಗತ್ಯವಿದೆ

**ಆರುರುಕ್ಷೋರ್ಮುನೇರ್ಯೋಗಂ ಕರ್ಮಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥ 3 ॥**

**ಅರ್ಥ-** ಅಪರೋಕ್ಷಜ್ಞಾನಸಾಧನೆಯ ಪೂರ್ಣತೆಯನ್ನು ಬಯಸುವ ಪರೋಕ್ಷಜ್ಞಾನಿಗೆ ನಿಷ್ಕಾಮ ಕರ್ಮಾಚರಣೆಯು ಅಪರೋಕ್ಷಜ್ಞಾನಕ್ಕೆ ಕಾರಣವಾಗುತ್ತದೆ. ಅಪರೋಕ್ಷಜ್ಞಾನಿಗೆ ಧ್ಯಾನ, ಪ್ರವಚನ, ಅರ್ಚನ ಮೊದಲಾದ ಕರ್ಮಗಳು ಮೋಕ್ಷದಲ್ಲಿ ಆನಂದದ ವೃದ್ಧಿಗೆ ಕಾರಣವಾಗುತ್ತದೆ.

ಅಥವಾ , ಅಪರೋಕ್ಷಜ್ಞಾನವನ್ನು ಬಯಸುವ ಪರೋಕ್ಷಜ್ಞಾನಿಯು ಉತ್ತಮರು, ಸಮಾನರು, ಕೆಳಗಿನವರು ಎಂಬ ಎಲ್ಲಾ ವಿಧದ ಜನರಿಗೆ ಉಪಕಾರವನ್ನು ಭಗವಂತನ ಸೇವೆ ಎಂದು ಮಾಡಬೇಕು. ಇಂಥಹ ಸೇವೆಯೂ ಅಪರೋಕ್ಷಜ್ಞಾನಕ್ಕೆ ಕಾರಣವಾಗುತ್ತದೆ. ಅಪರೋಕ್ಷ ಜ್ಞಾನವನ್ನು ಪಡೆದ ಜೀವಿಯೂ ಉತ್ತಮರಿಗೆ ಮಾತ್ರ ಉಪಕಾರ ರೂಪವಾದ ಸೇವೆಯನ್ನು ಮಾಡಬೇಕು. (ಸಮಾನರು, ಕಿರಿಯರು ಇವರ ಉಪಕಾರರೂಪ ಸೇವೆಯನ್ನು ಮಾಡಬೇಕಾಗಿಲ್ಲ). ಧ್ಯಾನ ಅರ್ಚನ, ಪ್ರವಚನಾದಿ ಕರ್ಮಗಳನ್ನು ಮಾಡಬೇಕು . ಇಂಥಹ ಕರ್ಮಗಳು ಮೋಕ್ಷದಲ್ಲಿ ಆನಂದದ ವೃದ್ಧಿಗೆ ಕಾರಣವಾಗುತ್ತದೆ.

**ಧ್ಯಾನಾಧಿಕಾರತ್ವೇನೋಕ್ತೋ ಮುಖ್ಯಃ ಕರ್ಮಯೋಗಃ ಕಿಂ ಸಕೃದನುಷ್ಠೇಯ ಉತ ಫಲಪ್ರಾಪ್ತಿಪರ್ಯಂತಮಿತ್ಯತಃ ಫಲಪರ್ಯಂತಮಿತ್ಯಾಹ-ಆರುರುಕ್ಷೋರಿತಿ ॥ ಯೋಗಂ ಜ್ಞಾನೋಪಾಯಂ ಆರುರುಕ್ಷೋಃ ಸಂಪೂರ್ಣಂ ಕಾಮಯಮಾನಸ್ಯ ಮುನೇಃ ಪರೋಕ್ಷಜ್ಞಾನಿನಃ ಕರ್ಮ ಕಾರಣಮುಚ್ಯತೇ । ಯೋಗಾರೋಹರೂಪಸಾಕ್ಷಾತ್ಕಾರಸ್ಯೇತಿ ಯೋಜ್ಯಮ್ । ಅಪರೋಕ್ಷರೂಪ-ಫಲೋದಯಪರ್ಯಂತಂ ಕಾರ್ಯಮಿತಿ ಭಾವಃ । ತಸ್ಯೈವ ಮುನೇರ್ಯೋಗಾ-**

**ರೂಢಸ್ಯ ಸಂಪೂರ್ಣಜ್ಞಾನೋಪಾಯಸ್ಯಾಪರೋಕ್ಷಜ್ಞಾನಿನಃ ಶಮಃ ಉಪಲಕ್ಷಣಂ ಭಗವನ್ನಿಷ್ಠಬುದ್ಧಿತ್ವರೂಪ ಧ್ಯಾನವ್ಯಾಖ್ಯಾನಾರ್ಚನಾದಿಕಂ ಕರ್ಮ ಕಾರಣಂ ಮುಕ್ತಿಗತಸುಖಾತಿಶಯಸ್ಯೇತಿ ಯೋಜ್ಯಮ್ ।**

**ಅನುವಾದ-** ಧ್ಯಾನಕ್ಕೆ ಸಹಕಾರಿ ಎಂದು ಹೇಳಿದ ಮುಖ್ಯವಾದ ಕರ್ಮಯೋಗವನ್ನು ಒಂದು ಬಾರಿ ಅನುಷ್ಠಾನ ಮಾಡಿದರೆ ಸಾಕೇ ? ಅಥವಾ ಫಲ ಬರುವವರೆಗೆ ಮಾಡಬೇಕೇ ? ಎಂದು ಪ್ರಶ್ನೆ ಬಂದರೆ ಫಲಪ್ರಾಪ್ತಿಯಾಗುವವರೆಗೆ ಮಾಡಬೇಕು ಎಂದು '**ಆರುರುಕ್ಷೋಃ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. **ಯೋಗಂ**= ಜ್ಞಾನ ಸಾಧನವನ್ನು, **ಆರುರುಕ್ಷೋಃ**= ಸಂಪೂರ್ಣವಾಗಿ ಬಯಸುವ, **ಮುನೇಃ** = ಪರೋಕ್ಷಜ್ಞಾನಿಗೆ (ನಾನಾಜನರ ಉಪಕಾರ ರೂಪವಾದ) ಕರ್ಮವು ಕಾರಣವಾಗುತ್ತದೆ. ಜ್ಞಾನಸಾಧನದ ಪೂರ್ಣತೆಯ ರೂಪವಾದ ಅಪರೋಕ್ಷಜ್ಞಾನಕ್ಕೆ ಎಂದು ಇಟ್ಟುಕೊಳ್ಳಬೇಕು. ಅಪರೋಕ್ಷಜ್ಞಾನ ಎಂಬ ಫಲಪ್ರಾಪ್ತಿ ಆಗುವವರೆಗೆ (ಕರ್ಮಗಳನ್ನು) ಮಾಡಬೇಕು ಎಂದು ತಾತ್ಪರ್ಯ. **ತಸ್ಯೈವ ಮುನೇಃ** = ಆ ಸಾಧಕನಾದ, **ಯೋಗಾರೂಢಸ್ಯ**= ಜ್ಞಾನಸಾಧನೆಯ ಪೂರ್ಣತೆಯನ್ನು ಪಡೆದ ಅಪರೋಕ್ಷ ಜ್ಞಾನಿಗೆ , **ಶಮಃ** = ಭಗವಂತನಲ್ಲಿ ಆಸಕ್ತವಾದ ಬುದ್ಧಿ ಎಂದರೆ ಧ್ಯಾನ, ಪ್ರವಚನ, ಪೂಜಾದಿ ಕರ್ಮಗಳು, **ಕಾರಣಂ** = ಕಾರಣವಾಗುತ್ತವೆ , ಮುಕ್ತಿಯಲ್ಲಿ ಆನಂದವೃದ್ಧಿಗೆ ಎಂದು ಸೇರಿಸಿಕೊಳ್ಳಬೇಕು .

**ಯದ್ಯಪ್ಯಯಂ ಪ್ರಶ್ನೋ 'ಯದಾ ತೇ ಮೋಹಕಲಿಲಂ' (2-52) ಇತ್ಯನೇನ ದ್ವಿತೀಯೇ ಪರಿಹೃತಃ । ತಥಾಪಿ ತತ್ರ ಪರೋಕ್ಷಜ್ಞಾನಾರ್ಥಿನೋऽತ್ರ ತು ಯೋಗಾರೋಹಶಬ್ದಿತಸಂಪೂರ್ಣೋಪಾಯಶಬ್ದಿತಾಪರೋಕ್ಷಜ್ಞಾನಾರ್ಥಿನ ಇತಿ ಭೇದ ಇತಿ ಭಾವಃ । ಯದ್ವಾ ಯೋಗಾರೂಢಸ್ಯೇತ್ಯುತ್ತರಾರ್ಧೇ ಅಪರೋಕ್ಷ-ಜ್ಞಾನಿನೋ ಧ್ಯಾನಾದಿಕಂ ಕರ್ಮ ವಕ್ತುಂ 'ಯದಾ ತ' ಇತಿ ಶ್ಲೋಕೋಕ್ತಸ್ಯೈವ ಪ್ರಶ್ನೋತ್ತರಸ್ಯ ಪೂರ್ವಾರ್ಧೇನಾನುವಾದ ಇತಿ ಜ್ಞೇಯಮ್ ।**

**ಅನುವಾದ -** ವಸ್ತುತಃ ಎಲ್ಲಿಯ ವರೆಗೆ ಕರ್ಮಯೋಗವನ್ನು ಆಚರಿಸಬೇಕು ಎಂಬ ಈ ಪ್ರಶ್ನೆಗೆ ಎರಡನೇ ಅಧ್ಯಾಯದ '**ಯದಾ ತೇ ಮೋಹಕಲಿಲಂ**' ಎಂಬ 52ನೇ ಶ್ಲೋಕದಲ್ಲಿ ಉತ್ತರವನ್ನು ಹೇಳಿ ಆಗಿದೆ, ಆದರೂ ಅಲ್ಲಿ ಪರೋಕ್ಷಜ್ಞಾನಿಯು ಎಲ್ಲಿಯ ತನಕ ಕರ್ಮಯೋಗ ವನ್ನು ಆಚರಿಸಬೇಕು ಎಂದು ಹೇಳಿದೆ. ಇಲ್ಲಿ '**ಯೋಗಾರೋಹ**' ಎಂಬ ಶಬ್ದದಿಂದ ಹೇಳಿದ ಸಾಧನೆಯ ಪೂರ್ಣತೆಯನ್ನು ಪಡೆದ ಅಪರೋಕ್ಷ ಜ್ಞಾನಿಯು ಎಲ್ಲಿಯ ತನಕ ಕರ್ಮ ಮಾಡಬೇಕು ಎಂದು ಹೇಳುತ್ತಿದ್ದಾನೆ. ಆದ್ದರಿಂದ ಹಿಂದೆ ಹೇಳಿದ್ದಕ್ಕೂ ಈಗ ಹೇಳುತ್ತಿರುವುದಕ್ಕೂ ವ್ಯತ್ಯಾಸವಿದೆ. ಅಥವಾ '**ಯೋಗಾರೂಢಸ್ಯ**' ಎಂಬ ಉತ್ತರಾರ್ಧದಲ್ಲಿ ಅಪರೋಕ್ಷಜ್ಞಾನಿಗೆ

ಧ್ಯಾನಾದಿ ಕರ್ಮಗಳನ್ನು ಹೇಳಲು, **'ಯದಾ ತೇ ಮೋಹಕಲಿಲಂ'** ಎಂಬ ಶ್ಲೋಕದಲ್ಲಿ ಹೇಳಿದ ಪರೋಕ್ಷಜ್ಞಾನಿಯು ಎಲ್ಲಿಯ ತನಕ ಕರ್ಮ ಮಾಡಬೇಕು ? ಎಂಬ ಪ್ರಶ್ನೆಯ ಉತ್ತರವನ್ನು ಪೂರ್ವಾರ್ಧದಲ್ಲಿ ಅನುವಾದ ಮಾಡುತ್ತಿದ್ದಾನೆ ಎಂದು ತಿಳಿಯಬೇಕು.

**ಯದ್ವಾ ಕರ್ಮಧ್ಯಾನಯೋಗಯೋರ್ಮಧ್ಯೇ ಜ್ಞಾನಾರ್ಥಿನಾ ಕೀದೃಶೋ ಯೋಗೋಽವಶ್ಯಾಪೇಕ್ಷಿತ ಇತ್ಯತ ಆಹ- ಆರುರುಕ್ಷೋರಿತಿ ॥ ಪೂರ್ವಾರ್ಧೇನ ಜ್ಞಾನಾರ್ಥಿನಃ ಉತ್ತಮಾಧಮಮಧ್ಯಮಸ್ವರೂಪನಾನಾಜನಶುಶ್ರೂಷಾಖ್ಯಮೇವ ಕರ್ಮಾವಶ್ಯಾಪೇಕ್ಷಿತಮಿತ್ಯುಚ್ಯತೇ । (ಜ್ಞಾನಾರ್ಥಿನೋ ಯಥಾಶಕ್ತಿ ತ್ರಿವಿಧ-ಪ್ರಾಣಿನಾಂ ಶುಶ್ರೂಷಯೋಪಕಾರಕೃತಃ ಹರಿಸ್ತುಷ್ಟಃ ಸ್ವಾಪರೋಕ್ಷಂ ದದಾತಿ । ತೇನ ತದವಶ್ಯಂ ಕಾರ್ಯಮಿತ್ಯುಚ್ಯತೇ) ಚರಮಾರ್ಧೇನ ತು ಜ್ಞಾನಿನೋ ನಾನಾಜನ-ಶುಶ್ರೂಷಾಖ್ಯಕರ್ಮೋಪಶಮ ಏವ ಶಮಪದೇನೋಚ್ಯತೇ । ನತು ಧ್ಯಾನಾ-ದ್ಯುಪಶಮಃ । ತತ್ತು ಕಾರ್ಯಮೇವೇತ್ಯುಚ್ಯತೇ । ಶಮಪದಸ್ಯೋಭಯಾರ್ಥತ್ವಾತ್ (ತಸ್ಯ ಸ್ವೋತ್ತಮಸೇವಯೈವೇಷ್ಟಸಿದ್ಧೌ ಅನ್ಯಶುಶ್ರೂಷಯಾ ಕೃತ್ಯಾಭಾವಾತ್) ಏವಂ ಚಾತ್ರ ಶ್ಲೋಕೇ ಪೂರ್ವಾರ್ಧೇ ಜ್ಞಾನಾರ್ಥಿನಃ ಕರ್ಮಾಪೇಕ್ಷಿತಮಿತ್ಯು-ಕ್ತ್ವೋತ್ತರಾರ್ಧೇ ಜ್ಞಾನಿನಃ ಶಮಪದೇನ ಕರ್ಮೋಪಶಮೋಽಪೇಕ್ಷಿತ ಇತ್ಯು-ಚ್ಯತೇ । ತಥಾ ಚ 'ನ ನಿರಗ್ನಿರ್ನಚಾಕ್ರಿಯೋ ಯೋಗೀ'ತ್ಯಾದ್ಯುಕ್ತಿವಿರೋಧ ಇತಿ ಪ್ರತ್ಯುಕ್ತಂ ಧ್ಯೇಯಮ್ । ಕರ್ಮಶಮಶಬ್ದಾಭ್ಯಾಂ ನಾನಾಜನಶುಶ್ರೂಷಾಖ್ಯ-ಕರ್ಮತದುಪಶಮಯೋರೇವಾತ್ರ ವಿವಕ್ಷಿತತ್ವಾದಿತಿ ॥ 3 ॥**

**ಅನುವಾದ**- ಅಥವಾ ಅಪರೋಕ್ಷಜ್ಞಾನವನ್ನು ಬಯಸುವ ಪರೋಕ್ಷಜ್ಞಾನಿಯು ಕರ್ಮ-ಯೋಗ ಮತ್ತು ಧ್ಯಾನಯೋಗ ಇವುಗಳ ಮಧ್ಯದಲ್ಲಿ ಯಾವ ಯೋಗವನ್ನು ಅವಶ್ಯವಾಗಿ ಮಾಡಲೇಬೇಕು ಎಂಬ ಪ್ರಶ್ನೆಗೆ ಉತ್ತರವನ್ನು **'ಆರುರುಕ್ಷೋಃ'** ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. ಪೂರ್ವಾರ್ಧದಲ್ಲಿ ಅಪರೋಕ್ಷಜ್ಞಾನವನ್ನು ಬಯಸುವ ಪರೋಕ್ಷಜ್ಞಾನಿಯು ಉತ್ತಮರು, ಸಮಾನರು. ಕಿರಿಯರು ಎಂಬ ನಾನಾ ಜನರ ಸೇವಾರೂಪವಾದ ಕರ್ಮವನ್ನು ಅವಶ್ಯವಾಗಿ ಮಾಡಲೇಬೇಕು ಎಂದು ಹೇಳುತ್ತಿದ್ದಾನೆ. (ಯಥಾಶಕ್ತಿ ತ್ರಿವಿಧ ಜೀವರ ಸೇವಾರೂಪವಾದ ಉಪಕಾರವನ್ನು ಮಾಡಿದ ಪರೋಕ್ಷಜ್ಞಾನಿಗೆ ಭಗವಂತನು ಪ್ರಸನ್ನನಾಗಿ ತನ್ನ ದರ್ಶನವನ್ನು ಕೊಡುತ್ತಾನೆ. ಆದ್ದರಿಂದ ಅವಶ್ಯವಾಗಿ ನಾನಾಜನರ ಸೇವಾರೂಪವಾದ ಕರ್ಮವನ್ನು ಮಾಡಲೇಬೇಕು). ಉತ್ತರಾರ್ಧದಲ್ಲಿ ಅಪರೋಕ್ಷಜ್ಞಾನಿಯು ಕಿರಿಯರು, ಸಮಾನರು ಎಂಬ ನಾನಾಜನರ ಉಪಕಾರರೂಪಸೇವೆಯನ್ನು ಮಾಡಬೇಕಾಗಿಲ್ಲ ಎಂದು **ಶಮ**= ಎಂದರೆ ಮಾಡದೇ ಇರುವಿಕೆಯನ್ನು ಹೇಳುತ್ತಿದ್ದಾನೆ . ಧ್ಯಾನಾದಿಗಳನ್ನು ಮಾಡಬಾರದು ಎಂದು

ಹೇಳುತ್ತಿಲ್ಲ. ಅಪರೋಕ್ಷಜ್ಞಾನಿಯೂ ಧ್ಯಾನ ಪ್ರವಚನ ಪೂಜಾದಿಗಳನ್ನು ಮಾಡಲೇಬೇಕು. **ಶಮ**= ಎಂದರೆ ಧ್ಯಾನ ಎಂದೂ ಅರ್ಥ, ಉಪಶಮ (ಮಾಡಬಾರದು) ಎಂದೂ ಅರ್ಥ. (ಅಪರೋಕ್ಷಜ್ಞಾನಿಗೆ ಸ್ವೋತ್ತಮರ ಸೇವೆಯಿಂದಲೇ ಅಭೀಷ್ಟಪ್ರಾಪ್ತಿಯಾಗುವುದರಿಂದ ಇತರ ಜನರ ಸೇವೆಯಿಂದ ಪ್ರಯೋಜನವಿಲ್ಲ). ಆದ್ದರಿಂದ ಈ ಶ್ಲೋಕದ ಪೂರ್ವಾರ್ಧದಲ್ಲಿ ಪರೋಕ್ಷಜ್ಞಾನಿಯು ಕರ್ಮವನ್ನು ಮಾಡಬೇಕು ಎಂದು ತಿಳಿಸಿ, ಉತ್ತರಾರ್ಧದಲ್ಲಿ ಅಪರೋಕ್ಷ ಜ್ಞಾನಿಯು ಕರ್ಮವನ್ನು ಮಾಡಬೇಕಿಲ್ಲ ಎನ್ನುತಿರುವುದರಿಂದ '**ನ ನಿರಗ್ನಿರ್ನ ಚಾಕ್ರಿಯಃ ಯೋಗೀ**' ಎಂಬ ಶ್ಲೋಕದಲ್ಲಿ ಹೇಳಿದ ವಿಚಾರಕ್ಕೆ ವಿರೋಧ ಬರುತ್ತದೆ ಎಂಬ ಆಕ್ಷೇಪವನ್ನು ಪರಿಹರಿಸಿದಂತಾಯಿತು. ಕರ್ಮ ಮತ್ತು ಶಮ ಪದಗಳಿಂದ ಕ್ರಮವಾಗಿ ನಾನಾಜನರ ಸೇವಾರೂಪವಾದ ಕರ್ಮ ಮತ್ತು ಆ ಕರ್ಮಗಳ ತ್ಯಾಗವನ್ನು ಮಾತ್ರ ಇಲ್ಲಿ ಹೇಳುತ್ತಿದ್ದಾರೆ.

**ವಿವರಣೆ**- 'ನ ನಿರಗ್ನಿಃ ನ ಚಾಕ್ರಿಯಃ' ಎಂಬಲ್ಲಿ (ಅ-6 ಶ್ಲೋಕ - 1) ಅಗ್ನಿ ತ್ಯಾಗಿಯು ಅಥವಾ ಕರ್ಮತ್ಯಾಗಿಯು ಸಂನ್ಯಾಸಿ, ಯೋಗಿ ಆಗಲಾರ ಎಂದು ಹೇಳಿದೆ. ಅಂದರೆ ಜ್ಞಾನಿಯಾದರೂ ಕರ್ಮಗಳನ್ನು ಆಚರಿಸಲೇ ಬೇಕು ಎಂದು ಹೇಳಿದಂತಾಯಿತು. ಈ ಶ್ಲೋಕದಲ್ಲಿ (ಅ. 6 ಶ್ಲೋ. 3) '**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ**' ಎಂದು ಅಪರೋಕ್ಷ ಜ್ಞಾನಿಯಾದವನಿಗೆ **ಶಮಃ = ಉಪಶಮಃ** = ಸಕಲ ಕರ್ಮತ್ಯಾಗವು ಮೋಕ್ಷಕ್ಕೆ ಕಾರಣವಾಗುತ್ತದೆ ಎಂದಿದ್ದಾನೆ. ಅಂದರೆ ಜ್ಞಾನಿಗೆ ಕರ್ಮವು ಬೇಕಾಗಿಲ್ಲ. ಕರ್ಮವನ್ನು ತ್ಯಾಗಮಾಡಿ ಮೋಕ್ಷವನ್ನು ಪಡೆಯುತ್ತಾನೆ ಎಂದು ಹೇಳಿದಂತಾಯಿತು. ಆದ್ದರಿಂದ ಪೂರ್ವಾಪರ ವಿರೋಧ ಬರುತ್ತದೆ ಎಂದು ಆಕ್ಷೇಪ. ಈ ಆಕ್ಷೇಪವನ್ನು ಇಲ್ಲಿ ಪರಿಹರಿಸಿದ್ದಾರೆ. ಜ್ಞಾನಿಯಾದರೂ ಕರ್ಮಗಳನ್ನು ಆಚರಿಸಲೇ ಬೇಕು ಎಂದು ಈ ಶ್ಲೋಕದಲ್ಲಿಯೂ ಹೇಳುತ್ತಿದ್ದಾನೆ . ಆದರೆ ಜ್ಞಾನಿಯಾದವನಿಗೆ ಕೆಲವು ಕರ್ಮಗಳನ್ನು ಆಚರಿಸುವುದರಲ್ಲಿ ವಿನಾಯತಿ ಇದೆ. ಅಂದರೆ ಅಪರೋಕ್ಷಜ್ಞಾನಿಯು ಸ್ವೋತ್ತಮರ ಸೇವಾರೂಪ ಕರ್ಮವನ್ನು ಮಾಡಬೇಕು. ಸ್ವಾಧಮರ, ಸ್ವಸಮಾನರ ಸೇವಾರೂಪ ಕರ್ಮಗಳನ್ನು ಮಾಡಬೇಕಾಗಿಲ್ಲ ಎಂದು ಕರ್ಮಗಳನ್ನು ಆಚರಿಸುವ ವಿಷಯದಲ್ಲಿ ಅಪರೋಕ್ಷ ಜ್ಞಾನಿಗೆ ವಿನಾಯತಿಯನ್ನು ಹೇಳುತ್ತಿದ್ದಾನೆ. ಸರ್ವಥಾ ಕರ್ಮ ಬೇಡವೇ ಬೇಡ ಎಂದು ಹೇಳುತ್ತಿಲ್ಲ, ಆದ್ದರಿಂದ ಪೂರ್ವಾಪರ ವಿರೋಧ ಬರುವುದಿಲ್ಲ.

**ಗೀತಾ ತಾತ್ಪರ್ಯದಲ್ಲಿ** - ಶ್ರೀಮದಾಚಾರ್ಯರು ಪರೋಕ್ಷಜ್ಞಾನಿಗೆ ಸಕಲ ಜೀವಿಗಳ ಸೇವೆಯು ಅವಶ್ಯ ಕರ್ತವ್ಯ ಎಂದು ತಿಳಿಸಲು '**ನಾನಾ ಜನಸ್ಯ ಶುಶ್ರೂಷಾ ಕರ್ಮಾಖ್ಯಾ ಕರವನ್ಮಿತೇಃ**' ಎಂಬ ಪ್ರವೃತ್ತ ಗ್ರಂಥವನ್ನು ಉದಾಹರಿಸಿದ್ದಾರೆ. ಅಪರೋಕ್ಷಜ್ಞಾನಿಗೆ ಸರ್ವಥಾ ಸಕಲ ಕರ್ಮತ್ಯಾಗ ಇಲ್ಲವೇ ಇಲ್ಲ ಎಂಬುದನ್ನೂ ಸಮರ್ಥಿಸಿದ್ದಾರೆ. '**ಸಿದ್ಧೋಪಾಯೇ ನ ವಿಷ್ಣೋಸ್ತು ಧ್ಯಾನ ವ್ಯಾಖ್ಯಾರ್ಚನಾದಿಕಮ್ ಕಾರ್ಯಂ ನಾನ್ಯತ್**'ಎಂಬ ಪ್ರಮಾಣವನ್ನು

ಉದಾಹರಿಸಿ ಧ್ಯಾನ ಪ್ರವಚನಾದಿ ಕರ್ಮಗಳನ್ನು ಮಾಡಲೇಬೇಕು. ಇತರ ಕರ್ಮಗಳ ಆಚರಣೆಯ ಆವಶ್ಯಕತೆ ಇಲ್ಲ ಎಂದು ತಿಳಿಸಿದ್ದಾರೆ . ||3||

## ಧ್ಯಾನಯೋಗಿಯ ಲಕ್ಷಣ

**ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಂಕಲ್ಪಸನ್ಯಾಸೀ ಯೋಗಾರೂಢಸ್ತದೋಚ್ಯತೇ ॥ 4 ॥**

**ಅರ್ಥ-** ಮಮಕಾರಾದಿಗಳ ಉತ್ಪತ್ತಿಯೂ ಭಗವಂತನ ಅಧೀನ ಎಂದು ತಿಳಿದು, ಸಕಲ ಕರ್ಮಗಳಲ್ಲಿ ಮಮಕಾರಾದಿಗಳನ್ನು ತ್ಯಜಿಸಿ, ಸಕಲೇಂದ್ರಿಯಗಳ ವಿಷಯ ಪದಾರ್ಥಗಳಲ್ಲಿ ಮತ್ತು ಕಾಮ್ಯಕರ್ಮಗಳಲ್ಲಿ ಪ್ರಯತ್ನವಿಲ್ಲದೆ ಸಹಜವಾಗಿ ಅನಾಸಕ್ತನಾಗಿ ಇರಲು ಯಾವಾಗ ಶಕ್ತವಾಗುವನೋ ಆಗ ಅವನನ್ನು ಅಪರೋಕ್ಷಜ್ಞಾನಿ ಎಂದು ಹೇಳಬಹುದು.

**ಯೋಗಾರೂಢಶಬ್ದಿತಸಂಪೂರ್ಣೋಪಾಯಸಿದ್ಧಿಮತೋ ಲಕ್ಷಣಮಾಹ- ಯದೇತಿ ॥ ಯದಾ ಹೀಂದ್ರಿಯಾರ್ಥೇಷು ಶಬ್ದಾದಿವಿಷಯೇಷು ಕರ್ಮಸು ಚ ಪ್ರಯತ್ನಂ ವಿನಾಽಪಿ ನಾನುಷಜ್ಜತೇ । ನನು ಕರ್ಮಾನನುಷಂಗೋ ನಾಮ ಕರ್ಮಸ್ವರೂಪತ್ಯಾಗ ಏವ । ತಥಾ ಚ 'ನ ಚಾಕ್ರಿಯೋ ಯೋಗೀ'ತಿ ಪ್ರಾಗುಕ್ತ- ವಿರೋಧ ಇತ್ಯತಃ ಕರ್ಮಾನನುಷಂಗಂ ಸ್ವಯಮೇವ ವ್ಯಾಖ್ಯಾತಿ ಸರ್ವೇತಿ ॥**

**ಅನುವಾದ -** ಯೋಗಾರೂಢ ಶಬ್ದದಿಂದ ಹೇಳಿದ ಜ್ಞಾನಸಾಧನೆಯನ್ನು ಪರಿಪೂರ್ಣವಾಗಿ ಮಾಡಿದ ಅಪರೋಕ್ಷಜ್ಞಾನಿಯ ಲಕ್ಷಣವನ್ನು **'ಯದಾ ಹಿ'** ಎಂಬ ಶ್ಲೋಕದಿಂದ ವಿವರಿಸುತ್ತಿದ್ದಾನೆ. ಯಾವಾಗ **ಇಂದ್ರಿಯಾರ್ಥೇಷು**= ಶಬ್ದಾದಿವಿಷಯಪದಾರ್ಥಗಳಲ್ಲಿ ಮತ್ತು ಕರ್ಮಗಳಲ್ಲಿಯೂ ಪ್ರಯತ್ನವಿಲ್ಲದೆ ಸಹಜವಾಗಿ ಅನಾಸಕ್ತನಾಗುತ್ತಾನೋ. (ಆಗ ಅವನನ್ನು ಜ್ಞಾನಿ ಎನ್ನಬಹುದು) ಹೀಗೊಂದು ಆಕ್ಷೇಪ– **ಕರ್ಮಾನನುಷಂಗ** ಎಂದರೆ ಕರ್ಮಸ್ವರೂಪವನ್ನೇ ಬಿಡುವುದು ಎಂದರ್ಥ, ಆದ್ದರಿಂದ **'ನ ಚಾಕ್ರಿಯಃ ಯೋಗೀ'** (ಕರ್ಮತ್ಯಾಗಿಯು ಯೋಗಿಯಲ್ಲ) ಎಂದು ಹೇಳಿದ್ದಕ್ಕೆ ವಿರೋಧ ಬರುತ್ತದೆ ಎಂದು. ಈ ಆಕ್ಷೇಪವನ್ನು ಪರಿಹರಿಸಲು ಕರ್ಮಾನನುಷಂಗ ಶಬ್ದದ ಅರ್ಥವನ್ನು ಶ್ರೀಕೃಷ್ಣ ತಾನೇ **'ಸರ್ವ'** ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾನೆ.

**ವಿವರಣೆ - ಕರ್ಮಾನನುಷಂಗ** ಎಂದರೆ ಸಕಲ ಕರ್ಮತ್ಯಾಗ ಎಂದರ್ಥ. ಈ ಶ್ಲೋಕದಲ್ಲಿ ಜ್ಞಾನಿಯ ಲಕ್ಷಣವನ್ನು ಹೇಳುತ್ತಾ ಅವನು ಕರ್ಮಾನನುಷಂಗವುಳ್ಳವನು ಎಂದು ವಿವರಿಸಿದ್ದಾನೆ. ಹಾಗಾದರೆ ಜ್ಞಾನಿಗೆ ಕರ್ಮದ ಆವಶ್ಯಕತೆ ಇಲ್ಲ ಎಂದು ಹೇಳಿದಂತಾಯಿತು. ಆದ್ದರಿಂದ **'ನ ಚಾಕ್ರಿಯಃ ಯೋಗೀ'** (ಕರ್ಮತ್ಯಾಗಿಯು ಯೋಗಿಯಲ್ಲ) ಎಂಬ

ವಾಕ್ಯದಿಂದ ವಿರೋಧ ಬರುತ್ತದೆ ಎಂದು ಶಂಕೆ ಬಂದರೆ ಜ್ಞಾನಿಗೂ ಕರ್ಮದ ಆವಶ್ಯಕತೆ ಇದೆ. ಕರ್ಮತ್ಯಾಗದಿಂದ ಜ್ಞಾನಿಯಾಗಲಾರ ಎಂದು ಸಮರ್ಥಿಸಲು 'ಕರ್ಮಾನನುಷಂಗ' ಶಬ್ದದ ಅರ್ಥವನ್ನು ಶ್ರೀಕೃಷ್ಣ ತಾನೇ ಸರ್ವಸಂಕಲ್ಪ ಸಂನ್ಯಾಸೀ ಎಂಬ ಭಾಗದಲ್ಲಿ ವಿವರಿಸಿದ್ದಾನೆ. 'ಕರ್ಮಾನನುಷಂಗ' ಎಂದರೆ ಸಕಲ ಕರ್ಮಗಳಲ್ಲಿ ಮಮಕಾರಾದಿಗಳ ತ್ಯಾಗ. ಸಕಲ ಕರ್ಮತ್ಯಾಗ ಎಂದು ಅರ್ಥವಲ್ಲ. ಆದ್ದರಿಂದ ಕರ್ಮತ್ಯಾಗಿಯು ಯೋಗಿಯಲ್ಲ '**ನ ಚಾಕ್ರಿಯಃ ಯೋಗೀ**' ಎಂದು ಹೇಳಿದ್ದು ಸರಿಯೇ. ಯಾವ ವಿರೋಧವೂ ಬರುವುದಿಲ್ಲ.

**ಜ್ಞಾನಿನಃ ಕರ್ಮಾನನುಷಂಗೋ ನಾಮ ಸರ್ವಕರ್ಮಸಂಕಲ್ಪನ್ಯಾಸ ಏವ । ಸರ್ವೇಷು ಕರ್ಮಸು ಸಂಕಲ್ಪತ್ಯಾಗೀ ಸನ್ ಕರ್ಮಸು ನಾನುಷಜ್ಜತೇ ಯದಾ ತದಾ ಯೋಗಾರೂಢ ಉಚ್ಯತೇ ಇತಿ ಯೋಜನಾ । ಕರ್ಮಸು ಸಂಕಲ್ಪತ್ಯಾಗೋ ನಾಮ ಮಮತಾತ್ಯಾಗ ಏವ । ಸಂಕಲ್ಪ ಕ್ರಿಯಾದಿಕಂ ಸರ್ವಂ ಭಗವದಧೀನಮಿತಿ-ಜ್ಞಾನಮೇವ । ಏವಂ ಚ ಸಂಕಲ್ಪಾದೇಃ ಭಗವದಧೀನತಾಜ್ಞಾನೇನ ಹೇತುನಾ ಕರ್ಮಸ್ವನಾಸಕ್ತತ್ವೇ ಸತ್ಯಪ್ರಯತ್ನೇನ ಶಬ್ದಾದಿವಿಷಯೇಷು ಅನಾಸಕ್ತತ್ವಂ ಯೋಗಾ-ರೂಢಸ್ಯ ಲಕ್ಷಣಮಿತ್ಯುಕ್ತಂ ಭವತಿ । ಅಪ್ರಯತ್ನೇನೇತಿ ವಿಶೇಷಣಾದ್ಯೋಗ-ಮಾರುರುಕ್ಷೌ ನಾತಿವ್ಯಾಪ್ತಿಃ । ತಸ್ಯಾನಾಸಕ್ತೇಃ ಪ್ರಯತ್ನಸಾಧ್ಯತ್ವಾತ್ ॥ 4 ॥**

**ಅನುವಾದ-** ಜ್ಞಾನಿಯ **ಕರ್ಮಾನನುಷಂಗ** ಎಂದರೆ ಸಕಲಕರ್ಮಗಳ ಸಂಕಲ್ಪ ತ್ಯಾಗ. ಯಾವಾಗ ಸಕಲಕರ್ಮಗಳಲ್ಲಿ ಸಂಕಲ್ಪವನ್ನು ತ್ಯಾಗಮಾಡಿ ಕರ್ಮಗಳಲ್ಲಿ ಆಸಕ್ತನಾಗುವುದಿಲ್ಲವೋ ಆಗ '**ಯೋಗಾರೂಢ**' ಎನಿಸುತ್ತಾನೆ ಎಂದು ಅನ್ವಯಾರ್ಥ. ಕರ್ಮಗಳಲ್ಲಿ ಸಂಕಲ್ಪತ್ಯಾಗ ಎಂದರೆ ಮಮಕಾರತ್ಯಾಗ. ಸಂಕಲ್ಪ, ಕ್ರಿಯಾ ಮೊದಲಾದವುಗಳೆಲ್ಲವೂ ಭಗವಂತನ ಅಧೀನ ಎಂಬ ವಿವೇಕ. ಆದ್ದರಿಂದ ಸಂಕಲ್ಪಾದಿಗಳೆಲ್ಲವೂ ಭಗವಂತನ ಅಧೀನ ಎಂದು ತಿಳಿದಿರುವ ಕಾರಣ ಕರ್ಮಗಳಲ್ಲಿ ಆಸಕ್ತನಾಗುವುದಿಲ್ಲ, ಅದರಿಂದಾಗಿ ಪ್ರಯತ್ನವಿಲ್ಲದೆ ಸಹಜವಾಗಿ ಶಬ್ದಾದಿ ವಿಷಯಗಳಲ್ಲಿ ಅನಾಸಕ್ತಿಯನ್ನು ಹೊಂದುತ್ತಾನೆ. ಇವನೇ ಜ್ಞಾನಿ ಎಂದು ಜ್ಞಾನಿಲಕ್ಷಣವನ್ನು ಹೇಳಿದಂತಾಯಿತು. ಅಪರೋಕ್ಷಜ್ಞಾನ ಸಾಧಕನಲ್ಲಿ ಅನಾಸಕ್ತಿಯು ಪ್ರಯುತ್ನಸಾಧ್ಯ ಹೊರತು ಸಹಜವಲ್ಲ, ಇಲ್ಲಿ ಪ್ರಯತ್ನವಿಲ್ಲದೆ, ಸಹಜವಾಗಿ ಎಂದು ವಿಶೇಷಣವನ್ನು ಹೇಳಿರುವುದರಿಂದ ಜ್ಞಾನಿಯ ಲಕ್ಷಣಕ್ಕೆ ಅಪರೋಕ್ಷಜ್ಞಾನ ಸಾಧಕನಲ್ಲಿ ಅತಿವ್ಯಾಪ್ತಿ ಬರುವುದಿಲ್ಲ.

**ವಿವರಣೆ-** ಯಾವುದರ ಲಕ್ಷಣವನ್ನು ಹೇಳುತ್ತೇವೋ ಅದು ಲಕ್ಷ್ಯ. ಉದಾ- ಹಸುವಿನ ಲಕ್ಷಣವನ್ನು ಹೇಳುವಾಗ ಹಸು ಲಕ್ಷ್ಯ. ಮನುಷ್ಯನ ಲಕ್ಷಣವನ್ನು ಹೇಳುವಾಗ ಮನುಷ್ಯ ಲಕ್ಷ್ಯ. ಜ್ಞಾನಿಯ ಲಕ್ಷಣವನ್ನು ಹೇಳುವಾಗ ಜ್ಞಾನಿಯು ಲಕ್ಷ್ಯ. ಲಕ್ಷ್ಯದಲ್ಲಿ ಮತ್ತು ಲಕ್ಷ್ಯಭಿನ್ನದಲ್ಲಿ

ಲಕ್ಷಣವು ಬಂದರೆ ಅತಿವ್ಯಾಪ್ತಿ. **ಉದಾ :** ಕೋಡು ಹಸುವಿನ ಲಕ್ಷಣ ಎಂದು ಹೇಳಿದಾಗ ಕೋಡು ಲಕ್ಷ್ಯವಾದ ಹಸುವಿನಲ್ಲಿಯೂ, ಲಕ್ಷ್ಯಭಿನ್ನವಾದ ಮಹಿಷದಲ್ಲಿಯೂ ಇದೆ. ಇಲ್ಲಿ ಅತಿವ್ಯಾಪ್ತಿ ದೋಷವನ್ನು ಹೇಳಬಹುದು. ಪ್ರಕೃತ ಶಬ್ದಾದಿ ವಿಷಯಗಳಲ್ಲಿ ಅನಾಸಕ್ತಿ ಜ್ಞಾನಿಯ ಲಕ್ಷಣ ಎಂದು ಹೇಳಿದರೆ ಈ ಲಕ್ಷಣವು ಲಕ್ಷ್ಯವಾದ ಜ್ಞಾನಿಯಲ್ಲಿಯೂ, ಲಕ್ಷ್ಯಭಿನ್ನನಾದ ಜ್ಞಾನಸಾಧಕನಲ್ಲಿಯೂ ಇದೆ. ಆದ್ದರಿಂದ ಜ್ಞಾನಿ ಲಕ್ಷಣಕ್ಕೆ ಜ್ಞಾನಸಾಧಕನಲ್ಲಿ ಅತಿವ್ಯಾಪ್ತಿ ದೋಷ ಬರುತ್ತದೆ. ಈ ದೋಷವನ್ನು '**ಅಪ್ರಯತ್ನೇನ**' ಎಂಬ ವಿಶೇಷಣವನ್ನು ಹೇಳುವುದರ ಮೂಲಕ ಪರಿಹರಿಸಿದ್ದಾನೆ. ಜ್ಞಾನ ಸಾಧಕನಲ್ಲಿ ಶಬ್ದಾದಿವಿಷಯಗಳಲ್ಲಿ ಅನಾಸಕ್ತಿ ಇದ್ದರೂ ಅದು ಪ್ರಯತ್ನ ಸಾಧ್ಯ. ಜ್ಞಾನಿಯಲ್ಲಿರುವ ಅನಾಸಕ್ತಿಯು ಪ್ರಯತ್ನ ಸಾಧ್ಯವಲ್ಲ ಅಂದರೆ ಸಹಜ. ಸಹಜವಾದ ಅನಾಸಕ್ತಿಯು ಜ್ಞಾನಿಯ ಲಕ್ಷಣ. ಈ ಲಕ್ಷಣವು ಜ್ಞಾನ ಸಾಧಕನಲ್ಲಿ ಇಲ್ಲ. ಆದ್ದರಿಂದ ಅತಿವ್ಯಾಪ್ತಿದೋಷ ಇಲ್ಲ ಎಂದು ಸಮರ್ಥಿಸಿದ್ದಾರೆ. ॥ 4 ॥

## ಮನಸ್ಸೇ ಮಿತ್ರ ಮತ್ತು ಶತ್ರು

**ಉದ್ಧರೇದಾತ್ಮನಾऽऽತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥ 5 ॥**

**ಅರ್ಥ**– ಮನಸ್ಸು ಜೀವನಿಗೆ ಬಂಧು. ಮನಸ್ಸೇ ಜೀವನಿಗೆ ಶತ್ರು. ಆದ್ದರಿಂದ ಜೀವನು ತನ್ನನ್ನು ಮನಸ್ಸಿನಿಂದ ಪುರುಷಾರ್ಥಕ್ಕೆ ಪಾತ್ರನನ್ನಾಗಿಸಬೇಕು. ತನ್ನನ್ನು ದುಃಖಕ್ಕೆ ಪಾತ್ರನನ್ನಾಗಿಸಬಾರದು.

ಅಥವಾ, ಭಗವಂತನೇ ಜೀವನಿಗೆ ಬಂಧು, ಭಗವಂತನೇ ಜೀವನಿಗೆ ಶತ್ರು. ಆದ್ದರಿಂದ ಜೀವನು ಭಗವಂತನ ಅನುಗ್ರಹದಿಂದ ತನ್ನನ್ನು ಪುರುಷಾರ್ಥಗಳಿಗೆ ಪಾತ್ರನನ್ನಾಗಿಸಿಕೊಳ್ಳಬೇಕು. ತನ್ನನ್ನು ದುಃಖಕ್ಕೆ ಪಾತ್ರನನ್ನಾಗಿಸಿಕೊಳ್ಳಬಾರದು.

**ಯಸ್ಯ ಧ್ಯಾನಯೋಗಸ್ಯ ಕಾಮಾದಿವರ್ಜನರೂಪಸಂನ್ಯಾಸಯುಕ್ತಸ್ವ-ವರ್ಣಾಶ್ರಮೋಚಿತಕರ್ಮಾನುಷ್ಠಾನವಾನಧಿಕಾರೀ ಉಕ್ತಃ, ಅಪರೋಕ್ಷಾಖ್ಯ ಫಲಪರ್ಯಂತಂ ಕರ್ಮಾನುಷ್ಠಾನಂ ಚೋಕ್ತಂ ಸ ಏವ ಧ್ಯಾನಯೋಗೋऽ-ಭಿಯೋಗೇನ ಕಾರ್ಯ ಇತ್ಯಾಹ– ಉದ್ಧರೇದಿತಿ ॥ ಆತ್ಮನಾ ಮನಸಾ ಆತ್ಮಾನಂ ಜೀವಮುದ್ಧರೇತ್ । ಪುಮರ್ಥಭಾಜನಂ ಕುರ್ಯಾತ್ । ಆತ್ಮಾನಂ ಜೀವಂ ನಾವಸಾದಯೇತ್ । ನ ಕ್ಲೇಶಭಾಜನಂ ಕುರ್ಯಾತ್ । ಕುತಃ । ಹಿ ಯಸ್ಮಾದಾತ್ಮನೋ ಜೀವಸ್ಯಾತ್ಮೈವ ಮನ ಏವ ಬಂಧುಃ ರಿಪುಶ್ಚ ಭವತ್ಯತ ಇತಿ ॥**

**ಅನುವಾದ** – ಧ್ಯಾನಯೋಗಕ್ಕೆ ಕಾಮಾದಿತ್ಯಾಗರೂಪ ಸಂನ್ಯಾಸದೊಂದಿಗೆ

ಸ್ವವರ್ಣಾಶ್ರಮವಿಹಿತ ಕರ್ಮಾನುಷ್ಠಾನವುಳ್ಳವನು ಅಧಿಕಾರಿ ಎಂದು ಹೇಳಿದೆ. ಭಗವಂತನ ಅಪರೋಕ್ಷದರ್ಶನ ಆಗುವ ತನಕ ಕರ್ಮಾಚರಣೆಯು ಆವಶ್ಯಕ ಎಂದೂ ಹೇಳಿದೆ. ಆ ಧ್ಯಾನಯೋಗವನ್ನು ಅತ್ಯಂತ ಆಸಕ್ತಿಯಿಂದ ಮಾಡಬೇಕು ಎಂಬುದನ್ನು **'ಉದ್ಧರೇತ್'** ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ . **ಆತ್ಮನಾ**= ಮನಸ್ಸಿನಿಂದ, **ಆತ್ಮಾನಂ**= ಜೀವನನ್ನು **ಉದ್ಧರೇತ್**= ಪುರುಷಾರ್ಥಗಳಿಗೆ ಪಾತ್ರನನ್ನಾಗಿಸಬೇಕು. **ಆತ್ಮಾನಂ**= ಜೀವನನ್ನು **ನಾವಸಾದಯೇತ್**= ದುಃಖಗಳಿಗೆ ಪಾತ್ರನನ್ನಾಗಿಸಬಾರದು. ಏಕೆಂದರೆ **ಆತ್ಮನಃ**= ಜೀವನಿಗೆ, **ಆತ್ಮೈವ**= ಮನಸ್ಸೇ, **ಬಂಧುಃ**= ಬಂಧವೂ, **ರಿಪುಶ್ಚ**= ಶತ್ರುವೂ, **ಭವತಿ**= ಆಗುತ್ತದೆ.

**ಯದ್ವಾ ಯೋಗಾರೋಹಶಬ್ದಿತಯೋಗಸಂಪೂರ್ತೇಃ ಭಗವತ್ಪ್ರಸಾದೋ ಮುಖ್ಯಸಾಧನಮಿತ್ಯಾಹ- ಉದ್ಧರೇದಿತಿ ॥ ಆತ್ಮನಾ ಪರಮಾತ್ಮನಾ । ತತ್ಪ್ರಸಾ-ದೇನೇತಿ ಯಾವತ್ । ಆತ್ಮಾನಂ ಜೀವಂ । ಪ್ರಾಗ್ವದೇವ ಯೋಜನಾ । ಆತ್ಮನೋ ಜೀವಸ್ಯಾತ್ಮೈವ ಪರಮಾತ್ಮೈವ ಬಂಧುಃ ರಿಪುಶ್ಚ ಹಿ ಯತಃ ॥ 5 ॥**

**ಅನುವಾದ-** ಅಥವಾ ಯೋಗಾರೋಹ ಶಬ್ದದಿಂದ ಹೇಳಿದ ಧ್ಯಾನಯೋಗದ ಸಂಪೂರ್ಣತೆಯನ್ನು ಪಡೆಯಲು ಭಗವಂತನ ಅನುಗ್ರಹವು ಮುಖ್ಯಕಾರಣ ಎಂಬುದನ್ನು **'ಉದ್ಧರೇತ್'** ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. **ಆತ್ಮನಾ**= ಪರಮಾತ್ಮನಿಂದ ಅಂದರೆ ಭಗವಂತನ ಪ್ರಸಾದದಿಂದ ಎಂದು ಅರ್ಥ. **ಆತ್ಮಾನಂ**= ಜೀವನನ್ನು . ಹಿಂದಿನಂತೆ ಉಳಿದ ಶಬ್ದಗಳನ್ನು ಅರ್ಥೈಸಿಕೊಳ್ಳಬೇಕು (ಪುರುಷಾರ್ಥಗಳಿಗೆ ಪಾತ್ರನನ್ನಾಗಿಸಿಕೊಳ್ಳಬೇಕು) ಏಕೆಂದರೆ **ಆತ್ಮನಃ** = ಜೀವನಿಗೆ. **ಆತ್ಮೈವ**= ಪರಮಾತ್ಮನೇ ಬಂಧು ಮತ್ತು ಶತ್ರುವೂ ಆಗಿದ್ದಾನೆ. ॥ 5 ॥

**ಬಂಧುರಾತ್ಮಾಽಽತ್ಮನಸ್ತಸ್ಯ ಯೇನಾಽಽತ್ಮೈವಾಽಽತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾಽಽತ್ಮೈವ ಶತ್ರುವತ್ ॥ 6 ॥**

**ಅರ್ಥ-** ಯಾವ ಜೀವನು ತನ್ನ ಬುದ್ಧಿ ಎಂಬ ಸಾಧನದಿಂದ ಮನಸ್ಸನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿರುವನೋ ಆ ಜೀವನಿಗೆ ಮನಸ್ಸು ಉಪಕಾರಿ. ಧ್ಯಾನೋಪಯೋಗಿ. ಮನಸ್ಸನ್ನು ತನ್ನ ಹಿಡಿತದಲ್ಲಿ ಇಟ್ಟುಕೊಳ್ಳದ ಜೀವನಿಗೆ ಮಾತ್ರ ಮನಸ್ಸು ಶತ್ರುವಿನಂತೆ ಅನುಪಕಾರಿ. ಧ್ಯಾನೋಪಯೋಗಿ ಅಲ್ಲ.

ಅಥವಾ ,ಯಾವ ಜೀವನು ಭಕ್ತಿಯಿಂದ ಭಗವಂತನನ್ನು ವಶಪಡಿಸಿಕೊಂಡಿರುವನೋ ಆ ಜೀವನಿಗೆ ಪರಮಾತ್ಮನು ಉಪಕಾರಿ. ತನ್ನ ದರ್ಶನ ನೀಡಿ ಅನುಗ್ರಹಿಸುತ್ತಾನೆ. ಭಕ್ತಿಯಿಂದ ಭಗವಂತನನ್ನು ವಶಪಡಿಸಿಕೊಳ್ಳದ ಜೀವನಿಗೆ ಮಾತ್ರ ಪರಮಾತ್ಮನು ಶತ್ರುವಿನಂತೆ ಅನುಪಕಾರಿ. ತನ್ನ ದರ್ಶನ ನೀಡಿ ಅನುಗ್ರಹಿಸುವುದಿಲ್ಲ.

**ಕೀದೃಶಸ್ಯಾತ್ಮನಃ ಕೀದೃಶಂ ಮನೋ ಬಂಧುಃ ರಿಪುಶ್ಚೇತ್ಯತ ಆಹ- ಬಂಧು-ರಿತಿ ॥ ಯೇನಾತ್ಮನಾ ಯೇನ ಜೀವೇನೇತಿ ಸಮಾನಾಧಿಕರಣಂ ವಾ । ಯೇನ ಜೀವೇನ ಕರ್ತ್ರಾ ಆತ್ಮನಾ ಬುದ್ಧ್ಯಾ ಕರಣೇನೇತಿ ವ್ಯಧಿಕರಣಂ ವಾ । ಆತ್ಮಾ ಮನಃ ಜಿತಂ ವಶೀಕೃತಂ ತಸ್ಯಾತ್ಮನೋ ಜೀವಸ್ಯಾತ್ಮಾ ಮನಃ ಬಂಧುರೇವೋಪಕಾರ್ಯೇವ ಭಗವದ್‌ಧ್ಯಾನೋಪಯೋಗೀತಿ ಯಾವತ್ ।**

**ಅನುವಾದ** - ಯಾವ ಜೀವನಿಗೆ ಎಂತಹ ಮನಸ್ಸು ಉಪಕಾರಿ, ಎಂತಹ ಮನಸ್ಸು ಶತ್ರು ಎಂದು **'ಬಂಧುಃ'** ಎಂಬ ಶ್ಲೋಕದಿಂದ ವಿವರಿಸುತ್ತಿದ್ದಾನೆ. **'ಯೇನ ಆತ್ಮನಾ'** ಆತ್ಮನಾ ಎಂಬ ಪದಕ್ಕೆ ಯೇನ ಎಂಬ ಪದವು ವಿಶೇಷಣ. ಯಾವ ಜೀವನಿಂದ ಎಂದು ಅರ್ಥ. ಅಥವಾ **ಯೇನ**= ಯಾವ ಜೀವ ನಿಂದ, **ಆತ್ಮನಾ** = ಬುದ್ಧಿ ಎಂಬ ಸಾಧನದಿಂದ (**ಯೇನ** ಮತ್ತು **ಆತ್ಮನಾ** ಎಂಬ ಪದಗಳಿಗೆ ವಿಶೇಷ್ಯ ವಿಶೇಷಣ ಭಾವವಿಲ್ಲ) ಎಂದು ಪ್ರತ್ಯೇಕವಾಗಿ ಅರ್ಥ. **ಆತ್ಮಾ** = ಮನಸ್ಸು, **ಜಿತಃ**= ವಶೀಕೃತವಾಗಿದೆಯೋ, **ತಸ್ಯ ಆತ್ಮನಃ**= ಆ ಜೀವನಿಗೆ, **ಮನಃ** = ಮನಸ್ಸು, **ಬಂಧುರೇವ**= ಉಪಕಾರಿಯೇ. ಭಗವಂತನ ಧ್ಯಾನಕ್ಕೆ ಸಾಧನ ಎಂದು ಅರ್ಥ.

**ಅನಾತ್ಮನಸ್ತು ಅಜಿತಮನಸ್ಕಸ್ಯ ತು ಜೀವಸ್ಯ ಆತ್ಮೈವ ಮನ ಏವ ಶತ್ರುವತ್ ಪ್ರಸಿದ್ಧಶತ್ರುರಿವ ಶತ್ರುತ್ವೇ ಅನುಪಕಾರಿತ್ವೇ ವರ್ತೇತೇತಿ ಮನೋಜಯೇನ ಧ್ಯಾನ-ಯೋಗಃ ಕಾರ್ಯ ಇತ್ಯುಕ್ತಂ ಭವತಿ ॥**

**ಅನುವಾದ- ಅನಾತ್ಮನಸ್ತು**= ಮನೋನಿಗ್ರಹ ಇಲ್ಲದ ಜೀವನಿಗಾದರೂ, **ಆತ್ಮೈವ**= ಮನಸ್ಸೇ, **ಶತ್ರುವತ್** = ಪ್ರಸಿದ್ಧ ಶತ್ರುವಿನಂತೆ. **ಶತ್ರುತ್ವೇ**= ಅನುಪಕಾರಿಯಾಗಿ **ವರ್ತೇತ**= ಇರುತ್ತದೆ. ಹೀಗೆ ಮನೋನಿಗ್ರಹದಿಂದ ಧ್ಯಾನಯೋಗವು ಸಾಧ್ಯ , ಎಂದು ಹೇಳಿದಂತೆ ಆಯಿತು.

**ಯದ್ವಾ ಕೀದೃಶಸ್ಯ ಹರಿರ್ಬಂಧುಃ ರಿಪುಶ್ಚೇತ್ಯತ ಆಹ- ಬಂಧುರಿತಿ ॥ ಪೂರ್ವವದೇವಾರ್ಥೋ ಯೋಜನಾ ಚ । ಪರಂತು ಪ್ರಥಮಾಂತಾತ್ಮ-ಶಬ್ದೋಽತ್ರ ಪರಮಾತ್ಮಪರಃ । ಆತ್ಮನಾ ಬುದ್ಧ್ಯೇತ್ಯತ್ರ ಬುದ್ಧ್ಯುಪಲಕ್ಷಿತ-ಭಕ್ತ್ಯೇತ್ಯರ್ಥಃ । ಅನಾತ್ಮನಸ್ತ್ವಿತ್ಯಸ್ಯ ಭಕ್ತಿಬಲೇನಾವಶೀಕೃತಭಗವತ್ಸ್ವರೂಪಸ್ಯ ಪುಂಸ ಇತ್ಯರ್ಥಃ ॥ 6 ॥**

**ಅನುವಾದ** - ಅಥವಾ ಯಾವ ಜೀವನಿಗೆ ಭಗವಂತನು ಉಪಕಾರಿ, ಅನುಪಕಾರಿ ಎಂದು **'ಬಂಧು'** ಎಂಬ ಶ್ಲೋಕದಿಂದ ವಿವರಿಸುತ್ತಿದ್ದಾನೆ . ಹಿಂದಿನಂತೆಯೇ ಅನ್ವಯ ಮತ್ತು ಅರ್ಥ. ಆದರೆ ಪ್ರಥಮಾ ವಿಭಕ್ತಿಯಲ್ಲಿರುವ **'ಆತ್ಮಾ'** ಎಂಬ ಶಬ್ದಕ್ಕೆ ಪರಮಾತ್ಮ ಎಂದು ಅರ್ಥ. **ಆತ್ಮನಾ**=

ಬುದ್ಧಿ ಯಿಂದ ಅಂದರೆ ಭಕ್ತಿಯಿಂದ ಎಂದು ಅರ್ಥ. 'ಅನಾತ್ಮನಸ್ತು' ಎಂಬ ಶಬ್ದಕ್ಕೆ ಭಕ್ತಿಯ ಬಲದಿಂದ ಭಗವಂತನನ್ನು ವಶಪಡಿಸಿಕೊಳ್ಳದ ಜೀವನಿಗೆ ಎಂದು ಅರ್ಥ.

**ವಿವರಣೆ–** ಈ ಶ್ಲೋಕದ ಎರಡನೇ ಅರ್ಥ ಹೀಗಿದೆ. **ಯೇನ**= ಯಾವ ಜೀವನಿಂದ **ಆತ್ಮನಾ**= ಭಕ್ತಿಯಿಂದ **ಆತ್ಮಾ**= ಪರಮಾತ್ಮನು **ಜಿತಃ**= ವಶೀಕೃತನಾಗಿದ್ದಾನೋ, **ತಸ್ಯ ಆತ್ಮನಃ**= ಆ ಜೀವನಿಗೆ, **ಆತ್ಮಾ**= ಪರಮಾತ್ಮನು **ಬಂಧುರೇವ**= ಉಪಕಾರಿ. ದರ್ಶನ ನೀಡಿ ಅನುಗ್ರಹಿಸುತ್ತಾನೆ. **ಅನಾತ್ಮನಸ್ತು**= ಭಕ್ತಿಯಿಂದ ಭಗವಂತನನ್ನು ವಶಪಡಿಸಿಕೊಳ್ಳದ ಜೀವನಿಗೆ **ಆತ್ಮಾ** = ಪರಮಾತ್ಮನು **ಶತ್ರುವತ್**= ಶತ್ರುವಿನಂತೆ **ಶತ್ರುತ್ವೇ**= ಅನುಪಕಾರಿಯಾಗಿ, **ವರ್ತೇತ**= ಇರುತ್ತಾನೆ (ದರ್ಶನ ನೀಡಿ ಅನುಗ್ರಹಿಸುವುದಿಲ್ಲ) ॥ 6 ॥

**ಅಪರೋಕ್ಷಜ್ಞಾನಿಲಕ್ಷಣ**

**ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥ 7 ॥**

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥ 8 ॥**

**ಅರ್ಥ–** ಮನೋನಿಗ್ರಹವುಳ್ಳ , ಭಕ್ತಿಯಿಂದ ಭಗವಂತನನ್ನು ವಶಪಡಿಸಿಕೊಂಡ, ಸ್ವತಃ ವಿಷಯ ಪದಾರ್ಥಗಳಲ್ಲಿ ಪ್ರವೃತ್ತಿಯಿಲ್ಲದ ಮನಸ್ಸುಳ್ಳ ಸಾಧಕನಿಗೆ ಭಗವಂತನು ಹೃದಯದಲ್ಲಿ ಸನ್ನಿಹಿತನಾಗುತ್ತಾನೆ. ಸಾಧಕನು ಅಪರೋಕ್ಷ ಜ್ಞಾನಿಯಾಗುತ್ತಾನೆ. ಶಾಸ್ತ್ರದಿಂದ ಪಡೆದ ವಿಷ್ಣು-ಸರ್ವೋತ್ತಮತ್ವಜ್ಞಾನ ಮತ್ತು ಭಗವನ್ಮಾಹಾತ್ಮ್ಯ ವಿಷಯಕ ವಿಶೇಷಜ್ಞಾನ ಅಥವಾ ಶಾಸ್ತ್ರಶ್ರವಣದಿಂದ ಉಂಟಾದ ಪರೋಕ್ಷಜ್ಞಾನ ಮತ್ತು ಅಪರೋಕ್ಷಜ್ಞಾನ ಎಂಬ ವಿಶೇಷಜ್ಞಾನ ಇವುಗಳಿಂದ ತೃಪ್ತಿಯನ್ನು ಹೊಂದಿ, ಭೋಗ್ಯ ವಸ್ತುಗಳಲ್ಲಿ ಆಸಕ್ತಿಯಿಲ್ಲದ, ಇಂದ್ರಿಯ ನಿಗ್ರಹವುಳ್ಳ , ಶೀತ ಉಷ್ಣ, ಸುಖದುಃಖ, ಮಾನ ಅಪಮಾನ ಮುಂತಾದ ದ್ವಂದ್ವಗಳಲ್ಲಿ ನಿರ್ವಿಕಾರನಾಗಿರುವ , ಮಣ್ಣು , ಕಲ್ಲು , ಚಿನ್ನಗಳನ್ನು ಸಮನಾಗಿ ಕಾಣುವ, ಧ್ಯಾನಮಾಡುವ ಸಾಧಕನು ಧ್ಯಾನದ ಪರಿಪಕ್ವತೆಯನ್ನು ಪಡೆದು ಅಪರೋಕ್ಷಜ್ಞಾನಿಯಾಗುತ್ತಾನೆ .

**ನನು ಮನಸೋ ಭಗವತಶ್ಚ ವಶೀಕರಣೇ ತಾವಸ್ಯ ಬಂಧೂ ಭವತ ಇತ್ಯುಕ್ತಮ್ । ಕೇನೋಪಕಾರೇಣ ತಾವಸ್ಯ ಬಂಧೂ । 'ಆತ್ಮನಾ ಆತ್ಮಾನಮುದ್ಧರೇದಿ'ತಿ ಆತ್ಮೋದ್ಧಾರಂ ಕುರುತ ಇತ್ಯುಕ್ತಮಿತಿಚೇತ್ಸ ಏವ ಕ ಇತ್ಯತ ಆಹ– ಜಿತೇತಿ ॥**

**ಅನುವಾದ–** ಮನಸ್ಸನ್ನು ಮತ್ತು ಭಗವಂತನನ್ನು ವಶಪಡಿಸಿಕೊಂಡರೆ ಮನಸ್ಸು ಮತ್ತು

ಭಗವಂತ ಇವರಿಬ್ಬರೂ ಉಪಕಾರಿಗಳಾಗುತ್ತಾರೆ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದೆ. ಯಾವ ರೀತಿಯ ಉಪಕಾರದಿಂದ ಅವರು ಜೀವನಿಗೆ ಉಪಕಾರಿಗಳಾಗುತ್ತಾರೆ? ಮನಸ್ಸಿನಿಂದ, ಪರಮಾತ್ಮನಿಂದ ಜೀವನು ತನ್ನನ್ನು ಪುರುಷಾರ್ಥ ಭಾಗಿಯನ್ನಾಗಿಸಿಕೊಳ್ಳಬೇಕು ಎಂದು '**ಆತ್ಮನಾ ಆತ್ಮಾನಂ ಉದ್ಧರೇತ್**' ಎಂಬಲ್ಲಿ ಹೇಳಿಯಾಗಿದೆಯಲ್ಲ ಎಂದರೆ ಅಂಥ ಪುರುಷಾರ್ಥವೆ ಯಾವುದು ಎಂದು '**ಜೀತಾತ್ಮನಃ**' ಎಂಬ ಶ್ಲೋಕದಿಂದ ವಿವರವಾಗಿ ತಿಳಿಸುತ್ತಿದ್ದಾನೆ.

**ಜಿತಾತ್ಮನಃ ವಶೀಕೃತಮನಸ್ಕಸ್ಯ ಭಕ್ತ್ಯಾ ವಶೀಕೃತಭಗವತ್‌ಸ್ವರೂಪಸ್ಯ ಪ್ರಶಾಂತಿರ್ಭವತಿ । ಸ್ವತ ಏವ ಮನಸೋ ವಿಷಯೇಷ್ವಪ್ರವೃತ್ತಿರ್ಭವತಿ ಇತ್ಯರ್ಥಃ। ಸಂಪೂರ್ಣಯೋಗಸಿದ್ಧಿಮದ್ರೂಪೋ ಯೋಗಾರೂಢೋ ಭವತೀತಿ ಯಾವತ್ । ॥ 7 ॥**

**ಅನುವಾದ- ಜಿತಾತ್ಮನಃ**= ಮನಸ್ಸನ್ನು ವಶಪಡಿಸಿಕೊಂಡ , ಭಕ್ತಿಯಿಂದ ಭಗವತ್ಸ್ವರೂಪವನ್ನು ವಶಪಡಿಸಿಕೊಂಡ ಸಾಧಕನಿಗೆ , **ಪ್ರಶಾಂತಿಃ ಭವತಿ** = ಸ್ವತಃ ಮನಸ್ಸು ವಿಷಯಪದಾರ್ಥಗಳಲ್ಲಿ ಪ್ರವೃತ್ತವಾಗುವುದಿಲ್ಲ ಎಂದು ಅರ್ಥ. ಸಂಪೂರ್ಣ ಯೋಗಸಿದ್ಧಿಯನ್ನು ಪಡೆದ ಸ್ವರೂಪವುಳ್ಳ ಯೋಗಾರೂಢನಾಗುತ್ತಾನೆ ಎಂದು ತಾತ್ಪರ್ಯ. ॥ 7 ॥

**'ಯದಾ ಹಿ ನೇಂದ್ರಿಯಾರ್ಥೇಷ್ವಿ'ತ್ಯತ್ರಾಪರೋಕ್ಷಿಣೋ ಲಕ್ಷಣೋಕ್ತಾವಪೀಹ ಲಕ್ಷಣಂ ಸ್ಪಷ್ಟಯತಿ ಶೀತೋಷ್ಣೇತ್ಯಾದಿಸಾರ್ಧಶ್ಲೋಕದ್ವಯೇನ ॥ ಶೀತೋಷ್ಣಾದಿ- ದ್ವಂದ್ವಧರ್ಮೇಷು ಕೂಟಸ್ಥಃ ಕೂಟಮಾಕಾಶಂ ತದ್ವತ್‌ತಿಷ್ಠತೀತಿ ಕೂಟಸ್ಥಃ ಉತ್ಸೇಕಾನುತ್ಸೇಕರೂಪವಿಕಾರಹೀನ ಇತ್ಯರ್ಥಃ ।**

**ಅನುವಾದ - 'ಯದಾ ಹಿ ನೇಂದ್ರಿಯಾರ್ಥೇಷು'** ಎಂಬ (ಈ ಅಧ್ಯಾಯದ ನಾಲ್ಕನೇ) ಶ್ಲೋಕದಲ್ಲಿ ಅಪರೋಕ್ಷಜ್ಞಾನಿಯ ಲಕ್ಷಣವನ್ನು ಹೇಳಿದ್ದರೂ '**ಶೀತೋಷ್ಣ** ' ಎಂಬ ಈ ಎರಡೂವರೆ ಶ್ಲೋಕದಿಂದ ಅದನ್ನೇ ಸ್ಪಷ್ಟವಾಗಿ ವಿವರಿಸುತ್ತಿದ್ದಾನೆ. ಶೀತ –ಉಷ್ಣ ಎಂಬಿವೇ ಮೊದಲಾದ ದ್ವಂದ್ವ ವಿಷಯಗಳಲ್ಲಿ , **ಕೂಟಸ್ಥಃ** = ಕೂಟದಂತೆ, ಅಂದರೆ ಆಕಾಶದಂತೆ ಇರುವವನು ಕೂಟಸ್ಥ . ಹಿಗ್ಗುವುದು ತಗ್ಗುವುದು ಎಂಬ ವಿಕಾರರಹಿತ ಎಂದರ್ಥ.

**ತತ್ರ ಹೇತುರ್ಜ್ಞಾನೇತ್ಯಾದಿ । ವೇದಾದೌ ಸರ್ವತ್ರ ವಿಷ್ಣೋರುತ್ಕರ್ಷಜ್ಞಾನಂ ಜ್ಞಾನಮಿತ್ಯುಚ್ಯತೇ । ತದವಾಂತರಮಾಹಾತ್ಮ್ಯವಿಶೇಷಜ್ಞಾನಂ ವಿಜ್ಞಾನ- ಮಿತ್ಯುಚ್ಯತೇ । ಯದ್ವಾ ಪರೋಕ್ಷಾಪರೋಕ್ಷಜ್ಞಾನೇ ಜ್ಞಾನವಿಜ್ಞಾನ ಶಬ್ದಾಭ್ಯಾಂ ವಾಚ್ಯೇ । ತಾಭ್ಯಾಂ ತೃಪ್ತೋ ವಿಷಯೇಷ್ವಲಂಬುದ್ಧಿಮಾನ್‌ವಿಜಿತೇಂದ್ರಿಯಶ್ಚ**

**ಯತೋಽತಃ ಕೂಟಸ್ಥಃ ಸಮಲೋಷ್ಟಾಶ್ಮಕಾಂಚನಃ ಯೋಗೀ ಯೋಗಂ ಕುರ್ವನ್ ಯುಕ್ತಃ ಯೋಗಸಂಪೂರ್ಣ ಇತ್ಯುಚ್ಯತೇ ॥ 8 ॥**

**ಅನುವಾದ**- ಇದಕ್ಕೆ (ವಿಕಾರರಾಹಿತ್ಯಕ್ಕೆ) ಕಾರಣವನ್ನು 'ಜ್ಞಾನ ವಿಜ್ಞಾನ' ಎಂಬ ಭಾಗದಿಂದ ಹೇಳುತ್ತಾನೆ. ವೇದಾದಿ ಸಕಲ ಶಾಸ್ತ್ರಗಳಿಂದ ಬರುವ ವಿಷ್ಣುಸರ್ವೋತ್ತಮತ್ವ ವಿಷಯಕ ಸಾಮಾನ್ಯಜ್ಞಾನವನ್ನು 'ಜ್ಞಾನ' ಎಂಬ ಪದವು ತಿಳಿಸುತ್ತಿದೆ. ವಿಷ್ಣು ಸರ್ವೋತ್ತಮತ್ವ ಜ್ಞಾನಕ್ಕೆ ಕಾರಣವಾದ ಮಾಹಾತ್ಮ್ಯ ವಿಶೇಷ ಜ್ಞಾನವನ್ನು '**ವಿಜ್ಞಾನ**' ಎಂಬ ಪದವು ತಿಳಿಸುತ್ತಿದೆ. ಅಥವಾ ಜ್ಞಾನ ಎಂದರೆ ಶಾಸ್ತ್ರದಿಂದ ಬಂದ ಪರೋಕ್ಷಜ್ಞಾನ ಎಂದರ್ಥ. ವಿಜ್ಞಾನ ಎಂದರೆ ಅಪರೋಕ್ಷ ಜ್ಞಾನ ಎಂದರ್ಥ. ಇವುಗಳಿಂದ ತೃಪ್ತನಾದವನೂ, ವಿಷಯ ಪದಾರ್ಥಗಳಲ್ಲಿ ಆಸಕ್ತಿ ಇಲ್ಲದವನೂ, ಇಂದ್ರಿಯ ನಿಗ್ರಹವುಳ್ಳವನೂ ಆದ್ದರಿಂದ, **ಕೂಟಸ್ಥಃ** = ವಿಕಾರ ರಹಿತ. ಮಣ್ಣು ಕಲ್ಲು, ಚಿನ್ನಗಳನ್ನು ಸಮನಾಗಿ ಕಾಣುವ, **ಯೋಗೀ**= ಧ್ಯಾನ ನಿರತನಾದ ಜೀವನು , **ಯುಕ್ತಃ**= ಧ್ಯಾನದ ಪೂರ್ಣತೆಯನ್ನು ಪಡೆದವನು ಎನಿಸುವನು. (ಅಪರೋಕ್ಷ ಜ್ಞಾನಿ ಎನಿಸುವನು) ॥ 8 ॥

## ಸಜ್ಜನದುರ್ಜನರಲ್ಲಿ ಸಮದೃಷ್ಟಿ

**ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ 9 ॥**

**ಅರ್ಥ** - ಪ್ರತ್ಯುಪಕಾರವನ್ನು ಬಯಸದೆ ಉಪಕಾರ ಮಾಡುವವನು ಸುಹೃತ್, ಅಪಾಯದ ಸಂದರ್ಭವನ್ನು ತಿಳಿಸಿ, ಅಪಾಯದಿಂದ ರಕ್ಷಿಸುವವನು ಮಿತ್ರ, ಕೊಲೆ ಮೊದಲಾದವುಗಳನ್ನು ಮಾಡುವವನು ಅರಿ, ಮಾಡಬೇಕಾದ ಉಪಕಾರ, ಅಪಕಾರ ಎರಡರಲ್ಲಿಯೂ ಉದಾಸೀನನಾಗಿರುವವನು ಉದಾಸೀನ, ಉಪಕಾರ ಅಪಕಾರಗಳೆರಡನ್ನೂ ಮಾಡುವವ ಮಧ್ಯಸ್ಥ , ಅನಿಷ್ಟವನ್ನು ಮಾಡುವವನು ದ್ವೇಷ್ಯ, ಉಪಕಾರ ಮಾಡುವವನು ಬಂಧು. ಇವರೆಲ್ಲರಲ್ಲಿ, ಸಾಧುಗಳಲ್ಲಿ ಪಾಪಿಗಳಲ್ಲಿಸಮಬುದ್ಧಿಯುಳ್ಳ ಅಪರೋಕ್ಷಜ್ಞಾನಿಯು ಎಲ್ಲಾ ಯೋಗಿಗಳಿಗಿಂತ ಉತ್ತಮನು.

**ಸ ಏವ ಚ ಸುಹೃದಾದಿಷು ಸಮಾ ಭಗವದ್ವಿಷಯಿಣೀ ಬುದ್ಧಿರ್ಯಸ್ಯ ಸ ಸಮಬುದ್ಧಿರ್ಯೋಗಾರೂಢಃ ಯೋಗಿವರ್ಗಾತ್ಸರ್ವಸ್ಮಾದ್ವಿಶಿಷ್ಯತ ಇತಿ । ಸುಹೃದಾದಿಷು ಸರ್ವತ್ರ ಸ್ಥಿತಹರಿರೂಪಾಣಾಂ ಗುಣಾದಿಷು ತಾರತಮ್ಯಂ ನೇತಿ ಬುದ್ಧಿರ್ವಾ, ಸುಹೃದಿ ಸುಹೃತ್ತ್ವಮೇವ ಮಿತ್ರಾದಿಷು ಮಿತ್ರತ್ವಾದಿಕಮೇವ ದದಾತಿ ನ ತು ಸುಹೃದಿ ಮಿತ್ರತ್ವಂ ಮಿತ್ರಾದೌ ಸುಹೃತ್ವಾದಿಕಮಿತಿ ವೈಷಮ್ಯೇಣಾತಃ ಸುಹೃದಾದೌ ಸುಹೃತ್ತ್ವಾದಿಕಮೀಶಕೃತಮೇವ ನ ಸ್ವತಂತ್ರಮಿತಿ ವಾ,**

**ಭಗವದ್ವಿಷಯೇ ಸಮಬುದ್ಧಿಃ । ಯದ್ವಾ ಸುಹೃದಾದಿ ಜೀವವಿಷಯೇ ಸಮಾ ಬುದ್ಧಿರ್ಯಸ್ಯೇತ್ಯರ್ಥಃ । ತೇಷು ಸಮಬುದ್ಧಿತ್ವಂ ನಾಮ ಯತ್ಸುಹೃತ್ತ್ವ ಮಿತ್ರತ್ವಾದಿಕಮಸ್ತಿ ತನ್ನ ಸ್ವರೂಪಾಂತರ್ಗತಂ ಕಿಂತು ಅಂತಃಕರಣೋಪಾಧಿಕಮೇವ ದೇವದಾನವಮಾನವಭೇದೇನ ಸ್ವತೋ ವಿಷಮಾಣಾಂ ಚೈತನ್ಯಸ್ವಭಾವತ್ವ-ಮೇಕಮೇವ ಸಮಮಿತಿ ಬುದ್ಧಿಮತ್ತ್ವಮೇವೇತಿ ಜ್ಞೇಯಮ್ ।**

**ಅನುವಾದ-** ಸುಹೃದಾದಿಗಳಲ್ಲಿ **ಸಮಬುದ್ಧಿಃ** = ಸಮಾನವಾಗಿ ಭಗವದ್ವಿಷಯಕವಾದ ಬುದ್ಧಿವುಳ್ಳ ಅಪರೋಕ್ಷಜ್ಞಾನಿಯು ಎಲ್ಲಾ ಯೋಗಿಗಳಿಗಿಂತ ಶ್ರೇಷ್ಠನು. ಸುಹೃತ್, ಮಿತ್ರ ಮೊದಲಾದವರಲ್ಲಿ ಎಲ್ಲರಲ್ಲಿಯೂ ಇರುವ ಭಗವಂತನ ರೂಪಗಳಲ್ಲಿ, ಗುಣಪೂರ್ಣತ್ವ ದೋಷದೂರತ್ವಾದಿ ಧರ್ಮಗಳಲ್ಲಿ ತಾರತಮ್ಯವಿಲ್ಲ ಎಂಬ ಬುದ್ಧಿವುಳ್ಳವನು ಸಮಬುದ್ಧಿ. ಅಥವಾ ಭಗವಂತ ಸುಹೃತ್‌ಜೀವನಲ್ಲಿ ಸುಹೃತ್ವ ಧರ್ಮವನ್ನು ಮಿತ್ರಾದಿ ಜೀವರಲ್ಲಿ ಮಿತ್ರತ್ವಾದಿ ಧರ್ಮಗಳನ್ನು ಕೊಡುತ್ತಾನೆ. ಇದಕ್ಕೆ ವ್ಯತಿರಿಕ್ತವಾಗಿ ಸುಹೃತ್ ಜೀವರಲ್ಲಿ ಮಿತ್ರತ್ವವನ್ನು, ಮಿತ್ರಾದಿ ಜೀವರಲ್ಲಿ ಸುಹೃತ್ವಾದಿಗಳನ್ನು ಕೊಡುವುದಿಲ್ಲ. ಆದ್ದರಿಂದ ಸುಹೃತ್ ಮೊದಲಾದ ಜೀವರಲ್ಲಿ ಸುಹೃತ್ತ್ವ ಮೊದಲಾದ ಧರ್ಮಗಳು ಭಗವಂತನ ಅಧೀನ, ಸ್ವತಂತ್ರವಲ್ಲ ಎಂದು ಭಗವಂತನ ವಿಷಯದಲ್ಲಿ ಸಮ ಬುದ್ಧಿವುಳ್ಳವನು. ಅಥವಾ ಸುಹೃದಾದಿ ಜೀವ ವಿಷಯದಲ್ಲಿ ಸಮಾನವಾದ ಬುದ್ಧಿವುಳ್ಳವನು. ಸುಹೃದಾದಿ ಜೀವರಲ್ಲಿ ಸಮಾನವಾದ ಬುದ್ಧಿ ಎಂದರೆ- ಸುಹೃದಾದಿ ಜೀವರಲ್ಲಿ ಇರುವ ಸುಹೃತ್ತ್ವ ಮಿತ್ರತ್ವ ಮೊದಲಾದ ಧರ್ಮಗಳು ಜೀವನ ಸ್ವರೂಪಕ್ಕೆ ಸೇರಿದವುಗಳಲ್ಲ. ಅಂತಃಕರಣವಿಕಾರ ರೂಪವಾದವುಗಳು ಮತ್ತು ದೇವ ದಾನ ಮಾನವ ವಿಭಾಗದಿಂದ ಸ್ವಾಭಾವಿಕವಾಗಿ ಭಿನ್ನರಾದ ಜೀವರ ಚೈತನ್ಯ ಸ್ವಭಾವತ್ವವು, **ಏಕಮೇವ** = ಸಮಾನ ಎಂಬ ಬುದ್ಧಿವುಳ್ಳವನು ಎಂದರ್ಥ.

**ಅಥವಾ ಸುಹೃದಾದಿಷು ವಿಷಯೇ ಶಾಸ್ತ್ರೇಷು ಯಥಾ ಯಥಾ ವೃತ್ತಿರ್ವಿಹಿತಾ ತಥಾ ತಥಾ ವರ್ತನಂ ವರ್ತನಜ್ಞಾನಂ ವಾ ಸುಹೃದಾದಿಜೀವೇಷು ಸಮ-ಬುದ್ಧಿರ್ಜ್ಞೇಯಾ । ಪ್ರತ್ಯುಪಕಾರನಿರಪೇಕ್ಷೋಪಕಾರಕೃತ್ ಸುಹೃತ್ । ಕ್ಲೇಶಸ್ಥಾನಂ ವಿಜ್ಞಾಪ್ಯ ತತೋ ರಕ್ಷಾಕೃನ್ಮಿತ್ರಮ್ । ವಧಾದಿಕರ್ತಾ ಅರಿಃ । ಕರ್ತವ್ಯೇ ಉಪಕಾರೇ ಅಪಕಾರೇ ಚ ಯ ಉದಾಸ್ತೇ ಸ ಉದಾಸೀನಃ । ಉಪಕಾರಾಪಕಾರೋಭಯಕೃತ್ ಮಧ್ಯಸ್ಥಃ । ಅವಾಂಛಿತಕೃದ್ ದ್ವೇಷ್ಯಃ । ಬಂಧುರುಪಕರ್ತಾ ॥ 9 ॥**

**ಅನುವಾದ-** ಅಥವಾ ಸುಹೃತ್ ಮಿತ್ರ ಮೊದಲಾದ ಜೀವರ ವಿಷಯದಲ್ಲಿ ಹೇಗೆ ಹೇಗೆ ನಡೆಯಬೇಕು ಎಂದು ಶಾಸ್ತ್ರದಲ್ಲಿ ಹೇಳಿದೆಯೋ ಹಾಗೆಯೇ ಇರುವಿಕೆಯು ಅಥವಾ

ಇರಬೇಕೆಂಬ ಜ್ಞಾನವು ಸುಹೃದಾದಿ ಜೀವರಲ್ಲಿ ಸಮಬುದ್ಧಿಯು. ಪ್ರತ್ಯುಪಕಾರದ ಅಪೇಕ್ಷೆ ಇಲ್ಲದೆ ಉಪಕಾರ ಮಾಡುವವನು ಸುಹೃತ್. ಅಪಾಯದ ಸಂದರ್ಭವನ್ನು ತಿಳಿಸಿ ಅದರಿಂದ ರಕ್ಷಿಸುವವನು ಮಿತ್ರ. ಕೊಲೆ ಮೊದಲಾದವುಗಳನ್ನು ಮಾಡುವವ ಅರಿ. ಮಾಡಬೇಕಾದ ಉಪಕಾರ ಅಪಕಾರ ಎರಡರಲ್ಲಿಯೂ ಉದಾಸೀನನಾದವನು ಉದಾಸೀನ. ಉಪಕಾರ ಅಪಕಾರ ಎರಡನ್ನೂ ಮಾಡುವವ ಮಧ್ಯಸ್ಥ. ಅನಿಷ್ಟವನ್ನು ಮಾಡುವವ ದ್ವೇಷ್ಯ. ಉಪಕಾರ ಮಾಡುವವನು ಬಂಧು. ।। 9 ।।

## ಧ್ಯಾನದ ಕ್ರಮ

**ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ।। 10 ।।**

**ಅರ್ಥ-** ಅಪರೋಕ್ಷಜ್ಞಾನ ಸಾಧನೆಯಲ್ಲಿ ತತ್ಪರನಾದ ಸಾಧಕನು ಯಾವಾಗಲೂ ಏಕಾಂತದಲ್ಲಿದ್ದು, ದುರ್ಜನರ ಸಂಗವನ್ನು ತೊರೆದು, ಮನಸ್ಸನ್ನು ದೇಹವನ್ನು ವಶದಲ್ಲಿಟ್ಟು-ಕೊಂಡು, ಕಾಮನಾರಹಿತನಾಗಿ, ಅನ್ಯರಿಂದ ಏನನ್ನೂ ಸ್ವೀಕರಿಸದೆ ಇದ್ದವನಾಗಿ ಮನಸ್ಸನ್ನು ಭಗವಂತನಲ್ಲಿ ತಲ್ಲೀನಗೊಳಿಸಬೇಕು.

**ಉದ್ಧರೇದಿತ್ಯಾದಿನಾ ವಿಹಿತಂ ಧ್ಯಾನಯೋಗಮನೂದ್ಯ ತತ್ಪ್ರಕಾರಮಾಹ- ಯೋಗೀತಿ ।। ಯೋಗೀ ಜ್ಞಾನೋಪಾಯಮನುತಿಷ್ಠನ್ನಾತ್ಮಾನಂ ಮನಃ ಯುಂಜೀತ ಭಗವನ್ನಿಷ್ಠಂ ಕುರ್ಯಾತ್ । ಸಮಾಧಿಯುಕ್ತಂ ಕುರ್ಯಾದಿತಿ ಯಾವತ್ । ಸತತಂ ನಿರಂತರಂ ರಹಸಿ ಸ್ಥಿತ ಏಕಾಕೀ ಸಂಗಶೂನ್ಯಃ ಯತಂ ನಿಯಮಿತಂ ಚಿತ್ತಂ ಮನಃ ಆತ್ಮಾ ದೇಹಶ್ಚ ಯಸ್ಯ ಸ ಯತಚಿತ್ತಾತ್ಮಾ ನಿರಾಶೀಃ ಕಾಮನಾಹೀನಃ ಪರಿಗ್ರಹೋಜ್ಝಿಶ್ಚ ಭೂತ್ವಾ ಕುರ್ಯಾದಿತಿ ।। 10 ।।**

**ಅನುವಾದ-** '**ಉದ್ಧರೇತ್**' ಇತ್ಯಾದಿ (5ನೇ) ಶ್ಲೋಕಗಳಲ್ಲಿ ವಿಹಿತವಾದ ಧ್ಯಾನಯೋಗವನ್ನು ಅನುವಾದಮಾಡಿ, ಧ್ಯಾನಯೋಗದ ಕ್ರಮವನ್ನು '**ಯೋಗೀ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. **ಯೋಗೀ**= ಅಪರೋಕ್ಷಜ್ಞಾನ ಸಾಧನೆಯನ್ನು ಮಾಡುತ್ತಿರುವವನು **ಆತ್ಮಾನಂ**= ಮನಸ್ಸನ್ನು **ಯುಂಜೀತ**= ಭಗವಂತನಲ್ಲಿ ತಲ್ಲೀನಗೊಳಿಸಬೇಕು. ಸಮಾಧಿ ಅವಸ್ಥೆಯಲ್ಲಿ ಇರುವಂತೆ ಮಾಡಬೇಕು. **ಸತತಂ**= ಯಾವಾಗಲೂ, **ರಹಸಿ ಸ್ಥಿತಃ**= ಏಕಾಂತದಲ್ಲಿ ಇದ್ದು, **ಏಕಾಕೀ**= ದುರ್ಜನಸಂಗವನ್ನು ತೊರೆದು, **ಯತಂ**= ನಿಗ್ರಹಿಸಿದ, **ಚಿತ್ತಂ** = ಮನಸ್ಸು, **ಆತ್ಮಾ**= ದೇಹ ಉಳ್ಳವನು, ಯತಚಿತ್ತಾತ್ಮಾ. **ನಿರಾಶೀಃ**= ಕಾಮನಾರಹಿತನು, ಅನ್ಯರಿಂದ ಏನನ್ನೂ ಸ್ವೀಕರಿಸದವನೂ ಆಗಿ (ಧ್ಯಾನ) ಮಾಡಬೇಕು. ।। 10 ।।

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನಕುಶೋತ್ತರಮ್ ॥ 11 ॥**

**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥ 12 ॥**

**ಅರ್ಥ-** ಮನಸ್ಸಿನ ಪ್ರಸನ್ನತೆಗೆ ಯೋಗ್ಯವಾದ ಸ್ಥಳದಲ್ಲಿ, ದರ್ಭೆ, ಹುಲಿ ಮೊದಲಾದವುಗಳ ಚರ್ಮ, ವಸ್ತ್ರಗಳನ್ನು ಕ್ರಮವಾಗಿ ಒಂದರ ಮೇಲೆ ಒಂದನ್ನು ಹಾಕಿ, ತುಂಬ ಎತ್ತರವೂ ಅಲ್ಲದ ತುಂಬಾ ತಗ್ಗೂ ಅಲ್ಲದ ಆಸನವನ್ನು ತನಗೆ ಸ್ಥಿರವಾಗಿರುವಂತೆ ಮಾಡಿಕೊಂಡು, ಆ ಆಸನದಲ್ಲಿ ಕುಳಿತು, ಮನಸ್ಸು ಇಂದ್ರಿಯಗಳ ನಿಗ್ರಹವುಳ್ಳವನಾಗಿ, ಮನಸ್ಸನ್ನು ಭಗವಂತನಲ್ಲಿ ಏಕಾಗ್ರಗೊಳಿಸಿ, ಮನಸ್ಸಿನ ಎಲ್ಲಾ ದೋಷ ಪರಿಹಾರಕ್ಕಾಗಿ, ತನ್ನ ಸಂಸಾರ ಎಂಬ ಕಲ್ಮಷ ಪರಿಹಾರಕ್ಕಾಗಿ ಧ್ಯಾನಯೋಗವನ್ನು ಮಾಡಬೇಕು.

**ಪುನರ್ಧ್ಯಾನಪ್ರಕಾರಮೇವಾಹ ಶುಚಾವಿತ್ಯಾದ್ಯನೇಕಶ್ಲೋಕೈಃ । ಶುಚೌ ದೇಶೇ ಮನಃಪ್ರಸಾದಹೇತುಭೂತದೇಶೋಪಲಕ್ಷಣಮೇತತ್ । ಚೇಲಂ ವಸ್ತ್ರಂ ಅಜಿನಂ ವ್ಯಾಘ್ರಾದಿಚರ್ಮ ಕುಶೋ ದರ್ಭ ಉತ್ತರಂ ಉಪರಿ ಯಸ್ಯ ತತ್ತಥಾ ನಾತ್ಯುಚ್ಛ್ರಿತಂ ನಾತಿನೀಚಮ್ । ನಸಮಾಸಃ । ಏವಂಭೂತಮಾಸನಂ ಸ್ಥಿರಂ ಯಥಾಽಽತ್ಮನಃ ಪ್ರತಿಷ್ಠಾಪ್ಯ ॥ 11 ॥**

**ಅನುವಾದ-** ಪುನಃ ಧ್ಯಾನದ ಕ್ರಮವನ್ನೇ 'ಶುಚೌ' ಇತ್ಯಾದಿ ಅನೇಕ ಶ್ಲೋಕಗಳಿಂದ ಹೇಳುತ್ತಾನೆ. **ಶುಚೌ ದೇಶೇ**= ಮನಸ್ಸಿನ ಪ್ರಸನ್ನತೆಗೆ ಯೋಗ್ಯವಾದ ಪ್ರಶಸ್ತಸ್ಥಳದಲ್ಲಿ ಎಂದು ಅರ್ಥ. **ಚೇಲಂ**= ವಸ್ತ್ರ , **ಅಜಿನಂ**= ಹುಲಿ ಮೊದಲಾದವುಗಳ ಚರ್ಮ, **ಕುಶ**= ದರ್ಭೆ ಇವುಗಳು, **ಉತ್ತರಂ**= ಮೇಲೆ ಮೇಲೆ ಇರುವಂತೆ ಮಾಡಿ, **ನಾತ್ಯುಚ್ಛ್ರಿತಂ, ನಾತಿನೀಚಂ**= ಹೆಚ್ಚು ಎತ್ತರವೂ, ತುಂಬಾ ತಗ್ಗೂ ಅಲ್ಲದ ಇದು 'ನ ' ಎಂಬ ಅವ್ಯಯದ ಜೊತೆಯಲ್ಲಿ ಆದ ಸಮಾಸ. ಇಂತಹ ಆಸನವನ್ನು ತನಗೆ ಸ್ಥಿರವಾಗಿ ಇರುವ ಹಾಗೆ ಮಾಡಿಕೊಂಡು. ॥ 11 ॥

**ವಿವರಣೆ –** ಇಲ್ಲಿ '**ಅತ್ಯುಚ್ಛ್ರಿತಂ**' ಎಂಬ ಪದ ಮತ್ತು ಅತಿನೀಚಂ ಎಂಬ ಪದ, '**ನಞ್**' ಅವ್ಯಯದ ಜೊತೆಯಲ್ಲಿ ಸಮಾಸವನ್ನು ಹೊಂದಿದರೆ ನುಟ್ ಆಗಮ ಬರಬೇಕು ಅನತ್ಯುಚ್ಛ್ರಿತಂ, ಅನತಿನೀಚಂ ಎಂದು ಆಗಬೇಕು ಎಂದು ಪ್ರಶ್ನಿಸಿದರೆ, ಇದು '**ನಞ್**' ಸಮಾಸವಲ್ಲ . 'ನ ' ಅವ್ಯಯದ ಸಮಾಸ . ಆದ್ದರಿಂದ '**ನುಟ್**' ಆಗಮಕ್ಕೆ ಅವಕಾಶವಿಲ್ಲ.

**ತತ್ರಾಸನೇ ಉಪವಿಶ್ಯ । ತದಾಹ ಸೂತ್ರೇ ॐ ಆಸೀನಃ ಸಂಭವಾತ್ ॐ**

**(4-1-7) ಇತಿ । ಯತಚಿತ್ತೇಂದ್ರಿಯಕ್ರಿಯಃ ಸನ್ ಏಕಾಗ್ರಂ ಮನಃ ಕೃತ್ವಾ ಆತ್ಮನೋ ಮನಸೋ ವಿಶುದ್ಧಯೇ ಸರ್ವಮಲದಾಹಾಯ ಸ್ವಸ್ಯ ಸಂಸಾರಮಲ-ನಿವೃತ್ತಯೇ ವಾ ಯೋಗಂ ಧ್ಯಾನಯೋಗಂ ಯುಂಜ್ಯಾತ್ ಕುರ್ಯಾದಿತಿ ವಿಧ್ಯನುವಾದೇನ ಪ್ರಕಾರೋಕ್ತಿರಿಯಮ್ ॥ 12 ॥**

**ಅನುವಾದ- ತತ್ರ ಆಸನೇ=** ಆ ಆಸನದಲ್ಲಿ **ಉಪವಿಶ್ಯ=** ಕುಳಿತು, **ಓಂ ಆಸೀನಃ ಸಂಭವಾತ್ ಓಂ** (4-1-7) ಎಂಬ ಬ್ರಹ್ಮಸೂತ್ರದಲ್ಲಿ ಇದನ್ನು ಹೇಳಿದ್ದಾರೆ. ಮನಸ್ಸು, ಇಂದ್ರಿಯ ನಿಗ್ರಹವುಳ್ಳವನಾಗಿ, ಮನಸ್ಸನ್ನು ಏಕಾಗ್ರಗೊಳಿಸಿ **ಆತ್ಮನಃ =** ಮನಸ್ಸಿನ, **ವಿಶುದ್ಧಯೇ=** ಎಲ್ಲಾ ದೋಷ ಪರಿಹಾರಕ್ಕಾಗಿ ಅಥವಾ ತನ್ನ ಸಂಸಾರಬಂಧನದ ಪರಿಹಾರಕ್ಕಾಗಿ **ಯೋಗಂ=** ಧ್ಯಾನಯೋಗವನ್ನು , **ಯುಂಜ್ಯಾತ್=** ಮಾಡಬೇಕು. ಯೋಗವಿಧಿಯನ್ನು ಅನುವಾದ ಮಾಡಿ ಧ್ಯಾನಕ್ರಮವನ್ನು ಇಲ್ಲಿ ಹೇಳಿದ್ದಾನೆ . ॥ 12 ॥

**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥ 13 ॥**

**ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।**
**ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥ 14 ॥**

**ಅರ್ಥ** - ದೇಹ, ತಲೆ, ಕುತ್ತಿಗೆಗಳನ್ನು ನೆಟ್ಟಗೆ ಇಟ್ಟುಕೊಂಡು, ಅಲುಗಾಡದೆ ಸ್ಥಿರನಾಗಿದ್ದು, ತನ್ನ ಮೂಗಿನ ತುದಿಯನ್ನು ನೋಡುತ್ತಾ, ಆ ಕಡೆ ಈ ಕಡೆ ನೋಡದೆ, ವಿಷಯಪದಾರ್ಥಗಳಲ್ಲಿ ಮನಸ್ಸನ್ನು ಹೋಗದ ಹಾಗೆ ತಡೆದು, ಭಯರಹಿತನಾಗಿ, ಬ್ರಹ್ಮಚರ್ಯ ವ್ರತದಲ್ಲಿದ್ದು, ಮನಸ್ಸನ್ನು ತನ್ನ ವಶದಲ್ಲಿ ಇಟ್ಟುಕೊಂಡು, ನನ್ನನ್ನೇ ಚಿಂತಿಸುತ್ತಾ, ನನ್ನನ್ನೇ ಸರ್ವೋತ್ತಮನೆಂದು ತಿಳಿದು, ಸಮಾಧಿಯುಕ್ತನಾಗಬೇಕು.

**ಕಾಯಶಿರೋಗ್ರೀವಂ ಕಾಯೋ ಮಧ್ಯದೇಹಃ । ಸ ಚ ಶಿರಶ್ಚ ಗ್ರೀವಾ ಚ । ಪ್ರಾಣ್ಯಂಗತ್ವಾದ್ ದ್ವಂದ್ವೈಕವದ್ಭಾವಃ । ಸಮಂ ಋಜು ಧಾರಯನ್ ಅಚಲಂ ಯಥಾ ತಥಾ ಸ್ಥಿರೋ ದೃಢಃ ಸ್ವಂ ನಾಸಿಕಾಗ್ರಂ ಸಂಪ್ರೇಕ್ಷ್ಯ ದಿಶಶ್ಚಾನವ-ಲೋಕಯನ್ ಯುಂಜ್ಯಾದಿತಿ ಪೂರ್ವೇಣ ವಾ ಯುಕ್ತ ಆಸೀತೇತ್ಯುತ್ತರೇಣ ವಾಽನ್ವಯಃ ॥ 13 ॥**

**ಅನುವಾದ** - **'ಕಾಯ ಶಿರೋಗ್ರೀವಂ'** ಎಂಬಲ್ಲಿ, **ಕಾಯಃ** = ಮಧ್ಯದೇಹ , **'ಕಾಯಶ್ಚ ಶಿರಶ್ಚ, ಗ್ರೀವಾ ಚ ಕಾಯಶಿರೋಗ್ರೀವಂ'** ಎಂದು ಸಮಾಸ, ಇಲ್ಲಿ ಕಾಯ, ಶಿರ, ಗ್ರೀವಾ

ಇವುಗಳು ಪ್ರಾಣಿ ಅಂಗಗಳಾದ್ದರಿಂದ ದ್ವಂದ್ವಸಮಾಸ ಆಗಿ ಏಕವಚನ ಬಂದಿದೆ. **ಸಮಂ**= ನೆಟ್ಟಗೆ, **ಧಾರಯನ್**= ಇಟ್ಟುಕೊಂಡು , **ಅಚಲಂ ಯಥಾ ತಥಾ**= ಅಲುಗಾಡದ ಹಾಗೆ, **ಸ್ಥಿರಃ**= ಸ್ಥಿರವಾಗಿದ್ದು , **ಸ್ವಂ**= ತನ್ನ , **ನಾಸಿಕಾಗ್ರಂ**= ಮೂಗಿನ ತುದಿಯನ್ನು , **ಸಂಪ್ರೇಕ್ಷ್ಯ** = ನೋಡುತ್ತಾ, **ದಿಶಶ್ಚಾನವಲೋಕಯನ್**= ಆಕಡೆ ಈ ಕಡೆ ನೋಡದೆ **ಯುಂಜ್ಯಾತ್**= ಧ್ಯಾನಯೋಗವನ್ನು ಮಾಡಬೇಕು ಎಂದು ಹಿಂದಿನ ಶ್ಲೋಕದೊಂದಿಗೆ ಅನ್ವಯ ಅಥವಾ **ಯುಕ್ತ ಆಸೀತ** = ಸಮಾಧಿ ಯುಕ್ತನಾಗಬೇಕು ಎಂದು ಮುಂದಿನ ಶ್ಲೋಕದೊಂದಿಗೆ ಅನ್ವಯ. II 13 II

**ಪ್ರಶಾಂತಾತ್ಮಾ ಸ್ವತೋ ವಿಷಯೇಷು ಅಪ್ರವೃತ್ತಮನಸ್ಕಃ ವಿಗತಭೀಃ ವ್ಯಾಘ್ರ- ಚೋರಾದಿಭಯಹೀನಃ ಬ್ರಹ್ಮಚಾರಿವ್ರತೇ ಸ್ಥಿತಃ ಮನಃ ಸಮ್ಯಕ್ ಪ್ರತ್ಯಾಹೃತ್ಯ ಮಚ್ಚಿತ್ತೋ ಮದ್ಧ್ಯಾನವಾನ್ಮತ್ಪರಃ ಅಹಮೇವ ಪರಃ ಸರ್ವೋತ್ತಮಃ ಯಸ್ಯ ಸ ಮತ್ಪರಃ ಯುಕ್ತಃ ಸಮಾಧಿಸಂಪನ್ನ ಆಸೀತೇತ್ಯರ್ಥಃ II 14 II**

**ಅನುವಾದ- ಪ್ರಶಾಂತಾತ್ಮಾ** = ಸ್ವತಃ ವಿಷಯ ಪದಾರ್ಥಗಳಲ್ಲಿ ಮನಸ್ಸು ಹೋಗದ ಹಾಗೆ ತಡೆದು, **ವಿಗತಭೀಃ** = ಹುಲಿ, ಕಳ್ಳ ಮೊದಲಾದವರಿಂದ ಭಯ ರಹಿತನಾಗಿ, ಬ್ರಹ್ಮಚಾರಿವ್ರತದಲ್ಲಿ ಇದ್ದು, ಮನಸ್ಸನ್ನು ಚೆನ್ನಾಗಿ ತನ್ನ ಅಧೀನದಲ್ಲಿ ಇಟ್ಟುಕೊಂಡು, **ಮಚ್ಚಿತ್ತಃ** = ನನ್ನನ್ನೇ ಧ್ಯಾನಿಸುತ್ತಾ, **ಮತ್ಪರಃ**= ನಾನೇ (ಕೃಷ್ಣ) **ಪರಃ**= ಸರ್ವೋತ್ತಮ ಎಂದು ತಿಳಿದು, **ಯುಕ್ತಃ**= ಸಮಾಧಿಯುಕ್ತ ನಾಗಬೇಕು. II 14 II

**ಯುಂಜನ್ನೇವಂ(ಏವಂ ಯುಂಜನ್)ಸದಾತ್ಮಾನಂ ಯೋಗೀ ನಿಯತಮಾನಸಃ I**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ II 15 II**

**ಅರ್ಥ**- ಮನೋನಿಗ್ರಹವನ್ನು ಪಡೆದ ಧ್ಯಾನಯೋಗಿಯು ಹೀಗೆ ನಿರಂತರ ಭಗವಂತನನ್ನು ಧ್ಯಾನಿಸುತ್ತಾ , ಅಥವಾ ಮನಸ್ಸನ್ನು ಭಗವಂತನಲ್ಲಿ ಆಸಕ್ತವನ್ನಾಗಿಸಿ, ದೇಹತ್ಯಾಗಾನಂತರದಲ್ಲಿ ನನ್ನಲ್ಲಿಯೇ ಇರುವಿಕೆಯೆಂಬ ಮೋಕ್ಷಸುಖವನ್ನು ಪಡೆಯುತ್ತಾನೆ.

**ಸಮಾಧೇಃ ಫಲಮಾಹ- ಯುಂಜನ್ನಿತಿ II ನಿಯತಮಾನಸೋ ಯತಚಿತ್ತಃ I ಯೋಗೀ ಯೋಗಾನುಷ್ಠಾತಾ I ಏವಮುಕ್ತಪ್ರಕಾರೇಣ ಸದಾಽಽತ್ಮಾನಂ ಯುಂಜನ್ ಧ್ಯಾಯನ್ ಆತ್ಮಾನಂ ಮನೋ ಭಗವತಿ ಯುಕ್ತಂ ಕುರ್ವನ್ನಿತಿ ವಾ ನಿರ್ವಾಣಪರಮಾಂ ಶರೀರತ್ಯಾಗೋತ್ತರಕಾಲೀನಾಂ ಮತ್ಸಂಸ್ಥಾಂ ಮಯಿ ಸ್ಥಿತಿರೂಪಾಂ ಶಾಂತಿಮಧಿಗಚ್ಛತಿ ಪ್ರಾಪ್ನೋತಿ I ನ ಜೀವನ್ಮುಕ್ತಿಮಾತ್ರ- ಮಾಪ್ನೋತೀತ್ಯರ್ಥಃ II 15 II**

**ಅನುವಾದ**- ಸಮಾಧಿಯ ಫಲವನ್ನು '**ಯುಂಜನ್ನೇವಂ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. **ನಿಯತಮಾನಸಃ** = ಮನೋನಿಗ್ರಹವನ್ನು ಪಡೆದ, **ಯೋಗೀ** = ಧ್ಯಾನ ಯೋಗವನ್ನು ಅನುಷ್ಠಾನ ಮಾಡುವ ಯೋಗಿಯು, **ಏವಂ**= ಹಿಂದೆ ಹೇಳಿದ ಕ್ರಮದಲ್ಲಿ **ಸದಾ**= ಯಾವಾಗಲು ಪರಮಾತ್ಮನನ್ನು , **ಯುಂಜನ್**= ಧ್ಯಾನಿಸುತ್ತಾ , ಅಥವಾ, **ಆತ್ಮಾನಂ**= ಮನಸ್ಸನ್ನು ಭಗವಂತನಲ್ಲಿ (**ಯುಂಜನ್**)= ಆಸಕ್ತವನ್ನಾಗಿಸುತ್ತಾ , **ನಿರ್ವಾಣಪರಮಾಂ**= ದೇಹ ತ್ಯಾಗಾನಂತರದಲ್ಲಿ , **ಮತ್‌ಸಂಸ್ಥಾಂ**= ನನ್ನಲ್ಲಿ ಇರುವಿಕೆಯೆಂಬ, **ಶಾಂತಿಂ**= ಮೋಕ್ಷ ಸುಖವನ್ನು **ಅಧಿಗಚ್ಛತಿ**= ಪಡೆಯುತ್ತಾನೆ. ಕೇವಲ ಜೀವನ್ಮುಕ್ತಿಯನ್ನು ಮಾತ್ರ ಹೊಂದುವುದಲ್ಲ ಎಂದರ್ಥ ॥ 15 ॥

**ವಿವರಣೆ** - ಯೋಗಿಯು ಮರಣಾನಂತರ ಕೇವಲ ಜೀವನ್ಮುಕ್ತಿ ಅವಸ್ಥೆಯ ಸುಖವನ್ನು ಮಾತ್ರ ಪಡೆಯುವುದಲ್ಲ. ಭಗವಂತನಲ್ಲೇ ಇದ್ದು ಶಾಶ್ವತ ಸುಖರೂಪವಾದ ಮೋಕ್ಷವನ್ನೂ ಪಡೆಯುತ್ತಾನೆ ಎಂದು ತಿಳಿಸಲು ನಿರ್ವಾಣಪರಮಾಂ ಎಂದು ವಿಶೇಷಣವನ್ನು ಕೊಟ್ಟಿದ್ದಾರೆ.

### ಆಹಾರವಿಹಾರದ ಮಿತಿ

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ ।**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ 16 ॥**

**ಅರ್ಥ**- ಅರ್ಜುನ ! ಅಧಿಕ ಊಟಮಾಡುವವನಿಗೂ ಮತ್ತು ಊಟವನ್ನೇ ಮಾಡದವನಿಗೂ ಧ್ಯಾನ ಸಾಧ್ಯವಾಗುವುದಿಲ್ಲ. ಹಾಗೆಯೇ ಅತಿನಿದ್ರಾಶೀಲನಿಗೂ ಮತ್ತು ನಿದ್ರೆಯನ್ನೇ ಮಾಡದವನಿಗೂ ಧ್ಯಾನ ಸಾಧ್ಯವಾಗುವುದಿಲ್ಲ.

ಧ್ಯಾನಯೋಗನಿಷ್ಠಸ್ಯಾಹಾರಾದಿನಿಯಮಮಾಹ - **ನಾತ್ಯಶ್ನತ ಇತ್ಯಾದಿ ದ್ವಾಭ್ಯಾಮ್ ॥ ಅತಿ ಅಧಿಕಂ ಭುಂಜಾನಸ್ಯ ಏಕಾಂತಂ ಸರ್ವಥೈವಾಭುಂಜಾನಸ್ಯ ಚಾತಿನಿದ್ರಾಶೀಲಸ್ಯಾತಿಜಾಗ್ರತಶ್ಚ ಯೋಗೋ ನೈವಾಸ್ತೀತ್ಯರ್ಥಃ । ಅತ್ರಾಶನ-ಜಾಗರಣನಿಷೇಧೋಽಶಕ್ತಸ್ಯ । ಶಕ್ತಸ್ಯ ತ್ವನಶನಾದಾವಪಿ ನ ಯೋಗಕ್ಷತಿರಿತಿ ಜ್ಞೇಯಮ್ ॥ 16 ॥**

**ಅನುವಾದ**- ಧ್ಯಾನಯೋಗವನ್ನು ಅನುಷ್ಠಾನ ಮಾಡುವವನಿಗೆ ಆಹಾರಾದಿ ನಿಯಮವನ್ನು '**ನಾತ್ಯಶ್ನತಸ್ತು**' ಎಂಬ ಈ ಎರಡು ಶ್ಲೋಕಗಳಿಂದ ಹೇಳುತ್ತಿದ್ದಾನೆ. **ಅತಿ**= ಅಧಿಕವಾಗಿ ಊಟ ಮಾಡುವವನಿಗೆ, **ಏಕಾಂತಂ** = ಸರ್ವಥಾ, (**ಅನಶ್ನತಃ**) ಊಟವನ್ನೇ ಮಾಡದವನಿಗೂ ಹೆಚ್ಚು ನಿದ್ರಾಶೀಲನಿಗೂ ನಿದ್ರೆಯನ್ನೇ ಮಾಡದವನಿಗೂ ಧ್ಯಾನ ಸಾಧ್ಯವಾಗುವುದಿಲ್ಲ. ಅತಿಯಾಗಿ ಉಪವಾಸ ಜಾಗರಣೆಗಳನ್ನು ಮಾಡಬಾರದೆಂದು ಅವುಗಳನ್ನು ಮಾಡಲು ಅಶಕ್ತರಾದವರಿಗೆ

ಮಾತ್ರ ಹೇಳಿದ್ದಾರೆ. ಉಪವಾಸ ಜಾಗರಣೆಗಳನ್ನು ಮಾಡಿದರೂ ಯಾರು ಧ್ಯಾನ ಮಾಡಲು ಶಕ್ತರೋ ಅವರಿಗೆ ಈ ನಿಷೇಧ ಇಲ್ಲ. ॥ 16॥

**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ 17 ॥**

**ಅರ್ಥ** - ಧ್ಯಾನಯೋಗಕ್ಕೆ ತೊಂದರೆಯನ್ನುಂಟು ಮಾಡದಷ್ಟು ಆಹಾರ ವಿಹಾರಗಳನ್ನು ಮಾಡುವ, ಧ್ಯಾನಯೋಗಕ್ಕೆ ತೊಂದರೆಯನ್ನುಂಟು ಮಾಡದಷ್ಟು ಕರ್ಮಾಚರಣೆಗಳಲ್ಲಿ ತನ್ನನ್ನು ತೊಡಗಿಸಿಕೊಂಡಿರುವ, ಧ್ಯಾನಯೋಗಕ್ಕೆ ತೊಂದರೆಯನ್ನುಂಟು ಮಾಡದಷ್ಟು ಉಪವಾಸ ಜಾಗರಣೆಗಳನ್ನು ಮಾಡುವವನಿಗೆ ಧ್ಯಾನಯೋಗವು ದುಃಖಗಳನ್ನು ನಾಶಮಾಡುತ್ತದೆ.

**ಕಥಂಭೂತಸ್ಯ ಯೋಗೋ ಭವತೀತ್ಯತ ಆಹ- ಯುಕ್ತೇತಿ ॥ ಯುಕ್ತೌ ಯೋಗೋಪೇತೌ ಆಹಾರವಿಹಾರೌ ಭೋಜನಸಂಚಾರೌ ಯಸ್ಯ ಸ ತಥಾ ತಸ್ಯ । ಯಾವತಾ ಶ್ರಮಾದಿರ್ನ ಭವತಿ ತಾವದಾಹಾರವ್ಯಾಪಾರವತ ಇತ್ಯರ್ಥಃ । ಕರ್ಮಸು ಕಾರ್ಯೇಷು ಯುಕ್ತಚೇಷ್ಟಸ್ಯ ಶ್ರಮಾನಾಪಾದಕಚೇಷ್ಟಾಯುಕ್ತಸ್ಯ ಯುಕ್ತಸ್ವಪ್ನಾವಬೋಧಸ್ಯ ಯಾವನ್ನಿದ್ರಾऽವಬೋಧೌ ಯೋಗಾವಿಘಾತಕೌ ತಾವನ್ನಿದ್ರಾವಬೋಧೋಪೇತಸ್ಯ ಯೋಗೋ ಧ್ಯಾನಯೋಗಃ ಸಮಾಧಿರಿತಿ ಯಾವತ್ । ದುಃಖಹಾ ಭವತೀತ್ಯರ್ಥಃ ॥ 17 ॥**

**ಅನುವಾದ**- ಯಾರಿಗೆ ಧ್ಯಾನ ಸಾಧ್ಯ ಎಂಬುದನ್ನು '**ಯುಕ್ತಾಹಾರ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. **ಯುಕ್ತೌ**= ಧ್ಯಾನಯೋಗಸಹಿತವಾದ, **ಆಹಾರವಿಹಾರೌ ಯಸ್ಯ ಸಃ ತಥಾ ತಸ್ಯ**= ಊಟ, ಸಂಚಾರವುಳ್ಳವನಿಗೆ, ಎಷ್ಟು ಆಹಾರ ಸ್ವೀಕಾರ ಮಾಡಿದರೆ ಧ್ಯಾನಕ್ಕೆ ಭಂಗ ಬರುವುದಿಲ್ಲವೋ ಅಷ್ಟು ಆಹಾರವಿಹಾರವುಳ್ಳವನಿಗೆ ಎಂದರ್ಥ. **ಕರ್ಮಸು**= ಕರ್ಮಾಚರಣೆಗಳಲ್ಲಿ , **ಯುಕ್ತಚೇಷ್ಟಸ್ಯ**= ಆಯಾಸವಾಗದಷ್ಟು ವ್ಯಾಪಾರವುಳ್ಳವನಿಗೆ, **ಯುಕ್ತಸ್ವಪ್ನಾವ-ಬೋಧಸ್ಯ**= ಎಷ್ಟು ನಿದ್ರೆ ಜಾಗರಣೆಗಳು ಧ್ಯಾನಕ್ಕೆ ತೊಂದರೆಯನ್ನು ಉಂಟು ಮಾಡುವುದಿಲ್ಲವೋ ಅಷ್ಟು ನಿದ್ರೆಜಾಗರಣೆಯಿಂದ ಕೂಡಿದವನಿಗೆ, **ಯೋಗಃ** = ಧ್ಯಾನಯೋಗವು ಅಂದರೆ ಸಮಾಧಿಯು ದುಃಖಗಳನ್ನು ನಾಶಮಾಡುತ್ತದೆ. ॥ 17 ॥

**ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।**
**ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥ 18 ॥**

**ಅರ್ಥ** - ಯಾವಾಗ ಮನಸ್ಸು ವಿಷಯಪದಾರ್ಥಗಳ ಕಡೆ ಹರಿಯದೆ ವಿಶೇಷವಾಗಿ

ನಿಗ್ರಹಿಸಲ್ಪಟ್ಟು, ಭಗವಂತನಲ್ಲಿಯೇ ಆಸಕ್ತವಾಗುವುದೋ, ಧ್ಯಾನಯೋಗಿಯು ಯಾವಾಗ ಎಲ್ಲಾ ಭೋಗವಸ್ತುಗಳಲ್ಲಿಯೂ ಆಸೆಯನ್ನು ತೊರೆಯುವನೋ ಆಗ ಧ್ಯಾನಯೋಗದ ಪೂರ್ಣತೆಯನ್ನು ಪಡೆದವನೆನಿಸುತ್ತಾನೆ.

**ಯೋಗಸಂಪೂರ್ತಿಸ್ವರೂಪಮಾಹ ಯದೇತ್ಯಾದ್ಯನೇಕಶ್ಲೋಕೈಃ ॥ ಯದಾ ವಿಶೇಷೇಣ ನಿಯತಂ ವಿಷಯೇಭ್ಯಃ ಪ್ರತ್ಯಾಹೃತಂ ಚಿತ್ತಮಾತ್ಮನ್ಯೇವಾವತಿಷ್ಠತೇ ಸರ್ವಕಾಮೇಭ್ಯಃ ನಿಸ್ಪೃಹಶ್ಚ ಯದಾ ತದಾ ಯುಕ್ತೋ ಯೋಗ ಸಂಪೂರ್ತಿಮಾನಿತ್ಯುಚ್ಯತ ಇತ್ಯರ್ಥಃ ॥ 18 ॥**

**ಅನುವಾದ-** ಧ್ಯಾನಯೋಗದ ಪೂರ್ಣತೆಯ ಸ್ವರೂಪವನ್ನು **'ಯದಾ ವಿನಿಯತಂ'** ಇತ್ಯಾದಿ ಅನೇಕ ಶ್ಲೋಕಗಳಿಂದ ಹೇಳುತ್ತಿದ್ದಾನೆ. ಯಾವಾಗ **ವಿಶೇಷೇಣನಿಯತಂ**= ವಿಷಯ ಪದಾರ್ಥಗಳ ಕಡೆ ಹರಿಯದಂತೆ ವಿಶೇಷವಾಗಿ ನಿಗ್ರಹಿಸಲ್ಪಟ್ಟ, **ಚಿತ್ತಂ**= ಮನಸ್ಸು, **ಆತ್ಮನ್ಯೇವ**= ಪರಮಾತ್ಮನಲ್ಲೇ, **ಅವತಿಷ್ಠತೇ**= ಆಸಕ್ತವಾಗುವುದೋ, ಯಾವಾಗ (ಸಾಧಕನು) **ಸರ್ವಕಾಮೇಭ್ಯಃ** = ಎಲ್ಲಾ ಭೋಗವಸ್ತುಗಳಲ್ಲಿಯೂ , **ನಿಸ್ಪೃಹಃ** = ಆಸೆಯನ್ನು ತೊರೆದಿರುವನೋ ಆಗ **ಯುಕ್ತಃ** = ಧ್ಯಾನ ಯೋಗದ ಪೂರ್ಣತೆಯನ್ನು ಪಡೆದವನೆನಿಸುತ್ತಾನೆ. ॥ 18 ॥

**ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥ 19 ॥**

**ಅರ್ಥ-** ಭಗವಂತನ ಧ್ಯಾನವನ್ನು ಮಾಡುತ್ತಿರುವ ಮನೋನಿಗ್ರಹವುಳ್ಳ ಧ್ಯಾನಯೋಗಿಗೆ ಗಾಳಿಯಿಲ್ಲದ ಪ್ರದೇಶದಲ್ಲಿರುವ ದೀಪ ಹೇಗೆ ಚಲ್ಲಿಸುವುದಿಲ್ಲವೋ ಹಾಗೆ ಎಂಬುದು ದೃಷ್ಟಾಂತ. (ಅವನ ಮನಸ್ಸು ಭಗವಂತನನ್ನು ಬಿಟ್ಟು ಅಲುಗಾಡುವುದಿಲ್ಲ).

**ಯೋಗಸಂಪನ್ನಃ ಕಥಂ ತಿಷ್ಠತೀತ್ಯತ ಆಹ- ಯಥೇತಿ ॥ ವಾಯುಶೂನ್ಯದೇಶಸ್ಥೋ ದೀಪೋ ಯಥಾ ನೇಂಗತೇ ನ ಚಲತಿ ಸಾ ಉಪಮಾ ದೃಷ್ಟಾಂತಃ । ಕಸ್ಯೇತ್ಯತ ಉಕ್ತಮ್ ಯೋಗಿನ ಇತಿ ॥ ಆತ್ಮನೋ ಯೋಗಂ ಭಗವದ್ವಿಷಯಸಮಾಧಿಂ ಯುಂಜತಃ ಕುರ್ವತಃ ಯೋಗಿನಃ ಯತಚಿತ್ತಸ್ಯೇತಿ ॥ 19 ॥**

**ಅನುವಾದ-** ಧ್ಯಾನಯೋಗದ ಪೂರ್ಣತೆಯನ್ನು ಪಡೆದವನು ಹೇಗೆ ಇರುತ್ತಾನೆ ಎಂಬುದನ್ನು **'ಯಥಾ ದೀಪಃ'** ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. ಗಾಳಿಯಿಲ್ಲದ ಪ್ರದೇಶದಲ್ಲಿರುವ ದೀಪವು ಹೇಗೆ, **ನೇಂಗತೇ** = ಚಲಿಸುವುದಿಲ್ಲವೋ, ಅದು ದೃಷ್ಟಾಂತ, ಯಾರಿಗೆ ? ಎಂಬುದನ್ನು **'ಯೋಗಿನಃ'** ಎಂಬ ಉತ್ತರಾರ್ಧದಿಂದ ಹೇಳುತ್ತಿದ್ದಾನೆ. **ಆತ್ಮನಃ**

**ಯೋಗಂ**= ಭಗದ್ವಿಷಯಕವಾದ ಧ್ಯಾನವನ್ನು , **ಯುಂಜತಃ**= ಮಾಡುತ್ತಿರುವ, **ಯೋಗಿನಃ**= ಧ್ಯಾನಯೋಗಿಗೆ, **ಯತಚಿತ್ತಸ್ಯ** = ಮನೋನಿಗ್ರಹವುಳ್ಳವನಿಗೆ ॥ 19 ॥

## ಧ್ಯಾನದ ಫಲ

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾಽಽತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥ 20 ॥**

**ಸುಖಮಾತ್ಯಂತಿಕಂ ಯತ್ತದ್‌ಬುದ್ಧಿಗ್ರಾಹ್ಯಮತೀಂದ್ರಿಯಮ್ ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥ 21 ॥**

**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್‌ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥ 22 ॥**

**ತಂ ವಿದ್ಯಾದ್ ದುಃಖಸಂಯೋಗವಿಯೋಗಂ ಯೋಗಸಂಜ್ಞಿತಂ ।**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋ ನಿರ್ವಿಣ್ಣಚೇತಸಾ ॥ 23 ॥**

**ಅರ್ಥ**- ಧ್ಯಾನಯೋಗದ ಆಚರಣೆಯಿಂದ (ವಿಷಯಪದಾರ್ಥಗಳಿಂದ) ನಿಗ್ರಹಿಸಲ್ಪಟ್ಟ ಮನಸ್ಸು ಯಾವ ಧ್ಯಾನಾವಸ್ಥೆಯಲ್ಲಿ ಬಾಹ್ಯಪದಾರ್ಥಗಳನ್ನು ಬಯಸುವುದಿಲ್ಲವೋ, ಯಾವ ಧ್ಯಾನಾವಸ್ಥೆಯಲ್ಲಿ ಮನಸ್ಸಿನಿಂದ (ಭಗವಂತನ ಅನುಗ್ರಹದಿಂದ) ಭಗವಂತನನ್ನು ತನ್ನ ದೇಹದಲ್ಲಿ ನೋಡುತ್ತಾ ಸಂತೋಷಪಡುತ್ತಾನೋ, ಯಾವ ಧ್ಯಾನಯೋಗದಲ್ಲಿರುವ ಯೋಗಿಯು ಅನುಭವೈಕವೇದ್ಯವಾದ, ಬಾಹ್ಯೇಂದ್ರಿಯಗಳಿಂದ ಅನುಭವಿಸಲಾಗದ ಮಹದಾನಂದವನ್ನು ಅನುಭವಿಸುತ್ತಾನೋ, ಯಾವ ಧ್ಯಾನಯೋಗದಲ್ಲಿರುವ ಯೋಗಿಯು ಭಗವಂತನನ್ನು ಬಿಟ್ಟು ಚಲಿಸುವುದಿಲ್ಲವೋ, ಯಾವ ಧ್ಯಾನಾವಸ್ಥೆಯನ್ನು ಪಡೆದು ಇತರ ಯಾವುದೇ ಲಾಭವನ್ನು ಹೆಚ್ಚಿನದ್ದೆಂದು ತಿಳಿಯುವುದಿಲ್ಲವೋ, ಯಾವ ಧ್ಯಾನಾವಸ್ಥೆಯಲ್ಲಿ ಪ್ರಬಲದುಃಖ ಕಾರಣಗಳಿಂದಲೂ ವಿಚಲಿತನಾಗುವುದಿಲ್ಲವೋ, ಅಂತಹ ಅವಸ್ಥೆಯನ್ನು ದುಃಖವನ್ನೇ ಬಾರದಂತೆ ಮಾಡುವ ಧ್ಯಾನಾವಸ್ಥೆಯೆಂದು ತಿಳಿಯಬೇಕು. ಮೋಕ್ಷವನ್ನು ಬಯಸುವ ಜೀವಿಯು ವೈರಾಗ್ಯದಿಂದ ಕೂಡಿದ ಮನಸ್ಸಿನಿಂದ ಇಂತಹ ಧ್ಯಾನವನ್ನು ಅವಶ್ಯವಾಗಿ ಅನುಷ್ಠಾನ ಮಾಡಬೇಕು.

**ಯೋಗಸೇವಯಾ ನಿರುದ್ಧಂ ಚಿತ್ತಂ ಯತ್ರ ಸಮಾಧಾವುಪರಮತೇ ಬಾಹ್ಯ-ವ್ಯಾಪಾರಹೀನಂ ಭವತಿ । ಯತ್ರ ಚೈವ ಯಸ್ಮಿನ್ನೇವ ಸಮಾಧಿಯೋಗೇ ಆತ್ಮನಾ**

**ಮನಸಾ ಆತ್ಮಾನಂ ಭಗವಂತಂ ಪಶ್ಯನ್ನಾತ್ಮನಾತ್ಮನಿ ದೇಹೇ ತುಷ್ಯತಿ ತೋಷ-ಮಾಪ್ನೋತೀತ್ಯರ್ಥಃ। ಯಚ್ಛಬ್ದಯೋಸ್ತಮಿತ್ಯಗ್ರೇಽನ್ವಯಃ। ಏವಮುತ್ತರತ್ರಾಪಿ।**
**॥ 20 ॥**

**ಅನುವಾದ** - ಧ್ಯಾನಯೋಗದ ಆಚರಣೆಯಿಂದ ನಿಗ್ರಹಿಸಲ್ಪಟ್ಟ ಮನಸ್ಸು, **ಯತ್ರ**= ಯಾವ ಧ್ಯಾನಾವಸ್ಥೆಯಲ್ಲಿ **ಉಪರಮತೇ** = ಬಾಹ್ಯ ವ್ಯಾಪಾರ ರಹಿತವಾಗುತ್ತದೋ, **ಯತ್ರ ಚೈವ**= ಯಾವ ಧ್ಯಾನಾವಸ್ಥೆಯಲ್ಲಿ **ಆತ್ಮನಾ** = ಮನಸ್ಸಿನಿಂದ, **ಆತ್ಮಾನಂ**= ಭಗವಂತನನ್ನು ನೋಡುತ್ತಾ, ಭಗವಂತನ ಅನುಗ್ರಹದಿಂದ **ಆತ್ಮನಿ** = ತನ್ನ ದೇಹದಲ್ಲಿ, **ತುಷ್ಯತಿ** = ಸಂತೋಷಪಡುತ್ತಾನೆ ಎಂದರ್ಥ. ಯಾವ ಧ್ಯಾನಾವಸ್ಥೆಯಲ್ಲಿ ಎಂದು ತಿಳಿಸುವ **'ಯತ್ರ'** ಶಬ್ದಗಳಿಗೆ, ಆ ಧ್ಯಾನಾವಸ್ಥೆಯನ್ನು ಎಂದು ತಿಳಿಸುವ 23ನೇ ಶ್ಲೋಕದ **'ತಂ'** ಎಂಬ ಶಬ್ದದ ಜೊತೆಗೆ ಅನ್ವಯ . ಮುಂದಿನ ಶ್ಲೋಕಗಳಲ್ಲಿಯೂ ಹೀಗೆ . ॥ 20 ॥

**ಯತ್ರ ಸಮಾಧೌ ಸ್ಥಿತಃ ಬುದ್ಧಿಗ್ರಾಹ್ಯಂ ಅನುಭವೇನ ವೇದ್ಯಂ ಅತೀಂದ್ರಿಯ-ಮಿಂದ್ರಿಯಾಗ್ರಾಹ್ಯಂ ಆತ್ಯಂತಿಕಮತಿಶಯಿತಂ ಸುಖಂ ವೇತ್ತಿ ಅನುಭವತಿ, ಯತ್ರ ಯೋಗೇ ಸ್ಥಿತೋಽಯಂ ತತ್ತ್ವತೋ ಭಗವದ್ರೂಪಾನ್ನ ಚಲತಿ ತಮಿತ್ಯನ್ವಯಃ।**
**॥ 21 ॥**

**ಅನುವಾದ - ಯತ್ರ** = ಯಾವ ಧ್ಯಾನಾವಸ್ಥೆಯಲ್ಲಿರುವ ಯೋಗಿಯು **ಬುದ್ಧಿಗ್ರಾಹ್ಯಂ**= ಅನುಭವೈಕವೇದ್ಯವಾದ, **ಅತೀಂದ್ರಿಯಂ**= ಬಾಹ್ಯೇಂದ್ರಿಯಗಳಿಂದ ಅನುಭವಿಸಲಾಗದ, **ಆತ್ಯಂತಿಕಂ**= ಅತಿಶಯಿತವಾದ ಸುಖವನ್ನು ಅನುಭವಿಸುತ್ತಾನೊ, **ಯತ್ರ**= ಯಾವ ಧ್ಯಾನಾವಸ್ಥೆಯಲ್ಲಿರುವ ಯೋಗಿಯು **ತತ್ತ್ವತಃ** = ಭಗವಂತನಿಂದ ದೂರ, **ನ ಚಲತಿ**= ಚಲಿಸುವುದಿಲ್ಲವೋ ಅಂತಹ ಧ್ಯಾನಾವಸ್ಥೆಯನ್ನು ಎಂದು ಅನ್ವಯ. ॥ 21 ॥

**ಯಂ ಯೋಗಂ ಲಬ್ಧ್ವಾ ಚ ತತೋಽಪರಂ ಲಾಭಮಧಿಕಂ ನ ಮನ್ಯತೇ, ಯಸ್ಮಿನ್ ಸ್ಥಿತೋ ಗುರುಣಾಽಪಿ ದುಃಖೇನ ದುಃಖಹೇತುನಾ ನ ವಿಚಾಲ್ಯತೇ।**
**॥ 22 ॥**

**ಅನುವಾದ**- ಯಾವ ಧ್ಯಾನಾವಸ್ಥೆಯನ್ನು ಪಡೆದು, **ತತೋಽಪರಂ**= ಇತರ ಯಾವುದೇ ಲಾಭವನ್ನು , ಹೆಚ್ಚು ಎಂದು ತಿಳಿಯುವುದಿಲ್ಲವೋ, ಯಾವ ಧ್ಯಾನಾವಸ್ಥೆಯಲ್ಲಿರುವ ಯೋಗಿಯು ಪ್ರಬಲವಾದ , **ದುಃಖೇನ** = ದುಃಖಕಾರಣಗಳಿಂದಲೂ ವಿಚಲಿತನಾಗುವುದಿಲ್ಲವೋ ॥ 22 ॥

**ತಂ ದುಃಖಸಂಯೋಗವಿಯೋಗಂ ದುಃಖಸಂಯೋಗೇನ ವಿಯುಜ್ಯ-**

**ಮಾನಮ್ । ದುಃಖಸಂಯೋಗಸ್ಯ ವಿಯೋಗೋ ಯಸ್ಮಾದಿತಿ ವಾ । ವಿಯುಜ್ಯತೇಽನೇನೇತಿ ವಿಯೋಗಃ । ಕರಣೇ ಘಞ್ । [1]ದುಃಖಸಂಯೋಗಸ್ಯ ವಿಯೋಗ ಇತಿ ವಾ । ಯೋಗಸಂಜ್ಞಿತಂ ವಿದ್ಯಾತ್ । ಸಂಯೋಗಪದೇನ ನ ಕೇವಲಮುತ್ಪನ್ನದುಃಖಂ ನಾಶಯತಿ ಕಿಂ ತೂತ್ಪತ್ತಿಮೇವ ನಿವಾರಯತೀತಿ ಸೂಚಯತಿ । ಸ ಯೋಗಃ ಸಮಾಧಿಃ ನಿರ್ವಿಣ್ಣಚೇತಸಾ ವಿಷಯವಿರಕ್ತಮನಸಾ ನಿಶ್ಚಯೇನ ಯೋಕ್ತವ್ಯೋಽವಶ್ಯಂ ಕರ್ತವ್ಯ ಏವ ಮುಮುಕ್ಷುಣೇತ್ಯರ್ಥಃ । ಮುಮುಕ್ಷೋರ್ಧ್ಯಾನಾಯೋಗವ್ಯವಚ್ಛೇದಾರ್ಥೋಽಯಂ ನಿಶ್ಚಯಶಬ್ದಃ । ಅಯೋಗ- ವ್ಯವಚ್ಛೇದವಿಧಾನಾರ್ಥಮೇವ ಉದ್ಧರೇದಿತ್ಯತ್ರ ವಿಹಿತಸ್ಯಾತ್ರ ಪುನರ್ವಿಧಾನಮ್ ॥ 23 ॥**

**ಅನುವಾದ- ತಂ**= ಅಂತಹ, **ದುಃಖಸಂಯೋಗವಿಯೋಗಂ**= ದುಃಖ ಸಂಯೋಗ ವಿಲ್ಲದಿರುವ, ದುಃಖದ ಸಂಬಂಧವನ್ನೇ ದೂರ ಮಾಡುವ ಅಥವಾ ಯಾವ ಧ್ಯಾನಾವಸ್ಥೆಯಿಂದ ದುಃಖದ ಸಂಬಂಧವು ದೂರವಾಗುತ್ತದೋ. (ಅಂಥಹ ಧ್ಯಾನಾವಸ್ಥೆಯನ್ನು) **ವಿಯುಜ್ಯತೇ ಅನೇನ ಇತಿ ವಿಯೋಗಃ**= ನಾಶಕ್ಕೆ ಕಾರಣವಾದದ್ದು, ಕರಣಾರ್ಥದಲ್ಲಿ **'ಘಞ್'** ಪ್ರತ್ಯಯ ಬಂದಿದೆ. ದುಃಖ ಸಂಬಂಧದ ನಾಶಕ್ಕೆ ಕಾರಣವಾದದ್ದನ್ನು, ಧ್ಯಾನ= ಯೋಗ ಎಂದು ತಿಳಿಯಬೇಕು. ಸಂಯೋಗ ಎಂಬ ಶಬ್ದವು ಇಲ್ಲಿ, ಧ್ಯಾನಯೋಗವು ಬಂದ ದುಃಖವನ್ನು ಮಾತ್ರ ನಾಶ ಮಾಡುತ್ತದೆ ಎಂದು ಹೇಳುತ್ತಿಲ್ಲ, ದುಃಖವನ್ನು ಬಾರದಂತೆಯೂ ಮಾಡುತ್ತದೆ ಎಂದು ಸೂಚಿಸುತ್ತಿದೆ. **ಸಃ ಯೋಗಃ** ಆ ಧ್ಯಾನಾವಸ್ಥೆಯು **ನಿರ್ವಿಣ್ಣಚೇತಸಾ**= ವಿಷಯವೈರಾಗ್ಯವುಳ್ಳ ಮನಸ್ಸುಳ್ಳ ಮುಮುಕ್ಷುಜೀವನಿಂದ **ನಿಶ್ಚಯೇನ ಯೋಕ್ತವ್ಯಃ**= ಅವಶ್ಯವಾಗಿ ಆಚರಿಸಲ್ಪಡತಕ್ಕದ್ದು. ಮುಮುಕ್ಷುವಿಗೆ ಧ್ಯಾನ ಬೇಕೇಬೇಕು ಎಂದು ತಿಳಿಸಲು ಇಲ್ಲಿ ನಿಶ್ಚಯ ಶಬ್ದವನ್ನು ಹೇಳಿದ್ದಾರೆ. **ಉದ್ಧರೇತ್ ಆತ್ಮನಾತ್ಮಾನಂ** ಎಂಬ (ಈ ಅಧ್ಯಾಯದ 5ನೇ) ಶ್ಲೋಕದಲ್ಲಿ ಧ್ಯಾನವು ವಿಹಿತವಾಗಿದ್ದರೂ ಮುಮುಕ್ಷುವಿಗೆ ಧ್ಯಾನಬೇಕೇ ಬೇಕು ಎಂದು ತಿಳಿಸಲು ಪುನಃ ಇಲ್ಲಿ ಧ್ಯಾನಯೋಗವನ್ನು ವಿಧಿಸಿದ್ದಾರೆ. ॥ 23 ॥

## ಕಾಮನಿಗ್ರಹಕ್ಕೆ ಉಪಾಯ

**ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥ 24 ॥**

1. ದುಃಖಸಂಯೋಗೋ ಯಸ್ಯ ವಿಯೋಗಃ

**ಶನೈಃಶನೈರುಪರಮೇದ್ ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥ 25 ॥**

**ಅರ್ಥ**- ಈ ಫಲಕ್ಕಾಗಿ ಈ ಕರ್ಮವನ್ನು ಮಾಡುತ್ತೇನೆ ಎಂಬ ಸಂಕಲ್ಪಪೂರ್ವಕವಾಗಿ ಮಾಡಿದ ಕರ್ಮಗಳಿಂದ ಪಡೆಯಬಹುದಾದ ಎಲ್ಲಾ ಸುಖಭೋಗಗಳನ್ನು ಸಂಪೂರ್ಣವಾಗಿ ತ್ಯಜಿಸಿ, ಎಲ್ಲಾ ಇಂದ್ರಿಯಗಳನ್ನು ಎಲ್ಲಾ ವಿಷಯಪದಾರ್ಥಗಳಿಂದ ಮನಸ್ಸಿನ ಮೂಲಕ ನಿಗ್ರಹಿಸಿ, ಧೈರ್ಯದಿಂದ ಕೂಡಿದ, ಧ್ಯಾನದಿಂದ ಕೂಡಿದ ತನ್ನ ವಶದಲ್ಲಿರುವ ಬುದ್ಧಿಯಿಂದ ಮನಸ್ಸನ್ನು ಮೆಲ್ಲಮೆಲ್ಲನೆ ವಿಷಯಪದಾರ್ಥಗಳಿಂದ ದೂರ ಮಾಡಬೇಕು. ಭಗವಂತನಲ್ಲಿ ಆಸಕ್ತಗೊಳಿಸಬೇಕು. ಮನಸ್ಸನ್ನು ಪರಮಾತ್ಮನಲ್ಲಿಯೇ ಆಸಕ್ತವನ್ನಾಗಿಸಿ ಬುದ್ಧಿಯಿಂದ ಭಗವಂತನನ್ನು ಬಿಟ್ಟು ಬೇರೇನನ್ನೂ ಚಿಂತಿಸಬಾರದು.

**ಕಿಂ ಚ ಸಂಕಲ್ಪೇನ ಏತದರ್ಥಮಿದಂ ಕುರ್ಯಾದಿತಿ ಸಂಕಲ್ಪಪೂರ್ವಕಾನುಷ್ಠಾನೇನ ಪ್ರಭವೋ ಜನ್ಮ ಯೇಷಾಂ ತಾನ್ ಕಾಮಾನ್ ವಿಷಯಭೋಗಾನ್ ಸರ್ವಾನಶೇಷತೋ ನಿಃಶೇಷತಃ ತ್ಯಕ್ತ್ವಾ ಇಂದ್ರಿಯಗ್ರಾಮಂ ಇಂದ್ರಿಯಸಮೂಹಂ ಸಮಂತತಃ ಸರ್ವತಃ ಮನಸೈವ ವಿನಿಯಮ್ಯ । ಇಂದ್ರಿಯನಿಯಮನಂ ನ ಮನಸೋಽನ್ಯೇನೇತಿ ಜ್ಞಾಪನಾಯೈವಕಾರಃ ॥ 24 ॥**

**ಅನುವಾದ**- ಅಲ್ಲದೆ, **ಸಂಕಲ್ಪೇನ**= ಈ ಫಲಕ್ಕಾಗಿ ಈ ಕರ್ಮವನ್ನು ಮಾಡುತ್ತೇನೆ ಎಂಬ ಸಂಕಲ್ಪ ಪೂರ್ವಕವಾಗಿ ಮಾಡಿದ ಕರ್ಮಗಳಿಂದ **ಪ್ರಭವಃ ಯೇಷಾಂ ತಾನ್**,= ಪಡೆಯಬಹುದಾದ **ಸರ್ವಾನ್ ಕಾಮಾನ್**= ಎಲ್ಲಾ ಸುಖಭೋಗಗಳನ್ನು **ಅಶೇಷತಃ**= ಸಂಪೂರ್ಣವಾಗಿ, **ತ್ಯಕ್ತ್ವಾ**= ತ್ಯಜಿಸಿ, **ಇಂದ್ರಿಯಗ್ರಾಮಂ**= ಇಂದ್ರಿಯಸಮೂಹವನ್ನು, **ಸಮಂತತಃ** = ಎಲ್ಲಾ ವಿಷಯ ಪದಾರ್ಥಗಳಿಂದ, ಮನಸ್ಸಿನಿಂದಲೇ ನಿಗ್ರಹಿಸಿ, ಮನಸ್ಸಿನಿಂದ ಹೊರತಾಗಿ ಬೇರೆ ಯಾವುದರಿಂದಲೂ ಇಂದ್ರಿಯಗಳ ನಿಯಮನ ಸಾಧ್ಯವಿಲ್ಲ ಎಂದು ತಿಳಿಸಲು **ಮನಸೈವ** ಎಂಬಲ್ಲಿ ಏವ ಶಬ್ದವನ್ನು ಹೇಳಿದ್ದಾನೆ . ॥ 24 ॥

**ಮನಶ್ಚ ಧೃತಿಗೃಹೀತಯಾ ಧೈರ್ಯೋಪೇತಯಾ ಧಾರಣಯಾ ಗೃಹೀತಯಾ ವಶೀಕೃತಯೇತಿ ವಾ ಬುದ್ಧ್ಯಾ ಶನೈಃ ಶನೈರುಪರಮೇತ್ ವಿಷಯೇಭ್ಯೋ ವ್ಯಾವರ್ತಯೇತ್ । ಭಗವತಿ ರಮೇತೇತಿ ವಾಽರ್ಥಃ । ಕಿಂಚಾತ್ಮಸಂಸ್ಥಂ ಭಗವನ್ನಿಷ್ಠಂ ಮನಃ ಕೃತ್ವಾ । ಬುದ್ಧ್ಯೇತ್ಯನುಷಂಗ ಃ । ಭಗವತೋಽನ್ಯನ್ನ ಕಿಂಚಿದಪಿ ಚಿಂತಯೇತ್ ॥ 25 ॥**

**ಅನುವಾದ-** ಮನಸ್ಸನ್ನೂ , **ಧೃತಿಗೃಹೀತಯಾ=** ಧೈರ್ಯದಿಂದ ಕೂಡಿದ, ಅಥವಾ ಧ್ಯಾನದಿಂದ ತನ್ನ ವಶದಲ್ಲಿರುವ, ಬುದ್ಧಿಯಿಂದ ಮೆಲ್ಲಮೆಲ್ಲನೆ, **ಉಪರಮೇತ್=** ವಿಷಯ ಪದಾರ್ಥಗಳಿಂದ ದೂರಮಾಡಬೇಕು. ಅಥವಾ ಭಗವಂತನಲ್ಲಿಯೇ ಆಸಕ್ತವನ್ನಾಗಿಸಬೇಕು ಎಂದರ್ಥ. ಅಲ್ಲದೆ ಮನಸ್ಸನ್ನು ಬುದ್ಧಿಯಿಂದ, **ಆತ್ಮಸಂಸ್ಥಂ=** ಭಗವಂತನಲ್ಲೇ ಆಸಕ್ತವನ್ನಾಗಿಸಿ, ಭಗವಂತನನ್ನು ಬಿಟ್ಟು ಬೇರೆ ಏನನ್ನೂ ಚಿಂತಿಸಬಾರದು. ॥ 25 ॥

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥ 26 ॥**

**ಅರ್ಥ** – ಸ್ವತಃ ಚಂಚಲವಾದ ಮನಸ್ಸು ಯಾವ ಯಾವ ವಿಷಯಗಳಲ್ಲಿ ಸ್ಥಿರವಾಗಿ ನಿಲ್ಲದೆ ಸಂಚರಿಸುತ್ತದೋ, ಆಯಾ ವಿಷಯಗಳಿಂದ ಮನಸ್ಸನ್ನು ಬಲಾತ್ಕಾರವಾಗಿ ನಿಗ್ರಹಿಸಿ, ಭಗವಂತನಲ್ಲಿಯೇ ನೆಲೆಗೊಳಿಸಬೇಕು.

**ಧ್ಯಾನೇನ ಮನೋಽನವಸ್ಥಿತಂ ಚೇತ್ಪ್ರತ್ಯಾಹಾರೇಣ ವಶೀಕುರ್ಯಾದಿತ್ಯಾಹ- ಯತೋ ಯತ ಇತಿ ॥ 'ಆದ್ಯಾದಿಭ್ಯ ಉಪಸಂಖ್ಯಾನಮಿತಿ' ಸಪ್ತಮ್ಯರ್ಥೇ ತಸಿಃ । ಯತ್ರ ಯತ್ರ ವಿಷಯೇ ಸ್ವತಶ್ಚಂಚಲಂ ಮನೋಽಸ್ಥಿರಂ ಸತ್ ನಿಶ್ಚರತಿ ಪ್ರವರ್ತತೇ ತತಸ್ತತ ಏತನ್ಮನೋ ನಿಯಮ್ಯ ಪ್ರತ್ಯಾಹೃತ್ಯ ತದಾತ್ಮನ್ಯೇವ ಭಗವತ್ಯೇವ ವಶಂ ತನ್ನಿಷ್ಠಮೇವ ನಯೇತ್ಕುರ್ಯಾದಿತ್ಯರ್ಥಃ ॥ 26 ॥**

**ಅನುವಾದ-** ಧ್ಯಾನದಿಂದ ಮನಸ್ಸು ಸ್ಥಿರವಾಗದಿದ್ದರೆ ಪ್ರತ್ಯಾಹಾರದಿಂದ ಸೆಳೆದು ತನ್ನ ವಶದಲ್ಲಿ ಇಟ್ಟುಕೊಳ್ಳಬೇಕು ಎಂದು '**ಯತೋ ಯತೋ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. '**ಆದ್ಯಾದಿಭ್ಯ ಉಪಸಂಖ್ಯಾನಮ್**' ಎಂಬ ಪಾಣಿನಿಸೂತ್ರದಂತೆ ಇಲ್ಲಿ ಯತ್ ಶಬ್ದದ ಮೇಲೆ ಸಪ್ತಮೀ ವಿಭಕ್ತ್ಯರ್ಥದಲ್ಲಿ **ತಸಿಲ್** ಪ್ರತ್ಯಯ ಬಂದಿದೆ. **ಯತಃ ಯತಃ=** ಯಾವ ಯಾವ ವಿಷಯಪದಾರ್ಥಗಳಲ್ಲಿ, ಸ್ವತಃ ಚಂಚಲವಾದ ಮನಸ್ಸು, **ಅಸ್ಥಿರಂ=** ಸ್ಥಿರವಾಗಿ ನಿಲ್ಲದೆ ಸಂಚರಿಸುತ್ತದೋ, **ತತಸ್ತತಃ=** ಆ ಆ ವಿಷಯಪದಾರ್ಥಗಳಿಂದ, **ಏತತ್=** ಮನಸ್ಸನ್ನು , **ನಿಯಮ್ಯ=** ಪ್ರತ್ಯಾಹಾರದಿಂದ ನಿಗ್ರಹಸಿ, **ತತ್=** ಆ ಮನಸ್ಸನ್ನು, **ಆತ್ಮನ್ಯೇವ=** ಭಗವಂತ ನಲ್ಲಿಯೇ, **ವಶಂ ನಯೇತ್** = ಆಸಕ್ತವನ್ನಾಗಿಸಬೇಕು (ನೆಲೆಗೊಳಿಸಬೇಕು).

**ವಿವರಣೆ- ಯತಃ=** '**ಯತ್**' ಶಬ್ದದ ಮೇಲೆ **ತಸಿಲ್** ಪ್ರತ್ಯಯ ಬಂದು **ಯತಃ** ಎಂದು ರೂಪವಾಗುತ್ತದೆ. ಅಂದರೆ ಪಂಚಮೀ ವಿಭಕ್ತ್ಯರ್ಥದಲ್ಲಿ 'ತಸಿಲ್' ಪ್ರತ್ಯಯ ಬಂದಿದೆ ಎಂದಾದರೆ ಯಾವ ವಿಷಯಪದಾರ್ಥಗಳಿಂದ ಎಂದು ಅರ್ಥವಾಗುತ್ತಿತ್ತು . ಈ ಅರ್ಥ ಪ್ರಕೃತಕ್ಕೆ

ಸಂಗತವಾಗುವುದಿಲ್ಲ. ಆದ್ದರಿಂದ ಇಲ್ಲಿ ಪಂಚಮೀವಿಭಕ್ತ್ಯರ್ಥದಲ್ಲಿ '**ತಸಿಲ್**' ಪ್ರತಯ್ಯ ಬಂದಿರುವುದಲ್ಲ. '**ಯತ್**' ಶಬ್ದದ ಮೇಲೆ ಸಪ್ತಮೀವಿಭಕ್ತ್ಯರ್ಥದಲ್ಲಿ '**ತಸಿಲ್**' ಪ್ರತ್ಯಯ ಬಂದಿದೆ. **ಯತಃ** ಎಂದರೆ ಯಾವ ವಿಷಯಪದಾರ್ಥಗಳಲ್ಲಿ ಎಂದು ಅರ್ಥ. ಇದು ಪ್ರಕೃತಕ್ಕೆ ಸಂಗತ. ಸಪ್ತಮೀ ವಿಭಕ್ತ್ಯ ರ್ಥದಲ್ಲಿ '**ತಸಿಲ್**' ಪ್ರತ್ಯಯವು '**ಆದ್ಯಾದಿಭ್ಯಃ ಉಪಸಂಖ್ಯಾನಂ**' ಎಂಬ ಸೂತ್ರದಿಂದ ಬರುತ್ತದೆ . ಆದುದರಿಂದ ಈ ಅರ್ಥ ಸಾಧು ಎಂದು ತಿಳಿಯಬೇಕು. ।। 26 ।।

**ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ।। 27 ।।**

**ಅರ್ಥ**- ಸ್ವತಃ ವಿಷಯ ಪದಾರ್ಥಗಳಿಂದ ನಿವೃತ್ತವಾದ ಮನಸುಳ್ಳ, ರಜೋಗುಣಗಳ ಪ್ರಭಾವವನ್ನು ಕಳೆದು ಕೊಂಡ, ಆದ್ದರಿಂದಲೇ ಕಾಮಕ್ರೋಧಾದಿ ದೋಷರಹಿತನಾದ, ಭಗವಂತನಲ್ಲಿ ಸ್ಥಿರವಾದ ಮನಸ್ಸುಳ್ಳ ಧ್ಯಾನಯೋಗಿಯನ್ನು, ಉತ್ತಮವಾದ ಸುಖವು ಬಂದು ಸೇರುತ್ತದೆ. ಇದು ಶ್ರುತಿ ಪ್ರಸಿದ್ಧ.

**ಏವಂ ಸಾಂಗಯೋಗಮಭಿಧಾಯ ತದನುಷ್ಠಾತುಃ ಫಲಂ ಪ್ರಪಂಚಯತಿ ಪ್ರಶಾಂತೇತಿ ।। ಪ್ರಶಾಂತಮನಸಂ ಸ್ವತೋ ವಿಷಯೇಷ್ವ ಪ್ರವೃತ್ತಮನಸಂ ಶಾಂತ-ರಜಸಂ ವಿಗತರಜೋಗುಣಮತ ಏವಾಕಲ್ಮಷಂ ಕಾಮಕ್ರೋಧಾದಿದೋಷ-ಹೀನಂ । ರಜೋಜನ್ಯತ್ವಾತ್ತೇಷಾಂ । ಬ್ರಹ್ಮಭೂತಂ 'ತದ್‌ಬುದ್ಧಯ' ಇತ್ಯುಕ್ತದಿಶಾ ಬ್ರಹ್ಮಣಿ ಸ್ಥಿತಿಮಂತಮೇನಂ ಯೋಗಿನಂ ಸಮಾಧಿಯೋಗವಂತಮುತ್ತಮಂ ಸುಖಂ ಕರ್ತೃ ಉಪೈತಿ ಪ್ರಾಪ್ನೋತಿ । ಹಿ ಪ್ರಸಿದ್ಧಂ ಶ್ರುತ್ಯಾದಾವಿತ್ಯರ್ಥಃ ।। 27 ।।**

**ಅನುವಾದ** - ಹೀಗೆ ಅಂಗಸಹಿತವಾದ ಧ್ಯಾನಯೋಗವನ್ನು ಹೇಳಿ, ಧ್ಯಾನಯೋಗವನ್ನು ಅನುಷ್ಠಾನ ಮಾಡುವ ಜೀವನಿಗೆ ಬರುವ ಫಲವನ್ನು '**ಪ್ರಶಾಂತಮನಸಂ**' ಎಂಬ ಶ್ಲೋಕದಿಂದ ವಿವರಿಸುತ್ತಿದ್ದಾನೆ. **ಪ್ರಶಾಂತಮನಸಂ** = ಸ್ವತಃ ವಿಷಯಪದಾರ್ಥಗಳಿಂದ ನಿವೃತ್ತವಾದ ಮನಸ್ಸುಳ್ಳ, **ಶಾಂತರಜಸಂ** = ರಜೋಗುಣವನ್ನು ಕಳೆದುಕೊಂಡ, ಆದ್ದರಿಂದಲೇ, **ಅಕಲ್ಮಷಂ** = ರಜೋಗುಣದಿಂದ ಹುಟ್ಟುವ ಕಾಮಕ್ರೋಧಾದಿ ದೋಷರಹಿತನಾದ, **ಬ್ರಹ್ಮಭೂತಂ**= '**ತದ್‌ಬುದ್ಧಯಃ**' ಇತ್ಯಾದಿಯಾಗಿ ಹೇಳಿದಂತೆ ಭಗವಂತನಲ್ಲಿ ಸ್ಥಿರವಾದ ಮನಸ್ಸುಳ್ಳ , **ಏನಂ ಯೋಗಿನಂ**= ಧ್ಯಾನಯೋಗಿಯನ್ನು , **ಉತ್ತಮಂ ಸುಖಂ** = ಉತ್ತಮವಾದ ಸುಖವು, **ಕರ್ತೃ**= ತಾನೇ, **ಉಪೈತಿ**= ಬಂದುಸೇರುತ್ತದೆ. **ಹಿ** = ಇದು ಶ್ರುತಿಗಳಲ್ಲಿ ಪ್ರಸಿದ್ಧವಾಗಿದೆ. ।। 27 ।।

**ಏವಂ ಯುಂಜನ್ ಸದಾಽಽತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥ 28 ॥**

**ಅರ್ಥ-** ರಾಗದ್ವೇಷಾದಿ ದೋಷರಹಿತನಾದ ಧ್ಯಾನಯೋಗಿಯು, ಹಿಂದೆ ಹೇಳಿದಂತೆ ಭಗವಂತನನ್ನು ನಿರಂತರ ಧ್ಯಾನ ಮಾಡುತ್ತಾ , ಅನಾಯಾಸವಾಗಿ, ಭಗವಂತನ ಸಂಗದಿಂದ ಅಭಿವ್ಯಕ್ತವಾದ ಮಹದಾನಂದವನ್ನು ಹೊಂದುತ್ತಾನೆ.

**ಸುಖಮುಪೈತೀತ್ಯುಕ್ತಸುಖಂ ಕಿಮಾಯಾಸೇನ ಪ್ರಾಪ್ನೋತಿ ? ಕೀದೃಶಂ ಚ ತದಿತ್ಯತೋ ವ್ಯನಕ್ತಿ ಏವಮಿತಿ ॥ ವಿಗತಕಲ್ಮಷೋ ವಿಗತರಾಗಾದಿದೋಷೋ ಯೋಗೀ ಏವಮುಕ್ತದಿಶಾಽಽತ್ಮಾನಂ ಭಗವಂತಂ ಯುಂಜನ್ ಧ್ಯಾಯನ್ ಸುಖೇನಾಕ್ಲೇಶೇನ ಬ್ರಹ್ಮಸಂಸ್ಪರ್ಶಂ ಭಗವತ್ಸಂಸರ್ಗಾಭಿವ್ಯಕ್ತಂ ಅತ್ಯಂತಮತಿ-ಶಯಿತಂ ಸುಖಮಶ್ನುತೇ ಪ್ರಾಪ್ನೋತಿ ॥ 28 ॥**

**ಅನುವಾದ-** ಉತ್ತಮ ಸುಖವನ್ನು ಹೊಂದುತ್ತಾನೆ ಎಂದು ಹೇಳಿದ ಆ ಉತ್ತಮ ಸುಖವನ್ನು ಬಹಳ ಪ್ರಯಾಸಪಟ್ಟು ಹೊಂದುತ್ತಾನೋ ? ಮತ್ತು ಆ ಸುಖ ಎಂಥಾದ್ದು ? ಎಂಬುದನ್ನು '**ಏವಂ ಯುಂಜನ್**' ಎಂಬ ಶ್ಲೋಕದಿಂದ ಸ್ಪಷ್ಟಪಡಿಸುತ್ತಿದ್ದಾನೆ. **ವಿಗತಕಲ್ಮಷಃ**= ರಾಗ-ದ್ವೇಷಾದಿ ದೋಷರಹಿತನಾದ, **ಯೋಗೀ**= ಧ್ಯಾನಯೋಗಿಯು, **ಏವಂ**= ಹಿಂದೆ ಹೇಳಿದಂತೆ, **ಆತ್ಮಾನಂ**= ಭಗವಂತನನ್ನು , **ಯುಂಜನ್**= ಧ್ಯಾನಿಸುತ್ತಾ, **ಸುಖೇನ**= ಅನಾಯಾಸವಾಗಿ, **ಬ್ರಹ್ಮಸಂಸ್ಪರ್ಶಂ**= ಭಗವಂತನ ಸಂಗದಿಂದ ಅಭಿವ್ಯಕ್ತವಾದ, **ಅತ್ಯಂತಂ**= ಅತಿಶಯಿತವಾದ, **ಸುಖಂ**= ಆನಂದವನ್ನು, **ಅಶ್ನುತೇ**= ಹೊಂದುತ್ತಾನೆ . ॥ 28 ॥

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ 29 ॥**

**ಅರ್ಥ-** ಧ್ಯಾನ ಯುಕ್ತವಾದ ಮನಸ್ಸುಳ್ಳ, ಬ್ರಹ್ಮಾದಿ ತೃಣಪರ್ಯಂತ ಜೀವರಲ್ಲಿ ಇರುವ ಭಗವಂತನ ರೂಪಗಳು ಐಶ್ವರ್ಯಾದಿಗಳಿಂದ ಸಮಾನ ಎಂಬುದಾಗಿ ತಿಳಿದ ಧ್ಯಾನಯೋಗಿಯು, ಭಗವಂತನನ್ನು ಬ್ರಹ್ಮಾದಿ ಸಕಲಜೀವ ಅಂತರ್ಯಾಮಿ ಎಂದೂ, ಭಗವಂತನಲ್ಲಿ ಬ್ರಹ್ಮಾದಿ ಸಕಲ ಜೀವರು ಆಶ್ರಯವನ್ನು ಪಡೆದಿದ್ದಾರೆ ಎಂದೂ ನೋಡುತ್ತಾನೆ.

**ಏವಂ ಯುಂಜನ್ನಿತಿ ಧ್ಯಾನಪ್ರಕರಣಸ್ಯ ಫಲಕಥನೇನೋಪಸಂಹೃತ್ಯೇದಾನೀಂ ಧ್ಯೇಯಮಾಹ- ಸರ್ವೇತಿ ॥ 'ಭೋಕ್ತಾರಮಿ'ತಿ(5-29) ಪಂಚಮಾಂತೇ 'ಮಚ್ಚಿತ್ತೋ ಯುಕ್ತ ಆಸೀತ' ಇತ್ಯತ್ರೈವಾಧ್ಯಾಯೇ (6-14) ಧ್ಯೇಯೋಕ್ತಾ-**

**ವಪೀಹೋತ್ತಮಾಧಿಕಾರಿಣಾಂ ಧ್ಯೇಯಸ್ಯೋಕ್ತಿರಿತಿ ಜ್ಞೇಯಮ್ । ಆತ್ಮಾನಂ ಪರಮಾತ್ಮಾನಂ ಬ್ರಹ್ಮಾದಿಸರ್ವಪ್ರಾಣಿಗತಂ ಆತ್ಮನಿ ಪರಮಾತ್ಮನಿ ಸರ್ವತ್ರ ಬ್ರಹ್ಮಾದಿತೃಣಾಂತೇಷು ಭಗವಂತಂ ಐಶ್ವರ್ಯಾದಿನಾ ಸಾಮ್ಯೇನ ಪಶ್ಯನ್ ಸಮದರ್ಶನೋ ಯೋಗಯುಕ್ತಾತ್ಮಾ ಸಮಾಧಿಯುಕ್ತಮನಸ್ಕಃ ಈಕ್ಷತೇ ಪಶ್ಯತೀತ್ಯರ್ಥಃ ॥ 29 ॥**

**ಅನುವಾದ** – '**ಏವಂ ಯುಂಜನ್**' ಎಂಬ ಶ್ಲೋಕದಿಂದ ಧ್ಯಾನಕ್ಕೆ ಸಂಬಂಧಿಸಿದ ಫಲವನ್ನು ಹೇಳಿ ಉಪಸಂಹರಿಸಿ, ಈಗ ಧ್ಯೇಯವನ್ನು '**ಸರ್ವಭೂತಸ್ಥಂ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. '**ಭೋಕ್ತಾರಂ**' (5–29) ಎಂಬ ಐದನೇ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ಮತ್ತು '**ಮಚ್ಚಿತ್ತೋ ಯುಕ್ತ ಆಸೀತ** ' (6–14) ಎಂಬ ಈ ಅಧ್ಯಾಯದ ಶ್ಲೋಕದಲ್ಲಿಯೂ ಧ್ಯೇಯವಾದ ಭಗವಂತನ ಸ್ವರೂಪವನ್ನು ತಿಳಿಸಿದ್ದರೂ, ಈ ಶ್ಲೋಕದಲ್ಲಿ ಉತ್ತಮ ಅಧಿಕಾರಿಗಳಿಂದ ಧ್ಯೇಯವಾದ ಭಗವಂತನ ಸ್ವರೂಪವನ್ನು ತಿಳಿಸುತ್ತಿದ್ದಾನೆ ಎಂದು ಅರ್ಥ ಮಾಡಿಕೊಳ್ಳಬೇಕು . **ಆತ್ಮಾನಂ**= ಭಗವಂತನನ್ನು (**ಸರ್ವಭೂತಸ್ಥಂ**= ) ಬ್ರಹ್ಮಾದಿ ಸಕಲ ಜೀವರ ಅಂತರ್ಯಾಮಿ ಎಂದು , **ಆತ್ಮನಿ**= ಭಗವಂತನಲ್ಲಿ, ಎಲ್ಲಾ ಜೀವರು ಆಶ್ರಯವನ್ನು ಪಡೆದಿದ್ದಾರೆ ಎಂದು, **ಸರ್ವತ್ರ**= ಬ್ರಹ್ಮಾದಿ ತೃಣಪರ್ಯಂತ ಜೀವರಲ್ಲಿ, **ಸಮದರ್ಶನಃ**= ಭಗವಂತನ ರೂಪಗಳು ಐಶ್ವರ್ಯಾದಿಗಳಿಂದ ಸಮಾನ ಎಂದು, **ಯೋಗಯುಕ್ತಾತ್ಮಾ**= ಧ್ಯಾನಯೋಗದಿಂದ ಕೂಡಿದ ಮನಸ್ಸುಳ್ಳ ಯೋಗಿಯು, **ಈಕ್ಷತೇ**= ನೋಡುತ್ತಾನೆ. ॥ 29 ॥

## ಧ್ಯಾನವಿಶೇಷದ ಫಲ

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ 30 ॥**

**ಅರ್ಥ**– ಯಾವ ಧ್ಯಾನಯೋಗಿಯು ಬ್ರಹ್ಮಾದಿ ಸಕಲ ಜೀವ ಅಂತರ್ಯಾಮಿ ಎಂದು ನನ್ನನ್ನು ಕಾಣುತ್ತಾನೋ, ಬ್ರಹ್ಮಾದಿ ಸಕಲ ಜಗತ್ತು ನನ್ನ ಅಧೀನ ಎಂದೂ ಕಾಣುತ್ತಾನೋ ಅವನಿಗೆ ನಾನು ಇಲ್ಲವೆಂದಾಗುವುದಿಲ್ಲ. ಅವನ ಯೋಗಕ್ಷೇಮವನ್ನು ನಾನೇ ನೋಡಿಕೊಳ್ಳುತ್ತೇನೆ. ಅವನು ನನಗೆ ಇಲ್ಲವೆಂದಾಗುವುದಿಲ್ಲ. ನನ್ನ ಭಕ್ತನೇ ಆಗಿರುತ್ತಾನೆ .

**ಸರ್ವಭೂತಸ್ಥಾತ್ಮಧ್ಯಾನವಿಶೇಷಸ್ಯ ಫಲಮಾಹ– ಯೋ ಮಾಮಿತಿ ॥ ಸರ್ವತ್ರ ಬ್ರಹ್ಮಾದಿತೃಣಾಂತೇಷು ಸ್ಥಿತಂ ಮಾಂ ಯಃ ಪಶ್ಯತಿ, ಸರ್ವಂ ಚ ಬ್ರಹ್ಮಾದಿಜಗತ್ ಮಯಿ ಮದಧೀನಂ ಪಶ್ಯತಿ । ತಸ್ಯಾಹಂ ನ ಪ್ರಣಶ್ಯಾಮಿ ಸರ್ವದಾ**

**ಯೋಗಕ್ಷೇಮವಹಃ ಸ್ಯಾಮಿತ್ಯರ್ಥಃ । ಸ ಚ ಮೇ ನ ಪ್ರಣಶ್ಯತಿ ಸದಾ ಮದ್ಭಕ್ತೋ ಭವತೀತ್ಯರ್ಥಃ ॥ 30 ॥**

**ಅನುವಾದ-** ಎಲ್ಲಾ ಜೀವರ ಅಂತರ್ಯಾಮಿಯಾದ ಭಗವಂತನ ವಿಶೇಷ ಧ್ಯಾನಕ್ಕೆ ಫಲವನ್ನು **'ಯೋ ಮಾಂ'** ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. **ಸರ್ವತ್ರ** = ಬ್ರಹ್ಮಾದಿ ಸಕಲ ಜೀವರಲ್ಲಿ ಅಂತರ್ಯಾಮಿ ಎಂದು, **ಮಾಂ**= ಭಗವಂತನಾದ ನನ್ನನ್ನು ಯಾವ ಧ್ಯಾನ-ಯೋಗಿಯು ನೋಡುತ್ತಾನೋ, **ಸರ್ವಂ**= ಎಲ್ಲಾ ಬ್ರಹ್ಮಾದಿ ಜಗತ್ತನ್ನೂ, **ಮಯಿ**= ನನ್ನ ಅಧೀನ ಎಂದು ಕಾಣುತ್ತಾನೋ, **ತಸ್ಯಾಹಂ ನ ಪ್ರಣಶ್ಯಾಮಿ**= ಯಾವಾಗಲೂ ನಾನೇ ಅವನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತೇನೆ. **ಸ ಚ ಮೇ ನ ಪ್ರಣಶ್ಯತಿ**= ಅವನು ಯಾವಾಗಲೂ ನನ್ನ ಭಕ್ತನೇ ಆಗಿರುತ್ತಾನೆ. ॥ 30 ॥

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥ 31 ॥**

**ಅರ್ಥ-** ಎಲ್ಲಾ ಕಡೆಯಲ್ಲಿಯೂ ಭಗವಂತನೊಬ್ಬನೇ ಅಂತರ್ಯಾಮಿಯಾಗಿ ಇದ್ದಾನೆ ಎಂದು ತಿಳಿದ ಯಾವ ಧ್ಯಾನಯೋಗಿಯು ಎಲ್ಲಾ ಜೀವರ ಒಳಗೆ ಇರುವ ನನ್ನನ್ನು ಭಜಿಸು-ತ್ತಾನೋ ಆ ಧ್ಯಾನಯೋಗಿಯು ನ್ಯಾಯಮಾರ್ಗದಲ್ಲಿ ಅಥವಾ ಅನ್ಯಾಯಮಾರ್ಗದಲ್ಲಿ ನಡೆಯುತ್ತಿದ್ದರೂ ನನ್ನಲ್ಲಿಯೇ ಇರುತ್ತಾನೆ. ಅಂದರೆ ಅವನಿಗೆ ಮೋಕ್ಷ ನಿಶ್ಚಿತ. ಅನ್ಯಾಯ ಮಾರ್ಗದಲ್ಲಿ ನಡೆದರೆ ಮೋಕ್ಷದಲ್ಲಿ ಆನಂದ ಹ್ರಾಸ ಮಾತ್ರ ಉಂಟಾಗುತ್ತದೆ.

**'ಯೋ ಮಾಮಿ'ತಿ ಶ್ಲೋಕೋಕ್ತಮೇವ ಸ್ಪಷ್ಟಯತಿ- ಸರ್ವೇತಿ ॥ ಯ ಏಕತ್ವಮಾಸ್ಥಿತಃ ಸರ್ವತ್ರ ಪರಮೇಶ್ವರ ಏವೇತ್ಯಾಸ್ಥಿತೋ ಜ್ಞಾನೀ ಸರ್ವಭೂತಸ್ಥಂ ಮಾಂ ಭಜತಿ ಸೇವತೇ, ಸ ಯೋಗೀ ಸರ್ವಪ್ರಕಾರೇಣ ನ್ಯಾಯೇನಾನ್ಯಾಯೇನ ವಾ ವರ್ತಮಾನೋಽಪಿ ಮಯಿ ವರ್ತತೇ । ಅನ್ಯಾಯಪ್ರವೃತ್ತಾವಪಿ ಜ್ಞಾನಿನೋ ಮೋಕ್ಷೋ ನಿಯತ ಏವೇತಿ ಭಾವಃ । ತದಾಹ ಸೂತ್ರೇ 'ತ್ರೂ ಕಾಮಕಾರೇಣ ಚೈಕ ತ್ರೂ' (3-4-15) ಇತಿ । ಆನಂದಹ್ರಾಸಸ್ತ್ವಸ್ಯೈವೇತಿ ಜ್ಞೇಯಮ್ ॥ 31 ॥**

**ಅನುವಾದ -** **'ಯೋ ಮಾಂ ಪಶ್ಯತಿ'** ಎಂಬ ಶ್ಲೋಕದಲ್ಲಿ ಹೇಳಿದ ವಿಷಯವನ್ನೇ **'ಸರ್ವಭೂತಸ್ಥಿತಂ'** ಎಂಬ ಶ್ಲೋಕದಿಂದ ಸ್ಪಷ್ಟಪಡಿಸುತ್ತಿದ್ದಾನೆ. ಯಾವ ಧ್ಯಾನಯೋಗಿಯು, **ಏಕತ್ವಮಾಸ್ಥಿತಃ** = ಎಲ್ಲಾ ಕಡೆಯಲ್ಲಿಯೂ ಪರಮಾತ್ಮನೇ ಅಂತರ್ಯಾಮಿಯಾಗಿ ಇದ್ದಾನೆ ಎಂದು ತಿಳಿದು, **ಸರ್ವಭೂತಸ್ಥಂ ಮಾಂ** = ಎಲ್ಲಾ ಜೀವರ ಒಳಗೆ ಇರುವ ನನ್ನನ್ನು, **ಭಜತಿ** = ಸೇವಿಸುತ್ತಾನೋ, ಆ ಯೋಗಿಯು, **ಸರ್ವಪ್ರಕಾರೇಣ** = ನ್ಯಾಯ ಮಾರ್ಗ ಅಥವಾ ಅನ್ಯಾಯ

ಮಾರ್ಗದಲ್ಲಿ, **ವರ್ತಮಾನೋಽಪಿ**= ನಡೆಯುತ್ತಿದ್ದರೂ ನನ್ನಲ್ಲಿಯೇ ಇರುತ್ತಾನೆ. ಅನ್ಯಾಯವನ್ನು ಮಾಡಿದರೂ ಜ್ಞಾನಿಗೆ ಮೋಕ್ಷ ನಿಶ್ಚಿತ ಎಂದು ತಾತ್ಪರ್ಯ. ಇದನ್ನೇ **'ಕಾಮಕಾರೇಣ ಚೈಕೇ'** ಎಂಬ ಬ್ರಹ್ಮಸೂತ್ರದಲ್ಲಿ ವೇದವ್ಯಾಸರು ತಿಳಿಸಿದ್ದಾರೆ. ಅನ್ಯಾಯವನ್ನು ಮಾಡಿದರೆ ಅವನಿಗೆ ಮೋಕ್ಷದಲ್ಲಿ ಆನಂದಹ್ರಾಸಮಾತ್ರ ಇದ್ದೇ ಇದೆ ಎಂದು ತಿಳಿಯಬೇಕು. ॥ 31 ॥

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥ 32 ॥**

**ಅರ್ಥ**- ಅರ್ಜುನ ! ತನಗೆ ಹೇಗೆ ಸುಖವು ಪ್ರಿಯವೋ, ದುಃಖವು ಪ್ರಿಯವಲ್ಲವೋ ಹಾಗೆ ಎಲ್ಲಾ ಭಗವದ್ಭಕ್ತರಿಗೂ ಸುಖವೇ ಪ್ರಿಯ ಎಂದು ತನ್ನ ದೃಷ್ಟಾಂತದಿಂದ ಎಲ್ಲಾ ಭಗವದ್ಭಕ್ತರಿಗೂ ಸುಖವಾಗಲಿ ಎಂದು ಯಾರು ಬಯಸುತ್ತಾನೋ ಅಂತಹ ಧ್ಯಾನಯೋಗಿಯೇ ಉತ್ತಮನು ಎಂದು ನನ್ನ ಅಭಿಪ್ರಾಯ.

**ಸಮದರ್ಶನ ಇತ್ಯುಕ್ತೇ ಗೋಗವಯಾದಿವದ್ ಭವತಿ ಕಿಂ ಸಾಮ್ಯದರ್ಶನ-ಮಿತ್ಯಾಕಾಂಕ್ಷಾಯಾಮೇಕತ್ವಮಾಸ್ಥಿತ ಇತಿ ಸಾಮ್ಯದರ್ಶನಂ ಸ್ವಯಮೇವ ವ್ಯಾಖ್ಯಾಯ ಇದಾನೀಂ ಭಗವದನುವರ್ತಿವಿಷಯತಯಾ ಸಾಮ್ಯದರ್ಶನಂ ಸ್ವಯಮೇವ ವ್ಯಾಚಷ್ಟೇ- ಆತ್ಮೇತಿ ॥ ಯಥಾ ಸುಖಂ ಸ್ವಸ್ಯ ಪ್ರಿಯಂ ದುಃಖಂ ಚಾಪ್ರಿಯಂ ತಥಾಽನ್ಯೇಷಾಮಪಿ ಭಗವದ್ಭಕ್ತಾನಾಮಿತ್ಯೇವಮಾತ್ಮೌಪಮ್ಯೇನ ಸ್ವಸಾದೃಶ್ಯೇನ ಸರ್ವತ್ರ ಭಗವದನುವರ್ತಿಷು ಸಮಂ ಯಃ ಪಶ್ಯತಿ, ಸುಖಮೇವ ಸರ್ವಭಕ್ತೇಷು ಯೋ ವಾಂಛತಿ ಸ್ವಾತ್ಮನ ಇವೇತಿ ಯಾವತ್, ಸ ಯೋಗೀ ಪರಮೋ ಮತ ಇತಿ । ವಿಷ್ಣ್ವನುವರ್ತಿಷು ಸ್ವಾತ್ಮನೀವ ಸ್ನೇಹಂ ಕುರ್ವನ್ ಶ್ರೇಷ್ಠೋ ಮತ ಇತಿ ಫಲಿತಾರ್ಥಃ ॥ 32 ॥**

**ಅನುವಾದ** - **'ಸಮದರ್ಶನಃ'** ಎಂದರೆ ಗೋ-ಗವಯಗಳಿಗೆ ಸಾಮ್ಯವನ್ನು ತಿಳಿದಂತೆ ಜೀವರಿಗೆ ಸಾಮ್ಯವನ್ನು ತಿಳಿಯುವುದೇ ? ಎಂದು ಆಕ್ಷೇಪ ಬಂದರೆ **'ಏಕತ್ವಮಾಸ್ಥಿತಃ'** ಎಲ್ಲರಲ್ಲಿಯೂ ಅಂತರ್ಯಾಮಿಯಾದ ಭಗವಂತನನ್ನು ತಿಳಿಯುವುದು ಎಂದು ಶ್ರೀಕೃಷ್ಣ ತಾನೇ ವ್ಯಾಖ್ಯಾನ ಮಾಡಿದ್ದಾನೆ. ಈಗ ಭಗವದ್ಭಕ್ತರಲ್ಲಿ ಸಾಮ್ಯದರ್ಶನ ಎಂದರೆ ಏನು ಎಂಬುದನ್ನು **'ಆತ್ಮೌಪಮ್ಯೇನ'** ಎಂಬ ಶ್ಲೋಕದಿಂದ ತಾನೇ ತಿಳಿಸುತ್ತಿದ್ದಾನೆ. ಹೇಗೆ ಸುಖವು ತನಗೆ ಪ್ರಿಯವೋ, ದುಃಖವು ಅಪ್ರಿಯವೋ ಹಾಗೆ ಬೇರೆ ಭಗವದ್ಭಕ್ತರಿಗೂ ಸುಖವೇ ಪ್ರಿಯ ಎಂದು, **ಆತ್ಮೌಪ-ಮ್ಯೇನ**= ತನ್ನ ದೃಷ್ಟಾಂತದಿಂದ, **ಸರ್ವತ್ರ** = ಎಲ್ಲಾ ಭಗವದ್ಭಕ್ತರಲ್ಲಿ ಸಾಮ್ಯವನ್ನು ಯಾವ

ಧ್ಯಾನಯೋಗಿಯು ಕಾಣುತ್ತಾನೋ ಅಂದರೆ ತನಗೆ ಹೇಗೋ ಹಾಗೆ ಎಲ್ಲಾ ಭಕ್ತರಿಗೂ ಸುಖವೇ ಆಗಲಿ ಎಂದು ಬಯಸುತ್ತಾನೋ ಆ ಧ್ಯಾನಯೋಗಿಯು , **ಪರಮೋ ಮತಃ**= ಉತ್ತಮನು. ವಿಷ್ಣುಭಕ್ತರಲ್ಲಿ, ತನ್ನಲ್ಲಿ ಮಾಡುವ ಸ್ನೇಹವನ್ನು ಮಾಡುವವನು ಶ್ರೇಷ್ಠ ಎಂದು ತಾತ್ಪರ್ಯ. (ತನಗೆ ತಾನು ಪ್ರಿಯ ಹಾಗೆ ವಿಷ್ಣು ಭಕ್ತರೂ ನನಗೆ ನನ್ನಷ್ಟೇ ಪ್ರಿಯ ಎಂದು ಭಾವಿಸುವವನು ಉತ್ತಮ ಯೋಗಿ) ॥ 32 ॥

## ಧ್ಯಾನಯೋಗದಲ್ಲಿ ಕ್ಲೇಶ

**ಅರ್ಜುನ ಉವಾಚ -**

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥ 33 ॥**

**ಅರ್ಥ** - ಕೃಷ್ಣ! ಭಗವಂತನಿಗೆ ಎಲ್ಲರ ಅಂತರ್ಯಾಮಿ ಎಂಬ ಸಾಮ್ಯವನ್ನು , ಭಗವದ್ಭಕ್ತರಲ್ಲಿ ತನ್ನಂತೆಯೇ ಸುಖದ ಸಾಮ್ಯವನ್ನೂ ನೋಡುವ ಮನಸ್ಸಿನ ಏಕಾಗ್ರತಾರೂಪವಾದ ಯಾವ ಧ್ಯಾನಯೋಗವನ್ನು ಹೇಳಿದೆಯೋ, ಮನಸ್ಸು ಚಂಚಲವಾದ್ದರಿಂದ ಆ ಯೋಗವು ಸ್ಥಿರವಾಗಿ ನಿಲ್ಲುತ್ತದೆ ಎಂದು ನಾನು ಭಾವಿಸುವುದಿಲ್ಲ.

**ಭಗವದುಕ್ತಯೋಗಸ್ಯಾನನುಷ್ಠಾನಲಕ್ಷಣಮಪ್ರಾಮಾಣ್ಯಮಾಶಂಕತೇ- ಯೋಽಯಮಿತಿ ॥ ಹೇ ಮಧುಸೂದನ ಸಾಮ್ಯೇನ ಭಗವತಃ ಸಾಮ್ಯೇನ ಸರ್ವತ್ರೈಕ್ಯೇನ । ತಥಾ ಭಗವದನುವರ್ತಿಷು ಚಾತ್ಮೌಪಮ್ಯರೂಪಸಾಮ್ಯೇನೇತಿ ವಾ । ಮನಸ ಏಕಾಗ್ರತ್ವೇನೇತಿ ವಾ । ಯೋಽಯಂ ಧ್ಯಾನಯೋಗಸ್ತ್ವಯಾ ಪ್ರೋಕ್ತಃ ಏತಸ್ಯ ಯೋಗಸ್ಯ ಚಂಚಲತ್ವಾತ್ಸ್ಥಿರಾಂ ಸ್ಥಿತಿಂ ಮನಸಃ ಚಂಚಲತ್ವಾತ್ ನ ಪಶ್ಯಾಮಿ ॥ 33 ॥**

**ಅನುವಾದ** - ಭಗವಂತನು ಹೇಳಿದ ಧ್ಯಾನಯೋಗವನ್ನು ಅನುಷ್ಠಾನಕ್ಕೆ ತರಲು ಸಾಧ್ಯವಾಗುವುದಿಲ್ಲ ಆದ್ದರಿಂದ ಆ ಧ್ಯಾನಯೋಗವು ಪ್ರಮಾಣವಾಗಲು ಸಾಧ್ಯವಿಲ್ಲ ಎಂದು '**ಯೋಽಯಂ ಯೋಗಃ**' ಎಂಬ ಶ್ಲೋಕದಿಂದ ಅರ್ಜುನ ಪ್ರಶ್ನಿಸುತ್ತಿದ್ದಾನೆ. ಹೇ ! ಮಧುಸೂದನ! **ಸಾಮ್ಯೇನ**= ಎಲ್ಲರ ಒಳಗಿರುವ ಭಗವಂತನ ರೂಪಗಳಿಗೆ ಸಾಮ್ಯದಿಂದ ಅಂದರೆ ಸರ್ವತ್ರ ಐಕ್ಯದಿಂದ ಹಾಗೆಯೇ ಭಗವಂತನ ಭಕ್ತರಲ್ಲಿ ತನ್ನಂತೆಯೇ ಸುಖವನ್ನು ಬಯಸುವ ಸಾಮ್ಯದಿಂದ, ಮನಸ್ಸಿನ ಏಕಾಗ್ರತೆರೂಪವಾದ ಯಾವ ಧ್ಯಾನಯೋಗವನ್ನು ನೀನು ಹೇಳಿದ್ದೀಯೋ, **ಏತಸ್ಯ**= ಈ ಧ್ಯಾನವು, **ಚಂಚಲತ್ವಾತ್**= ಮನಸ್ಸು ಚಂಚಲವಾದ್ದರಿಂದ , **ಸ್ಥಿರಾಂ ಸ್ಥಿತಿಂ**= ಸ್ಥಿರವಾಗಿ ನಿಲ್ಲುತ್ತದೆ ಎಂದು, **ನ ಪಶ್ಯಾಮಿ**= ನಾನು ಭಾವಿಸುವುದಿಲ್ಲ. ॥33॥

## ಮನಸ್ಸು ಚಂಚಲ

**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥ 34 ॥**

**ಅರ್ಥ-** ಕೃಷ್ಣ ! ಮನಸ್ಸು ಚಂಚಲ ಎಂದು ಪ್ರಸಿದ್ಧ . ಅದು ದೇಹೇಂದ್ರಿಯಗಳಿಗೆ ಕ್ಷೋಭೆಯನ್ನು ಉಂಟು ಮಾಡುತ್ತದೆ. ವಿವೇಕದಿಂದಲೂ ಅದನ್ನು ಗೆಲ್ಲವುದು ಅಸಾಧ್ಯ. ವಿಷಯಸಂಸ್ಕಾರದಿಂದ ದೃಢವಾಗಿದ್ದು , ಒಳ್ಳೆಯ ವಿಷಯಗಳಲ್ಲಿ ತೊಡಗಿಸುವುದು ಕಷ್ಟ. ಆದ್ದರಿಂದ ಆಕಾಶದಲ್ಲಿ ಬೀಸುವ ಗಾಳಿಯನ್ನು (ಬಟ್ಟೆಯಲ್ಲಾಗಲೀ, ಮಡಿಕೆಯಲ್ಲಾಗಲೀ) ಹಿಡಿದಿಟ್ಟುಕೊಳ್ಳುವುದು ಹೇಗೆ ಅಸಾಧ್ಯವೋ ಹಾಗೆ ಮನಸ್ಸಿನ ನಿಯಂತ್ರಣವೂ ಅಸಾಧ್ಯ ಎಂದು ತಿಳಿಯುತ್ತೇನೆ.

**ಚಂಚಲತ್ವಾದಿತ್ಯತ್ರ ಕಸ್ಯೇತಿ ಶಂಕಾಂ ನಿರಸ್ಯನ್ಮನೋನಿಗ್ರಹೇಣಾಸ್ತು ಯೋಗಸ್ಯ ಸ್ಥಿರತೇತಿ ಶಂಕಾಂ ನಿರಾಹ- ಚಂಚಲಮಿತಿ ॥ ಮನಶ್ಚಂಚಲಂ ಹಿ ಪ್ರಸಿದ್ಧಮ್ । ಪ್ರಮಾಥಿ ಪ್ರಮಥನಶೀಲಂ ದೇಹೇಂದ್ರಿಯಕ್ಷೋಭಕರಮ್ । ಕಿಂಚ ಬಲವತ್ ವಿವೇಕೇನಾಪಿ ಜೇತುಮಶಕ್ಯಮ್ । ದೃಢಂ ವಿಷಯವಾಸನಾನುವಿದ್ಧತಯಾ ದುರ್ಭೇದಂ ಸಾಧುವಿಷಯೇ ನೇತುಮಶಕ್ಯಮ್ । ಅತ ಆಕಾಶೇ ದೋಧೂಯಮಾನಸ್ಯ ವಾಯೋಃ ವಸ್ತ್ರೇಣ ಕುಂಭಾದಿನಾ ವಾ ನಿರೋಧನಮಶಕ್ಯಂ ಯಥಾ ತಥಾ ತಸ್ಯ ಮನಸೋ ನಿಗ್ರಹಂ ದುಷ್ಕರಮಹಂ ಮನ್ಯೇ ಜಾನಾಮಿ ॥ 34 ॥**

**ಅನುವಾದ-** ಹಿಂದೆ ಚಂಚಲವಾದ್ದರಿಂದ ಧ್ಯಾನಯೋಗವು ಸ್ಥಿರವಾಗಿ ನಿಲ್ಲಲು ಸಾಧ್ಯವಿಲ್ಲ ಎಂದು ಹೇಳಿದ್ದಾನೆ. ಚಂಚಲವಾದದ್ದು ಯಾವುದು ? ಎಂಬ ಶಂಕೆಯನ್ನು ಪರಿಹರಿಸುತ್ತಾ ಮನೋನಿಯಂತ್ರಣದಿಂದ ಧ್ಯಾನಯೋಗವು ಸ್ಥಿರವಾಗಿ ನಿಲ್ಲಲು ಸಾಧ್ಯ ಎಂಬ ಶಂಕೆಯನ್ನು '**ಚಂಚಲಂ**' ಎಂಬ ಶ್ಲೋಕದಿಂದ ಪರಿಹರಿಸುತ್ತಿದ್ದಾನೆ ಅರ್ಜುನ. ಮನಸ್ಸು ಚಂಚಲ ಎಂಬುದು, **ಹಿ**= ಪ್ರಸಿದ್ಧ . **ಪ್ರಮಾಥಿ**= ಎಳೆಯುವಂಥಾದ್ದು= ದೇಹ ಇಂದ್ರಿಯಗಳಿಗೆ ಕ್ಷೋಭೆಯನ್ನು ಉಂಟುಮಾಡುತ್ತದೆ . ಅಲ್ಲದೆ, **ಬಲವತ್**= ವಿವೇಕದಿಂದಲೂ ಗೆಲ್ಲಲು ಸಾಧ್ಯವಿಲ್ಲ, **ದೃಢಂ** = ವಿಷಯಸಂಸ್ಕಾರದಿಂದ ಕೂಡಿರುವುದರಿಂದ ವಿಷಯ ಪದಾರ್ಥಗಳಿಂದ ಬೇರ್ಪಡಿಸಲು ಸಾಧ್ಯವಿಲ್ಲ . ಒಳ್ಳೆಯ ವಿಷಯಗಳಲ್ಲಿ ತೊಡಗಿಸಲು ಸಾಧ್ಯವಿಲ್ಲ , ಆದ್ದರಿಂದ ಆಕಾಶದಲ್ಲಿ ಬೀಸುವ ಗಾಳಿಯನ್ನು ಬಟ್ಟೆಯಲ್ಲಾಗಲೀ, ಮಡಕೆಯಲ್ಲಾಗಲೀ ಹೇಗೆ ಹಿಡಿದಿಟ್ಟುಕೊಳ್ಳಲು ಸಾಧ್ಯವಿಲ್ಲವೋ ಹಾಗೆ , **ತಸ್ಯ** = ಮನಸ್ಸಿನ , **ನಿಗ್ರಹಂ** = ನಿಗ್ರಹವು ಖಂಡಿತಾ ಸಾಧ್ಯವಿಲ್ಲಎಂದು ನಾನು ಅರ್ಜುನ , **ಮನ್ಯೇ** = ತಿಳಿದಿದ್ದೇನೆ. ॥ 34 ॥

## ಅಭ್ಯಾಸದ ಮಹತ್ವ

**ಶ್ರೀಭಗವಾನುವಾಚ -**

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥ 35 ॥**

**ಅರ್ಥ–** ಆಜಾನುಬಾಹುವಾದ ಅರ್ಜುನ ! ಸ್ವಭಾವತಃ ಚಂಚಲವಾದ ಮನಸ್ಸನ್ನು ನಿಗ್ರಹಿಸುವುದು ಕಷ್ಟಸಾಧ್ಯ . ಈ ವಿಷಯದಲ್ಲಿ ಸಂಶಯವಿಲ್ಲ. ಆದರೂ ಧ್ಯಾನಯೋಗದ ನಿರಂತರ ಅಭ್ಯಾಸದಿಂದ ಮತ್ತು ವಿಷಯವೈರಾಗ್ಯದಿಂದ ಮನಸ್ಸನ್ನು ತನ್ನ ವಶದಲ್ಲಿ ಇಟ್ಟು ಕೊಳ್ಳಬಹುದು.

**ಅರ್ಜುನೋಕ್ತಂ ಮನಶ್ಚಾಂಚಲ್ಯಾದಿಕಮಂಗೀಕೃತ್ಯ ಮನೋನಿಗ್ರಹೋ-ಪಾಯಂ ಭಗವಾನಾಹ ಅಸಂಶಯಮಿತಿ ॥ ಹೇ ಮಹಾಬಾಹೋ ಸ್ವಭಾವತಶ್ಚಂಚಲಂ ಮನೋಽಸಂಶಯಂ ಯಥಾ ಭವತಿ ತಥಾ ದುರ್ನಿಗ್ರಹಂ ದುಃಖೇನ ನಿರೋಧ್ಯಂ ತಥಾಽಪ್ಯಭ್ಯಾಸವೈರಾಗ್ಯಾಭ್ಯಾಂ ತು ನಿಗೃಹ್ಯತೇ ॥ 35 ॥**

**ಅನುವಾದ-** ಅರ್ಜುನನು ಮನಸ್ಸು ಚಂಚಲ ಎಂದು ಹೇಳಿದ್ದನ್ನು ಒಪ್ಪಿ ಮನೋನಿಗ್ರಹದ ಉಪಾಯವನ್ನು '**ಅಸಂಶಯಂ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ ಕೃಷ್ಣ. ಎಲೈ ಆಜಾನು-ಬಾಹುವಾದ ಅರ್ಜುನ ! ಸ್ವಾಭಾವಿಕವಾಗಿ ಚಂಚಲವಾದ ಮನಸ್ಸು ನಿಯಂತ್ರಣಕ್ಕೆ ಬರುವುದು ಕಷ್ಟಸಾಧ್ಯ ಎಂಬುದು ನಿಸ್ಸಂಶಯ, ಆದರೂ ನಿರಂತರ ಧ್ಯಾನಯೋಗದ ಅಭ್ಯಾಸ ಮತ್ತು ವೈರಾಗ್ಯಗಳಿಂದ ಅದು ನಿಗ್ರಹಿಸಲ್ಪಡುತ್ತದೆ.

**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥ 36 ॥**

**ಅರ್ಥ** - ಯೋಗಾಭ್ಯಾಸಾದಿಗಳಿಂದ ಮನಸ್ಸನ್ನು ನಿಗ್ರಹಿಸದವನಿಗೆ ಧ್ಯಾನಯೋಗವು ಅಸಾಧ್ಯ ಎಂಬುದೇ ನನ್ನ ಅಭಿಪ್ರಾಯ. ಮನಸ್ಸನ್ನು ನಿಗ್ರಹಿಸಿರುವ ಪುರುಷನು ಅಭ್ಯಾಸ ವೈರಾಗ್ಯಾದಿಗಳಿಂದ ಪುನಃ ಪುನಃ ಪ್ರಯತ್ನಿಸಿದರೆ ಅವನಿಗೆ ಧ್ಯಾನಯೋಗವು ಸಾಧ್ಯವಾಗುವುದು.

**ನನು ಯಥಾ ಮತ್ತಮಾತಂಗಃ ಸ್ವಯಮೇವ ಶ್ರಾಂತಃ ಸನ್ ಶಾಂತೋ ಭವತಿ, ತಥಾ ವಿಷಯೈಸ್ಸೃಪ್ತಂ ಮನಃ ಕದಾಚಿತ್ ಸ್ವಯಮೇವ ನಿಯತಂ ಭವತಿ ಕಿಮಭ್ಯಾಸಾದಿನೇತ್ಯತ ಆಹ- ಅಸಂಯತೇತಿ ॥ ಅಭ್ಯಾಸಾದಿತೋಽವಶೀಕೃತ-**

**ಚಿತ್ತೇನ ಯೋಗೋ ದುಷ್ಪ್ರಾಪೋಽಸಾಧ್ಯಃ ಇತಿ ಮೇ ಮತಿಃ । ಅಭ್ಯಾಸಾದಿನಾ ವಶ್ಯಾತ್ಮನಾ ವಶೀಕೃತಮನಸ್ಕೇನ ತು ಪುಂಸಾ ಯತತಾ ಪುನರನೇನೋಪಾಯೇನ ಯತ್ನಂ ಕುರ್ವತಾ ಯೋಗೋಽವಾಪ್ತುಂ ಶಕ್ಯ ಇತ್ಯರ್ಥಃ ॥ 36 ॥**

**ಅನುವಾದ-** ಮದಭರಿತವಾದ ಆನೆಯು ಆಯಾಸಗೊಂಡು ತಾನೇ ಹೇಗೆ ಶಾಂತ ವಾಗುತ್ತದೋ ಹಾಗೆ ವಿಷಯ ಭೋಗಗಳಿಂದ ತೃಪ್ತಿಯನ್ನು ಪಡೆದ ಮನಸ್ಸು ಯಾವಾಗಾದರೂ ಹಿಡಿತಕ್ಕೆ ಸಿಗುತ್ತದೆ. ಅಭ್ಯಾಸಾದಿಗಳು ಏಕೆ ಬೇಕು ? ಎಂಬ ಪ್ರಶ್ನೆಗೆ '**ಅಸಂಯತಾತ್ಮನಾ**' ಎಂಬ ಶ್ಲೋಕದಿಂದ ಉತ್ತರವನ್ನು ಹೇಳುತ್ತಿದ್ದಾನೆ. ಅಭ್ಯಾಸಾದಿಗಳಿಂದ ಮನಸ್ಸನ್ನು ನಿಗ್ರಹಿಸದವನಿಗೆ ಯೋಗವು, **ದುಷ್ಪ್ರಾಪಃ**= ಅಸಾಧ್ಯ, ಎಂದು ನನ್ನ ಅಭಿಪ್ರಾಯ. ಅಭ್ಯಾಸಾದಿಗಳಿಂದ, **ವಶ್ಯಾತ್ಮನಾ**= ಮನಸ್ಸಿನ ನಿಗ್ರಹವುಳ್ಳ ಪುರುಷನಿಗೆ **ಉಪಾಯತಃ**= ಅಭ್ಯಾಸ-ವೈರಾಗ್ಯಾದಿ ಉಪಾಯದಿಂದ, **ಯತತಾ**= ಪುನಃ ಪುನಃ ಪ್ರಯತ್ನ ಮಾಡುವುದರಿಂದ, **ಯೋಗಃ**= ಧ್ಯಾನಯೋಗವು, **ಅವಾಪ್ತುಂ ಶಕ್ಯಃ**= ಹೊಂದಲು ಸಾಧ್ಯ. ॥ 36 ॥

**ಅರ್ಜುನ ಉವಾಚ -**

**ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥ 37 ॥**

**ಅರ್ಥ** - ಕೃಷ್ಣ ! ಆಸ್ತಿಕ್ಯ ಬುದ್ಧಿಯಿದ್ದರೂ ಪ್ರಯತ್ನ ಮಾಡದೆ ಧ್ಯಾನಯೋಗದಿಂದ ದೂರ ಚಲಿಸಿದ ಮನಸ್ಸುಳ್ಳ (ಚ್ಯುತನಾದ) ಜೀವನು ಧ್ಯಾನಫಲವಾದ ಜ್ಞಾನವನ್ನು ಪಡೆಯದೆ ಇದ್ದರೆ ಯಾವ ಗತಿಯನ್ನು ಹೊಂದುತ್ತಾನೆ.

**ಅಭ್ಯಾಸಾದಿಹೀನಸ್ಯ ಫಲಂ ಪೃಚ್ಛತಿ- ಅಯತಿರಿತಿ ॥ ಅಯತಿರಪ್ರಯತ್ನಃ ಶ್ರದ್ಧಯಾ ಆಸ್ತಿಕ್ಯಬುದ್ಧ್ಯಾ ಉಪೇತೋ ಯುಕ್ತಃ ಯೋಗಾತ್ ಧ್ಯಾನರೂಪೋ-ಪಾಯಾತ್ ಚಲಿತಮಾನಸಃ ಯೋಗಸಂಸಿದ್ಧಿಂ ಧ್ಯಾನಸಂಪೂರ್ತಿಂ । ಧ್ಯಾನಫಲಂ ಜ್ಞಾನಮಿತಿ ಯಾವತ್ । ಅಪ್ರಾಪ್ಯ ಹೇ ಕೃಷ್ಣ ಕಾಂ ಗತಿಂ ಗಚ್ಛತೀತಿ ॥ 37 ॥**

**ಅನುವಾದ-** ಅಭ್ಯಾಸ, ವೈರಾಗ್ಯಗಳಿಲ್ಲದವನಿಗೆ ಫಲವನ್ನು '**ಅಯತಿಃ**' ಎಂಬ ಶ್ಲೋಕದಿಂದ ಕೇಳುತ್ತಿದ್ದಾನೆ. **ಅಯತಿಃ**= ಪ್ರಯತ್ನ ಮಾಡದವನು , **ಶ್ರದ್ಧಯಾ**= ಆಸ್ತಿಕ್ಯಬುದ್ಧಿಯಿಂದ, **ಉಪೇತಃ**= ಕೂಡಿದವನು, **ಯೋಗಾತ್**= ಧ್ಯಾನಯೋಗ ಎಂಬ ಜ್ಞಾನೋಪಾಯದಿಂದ, **ಚಲಿತಮಾನಸಃ**= ದೂರ ಸರಿದ ಮನಸ್ಸುಳ್ಳವನು, **ಯೋಗಸಂಸಿದ್ಧಿಂ**= ಧ್ಯಾನದ ಪೂರ್ಣತೆ ಯನ್ನು ಅಂದರೆ ಧ್ಯಾನ ಫಲವಾದ ಜ್ಞಾನವನ್ನು, **ಅಪ್ರಾಪ್ಯ** = ಹೊಂದದೆ , ಹೇ ಕೃಷ್ಣ ! ಯಾವ ಗತಿಯನ್ನು ಹೊಂದುತ್ತಾನೆ ? ॥37॥

**ಕಚ್ಚಿನ್ನೋಭಯವಿಭ್ರಷ್ಟಃ ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥ 38 ॥**

**ಅರ್ಥ**- ಸ್ವರ್ಗ, ಮೋಕ್ಷಗಳಿಂದ ಚ್ಯುತನಾದ ಅಥವಾ ಲೌಕಿಕ, ಪಾರತ್ರಿಕ ಪುರುಷಾರ್ಥಗಳಿಂದ ಚ್ಯುತನಾದ ಅಥವಾ ಸ್ವರ್ಗಕ್ಕೆ ಕಾರಣವಾದ ಕಾಮ್ಯಕರ್ಮಾನುಷ್ಠಾನದಿಂದಲೂ , ಮೋಕ್ಷಕ್ಕೆ ಕಾರಣವಾದ ಧ್ಯಾನಯೋಗದಿಂದಲೂ ಚ್ಯುತನಾದ, ಆಶ್ರಯರಹಿತನಾದ ಆದ್ದರಿಂದಲೇ ಪರಮಾತ್ಮನನ್ನು ಹೊಂದುವ ಸಾಧನದಲ್ಲಿ ಮೂಢನಾದ ಸಾಧಕನು ಗಾಳಿಯಿಂದ ಚದುರಿದ ಮೋಡದಂತೆ ಮರೆಯಾಗುವನೋ ? ಅಂದರೆ ನರಕಾದಿಗಳನ್ನು ಹೊಂದುವನೋ ? ಅಥವಾ ಹೊಂದುವುದಿಲ್ಲವೋ ?

**ಕಚ್ಚಿತ್ ಕಿಮಿತ್ಯರ್ಥಃ । ಉಭಯವಿಭ್ರಷ್ಟಃ ಉಭಯಸ್ಮಾತ್ ಸ್ವರ್ಗಾಪವರ್ಗರೂಪಾದ್ವಿಭ್ರಷ್ಟಃ ಪ್ರಚ್ಯುತಃ । ಐಹಿಕಾಮುಷ್ಮಿಕಪುಮರ್ಥಾದ್ವಿಭ್ರಷ್ಟ ಇತಿ ವಾ । ಯದ್ವಾ ಸ್ವರ್ಗಾದ್ಯುಪಾಯಾತ್ ಕಾಮ್ಯಕರ್ಮಾನುಷ್ಠಾನಾದಪವರ್ಗೋಪಾಯಾದ್ ಧ್ಯಾನಾಚ್ಚ ವಿಭ್ರಷ್ಟಃ । ಅಪ್ರತಿಷ್ಠೋ ನಿರಾಶ್ರಯಃ ಅತ ಏವ ಬ್ರಹ್ಮಣಃ ಪಥಿ ಪರಬ್ರಹ್ಮಪ್ರಾಪ್ತ್ಯುಪಾಯೇ ವಿಮೂಢಃ ವಾಯುನಾ ದ್ವೇಧಾಕೃತಮೇಘ ಇವ ಕಿಂ ನಶ್ಯತಿ ನರಕಾದ್ಯನರ್ಥಂ ಪ್ರಾಪ್ನೋತ್ಯುತ ನ ನಶ್ಯತಿ ॥ 38 ॥**

**ಅನುವಾದ**- **ಕಚ್ಚಿತ್** ಎಂದರೆ ಏನು ? ಎಂದು ಅರ್ಥ. **ಉಭಯವಿಭ್ರಷ್ಟಃ**= **ಉಭಯಸ್ಮಾತ್**= ಸ್ವರ್ಗ, ಮೋಕ್ಷ ಎಂಬ ಎರಡರಿಂದ, **ವಿಭ್ರಷ್ಟಃ**= ಚ್ಯುತನಾದ, ಅಥವಾ ಲೌಕಿಕ, ಪಾರತ್ರಿಕ ಪುರುಷಾರ್ಥಗಳಿಂದ ಚ್ಯುತನಾದ, ಅಥವಾ ಸ್ವರ್ಗಾದಿಗಳಿಗೆ ಕಾರಣವಾದ ಕಾಮ್ಯಕರ್ಮಾನುಷ್ಠಾನದಿಂದಲೂ, ಮೋಕ್ಷಕ್ಕೆ ಕಾರಣವಾದ ಧ್ಯಾನದಿಂದಲೂ, **ವಿಭ್ರಷ್ಟಃ**= ಚ್ಯುತನಾದ, **ಅಪ್ರತಿಷ್ಠಃ**= ಆಶ್ರಯರಹಿತನಾದ, ಆದ್ದರಿಂದಲೇ, **ಬ್ರಹ್ಮಣಃ ಪಥಿ**= ಪರಬ್ರಹ್ಮನನ್ನು ಹೊಂದುವ ಸಾಧನದಲ್ಲಿ, **ವಿಮೂಢಃ**= ಮೂಢನಾದವನು, ಗಾಳಿಯಿಂದ ಚದುರಿದ ಮೋಡದಂತೆ , **ಕಿಂ ನಶ್ಯತಿ**= ನರಕಾದಿ ಅನರ್ಥವನ್ನು ಹೊಂದುತ್ತಾನೋ ? ಅಥವಾ ಹೊಂದುವುದಿಲ್ಲವೋ ? ॥ 38 ॥

**ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥ 39 ॥**

**ಅರ್ಥ**- ಕೃಷ್ಣ ! ನನ್ನ ಈ ಸಂಶಯವನ್ನು ಪೂರ್ಣವಾಗಿ ಪರಿಹರಿಸಲು ನೀನು ಸಮರ್ಥನಾಗಿದ್ದಿ. ಈ ಸಂಶಯವನ್ನು ಪರಿಹರಿಸುವವನು ನಿನ್ನ ಹೊರತು ಇನ್ನೊಬ್ಬನಿಲ್ಲ.

ಏತನ್ಮೇ ಸಂಶಯಂ ಏತಂ ಸಂಶಯಂ ವ್ಯಕ್ತೋಽರ್ಥಃ ॥ 39 ॥

**ಅನುವಾದ**- ನನ್ನ ಏತತ್ ಸಂಶಯಂ= ಈ ಸಂಶಯವನ್ನು . ಉಳಿದ ಅರ್ಥ ಸ್ಪಷ್ಟ . ॥39॥

## ಸತ್ಕರ್ಮದಿಂದ ದುರ್ಗತಿಯಿಲ್ಲ

**ಶ್ರೀಭಗವಾನುವಾಚ –**

**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥ 40 ॥**

**ಅರ್ಥ**- ಅರ್ಜುನ ! ಧ್ಯಾನಯೋಗದಿಂದ ಚ್ಯುತನಾದವನಿಗೆ ಈ ಲೋಕದಲ್ಲಿಯಾಗಲೀ, ಪರಲೋಕದಲ್ಲಿಯಾಗಲೀ ಅನರ್ಥ ಪ್ರಾಪ್ತಿಯಿಲ್ಲ. ನನ್ನ ಪ್ರಿಯ ಅರ್ಜುನನೇ ! ಶ್ರದ್ಧೆಯಿಂದ ಸ್ವಲ್ಪಕಾಲ ಧ್ಯಾನಾದಿಗಳನ್ನು ಮಾಡಿದವನು ಯಾರೂ ದುರ್ಗತಿಯನ್ನು ಹೊಂದುವುದಿಲ್ಲ.

**ಪ್ರಶ್ನಸ್ಯೋತ್ತರಮಾಹ ಸಾರ್ಧೈಶ್ಚತುರ್ಭಿಃ । ಹೇ ಪಾರ್ಥ ಇಹ ಲೋಕೇ ಅಮುತ್ರ ಪರಲೋಕೇ ಚ ನಾಶಸ್ತಸ್ಯ ನಾಸ್ತಿ । ಇಹ ನಾಶಸ್ತಿರ್ಯಗಾದಿ ದುರ್ಗತಿಪ್ರಾಪ್ತಿಃ । ಪರತ್ರ ನಾಶೋ ನರಕಪ್ರಾಪ್ತಿಃ । ತದ್ ದ್ವಯಂ ತಸ್ಯ ಯೋಗ-ಭ್ರಷ್ಟಸ್ಯ ನೇತ್ಯರ್ಥಃ । ನಞ್ದ್ವಯಮಾದರಾರ್ಥಮ್ । ಕುತ ಇತ್ಯತ ಉಕ್ತಂ ನ ಹೀತಿ ॥ ಕಲ್ಯಾಣಕೃತ್ ಶ್ರದ್ಧಯಾ ಕಿಂಚಿತ್ಕಾಲಂ ಧ್ಯಾನಾದಿಕೃದಿತ್ಯರ್ಥಃ ॥ 40 ॥**

**ಅನುವಾದ** – ಅರ್ಜುನನ ಪ್ರಶ್ನೆಗೆ ಕೃಷ್ಣ ಮುಂದಿನ ನಾಲ್ಕುವರೆ ಶ್ಲೋಕಗಳಿಂದ ಉತ್ತರವನ್ನು ಹೇಳುತ್ತಿದ್ದಾನೆ. ಎಲೈ ಅರ್ಜುನ ! **ಇಹ** = ಈ ಲೋಕದಲ್ಲಿ, **ಅಮುತ್ರ** = ಪರಲೋಕದಲ್ಲಿಯೂ, ಧ್ಯಾನಯೋಗಚ್ಯುತನಿಗೆ ನಾಶವಿಲ್ಲ . ಈ ಲೋಕದಲ್ಲಿ ನಾಶ ಎಂದರೆ ಪ್ರಾಣಿಪಶುಗಳ ಜನ್ಮ. ಪರಲೋಕದಲ್ಲಿ ನಾಶ ಎಂದರೆ ನರಕಪ್ರಾಪ್ತಿ. ಇವೆರಡೂ, **ತಸ್ಯ**= ಯೋಗಭ್ರಷ್ಟನಿಗೆ ಇಲ್ಲ ಎಂದರ್ಥ. ಎರಡು ಬಾರಿ 'ನ' ಎಂದು ಹೇಳಿರುವುದು ಹೇಳುವ ವಿಷಯವನ್ನು ದೃಢಪಡಿಸಲು. ಏಕೆಂದರೆ ಕಾರಣವನ್ನು 'ನ ಹಿ' ಎಂಬ ಉತ್ತರಾರ್ಧದಿಂದ ಹೇಳುತ್ತಿದ್ದಾನೆ. **ಕಲ್ಯಾಣಕೃತ್**= ಶ್ರದ್ಧೆಯಿಂದ ಸ್ವಲ್ಪಕಾಲವಾದರೂ ಧ್ಯಾನಾದಿಗಳನ್ನು ಮಾಡಿದವನು ಎಂದರ್ಥ. ॥ 40 ॥

**ವಿವರಣೆ**- ಅರ್ಜುನನ ಅಭಿಪ್ರಾಯ ಹೀಗಿದೆ. ಕೆಲವು ಸಾಧಕರು ಸ್ವರ್ಗವು ನಶ್ವರ ಕಾಮ್ಯ ಫಲ ಎಂದು ತಿಳಿದು ಅದಕ್ಕೆ ಸಾಧನವಾದ ಕಾಮ್ಯ ಕರ್ಮಗಳನ್ನು ಮಾಡಲಿಲ್ಲ. ಮೋಕ್ಷ ಮುಖ್ಯಫಲ ಎಂದು ತಿಳಿದು ಧ್ಯಾನಯೋಗವನ್ನು ಮಾಡಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಹೀಗೆ ಸ್ವರ್ಗ ಸಾಧನವಾದ ಕರ್ಮಾನುಷ್ಠಾನ ಮಾಡದಿದ್ದರಿಂದ ಅವರಿಗೆ ಸ್ವರ್ಗಫಲ ಇಲ್ಲ ಎಂದಾಯಿತು.

ಮೋಕ್ಷಸಾಧನವಾದ ಧ್ಯಾನಯೋಗವನ್ನೂ ಮಾಡಲು ಪ್ರಯತ್ನಿಸಿದರೂ ಅದು ಸಾಧ್ಯವಾಗಲಿಲ್ಲ ಆದ್ದರಿಂದ ಮೋಕ್ಷ ಫಲವೂ ಇಲ್ಲದಂತಾಯಿತು. ಹೀಗೆ ಮೋಕ್ಷಸಾಧಕನು ಇತೋಭ್ರಷ್ಟ ತತೋ ಭ್ರಷ್ಟನಾಗುವನೇ ಎಂದು ಪ್ರಶ್ನಿಸುತ್ತಾನೆ. ಈ ಶ್ಲೋಕದಲ್ಲಿ ಶ್ರೀಕೃಷ್ಣ ಈ ಪ್ರಶ್ನೆಗೆ ಉತ್ತರವನ್ನು ನೀಡಿದ್ದಾನೆ. ಯಾರು ಧ್ಯಾನಯೋಗವನ್ನು ಮಾಡಲು ಸ್ವಲ್ಪ ಪ್ರಯತ್ನ ಮಾಡಿದ್ದಾರೋ ಅವರಿಗೆ ಖಂಡಿತವಾಗಿ ದುರ್ಗತಿಯಿಲ್ಲ. ಸ್ವಲ್ಪವಾದರೂ ಧ್ಯಾನಯೋಗಮಾಡಿದ್ದರಿಂದ ಅವರು ಪ್ರಾಣಿ, ಪಶು ಮೊದಲಾದ ಜನ್ಮವನ್ನು ಪಡೆಯುವುದಿಲ್ಲ . ನರಕ ದುಃಖವನ್ನೂ ಅನುಭವಿಸುವುದಿಲ್ಲ. ಧ್ಯಾನಯೋಗ ಎಂಬ ನಿಷ್ಕಾಮಕರ್ಮ ಮಾಡಲು ಸ್ವಲ್ಪ ಪ್ರಯತ್ನ ಮಾಡಿದ್ದರಿಂದ ಎಲ್ಲಾ ದುರ್ಗತಿಗಳಿಂದಲೂ ದೂರವಾಗುತ್ತಾನೆ ಎಂದು ಧ್ಯಾನ ಯೋಗದ ವೈಶಿಷ್ಟ್ಯವನ್ನು ವರ್ಣಿಸಿದ್ದಾನೆ.

**ಪ್ರಾಪ್ಯ ಪುಣ್ಯಕೃತಾನ್‌ಲೋಕಾನುಷಿತ್ವಾ ಶಾಶ್ವತೀಃ ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥ 41 ॥**

**ಅರ್ಥ**– ಧ್ಯಾನಯೋಗಭ್ರಷ್ಟನಾದವನು ಪುಣ್ಯಪ್ರಾಪ್ಯವಾದ ಲೋಕವನ್ನು ಹೊಂದಿ, ಅನೇಕ ವರ್ಷಗಳ ಕಾಲ ಅಲ್ಲಿ ಸುಖವನ್ನು ಅನುಭವಿಸಿ, ಪರಿಶುದ್ಧರಾದ ಶ್ರೀಮಂತರ ಮನೆಯಲ್ಲಿ ಹುಟ್ಟುತ್ತಾನೆ. ॥ 41 ॥

**ತರ್ಹಿ ಕಿಂ ಪ್ರಾಪ್ನೋತೀತ್ಯತ ಆಹ– ಪ್ರಾಪ್ಯೇತಿ ॥ ಪುಣ್ಯಕೃತಾನ್ ಪುಣ್ಯ-ಸಂಪಾದ್ಯಾನ್ ಲೋಕಾನ್ ಪ್ರಾಪ್ಯ ತೇಷು ಶಾಶ್ವತೀಃ ಸಮಾಃ ಅನೇಕ-ಸಂವತ್ಸರಾನುಷಿತ್ವಾ ಶುಚೀನಾಂ ಶ್ರೀಮತಾಂ ಧನಿನಾಂ ಗೇಹೇ ಅಭಿಜಾಯತೇ । ॥ 41 ॥**

**ಅನುವಾದ**– ದುರ್ಗತಿಯನ್ನು ಹೊಂದುವುದಿಲ್ಲವಾದರೆ ಏನನ್ನು ಹೊಂದುತ್ತಾನೆ ಎಂಬುದನ್ನು 'ಪ್ರಾಪ್ಯ' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. **ಪುಣ್ಯಕೃತಾನ್** = ಪುಣ್ಯದಿಂದ ಹೊಂದಲು ಯೋಗ್ಯವಾದ, ಲೋಕಗಳನ್ನು ಹೊಂದಿ, **ಶಾಶ್ವತೀಃ ಸಮಾಃ** = ಅನೇಕ ವರ್ಷಗಳ ಕಾಲ ಅಲ್ಲಿ, **ಉಷಿತ್ವಾ**= ವಾಸಮಾಡಿ (ಸುಖವನ್ನು ಅನುಭವಿಸಿ) ಪರಿಶುದ್ಧರಾದ, **ಶ್ರೀಮತಾಂ**= ಧನಿಕರ ಮನೆಯಲ್ಲಿ ಹುಟ್ಟುತ್ತಾನೆ. ॥ 41 ॥

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥ 42 ॥**

**ಅರ್ಥ** – ಅಥವಾ ಧ್ಯಾನಯೋಗಭ್ರಷ್ಟನು ಜ್ಞಾನಿಗಳಾದ ಧ್ಯಾನಯೋಗಿಗಳ ವಂಶದಲ್ಲಿಯೇ

ಹುಟ್ಟುತ್ತಾನೆ. ಈ ಎರಡೂ ರೀತಿಯ (ಪರಿಶುದ್ಧರಾದ ಶ್ರೀಮಂತರ ಮನೆಯಲ್ಲಿ ಅಥವಾ ಜ್ಞಾನಿಗಳಾದ ಯೋಗಿಗಳ ಮನೆಯಲ್ಲಿ) ಜನ್ಮವು ಲೋಕದಲ್ಲಿ ಬಹಳ ದುರ್ಲಭ. ಇದು ಪ್ರಸಿದ್ಧ.

**ಧೀಮತಾಂ ಜ್ಞಾನಿನಾಂ ಯೋಗಿನಾಂ ಕುಲೇ ವಂಶೇ ವಾ ಭವತಿ । ಯತ್ ಈದೃಕ್ ಜನ್ಮ ಉಕ್ತಂ ದ್ವಿವಿಧಂ ಜನ್ಮ ಏತತ್ ದುರ್ಲಭಂ ಕಷ್ಟಲಭ್ಯಂ ನ ಸುಲಭಸಾಧ್ಯಂ ಹಿ ಪ್ರಸಿದ್ಧಮ್ ॥ 42 ॥**

**ಅನುವಾದ-** ಅಥವಾ **ಧೀಮತಾಂ**= ಜ್ಞಾನಿಗಳಾದ ಧ್ಯಾನಯೋಗಿಗಳ, **ಕುಲೇ**= ವಂಶದಲ್ಲಿ ಹುಟ್ಟುತ್ತಾನೆ. **ಯತ್ ಈದೃಕ್ ಜನ್ಮ ಉಕ್ತಂ**= ಯಾವ ಎರಡು ವಿಧವಾದ ಜನ್ಮವನ್ನು ಹೇಳಿದೆನೋ, ಇವೆರಡು , **ದುರ್ಲಭಂ** = ಸುಲಭವಾಗಿ ಸಿಗುವುದಲ್ಲ, **ಹಿ**= ಪ್ರಸಿದ್ಧ . ॥ 42 ॥

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೈಹಿಕಮ್ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥ 43 ॥**

**ಅರ್ಥ-** ಅರ್ಜುನ ! ಈ ಎರಡೂ ಜನ್ಮಗಳಲ್ಲಿಯೂ, ಹಿಂದಿನ ಜನ್ಮದಲ್ಲಿ ಮಾಡಿದ ಧ್ಯಾನಯೋಗವನ್ನು ಹೊಂದುತ್ತಾನೆ. ನಂತರ ಹಿಂದಿನ ಜನ್ಮಕ್ಕಿಂತಲೂ ಹೆಚ್ಚಿನ ಪೂರ್ಣತೆಯನ್ನು ಪಡೆಯಲು ಪ್ರಯತ್ನಿಸುತ್ತಾನೆ.

**ತತ್ರ ದ್ವಿಪ್ರಕಾರೇಽಪಿ ಜನ್ಮನಿ ಪೌರ್ವದೈಹಿಕಂ ಪೂರ್ವದೇಹೇ ಭವಂತಂ ಬುದ್ಧಿಸಂಯೋಗಂ ಭಗವತಿ ಮನೋಯೋಗಮ್ । ಧ್ಯಾನಮಿತಿ ಯಾವತ್ । ಲಭತೇ । ತತೋ ಭೂಯಃ ಪೌರ್ವದೈಹಿಕಾದಧಿಕಂ ಸಂಸಿದ್ಧೌ ಧ್ಯಾನಸಂಪೂರ್ತೌ ಯತತೇ ಯತ್ನಂ ಕರೋತಿ ಹೇ ಕುರುನಂದನ ॥ 43॥**

**ಅನುವಾದ-** ಎಲೈ ಅರ್ಜುನ ! **ತತ್ರ**= ಈ ಎರಡೂ ಜನ್ಮಗಳಲ್ಲಿಯೂ, **ಪೌರ್ವದೈಹಿಕಂ**= ಹಿಂದಿನ ಜನ್ಮದಲ್ಲಿ ಮಾಡಿದ, **ಬುದ್ಧಿಸಂಯೋಗಂ**= ಮನಸ್ಸಿನ ಸಂಬಂಧವನ್ನು ಅಂದರೆ ಧ್ಯಾನ ಯೋಗವನ್ನು ಹೊಂದುತ್ತಾನೆ. **ತತೋ ಭೂಯಃ**= ಹಿಂದಿನ ದೇಹದಲ್ಲಿ ಮಾಡಿದ್ದಕ್ಕಿಂತಲೂ ಅಧಿಕವಾದ , **ಸಂಸಿದ್ಧೌ** = ಧ್ಯಾನದ ಪೂರ್ಣತೆಗಾಗಿ, **ಯತತೇ** = ಪ್ರಯತ್ನವನ್ನು ಮಾಡುತ್ತಾನೆ. ॥ 43 ॥

**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥ 44 ॥**

**ಅರ್ಥ -** ಧ್ಯಾನಯೋಗಭ್ರಷ್ಟನು ಹಿಂದಿನ ಜನ್ಮದಲ್ಲಿ ಮಾಡಿದ ಧ್ಯಾನಯೋಗದ

ಅಭ್ಯಾಸದಿಂದ ತನ್ನ ಇಚ್ಛೆಯಿಲ್ಲದಿದ್ದರೂ ಬಲಾತ್ಕಾರವಾಗಿ ಅಭ್ಯಾಸಬಲದಿಂದ ಧ್ಯಾನ-ಯೋಗದಲ್ಲಿ ಪ್ರವೃತ್ತನಾಗುತ್ತಾನೆ. ಧ್ಯಾನಯೋಗವನ್ನು ತಿಳಿಯಬೇಕೆಂದು ಇಚ್ಛೆವುಳ್ಳವನೂ ವೇದೋಕ್ತ ವಿಧಿನಿಷೇಧಗಳನ್ನು ಮೀರಿ ನಿಲ್ಲುತ್ತಾನೆ ಅಂದರೆ ಮುಕ್ತನಾಗುತ್ತಾನೆ. ಹಾಗಿರುವಾಗ ಸ್ವಲ್ಪ ಧ್ಯಾನಯೋಗವನ್ನು ಮಾಡಿದವನು ಪುಣ್ಯಲೋಕಗಳನ್ನು ಪಡೆದು ನಂತರ ಮುಕ್ತನಾಗುವುದರಲ್ಲಿ ಏನು ಸಂದೇಹ ?

**ತೇನೈವ ಪೂರ್ವಾಭ್ಯಾಸೇನಾವಶೋಽಪಿ ಸನ್ ಹ್ರಿಯತೇ ಧ್ಯಾನಾದೌ ಬುದ್ಧಿ-ಪೂರ್ವಂ ಸ್ವರಸತಯಾ ಪ್ರವೃತ್ತಿಹೀನೋಽಪಿ ಪೂರ್ವಾಭ್ಯಾಸವಶಾತ್ ಧ್ಯಾನಾದಿ-ಕರ್ಮಣಿ ಪ್ರವರ್ತತ ಇತ್ಯರ್ಥಃ । ಯೋಗಭ್ರಷ್ಟಸ್ಯ ಪುಣ್ಯಲೋಕಾದಿಕಮಿತ್ಯೇ-ತತ್ ಕೈಮುತ್ಯೇನಾಪ್ಯಾಹ ಜಿಜ್ಞಾಸುರಪೀತಿ ।। ಯೋಗಸ್ಯ ಧ್ಯಾನಯೋಗಸ್ಯ ಜಿಜ್ಞಾಸುರಪಿ ಕೇವಲಂ ಯೋಗಜ್ಞಾನೇಚ್ಛುರಪಿ । 'ನ ಲೋಕಾವ್ಯಯೇ'ತಿ ನಞಾ ನಿರ್ದಿಷ್ಟಸ್ಯ ಅನಿತ್ಯತ್ವಾದ್ಯೋಗಸ್ಯೇತಿ ಸಾಧು । ಶಬ್ದಬ್ರಹ್ಮ ವಿಧಿ ನಿಷೇಧರೂಪಶಬ್ದಬ್ರಹ್ಮ ಅತಿವರ್ತತೇ ವಿಧಿನಿಷೇಧಾತೀತೋ ಭವತಿ । ಮುಕ್ತೋ ಭವತೀತಿ ಯಾವತ್ । ಕಿಮು ಕಿಂಚಿತ್ಕಾಲಂ ಯೋಗಾನುಷ್ಠಾತೇತಿ ಭಾವಃ ।। 44 ।।**

**ಅನುವಾದ**- ಆ ಹಿಂದಿನ ಜನ್ಮದಲ್ಲಿ ಮಾಡಿದ ಅಭ್ಯಾಸದಿಂದಲೇ, **ಅವಶೋಪಿ ಸನ್ ಹ್ರಿಯತೇ**= ಧ್ಯಾನಾದಿಗಳಲ್ಲಿ ಬುದ್ಧಿಪೂರ್ವಕವಾದ ಸ್ವಇಚ್ಛೆಯಿಂದ ಪ್ರವೃತ್ತಿಯಿಲ್ಲದವನಾದರೂ ಹಿಂದಿನ ಅಭ್ಯಾಸಬಲದಿಂದ ಧ್ಯಾನಾದಿಗಳಲ್ಲಿ ಪ್ರವೃತ್ತನಾಗುತ್ತಾನೆ. ಯೋಗಭ್ರಷ್ಟನಾದವನಿಗೆ ಕೈಮುತ್ಯನ್ಯಾಯದಿಂದ ಪುಣ್ಯಲೋಕಾದಿಗಳ ಪ್ರಾಪ್ತಿಯಿದೆ ಎಂದು '**ಜಿಜ್ಞಾಸುರಪಿ**' ಎಂಬ ಉತ್ತರಾರ್ಧದಿಂದ ಸಮರ್ಥಿಸುತ್ತಿದ್ದಾನೆ . **ಯೋಗಸ್ಯ**= ಧ್ಯಾನಯೋಗದ, **ಜಿಜ್ಞಾಸುರಪಿ**= ತಿಳಿಯಬೇಕೆಂದು ಮಾತ್ರ ಇಚ್ಛೆವುಳ್ಳವನೂ ಕೂಡ. '**ನ ಲೋಕಾವ್ಯಯ**' ಎಂಬ ಪಾಣಿನಿ ಸೂತ್ರದಲ್ಲಿ '**ನಞ್**' ಹೇಳಿ ನಿರ್ದೇಶಿಸಿದ ನಿಷೇಧ ಅನಿತ್ಯವಾಗಿರುವುದರಿಂದ **ಯೋಗಸ್ಯ** ಎಂಬಲ್ಲಿ ಷಷ್ಠೀವಿಭಕ್ತಿ ಬಂದಿರುವುದು ಸರಿ. **ಶಬ್ದಬ್ರಹ್ಮಾತಿವರ್ತತೇ**= ವಿಧಿನಿಷೇಧಗಳನ್ನು ಮೀರಿರುತ್ತಾನೆ. ಮುಕ್ತನಾಗುತ್ತಾನೆ ಎಂದರ್ಥ. ಹೀಗಿರುವಾಗ ಸ್ವಲ್ಪಕಾಲ ಧ್ಯಾನಯೋಗವನ್ನು ಅನುಷ್ಠಾನ ಮಾಡಿದವನು ಪುಣ್ಯ ಲೋಕವನ್ನು ಹೊಂದುತ್ತಾನೆ ಮತ್ತು ಮುಕ್ತನಾಗುತ್ತಾನೆ ಎನ್ನುವುದರಲ್ಲಿ ಏನು ಸಂದೇಹ ? ।। 44 ।।

**ಅನೇಕ ಜನ್ಮಗಳ ಸಾಧನೆ ಆವಶ್ಯಕ**

**ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।**
**ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ।। 45 ।।**

**ಅರ್ಥ-** ಧ್ಯಾನಯೋಗವನ್ನು ತಿಳಿಯಬೇಕೆಂದು ಇಚ್ಛೆವುಳ್ಳವನು, ಧ್ಯಾನಯೋಗವನ್ನು ತಿಳಿದು, ಧ್ಯಾನಯೋಗವನ್ನು ಮಾಡಲು ಪ್ರಯತ್ನಿಸುತ್ತಾನೆ. ಪ್ರಯತ್ನದಿಂದ ಧ್ಯಾನಯೋಗಿಯಾಗಿ, ಪಾಪರಹಿತನಾಗಿ, ಅನೇಕ ಜನ್ಮಗಳಲ್ಲಿ ಮಾಡಿದ ಧ್ಯಾನದಿಂದ ಅಪರೋಕ್ಷಜ್ಞಾನವನ್ನು ಪಡೆದು , ಅಪರೋಕ್ಷಜ್ಞಾನದಿಂದ ಮೋಕ್ಷವನ್ನು ಪಡೆಯುತ್ತಾನೆ.

**ಯೋಗಜಿಜ್ಞಾಸಾಮಾತ್ರೇಣ ಮುಕ್ತಿಶ್ಚೇತ್ತದನುಷ್ಠಾನಂ ವ್ಯರ್ಥಮಿತ್ಯತೋ ನ ತಾವನ್ಮಾತ್ರೇಣ ಮುಕ್ತಿರಪಿ ತ್ವನೇಕಜನ್ಮನೀತ್ಯಾಹ- ಪ್ರಯತ್ನಾದಿತಿ ।। ಯೋಗ-ಜಿಜ್ಞಾಸುರಪೀತ್ಯನುಷಂಗಃ । ಯೋಗಂ ಜ್ಞಾತ್ವೇತಿ ಶೇಷಃ । ಯತಮಾನಃ ಪ್ರಯತ್ನಂ ಕುರ್ವನ್ ತತಃ ಪ್ರಯತ್ನಾದ್ಯೋಗೀ ಧ್ಯಾನಯೋಗವಾನ್ ಸನ್ ಸಂಶುದ್ಧಕಿಲ್ಬಿಷಃ ನಿರ್ಧೂತಪಾಪಃ ಅನೇಕಜನ್ಮಭಿಃ ಸಂಸಿದ್ಧೋऽಪರೋಕ್ಷಜ್ಞಾನೀ ಅನೇಕಜನ್ಮ-ಸಂಸಿದ್ಧಃ ತತಃ ಅಪರೋಕ್ಷಜ್ಞಾನಾತ್ ಪರಾಂ ಗತಿಂ ಯಾತೀತಿ ।। 45 ।।**

**ಅನುವಾದ-** ಧ್ಯಾನಯೋಗವನ್ನು ತಿಳಿಯಬೇಕು ಎಂಬ ಇಚ್ಛೆಯಿಂದಲೇ ಮೋಕ್ಷವನ್ನು ಪಡೆಯುವುದಾದರೆ, ಧ್ಯಾನಯೋಗದ ಅನುಷ್ಠಾನವು ವ್ಯರ್ಥವಾಗಬೇಕಾದೀತು. ಆದ್ದರಿಂದ ಕೇವಲ ಧ್ಯಾನಯೋಗದ ತಿಳಿಯುವ ಇಚ್ಛೆಯಿಂದ ಮೋಕ್ಷವನ್ನು ಪಡೆಯುವುದಿಲ್ಲ ಅನೇಕ ಜನ್ಮಗಳಲ್ಲಿ ಧ್ಯಾನಯೋಗವನ್ನು ಸಂಪಾದಿಸಿಯೇ ಮೋಕ್ಷವನ್ನು ಪಡೆಯುತ್ತಾನೆ ಎಂಬುದನ್ನು **'ಪ್ರಯತ್ನಾತ್'** ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. ಧ್ಯಾನಯೋಗವನ್ನು ತಿಳಿಯಬೇಕೆಂದು ಇಚ್ಛೆವುಳ್ಳವನು ಎಂಬುದನ್ನು ಕೂಡ ಹಿಂದಿನ ಶ್ಲೋಕದಿಂದ ತಂದು ಸೇರಿಕೊಳ್ಳಬೇಕು. ಧ್ಯಾನಯೋಗವನ್ನು ತಿಳಿದು ಎಂದು ಅಧ್ಯಾಹಾರದಿಂದ ಇಟ್ಟುಕೊಳ್ಳಬೇಕು. **ಯತಮಾನಃ**= ಪ್ರಯತ್ನವನ್ನು ಮಾಡುತ್ತಾ , ಆ ಪ್ರಯತ್ನದಿಂದ, **ಯೋಗೀ**= ಧ್ಯಾನಯೋಗಿಯಾಗಿ, **ಸಂಶುದ್ಧ-ಕಿಲ್ಬಿಷಃ**= ಪಾಪರಹಿತನಾಗಿ, **ಅನೇಕಜನ್ಮಸಂಸಿದ್ಧಃ**= ಅನೇಕ ಜನ್ಮಗಳಿಂದ ಮಾಡಿದ ಧ್ಯಾನ ಯೋಗದಿಂದ ಅಪರೋಕ್ಷಜ್ಞಾನವನ್ನು ಪಡೆದು. **ತತಃ**= ಆ ಅಪರೋಕ್ಷಜ್ಞಾನದಿಂದ, **ಪರಾಂ ಗತಿಂ**= ಮೋಕ್ಷವನ್ನು ಹೊಂದುತ್ತಾನೆ. ।। 45 ।।

**ತಪಸ್ವಿಭ್ಯೋऽಧಿಕೋ ಯೋಗೀ ಜ್ಞಾನಿಭ್ಯೋऽಪಿ ಮತೋऽಧಿಕಃ ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ।। 46 ।।**

**ಯೋಗಂ ಸ್ತೌತಿ ತಪಸ್ವಿಭ್ಯ ಇತಿ । ಕೃಚ್ಛ್ರಚಾಂದ್ರಾಯಣಾದಿ ತಪೋ-ಯುಕ್ತೇಭ್ಯೋऽಯೋಗಿ ಜ್ಞಾನಿಭ್ಯೋऽಪಿ ಯೋಗೀ ಧ್ಯಾನಾನುಷ್ಠಾತಾऽಧಿಕೋ ಮತಃ । ಯಸ್ಮಾತ್ ಸರ್ವಾಧಿಕೋಮತಃ ತಸ್ಮಾತ್ಸರ್ವಾಧಿಕತ್ವಾದ್ಯೋಗಸ್ಯೇತ್ಯರ್ಥಃ ।। 46 ।।**

**ಅನುವಾದ** – ಧ್ಯಾನಯೋಗವನ್ನು 'ತಪಸ್ವಿಭ್ಯಃ' ಎಂಬ ಶ್ಲೋಕದಿಂದ ಹೊಗಳುತ್ತಿದ್ದಾನೆ. ಕೃಚ್ಛ್ರ, ಚಾಂದ್ರಾಯಣಾದಿ ತಪಸ್ಸು ಮಾಡುವವರಿಗಿಂತಲೂ, ಧ್ಯಾನಯೋಗ ಮಾಡದಿದ್ದರೂ ಧ್ಯಾನಯೋಗವನ್ನು ತಿಳಿದ ಜ್ಞಾನಿಗಳಿಗಿಂತಲೂ, **ಯೋಗೀ**= ಧ್ಯಾನಯೋಗವನ್ನು ಮಾಡುವವನು ಶ್ರೇಷ್ಠ ಎಂದು ನನ್ನ ಅಭಿಪ್ರಾಯ. **ತಸ್ಮಾತ್**= ಧ್ಯಾನಯೋಗವು ಎಲ್ಲಾ ಸಾಧನಗಳಿಗಿಂತ ಉತ್ತಮವಾದ್ದರಿಂದ ಧ್ಯಾನಯೋಗಿಯು ಎಲ್ಲರಿಗಿಂತ ಶ್ರೇಷ್ಠ ಎಂದು ಅಭಿಪ್ರಾಯ . ॥ 46 ॥

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥ 47 ॥**

*॥ ಓಂತತ್ಸದಿತಿ ಶ್ರೀಮದ್‌ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಆತ್ಮಸಂಯಮಯೋಗೋ ನಾಮ ಷಷ್ಠೋಽಧ್ಯಾಯಃ ॥*

**ಅರ್ಥ**– ಎಲ್ಲಾ ಧ್ಯಾನಯೋಗಿಗಳಲ್ಲಿಯೂ ನನ್ನಲ್ಲಿ ಭಕ್ತಿವುಳ್ಳವನು ಶ್ರೇಷ್ಠ. ಭಕ್ತಿವುಳ್ಳವರಲ್ಲಿಯೂ ನನ್ನನ್ನು ಸೇವಿಸುವವನು ಇನ್ನೂ ಶ್ರೇಷ್ಠ. ನನ್ನನ್ನು ಸೇವಿಸುವವರಲ್ಲಿಯೂ ನನ್ನಲ್ಲಿಯೇ ಮನಸ್ಸಿಟ್ಟ ಅಂದರೆ ಫಲಾಪೇಕ್ಷೆ ಇಲ್ಲದೆ ಸೇವಿಸುವವನು ಬಹಳ ಶ್ರೇಷ್ಠ ಎಂದು ನನ್ನ ಅಭಿಪ್ರಾಯ.

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ ಭಗವದ್ಗೀತೆಯಲ್ಲಿ ಆತ್ಮಸಂಯಮಯೋಗವೆಂಬ ಆರನೆಯ ಅಧ್ಯಾಯವು ಮುಗಿಯಿತು.*

**ಧ್ಯಾನವತ್ಸ್ವಪಿ ತಾರತಮ್ಯಮಾಹ– ಯೋಗಿನಾಮಿತಿ ॥ ಸರ್ವೇಷಾಮಪಿ ಯೋಗಿನಾಂ ಮಧ್ಯೇ ಶ್ರದ್ಧಾಶಬ್ದೋದಿತಭಕ್ತಿಮಾನ್ಯಃ ಸ ಯುಕ್ತೋ ಮತಃ । ತತ್ರಾಪಿ ಭಕ್ತಿಮತ್ಸ್ವಪಿ ಯೋ ಮಾಂ ಭಜತೇ ಸೇವತೇ ಸ ಯುಕ್ತತರಃ । ತತ್ರಾಪಿ ಮದ್ಗತೇನಾಂತರಾತ್ಮನಾ ಮದ್ಗತಾಂತಃಕರಣೇನ ಫಲಕಾಮನಾಂ ವಿನಾ ಭಜತೇ ಸ ಯುಕ್ತತಮೋ ಮತ ಇತಿ ಯೋಗಿಷ್ವಪ್ಯುತ್ತಮ ಇತಿ ಮೇ ಮತಃ ॥ 47 ॥**

*ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ ಷಷ್ಠೋಽಧ್ಯಾಯಃ*

**ಅನುವಾದ** – ಧ್ಯಾನಯೋಗಿಗಳಲ್ಲಿಯೂ ಇರುವ ತಾರತಮ್ಯವನ್ನು **'ಯೋಗಿನಾಂ'** ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. ಎಲ್ಲಾ ಧ್ಯಾನಯೋಗಿಗಳ ಮಧ್ಯದಲ್ಲಿ, **ಶ್ರದ್ಧಾವಾನ್** = ಭಕ್ತಿವುಳ್ಳವನು ಶ್ರೇಷ್ಠ ಎಂದು ಅಭಿಪ್ರಾಯ. **ತತ್ರಾಪಿ** = ಭಕ್ತಿವುಳ್ಳವರಲ್ಲಿಯೂ **ಯೋ ಮಾಂ**

**ಭಜತೇ** = ಯಾರು ನನ್ನನ್ನು ಸೇವಿಸುತ್ತಾನೋ ಅವನು ಇನ್ನೂ ಶ್ರೇಷ್ಠ, **ತತ್ರಾಪಿ** = ನನ್ನನ್ನು ಸೇವಿಸುವವರಲ್ಲಿಯೂ, **ಮದ್ಗತೇನಾಂತರಾತ್ಮನಾ** = ನನ್ನಲ್ಲಿಯೇ ಮನಸ್ಸನ್ನು ಇಟ್ಟ ಅಂದರೆ ಫಲಾಪೇಕ್ಷೆ ಇಲ್ಲದೆ ಸೇವಿಸುವವನು ಬಹಳ ಶ್ರೇಷ್ಠ. ಇವನು ಧ್ಯಾನಯೋಗಿಗಳಲ್ಲಿಯೇ ಅತ್ಯಂತ ಶ್ರೇಷ್ಠ ಎಂದು ನನ್ನ ಅಭಿಪ್ರಾಯ. ॥ 47 ॥

*ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ ಆರನೇ ಅಧ್ಯಾಯವು ಮುಗಿಯಿತು.*

# ಅಧ್ಯಾಯ – 7

**ಪರತತ್ತ್ವೋಪದೇಶ**

**ಶ್ರೀಭಗವಾನುವಾಚ –**

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥ 1 ॥**

**ಅರ್ಥ–** ಶ್ರೀ ಕೃಷ್ಣ ಹೇಳಿದನು– ಎಲೈ ಪಾರ್ಥ ! ನನ್ನಲ್ಲಿ ಅತ್ಯಂತ ಸ್ನೇಹಭರಿತವಾದ ಮನಸ್ಸುಳ್ಳವನಾಗಿ, ನಿವೃತ್ತಕರ್ಮ ಮತ್ತು ಜ್ಞಾನ ಎಂಬ ಎರಡು ವಿಧವಾದ ಜ್ಞಾನಸಾಧನಗಳನ್ನು ಅನುಷ್ಠಾನ ಮಾಡುತ್ತ, 'ಭಗವಂತನೇ ನನ್ನಿಂದ ಎಲ್ಲವನ್ನು ಮಾಡಿಸುತ್ತಾನೆ. ಅವನೇ ನನ್ನ ರಕ್ಷಕ, ಆ ಭಗವಂತನಲ್ಲೇ ನಾನು ಆಶ್ರಿತನಾಗಿರುವೆನು' ಎಂದು ತಿಳಿದು ಸಂಶಯಕ್ಕೆಡೆ ಇಲ್ಲದಂತೆ ಸಮಗ್ರವಾಗಿ ನನ್ನನ್ನು ಹೇಗೆ ಅರಿಯಬಲ್ಲೆಯೋ ಅದನ್ನು ಹೇಳುವೆನು ಕೇಳು.

## ಗೀತಾವಿವೃತಿ

**ಓಂ 'ಬುದ್ಧಿರ್ಯೋಗೇ ಶೃಣ್ವಿತಿ' (2–39) ಭಗವದ್ಜ್ಞಾನೋಪಾಯಂ ಪ್ರತಿಜ್ಞಾಯ ಕಾಮಾದಿವರ್ಜನಯುಕ್ತನಿವೃತ್ತಕರ್ಮಾನುಷ್ಠಾನರೂಪಕರ್ಮ-ಯೋಗಂ ಜ್ಞಾನಸ್ಯ ಬಹಿರಂಗೋಪಾಯಮಾಪಂಚಮಾಧ್ಯಾಯಾಂತಂ ಜ್ಞಾನಾಂತರಂಗಸಾಧನಂ ಧ್ಯಾನರೂಪಂ ಯೋಗಂ ಚ ಷಷ್ಠೇ ನಿರೂಪ್ಯಾಧುನಾ ಪೂರ್ವೋಕ್ತಂ ಧ್ಯಾನಂ ಭಕ್ತಿಪೂರ್ವಕಮೇವಾನುಷ್ಠಿತಂ ಜ್ಞಾನಸಾಧನಮ್ । ನ ಚೈದ್ಯಾದೇರಿವ ದ್ವೇಷಪೂರ್ವಕಮ್ । ಅತೋ ಭಕ್ತ್ಯರ್ಥಂ ಭಗವನ್ಮಾಹಾತ್ಮ್ಯಂ 'ಮಯಿ' ಇತ್ಯಾದಿನಾಽಧ್ಯಾಯಷಟ್ಕೇನೋಚ್ಯತೇ ।**

**ಅನುವಾದ–** **'ಬುದ್ಧಿರ್ಯೋಗೇ ...... ಶೃಣು'** (2–39) ಎಂಬಲ್ಲಿ ಭಗವಂತನ ಜ್ಞಾನವನ್ನು ಪಡೆಯಲು ಸಾಧನವನ್ನು ಹೇಳುವೆನೆಂದು ಪ್ರತಿಜ್ಞೆ ಮಾಡಿ ಅನಂತರ ಐದನೆ ಅಧ್ಯಾಯದ ಕೊನೆಯವರೆಗೆ ಜ್ಞಾನಕ್ಕೆ ಬಹಿರಂಗಸಾಧನವಾದ ಫಲಾಶಾರಹಿತರಾದ ನಿವೃತ್ತಕರ್ಮಾನುಷ್ಠಾನ ರೂಪವಾದ ಕರ್ಮಯೋಗವನ್ನು ನಿರೂಪಿಸಲಾಯಿತು. ಆ ಬಳಿಕ ಆರನೆ ಅಧ್ಯಾಯದಲ್ಲಿ ಜ್ಞಾನಕ್ಕೆ ಅಂತರಂಗ ಸಾಧನವಾದ ಧ್ಯಾನಯೋಗವನ್ನು ವಿವರಿಸಲಾಯಿತು. ಈಗ , ಹಿಂದೆ

ಹೇಳಲಾದ ಧ್ಯಾನವು ಭಕ್ತಿಪೂರ್ವಕವಾಗಿ ಅನುಷ್ಠಿತವಾದಲ್ಲಿ ಮಾತ್ರ ಜ್ಞಾನ ಸಾಧನವಾಗುವುದು. ಶಿಶುಪಾಲ ಮೊದಲಾದವರು ಮಾಡಿದ ದ್ವೇಷಪೂರ್ವಕವಾದ ಧ್ಯಾನವು ಜ್ಞಾನಸಾಧನ ವಾಗಲಾರದು. ಆದ್ದರಿಂದ 'ಮಯಿ' ಎಂದು ಆರಂಭಿಸಿ ಮುಂದಿನ ಆರು ಅಧ್ಯಾಯಗಳಲ್ಲಿ ಭಕ್ತಿಗಾಗಿ ಭಗವಂತನ ಮಹಿಮೆಯನ್ನು ಹೇಳಲಾಗುವುದು.

**ವಿವರಣೆ – ಬಹಿರಂಗೋಪಾಯ**= ಬಾಹ್ಯಸಾಧನ. ಜ್ಞಾನವು ಮನಸ್ಸಿಗೆ ಸಂಬಂಧಪಟ್ಟ ಕ್ರಿಯೆಯಾಗಿದ್ದು ಕರ್ಮಾನುಷ್ಠಾನವು ಪ್ರಧಾನವಾಗಿ ಶಾರೀರಿಕ ಕ್ರಿಯೆಯಾಗಿರುವುದರಿಂದ ಜ್ಞಾನಕ್ಕೆ ಬಾಹ್ಯವಾಗುವುದು. ಜ್ಞಾನವು ಮಾನಸಕ್ರಿಯೆಯಾಗಿರುವಂತೆ ಜ್ಞಾನಸಾಧನವಾದ ಧ್ಯಾನವೂ ಮಾನಸ ಕ್ರಿಯೆಯಾಗಿರುವುದರಿಂದ ಜ್ಞಾನಕ್ಕೆ ಅದು ಅಂತರಂಗವಾದ ಅಂದರೆ ತೀರ ಹತ್ತಿರದ ಸಾಧನವೆನಿಸುವುದು.

**'ನ ತ್ವೇವಾಹಂ'(2-12) ಇತ್ಯಾದಿನಾ ಪೂರ್ವಷಟ್ಕೇಽಪಿ ಭಗವನ್ಮಾಹಾತ್ಮ್ಯೋಕ್ತಾವಪಿ ಸಾಧನಸ್ಯೈವ ಪ್ರಾಚುರ್ಯೇಣೋಕ್ತಿಃ । ಉತ್ತರಷಟ್ಕೇ ಕ್ವಚಿತ್ ಕ್ವಚಿತ್ಸಾಧನಸ್ಯೋಕ್ತಾವಪಿ ಪ್ರಾಚುರ್ಯೇಣೈವ ಭಗವನ್ಮಹಿಮ್ನೋ ವರ್ಣನಾನ್ನ ಪೂರ್ವೋತ್ತರಷಟ್ಕಯೋಃ ಸಾಂಕರ್ಯಮ್ ।**

**ಅನುವಾದ**– 'ನ ತ್ವೇವಾಹಂ' (2-12) ಇತ್ಯಾದಿ ಶ್ಲೋಕದಿಂದ ಹಿಂದಿನ ಆರು ಅಧ್ಯಾಯ ಗಳಲ್ಲಿ ಭಗವಂತನ ಮಹಿಮೆಯನ್ನು ಹೇಳಿದ್ದರೂ ಪ್ರಚುರವಾಗಿ ಸಾಧನವನ್ನೇ ಹೇಳಲಾಗಿದೆ. ಮುಂದಿನ ಆರು ಅಧ್ಯಾಯಗಳಲ್ಲಿ ಅಲ್ಲಲ್ಲಿ ಜ್ಞಾನಸಾಧನವನ್ನು ಹೇಳಿದ್ದರೂ ಭಗವನ್ಮಹಿಮೆಯನ್ನು ಪ್ರಚುರವಾಗಿಯೇ ಹೇಳಿರುವುದರಿಂದ ಪೂರ್ವಷಟ್ಕ–ಉತ್ತರಷಟ್ಕಗಳಿಗೆ ಸಾಂಕರ್ಯ(ದೋಷ) ವಿಲ್ಲ.

**ವಿವರಣೆ – ಸಾಂಕರ್ಯ**= ಗ್ರಂಥದ ಒಂದು ಭಾಗದಲ್ಲಿ ವಿವರಿಸಲಾಗುವುದೆಂದು ನಿರ್ದಿಷ್ಟ ವಾಗಿರುವ ವಿಷಯಗಳನ್ನು ಬೇರೆ ವಿಷಯಗಳ ನಿರೂಪಣೆಗೆ ಮೀಸಲಾಗಿರುವ ಮತ್ತೊಂದು ಭಾಗದಲ್ಲಿ ವಿವರಿಸುವದು ಆ ಭಾಗಗಳಿಗೆ ಸಾಂಕರ್ಯವೆಂಬ ದೋಷಕ್ಕೆ ಕಾರಣವಾಗುವುದು.

**ತಯೋಃ ಪೌರ್ವಾಪರ್ಯಬೀಜಂ ತು ಯದರ್ಥಂ ಸಾಧನಂ ನಿರೂಪಿತಂ ತಜ್ಜ್ಞಾನಾಯ ಜ್ಞಾತವ್ಯಮಾಹಾತ್ಮ್ಯನಿರೂಪಣಾತ್ ಕಾರ್ಯಕಾರಣಭಾವರೂಪಂ 'ಯೋಗಂ ಯುಂಜನ್ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು' ಇತಿ ಪ್ರತಿಜ್ಞಾಂತರಕರಣಾದೇವ ವ್ಯಕ್ತಮಿತಿ ಶ್ರೋತಾರಮಭಿಮುಖೀಕುರ್ವನ್ ಭಗವನ್ಮಾಹಾತ್ಮ್ಯಂ ವಕ್ತುಂ ಪ್ರತಿಜಾನೀತೇ– ಮಯೀತಿ ॥**

**ಅನುವಾದ–** ಪೂರ್ವಷಟ್ಕ–ಉತ್ತರಷಟ್ಕಗಳ ಮಧ್ಯೆ (ಕರ್ಮಯೋಗವನ್ನು ನಿರೂಪಿಸುವ) ಷಟ್ಕವು ಮೊದಲು. ಅನಂತರ (ಭಗವನ್ಮಹಿಮೆಯನ್ನು ವರ್ಣಿಸುವ) ಉತ್ತರಷಟ್ಕ– ಹೀಗೆ ಪೌರ್ವಾಪರ್ಯಕ್ಕೆ ಕಾರಣವಾದದ್ದು ಕಾರ್ಯಕಾರಣಭಾವ ರೂಪವಾದ ಸಂಬಂಧ. ಯಾವ ಜ್ಞಾನಕ್ಕೋಸ್ಕರವಾಗಿ (ನಿವೃತ್ತ ಕರ್ಮಾನುಷ್ಠಾನ ರೂಪವಾದ) ಸಾಧನವನ್ನು ಪೂರ್ವಷಟ್ಕದಲ್ಲಿ ನಿರೂಪಿಸಲಾಯಿತೋ ಆ ಜ್ಞಾನವನ್ನು ಪಡೆಯಲು ಆವಶ್ಯಕವಾದ ಆ ಜ್ಞಾನದ ವಿಷಯವಾದ ಭಗವನ್ಮಹಿಮೆಯನ್ನು (ಉತ್ತರಷ್ಟ್ಕದಲ್ಲಿ) ನಿರೂಪಿಸಲಾಗಿದೆ. ಈ ಸಂಬಂಧವು '**ಯೋಗಂ ಯುಂಜನ್..... ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು**'= '(ಕರ್ಮ ಮತ್ತು ಧ್ಯಾನ ರೂಪವಾದ) ಯೋಗವನ್ನು ಅನುಷ್ಠಾನ ಮಾಡುತ್ತ ನನ್ನನ್ನು ಸಮಗ್ರವಾಗಿ ಹೇಗೆ ತಿಳಿಯಬಲ್ಲೆಯೋ ಅದನ್ನು ಕೇಳು' ಎಂದು ಮತ್ತೊಂದು ಪ್ರತಿಜ್ಞೆಯನ್ನು ಮಾಡುವುದರಿಂದಲೇ ಸ್ಪಷ್ಟವಾಗುವುದೆಂದು ಶ್ರೋತೃವನ್ನು (ತನ್ನ ಉಪದೇಶವನ್ನು ಕೇಳಲು) ಉತ್ಸುಕನನ್ನಾಗಿ ಮಾಡಲು ಭಗವನ್ಮಹಿಮೆಯನ್ನು ಹೇಳುವುದಕ್ಕೋಸ್ಕರ '**ಮಯಿ**' ಇತ್ಯಾದಿ ಶ್ಲೋಕದಿಂದ ಪ್ರತಿಜ್ಞೆ ಮಾಡುತ್ತಿದ್ದಾನೆ.

**ವಿವರಣೆ–** ಅಸಂಬದ್ಧವಾದ ವಿಷಯಗಳನ್ನು ಕೇಳಲು ವಿವೇಕಿಯಾದ ಶ್ರೋತೃವು ಪ್ರವರ್ತಿಸಲಾರ. ಆದ್ದರಿಂದ ಹಿಂದೆ ಹೇಳಿದ ವಿಷಯಗಳಿಗೂ ಮುಂದೆ ಹೇಳುವ ವಿಷಯಗಳಿಗೂ ಸಂಬಂಧವಿದೆಯೆಂದು ತಿಳಿಸುವುದು ಆವಶ್ಯವಾಗಿದೆ. ಪ್ರಕೃತ, ಪೂರ್ವಷಟ್ಕದಲ್ಲಿ ಜ್ಞಾನ ಸಾಧನವಾದ ಕರ್ಮ ಮತ್ತು ಧ್ಯಾನರೂಪವಾದ ಯೋಗವನ್ನು ನಿರೂಪಿಸಲಾಗಿದೆ. ಉತ್ತರ ಷಟ್ಕದಲ್ಲಿ, ಆ ಯೋಗಾನುಷ್ಠಾನದಿಂದ ಜನಿಸುವ ಜ್ಞಾನದ ವಿಷಯವಾದ ಭಗವನ್ಮಹಿಮೆಯನ್ನು ಹೇಳಲಾಗುವುದು. ಹೀಗೆ, ಹಿಂದಿನ ಷಟ್ಕವು ಕಾರಣವನ್ನು ನಿರೂಪಿಸಿದರೆ ಮುಂದಿನ ಷಟ್ಕವು ಕಾರ್ಯವಾದ ಜ್ಞಾನದ ವಿಷಯವನ್ನು ನಿರೂಪಿಸುವುದು. ಮೊದಲು ಕಾರಣದ ನಿರೂಪಣೆ, ಅನಂತರ ಕಾರ್ಯಕ್ಕೆ ಸಂಬಂಧಿಸಿದ ವಿಷಯದ ನಿರೂಪಣೆ– ಹೀಗೆ ಪೂರ್ವೋತ್ತರ ಷಟ್ಕಗಳು ಪೌರ್ವಾಪರ್ಯವನ್ನು ಪಡೆದಿವೆ . ಹಿಂದೆ ಜ್ಞಾನೋಪಾಯವನ್ನು ಹೇಳುವೆನೆಂದು ಪ್ರತಿಜ್ಞೆ ಮಾಡಿ ಶ್ರೀಕೃಷ್ಣನು ಕರ್ಮ–ಧ್ಯಾನಯೋಗವನ್ನು ನಿರೂಪಿಸಿದ್ದನು. ಈಗ 'ಆ ಯೋಗವನ್ನು ಅನುಷ್ಠಿಸುತ್ತ ಯಾವ ರೀತಿಯಿಂದ ಭಗವಂತನನ್ನು ತಿಳಿಯಬೇಕಾಗಿದೆಯೋ ಅದನ್ನು ಹೇಳುವೆನು' ಎಂಬ ಮತ್ತೊಂದು ಪ್ರತಿಜ್ಞೆ ಮಾಡುವುದರ ಮೂಲಕ ಹಿಂದೆ ಉಪದೇಶಿಸಲಾದ ವಿಷಯಕ್ಕೂ ಮುಂದೆ ಉಪದೇಶಿಸುವ ವಿಷಯಕ್ಕೂ ಇರುವ ಸಂಬಂಧವನ್ನು ಸ್ಪಷ್ಟಪಡಿಸುತ್ತಿದ್ದಾನೆ. ಹೀಗೆ ಪ್ರತಿಜ್ಞೆ ಮಾಡುವುದು ಮುಂದೆ ನಿರೂಪಿಸಲಾಗುವ ವಿಷಯವನ್ನು ಸೂಚಿಸುವ ಮೂಲಕ ಶ್ರೋತೃವಿನಲ್ಲಿ ಕೇಳಲು ಉತ್ಸುಕತೆಯನ್ನೂ ಉಂಟುಮಾಡುವುದು.

**ಮಯಿ ಶ್ರೀಕೃಷ್ಣೇ ಆ ಅತ್ಯಂತಂ ಸಕ್ತಮನಾಃ ಅತೀವಸ್ನೇಹಯುಕ್ತಮನಾಃ**
**ಯೋಗಂ ದ್ವಿರೂಪಂ ಜ್ಞಾನೋಪಾಯಂ ಯುಂಜನ್ನನುತಿಷ್ಠನ್ಮದಾಶ್ರಯಃ**

**ಭಗವಾನೇವ ಮಯಾ ಸರ್ವಂ ಕಾರಯತಿ ಸ ಏವ ಮೇ ಶರಣಂ ತಸ್ಮಿನ್ನೇವಾಹಂ ಸ್ಥಿತ ಇತಿ ಜಾನನ್ನಿತ್ಯರ್ಥಃ । ಅಸಂಶಯಂ ಸಮಗ್ರಮಿತಿ ಕ್ರಿಯಾವಿಶೇಷಣಮ್ । ತವ ಅಸಂಶಯಂ ಸಮಗ್ರಂ ಚ ಯಥಾ ಭವತಿ ತಥಾ ಮಾಂ ಯಥಾ ಯೇನ ಪ್ರಕಾರೇಣ ಜ್ಞಾಸ್ಯತಿ ತಚ್ಛೃಣು । ತತ್ಪ್ರಕಾರಕಜ್ಞಾನಜನಕವಚನಂ ಶ್ರುತ್ವಾ ತತ್ರ ನಿಷ್ಠಾಂ ಕುರ್ವಿತ್ಯರ್ಥಃ । ತದಿತ್ಯಸ್ಯ ತಥೇತಿ ವಾಽರ್ಥಃ ॥ 1 ॥**

**ಅನುವಾದ–** **ಮಯಿ**= (ನನ್ನಲ್ಲಿ ಅಂದರೆ) ಶ್ರೀಕೃಷ್ಣನಲ್ಲಿ, **ಆ**= ಅತ್ಯಂತವಾಗಿ, **ಸಕ್ತಮನಾಃ**= ಅತೀವ ಸ್ನೇಹಯುಕ್ತಮನಸ್ಸುಳ್ಳವನಾಗಿ, **ಯೋಗಂ**= ಎರಡು ವಿಧವಾದ ಜ್ಞಾನ ಸಾಧನವನ್ನು, **ಯುಂಜನ್**= ಅನುಷ್ಠಾನ ಮಾಡುತ್ತ, **ಮದಾಶ್ರಯಃ**= 'ಭಗವಂತನೇ ನನ್ನಿಂದ ಎಲ್ಲವನ್ನು ಮಾಡಿಸುವನು. ಆತನೇ ನನಗೆ ರಕ್ಷಕನು, ಅವನಲ್ಲೇ ನಾನು (ಆಶ್ರಿತನಾಗಿ) ಇರುವೆನು ಎಂದು ತಿಳಿಯುತ್ತ ಎಂದರ್ಥ. '**ಅಸಂಶಯಂ**', '**ಸಮಗ್ರಂ**' ಎಂಬ ಎರಡು ಪದಗಳು ಕ್ರಿಯಾವಿಶೇಷಣವಾಗಿವೆ. ನಿನಗೆ ಸಂಶಯಕ್ಕೆಡೆ ಇಲ್ಲದಂತೆಯೂ ಸಮಗ್ರವಾಗುವಂತೆಯೂ ಹೇಗೆ ಆಗುವುದೋ ಹಾಗೆ, **ಮಾಂ ಯಥಾ**= ನನ್ನನ್ನು ಯಾವ ಪ್ರಕಾರದಿಂದ, **ಜ್ಞಾಸ್ಯಸಿ**= ತಿಳಿಯುವೆಯೋ, **ತತ್ ಶೃಣು**= ಅದನ್ನು ಕೇಳು. ಆ ಪ್ರಕಾರವನ್ನು ಗ್ರಹಿಸುವ ನನ್ನ ಜ್ಞಾನವನ್ನು (ನಿನಗೆ) ಉಂಟುಮಾಡುವ ನನ್ನ ವಚನವನ್ನು ಕೇಳಿ ಆ ವಿಷಯದಲ್ಲಿ ಶ್ರದ್ಧೆಯನ್ನು ಹೊಂದು ಎಂದರ್ಥ. ಅಥವಾ, '**ತತ್**' ಎಂಬ ಪದಕ್ಕೆ '**ತಥಾ**'= ಹಾಗೆ ಎಂದರ್ಥ. ॥ 1 ॥

**ವಿವರಣೆ–** '**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು**' ಎಂಬಲ್ಲಿ '**ಅಸಂಶಯಂ**', '**ಸಮಗ್ರಂ**' ಈ ಪದಗಳನ್ನು '**ಮಾಂ**' ಎಂಬ ಪದವು ಹೇಳುವ ಭಗವಂತನಿಗೆ ವಿಶೇಷಣಗಳನ್ನು ಹೇಳುವ ಪದಗಳೆಂದು ತಿಳಿಯುವ ಸಂಭವವಿದೆ. ಭಾಸ್ಕರಾಚಾರ್ಯರು ತಮ್ಮ ಗೀತಾಭಾಷ್ಯದಲ್ಲಿ ಹೀಗೆಯೇ ವ್ಯಾಖ್ಯಾನ ಮಾಡಿದ್ದಾರೆ. ಈ ವ್ಯಾಖ್ಯಾನದ ಪ್ರಕಾರ 'ಸಂಶಯ ರಹಿತನಾದ, ಪೂರ್ಣನಾದ ನನ್ನನ್ನು ತಿಳಿಯುವ ಪ್ರಕಾರವನ್ನು ನಿನಗೆ ಉಪದೇಶಿಸುತ್ತೇನೆ' ಎಂದು ಶ್ಲೋಕದ ಅಭಿಪ್ರಾಯವಾಗುವುದು. ಆದರೆ, ಪ್ರಕೃತ ಸಂಶಯರಹಿತನೆಂದು ಭಗವಂತನನ್ನು ಹೇಳುವ ಆವಶ್ಯಕತೆ ಕಾಣದು. ಸಮಗ್ರವಾಗಿ ಭಗವಂತನನ್ನು ತಿಳಿಯಲು, ಸ್ವತಃ ಭಗವಂತನನ್ನು ಬಿಟ್ಟು, ಯಾರಿಗೂ ಸಾಧ್ಯವೂ ಇಲ್ಲ. ಕೆಲವರು, '**ಸಮಗ್ರಂ**' ಎಂಬುದನ್ನು ಮಾತ್ರ ಭಗವದ್ವಿಶೇಷಣವಾಗಿ ವ್ಯಾಖ್ಯಾನಿಸುತ್ತಾರೆ. ಪೂರ್ಣವಾಗಿ ಭಗವಂತನನ್ನು ತಿಳಿಯುವುದು ಹೇಗೆ ಸಾಧ್ಯ ? ಎಂಬ ಪ್ರಶ್ನೆ ಅವರಿಗೂ ಅನಿವಾರ್ಯವಾಗಿದೆ. ಈ ಆಕ್ಷೇಪವನ್ನು ಮನಸ್ಸಿನಲ್ಲಿಟ್ಟು ಕೊಂಡೇ ಆಚಾರ್ಯರು ಗೀತಾಭಾಷ್ಯದಲ್ಲಿ '**ಅಸಂಶಯಂ**', '**ಸಮಗ್ರಂ**' ಇವೆರಡು ಭಗವದ್ವಿಶೇಷಣವಲ್ಲ, ಅದರ ಬದಲು ಕ್ರಿಯಾ ವಿಶೇಷಣವೆಂದೇ ಅವೆರಡನ್ನು ಗ್ರಹಿಸಬೇಕು ಎಂದು ತಿಳಿಸಿದ್ದಾರೆ. ಗೀತಾಭಾಷ್ಯದ ಈ ವಾಕ್ಯವನ್ನೇ ಶ್ರೀ ರಾಯರು ಗೀತಾವಿವೃತಿಯಲ್ಲಿ

ಸಂಯೋಜಿಸಿ, ಆಚಾರ್ಯರ ವ್ಯಾಖ್ಯಾನಕೌಶಲ್ಯದ ಬಗ್ಗೆ ನಮ್ಮ ಗಮನ ಸೆಳೆದಿದ್ದಾರೆ. ಆಚಾರ್ಯರ ವ್ಯಾಖ್ಯಾನದ ಪ್ರಕಾರ **'ತವ ಅಸಂಶಯಂ ಸಮಗ್ರಂ ಚ ಯಥಾ ಭವತಿ ತಥಾ ಮಾಂ ಯಥಾ ಜ್ಞಾಸ್ಯಸಿ ತತ್ ಶೃಣು'** ಅಂದರೆ 'ನಿನಗೆ ಸಂಶಯವಿಲ್ಲದಂತೆಯೂ ಸಮಗ್ರವಾಗಿಯೂ ಜ್ಞಾನ ಉಂಟಾಗಲು ನನ್ನನ್ನು (ಭಗವಂತನನ್ನು) ಯಾವ ಪ್ರಕಾರದಿಂದ ತಿಳಿಯಬೇಕೋ ಅದನ್ನು ಕೇಳು' ಎಂದು ಶ್ಲೋಕದ ತಾತ್ಪರ್ಯವಾಗುವುದು. ಇಲ್ಲಿ **'ಜ್ಞಾನಭವನ'** ಅಂದರೆ ಜ್ಞಾನದ ಉತ್ಪತ್ತಿ ಎಂಬ ಕ್ರಿಯೆಗೆ **'ಅಸಂಶಯಂ'** ಮತ್ತು **'ಸಮಗ್ರಂ'** ಇವೆರಡು ವಿಶೇಷಣಗಳಾಗಿವೆ. ಶ್ರೋತೃವಿಗೆ ಭಗವಂತನ ಜ್ಞಾನದ ಉತ್ಪತ್ತಿಯು ಸಂಶಯಕ್ಕೆಡೆ ಇಲ್ಲದಂತೆಯೂ, ಅವನ ಯೋಗ್ಯತೆಗೆ ಅನುಗುಣವಾಗಿ ಸಮಗ್ರವಾಗಿಯೂ ಆಗಲು ಯಾವ ವಿಶೇಷಣಗಳಿಂದ ಯುಕ್ತನೆಂದು ಭಗವಂತನನ್ನು ತಿಳಿಯಬೇಕೊ ಆ ವಿಶೇಷಣಸಹಿತನಾದ ಭಗವಂತನ ಜ್ಞಾನ ಉಂಟಾಗಲು ಕಾರಣವಾದ ನನ್ನ ವಚನಗಳನ್ನು ಕೇಳು ಎಂದು ಶ್ರೀಕೃಷ್ಣನು ಹೇಳುತ್ತಿರುವನು ಎಂದು ತಾತ್ಪರ್ಯ.

**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥ 2 ॥**

**ಅರ್ಥ–** ಹೇ ಪಾರ್ಥ ! ನನ್ನ ವಿಶೇಷ ಮಹಿಮೆ ಸಹಿತವಾದ ಸಾಮಾನ್ಯ ಮಹಿಮೆಯನ್ನು– ನೀನು ತಿಳಿಯಬಹುದಾದ ಎಲ್ಲವನ್ನೂ ನಾನು ಹೇಳುವೆನು. ಆ ಮಹಿಮೆಯನ್ನು ತಿಳಿದ ಬಳಿಕ, ನಾನು ಹೇಳಿದ ವಿಷಯದಲ್ಲಿ ಪುನಃ ನಿನಗೆ ತಿಳಿಯಬೇಕಾದದ್ದು ಬೇರೇನೂ ಉಳಿದಿರುವುದಿಲ್ಲ.

**ಶ್ರವಣಂ ಪ್ರವಚನಾಧೀನಮಿತ್ಯಾಹ– ಜ್ಞಾನಮಿತಿ ॥ ಜ್ಞಾನವಿಜ್ಞಾನಶಬ್ದೌ ಕರ್ಮಾರ್ಥಲ್ಯುಡಂತೌ । ಹೇ ಪಾರ್ಥ ತೇ ತುಭ್ಯಂ ಇದಂ ಮದೀಯಂ ವಿಜ್ಞಾನಸಹಿತಂ ಜ್ಞಾನಂ ವಿಶೇಷೇಣ ಜ್ಞಾತವ್ಯಸಹಿತಂ ಜ್ಞಾತವ್ಯಂ ಮಾಹಾತ್ಮ್ಯಂ ಸಾಮಾನ್ಯಂ ವಿಶೇಷಮಾಹಾತ್ಮ್ಯಂ ಚ ವಕ್ಷ್ಯಾಮೀತ್ಯರ್ಥಃ । ಅಶೇಷತ ಇತ್ಯಸ್ಯ ಯಾವದರ್ಜುನಯೋಗ್ಯಂ ತಾವನ್ಮಧ್ಯೇ ಶಿಷ್ಯಮಾಣಮಕೃತ್ವೇತ್ಯರ್ಥಃ । ವಕ್ಷ್ಯ- ಮಾಣಂ ಸ್ತೌತಿ– ಯದಿತಿ ॥ ಯನ್ಮಾಹಾತ್ಮ್ಯಂ ಜ್ಞಾತ್ವಾ ಭೂಯಃ ಪುನರನ್ಯದ್ ಜ್ಞಾತವ್ಯಮಿಹ ಮದುಕ್ತೇಽರ್ಥೇ ನಾವಶಿಷ್ಯತೇ ಅವಶಿಷ್ಟಂ ನಾಸ್ತೀತಿ ॥ 2 ॥**

**ಅನುವಾದ –** ನೀನು ಮಾಡಬೇಕಾದ ಶ್ರವಣವು ನನ್ನ ಪ್ರವಚನಕ್ಕೆ ಅಧೀನವಾದದ್ದು ಎಂದು ಶ್ರೀಕೃಷ್ಣನು ಅರ್ಜುನನಿಗೆ **'ಜ್ಞಾನಂ'** ಇತ್ಯಾದಿ ಶ್ಲೋಕದಿಂದ ಹೇಳುತ್ತಿದ್ದಾನೆ. ಜ್ಞಾನ, ವಿಜ್ಞಾನ ಶಬ್ದಗಳು ಕರ್ಮಾರ್ಥಕವಾದ 'ಲ್ಯುಟ್' ಪ್ರತ್ಯಯದಿಂದ ಕೊನೆಗೊಳ್ಳುವ ಪದಗಳಾಗಿವೆ.

ಹೇ ಪಾರ್ಥ ! **ತೇ**= ನಿನಗೆ, **ಇದಂ**= ನನ್ನ ಈ , **ವಿಜ್ಞಾನ ಸಹಿತಂ ಜ್ಞಾನಂ**= ವಿಶೇಷವಾಗಿ ತಿಳಿಯಬೇಕಾದ ವಿಷಯದಿಂದ ಸಹಿತವಾದ ಜ್ಞಾತವ್ಯ ವಿಷಯವನ್ನು ಸಾಮಾನ್ಯ ಮತ್ತು ವಿಶೇಷ ಮಾಹಾತ್ಮ್ಯವನ್ನು ಹೇಳುತ್ತೇನೆ ಎಂದು ಅರ್ಥ. '**ಅಶೇಷತಃ**' ಎಂಬ ಪದಕ್ಕೆ ' ಅರ್ಜುನನು ಎಷ್ಟು ತಿಳಿಯಲು ಯೋಗ್ಯವಾದದ್ದೋ ಅದರಲ್ಲಿ ಉಳಿಯುವಂತೆ ಮಾಡದೆ' ಎಂದು ಅರ್ಥ.

ಮುಂದೆ ತಾನು ಹೇಳುವ ವಿಷಯವನ್ನು (ಶ್ರೀಕೃಷ್ಣನು) 'ಯತ್' ಎಂಬ (ಶ್ಲೋಕಾರ್ಥದಿಂದ) ಪ್ರಶಂಸಿಸುತ್ತಿದ್ದಾನೆ. **ಯತ್ ಜ್ಞಾತ್ವಾ** = ಯಾರ ಮಾಹಾತ್ಮ್ಯವನ್ನು ಕೇಳಿದ ನಂತರ, **ಭೂಯಃ**= ಪುನಃ, **ಅನ್ಯದ್ ಜ್ಞಾತವ್ಯಂ**= ಬೇರೆ ತಿಳಿಯಬೇಕಾದ ವಿಷಯವು, ಇಹ= ನಾನು ಹೇಳಿದ ವಿಷಯದಲ್ಲಿ, **ನ ಅವಶಿಷ್ಯತೆ** = ಉಳಿದಿರುವುದಿಲ್ಲ ಎಂದು. ॥ 2 ॥

**ವಿವರಣೆ** – '**ಜ್ಞಾನವಿಜ್ಞಾನಶಬ್ದೌ ಕರ್ಮಾರ್ಥಲ್ಯುಡಂತೌ**'– ಜ್ಞಾ ಧಾತುವಿಗೆ 'ಲ್ಯುಟ್' ಪ್ರತ್ಯಯವನ್ನು ಸೇರಿಸಿದಾಗ, ಆ ಪ್ರತ್ಯಯಕ್ಕೆ '**ಅನ**' ಎಂಬ ಶಬ್ದವು ಆದೇಶವಾಗಿ ಬಂದು '**ಜ್ಞಾನ**' ಎಂಬ ರೂಪ ಸಿದ್ಧವಾಗುವುದು. 'ಲ್ಯುಟ್' ಪ್ರತಯ್ಯಕ್ಕೆ ಕರ್ಮ, ಭಾವ, ಕರಣ, ಅಧಿಕರಣ – ಹೀಗೆ ಅನೇಕಾರ್ಥಗಳಿದ್ದು, ಪ್ರಕೃತ, '**ಕರ್ಮ**' ಎಂಬ ಅರ್ಥದಲ್ಲಿ 'ಕರ್ಮಣಿ ಲ್ಯುಟ್' ಎಂಬ ಪಾಣಿನಿಸೂತ್ರದ ಪ್ರಕಾರ 'ಲ್ಯುಟ್' ಪ್ರತ್ಯಯವು ಬಂದಿದೆ ಎಂದು ಭಾವ. ಕರ್ಮ ಎಂದರೆ ವಿಷಯ ಎಂದರ್ಥ. ಆದ್ದರಿಂದ, 'ಜ್ಞಾನ' ಎಂಬ ಪದಕ್ಕೆ ಜ್ಞಾತವ್ಯ ಜ್ಞಾನವಿಷಯ ಎಂದು ಅರ್ಥ ವಾಗುವುದೆಂದು ಅಭಿಪ್ರಾಯ.

## ಜ್ಞಾನಲಾಭ ಸುಲಭವಲ್ಲ

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ 3 ॥**

**ಅರ್ಥ**– ಸಾವಿರ ಮನುಷ್ಯರಲ್ಲಿ ಒಬ್ಬ ಪುಣ್ಯಶಾಲಿ ಜ್ಞಾನಕ್ಕೋಸ್ಕರ ಯತ್ನಿಸುತ್ತಾನೆ. ಜ್ಞಾನಕ್ಕೋಸ್ಕರ ಪ್ರಯತ್ನಿಸುವವರಲ್ಲಿ ಒಬ್ಬ ಮಾತ್ರ ಜ್ಞಾನವನ್ನು ಹೊಂದಬಲ್ಲ. ಜ್ಞಾನವನ್ನು ಪಡೆದವರ ಮಧ್ಯೆ ಒಬ್ಬ ಮಾತ್ರ ನನ್ನನ್ನು ಯಥಾವತ್ತಾಗಿ ತಿಳಿಯುವನು.

**ಪ್ರತಿಜ್ಞಾತೇ ಜ್ಞಾನೇ ಆದರಜನನಾಯ ತಸ್ಯ ದೌರ್ಲಭ್ಯಮಾಹ- ಮನುಷ್ಯಾಣಾಮಿತಿ ॥ ಕಶ್ಚಿದೇವ ಪುಣ್ಯವಾನ್ ಪುರುಷಃ ಜ್ಞಾನಾಯ ಯತತಿ ಯತತೇ । ಯತತಾಂ ಜ್ಞಾನಾರ್ಥಂ ಯತಮಾನಾನಾಮಪಿ ಮಧ್ಯೇ ಕಶ್ಚಿದೇವ ಸಿದ್ಧಿಮಾನ್ ಭವತೀತಿ ಯೋಜ್ಯಮ್ । ಸಿದ್ಧಾನಾಂ ಜ್ಞಾನಿನಾಮಪಿ ಮಧ್ಯೆ ಕಶ್ಚಿದೇವ ತತ್ತ್ವತೋ ಮಾಂ ವೇತ್ತಿ ಯಥಾವಜ್ಜಾನಾತಿ ॥ 3 ॥**

**ಅನುವಾದ-** (ಹೇಳುವೆನೆಂದು) ಪ್ರತಿಜ್ಞೆ ಮಾಡಿದ ಜ್ಞಾತವ್ಯ ವಿಷಯದಲ್ಲಿ ಆದರ ಹುಟ್ಟಿಸಲು ಅದು ದುರ್ಲಭವಾದುದೆಂದು 'ಮನುಷ್ಯಾಣಾಂ' ಇತ್ಯಾದಿ ಶ್ಲೋಕದಿಂದ ಶ್ರೀಕೃಷ್ಣನು ಹೇಳುತ್ತಿದ್ದಾನೆ.

ಯಾವನೋ ಒಬ್ಬ ಪುಣ್ಯಶಾಲಿಯಾದ ಪುರುಷನು , **ಸಿದ್ಧಯೇ=** ಜ್ಞಾನಕ್ಕೋಸ್ಕರ, **ಯತತಿ=** ಯತ್ನಿಸುತ್ತಾನೆ. **ಯತತಾಂ=** ಜ್ಞಾನಕ್ಕೋಸ್ಕರ ಯತ್ನಿಸುವವರ ಮಧ್ಯದಲ್ಲೂ, 'ಯಾವನೋ ಒಬ್ಬ ಮಾತ್ರವೇ ಜ್ಞಾನವನ್ನು ಪಡೆಯುತ್ತಾನೆ' ಎಂಬ ವಾಕ್ಯವನ್ನು ಇಲ್ಲಿ ಯೋಜಿಸಬೇಕು. **ಸಿದ್ಧಾನಾಂ=** ಜ್ಞಾನಿಗಳ ಮಧ್ಯದಲ್ಲೂ ಯಾವನೋ ಒಬ್ಬ ಮಾತ್ರ, **ತತ್ತ್ವತಃ ಮಾಂ ವೇತ್ತಿ=** ಯಥಾವತ್ತಾಗಿ ನನ್ನನ್ನು ತಿಳಿಯುತ್ತಾನೆ. ॥ 3 ॥

## ನನ್ನ ಅಧೀನವಾದ ಪ್ರಕೃತಿ ಎಂಟು ವಿಧವಾಗಿದೆ

**ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ 4 ॥**

**ಅರ್ಥ–** ಭೂಮಿ, ಜಲ, ಅಗ್ನಿ , ವಾಯು, ಆಕಾಶ, ಮನಸ್ಸು , ಬುದ್ಧಿ , ಮತ್ತು ಅಹಂಕಾರ– ಹೀಗೆ ಅಧೀನದಲ್ಲಿರುವ ಪ್ರಕೃತಿಯು ಎಂಟು ವಿಧವಾಗಿದೆ.

ಏವಮುಪೋದ್ಘಾತಮುಕ್ತ್ವಾಽಧುನಾ ಪ್ರಥಮಪ್ರತಿಜ್ಞಾತಂ ಜ್ಞಾನಪದೋಕ್ತಂ ಜ್ಞಾತವ್ಯಂ ತಾವದಾಹ– **ಭೂಮಿರಿತ್ಯಾದಿ ಶ್ಲೋಕಚತುಷ್ಟಯೇನ ।** ಭೂಮ್ಯಾದಿ-ಪಂಚಮಹಾಭೂತಾನಿ ಮನಸ್ತತ್ತ್ವಬುದ್ಧಿತತ್ತ್ವೇ ಚ । ಅಹಂಕಾರಪದೇನ ಮಹತ್ತತ್ತ್ವಮುಪಲಕ್ಷಣೀಯಮ್ । ಅಹಂಕಾರಶ್ಚೇತಿ ಚಶಬ್ದಾನ್ವಯಃ । ಇತ್ಯೇವಂ ಮದಧೀನಾ ಪ್ರಕೃತಿರಷ್ಟಧಾ ಭಿನ್ನಾ । ಉದ್ದಿಷ್ಟಾಪೇಕ್ಷಯಾ ಅಷ್ಟಧೇತ್ಯುಕ್ತಿಃ। ಉಪಲಕ್ಷಿತಾಪೇಕ್ಷಯಾ ತು ನವಧೇತಿ ಜ್ಞೇಯಮ್ । ಮತ್ಪ್ರೇರಿತಾ ಪ್ರಕೃತಿಃ ಪೃಥಿವ್ಯಾದಿಕಾರ್ಯರೂಪೇಣೈವ ಭಿನ್ನೇತ್ಯರ್ಥಃ ॥ 4 ॥

**ಅನುವಾದ–** ಹೀಗೆ ಉಪೋದ್ಘಾತವನ್ನು ಹೇಳಿ, ಈಗ ಮೊದಲು ಪ್ರತಿಜ್ಞೆ ಮಾಡಿದ, ಜ್ಞಾನಪದವು ಹೇಳುವ ಜ್ಞಾತವ್ಯ ವಿಷಯವನ್ನು , ಶ್ರೀಕೃಷ್ಣನು 'ಭೂಮಿ' ಇತ್ಯಾದಿ ನಾಲ್ಕು ಶ್ಲೋಕಗಳಿಂದ ಮೊದಲು ಹೇಳುತ್ತಿದ್ದಾನೆ.

ಪೃಥಿವೀ ಮೊದಲಾದ ಪಂಚಮಹಾಭೂತಗಳು , ಮನಸ್ತತ್ತ್ವ ಮತ್ತು ಬುದ್ಧಿತತ್ತ್ವಗಳು,– ಅಹಂಕಾರಪದದಿಂದ ಲಕ್ಷಣಾವೃತ್ತಿಯ ಮೂಲಕ ಮಹತ್ತತ್ತ್ವವನ್ನು ಕೂಡ ಗ್ರಹಿಸಬೇಕು–

'ಅಹಂಕಾರಶ್ಚ' ಎಂಬುದಾಗಿ ಅಹಂಕಾರಪದದೊಂದಿಗೆ ಚ ಶಬ್ದವನ್ನು ಅನ್ವಯಿಸಬೇಕು- ಹೀಗೆ (ಮೇ)= ನನಗೆ ಅಧೀನವಾದ ಪ್ರಕೃತಿಯು ಎಂಟು ವಿಧವಾಗಿ ಭಿನ್ನವಾಗಿದೆ. ಶಬ್ದತಃ ಉಲ್ಲೇಖ ಮಾಡಿದ ದೃಷ್ಟಿಯಿಂದ ಪ್ರಕೃತಿಯು ಎಂಟು ವಿಧವಾದುದೆಂದು ಹೇಳಲಾಗಿದೆ. (ಅಹಂಕಾರ ಪದದಿಂದ) ಉಪಲಕ್ಷಣಯಾ ಹೇಳಿದುದನ್ನೂ ಗ್ರಹಿಸಿದಲ್ಲಿ ಪ್ರಕೃತಿಯು ಒಂಬತ್ತು ವಿಧ ವಾದದ್ದೆಂದು ತಿಳಿಯಬೇಕು . ನನ್ನಿಂದ ಪ್ರೇರಿತವಾದ ಪ್ರಕೃತಿಯು ಕಾರ್ಯರೂಪದಿಂದ ಮಾತ್ರ ನಾನಾವಿಧವಾಗಿದೆ ಎಂದು ಅರ್ಥ. ॥ 4 ॥

**ವಿವರಣೆ-** ಪ್ರಕೃತಿಯ ಎಂಟು ಪ್ರಭೇದಗಳನ್ನು ಪರಿಗಣಿಸುವಾಗ, ಗೀತೆಯಲ್ಲಿ ಮಹತ್ತತ್ತ್ವದ ಉಲ್ಲೇಖವೇ ಇಲ್ಲ. ಆದ್ದರಿಂದ ಮಹತ್ತತ್ತ್ವವೆಂಬ ತತ್ತ್ವವೇ ಇಲ್ಲವೇನೋ ಎಂಬ ಶಂಕೆ ಮಾಡುವುದು ಸಹಜ. ಗೀತಾಭಾಷ್ಯದಲ್ಲಿ, ಮಹತ್ತತ್ತ್ವವು ಅಹಂಕಾರತತ್ತ್ವದಲ್ಲೇ ಅಂತರ್ಭೂತ ವಾಗಿದೆ ಎಂದು ಹೇಳಲಾಗಿದೆ. ಅಹಂಕಾರತತ್ವವು ಮಹತ್ತತ್ತ್ವದ ಕಾರ್ಯವಾಗಿದ್ದು, ಕಾರ್ಯ-ವಾಚಕವಾದ ಅಹಂಕಾರಶಬ್ದವು ಲಕ್ಷಣಾವೃತ್ತಿಯಿಂದ ಕಾರಣವಾದ ಮಹತ್ತತ್ತ್ವವನ್ನೂ ಹೇಳುವುದೆಂದು ಗೀತಾಭಾಷ್ಯದ ಆಶಯವೆಂದು ಪ್ರಮೇಯದೀಪಿಕಾದಲ್ಲಿ ಸ್ಪಷ್ಟಪಡಿಸಲಾಗಿದೆ. 'ಅಹಂಕಾರಪದೇನ ಮಹತ್ತತ್ತ್ವಮ್ ಉಪಲಕ್ಷಣೀಯಮ್' ಎಂಬ ವಿವೃತಿಯ ವಾಕ್ಯವು ಭಾಷ್ಯ-ಪ್ರಮೇಯ-ದೀಪಿಕೆಗಳ ಅಭಿಪ್ರಾಯದ ಸಂಗ್ರಹರೂಪವಾಗಿದೆ.

## ಜಡಪ್ರಕೃತಿ-ಚೇತನರಿಗೆ ಚೈತನ್ಯ ನೀಡುವ ಶ್ರೀದೇವಿ (ಚಿತ್‌ಪ್ರಕೃತಿ) ಇವರಿಗಿಂತ ಉತ್ತಮಳು

**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ಬುದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥ 5 ॥**

**ಅರ್ಥ-** ಹೇ ಮಹಾಬಾಹೋ ಅರ್ಜುನ ! ಈಗ ಹೇಳಿದ ಜಡಪ್ರಕೃತಿ ಮತ್ತು ಜೀವರು ಅಧಮರು. ಈ ಜಡಪ್ರಕೃತಿ ಮತ್ತು ಜೀವರಿಂದ ಭಿನ್ನಳಾದ, ಎಲ್ಲ ಜೀವರಿಗೂ ಪ್ರಾಣಧಾರಕ ಳಾಗಿರುವ, ಈ ಬ್ರಹ್ಮಾದಿಜಗತ್ತಿಗೆ ಧಾರಕಗಳಾಗಿರುವ ನನಗೆ ಅಧೀನಳಾಗಿರುವ ಚಿತ್‌ಪ್ರಕೃತಿ ಯನ್ನು ಮತ್ತು ಮುಕ್ತಜೀವರನ್ನು ಈ ಜಡಪ್ರಕೃತಿ ಮತ್ತು ಜೀವರಿಗಿಂತ ಉತ್ತಮರೆಂದು ತಿಳಿ.

**ನ ಕೇವಲಂ ಜಡಪ್ರಕೃತಿರೇವ ಸ್ವಕಾರ್ಯೇಣ ಸಹ ಮದ್ವಶಾ ಕಿಂತು ಬ್ರಹ್ಮಾದಿ-ಜಗನ್ಮಾತಾ ಚಿತ್ಪ್ರಕೃತಿರಪೀತ್ಯಾಹ- ಅಪರೇತಿ ॥ ಯದ್ವಾ ಹರೇಃ ಪರತ್ವಂ ವಕ್ತುಂ ತದುಪಯೋಗಿತಯಾ ಪರಾವರವಸ್ತುನೀ ಆಹ- ಅಪರೇತಿ ॥**

**ಅನುವಾದ-** ಕೇವಲ ಜಡಪ್ರಕೃತಿ ಮಾತ್ರ ತನ್ನ ಕಾರ್ಯವಾದ ಮಹತ್ತತ್ತ್ವ

ಮೊದಲಾದವುಗಳೊಡನೆ ನನ್ನ ಅಧೀನವಾಗಿದೆ ಎಂದಷ್ಟೇ ಅಲ್ಲ. ಬ್ರಹ್ಮಾದಿಜಗತ್ತಿಗೆ ಮಾತೆಯಾಗಿರುವ ಚಿತ್ಪ್ರಕೃತಿಯೂ ಕೂಡ ನನ್ನ ಅಧೀನಳಾಗಿದ್ದಾಳೆ ಎಂದು ಶ್ರೀಕೃಷ್ಣನು '**ಅಪರಾ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ. ಅಥವಾ, ಶ್ರೀಹರಿಗೆ ಶ್ರೇಷ್ಠತ್ವವನ್ನು ಹೇಳಲು ಅದಕ್ಕೆ ಉಪಯೋಗವಾಗುವಂತೆ ಪರಾಪರವಸ್ತುಗಳನ್ನು ಶ್ರೀಕೃಷ್ಣನು '**ಅಪರಾ**' ಎಂಬ ಶ್ಲೋಕದಲ್ಲಿ ಹೇಳುತ್ತಿದ್ದಾನೆ.

**ಇಯಂ ಪ್ರಾಗುಕ್ತಾ ಜಡಪ್ರಕೃತಿಃ । ಜೀವಾ ಅಪ್ಯುಪಲಕ್ಷ್ಯಂತೇ । ಜಡಪ್ರಕೃತಿಃ ಜೀವಾಶ್ಚಾಪರಾಃ ಅಧಮಾಃ । ಇತಸ್ತು ಜಡಪ್ರಕೃತ್ಯಾದಿತಸ್ತು ಅನ್ಯಾಂ ಜೀವ-ಭೂತಾಮ್ । ಸರ್ವಜೀವದೇಹೇಷು ಸ್ಥಿತ್ವಾ ತದೀಯಾನ್ ಪ್ರಾಣಾನ್ ತದ್ದೇ-ಹೇಷು ಧಾರಯತೀತಿ ಜೀವೇತ್ಯುಕ್ತಾ । ಜೀವ ಪ್ರಾಣಧಾರಣ ಇತಿ ಧಾತೋಃ । ಸಾ ಚ ಸಾ ಭೂತಾ ಚ ಸರ್ವದಾ ವಿದ್ಯಮಾನಾ ಚ ಜೀವಭೂತಾ ತಾಮ್ । ಭೂ ಸತ್ತಾಯಾಮಿತಿ ಧಾತೋಃ । ಪ್ರಾಣಧಾರಕತ್ವೇನ ಸರ್ವದಾ ವಿದ್ಯಮಾನಾ-ಮಿತ್ಯರ್ಥಃ । ಮೇ ಮದಧೀನಾಂ ಪ್ರಕೃತಿಂ ಚಿತ್ಪ್ರಕೃತಿಮ್। ಮುಕ್ತಾ ಅಪ್ಯುಪ-ಲಕ್ಷ್ಯಂತೇ । ಶ್ರಿಯಂ ಮುಕ್ತಾಂಶ್ಚ ಪರಾಂ ಪರಾನ್ ಉತ್ತಮಾನ್ ವಿದ್ಧಿ । ಪರತ್ವೇ ಹೇತುಃ ಯಯೇತಿ । ಶ್ರಿಯೇತ್ಯರ್ಥಃ । ಮುಕ್ತಾನಾಂ ಪರಾಭಾಸತ್ವಾತ್ ಯಯೇತ್ಯೇವೋಕ್ತಮ್ । ಇದಂ ಬ್ರಹ್ಮಾದಿಜಗತ್ ಧಾರ್ಯತ ಇತಿ ॥ 5 ॥**

**ಅನುವಾದ–** **ಇಯಂ**= ಹಿಂದೆ ಹೇಳಿದ ಜಡಪ್ರಕೃತಿಯು. ಜೀವರನ್ನೂ ಇಲ್ಲಿ ಉಪ-ಲಕ್ಷಣಯಾ ಗ್ರಹಿಸಬೇಕು. ಜಡಪ್ರಕೃತಿ ಮತ್ತು ಜೀವರು, **ಅಪರಾಃ**= ಅಧಮರು. **ಇತಃ ತು**= ಈ ಜಡಪ್ರಕೃತಿ ಮೊದಲಾದವರಿಂದ, **ಅನ್ಯಾಂ**= ಭಿನ್ನಳಾದ, **ಜೀವಭೂತಾಂ**= ಎಲ್ಲ ಜೀವರ ದೇಹಗಳಲ್ಲಿದ್ದು ಅವರ ಪ್ರಾಣಗಳನ್ನು ಅವರ ದೇಹಗಳಲ್ಲಿ ಧಾರಣ ಮಾಡುವುದರಿಂದ ಜೀವ ಎಂದೆನಿಸಿಕೊಳ್ಳುವಳು. '**ಜೀವ ಪ್ರಾಣಧಾರಣೇ**' ಎಂದು ಪ್ರಾಣಧಾರಣೆಯ ಅರ್ಥವನ್ನು ಹೇಳುವ ಜೀವ ಧಾತುವಿನಿಂದ ಜೀವ ಶಬ್ದವು ನಿಷ್ಪನ್ನವಾಗಿದೆ. **ಸಾ ಚ ಸಾ ಭೂತಾ ಚ**= ಜೀವಳಾಗಿದ್ದು ಭೂತಳಾಗಿರುವವಳು= ಸರ್ವದಾ ಇರತಕ್ಕವಳು, ಆದ್ದರಿಂದಲೇ ಅವಳು (ಚಿತ್ಪ್ರಕೃತಿಯು) ಜೀವಭೂತಳು, ಅವಳನ್ನು , **ಭೂ ಸತ್ತಾಯಾಂ** ಎಂಬ ಧಾತುವಿನಿಂದ ನಿಷ್ಪನ್ನವಾಗಿರುವ ಭೂತಶಬ್ದವು 'ಪ್ರಾಣಧಾರಕಳಾಗಿ ಸರ್ವದಾ ಇರತಕ್ಕವಳು ಎಂಬ ಅರ್ಥವನ್ನು ಪಡೆದಿದೆ. **ಮೇ**= ನನಗೆ ಅಧೀನಳಾದ, **ಪ್ರಕೃತಿಂ**= ಚಿತ್ಪ್ರಕೃತಿಯನ್ನು. ಇಲ್ಲಿ ಮುಕ್ತರನ್ನು ಉಪಲಕ್ಷಣಯಾ ತೆಗೆದುಕೊಳ್ಳಬೇಕು. ಲಕ್ಷ್ಮಿಯನ್ನು ಮತ್ತು ಮುಕ್ತಜೀವರನ್ನು **ಪರಾಂ**= **ಪರಾನ್**= ಉತ್ತಮರೆಂದು, **ವಿದ್ಧಿ** = ತಿಳಿ. ಚಿತ್ಪ್ರಕೃತಿಯ ಶ್ರೇಷ್ಠತ್ವಕ್ಕೆ ಕಾರಣವನ್ನು '**ಯಯಾ**' ಎಂಬ ಶ್ಲೋಕಖಂಡದಿಂದ ಹೇಳಲಾಗಿದೆ. **ಯಯಾ**= (ಯಾವ) ಶ್ರೀದೇವಿಯಿಂದ ಎಂದು ಅರ್ಥ.

ಮುಕ್ತಚೇತನರು ಪರಾಭಾಸರಾದ್ದರಿಂದ '**ಯಯಾ**' ಎಂದಿಷ್ಟೇ ಹೇಳಲಾಗಿದೆ. **ಇದಂ**= ಈ ಬ್ರಹ್ಮಾದಿ ಜಗತ್ತು , **ಧಾರ್ಯತೇ**= ಧರಿಸಲ್ಪಡುತ್ತದೆ ಎಂದು.

**ವಿವರಣೆ**- ಮುಕ್ತಚೇತನರು ಸ್ವರೂಪಭೂತವಾದ ನಿತ್ಯಸುಖವನ್ನು ಅನುಭವಿಸು-ವವರಾದ್ದರಿಂದ ಶ್ರೀತತ್ತ್ವದಂತೆ ಅವರನ್ನು **ಪರರು** = ಶ್ರೇಷ್ಠರೆಂದೇ ಪರಿಗಣಿಸಬೇಕಲ್ಲವೇ! ಎಂಬ ಪ್ರಶ್ನೆ ಬರಬಹುದು. ಆದರೆ ಮುಕ್ತಿಯ ಮುಂಚೆ ದುಃಖಸಂಬಂಧವಿರುವುದರಿಂದ ನಿತ್ಯ ಮುಕ್ತಳಾದ ಶ್ರೀದೇವಿಯಂತೆ ಅವರನ್ನು ಪರರೆನ್ನಲಾಗದು. ಮುಕ್ತರಾಗಿದ್ದು ದುಃಖಸಂಬಂಧವನ್ನು ಲವಲೇಶವೂ ಪಡೆಯದಿರುವ ಅವರನ್ನು ಅವರರೆಂದೂ ಹೇಳಲಾಗದು. ಆದುದರಿಂದ ಅವರನ್ನು 'ಪರಾಭಾಸರು,' ಎಂದು ಹೇಳಲಾಗಿದೆ.

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥ 6 ॥**

**ಅರ್ಥ** – ಹೇ ಅರ್ಜುನ ! ಶರೀರ, ಇಂದ್ರಿಯ ಮತ್ತು ವಿಷಯಗಳಿಂದ ಸಹಿತವಾಗಿ ಎಲ್ಲಾ ಜೀವಸಮೂಹವು ಈ ಜಡ-ಚೇತನಪ್ರಕೃತಿಗಳಿಂದ ಜನಿಸಿವೆ. ನಾನು ಸಮಸ್ತ ಜಗತ್ತಿನ ಸೃಷ್ಟಿಕರ್ತನೂ ಸಂಹಾರಕರ್ತನೂ ಆಗಿರುವೆನು.

**ನನು ದೇಹೇಂದ್ರಿಯಾದೇರಪಿ ಸತ್ವೇನ ಪ್ರಕೃತ್ಯೋರೇವ ಈಶಾಧೀನತ್ವ-ಮಹಿಮೋಕ್ತಿಃ ಕಥಮಿತ್ಯತೋ ದೇಹಾದಿಸರ್ವಕಾರ್ಯಜಾತಸ್ಯ ಪ್ರಕೃತ್ಯೋರೇ-ವಾಂತರ್ಭಾವ ಇತಿ ದರ್ಶಯಿತುಮಾಹ- ಏತದಿತಿ ॥ ಶರೀರೇಂದ್ರಿಯ-ವಿಷಯಲಕ್ಷಣಕಾರ್ಯಸಹಿತಾನಿ ಜೀವಜಾತರೂಪಭೂತಾನಿ ಸರ್ವಾಣ್ಯೇತ-ದ್ಯೋನೀನಿ ಜಡಾಜಡಪ್ರಕೃತಿಕಾರಣಕಾನಿ ಯಥಾಸಂಭವಂ ತದುತ್ಪನ್ನಾನೀತ್ಯುಪ-ಧಾರಯ ಜಾನೀಹಿ ।**

**ಅನುವಾದ** - ದೇಹ, ಇಂದ್ರಿಯಗಳು ಮೊದಲಾದ ಪದಾರ್ಥಗಳಿರುವಾಗ ಕೇವಲ ಎರಡು ವಿಧವಾದ ಪ್ರಕೃತಿಗಳು ಭಗವದಧೀನವೆಂದು ಭಗವಂತನ ಮಹಿಮೆಯನ್ನು ಹೇಳಿದ್ದು ಹೇಗೆ ಎಂಬ ಶಂಕೆಗೆ ದೇಹ ಮೊದಲಾದ ಎಲ್ಲ ಜನ್ಯಪದಾರ್ಥ ಸಮೂಹವು ಎರಡು ಪ್ರಕೃತಿಗಳಲ್ಲೇ ಅಂತರ್ಭಾವ ಹೊಂದಿರುವುದೆಂದು ಸಮಾಧಾನವನ್ನು ಶ್ರೀಕೃಷ್ಣನು '**ಏತತ್**' ಎಂಬ ಶ್ಲೋಕದಿಂದ ತಿಳಿಸುತ್ತಿದ್ದಾನೆ. ಶರೀರ, ಇಂದ್ರಿಯಗಳು, ವಿಷಯಪದಾರ್ಥಗಳು ಎಂಬ ಜನ್ಯವಸ್ತುಗಳಿಂದ ಸಹಿತವಾದ ಜೀವಸಮೂಹ ರೂಪವಾದ ಎಲ್ಲ ಭೂತಗಳೂ, **ಏತದ್ಯೋನೀನಿ**= ಜಡ - ಚೇತನರೂಪವಾದ ಪ್ರಕೃತಿಗಳನ್ನು ಕಾರಣಗಳನ್ನಾಗಿ ಪಡೆದಿದ್ದು ಯಾವ ವಸ್ತುವಿಗೆ ಯಾವ ರೀತಿಯ

ಉತ್ಪತ್ತಿ ಇರಲು ಸಾಧ್ಯವೋ ಅದಕ್ಕನುಗುಣವಾಗಿ ಆ ಪ್ರಕೃತಿಗಳಿಂದ ಉತ್ಪತ್ತಿಯನ್ನು ಪಡೆದಿವೆ ಎಂದು, ಉಪಧಾರಯ = ತಿಳಿ.

**ಪೂರ್ವಂ ಪ್ರಕೃತ್ಯೋರವರತ್ವಂ ಪರತ್ವಂ ಚ ವಾಕ್ಯಭೇದೇನೋಕ್ತ್ವಾ ಮೇ ಇತಿ ಸ್ವವಶತ್ವಂ ಚೋಕ್ತ್ವಾ 'ಯಯೇದಂ ಧಾರ್ಯತೇ ಜಗತ್' ಇತಿ 'ಏತದ್ಯೋನೀನಿ' ಇತಿ ಜಗದ್ಧಾರಕತ್ವಕಾರಣತ್ವೇ ಕಥಿತೇ । ತತ್ರ ಪ್ರಕೃತೀ ಏವ ಭಗವದ್ವಶೇ, ಜಗಜ್ಜನ್ಮಸ್ಥಿತಿಲಯಾಸ್ತು ಪ್ರಕೃತ್ಯಧೀನಾ ಏವ ನೇಶಾಧೀನಾ ಇತಿ ಪ್ರತೀತಿ ನಿರಾಸಾರ್ಥಮಾಹ- ಅಹಮಿತಿ ॥ ಪ್ರಭವಪ್ರಲಯಯೋಃ ಸತ್ತಾಪ್ರತೀತಿ-ಕಾರಣತ್ವಾದಹಂ ಪ್ರಭವಃ ಪ್ರಲಯಶ್ಚೇತ್ಯುಕ್ತಿಃ । ಪ್ರಭವಪ್ರಲಯಭೋಕ್ತೃತ್ವಾಚ್ಚ ತಥೋಕ್ತಿಃ । ಜಗತ್ಪ್ರಭವಾದಿಭೋಕ್ತೃತ್ವಂ ಚ ಯಥಾ ಪುತ್ರಾದಿಪ್ರಭವೋ ರಿಪುಪ್ರಲಯಶ್ಚೋಪಲಬ್ಧಃ ಸುಖಹೇತುರಿತ್ಯುಪಲಬ್ಧಃ ಪಿತ್ರಾದೇಸ್ತದ್ಭೋಕ್ತೃತ್ವಂ ತಥಾ ಹರೇರಿತಿ ಜ್ಞೇಯಮ್ । ಪ್ರಭವಾದ್ಯುಪಲಬ್ಧೇರ್ಭಗವತ್ಸುಖಹೇತುತ್ವಂ ಚ ಆಗಮಿಷ್ಯತ್ಸುಖಂ ಚಾಪಿ ತಚ್ಚಾಸ್ತ್ಯೇವ ಸದಾಽಪಿ ತು । ತಥಾಽಪ್ಯಚಿಂತ್ಯ-ಶಕ್ತಿತ್ವಾಜ್ಜಾತಂ ಸುಖಮಿವ ಚ ಇತಿ ಸ್ಮೃತ್ಯುಕ್ತದಿಶಾ ಜ್ಞೇಯಮ್ । ಪ್ರಕೃತಿದ್ವಾರಾ ಕೃತ್ಸ್ನಜಗತ್ಕರ್ತಾಽಹಮೇವೇತಿ ಭಾವಃ ॥ 6 ॥**

**ಅನುವಾದ** – ಈ ಹಿಂದಿನ ಶ್ಲೋಕದಲ್ಲಿ ಎರಡು ವಿಧವಾದ ಪ್ರಕೃತಿಗಳಲ್ಲಿ ಒಂದಕ್ಕೆ ಅವರತ್ವವನ್ನು ಮತ್ತೊಂದಕ್ಕೆ ಪರತ್ವವನ್ನು ಭಿನ್ನವಾಕ್ಯಗಳಿಂದ ಹೇಳಿ, '**ಮೇ**' ಎಂಬ ಪದದಿಂದ ಚಿತ್ಪ್ರಕೃತಿಗೆ ಸ್ವವಶತ್ವವನ್ನೂ ಹೇಳಿ ಅನಂತರ. '**ಯಯೇದಂ ಧಾರ್ಯತೆ ಜಗತ್**' ಎಂಬ ವಾಕ್ಯದಿಂದ ಆ ಪ್ರಕೃತಿಗೆ ಜಗದ್ಧಾರಕತ್ವವನ್ನೂ, '**ತದ್ಯೋನೀನಿ**' ಎಂಬ ವಾಕ್ಯದಿಂದ ಜಗತ್ಕಾರಣತ್ವ ವನ್ನೂ ಹೇಳಲಾಯಿತು. ಅಲ್ಲಿ, ಎರಡು ಪ್ರಕೃತಿಗಳು ಮಾತ್ರ ಭಗವದಧೀನವಾದವು, ಜಗತ್ತಿನ ಜನ್ಮ, ಸ್ಥಿತಿ, ಲಯಗಳು ಮಾತ್ರ ಕೇವಲ ಪ್ರಕೃತಿಯ ಅಧೀನಕ್ಕೊಳಗಾದವೇ ಹೊರತು ಈಶ್ವರಾಧೀನವಲ್ಲ ಎಂಬ ತಪ್ಪು ಗ್ರಹಿಕೆಯನ್ನು ನಿವಾರಿಸಲು ಶ್ರೀಕೃಷ್ಣನು '**ಅಹಂ**' ಇತ್ಯಾದಿ ಶ್ಲೋಕವನ್ನು ಹೇಳುತ್ತಿದ್ದಾನೆ.

ಜಗತ್ತಿನ ಉತ್ಪತ್ತಿ, ಮತ್ತು ಪ್ರಲಯಗಳ ಸತ್ತಾ ಮತ್ತು ಪ್ರತೀತಿಗಳಿಗೆ ತಾನು ಕಾರಣನಾದುದರಿಂದ ಶ್ರೀಕೃಷ್ಣನು '**ಅಹಂ ಪ್ರಭವಃ; ಪ್ರಲಯಶ್ಚ** = ನಾನೇ ಉತ್ಪತ್ತಿ ಮತ್ತು ಪ್ರಲಯಗಳೆಂದು ಹೇಳಿದ್ದಾನೆ. ಪ್ರಭವ-ಪ್ರಲಯಗಳನ್ನು ಭೋಗಿಸುವ ಕಾರಣದಿಂದಲೂ ಆ ರೀತಿ ಹೇಳಿದ್ದಾನೆ. ಹೇಗೆ ಪುತ್ರಾದಿಗಳ ಜನನ ಮತ್ತು ಶತ್ರುವಿನ ನಾಶಗಳು, ತಂದೆ ಮೊದಲಾದವರಿಗೆ ತಿಳಿಯಲ್ಪಟ್ಟು ಅವರ ಸುಖಕಾರಣವಾದದ್ದಾಗಿ ಅವರಿಗೆ ಅವುಗಳ ಭೋಗವೆಂದೆನಿಸುವುದೋ ಹಾಗೆ ಶ್ರೀಹರಿಗೂ ಜಗತ್ತಿನ ಪ್ರಭವ-ಪ್ರಲಯಗಳು ಸುಖಹೇತುಗಳೆಂದೆನಿಸಿ ಅವನ ಭೋಗವೆಂದೆನಿಸುವವು. ಜಗತ್ತಿನ

ಪ್ರಭವ-ಪ್ರಲಯಗಳ ಜ್ಞಾನವು ಭಗವಂತನ ಸುಖಕ್ಕೆ ಹೇತುವಾಗಿವೆ ಎಂಬ ಪ್ರಮೇಯವನ್ನು

'ಆಗಮಿಷ್ಯತ್ಸುಖಂ ಚಾಪಿ ತಚ್ಚಾಸ್ತ್ಯೇವ ಸದಾಽಪಿತು ।
ತಥಾಪ್ಯಚಿಂತ್ಯಶಕ್ತಿತ್ವಾತ್ ಜಾತಂ ಸುಖಮಿತೀವ ಚ ॥ '

ಮುಂದೆ ಉಂಟಾಗುವ ಸುಖವೂ ಭಗವಂತನಲ್ಲಿ ಎಲ್ಲ ಕಾಲದಲ್ಲೂ ಇದ್ದೇ ಇರುವುದು. ಆದರೂ ಅಚಿಂತ್ಯ ಶಕ್ತಿಯುಳ್ಳವನಾದುದರಿಂದ ಸುಖವು ಹುಟ್ಟಿತೆಂದು ಹೇಳಲಾಗುವುದು ಎಂಬ ಸ್ಮೃತಿಯಲ್ಲಿ ಹೇಳಿದ ಪ್ರಕಾರ ತಿಳಿಯತಕ್ಕದ್ದು. ಪ್ರಕೃತಿಯ ದ್ವಾರಾ ಸಮಸ್ತ ಜಗತ್ತಿನ ಕರ್ತೃ ನಾನೇ ಆಗಿರುವೆನೆಂದು ಭಾವ . ॥ 6 ॥

**ವಿವರಣೆ– 'ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ'** ಎಂಬ ಶ್ರೀಕೃಷ್ಣನ ಮಾತು ಶ್ರೀಕೃಷ್ಣನೇ ಜಗತ್ತಿನ ಉತ್ಪತ್ತಿನಾಶಗಳಾಗಿದ್ದಾನೆ ಎಂಬ ಭ್ರಾಂತಿಗೆ ಕಾರಣವಾಗುವಂತಿದೆ. ಅದಕ್ಕಾಗಿ, ಗೀತಾಭಾಷ್ಯದಲ್ಲಿ ಆಚಾರ್ಯರು ನೀಡಿರುವ ಎರಡು ವಿವರಣೆಗಳನ್ನು ಶ್ರೀರಾಘವೇಂದ್ರ ಸ್ವಾಮಿಗಳು ಉಲ್ಲೇಖಿಸಿದ್ದಾರೆ. ಅವುಗಳಲ್ಲಿ ಒಂದು– ಭಗವಂತನು ಜಗತ್ತಿನ ಪ್ರಭವ-ಪ್ರಲಯಗಳನ್ನು ಕುರಿತು ಸಂಪೂರ್ಣಸ್ವಾತಂತ್ರ್ಯವನ್ನು ಪಡೆದಿರುವುದರಿಂದ ಭಗವಂತನೇ ಪ್ರಭವ-ಪ್ರಲಯಗಳೆಂದು ಅಭೇದವ್ಯವಹಾರ ಮಾಡಲಾಗಿದೆ. ರಾಷ್ಟ್ರದ ವಿಷಯದಲ್ಲಿ ಪೂರ್ಣಸ್ವಾತಂತ್ರ್ಯವನ್ನು ಪಡೆದ ರಾಜನನ್ನು ಉದ್ದೇಶಿಸಿ 'ರಾಜಾ ರಾಷ್ಟ್ರಂ'= 'ಈ ರಾಜನೇ ರಾಷ್ಟ್ರ' ಎಂದು ಲೋಕದಲ್ಲಿ ವ್ಯವಹರಿಸುವುದುಂಟಷ್ಟೇ.

ಇನ್ನೊಂದು– ಜಗತ್ತಿನ ಪ್ರಭವ-ಪ್ರಲಯಗಳ ಭೋಕ್ತೃವಾದುದರಿಂದ ಭಗವಂತನನ್ನು ಜಗತ್ತಿನ ಪ್ರಭವ-ಪ್ರಲಯವೆಂದು ವ್ಯವಹರಿಸಲಾಗಿದೆ. ಲೋಕದಲ್ಲಿ, ಪುತ್ರನ ಜನನ ತಂದೆಗೆ ಹಾಗೆಯೇ ತನ್ನ ಶತ್ರುವಿನ ನಾಶ ಒಬ್ಬ ಪುರುಷನಿಗೆ ಸುಖಕಾರಣವಾಗಿದ್ದು, ಪುತ್ರಜನನವನ್ನು ತಂದೆ ಭೋಗಿಸುತ್ತಿರುವನೆಂದೂ, ಅಂತೆಯೇ ತನ್ನ ಶತ್ರುವಿನ ನಾಶವನ್ನು ಪುರುಷನು ಭೋಗಿಸುತ್ತಿರುವನೆಂದೂ ವ್ಯವಹರಿಸುವುದನ್ನು ನಾವು ನೋಡಬಹುದು. ಜಗತ್ತಿನ ಪ್ರಭವ-ಪ್ರಲಯಗಳ ಜ್ಞಾನ ನಿತ್ಯತೃಪ್ತನಾದ ಭಗವಂತನಿಗೆ ಸುಖಕಾರಣವಾಗುವುದು ಹೇಗೆಂಬ ಸಂದೇಹಕ್ಕೆ **'ಆಗಮಿಷ್ಯತ್ಸುಖಂ ಚಾಪಿ'** ಎಂಬ ನಾರದೀಯ ಸ್ಮೃತಿಯು ಸಮಾಧಾನ ನೀಡಿದೆ. ಮುಂದೆ ಆಗುವುದೆಂದು ಹೇಳಲಾಗುವ ಸುಖ, ವಾಸ್ತವಿಕವಾಗಿ, ಭಗವಂತನಲ್ಲಿ ಎಲ್ಲ ಕಾಲದಲ್ಲೂ ಇರುವುದೇ ಆಗಿದೆ. ಅವನ ಅಚಿಂತ್ಯಾದ್ಭುತ ಶಕ್ತಿಯಿಂದ ಇರುವ ಸುಖವೇ ಕಾಲವಿಶೇಷದಲ್ಲಿ ಅಭಿವ್ಯಕ್ತವಾಗುವ ಮೂಲಕ 'ಈಗ ಭಗವಂತನಿಗೆ ಸುಖ ಉಂಟಾಗಿದೆ' ಇತ್ಯಾದಿ ವ್ಯವಹಾರಗಳಿಗೆ ಕಾರಣವಾಗುವುದು. ಹೀಗೆ, ಜಗತ್ತಿನ ಪ್ರಭವ-ಪ್ರಲಯಗಳು ಭಗವಂತನ ಸುಖಾಭಿವ್ಯಕ್ತಿಗೆ ಕಾರಣವಾಗುವುದರಿಂದ ಭಗವಂತನನ್ನು ಜಗತ್ತಿನ ಪ್ರಭವ-ಪ್ರಲಯಗಳ ಭೋಕ್ತೃವೆಂದು ಹೇಳಲಾಗುವುದು.

ಜಗತ್ತಿನ ಸೃಷ್ಟಿಸ್ಥಿತ್ಯಾದಿಗಳಿಗೆ ನಿಯಾಮಕನಾದುದರಿಂದ ಹಾಗೂ ಸೃಷ್ಟ್ಯಾದಿಗಳ ಭೋಕ್ತೃವಾದುದರಿಂದ ಭಗವಂತನನ್ನು ಸೃಷ್ಟಿ, ಸ್ಥಿತ್ಯಾದಿರೂಪನೆಂದು ವ್ಯವಹರಿಸಲಾಗುವುದೆಂದು ಗೀತಾಭಾಷ್ಯದಲ್ಲಿ ಆಚಾರ್ಯರು ಉಲ್ಲೇಖಿಸಿರುವ ಈ ಕೆಳಗಿನ ನಾರದೀಯವಾಕ್ಯವು ಹೇಳುತ್ತದೆ–

'ಸ್ರಷ್ಟಾ ಪಾಕಾ ಚ ಸಂಹರ್ತಾ ನಿಯಂತಾ ಚ ಪ್ರಕಾಶಿತಾ ।
ಯತಃ ಸರ್ವಸ್ಯ ತೇನಾಹಂ ಸರ್ವೋಽಸೀತಿ ಋಷಿಭಿಃ ಸ್ತುತಃ ।
ಸುಖರೂಪಸ್ಯ ಭೋಕ್ತೃತ್ವಾನ್ನ ತು ಸರ್ವಸ್ವರೂಪತಃ ॥ '

## ವಿಷ್ಣು ಸರ್ವೋತ್ತಮ

**ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ 7 ॥**

**ಅರ್ಥ**– ಹೇ! ಧನಂಜಯ ! ನನ್ನಿಂದ ಭಿನ್ನವಾದ ಸರ್ವೋತ್ತಮನಾದ ಯಾವ ವಸ್ತುವೂ ಇಲ್ಲ. ಪ್ರಕೃತಿಯನ್ನು ಮೊದಲುಗೊಂಡು ಈ ಎಲ್ಲ ಜಗತ್ತು , ಒಂದು ದಾರವನ್ನು ಮಣಿಗಳು ಆಶ್ರಯಿಸಿರುವಂತೆ, ನನ್ನಲ್ಲಿ ಆಶ್ರಿತವಾಗಿದೆ.

**ನನು ಪರಾವರಪ್ರಕೃತ್ಯೋಃ ಸ್ವಾಧೀನತ್ವೋಕ್ತ್ಯೈವ ಸ್ವಸ್ಯಾವರತ್ವಸ್ಯ ಪರತ್ವಸ್ಯ ಚಾಯೋಗಾತ್ (ಅವರತ್ವಸ್ಯ ಬಾಧಾದುತ್ತರವಾಕ್ಯವಿರೋಧಾಯೋಗಾತ್) ಪರತರತ್ವಶಬ್ದಿತಂ ಸರ್ವೋತ್ತಮತ್ವಂ ತವ ಪ್ರಾಪ್ತಮಿತ್ಯಸ್ತು ಜಗತ್ಪಿತೃತ್ವಮ್ । ತದ್ವತ್ ಸರ್ವೋತ್ತಮಾಂತರಸ್ಯಾಪಿ ಜಗತ್ಪಿತೃತ್ವಾದ್ಯುಪಪತ್ತೇಃ ಕಥಮಹಮೇವ ಕೃತ್ಸ್ನಸ್ಯೇ–ತ್ಯಾದ್ಯುಕ್ತಿರುಪಪದ್ಯತ ಇತ್ಯತ ಆಹ– ಮತ್ತ ಇತಿ ॥ ಮತ್ತೋಽನ್ಯತ್ ಪರತರಶಬ್ದಿತಂ ಸರ್ವೋತ್ತಮಂ ಕಿಂಚಿನ್ನಾಸ್ತಿ । ಯೇನ ಅಹಮೇವೇತ್ಯುಕ್ತಿರಯುಕ್ತಾ ಸ್ಯಾತ್ ।**

**ಅನುವಾದ**– ಹೇ ಭಗವಂತ ! ಪರ ಎಂದರೆ ಉತ್ತಮವಾಗಿರುವ ಚೇತನ ಪ್ರಕೃತಿ ಮತ್ತು ಅವರ ಎಂದರೆ ನೀಚವಾಗಿರುವ ಅಚೇತನಪ್ರಕೃತಿ ಇವೆರಡೂ ನಿನ್ನ ಅಧೀನವೆಂದು ಹೇಳಿದುದರಿಂದಲೇ ನಿನಗೆ ಪರತ್ವವಾಗಲಿ ಅವರತ್ವವಾಗಲಿ ಇರಲು ಸಾಧ್ಯವಿಲ್ಲವಾದುದರಿಂದ '**ಪರತರತ್ವ**' ಪದವು ಹೇಳುವ ಸರ್ವೋತ್ತಮತ್ವವು ನಿನಗೆ ಇರುವುದೆಂದಾಗುವುದರಿಂದ ನೀನು ಜಗತ್ಪಿತೃವಾಗಿದ್ದೀಯೆ ಎಂಬುದು ಸರಿಯೇ. ಆದರೂ, ನಿನ್ನಂತೆ ಮತ್ತೊಬ್ಬ ಸರ್ವೋತ್ತಮನಿಗೂ ಜಗತ್ಪಿತೃತ್ವ ಮೊದಲಾದದ್ದು ಇರಬಹುದಾದ್ದರಿಂದ 'ನಾನೇ ಸಮಸ್ತ ಜಗತ್ತಿಗೂ ಪಿತೃವಾಗಿದ್ದೇನೆ' ಎಂಬ ನಿನ್ನ ಮಾತು ಹೇಗೆ ಯುಕ್ತವಾಗುವುದು ಎಂಬ ಆಕ್ಷೇಪಕ್ಕೆ '**ಮತ್ತಃ**' ಎಂಬ ಶ್ಲೋಕದಲ್ಲಿ ಸಮಾಧಾನವನ್ನು ನೀಡಲಾಗಿದೆ.

ನನಗಿಂತ ಭಿನ್ನವಾದ, 'ಪರತರ' ಎಂಬ ಪದವು ಹೇಳುವ ಸರ್ವೋತ್ತಮ ವಸ್ತುವು ಯಾವುದೂ ಇಲ್ಲ. ಅಂತಹ ಒಂದು ವಸ್ತು ಇದ್ದದ್ದೇ ಆದರೆ 'ನಾನೇ ಪರತರ' ಎಂಬ ಮಾತು ಅಯುಕ್ತ ವಾಗುತ್ತಿದ್ದೀತು.

**ಯದ್ವಾ ಅನ್ಯತ್ ಪರತರಂ ನೇತ್ಯುಕ್ತ್ವಾ ಅರ್ಥಾತ್ ತಾತ್ಪರ್ಯಗತ್ಯಾ ಲಬ್ಧಮಹಮೇವ ಪರತರ ಇತ್ಯಾದೌ ಯೋಜಯಿತ್ವಾ ಪಶ್ಚಾತ್ ಮತ್ತ ಇತ್ಯಾದಿ ಯೋಜ್ಯಮ್ । ತಥಾ ಚಾವತಾರಿಕಾಯಾಂ ಉಕ್ತದಿಶಾ ಲಬ್ಧಸ್ಯಾಪಿ ಪರತರತ್ವ-ಸ್ಯಾತ್ರೋಕ್ತಿಃ ಅಪರತತ್ತ್ವಂ ಯಥಾ ಭೂಮ್ಯಾದಿಭೇದೇನಾನೇಕವಿಧಂ ಯಥಾ ಚ ಪರತತ್ತ್ವಂ ಶ್ರೀದೇವೀಮುಕ್ತಭೇದೇನಾನೇಕಂ ತಥಾ ಪರತರಮಪ್ಯನೇಕವಿಧ-ಮುತೈಕಮೇವೇತಿ ಜಿಜ್ಞಾಸಾಯಾಮಹಮೇಕ ಏವೇತಿ ಜ್ಞಾಪಯಿತುಮಿತಿ ಧ್ಯೇಯಮ್ ।**

**ಅನುವಾದ-** ಅಥವಾ, 'ನನ್ನಿಂದ ಭಿನ್ನವಾದ ಸರ್ವೋತ್ತಮವಸ್ತುವಿಲ್ಲ' ಎಂದು ಹೇಳಿದ್ದರಿಂದ **ಅರ್ಥಾತ್** (ಶ್ರೀಕೃಷ್ಣನಿಗೆ ) ಅಭಿಪ್ರೇತವಾದುದೆಂದು ಲಭಿಸುವ **'ಅಹಮೇವ ಪರತರಃ'** = 'ನಾನೇ ಸರ್ವೋತ್ತಮನು' ಎಂಬ ವಾಕ್ಯವನ್ನು ಆರಂಭದಲ್ಲಿ ಸೇರಿಸಿ ಅನಂತರ **'ಮತ್ತಃ ಪರತರಂ ನಾಸ್ತಿ'** ಇತ್ಯಾದಿ ವಾಕ್ಯವನ್ನು ಯೋಜಿಸಬೇಕು. ಹೀಗೆ ಯೋಜಿಸುವುದರಿಂದ (ಈ ಶ್ಲೋಕದ) ಅವತಾರಿಕೆಯಲ್ಲಿ ಹೇಳಿದಂತೆ ಲಬ್ಧವಾಗುವ (ಶ್ರೀಕೃಷ್ಣನ) ಪರತರತ್ವವನ್ನು ಈ ಶ್ಲೋಕದಲ್ಲಿ ಹೇಳಿರುವುದು– ಅಪರತತ್ವವು ಭೂಮಿ ಮೊದಲಾದ ರೀತಿಯಿಂದ ಹೇಗೆ ಅನೇಕವಿಧವೋ, ಹಾಗೆಯೇ ಪರತತ್ವವು ಶ್ರೀದೇವಿ, ಮುಕ್ತರು ಎಂದು ಅನೇಕ ವಿಧವೋ ಅದೇ ರೀತಿಯಾಗಿ ಪರತರವೂ ಅನೇಕವಿಧವೋ ಅಥವಾ ಒಂದೇ ವಿಧವೋ ಎಂಬ ಜಿಜ್ಞಾಸೆಯುಂಟಾಗಲು 'ನಾನು ಒಬ್ಬನೇ' (ಪರತರನು) ಎಂದು ಸೂಚಿಸಲೆಂದು ತಿಳಿಯಬೇಕು.

**ನ ಕೇವಲಂ ಜಗತಃ ಪ್ರಭವಪ್ರಲಯೌ ಮದಧೀನೌ । ಕಿಂತು ಸ್ಥಿತಿರಪಿ ಮದಧೀನೇತ್ಯಾಹ- ಮಯೀತಿ ॥ ಇದಂ ಸರ್ವಂ ಪ್ರಕೃತ್ಯಾದಿಜಗತ್ ॥ 7 ॥**

**ಅನುವಾದ** – ಜಗತ್ತಿನ ಉತ್ಪತ್ತಿ – ಪ್ರಲಯಗಳು ಮಾತ್ರ ನನ್ನ ಅಧೀನವಲ್ಲ, ಅದರ ಸ್ಥಿತಿಯೂ ನನ್ನ ಅಧೀನವಾಗಿದೆ ಎಂಬುದನ್ನು ಶ್ರೀಕೃಷ್ಣನು **'ಮಯಿ'** ಇತ್ಯಾದಿ ವಾಕ್ಯದಿಂದ ತಿಳಿಸುತ್ತಿದ್ದಾನೆ. **'ಇದಂ ಸರ್ವಂ'** = ಈ ಎಲ್ಲ ಪ್ರಕೃತಿ ಮೊದಲಾದ ಜಗತ್ತು. ॥ 7 ॥

**ವಿವರಣೆ** – ಈ ಶ್ಲೋಕದಲ್ಲಿ, ಶ್ರೀಕೃಷ್ಣನಿಗೆ ತನಗಿಂತ ಬೇರೆಯಾದ ವಸ್ತುವೇ ಇಲ್ಲವೆಂದು ನಿಷೇಧಿಸುವ ಅಭಿಪ್ರಾಯವಿಲ್ಲ. ಆ ಅಭಿಪ್ರಾಯವಿದ್ದದ್ದೇ ಆದರೆ, **'ಮತ್ತಃ'** ಪರತರಂ ನಾಸ್ತಿ' ಎಂದಿಷ್ಟು ಮಾತ್ರದಿಂದಲೇ ಆ ಅಭಿಪ್ರಾಯವು ವ್ಯಕ್ತವಾಗುವುದರಿಂದ **'ಅನ್ಯತ್'** ಎಂಬ ಪದವು

ವ್ಯರ್ಥವಾದೀತು. 'ಅನ್ಯತ್' ಪದವು 'ತನಗಿಂತ ಭಿನ್ನವಾದದ್ದು' ಎಂಬರ್ಥವನ್ನು ಕೊಡುವುದಾದರೆ 'ಪರತರಂ' ಎಂಬ ಪದವು ವ್ಯರ್ಥವಾಗುವುದು. ಆದ್ದರಿಂದ 'ತನಗಿಂತ ಭಿನ್ನವಾದ ಸರ್ವೋತ್ತಮನಾದ ವಸ್ತುವಿಲ್ಲ' ಎಂಬ ತನ್ನ ಆಶಯವನ್ನು ವ್ಯಕ್ತಮಾಡುವ ಉದ್ದೇಶದಿಂದಲೇ ಶ್ರೀಕೃಷ್ಣನು ಎರಡು ಪದಗಳನ್ನು ಪ್ರಯೋಗಿಸಿರುವನು.

## ಶ್ರೀಹರಿಯ ಅಲೌಕಿಕ ಮಹಿಮೆ

**ರಸೋಽಹಮಪ್ಸು ಕೌಂತೇಯ ಪ್ರಭಾಽಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥ 8 ॥**

**ಅರ್ಥ**– ಹೇ ಕುಂತೀಸುತ ಅರ್ಜುನ ! ಜಲದಲ್ಲಿ ಸಾರಭೂತವಾದ ರಸಕ್ಕೆ ಕಾರಣನಾಗಿರುವುದರಿಂದ 'ರಸ 'ಎಂದು ಹೇಳಲಾಗುವುದು. ಚಂದ್ರ-ಸೂರ್ಯರಲ್ಲಿ ಸಾರವೆನಿಸುವ ಪ್ರಭೆಗೆ ಕಾರಣನಾದುದರಿಂದ ಆ ಪ್ರಭೆಯೇ ನಾನೆಂದೆನಿಸುವೆನು. ಸಮಸ್ತವೇದಗಳಲ್ಲಿ ಸಾರಭೂತವೆನಿಸುವ ಪ್ರಣವ ನನ್ನಾಧೀನವಾದುದರಿಂದ ಆ ಪ್ರಣವವು ನಾನೆಂದು ಹೇಳಲ್ಪಡುವೆನು. ಆಕಾಶದಲ್ಲಿ ಸಾರವೆನಿಸಿದ ಶಬ್ದವು ನನ್ನಾಧೀನವಾದುದರಿಂದ ನಾನೇ ಶಬ್ದವೆಂದೆನಿಸುವೆನು. ಅಂತಯೇ, ಪುರುಷರಲ್ಲಿ ಸಾರವೆನಿಸುವ ಪೌರುಷಕ್ಕೆ ಕಾರಣನಾದುದರಿಂದ ನಾನೇ ಆ ಪೌರುಷವೆಂದೆನಿಸುವೆನು.

**'ಜ್ಞಾನಂ ತೇಽಹಂ' ಇತಿ ಜ್ಞಾನಪದೇನ ಪ್ರತಿಜ್ಞಾತಂ ಜ್ಞಾತವ್ಯಂ 'ಭೂಮಿರಾಪ' ಇತ್ಯಾದಿಶ್ಲೋಕಚತುಷ್ಟಯೇನೋಕ್ತ್ವಾಽಧುನಾ ವಿಜ್ಞಾನಪದೇನ ಪ್ರಾಕ್ ಪ್ರತಿ-ಜ್ಞಾತಂ ವಿಶೇಷೇಣ ಜ್ಞಾತವ್ಯಂ ಹರೇರಲೌಕಿಕಮಾಹಾತ್ಮ್ಯಮಾಹ- ರಸ ಇತಿ ॥**

**ಅನುವಾದ**- 'ಜ್ಞಾನಂ ತೇಽಹಂ' ಎಂಬ ಶ್ಲೋಕದಲ್ಲಿ 'ಜ್ಞಾನ'ಪದದಿಂದ (ನಿರೂಪಿಸಲಾಗುವುದೆಂದು)ಪ್ರತಿಜ್ಞೆ ಮಾಡಲ್ಪಟ್ಟಿರುವ ಜ್ಞಾತವ್ಯ ಎಂದರೆ ತಿಳಿಯಬೇಕಾದ ವಿಷಯವನ್ನು 'ಭೂಮಿರಾಪ' ಇತ್ಯಾದಿ ನಾಲ್ಕು ಶ್ಲೋಕಗಳಿಂದ ಹೇಳಿ, ಈಗ 'ವಿಜ್ಞಾನ' ಪದದಿಂದ (ನಿರೂಪಿಸಲಾಗುವುದೆಂದು) ಪ್ರತಿಜ್ಞೆ ಮಾಡಲಾಗಿರುವ ವಿಶೇಷತಃ ತಿಳಿಯಬೇಕಾದ ಶ್ರೀಹರಿಯ ಅಲೌಕಿಕ ಮಹಿಮೆಯನ್ನು 'ರಸೋಽಹಮಪ್ಸು....' ಇತ್ಯಾದಿ ಶ್ಲೋಕದಿಂದ ಶ್ರೀಕೃಷ್ಣನು ತಿಳಿಸುತ್ತಿದ್ದಾನೆ.

**ಅಪ್ಸು ಸಾರಭೂತೋ ಯೋ ರಸಃ ತಸ್ಯ ಅಪಾಮನಾಗಂತುಕಸ್ವಭಾವತ್ವೇ ಅಬ್ಧರ್ಮೇಷು ಸಂಖ್ಯಾದಿಷು ಸಾರತ್ವೇ ರಸತ್ವೇ ವಿಶೇಷತೋ ಹರೇಃ ಕಾರಣ-ತ್ವಾತ್ತದ್ಭೋಕ್ತೃತ್ವಾಚ್ಚ ರಸೋಽಹಮಿತ್ಯಭೇದೋಕ್ತಿಃ । ಶಶಿಸೂರ್ಯಯೋಃ ಯಾ ಪ್ರಭಾ ತಸ್ಯಾಃ ಶಶಿಸೂರ್ಯಯೋರನಾಗಂತುಕಧರ್ಮತ್ವೇ ಚಂದ್ರಸೂರ್ಯ-**

**ಧರ್ಮೇಷು ಸಾರತ್ವೇ ಪ್ರಭಾತ್ವೇ ವಿಶೇಷತಃ ಕಾರಣತ್ವಾತ್ 'ಪ್ರಭಾಽಹಮಸ್ಮಿ' ಇತ್ಯಭೇದೋಕ್ತಿಃ । ಸರ್ವವೇದೇಷು ಸಾರಭೂತೋ ಯಃ ಪ್ರಣವಃ ತಸ್ಯ ವೇದ-ಸಾರತ್ವಂ ಪ್ರಣವತ್ವಂ ಚೇಶಾಧೀನಮಿತ್ಯಭೇದೋಕ್ತಿಃ । ಖೇ ಆಕಾಶೇ ಯಃ ಶಬ್ದಃ ಧ್ವನ್ಯಾತ್ಮಕಃ ತಸ್ಯಾಕಾಶಾನಾಗಂತುಕಧರ್ಮತ್ವಂ ಸಂಖ್ಯಾದ್ಯಾಕಾಶಧರ್ಮೇಷು ಸಾರತ್ವಂ ಶಬ್ದತ್ವಂ ಚೇಶಾಯತ್ತಂ ತದ್ಭೋಗಶ್ಚ ಶಬ್ದ ಇತಿ ಶಬ್ದೋಽಹಮಸ್ಮೀತ್ಯು-ಚ್ಯತೇ । ನೃಷು ಯತ್ಪೌರುಷಂ ಸ್ತ್ರೀವ್ಯಾವೃತ್ತಃ ಪ್ರಾಗಲ್ಭ್ಯವಿಶೇಷಃ ತಸ್ಯ ಸತ್ತಾ-ಪ್ರತೀತಿಕಾರಣತ್ವಾತ್ ಪೌರುಷಮಹಮಸ್ಮಿ ಇತ್ಯುಚ್ಯತೇ ॥ 8 ॥**

**ಅನುವಾದ-** (1) ಜಲದಲ್ಲಿ ಸಾರಭೂತವಾದ ಯಾವ ರಸವಿದೆಯೋ ಅದು ಜಲದ ಸಹಜ ಸ್ವಭಾವವಾಗಿರುವುದಕ್ಕೆ, ಜಲದಲ್ಲಿರುವ ಸಂಖ್ಯೆ ಮೊದಲಾದ ಧರ್ಮಗಳಲ್ಲಿ ಆ ರಸವು ಸಾರಭೂತವಾಗಿರುವುದಕ್ಕೆ ಮತ್ತು ಆ ರಸವು ರಸವಾಗಿರಲು ವಿಶೇಷವಾಗಿ ಶ್ರೀಹರಿಯೇ ಕಾರಣನಾದುದರಿಂದ, ಅಂತೆಯೇ ಆ ರಸದ ಭೋಕ್ತೃನಾಗಿರುವುದರಿಂದ '**ರಸೋಽಹಂ**'= ನಾನೇ ರಸ' ಎಂಬುದಾಗಿ ಅಭೇದವನ್ನು ಹೇಳಲಾಗಿದೆ. ಚಂದ್ರಸೂರ್ಯರಲ್ಲಿ ಯಾವ ಪ್ರಭೆ ಇರುವುದೋ ಆ ಪ್ರಭೆಯು ಚಂದ್ರಸೂರ್ಯರ ಅನಾಗಂತುಕ ಅಂದರೆ ಸ್ವಾಭಾವಿಕವಾದ ಧರ್ಮವಾಗಿರುವುದಕ್ಕೆ, ಚಂದ್ರಸೂರ್ಯರಲ್ಲಿರುವ ಅನೇಕ ಧರ್ಮಗಳಲ್ಲಿ ಸಾರಭೂತವಾದ ಧರ್ಮವಾಗಿರುವುದಕ್ಕೆ, ಹಾಗೆಯೇ ಆ ಪ್ರಭೆಯು ಪ್ರಭೆಯಾಗಿರಲು ಶ್ರೀಹರಿಯು ವಿಶೇಷ ಕಾರಣನಾದುದರಿಂದ '**ಪ್ರಭಾ ಅಹಮಸ್ಮಿ**' = ನಾನೇ ಪ್ರಭೆಯಾಗಿರುವೆನು ಎಂದು ಅಭೇದವನ್ನು ಹೇಳಲಾಗಿದೆ. ಸರ್ವವೇದಗಳಲ್ಲಿ ಸಾರಭೂತವಾದ ಓಂಕಾರವು ವೇದಸಾರವೆನಿಸಲು ಮತ್ತು ಪ್ರಣವವೆನಿಸಲು ಈಶನಿಗೆ ಅಧೀನವಾದುದರಿಂದ (**ಪ್ರಣವಃ ಸರ್ವವೇದೇಷು** = ಸರ್ವವೇದಗಳಲ್ಲಿ ನಾನು ಪ್ರಣವನಾಗಿರುವೆನು ಎಂದು) ಅಭೇದವನ್ನು ಹೇಳಿದೆ. '**ಖೇ**' ಎಂದರೆ ಆಕಾಶದಲ್ಲಿ ಯಾವ ಧ್ವನಿರೂಪವಾದ ಶಬ್ದವಿರುವುದೋ ಅದು ಆಕಾಶದ ಸ್ವಾಭಾವಿಕವಾದ ಧರ್ಮವಾಗಿರುವುದು, ಸಂಖ್ಯೆ ಮೊದಲಾದ ಆಕಾಶದ ಅನೇಕಧರ್ಮಗಳಲ್ಲಿ ಸಾರಭೂತ ವಾಗಿರುವುದು ಮತ್ತು ಆ ಶಬ್ದವು ಶಬ್ದವಾಗಿರುವುದೂ ಈಶನಿಗೆ ಅಧೀನವಾದ್ದರಿಂದ ಮತ್ತು ಅದು ಅವನಿಗೆ ಭೋಗವಿಷಯವೂ ಆಗಿರುವುದರಿಂದ, **ಶಬ್ದೋಽಹಮಸ್ಮಿ** = ನಾನು ಶಬ್ದನಾಗಿರುವೆನು ಎಂದು ಅಭೇದವನ್ನು ಹೇಳಲಾಗಿದೆ. ಪುರುಷರಲ್ಲಿ, ಯಾರ ಪೌರುಷ ಎಂದರೆ ಸ್ತ್ರೀಯರಲ್ಲಿಲ್ಲದ ಪ್ರಾಗಲ್ಭ್ಯವಿಶೇಷರೂಪವಾದ ಧರ್ಮವಿದೆಯೋ ಅದರ ಅಸ್ತಿತ್ವ ಮತ್ತು ಜ್ಞಾನಗಳಿಗೆ ಕಾರಣ ನಾದುದರಿಂದ **ಪೌರುಷಮ್ ಅಹಮಸ್ಮಿ** = ನಾನು ಪೌರುಷವಾಗಿದ್ದೇನೆ ಎಂದು ಹೇಳಿದೆ. ॥ 8॥

**ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥ 9 ॥**

**ಅರ್ಥ** – ಪೃಥಿವಿಯಲ್ಲಿರುವ ಶುಭ ಗಂಧವು ನನ್ನಿಂದಲೇ ಜನ್ಯವಾದುದರಿಂದ ನಾನು ಆ ಗಂಧವೆಂದೆನಿಸುವೆನು. ಅಗ್ನಿಯಲ್ಲಿ ತೇಜಸ್ಸಿಗೆ ನಾನೇ ಕಾರಣನಾದುದರಿಂದ ನಾನು ಆ ತೇಜಸ್ಸೆಂದು ಹೇಳಲ್ಪಡುವೆನು. ಎಲ್ಲ ಚೇತನರ ಜೀವನವು ನನ್ನ ನಿಯಂತ್ರಣಕ್ಕೊಳಪಟ್ಟಿರುವುದರಿಂದ ನಾನು ಜೀವನನೆಂದೆನಿಸುವೆನು. ತಪಸ್ವಿಗಳಲ್ಲಿರುವ ತಪಸ್ಸಿಗೆ ನಿಯಾಮಕನಾದುದರಿಂದ ನಾನು ತಪಸ್ಸೆಂದೆನಿಸುವೆನು .

**ಪೃಥಿವ್ಯಾಂ ಯಃ ಪುಣ್ಯೋ ಗಂಧಃ ಶುಭಗಂಧಃ ತಸ್ಯ ಭೂಮ್ಯನಾಗಂತುಕ-ಧರ್ಮತ್ವೇ ಸ್ವಭಾವತ್ವೇ ಪೃಥಿವೀಧರ್ಮೇಷು ಸಾರತ್ವೇ ಗಂಧತ್ವೇ ಹರಿಃ ಕಾರಣಂ ಗಂಧಭೋಕ್ತಾ ಚೇತಿ ಗಂಧೋऽಹಮಸ್ಮೀತ್ಯುಚ್ಯತೇ । ಅಹಮಸ್ಮೀತಿ ಸರ್ವತ್ರಾ-ನುಷಂಗಃ । ವಿಭಾವಸೌ ಯತ್ತೇಜೋ ದಾಹಸಾಮರ್ಥ್ಯಂ ತದುಕ್ತಹೇತುಬಲಾದ-ಹಮಸ್ಮೀತ್ಯುಚ್ಯತೇ । ಸರ್ವಭೂತಾನಾಂ ಸಾರಭೂತಂ ಯಜ್ಜೀವನಂ ತನ್ನಿಯಂತೃ-ತ್ವಾತ್ ತದಪ್ಯಹಮಸ್ಮೀತ್ಯುಚ್ಯತೇ । ತಪಸ್ವಿಷು ಸಾರಭೂತಂ ಯತ್ತಪಃ ಕೃಚ್ಛ್ರಾದಿ ತದಪ್ಯಹಮಸ್ಮಿ ತನ್ನಿಯಾಮಕತ್ವಹೇತುನಾ ಇತಿ ಭಾವಃ ॥ 9 ॥**

**ಅನುವಾದ**- ಪೃಥಿವಿಯಲ್ಲಿ ಯಾವ **ಪುಣ್ಯಗಂಧ**= ಶುಭಗಂಧವಿದೆಯೋ ಅದು ಭೂಮಿಯ ಅನಾಗಂತುಕ ಧರ್ಮ ಎಂದರೆ ಭೂಮಿಯ ಸ್ವಭಾವವಾಗಿರಲು, ಪೃಥಿವಿಯ ಧರ್ಮಗಳ ಮಧ್ಯೆ ಸಾರ ಭೂತವಾದದ್ದಾಗಿರಲು ಮತ್ತು ಅದು ಗಂಧವಾಗಿರಲು ಶ್ರೀಹರಿಯೇ ಕಾರಣನಾಗಿದ್ದಾನೆ ಮತ್ತು ಆ ಗಂಧದ ಭೋಕ್ತೃವಾಗಿದ್ದಾನೆ ಎಂಬ ನಿಮಿತ್ತದಿಂದ ಆ ಗಂಧವು ನಾನೇ (ಶ್ರೀಕೃಷ್ಣನೇ) ಆಗಿರುವೆನು ಎಂದು ಹೇಳಲಾಗುವುದು. '**ಅಹಮಸ್ಮಿ**'— '**ನಾನಾಗಿರುವೆನು**' ಎಂಬ ಪದಗಳು ಎಲ್ಲವಾಕ್ಯಗಳಲ್ಲೂ ಸಂಬಂಧವನ್ನು ಪಡೆಯುವವು. ಅಗ್ನಿಯಲ್ಲಿ ಯಾವ **ತೇಜಸ್ಸು** = ದಹಿಸುವ ಸಾಮರ್ಥ್ಯವಿದೆಯೋ ಅದು ಹಿಂದೆ ಹೇಳಿದ ಕಾರಣಬಲದಿಂದ ನಾನೇ ಆಗಿರುವೆನೆಂದು ಹೇಳಲ್ಪಡುತ್ತದೆ. ಸರ್ವಚೇತನರಿಗೆ ಯಾವ ಜೀವನವಿದೆಯೋ ಅದಕ್ಕೆ ನಿಯಾಮಕನಾದುದರಿಂದ ಅದೂ ಕೂಡ ನಾನೇ ಆಗಿರುವೆನೆಂದು ಹೇಳಲ್ಪಡುವುದು. ತಪಸ್ವಿಗಳಲ್ಲಿ ಸಾರಭೂತ **ಯಾವ ತಪಸ್ಸು** = ಕೃಚ್ಛ್ರ ಮೊದಲಾದದ್ದು ಏನಿರುವುದೋ ಅದಕ್ಕೆ ನಿಯಾಮಕನಾಗಿರುವ ಕಾರಣದಿಂದ ಅದು ನಾನಾಗಿರುವೆನು ಎಂದು ಹೇಳಲಾಗುವುದು. ॥ 9 ॥

**ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ ।**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥ 10 ॥**

**ಅರ್ಥ** – ಹೇ ಪಾರ್ಥ ! ಅನಾದಿಯಾದ ನನ್ನನ್ನು ಎಲ್ಲ ಭೂತಗಳ ಅಭಿವ್ಯಕ್ತಿಗೆ ಕಾರಣನೆಂದು ತಿಳಿ. ಎಲ್ಲ ಜ್ಞಾನಿಗಳಿಗೆ ಯಾವ ಜ್ಞಾನವಿರುವುದೋ ಆ ಜ್ಞಾನಕ್ಕೆ ನಾನು ನಿಯಾಮಕ

ನಾಗಿರುವುದರಿಂದ ಆ ಜ್ಞಾನವು ನಾನೇ ಆಗಿರುತ್ತೇನೆಂದು ಹೇಳಲ್ಪಡುವುದು. ಹಾಗೆಯೇ ಎಲ್ಲ ತೇಜಸ್ವಿಗಳ ತೇಜಸ್ಸಿಗೆ ನಾನು ನಿಯಾಮಕನಾಗಿರುವುದರಿಂದ ಆ ತೇಜಸ್ಸು ನಾನೆಂದು ಹೇಳಲಾಗುವುದು.

**ಸರ್ವಭೂತಾನಾಂ ಬೀಜಂ ವ್ಯಂಜಕತ್ವಾದ್‌ಬೀಜಮಿವ ಬೀಜಂ ಮಾಂ ವಿದ್ಧಿ ನ ಪರಿಣಾಮಿಕಾರಣಮ್ । ಬುದ್ಧಿಮತಾಂ ಜ್ಞಾನಿನಾಂ ಯಾ ಬುದ್ಧಿಃ ಸಾಽಪ್ಯ-ಹಮಸ್ಮಿ । ಬುದ್ಧಿಮದ್ಧರ್ಮೇಷು ಸಾರತ್ವೇ ಬುದ್ಧಿತ್ವೇ ಬುದ್ಧಿಮದ್ಧರ್ಮತ್ವೇ ನಿಯಾಮಕೋಽಹಮಿತಿ ಬುದ್ಧಿರಹಮಸ್ಮೀತ್ಯುಚ್ಯತೇ । ಏವಂ ತೇಜ ಇತ್ಯಪಿ ಧ್ಯೇಯಮ್ ।**

**ಅನುವಾದ**-ಸರ್ವಭೂತಗಳ, **ಬೀಜಂ**= ಅಭಿವ್ಯಕ್ತಿಗೆ ಕಾರಣನಾದುದರಿಂದ ಬೀಜ ದಂತಿರುವೆನೆಂದು ನನ್ನನ್ನು ತಿಳಿ. ಪರಿಣಾಮಿಕಾರಣನೆಂದು ನನ್ನನ್ನು ತಿಳಿಯಬೇಡ. **ಬುದ್ಧಿ-ಮತಾಂ**= **ಜ್ಞಾನಿನಾಂ** , ಎಂದರೆ ಜ್ಞಾನಿಗಳ ಯಾವ ಬುದ್ಧಿ ಇದೆಯೋ ಅದೂ ನಾನಾಗಿರುವೆನು. ಜ್ಞಾನವುಳ್ಳವರ ಧರ್ಮಗಳ ಮಧ್ಯೆ ಜ್ಞಾನವು ಸಾರವಾಗಿರುವುದಕ್ಕೆ, ಅದು ಜ್ಞಾನವಾಗಿರಲು, ಜ್ಞಾನವುಳ್ಳವರ ಧರ್ಮವಾಗಿರಲು ನಾನು ನಿಯಾಮಕನಾಗಿರುವುದರಿಂದ ಬುದ್ಧಿಯು ನಾನೇ ಆಗಿರುವೆನೆಂದು ಹೇಳಲಾಗುವುದು. ತೇಜಸ್ಸನ್ನೂ ಇದೇ ರೀತಿಯಾಗಿ ತಿಳಿಯಬೇಕು.

**ಅಪ್‌ಶಶಿಸೂರ್ಯಾದೇರವಧಿತಯೋಕ್ತಸ್ಯ ಸರ್ವಸ್ಯೋಕ್ತದಿಶಾ ರಸಾದೇ-ರಿವೇಶಾಯತ್ತತ್ವಾ ವಿಶೇಷೇಽಪಿ ರಸೋಽಹಮಸ್ಮೀತ್ಯಾದಿರೂಪೇಣ ನಿಷ್ಕೃಷ್ಯೋಕ್ತಿಃ ಲೋಕೇ ಕುವಿಂದಾದಿಃ ಪಟಾದಿದ್ರವ್ಯೇಷ್ವೇವ ವ್ಯಾಪಾರವಾನನುಭೂಯತೇ । ನ ತು ತದೀಯಗಂಧರಸಾದಿಗುಣೇಷು ತನ್ನಿಷ್ಠಗಂಧತ್ವಾದಿಧರ್ಮೇಷು ಚ ವ್ಯಾಪಾರ-ವಾನ್ । ಕಿಂತು ಪಟಾದಿಜನ್ಮಾನುಷಂಗಿಕಜನ್ಮಾನ ಏವ ತೇ । ನ ತಥಾ ಭಗ-ವಾನ್ । ಅಪಿ ತು ಅಬಾದಿಧರ್ಮೇಷು ರಸಾದಿಷು ತದ್ಧರ್ಮೇಷು ರಸತ್ವಾದಿಷು ಪೃಥಕ್ ಪ್ರಯತ್ನವಾನ್, ನ ತ್ವಬಾದಿನಿಯಮಾನುಷಂಗಿಕಸತ್ತಾದಿಕಾ ಇತಿ ದರ್ಶ-ಯಿತುಂ ಅಬಾದಿಭೋಗಾದಪ್ಯತಿಶಯೇನ ರಸಾದಿಭೋಗಃ ಪರಮೇಶ್ವರಸ್ಯೇತಿ ದರ್ಶಯಿತುಂ ಚ ।**

**ಅನುವಾದ**– ಜಲ, ಚಂದ್ರ, ಸೂರ್ಯ ಮೊದಲಾದ ಎಲ್ಲದಕ್ಕೂ, ಮೊದಲು ಹೇಳಿದಂತೆ, ರಸ ಮೊದಲಾದವುಗಳಿಗೆ ಹೇಗೋ ಹಾಗೆ ಈಶಾಧೀನವಾಗಿರುವಿಕೆ ಸಮಾನವಾಗಿದ್ದರೂ 'ರಸೋಽಹಮಸ್ಮಿ' ಇತ್ಯಾದಿಯಾಗಿ (ಜಲ ಮೊದಲಾದವುಗಳಿಂದ) ಪ್ರತ್ಯೇಕಗೊಳಿಸಿ ಹೇಳಿರುವುದು– ಲೋಕದಲ್ಲಿ ನೇಕಾರ ಮೊದಲಾದವರು ಬಟ್ಟೆ ಮೊದಲಾದ ದ್ರವ್ಯಗಳ ಬಗ್ಗೆ ಮಾತ್ರ

(ನಿರ್ಮಾಣ) ಕ್ರಿಯೆ ಉಳ್ಳವರೆಂದು ತಿಳಿದುಬರುವರು. ಆ ದ್ರವ್ಯಗಳ ಗಂಧ, ರಸ ಮೊದಲಾದ ಗುಣಗಳ ಬಗ್ಗೆ, ಆ ಗುಣಗಳಲ್ಲಿರುವ ಗಂಧತ್ವ ಮೊದಲಾದ ಧರ್ಮಗಳ ಬಗ್ಗೆ ಕ್ರಿಯೆ ಯುಳ್ಳವನೆಂದು ತಿಳಿದುಬರುವುದಿಲ್ಲ. ಆ ಗುಣಧರ್ಮಗಳು ಬಟ್ಟೆ ಮೊದಲಾದವುಗಳ ಉತ್ಪತ್ತಿಯನ್ನನುಸರಿಸಿ ಉತ್ಪನ್ನವಾಗುವುದಷ್ಟೆ . ಭಗವಂತ ಹಾಗಲ್ಲ. ಆದರ ಬದಲು, ಜಲ ಮೊದಲಾದವುಗಳ ಧರ್ಮಗಳಾದ ರಸಾದಿಗಳ ವಿಷಯದಲ್ಲಿ ಅವುಗಳ ಧರ್ಮಗಳಾದ ರಸತ್ವಾದಿಗಳ ವಿಷಯದಲ್ಲಿ ಪ್ರತ್ಯೇಕ ಪ್ರಯತ್ನವುಳ್ಳವನು; ಆ ಗುಣಧರ್ಮಗಳು (ಭಗವಂತನ) ಜಲ ಮೊದಲಾದ ವಸ್ತುಗಳ ನಿಯಮವನ್ನನುಸರಿಸಿ ಅಸ್ತಿತ್ವ ಮೊದಲಾದವುಗಳನ್ನು ಹೊಂದ ತಕ್ಕವುಗಳಲ್ಲ ಎಂಬುದನ್ನು ತಿಳಿಸಲು, ಅಂತೆಯೇ ಪರಮೇಶ್ವರನಿಗೆ ಜಲಾದಿಗಳ ಭೋಗಕ್ಕಿಂತಲೂ, ರಸಾದಿಗಳ ಭೋಗ ಅತಿಶಯವಾಗಿದೆ ಎಂಬುದನ್ನೂ ತಿಳಿಸಲು.

**ವಿವರಣೆ-** (1) ಜಲ ಮೊದಲಾದ ಪದಾರ್ಥಗಳಲ್ಲಿರುವ ರಸ ಮೊದಲಾದ ಸ್ವಾಭಾವಿಕ ಧರ್ಮಗಳು ಹೇಗೆ ಭಗವಂತನಿಗೆ ಅಧೀನವಾಗಿವೆಯೋ ಅಂತೆಯೇ ಜಲ ಮೊದಲಾದ ಧರ್ಮಿಗಳೂ ಕೂಡ ಭಗವಂತನಿಗೆ ಅಧೀನವೇ. ಆದರೂ, ಗೀತೆಯಲ್ಲಿ ಧರ್ಮಗಳನ್ನು ಮಾತ್ರ ಭಗವದಧೀನವೆಂದು ನಿರೂಪಿಸಲು ವಿಶೇಷಕಾರಣವಿದೆ. ಲೋಕದಲ್ಲಿ ಬಟ್ಟೆ ಮೊದಲಾದ ವಸ್ತುಗಳನ್ನು ನಿರ್ಮಿಸುವ ನೇಕಾರನೇ ಮೊದಲಾದವರು ಬಟ್ಟೆ ಮೊದಲಾದ ವಸ್ತುಗಳನ್ನು ನಿರ್ಮಿಸುವ ಕ್ರಿಯೆಗಳಲ್ಲಿ ಮಾತ್ರ ತೊಡಗುತ್ತಾರೆ. ಆ ಬಟ್ಟೆಯ ರೂಪರಸ ಗಂಧ ಮೊದಲಾದ ಸ್ವಾಭಾವಿಕ ಗುಣಗಳಾಗಲಿ, ಆ ಗುಣಗಳ ಧರ್ಮಗಳಾಗಲಿ ಅವನ ಕ್ರಿಯೆಗಳಿಂದಾಗಿ ಉಂಟಾಗುವ ವಸ್ತುಗಳಲ್ಲ. ಬಟ್ಟೆಯ ನಿರ್ಮಾಣವಾದಾಗ ಅವನ ಪ್ರಯತ್ನವಿಲ್ಲದೆ ಸ್ವಾಭಾವಿಕವಾಗಿ ಆ ಧರ್ಮಗಳು ತಲೆದೋರುವವು, ಆ ಗುಣಗಳ ಧರ್ಮಗಳೂ ಹಾಗೆಯೇ. ಆದರೆ ಭಗವಂತನು ನೇಕಾರನಂತಲ್ಲ. ಜಲ ಮೊದಲಾದ ವಸ್ತುಗಳು ಹೇಗೆ ಭಗವಂತನ ಸೃಷ್ಟಿಕ್ರಿಯೆಯಿಂದಾಗಿ ಅಸ್ತಿತ್ವಕ್ಕೆ ಬರುವವೋ ಹಾಗೆಯೇ ಆ ವಸ್ತುಗಳ ಸ್ವಾಭಾವಿಕಗುಣಗಳು ಆ ಗುಣಗಳ ಧರ್ಮಗಳು ಎಲ್ಲವೂ ಭಗವಂತನ ಸೃಷ್ಟಿ ಕ್ರಿಯೆಯಿಂದಾಗಿಯೇ ಅಸ್ತಿತ್ವವನ್ನು ಪಡೆಯುವವು ಎಂಬ ವಿಶೇಷವನ್ನು ಸೂಚಿಸುವ ಸಲುವಾಗಿಯೇ ಗೀತೆಯಲ್ಲಿ ಜಲಾದಿವಸ್ತುಗಳ ಸ್ವಾಭಾವಿಕಧರ್ಮಗಳನ್ನು ಭಗವದಧೀನವೆಂದು ಹೇಳಲಾಗಿದೆ.

ಜಲ ಮೊದಲಾದ ವಸ್ತುಗಳ ಭೋಗವು, ಭಗವಂತನಿಗಿದೆ. ಆದರೆ, ಆ ವಸ್ತುಗಳ ಭೋಗಕ್ಕಿಂತಲೂ ಅತಿಶಯವಾದ, ರಸಾದಿಧರ್ಮಗಳ ಭೋಗ ಭಗವಂತನಿಗಿದೆ ಎಂಬ ವಿಶೇಷವನ್ನು ಸೂಚಿಸುವುದಕ್ಕಾಗಿಯೂ , ರಸ ಮೊದಲಾದ ಧರ್ಮಗಳು ಭಗವದಧೀನವೆಂದು ಪ್ರತ್ಯೇಕವಾಗಿ ಹೇಳಲಾಗಿದೆ.

ಭಗವದುಪಾಸನೆಯಲ್ಲಿ ರಸ ಮೊದಲಾದ ಧರ್ಮಗಳನ್ನು ಪ್ರತಿಮೆಯನ್ನಾಗಿ ಗ್ರಹಿಸಬೇಕೆಂಬ

ವಿವಕ್ಷೆ ಗೀತೆಗಿದೆ. ಉಪಾಸ್ಯವಾದ ದೇವತೆಯಿಂದ ಉಪಾಸನೆಯಲ್ಲಿ ಪ್ರತೀಕವಾದದ್ದು ಭಿನ್ನವಾಗಿರುವುದೆಂದು ಪ್ರಸಿದ್ಧವಾದ ವಿಷಯ. ಆದ್ದರಿಂದ ರಸಾದಿಗಳು ಭಗವಂತನಿಂದ ಅಭಿನ್ನವಾದದ್ದು ಎಂಬ ಆಶಯ ಗೀತೆಗೆ ಸರ್ವಥಾ ಇಲ್ಲ. ಆದರೆ ಒಂದು ಪ್ರಶ್ನೆಗೆ ಇಲ್ಲಿ ಅವಕಾಶವಿದೆ. ರಸ ಮೊದಲಾದ ಧರ್ಮಗಳು ಭಗವದುಪಾಸನೆಯಲ್ಲಿ ಹೇಗೆ ಪ್ರತಿಮೆಗಳಾಗುವವೋ ಹಾಗೆಯೇ ಜಲ ಮೊದಲಾದ ವಸ್ತು ಪ್ರತಿಮೆಯಾಗಬಲ್ಲದು. **'ಯೋಽಪ್ಸು ತಿಷ್ಠನ್'** ಇತ್ಯಾದಿ ಶ್ರುತಿಗಳು ಇದನ್ನೇ ಹೇಳುವವು. ಆದ್ದರಿಂದ ಜಲಾದಿ ಪದಾರ್ಥಗಳನ್ನು ಬಿಟ್ಟು ರಸ ಮೊದಲಾದ ಅವುಗಳ ಧರ್ಮಗಳನ್ನು ವಿಶೇಷವಾಗಿ ಪ್ರತಿಮೆಯೆಂದು ಹೇಳುವುದರ ಆಂತರ್ಯವೇನು ? ಎಂದು. ಅದಕ್ಕೆ ಸಮಾಧಾನವಿಷ್ಟೇ– ಉಪಾಸಕರು ಜಲಾದಿಗಳಲ್ಲಿ ಭಗವಂತನ ಉಪಾಸನೆ ಮಾಡುವುದಕ್ಕಿಂತ ಮಿಗಿಲಾಗಿ ಅವುಗಳ ಧರ್ಮಗಳಲ್ಲಿ ಭಗವಂತನ ಉಪಾಸನೆ ಮಾಡತಕ್ಕದ್ದು – ಎಂದು.

**ಕಿಂಚ ರಸಾದಯೋಽತ್ರ ಹರೇರುಪಾಸನೇ ಪ್ರತಿಮಾತ್ವೇನ ವಿವಕ್ಷಿತಾಃ । ರಸೋಽಹಮಸ್ಮಿ ಇತ್ಯಾದಿರೂಪೇಣ ಪ್ರತಿಮಾಯಾಂ ಚಾಭೇದೋಕ್ತಿಃ ನಾಮ ಬ್ರಹ್ಮೇತ್ಯುಪಾಸೀತ (ಛಾಂ 7-1-5) ಇತ್ಯಾದೌ ಪ್ರಸಿದ್ಧಾ । ತಥಾ ಚಾಬಾದಿಷು ಭಗವದುಪಾಸನಾಪೇಕ್ಷಯಾ ರಸಾದಿಷು ತದುಪಾಸ್ತೇರತಿಶಯಾಚ್ಚ ವಿಶಿಷ್ಯೋಕ್ತಿಃ ।**

**ಅಪಿ ಚ ಜ್ಞಾನಾರ್ಥಿನೋ ಹಿ 'ರಸಾದ್ಯಭಿಮಾನಿದೇಹೇಷು ಭಗವಾನ್ಸರ್ವತ್ರ ತಿಷ್ಠತಿ, ಅಬಾದಿಮಾನಿನಸ್ತು ತತ್ಪಾರ್ಷದಾ' ಇತ್ಯುಪಾಸತೇ । ತತೋಽಪಿ ವಿಶಿಷ್ಯೋಕ್ತಿಃ ।**

**ಅನುವಾದ–** ಮತ್ತು , ರಸ ಮೊದಲಾದವುಗಳು ಶ್ರೀಹರಿಯ ಉಪಾಸನೆ ಮಾಡುವಾಗ ಪ್ರತಿಮೆಗಳೆಂದು ಇಲ್ಲಿ ವಿವಕ್ಷಿತವಾಗಿವೆ. **'ರಸೋಽಹಮಸ್ಮಿ'** – 'ನಾನು ರಸವಾಗಿದ್ದೇನೆ' ಇತ್ಯಾದಿ ಪ್ರತಿಮೆಯಲ್ಲಿ (ಉಪಾಸ್ಯನಾದ) ಭಗವಂತನ ಅಭೇದವನ್ನು ಹೇಳುವುದು **'ನಾಮ ಬ್ರಹ್ಮೇತ್ಯುಪಾಸೀತ'** ಇತ್ಯಾದಿ ಸ್ಥಳಗಳಲ್ಲಿ ಪ್ರಸಿದ್ಧವಾಗಿದೆ. ಜಲ ಮೊದಲಾದವುಗಳಲ್ಲಿ ಭಗವದುಪಾಸನೆಗಿಂತಲೂ (ಅವುಗಳ ಧರ್ಮಗಳಾದ) ರಸ ಮೊದಲಾದವುಗಳಲ್ಲಿ ಭಗವದುಪಾಸನೆಯು ಅತಿಶಯವನ್ನು ಪಡೆದಿರುವುದರಿಂದಲೂ (ರಸಾದಿಗಳನ್ನು) ಪ್ರತ್ಯೇಕಗೊಳಿಸಿ ಹೇಳಲಾಗಿದೆ.

ಅಲ್ಲದೆ, ಭಗವದಪರೋಕ್ಷ ಜ್ಞಾನವನ್ನು ಬಯಸುವವರು 'ರಸ ಮೊದಲಾದವುಗಳ ಅಭಿಮಾನಿದೇವತೆಗಳ ದೇಹಗಳಲ್ಲಿ ಭಗವಂತ ಸರ್ವತ್ರ ನೆಲೆಸಿದ್ದಾನೆ. ಜಲ ಮೊದಲಾದವುಗಳ ಅಭಿಮಾನಿಗಳಾದರೋ ಆ ಭಗವಂತನ ಪರಿಚಾರಕರು' ಎಂದು ಉಪಾಸನೆ ಮಾಡುವರು. ಆದುದರಿಂದಲೂ, ರಸ ಮೊದಲಾದವುಗಳನ್ನು ಜಲಾದಿಗಳಿಂದ ಪೃಥಕ್ಕರಿಸಿ ಹೇಳಲಾಗಿದೆ.

**ವಿವರಣೆ–** 'ಗೀತಾಕಲ್ಪ' ಎಂಬ ಪ್ರಮಾಣಗ್ರಂಥವನ್ನಾಧರಿಸಿ ಆಚಾರ್ಯರು ಗೀತಾಭಾಷ್ಯದಲ್ಲಿ ಹೇಳಿರುವ ವಿಷಯಗಳನ್ನು ಶ್ರೀರಾಘವೇಂದ್ರಸ್ವಾಮಿಗಳು ಇಲ್ಲಿ ಸಂಗ್ರಹಿಸಿದ್ದಾರೆ. ಗೀತಾ-ಕಲ್ಪದ ವಾಕ್ಯಗಳು ಹೀಗಿದೆ–

'ರಸಾದೀನಾಂ ರಸಾದಿತ್ವೇ ಸ್ವಭಾವತ್ವೇ ತಥೈವ ಚ ।
ಸಾರತ್ವೇ ಸರ್ವಧರ್ಮೇಷು ವಿಶೇಷೇಣಾಪಿ ಕಾರಣಮ್ ॥
ಸಾರಭೋಕ್ತಾ ಚ ಸರ್ವತ್ರ ಯತೋಽತೋ ಜಗದೀಶ್ವರಃ ।
ರಸಾದಿಮಾನಿನಾಂ ದೇಹೇ ಸ ಸರ್ವತ್ರ ವ್ಯವಸ್ಥಿತಃ ।
ಅಬಾದಯಃ ಪಾರ್ಷದಾ ಧ್ಯೇಯಃ ಸ ಜ್ಞಾನಿನಾಂ ಹರಿಃ ।'

**ಯದ್ವಾ 'ಸರ್ವತ್ರ ವಿಷ್ಣೋರುತ್ಕರ್ಷಜ್ಞಾನಂ ಜ್ಞಾನಮಿತೀರ್ಯತೇ । ತದ್ವಿಶೇಷ-ಪರಿಜ್ಞಾನಂ ವಿಜ್ಞಾನಮಿತಿ ಗೀಯತೇ' ಇತಿ ಸ್ಮೃತ್ಯಾ ಸರ್ವತ್ರ ಸಾಮಾನ್ಯತೋ ವಿಷ್ಣೋರುತ್ಕರ್ಷಜ್ಞಾನಂ ಜ್ಞಾನಪದೇನ ವಿವಕ್ಷಿತಮ್। 'ಅಪರೇಯಂ' ಇತ್ಯಾದಿ-ನೋಕ್ತದಿಶಾ ಜಡಪ್ರಕೃತಿಬ್ರಹ್ಮಾದಿಜೀವಾಶ್ಚಾವರಾಃ । ಅಸುರಜನಾ ಅವರತರಾಃ । ಶ್ರೀರ್ಮುಕ್ತಜನಾಶ್ಚ- ಪರಾಃ । ತತ್ರಾಪಿ ಶ್ರೀರ್ಮುಖ್ಯಪರಾ । ಕದಾಽಪಿ ದುಃಖಾಸಂಬಂಧಾ। ಮುಕ್ತಾಸ್ತು ಪರಾಭಾಸಾಃ ಕದಾಚಿದ್ ದುಃಖಸಂಬಂಧಾತ್ । ತೇ ಸರ್ವೇ ಹರ್ಯಧೀನಾಃ । ಹರಿಸ್ತು ಪರತರಃ ।**

**ಅನುವಾದ–** ಎಲ್ಲೆಡೆಯಲ್ಲಿ ವಿಷ್ಣುವಿನ ಉತ್ಕರ್ಷವನ್ನು ಗ್ರಹಿಸುವ ಜ್ಞಾನವು 'ಜ್ಞಾನ' ಎಂದು ಕರೆಯಲ್ಪಡುವುದು. ಭಗವಂತನ ಉತ್ಕರ್ಷವಿಶೇಷವನ್ನು ಗ್ರಹಿಸುವ ಜ್ಞಾನವು ವಿಜ್ಞಾನವೆಂದು ಹೇಳಲ್ಪಡುವುದು .

'ಸರ್ವತ್ರ ವಿಷ್ಣೋರುತ್ಕರ್ಷಜ್ಞಾನಂ ಜ್ಞಾನಮಿತೀರ್ಯತೇ ।
ತದ್ವಿಶೇಷಪರಿಜ್ಞಾನಂ ವಿಜ್ಞಾನಮಿತಿ ಗೀಯತೇ ।'

ಎಂಬ ಸ್ಮೃತಿಯಲ್ಲಿ ಹೇಳಿರುವಂತೆ, ಸರ್ವತ್ರ ಸಾಮಾನ್ಯರೀತಿಯಿಂದ ವಿಷ್ಣುವಿನ ಉತ್ಕರ್ಷವನ್ನು ಗ್ರಹಿಸುವ ಜ್ಞಾನವು ಜ್ಞಾನಪದದಿಂದ ವಿವಕ್ಷಿತವಾಗಿದೆ. '**ಅಪರೇಯಂ**' (ಗೀ.7-5)ಇತ್ಯಾದಿ ಶ್ಲೋಕದಿಂದ ಹೇಳಿದಂತೆ ಜಡಪ್ರಕೃತಿ ಮತ್ತು ಬ್ರಹ್ಮಾದಿಜೀವರು ಅವರರು. ಅಸುರಜನರು ಅವರತರರು. ಲಕ್ಷ್ಮೀದೇವಿ ಮತ್ತು ಮುಕ್ತಜನರು ಪರರು. ಅವರಲ್ಲೂ ಲಕ್ಷ್ಮಿಯು ಎಂದೂ ದುಃಖಸಂಬಂಧವಿಲ್ಲದಿರುವುದರಿಂದ ಮುಖ್ಯ ಪರಳು. ಮುಕ್ತರು ಕೆಲವು ಕಾಲದಲ್ಲಿ ಅಂದರೆ ಸಂಸಾರಕಾಲದಲ್ಲಿ ದುಃಖಸಂಬಂಧವನ್ನು ಪಡೆದಿದ್ದವರಾದ್ದರಿಂದ ಪರಾಭಾಸರು. ಅವರೆಲ್ಲರೂ ಶ್ರೀಹರಿಗೆ ಅಧೀನರು. ಶ್ರೀಹರಿಯಾದರೋ ಪರತರನು.

**ಅತ್ರ ತರಶಬ್ದಸ್ತಮಬರ್ಥಶ್ಚ ಭವತಿ । ಹರೇರನ್ಯಸ್ಯ ಪರತಮಸ್ಯಾಭಾವಾದಯ-ಮೇವ ಪರತಮ ಇತಿ ವಕ್ತವ್ಯತ್ವಾತ್ । ಪರತ್ವೇನೋಕ್ತ ಶ್ರೀಮುಕ್ತಾನಾಂ ಹರೇಶ್ಚ ಮಧ್ಯೇ ಕಸ್ಯಚಿದ್ಪರತರಸ್ಯಾಭಾವೇನಾಯಮೇವ ಪರತರಶ್ಚೇತಿ ವಾಚ್ಯತ್ವಾತ್ । ಹರಿರೇವ ಪರತರಃ ಪರತಮಶ್ಚ । ತತೋಽನ್ಯತ್ಪರತರಂ ಪರತಮಂ ವಾ ಕಿಂಚಿ-ನ್ನಾಸ್ತಿ । ನಚ ಮುಕ್ತಾಃ ಪರಾಃ ಶ್ರೀಃ ಪರತರೇತಿ ಶಂಕ್ಯಮ್ । 'ಮುಕ್ತಸ್ತು ಸ್ಯಾತ್ಪರಾಭಾಸ ಇತಿ ತಾತ್ಪರ್ಯೋಕ್ತ್ಯಾ ತೇಷಾಂ ಪರತ್ವಾಭಾವಾತ್ । 'ಅಭಾವಾ-ದಂತರಾಽನ್ಯಸ್ಯ ತ್ವಿಹೈಕಾರ್ಥೌ ತರಪ್ತಮೌ' ಇತಿ ಸ್ಮೃತೇಶ್ಚೇತ್ಯೇವಂ ಪರಾಪರತ್ವ-ವಿವೇಚನಪೂರ್ವಂ ಹರೇಃಸರ್ವೋತ್ತಮತ್ವಂ 'ಜ್ಞಾನಂ ತೇಽಹಂ ಸವಿಜ್ಞಾನಂ' ಇತಿ ಪ್ರತಿಜ್ಞಾತಂ ಜ್ಞಾನಂ ವಿಜ್ಞಾನಂ ಚ ದ್ವಯಮಪಿ 'ಭೂಮಿಃ' ಇತ್ಯಾದಿ ಶ್ಲೋಕಚತುಷ್ಟಯೇನೋಕ್ತಮ್ । ತದ್ವಿಜ್ಞಾನಮೇವ ಸರ್ವಸ್ಯ ತದಧೀನತ್ವ-ಪ್ರದರ್ಶನೇನಾಹ ರಸ ಇತ್ಯಾದಿನಾ ॥**

**ಅನುವಾದ–** **'ಪರತರಃ'** ಎಂಬಲ್ಲಿ **'ತರ'**ಶಬ್ದವು ತಮಪ್‌ಪ್ರತ್ಯಯದ ಅರ್ಥವನ್ನು ಪಡೆದಿದೆ. ಏಕೆಂದರೆ, ಶ್ರೀಹರಿಗಿಂತ ಅನ್ಯರು ಪರತಮರಾದವರು ಇಲ್ಲವಾದ್ದರಿಂದ ಶ್ರೀಹರಿಯೇ ಪರತಮನೆಂದು ಹೇಳಬೇಕಾಗಿದೆ. ಅಂತೆಯೇ, ಪರರೆಂದು ಹೇಳಲಾದ ಲಕ್ಷ್ಮೀ – ಮುಕ್ತಜೀವರು ಮತ್ತು ಶ್ರೀಹರಿಯ ನಡುವೆ ಪರತರನೊಬ್ಬನು ಇಲ್ಲದಿರುವುದರಿಂದ ಶ್ರೀಹರಿಯೇ ಪರತರನೆಂದೂ ಹೇಳಬೇಕಾಗಿದೆ. ಆದ್ದರಿಂದ, ಶ್ರೀಹರಿಯೇ ಪರತರನೂ, ಪರತಮನೂ ಆಗಿರುವನು. ಅವನಿಂದ ಬೇರೆ ಪರತರವಾಗಲಿ, ಪರತಮವಾಗಲಿ ಯಾವುದೂ ಇಲ್ಲ.

**ಶಂಕೆ–** ಮುಕ್ತರು ಪರರು, ಲಕ್ಷ್ಮೀದೇವಿಯು ಪರತರಳು ಎಂದು ಹೇಳಬಹುದಲ್ಲವೆ ?

**ಸಮಾಧಾನ –** **'ಮುಕ್ತಸ್ತು ಸ್ಯಾತ್ ಪರಾಭಾಸಃ'** – 'ಮುಕ್ತನು ಪರಾಭಾಸನೆಂದೆನಿಸುವನು' ಎಂದು ಗೀತಾತಾತ್ಪರ್ಯದಲ್ಲಿ ಹೇಳಿದಂತೆ ಮತ್ತು **'ಅಭಾವಾತ್ ಅಂತರಾ ಅನ್ಯಸ್ಯ ತ್ವಿಹೈಕಾರ್ಥೌ ತರಪ್ತಮೌ'**– ಲಕ್ಷ್ಮೀ – ಮುಕ್ತರು ಮತ್ತು ಶ್ರೀಹರಿ ಇವರ ಮಧ್ಯೆ ಇನ್ನೊಬ್ಬರಿಲ್ಲದಿರುವುದರಿಂದ ಪ್ರಸಕ್ತ ಸಂದರ್ಭದಲ್ಲಿ **'ತರಪ್'** ಮತ್ತು **'ತಮಪ್'** ಪ್ರತ್ಯಯಗಳು ಒಂದೇ ಅರ್ಥವನ್ನು ಪಡೆದಿವೆ'ಎಂಬ ಸ್ಮೃತಿ ವಾಕ್ಯಕ್ಕನುಗುಣವಾಗಿ ಶ್ರೀಹರಿಯೇ ಪರತರನು ಮತ್ತು ಪರತಮನೆಂದು ಹೇಳಬೇಕಾಗುವುದು.

ಹೀಗೆ, ಪರತ್ವ ಮತ್ತು ಅಪರತ್ವಗಳ ವಿವೇಚನ ಪೂರ್ವಕವಾದ ಶ್ರೀಹರಿಯ ಸರ್ವೋತ್ತಮತ್ವ ಜ್ಞಾನ ಮತ್ತು **'ಜ್ಞಾನಂ ತೇಽಹಂ ಸವಿಜ್ಞಾನಂ'** ಎಂದು ಪ್ರತಿಜ್ಞೆ ಮಾಡಲಾದ ವಿಜ್ಞಾನ ಇವೆರಡನ್ನೂ **'ಭೂಮಿಃ'** ಎಂದು ಆರಂಭಿಸಿ ನಾಲ್ಕು ಶ್ಲೋಕಗಳಿಂದ ಹೇಳಲಾಯಿತು.

ಅನಂತರ, ಆ ವಿಜ್ಞಾನವನ್ನೇ ಸರ್ವವೂ ಶ್ರೀಹರಿಯ ಅಧೀನವೆಂದು ತಿಳಿಸುವ ಮೂಲಕ 'ರಸಃ' ಇತ್ಯಾದಿ ಶ್ಲೋಕದಿಂದ ಹೇಳಲಾಗಿದೆ.

**ಅತ್ರ ರಸಾದಿಶಬ್ದಾಃ ತದ್ಭೋಕ್ತೃತ್ವ-ತನ್ನಿಯಂತೃತ್ವಹೇತುನಾ ಭಗವನ್ನಾಮಾನಿ । ತಥಾ ಹಿ । ಅಪ್ಸ್ವಿತ್ಯಾದಿಸಪ್ತಮ್ಯೋಽಧಿಕರಣಸಪ್ತಮ್ಯಃ । ಅಪ್ಸು ಸ್ಥಿತ್ವಾ ರಸಮಾದ-ದಾಮೀತಿ ತಂ ಪ್ರೇರಯಾಮಿ ಚೇತಿ ರಸನಾಮಾಽಹಮಸ್ಮಿ । ಶಶಿಸೂರ್ಯಯೋಃ ಸ್ಥಿತ್ವಾ ಸ್ವಯಂ ಪ್ರಭಾಸಮಾನತ್ವಾತ್ ಪ್ರಭಾಽಹಮಸ್ಮಿ । ಸರ್ವದೇವೇಷು ಸ್ಥಿತ್ವಾ ಸ್ವಾತ್ಮಾನಂ ಪ್ರಣೌತಿ ಸ್ತಾವಕಂ ಪ್ರೇರಯತಿ ಇತಿ ಪ್ರಣವನಾಮಾಽಸ್ಮಿ । ಖೇ ಸ್ಥಿತ್ವಾ ಶಬ್ದಂ ಪ್ರೇರಯತೀತಿ ಶಬ್ದನಾಮಾಽಸ್ಮಿ । ಸ್ವಯಂ ಪುಣ್ಯಃ ಪುಣ್ಯಗಂಧಃ ಸನ್ ಪೃಥಿವ್ಯಾಂ ಸ್ಥಿತ್ವಾ ಸುರಭ್ಯಸುರಭಿತಯಾ ಗಂಧಂ ಪ್ರೇರಯತೀತಿ ಗಂಧನಾಮಾ । ವಿಭಾವಾಸಾವಗ್ನೌ ಸ್ಥಿತ್ವಾ ತೇಜಃಪ್ರೇರಕತ್ವಾತ್ ತೇಜೋನಾಮಾ । ಭೂತೇಷು ಜೀವನದತ್ವಾಜ್ಜೀವನನಾಮಾ । ತಪಸ್ವಿಷು ಸ್ಥಿತ್ವಾ ತಪಃ ಕುರುತೇ ತಪಃ ಪ್ರೇರಯತಿ ಚೇತಿ ತಪೋನಾಮಾ । ಬೀಜಪ್ರೇರಕತ್ವಾತ್ ಬೀಜನಾಮಾ । ಬುದ್ಧಿಮತಾಮ್ । ಸಪ್ತಮ್ಯರ್ಥೇ ಷಷ್ಠೀ । ಬುದ್ಧಿಮತ್ಸು ಸ್ಥಿತ್ವಾ ಬೋದ್ಧೃತ್ವಾತ್ ಬುದ್ಧಿಪ್ರೇರಕತ್ವಾದ್ ಬುದ್ಧಿನಾಮಾ । ತೇಜಸ್ವಿಷು ಸ್ಥಿತ್ವಾ ತೇಜಃ ಪ್ರೇರಯತೀತಿ ತೇಜೋನಾಮಾ । ಅಬಾದಿಸರ್ವವಸ್ತೂನಾಂ ರಸಗಂಧಪ್ರಭಾದಿಧರ್ಮಾನ್ ವ್ಯವಸ್ಥಯಾ ದದಾತೀತಿ ರಸಾದಿನಾಮಾ (ಅಹಂ) ಹರಿರಿತ್ಯರ್ಥಃ ॥ 10 ॥**

**ಅನುವಾದ-** ಇಲ್ಲಿ 'ರಸ ' ಮೊದಲಾದ ಶಬ್ದಗಳು ರಸ ಮೊದಲಾದವುಗಳ ಭೋಕ್ತೃತ್ವ ಅವುಗಳ ನಿಯಾಮಕತ್ವವೆಂಬ ಕಾರಣದಿಂದ ಭಗವಂತನ ನಾಮಗಳಾಗಿವೆ. ಈ ವಿಷಯವನ್ನು ಈ ರೀತಿಯಾಗಿ ಸ್ಪಷ್ಟಪಡಿಸಬಹುದು –

'**ಅಪ್ಸು**' ಮೊದಲಾದ ಶಬ್ದಗಳಲ್ಲಿ ಸಪ್ತಮೀವಿಭಕ್ತಿಗಳು ಅಧಿಕರಣ ಎಂಬ ಅರ್ಥವನ್ನು ಹೇಳುವವು. 'ಜಲದಲ್ಲಿದ್ದು ರಸವನ್ನು ಸ್ವೀಕರಿಸುವೆನು ಮತ್ತು ಆ ರಸವನ್ನು ಪ್ರೇರಿಸುವೆನು ಎಂಬ ಕಾರಣದಿಂದ ನಾನು ರಸನಾಮಕನಾಗಿರುವೆನು. ಚಂದ್ರಸೂರ್ಯರಲ್ಲಿದ್ದು ಸ್ವಯಂ ಪ್ರಕಾಶಮಾನನಾಗಿರುವುದರಿಂದ ನಾನು ಪ್ರಭೆ ಎಂದೆನಿಸುವೆನು. ಎಲ್ಲ ದೇವತೆಗಳಲ್ಲಿದ್ದು ತನ್ನನ್ನು ನಮಸ್ಕರಿಸುವವನು ಮತ್ತು ಸ್ತುತಿಸುವವರನ್ನು ಪ್ರೇರಿಸುವನು ಎಂಬ ಕಾರಣದಿಂದಾಗಿ ಪ್ರಣವ ನೆಂದೆನಿಸುವೆನು. ಆಕಾಶದಲ್ಲಿದ್ದು ಶಬ್ದವನ್ನು ಪ್ರೇರಿಸುವ ಕಾರಣ ಶಬ್ದನಾಮಕವಾಗಿರುವೆನು. ಸ್ವಯಂ ಶುಭಗಂಧವುಳ್ಳವನಾಗಿದ್ದು ಪೃಥಿವಿಯಲ್ಲಿ ಇದ್ದು ಸುಗಂಧ- ದುರ್ಗಂಧವಾಗುವಂತೆ ಗಂಧವನ್ನು ಪ್ರೇರಿಸುವೆನೆಂದು ಗಂಧ ಎಂಬ ಹೆಸರಿನಿಂದ ಕರೆಸಲ್ಪಡುವೆನು. ಅಗ್ನಿಯಲ್ಲಿದ್ದು

ಆದರ ತೇಜಸ್ಸಿಗೆ ಪ್ರೇರಕನಾಗಿರುವುದರಿಂದ ತೇಜಸ್ಸೆಂದೆನಿಸುವೆನು. ಎಲ್ಲ ಪ್ರಾಣಿಗಳಲ್ಲಿದ್ದು ಅವರಿಗೆ ಜೀವನವನ್ನು ಕೊಡುವ ಕಾರಣ ಜೀವನನಾಮಕನಾಗಿರುವೆನು. ತಪಸ್ವಿಗಳಲ್ಲಿದ್ದು ತಪಸ್ಸನ್ನು ಮಾಡುವ ಮತ್ತು ತಪಸ್ಸನ್ನು ಪ್ರೇರಿಸುವ ಕಾರಣ ಹರಿಯು ತಪೋನಾಮಕನಾಗಿರುವನು. ಬೀಜಗಳಿಗೆ ಪ್ರೇರಕನಾದ್ದರಿಂದ ಬೀಜ ಎಂದೆನಿಸುವನು. '**ಬುದ್ಧಿಮತಾಂ**' ಎಂಬಲ್ಲಿ ಷಷ್ಠೀ ವಿಭಕ್ತಿಯು ಸಪ್ತಮೀವಿಭಕ್ತಿಯ ಅರ್ಥವನ್ನೇ ಹೇಳುವುದು. ಬುದ್ಧಿಯುಳ್ಳವರಲ್ಲಿದ್ದು ತಿಳಿಯುವವ ನಾದ್ದರಿಂದ ಮತ್ತು ಅವರ ಬುದ್ಧಿಗೆ ಪ್ರೇರಕನಾದ್ದರಿಂದ ಬುದ್ಧಿ ಎನ್ನುವುದು ನನ್ನ ಹೆಸರು. ತೇಜಸ್ವಿಗಳಲ್ಲಿದ್ದು ತೇಜಸ್ಸನ್ನು ಪ್ರೇರಿಸುವುದರಿಂದ ತೇಜೋನಾಮಕನಾಗಿರುವೆನು. **ಅಪ್** ಮೊದಲಾದ ಎಲ್ಲ ವಸ್ತುಗಳಿಗೆ ರಸ, ಗಂಧ, ಪ್ರಭೆ ಮೊದಲಾದ ಧರ್ಮಗಳನ್ನು ಆಯಾಯ ಧರ್ಮಗಳು ಆಯಾಯಾ ವಸ್ತುಗಳಿಗೆ ಸಂಬಂಧಿಸುವಂತೆ ವ್ಯವಸ್ಥೆಯಿಂದ ಕೊಡುವ ಕಾರಣ ಶ್ರೀಹರಿಯು ರಸ ಮೊದಲಾದ ಹೆಸರುಗಳಿಂದ ಕರೆಸಲ್ಪಡುವನೆಂದು ಅರ್ಥ. ॥ 10 ॥

**ವಿವರಣೆ-** '**ಜ್ಞಾನಂ ತೇಽಹಂ ಸವಿಜ್ಞಾನಂ**' ಎಂದು ವಿಜ್ಞಾನಸಹಿತವಾಗಿ ಜ್ಞಾನವನ್ನು ಉಪದೇಶಿಸುವೆನೆಂದು ಶ್ರೀಕೃಷ್ಣನು ಹೇಳಿದ ಜ್ಞಾನವು ಭಗವದಧೀನವೆಂದು ತಿಳಿಯಬೇಕಾದ ಪಂಚಮಹಾಭೂತಗಳೆಂದೂ, ಅಂತೆಯೇ ವಿಜ್ಞಾನವೆಂದರೆ ವಿಶೇಷವಾಗಿ ತಿಳಿಯಬೇಕಾದ ಹರಿಯ ಅಲೌಕಿಕ ಮಹಿಮೆಯೆಂದೂ ಭಾವಿಸಿ ಹಿಂದೆ ವ್ಯಾಖ್ಯಾನಮಾಡಲಾಯಿತು. ಈಗ, ಜ್ಞಾನವಿಜ್ಞಾನಪದಗಳು ಸಾಮಾನ್ಯತಃ ವಿಷ್ಣುವಿನ ಉತ್ಕರ್ಷಜ್ಞಾನ, ವಿಶೇಷತಃ ವಿಷ್ಣುವಿನ ಉತ್ಕರ್ಷಜ್ಞಾನಗಳನ್ನು ಹೇಳುವವೆಂದು ಭಾವಿಸಿ ಅದಕ್ಕನುಗುಣವಾಗಿ 'ರಸೋಽಹಮಪ್ಸು' ಇತ್ಯಾದಿ ಶ್ಲೋಕಗಳಿಗೆ ವ್ಯಾಖ್ಯಾನಿಸಲಾಗಿದೆ.

**ಬಲಂ ಬಲವತಾಂ ಚಾಽಹಂ ಕಾಮರಾಗವಿವರ್ಜಿತಮ್ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥ 11 ॥**

**ಅರ್ಥ-** ಬಲಶಾಲಿಗಳಲ್ಲಿದ್ದು ಕಾಮ-ರಾಗರಹಿತವಾದ ಬಲ ನಾನಾಗಿರುವೆ. ಹೇ ಭರತ-ಶ್ರೇಷ್ಠ ! ಜೀವರಲ್ಲಿ ಧರ್ಮವಿರುದ್ಧವಲ್ಲದ ಕಾಮ ನಾನಾಗಿರುವೆನು.

**ಬಲವತಾಂ ಬಲವತ್ಸು ಸ್ಥಿತ್ವಾ ಕಾಮರಾಗವಿವರ್ಜಿತಂ ಬಲಮಸ್ಮಿ । ವಿಷಯ-ಭೋಗನಿರಪೇಕ್ಷತಯಾ ನಿತ್ಯಪೂರ್ಣಬಲವತ್ತ್ವಾತ್ ಕಾಮವರ್ಜಿತಬಲಾತ್ಮಾಽಸ್ಮಿ । ಅಸ್ಥಾನೇ ಅಪ್ರಯುಜ್ಯಮಾನತ್ವಾದ್ರಾಗವಿವರ್ಜಿತಬಲಾತ್ಮಾಽಸ್ಮೀತ್ಯರ್ಥಃ । ರಾಗಿಣೋ ಹ್ಯಸ್ಥಾನೇಽಪಿ ಬಲಂ ಪ್ರಯುಂಜತೇ । ಭೂತೇಷು ಧರ್ಮಾವಿರುದ್ಧೋ ಯಃ ಕಾಮಃ ಸೋಽಸ್ಮೀತ್ಯರ್ಥಃ । ಅತ್ರ ಪುಣ್ಯೋ ಗಂಧ ಇತಿ**

**ಕಾಮರಾಗವಿವರ್ಜಿತಮಿತಿ ಗಂಧಬಲಾದೇಃ ಪುಣ್ಯತ್ವಾದಿವಿಶೇಷಣೋಪಾದಾನಂ ತು ಗಂಧಬಲಕಾಮಾದಿಷು ವಿಶಿಷ್ಟೇಷ್ವೇವ ಭಗವಾನುಪಾಸ್ಯಃ । ನ ತ್ವಶುಚಿಷು ಧರ್ಮವಿರುದ್ಧೇಷ್ವಿತಿ ಜ್ಞಾಪನಾಯೇತಿ ಧ್ಯೇಯಮ್ ।। 11 ।।**

**ಅನುವಾದ-** ಬಲವತಾಂ= ಬಲವಂತರಲ್ಲಿ ಇದ್ದು ಕಾಮ, ರಾಗಗಳಿಂದ ರಹಿತವಾದ ಬಲವಾಗಿದ್ದೇನೆ. ವಿಷಯಭೋಗದ ಅಪೇಕ್ಷೆ ಇಲ್ಲದೆ ನಿತ್ಯವೂ ಪರಿಪೂರ್ಣವೂ ಆದ ಬಲವುಳ್ಳವನಾದ್ದರಿಂದ ಕಾಮರಹಿತವಾದ ಬಲಸ್ವರೂಪನಾಗಿದ್ದೇನೆ. ಯೋಗ್ಯವಲ್ಲದ ಸ್ಥಳದಲ್ಲಿ ಪ್ರಯೋಗಮಾಡದಿರುವುದರಿಂದ ರಾಗ ರಹಿತವಾದ ಬಲಸ್ವರೂಪನಾಗಿದ್ದೇನೆ ಎಂದು ಅರ್ಥ. ರಾಗವುಳ್ಳವರಷ್ಟೇ ಬಲಪ್ರಯೋಗಕ್ಕೆ ಅರ್ಹವಲ್ಲದ ಸ್ಥಳದಲ್ಲೂ ಬಲವನ್ನು ಪ್ರಯೋಗಿಸತಕ್ಕವರು ! ಚೇತನರಲ್ಲಿ ಧರ್ಮಕ್ಕೆ ವಿರುದ್ಧವಲ್ಲದ ಕಾಮ ಯಾವುದಿದೆಯೋ ಅದು ನಾನಾಗಿರುವೆನು ಎಂದರ್ಥ. ಇಲ್ಲಿ, '**ಪುಣ್ಯೋ ಗಂಧಃ** ಎಂದು ಕಾಮ , ರಾಗ ವಿವರ್ಜಿತವೆಂದು ಗಂಧ, ಬಲ ಮೊದಲಾದವುಗಳಿಗೆ ಪುಣ್ಯತ್ವ ಮೊದಲಾದ ವಿಶೇಷಣಗಳನ್ನು ಕೊಟ್ಟಿರುವುದು– ವಿಶಿಷ್ಟವಾದ ಗಂಧ, ಬಲ, ಕಾಮ ಮೊದಲಾದವುಗಳಲ್ಲೇ ಭಗವಂತನನ್ನು ಉಪಾಸಿಸತಕ್ಕದ್ದೇ ಹೊರತು, ಅಶುಚಿಯಾದ ಧರ್ಮವಿರುದ್ಧವಾದ ಗಂಧ, ಬಲ, ಕಾಮ ಮೊದಲಾದವುಗಳಲ್ಲಲ್ಲ ಎಂಬುದನ್ನು ಜ್ಞಾಪಿಸಲು – ಎಂದು ತಿಳಿಯತಕ್ಕದ್ದು. ।। 11 ।।

**ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ।। 12 ।।**

**ಅರ್ಥ-** ಸತ್ತ್ವಗುಣದ ವಿಕಾರವಾದ ಪದಾರ್ಥಗಳು ಯಾವುದಿವೆಯೋ, ಅಂತೆಯೇ ರಜೋಗುಣ, ತಮೋಗುಣಗಳ ವಿಕಾರವಾದ ಪದಾರ್ಥಗಳು ಯಾವುದಿವೆಯೋ ಅವೆಲ್ಲವೂ ನನ್ನಿಂದಲೇ ಸೃಷ್ಟಿಯಾದವುಗಳೆಂದು ತಿಳಿ. ನಾನು ಅವುಗಳನ್ನು ಆಶ್ರಯಿಸಿಲ್ಲ. ಅವು ನನ್ನನ್ನು ಆಶ್ರಯಿಸಿಕೊಂಡಿವೆ.

**ನ ಕೇವಲಂ ರಸಾದಿಧರ್ಮಪ್ರೇರಕಃ ಕಿನ್ನಾಮಾಬಾದಿಸರ್ವಪ್ರೇರಕಶ್ಚೇತ್ಯಾಹ - ಯೇ ಚೇತಿ ।। ಯೇ ಚ ಭಾವಾಃ ಪದಾರ್ಥಾಃ ಸಾತ್ತ್ವಿಕಾಃ ಸತ್ತ್ವಗುಣವಿಕಾರಾಃ ರಾಜಸಾಸ್ತಾಮಸಾಶ್ಚ ತಾನ್‌ಸರ್ವಾನ್ ಪದಾರ್ಥಾನ್ ಮತ್ತ ಏವೋತ್ಪನ್ನಾನ್ ವಿದ್ಧಿ । ತಥಾ ತೇ ಮಯೋತ್ಪನ್ನಾಃ ಪದಾರ್ಥಾಃ ಮಯಿ ಮದಾಧಾರತಯಾ ಮದುಪಜೀವನೇನೇತಿ ಯಾವತ್ । ವರ್ತಂತ ಇತಿ ವಿದ್ಧಿ । ಯಥೇದಂ ಜಗತ್ ತ್ವದಧೀನಂ ತಥಾ ತ್ವಮಪಿ ಕಿಮೇತದಧೀನ ಇತ್ಯತೋ ನೇತ್ಯಾಹ– ನತ್ವಹಂ ತೇಷ್ವಿತಿ ।। ತದುಪಜೀವನೇನಾಹಂ ನೈವ ತಿಷ್ಠಾಮೀತ್ಯರ್ಥಃ ।**

**ಯೇ ಚ ಯೇ ಚೇತಿ ಪೃಥಗುಕ್ತಿಃ ಸರ್ವೇಷಾಂ ತ್ರಿಗುಣವಿಕಾರತ್ವೇಽಪಿ ಸತ್ತ್ವಾದಿಪ್ರಾಚುರ್ಯಾಭಿಪ್ರಾಯೇಣೇತಿ ಜ್ಞೇಯಮ್ ॥ 12 ॥**

**ಅನುವಾದ-** ಕೇವಲ ರಸಾದಿಧರ್ಮಗಳಿಗೆ ಪ್ರೇರಕನಷ್ಟೇ ಅಲ್ಲ, ಮತ್ತೇನೆಂದರೆ ಜಲ ಮೊದಲಾದ ಎಲ್ಲಾಪದಾರ್ಥಗಳಿಗೂ ಪ್ರೇರಕನಾಗಿರುವೆನೆಂದು ಶ್ರೀಕೃಷ್ಣನು '**ಯೇ ಚ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ.

**ಯೇ ಚ ಭಾವಾಃ=** ಯಾವ ಪದಾರ್ಥಗಳು, **ಸಾತ್ತ್ವಿಕಾಃ=** ಸತ್ತ್ವಗುಣವಿಕಾರವಾದದ್ದಿವೆಯೋ ಹಾಗೆಯೇ ರಜೋಗುಣವಿಕಾರಗಳಾದ, ತಮೋಗುಣವಿಕಾರಗಳಾದ ಪದಾರ್ಥಗಳಿವೆಯೋ ಆ ಎಲ್ಲಪದಾರ್ಥಗಳನ್ನು ನನ್ನಿಂದಲೇ ಉತ್ಪನ್ನವಾದವುಗಳೆಂದು ತಿಳಿ. ಹಾಗೆಯೇ, ನನ್ನಿಂದ ಉತ್ಪನ್ನವಾದ ಆ ಪದಾರ್ಥಗಳು **ಮಯಿ=** ನನ್ನನ್ನು ಆಧರಿಸಿಕೊಂಡು, ನನ್ನನ್ನು ಉಪಜೀವಿಸಿಕೊಂಡು ಎಂದು ತಾತ್ಪರ್ಯ, ಇತಿ ಎಂದು ತಿಳಿ. ಹೇಗೆ ಈ ಜಗತ್ತು ನಿನ್ನ ಅಧೀನವೋ ಹಾಗೆ ನೀನೂ ಈ ಜಗತ್ತಿಗೆ ಅಧೀನನೋ ಎಂಬ ಪ್ರಶ್ನೆಗೆ ಇಲ್ಲವೆಂದು '**ನ ತ್ವಹಂ ತೇಷು**' ಎಂಬ ವಾಕ್ಯದಿಂದ ಶ್ರೀಕೃಷ್ಣನು ಉತ್ತರಿಸಿದ್ದಾನೆ. ಈ ಜಗತ್ತನ್ನು ಆಶ್ರಯಿಸಿಕೊಂಡು ನಾನಿಲ್ಲವೆಂದರ್ಥ.

'**ಯೇ ಚ ಯೇಚ**' ಎಂದು ಪ್ರತ್ಯೇಕವಾಗಿ ಹೇಳಿರುವುದು (ಸಾತ್ತ್ವಿಕ, ರಾಜಸ, ತಾಮಸವೆಂದು ಪ್ರತ್ಯೇಕವಾಗಿ ಹೇಳಿರುವುದು) ಎಲ್ಲಪದಾರ್ಥಗಳೂ ಸತ್ತ್ವಮೊದಲಾದ ಮೂರು ಗುಣಗಳ ವಿಕಾರಗಳೇ ಆಗಿದ್ದರೂ. ಆ ಪದಾರ್ಥಗಳು ಸತ್ತ್ವಮೊದಲಾದ ಗುಣಗಳ ಪ್ರಾಚುರ್ಯವನ್ನು ಪಡೆದಿರುವ ಪ್ರಯುಕ್ತ ಎಂಬ ಅಭಿಪ್ರಾಯದಿಂದ ಎಂದು ತಿಳಿಯತಕ್ಕದ್ದು. ॥ 12 ॥

## ಪ್ರಕೃತಿಗುಣವಿಮೋಹಿತರು ಅರಿಯರೆನ್ನ ಮಹಿಮೆ

**ತ್ರಿಭಿರ್ಗುಣಮಯೈರ್ಭಾವೈರೇಭಿಸ್ಸರ್ವಮಿದಂ ಜಗತ್**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥ 13 ॥**

**ಅರ್ಥ–** ಸತ್ವರಜಸ್ತಮೋಗುಣಗಳಿಂದಲೂ, ಅವುಗಳ ಕಾರ್ಯಗಳಾದ ಈ ಪದಾರ್ಥಗಳಿಂದಲೂ ಮೋಹಿತವಾದದ್ದಾಗಿ ಅಜ್ಞವಾದ ಈ ಜಗತ್ತು ನನ್ನನ್ನು ಸತ್ತ್ವಾದಿಗುಣಗಳಿಂದ ಹಾಗೂ ಅದರ ವಿಕಾರವಾದ ಪದಾರ್ಥಗಳಿಂದ ವ್ಯತಿರಿಕ್ತನೆಂದು ಆದ್ದರಿಂದಲೇ ದೇಹದಿಂದಲೂ ನಾಶವಿಲ್ಲದವನೆಂದು ತಿಳಿಯುವುದಿಲ್ಲ.

**ನನು ವಿಜ್ಞಾನೋಕ್ತ್ಯುಪಸಂಹಾರಪರಪೂರ್ವಶ್ಲೋಕೇ ಸತ್ತ್ವಾದಿಗುಣ-ನಿಷ್ಪನ್ನಾನಾಂ ಸರ್ವಪದಾರ್ಥಾನಾಂ ಭಗವಾನೇವ ಕಾರಣಂ ತದಾಶ್ರಯ-ಶ್ಚೇತ್ಯುಕ್ತಮ್ । ತೇನೈವ ಗುಣಾತೀತ ಇತಿ ಚೋಕ್ತಪ್ರಾಯಮ್ । ತದೇತದ-**

**ಯುಕ್ತಮ್ । ತಥಾತ್ವೇ ಗುಣಾತೀತತ್ವೇನ ಅಜ್ಞಾಯಮಾನತ್ವಸ್ಯ ಸಗುಣತ್ವೇನ ಜ್ಞಾಯಮಾನತ್ವಸ್ಯ ಚ ತವಾಯೋಗಾದಿತ್ಯತ ಆಹ– ತ್ರಿಭಿರಿತಿ ॥**

**ಅನುವಾದ** – ವಿಜ್ಞಾನದ ಸ್ವರೂಪವನ್ನು ಹೇಳುವುದರ ಉಪಸಂಹಾರದಲ್ಲಿ ತಾತ್ಪರ್ಯವುಳ್ಳ ಹಿಂದಿನ ಶ್ಲೋಕದಲ್ಲಿ ಸತ್ತ್ವಾದಿಗುಣಗಳಿಂದ ಜನ್ಯವಾದ ಎಲ್ಲ ಪದಾರ್ಥಗಳಿಗೂ ಭಗವಂತನೇ ಕಾರಣನಾಗಿದ್ದಾನೆ ಮತ್ತು ಅವುಗಳಿಗೆ ಆಶ್ರಯನಾಗಿದ್ದಾನೆ ಎಂದು ಹೇಳಲಾಯಿತು. ಇದರಿಂದಲೇ ಅವನು ಗುಣಾತೀತನಾಗಿರುವನೆಂದೂ ಹೇಳಿದಂತೆ ಆಗುವುದು. ಆದರೆ ಅದು ಯುಕ್ತವಲ್ಲ. ಹಾಗಿದ್ದ ಪಕ್ಷದಲ್ಲಿ ಗುಣಾತೀತನೆಂದು ನೀನು ತಿಳಿಯಲ್ಪಡದಿರುವುದು ಹಾಗೂ ಸತ್ತ್ವಾದಿಗುಣಸಹಿತನೆಂದು ತಿಳಿಯಲ್ಪಟ್ಟಿರುವುದು ಯುಕ್ತವಾಗಲಾರದೆಂಬ ಆಕ್ಷೇಪಕ್ಕೆ 'ತ್ರಿಭಿಃ' ಎಂಬ ಶ್ಲೋಕದಿಂದ ಶ್ರೀಕೃಷ್ಣನು ಉತ್ತರ ನೀಡುತ್ತಿದ್ದಾನೆ.

**ತ್ರಿತ್ವಂ ಯೋಗ್ಯತಯಾ ಗುಣವಿಶೇಷಣಮ್ । ಸತ್ತ್ವರಜಸ್ತಮೋರೂಪ-ತ್ರಿಗುಣಮಯೈಃ ಗುಣತ್ರಯಾತ್ಮಕೈರಿತ್ಯರ್ಥಃ । ತಾದಾತ್ಮ್ಯಾರ್ಥೋಽಯಂ ಮಯಟ್ । ಭಾವೈಃ ಪದಾರ್ಥೈಃ । ಉಪಾದಾನೋಪಾದೇಯಯೋರಭೇದಾತ್ ತ್ರಿಗುಣತತ್ಕಾರ್ಯರೂಪೈಃ ಏಭಿರ್ಭಾವೈಃ ಪದಾರ್ಥೈರಿತ್ಯರ್ಥಃ । ಯದ್ವಾ ಗುಣ-ಮಯೈಸ್ತ್ರಿಭಿಃ ಪ್ರಾಗುಕ್ತರೀತ್ಯಾ ಸಾತ್ತ್ವಿಕಾದಿಭೇದಭಿನ್ನೈರೇಭಿಃ ಪ್ರಮಿತೈರ್ಭಾವೈಃ ಪದಾರ್ಥೈಃ ಮೋಹಿತಂ ಸತ್ ಇದಂ ಜ್ಞಾನಿಭಿನ್ನಂ ಜಗದೇಭ್ಯೋ ಗುಣ-ತದ್ವಿಕಾರೇಭ್ಯಃ ಪರಂ ವ್ಯತಿರಿಕ್ತಂ ಅತ ಏವ ದೇಹತೋಽಪ್ಯವ್ಯಯಂ ಮಾಂ ನಾಭಿಜಾನಾತಿ । ವಿಪರೀತಂ ಚ ಜಾನಾತೀತ್ಯರ್ಥಃ ।**

**ಅನುವಾದ**– (1) ತ್ರಿತ್ವಸಂಖ್ಯೆಯು ಗುಣಗಳೊಂದಿಗೆ ಅನ್ವಯಯೋಗ್ಯವಾದುದರಿಂದ ಗುಣಗಳಿಗೆ ವಿಶೇಷಣವಾಗಿದೆ. ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಮಯ-ವಾದವುಗಳಿಂದ, ಗುಣತ್ರಯಾತ್ಮಕವಾದುವುಗಳಿಂದ ಎಂದು ಅರ್ಥ. (**ಗುಣಮಯೈಃ** ಎಂಬಲ್ಲಿರುವ) 'ಮಯಟ್'ಪ್ರತ್ಯಯವು ತಾದಾತ್ಮ್ಯಾರ್ಥಕವಾಗಿದೆ. **ಭಾವೈಃ**= ಪದಾರ್ಥಗಳಿಂದ. (2) ಉಪಾದಾನಕಾರಣ ಮತ್ತು ಅದರ ಕಾರ್ಯ– ಉಪಾದೇಯ ಇವುಗಳಿಗೆ ಅಭೇದವಿರುವುದರಿಂದ, ಮೂರು ಗುಣಗಳು ಮತ್ತು ಅವುಗಳ ಕಾರ್ಯಗಳಾದ ಈ ಪದಾರ್ಥಗಳಿಂದ ಎಂದು ಅರ್ಥ. ಅಥವಾ, **ಗುಣಮಯೈಃ ತ್ರಿಭಿಃ**= ಹಿಂದೆ ಹೇಳಿದಂತೆ ಸಾತ್ತ್ವಿಕ ಮೊದಲಾದ ಪ್ರಭೇದವುಳ್ಳ **ಏಭಿಃ** = ಪ್ರಮಾಣಸಿದ್ಧವಾದ, **ಭಾವೈಃ**= ಪದಾರ್ಥಗಳಿಂದ ಮೋಹಿತವಾದದ್ದಾಗಿ, **ಇದಂ**= ಈ ಜ್ಞಾನಿಭಿನ್ನವಾದ ಜಗತ್ತು, **ಏಭ್ಯಃ**= ಈ ಗುಣ ಮತ್ತು ಅದರ ವಿಷಯಗಳಿಂದ, **ಪರಂ**= ಭಿನ್ನವಾದ ಆದ್ದರಿಂದಲೇ **ಅವ್ಯಯಂ**= ದೇಹದಿಂದಲೂ ನಾಶವಿಲ್ಲದ. **ಮಾಂ**= ನನ್ನನ್ನು , ನ **ಅಭಿಜಾನಾತಿ** = ತಿಳಿಯುವುದಿಲ್ಲ, ಮತ್ತು ವಿಪರೀತವಾಗಿಯೇ ತಿಳಿಯುತ್ತದೆ ಎಂದು ಅರ್ಥ.

**ವಿವರಣೆ-** (1) '**ತ್ರಿಭಿಃ ಗುಣಮಯೈಃ**' ಎಂಬಲ್ಲಿ ಗುಣಮಯಪದಾರ್ಥದಲ್ಲೇ 'ತ್ರಿ'ಪದದ ಅರ್ಥವಾದ ತ್ರಿತ್ವಸಂಖ್ಯೆಯು ಸಹಜವಾಗಿ ಅನ್ವಯವನ್ನು ಪಡೆಯಬೇಕಾಗಿದ್ದರೂ ಅನ್ವಯ ಯೋಗ್ಯತೆಯು '**ಗುಣ**' ಪದದ ಅರ್ಥವಾದ ಸತ್ತ್ವಾದಿಗುಣಗಳಿಗಿರುವುದರಿಂದ ಅಲ್ಲೇ ಅನ್ವಯವನ್ನು ಪಡೆಯುವುದು ಎಂದು ಭಾವ. ಈ ಏಕದೇಶಾನ್ವಯದ ಅಸ್ವಾರಸ್ಯವನ್ನು ಪರಿಹರಿಸಲು, '**ಯದ್ವಾ**' ಎಂದು ಪಕ್ಷಾಂತರದಲ್ಲಿ ಗುಣಮಯವಾದ ಪದಾರ್ಥಗಳೇ ಸಾತ್ತ್ವಿಕಾದಿ ಪ್ರಭೇದದಿಂದ ಮೂರು ವಿಧವಾದದ್ದು ಎಂದು ಅನ್ವಯವನ್ನು ತೋರಿಸಲಾಗಿದೆ.

2. ಸತ್ತ್ವರಜಸ್ತಮೋಗುಣಗಳು ಉಪಾದಾನಕಾರಣಗಳು. ಜಗತ್ತಿನ ಎಲ್ಲ ಜಡಪದಾರ್ಥಗಳು ಅದರ ಕಾರ್ಯವಾದದ್ದಾಗಿ ಉಪಾದೇಯವೆಂದೆನಿಸುತ್ತದೆ. ಉಪಾದಾನ – ಉಪಾದೇಯಗಳಿಗೆ ಅಭೇದವಿರುವುದರಿಂದ, 'ಗುಣಮಯವಾದ ಪದಾರ್ಥಗಳಿಂದ ಜಗತ್ತು ಮೋಹಿತವಾಗಿದೆ' ಎಂದು ಹೇಳಿದಾಗ ಗುಣಗಳಿಂದ ಮತ್ತು ಅದರ ವಿಕಾರವಾದ ಪದಾರ್ಥಗಳಿಂದ ಜಗತ್ತು ಮೋಹಿತವಾಗಿದೆ ಎಂಬ ಅರ್ಥ ಲಭಿಸುವುದೆಂಬ ತಾತ್ಪರ್ಯ.

**ಅತ್ರ ಏಭಿರಿತಿ ಸರ್ವಪದಾರ್ಥಾನಾಂ ಗುಣಮಯತ್ವಪ್ರದರ್ಶನಾಯ । ಪ್ರಮಿತಸರ್ವಪರಾಮರ್ಶಿತ್ವಾತ್ತಸ್ಯ । ನಚ ಭಗವದ್ವಿಷಯಕ ಸಗುಣತ್ವಾದಿಮೋಹಸ್ಯ ಕಥಂ ಗುಣಮಯಾತ್ಮಕಾಃ ಪದಾರ್ಥಾಃ ಕಾರಣಮ್ । ಯೇನ ಗುಣ-ಮಯೈರ್ಭಾವೈರ್ಮೋಽಹಿತಮಿತ್ಯುಕ್ತಿರ್ಯುಕ್ತಾ ಸ್ಯಾದಿತಿ ಶಂಕ್ಯಮ್। ಲೋಕೇ ಗುಣಮಯದೇಹಾದಿಕಂ ದೃಷ್ಟ್ವಾ ಈಶ್ವರದೇಹಾದಿರಪ್ಯೇತಾದೃಶಃ ದೇಹತ್ವಾದಿತಿ ಹೇತುನಾ ಗುಣಮಯಮಿತಿ ಮೋಹಿತಮಿತಿ ತಾತ್ಪರ್ಯಾತ್ । ಜ್ಞಾನಿನೋ ಯಥಾವತ್ತಯಾ ಜಾನಂತೀತಿ ತದ್ವ್ಯಾವೃತ್ತ್ಯರ್ಥಮಿದಮಿತಿ ಜಗದ್ವಿಶೇಷಣಮ್ । ಉಪಾಯಾಭಾವಾದಜ್ಞಜನಸ್ಯ ಗುಣಾತೀತತ್ವೇನ ಭಗವತೋಽನುಪಲಂಭಃ । ದೇಹಾದಿತ್ವಾನುಮಾನಾಭಾಸೇನ ಸಗುಣತಯಾ ವಿಪರೀತೋಪಲಂಭಶ್ಚೇತ್ಯುಕ್ತಂ ಭವತಿ ॥ 13 ॥**

**ಅನುವಾದ-** ಈ ಶ್ಲೋಕದಲ್ಲಿ 'ಏಭಿಃ' ಎಂಬ ಪದವು ಎಲ್ಲ ಪದಾರ್ಥಗಳು ಗುಣಮಯವಾದದ್ದು ಎಂದು ತಿಳಿಸುವ ಉದ್ದೇಶ್ಯವನ್ನು ಪಡೆದಿದೆ. ಏಕೆಂದರೆ, ('ಏಭಿಃ' ಎಂಬಲ್ಲಿರುವ) '**ಇದಂ**' ಶಬ್ದವು ಪ್ರಮಾಣಪ್ರಮಿತವಾದ ಸರ್ವವನ್ನು ಪರಾಮರ್ಶಿಸುವುದಾಗಿದೆ.

**ಆಕ್ಷೇಪ** – 'ಭಗವಂತನು ಸತ್ತ್ವಾದಿಗುಣಮಯನು' ಎಂಬ ಮೋಹಕ್ಕೆ ಸತ್ತ್ವಾದಿಗುಣಮಯವಾದ ಪದಾರ್ಥಗಳು ಹೇಗೆ ಕಾರಣವಾಗುವವು ? ಹಾಗಿದ್ದರಷ್ಟೇ

'ಗುಣಮಯವಾದ ಪದಾರ್ಥಗಳಿಂದ ಜಗತ್ತು ಮೋಹಿತವಾಗಿದೆ' ಎಂಬ ಮಾತು ಯುಕ್ತವಾಗುವುದು.

**ಸಮಾಧಾನ**– ಲೋಕದಲ್ಲಿ ಸತ್ತ್ವಾದಿಗುಣಾತ್ಮಕವಾದ ದೇಹ ಮೊದಲಾದ ಪದಾರ್ಥಗಳನ್ನು ನೋಡಿ, ಈಶ್ವರನ ದೇಹ ಮೊದಲಾದವುಗಳೂ ದೇಹವಾದುದರಿಂದ ಹೀಗೆಯೇ ಗುಣಮಯ ವಾಗಿದೆ ಎಂದು ಜಗತ್ತು ಮೋಹಗೊಂಡಿದೆ ಎಂದು ತಾತ್ಪರ್ಯ.

ಜ್ಞಾನಿಗಳು ಭಗವಂತನನ್ನು ಯಥಾವತ್ತಾಗಿಯೇ ತಿಳಿಯುವರಾದ್ದರಿಂದ ಅವರನ್ನು ಹೊರತುಪಡಿಸಲು **'ಇದಂ'** ಎಂದು ಜಗತ್ತಿಗೆ ವಿಶೇಷಣ ಕೊಡಲಾಗಿದೆ. ಅಜ್ಞಜನರಿಗೆ ಭಗವಂತನು ಗುಣಾತೀತನೆಂದು ತಿಳಿಯಲು ಸಾಧನವಿಲ್ಲದ್ದರಿಂದ ಭಗವಂತನು ಗುಣಾತೀತ-ನೆಂದು ಅವರಿಗೆ ಜ್ಞಾನವಿಲ್ಲ. (ಭಗವಂತನ ದೇಹವೂ) ಸಗುಣವೇ ದೇಹವಾದ್ದರಿಂದ ಎಂಬ ಅನುಮಾನಾಭಾಸ ದಿಂದ ಭಗವಂತನು ಸತ್ವಾದಿಗುಣಮಯನೆಂದು ವಿಪರೀತ ಜ್ಞಾನವೂ ಉಂಟಾಗುವುದೆಂದು ಇಲ್ಲಿ ಹೇಳುವುದಾಗಿದೆ. ॥ 13 ॥

## ಎನಗೆ ಶರಣಾಗತನಾದವನಿಗೆ ಬಂಧ ದೂರ

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥ 14 ॥**

**ಅರ್ಥ**– ಜಗತ್ಸೃಷ್ಟ್ಯಾದಿ ಕ್ರೀಡೆ ಮೊದಲಾದ ಗುಣವಿಶಿಷ್ಟನಾಗಿ ದೇವನೆಂದೆನಿಸುವ ನನಗೆ ಅತಿಪ್ರಿಯಳಾದ ಸತ್ತ್ವಾದಿಗುಣಾಭಿಮಾನಿನಿಯಾದ ಮಾಯೆಯೆಂದು ಕರೆಯಲ್ಪಡುವ ದುರ್ಗೆಯೇ ಮೋಹಕ್ಕೆ ಕಾರಣಳು. ಅವಳನ್ನು ಮೀರಲಾಗದು. ಕೇವಲ ನನ್ನನ್ನು ಯಾರು ಶರಣು ಹೊಂದುವರೋ ಅವರು ಈ ಮಾಯೆಯನ್ನು ದಾಟುವರು .

**ನನು ಬ್ರಹ್ಮಾದಿದೇಹೇಂದ್ರಿಯಾದಿದೃಷ್ಟಾಂತೇನ ದೇಹಾದಿತ್ವಹೇತುನಾ ಭಗವಾನ್ ಗುಣಮಯದೇಹ ಇತಿ ಧೀಃ ಕಥಂ ಮೋಹಃ ಬಾಧಕಾಭಾವಾತ್। ಜ್ಞಾನಿನಾಂ ಧೀರ್ಬಾಧಿಕೇತಿ ಚೇತ್ । ಬಹುತರ ಪಾಮರಧೀವಿರೋಧೇನ ತಸ್ಯಾ ಏವಾಲ್ಪೀಯಸ್ಯಾ ಅಯಥಾರ್ಥತ್ವೋಪಪತ್ತೇಃ । ನಚ ತೇಷಾಮೇವ ಕಾಲಾಂತರೇ ಬಾಧಧೀಃ ಸೇತ್ಸ್ಯತೀತಿ ಶಂಕ್ಯಮ್ । ಅನಾದಿಕಾಲೇಽಪ್ಯಜಾತಸ್ಯೋತ್ತರತ್ರಾಪ್ಯ-ಸಂಭವಾದಿತ್ಯತೋ ಯಥಾವದ್ ಜ್ಞಾನಾಭಾವವಿಪರೀತಜ್ಞಾನಯೋರ್ಗುಣಾ-ಭಿಮಾನಿನೀ ದುರ್ಗೈವ ಕಾರಣಮ್ । ದೇಹತ್ವಾದ್ಯನುಮಾನಂ ತು ನಿಮಿತ್ತ-ಮಾತ್ರಮಿತಿ ಭಾವೇನಾಹ ದೈವೀತಿ ।**

**ಅನುವಾದ-** ಚತುರ್ಮುಖಬ್ರಹ್ಮನೇ ಮೊದಲಾದವರ ದೇಹ, ಇಂದ್ರಿಯ ಮೊದಲಾದವುಗಳ ದೃಷ್ಟಾಂತದಿಂದ, (ಭಗವಂತನ ದೇಹಾದಿಗಳು) ದೇಹಾದಿಗಳಾದ್ದರಿಂದ ಎಂಬ ಹೇತುವಿನಿಂದ ಉಂಟಾದ 'ಭಗವಂತನು ಸತ್ತ್ವಾದಿಗುಣಮಯವಾದ ದೇಹವುಳ್ಳವನು' ಎಂಬ ಜ್ಞಾನ ಮೋಹವಾಗುವದು ಹೇಗೆ ? ಅಂತಹ ಜ್ಞಾನಕ್ಕೆ ಬಾಧಕವಿಲ್ಲವಷ್ಟೆ. (ಭಗವಂತನು ಗುಣಮಯನಲ್ಲ ಎಂಬ) ಜ್ಞಾನಿಗಳ ಬುದ್ಧಿಯು ಬಾಧಕವೆನ್ನುವುದಾದರೆ ಬಹುಸಂಖ್ಯೆಯ ಪಾಮರರ ಬುದ್ಧಿಗೆ ವಿರುದ್ಧವಾದುದರಿಂದ ಅಲ್ಪಸಂಖ್ಯೆಯ ಜ್ಞಾನಿಗಳ ಬುದ್ಧಿಯೇ ಅಯಥಾರ್ಥವಾಗುವುದೇ ಯುಕ್ತ. ಪಾಮರರಿಗೂ ಮುಂದೊಂದು ಕಾಲದಲ್ಲಿ ಭಗವಂತನು ತ್ರಿಗುಣಾತ್ಮಕನಲ್ಲವೆಂದು ಬಾಧಜ್ಞಾನ ಬರಬಹುದೆಂದು ಮಾತ್ರ ಹೇಳತಕ್ಕದ್ದಲ್ಲ. ಅನಾದಿಕಾಲದಿಂದ ಇಲ್ಲದಿರುವ ಅಂತಹ ಬಾಧಬುದ್ಧಿ ಮುಂದೂ ಅಸಂಭವವೇ' ಎಂಬ ಆಕ್ಷೇಪಕ್ಕೆ ಉತ್ತರವಾಗಿ ಭಗವಂತನ ವಿಷಯದಲ್ಲಿ ಯಥಾರ್ಥವಾದ ಜ್ಞಾನವಿಲ್ಲದಿರುವುದು ಮತ್ತು ವಿಪರೀತಜ್ಞಾನವಿರುವುದು ಇವುಗಳಿಗೆ ಸತ್ತ್ವಾದಿ ತ್ರಿಗುಣಗಳಿಗೆ ಅಭಿಮಾನಿನಿಯಾದ ದುರ್ಗೆಯೇ ಕಾರಣಳು, ದೇಹತ್ವಾದಿಯುಕ್ತಿಗಳು ಕೇವಲ ನಿಮಿತ್ತವಾದದ್ದು ಎಂದು ಶ್ರೀಕೃಷ್ಣನು 'ದೈವೀ' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ.

**ಸೃಷ್ಟ್ಯಾದಿರೂಪಕ್ರೀಡಾದಿಗುಣವಿಶಿಷ್ಟಸ್ಯ ದೇವಸ್ಯೇಯಂ ದೈವೀ । ದೇವ-ಸಂಬಂಧಿನೀ । ಕೋ ದೇವ ಇತ್ಯತೋ ದೈವೀತ್ಯುಕ್ತಂ ವಿವೃಣೋತಿ ಮಮೇತಿ ॥ ಮದೀಯಾ ಮಮಾತಿಪ್ರಿಯೇತಿ ಯಾವತ್ । (ಏಷಾ ಪ್ರಮಾಣ ಪ್ರಮಿತಾ ಗುಣಮಯೀ ಸತ್ತ್ವಾದಿಗುಣಾತ್ಮಿಕಾ ಗುಣಾಭಿಮಾನಿನೀತಿ ಯಾವತ್)। ಮಾಯಾ ದುರ್ಗಾ ಮೋಹಿಕೇತಿ ಶೇಷಃ । ಕಾಲಾಂತರೇ ತತ್ಕೃತೋ ಮೋಹೋ ನಿವರ್ತತಾಮಿತ್ಯತ ಆಹ ದುರತ್ಯಯೇತಿ ॥ ಅತ್ಯೇತುಮಶಕ್ಯಾ । ತತ್ಕೃತಂ ಮೋಹಂ ಕೋಽಪಿ ನಾತ್ಯೇತುಂ ಶಕ್ನೋತಿ ಇತ್ಯರ್ಥಃ । ಅತೋ ನ ಕಸ್ಯಾಪಿ ಬಾಧಕಪ್ರತ್ಯಯೋ ಭವತೀತಿ ಭಾವಃ ।**

**ಅನುವಾದ-** ಸೃಷ್ಟಿ ಮೊದಲಾದ ಕ್ರೀಡೆ ಇತ್ಯಾದಿಗುಣವಿಶಿಷ್ಟನಾದುದರಿಂದ ದೇವನೆಂದೆನಿಸುವವನಿಗೆ ಸಂಬಂಧಪಟ್ಟವಳು ದೈವೀ. ಆ ದೇವ ಯಾರು ? ಎಂಬ ಪ್ರಶ್ನೆಗೆ ಉತ್ತರವಾಗಿ '**ದೈವೀ**' ಎಂದು ಹೇಳಿದುದನ್ನು ಶ್ರೀಕೃಷ್ಣ '**ಮಮ**' ಎಂದು ವಿವರಿಸುತ್ತಿದ್ದಾನೆ. ನನ್ನವಳು, ನನಗೆ ಅತಿಪ್ರಿಯಳು ಎಂದು ಭಾವ. **ಏಷಾ**= ಈ ಪ್ರಮಾಣಪ್ರಮಿತಳಾದ, ಗುಣಮಯೀ-ಸತ್ತ್ವಾದಿಗುಣಾತ್ಮಕಳಾದ, ಗುಣಾಭಿಮಾನಿನಿಯಾದ ಎಂದು ತಾತ್ಪರ್ಯ, **ಮಾಯಾ**= ದುರ್ಗೆಯು ಮೋಹಿಕೆಯಾಗಿದ್ದಾಳೆ. ಇಲ್ಲಿ '**ಮೋಹಿಕೆಯಾಗಿದ್ದಾಳೆ**' ಎನ್ನುವುದು ಶೇಷಪೂರಣ.

ಕಾಲಾಂತರದಲ್ಲಿ ಆ ದುರ್ಗೆಯು ಉಂಟುಮಾಡಿದ ಮೋಹ ಹೋಗುವುದು ಎಂಬ ಶಂಕೆಗೆ ಉತ್ತರ– **'ದುರತ್ಯಯಾ'** ಎಂದು. ಮೀರಲು ಸಾಧ್ಯವಿಲ್ಲದವಳು, ಅವಳುಂಟುಮಾಡಿದ ಮೋಹವನ್ನು ಯಾರೂ ದಾಟಲಾರರು ಎಂದು ಅರ್ಥ. ಆದ್ದರಿಂದ ಯಾರಿಗೂ (ಭಗವಂತನು ಗುಣಮಯನಲ್ಲ ಎಂಬ) ಬಾಧಕ ಜ್ಞಾನವು ಬರುವುದಿಲ್ಲವೆಂದು ಭಾವ.

**ಮಮ ಮಾಯೇತ್ಯೇವ ಪೂರ್ತೌ ದೈವೀತ್ಯುಕ್ತಿಃ ಮದೀಯತಾಮಾತ್ರೇಣ ಕಥಂ ದುರತ್ಯಯೇತ್ಯತಃ ಸೃಷ್ಟಿಸ್ಥಿತಿಲಯಾದಿಗುಣವಿಶಿಷ್ಟತಯಾಽತಿಸಮರ್ಥಸ್ಯ ಮೇ ಅತಿ ಪ್ರಿಯತ್ವೇನ ತಸ್ಯಾ ಅಪ್ಯತಿಶಯಶಕ್ತಿತ್ವಾದಿತಿ ಜ್ಞಾಪಯಿತುಮ್ । ಗುಣಮಯೀ-ತ್ಯುಕ್ತಿಸ್ತು ಗುಣಾಭಿಮಾನಿತ್ವಾತ್ತಮೋಗುಣೇನೈವಂವಿಧಂ ಮೋಹಂ ಜನಯತೀತಿ ಸೂಚಯಿತುಮಿತಿ ಜ್ಞೇಯಮ್ ।**

**ಅನುವಾದ**– **'ಮಮ ಮಾಯಾ'** ಎಂದಿಷ್ಟೆ ಸಾಕಾಗಿದ್ದರೂ, **'ದೈವೀ'** ಎಂದು ವಿಶೇಷಣ ಕೊಟ್ಟಿರುವುದು, 'ನನಗೆ ಪ್ರಿಯಳಾದ ಮಾತ್ರದಿಂದ ಅವಳು ಮೀರಲು ಸಾಧ್ಯವಾಗದಿರುವುದು ಹೇಗೆ ಎಂಬ ಶಂಕೆಗೆ, ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಇತ್ಯಾದಿ ಕಾರಣನಾಗಿರುವುದೇ ಮೊದಲಾದ ಗುಣವಿಶಿಷ್ಟನಾದುದರಿಂದ ಅತಿಸಮರ್ಥನಾದ ನನಗೆ ಅತಿಪ್ರಿಯಳಾದ್ದರಿಂದ ಮಾಯೆಗೂ ಅತಿಶಯವಾದ ಶಕ್ತಿ ಇದೆ. ಆದ್ದರಿಂದಲೇ ಅವಳು ದುರತ್ಯಯಳು ಎಂಬುದನ್ನು ತಿಳಿಸಲು. **'ಗುಣಮಯೀ'** ಎಂಬ ವಿಶೇಷಣವನ್ನು ಕೊಟ್ಟಿರುವುದು ಅವಳು ಸತ್ತ್ವಾದಿಗುಣಗಳಿಗೆ ಅಭಿಮಾನಿನಿಯಾದ್ದರಿಂದ ತಮೋಗುಣದಿಂದಲೇ ಈ ರೀತಿಯಾದ ಮೋಹವನ್ನುಂಟು ಮಾಡುವಳು ಎಂದು ಸೂಚಿಸಲೆಂದು ತಿಳಿಯಬೇಕು.

**ನನು ಯದಿ ನ ಕೇವಲಮನುಮಾನಮ್ । ಕಿಂತು ಭಗವತೋದ್‌ಬಲಿತಾ ಮಾಯಾ ಮೋಹಹೇತುಃ ತರ್ಹಿ ನ ಕಥಂಚಿದತ್ಯೇತುಂ ಶಕ್ಯೇತಿ ಕಸ್ಯಾಪಿ ಜ್ಞಾನಂ ನ ಸ್ಯಾದಿತ್ಯತ ಆಹ– ಮಾಮಿತಿ ॥ ಏವಶಬ್ದೋಽತ್ರ ಭಗವತ್ಪ್ರತಿಪತ್ತಾವಿತ್ಥಂ-ಭಾವಸೂಚಕಃ । ಅನ್ಯತ್ಪರಿತ್ಯಜ್ಯ ಗುರ್ವಾದಿವಂದನಾದಿಕಮಪಿ ಭಗವದ್ಭಕ್ತತ್ವೇನೈವ ಕುರ್ವಂತೋ ಮಾಂ ಯೇ ಪ್ರಪದ್ಯಂತೇ ಶರಣಂ ಪ್ರಾಪ್ನುವಂತೀ ತೇ ಏತಾಂ ಮಾಯಾಂ ಮಾಯಾಕೃತಮೋಹಂ ತರಂತಿ । ಅತಿಕ್ರಾಮಂತೀತ್ಯರ್ಥಃ ॥ 14 ॥**

**ಅನುವಾದ** – ಬ್ರಹ್ಮಾದಿಗಳ ದೇಹದಂತೆ ಭಗವಂತನ ದೇಹವೂ ಗುಣಮಯವಾದುದು ಎಂಬ ಅನುಮಾನ ಮಾತ್ರ ಭಗವಂತನ ದೇಹಾದಿಗಳು ಸತ್ತ್ವಾದಿಗುಣಮಯವಾದುದು ಎಂಬ ಮೋಹಕ್ಕೆ ಕಾರಣವಲ್ಲ, ಅದಕ್ಕಿಂತ ಹೆಚ್ಚಾಗಿ ಭಗವಂತನಿಂದ ಉತ್ತೇಜಿತಳಾದ ದುರ್ಗೆಯು

ಅಂತಹ ಮೋಹಕ್ಕೆ ಕಾರಣಳು ಎಂದಾದ ಪಕ್ಷದಲ್ಲಿ ಅವಳನ್ನು ಯಾವರೀತಿಯಿಂದಲೂ ಅತಿಕ್ರಮಣ ಮಾಡಲು ಸಾಧ್ಯವಿಲ್ಲವಾದುದರಿಂದ ಯಾರಿಗೂ ಭಗವಂತನ ಯಥಾರ್ಥಜ್ಞಾನ ಇಲ್ಲದಂತಾಗಬೇಕಾದೀತು ಎಂಬ ಶಂಕೆಗೆ ಶ್ರೀಕೃಷ್ಣನು **'ಮಮ'** ಎಂಬ ಶ್ಲೋಕದಿಂದ ಉತ್ತರಿಸುತ್ತಿದ್ದಾನೆ.

ಇಲ್ಲಿ 'ಏವ' ಶಬ್ದವು ಭಗವಂತನ ಜ್ಞಾನವನ್ನು ಪಡೆಯಲು ಇರಬೇಕಾದ ರೀತಿಯನ್ನು (ಶರಣಾಗತಿಯನ್ನು) ಸೂಚಿಸುವುದು. ಬೇರೆಲ್ಲವನ್ನು ಪರಿತ್ಯಜಿಸಿ, 'ಗುರು ಮೊದಲಾದವರಿಗೆ ಮಾಡುವ ನಮಸ್ಕಾರಾದಿಗಳನ್ನು ಅವರು ಭಗವದ್ಭಕ್ತರಾದ ಕಾರಣದಿಂದಲೇ ಮಾಡುತ್ತ' ನನ್ನನ್ನು ಯಾರು, **ಪ್ರಪದ್ಯಂತೇ**= ಶರಣು ಹೊಂದುವರೋ ಅವರು ಈ ಮಾಯೆಯನ್ನು- ಮಾಯೆ ಯಿಂದಾದ ಮೋಹವನ್ನು, **ತರಂತಿ**= ಅತಿಕ್ರಮಿಸುವರು ಎಂದು ಅರ್ಥ ॥ 14 ॥

**ವಿವರಣೆ**- ಭಗವಂತನ ಆಶ್ರಯದಿಂದ ಮಾಯೆ ಎಂದು ಕರೆಯಲ್ಪಡುವ ದುರ್ಗೆಯು ಬ್ರಹ್ಮಶೇಷರುದ್ರಾದಿಗಳಿಗೂ ದುರತ್ಯಯಳು, ಎಂದು ಗೀತೆಯ ತಾತ್ಪರ್ಯವನ್ನು ಆಚಾರ್ಯರು ಭಾಷ್ಯದಲ್ಲಿ ವ್ಯಾಸಯೋಗ ಗ್ರಂಥದ ವಚನವನ್ನು ಉದಾಹರಿಸುವ ಮೂಲಕ ಸಮರ್ಥಿಸಿದ್ದಾರೆ -

'ಶ್ರೀಭೂದುರ್ಗೇತಿ ಯಾ ಭಿನ್ನಾ ಮಹಾಮಾಯಾ ತು ವೈಷ್ಣವೀ ।
ತಚ್ಛಕ್ತ್ಯನಂತಾಂಶಹೀನಾಽಥಾಪಿ ತಸ್ಯಾಶ್ರಯಾತ್ ಪ್ರಭೋಃ ॥
ಅನಂತಬ್ರಹ್ಮರುದ್ರಾದೇರ್ನಾಸ್ಯಾಃ ಶಕ್ತಿಕಲಾಽಪಿ ಹಿ ।
ತೇಷಾಂ ದುರತ್ಯಯಾಽಪ್ಯೇಷಾ ವಿನಾ ವಿಷ್ಣುಪ್ರಸಾದತಃ ॥'

ಭಗವಂತನ ತತ್ತ್ವಜ್ಞಾನವನ್ನು ಪಡೆಯುವ ಸಲುವಾಗಿ ಗುರ್ವಾದಿಗಳನ್ನು ವಂದಿಸುವ ಭಗವದ್ಭಕ್ತರು ಮಧ್ಯಮರು, ಉತ್ತಮರೆಂದು ಎರಡು ವಿಧ. ಮಧ್ಯಮರು ಗುರ್ವಾದಿಗಳನ್ನು ಭಗವಂತನ ಸನ್ನಿಧಾನ ಉಳ್ಳವರೆನ್ನುವ ಕಾರಣದಿಂದ ವಂದಿಸಿದರೆ, ಉತ್ತಮರು ಅವರನ್ನು ಭಗವಂತನ ಪ್ರತಿಮೆಯೆಂದು ವಂದಿಸುವರು. ಗೀತಾಭಾಷ್ಯದಲ್ಲಿ ನಾರದೀಯವಚನವನ್ನು ಉದಾಹರಿಸಿ ಈ ಪ್ರಮೇಯವನ್ನು ತಿಳಿಸಿದ್ದಾರೆ -

'ಮತ್ಸಂಪತ್ತ್ಯಾ ತು ಗುರ್ವಾದೀನ್ ಭಜಂತೇ ಮಧ್ಯಮಾ ನರಾಃ ।
ಮದುಪಾಧಿತಯಾ ತಾಂಶ್ಚ ಸರ್ವಭೂತಾನಿ ಚೋತ್ತಮಾಃ ॥'

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।**
**ಮಾಯಯಾಽಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥ 15 ॥**

**ಅರ್ಥ** – ಪಾಪಸ್ವಭಾವದವರೂ ಅವಿವೇಕಿಗಳೂ ಆದ ನರಾಧಮರು (ಶ್ರೀಹರಿಯ ಇಚ್ಛೆ ಮತ್ತು ತಮ್ಮ ಸ್ವಭಾವದಿಂದಾಗಿ) ತತ್ತ್ವಜ್ಞಾನರಹಿತರಾಗುವರು. ಆದ್ದರಿಂದಲೇ ಮಿಥ್ಯಾಜ್ಞಾನಿಗಳು ಅಸುರತ್ವವನ್ನು ಹೊಂದುವರು.ಅದರಿಂದ ಅವರು ನನ್ನನ್ನು ಶರಣು ಹೊಂದುವುದಿಲ್ಲ.

**ನನು ಯದಿ ತ್ವತ್ಪ್ರಪತ್ತಿರ್ಮಾಯಾತರಣೋಪಾಯಃ ತರ್ಹಿ ತ್ವಾಂ ಪ್ರಪದ್ಯ ಸರ್ವೇ ಕಿಮಿತಿ ಮಾಯಾಂ ನಾತ್ಯಾಯನ್ನಿತ್ಯತ ಆಹ – ನಮಾಮಿತಿ ॥ ದುಷ್ಕೃತಿನಃ ಪಾಪಶೀಲಾಃ ಅತ ಏವ ಮೂಢಾಃ ವಿವೇಕಹೀನಾಃ ಅತ ಏವ ನರಾಧಮಾಃ ಮಾಯಯಾ (ಹರೀಚ್ಛಯಾ ಸ್ವಭಾವೇನ ಚ ) ಅಭಿಭೂತಾಧಿಷ್ಠಾನಯಾಥಾತ್ಮ್ಯ-ಜ್ಞಾನಾಃ ಅತಶ್ಚ ಮೂಢಾಃ ಮಿಥ್ಯಾಜ್ಞಾನಿನಃ ಅತ ಏವಾಸುರಂ ಭಾವಮಸುರತ್ವ-ಮಾಶ್ರಿತಾಃ । ಅತೋ ಮಾಂ ನ ಪ್ರತಿಪದ್ಯಂತೇ ಇತಿ । ಅಸುಷ್ವಿಂದ್ರಿಯೇಷು ರತಾ ಅಸುರಾಸ್ತದೀಯಭಾವಮಾಶ್ರಿತಾ ಇತ್ಯರ್ಥಃ ॥ 15 ॥**

**ಅನುವಾದ**- (ಹೇ ಕೃಷ್ಣ) ನಿನ್ನನ್ನು ಶರಣು ಹೊಂದುವುದು ಮಾಯೆಯನ್ನು ದಾಟುವ ಉಪಾಯವಾಗಿದ್ದರೆ ಎಲ್ಲರೂ ನಿನ್ನನ್ನು ಶರಣು ಹೊಂದಿ ಮಾಯೆಯನ್ನು ಏಕೆ ದಾಟಲಿಲ್ಲ ಎಂಬ ಶಂಕೆಗೆ '**ನ ಮಾಮ್**' ಎಂದು ಶ್ರೀಕೃಷ್ಣನು ಸಮಾಧಾನ ನೀಡುತ್ತಿದ್ದಾನೆ.

**ದುಷ್ಕೃತಿನಃ**- ಪಾಪಸ್ವಭಾವದವರು, ಆದ್ದರಿಂದಲೇ, **ಮೂಢಾಃ**= ವಿವೇಕಹೀನರು, ಆದ್ದರಿಂದಲೇ ನರಾಧಮರಾದವರು ಮಾಯೆಯಿಂದ (1) ಪ್ರಕಟಗೊಳ್ಳದ ಅಧಿಷ್ಠಾನ ತತ್ತ್ವಜ್ಞಾನವುಳ್ಳವರಾಗಿ, ಆ ಕಾರಣದಿಂದಲೂ **ಮೂಢಾಃ**= ಮಿಥ್ಯಾಜ್ಞಾನಿಗಳಾಗಿ ಆ ನಿಮಿತ್ತದಿಂದ, **ಆಸುರಂ ಭಾವಂ**= ಅಸುರತ್ವವನ್ನು ಪಡೆಯುವರು . ಆದ್ದರಿಂದ ಅವರು ನನ್ನನ್ನು ಶರಣು ಹೊಂದುವುದಿಲ್ಲವೆಂದರ್ಥ. (2) **ಅಸುಷು** = ಇಂದ್ರಿಯಗಳಲ್ಲಿ **ರತಾಃ**= ಆಸಕ್ತರು ಅಸುರರು. ಅವರ ಸ್ವಭಾವವನ್ನು ಪಡೆದವರು ಎಂದು ಅರ್ಥ. ॥ 15 ॥

**ವಿವರಣೆ** - (1) ಮುಕ್ತಿಯೋಗ್ಯರೂ ತಮ್ಮ ಪಾಪಕರ್ಮಗಳಿಂದ ಭಗವಂತನನ್ನು ಶರಣು ಹೊಂದದಿರುವುದುಂಟು. ಆದರೆ ಅವರು ಸಮ್ಯಗ್‌ಜ್ಞಾನ ಸ್ವಭಾವದವರಾದ್ದರಿಂದ ಅವರ ಜ್ಞಾನವು ಅಪಹೃತವಾಗುವುದು ಅಂದರೆ ಇಲ್ಲವಾಗುವುದು ಹೇಗೆ ಸಾಧ್ಯ ಎಂಬ ಶಂಕೆಯನ್ನು ಪರಿಹರಿಸಲು ಅಪಹೃತ ಎಂದರೆ ಅಭಿಭೂತ ಎಂದು ವ್ಯಾಖ್ಯಾನಿಸಲಾಗಿದೆ. ಮಾಯೆಯಿಂದಾಗಿ ತಾತ್ಕಾಲಿಕವಾಗಿ ಅವರ ಅಧಿಷ್ಠಾನ ಯಾಥಾತ್ಮ್ಯ ಜ್ಞಾನವು ಪ್ರಕಟವಾಗಿಲ್ಲವೆಂದರ್ಥ. ಯಾವ ವಸ್ತುವಿನ ವಿಷಯವಾಗಿ ನಮಗೆ ಭ್ರಾಂತಿಯುಂಟಾಗುವುದೋ ಆ ವಸ್ತು ಅಧಿಷ್ಠಾನ. ಪ್ರಕೃತ, ಭಗವಂತನು ತ್ರಿಗುಣಾತ್ಮಕದೇಹವುಳ್ಳವನು ಎಂಬ ಭ್ರಾಂತಿಯಲ್ಲಿ ಭಗವಂತನು ಅಧಿಷ್ಠಾನ. ಅವನ

ಯಾಥಾತ್ಮ್ಯವೆಂದರೆ ವಸ್ತುಸ್ಥಿತಿ- ಅಪ್ರಾಕೃತದೇಹವುಳ್ಳವನಾಗಿರುವಿಕೆ. ಆ ಜ್ಞಾನವು ಪ್ರಕಟವಾಗಿಲ್ಲದ ಕಾರಣವೆಂದು ಭಾವ.

(2) ಮುಕ್ತಿಯೋಗ್ಯರಾದ ಜೀವರೂ ಅಸುರಭಾವವನ್ನು ಹೊಂದಲು ಕಾರಣವನ್ನು ಗೀತಾಭಾಷ್ಯದಲ್ಲಿ ಆಚಾರ್ಯರು, ಮುಕ್ತಿಯೋಗ್ಯರು ಅಸುರಭಾವವನ್ನು ಹೊಂದುವುದು ಎಂದರೆ ಇಂದ್ರಿಯಗಳನ್ನು ತುಷ್ಟಿಗೊಳಿಸುವುದರಲ್ಲಿ ಆಸಕ್ತರಾಗುವುದು ಎಂದು ಹೇಳಿದ್ದಾರೆ .

## ನಾಲ್ಕು ಬಗೆಯ ಉಪಾಸಕರು

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ** **॥ 16 ॥**

**ಅರ್ಥ-** ಹೇ ! ಅರ್ಜುನ ! ಪುಣ್ಯಶಾಲಿಗಳಾದ ನಾಲ್ಕು ವಿಧರಾದ ಜನರು ನನ್ನನ್ನು ಭಜಿಸುವರು. ಹೇ ಭರತಶ್ರೇಷ್ಠ ! ರೋಗಾದಿಪೀಡಿತರು, ಭಗವಂತನ ಜ್ಞಾನವನ್ನು ಬಯಸುವವರು, ಧನೇಚ್ಛುಗಳು ಮತ್ತು ಭಗವಂತನ ಜ್ಞಾನವನ್ನು ಪಡೆದಿರುವವರು ಇವರೇ ಆ ನಾಲ್ಕು ವಿಧರಾದ ಜನರು.

**ಸುಕೃತಿನೋ ಮಾಂ ಭಜಂತಃ ಪ್ರಪದ್ಯಂತೇ । ತತ್ರಾಪ್ಯಸ್ತಿ ತಾರತಮ್ಯಮಿತ್ಯಾಹ- ಚತುರ್ವಿಧಾ ಇತಿ ॥ ಯೇ ಸುಕೃತಿನಃ ಪೂರ್ವಜನ್ಮಕೃತಪುಣ್ಯವಂತೋ ಜನಾಃ ಮಾಂ ಭಜಂತೇ ಸೇವಂತೇ । ತೇ ಚ ಚತುರ್ವಿಧಾಃ । ಆರ್ತಃ ರೋಗಾದ್ಯುಪದ್ರುತಃ । ಜಿಜ್ಞಾಸುಃ ಆತ್ಮಜ್ಞಾನೇಚ್ಛುಃ । ಅರ್ಥಾರ್ಥೀ ಧನೇಚ್ಛಾವಾನ್ । ಜ್ಞಾನೀ ಚಾತ್ಮ- ತತ್ತ್ವವಿಚ್ಚೇತೀತಿ ಇತಿಶಬ್ದೋಽತ್ರ ಧ್ಯೇಯಃ । ದ್ವಿಃ ಸಂಬೋಧನಮಾದರಾರ್ಥಮ್। ॥ 16 ॥**

**ಅನುವಾದ-** ಪುಣ್ಯಶಾಲಿಗಳು ನನ್ನನ್ನು ಭಜಿಸುತ್ತ ಶರಣು ಹೊಂದುವರು. ಅವರಲ್ಲೂ ತಾರತಮ್ಯವಿದೆ ಎಂದು ಶ್ರೀಕೃಷ್ಣನು '**ಚತುರ್ವಿಧಾಃ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ.

'**ಯೇ ಸುಕೃತಿನಃ ಜನಾಃ**' ಯಾರು ಪೂರ್ವಜನ್ಮದಲ್ಲಿ ಮಾಡಿದ ಪುಣ್ಯಶಾಲಿಜನರು, **ಮಾಂ ಭಜಂತೇ**= ನನ್ನನ್ನು ಸೇವಿಸುವರೋ ಅವರು ನಾಲ್ಕು ವಿಧವಾಗಿದ್ದಾರೆ. **ಆರ್ತಃ**= ರೋಗಾದಿ ಗಳಿಂದ ಪೀಡಿತನು, **ಜಿಜ್ಞಾಸುಃ**= ಪರಮಾತ್ಮನ ಜ್ಞಾನವನ್ನು ಬಯಸುವವನು, **ಅರ್ಥಾರ್ಥೀ**= ಧನೇಚ್ಛೆಯುಳ್ಳವನು, **ಜ್ಞಾನೀ ಚ** = ಮತ್ತು ಭಗವತ್ತತ್ತ್ವವನ್ನು ತಿಳಿದವನು ಎಂದು. ಇಲ್ಲಿ 'ಎಂದು' ಎಂಬ ಪದವನ್ನು ಸೇರಿಸಿಕೊಳ್ಳಬೇಕು. (ಈ ಶ್ಲೋಕದಲ್ಲಿ) ಅರ್ಜುನನನ್ನು ಎರಡು ಭಾರಿ ಸಂಬೋಧಿಸಿರುವುದು ಆದರಕ್ಕೋಸ್ಕರವಾಗಿ . ॥ 16 ॥

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥ 17 ॥**

**ಅರ್ಥ–** ಇವರ ಮಧ್ಯೆ , ಯಾವಾಗಲೂ ಭಗವಂತನಲ್ಲೇ ನೆಟ್ಟ ಮನಸ್ಸುಳ್ಳ , ಭಗವಂತನಲ್ಲೇ ಪ್ರಧಾನವಾಗಿ ಭಕ್ತಿಯುಳ್ಳ ಜ್ಞಾನಿಯು ಅತಿಶಯವನ್ನು ಪಡೆದಿದ್ದಾನೆ. ಏಕೆಂದರೆ ಜ್ಞಾನಿಗೆ ನಾನು ಅತ್ಯಂತ ಪ್ರಿಯನು, ಅವನೂ ನನಗೆ ಅತ್ಯಂತ ಪ್ರಿಯನು.

**ನಿತ್ಯಯುಕ್ತಃ ಸದಾ ಭಗವತ್ಸಮಾಧಿಮಾನ್ ಏಕಸ್ಮಿನ್ ಮಯ್ಯೇವ ಪ್ರಾಧಾನ್ಯೇನ ಭಕ್ತಿರ್ಯಸ್ಯಾಸೌ ಏಕಭಕ್ತಿಃ ವಿಶಿಷ್ಯತೇ ಅತಿಶಯಿತೋ ಭವತಿ । ಕುತ ಇತ್ಯತೋ ಮಮಾತಿಪ್ರಿಯತ್ವಾದಿತ್ಯಾಹ ಪ್ರಿಯೋ ಹೀತಿ ॥ 17 ॥**

**ಅನುವಾದ-** **ನಿತ್ಯಯುಕ್ತಃ**= ಯಾವಾಗಲೂ ಭಗವಂತನಲ್ಲೇ ನೆಲೆಸಿದ ಚಿತ್ತವುಳ್ಳವನು. **ಏಕಭಕ್ತಿಃ**= ನನ್ನೊಬ್ಬನಲ್ಲೇ ಪ್ರಧಾನವಾಗಿ ಭಕ್ತಿಯುಳ್ಳವನು ಯಾರೋ ಅವನು, **ವಿಶಿಷ್ಯತೇ**= ಅತಿಶಯವನ್ನು ಪಡೆದಿದ್ದಾನೆ. ಏಕೆಂದರೆ ನನಗೆ ಅತಿಪ್ರಿಯನಾದುದರಿಂದ ಎಂದು 'ಪ್ರಿಯೋ ಹಿ' ಎಂಬ ವಾಕ್ಯದಿಂದ ಶ್ರೀಕೃಷ್ಣನು ಹೇಳುತ್ತಿದ್ದಾನೆ. ॥ 17 ॥

## ಜ್ಞಾನಿಯೆನಗತಿಪ್ರಿಯ

**ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥ 18 ॥**

**ಅರ್ಥ–** ಈ ನಾಲ್ಕುವಿಧರಾದ ಜನರೂ ಉತ್ಕೃಷ್ಟರೇ. ಆದರೆ, ಜ್ಞಾನಿಯು ನನ್ನ ಸ್ವರೂಪನೇ ಆಗಿರುವನೆಂದು ನನ್ನ ಸಿದ್ಧಾಂತ. ಏಕೆಂದರೆ, ಮತ್ತೊಂದು ಉತ್ತಮವಾದದ್ದಿಲ್ಲದ ಗತಿಯನ್ನು ಬಯಸಿ ಸಮಾಧ್ಯವಸ್ಥೆಯಲ್ಲಿರುವ ಮನಸ್ಸುಳ್ಳ ಆ ಜ್ಞಾನಿಯು ನನ್ನನ್ನೇ ಪಡೆಯುತ್ತಾನೆ.

ಏಕಪ್ರಶಂಸಯಾ ಪ್ರಾಪ್ತೇತರನಿಂದಾಂ ನಿರಾಹ– **ಉದಾರಾ ಇತಿ** ॥ **ಏತೇ ಚತ್ವಾರೋ ಜನಾಃ । ಜ್ಞಾನೀ ಮೇ ಆತ್ಮೈವ ಸ್ವರೂಪಮೇವ ಅತಿಪ್ರಿಯತ್ವಾತ್ ಮದಧೀನಸತ್ತಾದಿರಿತಿ ಜ್ಞಾನವತ್ತ್ವಾದ್ವಾ ಅಭೇದೋಪಚಾರಃ । ಯದ್ವಾ ಆಪ್ನೋತೀತ್ಯಾತ್ಮಾ ಮತ್ಪ್ರಾಪ್ತಿಮಾನಿತ್ಯರ್ಥಃ । ಇತಿ ಮೇ ಮತಂ ಸಿದ್ಧಾಂತಃ । ಸ ಹಿ ಜ್ಞಾನೀ । ಅನುತ್ತಮಾಂ ಗತಿಮುದ್ದಿಶ್ಯ ಯುಕ್ತಾತ್ಮಾ ಸಮಾಧಿಯುಕ್ತಮನಾಃ ಮಾಮಾಸ್ಥಿತಃ ಪ್ರಾಪ್ತ ಇತಿ ಯೋಜನಾ ॥ 18 ॥**

**ಅನುವಾದ** - ಒಬ್ಬನ ಪ್ರಶಂಸೆಯಿಂದ ಒದಗುವ ಇತರರ ನಿಂದೆಯನ್ನು '**ಉದಾರಾಃ**' ಎಂಬ ಶ್ಲೋಕದಿಂದ ಶ್ರೀಕೃಷ್ಣನು ನಿರಾಕರಿಸುತ್ತಿದ್ದಾನೆ. ಏತೇ= ಈ ನಾಲ್ಕುಜನರು. ಜ್ಞಾನಿಯು, **ಮೇ ಆತ್ಮೈವ**= ನನ್ನ ಸ್ವರೂಪನೇ. ಅತಿಪ್ರಿಯನಾದ್ದರಿಂದ ಅಥವಾ ತನ್ನ ಅಸ್ತಿತ್ವ ಮೊದಲಾದವುಗಳು ನನಗೆ ಅಧೀನವಾದದ್ದು ಎಂಬ ಜ್ಞಾನವುಳ್ಳವನಾದ್ದರಿಂದ ಔಪಚಾರಿಕವಾಗಿ ಅಭೇದವನ್ನು ಹೇಳಲಾಗಿದೆ. ಅಥವಾ, **ಆಪ್ನೋತಿ ಇತಿ ಆತ್ಮಾ** ಎಂಬ ನಿರ್ವಚನಕ್ಕನುಗುಣವಾಗಿ ಆತ್ಮಾ ಎಂದರೆ ನನ್ನನ್ನು ಹೊಂದಿದವನು ಎಂದು ಅರ್ಥ. **ಇತಿ ಮೇ ಮತಂ**= ಹೀಗೆ ನನ್ನ ಸಿದ್ಧಾಂತ. ಆ ಜ್ಞಾನಿಯು ಮತ್ತೊಂದು ಉತ್ತಮವಿಲ್ಲದ ಗತಿಯನ್ನುದ್ದೇಶಿಸಿ, **ಯುಕ್ತಾತ್ಮಾ**– ಸಮಾಧಿಯನ್ನು ಪಡೆದ ಮನಸ್ಸುಳ್ಳವನಾಗಿ, **ಮಾಮ್ ಆಸ್ಥಿತಃ**– ನನ್ನನ್ನು ಪಡೆದಿದ್ದಾನೆ ಎಂದು ಯೋಜನೆ. || 18 ||

## ಎಲ್ಲ ಶ್ರೀಹರಿಯಧೀನವೆಂಬ ದೃಢಬುದ್ಧಿ– ದುರ್ಲಭ

**ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ || 19 ||**

**ಅರ್ಥ**– ಅನೇಕ ಜನ್ಮಗಳ ಕೊನೆಯಲ್ಲಿ, ಸರ್ವವೂ ವಾಸುದೇವನಿಗೆ ಅಧೀನವಾದ ಸತ್ತಾ, ಪ್ರತೀತಿ ಮೊದಲಾದುವನ್ನು ಹೊಂದಿರುವುದು ಎಂದು ತಿಳಿದು ನನ್ನನ್ನು ಹೊಂದುವನು. ಅಂತಹ ಜ್ಞಾನವುಳ್ಳವನು ಅತ್ಯಂತ ದುರ್ಲಭನು.

**ಏವಂ ವಿಧಜ್ಞಾನೀ ದುರ್ಲಭ ಇತ್ಯಾಹ- ಬಹೂನಾಮಿತಿ || ಬಹೂನಾಂ ಜನ್ಮನಾಮಂತೇ । ವಾಸುದೇವಃ ಸರ್ವಂ ಸರ್ವಂ ವಾಸುದೇವಾಧೀನಸತ್ತಾದಿ-ಮದಿತಿ ಜ್ಞಾನವಾನ್ । ಸರ್ವಂ ಸಂಪೂರ್ಣಂ ವಸ್ತು ವಾಸುದೇವ ಏವೇತಿ ಜ್ಞಾನವಾನಿತಿ ವಾಽರ್ಥಃ । ಏತೇನ ಭಗವದ್‌ಜ್ಞಾನಿನಾಮೇವ ಮೋಕ್ಷ ಇತಿ ಕುತ ಇತಿ ಶಂಕಾ ನಿರಸ್ತಾ । ಭಗವತ ಏವ ಪೂರ್ಣತ್ವೇನ ಜ್ಞಾನಾದಿದಾನ-ಸಮರ್ಥತ್ವಾದಿತಿ । ಸ ಮಾಂ ಪ್ರಪದ್ಯತೇ । ಸ ಮಹಾತ್ಮಾ ತಾದೃಶಜ್ಞಾನವಾನ್ ಸುದುರ್ಲಭಃ । ಏತೇನ ವಾಸುದೇವಜ್ಞಾನೇನ ಯದಿ ಮೋಕ್ಷಸ್ತರ್ಹಿ ಸರ್ವೇಷಾಂ ಸ ಸ್ಯಾದಿತಿ ಶಂಕಾ ನಿರಸ್ತಾ । ವಾಸುದೇವಜ್ಞಾನೇನ ಮೋಕ್ಷಸತ್ತ್ವೇಽಪಿ ನ ತದ್‌ಜ್ಞಾನಿನಃ ಸರ್ವೇ । ಅತೋ ನ ಸರ್ವೇಷಾಂ ಮೋಕ್ಷ ಇತಿ ತಾತ್ಪರ್ಯಾತ್। || 19 ||**

**ಅನುವಾದ**- ಇಂತಹ ಜ್ಞಾನಿಯು ದುರ್ಲಭನೆಂದು '**ಬಹೂನಾಂ**' ಎಂಬ ಶ್ಲೋಕದಿಂದ ಶ್ರೀಕೃಷ್ಣನು ಹೇಳುತ್ತಿದ್ದಾನೆ. ಅನೇಕ ಜನ್ಮಗಳ ಕೊನೆಯಲ್ಲಿ, **ವಾಸುದೇವಃ ಸರ್ವಂ**= ಸರ್ವವೂ ವಾಸುದೇವನಿಗೆ ಅಧೀನವಾದ ಸತ್ತಾ ಮೊದಲಾದವುಗಳನ್ನು ಹೊಂದಿರುವುದು ಎಂದು ಜ್ಞಾನವುಳ್ಳವನು, ಅಥವಾ, **ಸರ್ವಂ**= ಪರಿಪೂರ್ಣವಾದ ವಸ್ತುವು ವಾಸುದೇವನೇ ಎಂದು ಜ್ಞಾನವುಳ್ಳವನು ಎಂದು ಅರ್ಥ. ಇದರಿಂದ– ಭಗವಂತನ ಜ್ಞಾನಿಗಳಿಗೆ ಮಾತ್ರ ಮೋಕ್ಷವೇಕೆ ಎಂಬ ಶಂಕೆಯು ಪರಿಹೃತವಾಯಿತು. ಏಕೆಂದರೆ, ಭಗವಂತನೊಬ್ಬನೇ ಪರಿಪೂರ್ಣನಾದುದರಿಂದ ಜ್ಞಾನ ಮೊದಲಾದವುಗಳನ್ನು ಕೊಡಲು ಸಮರ್ಥನಷ್ಟೇ . (ಈ ರೀತಿ ಜ್ಞಾನವುಳ್ಳವನು) ನನ್ನನ್ನು ಪಡೆಯುವನು. **ಸ ಮಹಾತ್ಮಾ** = ಅಂತಹ ಜ್ಞಾನವುಳ್ಳವನು ಅತ್ಯಂತ ದುರ್ಲಭನು.

ಇದರಿಂದ– ವಾಸುದೇವನ ಜ್ಞಾನದಿಂದ ಮೋಕ್ಷವಾಗುವುದಾದರೆ ಎಲ್ಲರಿಗೂ ಅದು ದೊರಕಲಿ ಎಂಬ ಶಂಕೆಯು ನಿರಾಕೃತವಾಯಿತು. ವಾಸುದೇವನ ಜ್ಞಾನದಿಂದ ಮೋಕ್ಷ ಲಭಿಸುವುದಾದರೂ ಎಲ್ಲರೂ ಅವನ ಜ್ಞಾನವುಳ್ಳವರಲ್ಲ. ಆದ್ದರಿಂದ ಎಲ್ಲರಿಗೂ ಮೋಕ್ಷವಿಲ್ಲವೆಂದು ತಾತ್ಪರ್ಯ. ।। 19 ।।

## ಪರದೇವತೋಪಾಸಕರಿಗೆ ದೊರಕುವ ಫಲ ಅಶಾಶ್ವತ

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ।। 20 ।।**

**ಅರ್ಥ** – ಆಯಾಯಾ ವಿಷಯಗಳ ಇಚ್ಛೆಗಳಿಂದ ಜ್ಞಾನವನ್ನು ಕಳೆದುಕೊಂಡವರಾಗಿ ಆಯಾಯಾ ಆಗಮಗಳಲ್ಲಿ ಹೇಳಿರುವ ನಿಯಮಗಳನ್ನು ಪರಿಪಾಲಿಸಿ, ತಮ್ಮ ಸ್ವಭಾವಕ್ಕೆ ಅಧೀನರಾಗಿ ಬ್ರಹ್ಮಾದಿ ಇತರ ದೇವತೆಗಳನ್ನು ಶರಣು ಹೊಂದುವರು.

**ಲೋಕೇ ಭಗವದ್‌ಜ್ಞಾನಿನಾಂ ಬಹೂನಾಂ ದೃಶ್ಯಮಾನತ್ವಾತ್ ಕಥಂ ದೌರ್ಲಭ್ಯಮಿತ್ಯತ ಆಹ– ಕಾಮೈರಿತಿ ।।**

**ತೈಸ್ತೈಃ ಕಾಮೈಃ ಸ್ವಸ್ವಾಭಿಮತಕಾಮ್ಯೈರಿಚ್ಛಾಭಿರಪಹೃತಜ್ಞಾನಾಃ ತಂ ತಂ ನಿಯಮಂ ತತ್ತದಾಗಮೋಕ್ತನಿಯಮಮಾಶ್ರಿತ್ಯ ಸ್ವಯಾ ಪ್ರಕೃತ್ಯಾ, ಪ್ರಕೃತಿಃ ಸ್ವಭಾವಃ, ಸ್ವಕೀಯಸ್ವಭಾವೇನ ನಿಯತಾಃ ವಶೀಕೃತಾಃ ಸಂತೋಽನ್ಯದೇವತಾಃ ಬ್ರಹ್ಮಾದಿದೇವತಾಃ ಪ್ರಪದ್ಯಂತೇ । ಜ್ಞಾನಿತಯಾ ದೃಶ್ಯಮಾನಾಃ ನಾನಾವಿಧ-ಕಾಮಾಪಹೃತಭಗವದುತ್ತಮತ್ವಜ್ಞಾನಾಃ ಸಂತೋಽನ್ಯದೇವತಾಯಾಜಿನೋ**

**ಅನ್ಯದೇವತಾ ಏವ ಪ್ರಪದ್ಯಂತೇ । ತತಃ ಶುದ್ಧೋ ಭಾಗವತೋ ದುರ್ಲಭ ಇತಿ ಭಾವಃ ॥ 20 ॥**

**ಅನುವಾದ-** ಲೋಕದಲ್ಲಿ ಅನೇಕ ಭಗವಜ್ಜ್ಞಾನಿಗಳು ಕಾಣುತ್ತಿರುವುದರಿಂದ ಜ್ಞಾನಿಗಳು ವಿರಳರೆನ್ನುವುದು ಹೇಗೆ ಎಂಬ ಪ್ರಶ್ನೆಗೆ '**ಕಾಮೈಃ**' ಎಂಬ ಶ್ಲೋಕದಿಂದ ಭಗವಂತನು ಉತ್ತರ ನೀಡುತ್ತಿದ್ದಾನೆ.

**ತೈಸ್ತೈಃ ಕಾಮೈಃ** = ತಮತಮಗೆ ಅಪೇಕ್ಷಿತವಾದದ್ದರ, **ಕಾಮೈಃ** = ಇಚ್ಛೆಗಳಿಂದ ಅಪಹೃತವಾದ ಜ್ಞಾನವುಳ್ಳವರಾಗಿ, **ತಂ ತಂ ನಿಯಮಂ**= ಆಯಾಯಾ ಆಗಮೋಕ್ತವಾದ ನಿಯಮಗಳನ್ನು ಆಶ್ರಯಿಸಿ, **ಸ್ವಯಾ ಪ್ರಕೃತ್ಯಾ** = ಪ್ರಕೃತಿ ಎಂದರೆ ಸ್ವಭಾವ, ತಮ್ಮ ಸ್ವಭಾವದಿಂದ, **ನಿಯತಾಃ**= ವಶೀಕೃತರಾಗಿ, **ಅನ್ಯದೇವತಾಃ**= ಬ್ರಹ್ಮಾದಿದೇವತೆಗಳನ್ನು, ಹೊಂದುವರು.

ಜ್ಞಾನಿಗಳೆಂದು ತೋರುತ್ತಿದ್ದರೂ ನಾನಾ ವಿಧವಾದ ಕಾಮನೆಗಳಿಂದ ಭಗವಂತನು ಸರ್ವೋತ್ತಮನೆಂಬ ಜ್ಞಾನವನ್ನು ಕಳೆದುಕೊಂಡು ಅನ್ಯದೇವತೆಗಳನ್ನು ಆರಾಧಿಸುವವರಾಗಿ ಅನ್ಯದೇವತೆಗಳನ್ನೇ ಹೊಂದುವರು. ಆದ್ದರಿಂದ ಶುದ್ಧಭಾಗವತರು ದುರ್ಲಭರೆಂದು ಭಾವ. ॥ 20 ॥

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾऽರ್ಚಿತುಮಿಚ್ಛತಿ ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥ 21 ॥**

**ಅರ್ಥ-** ಯಾರು ಯಾರು ಬ್ರಹ್ಮರುದ್ರಾದಿಗಳ ಭಕ್ತರಾಗಿ ಅವರನ್ನು ಶ್ರದ್ಧೆಯಿಂದ ಪೂಜಿಸಲು ಇಚ್ಛಿಸುವರೋ ಅವರವರಿಗೆ ಅವರ ಶ್ರದ್ಧೆಯನ್ನೇ ಅಚಲವಾದದ್ದನ್ನಾಗಿ ಮಾಡುವೆನು.

**ನನು ಮಿಶ್ರಯಾಜ್ಯಪಿ ಕ್ರಮೇಣ ಭಾಗವತೋ ಭವತಿ ಕಿಮಿತ್ಯತಃ ಸ ಕಿಂ ನಿತ್ಯತ್ರೈವಿದ್ಯರೂಪಃ ಉತ ಶುದ್ಧಭಾಗವತೋ ನಿರ್ಣಾಯಕಾಭಾವಾದಿನಿಮಿತ್ತೇ-ನಾನ್ಯದೇವತಾಯಾಜೀ । ಆದ್ಯೇ ದೋಷಮಾಹ- ಯೋ ಯ ಇತಿ ॥ ಶುದ್ಧ-ಭಾಗವತ ತಮೋಯೋಗ್ಯಾಭ್ಯಾಮನ್ಯೋ ವಿಷ್ಣುತತ್ತ್ವಜ್ಞಾನವಿಪರೀತಜ್ಞಾನಾಭ್ಯಾಂ ಹೀನೋ ಯೋ ಯಃ ಕಾರಣವಿಶೇಷವಶಾದ್‌ಯಾಂ ಯಾಂ ಬ್ರಹ್ಮರುದ್ರಾದಿತನುಂ ಭಕ್ತಸ್ತದ್ಭಕ್ತಿಮಾನ್ ಶ್ರದ್ಧಯಾ ಆಸ್ತಿಕ್ಯಬುದ್ಧ್ಯಾ ಅರ್ಚಿತುಮಿಚ್ಛತಿ ತಸ್ಯ ತಸ್ಯ ತಾಮೇವ ಶ್ರದ್ಧಾಂ ಅಚಲಾಂ ವಿದಧಾಮಿ ॥ 21 ॥**

**ಅನುವಾದ-** ಮಿಶ್ರಯಾಜಿಯೂ ಕಾಲಕ್ರಮದಿಂದ ಭಗವದ್ಭಕ್ತನಾಗುವನೋ ಎಂಬ ಪ್ರಶ್ನೆಗೆ ಪ್ರತಿಯಾಗಿ ಅವನು ನಿತ್ಯತ್ರೈವಿದ್ಯನಾದವನೋ ಅಥವಾ ಶುದ್ಧ ಭಾಗವತನಾಗಿದ್ದರೂ ತತ್ತ್ವ -ನಿರ್ಣಯಕ್ಕೆ ಪ್ರಮಾಣಗಳು ಲಭ್ಯವಾಗದಿರುವುದರಿಂದ ಇತರ ದೇವತೆಗಳ ಆರಾಧಕನೋ ಎಂದು ಪ್ರಶ್ನಿಸಬೇಕು . ಮೊದಲನೆಯದನ್ನು ಒಪ್ಪಿದರೆ ಉತ್ತರವಾಗಿ – **ಯೋ ಯಃ** ಎಂದು ಹೇಳಲಾಗಿದೆ.

ಶುದ್ಧ ಭಾಗವತ –ತಮೋಯೋಗ್ಯ ಇವರಿಂದ ಅನ್ಯನಾದ ವಿಷ್ಣುತತ್ತ್ವಜ್ಞಾನ ಮತ್ತು ವಿಪರೀತಜ್ಞಾನ ಇವೆರಡರಿಂದಲೂ ರಹಿತನಾದ ಯಾರು ಯಾರು ಕಾರಣವಿಶೇಷವಶನಾಗಿ, **ಯಾಂ - ಯಾಂ ತನುಂ** = ಯಾವ ಯಾವ ಬ್ರಹ್ಮರುದ್ರಾದಿ ದೇವತೆಯನ್ನು,, **ಭಕ್ತಃ** = ಆ ದೇವತೆಯಲ್ಲಿ ಭಕ್ತಿಯುಳ್ಳವನಾಗಿ, **ಶ್ರದ್ಧಯಾ** = ಆಸ್ತಿಕ್ಯಬುದ್ಧಿಯಿಂದ, ಅರ್ಚಿಸಲು ಇಚ್ಛಿಸುವನೋ ಆಯಾಯಾ ಪುರುಷನಿಗೆ ಆಯಾ ಶ್ರದ್ಧೆಯನ್ನೇ ಆಚಲವಾದುದನ್ನಾಗಿ ನಾನು ಮಾಡುವೆನು. ।। 21 ।।

**ವಿವರಣೆ - ಮಿಶ್ರಯಾಜೀ** = ಕೆಲವೊಮ್ಮೆ ವಿಷ್ಣುವನ್ನೂ, ಮತ್ತೊಮ್ಮೆ ಇತರ ದೇವತೆಗಳನ್ನು ಆಯಾ ಸನ್ನಿವೇಶಕ್ಕನುಗುಣವಾಗಿ ಆರಾಧಿಸುವವನು. **ನಿತ್ಯತ್ರೈವಿದ್ಯ**= ಸ್ವಭಾವದಿಂದ ಹರಿಸರ್ವೋತ್ತಮತ್ವ ಜ್ಞಾನವಿಲ್ಲದೆ ಹರಿಭಕ್ತಿಶೂನ್ಯನಾಗಿ ಸ್ವರ್ಗಾದಿ ಫಲಗಳನ್ನೇ ಅಂತಿಮವೆಂದು ಭಾವಿಸಿ ಯಾಗಾದಿ ಕರ್ಮಗಳಲ್ಲಿ, ಇತರ ದೇವತೆಗಳ ಅರ್ಚನೆಯಲ್ಲಿ ನಿರತನಾಗಿರುವವನು.

**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ ಹಿ ತಾನ್ ।। 22 ।।**

**ಅರ್ಥ–** ಆ ಪುರುಷನು ಆ ಶ್ರದ್ಧೆಯಿಂದ ಯುಕ್ತನಾಗಿ ಆ ದೇವತೆಯ ಆರಾಧನೆಯನ್ನು ಮಾಡುವನು. ಆ ಆರಾಧನೆಯಿಂದ ನಾನೇ ನೀಡುವ ತಾನು ಬಯಸಿದ ಫಲಗಳನ್ನು ಪಡೆಯುವನು.

**ಸ ಚ ತಯಾ ಶ್ರದ್ಧಯಾ ಯುಕ್ತಸ್ತಸ್ಯ ದೇವಸ್ಯಾರಾಧನಮೀಹತೇ ಕರೋತಿ । ತತಸ್ತದಾರಾಧನಾತ್ ತದ್‌ದೇವಸ್ಥೇನ ಮಯ್ಯೈವ ವಿಹಿತಾನ್ ತಾನ್ ಸ್ವಾಭಿ-ಪ್ರೇತಾನ್ ಕಾಮಾನ್ ಲಭತೇ ಚ । ಮದಿತರಸ್ಯ ಫಲದಾನೇ ಸಾಮರ್ಥ್ಯಾ-ಭಾವಾತ್ ।**

**ದ್ವಿತೀಯೇऽಪ್ಯಾಹ- ಯೋ ಯ ಇತಿ ।। ಭಕ್ತಃ ಸ್ವತೋ ವಿಷ್ಣುಭಕ್ತ ಏವ ಯೋ ಯಃ ಜ್ಞಾತ್ವಾऽಪಿ ವಿಷ್ಣುಂ ಕಾರಣಾಂತರವಶಾದೇವ ಯಾಂ ಯಾಂ ಬ್ರಹ್ಮಾದಿ-ತನುಮ್ ।। ಪ್ರಾಗ್ವದೇವ ಈಹತೇ ಇತ್ಯಂತಸ್ಯಾರ್ಥಃ । ತತಃ ಕ್ರಮೇಣೇಶಾನುಗ್ರಹ-**

**ಪ್ರಾಪ್ತಗುರೂಪದೇಶದ್ವಾರಾ ತಸ್ಯ ವಿಷ್ಣೋರಾರಾಧನಮೀಹತೇ । ತತೋ ಭಗವದಾರಾಧನಾನ್ಮಯ್ಯೈವ ವಿಹಿತಾನ್ಮೋಕ್ಷಾದಿಕಾಮಾನ್‌ಲಭತೇ ಚೇತಿ ॥ 22 ॥**

**ಅನುವಾದ-** ಆ ಪುರುಷನು ಕೂಡ ಆ ಶ್ರದ್ಧೆಯಿಂದ ಯುಕ್ತನಾಗಿ ಆ ದೇವತೆಯ ಆರಾಧನೆಯನ್ನು ಮಾಡುವನು. **ತತಃ** = ಆ ಆರಾಧನೆಯಿಂದಾಗಿ ಆ ದೇವತೆಯೊಳಗಿರುವ ನನ್ನಿಂದಲೇ ಕೊಡಲ್ಪಡುವ. **ತಾನ್** = ತಾನು ಬಯಸಿದ ಆ ಫಲಗಳನ್ನು ಪಡೆಯುವನು. ನನ್ನನ್ನುಳಿದು ಇತರರಿಗೆ ಫಲವನ್ನು ನೀಡುವ ಸಾಮರ್ಥ್ಯವಿಲ್ಲವಾದ್ದರಿಂದ .

ಎರಡನೆಯ ಪಕ್ಷವನ್ನು ಒಪ್ಪಿದರೆ ಅದಕ್ಕುತ್ತರವಾಗಿಯೂ **'ಯೋ ಯಃ'** ಎಂದು ಹೇಳಲಾಗಿದೆ. **ಭಕ್ತಃ** – ಸ್ವತಃ ವಿಷ್ಣುಭಕ್ತನಾಗಿಯೇ ಯಾರು ಯಾರು, ವಿಷ್ಣುವನ್ನು ತಿಳಿದಿದ್ದರೂ, ಕಾರಣಾಂತರದಿಂದಾಗಿ, **ಯಾಂ ಯಾಂ**= ಯಾವ ಯಾವ ಬ್ರಹ್ಮಾದಿದೇವತೆಯನ್ನು. ಹಿಂದಿನಂತೆಯೇ '**ಈಹತೇ**' ಎಂಬಲ್ಲಿಯವರೆಗೆ ಅರ್ಥವನ್ನು ಹೇಳಬೇಕು. ಅನಂತರ ಕಾಲಕ್ರಮದಿಂದ ಭಗವದನುಗ್ರಹದಿಂದ ಒದಗಿದ ಗುರುಗಳ ಉಪದೇಶದ ಮೂಲಕ, **ತಸ್ಯ**= ಆ ವಿಷ್ಣುವಿನ ಆರಾಧನೆಯನ್ನು ಮಾಡುವನು. ಆ ಬಳಿಕ ಭಗವದಾರಾಧನೆಯ ಫಲವಾಗಿ ನಾನೇ ಕೊಡಮಾಡುವ ಮೋಕ್ಷಾದಿ ಫಲಗಳನ್ನು ಪಡೆಯುವನು.

**ವಿವರಣೆ-** **'ಯೋ ಯೋ ಯಾಂ ಯಾಂ ತನುಂ'** ಎಂಬಲ್ಲಿ 'ಯಾರು ಯಾರು ಭಗವಂತನ ರಾಮಕೃಷ್ಣಾದಿ ರೂಪಗಳ ಮಧ್ಯೆ ಯಾವ ರೂಪವನ್ನು ಅರ್ಚಿಸಲು ಬಯಸುವನೋ' ಎಂದು ಅಪಾರ್ಥವಾಗಲು ಸಾಧ್ಯವಿದೆ. ಆದರೆ, ಮುಂದಿನ ಶ್ಲೋಕದಲ್ಲಿ, ಆ ರೀತಿ ಅರ್ಚಿಸುವವರಿಗೆ ನಶ್ವರವಾದ ಫಲ ಸಿಗುವುದೆಂದು ಹೇಳಿರುವುದರಿಂದ, **'ಯಾಂ ಯಾಂ ತನುಂ'** ಎನ್ನುವುದಕ್ಕೆ 'ಬ್ರಹ್ಮರುದ್ರಾದಿ ದೇವತೆಗಳಲ್ಲಿ ಯಾವ ದೇವತೆಯನ್ನು ಅರ್ಚಿಸಲು ಇಚ್ಛಿಸುವನೋ' ಎಂದೇ ಅರ್ಥವನ್ನು ಹೇಳಬೇಕಾಗುವುದು. ॥ 22 ॥

**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।**
**ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ॥ 23 ॥**

**ಅರ್ಥ** – ಅನ್ಯದೇವತೆಗಳನ್ನು ಆರಾಧಿಸುವ ಅಲ್ಪಬುದ್ಧಿಯವರಿಗೆ ದೊರೆಯುವ ಫಲವು ಅಶಾಶ್ವತವಾದದ್ದೇ. ಬ್ರಹ್ಮಾದಿದೇವತೆಗಳನ್ನು ಭಜಿಸುವವರು ಬ್ರಹ್ಮಾದಿದೇವತೆಗಳನ್ನು ಹೊಂದುವರು. ನನ್ನ ಭಕ್ತರು ನನ್ನನ್ನೂ ಪಡೆಯುವರು.

**ಅನ್ಯದೇವತಾಯಾಜಿನಾಮಪಿ ತ್ವತ್ತ ಏವ ಫಲಂ ಚೇತ್ ಕುತಃ ತತ್ತ್ಯಾಗೇನ ತ್ವದಾರಾಧನಮೇವ ಕಾರ್ಯಮಿತ್ಯತ ಆಹ- ಅಂತವತ್ತ್ವಿತಿ ॥ ವಿಷ್ಣೋಃ ರಮಾ-**

**ಬ್ರಹ್ಮಾದಿಭ್ಯಃ ಪರತ್ವಂ ಜ್ಞಾತ್ವಾ ಅನ್ಯದೇವತಾಯಾಜಿನಾಂ ತೇಷಾಂ ಫಲಮಂತ-ವದೇವ । ಕುತಃ ? ಅಲ್ಪಮೇಧಸಾಂ ಅಲ್ಪಫಲೇ ಏವ ಬುದ್ಧಿಮತ್ತ್ವಾತ್ ತ್ವರ್ಥಃ । ಕಥಮಂತವತ್ತ್ವಮಿತ್ಯತ ಉಕ್ತಮ್- ದೇವಾನಿತಿ ॥ ವಿಷ್ಣೂತ್ಕರ್ಷಂ ಜ್ಞಾತ್ವಾ ಬ್ರಹ್ಮಾದಿದೇವಯಾಜಿನೋ ಬ್ರಹ್ಮಾದಿದೇವಾನ್ ಯಾಂತಿ ನತು ಮಾಂ । ಅತೋಽಂತವತ್ಫಲಮ್ । ಮದ್ಭಕ್ತಾಸ್ತು ಮಾಮಪಿ, ದೇವಾನ್ ಪ್ರಾಪ್ಯಾಂತೇ ಮಾಮಪಿ ಯಾಂತಿ । ಅತೋಽನಂತಂ ತೇಷಾಂ ಫಲಮ್ । ತಸ್ಮಾನ್ಮದಾರಾಧನಂ ಪ್ರಾಧಾನ್ಯೇನ ಅನ್ಯದೇವತಾರಾಧನಂ ಚ ಪರಿವಾರತಯಾ ಕಾರ್ಯಮಿತಿ ॥ 23॥**

**ಅನುವಾದ** - ಅನ್ಯ ದೇವತೆಗಳನ್ನು ಆರಾಧಿಸುವವರಿಗೂ ನಿನ್ನಿಂದಲೇ ಫಲ ದೊರಕುವುದಾದರೆ ಆ ಅನ್ಯದೇವತೆಗಳನ್ನು ಬಿಟ್ಟು ನಿನ್ನ ಆರಾಧನೆಯನ್ನೇ ಏಕೆ ಮಾಡಬೇಕು ಎಂಬ ಪ್ರಶ್ನೆಗೆ ಉತ್ತರವಾಗಿ '**ಅಂತವತ್ತು**' ಎಂದು ಹೇಳಿದೆ.

ರಮಾಬ್ರಹ್ಮಾದಿಗಳಿಗಿಂತಲೂ ವಿಷ್ಣುವಿಗೇ ಶ್ರೇಷ್ಠತೆಯನ್ನು ತಿಳಿದು ಅನ್ಯದೇವತೆಗಳನ್ನು ಆರಾಧಿಸುವವರಿಗೆ ದೊರಕುವ ಫಲ ಕೊನೆಯುಳ್ಳದ್ದೇ ಆಗಿದೆ. ಏಕೆ ? **ಅಲ್ಪಮೇಧಸಾಂ**= ಅಲ್ಪ ಫಲದಲ್ಲೇ ಬುದ್ಧಿಯುಳ್ಳವರಾದ್ದರಿಂದ ಎಂದು ಅರ್ಥ. ಆ ಫಲವು ಅಂತವುಳ್ಳದ್ದೇಕೆ ! ಎಂಬ ಪ್ರಶ್ನೆಗೆ ಸಮಾಧಾನವಾಗಿ ' **ದೇವಾನ್**' ಎಂದು ಹೇಳಲಾಗಿದೆ. ವಿಷ್ಣುವಿನ ಉತ್ಕರ್ಷವನ್ನು ತಿಳಿದು ಬ್ರಹ್ಮಾದಿ ದೇವತೆಗಳನ್ನು ಆರಾಧಿಸುವವರು ಬ್ರಹ್ಮಾದಿ ದೇವತೆಗಳನ್ನು ಹೊಂದುವರು ಹೊರತು ನನ್ನನ್ನಲ್ಲ. ಆದ್ದರಿಂದ ಅದರ ಫಲವು ಅಂತವುಳ್ಳದ್ದು. **ಮದ್ಭಕ್ತಾಸ್ತು ಮಾಮಪಿ**= ನನ್ನ ಭಕ್ತರಾದರೋ ದೇವತೆಗಳನ್ನು ಹೊಂದಿ ಕೊನೆಯಲ್ಲಿ ನನ್ನನ್ನೂ ಪಡೆಯುವರು. ಆದ್ದರಿಂದ ಅವರ ಫಲವು ಅನಂತವಾದದ್ದು. ಆದ ಕಾರಣ, ನನ್ನ ಆರಾಧನೆಯನ್ನು ಪ್ರಧಾನವಾಗಿ, ಅನ್ಯದೇವತೆಗಳ ಆರಾಧನೆಯನ್ನು ಪರಿವಾರತ್ವೇನ ಮಾಡತಕ್ಕದ್ದು . ॥ 23 ॥

## ಜನನ-ಮರಣಗಳೆನಗಿಲ್ಲವೆಂದು ಅಜ್ಞಾನಿ ಅರಿಯನು

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।**
**ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್ ॥ 24 ॥**

**ಅರ್ಥ** – ಅಜ್ಞಾನಿಗಳು, ಇತರ ಜೀವರಿಗಿಂತ ವಿಲಕ್ಷಣನೂ ನನಗಿಂತ ಉತ್ತಮವಾದ ವಸ್ತುವೊಂದು ಇಲ್ಲದಿರುವವನೂ, ನಾಶರಹಿತನೂ ಆದ ನನ್ನ ಯಥಾರ್ಥ ಸ್ವರೂಪವನ್ನು ತಿಳಿಯದೆ ಜನ್ಯವಾದ ದೇಹಾದಿಗಳಿಲ್ಲದಿರುವ ನನ್ನನ್ನು ಜನ್ಯವಾದ ದೇಹಾದಿಗಳನ್ನುಳ್ಳವನೆಂದು ತಿಳಿಯುವರು.

ಅಥವಾ, ಅಜ್ಞಾನಿಗಳು, ನನ್ನ ಇತರ ವಿಲಕ್ಷಣವಾದ, ತನಗಿಂತಲೂ ಉತ್ತಮ ವಸ್ತುವಿಲ್ಲದಿರುವ, ನಾಶರಹಿತವಾದ ಯಥಾರ್ಥಸ್ವರೂಪವನ್ನು ತಿಳಿಯದೆ, ಪೂರ್ಣವಾಗಿ ತಿಳಿಯಲು ಸಾಧ್ಯ ವಿಲ್ಲದಿರುವುದರಿಂದ ಅವ್ಯಕ್ತನೆಂದೆನಿಸುವ ನನ್ನನ್ನು ಪೂರ್ಣವಾಗಿ ತಿಳಿಯಲು ಸಾಧ್ಯವಿರುವ ಜೀವನೆಂದೇ ತಿಳಿಯುವರು.

**ನನು ಕೋ ವಿಶೇಷಸ್ತವಾನ್ಯೇಭ್ಯೋ ಬ್ರಹ್ಮಾದಿಭ್ಯಃ ಯೇನ ತ್ವಾಂ ಪ್ರಾಪ್ತಾನಾಮನಂತಫಲಂ ದೇವಾನ್ಪ್ರಾಪ್ತಾನಾಮಂತವತ್ ಫಲಮಿತ್ಯತ ಆಹ – ಅವ್ಯಕ್ತಮಿತಿ ॥ ಅಬುದ್ಧಯೋಽಜ್ಞಾನಿನಃ ಪರಮಿತರವಿಲಕ್ಷಣಂ ಅನುತ್ತಮಂ ಉತ್ತಮರಹಿತಂ ಅವ್ಯಯಂ ಮಮ ಭಾವಂ ಪ್ರಮಾಣಾವ್ಯಭಿಚರಿತತ್ವರೂಪಂ ಯಾಥಾರ್ಥ್ಯಮಜಾನಂತಃ । ಅವ್ಯಕ್ತಂ ಕಾರ್ಯದೇಹಾದಿಹೀನಂ ಮಾಂ ವ್ಯಕ್ತಿಮಾಪನ್ನಂ ಕಾರ್ಯದೇಹಾದಿಯುಕ್ತಂ ಮನ್ಯಂತೇ । ಕಾರ್ಯದೇಹಾದಿರಾಹಿತ್ಯಂ ತದ್ಯುಕ್ತಾನ್ಯದೇವೇಭ್ಯೋ ಮಮ ವಿಶೇಷ ಇತಿ ಭಾವಃ ।**

**ಅನುವಾದ-** (ಹೇ ಕೃಷ್ಣ!) ನಿನಗೆ ಅನ್ಯ ಬ್ರಹ್ಮಾದಿದೇವತೆಗಳಿಗಿಂತ ಇರುವ ವಿಶೇಷವಾದರೂ ಏನು ? ಯಾವುದರಿಂದಾಗಿ ನಿನ್ನನ್ನು ಹೊಂದಿದವರಿಗೆ ಅನಂತವಾದ ಫಲ, ದೇವತೆಗಳನ್ನು ಹೊಂದಿದವರಿಗೆ ಅಶಾಶ್ವತವಾದ ಫಲ ದೊರಕುವುದು ಎಂಬ ಪ್ರಶ್ನೆಗೆ ಉತ್ತರವಾಗಿ '**ಅವ್ಯಕ್ತಮ್**' ಇತ್ಯಾದಿ ಹೇಳಲಾಗಿದೆ.

**ಅಬುದ್ಧಯಃ**= ಅಜ್ಞಾನಿಗಳು, **ಪರಮ್**= ಇತರ ವಿಲಕ್ಷಣನೂ, **ಅನುತ್ತಮಂ**= ಮತ್ತೊಬ್ಬ ಉತ್ತಮನಿಲ್ಲದವನೂ ನಾಶರಹಿತವೂ ಆದ **ಮಮ ಭಾವಂ**= 'ಪ್ರಮಾಣಗಳನ್ನು ಅತಿಕ್ರಮಿಸದಿರುವಿಕೆ' ಎಂಬ ನನ್ನ ಯಥಾರ್ಥತೆಯನ್ನು ತಿಳಿಯದವರಾಗಿ, **ಅವ್ಯಕ್ತಂ**= ಜನ್ಯವಾದ ದೇಹಾದಿಗಳಿಲ್ಲದಿರುವ ನನ್ನನ್ನು , **ವ್ಯಕ್ತಿಮಾಪನ್ನಂ ಮನ್ಯಂತೇ**= ಜನ್ಯವಾದ ದೇಹಾದಿಗಳಿಂದ ಸಹಿತನೆಂದು ತಿಳಿಯುವರು. ಜನ್ಯವಾದ ದೇಹಾದಿಗಳಿಂದ ಕೂಡಿದ ಇತರ ದೇವಾದಿಗಳಿಂದ, ಜನ್ಯವಾದ ದೇಹಾದಿಗಳಿಲ್ಲದಿರುವುದು ನನ್ನ ವಿಶೇಷ ಎಂದು ಭಾವ.

**ವಿವರಣೆ- ಪ್ರಮಾಣಾವ್ಯಭಿಚರಿತತ್ವರೂಪಂ ಯಾಥಾರ್ಥ್ಯಮ್ ಅಜಾನಂತಃ**= ಶ್ರುತ್ಯಾದಿ ಪ್ರಮಾಣಗಳಿಂದ ನನ್ನ ಸ್ವರೂಪವು ಯಾವ ರೀತಿಯಲ್ಲಿ ತಿಳಿದು ಬರುವುದೋ ಹಾಗೆಯೇ ನನ್ನ ಯಥಾರ್ಥಸ್ವರೂಪವನ್ನು ತಿಳಿಯದವರು.

**ಯದ್ವಾ ಯಥಾ ದೇವಯಾಜಿನೋ ಮದ್ಯಾಜಿನಶ್ಚ ತ್ರೈವಿದ್ಯಾ ಭಾಗವತಾಶ್ಚ ವರ್ತಂತೇ ತಥಾ ಮದ್ದ್ವೇಷಿಣಶ್ಚ ಕೇಚನ ಸಂತೀತ್ಯಾಹ– ಅವ್ಯಕ್ತಮಿತಿ ॥**

**ಸರ್ವಾತ್ಮನಾಽಜ್ಞೇಯತ್ವಹೇತುನಾ ಅವ್ಯಕ್ತಪದಾರ್ಥಂ ಮಾಮೀಶ್ವರಂ ವ್ಯಕ್ತಿಂ ಸರ್ವಾತ್ಮನಾ ಜ್ಞೇಯತ್ವಮಾಪನ್ನಂ ಪ್ರಾಪ್ತಂ ಜೀವಮಿತಿ ಯಾವತ್ । ಮಮ ಪರಂ ಭಾವಮಜಾನಂತೋಽಲ್ಪಬುದ್ಧಯೋ ಮನ್ಯಂತೇ । ಜೀವೈಕ್ಯಂ ಮನ್ಯಂತ ಇತ್ಯರ್ಥಃ।**

**ಅನುವಾದ-** ಅಥವಾ, ದೇವತೆಗಳನ್ನು ಆರಾಧಿಸುವವರು ಮತ್ತು ನನ್ನನ್ನು ಆರಾಧಿಸುವವರು ತ್ರೈವಿದ್ಯರು ಮತ್ತು ಭಾಗವತರು ಇರುವಂತೆ ನನ್ನನ್ನು ದ್ವೇಷಿಸುವವರೂ ಕೆಲವರಿದ್ದಾರೆ ಎಂದು ಶ್ರೀಕೃಷ್ಣನು '**ಅವ್ಯಕ್ತಮ್**' ಎಂಬ ಶ್ಲೋಕದಲ್ಲಿ ಹೇಳುತ್ತಿದ್ದಾನೆ.

ಸರ್ವಪ್ರಕಾರದಿಂದ ತಿಳಿಯಲು ಸಾಧ್ಯವಿಲ್ಲದಿರುವ ನಿಮಿತ್ತದಿಂದ ಅವ್ಯಕ್ತನೆಂದು ಹೇಳಲ್ಪಡುವ ಈಶ್ವರನಾದ ನನ್ನನ್ನು , **ವ್ಯಕ್ತಿಂ** = ಸರ್ವಪ್ರಕಾರದಿಂದ ತಿಳಿಯಲ್ಪಡುವಿಕೆಯನ್ನು, **ಆಪನ್ನಂ** = ಹೊಂದಿದವನೆಂದು, ಜೀವನೆಂದು ಎಂದು ತಾತ್ಪರ್ಯ. ನನ್ನ ಇತರ ವಿಲಕ್ಷಣವಾದ ಸ್ವಭಾವವನ್ನು ತಿಳಿಯದ ಅಲ್ಪಬುದ್ಧಿಗಳು ಭಾವಿಸುತ್ತಾರೆ. (ನನ್ನಲ್ಲಿ) ಜೀವಾಭೇದವನ್ನು ತಿಳಿಯುತ್ತಾರೆ ಎಂದು ಅರ್ಥ.

**ಯದ್ವಾ 'ಮಯಿ ಸರ್ವಮಿದಂ ಪ್ರೋತಮ್ ಇತ್ಯಾದ್ಯುಕ್ತದಿಶಾ ಪ್ರೇರಕತ್ವಾದಿ- ಮಹಾಮಹಿಮವಾಂಶ್ಚೇದ್ ಭವಾನ್ ತತ್ಕಥಂ ಭವತಃ ಕೇಚಿದ್ ಜೀವಾಭೇದಂ ಮನ್ಯಂತ ಇತ್ಯತ ಆಹ- ಅವ್ಯಕ್ತಮಿತಿ ॥ ಪ್ರಾಗುಕ್ತದಿಶಾಽವ್ಯಕ್ತಂ ಮಾಮೀಶ್ವರಂ ವ್ಯಕ್ತಿಮಾಪನ್ನಂ ಜೀವಂ ಜೀವಾಭೇದೇನ ಮಾಂ ಮನ್ಯಂತೇ ಯೇ ತೇ ಮಮ ಪರಂ ಭಾವಮಜಾನಂತೋ ಅಲ್ಪಬುದ್ಧಯಸ್ತಮೋಯೋಗ್ಯಾ ಇತ್ಯರ್ಥಃ ॥ 24 ॥**

**ಅನುವಾದ-** ಅಥವಾ, '**ಮಯಿ ಸರ್ವಮಿದಂ ಪ್ರೋಕ್ತಂ**' ಇತ್ಯಾದಿ ಶ್ಲೋಕದಲ್ಲಿ ಹೇಳಿದ ಕ್ರಮದಲ್ಲಿ ನೀನು ಪ್ರೇರಕತ್ವವೇ ಮೊದಲಾದ ಮಹಾಮಹಿಮೆಗಳನ್ನುಳ್ಳವನಾದರೆ, ಕೆಲವರು ನಿನಗೆ ಜೀವಾಭೇದವಿದೆಯೆಂದು ಹೇಗೆ ತಿಳಿಯುವರು ಎಂಬ ಪ್ರಶ್ನೆಗೆ ಶ್ರೀಕೃಷ್ಣನು '**ಅವ್ಯಕ್ತಂ**' ಎಂದು ಉತ್ತರಿಸುತ್ತಿದ್ದಾನೆ.

ಹಿಂದೆ ಹೇಳಿದಂತೆ ಅವ್ಯಕ್ತನಾದ ಹಾಗೂ ಈಶ್ವರನಾದ ನನ್ನನ್ನು , **ವ್ಯಕ್ತಿಮ್ ಆಪನ್ನಂ**= (ಜನ್ಯವಾದ ದೇಹವನ್ನು ಹೊಂದಿರುವ ಅಥವಾ ಪೂರ್ಣವಾಗಿ ತಿಳಿಯಲು ಸಾಧ್ಯವಿರುವ) ಜೀವನೆಂದು ಜೀವಾಭೇದವನ್ನು ಹೊಂದಿದವನನ್ನಾಗಿ ಯಾರು ತಿಳಿಯುವರೋ ಅಂತಹ, **ಮಮ ಪರಂ ಭಾವಮ್ ಅಜಾನಂತಃ** = ನನ್ನ ಸರ್ವವಿಲಕ್ಷಣವಾದ ಸ್ವರೂಪವನ್ನು ತಿಳಿಯದವರು ಅಲ್ಪಬುದ್ಧಿಗಳು, ತಮೋಯೋಗ್ಯರು ಎಂದು ಭಾವ. ॥ 24 ॥

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಮ್ ॥ 25 ॥**

**ಅರ್ಥ–** ನನ್ನ ಸಾಮರ್ಥ್ಯ ಮತ್ತು ದುರ್ಗಾದೇವಿ ಇವೆರಡರಿಂದಾಗಿ ನಾನು ಎಲ್ಲರಿಗೂ ಜ್ಞಾನ ಗೋಚರನಾಗಲಾರೆ. (ಆದ್ದರಿಂದಲೇ) ಅಜ್ಞಾನಿಯಾದ ಈ ಲೋಕವು ನನ್ನನ್ನು ಜನನ-ಮರಣಗಳಿಲ್ಲದವನೆಂದು ತಿಳಿಯಲಾರದು.

**ನನು ತೇಷಾಂ ತ್ವದ್ವಿಷಯವಿಪರೀತಜ್ಞಾನಕೃತನಿಂದಯಾ ತವ ಖೇದೋಽಸ್ತಿ ಕಿಮಿತ್ಯತಃ ಪರಂ ಭಾವಮಜಾನಂತೋಽನ್ಯಥಾ ಮನ್ಯಂತ ಇತ್ಯುಕ್ತವಿಪರೀತ-ಜ್ಞಾನಹೇತುಭೂತಮಜ್ಞಾನಂ ನ ಸ್ವತಂತ್ರಮ್ । ಕಿಂತು ಮದಾಯತ್ತಮೇವ । ಅತಃ ಕುತೋ ಮಮ ಖೇದ ಇತಿ ಭಾವೇನಾಸ್ಯ ಸ್ವಾಧೀನತಾಮಾಹ- ನಾಹಮಿತಿ ॥**

**ಅನುವಾದ –** ನಿನ್ನ ಬಗ್ಗೆ ಇರುವ ವಿಪರೀತಜ್ಞಾನದಿಂದಾಗಿ ಆ ಅಲ್ಪಬುದ್ಧಿಗಳು ಮಾಡುವ ನಿಂದೆಯಿಂದಾಗಿ ನಿನಗೆ ಖೇದವಿದೆಯೋ ಹೇಗೆ ಎಂಬ ಪ್ರಶ್ನೆಗೆ ಉತ್ತರವಾಗಿ. 'ನನ್ನ ಲೋಕವಿಲಕ್ಷಣ ಸ್ವರೂಪವನ್ನು ತಿಳಿಯದೇ ವಿಪರೀತವಾಗಿ ನನ್ನನ್ನು ತಿಳಿಯುವರು' ಎಂದು ಹೇಳಿದ, ವಿಪರೀತ ಜ್ಞಾನಕ್ಕೆ ಕಾರಣವಾದ ಅಜ್ಞಾನವು ಸ್ವತಂತ್ರವಾದದ್ದಲ್ಲ. ನನಗೆ ಅಧೀನ-ವಾದದ್ದೇ ಆಗಿದೆ. ಆದ್ದರಿಂದ ನನಗೇಕೆ ಖೇದ ?' ಎಂಬ ಅಭಿಪ್ರಾಯದಿಂದ ಅವರ ಅಜ್ಞಾನವು ತನಗೆ ಅಧೀನವಾದದ್ದೆಂದು '**ನಾಹಂ**' ಎಂಬ ಶ್ಲೋಕದಲ್ಲಿ ಶ್ರೀಕೃಷ್ಣನು ಹೇಳುತ್ತಿದ್ದಾನೆ.

**ಯೋಗೇನ ಸಾಮರ್ಥ್ಯಲಕ್ಷಣೋಪಾಯೇನ ಮಾಯಯಾ ದೇವ್ಯಾ ಚ । ಯೋಗಸಹಿತಾ ಮಾಯಾ ಯೋಗಮಾಯೇತಿ ವಿಗ್ರಹಃ । ಸಮಾವೃತೋಽಹಂ ನ ಸರ್ವಸ್ಯ ಪ್ರಕಾಶಃ । ಕರ್ಮಣಿ ಘಞ್ । ಪ್ರಕಾಶವಿಷಯೋ ನ ಭವಾಮಿ । ಅತೋ ಮಯ್ಯೆವ ಮೂಢೋಽಯಂ ಲೋಕೋ ಮಾಮಜಮವ್ಯಯಂ ಜನ್ಮವ್ಯಯ-ಹೀನಂ ನಾಭಿಜಾನಾತೀತಿ ॥ 25 ॥**

**ಅನುವಾದ- ಯೋಗೇನ**= ಸಾಮರ್ಥ್ಯರೂಪವಾದ ಉಪಾಯದಿಂದ, **ಮಾಯಯಾ**= ದುರ್ಗಾದೇವಿಯಿಂದಲೂ- '**ಯೋಗಸಹಿತಾ ಮಾಯಾ ಯೋಗಮಾಯಾ**' ಎಂದು ವಿಗ್ರಹ-ಚೆನ್ನಾಗಿ ಆವರಿಸಲ್ಪಟ್ಟಿರುವ ನಾನು' **ನ ಸರ್ವಸ್ಯ ಪ್ರಕಾಶಃ**= ಎಲ್ಲರ ಜ್ಞಾನಕ್ಕೆ ವಿಷಯನಾಗು ವುದಿಲ್ಲ. 'ಪ್ರಕಾಶ ' ಎಂಬಲ್ಲಿರುವ ಘಜ್ ಪ್ರತ್ಯಯವು ವಿಷಯವೆಂಬ ಅರ್ಥವನ್ನು ಹೊಂದಿದೆ. ಆದ್ದರಿಂದ ನನ್ನಿಂದಾಗಿಯೇ ಅಜ್ಞಾನವನ್ನು ಹೊಂದಿರುವ ಈ ಲೋಕವು ನನ್ನನ್ನು **ಅಜಮ್ ಅವ್ಯಯಮ್**= ಜನ್ಮ-ಮರಣಗಳಿಲ್ಲದವನೆಂದು ತಿಳಿಯುವುದಿಲ್ಲ.

**ವಿವರಣೆ-** '**ಯೋಗಮಾಯಾಸಮಾವೃತಃ**' ಎಂದು 'ಭಗವಂತನ ಸಾಮರ್ಥ್ಯ ಮತ್ತು ದೇವಿಯಿಂದ ನಾನು ಆವರಿಸಲ್ಪಟ್ಟಿರುವೆನು' ಎಂದು ಹೇಳಿರುವುದು ಎಲ್ಲರೂ ನನ್ನನ್ನು ತಿಳಿಯಲು ನನ್ನ ಸಾಮರ್ಥ್ಯ ಮತ್ತು ದುರ್ಗಾದೇವಿ ಇವರಿಬ್ಬರು ಪ್ರತಿಬಂಧಕರಾಗಿದ್ದಾರೆ ಎಂಬ ಆಶಯದಿಂದ. ॥ 25 ॥

## ಎಲ್ಲ ಅರಿವಿದೆ ಎನಗೆ, ಎನ್ನನರಿತವನಿಲ್ಲ

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ 26 ॥**

**ಅರ್ಥ-** ಹೇ ಅರ್ಜುನ ! ಹಿಂದೆ ಆಗಿಹೋದ, ಈಗಿರುವ , ಮುಂದೆ ಹುಟ್ಟುವ ಎಲ್ಲ ಜೀವರನ್ನೂ ನಾನು ತಿಳಿದಿದ್ದೇನೆ. ಆದರೆ, ಯಾವೊಬ್ಬನೂ ನನ್ನನ್ನು ಯಥಾವತ್ತಾಗಿ ತಿಳಿದಿಲ್ಲ.

**ನನು ಯವನಿಕಾದ್ಯುಭಯಭಾಗವರ್ತಿನೋಃ ಪರಸ್ಪರಾಜ್ಞಾನವತ್ ತವಾಪಿ ಭೂತಾದಿವಿಷಯಾಜ್ಞಾನಂ ಸ್ಯಾದಿತ್ಯತೋ ಯವನಿಕಾಸ್ಥಾನೀಯಾऽಪಿ ಮಾಯಾ ನ ಮಾಂ ಬಧ್ನಾತೀತ್ಯಾಹ- ವೇದೇತಿ ॥ ಮಾಯಾಕೃತಬಂಧಹೀನತ್ವಾದಹಂ ಭೂತ-ಭವಿಷ್ಯದ್‌ವರ್ತಮಾನಭೂತಾನಿ ಪ್ರಾಣಿನೋ ವೇದ ಜಾನಾಮಿ । ಮಾಂ ಕಶ್ಚನ ಕೋऽಪಿ ಯಥಾವತ್ತ್ವೇನ ನ ವೇದ । ಮಾಯಾಕೃತಬಂಧಸತ್ವಾತ್ ಲೋಕಸ್ಯೇತಿ । ಬ್ರಹ್ಮಾದಿರತಿಶಕ್ತೋऽಪಿ ಕಿಂಚಿದೇವ ವೇತ್ತಿ, ನ ಸರ್ವಥೇತಿ ಭಾವಃ ॥ 26 ॥**

**ಅನುವಾದ-** ಪರದೆಯೇ ಮೊದಲಾದವುಗಳ ಎರಡೂ ಭಾಗಗಳಲ್ಲಿರುವವರಿಗೆ ಪರಸ್ಪರ ವಾಗಿ ಜ್ಞಾನವಿಲ್ಲದಿರುವಂತೆ ನಿನಗೂ ಜೀವರ ವಿಷಯವಾಗಿ ಅಜ್ಞಾನವಿರಬಹುದು ಎಂಬ ಶಂಕೆಗೆ ಉತ್ತರವಾಗಿ ಪರದೆಯ ಸ್ಥಾನದಲ್ಲಿರುವುದಾದರೂ ಮಾಯೆಯು ನನ್ನನ್ನು ಬಂಧಿ ಸಲಾರದು ಎಂದು '**ವೇದ**' ಎಂಬ ಶ್ಲೋಕದಿಂದ ಶ್ರೀಕೃಷ್ಣನು ಹೇಳುತ್ತಿದ್ದಾನೆ.

ಮಾಯೆಯಿಂದುಂಟಾಗುವ ಬಂಧನವಿಲ್ಲದಿರುವುದರಿಂದ ನಾನು ಹಿಂದಿನ, ಮುಂದಿನ ಮತ್ತು ಈಗಿರುವ ಎಲ್ಲ ಜೀವರನ್ನೂ , **ವೇದ**= ತಿಳಿದಿದ್ದೇನೆ. ನನ್ನನ್ನು **ಮಾತ್ರ ಕಶ್ಚನ**= ಯಾರೂ ಕೂಡ ಯಥಾವತ್ತಾಗಿ ತಿಳಿದಿಲ್ಲ. ಏಕೆಂದರೆ, ಜೀವರಿಗೆ ಮಾಯೆಯಿಂದ ಉಂಟಾಗುವ ಬಂಧವಿದೆ. ಬ್ರಹ್ಮನೇ ಮೊದಲಾದ ಅತಿಸಮರ್ಥರೂ ಕೂಡ ಸ್ವಲ್ಪವೇ ತಿಳಿದಿದ್ದಾರೆಯೇ ಹೊರತು ಪೂರ್ಣವಾಗಿ ತಿಳಿದಿಲ್ಲ ಎಂದು ಭಾವ. ॥ 26 ॥

**ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।**
**ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥ 27 ॥**

**ಅರ್ಥ-** ಹೇ ಭರತ ಕುಲೋತ್ಪನ್ನ ಶತ್ರುಸಂತಾಪಕಾರಣ ಅರ್ಜುನ ! ರಾಗದ್ವೇಷಗಳಿಂದ ಉಂಟಾಗುವ ಸುಖ-ದುಃಖ ಮೊದಲಾದ ದ್ವಂದ್ವಗಳ ಬಗೆಗಿರುವ ಭ್ರಾಂತಿಯಿಂದ ಎಲ್ಲ ಜೀವರೂ ಸೃಷ್ಟಿಯ ಆರಂಭದಿಂದಲೇ ಭಗವದ್ವಿಷಯದಲ್ಲಿ ಮಿಥ್ಯಾಜ್ಞಾನವನ್ನು ಹೊಂದುವರು.

**ಪೂರ್ವಂ 'ದೈವೀ ಹ್ಯೇಷಾ ಗುಣಮಯೀ' ಇತಿ 'ನಾಹಂ ಪ್ರಕಾಶ' ಇತಿ ಚ ಗುಣಮಯೀ ಮಾಯಾ ಭಗವಾಂಶ್ಚ ಜೀವಾಭೇದಾದಿವಿಷಯಮೋಹೇ ಮುಖ್ಯಂ ಕಾರಣಮುಕ್ತಮ್ । ಇದಾನೀಂ ಇಚ್ಛಾದ್ವೇಷಪ್ರವೃದ್ಧಿಜನಿತಸುಖದುಃಖಾದಿದ್ವಂದ್ವ-ವಿಷಯಮೋಹೋಽಪ್ಯವಾಂತರಕಾರಣಮಸ್ತೀತ್ಯಾಹ- ಇಚ್ಛೇತಿ ॥ ಇಚ್ಛಾ-ದ್ವೇಷಾಭಿವೃದ್ಧಿಜಾತೇನ ದ್ವಂದ್ವಮೋಹೇನ । ದ್ವಂದ್ವಾನಿ ಸುಖದುಃಖಲಾಭಾ-ಲಾಭಾದೀನಿ । ತದ್ವಿಷಯಮೋಹಃ । ದುಃಖಾದಿಃ ಯಥಾ ಹೇಯಸ್ತಥಾ ವೈಷಯಿಕಸುಖಾದಿರಪಿ ಹೇಯಃ । ತಥಾಽಪ್ಯುಪಾದೇಯತ್ವೇನ ತಸ್ಯ ಯದ್‌ಜ್ಞಾನಂ ತದ್ರೂಪಮಿಥ್ಯಾಜ್ಞಾನೇನೇತ್ಯರ್ಥಃ । ಸರ್ವಭೂತಾನಿ ಸರ್ಗೇ ಸರ್ಗಕಾಲೇ-ಸರ್ಗಕಾಲಮಾರಭ್ಯೈವೇತಿ ಯಾವತ್ । ಸಮ್ಮೋಹಂ ಭಗವದ್ವಿಷಯಜೀವಾ-ಭೇದಾದಿಮಿಥ್ಯಾಜ್ಞಾನಂ ಯಾಂತೀತ್ಯರ್ಥಃ ।**

**ಅನುವಾದ-** ಹಿಂದೆ, **'ದೈವೀ ಹ್ಯೇಷಾ ಗುಣಮಯೀ'** ಎಂಬ ಶ್ಲೋಕದಲ್ಲಿ, ಹಾಗೂ **'ನಾಹಂ ಪ್ರಕಾಶಃ ಸರ್ವಸ್ಯ'** ಎಂಬ ಶ್ಲೋಕದಲ್ಲಿಯೂ ಕೂಡ ಮಾಯೆ ಮತ್ತು ಭಗವಂತ-ಇವರಿಬ್ಬರೂ ಜೀವಾಭೇದವಿಷಯಕಭ್ರಾಂತಿಗೆ ಮುಖ್ಯ ಕಾರಣರೆಂದು ಹೇಳಲಾಗಿತ್ತು. ಈಗ, ರಾಗದ್ವೇಷಗಳ ವಿಶೇಷ ವೃದ್ಧಿಯಿಂದ ಉಂಟಾಗುವ ಸುಖ-ದುಃಖ ಮೊದಲಾದ ದ್ವಂದ್ವ ವಿಷಯಕವಾದ ಮೋಹವೂ ಜೀವಾಭೇದಾದಿವಿಷಯಕ ಭ್ರಾಂತಿಗೆ ಅಪ್ರಧಾನವಾದ ಕಾರಣ ವಾಗಿದೆ ಎಂದು ಶ್ರೀಕೃಷ್ಣನು **'ಇಚ್ಛಾ'** ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ.

(**ಇಚ್ಛಾದ್ವೇಷಸಮುತ್ಥೇನ=**) ರಾಗದ್ವೇಷಗಳ ಅಭಿವೃದ್ಧಿಯಿಂದ ಜನಿಸುವ ದ್ವಂದ್ವಮೋಹ ದಿಂದ. ಸುಖ-ದುಃಖ, ಲಾಭ-ಅಲಾಭ ಇತ್ಯಾದಿಗಳು ದ್ವಂದ್ವಗಳು. ಅವುಗಳ ವಿಷಯದಲ್ಲಿ ಮೋಹ . ದುಃಖ ಮೊದಲಾದವುಗಳು ಹೇಗೆ ಹೇಯವೋ ಹಾಗೆ ವಿಷಯವಸ್ತುಗಳಿಂದಾಗುವ ಸುಖವೂ ಹೇಯವೆ. ಆದರೂ , ವೈಷಯಿಕಸುಖಾದಿಗಳು ಉಪಾದೇಯವೆಂದು ಜೀವನಿಗೆ ಯಾವ ಜ್ಞಾನವಿದೆಯೋ ಆ ರೀತಿಯ ಮಿಥ್ಯಾಜ್ಞಾನದಿಂದ ಎಂದು ಅರ್ಥ. ಸರ್ವಜೀವರೂ,

**ಸರ್ಗೇ=** ಸೃಷ್ಟಿಕಾಲದಲ್ಲಿ- 'ಸೃಷ್ಟಿಕಾಲವನ್ನು ಆರಂಭಿಸಿಯೇ' ಎಂದು ತಾತ್ಪರ್ಯ. **ಸಂಮೋಹಂ=** ಭಗವಂತನು ಜೀವಾಭಿನ್ನನಾಗಿದ್ದಾನೆ' ಇತ್ಯಾದಿ ಮಿಥ್ಯಾಜ್ಞಾನವನ್ನು ಹೊಂದುವರು ಎಂದು ಅರ್ಥ.

**ಯದ್ವಾ ಯತ್ಕೇಷಾಂಚಿತ್ ಅದ್ವೈತಜ್ಞಾನಂ ಮದಿಚ್ಛಾಧೀನಮಿತಿ ಯದುಕ್ತಂ ಭಗವತಾ ತದಯುಕ್ತಮ್ । 'ಐಕಾತ್ಮ್ಯಂ ನಾಮ ಯದಿದಂ ಕೇಚಿದ್ ಬ್ರೂಯುರನೈಪುಣಾಃ । ಕಾಮಕ್ರೋಧಾಭಿಭೂತತ್ವಾದಹಂಕಾರವಶಂ ಗತಾಃ । ಇತ್ಯಾದೌ ಇಚ್ಛಾದ್ವೇಷಾದೇರೇವಾದ್ವೈತಜ್ಞಾನಹೇತುತ್ವೋಕ್ತೇರಿತ್ಯತಃ ತದವಾಂತರಕಾರಣಮ್ । ಸರ್ಗಾತ್ ಪೂರ್ವಮಭಾವೇನ ಸರ್ಗಮಾರಭ್ಯೈ-ವೋತ್ಪತ್ತೇರಿತಿ ಭಾವೇನಾಹ ಇಚ್ಛೇತಿ ।**

**ಇಚ್ಛಾದ್ವೇಷೋತ್ಪನ್ನದ್ವಂದ್ವಮೋಹೇನ ಜೀವೇಶ್ವರೌ ತದ್ಧರ್ಮಭೂತಾನಿ ಸರ್ವಜ್ಞತ್ವಾಲ್ಪಜ್ಞತ್ವಸ್ವಾತಂತ್ರ್ಯ-ಪಾರತಂತ್ರ್ಯಸರ್ವಶಕ್ತ್ಯಲ್ಪಶಕ್ತ್ಯಾದಿರೂಪಾಣಿ ಚ ದ್ವಂದ್ವಾನಿ ತದ್ವಿಷಯಮಿಥ್ಯಾಜ್ಞಾನೇನ ಸರ್ವಭೂತಾನಿ ಸರ್ಗಕಾಲಮಾರಭ್ಯೈವ ಸಮ್ಮೋಹಂ ಉಕ್ತದ್ವಂದ್ವ ಮೋಹದಾರ್ಢ್ಯಂ ಯಾಂತಿ । ದ್ವಿಃ ಸಂಬೋಧನ-ಮಾದರಾರ್ಥಮ್ ।। 27 ।।**

**ಅನುವಾದ-** ಅಥವಾ, ಕೆಲವರಿಗಿರುವ ಅದ್ವೈತಜ್ಞಾನವೂ ನನ್ನ ಇಚ್ಛೆಗೆ ಅಧೀನವಾದದ್ದು ಎಂದು ಭಗವಂತನು ಹೇಳಿದ್ದು ಯುಕ್ತವಲ್ಲ.

'ಐಕಾತ್ಮ್ಯಂ ನಾಮ ಯದಿದಂ ಕೇಚಿದ್ ಬ್ರೂಯುರನೈಪುಣಾಃ ।
ಕಾಮಕ್ರೋಧಾಭಿಭೂತತ್ವಾದ್ ಅಹಂಕಾರವಶಂ ಗತಾಃ ।।'

('ಜೀವಬ್ರಹ್ಮರಿಗೆ ಐಕ್ಯವಿದೆ' ಎಂದು ಕೆಲವು ಶಾಸ್ತ್ರನಿಪುಣರಲ್ಲದವರು ಹೇಳುವರು. ಅವರು ಕಾಮಕ್ರೋಧಗಳಿಂದ ಪ್ರಭಾವಿತರಾಗಿ ಅಹಂಕಾರಕ್ಕೆ ವಶರಾದವರು) ಇತ್ಯಾದಿ ಶ್ಲೋಕಗಳಲ್ಲಿ ಇಚ್ಛೆ- ದ್ವೇಷ ಮುಂತಾದವುಗಳೇ ಅದ್ವೈತಜ್ಞಾನಕ್ಕೆ ಕಾರಣವೆಂದು ಹೇಳಿರುವುದರಿಂದ ಎಂಬ ಆಶಂಕೆಗೆ ಉತ್ತರವಾಗಿ ಇಚ್ಛಾದ್ವೇಷಾದಿಗಳು (ಜೀವನಿಗೆ) ಸೃಷ್ಟಿಯ ಪೂರ್ವದಲ್ಲಿ ಇಲ್ಲದಿರುವುದರಿಂದ, ಸೃಷ್ಟಿಯ ಆರಂಭವಾದ ನಂತರವೇ ಹುಟ್ಟುವುದರಿಂದ, ಅವರು (ಅದ್ವೈತಜ್ಞಾನಕ್ಕೆ) ಅಮುಖ್ಯಕಾರಣಗಳಾಗಿವೆ ಎಂಬ ಆಶಯದಿಂದ ಶ್ರೀಕೃಷ್ಣನು '**ಇಚ್ಛಾದ್ವೇಷ**' ಇತ್ಯಾದಿಯಾಗಿ ಹೇಳುತ್ತಿದ್ದಾನೆ.

ಇಚ್ಛೆ, ದ್ವೇಷ ಇವುಗಳಿಂದಾಗಿ ಉತ್ಪನ್ನವಾದ ದ್ವಂದ್ವ ಮೋಹದಿಂದ ಎಂದರೆ ಜೀವ ಮತ್ತು ಈಶ್ವರ, ಇವರ ಧರ್ಮಗಳಾದ ಸರ್ವಜ್ಞತ್ವ-ಅಲ್ಪಜ್ಞತ್ವ, ಸ್ವಾತಂತ್ರ್ಯ-ಪಾರತಂತ್ರ್ಯ, ಸರ್ವಶಕ್ತಿ - ಅಲ್ಪಶಕ್ತಿ ಮೊದಲಾದ ಯಾವ ದ್ವಂದ್ವಗಳಿವೆಯೋ ಅವುಗಳ ಬಗ್ಗೆ ಇರುವ ಮಿಥ್ಯಾ ಜ್ಞಾನದಿಂದ ಎಲ್ಲ ಜೀವರು ಸೃಷ್ಟಿಕಾಲ ಆರಂಭವಾದ ಮೇಲೆಯೇ, **ಸಂಮೋಹಂ**= ಹಿಂದೆ ಹೇಳಿದ ದ್ವಂದ್ವಗಳ ಬಗ್ಗೆ ದೃಢವಾದ ಮೋಹವನ್ನು ಹೊಂದುವರು ಎಂದು. (ಭಾರತ, ಪರಂತಪ ಎಂದು) ಎರಡು ಬಾರಿ ಸಂಬೋಧಿಸಿರುವುದು ಆದರಕ್ಕೋಸ್ಕರವಾಗಿ. II 27 II

(1) **ವಿವರಣೆ-** ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯಗಳನ್ನನುಸರಿಸಿ ಮೇಲಿನ ಶ್ಲೋಕಕ್ಕೆ ಎರಡು ವಿವರಣೆಗಳನ್ನು ನೀಡಲಾಗಿದೆ. ಮೊದಲನೆಯ ವಿವರಣದ ಪ್ರಕಾರ, ಭಗವಂತನಲ್ಲಿ ಜೀವಾಭೇದಾದಿ ವಿಷಯಕವಾದ ಮಿಥ್ಯಾಜ್ಞಾನ ಬರಲು ಮಾಯೆ ಮತ್ತು ಭಗವಂತ ಇಬ್ಬರೂ ಮುಖ್ಯಕಾರಣರು. ಸುಖ-ದುಃಖಾದಿ ದ್ವಂದ್ವಗಳ ವಿಷಯದಲ್ಲಿ ಉಂಟಾಗುವ ಮೋಹವು ಅವಾಂತರ ಕಾರಣವಾಗಿದೆ. ಎರಡನೆಯ ವಿವರಣದ ಪ್ರಕಾರ, ಅದ್ವೈತಭ್ರಾಂತಿಗೆ ಭಗವದಿಚ್ಛೆ ಪ್ರಧಾನ ಕಾರಣವಾಗಿದ್ದು, ಜೀವೇಶ್ವರರಲ್ಲಿರುವ ಸರ್ವಜ್ಞತ್ವ-ಅಲ್ಪಜ್ಞತ್ವ, ಸ್ವಾತಂತ್ರ-ಪಾರತಂತ್ರ್ಯ ಮೊದಲಾದ ದ್ವಂದ್ವಗಳ ಬಗ್ಗೆ ಇರುವ ಮಿಥ್ಯಾಜ್ಞಾನವು ಅವಾಂತರಕಾರಣವಾಗಿದೆ. ದ್ವಂದ್ವ ವಿಷಯಕವಾದ ಮಿಥ್ಯಾಜ್ಞಾನವು ಸೃಷ್ಟಿಯ ಪೂರ್ವದಲ್ಲಿ ಇಲ್ಲವಾಗಿದ್ದು ಸೃಷ್ಟಿಕಾಲದಲ್ಲೇ ಹುಟ್ಟುವುದರಿಂದ ಅದ್ವೈತಭ್ರಾಂತಿಗೆ ಅದು ಅಮುಖ್ಯಕಾರಣವೆನ್ನುವುದೇ ಉಚಿತವೆಂದು ಭಾವ.

(2) **ದ್ವಿಃ ಸಂಬೋಧನಮ್ ಆದರಾರ್ಥಮ್**= ಭಾರತ, ಪರಂತಪ ಎಂದು ಎರಡು ಬಾರಿ ಅರ್ಜುನನನ್ನು ಸಂಬೋಧಿಸಿರುವುದು ಶ್ರೀಕೃಷ್ಣನಿಗೆ ಅರ್ಜುನನ ಬಗ್ಗೆ ಇರುವ ಆದರಾತಿಶಯದ ದ್ಯೋತಕವೆಂದು ಭಾವ.

## ಮಿಥ್ಯಾಜ್ಞಾನವನ್ನು ಮೆಟ್ಟಿ ದೃಢದೀಕ್ಷೆಯಿಂದ ಭಜಿಸು

**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ ।**
**ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ II 28 II**

**ಅರ್ಥ** – ಪುಣ್ಯಕರ್ಮವನ್ನು ಆಚರಿಸುವ ಯಾವ ಜನರ ಪಾಪವು ನಷ್ಟವಾಗಿದೆಯೋ ಅವರು ನಾನಾವಿಧವಾದ ದ್ವಂದ್ವಗಳ ಬಗ್ಗೆ ಮಿಥ್ಯಾಜ್ಞಾನವನ್ನು ಕಳೆದುಕೊಂಡು ದೃಢದೀಕ್ಷೆಯಿಂದ ನನ್ನನ್ನು ಭಜಿಸುವರು.

**ಸರ್ವಭೂತಾನಿ ಸಮ್ಮೋಹಂ ಯಾಂತಿ ಚೇಲ್ಲುಪ್ತೋ ಮುಕ್ತಿಮಾರ್ಗ ಇತ್ಯತೋ ದ್ವಂದ್ವ ಮೋಹರಹಿತಾಶ್ಚ ಕೇಚಿತ್‌ಸಂತೀತ್ಯಾಹ- ಯೇಷಾಮಿತಿ II ಯೇಷಾಂ**

**ಪುಣ್ಯಕರ್ಮಣಾಂ ಜನಾನಾಂ ಪಾಪಮಂತಗತಂ ನಷ್ಟಂ ತೇ ದ್ವಂದ್ವ ಮೋಹ-ನಿರ್ಮುಕ್ತಾಃ ಪ್ರಾಗುಕ್ತದ್ವಿವಿಧದ್ವಂದ್ವ ವಿಷಯಮಿಥ್ಯಾಜ್ಞಾನಹೀನಾಃ ದೃಢವ್ರತಾಃ ಸಂತೋ ಮಾಂ ಭಜಂತ ಇತ್ಯರ್ಥಃ ॥ 28 ॥**

**ಅನುವಾದ** - ಎಲ್ಲ ಜೀವರು ಮಿಥ್ಯಾಜ್ಞಾನವನ್ನು ಹೊಂದಿದ್ದಾದರೆ ಮೋಕ್ಷ ಮಾರ್ಗವೇ ಲುಪ್ತವಾಗುವುದು ಎಂಬ ಶಂಕೆಗೆ ಸಮಾಧಾನವನ್ನು ದ್ವಂದ್ವಗಳ ಬಗ್ಗೆ ಮಿಥ್ಯಾಜ್ಞಾನ-ವಿಲ್ಲದವರೂ ಕೆಲವರಿದ್ದಾರೆ ಎಂದು ಶ್ರೀಕೃಷ್ಣನು '**ಯೇಷಾಂ**' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ.

ಪುಣ್ಯಕರ್ಮಗಳನ್ನು ಆಚರಿಸಿದ ಯಾವ ಜನರ ಪಾಪವು, **ಅಂತಗತಂ**= ನಷ್ಟವಾಗಿದೆಯೋ ಅವರು, **ದ್ವಂದ್ವಮೋಹನಿರ್ಮುಕ್ತಾಃ**= ಹಿಂದೆ ಹೇಳಿದ ಎರಡು ವಿಧವಾದ ದ್ವಂದ್ವಗಳ ಮಿಥ್ಯಾ-ಜ್ಞಾನವಿಲ್ಲದವರಾಗಿ ದೃಢದೀಕ್ಷೆಯುಳ್ಳವರಾಗಿ ನನ್ನನ್ನು ಭಜಿಸುವರು ಎಂದು ಅರ್ಥ. ॥ 28 ॥

**ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ॥ 29 ॥**

**ಅರ್ಥ**- ಯಾರು ಮುಪ್ಪು , ಸಾವುಗಳಿಂದ ಬಿಡುಗಡೆಗಾಗಿ ನನ್ನನ್ನು ಆಶ್ರಯಿಸಿ ಪ್ರಯತ್ನಿಸುವರೋ ಅವರು ಆ ಪರಮಾತ್ಮನನ್ನೂ, ಸಮಸ್ತ ಅಧ್ಯಾತ್ಮವನ್ನೂ ಎಲ್ಲ ಕರ್ಮಗಳನ್ನೂ ತಿಳಿಯುವರು.

**ಭಗವದ್‌ಭಜನೇ ಕಿಂ ಫಲಂ ಭವತೀತ್ಯತಃ ಪ್ರಾಗುಕ್ತಭಜನಾನುವಾದೇನ ತಸ್ಯ ಬ್ರಹ್ಮಜ್ಞಾನರೂಪಂ ಫಲಮಾಹ- ಜರೇತಿ ॥ ಯೇ ಸಾಧುಪ್ರಕೃತಯಃ ಜರಾ-ಮರಣಮೋಕ್ಷಾಯ ಲಕ್ಷಣಯಾ ಸ್ವರ್ಗಾದಿಕಾಮನಿವೃತ್ತಯೇ ಮಾಮಾಶ್ರಿತ್ಯ ಯತಂತಿ । ಯತಂತೇ ಭಜಂತ ಇತ್ಯನುವಾದಃ । ತೇ ತದ್‌ಬ್ರಹ್ಮ ವಿದುಃ ಕೃತ್ಸ್ನಮಧ್ಯಾತ್ಮಂ ವಿದುಃ ಜಾನಂತಿ । ಅಖಿಲಂ ಕರ್ಮ ಚ ವಿದುಃ ।**

**ಜರಾಮರಣಮೋಕ್ಷಾಯೇತ್ಯೇತತ್ ಮೋಕ್ಷಸಕ್ತಿರನ್ಯಾಸಕ್ತಿತಃ ಪ್ರಶಸ್ತೇತಿ ಮೋಕ್ಷಾಸಕ್ತಿಸ್ತುತ್ಯರ್ಥಂ ವಾ । ಪ್ರಾಗುಕ್ತದಿಶಾಽನ್ಯಕಾಮನಿವೃತ್ತ್ಯರ್ಥಂ ವಾ । ನ ಸರ್ವಥಾ ತದುದ್ದೇಶೇನ ಭಜನವಿಧಿಃ । ಏಕಾಂತಭಕ್ತಾನಾಂ ಮೋಕ್ಷಾ-ಪೇಕ್ಷಾಽಭಾವಾತ್ । 'ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ' ಇತಿ ಭಗವದ್‌ಭಜನಫಲಸ್ಯೋಕ್ತಾವಪೀಹ ತದುಕ್ತಿಃ ಭಗವದ್‌ಭಜನಮೇವ ಜ್ಞಾನದ್ವಾರಾ ಮಾಯಾತರಣೋಪಾಯೋ ನಾನ್ಯ ಇತಿ ಜ್ಞಾಪನಾಯೇತಿ ॥ 29 ॥**

**ಅನುವಾದ-** ಭಗವಂತನ ಭಜನೆಯನ್ನು ಮಾಡಿದಾಗ ಯಾವ ಫಲ ಉಂಟಾಗುವುದು ಎಂಬ ಪ್ರಶ್ನೆಗೆ ಉತ್ತರವಾಗಿ ಹಿಂದೆ ಹೇಳಿದ ಭಜನೆಯನ್ನು ಅನುವಾದಿಸಿ ಅದಕ್ಕೆ ಬ್ರಹ್ಮಜ್ಞಾನ ರೂಪವಾದ ಫಲವುಂಟಾಗುವುದೆಂದು 'ಜರಾ' ಇತ್ಯಾದಿ ಶ್ಲೋಕದಲ್ಲಿ ಶ್ರೀಕೃಷ್ಣನು ಹೇಳುತ್ತಿದ್ದಾನೆ.

ಯಾವ ಸತ್ತ್ವಭಾವದವರು, **ಜರಾಮರಣಮೋಕ್ಷಾಯ** = ಈ ಪದವು ಲಕ್ಷಣಾವೃತ್ತಿಯಿಂದ ಹೇಳುವ ಸ್ವರ್ಗಾದಿಕಾಮನೆಯ ನಿವೃತ್ತಿಗಾಗಿ ನನ್ನನ್ನು ಆಶ್ರಯಿಸಿ **ಯತಂತಿ**= ಭಜಿಸುವರೋ- ಇಲ್ಲಿಯವರೆಗೆ ಹಿಂದೆ ಹೇಳಿದ್ದರ ಅನುವಾದವಾಗಿದೆ– ಅವರು ಆ ಪರಬ್ರಹ್ಮನನ್ನು ತಿಳಿಯುವರು. ಸಮಸ್ತ ಅಧ್ಯಾತ್ಮವನ್ನು ತಿಳಿಯುವರು. ಎಲ್ಲ ಕರ್ಮಗಳನ್ನು ತಿಳಿಯುವರು.

ಅಥವಾ, **'ಜರಾಮರಣಮೋಕ್ಷಾಯ'**– ವೃದ್ಧಾಪ್ಯ–ಮರಣ ಇವುಗಳಿಂದ ಬಿಡುಗಡೆಗಾಗಿ'– ಎಂದು ಹೇಳಿರುವುದು ಇತರ ಫಲಗಳ ಬಗ್ಗೆ ಇರುವ ಆಸಕ್ತಿಗಿಂತಲೂ ಮೋಕ್ಷದಲ್ಲಿ ಆಸಕ್ತಿಯು ಪ್ರಶಸ್ತವಾದುದು ಎಂದು ಮೋಕ್ಷಾಸಕ್ತಿಯನ್ನು ಸ್ತುತಿಸಲು. ಅಥವಾ, ಹಿಂದೆ ಹೇಳಿದಂತೆ ಇತರ ವಿಷಯಗಳಲ್ಲಿ ಕಾಮನೆಯ ನಿವೃತ್ತಿಗಾಗಿ, ಹೊರತು ಮೋಕ್ಷದ ಉದ್ದೇಶದಿಂದ ಭಗವಂತನನ್ನು ಭಜಿಸತಕ್ಕದ್ದು ಎಂದು ಹೇಳುವ ಉದ್ದೇಶ್ಯದಿಂದಲ್ಲ. ಏಕೆಂದರೆ, ಏಕಾಂತಭಕ್ತರಿಗೆ ಮೋಕ್ಷಾಪೇಕ್ಷೆಯೇ ಇಲ್ಲವಷ್ಟೆ.

**'ಮಾಮೇತಿ ಯೇ ಪ್ರಪದ್ಯಂತೆ ಮಾಯಾಮೇತಾಂ ತರಂತಿ ತೇ'**– 'ನನ್ನನ್ನೇ ಯಾರು ಶರಣಾಗತಿ ಹೊಂದುವರೋ ಅವರು ಈ ಸಂಸಾರಬಂಧನವನ್ನು ದಾಟುವರು' ಎಂದು ಭಗವಂತನನ್ನು ಭಜಿಸುವುದರ ಫಲವನ್ನು ಹೇಳಿದ್ದರೂ ಇಲ್ಲಿ ಪುನಃ ಅದನ್ನು ಹೇಳಿರುವುದು 'ಭಗವಂತನ ಭಜನೆಯೇ ಭಗವಂತನ ಜ್ಞಾನದ ಮೂಲಕ ಸಂಸಾರಬಂಧನವನ್ನು ದಾಟಲು ಸಾಧನವಾಗಿದೆ ಹೊರತು ಮತ್ತೊಂದಲ್ಲ' ಎಂದು ಸೂಚಿಸಲು.

**ವಿವರಣೆ -** **'ಜರಾಮರಣಮೋಕ್ಷಾಯ'** ಎಂಬ ಪದವು ವಾರ್ಧಕ್ಯ – ಮರಣ ಇವುಗಳಿಂದ ಬಿಡುಗಡೆಗಾಗಿ ಅರ್ಥಾತ್ ಜನನ – ಮರಣಚಕ್ರರೂಪವಾದ ಸಂಸಾರದಿಂದ ಬಿಡುಗಡೆಗಾಗಿ ಎಂಬ ಅರ್ಥವನ್ನು ಕೊಡುವುದು. ಆದರೆ, **'ಏಕಾಂತಾನಾಂ' ನ ಕಸ್ಯಚಿದರ್ಥೆ ನಾರಾಯಣೋ ದೇವಃ, ಸರ್ವಮನ್ಯತ್ತದರ್ಥಕಂ'** ಎಂದು ಹೇಳಿರುವಂತೆ ಏಕಾಂತಭಕ್ತರಿಗೆ ಮೋಕ್ಷಕ್ಕೋಸ್ಕರವಾಗಿಯೂ ಭಗವಂತ ಭಜನೀಯನಲ್ಲ. ಆದ್ದರಿಂದ ಮೋಕ್ಷಕ್ಕೋಸ್ಕರ ಭಗವಂತನ ಭಜನೆಯನ್ನು ಈ ಶ್ಲೋಕದಲ್ಲಿ ಹೇಳಲಾಗಿದೆ ಎಂದು ವ್ಯಾಖ್ಯೆ ಯುಕ್ತವಾಗುವುದಿಲ್ಲ. ಆ ಕಾರಣದಿಂದ, ಗೀತಾವಿವೃತ್ತಿಯಲ್ಲಿ ಬೇರೆ ರೀತಿಯಲ್ಲಿ ಎರಡು ವ್ಯಾಖ್ಯಾನವನ್ನು ಮಾಡಲಾಗಿದೆ. ಒಂದು – **'ಜರಾಮರಣಮೋಕ್ಷಾಯ'** ಎಂದುದು ಮೋಕ್ಷೇತರ ಪುರುಷಾರ್ಥಗಳಲ್ಲಿ ಕಾಮನೆಯ ನಿವೃತ್ತಿಗಾಗಿ' ಎಂದು . ಇನ್ನೊಂದು– 'ಮುಕ್ತಿಗೋಸ್ಕರ ' ಎಂದೇ ಈ ಪದದ ಅರ್ಥ. ಆದರೆ ಇಲ್ಲಿ

ತಾತ್ಪರ್ಯವಿರುವುದು – ಇತರ ಪುರುಷಾರ್ಥಗಳಲ್ಲಿ ಆಸಕ್ತಿಗಿಂತಲೂ ಮೋಕ್ಷಾಸಕ್ತಿಯು ಪ್ರಶಸ್ತವಾದದ್ದು ಎಂಬ ಮೋಕ್ಷಾಸಕ್ತಿಯ ಪ್ರಶಂಸೆಯಲ್ಲಿ ಹೊರತು ಮೋಕ್ಷಕ್ಕೋಸ್ಕರ ಭಗವಂತನ ಭಜನೆಯನ್ನು ಮಾಡತಕ್ಕದ್ದು ಎಂಬ ಆದೇಶದಲ್ಲಿ ಅಲ್ಲ. ॥ 29 ॥

## ಅಂತ್ಯಕಾಲದಲ್ಲಿ ಹರಿಸ್ಮೃತಿಯಿರುವವರು ಯೋಗಿಗಳು

**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥ 30 ॥**

*॥ ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಜ್ಞಾನವಿಜ್ಞಾನಯೋಗೋ ನಾಮ ಸಪ್ತಮೋಽಧ್ಯಾಯಃ ॥*

**ಅರ್ಥ–** ಅಧಿಭೂತ, ಅಧಿದೈವ ಮತ್ತು ಅಧಿಯಜ್ಞರೂಪಗಳಿಂದ ಸಹಿತನಾಗಿರುವ ನನ್ನನ್ನು ಯಾರು ತಿಳಿದಿರುವರೋ ಹಾಗೆಯೇ ಮರಣಕಾಲದಲ್ಲೂ ಯಾರು ನನ್ನನ್ನು ತಿಳಿದಿರುವರೋ ಅವರು ಸಮಾಧಿಯೋಗದಿಂದ ಯುಕ್ತವಾದ ಮನಸ್ಸುಳ್ಳವರು.

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ ಭಗವದ್ಗೀತೆಯಲ್ಲಿ ಜ್ಞಾನವಿಜ್ಞಾನಯೋಗವೆಂಬ ಏಳನೆಯ ಅಧ್ಯಾಯವು ಮುಗಿಯಿತು.*

**ತದ್‌ಬ್ರಹ್ಮೇತ್ಯುಕ್ತ್ವಾ ಬ್ರಹ್ಮ ಭಗವತೋಽನ್ಯದಿತಿ ಶಂಕಾನಿರಾಸಾಯಾಹ– ಸಾಧಿ- ಭೂತೇತಿ ॥ ಅಧಿಭೂತಾಧಿದೈವಸಹಿತಂ ಸಾಧಿಯಜ್ಞಂ ಅಧಿಯಜ್ಞಸಹಿತಂ ಚ ಮಾಂ ಯೇ ವಿದುಃ । ಅಪಿ ಚ ಪ್ರಯಾಣಕಾಲೇ ಮಾಂ ವಿದುಃ ತೇ ಯುಕ್ತಚೇತಸಃ ಸಮಾಧಿಯುಕ್ತಮನಸ್ಕಾ ಇತ್ಯರ್ಥಃ ।**

**ಯದ್ವಾ ಪ್ರಯಾಣಕಾಲೇಽಪಿ ಚ ಮಾಂ ವಿದುಃ ಸ್ಮರಂತಿ ಯುಕ್ತಚೇತಸೋ ಮಾಮಾಶ್ರಯಂತಿ ಯೇ ಜನಾಃ ತೇ ತತ್ ಬ್ರಹ್ಮ ವಿದುರಿತಿ ॥ 30 ॥**

*ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ ಸಪ್ತಮೋಽಧ್ಯಾಯಃ*

**ಅನುವಾದ –** (ಹಿಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು) 'ತದ್ ಬ್ರಹ್ಮ' – 'ಆ ಬ್ರಹ್ಮನನ್ನು' ಎಂದು ಹೇಳಿದ್ದರಿಂದ ಬ್ರಹ್ಮನು ಶ್ರೀಕೃಷ್ಣನಿಗಿಂತ ಬೇರೆಯಾದವನು ಎಂಬ ಶಂಕೆಯುಂಟಾಗುವುದು. ಅದನ್ನು ನಿವಾರಿಸಲು, ಶ್ರೀಕೃಷ್ಣನು '**ಸಾಧಿಭೂತ**' ಎಂದು ಹೇಳುತ್ತಿದ್ದಾನೆ.

ಅಧಿಭೂತ – ಅಧಿದೈವಗಳಿಂದ ಸಹಿತನಾದ, **ಸಾಧಿಯಜ್ಞಂ** = ಅಧಿಯಜ್ಞ ಸಹಿತನೂ ಆದ ನನ್ನನ್ನು ಯಾರು ತಿಳಿಯುವರೋ, ಮತ್ತು ಮರಣಕಾಲದಲ್ಲಿ ನನ್ನನ್ನು ಯಾರು ತಿಳಿದಿರುವರೋ ಅವರು, **ಯುಕ್ತಚೇತಸಃ** = ಸಮಾಧಿಯುಕ್ತವಾದ ಮನಸ್ಸುಳ್ಳವರು.

ಅಥವಾ – ಯಾವ ಜನರು ಪ್ರಯಾಣಕಾಲದಲ್ಲೂ **'ಮಾಂ ವಿದುಃ'** – ನನ್ನನ್ನು ಸ್ಮರಿಸುವರೋ, ಯೋಗ ಯುಕ್ತಮನಸ್ಸುಳ್ಳವರಾಗಿ ನನ್ನನ್ನು ಆಶ್ರಯಿಸುವರೋ ಅವರು ಆ ಬ್ರಹ್ಮನನ್ನು ತಿಳಿದಿರುವರು ಎಂದು ಅರ್ಥ.

**ವಿವರಣೆ** – ಅಧಿಭೂತ, ಅಧಿದೈವ ಮತ್ತು ಅಧಿಯಜ್ಞಗಳ ಸ್ವರೂಪವನ್ನು ಮುಂದಿನ ಅಧ್ಯಾಯದಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ. ॥ 30 ॥

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ ಭಗವದ್ಗೀತೆಯಲ್ಲಿ*
*ಜ್ಞಾನವಿಜ್ಞಾನಯೋಗವೆಂಬ ಏಳನೆಯ ಅಧ್ಯಾಯವು ಮುಗಿಯಿತು.*

# ಅಧ್ಯಾಯ – 8

## ಬ್ರಹ್ಮ-ಅಧ್ಯಾತ್ಮ-ಅಧಿಯಜ್ಞ ಮೊದಲಾದವುಗಳ ಜಿಜ್ಞಾಸೆ

**ಅರ್ಜುನ ಉವಾಚ-**

**ಕಿಂ ತದ್‌ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥ 1 ॥**

**ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ ಮಧುಸೂದನ ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥ 2 ॥**

**ಅರ್ಥ–** ಹೇ ಪುರುಷೋತ್ತಮ ! ಆ ಬ್ರಹ್ಮ ಯಾವುದು ? ಅಧ್ಯಾತ್ಮವೆಂದರೇನು? ಕರ್ಮ ಯಾವುದು ? ಅಧಿಭೂತವೆಂದು ಹೇಳಲಾದುದು ಏನು ? ಅಧಿದೈವವೆಂದು ಯಾವುದು ಹೇಳಲ್ಪಡುತ್ತದೆ ? ॥ 1 ॥

ಹೇ ಮಧುಸೂದನ ! ಈ ದೇಹದಲ್ಲಿ ಅಧಿಯಜ್ಞ ಎಂದು ಹೇಳಲ್ಪಡುವವನು ಯಾರು ? ಹಾಗೆ ಹೇಳಲ್ಪಟ್ಟದ್ದಾದರೂ ಹೇಗೆ ? ತಮ್ಮ ಮನಸ್ಸನ್ನು ನಿಯಂತ್ರಿಸುವವರು ಅಂತ್ಯಕಾಲದಲ್ಲಿ ನಿನ್ನನ್ನು ಹೇಗೆ ಸ್ಮರಿಸಬೇಕು ? ॥ 2 ॥

### ಗೀತಾವಿವೃತಿ

**ಓಂ 'ತೇ ಬ್ರಹ್ಮ ತದ್ವಿದುಃ' ಇತ್ಯುಕ್ತಸ್ಯ (7-29) 'ಪ್ರಯಾಣಕಾಲೇಽಪಿ ಚ ಮಾಂ ವಿದುಃ' ಇತ್ಯುಕ್ತಸ್ಯ (7-30) ಚ ವ್ಯಾಖ್ಯಾನಮತ್ರ ಪ್ರಾಧಾನ್ಯೇನ ಕ್ರಿಯತೇ । ತತ್ಪ್ರಸಂಗಾದಂತಕಾಲಸ್ಮರಣಫಲಂ ತದುಪಾಯಪ್ರಕಾರೋ ಬ್ರಹ್ಮಪ್ರಾಪ್ತಿ-ಮಾರ್ಗಶ್ಚಾತ್ರೋಚ್ಯತ ಇತಿ ಪೂರ್ವಾನಂತರ್ಯಮಧ್ಯಾಯಭೇದಃ ಸ್ವಸ್ಮಿನ್ನೇಕ-ವಾಕ್ಯತಾ ಚ । ಸ್ಮರಣವಿಷಯತ್ವಪ್ರಾಪ್ಯತ್ವರೂಪೋ ಮಹಿಮ್ಯೈವ ವರ್ಣ್ಯತ ಇತಿ ಷಟ್‌ಕಾಂತರ್ಭಾವಶ್ಚ ಜ್ಞೇಯಃ ।**

**ಅನುವಾದ–** **'ತೇ ಬ್ರಹ್ಮ ತದ್ವಿದುಃ'** ಎಂಬ ಶ್ಲೋಕದಲ್ಲಿ ಹೇಳಲಾದ ಮತ್ತು **'ಪ್ರಯಾಣಕಾಲೇಽಪಿ ಚ ಮಾಂ ವಿದುಃ'** ಎಂಬಲ್ಲಿ ಹೇಳಲಾದ ವಿಷಯದ ವ್ಯಾಖ್ಯಾನವನ್ನು ಈ ಅಧ್ಯಾಯದಲ್ಲಿ ಪ್ರಧಾನವಾಗಿ ಮಾಡಲಾಗುವುದು. ಈ ವಿಷಯದ ಪ್ರಸಕ್ತಿಯಿಂದಾಗಿ, ಅಂತ್ಯಕಾಲದಲ್ಲಿ ಭಗವಂತನ ಸ್ಮರಣೆಯ ಫಲ, ಅಂತ್ಯಕಾಲದಲ್ಲಿ ಭಗವಂತನ ಸ್ಮರಣೆಯ ಸಾಧನದ ರೀತಿ ಮತ್ತು ಬ್ರಹ್ಮನನ್ನು ಹೊಂದಲು ತೆರಳುವ ಮಾರ್ಗ. ಈ ವಿಷಯಗಳನ್ನೂ ಈ ಅಧ್ಯಾಯದಲ್ಲಿ ನಿರೂಪಿಸಲಾಗುವುದು ; ಆದ್ದರಿಂದ ಈ ಅಧ್ಯಾಯಕ್ಕೆ ಹಿಂದಿನ ಅಧ್ಯಾಯದ ಅನಂತರ ಪ್ರಸಕ್ತಿ , ಹಿಂದಿನ ಅಧ್ಯಾಯದಿಂದ ಭಿನ್ನತೆ ಮತ್ತು ಈ ಅಧ್ಯಾಯದಲ್ಲಿ ಪ್ರಸ್ತುತವಾದ ವಿಷಯಗಳಿಗೆ ಏಕವಾಕ್ಯತೆ– ಇವುಗಳು ಸಿದ್ಧಿಸುವವು 'ಭಕ್ತರ ಸ್ಮರಣೆಗೆ ವಿಷಯನಾಗುವಿಕೆ ಮತ್ತು ಅವರಿಂದ ಪ್ರಾಪ್ಯನಾಗುವಿಕೆ ಎಂಬ ರೀತಿಯ ಭಗವಂತನ ಮಹಿಮೆಯೇ ಈ ಅಧ್ಯಾಯದಲ್ಲಿ ವರ್ಣಿತವಾಗುವುದು. ಆದ್ದರಿಂದ ಮಧ್ಯದ ಆರು ಅಧ್ಯಾಯಗಳ ಗುಂಪಿನಲ್ಲಿ ಈ ಅಧ್ಯಾಯವೂ ಸೇರುವುದೆಂದು ತಿಳಿಯಬೇಕು.

**ಪೂರ್ವತ್ರ ತದ್‌ಬ್ರಹ್ಮ ವಿದುರಿತಿ ಪರೋಕ್ಷನಿರ್ದೇಶೇನ ಬ್ರಹ್ಮ ಭಗವತಃ ಅನ್ಯದಿತಿ ಪ್ರತೀಯತೇ । ತಥಾ ಸಾಧಿಭೂತಂ ಸಾಧಿದೈವಂ ಸಾಧಿಯಜ್ಞಂ ಮಾಂ ಚ ವಿದುರಿತಿ ಯೋಜನಯಾ ಭಗವದ್‌ಜ್ಞಾನಾದ್ ಬ್ರಹ್ಮಜ್ಞಾನಮನ್ಯದಿತಿ ಪ್ರತೀ-ಯತೇ । 'ವಾಸುದೇವಾತ್ಮಕಂ ಬ್ರಹ್ಮ (ವ್ಯಾಸಸ್ಮೃ.) ಇತ್ಯಾದೌ ಭಗವಾನೇವ ಬ್ರಹ್ಮೇತಿ ಪ್ರತೀಯತೇ । ಅತೋ ವಿಪ್ರತಿಪತ್ತ್ಯಾ ಜಾತಸಂಶಯಾತ್‌ಪೃಚ್ಛತಿ ಕಿಂ ತದ್‌ಬ್ರಹ್ಮೇತಿ ।**

**ಅನುವಾದ–** ಹಿಂದೆ **'ತದ್ ಬ್ರಹ್ಮ ವಿದುಃ'** – 'ಆ ಬ್ರಹ್ಮನನ್ನು ತಿಳಿಯುವರು' ಎಂದು ಪ್ರತ್ಯಕ್ಷನಲ್ಲದಿರುವಂತೆ ಬ್ರಹ್ಮನನ್ನು ನಿರ್ದೇಶಿಸಿರುವುದರಿಂದ ಬ್ರಹ್ಮನು ಭಗವಾನ್ ಶ್ರೀಕೃಷ್ಣನಿಗಿಂತ ಭಿನ್ನನಾದವನೆಂದು ತೋರುವುದು. ಹಾಗೆಯೇ **'ಸಾಧಿಭೂತಂ ಸಾಧಿದೈವಂ ಸಾಧಿಯಜ್ಞಂ ಮಾಂ ಚ ವಿದುಃ'** 'ಅಧಿಭೂತ, ಅಧಿದೈವ ಮತ್ತು ಅಧಿಯಜ್ಞ ಇವುಗಳಿಂದ ಸಹಿತನಾದ ನನ್ನನ್ನೂ ತಿಳಿಯುವರು' ಎಂದು ಚಕಾರಯೋಜನ ಸಂಭವವಿರುವುದರಿಂದ ಭಗವಂತನ ಜ್ಞಾನಕ್ಕಿಂತ ಬ್ರಹ್ಮಜ್ಞಾನವು ಭಿನ್ನವಾದುದೆಂದು ತಿಳಿಯುವುದು. **'ವಾಸುದೇವಾತ್ಮಕಂ ಬ್ರಹ್ಮ'** ಮುಂತಾದ ಪ್ರಮಾಣಗಳಿಂದ ಶ್ರೀಕೃಷ್ಣನೇ ಬ್ರಹ್ಮನೆಂದೂ ತೋರುವುದು. ಹೀಗೆ ವಿರುದ್ಧ ಮಾತುಗಳಿಂದ ಉಂಟಾದ ಸಂಶಯದಿಂದಾಗಿ ಅರ್ಜುನನು **'ಕಿಂ ತದ್ ಬ್ರಹ್ಮ'** ಎಂದು ಪ್ರಶ್ನಿಸುತ್ತಿದ್ದಾನೆ.

**ಅತ್ರಾದ್ಯಶ್ಲೋಕೇ ಕಿಮಿತಿ ಸ್ವರೂಪಪ್ರಶ್ನಃ । ದ್ವಿತೀಯೇ ಕಥಮಿತಿ ಪ್ರಕಾರಪ್ರಶ್ನಃ । ಅಧಿಗತೋ ಯಜ್ಞಮಧಿಯಜ್ಞ ಇತಿ ಪ್ರಾದಿಸಮಾಸೋ**

**ನಾವ್ಯಯೀಭಾವಃ । ಅತ್ರ ದೇಹೇ ಅಧಿಯಜ್ಞಃ ಕಥಮಿತ್ಯರ್ಥಃ । ಅಸ್ಮಿನ್ ದೇಹೇ ಅಧಿಯಜ್ಞಃ ಕ ಇತಿ ಸ್ವರೂಪಪ್ರಶ್ನಃ । ಅಸ್ಮಿನ್ ದೇಹ ಇತಿ ಪದದ್ವಯಕೃತ್ಯಂ ಪರಿಹಾರವಾಕ್ಯೇ ವಕ್ಷ್ಯಾಮಃ । ಅಂತಕಾಲೇ ಕಿಮರ್ಥಂ ಕಥಂಭೂತಃ ಕೇನ ಪ್ರಕಾರೇಣ ಸ್ಮರ್ತವ್ಯ ಇತ್ಯರ್ಥಃ ॥ 1-2 ॥**

**ಅನುವಾದ-** ಇಲ್ಲಿ ಮೊದಲನೆ ಶ್ಲೋಕದಲ್ಲಿ '**ಕಿಂ**' ಎಂದು ಸ್ವರೂಪಕ್ಕೆ ಸಂಬಂಧಿಸಿದ ಪ್ರಶ್ನೆಯಾಗಿದೆ. ಎರಡನೆಯ ಶ್ಲೋಕದಲ್ಲಿ '**ಕಥಂ**' ಎಂದು ಪ್ರಕಾರಕ್ಕೆ ಸಂಬಂಧಿಸಿದ ಪ್ರಶ್ನೆಯಾಗಿದೆ. '**ಅಧಿಗತೋ ಯಜ್ಞಂ**' ಎಂಬ ವಿಗ್ರಹವನ್ನನುಸರಿಸಿ '**ಅಧಿಯಜ್ಞ**' ಎಂಬ ಸಮಾಸವು ಪ್ರಾದಿ ಸಮಾಸವಾಗಿದೆ. ಅವ್ಯಯೀಭಾವ ಸಮಾಸವಲ್ಲ . ಈ ದೇಹದಲ್ಲಿ ಭಗವಂತನು ಅಧಿಯಜ್ಞ ಎಂದೆನಿಸುವುದು ಹೇಗೆ ? ಎಂದು ಅರ್ಥ. ಈ ದೇಹದಲ್ಲಿ ಅಧಿಯಜ್ಞನು ಯಾರು ? ' ಎಂಬುದು ದೇಹದಲ್ಲಿರುವ ಭಗವಂತನ ಸ್ವರೂಪಕ್ಕೆ ಸಂಬಂಧಿಸಿದ ಪ್ರಶ್ನೆಯಾಗಿದೆ. '**ಅಸ್ಮಿನ್, ದೇಹೇ**' ಎಂಬ ಎರಡು ಪದಗಳ ಪ್ರಯೋಜನವನ್ನು ಪ್ರಶ್ನೆಗಳಿಗೆ ಪರಿಹಾರ ನೀಡುವ ವಾಕ್ಯದಲ್ಲಿ ಹೇಳುವೆವು. ಮರಣಕಾಲದಲ್ಲಿ ಏತಕ್ಕೋಸ್ಕರ ಮತ್ತು '**ಕಥಂಭೂತಃ**' ಅಂದರೆ ಯಾವರೀತಿಯಿಂದ ಭಗವಂತನನ್ನು ಸ್ಮರಿಸಬೇಕು ? ಎಂದು ಅರ್ಥ.

**ವಿವರಣೆ :–** '**ಅಧಿಯಜ್ಞ**' ಎಂಬ ಪದವು ಗೀತೆಯಲ್ಲಿ ಅವ್ಯಯೀಭಾವಸಮಾಸವಾಗಿದ್ದರೆ 'ಯಜ್ಞದಲ್ಲಿ' ಎಂಬ ಅರ್ಥ ಇರುತ್ತಿದ್ದಿತು. ಅಲ್ಲದೆ '**ಅಧಿಯಜ್ಞಂ**' ಎಂದು ನಪುಂಸಕಲಿಂಗದ ಪದವಾಗಿರಬೇಕಾಗಿದ್ದೀತು. ಆದರೆ, ಆ ಅರ್ಥವು ಅನನ್ವಿತವಾಗಿರುವುದರಿಂದ ಮತ್ತು '**ಅಧಿ ಯಜ್ಞಃ**' ಎಂದು ಪುಲ್ಲಿಂಗ ಪ್ರಯೋಗವಿರುವುದಿರಂದ '**ಅಧಿಗತೋ ಯಜ್ಞಂ**' ಎಂಬ ವಿಗ್ರಹದ ಪ್ರಾದಿಸಮಾಸವೆಂದು '**ಅಧಿಯಜ್ಞಃ**' ಎಂಬ ಶಬ್ದವನ್ನು ವಿವರಿಸಬೇಕೆಂದು ವಿವೃತಿಯ ಅಭಿಪ್ರಾಯ. 'ಯಜ್ಞಕ್ಕೆ ಸಂಬಂಧಿಸಿದವನು' ಎಂದು, ಪ್ರಕೃತ '**ಅಧಿಯಜ್ಞ**' ಪದದ ಅರ್ಥವಾಗಿದೆ. ॥ 1-2 ॥

## ಬ್ರಹ್ಮ-ಅಧ್ಯಾತ್ಮಗಳ ನಿರೂಪಣೆ

**ಶ್ರೀಭಗವಾನುವಾಚ**

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥ 3 ॥**

**ಅರ್ಥ–** ಸರ್ವೋತ್ತಮವಾದ ಅಕ್ಷರಶಬ್ದವಾಚ್ಯವಾದ ವಸ್ತುವೇ ಬ್ರಹ್ಮನೆನಿಸುವುದು. ದೇಹ- ಇಂದ್ರಿಯ-ಅಂತಃಕರಣ- ಈ ಪದಾರ್ಥಗಳೇ ಅಧ್ಯಾತ್ಮವೆನಿಸುವವು. ಅಥವಾ, ಆತ್ಮಾಧಿಕಾರ

ಎಂಬ ಗ್ರಂಥದಲ್ಲಿ ಪ್ರತಿಪಾದ್ಯನಾದವನು ಸರ್ವದಾ ಏಕಪ್ರಕಾರನಾಗಿರುವ ಜೀವನೇ ಆಗಿದ್ದಾನೆ. ಜೀವರ ಮತ್ತು ಜಡವಸ್ತುಗಳ ಉತ್ಪತ್ತಿಗೆ ಕಾರಣವಾದ ಭಗವಂತನ ವಿಶಿಷ್ಟವಾದ ಸೃಷ್ಟಿಕ್ರಿಯೆಯು ಕರ್ಮವೆಂದೆನಿಸುವುದು.

**ಪ್ರಶ್ನಾಷ್ಟಕಸ್ಯಾಪಿ ಕ್ರಮೇಣೋತ್ತರಮಾಹ ಅಕ್ಷರಮಿತ್ಯಾದಿನಾ ॥ 'ಕಿಂ ತದ್ ಬ್ರಹ್ಮ' ಇತಿ ತ್ವಯಾ ಪೃಷ್ಟಂ ಬ್ರಹ್ಮ ಪರಮಮಕ್ಷರಮುತ್ತಮಾಕ್ಷರಂ ಪರಮಾಕ್ಷರಶಬ್ದಿತಂ ವಸ್ತು । ಅತ್ರ ಭಗವತೋಽನ್ಯದ್ ಬ್ರಹ್ಮೇತಿ ಶಂಕಯಾ ಕಿಂ ಬ್ರಹ್ಮೇತಿ ಪ್ರಶ್ನೇ ಅಹಂ ಬ್ರಹ್ಮೇತಿ ಪರಿಹಾರೇ ಕಾರ್ಯೇ ಅಕ್ಷರಂ ಬ್ರಹ್ಮೇತ್ಯುಕ್ತಿಃ 'ತಸ್ಮಾದಕ್ಷರಂ ತಸ್ಮಾದಕ್ಷರಮಿತ್ಯಾಚಕ್ಷತ ಏತಮೇವ ಸಂತಮ್' ಇತ್ಯಾದೌ ವಿಷ್ಣಾವೇವಾಕ್ಷರತ್ವ ಪ್ರಸಿದ್ಧೇರಕ್ಷರಮಿತ್ಯುಕ್ತ್ಯೈವ ವಿಷ್ಣುರ್ಬ್ರಹ್ಮೇತಿ ವಾ ಅಹಮೇವ ಬ್ರಹ್ಮೇತಿ ವಾ ಫಲಿತತ್ವಾದಜ್ಞಾನಾಮಕ್ಷರತ್ವಮಪಿ ಸ್ವಸ್ಯ ಜ್ಞಾಪನಾಯ । ತಥೈವ ವಾಚ್ಯೇಽಪಿ ಪರಮಮಿತ್ಯಕ್ಷರವಿಶೇಷಣಂ ತು 'ಅಧಮಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡರೂಪಿಕಾ (ಸ್ಕಾಂದೇ) ಇತ್ಯಾದೇಃ ಪ್ರಕೃತ್ಯಾದೇರಪ್ಯಕ್ಷರಶಬ್ದಾರ್ಥತ್ವಾತ್ ತದ್ವ್ಯಾವೃತ್ತ್ಯರ್ಥಮಿತಿ ಜ್ಞೇಯಮ್ ।**

**ಅನುವಾದ–** (1) ಎಂಟು ಪ್ರಶ್ನೆಗಳಿಗೂ ಕ್ರಮವಾಗಿ ಉತ್ತರಗಳನ್ನು **'ಅಕ್ಷರಂ'** ಇತ್ಯಾದಿ ಶ್ಲೋಕಗಳಿಂದ ಶ್ರೀಕೃಷ್ಣನು ಹೇಳುತ್ತಿದ್ದಾನೆ. **'ಕಿಂ ತದ್ ಬ್ರಹ್ಮ'** – 'ಆ ಬ್ರಹ್ಮ ಯಾರು ?' ಎಂದು ನೀನು ಪ್ರಶ್ನಿಸಿದ ಬ್ರಹ್ಮನು, ಪರಮಂ **ಅಕ್ಷರಂ**= ಉತ್ತಮ ಅಕ್ಷರವೆಂಬ ಪರಮಾಕ್ಷರ ಶಬ್ದವಾಚ್ಯವಾದ ವಸ್ತುವಾಗಿದೆ. ಇಲ್ಲಿ ಬ್ರಹ್ಮವು ಭಗವಂತನಾದ ಶ್ರೀಕೃಷ್ಣನಿಂದ ಭಿನ್ನವಾಗಿರಬಹುದೆಂಬ ಶಂಕೆಯಿಂದ **'ಕಿಂ ತದ್ ಬ್ರಹ್ಮ'**ಎಂದು ಪ್ರಶ್ನಿಸಿದಾಗ **'ನಾನೇ ಬ್ರಹ್ಮ'** ಎಂದು ಹೇಳಿ ಪ್ರಶ್ನೆಯನ್ನು ಪರಿಹರಿಸಬೇಕಾಗಿದ್ದರೂ **'ಅಕ್ಷರಂ'** ಬ್ರಹ್ಮ ಎಂದು ಹೇಳಿರುವುದು, **'ತಸ್ಮಾದ್ ಅಕ್ಷರಂ ತಸ್ಮಾದಕ್ಷರಮಿತ್ಯಾಚಕ್ಷತ ಏತಮೇವ ಸಂತಂ'** ಇತ್ಯಾದಿ ವಾಕ್ಯಗಳಲ್ಲಿ ವಿಷ್ಣುವೇ ಅಕ್ಷರನೆಂದು ಪ್ರಸಿದ್ಧಿ ಇರುವುದರಿಂದ **'ಅಕ್ಷರಂ'** ಎಂದು ಹೇಳಿದ ಮಾತ್ರದಿಂದ ವಿಷ್ಣುವೇ ಬ್ರಹ್ಮನೆಂದು ಅಥವಾ ನಾನೇ (ಕೃಷ್ಣನೇ) ಬ್ರಹ್ಮನೆಂದು ಫಲಿಸುವುದರಿಂದ ಅಜ್ಞಾನಿಗಳಿಗೆ ಅಕ್ಷರನೂ ತಾನೇ ಆಗಿರುವೆನೆಂದು ತಿಳಿಸಲು. **'ಅಕ್ಷರಂ ಬ್ರಹ್ಮ'** ಎಂದು ಹಾಗೆಯೇ ಹೇಳಬೇಕಾಗಿದ್ದರೂ **'ಪರಮಂ'** ಎಂದು ಅಕ್ಷರನಿಗೆ ವಿಶೇಷಣವನ್ನು ಕೊಟ್ಟಿರುವುದು **'ಅಧಮಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡರೂಪಿಕಾ'**= 'ಅಧಮ ಅಕ್ಷರ ಎಂದು ಯಾವುದಿದೆಯೋ ಅದು ಜಡವಾದ ಪ್ರಕೃತಿಯೇ ಆಗಿದೆ' ಇತ್ಯಾದಿ ವಚನಾನುಸಾರ ಜಡಪ್ರಕೃತಿ ಮೊದಲಾದವುಗಳೂ ಅಕ್ಷರ ಶಬ್ದದ ಅರ್ಥವಾಗಿರುವುದರಿಂದ, ಪ್ರಕೃತ, ಅವುಗಳನ್ನು ಅಕ್ಷರ ಶಬ್ದದಿಂದ ಗ್ರಹಿಸದಿರುವ ಸಲುವಾಗಿ.

**ಆತ್ಮಾನಂ ಜೀವಮಧಿಕೃತ್ಯ ಯದಸ್ತಿ ಜೀವೋಪಕಾರಿತ್ವೇನ ವರ್ತಮಾನ-ದೇಹೇಂದ್ರಿಯಾಂತಃಕರಣರೂಪಂ ತದಧ್ಯಾತ್ಮಮ್ । ಸ್ವಭಾವಶಬ್ದಃ ಸ್ವಸ್ಯ 'ತೇ ವಿದುಃ' ಇತಿ ಪ್ರಕೃತಜೀವಸ್ಯ ಭವತಿ ಉಪಕಾರಿತ್ವೇನ ವರ್ತತೇ ಇತಿ ವ್ಯುತ್ಪತ್ತ್ಯಾ ದೇಹಾದಿ-ಪದಾರ್ಥವಾಚೀ । ದೇಹೇಂದ್ರಿಯಾಂತಃಕರಣಲಕ್ಷಣಃ ಪದಾರ್ಥಃ ಅಧ್ಯಾತ್ಮಮಿತಿ ಪ್ರಥಮಾಂತಾವ್ಯಯಪದೇನೋಕ್ತವ್ಯುತ್ಪತ್ತ್ಯೋಚ್ಯತೇ । ಯದ್ವಾ ಅಧ್ಯಾತ್ಮಪದಂ ಸಪ್ತಮ್ಯಂತಮುಪೇತ್ಯ ಅಧ್ಯಾತ್ಮಮಾತ್ಮಾಧಿಕಾರಾಖ್ಯಗ್ರಂಥೇ ಪ್ರತಿಪಾದ್ಯಂ ಕಿಮಿತಿ ಚೇತ್ತವ ಪ್ರತಿಪ್ರಶ್ನಃ ತದಾಧ್ಯಾತ್ಮಮಾತ್ಮಾಧಿಕಾರಗ್ರಂಥಪ್ರತಿಪಾದ್ಯಂ ಸ್ವಭಾವಃ । ಸ್ವಶಬ್ದಃ 'ತೇ ವಿದುಃ' ಇತಿ ಪ್ರಕೃತಜೀವವಾಚೀ । ಭವತಿ ಸದೈಕಪ್ರಕಾರೇಣಾಸ್ತೀತಿ ಭಾವಃ । ಸ್ವಶ್ಚಾಸೌ ಭಾವಶ್ಚ ಸದೈಕರೂಪೇಣ ವರ್ತಮಾನಶ್ಚೇತಿ ಸ್ವಭಾವಃ । ಅಧ್ಯಾತ್ಮ-ಶಬ್ದಿತಾತ್ಮಾಧಿಕಾರಗ್ರಂಥೋಕ್ತಸ್ತು ಸದೈಕಪ್ರಕಾರೋ ಜೀವ ಇತ್ಯರ್ಥಃ ।**

**ಅನುವಾದ–** '**ಆತ್ಮಾನಂ**' ಎಂದರೆ ಜೀವನನ್ನು ಉದ್ದೇಶಿಸಿ ಯಾವುದಿದೆಯೋ ಅಂತಹ, ಜೀವನಿಗೆ ಉಪಕಾರಿಯಾಗಿರುವ ದೇಹ, ಇಂದ್ರಿಯಗಳು, ಅಂತಃಕರಣ ಇವುಗಳೇ ಅಧ್ಯಾತ್ಮ ವೆನಿಸುವವು. '**ಸ್ವಭಾವ** ' ಶಬ್ದವು– '**ಸ್ವಸ್ಯ**' – ತನಗೆ ಎಂದರೆ 'ತೇ ವಿದುಃ' ಎಂಬ ಶ್ಲೋಕದಲ್ಲಿ ಪ್ರಕೃತನಾದ ಜೀವನಿಗೆ ಉಪಕಾರಿಯಾಗಿರುವುದು ಎಂಬ ವ್ಯುತ್ಪತ್ತಿಯನ್ನನುಸರಿಸಿ ದೇಹ ಮೊದಲಾದ ಪದಾರ್ಥಗಳನ್ನು ಹೇಳುವುದು. ದೇಹ– ಇಂದ್ರಿಯಗಳು–ಅಂತಃಕರಣ– ಈ ಪದಾರ್ಥಗಳು ಅಧ್ಯಾತ್ಮವೆಂದು ಪ್ರಥಮಾವಿಭಕ್ತ್ಯಂತವಾದ '**ಅಧ್ಯಾತ್ಮಂ**' ಎಂಬ ಅವ್ಯಯ ಪದದಿಂದ ಈಗ ಹೇಳಲಾದ ವ್ಯುತ್ಪತ್ತಿಗೆ ಅನುಸಾರವಾಗಿ ಹೇಳಲ್ಪಡುವವು. ಅಥವಾ, ಅಧ್ಯಾತ್ಮ ಪದವು ಸಪ್ತಮಿವಿಭಕ್ತ್ಯಂತವೆಂದು ಸ್ವೀಕರಿಸಿ, **ಅಧ್ಯಾತ್ಮಂ**= ಆತ್ಮಾಧಿಕಾರ ಎಂಬ ಗ್ರಂಥದಲ್ಲಿ ಪ್ರತಿಪಾದ್ಯವಾದುದು ಏನೆಂದು ಪ್ರಶ್ನಿಸಿದರೆ ನಿನ್ನ ಪ್ರಶ್ನೆಗೆ ಉತ್ತರ. ಆ **ಅಧ್ಯಾತ್ಮಂ**= ಆತ್ಮಾಧಿಕಾರ ಗ್ರಂಥ ಪ್ರತಿಪಾದ್ಯವಾದುದು, **ಸ್ವಭಾವಃ**= ಸ್ವಭಾವವಾಗಿದೆ ಎಂದು. ಇಲ್ಲಿ ಸ್ವಶಬ್ದವು '**ತೇ ವಿದುಃ**' (ಗೀ.7–28) ಎಂಬ ಶ್ಲೋಕದಲ್ಲಿ ಪ್ರಸ್ತುತನಾದ ಜೀವನನ್ನು ಹೇಳುವುದು. **ಭವತಿ**= ಸರ್ವದಾ ಏಕಪ್ರಕಾರವಾಗಿ ಇರುವನು ಎಂದು ಭಾವ. ಸ್ವಶ್ಚಾಸೌ ಭಾವಶ್ಚ ಎಂಬ ವಿಗ್ರಹಕ್ಕನು ಸಾರವಾಗಿ ಸದಾ ಏಕಪ್ರಕಾರನಾಗಿರುವ ಜೀವನು ಸ್ವಭಾವನೆಂದೆನಿಸುವನು. ಅಧ್ಯಾತ್ಮ ಶಬ್ದವಾಚ್ಯವಾದ ಆತ್ಮಾಧಿಕಾರ ಎಂಬ ಗ್ರಂಥ ಪ್ರತಿಪಾದ್ಯನು ಸದಾ ಏಕಪ್ರಕಾರನಾದ ಜೀವನು ಎಂದು ಅರ್ಥ.

**ಸ್ವ ಇತ್ಯೇವೋಕ್ತೌ ಸ್ವಶಬ್ದಸ್ಯಾತ್ಮೀಯೇಽಪಿ ಪ್ರಯೋಗಾದಂತಃಕರಣಾದಿರಪಿ ಪ್ರತೀ(ಯೇತ)ಯತೇ । ಅತೋ ಭಾವ ಇತ್ಯುಕ್ತಿಃ । 'ಅನ್ನಮಯಂ ಸೋಮ್ಯ**

**ಮನ ' ಇತ್ಯಾದೇರ್ಮನಃ ಪ್ರಭೃತೇರನ್ನವಿಕಾರತ್ವೇನೈಕಪ್ರಕಾರತ್ವಾಭಾವಾತ್ । ಭಾವ ಇತ್ಯೇವೋಕ್ತೌ ಈಶ್ವರಸ್ಯಾಪಿ ಸದೈಕರೂಪತ್ವಾತ್ತೇನ ತಸ್ಯ ಪ್ರತೀತೌ ದ್ವಿತೀಯಪ್ರಶ್ನೋ ನೋತ್ತರಿತಃ ಸ್ಯಾದತಃ ಸ್ವ ಇತ್ಯುಕ್ತಿಃ । ತೇನ ಚ ಪ್ರಕೃತತ್ವಾತ್ ಜೀವ ಏವ ಪರಾಮೃಶ್ಯತ ಇತಿ ಪದದ್ವಯಮಪ್ಯರ್ಥವದೇವೇತಿ ಭಾವಃ ।**

**ಅನುವಾದ-** 'ಸ್ವಃ' ಎಂದಿಷ್ಟೇ ಹೇಳಿದಲ್ಲಿ, ಸ್ವಶಬ್ದವನ್ನು ತನಗೆ ಸಂಬಂಧಿಸಿದ ಪದಾರ್ಥಗಳ ಬಗ್ಗೆಯೂ ಪ್ರಯೋಗಿಸುವುದರಿಂದ ಅಂತಃಕರಣ ಮೊದಲಾದವುಗಳೂ ಸ್ವಶಬ್ದದಿಂದ ಪ್ರಕೃತ, ತಿಳಿದುಬಂದೀತು. ಆದ್ದರಿಂದ 'ಭಾವ' ಎಂಬ ಪದವನ್ನೂ ಪ್ರಯೋಗಿಸಲಾಗಿದೆ. **'ಅನ್ನಮಯಂ ಸೋಮ್ಯ ಮನಃ'** ಇತ್ಯಾದಿ ಶ್ರುತಿಯಿಂದ ಮನಸ್ಸು ಮೊದಲಾದವುಗಳು ಅನ್ನದ ವಿಕಾರ ವಾದುದರಿಂದ ಏಕ ಪ್ರಕಾರವಾದುದಲ್ಲ (ಹೀಗೆ, ಭಾವಶಬ್ದವು, ಇಲ್ಲಿ ಅಂತಃಕರಣಾದಿಗಳು ವಿವಕ್ಷಿತವಲ್ಲವೆಂದು ಸೂಚಿಸುವುದು). **'ಭಾವಃ'** ಎಂದಿಷ್ಟೇ ಹೇಳಿದಲ್ಲಿ ಈಶ್ವರನೂ ಸರ್ವದಾ ಏಕರೂಪನಾಗಿರುವುದರಿಂದ ಅವನು ಪ್ರಕೃತ 'ಭಾವ'ಶಬ್ದವಾಚ್ಯನೆಂದು ತಿಳಿಯುವ ಸಂಭವವಿದ್ದು **'ಕಿಮಧ್ಯಾತ್ಮಂ'** ಎಂಬ ಎರಡನೆಯ ಪ್ರಶ್ನೆಗೆ ಉತ್ತರಿಸಿದಂತಾಗದು. ಆದ್ದರಿಂದ 'ಸ್ವ' ಶಬ್ದವನ್ನೂ ಪ್ರಯೋಗಿಸಲಾಗಿದೆ. ಆ ಸ್ವಶಬ್ದದಿಂದ ಪ್ರಕೃತನಾದ ಜೀವನೇ ಪರಾಮರ್ಶಿಸಲ್ಪಡುವನು. ಹೀಗೆ, **ಸ್ವ** ಮತ್ತು **ಭಾವ** ಎಂಬ ಎರಡೂ ಪದಗಳು ಸಾರ್ಥಕವೇ ಆಗಿವೆಯೆಂದು ಭಾವ.

**ಕಿಂ ಕರ್ಮೇತ್ಯಸ್ಯೋತ್ತರಂ ಭೂತೇತ್ಯಾದಿ । ಭೂತಾನಾಂ ಜೀವಾನಾಂ ಭಾವಾನಾಂ ಜಡಪದಾರ್ಥಾನಾಂ ಚೋದ್ಭವಕರಃ ಉತ್ಪತ್ತಿಕರೋ ವಿಸರ್ಗೋ ವಿಶೇಷೇಣ ಸರ್ಜನಮ್ ಈಶ್ವರಕರ್ತೃಕೋ ವ್ಯಾಪಾರಃ ಕರ್ಮೇತಿ ಶಬ್ದಿತ ಇತ್ಯರ್ಥಃ ॥ 3 ॥**

**ಅನುವಾದ–** 'ಭೂತ ' ಇತ್ಯಾದಿ ವಾಕ್ಯವು 'ಕಿಂ ಕರ್ಮ' ? ಎಂಬ ಪ್ರಶ್ನೆಗೆ ಉತ್ತರವಾಗಿದೆ. **ಭೂತಾನಾಂ**= ಜೀವರಿಗೆ, **ಭಾವಾನಾಂ**= ಜಡಪದಾರ್ಥಗಳಿಗೆ, **ಉದ್ಭವಕರಃ**= ಉತ್ಪತ್ತಿ-ಕಾರಣವಾದ, **ವಿಸರ್ಗಃ**= ವಿಶೇಷ ರೀತಿಯಿಂದ ಸೃಷ್ಟಿಯೆಂಬ ಈಶ್ವರನು ಮಾಡುವ ಕ್ರಿಯೆಯು ಕರ್ಮಶಬ್ದದ ಅರ್ಥವಾಗಿದೆ ಎಂದು ಅರ್ಥ.

**ವಿವರಣೆ -** ಅ. ಅರ್ಜುನನು ಕೇಳಿದ ಎಂಟು ಪ್ರಶ್ನೆಗಳು –

1. ಬ್ರಹ್ಮಸ್ವರೂಪವೇನು ?
2. ಅಧ್ಯಾತ್ಮ ಯಾವುದು ?
3. ಕರ್ಮ ಯಾವುದು ?
4. ಅಧಿಭೂತದ ಸ್ವರೂಪವೇನು ?
5. ಅಧಿದೈವದ ಸ್ವರೂಪವೇನು ?
6. ಈ ದೇಹದಲ್ಲಿ ಅಧಿಯಜ್ಞ ಯಾರು. ?

7. ಭಗವಂತನು ಅಧಿಯಜ್ಞನು ಹೇಗೆ ? 8. ಅಂತಕಾಲದಲ್ಲಿ ಭಗವಂತನನ್ನು ಏಕೆ ಮತ್ತು ಹೇಗೆ ಸ್ಮರಿಸಬೇಕು ?

**ಆ.** ಅಧ್ಯಾತ್ಮಪದಕ್ಕೆ ಎರಡು ಬಗೆಯ ವ್ಯಾಖ್ಯಾನವನ್ನು ಇಲ್ಲಿ ಮಾಡಲಾಗಿದೆ. '**ಆತ್ಮಾನಂ ಅ**' ಎಂಬ ವಿಗ್ರಹವಾಕ್ಯವನ್ನನುಸರಿಸಿದಾಗ ಸಿಗುವ ಅಧ್ಯಾತ್ಮಪದವು ಪ್ರಥಮಾ- ವಿಭಕ್ತ್ಯಂತವಾಗಿದ್ದು ಜೀವನನ್ನು ಅಧಿಕರಿಸಿ ಅಂದರೆ ಅವನಿಗೋಸ್ಕರ ಇರತಕ್ಕದ್ದು ಎಂಬ ಅರ್ಥವನ್ನು ಕೊಡುವುದು. ಜೀವರಿಗೆ ಉಪಕಾರಕವಾದ ದೇಹೇಂದ್ರಿಯಾಂತಃಕರಣಗಳು ಈ ವ್ಯಾಖ್ಯಾನದ ಪ್ರಕಾರ ಅಧ್ಯಾತ್ಮವೆನಿಸುವವು. ಇನ್ನೊಂದು ವ್ಯಾಖ್ಯಾನದ ಪ್ರಕಾರ, ಅಧ್ಯಾತ್ಮಪದವು ಆತ್ಮಾಧಿಕಾರ ಎಂಬ ಗ್ರಂಥವಾಚಕವಾಗಿದೆ. ಅಲ್ಲದೆ, ಪ್ರಕೃತ '**ಅಧ್ಯಾತ್ಮಂ**' ಎಂಬ ಅವ್ಯಯವು ಸಪ್ತಮೀವಿಭಕ್ತ್ಯಂತವಾದ ಪದವಾಗಿದೆ. ಆದ್ದರಿಂದ '**ಕಿಮ್ ಅಧ್ಯಾತ್ಮಂ**' ಎಂಬ ಅರ್ಜುನನ ಪ್ರಶ್ನೆಗೆ ಜೀವರಿಗೆ ಉಪಕಾರಕ ವಾಗಿರುವುದು ಯಾವುದು ? ಆತ್ಮಾಧಿಕಾರಗ್ರಂಥದಲ್ಲಿ ಪ್ರತಿಪಾದ್ಯ ವಿಷಯವೇನು ? ಎಂಬ ಎರಡು ಪ್ರಶ್ನೆಗಳೂ '**ಕಿಮಧ್ಯಾತ್ಮಂ?**' ಎಂಬ ಪ್ರಶ್ನೆಯಲ್ಲಿ ಅಡಕವಾಗಿದೆ.

ಈ ಎರಡೂ ಪ್ರಶ್ನೆಗಳಿಗೆ '**ಸ್ವಭಾವಃ**' ಎಂದು ಒಂದೇ ಪದದಿಂದ ಶ್ರೀಕೃಷ್ಣನು ಉತ್ತರ ಕೊಟ್ಟಿದ್ದಾನೆ. ಸ್ವಸ್ಯ ಭಾವಃ ಎಂಬ ವಿಗ್ರಹಕ್ಕನುಸಾರವಾಗಿ '**ತೇ ಬ್ರಹ್ಮ ತದ್ವಿದುಃ**' (7.29) ಎಂದು ಹಿಂದೆ ಪ್ರಕೃತನಾದ ಜೀವನಿಗೆ, ಭಾವಃ – ಉಪಕಾರಕವಾಗಿರತಕ್ಕ ಶರೀರಾದಿಗಳು ಎಂಬ ಅರ್ಥ ಮಾಡಿದಾಗ ಮೊದಲನೆಯ ಪ್ರಶ್ನೆಗೆ ಉತ್ತರವಾಗುತ್ತದೆ. ಸ್ವಶ್ಚಾಸೌ ಭಾವಶ್ಚ ಎಂಬ ವಿಗ್ರಹವನ್ನನುಸರಿಸಿ ನೀಡಲಾಗುವ '**ಜೀವನೆಂಬ ವಸ್ತು**' ಎಂಬ ವಿವರಣೆ ಎರಡನೆಯ ಪ್ರಶ್ನೆಗೆ ಉತ್ತರವಾಗುತ್ತದೆ. ॥ 3 ॥

**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।**
**ಅಧಿಯಜ್ಞೋऽಹಮೇವಾತ್ರ ದೇಹೇ ದೇಹಭೃತಾಂ ವರ ॥ 4 ॥**

**ಅರ್ಥ–** ಎಲೈ ದೇಹಧಾರಿಗಳಾದ ಜೀವರಲ್ಲಿ ಶ್ರೇಷ್ಠನಾದ ಅರ್ಜುನ ! ವಿನಾಶವನ್ನು ಪಡೆಯುವ ಜನ್ಯ ವಸ್ತುಗಳೆಲ್ಲವು ದೇಹಯುಕ್ತರಾದ ಜೀವರಿಗೆ ಉಪಕಾರಕವಾಗಿದ್ದು ಅಧಿ ಭೂತವೆನಿಸುವವು. ಶೇಷ ಮತ್ತು ಚತುರ್ಮುಖ ಬ್ರಹ್ಮ ಇವರಿಬ್ಬರೂ ಸರ್ವದೇವತೆಗಳಿಗೆ ಸ್ವಾಮಿಗಳಾದ್ದರಿಂದ ಅಥವಾ ದೇವತಾಪ್ರಕರಣದಲ್ಲಿ ಮುಖ್ಯರೆಂದು ಪ್ರತಿಪಾದಿತರಾಗಿರು- ವುದರಿಂದ ಅಧಿದೈವತವೆನಿಸುವರು. ದೇಹಧಾರಿಗಳಾದ ಜೀವರ ಈ ದೇಹದಲ್ಲಿದ್ದು ಯಜ್ಞಗಳಿಗೆ ಪ್ರೇರಕನೂ, ಯಜ್ಞಫಲ ಭೋಕ್ತೃವೂ ಆದ್ದರಿಂದ ನಾನೇ ಅಧಿಯಜ್ಞನೆನಿಸುವೆನು.

**ಅಧಿಭೂತಂ ಚ ಕಿಮಿತ್ಯಸ್ಯೋತ್ತರಮ್ - ಅಧಿಭೂತಮಿತಿ ॥ ಭೂತಾನಿ**

**ಸದೇಹಾನ್ ಜೀವಾನಧಿಕೃತ್ಯ ತದುಪಕಾರಿತ್ವೇನ ವರ್ತಮಾನಂ ವಸ್ತು । ಕ್ಷರೋ ಭಾವಃ ವಿನಾಶೀ ಭಾವಃ ಕಾರ್ಯಭೂತಃ ಪದಾರ್ಥಃ । ಭವತ್ಯುತ್ಪದ್ಯತ ಇತಿ ವ್ಯುತ್ಪತ್ತೇಃ । ಅಧಿದೈವಂ ಕಿಮಿತ್ಯಸ್ಯೋತ್ತರಂ ಪುರುಷಶ್ಚೇತ್ಯಾದಿ । ಅಧಿದೈವತಂ ದೈವತಾನಿ ಸರ್ವದೇವಾನಧಿಕೃತ್ಯ ತತ್ಸ್ವಾಮಿತ್ವೇನ ವಾ ದೇವತಾಪ್ರಕರಣೇ ಮುಖ್ಯತಯಾ ಪ್ರತಿಪಾದ್ಯತ್ವೇನ ವಾ ವರ್ತಮಾನಂ ಚ ಕಿಮಿತಿ ಪೃಷ್ಟಂ ವಸ್ತು ಪುರುಷಃ ಪುರಿ ದೇಹೇ ಶೇತೇ ತಿಷ್ಠತೀತಿ ಪುರುಷೋ ಜೀವಃ । ಸಚ ಸರ್ವಜೀವಾಭಿಮಾನೀ ಸಂಕರ್ಷಣೋ ಬ್ರಹ್ಮಾ ವಾ ಜ್ಞೇಯಃ । ಅಸ್ಮಿನ್‌ದೇಹೇಽಧಿಯಜ್ಞಃ ಕ ಇತ್ಯಸ್ಯೋತ್ತರಮ್- ಅಧಿಯಜ್ಞೋಽಹಮೇವೇತಿ ॥ ಪ್ರಾಗುಕ್ತ-ದಿಶಾಽಧಿಯಜ್ಞ ಇತಿ ಪ್ರಾದಿಸಮಾಸಃ । ಅಧಿಷ್ಠಿತೋ ಯಜ್ಞೋಽನೇನೇತಿ ಬಹುವ್ರೀಹಿರ್ವಾ । ಅತ್ರ ಲೌಕಿಕದೇಹೇ ಯಜ್ಞಾಧಿಷ್ಠಾತಾಽಹಮೇವೇತ್ಯರ್ಥಃ ।**

**ಅನುವಾದ** – ಅಧಿಭೂತ ಯಾವುದು ? ಎಂಬ ಪ್ರಶ್ನೆಗೆ ಉತ್ತರ '**ಅಧಿಭೂತಂ**' ಎಂದು . **ಭೂತಾನಿ** = ದೇಹಸಹಿತರಾದ ಜೀವರನ್ನು ಉದ್ದೇಶಿಸಿ ಅವರಿಗೆ ಉಪಕಾರಿಯಾಗಿರುವ ವಸ್ತು, **ಕ್ಷರೋ ಭಾವಃ** = ವಿನಾಶಿಯಾದ ಭಾವ ಎಂದರೆ ಜನ್ಯವಾದ ಪದಾರ್ಥ. ಭವತಿ ಎಂದರೆ ಉತ್ಪತ್ತಿಯನ್ನು ಹೊಂದಿದೆ ಎಂಬ ವ್ಯುತ್ಪತ್ತಿಗನುಗುಣವಾಗಿ ಹೀಗೆ ಅರ್ಥವಾಗುವುದು.

ಅಧಿದೈವವು ಯಾವುದು ಎಂಬ ಪ್ರಶ್ನೆಗೆ ಉತ್ತರವನ್ನು '**ಪುರುಷಶ್ಚ**' ಇತ್ಯಾದಿ ವಾಕ್ಯದಿಂದ ಹೇಳಲಾಗಿದೆ. **ಅಧಿದೈವತಂ** ಎಂದರೆ **ದೈವತಾನಿ**= ಸರ್ವದೇವತೆಗಳನ್ನು ಸಂಬಂಧಿಸಿದಂತೆ ಅವರಿಗೆ ಸ್ವಾಮಿಯಾಗಿರುವ ಅಥವಾ ದೇವತಾಪ್ರಕರಣದಲ್ಲಿ ಮುಖ್ಯತಯಾ ಪ್ರತಿಪಾದ್ಯವಾಗಿರುವುದು ಯಾವುದು ಎಂದು ಪ್ರಶ್ನಿಸಲಾದ ವಸ್ತುವು, **ಪುರುಷಃ**- **ಪುರಿ**= ದೇಹದಲ್ಲಿ , **ಶೇತೇ** = ಇರತಕ್ಕವನಾದ್ದರಿಂದ ಪುರುಷನೆಂದು ಕರೆಸಲ್ಪಡುವ ಜೀವ. ಆ ಜೀವನು ಎಲ್ಲ ಜೀವರಿಗೆ ಅಭಿಮಾನಿಯಾದ ಸಂಕರ್ಷಣ ಅಥವಾ ಬ್ರಹ್ಮನೆಂದು ತಿಳಿಯಬೇಕು.

ಈ ದೇಹದಲ್ಲಿ ಅಧಿಯಜ್ಞನು ಯಾರು ? ಎಂಬ ಪ್ರಶ್ನೆಗೆ ಉತ್ತರ '**ಅಧಿಯಜ್ಞೋಽಹಮೇವ**' ಎಂದು. ಹಿಂದೆ ಹೇಳಿದಂತೆ '**ಅಧಿಯಜ್ಞ**' ಎಂಬ ಪದವು (1) ಪ್ರಾದಿಸಮಾಸವಾಗಿದೆ. ಅಥವಾ, **ಅಧಿಷ್ಠಿತೋ ಯಜ್ಞೋಽನೇನ** ಎಂಬ ವಿಗ್ರಹವಾಕ್ಯಕ್ಕನುಗುಣವಾಗಿ ಬಹುವ್ರೀಹಿಸಮಾಸವಾಗಿದೆ. 'ಅತ್ರ' ಎಂದರೆ ಈ ಲೌಕಿಕ ದೇಹದಲ್ಲಿ **ಯಜ್ಞಾಧಿಷ್ಠಾತಾ** = ಯಜ್ಞಕ್ಕೆ ಪ್ರೇರಕನು ನಾನೇ ಆಗಿದ್ದೇನೆ ಎಂದು ಅರ್ಥ.

**ವಿವರಣೆ**- 1. '**ಅಧಿಯಜ್ಞಃ**' ಎಂಬ ಪದವು ಪುಲ್ಲಿಂಗವಾದುದರಿಂದ ಅವ್ಯಯೀಭಾವ

ಸಮಾಸವೆನ್ನಲು ಸಾಧ್ಯವಿಲ್ಲ . ಆದ್ದರಿಂದ 'ಪ್ರ' ಮೊದಲಾದ ಉಪಸರ್ಗಗಳು ಮತ್ತೊಂದು ಸುಬಂತದೊಡನೆ ಹೊಂದುವ ಪ್ರಾದಿಸಮಾಸವೆಂದಾಗಲೀ ಅಥವಾ ವಿವೃತಿಯಲ್ಲಿ ತೋರಿಸಿದಂತೆ ಬಹುವ್ರೀಹಿಸಮಾಸವೆಂದಾಗಲೀ ಹೇಳಬೇಕಾಗುವುದು ಎಂದು ಭಾವ.

**ಅತ್ರೇತಿ ದೇಹವಿಶೇಷಣಮ್ ಈಶ್ವರದೇಹವ್ಯಾವೃತ್ತ್ಯರ್ಥಮ್ । ಭಗವತಃ ಪ್ರಾಣಿದೇಹ ಇವ ಸ್ವದೇಹೇ ಪೃಥಗಭಾವೇನ ನಿಯಂತೃತ್ವಾಭಾವಾತ್ । ಕರ್ತೃ-ಭೋಕ್ತೃಫಲದಾತ್ರೃಣಾಂ ದೇಹೇ ಪ್ರೇರಕತ್ವೇನ ವರ್ತಮಾನಸ್ಯಾತ್ರ ವಿವಕ್ಷಿತತ್ವಾತ್। ದೇಹ ಇತ್ಯುಕ್ತಿರಪ್ಯಸ್ಮಿನ್ದೇಹೇಽಧಿಯಜ್ಞಃ ಕ ಇತಿ ಕೃತಪ್ರಶ್ನಾನುರೋಧಾತ್ । ಪ್ರಶ್ನೇ ವಾ ಅಧಿಯಜ್ಞಃ ಕ ಇತ್ಯೇವೋಕ್ತಾವಗ್ನ್ಯಾದೇರಪ್ಯಧಿಯಜ್ಞಸ್ಯ ಹರೇರನ್ಯಸ್ಯ ಸತ್ತ್ವಾತ್ ಪ್ರಶ್ನಸ್ಯ ತದ್ವಿಷಯತ್ವೇ ಸಿದ್ಧಾರ್ಥತಾ ದೋಷಪ್ರಸಕ್ತೇಸ್ತದ್ವ್ಯಾವೃ-ತ್ತ್ಯರ್ಥಂ ಕರ್ತೃಭೋಕ್ತೃಫಲದಾತ್ರೃಣಾಂ ದೇಹೇ ಪ್ರೇರಕತಯಾ ವರ್ತ-ಮಾನೋಽಧಿಯಜ್ಞಃ ಕ ಇತ್ಯರ್ಥಲಾಭಾಯ ದೇಹ ಇತ್ಯವಶ್ಯಂ ವಾಚ್ಯತ್ವಾತ್ ।**

**ಅನುವಾದ–** '**ಅತ್ರ ದೇಹೇ**' ಎಂದು ಗೀತೆಯಲ್ಲಿ ದೇಹಕ್ಕೆ '**ಅತ್ರ**'– 'ಈ' ಎಂಬ ವಿಶೇಷಣವನ್ನು ಕೊಟ್ಟಿರುವುದು ಭಗವಂತನ ದೇಹವನ್ನು ಹೊರತುಪಡಿಸಲು . ಕರ್ತೃ ಮತ್ತು ಭೋಕ್ತೃವಾದ ಜೀವನಿಗೆ ಫಲವನ್ನು ಕೊಡುವ ತತ್ತ್ವಾಭಿಮಾನಿದೇವತೆಗಳಿಗೆ ಪ್ರೇರಕನಾಗಿ ದೇಹದಲ್ಲಿರುವ ಭಗವಂತನು ಇಲ್ಲಿ '**ಅಧಿಯಜ್ಞ**'ನೆಂದು ವಿವಕ್ಷಿತವಾಗಿರುವುದರಿಂದ, ಜೀವರ ದೇಹದಲ್ಲಿ ದೇಹಕ್ಕಿಂತ ಬೇರೆಯಾಗಿ ಭಗವಂತನಿರುವಂತೆ ತನ್ನ ದೇಹದಲ್ಲಿ ಭಗವಂತನು ಭಿನ್ನನಾಗಿ ಇಲ್ಲದಿರುವುದರಿಂದ (ಅಧಿಯಜ್ಞಪದವು ಸೂಚಿಸುವ) ನಿಯಾಮಕತ್ವವು (ತನ್ನ ದೇಹಕ್ಕೆ ಸಂಬಂಧಿಸಿದಂತೆ) ಭಗವಂತನಿಗೆ ಇಲ್ಲದಿರುವುದರಿಂದ ಭಗವಂತನ ದೇಹವು '**ಅತ್ರ**' ಎಂದು ವಿಶೇಷಣದಿಂದ ವ್ಯಾವೃತ್ತವಾಗುವುದು.

'**ಅಸ್ಮಿನ್ ದೇಹೇ ಅಧಿಯಜ್ಞಃ ಕಃ**' = ಈ ದೇಹದಲ್ಲಿ ಅಧಿಯಜ್ಞನು ಯಾರು ? ಎಂದು ಮಾಡಲಾದ ಪ್ರಶ್ನೆಗೆ ಅನುಸಾರವಾಗಿ (ಸಮಾಧಾನವಾಕ್ಯದಲ್ಲಿ) '**ದೇಹೇ**' ಎಂದು ಹೇಳಲಾಗಿದೆ. ಪ್ರಶ್ನೆಯಲ್ಲೇ '**ಅಧಿಯಜ್ಞಃ ಕಃ**' – 'ಅಧಿಯಜ್ಞನು ಯಾರು' ಎಂದಿಷ್ಟೇ ಹೇಳಿದ್ದರೆ ಶ್ರೀಹರಿಗಿಂತ ಭಿನ್ನರಾದ ಅಗ್ನಿಯೇ ಮೊದಲಾದ ಅಧಿಯಜ್ಞರು ಇರುವುದರಿಂದ ಅವರ ವಿಷಯವಾಗಿ ಪ್ರಶ್ನೆ ಮಾಡಲಾಗಿದೆ ಎಂದು ಭಾವಿಸಿ ತಿಳಿದ ವಿಷಯದಲ್ಲೇ ಮಾಡಲಾದ ಪ್ರಶ್ನೆಯೆಂದು ಪ್ರಶ್ನೆಗೆ '**ಸಿದ್ಧಾರ್ಥತಾ**' ಎಂಬ ದೋಷವು ಬರುವ ಪ್ರಸಂಗವಿದೆ, ಆದ್ದರಿಂದ ಅಗ್ನಿ ಮೊದಲಾದ ಅಧಿಯಜ್ಞರನ್ನು ಹೊರತುಪಡಿಸಲು 'ದೇಹದಲ್ಲಿ ಕರ್ತೃ–ಭೋಕ್ತೃ– ಜೀವರಿಗೆ ಫಲಕೊಡುವ ತತ್ತ್ವ

ದೇವತೆಗಳಿಗೆ ಪ್ರೇರಕನಾಗಿರುವ ಅಧಿಯಜ್ಞನು ಯಾರು' ಎಂಬ ಅರ್ಥ ಲಭಿಸುವುದಕ್ಕಾಗಿ 'ದೇಹೇ' ಎಂದು ಅವಶ್ಯವಾಗಿ ಹೇಳಬೇಕಾಗಿದೆ.

**ಕಿಂಚ ಪೂರ್ವಾಧ್ಯಾಯಾಂತೇ 'ಸಾಧಿಯಜ್ಞಂ ಮಾಂ ವಿದುರಿತಿ' (7-30) ಭಗವತೋಽಧಿಯಜ್ಞಸಾಹಿತ್ಯೋಕ್ತ್ಯಾಽಧಿಯಜ್ಞೋ ಭಗವತೋಽನ್ಯೋಽಗ್ನ್ಯಾದಿರಿತಿ ಪ್ರಾಪ್ತಶಂಕಾವ್ಯುದಾಸಾಯ ಚ ದೇಹ ಇತ್ಯುಕ್ತಿಃ । ಸರ್ವಪ್ರಾಣಿದೇಹಗತಾಧಿಯಜ್ಞಾಖ್ಯರೂಪವಿಶೇಷಾಪೇಕ್ಷಯಾ ಸಾಹಿತ್ಯಾಭಿಪ್ರಾಯೇಣ ಸಾಧಿಯಜ್ಞಂ ಮಾಮಿತ್ಯುಕ್ತಿರಿತಿ । ದೇಹ ಇತ್ಯುಕ್ತ್ಯಾ ಸಾಹಿತ್ಯೋಕ್ತೇರ್ಗತಿಸೂಚನೇನ ಭಗವದನ್ಯತ್ವಶಂಕಾನಿರಾಸಾತ್ । ಸಾಹಿತ್ಯೋಕ್ತ್ಯಾ ಪ್ರಾಪ್ತಭೇದಶಂಕಾಯಾ ಅವಶ್ಯಂ ಪರಿಹಾರ್ಯತ್ವಾದೇವ ಪ್ರಥಮಪ್ರಾಪ್ತಸ್ಯಾತ್ರ ದೇಹೇಽಧಿಯಜ್ಞಃ ಕಥಂ ಕೇನ ಪ್ರಕಾರೇಣೇತಿ ಪ್ರಶ್ನಸ್ಯ ಪರಿಹಾರಮನುಕ್ತ್ವಾ ಕ ಇತಿ ಪ್ರಶ್ನ ಏವ ಪರಿಹೃತಃ ।**

**ಅನುವಾದ** – ಮತ್ತು ಹಿಂದಿನ ಅಧ್ಯಾಯದ ಕೊನೆಯಲ್ಲಿ 'ಸಾಧಿಯಜ್ಞಂ ಮಾಂ ವಿದುಃ' – 'ಅಧಿಯಜ್ಞ ಸಹಿತನಾದ ನನ್ನನ್ನು ಯಾರು ತಿಳಿಯುವರೋ' ಎಂದು ಭಗವಂತನಿಗೆ ಅಧಿಯಜ್ಞನ ಸಾಹಿತ್ಯವನ್ನು ಹೇಳಿರುವುದರಿಂದ 'ಅಧಿಯಜ್ಞನು ಭಗವಂತನಿಂದ ಭಿನ್ನನಾದ ಅಗ್ನಿ ಮೊದಲಾದವರಾಗಿರಬಹುದು' ಎಂದು ಒದಗುವ ಶಂಕೆಯನ್ನು ಪರಿಹರಿಸುವುದಕ್ಕಾಗಿಯೂ ಕೂಡ 'ದೇಹೇ' ಎಂದು ಹೇಳಲಾಗಿದೆ. ಎಲ್ಲ ಪ್ರಾಣಿಗಳ ದೇಹದಲ್ಲಿರುವ ಅಧಿಯಜ್ಞವೆಂಬ (ಭಗವಂತನ) ರೂಪವಿಶೇಷದ ದೃಷ್ಟಿಯಿಂದ ಸಹಿತತ್ವವನ್ನು (ಶ್ರೀಕೃಷ್ಣನಿಗೆ) ಹೇಳುವ ಅಭಿಪ್ರಾಯದಿಂದ **'ಸಾಧಿಯಜ್ಞಂ ಮಾಂ'** ಎಂದು ಹೇಳಿರುವುದೆಂದು **'ದೇಹೇ'** ಎಂಬ ಶಬ್ದದಿಂದ ಸಾಹಿತ್ಯವನ್ನು ಹೇಳಿರುವುದಕ್ಕೆ ವಿವರಣೆಯನ್ನು ಸೂಚಿಸಿರುವುದರಿಂದ ಅಧಿಯಜ್ಞನು ಭಗವಂತನಿಂದ ಭಿನ್ನನು ಎಂಬ ಶಂಕೆಯ ಪರಿಹಾರವಾಗುವುದು. ಸಾಹಿತ್ಯವನ್ನು ಹೇಳಿದ್ದರಿಂದ ಒದಗಿದ (ಅಧಿಯಜ್ಞ ಮತ್ತು ಭಗವಂತ ಇವರ) ಭೇದ ಸಂದೇಹವನ್ನು ಅವಶ್ಯವಾಗಿ ಪರಿಹರಿಸಬೇಕಾದ್ದರಿಂದಲೇ– ಮೊದಲು ಮಾಡಲಾದ **'ದೇಹೇ ಅಧಿಯಜ್ಞಃ ಕಥಂ'** – 'ದೇಹದಲ್ಲಿ ಅಧಿಯಜ್ಞನಾಗಿರುವುದು ಹೇಗೆ ? ಎಂಬ ಪ್ರಶ್ನೆಗೆ ಪರಿಹಾರವನ್ನು ಹೇಳದೆ 'ಅಧಿಯಜ್ಞನು ಯಾರು ? ಎಂಬ ಪ್ರಶ್ನೆಯನ್ನೇ ಪರಿಹರಿಸಲಾಗಿದೆ.

**ಕಿಂಚ ಸರ್ವಯಜ್ಞಭೋಕ್ತೃತ್ವಸರ್ವಯಜ್ಞಪ್ರವರ್ತಕತ್ವಪ್ರಕಾರೇಣ ಹಿ ಭಗವತೋಽಧಿಯಜ್ಞತ್ವಂ । ತಚ್ಚ ಸರ್ವಯಜ್ಞಭೋಕ್ತೃತ್ವಾದಿಕಂ 'ಭೋಕ್ತಾರಂ ಯಜ್ಞತಪಸಾಮಿತ್ಯಾದಿ' (5-29) ಪಂಚಮಾಂತೋಕ್ತಂ ಶ್ರುತವತೋಽರ್ಜುನಸ್ಯ ಸಿದ್ಧಮಿತ್ಯಧಿಯಜ್ಞೋಽಹಮಿತಿ ಭಗವತೋ ಯಜ್ಞಾಧಿಷ್ಠಾತೃತ್ವರೂಪಾಧಿಯಜ್ಞ-**

**ತ್ವೋಕ್ತ್ಯಾ ಕಥಮಧಿಯಜ್ಞ ಇತ್ಯಸ್ಯ ಭೋಕ್ತೃತ್ವಾದಿನಾ ಪ್ರಕಾರೇಣಾಧಿಯಜ್ಞತ್ವಮಿತಿ ಪರಿಹಾರಸ್ಯ ಪ್ರಾಪ್ತತ್ವಾಚ್ಚ ತತ್ಪರಿಹಾರೋ ನೋಕ್ತ ಇತಿ । ಯದ್ವಾ ಕಥಮಿತ್ಯಸ್ಯ ಕಿಂಲಕ್ಷಣಕ ಇತ್ಯರ್ಥಃ । ಅಧಿಯಜ್ಞೋಽಹಮೇವೇತ್ಯಧಿಯಜ್ಞಾಭಿನ್ನತ್ವೇನೋಕ್ತಸ್ಯ ಹರೇಃ 'ಕವಿಂ ಪುರಾಣಂ' ಇತಿ ಕವಿತ್ವಾದಿಲಕ್ಷಣೋಕ್ತ್ಯಾ ಏವಂಲಕ್ಷಣಕೋಽಧಿಯಜ್ಞ ಇತಿ ಪ್ರಾಪ್ತೇರ್ನೋಕ್ತಮುತ್ತರಮ್ । ದೇಹಭೃತಾಂ ವರೇತಿ ಸಂಬುದ್ಧಿಃ । ದೇಹಭೃತಾಂ ದೇಹ ಇತಿ ಚೋಭಯತ್ರಾನ್ವಯೋ ಜ್ಞೇಯಃ ।**

**ಅನುವಾದ–** ಮತ್ತು , ಭಗವಂತನು ಅಧಿಯಜ್ಞನಾಗಿರುವುದು ಸರ್ವಯಜ್ಞಭೋಕ್ತೃವಾಗಿ, ಸರ್ವಯಜ್ಞ ಪ್ರವರ್ತಕನಾಗಿ ತಾನೇ ? ಆ ಸರ್ವಯಜ್ಞಭೋಕ್ತೃತ್ವ ಮೊದಲಾದದ್ದು '**ಭೋಕ್ತಾರಂ ಯಜ್ಞತಪಸಾಂ**' ಇತ್ಯಾದಿ ಪಂಚಮಾಧ್ಯಾಯದ ಕೊನೆಯಲ್ಲಿ ಹೇಳಲ್ಪಟ್ಟಿದ್ದು ಅದನ್ನು ಕೇಳಿರುವ ಅರ್ಜುನನಿಗೆ ಸಿದ್ಧವಾದದ್ದೇ ಆಗಿದೆ. ಅಲ್ಲದೆ '**ಅಧಿಯಜ್ಞೋಹಂ**' (ಗೀ.8.4) ಎಂಬುದಾಗಿ ಭಗವಂತನಿಗೆ ಯಜ್ಞಾಧಿಷ್ಠಾತೃತ್ವ ಸ್ವರೂಪವಾದ ಅಧಿಯಜ್ಞತ್ವವನ್ನು ಹೇಳಿರುವುದರಿಂದ, 'ಭಗವಂತನು ಅಧಿಯಜ್ಞನೆನಿಸುವುದು ಹೇಗೆ ?' ಎಂಬ ಪ್ರಶ್ನೆಗೆ ಸರ್ವಯಜ್ಞ ಭೋಕ್ತೃತ್ವಾದಿಗಳಿಂದಾಗಿ ಅಧಿಯಜ್ಞನಾಗಿರುವುದು' ಎಂಬ ಪರಿಹಾರವು ದೊರಕಿರುವುದರಿಂದಲೂ '**ಕಥಂ ಅಧಿಯಜ್ಞಃ**' ಎಂಬ ಪ್ರಶ್ನೆಗೆ ಪರಿಹಾರವನ್ನು ಇಲ್ಲಿ ಹೇಳಿರುವುದಿಲ್ಲ .

ಅಥವಾ, '**ಕಥಂ**' ಎಂಬ ಪದಕ್ಕೆ 'ಯಾವ ಲಕ್ಷಣವುಳ್ಳವನು ?' ಎಂದರ್ಥ. ಈ ಪ್ರಶ್ನೆಗೆ – '**ಅಧಿಯಜ್ಞೋಹಮೇವ**' ಎಂಬುದಾಗಿ ಅಧಿಯಜ್ಞಾಭಿನ್ನನೆಂದು ಹೇಳಲಾಗಿರುವ ಶ್ರೀಹರಿಗೆ '**ಕವಿಂ ಪುರಾಣಂ**' ಇತ್ಯಾದಿ ಶ್ಲೋಕದಿಂದ ಕವಿತ್ವವೇ ಮೊದಲಾದ ಲಕ್ಷಣಗಳು ಹೇಳಲಾಗಿರುವುದರಿಂದ ಉತ್ತರವು ಲಭಿಸಿದೆಯಾಗಿ ಪುನಃ ಉತ್ತರವನ್ನು ಹೇಳಲಾಗಿಲ್ಲ.

'**ದೇಹಭೃತಾಂ ವರ**'= ದೇಹಧಾರಿಗಳಲ್ಲಿ ಶ್ರೇಷ್ಠನೇ ! ಎಂದು ಅರ್ಜುನನನ್ನು ಕುರಿತು ಸಂಬೋಧನೆಯಾಗಿದೆ. '**ದೇಹಭೃತಾಂ ದೇಹೇ**' ಎಂಬುದಾಗಿ '**ದೇಹಭೃತಾಂ**' ಎಂಬ ಪದಕ್ಕೆ '**ದೇಹೇ**' ಎಂಬ ಪದದೊಂದಿಗೂ ಅನ್ವಯಿಸಬೇಕು . ಹೀಗೆ '**ದೇಹಭೃತಾಂ**' ಎಂಬ ಪದಕ್ಕೆ ಎರಡುಕಡೆ ಅನ್ವಯವಿದೆ.

**ಶ್ಲೋಕದ್ವಯಸ್ಯಾಯಮರ್ಥಸಂಗ್ರಹಃ । ಬ್ರಹ್ಮ ಮಮ ವ್ಯಾಪ್ತರೂಪಂ ಪರಮಮಕ್ಷರಮುಚ್ಯತೇ । ಅಧ್ಯಾತ್ಮಂ ಸ್ವಭಾವಃ ಜೀವಚಿದುಪಕಾರಿದೇಹೇಂದ್ರಿಯಾಂತಃಕರಣಲಕ್ಷಣಃ ಪದಾರ್ಥಃ । ಜೀವರಾಶಿರ್ವಾ । ಕರ್ಮ ತು ಚರಾಚರವಿಷಯಕೇಶ್ವರಕರ್ತೃಕಸರ್ಜನಮ್ । ಅಧಿಭೂತಂ ತು ಕ್ಷರೋ ಭಾವಃ ಸದೇಹಜೀವೋಪಕಾರ್ಯುತ್ಪತ್ತಿವಿನಾಶವಾನ್ ದೇಹೇಂದ್ರಿಯಾದ್ಯನ್ಯಪದಾರ್ಥ ಉಚ್ಯತೇ । ಅಧಿ-**

**ದೈವತಂ ಚ ಪುರುಷಃ ಬ್ರಹ್ಮಾ ಸಂಕರ್ಷಣೋ ವಾ । ಅತ್ರ ದೇಹಸ್ಥಿತೋಽಧಿಕಯಾಜ್ಯತ್ವಹೇತುನಾಽಧಿಯಜ್ಞಾಖ್ಯೋ ರೂಪವಿಶೇಷೋಽಹಮೇವೇತಿ ಸಾಹಿತ್ಯೋಕ್ತ್ಯಾ ಪ್ರಾಪ್ತಭೇದಶಂಕಾನಿರಾಸಾಯೈವಕಾರಪ್ರಯೋಗಃ ।**

**ಅನುವಾದ-** ಎರಡು ಶ್ಲೋಕಗಳ (8.3 ಮತ್ತು 8.4) ಅರ್ಥದ ಸಂಗ್ರಹವು ಈ ರೀತಿಯಾಗಿದೆ- ಬ್ರಹ್ಮನು ಎಂದರೆ ನನ್ನ ಸರ್ವವ್ಯಾಪಿಯಾದ ಸ್ವರೂಪವು ಪರಮ ಅಕ್ಷರ ಎಂದೆನಿಸುತ್ತಾನೆ. ಸ್ವಭಾವವು ಅಧ್ಯಾತ್ಮವೆಂದೆನಿಸುವುದು. ಇಲ್ಲಿ ಸ್ವಭಾವವೆಂದರೆ ಜೀವಚೇತನಕ್ಕೆ ಉಪಕಾರಿಯಾದ ದೇಹ, ಇಂದ್ರಿಯಗಳು ಅಂತಃಕರಣ ಎಂಬ ಪದಾರ್ಥಗಳು. ಅಥವಾ, ಜೀವರಾಶಿಯೇ ಇಲ್ಲಿ ಸ್ವಭಾವವೆನ್ನಲಾಗಿದೆ. ಈಶ್ವರನು ಮಾಡುವ ಚರಾಚರಗಳ ಸೃಷ್ಟಿಯು ಕರ್ಮವೆನಿಸುವುದು. ದೇಹಸಹಿತನಾದ ಜೀವನಿಗೆ ಉಪಕಾರಕವಾದ, ಉತ್ಪತ್ತಿ ವಿನಾಶಗಳುಳ್ಳ, ದೇಹೇಂದ್ರಿಯಾದಿಗಳಿಂದ ಭಿನ್ನವಾದ ಪದಾರ್ಥಗಳು, ಕ್ಷರ ಭಾವವೆನಿಸುವವು. ಇವು ಅಧಿಭೂತವಾಗಿವೆ. ಪುರುಷನು ಅಧಿದೈವತನು. ಇಲ್ಲಿ ಪುರುಷನೆಂದರೆ ಚತುರ್ಮುಖಬ್ರಹ್ಮ ಅಥವಾ ಸಂಕರ್ಷಣನು. ಇಲ್ಲಿ, ದೇಹದಲ್ಲಿರುವ ಅಧಿಕವಾಗಿ ಪೂಜ್ಯನಾಗಿರುವ ಕಾರಣದಿಂದ ಅಧಿಯಜ್ಞ ಎಂದೆನಿಸುವ ರೂಪವಿಶೇಷವು **ಅಹಮೇವ**= ನಾನೇ ಆಗಿರುವೆನು ಎಂದು ಏವಕಾರವನ್ನು ಪ್ರಯೋಗಿಸಿರುವುದು. ('**ಸಾಧಿಯಜ್ಞಂ ಚ ಮಾಂ ವಿದುಃ**' ಎಂದು ಅಧಿಯಜ್ಞನ ಸಾಹಿತ್ಯವನ್ನು ಶ್ರೀಕೃಷ್ಣನಿಗೆ ಹೇಳಿರುವುದರಿಂದ ಒದಗಿದ (ಶ್ರೀಕೃಷ್ಣ ಮತ್ತು ಅಧಿಯಜ್ಞರ ನಡುವೆ) ಭೇದಸಂದೇಹವನ್ನು ಪರಿಹರಿಸುವ ಸಲುವಾಗಿ.

**ಯದ್ವಾ ಸ್ವಭಾವೋ ಭಗವತ್ಸ್ವಭಾವೋಽಧ್ಯಾತ್ಮಮುಚ್ಯತೇ ಅಧಿಕತ್ವಾತ್ । ಕ್ಷರೋ ಭಾವಃ ಸರ್ವಜೀವರಾಶಿರಧಿಭೂತಮ್ । ಭೂತಶಬ್ದಿತಪೃಥಿವ್ಯಾದಿ-ಜಡಾಧಿಕತ್ವಾತ್ । "ಷಕಾರಃ ಪ್ರಾಣ ಆತ್ಮಾ" ಇತಿ ಶ್ರುತ್ಯಾ ಷಕಾರಸ್ಯ ಚೇಷ್ಟಾ-ಪರ್ಯಾಯಪ್ರಾಣವಾಚಿತ್ವಾತ್ । ಪುರುಪ್ರಾಣತ್ವಹೇತುನಾ ಪುರುಷಶಬ್ದಿತಾ ರಮಾ ಅಧಿದೈವತಮ್ । ದೈವತಶಬ್ದಿತೋ ವಿಷ್ಣುರಧಿಕೋ ಯಸ್ಯಾ ಇತಿ ವ್ಯುತ್ಪತ್ತೇರಿತಿ ।**

**ಅನುವಾದ** – ಅಥವಾ, **ಸ್ವಭಾವಃ** = ಭಗವಂತನ ಸ್ವರೂಪವು, ಅಧ್ಯಾತ್ಮಮ್ ಉಚ್ಯತೇ = ಶ್ರೇಷ್ಠವಾದುದರಿಂದ ಅಧ್ಯಾತ್ಮವೆಂದು ಹೇಳಲ್ಪಡುವುದು. ಭೂತಶಬ್ದವು ಹೇಳುವ ಪೃಥಿವೀ ಮೊದಲಾದ ಜಡವಸ್ತುಗಳಿಂದ ಅಧಿಕವಾದದ್ದರಿಂದ, **ಕ್ಷರೋ ಭಾವಃ** = ಸಮಸ್ತ ಜೀವರಾಶಿಯು ಅಧಿಭೂತವೆಂದೆನಿಸುವುದು. '**ಷಕಾರಃ ಪ್ರಾಣ ಆತ್ಮಾ**' ಎಂಬ ಶ್ರುತಿಗನುಸಾರವಾಗಿ ಷಕಾರವು ಚೇಷ್ಟಾಶಬ್ದ ಪರ್ಯಾಯವಾದ ಪ್ರಾಣಶಬ್ದವು ಹೇಳುವ ಕ್ರಿಯೆಗೆ ವಾಚಕವಾಗಿದೆ. ಆದ್ದರಿಂದ, **ಪುರು** = ಬಹುವಾದ, **ಷ** = ಕ್ರಿಯೆಗಳುಳ್ಳವಳಾದ ಕಾರಣ ಪುರುಷಳೆಂದೆನಿಸುವ ರಮೆಯು ಅಧಿ

ದೈವತಳು. ದೈವತ ಶಬ್ದವಾಚ್ಯನಾದ ವಿಷ್ಣುವು ಯಾರಿಗಿಂತ ಅಧಿಕನೋ ಆ ರಮೆಯು ಅಧಿ ದೈವತಳು ಎಂದು ಅಧಿದೈವತ ಶಬ್ದಾರ್ಥದ ವಿವರಣೆಯಾಗಿದೆ –

**ಏತೇನ ತೇ ಬ್ರಹ್ಮೇತ್ಯರ್ಧದ್ವಯಸ್ಯಾಯಮರ್ಥಃ । ಬ್ರಹ್ಮ ವ್ಯಾಪ್ತಂ ತತ್ ಮೇ ರೂಪಂ ತೇ ವಿದುಃ । ಕೃತ್ಸ್ನಮಧ್ಯಾತ್ಮಂ ಜೀವೋಪಕಾರಿದೇಹೇಂದ್ರಿಯಾಂತಃ-ಕರಣಲಕ್ಷಣಂ ವಸ್ತು ಜೀವರಾಶಿಂ ವಾ ಸೃಷ್ಟಿಲಕ್ಷಣಂ ಭಗವತ್ಕರ್ಮ ಚಾಖಿಲಂ ವಿದುಃ । ಸಾಧಿಭೂತಾಧಿದೈವಮಧಿಭೂತಶಬ್ದಿತಸದೇಹಜೀವೋಪಕಾರಿತ್ವೇನ ಸ್ಥಿತೋತ್ಪತ್ತಿವಿನಾಶಿಪೃಥಿವ್ಯಾದಿ ಪದಾರ್ಥಸ್ಥತ್ವೇನ ತನ್ನಿಯಂತೃತಯಾ ತತ್ಸಹಿತಮ್ । ತದ್ಗತರೂಪವಿಶೇಷಸಹಿತಮಿತ್ಯೇಕೇ । ಪೃಥಿವ್ಯಾದಿಭೂತಾಧಿಕತಯಾಽಧಿಭೂತ-ಶಬ್ದಿತಸರ್ವಜೀವರಾಶೌ ಸ್ಥಿತತಯಾ ತತ್ಸಹಿತಮಿತಿ ವಾ । ಅಧಿದೈವಶಬ್ದಿತಸರ್ವ-ದೇವಾಧಿಪತೌ ಬ್ರಹ್ಮಣಿ ಸಂಕರ್ಷಣೇ ವಾ ಸ್ಥಿತತ್ವೇನ ತತ್ಸಹಿತಮ್ । ತದ್ಗತ-ರೂಪವಿಶೇಷಸಹಿತಮಿತ್ಯೇಕೇ । ಅಧಿದೈವಶಬ್ದಿತರಮಾಸಹಿತಮಿತಿ ವಾ । ಸಾಧಿ ಯಜ್ಞಂ ಚ ಅಧಿಯಜ್ಞಶಬ್ದಿತಸರ್ವಪ್ರಾಣಿಗತರೂಪವಿಶೇಷಸಹಿತಂ ಚ ಮಾಂ ಯೇ ವಿದುರಿತಿ ॥ 4 ॥**

**ಅನುವಾದ–** ಇದರಿಂದಾಗಿ, 'ತೇ ಬ್ರಹ್ಮ ' (7.29)ಮತ್ತು 'ಸಾಧಿಭೂತಾಧಿದೈವಂ' (7.30) ಈ ಎರಡು ಶ್ಲೋಕಾರ್ಧಗಳ ಅರ್ಥವು ಈ ರೀತಿಯಾಗಿರುವುದು– ಬ್ರಹ್ಮ= ವ್ಯಾಪ್ತವಾದ, **ತತ್ ಮೇ ರೂಪಂ**= ಆ ನನ್ನ ರೂಪವನ್ನು , **ತೇ ವಿದುಃ**= ಅವರು ತಿಳಿದಿರುವರು. **ಕೃತ್ಸ್ನಮ್ ಅಧ್ಯಾತ್ಮಂ**= ಜೀವನಿಗೆ ಉಪಕಾರಕವಾದ ದೇಹ, ಇಂದ್ರಿಯಗಳು, ಅಂತಃಕರಣರೂಪವಾದ ಸಮಸ್ತ ವಸ್ತುವನ್ನು , ಅಥವಾ ಜೀವರಾಶಿಯನ್ನು, **ಕರ್ಮ ಚ ಅಖಿಲಂ**= ಸೃಷ್ಟಿರೂಪವಾದ, ಭಗವಂತನ ಕರ್ಮವನ್ನೆಲ್ಲವನ್ನೂ , **ವಿದುಃ** = ತಿಳಿದಿರುವರು.

**ಸಾಧಿಭೂತಾಧಿದೈವಂ**= ಅಧಿಭೂತಶಬ್ದವಾಚ್ಯನಾದ ದೇಹಸಹಿತಜೀವನಿಗೆ ಉಪಕಾರಿ ಯಾಗಿರುವ ಉತ್ಪತ್ತಿವಿನಾಶಗಳುಳ್ಳ ಪೃಥಿವೀ ಮೊದಲಾದ ಪದಾರ್ಥಗಳಲ್ಲಿದ್ದು ಅವುಗಳನ್ನು ನಿಯಂತ್ರಿಸುವುದರಿಂದ ಅವುಗಳಿಂದ ಸಹಿತನಾಗಿರುವ,

ಕೆಲವರು, ಪೃಥಿವ್ಯಾದಿಪದಾರ್ಥಗಳಲ್ಲಿರುವ ಭಗವದ್ರೂಪವಿಶೇಷ ಸಹಿತನಾದ ಎಂದು (ಸಾಧಿಭೂತಂ ಎನ್ನುವುದರ) ಅರ್ಥವನ್ನು ಹೇಳುವರು.

ಅಥವಾ, ಪೃಥಿವೀ ಮೊದಲಾದ ಭೂತಗಳಿಗಿಂತ ಶ್ರೇಷ್ಠವಾದುದರಿಂದ ಅಧಿಭೂತ ಎಂದೆನಿಸುವ ಸರ್ವಜೀವರಾಶಿಯಲ್ಲಿ ಇರುವುದರಿಂದ ಅವುಗಳಿಂದ ಸಹಿತನಾದ,

ಹಾಗೂ ಅಧಿದೈವ ಎಂದು ಕರೆಯಲ್ಪಡುವ ಸರ್ವದೇವಾಧಿಪತಿಯಾದ ಚತುರ್ಮುಖ ಬ್ರಹ್ಮನಲ್ಲಿ ಅಥವಾ ಸಂಕರ್ಷಣನಲ್ಲಿರುವುದರಿಂದ ಅಧಿದೈವದಿಂದ ಸಹಿತನಾಗಿರುವ,

ಕೆಲವರು ಬ್ರಹ್ಮ ಅಥವಾ ಸಂಕರ್ಷಣನಲ್ಲಿರುವ ಭಗವಂತನ ರೂಪವಿಶೇಷದಿಂದ ಸಹಿತನಾದ ಎಂದೂ (ಸಾಧಿದೈವಂ ಎಂಬ ಪದದ) ಅರ್ಥವನ್ನು ಹೇಳುವರು.

ಅಥವಾ ಅಧಿದೈವಳೆಂದು ಕರೆಯಲ್ಪಡುವ ರಮಾಸಹಿತನಾದ (ಎಂದೂ ಸಾಧಿದೈವ ಪದದ ಅರ್ಥವಾಗುವುದು).

(ಅಂತಹ) **ಸಾಧಿಯಜ್ಞಂ ಚ**= ಅಧಿಯಜ್ಞನೆಂದೆನಿಸುವ ಸರ್ವಪ್ರಾಣಿಗಳಲ್ಲಿರುವ ರೂಪವಿಶೇಷದಿಂದಲೂ ಸಹಿತನಾದ, **ಮಾಂ ಯೇ ವಿದುಃ** = ನನ್ನನ್ನು ಯಾರು ತಿಳಿಯುವರೋ (ಎಂದು ಅರ್ಥ). ।। 4 ।।

**ವಿವರಣೆ**– ಅಧಿಭೂತ, ಅಧಿಯಜ್ಞ ಮತ್ತು ಅಧಿದೈವ ಶಬ್ದಗಳಿಗೆ ವಿವೃತಿಯಲ್ಲಿ ನೀಡಿರುವ ವಿವಿಧ ವ್ಯಾಖ್ಯಾನಗಳಿಗೆ ಆಧಾರವಾದ ಪ್ರಮಾಣಗಳನ್ನು ಗೀತಾಭಾಷ್ಯದಲ್ಲಿ ಉದಾಹರಿಸಲಾಗಿದೆ–

ದೇಹಸ್ಥವಿಷ್ಣುರೂಪಾಣಿ ಅಧಿಯಜ್ಞ ಇತೀರಿತಃ ।
ಕರ್ಮೇಶ್ವರಸ್ಯ ಸೃಷ್ಟ್ಯರ್ಥಂ ತಚ್ಚಾಪೀಚ್ಛಾದ್ಯಮುಚ್ಯತೇ ।।
ಅಧಿಭೂತಂ ಜಡಂ ಪ್ರೋಕ್ತಂ ಅಧ್ಯಾತ್ಮಂ ಜೀವ ಉಚ್ಯತೇ ।
ಹಿರಣ್ಯಗರ್ಭೋಽಧಿದೈವಂ ದೇವಃ ಸಂಕರ್ಷಣೋಽಪಿ ವಾ ।
ಬ್ರಹ್ಮ ನಾರಾಯಣೋ ದೇವಃ ಸರ್ವದೇವೇಶ್ವರೇಶ್ವರಃ ।। **(ಗೀತಾಕಲ್ಪ)**

ಅಧ್ಯಾತ್ಮಂ ದೇಹಪರ್ಯಂತಂ ಕೇವಲಾತ್ಮೋಪಕಾರಕಮ್ ।
ಸದೇಹಜೀವಭೂತಾನಿ ಯತ್ತೇಷಾಮುಪಕಾರಕೃತ್ ।।
ಅಧಿಭೂತಂ ತು ಮಾಯಾಂತಂ ದೇವಾನಾಮಧಿದೈವತಮ್ ।। **(ಮಹಾಕೌರ್ಮೇ)**

## ಅಂತ್ಯಕಾಲದಲ್ಲಿ ಹರಿಸ್ಮೃತಿಯುಳ್ಳವನು ಆನಂದಮಯ ಮುಕ್ತಿ ಪಡೆಯುವನು

**ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ।। 5 ।।**

**ಅರ್ಥ** – ಮರಣಕಾಲದಲ್ಲಿ ನನ್ನನ್ನೇ ಸ್ಮರಿಸುತ್ತ ದೇಹವನ್ನು ತ್ಯಜಿಸಿ ಯಾರು ಪಯಣಿಸುವನೋ ಅವನು ನನ್ನಲ್ಲಿ ನಿರ್ದುಃಖ, ನಿರತಿಶಯಾನಂದಾನುಭವ ರೂಪವಾದ ಸ್ಥಿತಿಯನ್ನು ಪಡೆಯುವನು. ಈ ವಿಷಯದಲ್ಲಿ ಸಂಶಯವಿಲ್ಲ.

**ಅಂತಕಾಲೇ ಚ ಕಿಮರ್ಥಂ ಸ್ಮರ್ತವ್ಯೋಽಸೀತಿ ಪ್ರಶ್ನಸ್ಯೋತ್ತರಮಾಹ- ಅಂತಕಾಲೇ ಚೇತಿ ॥ ಅಂತಕಾಲೇ ಮೃತಿಕಾಲೇ ಮಾಮೇವ ಸ್ಮರನ್ ಕಲೇವರಂ ದೇಹಂ ತ್ಯಕ್ತ್ವಾ ಯಃ ಪ್ರಯಾತಿ ಸ ಮದ್ಭಾವಂ ಮಯಿ ನಿರ್ದುಃಖ ನಿರತಿಶಯಾನಂದಾನುಭವಾತ್ಮಿಕಾಂ ಸತ್ತಾಂ ಯಾತಿ । ಸಂದೇಹೋಽತ್ರಾರ್ಥೇ ನಾಸ್ತೀತ್ಯರ್ಥಃ । ನಿರ್ದುಃಖನಿರತಿಶಯಾನಂದಾಭಿವ್ಯಕ್ತಿರೂಪಮದ್ಭಾವಪ್ರಾಪ್ತ್ಯರ್ಥಂ ಮತ್ಸ್ಮರಣಮಂತಕಾಲೇ ಕಾರ್ಯಮಿತ್ಯುಕ್ತಂ ಭವತಿ ॥ 5 ॥**

**ಅನುವಾದ–** ಅಂತಕಾಲದಲ್ಲಿ ನಿನ್ನನ್ನು ಸ್ಮರಿಸುವ ಆವಶ್ಯಕತೆ ಏನಿದೆ ? ಎಂಬ ಪ್ರಶ್ನೆಗೆ ಶ್ರೀಕೃಷ್ಣನು 'ಅಂತಕಾಲೇ ಚ ' ಎಂಬ ಶ್ಲೋಕದಿಂದ ಉತ್ತರವನ್ನು ಹೇಳುತ್ತಿದ್ದಾನೆ.

**ಅಂತಕಾಲೇ=** ಮೃತಿಕಾಲದಲ್ಲಿ, ನನ್ನನ್ನೇ ಸ್ಮರಿಸುತ್ತ, **ಕಲೇವರಂ=** ದೇಹವನ್ನು ತ್ಯಜಿಸಿ ಯಾರು ಪ್ರಯಾಣಿಸುವರೋ ಅವನು **ಮದ್ಭಾವಂ- ಮಯಿ=** ನನ್ನಲ್ಲಿ , (ಭಾವಂ)= **ನಿರ್ದುಃಖ** ನಿರತಿಶಯಾನಂದಾನುಭವಾತ್ಮಕವಾದ ಸ್ಥಿತಿಯನ್ನು ಹೊಂದುವನು. ಈ ವಿಷಯದಲ್ಲಿ ಸಂದೇಹವಿಲ್ಲ ಎಂದು ಅರ್ಥ. **ನಿರ್ದುಃಖ=** ನಿರತಿಶಯಾನಂದಾನುಭವರೂಪವಾದ ಮದ್ಭಾವವನ್ನು ಪಡೆಯಲು ನನ್ನ ಸ್ಮರಣೆಯನ್ನು ಅಂತಕಾಲದಲ್ಲಿ ಅವಶ್ಯ ಮಾಡತಕ್ಕದ್ದು ಎಂದು ಹೇಳಿದಂತಾಗುವುದು. ॥ 5 ॥

## ಅಂತ್ಯಕಾಲದ ಸ್ಮೃತಿಯಂತೆ ಪುನರ್ಜನ್ಮ

**ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ 6 ॥**

**ಅರ್ಥ–** ಹೇ ಕೌಂತೇಯ ! ಅಥವಾ ಸರ್ವದಾ ಅಲ್ಲಿಯೇ ನೆಲೆಸಿದ ಮನಸ್ಸಿನಿಂದ ಉಂಟಾದ ಸಂಸ್ಕಾರವುಳ್ಳವನು ಯಾವ ಯಾವ ಪದಾರ್ಥವನ್ನು ಸ್ಮರಿಸುತ್ತ ದೇಹವನ್ನು ತ್ಯಜಿಸುವನೋ ಆ ವಸ್ತುವನ್ನೇ ಹೊಂದುವನು.

**ತತ್ಕಥಮಿತ್ಯತಃ ಸಾಮಾನ್ಯವ್ಯಾಪ್ತಿಮಾಹ- ಯಂ ಯಮಿತಿ ॥ ವಾ ಅಥವಾ ಯಂ ಯಮಪಿ ಭಾವಂ ಪದಾರ್ಥಂ ಅಂತೇ ಸ್ಮರನ್ ಕಲೇವರಂ ತ್ಯಜತಿ ತಂ ತಮೇವ ಭಾವಂ ಯಾತಿ । ಅಂತಕಾಲೇ ಸ್ಮರಣೋಪಾಯಮಾಹ- ಸದೇತಿ ॥ ಸದಾ ನಿರಂತರಂ ತದ್ಭಾವೇನ ತಸ್ಮಿನ್ನಂತರ್ಗತೇನ ಮನಸಾ । 'ತದ್‌ಭಾವೋಽಂತರ್ಗತಂ ಮನಃ' ಇತ್ಯಭಿಧಾನಾತ್ । ಭಾವಿತೋ ವಾಸಿತಃ ನಿತ್ಯಂ ತಚ್ಚಿಂತಯಾ ಜಾತತದ್‌ಗೋಚರಸ್ಮೃತಿಜನಕಸಂಸ್ಕಾರವಾನ್ ಇತ್ಯರ್ಥಃ । ಏವಂರೂಪಃ ಪುಮಾನ್**

**ಭಾವಮಂತೇ ಸ್ಮರಂಸ್ತ್ಯಜತೀತ್ಯನ್ವಯಃ । ಏತಚ್ಚ ನಿತ್ಯಸ್ಮೃತಿರೂಪಂ ಸದಾತದ್ಭಾವಭಾವಿತತ್ವಮಪರೋಕ್ಷಜ್ಞಾನಂ ಜನಯಿತ್ವಾ ಭೋಗೇನ ಪ್ರಾರಬ್ಧಾವಸಾನಾನಂತರಂ ಅಂತಕಾಲೇ ಸ್ಮೃತಿಹೇತುಃ ನ ಸಾಕ್ಷಾದಿತಿ ಜ್ಞೇಯಮ್ ।**

**ಅನುವಾದ**- ಅಂತಕಾಲದಲ್ಲಿ ಭಗವಂತನನ್ನು ಸ್ಮರಿಸಿದವನು ಭಗವಂತನನ್ನೇ ಹೊಂದುವನು ಎನ್ನುವುದು ಹೇಗೆ ಸಾಧ್ಯ ಎಂಬ ಪ್ರಶ್ನೆಗೆ ಸಮಾಧಾನವಾಗಿ ಶ್ರೀಕೃಷ್ಣನು **'ಯಂ ಯಂ'** ಎಂಬ ಶ್ಲೋಕದಲ್ಲಿಸಾಮಾನ್ಯವ್ಯಾಪ್ತಿಯನ್ನು ಹೇಳುತ್ತಿದ್ದಾನೆ.

**ವಾ**= ಅಥವಾ, **ಯಂ ಯಮಪಿ ಭಾವಂ**= ಯಾವ ಯಾವ ಪದಾರ್ಥವನ್ನು, ಅಂತಕಾಲದಲ್ಲಿ ಸ್ಮರಿಸುತ್ತ ಕಳೇಬರವನ್ನು ತ್ಯಜಿಸುವನೋ ಆಯಾಯ ವಸ್ತುವನ್ನೇ ಹೊಂದುವನು. ಅಂತಕಾಲದಲ್ಲಿಸ್ಮರಣೆಯ ಸಾಧನವನ್ನು **'ಸದಾ'** ಇತ್ಯಾದಿ ಪದಗಳಿಂದ ಹೇಳಲಾಗಿದೆ. **ಸದಾ** = ನಿರಂತರವಾಗಿ, **ತದ್ಭಾವಭಾವಿತಃ**- **ತದ್ಭಾವೇನ**= ಆ ಪದಾರ್ಥದಲ್ಲೇ ಒಳಹೊಕ್ಕ ಮನಸ್ಸಿನಿಂದ, **'ತದ್ಭಾವೋಽಂತರ್ಗತಂ ಮನಃ'**, ಎಂಬ ಕೋಶವಾಕ್ಯಕ್ಕನುಸಾರವಾಗಿ ತದ್ಭಾವ ಶಬ್ದಕ್ಕೆ 'ಆ ವಸ್ತುವನ್ನೇ ಪ್ರವೇಶಿಸಿದ ಮನಸ್ಸು' ಎಂಬ ಅರ್ಥವಿದೆ. **ಭಾವಿತಃ**= ವಾಸನಾಯುಕ್ತನಾದವನು, ನಿತ್ಯವೂ ಆ ವಸ್ತುವಿನ ಆಲೋಚನೆಯಿಂದ ಉಂಟಾದ, ಆ ವಸ್ತುವಿನ ಸ್ಮೃತಿಗೆ ಕಾರಣವಾದ ಸಂಸ್ಕಾರವುಳ್ಳವನು ಎಂದು ಅರ್ಥ. 'ಈ ತೆರನಾದ ಪುರುಷನು ಆ ವಸ್ತುವನ್ನು ಸ್ಮರಿಸುತ್ತ (ದೇಹವನ್ನು) ತ್ಯಜಿಸುವನು' ಎಂದು ಅನ್ವಯ. ಈ ರೀತಿಯ ನಿತ್ಯಸ್ಮರಣರೂಪವಾದ ತದ್ಭಾವಭಾವಿತತ್ವವು ಭಗವಂತನ ಅಪರೋಕ್ಷಜ್ಞಾನವನ್ನು ಉಂಟುಮಾಡಿ, ಫಲಭೋಗದಿಂದ ಪ್ರಾರಬ್ಧಕರ್ಮಗಳು ಕೊನೆಗೊಂಡ ನಂತರ ಅಂತಕಾಲಕ್ಕೆ ಭಗವಂತನ ಸ್ಮರಣೆಯನ್ನುಂಟು ಮಾಡುವುದು ಹೊರತು ನೇರವಾಗಿ ಅಂತಕಾಲದಲ್ಲಿ ಭಗವಂತನ ಸ್ಮರಣೆಗೆ ಕಾರಣವಲ್ಲ ಎಂದು ತಿಳಿಯಬೇಕು.

**'ಸ್ಮರಂಸ್ತ್ಯಜತಿ' ಇತಿ ತ್ಯಾಗಸ್ಮರಣಯೋರೇಕಕಾಲತ್ವಪ್ರತೀತಾವಪ್ಯಂತ ಇತ್ಯುಕ್ತಿಸ್ತ್ಯಾಗಕಾಲೇ ಮಹಾದುಃಖಾತ್ಸ್ಮರಣಮಸಂಭಾವಿತಮಿತಿ ಮಂದಾಶಂಕಾವ್ಯುದಾಸಾಯ ಸರ್ವದಾ ಶರೀರಂ ಹೇಯಮಿತಿ ಮನ್ಯಮಾನಾನಾಂ ಜ್ಞಾನಿನಾಂ ನ ದೇಹತ್ಯಾಗೋ ದುಃಖಹೇತುರತಸ್ತದಾ ಸ್ಮರಣಂ ನಾಸಂಭಾವಿತಮಿತಿ ಪ್ರದರ್ಶನಾರ್ಥಾ । ಅಜ್ಞಸ್ಯಾಪಿ ತ್ಯಾಗಕ್ಷಣಾತ್ಪೂರ್ವಮೇವ ದುಃಖಂ ನ ತು ತ್ಯಾಗಕ್ಷಣ ಇತಿ ॥ 6 ॥**

**ಅನುವಾದ** - 'ಸ್ಮರನ್ ತ್ಯಜತಿ' = 'ಸ್ಮರಿಸುತ್ತ ತ್ಯಜಿಸುವನು' ಎಂಬ ಪದಗಳಿಂದ ದೇಹತ್ಯಾಗ ಮತ್ತು ಸ್ಮರಣೆಗಳು ಏಕಕಾಲದಲ್ಲಾಗುವವು ಎಂದು ತಿಳಿದು ಬಂದರೂ **'ಅಂತೇ'** ಎಂದು

ಹೇಳಿರುವುದು, ದೇಹತ್ಯಾಗಕಾಲದಲ್ಲಿ ಉಂಟಾಗುವ ಮಹಾದುಃಖದಿಂದ ಭಗವಂತನ ಸ್ಮರಣೆ ಅಸಂಭಾವಿತವಾದದ್ದು ಎಂಬ ಮಂದಬುದ್ಧಿಯ ಆಶಂಕೆಯನ್ನು ನಿವಾರಿಸಲು, ಯಾವಾಗಲೂ ಈ ಶರೀರ ಹೇಯವಾದದ್ದು ಎಂದು ಭಾವಿಸುವ ಜ್ಞಾನಿಗಳಿಗೆ ದೇಹತ್ಯಾಗವು ದುಃಖಹೇತುವೇ ಅಲ್ಲ . ಅದ್ದರಿಂದ, ಅವರಿಗೆ ಮರಣಕಾಲದಲ್ಲಿ ಭಗವಂತನ ಸ್ಮರಣೆಯು ಅಸಂಭಾವಿತವಲ್ಲ ಎಂದು ತಿಳಿಸಲು . ಅಜ್ಞಾನಿಗೂ ಕೂಡ ದೇಹತ್ಯಾಗ ಮಾಡುವ ಕ್ಷಣಕ್ಕಿಂತ ಮುಂಚಿತವಾಗಿ ದುಃಖವಿರುವುದೇ ಹೊರತು ದೇಹತ್ಯಾಗಕ್ಷಣದಲ್ಲಿ ದುಃಖವಿರುವುದಿಲ್ಲ. ॥ 6 ॥

**ವಿವರಣೆ–** '**ಸ್ಮರನ್ ತ್ಯಜತಿ**'= ಭಗವಂತನನ್ನು ಸ್ಮರಿಸುತ್ತ ದೇಹವನ್ನು ತ್ಯಜಿಸುವನು' ಎಂಬ ಪದಗಳಿಂದಲೇ ದೇಹತ್ಯಾಗ ಮತ್ತು ಭಗವತ್ಸ್ಮರಣೆ ಏಕಕಾಲದಲ್ಲಿ ಉಂಟಾಗುವವು ಎಂದು ಸ್ಪಷ್ಟವಾಗಿ ತಿಳಿದುಬರುವುದು. ಆದ್ದರಿಂದ, '**ಅಂತೇ ಸ್ಮರನ್ ತ್ಯಜತಿ**'= ಅಂತಕಾಲದಲ್ಲಿಸ್ಮರಿಸುತ್ತ ಕಳೇಬರವನ್ನು ತ್ಯಜಿಸುವನು ಎಂಬ ವಾಕ್ಯದಲ್ಲಿ '**ಅಂತೇ**' ಎಂಬ ಪದವು ವ್ಯರ್ಥವೆಂದು ತೋರುವುದು. ಆದರೆ, ಆ ಪದವು ಸಾರ್ಥಕವಾದದ್ದು ಎಂದು ವಿವೃತಿಯು ತಿಳಿಸುತ್ತಿದೆ. ಕೆಲ ಮಂದಬುದ್ಧಿಯವರು ಮರಣಕಾಲವು ಮಹಾದುಃಖಕ್ಕೆ ಕಾರಣವಾದದ್ದಾದ್ದರಿಂದ ತೀವ್ರ ವೇದನೆಯನ್ನನುಭವಿಸುವ ಆ ಸಂದರ್ಭದಲ್ಲಿ ಭಗವಂತನ ಸ್ಮರಣೆ ಮಾಡುವುದು ಯಾರಿಗೂ ಸಾಧ್ಯವಿಲ್ಲದ್ದು ಎಂದು ಶಂಕೆಯನ್ನೆತ್ತುವರು. '**ಅಂತೇ ಸ್ಮರನ್**'= 'ಮರಣ ಕಾಲದಲ್ಲಿಸ್ಮರಿಸುತ್ತ ' ಎಂಬ ಶ್ರೀಕೃಷ್ಣನ ವಾಕ್ಯವು ಮರಣಕಾಲದಲ್ಲಿ ಸ್ಮರಣೆ ಅಸಂಭಾವಿತವಲ್ಲವೆಂದು ಸೂಚಿಸುವುದು. ಅಜ್ಞಾನಿಗಳಿಗೂ ಕೂಡ ದೇಹತ್ಯಾಗ ಪೂರ್ವಕ್ಷಣಗಳಲ್ಲಿ ದುಃಖವಿರುವುದಾದರೂ ದೇಹತ್ಯಾಗ ಕ್ಷಣದಲ್ಲಿ ದುಃಖವಿರುವುದಿಲ್ಲ. ಹೀಗಿರುವಾಗ, ಈ ದೇಹ ಹೇಯವಾದದ್ದು ಎಂದು ಎಲ್ಲ ಕಾಲದಲ್ಲೂ ತಿಳಿದಿರುವ ಜ್ಞಾನಿಗಳಿಗೆ ದೇಹತ್ಯಾಗವು ಎಂದೂ ದುಃಖಕಾರಣವಾಗಲಾರದು. ಮರಣಕ್ಷಣದಲ್ಲಿ ಅಂತಹ ಜ್ಞಾನಿಗಳು ಭಗವಂತನನ್ನು ಸ್ಮರಿಸುವುದು ಅಸಂಭಾವಿತವಲ್ಲ ಎಂದು ಶ್ರೀಕೃಷ್ಣನು '**ಅಂತೇ**' ಎಂಬ ಪದದ ಮೂಲಕ ಸೂಚಿಸುತ್ತಿರುವನೆಂದು ಭಾವ.

**ತಸ್ಮಾತ್ ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ ॥ 7 ॥**

**ಅರ್ಥ–** ಅದ್ದರಿಂದ ಎಲ್ಲ ಕಾಲದಲ್ಲಿ ನನ್ನನ್ನು ಸ್ಮರಿಸು ಮತ್ತು ನಿನ್ನ ಮನಸ್ಸು , ಬುದ್ಧಿಗಳನ್ನು ನನ್ನಲ್ಲೇ ಅರ್ಪಿಸಿದವನಾಗಿ ಯುದ್ಧ ಮಾಡು. ನನ್ನನೇ ನೀನು ಹೊಂದುವಿ, ಸಂಶಯವಿಲ್ಲ.

**ಅಂತಕಾಲಸ್ಮರಣಸ್ಯ ಫಲೋಕ್ತೇರುಪಯೋಗಮಾಹ– ತಸ್ಮಾದಿತಿ ॥ ನಿತ್ಯಂ ಮತ್ಸ್ಮೃತೇಃ ಮತ್ಪ್ರಾಪ್ತಿಹೇತುಚರಮಕಾಲೀನಮತ್ಸ್ಮರಣಕಾರಣತ್ವಾದಿತ್ಯರ್ಥಃ । ಮಯ್ಯರ್ಪಿತಮನೋಬುದ್ಧಿಃ ಸನ್ಯುಧ್ಯಸ್ವ ॥ 7 ॥**

**ಅನುವಾದ–** ಅಂತಕಾಲದಲ್ಲಿ ಮಾಡಿದ ಭಗವಂತನ ಸ್ಮರಣೆಗೆ ಫಲವನ್ನು ಹೇಳಿದ್ದರ ಉಪಯೋಗವನ್ನು '**ತಸ್ಮಾತ್**' ಎಂಬ ಶ್ಲೋಕದಲ್ಲಿ ಶ್ರೀಕೃಷ್ಣನು ಹೇಳುತ್ತಿದ್ದಾನೆ. **ತಸ್ಮಾತ್** = ನಿತ್ಯವೂ ನನ್ನನ್ನು ಸ್ಮರಿಸುವುದು ನನ್ನನ್ನು ಹೊಂದಲು ಕಾರಣವಾದ ಅಂತಕಾಲದ ಸ್ಮರಣೆಗೆ ಕಾರಣವಾದುದರಿಂದ ಎಂದು ಅರ್ಥ. ನನ್ನಲ್ಲಿ ಅರ್ಪಿಸಿದ ಮನಸ್ಸು ಮತ್ತು ಬುದ್ಧಿಯುಳ್ಳವನಾಗಿ ಯುದ್ಧಮಾಡು.

## ಅಂತ್ಯಕಾಲದ ಹರಿಸ್ಮೃತಿಗಾಗಿ ನಿರಂತರ ಚಿಂತನೆ ಆವಶ್ಯಕ

**ಅಭ್ಯಾಸಯೋಗಯುಕ್ತೇನ ಚೇತಸಾಽನನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥ 8 ॥**

**ಅರ್ಥ–** ಹೇ ಪಾರ್ಥ ! ಪುನಃ ಪುನಃ ಆವೃತ್ತಿರೂಪವಾದ ಸಾಧನದಿಂದ ಸಹಿತವಾದ, ಬೇರೆಡೆಗೆ ಹರಿಯದ ಮನಸ್ಸಿನಿಂದ ಸರ್ವೋತ್ತಮನೂ , ಜಗತ್ಸೃಷ್ಟಿ ಮೊದಲಾದ ಕ್ರೀಡೆಗಳೇ ಮೊದಲಾದ ಗುಣಗಳಿಂದ ಕೂಡಿದವನೂ , ಪರಿಪೂರ್ಣನೂ ಆದ ಭಗವಂತನನ್ನು ಸ್ಮರಿಸುತ್ತ ಆ ಪರಮಪುರುಷನನ್ನೇ ಹೊಂದುವನು.

**ಸದಾ ತದ್‌ಭಾವಭಾವಿತತ್ವಂ ಸ್ಪಷ್ಟಯತಿ– ಅಭ್ಯಾಸೇತಿ ॥ ಅಭ್ಯಾಸಃ ಪುನಃ ಪುನರಾವರ್ತನಂ ತದ್ರೂಪಯೋಗೇನೋಪಾಯೇನ ಯುಕ್ತೇನ ಸಹಿತೇನಾನನ್ಯಗಾಮಿನಾಽನನ್ಯವಿಷಯೇಣ ಚೇತಸಾ ಪರಮಮುತ್ತಮಂ ದಿವ್ಯಂ ಸೃಷ್ಟ್ಯಾದಿಕ್ರೀಡಾದಿಗುಣಯುಕ್ತಮ್ । ದೀವ್ಯತೇರೌಣಾದಿಕೋ ಯಕ್ । ಪರಮಮುತ್ತಮಂ ಪುರಿ ಸರ್ವಪ್ರಾಣಿದೇಹೇ ಶೇತೇ ನಿಯಂತೃತಯಾ ವರ್ತತ ಇತಿ ವಾ ಪೂರ್ಣತ್ವಾದ್ ವಾ ಪುರುಷಾಖ್ಯಂ ಪೃ ಪಾಲನಪೂರಣಯೋರಿತ್ಯತಃ ಕುಷನ್ । ಧಾತೋರುಕಾರಃ । ಅನುಚಿಂತಯನ್ ಯಾತಿ ಪರಮಂ ಪುರುಷಮಿತ್ಯನುಷಂಗಃ ॥ 8 ॥**

**ಅನುವಾದ–** (ಯಂ ಯಂ ವಾಽಪಿ) ಎಂಬ ಶ್ಲೋಕದಲ್ಲಿ ಹೇಳಿದ ಸದಾತದ್ಭಾವಭಾವಿತತ್ವವನ್ನು '**ಅಭ್ಯಾಸಯೋಗಯುಕ್ತೇನ**' ಎಂಬ ಶ್ಲೋಕದಿಂದ ಶ್ರೀಕೃಷ್ಣನು ಸ್ಪಷ್ಟಪಡಿಸುತ್ತಿದ್ದಾನೆ.

ಅಭ್ಯಾಸವೆಂದರೆ ಪುನಃ ಪುನಃ ಆವರ್ತಿಸುವುದು. ಅಭ್ಯಾಸ ರೂಪವಾದ ಯೋಗದಿಂದ ಅಂದರೆ ಸಾಧನದಿಂದ, **ಯುಕ್ತೇನ** = ಸಹಿತವಾದ, **ಅನನ್ಯಗಾಮಿನಾ** = ಮತ್ತೊಂದನ್ನು ವಿಷಯೀಕರಿಸದ ಮನಸ್ಸಿನಿಂದ, **ಪರಮಂ** = ಉತ್ತಮನಾದ, **ದಿವ್ಯಂ** = ಸೃಷ್ಟಿಮೊದಲಾದ ಕ್ರೀಡೆ ಇತ್ಯಾದಿ ಗುಣಗಳಿಂದ ಕೂಡಿದ, '**ದಿವ್**' ಧಾತುವಿಗೆ ಉಣಾದಿಗಣಕ್ಕೆ ಸೇರಿದ '**ಯಕ್**'

ಪ್ರತ್ಯಯವು ಸೇರಿ 'ದಿವ್ಯ' ಎಂಬ ರೂಪವಾಗಿದೆ. **ಪರಮಂ**= ಉತ್ತಮನಾದ, **ಪುರುಷಂ**= ಪುರಿ ಸರ್ವಪ್ರಾಣಿಗಳ ದೇಹದಲ್ಲಿ , **ಶೇತೇ**= ನಿಯಾಮಕನಾಗಿ ಇರುವವನು ಎಂದಾಗಲಿ, ಪೂರ್ಣನಾದುದರಿಂದಾಗಲಿ ಪುರುಷನೆಂಬ ಹೆಸರುಳ್ಳ (ಭಗವಂತನನ್ನು)- ಪಾಲನ ಅಥವಾ ಪೂರಣ ಎಂಬ ಅರ್ಥವುಳ್ಳ 'ಪೃ' ಧಾತುವಿಗೆ '**ಕುಷನ್**' ಪ್ರತ್ಯಯವು ಸೇರಿ'ಪುರುಷ ' ಎಂದಾಗಿದೆ. ಧಾತುವಿನ ಋಕಾರಕ್ಕೆ ಆದೇಶವಾದ ಅಕಾರದ ಸ್ಥಾನದಲ್ಲಿ ಉಕಾರ ಬಂದಿದೆ- ಸ್ಮರಿಸುತ್ತ , **ಯಾತಿ ಪರಮಂ ಪುರುಷಂ** = ಪರಮಪುರುಷನನ್ನು ಹೊಂದುತ್ತಾನೆ. ಇಲ್ಲಿ '**ಪರಮಂ ಪುರುಷಂ**' ಎಂಬ ಹಿಂದಿನ ಪದಗಳು ಪುನಃ ಅನ್ವಯ ಪಡೆದಿವೆ. ।। 8 ।।

## ಪರದೇವತೆಯ ಹಿರಿಮೆ

**ಕವಿಂ ಪುರಾಣಮನುಶಾಸಿತಾರಂ**
**ಅಣೋರಣೀಯಾಂಸಮನುಸ್ಮರೇದ್ ಯಃ ।**
**ಸರ್ವಸ್ಯ ಧಾತಾರಮಚಿಂತ್ಯರೂಪಮ್**
**ಆದಿತ್ಯವರ್ಣಂ ತಮಸಃ ಪರಸ್ತಾತ್ ।। 9 ।।**

**ಅರ್ಥ**– ಆ ಪರಮ ಪುರುಷನು ಸರ್ವಜ್ಞನು . ಆದಿ ಇಲ್ಲದವನು. ಸಮಸ್ತಜಗತ್ತಿಗೆ ಶಾಸಕನು. ಅಣುವಿಗಿಂತಲೂ ಅಣುವಾದವನು. ಚರಾಚರಾತ್ಮಕವಾದ ಪ್ರಪಂಚದ ಧಾರಣ–ಪೋಷಣಗಳನ್ನು ಮಾಡತಕ್ಕವನು. ನಮ್ಮ ಮನಸ್ಸಿನಿಂದ ಪೂರ್ಣವಾಗಿ ತಿಳಿಯಲು ಅಶಕ್ಯನು. ಸೂರ್ಯಪ್ರಭನು. ಪ್ರಕೃತಿಯಿಂದಾಗಲಿ, ಮೃತ್ಯುವಿನಿಂದಾಗಲಿ ದೂರನಾದವನು. ಇಂತಹ ಪರಮಪುರುಷನನ್ನು ಯಾರು ನಿರಂತರವಾಗಿ ಸ್ಮರಿಸುವರೋ (ಅವರು ಆ ಪುರುಷನನ್ನು ಹೊಂದುವರು).

**ಕಥಂಭೂತಃ ಸ್ಮರ್ತವ್ಯೋಽಸೀತಿ ಪ್ರಕೃತಪ್ರಶ್ನಸ್ಯೋತ್ತರಮಾಹ- ಕವಿಮಿತಿ ।। ಕವಿಂ ಸರ್ವಜ್ಞಂ ಪುರಾಣಮನಾದಿಂ ಅನುಶಾಸಿತಾರಂ ಶಿಕ್ಷಕಂ ಅಣೋರಣೀ- ಯಾಂಸಮತ್ಯಂತಾಣುಪ್ರಮಾಣಂ ಸರ್ವಸ್ಯ ಚರಾಚರಾಖ್ಯವಿಶ್ವಸ್ಯ ಧಾತಾರಂ ಧಾರಣಪೋಷಣಕರ್ತಾರಂ ಅಚಿಂತ್ಯರೂಪಂ ಸಾಕಲ್ಯೇನ ಮನಸೋಽವಿಷಯಂ ಆದಿತ್ಯವರ್ಣಂ ರವಿಪ್ರಭಂ ತಮಸಃ ಪ್ರಕೃತೇರ್ಮೃತ್ಯೋರ್ವಾ । 'ಮೃತ್ಯುರ್ವಾವ ತಮ' ಇತಿ ಶ್ರುತೇಃ । ತಾಭ್ಯಾಂ ಪರಸ್ತಾತ್ ತದುಭಯಾಸ್ಪೃಷ್ಟತ್ವೇನ ಸ್ಥಿತಮಿತಿ ಶೇಷಃ ।। 9 ।।**

**ಅನುವಾದ** – ನಿನ್ನನ್ನು ಯಾವ ರೀತಿಯಿಂದ ಸ್ಮರಿಸತಕ್ಕದ್ದು ಎಂದು ಪ್ರಸ್ತುತವಾದ ಪ್ರಶ್ನೆಗೆ ಶ್ರೀಕೃಷ್ಣನು '**ಕವಿಂ**' ಇತ್ಯಾದಿ ಶ್ಲೋಕದಿಂದ ಉತ್ತರವನ್ನು ನೀಡುತ್ತಿದ್ದಾನೆ.

**ಕವಿಂ**= ಸರ್ವಜ್ಞನಾದ, **ಪುರಾಣಂ**= ಅನಾದಿಯಾದ, **ಅನುಶಾಸಿತಾರಂ**= ಶಿಕ್ಷಕನಾದ, **ಅಣೋಃ ಅಣೀಯಾಂಸಂ**= ಅತ್ಯಂತ ಅಣುಪರಿಮಾಣವುಳ್ಳ , **ಸರ್ವಸ್ಯ ಧಾತಾರಂ**= ಚರಾಚರವೆನಿಸಿದ ಸಮಸ್ತ ಜಗತ್ತಿಗೆ ಧಾರಣೆ ಮತ್ತು ಪೋಷಣೆಗಳನ್ನು ಮಾಡುವ, **ಅಚಿಂತ್ಯ ರೂಪಂ**= ಪೂರ್ಣವಾಗಿ ಮನಸ್ಸಿನಿಂದ ತಿಳಿಯಲು ಅಶಕ್ಯನಾದ, **ಆದಿತ್ಯವರ್ಣಂ**= ಸೂರ್ಯ ನಂತೆ ಪ್ರಭೆಯುಳ್ಳ . **ತಮಸಃ**= ಪ್ರಕೃತಿ ಅಥವಾ ಮೃತ್ಯು, '**ಮೃತ್ಯುರ್ವಾವ ತಮಃ**' ಎಂಬ ಶ್ರುತಿಗನುಸಾರವಾಗಿ ತಮಶ್ಶಬ್ದವು ಮೃತ್ಯು ಎಂಬ ಅರ್ಥವನ್ನೂ ಹೊಂದಿದೆ. **ಪರಸ್ತಾತ್**= ಇವೆರಡರಿಂದ ಸ್ಪರ್ಶಿಸಲ್ಪಡದೆ ಇರತಕ್ಕವನನ್ನು , ಇಲ್ಲಿ 'ಇರತಕ್ಕವನನ್ನು' ಎಂಬ ಪದವು ಶೇಷವಾಗಿದೆ. ॥ 9 ॥

## ಚರಮಶರೀರದ ಪಯಣ ಪದ್ಧತಿ

**ಪ್ರಯಾಣಕಾಲೇ ಮನಸಾಽಚಲೇನ**
**ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್**
**ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥ 10 ॥**

**ಅರ್ಥ**– ದೇಹತ್ಯಾಗಕಾಲದಲ್ಲಿ , ಭಕ್ತಿಯಿಂದ ಯುಕ್ತವಾಗಿ ಯೋಗಸಾಮರ್ಥ್ಯದಿಂದ ಎರಡು ಹುಬ್ಬುಗಳ ಮಧ್ಯೆ ಪ್ರಾಣವಾಯುವನ್ನು ಚೆನ್ನಾಗಿ ನಿಲ್ಲಿಸಿ ಅಚಲವಾದ ಮನಸ್ಸಿನಿಂದ ಭಗವಂತನನ್ನು ಸ್ಮರಿಸುವವವನು ಆ ಸೃಷ್ಟ್ಯಾದಿಕ್ರೀಡಾಗುಣವಿಶಿಷ್ಟನಾದ ಸರ್ವೋತ್ತಮನಾದ ಪುರುಷನನ್ನು ಹೊಂದುವನು.

**ಭಕ್ತ್ಯಾ ಯುಕ್ತಃ ಸನ್ ಪ್ರಯಾಣಕಾಲೇ ಯೋಗಬಲೇನ ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯಾಚಲೇನ ಮನಸಾ ಯಃ ಸ್ಮರೇತ್ ಸ ದಿವ್ಯಂ ಪರಂ ಉತ್ತಮಂ ಪುರುಷಮುಪೈತಿ ಇತಿ ಯೋಜನಾ ।**

**ಅನುವಾದ**– ಭಕ್ತಿಯಿಂದ ಯುಕ್ತನಾಗಿ, ಮರಣಕಾಲದಲ್ಲಿ ಯೋಗಬಲದಿಂದ ಹುಬ್ಬುಗಳ ಮಧ್ಯೆ, ಪ್ರಾಣನನ್ನು ನಿಲ್ಲಿಸಿ, ಅಚಲವಾದ ಮನಸ್ಸಿನಿಂದ ಯಾವನು ಸ್ಮರಿಸುವನೋ ಅವನು ಸೃಷ್ಟ್ಯಾದಿ ಕ್ರೀಡಾದಿಗುಣವಿಶಿಷ್ಟನಾದ ಉತ್ತಮನಾದ ಪುರುಷನನ್ನು ಹೊಂದುವನು ಎಂದು (ಈ ಶ್ಲೋಕದಲ್ಲಿ) ಪದಗಳ ಯೋಜನೆಯು ವಿವಕ್ಷಿತವಾಗಿದೆ.

**ಅತ್ರಾದಿತ್ಯವರ್ಣಮಿತಿ ಸಶರೀರತ್ವಪ್ರಾಪ್ತೇರ್ಜನ್ಮಾದಿಪ್ರಸಂಗಃ ಇತಿ ಶಂಕಾ–**

**ವ್ಯುದಾಸಾಯ ತಮಸಃ ಪರಸ್ತಾದಿತ್ಯುಕ್ತಮ್ । ತದ್ದೇಹಸ್ಯಾಪ್ರಾಕೃತತ್ವಾನ್ನ ಜನ್ಮಾದಿ-ದೋಷ ಇತಿ ಭಾವಃ । ಯೋಗಬಲೇನೈವ ಭ್ರುವೋರ್ಮಧ್ಯೇ ಪ್ರಾಣ-ಮಾವೇಶ್ಯೇತ್ಯೇತದ್ ವಾಯುಜಯಾದಿಮನ್ಮಾತ್ರಾಸಾಧಾರಣಮ್ । ನತು ಉಚ್ಚಿಕ್ರಮಿಷೋಃ ಸರ್ವಸ್ಯ ಸಾಧಾರಣಮ್ । ವಾಯುಜಯಹೀನಾನಾಂ ಜ್ಞಾನ-ಭಕ್ತಿ-ವೈರಾಗ್ಯಪೂರ್ತ್ಯೈವ ಮುಕ್ತಿಸಿದ್ಧೇಃ । ವಾಯುಜಯಾದಿಮತಾಂ ತು ಈಷದ್-ಜ್ಞಾನಾದ್ಯಸಂಪೂರ್ತಾವಪಿ ವಾಯುಜಯಾದೌ ನಿಪುಣಾನಾಂ ತದ್ಬಲಾದೇವಾಲ್ಪ-ಮುಕ್ತಿಃ ಕಿಂಚಿತ್ ಶೀಘ್ರಂ ಚ ಭವತೀತಿ ವಿಶೇಷ ಇತಿ ॥ 10 ॥**

**ಅನುವಾದ–** ಇಲ್ಲಿ (9ನೇ ಶ್ಲೋಕದಲ್ಲಿ) **'ಆದಿತ್ಯವರ್ಣಂ'** ಸೂರ್ಯನಂತೆ ಪ್ರಭೆಯುಳ್ಳವನು ಎಂದು ಹೇಳಿದ್ದರಿಂದ ಭಗವಂತನಿಗೂ ದೇಹವಿದೆ ಎಂದು ಹೇಳಿದಂತಾಗುವುದರಿಂದ,ಅವನಿಗೂ ಜನನ-ಮರಣಾದಿ ಒಪ್ಪಬೇಕಾದೀತು ಎಂಬ ಶಂಕೆಯನ್ನು ಪರಿಹರಿಸುವಸಲುವಾಗಿ **'ತಮಸಃ ಪರಸ್ತಾತ್'** ಎಂದು ಹೇಳಲಾಗಿದೆ. ಭಗವಂತನ ದೇಹವು ಅಪ್ರಾಕೃತವಾದುದ್ದರಿಂದ ಜನ್ಮಾದಿದೋಷವಿಲ್ಲವೆಂದು ಭಾವ.

ಯೋಗಬಲದಿಂದಲೇ ಹುಬ್ಬುಗಳ ಮಧ್ಯೆ ಪ್ರಾಣವನ್ನು ನಿಲ್ಲಿಸಿ ಎನ್ನುವುದು ವಾಯುಜಯವನ್ನು ಪಡೆದಿರುವವರಿಗೆ ಮಾತ್ರ ಸಂಬಂಧಿಸಿದುದು ಹೊರತು ದೇಹತ್ಯಾಗ ಮಾಡಲಿರುವ ಎಲ್ಲರಿಗೂ ಸಂಬಂಧಿಸಿದ್ದಲ್ಲ. ಪ್ರಾಣವಾಯುಜಯವಿಲ್ಲದಿದ್ದವರಿಗೆ ಜ್ಞಾನಭಕ್ತಿ ವೈರಾಗ್ಯಗಳು ಪೂರ್ಣವಾದದ್ದರಿಂದಲೇ ಮೋಕ್ಷವು ಸಿದ್ಧಿಸುವುದು. ವಾಯುಜಯವಿದ್ದವರಿಗೆ ಜ್ಞಾನಾದಿಗಳು ಸ್ವಲ್ಪ ಕಡಿಮೆ ಇದ್ದರೂ ಪ್ರಾಣವಾಯುನಿರೋಧದಲ್ಲಿರುವ ನೈಪುಣ್ಯದ ಬಲದಿಂದ ಅಲ್ಪಮುಕ್ತಿಯು ಸ್ವಲ್ಪ ಶೀಘ್ರವಾಗಿಯೇ ಉಂಟಾಗುವುದು ವಿಶೇಷವಾಗಿದೆ. ॥ 10 ॥

**ಯದಕ್ಷರಂ ವೇದವಿದೋ ವದಂತಿ**
**ವಿಶಂತಿ ಯದ್ಯತಯೋ ವೀತರಾಗಾಃ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥ 11 ॥**

**ಅರ್ಥ–** ಮುಮುಕ್ಷುಗಳಿಗೆ ಗಮ್ಯವಾದ ಯಾವ ಭಗವಂತನ ಸ್ವರೂಪವನ್ನು ಸರ್ವಥಾ ನಾಶರಹಿತವಾದುದೆಂದೂ ವೇದವಿದರು ಹೇಳುವರೋ, ಯಾವ ಸ್ವರೂಪವನ್ನು ಕಾಮಾದಿ ದೋಷಗಳನ್ನು ಕಳೆದುಕೊಂಡ ಪ್ರಯತ್ನಶೀಲರು ಪ್ರವೇಶಿಸುವರೋ, ಯಾವ ಸ್ವರೂಪವನ್ನು ಪಡೆಯಲು ಇಚ್ಛಿಸುವ ಮುಮುಕ್ಷುಗಳು ತಮ್ಮ ಮನಸ್ಸು ಮೊದಲಾದ ಇಂದ್ರಿಯಗಳನ್ನು

ಪರಬ್ರಹ್ಮನಲ್ಲೇ ನೆಲೆಸುವಂತೆ ಮಾಡುವ ಮೂಲಕ ಬ್ರಹ್ಮಚರ್ಯವನ್ನು ಅನುಷ್ಠಾನ ಮಾಡುವರೋ ಆ ಭಗವಂತನ ಸ್ವರೂಪವನ್ನು ಸಂಕ್ಷೇಪವಾಗಿ ಹೇಳುವೆನು.

**ವಾಯುಜಯಾದಿಮತಾಂ ಮರಣಕಾಲೇ ಕರ್ತವ್ಯಮೇವ ಸಧ್ಯೇಯಂ ಸ್ಪಷ್ಟಯತಿ- ಯದಕ್ಷರಮಿತಿ ॥ ಯದ್ವಾ ಕೇನ ಪ್ರಕಾರೇಣ ಸ್ಮರ್ತವ್ಯೋಽಸಿ ಇತಿ ಪ್ರಶ್ನಸ್ಯೋತ್ತರಂ ಸಧ್ಯೇಯಮುಚ್ಯತೇ ॥ ಏತದಕ್ಷರಮಿತ್ಯಾದಿತ್ರಿಭಿಃ । ಯತ್ಪದಂ ಅಕ್ಷರಂ ಸರ್ವಥಾ ನಾಶರಹಿತಂ ವೇದವಿದೋ ವದಂತಿ । ಯಚ್ಚ ಪದಂ ವೀತರಾಗಾಃ ಅಪಗತಕಾಮಾದಿದೋಷಾಃ ಯತಯಃ ಯತ್ನಶೀಲಾಃ ವಿಶಂತಿ ಪ್ರವಿಶಂತಿ । ಯಚ್ಚ ಪದಮಿಚ್ಛಂತಃ ಬ್ರಹ್ಮಚರ್ಯಂ ಮನ ಆದೀನಾಂ ಬ್ರಹ್ಮಣಿ ಚರಣಂ ಬ್ರಹ್ಮಚರ್ಯಂ ಚರಂತಿ ಅನುತಿಷ್ಠಂತಿ ತತ್ಪದಂ ಪದ್ಯತೇ ಮುಮುಕ್ಷುಭಿಃ ಪ್ರಾಪ್ಯತ ಇತಿ ಪದಮ್ । ಪದ್ಲೃ ಗತಾವಿತ್ಯತಃ ಕರ್ಮಣ್ಯಕಾರಪ್ರತ್ಯಯಃ । ಸ್ವರೂಪಂ ಸಂಗ್ರಹೇಣ ಸಂಕ್ಷೇಪೇಣ ಪ್ರವಕ್ಷ್ಯೇ । ತತ್ಪದಸ್ಮರಣಪ್ರಕಾರಂ ಪ್ರವಕ್ಷ್ಯಾಮೀತ್ಯರ್ಥಃ ॥ 11 ॥**

**ಅನುವಾದ–** ವಾಯುಜಯ ಮೊದಲಾದವನ್ನು ಪಡೆದವರು ಮರಣಕಾಲದಲ್ಲಿ ಮಾಡಬೇಕಾದುದನ್ನೇ ಧ್ಯೇಯದೊಂದಿಗೆ '**ಯದಕ್ಷರಂ**' ಎಂಬ ಶ್ಲೋಕದಲ್ಲಿ ಶ್ರೀಕೃಷ್ಣನು ಸ್ಪಷ್ಟಪಡಿಸುತ್ತಿದ್ದಾನೆ. ಅಥವಾ, ಯಾವ ಪ್ರಕಾರದಿಂದ ನಿನ್ನನ್ನು ಸ್ಮರಿಸಬೇಕು ಎಂಬ ಪ್ರಶ್ನೆಗೆ ಉತ್ತರವನ್ನು ಧ್ಯೇಯವಸ್ತುವಿನೊಂದಿಗೆ '**ಯದಕ್ಷರಂ**' ಇತ್ಯಾದಿ ಮೂರು ಶ್ಲೋಕಗಳಿಂದ ಹೇಳಲಾಗಿದೆ- ಯಾವ ಭಗವಂತನ ಸ್ವರೂಪವನ್ನು, **ಅಕ್ಷರಂ**= ಸರ್ವಥಾ ನಾಶರಹಿತವಾದುದೆಂದು ವೇದವಿದರು ಹೇಳುವರೋ, ಯಾವ ಸ್ವರೂಪವನ್ನು, **ವೀತರಾಗಾಃ**= ಕಾಮಾದಿ ದೋಷಗಳನ್ನು ಕಳೆದುಕೊಂಡ, **ಯತಯಃ**= ಪ್ರಯತ್ನಶೀಲರು, **ವಿಶಂತಿ**= ಪ್ರವೇಶಿಸುವರೋ, ಯಾವ ಭಗವತ್ಸ್ವರೂಪವನ್ನು ಹೊಂದಲು ಇಚ್ಛಿಸುವವರು, **ಬ್ರಹ್ಮಚರ್ಯಂ**= ಮನಸ್ಸು ಮೊದಲಾದವುಗಳು ಪರಬ್ರಹ್ಮನೆಡೆಗೆ ಹರಿಯುವುದು ಬ್ರಹ್ಮಚರ್ಯ. ಇಂತಹ ಬ್ರಹ್ಮಚರ್ಯವನ್ನು, **ಚರಂತಿ**= ಅನುಷ್ಠಿಸುವರೋ, **ತತ್‌ಪದಂ ಪದ್ಯತೇ**= ಮುಮುಕ್ಷುಗಳಿಂದ ಹೊಂದಲ್ಪಡುವುದಾದ್ದರಿಂದ ಪದವೆನಿಸುವ ಭಗವಂತನ ಸ್ವರೂಪವನ್ನು– **ಪದ್‌ಲೃ ಗತೌ** ಎಂಬ ಧಾತುವಿಗೆ ಕರ್ಮ ಎಂಬ ಅರ್ಥದಲ್ಲಿ ಅಕಾರಪ್ರತ್ಯಯ ಸೇರಿ ಪದವೆಂಬ ಶಬ್ದ ನಿಷ್ಪನ್ನವಾಗಿದೆ- **ಸಂಗ್ರಹೇಣ**= ಸಂಕ್ಷೇಪವಾಗಿ, **ಪ್ರವಕ್ಷ್ಯೇ**= ಭಗವಂತನ ಸ್ವರೂಪವನ್ನು ಸ್ಮರಿಸುವ ಪ್ರಕಾರವನ್ನು ಹೇಳುವೆನು ಎಂದು ಅರ್ಥ. ॥ 11 ॥

**ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್ ॥ 12 ॥**

**ಅರ್ಥ** – ಪ್ರಾಣವಾಯುವು ಸಂಚರಿಸುವ ಸುಷುಮ್ನಾನಾಡಿಯನ್ನುಳಿದು ಇತರ ಎಲ್ಲ ನಾಡಿಗಳನ್ನು ನಿಯಂತ್ರಿಸಿ, ಹೃನ್ನಾಮಕನಾದ ಭಗವಂತನಲ್ಲಿ ಮನಸ್ಸನ್ನು ನಿಲ್ಲಿಸಿ, ತನ್ನ ಪ್ರಾಣವಾಯುವನ್ನು ಸುಷುಮ್ನಾಮಾರ್ಗದಿಂದ ಬ್ರಹ್ಮರಂಧ್ರಕ್ಕೆ ತಂದು ನಿಲ್ಲಿಸಿ ಭಗವಂತನ ಅಖಂಡಸ್ಮರಣೆಯಲ್ಲೇ ನಿರತನಾಗಬೇಕು.

**ಏವಂ ಧ್ಯೇಯಸ್ವರೂಪಂ ತತ್ಸ್ಮರಣಪ್ರಕಾರೋಕ್ತಿಂ ಚ ಪ್ರತಿಜ್ಞಾಯೇದಾನೀಂ ತತ್ಪ್ರಕಾರಮಾಹ– ಸರ್ವೇತಿ ॥ ಸರ್ವದ್ವಾರಾಣಿ ವಾಯುಸಂಚಾರಸ್ಥಾನಸರ್ವಸುಷುಮ್ನೇತರನಾಡೀರ್ನಿಯಮ್ಯ । ಹೃದಿ ಹರತಿ ಜಗದಿತಿ ಹೃನ್ನಾಮಕೇ ನಾರಾಯಣೇ । ಹರತೇಃ ಕ್ವಿಪ್ । ಹ್ರಸ್ವಸ್ಯ ಪಿತಿ ಕೃತಿ ತುಕ್ । ಮನೋ ನಿರುಧ್ಯ ಚಾತ್ಮನಃ ಪ್ರಾಣಂ ಪ್ರಾಣವಾಯುಂ ಮೂರ್ಧ್ನಿ ಸುಷುಮ್ನಾಮಾರ್ಗೇಣ ಬ್ರಹ್ಮರಂಧ್ರೇ ಆಧಾಯ ಯೋಗಧಾರಣಾಂ ಆಸ್ಥಿತಃ ಅಖಂಡಸ್ಮೃತಿರೂಪಯೋಗಧಾರಣ ಏವಾಭಿಯುಕ್ತ ಇತ್ಯರ್ಥಃ ॥ 12 ॥**

**ಅನುವಾದ** – ಹೀಗೆ ಧ್ಯಾನಿಸಬೇಕಾದ ಭಗವಂತನ ಸ್ವರೂಪವನ್ನೂ , ಅದರ ಸ್ಮರಣ ಮಾಡುವ ಪ್ರಕಾರವನ್ನೂ ಹೇಳುವೆನೆಂದು ಪ್ರತಿಜ್ಞೆ ಮಾಡಿ ಈಗ ಸ್ಮರಿಸುವ ಪ್ರಕಾರವನ್ನು '**ಸರ್ವ**' ಎಂಬ ಶ್ಲೋಕದಿಂದ ಶ್ರೀಕೃಷ್ಣನು ಹೇಳುತ್ತಿದ್ದಾನೆ–

**ಸರ್ವದ್ವಾರಾಣಿ ನಿಯಮ್ಯ**= ಪ್ರಾಣವಾಯುವಿನ ಸಂಚಾರಸ್ಥಾನವಾದ ನಾಡಿಗಳಲ್ಲಿ ಸುಷುಮ್ನಾನಾಡಿ ಬಿಟ್ಟು ಉಳಿದೆಲ್ಲ ನಾಡಿಗಳನ್ನು ನಿಯಂತ್ರಿಸಿ, **ಹೃದಿ= ಹರತಿ ಜಗತ್** ಜಗತ್ತನ್ನು ಸಂಹರಿಸುವನು ಎಂಬ ನಿಮಿತ್ತದಿಂದ 'ಹೃತ್' ಎಂದು ಕರೆಸಿಕೊಳ್ಳುವ ನಾರಾಯಣನಲ್ಲಿ – '**ಹೃ**' ಧಾತುವಿಗೆ '**ಕ್ವಿಪ್**' ಪ್ರತ್ಯಯ ಬಂದಿದೆ. '**ಹ್ರಸ್ವಸ್ಯ ಪಿತಿ ಕೃತಿ ತುಕ್**' (ಪಾ.ಸೂ. 6.1.71) ಹ್ರಸ್ವಾಂತವಾದ ಧಾತುವಿಗೆ ಪಿತ್ ಆಗಿರುವ ಕೃತ್ ಪ್ರತ್ಯಯವು ಪರವಾಗಿದ್ದಲ್ಲಿ ತುಗಾಗಮವು ಬರುವುದು' ಎಂಬ ಸೂತ್ರಾನುಗುಣವಾಗಿ ತುಗಾಗಮವು ಬಂದು '**ಹೃತ್**' ಎಂಬ ರೂಪ ವಾಗುವುದು. ಮನಸ್ಸನ್ನು ನೆಲೆಮಾಡಿ, ಆತ್ಮನಃ **ಪ್ರಾಣಂ**= ತನ್ನ ಪ್ರಾಣವಾಯುವನ್ನು , **ಮೂರ್ಧ್ನಿ ಆಧಾಯ**= ಸುಷುಮ್ನಾ ಮಾರ್ಗದಿಂದ ಬ್ರಹ್ಮರಂಧ್ರದಲ್ಲಿ ತಂದು ನಿಲ್ಲಿಸಿ, **ಯೋಗಧಾರಣಾಮ್ ಆಸ್ಥಿತಃ** = ಅಖಂಡಸ್ಮರಣ ರೂಪವಾದ ಯೋಗಧಾರಣದಲ್ಲೇ ನಿರತನಾಗಬೇಕು ಎಂದು ಅರ್ಥ. ॥ 12 ॥

**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ॥ 13 ॥**

**ಅರ್ಥ**–'ಓಂ'ಎನ್ನುತ್ತಾ ಓಂಕಾರವಾಚ್ಯನಾದ ಪರಬ್ರಹ್ಮನಾದ ನನ್ನನ್ನು ಸ್ಮರಿಸುತ್ತ ಯಾರು ದೇಹವನ್ನು ತ್ಯಜಿಸಿ ಮರಣ ಹೊಂದುವನೋ ಅವನು ಶ್ರೇಷ್ಠವಾದ ಗತಿಯನ್ನು ಹೊಂದುವನು.

**ಓಮಿತ್ಯೇಕಮಕ್ಷರಂ ವಾಚಕಂ ಯಸ್ಯ ತದೋಮಿತ್ಯೇಕಾಕ್ಷರಂ ಬ್ರಹ್ಮ ಪರಂ ಬ್ರಹ್ಮ ಮಾಂ ವ್ಯಾಹರನ್ನನುಸ್ಮರನ್ ಓಂ ಇತ್ಯುಚ್ಚಾರ್ಯ ತದ್‌ವಾಚ್ಯಂ ಬ್ರಹ್ಮರೂಪಂ ಮಾಮನುಸ್ಮರನ್ಯಃ ದೇಹಂ ತ್ಯಜನ್‌ಪ್ರಯಾತಿ ಪ್ರೈತಿ ಸ ಯಾತಿ ಪರಮಾಂ ಗತಿಮ್ ॥ 13 ॥**

**ಅನುವಾದ**– 'ಓಂ' ಎಂಬ ಒಂದು ಅಕ್ಷರವು ಯಾರಿಗೆ ವಾಚಕವಾಗಿರುವುದೋ ಅವನು ಓಮಿತಿ ಏಕಾಕ್ಷರನು. ಅಂತಹ ಬ್ರಹ್ಮ = ಪರಬ್ರಹ್ಮನಾದ ನನ್ನನ್ನು , ವ್ಯಾಹರನ್ = 'ಓಂ' ಎಂದು ಉಚ್ಚರಿಸಿ ಅದರಿಂದ ವಾಚ್ಯನಾದ ಬ್ರಹ್ಮರೂಪನಾದ ನನ್ನನ್ನು ನಿರಂತರ ಸ್ಮರಿಸುತ್ತ– ಯಾರು ದೇಹವನ್ನು ತ್ಯಜಿಸಿ, ಪ್ರಯಾತಿ= ಮೃತಿ ಹೊಂದುವನೋ ಅವನು ಉತ್ತಮಗತಿಯನ್ನು ಹೊಂದುವನು. ॥ 13 ॥

## ನಿರಂತರ ನೆನೆವವರಿಗೆ ನಾನು ಅಂತ್ಯಕಾಲಕ್ಕೊದಗುವೆ

**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥ 14 ॥**

**ಅರ್ಥ**– ಪಾರ್ಥ ! ಸತತವಾಗಿ ಅನನ್ಯಮನಸ್ಕನಾಗಿ ಯಾರು ನನ್ನನ್ನು ನಿತ್ಯವೂ ಸ್ಮರಿಸುವನೋ ಅಂತಹ ನಿತ್ಯವೂ ಪರಿಪೂರ್ಣವೂ ಆದ ಸಾಧನವುಳ್ಳವನಿಗೆ ಅಂತಕಾಲದಲ್ಲಿ ನಾನು ಸ್ಮೃತಿ ವಿಷಯನಾಗುವೆನು , ಲಭಿಸುವೆನು.

**ಅಂತಕಾಲೇ ಮತ್ ಸ್ಮರಣಂ ನಿತ್ಯಾಭ್ಯಾಸವತ ಏವ ಭವತಿ ನಾನ್ಯಥೇತಿ ಸ್ಪಷ್ಟಮಾಹ– ಅನನ್ಯಚೇತಾ ಇತಿ ॥ ಸತತಮನ್ಯವಿಷಯಕಚೇತೋಹೀನಃ ಸನ್ ಯೋ ಮಾಂ ನಿತ್ಯಶಃ ಸ್ಮರತಿ ತಸ್ಯ ನಿತ್ಯಯುಕ್ತಸ್ಯ ನಿತ್ಯೋಪಾಯವತಃ ಯೋಗಿನಃ ಸಂಪೂರ್ಣೋಪಾಯವತಃ ಅಹಂ ಸುಲಭಃ ಅಂತಕಾಲೇ ಸ್ಮೃತಿವಿಷಯೋ ಭವಾನೀತ್ಯರ್ಥಃ । ಯದ್ವಾ ಸುಲಭಃ ಸುಖೇನ ಲಭ್ಯಃ ಪ್ರಾಪ್ಯ ಇತ್ಯರ್ಥಃ ॥ 14 ॥**

**ಅನುವಾದ** – ಅಂತಕಾಲದಲ್ಲಿ ನನ್ನ ಸ್ಮರಣೆಯು ನಿತ್ಯವೂ ಅಭ್ಯಾಸವುಳ್ಳವನಿಗೆ ಮಾತ್ರ

ಉಂಟಾಗುವುದು, ಇಲ್ಲದಿದ್ದಲ್ಲಿ ಇಲ್ಲವೆಂದು ಸ್ಪಷ್ಟವಾಗಿ ಶ್ರೀಕೃಷ್ಣನು '**ಅನನ್ಯಚೇತಾಃ**' ಎಂಬ ಶ್ಲೋಕದಲ್ಲಿ ಹೇಳುತ್ತಿದ್ದಾನೆ.

ಸತತವಾಗಿ ಅನ್ಯವಿಷಯಕ ಚಿತ್ತರಹಿತನಾಗಿ ಯಾರು ನನ್ನನ್ನು ನಿತ್ಯವೂ ಸ್ಮರಿಸುವನೋ ಅಂತಹ, **ನಿತ್ಯಯುಕ್ತಸ್ಯ**= ನಿತ್ಯವಾದ ಉಪಾಯವುಳ್ಳ , **ಯೋಗಿನಃ**= ಪರಿಪೂರ್ಣವಾದ ಉಪಾಯವುಳ್ಳವನಿಗೆ, **ಅಹಂ ಸುಲಭಃ**= ನಾನು ಅಂತಕಾಲದಲ್ಲಿ ಸ್ಮೃತಿವಿಷಯನಾಗುವೆನು. ಅಥವಾ, **ಸುಲಭಃ** ಸುಖದಿಂದ, **ಲಭ್ಯನು**= ಪ್ರಾಪ್ಯನು ಎಂದರ್ಥ. ॥ 14 ॥

**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।**
**ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥ 15 ॥**

**ಅರ್ಥ**– ಜ್ಞಾನಿಗಳು ನನ್ನನ್ನು ಪಡೆದು ಅತ್ಯುತ್ತಮ ಗತಿಯನ್ನು ಹೊಂದಿದ ಕಾರಣ ದುಃಖಕ್ಕೆ ಆಶ್ರಯವೂ, ಅನಿತ್ಯವೂ ಆದ ದೇಹಸಂಬಂಧ ರೂಪವಾದ ಜನ್ಮವನ್ನು ಪುನಃ ಹೊಂದುವುದಿಲ್ಲ.

**ಪ್ರಾಗುಕ್ತಪರಮಗತಿಃ ಕೇತ್ಯತೋ ಮತ್ಪ್ರಾಪ್ತಿರೂಪೇತಿ ತದುಪಾಯೋಕ್ತಿ-ಪೂರ್ವಂ ಪರಮಗತಿವಿವರಣಾರ್ಥೋಽಯಂ ಶ್ಲೋಕಃ । ಅತ ಏವ ಪರಮಗತಿಃ ಸುಲಭ ಇತ್ಯುಕ್ತಭಗವಲ್ಲಾಭಶ್ಚ ತತ್ಪ್ರಾಪ್ತಿರೂಪಮೇವ ಫಲಮಿತಿ ಭಾವೇನ ತತ್ಪ್ರಾಪ್ತಿಂ ಸ್ತೌತಿ- ಮಾಮಿತಿ ॥ ಮಹಾತ್ಮಾನೋ ಜ್ಞಾನಿನಃ ಮಾಮುಪೇತ್ಯ ಪ್ರಾಪ್ಯ ದುಃಖಾಲಯಂ ದುಃಖಾಶ್ರಯಂ ಅಶಾಶ್ವತಂ ಅನಿತ್ಯಂ ನಾಶಶಿರಸ್ಕಂ ಜನ್ಮ ದೇಹಯೋಗಂ ಪುನರ್ನಾಪ್ನುವಂತಿ । ಕುತಃ ಯತಃ ಪರಮಾಂ ಸಂಸಿದ್ಧಿಂ ಮೋಕ್ಷಲಕ್ಷಣಾಂ ಗತಾಃ ಪ್ರಾಪ್ತಾಃ । ತತ ಇತಿ ಯೋಜನಾ ॥ 15 ॥**

**ಅನುವಾದ**– ಹಿಂದೆ ಹೇಳಿದ ಪರಮಗತಿಯು ಯಾವುದು ಎಂಬ ಪ್ರಶ್ನೆಗೆ ಅದು ಮತ್ಪ್ರಾಪ್ತಿರೂಪವಾದುದೆಂದು ತಿಳಿಸಿ ಅದರ ಸಾಧನವನ್ನು ಹೇಳಿ ಪರಮಗತಿಯನ್ನು ವಿವರಿಸುವುದಕ್ಕಾಗಿ ಈ ಶ್ಲೋಕ ಬಂದಿದೆ. ಆದ್ದರಿಂದಲೇ, ಪರಮಗತಿಯು ಸುಲಭ ಎಂದು ಹೇಳಲಾದ ಭಗವಂತನ ಲಾಭವು ಭಗವತ್ಪ್ರಾಪ್ತಿರೂಪವಾದ ಫಲವೇ ಆಗಿದೆ ಎಂಬ ಆಶಯದಿಂದ ಭಗವಂತನ ಪ್ರಾಪ್ತಿಯನ್ನು '**ಮಾಮ್**' ಎಂಬ ಶ್ಲೋಕದಲ್ಲಿ ಸ್ತುತಿಸಲಾಗಿದೆ.

**ಮಹಾತ್ಮಾನಃ** = ಜ್ಞಾನಿಗಳು, **ಮಾಮುಪೇತ್ಯ**= ನನ್ನನ್ನು ಹೊಂದಿ, **ದುಃಖಾಲಯಂ**= ದುಃಖಕ್ಕೆ ಆಶ್ರಯವಾದ, **ಅಶಾಶ್ವತಂ** = ಅನಿತ್ಯವಾದ , ಮುಂದೆ ನಾಶ ಹೊಂದುವ, **ಜನ್ಮ** = ದೇಹದ ಸಂಬಂಧವನ್ನು , ಪುನಃ ಹೊಂದುವುದಿಲ್ಲ. ಏಕೆಂದರೆ, ಯಾವ ಕಾರಣದಿಂದ,

**ಪರಮಾಂ ಸಂಸಿದ್ಧಿಂ** = ಮೋಕ್ಷರೂಪವಾದ ಪರಮಗತಿಯನ್ನು , **ಗತಾಃ** = ಹೊಂದಿರುವವರೋ ಆದ್ದರಿಂದ – ಎಂದು ಯೋಜನೆ. ॥ 15 ॥

## ನನ್ನನ್ನು ಹೊಂದಿದವರಿಗೆ ಪುನರ್ಜನ್ಮವಿಲ್ಲ

**ಆಬ್ರಹ್ಮಭವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ 16 ॥**

**ಅರ್ಥ–** ಅರ್ಜುನ ! ಮೇರುಪರ್ವತದಲ್ಲಿರುವ ಚತುರ್ಮುಖ ಬ್ರಹ್ಮನ ಸ್ಥಾನವನ್ನಾರಂಭಿಸಿ ಅದರ ಕೆಳಗಿನ ಲೋಕಗಳಿಗೆ ಹೋದ ಜೀವರು ಪುನಃ ಭೂಮಿಗೆ ಬಂದು ಜನನಾದಿಗಳನ್ನು ಪಡೆಯುವರು. ಕೌಂತೇಯ ! ಮೇರುವಿನಲ್ಲಿರುವ ಬ್ರಹ್ಮಸದನದಿಂದ ಮತ್ತು ಜನೋ-ಲೋಕದಿಂದ ಮೇಲಿನ ಲೋಕದಲ್ಲಿದ್ದವರಿಗೆ ನನ್ನನ್ನು ಹೊಂದಿರುವವರಿಗೆ ಪುನರ್ಜನ್ಮವಿರುವುದಿಲ್ಲ.

**ಬ್ರಹ್ಮಾದೀನ್ ಪ್ರಾಪ್ತಾನಾಮಪಿ ಪುನರ್ಜನ್ಮಾಭಾವಾತ್ ಕಿಂ ವಿಶಿಷ್ಯೋಚ್ಯತೇ ಮಾಮುಪೇತ್ಯೇತ್ಯಾದಿ ತತ್ರಾಹ– ಆಬ್ರಹ್ಮೇತಿ ॥ ಆಜತ್ರಾಭಿವಿಧೌ । ಮೇರುಸ್ಥ-ಬ್ರಹ್ಮಸದನಾದಾರಭ್ಯಾರ್ವಾಕ್ತನಾಃ ಲೋಕಾಃ । ತತ್ರ ಗತಾಃ ಜನಾ ಇತಿ ಯಾವತ್। ಪುನರಾವರ್ತಿನಃ ಪುನರ್ಭೂಮಾವಾಗತ್ಯ ಜನ್ಮಾದಿಮಂತೋ ಭವಂತೀತ್ಯರ್ಥಃ ।**

**ಅನುವಾದ–** ಬ್ರಹ್ಮಾದಿ ದೇವತೆಗಳನ್ನು ಹೊಂದಿದವರಿಗೂ ಪುನರ್ಜನ್ಮವಿಲ್ಲದಿರುವುದರಿಂದ ನನ್ನನ್ನು ಹೊಂದಿದವರಿಗೆ ಪುನರ್ಜನ್ಮವಿಲ್ಲವೆಂದು ಶ್ರೀಕೃಷ್ಣನು ಹೇಳುವುದರಲ್ಲಿ ವಿಶೇಷವೇನಿದೆ ಎಂಬ ಶಂಕೆಗೆ **'ಆ ಬ್ರಹ್ಮ'** ಇತ್ಯಾದಿಶ್ಲೋಕದಲ್ಲಿ ಉತ್ತರವನ್ನು ಹೇಳಲಾಗಿದೆ. **'ಆ ಬ್ರಹ್ಮ'** ಎಂಬಲ್ಲಿರುವ **'ಆಙ್'** ಎಂಬ ಉಪಸರ್ಗವು **'ಅಭಿವಿಧಿ'** ಅದು ಮತ್ತು ಅಲ್ಲಿಂದ ತೊಡಗಿದ್ದು ಎಂದು ಅರ್ಥವನ್ನು ಹೇಳುವುದು. ಮೇರುಪರ್ವತದಲ್ಲಿರುವ ಬ್ರಹ್ಮಸದನ ಮತ್ತು ಬ್ರಹ್ಮಸದನವನ್ನು ಆರಂಭಿಸಿ ಅದರ ಕೆಳಗಿನ ಲೋಕಗಳು– ಆ ಲೋಕಗಳಿಗೆ ಹೋದ ಜನರು ಎಂದು ತಾತ್ಪರ್ಯ– **ಪುನರಾವರ್ತಿನಃ**= ಪುನಃ ಭೂಮಿಗೆ ಆಗಮಿಸಿ ಜನ್ಮಾದಿಗಳನ್ನು ಹೊಂದುವರು ಎಂದು ಅರ್ಥ.

**ನನು ಮೇರುಸ್ಥಬ್ರಹ್ಮಸದನಾದಾರಭ್ಯಾರ್ವಾಕ್ತನಲೋಕಸ್ಥಾಃ ಪುನರಾವರ್ತಿನ ಇತ್ಯುಕ್ತ್ಯಾ ಅರ್ಥಾತ್ 'ಆಮೇರುಬ್ರಹ್ಮಸದನಾದಾಜನಾನ್ನ ಜನಿರ್ಭುವಿ' (ನಾರಾ. ಗೋ. ಕಲ್ಪೇ) ಇತಿ ಸ್ಮೃತ್ಯಾ ಚ ತತ ಉಪರಿತನಲೋಕಸ್ಥಾಃ ನ ಪುನರಾವರ್ತಿನ ಇತಿ ಪ್ರಾಪ್ತತ್ವಾತ್ ಮಾಮುಪೇತ್ಯ ಪುನರ್ಜನ್ಮ ನಾಪ್ನುವಂತೀತಿ ಕಥಮುಚ್ಯತ ಇತ್ಯತಃ ತದೇವ ಪುನರಾಹ– ಮಾಮಿತಿ ॥ ಸತ್ಯಮ್ । ಮೇರುಸ್ಥಬ್ರಹ್ಮಸದನಾಜ್ಜನೋ-**

**ಲೋಕಾಚ್ಚೋಪರಿಸ್ಥಿತಾನಾಂ ಜನಿರ್ನೇತಿ । ತಥಾಽಪಿ ತಲ್ಲೋಕಸ್ಥತ್ವಮಾತ್ರಂ ನ ಜನ್ಮಾಭಾವೇ ಪ್ರಯೋಜಕಂ ಕಿಂತು ತತ್ರ ಸ್ಥಿತಂ ಮಾಮುಪೇತ್ಯ ಸ್ಥಿತಾನಾಮೇವ ಜನ್ಮ ಪುನರ್ನ ವಿದ್ಯತೇ । ಅತಃ ಪ್ರಾಗುಕ್ತಂ ನಾಯುಕ್ತಮಿತಿ ಭಾವಃ । ತದುಕ್ತಮ್ । 'ತಥಾಪ್ಯಭಾವಃ ಸರ್ವತ್ರ ಪ್ರಾಪ್ತ್ಯೈವ ವಸುದೇವಜಂ' (ನಾರಾ.ಗೋ.ಕಲ್ಪೇ)ಇತಿ। ಅಭಾವಃ ಜನನಾಭಾವ ಇತ್ಯರ್ಥಃ ।**

**ಅನುವಾದ–** ಮೇರುವಿನಲ್ಲಿರುವ ಚತುರ್ಮುಖನ ಸದನದಿಂದ ಕೆಳಗಿನ ಲೋಕಗಳಲ್ಲಿರುವವರು ಭೂಮಿಗೆ ಪುನಃ ಬರುವರು ಎಂದು ಹೇಳಿದ್ದರಿಂದ ಅರ್ಥಾತ್ ಬ್ರಹ್ಮಸದನದಿಂದ ಮೇಲಿನ ಲೋಕದಲ್ಲಿರುವವರು ಪುನರ್ಜನ್ಮ ಹೊಂದುವುದಿಲ್ಲವೆಂದು ತಿಳಿದು ಬರುವುದು. ಹಾಗೆಯೇ '**ಆ ಮೇರುಬ್ರಹ್ಮಸದನಾತ್ ಆಜನಾನ್ನ ಜನಿರ್ಭುವಿ**' ಮೇರುವಿನಲ್ಲಿರುವ ಬ್ರಹ್ಮಸದನದಿಂದ ಮತ್ತು ಜನೋಲೋಕದಿಂದ ಮೇಲಿನ ಲೋಕದಲ್ಲಿರುವವರಿಗೆ ಭೂಮಿಯಲ್ಲಿ ಜನ್ಮವಿಲ್ಲ– ಎಂಬ ಸ್ಮೃತಿವಾಕ್ಯದಿಂದಲೂ ಬ್ರಹ್ಮಸದನದಿಂದ ಮೇಲಿನ ಲೋಕದಲ್ಲಿರುವವರು ಪುನಃ ಭೂಮಿಗೆ ಬರುವವರಲ್ಲವೆಂದು ತಿಳಿದು ಬರುವುದರಿಂದ '**ಮಾಮುಪೇತ್ಯ ಪುನರ್ಜನ್ಮ ನಾಪ್ನುವಂತಿ**' ಎಂದು ಹೇಗೆ ಹೇಳಲಾಗಿದೆ ಎಂಬ ಶಂಕೆಗೆ ಉತ್ತರವಾಗಿ ಶ್ರೀಕೃಷ್ಣ ಅದೇ ಮಾತನ್ನು ಪುನಃ ಹೇಳುತ್ತಿದ್ದಾನೆ '**ಮಾಮ್**' ಎಂದು.

ಮೇರುವಿನಲ್ಲಿರುವ ಬ್ರಹ್ಮಸದನದಿಂದ ಮತ್ತು ಜನೋಲೋಕದಿಂದ ಮೇಲಿನ ಲೋಕದಲ್ಲಿರುವವರಿಗೆ ಹುಟ್ಟಿಲ್ಲ ಎನ್ನುವುದು ಸರಿಯೇ ಆದರೂ ಪುನರ್ಜನ್ಮವಿಲ್ಲದಿರುವುದಕ್ಕೆ ಆ ಲೋಕಗಳಲ್ಲಿರುವುದು ಮಾತ್ರ ಕಾರಣವಲ್ಲ. ಆದರೆ, ಆ ಲೋಕಗಳಲ್ಲಿರುವ ನನ್ನನ್ನು ಹೊಂದಿದವರಿಗೆ ಮಾತ್ರ ಪುನರ್ಜನ್ಮವಿರುವುದಿಲ್ಲ. ಆದ್ದರಿಂದ 'ನನ್ನನ್ನು ಹೊಂದಿ ಪುನರ್ಜನ್ಮ ಪಡೆಯುವುದಿಲ್ಲ' ಎಂದು ಹೇಳಿರುವುದು ಅಯುಕ್ತವಲ್ಲವೆಂದು ಭಾವ. '**ತಥಾಪ್ಯಭಾವಃ ಸರ್ವತ್ರ ಪ್ರಾಪ್ತ್ಯೈವ ವಸುದೇವಜಂ**' (ವಸುದೇವಸುತನನ್ನು ಪಡೆದಿದ್ದರಿಂದಲೇ, ಎಲ್ಲೇ ಇರಲಿ, ಅಭಾವವಿರುವುದು) ಎಂಬ ಸ್ಮೃತಿವಾಕ್ಯವೂ ಇದನ್ನೆ ಹೇಳುವುದು. ಇಲ್ಲಿ ಅಭಾವವೆಂದರೆ ಜನನಾಭಾವ ಎಂದು ಅರ್ಥ.

**ಯತ್ತು 'ಆಜನಾನ್ನ ಜನಿರ್ಭುವೀ'ತಿ ಜನೋಲೋಕಾದುಪರಿಸ್ಥಿತಾನಾಮಪ್ಯ- ಪುನರಾವೃತ್ತ್ಯುಕ್ತೇಃ ಬ್ರಹ್ಮಸದನಾದರ್ವಾಕ್ ಸ್ಥಿತಾಃ ಪುನರಾವರ್ತಿನಃ ತದುಪರಿಸ್ಥಾಃ ಅಪುನರಾವರ್ತಿನ ಇತ್ಯುಕ್ತಿರಯುಕ್ತೇತಿ ಚೋದ್ಯಮ್, ತದ್ಬ್ರಹ್ಮಭವನಪದೇನ ಮೇರುಸ್ಥಬ್ರಹ್ಮಸದನಗ್ರಹಣಾತ್ಪರಿಹೃತಮ್ । ಸತ್ಯಲೋಕಸ್ಥಬ್ರಹ್ಮಸದನಗ್ರಹಣೇಽಪಿ ಆಬ್ರಹ್ಮಭವನಾತ್ ಸತ್ಯಲೋಕಸ್ಥಬ್ರಹ್ಮಸದನಾದರ್ವಾಕ್ತನತಪೋಲೋಕಸ್ಥಜನಾ**

**ಅಂಶೇನ ಪುನರಾವರ್ತಿನ ಇತ್ಯರ್ಥಃ । ನಚ 'ಆಜನಾತ್ ಇತಿ ವಚನವಿರೋಧಃ। ತತ್ರ ಸ್ಮೃತೌ ಜನಿರ್ನೇತ್ಯಸ್ಯ ಕಾರ್ತ್ಸ್ನ್ಯೇನ ಜನಿರ್ನೇತ್ಯರ್ಥಕತ್ವಾತ್ । ಜನಾದಿ-ಲೋಕಸ್ಥಾನಾಮಪ್ಯಂಶೇನಾಪಿ ಭೂಮೌ ಲಯಾಂತೇ ಲಯಾದೌ ಚ ಕಾರ್ತ್ಸ್ನ್ಯೇನ ಜನಿಮೃತ್ಯೋರ್ಭಾವಾತ್। 'ಆಬ್ರಹ್ಮಭವನಾತ್' ಇತ್ಯತ್ರ ತತ ಉಪರ್ಯಾರ್ಥಿಕ-ಜನ್ಮಾಭಾವೋಕ್ತಿಸ್ತು ಮುಖ್ಯಜನ್ಮಾದ್ಯಭಾವೋಪೇತಮುಕ್ತಜನವಿಷಯಾ । ತೇಷಾಮಂಶೇನಾಪಿ ಭೂಮೌ ಜನನಾದ್ಯಭಾವಾದಿತಿ ।**

**ಅನುವಾದ**– 'ಆಜನಾನ್ನ ಜನಿರ್ಭುವಿ' ಎಂದು ಜನೋಲೋಕದಿಂದ ಮೇಲಿರುವವರಿಗೂ ಪುನರ್ಜನ್ಮವಿಲ್ಲವೆಂದು ಹೇಳಿರುವುದರಿಂದ ಬ್ರಹ್ಮಸದನದಿಂದ ಕೆಳಗಿರುವವರು ಪುನರಾವೃತ್ತಿಯುಳ್ಳವರು, ಅದಕ್ಕೂ ಮೇಲಿನವರು ಪುನರಾವೃತ್ತಿ ಇಲ್ಲದಿರುವವರು ಎಂದು (ಗೀತೆಯಲ್ಲಿ) ಹೇಳಿರುವುದು ಅಯುಕ್ತವೆಂಬ ಯಾವ ಆಕ್ಷೇಪವಿದೆ ಅದು 'ಬ್ರಹ್ಮಭವನ' ಪದದಿಂದ ಮೇರುವಿನಲ್ಲಿರುವ ಬ್ರಹ್ಮಸದನವನ್ನು ಗ್ರಹಿಸುವುದರಿಂದ ಪರಿಹಾರವಾಗಿದೆ. ಸತ್ಯಲೋಕದಲ್ಲಿರುವ ಬ್ರಹ್ಮಸದನವನ್ನೇ 'ಬ್ರಹ್ಮ ಭವನ' ಪದದಿಂದ ಗ್ರಹಿಸಿದರೂ, **'ಆಬ್ರಹ್ಮಭವನಾತ್'** = ಸತ್ಯಲೋಕದಲ್ಲಿರುವ ಬ್ರಹ್ಮಸದನದಿಂದ ಕೆಳಗಿನ ತಪೋಲೋಕದಲ್ಲಿರುವ ಜನರು, **ಪುನರಾ-ವರ್ತಿನಃ**= ಒಂದು ಅಂಶದಿಂದ ಪುನರ್ಜನ್ಮವುಳ್ಳವರು ಎಂದು ಅರ್ಥ. (ಹೀಗೆ ಅರ್ಥೈಸಿದಾಗ) ಜನೋಲೋಕದಿಂದ ಮೇಲಿರುವವರಿಗೆ ಪುನರ್ಜನ್ಮವಿಲ್ಲವೆಂದು ಹೇಳುವ **'ಆಜನಾತ್'** ಎಂಬ ವಚನದಿಂದ ವಿರೋಧವಿದೆ ಎಂದು ಹೇಳತಕ್ಕದ್ದಲ್ಲ. ಏಕೆಂದರೆ, ಆ ಸ್ಮೃತಿಯಲ್ಲಿ ಜನ್ಮವಿಲ್ಲ ಎಂಬ ಮಾತಿಗೆ ಪೂರ್ಣವಾಗಿ ಜನ್ಮವಿಲ್ಲ ಎಂದರ್ಥವಿದೆ. ಜನೋಲೋಕ ಮೊದಲಾದ ಲೋಕದಲ್ಲಿರುವವರಿಗೂ ಒಂದು ಅಂಶದಿಂದ ಭೂಮಿಯಲ್ಲಿ ಜನನ-ಮರಣಗಳಿವೆ. ಅಲ್ಲದೆ ಪ್ರಲಯದ ಕೊನೆಯ ಭಾಗದಲ್ಲಿ ಮತ್ತು ಪ್ರಲಯದ ಆದಿಭಾಗದಲ್ಲಿ ಪೂರ್ಣಸ್ವರೂಪದಿಂದಲೂ ಜನನ-ಮರಣಗಳಿವೆ. **'ಆ ಬ್ರಹ್ಮಭವನಾತ್'** ಎಂದು (ಬ್ರಹ್ಮಭವನದ ಕೆಳಗಿರುವ ಲೋಕಗಳಲ್ಲಿರುವವರಿಗೆ ಪುನರಾವೃತ್ತಿ ಇದೆ ಎಂದು ಹೇಳುವ ಮೂಲಕ) ಮೇಲಿನ ಲೋಕದಲ್ಲಿರುವವರಿಗೆ ಜನನವಿಲ್ಲವೆಂದು ಅರ್ಥಾತ್ ಹೇಳಿರುವುದು ಮುಖ್ಯತಃ ಜನ್ಮಾದಿರಹಿತರಾದ ಮುಕ್ತರಾಗಿರುವ ಜನಗಳಿಗೆ ಸಂಬಂಧಿಸಿದೆ. ಏಕೆಂದರೆ, ಆ ಮುಕ್ತಜನರಿಗೆ ಅಂಶದಿಂದಲೂ ಕೂಡ ಭೂಮಿಯಲ್ಲಿ ಜನನವಿರುವುದಿಲ್ಲ.

**ಏತೇನ 'ಆಮೇರುಬ್ರಹ್ಮಸದನಾದಾಜನಾತ್' ಇತಿ ಸ್ಮೃತ್ಯಾ ಮೇರುಜನಾಂತರಾಲಿಕಾನಾಂ ಜನ್ಮಾಜನ್ಮನೋರರ್ಥಾತ್ಪ್ರಾಪ್ತೇರ್ವಿರೋಧ ಇತಿ ಪ್ರತ್ಯುಕ್ತಮ್ । ಅಜನೇರ್ಮುಕ್ತವಿಷಯತ್ವಾತ್ ಜನೇರುಕ್ತದಿಶಾ**

**ಮುಕ್ತೇತರವಿಷಯತ್ವಾದಿತಿ । ತದುಕ್ತಮ್ । 'ನಿಯಮಾಜ್ಜನ್ಮನೋಽಭಾವೋ ಮುಕ್ತಸ್ಯೈವ' ಇತ್ಯಾದಿ ॥ 16 ॥**

**ಅನುವಾದ-** ಈ ವಿವರಣೆಯಿಂದ, **'ಆಮೇರುಸದನಾದಾಜನಾತ್'** ಎಂಬ ಸ್ಮೃತಿಯಿಂದ ಮೇರು ಮತ್ತು ಜನೋಲೋಕದ ಮಧ್ಯದಲ್ಲಿರುವವರಿಗೆ ಜನನವಿದೆಯೆಂದೂ ಹಾಗೆಯೇ ಜನನವಿಲ್ಲವೆಂದೂ ಅರ್ಥಾತ್ ಸಿದ್ಧವಾಗುವುದರಿಂದ ವಿರೋಧವುಂಟಾಗುವುದು ಎಂಬ ಆಕ್ಷೇಪವೂ ನಿರಾಕೃತವಾಗುವುದು. ಏಕೆಂದರೆ, ಜನನವಿಲ್ಲದಿರುವುದು ಮುಕ್ತರಿಗೆ ಸಂಬಂಧಿಸಿದೆ. ಹಾಗೂ ಜನನವಿರುವುದು ಹಿಂದೆ ಹೇಳಿದ ರೀತಿಯಿಂದ ಮುಕ್ತರಲ್ಲದ ಜನರಿಗೆ ಸಂಬಂಧಿಸಿದೆ. **'ನಿಯಮಾಜ್ಜನ್ಮನೋಽಭಾವಃ ಮುಕ್ತಸ್ಯೈವ '** ಎಂಬ ಪ್ರಮಾಣವಚನದಲ್ಲಿ ಈ ವಿಷಯವನ್ನು ಹೇಳಲಾಗಿದೆ.

**ವಿವರಣೆ** - ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ- ಈ ಏಳುಲೋಕಗಳಲ್ಲಿ ಜನೋಲೋಕದಿಂದ ಕೆಳಗಿನ ಲೋಕ ದಲ್ಲಿರುವವರಿಗೆ ಹಾಗೂ ಬ್ರಹ್ಮಭವನದಿಂದ ಕೆಳಗಿನ ಸ್ಥಾನದಲ್ಲಿರುವವರಿಗೆ ಪುನಾರಾವೃತ್ತಿ ಇರುವುದೆಂದು ಪ್ರಮಾಣಗಳು ತಿಳಿಸುವವು. ಇಲ್ಲಿ ಬ್ರಹ್ಮಭವನವೆಂದರೆ ಭೂಲೋಕದಲ್ಲಿರುವ ಮೇರುಪರ್ವತದಲ್ಲಿರುವ ಬ್ರಹ್ಮಭವನ. ಆದ್ದರಿಂದ ಸತ್ಯಲೋಕದ ಬ್ರಹ್ಮಭವನವನ್ನು ಗ್ರಹಿಸಿ ಅದರಿಂದ ಕೆಳಗಿನ ಜನೋಲೋಕ ತಪೋಲೋಕಗಳಲ್ಲಿರುವವರಿಗೆ ಪುನರಾವೃತ್ತಿಯನ್ನು ಹೇಳಿದರೆ, ಅವರಿಗೆ ಪುನರಾವೃತ್ತಿ ಇಲ್ಲವೆಂದು ಹೇಳುವ ಪ್ರಮಾಣವಿರೋಧ ಬರುವುದೆಂದು ಶಂಕಿಸಲು ಅವಕಾಶವಿಲ್ಲ. ಸತ್ಯಲೋಕದಲ್ಲಿರುವ ಬ್ರಹ್ಮಭವನವೇ ಇಲ್ಲಿ ವಿವಕ್ಷಿತವೆಂದು ಹೇಳಿದರೂ ಅದರಿಂದ ಕೆಳಗಿನ ಜನೋಲೋಕ ತಪೋಲೋಕದಲ್ಲಿರುವ ಅಮುಕ್ತರಿಗೆ ಅಂಶತಃ ಜನನ ಮರಣಗಳನ್ನು ಪ್ರಮಾಣಗಳು ತಿಳಿಸುವುದರಿಂದ, ಅಲ್ಲಿರುವ ಮುಕ್ತರಿಗೆ ಸರ್ವಥಾ ಜನನ ವಿಲ್ಲವೆಂದೂ ಅಮುಕ್ತರಿಗೆ ಅಂಶತಃ ಜನನಾದಿಗಳು ಇವೆಯೆಂದು ಗ್ರಹಿಸಿ ವಿರೋಧವನ್ನು ಪರಿಹರಿಸಬಹುದು . ಈ ಲೋಕಗಳಲ್ಲಿರುವ ಅಮುಕ್ತರು ಬ್ರಹ್ಮನ ಪ್ರಲಯಾಂತ್ಯದಲ್ಲಿ ಮತ್ತು ಪ್ರಳಯದ ಆದಿಯಲ್ಲಿ ಪೂರ್ಣರೂಪದಿಂದ ಜನನಮರಣಗಳನ್ನು ಪಡೆಯುವುದೂ ಇದೆ . ವಾಯು ಮತ್ತು ಭಾರತೀ- ಇವರು ಚತುರ್ಮುಖ-ಸರಸ್ವತಿಯರಾಗಿ ಜನನಾದಿಗಳನ್ನು ಪಡೆಯುವುದು ಇದಕ್ಕೆ ನಿದರ್ಶನವಾಗಿದೆ. ॥ 16 ॥

## ಸೃಷ್ಟಿ-ಸ್ಥಿತಿ-ಲಯ ಕರ್ತೃ ನಾನೇ

**ಸಹಸ್ರಯುಗಪರ್ಯಂತಮಹರ್ಯದ್ ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ॥ 17 ॥**

**ಅರ್ಥ–** ಯಾವ ಜನರು ಬಹುಯುಗಪರ್ಯಂತವಾಗಿ ಪರಬ್ರಹ್ಮನ ಹಗಲು ಇರುವುದೆಂದು ತಿಳಿಯುವರೋ ಹಾಗೆಯೇ ಬಹುಯುಗಪರ್ಯಂತವಾಗಿ ಪರಬ್ರಹ್ಮನ ರಾತ್ರಿಕಾಲ ಇರುವುದೆಂದು ತಿಳಿಯುವರೋ ಅವರೇ ಹಗಲು–ರಾತ್ರಿಗಳನ್ನು ತಿಳಿದವರು.

**ಮತ್ಪ್ರಾಪ್ತಾವೇವಾಪುನರಾವೃತ್ತಿರಿತಿ ಪ್ರತಿಜ್ಞಾಮಾತ್ರೇಣೋಕ್ತಸ್ಯ ಸ್ಥಾಪನಾಯಾದೌ ಸೃಷ್ಟಿಪ್ರಲಯಾದಿಕರ್ತೃತ್ವಂ ಆತ್ಮನೋ ವಕ್ತುಂ ಉಪೋದ್ಘಾತಮಾಹ– ಸಹಸ್ರೇತಿ ॥ ಸಹಸ್ರಶಬ್ದೋಽತ್ರ ಬಹುಶಬ್ದಪರ್ಯಾಯಃ । ಯೇ ಜನಾಃ ಯತ್ಪರಬ್ರಹ್ಮಣೋಽಹಃ ತದ್ಬಹುಯುಗಪರ್ಯಂತದ್ವಿಪರಾರ್ಧಾತ್ಮಕಂ ವಿದುರ್ಜಾನಂತಿ ಬ್ರಹ್ಮಣಃ ಪರಬ್ರಹ್ಮಣೋ ರಾತ್ರಿಂ ಚ ಯುಗಸಹಸ್ರಾಂತಾಂ ಬಹುಯುಗಾಂತಾಂ ದ್ವಿಪರಾರ್ಧಾತ್ಮಿಕಾಂ ವಿದುಃ ತೇಽಹೋರಾತ್ರವಿದ ಇತ್ಯರ್ಥಃ । ಯದಿತ್ಯಸ್ಯ ಯ ಇತಿ ವಾಽರ್ಥಃ । ಸ ಇತಿ ಶೇಷೋ ವಾ । ಪರಬ್ರಹ್ಮಣಃ ಕೂಟಸ್ಥನಿತ್ಯಸ್ಯಾಪಿ ಸೃಷ್ಟ್ಯಾದಿಸವ್ಯಾಪಾರನಿರ್ವ್ಯಾಪಾರಾವಸ್ಥಯೋರುಪಚಾರಾತ್ ಅಹೋರಾತ್ರತ್ವೋಕ್ತಿಃ । ॥ 17 ॥**

**ಅನುವಾದ–** ನನ್ನನ್ನು ಪಡೆದಾಗಲೇ ಪುನರ್ಜನ್ಮವಿಲ್ಲದಿರುವುದು ಎಂದು ಕೇವಲ ಪ್ರತಿಜ್ಞೆಯ ಮೂಲಕ ಹೇಳಿದುದನ್ನು ಸಮರ್ಥಿಸುವುದಕ್ಕೋಸ್ಕರ ಮೊದಲು, ತನಗೆ ಸೃಷ್ಟಿಪ್ರಲಯಾದಿಕರ್ತೃತ್ವವಿದೆ ಎಂಬುದನ್ನು ಹೇಳಲು ಶ್ರೀಕೃಷ್ಣನು ಉಪೋದ್ಘಾತವನ್ನು 'ಸಹಸ್ರ' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ.

ಈ ಶ್ಲೋಕದಲ್ಲಿ '**ಸಹಸ್ರ**' ಶಬ್ದವು '**ಬಹು**' ಶಬ್ದಸಮಾನಾರ್ಥಕವಾದುದು. ಯಾವ ಜನರು ಪರಬ್ರಹ್ಮನ ಯಾವ ಹಗಲುಕಾಲವಿದೆಯೋ ಅದು ಬಹುಯುಗಪರ್ಯಂತವಾದುದು ಎರಡು ಪರಾರ್ಧಾತ್ಮಕವಾದದ್ದೆಂದು **ವಿದುಃ**= ತಿಳಿಯುವರೋ, **ಬ್ರಹ್ಮಣಃ**= ಪ್ರರಬ್ರಹ್ಮನ ರಾತ್ರಿಯನ್ನೂ, **ಯುಗಸಹಸ್ರಾಂತಾಂ**= ದ್ವಿಪರಾರ್ಧಾತ್ಮಕವಾದದ್ದು ಎಂದು ತಿಳಿಯುವರೋ ಅವರು ಅಹೋರಾತ್ರಿಗಳನ್ನು ತಿಳಿದವರು ಎಂದು ಅರ್ಥ.

ಶ್ಲೋಕದಲ್ಲಿರುವ '**ಯತ್**' ಪದಕ್ಕೆ '**ಯೇ**'= ಯಾರು ಎಂದು ಅರ್ಥವನ್ನು ಹೇಳಬಹುದು. ಅಥವಾ 'ಯೇ' ಎಂಬ ಪದವನ್ನು ಶೇಷಪೂರಣವಾಗಿ ತೆಗೆದುಕೊಳ್ಳಬಹುದು. ಪರಮಾತ್ಮನು ಯಾವ ವಿಕಾರವೂ ಇಲ್ಲದೆ ಅನಾದ್ಯನಂತಕಾಲದಲ್ಲಿ ಇರುವವನಾದರೂ, ಅವನಿಗೆ ಸೃಷ್ಟ್ಯಾದಿ ಕ್ರಿಯೆಗಳು ಇರುವುದು ಮತ್ತು ಅವು ಯಾವುದೂ ಇಲ್ಲದಿರುವುದು. ಈ ಅವಸ್ಥೆಗಳನ್ನೇ ಔಪಚಾರಿಕವಾಗಿ ಹಗಲು–ರಾತ್ರಿಗಳೆಂದು ಹೇಳಲಾಗಿದೆ. ॥ 17 ॥

**ಅವ್ಯಕ್ತಾದ್ ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ॥ 18 ॥**

**ಅರ್ಥ–** ಪರಮಾತ್ಮನ ಹಗಲುಕಾಲ ಬಂದಾಗ, ಅವ್ಯಕ್ತನಾದ ಆ ಭಗವಂತನಿಂದ ಎಲ್ಲ ಕಾರ್ಯಪದಾರ್ಥಗಳು ಉತ್ಪನ್ನವಾಗುವವು . ರಾತ್ರಿಕಾಲ ಒದಗಿದಾಗ ಅವ್ಯಕ್ತನೆನಿಸುವ ಆ ಪರಮಾತ್ಮನಲ್ಲೇ ಎಲ್ಲವೂ ಲಯ ಹೊಂದುವವು.

**ತತಃ ಕಿಮಿತ್ಯತ ಆಹ– ಅವ್ಯಕ್ತಾದಿತಿ ॥ ಬ್ರಹ್ಮಣೋಽಹರಾಗಮೇ ಮಹಾ-ಪ್ರಲಯಾಂತ ಇತಿ ಯಾವತ್ । ಅವ್ಯಕ್ತಾದ್‌ಭಗವತೋ ವ್ಯಜ್ಯಂತ ಇತಿ ವ್ಯಕ್ತಯಃ ಗುಣವೈಷಮ್ಯಾದಯಃ ಕಾರ್ಯಪದಾರ್ಥಾಃ ಪ್ರಭವಂತಿ ಉತ್ಪದ್ಯಂತೇ । ರಾತ್ರ್ಯಾಗಮೇಽವ್ಯಕ್ತಸಂಜ್ಞಕೇ ತತ್ರೈವ ಭಗವತಿ ಪ್ರಲೀಯಂತೇ ॥ 18 ॥**

**ಅನುವಾದ –** ಅನಂತರ ಏನು ? ಎಂಬ ಪ್ರಶ್ನೆಗೆ ಉತ್ತರವಾಗಿ **'ಅವ್ಯಕ್ತಾತ್'** ಎಂದು ಹೇಳಲಾಗಿದೆ. ಪರಬ್ರಹ್ಮನ ಹಗಲುಕಾಲ ಬಂದಾಗ – ಮಹಾಪ್ರಲಯದ ಕೊನೆಯಲ್ಲಿ ಎಂದು ತಾತ್ಪರ್ಯ– ಅವ್ಯಕ್ತನಾದ ಭಗವಂತನಿಂದ, ವ್ಯಕ್ತಯಃ– ಅಭಿವ್ಯಕ್ತಿಗೊಳ್ಳುವುದರಿಂದ ವ್ಯಕ್ತಿಗಳೆನಿಸುವ ಸತ್ತ್ವಾದಿಗುಣಗಳ ವೈಷಮ್ಯವೇ ಮೊದಲಾದ ಜನ್ಯವಸ್ತುಗಳು, **ಪ್ರಭವಂತಿ**= ಹುಟ್ಟುತ್ತವೆ. ರಾತ್ರಿಕಾಲ ಬಂದಾಗ ಅವ್ಯಕ್ತನಾಮಕನಾದ ಅದೇ ಭಗವಂತನಲ್ಲಿ ಪ್ರಲಯ ಹೊಂದುತ್ತವೆ. ॥ 18 ॥

**ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ 19 ॥**

**ಅರ್ಥ –** (ಹೀಗೆ ಉತ್ಪತ್ತಿ – ಲಯಗಳನ್ನು ಹೊಂದುವ ) ಅದೇ ಚರಾಚರವಸ್ತುಗಳು, ಹೇ ಪಾರ್ಥ ! ಬ್ರಹ್ಮನ ಹಗಲು ಕಾಲ ಬಂದಾಗ ಹುಟ್ಟುತ್ತವೆ. ಹುಟ್ಟಿ , ಹುಟ್ಟಿ ರಾತ್ರಿಕಾಲಬಂದಾಗ ಭಗವಂತನ ವಶವಾಗಿ ಲಯಹೊಂದುತ್ತವೆ.

ಮಹಾಮಹಿಮ(ತ್ವ)ಖ್ಯಾಪನಾಯ ಸೃಷ್ಟಿಪ್ರಲಯಯೋರವಿಚ್ಛೇದಮಾಹ- **ಭೂತೇತಿ ॥ ಪ್ರಾಗ್ಜನ್ಮಲಯವತ್ತ್ವೇನೋಕ್ತೋ ಯಃ ಸ ಏವಾಯಂ ಭೂತ-ಗ್ರಾಮಶ್ಚರಾಚರಸಮುದಾಯಃ ಬ್ರಹ್ಮಣೋಽಹರಾಗಮೇ । ಪ್ರತ್ಯಹಮಿತಿ ಯಾವತ್ । ಪ್ರಭವತಿ । ಭೂತ್ವಾ ಭೂತ್ವಾ ಚೋತ್ಪದ್ಯೋತ್ಪದ್ಯ ರಾತ್ರ್ಯಾಗಮೇಽ-**

**ವಶೋ ಭಗವದ್ವಶಃ ಸನ್ ಪ್ರಲೀಯತೇ । ಭೂತಗ್ರಾಮೋ ಭೂತ್ವಾ ಭೂತ್ವಾ ರಾತ್ರ್ಯಾಗಮೇ ಪ್ರಲೀಯತೇ ಪುನರಹರಾಗಮೇ ಪ್ರಭವತೀತಿ ವಾ ಯೋಜನಾ । ॥ 19 ॥**

**ಅನುವಾದ–** ಭಗವಂತನ ಮಹಾಮಹಿಮೆಯನ್ನು ತಿಳಿಸುವ ಸಲುವಾಗಿ ಸೃಷ್ಟಿಪ್ರಲಯಗಳಿಗೆ ವಿಚ್ಛೇದವಿಲ್ಲವೆನ್ನುವುದನ್ನು '**ಭೂತಗ್ರಾಮಃ**' ಎಂಬ ಶ್ಲೋಕದಲ್ಲಿ ಶ್ರೀಕೃಷ್ಣನು ಹೇಳುತ್ತಿದ್ದಾನೆ.

ಹಿಂದೆ ಜನ್ಮ –ಲಯಗಳನ್ನು ಹೊಂದುತ್ತವೆಯೆಂದು ಹೇಳಲಾದದ್ದು ಯಾವುದೋ ಅದೇ, **ಭೂತಗ್ರಾಮಃ** = ಚರಾಚರಗಳ ಸಮುದಾಯವು, ಬ್ರಹ್ಮನ ಹಗಲು ಸಮಯ ಬಂದಾಗ– ಪ್ರತಿ ಹಗಲಿನಲ್ಲು ಎಂದು ಭಾವ . **ಪ್ರಭವತಿ** = ಹುಟ್ಟುತ್ತದೆ. **ಭೂತ್ವಾ ಭೂತ್ವಾ** = ಪುನಃ ಪುನಃ ಹುಟ್ಟಿ, ರಾತ್ರಿಕಾಲ ಬಂದಾಗ **ಅವಶಃ** = ಭಗವಂತನ ವಶವಾಗಿ ಲಯ ಹೊಂದುತ್ತದೆ.

ಅಥವಾ, ಚರಾಚರ ವಸ್ತುಸಮುದಾಯವು ಪುನಃ ಪುನಃ ಹುಟ್ಟಿ ರಾತ್ರಿಕಾಲ ಬಂದಾಗ ಲಯ ಹೊಂದುತ್ತದೆ. ಪುನಃ ಹಗಲು ಕಾಲ ಬಂದಾಗ ಹುಟ್ಟುತ್ತದೆ ಎಂದೂ ಯೋಜನೆ ಮಾಡಬಹುದು. ॥ 19 ॥

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋ ವ್ಯಕ್ತಾತ್ಸನಾತನಃ ।**
**ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ 20 ॥**

**ಅರ್ಥ–** ಅವ್ಯಕ್ತನಾದ ಭಗವಂತನಾದರೋ ಉತ್ಪತ್ತಿ–ನಾಶಗಳುಳ್ಳ ವ್ಯಕ್ತವಾದ ಚರಾಚರ ಗಳಿಂದ ವಿಲಕ್ಷಣನು. ಸ್ವತಂತ್ರನು, ಉತ್ತಮನು. ಆದಿರಹಿತನು. ಇಂತಹ ಆ ಭಗವಂತನು ಎಲ್ಲ ಭೂತಗಳು ನಾಶಹೊಂದುತ್ತಿದ್ದರೂ ನಾಶ ಹೊಂದುವವನಲ್ಲ.

**ಭಗವತೋಽಹೋರಾತ್ರೋಕ್ತ್ಯಾ ತಸ್ಯಾಪಿ ಜಗತ ಇವಾನ್ಯಸ್ಮಾದುತ್ಪತ್ತಿಲಯೌ ಸ್ತ ಇತ್ಯತೋ ನೇತ್ಯಾಹ- ಪರ ಇತ್ಯಾದಿದ್ವಾಭ್ಯಾಮ್ ॥ ಅವ್ಯಕ್ತಸ್ತು ಭಗವಾಂಸ್ತು ತಸ್ಮಾತ್ಪ್ರಭವಪ್ರಲಯೋಪೇತಾತ್ ವ್ಯಕ್ತಾದ್ ಭೂತಗ್ರಾಮಾದನ್ಯೋ ವಿಲಕ್ಷಣೋ ಭಾವಃ ಸ್ವತಂತ್ರಃ ಪರಃ ಉತ್ತಮಃ ಸನಾತನೋಽನಾದಿಶ್ಚ ಯೋ ಭಗವಾನ್ ಸರ್ವೇಷು (ಭೂತೇಷು) ನಶ್ಯತ್ಸು ನ ವಿನಶ್ಯತಿ ॥ 20 ॥**

**ಅನುವಾದ–** ಭಗವಂತನಿಗೆ ಹಗಲು ರಾತ್ರಿಗಳನ್ನು ಹೇಳಿದ್ದರಿಂದ ಜಗತ್ತಿನಂತೆ ಅವನಿಗೂ ಉತ್ಪತ್ತಿ–ವಿನಾಶಗಳಿವೆ ಎಂಬ ಶಂಕೆಯನ್ನು '**ಪರಃ**' ಇತ್ಯಾದಿ ಎರಡು ಶ್ಲೋಕಗಳಿಂದ ಶ್ರೀಕೃಷ್ಣನು ನಿರಾಕರಿಸುತ್ತಿದ್ದಾನೆ.

**ಅವ್ಯಕ್ತಸ್ತು**= ಭಗವಂತನಾದರೋ, **ತಸ್ಮಾತ್**= ಆ ಉತ್ಪತ್ತಿವಿನಾಶಗಳುಳ್ಳ, **ವ್ಯಕ್ತಾತ್**= ಚರಾಚರಭೂತಸಮೂಹದಿಂದ, **ಅನ್ಯಃ**= ವಿಲಕ್ಷಣನು. **ಭಾವಃ**= ಸ್ವತಂತ್ರನು, **ಪರಃ**= ಉತ್ತಮನು, **ಸನಾತನಃ**= ಅನಾದಿಯೂ ಆಗಿದ್ದಾನೆ. ಆ ಭಗವಂತನು ಎಲ್ಲ ಭೂತಗಳು ನಾಶ ಹೊಂದಿದರೂ ನಾಶ ಹೊಂದುವುದಿಲ್ಲ. ॥ 20 ॥

## ಹರಿಯ ಬಳಿ ಬಂದವರು (ಮುಕ್ತರು) ಸಂಸಾರಕ್ಕೆ ಮರಳುವುದಿಲ್ಲ

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಾಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ 21 ॥**

**ಅರ್ಥ**– ಸರ್ವಪ್ರಕಾರದಿಂದಲೂ ನಾಶವಿಲ್ಲದಿರುವುದರಿಂದಲೇ ಅವ್ಯಕ್ತನಾದ ಭಗವಂತನು ಅಕ್ಷರನೆಂದು ಹೇಳಲ್ಪಟ್ಟಿದ್ದಾನೆ. ಅವನನ್ನು ಅಂತಿಮವಾಗಿ ಪ್ರಾಪ್ಯನೆಂದು ಹೇಳುವರು. ಯಾರನ್ನು ಪಡೆದಬಳಿಕ ಸಂಸಾರಕ್ಕೆ ಹಿಂದಿರುಗುವುದಿಲ್ಲವೋ ಆ ಸರ್ವೋತ್ತಮನಾದ ಭಗವಂತನು ನನ್ನ ಸ್ವರೂಪನಾಗಿದ್ದಾನೆ.

**ಸರ್ವಾತ್ಮನಾ ನಾಶಾಭಾವಾದೇವಾವ್ಯಕ್ತೋ ಭಗವಾನಕ್ಷರ ಇತ್ಯುಕ್ತಃ 'ತಸ್ಮಾದಕ್ಷರಂ ತಸ್ಮಾದಕ್ಷರಂ' ಇತಿ ಶ್ರುತ್ಯಾದೌ ತಾಂ ಪರಮಾಂ ಗತಿಮಾಹುಃ । ತಾಮಿತಿ ವಿಧೇಯಾಪೇಕ್ಷಯಾ ಸ್ತ್ರೀಲಿಂಗತಾ । ಕುತೋಽವ್ಯಕ್ತೋ ಭಗವಾನ್ ಪರಮಪ್ರಾಪ್ಯ ಇತ್ಯತ ಆಹ- ಯಂ ಪ್ರಾಪ್ಯೇತಿ ॥ ತನ್ಮಮ ಧಾಮ ಸ್ವರೂಪ- ಮಿತ್ಯರ್ಥಃ ॥ 21 ॥**

**ಅನುವಾದ**– ಸರ್ವಪ್ರಕಾರದಿಂದಲೂ ನಾಶವಿಲ್ಲದ್ದರಿಂದಲೇ ಅವ್ಯಕ್ತನಾದ ಭಗವಂತನು **'ತಸ್ಮಾದಕ್ಷರಂ ತಸ್ಮಾದಕ್ಷರಂ'** ಇತ್ಯಾದಿ ಶ್ರುತಿಗಳಲ್ಲಿ ಮೊದಲಾದವುಗಳಲ್ಲಿ ಅಕ್ಷರನೆಂದೆನಿಸಿದ್ದಾನೆ. ಆ ಭಗವಂತನನ್ನು ಅಂತಿಮವಾಗಿ ಪ್ರಾಪ್ಯವೆಂದು ಹೇಳುವರು . ವಿಧೇಯವಾದ 'ಪರಮಗತಿ' ಶಬ್ದವು ಸ್ತ್ರೀಲಿಂಗದಲ್ಲಿದ್ದು ಭಗವಂತನನ್ನು ಹೇಳುವುದರಿಂದ ಆ ದೃಷ್ಟಿಯಿಂದ **'ತತ್'** ಶಬ್ದವೂ **'ತಾಂ'** ಎಂದು ಸ್ತ್ರೀಲಿಂಗದಲ್ಲಿದೆ.

ಅವ್ಯಕ್ತನಾದ ಭಗವಂತನು ಪರಮಪ್ರಾಪ್ಯನೇಕೆ ಎಂಬ ಪ್ರಶ್ನೆಗೆ ಉತ್ತರವಾಗಿ **'ಯಂ ಪ್ರಾಪ್ಯ'** ಎಂದು ಹೇಳಲಾಗಿದೆ. **ತತ್**= ಭಗವಂತನು, **ಮಮ ಧಾಮ** = ನನ್ನ ಸ್ವರೂಪವೇ ಆಗಿದ್ದಾನೆ ಎಂದು ಅರ್ಥ.

**ವಿವರಣೆ**- ಅವ್ಯಕ್ತ, ಅಕ್ಷರ ಎಂಬ ಭಗವಂತನನ್ನು ಹೇಳುವ ಶಬ್ದಗಳು ಪುಲ್ಲಿಂಗ ದಲ್ಲಿರುವುದರಿಂದ ಅವನನ್ನು ಪರಾಮರ್ಶಿಸುವ **'ತತ್'** ಶಬ್ದವೂ ಪುಲ್ಲಿಂಗದಲ್ಲಿರಬೇಕಾಗಿತ್ತು .

ಸ್ತ್ರೀಲಿಂಗದಲ್ಲಿರುವುದು ಹೇಗೆ ? ಎಂಬ ಪ್ರಶ್ನೆಗೆ ಇಲ್ಲಿ ಸಮಾಧಾನ ನೀಡಲಾಗಿದೆ. ಈಗಾಗಲೇ ತಿಳಿದಿರುವ ವಿಷಯ, ಅದನ್ನು ಕುರಿತು ಹೊಸದಾಗಿ ತಿಳಿಸುವ ವಿಷಯಗಳು ಕ್ರಮವಾಗಿ ಉದ್ದೇಶ್ಯ, ವಿಧೇಯಗಳೆಂದು ಕರೆಯಲ್ಪಡುತ್ತವೆ. ಈ ಶ್ಲೋಕದಲ್ಲಿ 'ಅಕ್ಷರ' ಪದವು ಉದ್ದೇಶ್ಯವಾಚಕ ಪದವಾಗಿದ್ದು 'ಪರಮಾಗತಿ' ಶಬ್ದವು ವಿಧೇಯವಾಚಕ ಪದವಾಗಿದೆ. ವಿಧೇಯವಾಚಕ ಪದವನ್ನನುಸರಿಸಿ 'ತತ್' ಶಬ್ದವೂ ಸ್ತ್ರೀಲಿಂಗದಲ್ಲಿದೆ ಎಂದು ಸಮಾಧಾನ. ।। 21 ।।

## ನಿರ್ಮಲ ಭಕ್ತಿಗೆ ಒಲಿಯುವೆ ನಾ

**ಪುರುಷಃ ಸಃ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ।। 22 ।।**

**ಅರ್ಥ** – ಚೇತನಾಚೇತನಾತ್ಮಕವಾದ ಎಲ್ಲ ವಸ್ತುಗಳು ಯಾರೊಳಗಿವೆಯೋ ಯಾರಿಂದ ಈ ಸಮಸ್ತ ಜಗತ್ತು ವ್ಯಾಪಿಸಲ್ಪಟ್ಟಿದೆಯೋ ಆ ಪರಮ ಪುರುಷನು, ಹೇ ಪಾರ್ಥ ! ಅಸಾಧಾರಣ ಭಕ್ತಿಯಿಂದ ಮಾತ್ರ ಲಭ್ಯನು.

**'ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ' ಇತ್ಯತ್ರ ಸಾಧನಾಂತರೈಃ ಸಹ ಭಗವತ್ಪ್ರಾಪ್ತಿಸಾಧನತ್ವಂ ಭಕ್ತೇರುಕ್ತಮ್ । ತತ್ರ ಸಾಧನಾಂತರಸಾಮ್ಯಶಂಕಾ-ನಿರಾಸಾಯ ಭಕ್ತೇರೇವ ಪರಮಸಾಧನತ್ವಮಿತಿ ಭಾವೇನಾಹ -ಪುರುಷ ಇತಿ ।। ಭೂತಾನಿ ಯಸ್ಯಾಂತಃಸ್ಥಾನಿ । ಸರ್ವಮಿದಂ ಜಗತ್ ಯೇನ ತತಂ ವ್ಯಾಪ್ತಂ ಸ ಪರಮಃ ಪುರುಷಃ ಭಗವಾನನನ್ಯಯಾಽನ್ಯಾಸಾಧಾರಣಯಾ ತು ಭಕ್ತ್ಯಾ ಲಭ್ಯಃ ಪ್ರಾಪ್ಯ ಇತ್ಯರ್ಥಃ । ಅತ್ರ ಪರಮಯೇತ್ಯನುಕ್ತಾವಪಿ ಪುನರ್ವಚನಬಲಾದೇವ ಪರಮತ್ವಲಾಭ ಇತಿ ಭಾವಃ । ಉಕ್ತಂ ಹಿ 'ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ ಓಂ (3-3-54)ಇತಿ ಸೂತ್ರೇ ಭಕ್ತೇಃ ಪ್ರಾಧಾನ್ಯಮ್ । ।। 22 ।।**

**ಅನುವಾದ** – 'ಭಕ್ತ್ಯಾಯುಕ್ತೋ ಯೋಗಬಲೇನ ಚೈವ ' (ಗೀ. 8-10.) ಎಂಬಲ್ಲಿ ಇತರ ಸಾಧನಗಳ ಜೊತೆಗೆ ಭಕ್ತಿಯೂ ಭಗವಂತನ ಪ್ರಾಪ್ತಿಗೆ ಸಾಧನವೆಂದು ಹೇಳಲಾಗಿದೆ. ಅಲ್ಲಿ ಇತರ ಸಾಧನಗಳ ಸಾಮ್ಯವನ್ನು ಭಕ್ತಿಗೆ ಸೂಚಿಸಲಾಗಿದೆ ಎಂಬ ಶಂಕೆಯನ್ನು ನಿರಾಕರಿಸಲು ಭಕ್ತಿಯೇ ಭಗವತ್ಪ್ರಾಪ್ತಿಗೆ ಪರಮ ಸಾಧನವೆಂದು '**ಪುರುಷಃ**' ಎಂಬ ಶ್ಲೋಕದಲ್ಲಿ ಹೇಳಿದೆ.

ಎಲ್ಲ ಭೂತಗಳು ಯಾರೊಳಗಿವೆಯೋ, ಈ ಎಲ್ಲ ಜಗತ್ತು ಯಾರಿಂದ **ತತಂ**=

ವ್ಯಾಪಿಸಲ್ಪಟ್ಟಿದೆಯೋ ಆ ಪರಮಪುರುಷನಾದ ಭಗವಂತನು, **ಅನನ್ಯಯಾ** = ಇನ್ನಾರನ್ನು ಕುರಿತು ಇಲ್ಲದಿರುವ ಭಕ್ತಿಯಿಂದಲೇ , **ಲಭ್ಯಃ**= ಪ್ರಾಪ್ಯನು ಎಂದು ಅರ್ಥ. ಇಲ್ಲಿ '**ಪರಮಯಾ**' ಎಂಬ ವಿಶೇಷಣವನ್ನು ಕೊಡದಿದ್ದರೂ ಹಿಂದೊಮ್ಮೆ ಹೇಳಿದ ಭಗವತ್ಪ್ರಾಪ್ತಿ ಸಾಧನತ್ವವನ್ನು ಪುನಃ ಇಲ್ಲಿ ಹೇಳಿದ್ದರಿಂದಲೇ ಭಕ್ತಿಯು ಪರಮಸಾಧನವೆಂದು ಲಭಿಸುವುದು ಎಂದು ಭಾವ. '**ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ** (ಬ್ರ.ಸೂ. 3.3.54) ಎಂಬ ಸೂತ್ರದಲ್ಲಿ ಭಕ್ತಿಗೆ ಪ್ರಾಧಾನ್ಯವನ್ನು ಹೇಳಲಾಗಿದೆಯಷ್ಟೆ ॥ 22 ॥

**ವಿವರಣೆ** - ಈ ಸೂತ್ರದಲ್ಲಿ - ಭಗವದ್ದರ್ಶನಕ್ಕೆ ಭಕ್ತಿಯು ಸ್ವತಂತ್ರಕಾರಣವಲ್ಲವೆಂದೂ **ಪರೇಣ ಚ** = ಪರಮಾತ್ಮನ ಅನುಗ್ರಹವೇ ಮುಖ್ಯಕಾರಣವೆಂದೂ ಹೇಳಿದೆ. **ಶಬ್ದಸ್ಯತಾದ್ವಿಧ್ಯಂ** = ಭಕ್ತಿಯೇ ಭಗವಂತನ ದರ್ಶನಕ್ಕೆ ಕಾರಣವೆಂದು ಹೇಳುವುದು ಔಪಚಾರಿಕವೇ ಸರಿ. ಶಮದಮಾದಿ ಇತರ ಕಾರಣಗಳು ಇರುವಾಗ ಭಕ್ತಿಯೇ ಕಾರಣವೆಂದು ಹೇಳುವುದು ಹೇಗೆ ಎಂಬ ಶಂಕೆಗೆ **ಭೂಯಸ್ತ್ವಾತ್ತು ಅನುಬಂಧಃ**= ಭಗವದ್ದರ್ಶನದ ಕಾರಣಗಳಲ್ಲಿ ಭಕ್ತಿಯು ಪ್ರಧಾನವಾದುದರಿಂದ ಭಕ್ತಿಯೇ ಕಾರಣವೆಂದು ಹೇಳಲಾಗಿದೆ ಎಂದು ಭಕ್ತಿಯ ಪ್ರಾಧಾನ್ಯವನ್ನು ನಿರೂಪಿಸಲಾಗಿದೆ.

## ಸಂಸಾರಕ್ಕೆ ಮರಳುವವರು ಹಾಗೂ ಮರಳದವರ ಮಾರ್ಗವಿವರ

**ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥ 23 ॥**

**ಅರ್ಥ** – ಭರತಕುಲಶ್ರೇಷ್ಠ ! ಯೋಗಿಗಳು ಯಾವ ಕಾಲದ ಅಭಿಮಾನಿದೇವತೆಯ ಮತ್ತು ಕಾಲಾಭಿಮಾನಿಯಲ್ಲದ ಇತರ ದೇವತೆಯ ನಿಯಮನಕ್ಕೊಳಪಟ್ಟ ಮಾರ್ಗದಲ್ಲಿ ಹೋದವರಾಗಿ ಹಿಂದಿರುಗಿ ಬರುವುದಿಲ್ಲವೋ, ಹಾಗೆಯೇ ಯಾವ ಕಾಲದ ಅಭಿಮಾನಿ ದೇವತೆಯಿಂದ ಮತ್ತು ಕಾಲಾಭಿಮಾನಿಯಲ್ಲದ ದೇವತೆಯಿಂದ ಅಧಿಷ್ಠಿತವಾದ ಮಾರ್ಗದಲ್ಲಿ ಹೋದವರು ಹಿಂದಿರುಗಿ ಬರುವರೋ ಆ ಕಾಲಾಭಿಮಾನಿದೇವತೆಗಳನ್ನೂ ಇತರ ದೇವತೆಗಳನ್ನೂ ಹೇಳುವೆನು .

**ಭಗವಂತಂ ಪ್ರಾಪ್ತಾನಾಮ್ ಅನ್ಯೇಷಾಂ ಚಾಪುನರಾವೃತ್ತಿಪುನರಾವೃತ್ತೀ ಕಥಿತೇ । ತತ್ರ ಯದ್‌ದೇವತಾಧಿಷ್ಠಿತಮಾರ್ಗಾಭ್ಯಾಂ ಗತಾನಾಮಪುನರಾವೃತ್ತಿ-ಪುನರಾವೃತ್ತೀ ಭವತಃ ತಾ ದೇವತಾಃ ಪ್ರತಿಜ್ಞಾಪೂರ್ವಕಮಾಹ ಯತ್ರೇತ್ಯಾದಿ-ತ್ರಯೇಣ ಕಾಲ ಇತಿ । ಯತ್ಕಾಲಾಭಿಮಾನಿ ದೇವತಾಧಿಷ್ಠಿತಮಾರ್ಗೇ ಕಾಲಾನಭಿಮಾನಿದೇವತಾಧಿಷ್ಠಿತಮಾರ್ಗೇ ಚ ಪ್ರಯಾತಾ ಯೋಗಿನಃ ಅನಾ-**

**ವೃತ್ತಿಮಾವೃತ್ತಿಂ ಚ ಯಾಂತಿ ತಂ ಕಾಲಂ ತತ್ಕಾಲಾಭಿಮಾನಿದೇವತಾ ಅನ್ಯ-ದೇವತಾಶ್ಚ ವಕ್ಷ್ಯಾಮೀತ್ಯರ್ಥಃ ॥ 23 ॥**

**ಅನುವಾದ–** ಭಗವಂತನನ್ನು ಹೊಂದಿದವರಿಗೆ ಅಪುನರಾವೃತ್ತಿಯೂ ಇತರರಿಗೆ ಪುನರಾವೃತ್ತಿಯೂ ಹೇಳಲಾಯಿತು. ಅಲ್ಲಿ ಯಾವ ದೇವತೆಯಿಂದ ಅಧಿಷ್ಠಿತವಾದ ಮಾರ್ಗಗಳಿಂದ ಹೋದವರಿಗೆ ಅಪುನರಾವೃತ್ತಿ – ಪುನರಾವೃತ್ತಿಗಳು ಉಂಟಾಗುವವೋ ಆ ದೇವತೆಗಳನ್ನು ಹೇಳುವೆನೆಂದು ಪ್ರತಿಜ್ಞೆ ಮಾಡಿ '**ಯತ್ರ**' ಇತ್ಯಾದಿ ಮೂರು ಶ್ಲೋಕಗಳಿಂದ ಶ್ರೀಕೃಷ್ಣನು ಹೇಳುತ್ತಿದ್ದಾನೆ.

ಯಾವ ಕಾಲಕ್ಕೆ ಅಭಿಮಾನಿಯಾದ ದೇವತೆಯಿಂದ ಮತ್ತು ಕಾಲಕ್ಕೆ ಅಭಿಮಾನಿಯಲ್ಲದ ದೇವತೆಯಿಂದ ಅಧಿಷ್ಠಿತವಾದ ಮಾರ್ಗದಲ್ಲಿ ಹೋದ ಯೋಗಿಗಳು ಅನಾವೃತ್ತಿಯನ್ನು ಮತ್ತು ಆವೃತ್ತಿಯನ್ನು ಪಡೆಯುವರೋ, **ತಂ ಕಾಲಂ**= ಆ ಕಾಲಾಭಿಮಾನಿದೇವತೆಗಳನ್ನೂ ಅನ್ಯದೇವತೆಗಳನ್ನೂ ಹೇಳುವೆನೆಂದು ಅರ್ಥ.

**ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ 24 ॥**

**ಅರ್ಥ–** ಅಗ್ನಿನಾಮಕದೇವತೆ, ಅರ್ಚಿಸ್ ಎಂಬ ದೇವತೆ, ಅಭಿಜಿತ್ ಕಾಲಕ್ಕೆ ಅಭಿಮಾನಿಯಾದ ದೇವತೆಯಿಂದ ಸಹಿತನಾದ ಹಗಲಿಗೆ ಅಭಿಮಾನಿಯಾದ ದೇವತೆ, ಪೂರ್ಣಿಮಾತಿಥಿಗೆ ಅಭಿಮಾನಿಯಾದ ದೇವತೆಯಿಂಡ ಸಹಿತನಾದ ಶುಕ್ಲಪಕ್ಷಾಭಿಮಾನಿದೇವತೆ, ಷಣ್ಮಾಸಾಭಿಮಾನಿಯಾದ ದೇವತೆಗಳು ವಿಷುವಿಗೆ ಅಭಿಮಾನಿಯಾದ ದೇವತೆಯಿಂದ ಸಹಿತನಾದ ಉತ್ತರಾಯಣಾಭಿಮಾನಿ ದೇವತೆ– ಇವರಿಂದ ಅಧಿಷ್ಠಿತವಾದ ಮಾರ್ಗದಲ್ಲಿ ಪಯಣಿಸುವ ಬ್ರಹ್ಮಜ್ಞಾನಿಗಳು ಬ್ರಹ್ಮನನ್ನು ಹೊಂದುವರು.

ತಾ ದೇವತಾ ಉದ್ದೇಶೇನಾಹ- **ಅಗ್ನಿರಿತಿ** ॥ ಅಗ್ನಿನಾಮಕದೇವತಾ । ಜ್ಯೋತಿರಿತಿ ಅರ್ಚಿರ್ನಾಮಕದೇವತಾ । ಅಹರಹರಭಿಮಾನಿದೇವತಾ । ಅಭಿಜಿದ್ದೇವತಾಸಹಿತೇತ್ಯಪಿ ಧ್ಯೇಯಮ್ । ಶುಕ್ಲಃ ಶುಕ್ಲಪಕ್ಷಾಭಿಮಾನಿನೀ ಪೌರ್ಣಮಾಸ್ಯಭಿಮಾನಿನ್ಯಾ ಸಹೇತಿ ಗ್ರಾಹ್ಯಮ್ । ಷಣ್ಮಾಸಾಭಿಮಾನಿನೀ ಉತ್ತರಾಯಣಾಭಿಮಾನಿನೀ । ವಿಷ್ವಭಿಮಾನಿನ್ಯಾ ಸಹೇತಿ ಜ್ಞೇಯಮ್ । ತತ್ರ ಕ್ರಮೇಣ ನಿರ್ದಿಷ್ಟಾಗ್ನ್ಯಾದಿದೇವತಾಽಧಿಷ್ಠಿತಮಾರ್ಗೇ ಪ್ರಯಾತಾಃ ಬ್ರಹ್ಮವಿದೋ ಜನಾಃ ಬ್ರಹ್ಮ ಗಚ್ಛಂತಿ ॥ 24 ॥

**ಅನುವಾದ**– ಆ ದೇವತೆಗಳನ್ನು ನಾಮನಿರ್ದೇಶಪೂರ್ವಕವಾಗಿ 'ಅಗ್ನಿ' ಎಂಬ ಶ್ಲೋಕದಲ್ಲಿ ಶ್ರೀಕೃಷ್ಣನು ಹೇಳುತ್ತಿದ್ದಾನೆ. ಅಗ್ನಿ ಎಂಬ ಹೆಸರಿನ ದೇವತೆ, ಜ್ಯೋತಿ ಅಂದರೆ ಅರ್ಚಿರ್ನಾಮಕ ದೇವತೆ, **ಅಹಃ** = ಹಗಲಿಗೆ ಅಭಿಮಾನಿಯಾದ ದೇವತೆ – ಅಭಿಜಿತ್ಕಾಲಾಭಿಮಾನಿದೇವತೆಯಿಂದ ಸಹಿತನಾದ ಎಂದೂ ತಿಳಿಯಬೇಕು. **ಶುಕ್ಲಃ**= ಶುಕ್ಲಪಕ್ಷಾಭಿಮಾನಿದೇವತೆ, ಪೂರ್ಣಿಮಾಭಿಮಾನಿ ದೇವತಾಸಹಿತನಾದ ಎಂದೂ ಗ್ರಹಿಸತಕ್ಕದ್ದು, ಷಣ್ಮಾಸಾಭಿಮಾನಿದೇವತೆಗಳು, ಉತ್ತರಾಯಣಕ್ಕೆ ಅಭಿಮಾನಿದೇವತೆ– ವಿಷುಕಾಲಾಭಿಮಾನಿದೇವತಾಸಹಿತನಾದ ಎಂದು ತಿಳಿಯಬೇಕು. **ತತ್ರ**= ಕ್ರಮವಾಗಿ ನಿರ್ದೇಶಿಸಲಾದ ಅಗ್ನ್ಯಾದಿದೇವತೆಗಳಿಂದ ಅಧಿಷ್ಠಿತವಾದ ಮಾರ್ಗದಲ್ಲಿ ಪಯಣಿಸುವ ಬ್ರಹ್ಮವಿದರಾದ ಜನರು ಬ್ರಹ್ಮನನ್ನು ಪಡೆಯುವರು.

**ವಿವರಣೆ**– ಈ ಶ್ಲೋಕದಲ್ಲಿ ಅಹಃ, ಶುಕ್ಲಃ ಮೊದಲಾದ ಪದಗಳು ಅಹರಾದಿ ಕಾಲಗಳಿಗೆ ಅಭಿಮಾನಿಗಳಾದ ದೇವತೆಗಳನ್ನು ಹೇಳುವನೇ ಹೊರತು ಆಯಾ ಕಾಲಗಳನ್ನಲ್ಲ. ಆಯಾ ಕಾಲ ಗಳನ್ನೇ ಹೇಳುವ ಉದ್ದೇಶವಿದ್ದಲ್ಲಿ , ಅಹೋರಾತ್ರಿಗಳನ್ನು ಹೇಳಿದ ಮೇಲೆ ಪುನಃ ಶುಕ್ಲ-ಕೃಷ್ಣ ಪಕ್ಷಗಳನ್ನು ಹೇಳುವ ಅಗತ್ಯವಿಲ್ಲ. ಅಹೋ ರಾತ್ರಿಗಳಿಗಿಂತ ಭಿನ್ನವಾದ ಪಕ್ಷವೆಂಬ ಕಾಲವಿಲ್ಲವಷ್ಟೆ. ಅಹರಭಿಮಾನಿ, ಪಕ್ಷಾಭಿಮಾನಿದೇವತೆಗಳು ಬೇರೆಯಾಗಿರುವುದರಿಂದ ಅಹರಾದಿ ಶಬ್ದಗಳು ಇಲ್ಲಿ ದೇವತಾವಾಚಕಗಳೆಂದಾದಲ್ಲಿ ಪುನರುಕ್ತಿಯಿಲ್ಲ.

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥ 25 ॥**

**ಅರ್ಥ**– ಧೂಮಾಭಿಮಾನಿದೇವತೆ, ರಾತ್ರ್ಯಭಿಮಾನಿದೇವತೆ, ಕೃಷ್ಣಪಕ್ಷಾಭಿಮಾನಿದೇವತೆ, ಷಣ್ಮಾಸಾಭಿಮಾನಿದೇವತೆ, ದಕ್ಷಿಣಾಯನಕಾಲಾಭಿಮಾನಿದೇವತೆ– ಇವರಿಂದ ಅಧಿಷ್ಠಿತವಾದ ಮಾರ್ಗದಲ್ಲಿ ಪ್ರಯಾಣಿಸುವ ಕರ್ಮಯೋಗಿಯು ಚಂದ್ರರೂಪನಾದ ಜ್ಯೋತಿಯನ್ನು ಹೊಂದಿ ಹಿಂದಿರುಗುತ್ತಾನೆ.

**ಧೂಮ ಇತ್ಯಾದಿಧೂಮಾದ್ಯಭಿಮಾನಿದೇವತಾನಿರ್ದೇಶಃ । ತತ್ರ ಧೂಮಾದಿ-ದೇವತಾಽಧಿಷ್ಠಿತಮಾರ್ಗೇ ಪ್ರಯಾತಾ ಇತಿ ಯೋಜ್ಯಮ್ । ಯೋಗೀ ಕರ್ಮ-ಯೋಗೀ । ಪೂರ್ವತ್ರ ಬ್ರಹ್ಮವಿದ ಇತಿ ಅತ್ರ ಯೋಗೀತಿ ವಿಶೇಷಣಾಚ್ಚ ಕ್ರಮಾತ್ ಮಾರ್ಗದ್ವಯಸ್ಯ ಜ್ಞಾನಕರ್ಮಸಾಧ್ಯತ್ವಮುಕ್ತಂ ಧ್ಯೇಯಮ್ । ಏತಚ್ಚ ಮಾರ್ಗ-ದ್ವಯಂ ಅಂತಕಾಲೇ ತದ್ವಿಷಯಸ್ಮೃತಿಮತಾಮೇವೇತಿ ಜ್ಞೇಯಮ್ । ತದಾಹ ಸೂತ್ರೇ– 'ಓಂ ಯೋಗಿನಃ ಪ್ರತಿ ಸ್ಮರ್ಯೇತೇ ಸ್ಮಾರ್ತೇ ಚೈತೇ ಓಂ ' (4-2-22) ಇತಿ ॥ 25 ॥**

**ಅನುವಾದ** – '**ಧೂಮ**' ಇತ್ಯಾದಿ ಪದಗಳು ಧೂಮಾದ್ಯಭಿಮಾನಿದೇವತೆಗಳನ್ನು ಹೇಳುವ ಪದಗಳಾಗಿವೆ. **ತತ್ರ** = ಧೂಮಾದಿದೇವತೆಗಳಿಂದ ಅಧಿಷ್ಠಿತವಾದ ಮಾರ್ಗದಲ್ಲಿ. '**ಪ್ರಯಾತಾಃ** = ಪಯಣಿಸುವವರು' ಎಂಬ ಪದವನ್ನು ಇಲ್ಲಿ ಯೋಜಿಸಬೇಕು. **ಯೋಗೀ**= ಕರ್ಮಯೋಗಿಯು. ಹಿಂದಿನ ಶ್ಲೋಕದಲ್ಲಿ '**ಬ್ರಹ್ಮವಿದಃ**' ಎಂದು ಈ ಶ್ಲೋಕದಲ್ಲಿ '**ಯೋಗೀ**' ಎಂದು ವಿಶೇಷಣ ಗಳಿಂದ ಅರ್ಚಿರಾದಿ ಮಾರ್ಗ ಮತ್ತು ಧೂಮಾದಿಮಾರ್ಗವೆಂಬ ಎರಡು ಮಾರ್ಗಗಳು ಕ್ರಮವಾಗಿ ಜ್ಞಾನ ಮತ್ತು ಕರ್ಮಗಳಿಂದ ಪ್ರಾಪ್ಯಗಳೆಂದು ಗಮನಿಸಬೇಕು. ಈ ಎರಡು ಮಾರ್ಗಗಳು, ಅಂತಕಾಲದಲ್ಲಿ ಈ ಮಾರ್ಗಗಳ ಸ್ಮೃತಿಯುಳ್ಳವರಿಗೆ ಮಾತ್ರವೆಂದೂ ತಿಳಿಯ ಬೇಕು. ಈ ವಿಷಯವನ್ನು '**ಯೋಗಿನಃ ಪ್ರತಿಸ್ಮರ್ಯೇತೇ ಸ್ಮಾರ್ತೇ ಚೈತೇ**' (ಬ್ರ.ಸೂ. 4.3.33) ಎಂಬ ಬ್ರಹ್ಮಸೂತ್ರದಲ್ಲಿ ಹೇಳಲಾಗಿದೆ. ॥ 25 ॥

**ವಿವರಣೆ**– ಜ್ಞಾನಯೋಗಿ ಕರ್ಮಯೋಗಿಗಳನ್ನು ಕುರಿತು ಅವರಿಗೆ ಕ್ರಮವಾಗಿ ಬ್ರಹ್ಮಪ್ರಾಪ್ತಿ ಮತ್ತು ಚಂದ್ರಲೋಕಪ್ರಾಪ್ತಿಯು ಬ್ರಹ್ಮಜ್ಞಾನ- ಕಾಮ್ಯಕರ್ಮಾನುಷ್ಠಾನದ ಫಲವೆಂದು '**ಅಗ್ನಿರ್ಜ್ಯೋತಿಃ**', '**ಧೂಮೋ ರಾತ್ರಿಃ**' ಇತ್ಯಾದಿ ಸ್ಮೃತಿಗಳಲ್ಲಿ ಹೇಳಲಾಗಿದೆ. ಈ ಫಲಗಳನ್ನು ಪಡೆಯಲು ಮರಣಕಾಲದಲ್ಲಿ ಆ ಗತಿಗಳ ಸ್ಮರಣೆಯು ಕಾರಣವೆಂದು ಸೂತ್ರ ಭಾವ.

**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಮನ್ಯಯಾऽऽವರ್ತತೇ ಪುನಃ ॥ 26 ॥**

**ಅರ್ಥ** – ಈ ಹಿಂದೆ ಹೇಳಲಾದ, ಜ್ಞಾನಯೋಗಿಗಳಿಗೆ ಮತ್ತು ಕರ್ಮಯೋಗಿಗಳಿಗೆ ಕ್ರಮವಾಗಿ ಸಂಬಂಧಿಸಿದ ಶುಕ್ಲಪಕ್ಷಾಭಿಮಾನಿದೇವತೆಯ ಮಾರ್ಗ ಮತ್ತು ಕೃಷ್ಣಪಕ್ಷಾಭಿಮಾನಿ-ದೇವತೆಯ ಮಾರ್ಗ ಇವುಗಳು ಶಾಶ್ವತವೆಂದು ಅಭಿಮತವಾಗಿದೆ. ಒಂದು ಮಾರ್ಗದಿಂದ ಹೋದವನು ಹಿಂದಿರುಗುವುದಿಲ್ಲ. ಮತ್ತೊಂದು ಮಾರ್ಗದಿಂದ ಹೋದವನು ಹಿಂದಿರುಗುತ್ತಾನೆ.

**ಉಕ್ತೌ ಮಾರ್ಗೌ ನಿಗಮಯತಿ- ಶುಕ್ಲೇತಿ ॥ ಏತೇ ಪ್ರಾಗುಕ್ತೇ ಶುಕ್ಲಕೃಷ್ಣೇ ಗತೀ ಮಾರ್ಗೌ ಜಗತಃ ಜ್ಞಾನಕರ್ಮಯೋಗಿಜಗತ್‌ಸಂಬಂಧಿನೌ ಶಾಶ್ವತೇ ಶಾಶ್ವತ್ಯೌ ಮತೇ । ಏಕಯಾ ಗತಃ ಅನಾವೃತ್ತಿಂ ಯಾತಿ । ಅನ್ಯಯಾ ಗತಃ ಪುನರಾವರ್ತತ ಇತಿ ॥ 26 ॥**

**ಅನುವಾದ** – ಹಿಂದೆ ಹೇಳಿದ ಮಾರ್ಗಗಳನ್ನು ಶ್ರೀಕೃಷ್ಣನು 'ಶುಕ್ಲ' ಎಂಬ ಶ್ಲೋಕದಿಂದ ನಿಗಮನ ಮಾಡುತ್ತಿದ್ದಾನೆ. **ಏತೇ** = ಈ ಹಿಂದೆ ಹೇಳಲಾದ, **ಶುಕ್ಲಕೃಷ್ಣೇ ಗತೀ**= ಶುಕ್ಲಪಕ್ಷಾಭಿಮಾನಿ ದೇವತೆ ಮತ್ತು ಕೃಷ್ಣಪಕ್ಷಾಭಿಮಾನಿದೇವತೆಗಳ ಮಾರ್ಗಗಳು, **ಜಗತಃ**= ಜ್ಞಾನ-ಕರ್ಮ

ಯೋಗಿಗಳ ಜಗತ್ತಿಗೆ ಸಂಬಂಧಪಟ್ಟಿದ್ದಾಗಿ, **ಶಾಶ್ವತೇ ಮತೇ**= ಶಾಶ್ವತವಾದವು ಎಂದು ಅಭಿಮತವಾಗಿದೆ. ಒಂದು ಮಾರ್ಗದಿಂದ ಹೋದವನು ಅನಾವೃತ್ತಿಯನ್ನು ಹೊಂದುವನು . ಮತ್ತೊಂದು ಮಾರ್ಗದಿಂದ ಹೋದವನು ಹಿಂದಿರುಗುತ್ತಾನೆ. ॥ 26 ॥

**ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥ 27 ॥**

**ಅರ್ಥ** – ಹೇ ಪಾರ್ಥ ! ಈ ಎರಡು ಮಾರ್ಗಗಳನ್ನು ತಿಳಿದು ಸಾಕ್ಷಾತ್ಕರಿಸಿಕೊಳ್ಳುವ ಯಾವ ಯೋಗಿಯೂ ಮೋಹಗೊಳ್ಳುವುದಿಲ್ಲ. ಅರ್ಜುನ ! ಆದ್ದರಿಂದ ಎಲ್ಲ ಕಾಲಗಳಲ್ಲೂ ಯೋಗಾನುಷ್ಠಾನ ನಿರತನಾಗಿರು.

**ಮಾರ್ಗಯೋರುಕ್ತೇಃ ಫಲಮಾಹ– ನೈತೇ ಇತಿ ॥ ಹೇ ಪಾರ್ಥ ಏತೇ ಪ್ರಾಗುಕ್ತೇ ಸೃತೀ ಮಾರ್ಗೌ ಜಾನನ್ ಯೋಗೀ ಸೃತ್ಯುಪಾಯಭೂತಜ್ಞಾನ-ಕರ್ಮಾನುಷ್ಠಾನವಾನ್ ಯದ್ವಾ ಯೋಗೀ ಬ್ರಹ್ಮಾಪರೋಕ್ಷಜ್ಞಾನವಾನೇತೇ ಸೃತೀ ಜಾನನ್ ಸಾಕ್ಷಾತ್ಕುರ್ವನ್ ಕಶ್ಚನ ಕೋऽಪಿ ನ ಮುಹ್ಯತಿ । ಭಗವದ್ವಿಸ್ಮೃತಿರೂಪ-ಮೋಹಂ ನ ಪ್ರಾಪ್ನೋತಿ । ತಸ್ಮಾದ್ಯೋಗಸ್ಯ ಪುಮರ್ಥ ಹೇತುತ್ವಾತ್ ಸರ್ವದಾ ಭಗವದ್ಜ್ಞಾನಭಕ್ತಿಪೂರ್ವಂ ಸ್ವೋಚಿತನಿವೃತ್ತಕರ್ಮಾನುಷ್ಠಾನರೂಪೋ-ಪಾಯಯುಕ್ತೋ ಭವೇತಿ । ದ್ವಿಃ ಸಂಬೋಧನಮಾದರಾರ್ಥಮ್ ॥ 27 ॥**

**ಅನುವಾದ**– ಎರಡು ಮಾರ್ಗಗಳನ್ನು ನಿರೂಪಿಸಿದ್ದರ ಫಲವನ್ನು 'ನೈತೇ' ಎಂಬ ಶ್ಲೋಕದಿಂದ ಹೇಳುತ್ತಿದ್ದಾನೆ.

ಹೇ ಪಾರ್ಥ ! ಏತೇ = ಈ ಹಿಂದೆ ಹೇಳಲಾದ, ಸೃತೀ = ಎರಡು ಮಾರ್ಗಗಳನ್ನು ತಿಳಿದು, **ಯೋಗೀ**= ಮಾರ್ಗವನ್ನು ಹೊಂದಲು ಕಾರಣವಾದ ಜ್ಞಾನ-ಕರ್ಮಗಳ ಅನುಷ್ಠಾನ ಮಾಡಿದವನು, ಅಥವಾ, **ಯೋಗೀ**= ಬ್ರಹ್ಮಾಪರೋಕ್ಷಜ್ಞಾನವುಳ್ಳವನಾಗಿ, ಈ ಎರಡು ಮಾರ್ಗಗಳನ್ನು , **ಜಾನನ್** = ಸಾಕ್ಷಾತ್ಕರಿಸಿಕೊಂಡವನು , **ಕಶ್ಚನ**= ಯಾರೂ, **ನ ಮುಹ್ಯತಿ**= ಭಗವಂತನ ವಿಸ್ಮರಣರೂಪವಾದ ಮೋಹವನ್ನು ಹೊಂದುವುದಿಲ್ಲ. **ತಸ್ಮಾತ್**= ಹೀಗೆ ಯೋಗವು ಪುರುಷಾರ್ಥಸಾಧನವಾದದ್ದರಿಂದ, ಸರ್ವಕಾಲದಲ್ಲೂ ಭಗವಂತನ ಜ್ಞಾನ ಮತ್ತು ಅವನಲ್ಲಿ ಭಕ್ತಿ – ಇವುಗಳಿಂದ ಸಹಿತನಾಗಿ ತನಗೆ ಯೋಗ್ಯವಾದ ನಿವೃತ್ತಕರ್ಮಾನುಷ್ಠಾನ ರೂಪವಾದ ಸಾಧನದಿಂದ ಯುಕ್ತನಾಗಿರು. ಇಲ್ಲಿ ಅರ್ಜುನ, ಪಾರ್ಥ ಎಂದು ಎರಡು ಸಲ ಸಂಬೋಧಿಸಿರುವದು ಆದರಕ್ಕೋಸ್ಕರವಾಗಿ. ॥ 27 ॥

**ವೇದೇಷು ಯಜ್ಞೇಷು ತಪಸ್ಸು ಚೈವ**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥ 28 ॥**

*॥ ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಜ್ಞಾನವಿಜ್ಞಾನಯೋಗೋ ನಾಮ ಅಷ್ಟಮೋಽಧ್ಯಾಯಃ ॥*

**ಅರ್ಥ–** ಈ ಅಧ್ಯಾಯೋಕ್ತವಾದ ಎಲ್ಲಾ ವಿಷಯವನ್ನೂ ತಿಳಿದು ಅಥವಾ ಮಾರ್ಗಬ್ರಹ್ಮಗಳನ್ನು ಸಾಕ್ಷಾತ್ಕರಿಸಿಕೊಂಡು ವೇದಾಧ್ಯಯನ, ಯಜ್ಞಾನುಷ್ಠಾನ, ಕೃಚ್ಛ್ರಾದಿ ತಪಸ್ಸಿನ ಆಚರಣೆ , ದಾನ ಇವುಗಳ ವಿಷಯದಲ್ಲಿ ಯಾವುದೆಲ್ಲ ಪುಣ್ಯಫಲವನ್ನು ಹೇಳಲಾಗಿದೆಯೋ ಅದೆಲ್ಲವನ್ನೂ ಮೀರುವನು . ಅತ್ಯುತ್ತಮವಾದ ಭಗವಂತನ ಸ್ಥಾನರೂಪವಾದ ಫಲವನ್ನು ಹೊಂದುವನು.

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ ಭಗವದ್ಗೀತೆಯಲ್ಲಿ ಜ್ಞಾನವಿಜ್ಞಾನಯೋಗವೆಂಬ ಎಂಟನೇ ಅಧ್ಯಾಯವು ಮುಗಿಯಿತು.*

ಅಧ್ಯಾಯಾರ್ಥಂ ಫಲೋಕ್ತ್ಯೋಪಸಂಹರತಿ– **ವೇದೇಷ್ವಿತಿ ॥** ವೇದಾಧ್ಯಯನ-ಯಜ್ಞಾನುಷ್ಠಾನಕೃಚ್ಛ್ರಾದಿತಪಶ್ಚರಣೇಷು ಯದೇವ ಪುಣ್ಯಫಲಂ ಪ್ರದಿಷ್ಟಂ ನಿರ್ದಿಷ್ಟ-ಮಸ್ತಿ ತತ್ಸರ್ವಮೇವೇತಿ ವಾ ಏವ ಶಬ್ದಾನ್ವಯಃ । ಇದಂ ಅಧ್ಯಾತ್ಮಾದಿಸ್ವರೂಪಂ ಭಗವತೋಽಶೇಷಸ್ರಷ್ಟೃತ್ವಂ ಶುಕ್ಲಕೃಷ್ಣಮಾರ್ಗಾದಿಕಂ ಚ ಪ್ರಾಗುಕ್ತಂ ವಿದಿತ್ವಾಽ-ತ್ಯೇತಿ ಅತಿಕ್ರಾಮತಿ । ತತೋಽತಿಶಯಿತಫಲವಾನ್ ಭವತಿ । ಕಿಂ ತದಿತ್ಯತ ಆಹ-**ಯೋಗೀತಿ ॥** ಜ್ಞಾನೋಪಾಯವಾನ್ । ಆದ್ಯಂ ಪರಂ ಸ್ಥಾನಂ ವಿಷ್ಣೋಃ ಸ್ಥಾನಮುಪೈತಿ ಚೇತಿ । ಯದ್ವಾ 'ಮಾರ್ಗೌ ಬ್ರಹ್ಮ ಚ ಯಃ ಪಶ್ಯೇತ್ ಸಾಕ್ಷಾದೇವಾಪರೋಕ್ಷತಃ । ಸರ್ವಪುಣ್ಯಾತಿಗೋಽಮುಹ್ಯನ್ ಯಾತ್ಯಸೌ ಬ್ರಹ್ಮ ತತ್ಪರಮ್ ' ಇತ್ಯುಕ್ತದಿಶಾ ಮಾರ್ಗಬ್ರಹ್ಮಮಾತ್ರಪರಮಾರ್ಶಕೋಽತ್ರೇದಂ ಶಬ್ದಃ । ವಿದಿತ್ವೇತ್ಯಸ್ಯ ಸಾಕ್ಷಾತ್ಕೃತ್ವೇತ್ಯರ್ಥಃ ॥ 28 ॥

*॥ ಇತಿ ಶ್ರೀಮದ್ಭಗವದ್ಗೀತಾರ್ಥಸಂಗ್ರಹೇ ಶ್ರೀಮದ್ರಾಘವೇಂದ್ರಯತಿಕೃತೇ ಅಷ್ಟಮೋಽಧ್ಯಾಯಃ ॥*

**ಅನುವಾದ**– ಅಧ್ಯಾಯದ ವಿಷಯವನ್ನು , ಫಲವನ್ನು ಹೇಳುವ ಮೂಲಕ **'ವೇದೇಷು'** ಎಂಬ ಶ್ಲೋಕದಿಂದ ಶ್ರೀಕೃಷ್ಣನು ಉಪಸಂಹರಿಸುತ್ತಿದ್ದಾನೆ.

ವೇದಾಧ್ಯಯನ, ಯಜ್ಞಾನುಷ್ಠಾನ, ಕೃಚ್ಛ್ರಾದಿತಪಸ್ಸಿನ ಆಚರಣೆ ಇವುಗಳ ವಿಷಯದಲ್ಲಿ ಯಾವುದೆಲ್ಲ ಪುಣ್ಯಫಲವೇ , **ಪ್ರದಿಷ್ಟಂ** = ನಿರ್ದೇಶಿಸಲ್ಪಟ್ಟಿದೆಯೋ- ಅಥವಾ **'ತತ್ಸರ್ವ-ಮೇವ'** = ಅವೆಲ್ಲವನ್ನೂ ಎಂದು ಏವಶಬ್ದದ ಅನ್ವಯವಿದೆ- ಅದನ್ನು , **ಇದಂ**= ಅಧ್ಯಾತ್ಮಾದಿಗಳ ಸ್ವರೂಪ, ಭಗವಂತನ ಅಶೇಷ ಸೃಷ್ಟಿಕರ್ತೃತ್ವ, ಶುಕ್ಲ – ಕೃಷ್ಣಮಾರ್ಗ ಮೊದಲಾದ ಹಿಂದೆ ಹೇಳಿದ ವಿಷಯಗಳನ್ನು ತಿಳಿದು, **ಅತಿಕ್ರಾಮತಿ** = ಅದಕ್ಕಿಂತಲೂ ಅತಿಶಯವಾದ ಫಲವುಳ್ಳವನಾಗುವನು. ಆ ಫಲವೇನು ? ಎಂಬ ಪ್ರಶ್ನೆಗೆ **'ಯೋಗೀ'** ಎಂಬ ವಾಕ್ಯದಲ್ಲಿ ಶ್ರೀಕೃಷ್ಣನು ಉತ್ತರವನ್ನು ಹೇಳಿದ್ದಾನೆ. **ಯೋಗೀ**= ಜ್ಞಾನ ಸಾಧನವುಳ್ಳವನು. **ಆದ್ಯಂಪರಂಸ್ಥಾನಂ** = ವಿಷ್ಣುವಿನ ಅತ್ಯುತ್ತಮ ಸ್ಥಾನವನ್ನು ಹೊಂದುವನು ಎಂದು.

**ಅಥವಾ,**'ಶುಕ್ಲ – ಕೃಷ್ಣಗಳೆಂಬ ಎರಡು ಮಾರ್ಗಗಳನ್ನೂ , ಪರಬ್ರಹ್ಮನನ್ನೂ ಯಾರು ಸಾಕ್ಷಾತ್ತಾಗಿ ಅಪರೋಕ್ಷದಿಂದ ನೋಡುವನೋ ಅವನು ವೇದಾಧ್ಯಯನಾದಿಗಳಿಂದ ಲಭಿಸುವ ಪುಣ್ಯಗಳನ್ನು ಅತಿಕ್ರಮಿಸಿ ಮೋಹರಹಿತನಾಗಿ ಆ ಪರಬ್ರಹ್ಮನನ್ನು ಹೊಂದುವನು' ಎಂದು ಹೇಳಿರುವಂತೆ ಇಲ್ಲಿ **'ಇದಂ'** ಶಬ್ದವು ಮಾರ್ಗ ಮತ್ತು ಪರಬ್ರಹ್ಮ ಇವೆರಡನ್ನು ಮಾತ್ರ ಪರಾಮರ್ಶಿಸುವುದು. **'ವಿದಿತ್ವಾ'** ಎಂಬ ಪದಕ್ಕೆ ಸಾಕ್ಷಾತ್ಕರಿಸಿಕೊಂಡು ಎಂದು ಅರ್ಥ. ॥ 28 ॥

***ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ***
***ಎಂಟನೇ ಅಧ್ಯಾಯವು ಮುಗಿಯಿತು.***

# ಅಧ್ಯಾಯ – 9

**ಶ್ರೀಭಗವಾನುವಾಚ –**

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯದ್‌ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥ 1 ॥**

**ಅರ್ಥ–** ಭಗವಂತನು ಹೇಳಿದನು– ಅಸೂಯೆಯೇ ಮೊದಲಾದ ದೋಷರಹಿತನಾಗಿ ತತ್ತ್ವಜ್ಞಾನಕ್ಕೆ ಅಧಿಕಾರಿಯೆನಿಸಿರುವ ನಿನಗೆ (ಅರ್ಜುನನಿಗೆ) ನಾನು ಯಾವುದನ್ನು ಅರಿತರೆ ಅಶುಭವಾದ ಸಂಸಾರದಿಂದ ಮುಕ್ತಿಪಡೆಯಲು ಸಮರ್ಥನೆನಿಸುವೆಯೋ ಅಂತಹ, ಮುಂದೆ ಇಲ್ಲಿ ನಿರೂಪಿಸಲಾಗುತ್ತಿರುವ ಅತ್ಯಂತ ರಹಸ್ಯವಾದ ವಿಶೇಷ ಪ್ರಮೇಯಗಳಿಂದ ಸಹಿತವಾದ, ಅವಶ್ಯವಾಗಿ ಅರಿಯಬೇಕಾದ ತತ್ತ್ವವನ್ನು ವಿವರಿಸುತ್ತೇನೆ.

## ಗೀತಾವಿವೃತಿ

**ಸಪ್ತಮೇಽಧ್ಯಾಯೇ 'ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ' (7–30) ಇತ್ಯಾದಿನೋಕ್ತಂ ಭಗವನ್ಮಾಹಾತ್ಮ್ಯಮ್ ಅತ್ರಾಧ್ಯಾಯೇ ಪ್ರಪಂಚ್ಯತೇ । ನ ಚೈವಂ ತದಾನಂತರ್ಯಮೇವಾಸ್ಯ ಶಂಕ್ಯಮ್ । ಅಧ್ಯಾತ್ಮಾದಿ-ಪದಾನಾಂ ನಿರೂಪಣೇನ ಪರಿಹಾರೋಕ್ತ್ಯನಂತರಮೇವಾತ್ರ ಸಾಧಿಭೂತಾದಿ-ವಾಕ್ಯಾರ್ಥಭೂತಭಗವನ್ಮಾಹಾತ್ಮ್ಯವರ್ಣನಸ್ಯಾವಸರಾದಿತಿ ಧ್ಯೇಯಮ್ ।**

**ಅನುವಾದ–** ಏಳನೆಯ ಅಧ್ಯಾಯದ ಕೊನೆಯಲ್ಲಿ **'ಸಾಧಿಭೂತಾಧಿ ದೈವಂ ಮಾಂ ಸಾಧಿ ಯಜ್ಞಂ ಚ ಯೇ ವಿದುಃ'** ಎಂದು ಹೇಳುವ ಮೂಲಕ , ಸಂಕ್ಷೇಪವಾಗಿ ಹೇಳಲ್ಪಟ್ಟಿರುವ 'ಅಧಿ ಭೂತ ಹಾಗೂ ಅಧ್ಯಾತ್ಮ ತತ್ತ್ವಗಳ ನಿಯಾಮಕತ್ವರೂಪದ ಹಾಗೂ 'ಯಜ್ಞಕರ್ತೃತ್ವ ಯಜ್ಞ-ಭೋಕ್ತೃತ್ವ ಯಜ್ಞಫಲಧಾತೃತ್ವ(ಸಾಧಿಯಜ್ಞ)ರೂಪದ, ಭಗವನ್ಮಹಿಮೆಯನ್ನು ಈ ಅಧ್ಯಾಯದಲ್ಲಿ ವಿಸ್ತಾರವಾಗಿ ನಿರೂಪಿಸಲಾಗಿದೆ. ಈ ಮಹಿಮೆಗೆ ಸಂಬಂಧಿಸಿ ಅಧ್ಯಾತ್ಮ ಮೊದಲಾದ ತತ್ವಗಳನ್ನು ನಿರೂಪಿಸಿ ಅಧ್ಯಾತ್ಮವೆಂದರೇನು ? ಇವೇ ಮುಂತಾದ ಪ್ರಶ್ನೆಗಳನ್ನು ಪರಿಹರಿಸಿದ ನಂತರವಷ್ಟೆ **'ಸಾಧಿಭೂತಾಧಿದೈವಂ ಮಾಂ'** ಎಂಬ ಶ್ಲೋಕದಲ್ಲಿ ಸಂಕ್ಷೇಪವಾಗಿ ಹೇಳಲಾಗಿರುವ

ಭಗವನ್ಮಾಹಾತ್ಮ್ಯೆಯ ಕಡೆಗೆ ಗಮನ ಹರಿಯುವಂತಾಗಿ ವಿಶೇಷ ಜಿಜ್ಞಾಸೆಯುಂಟಾದಾಗ ಮಾತ್ರ ಅದರ ವಿವರಣೆಯು ಸಂಗತವೆನಿಸುತ್ತದೆ (ಹಾಗಾಗಿ ಏಳನೆಯ ಅಧ್ಯಾಯದ ಕೊನೆಯಲ್ಲಿರುವ ಆ ವಾಕ್ಯವಾದ ಕೂಡಲೆ ಮುಂದಿನ ಎಂಟನೆಯ ಅಧ್ಯಾಯದಲ್ಲಿಯೇ ಈ ವಿವರಣೆಯನ್ನು ಕೈಗೆತ್ತಿಗೊಳ್ಳದೆ, ಅಧ್ಯಾತ್ಮಾದಿ ತತ್ತ್ವಗಳ ನಿರೂಪಣೆಯನ್ನು ಆ ಅಧ್ಯಾಯದಲ್ಲಿ ಮಾಡಿ ನಂತರ ಈ ಅಧ್ಯಾಯದಲ್ಲಿ ಕೈಗೊಳ್ಳಲಾಗಿದೆ.) ಆದುದರಿಂದ ಆ ವಾಕ್ಯದ ನಂತರ ವ್ಯವಧಾನವಿಲ್ಲದಂತೆ ಈ ವಿವರಣೆಯನ್ನು ಕೈಗೆತ್ತಿಕೊಳ್ಳಬೇಕಿತ್ತಲ್ಲವೇ ? ಎಂಬೀ ಆಕ್ಷೇಪಕ್ಕೆ ಅವಕಾಶವಿಲ್ಲ.

**ವಿವರಣೆ – 'ಸಂಕ್ಷೇಪವಿಸ್ತರಾಭ್ಯಾಂ ಹಿ ಕಥಯಂತಿ ಮನೀಷಿಣಃ'** ಎಂಬ ನ್ಯಾಯರೀತ್ಯಾ ಭಗವಂತನು ಏಳನೆಯ ಅಧ್ಯಾಯದ ಕೊನೆಯಲ್ಲಿ ಸಂಕ್ಷೇಪವಾಗಿ ತನ್ನ ಅಧಿದೈವನಿಯಾಮಕತ್ವವೇ ಮೊದಲಾದ ಮಹಿಮೆಯನ್ನು ಸೂಚಿಸಿ. ಅದರ ವಿಸ್ತೃತ ವಿವರಣೆಯನ್ನು ಈ ಅಧ್ಯಾಯದಲ್ಲಿ ನೀಡುತ್ತಿದ್ದಾನೆ. ಸಂಕ್ಷೇಪವಾಗಿ ಸೂಚಿತವಾದ ಆ ಮಾಹಾತ್ಮ್ಯವು ವಿಷಯದಲ್ಲಿ ವಿಶೇಷ ಜಿಜ್ಞಾಸೆಯು ಆ ಕೂಡಲೆ ಉಂಟಾಗುವುದರಿಂದ ಅದನ್ನು ತಣಿಸಲು ಮುಂದಿನ ಎಂಟನೇ ಅಧ್ಯಾಯದಲ್ಲಿಯೇ ಈ ವಿಸ್ತೃತ ವಿವರಣೆಯನ್ನು ಕೈಗೆತ್ತಿಗೊಳ್ಳಬೇಕಿತ್ತಲ್ಲವೇ ? ಎಂದು ಇಲ್ಲಿ ಆಕ್ಷೇಪ. ಅದಕ್ಕೆ ಗೀತಾವಿವೃತಿಯ ಉತ್ತರ– 'ಆ ಅಧಿದೈವಾದಿನಿಯಾಮಕತ್ವವು ಒಂದು ಮಹಿಮೆಯಾಗಿದೆ ಎಂದು ಅದು ಬುದ್ಧ್ಯಾರೂಢವಾಗಬೇಕಾದರೆ ಅವಶ್ಯವಾಗಿ ಮೊದಲು ಅಧಿದೈವಾದಿ ತತ್ತ್ವಗಳ ಸ್ವರೂಪದ, ವೈಶಿಷ್ಟ್ಯದ ಅರಿವು ಮೂಡಬೇಕಾಗಿದೆ. ನಿಯಮ್ಯವಸ್ತುಗಳ ಮಹತ್ವವನ್ನು ಆಧರಿಸಿ ಅವುಗಳ ನಿಯಾಮಕತ್ವವು ಮಾಹಾತ್ಮ್ಯವೆಂದು ಪರಿಗಣಿಸಲ್ಪಡಲು ಸಾಧ್ಯ. ಹಾಗಾಗಿ ಈ ಮಹಿಮೆಯ ಅರಿವಿಗೆ ಪೂರಕವಾಗಿ ಜಿಜ್ಞಾಸುವಿಗೆ ಈ ತತ್ವಗಳ ಅರಿವು ಅನಿವಾರ್ಯ. ಹಾಗಾಗಿ ಅವುಗಳ ಜಿಜ್ಞಾಸೆಯನ್ನು ತಣಿಸಿ ಜಿಜ್ಞಾಸುವನ್ನು ತನ್ನ ಮುಂದಿನ ನಿರೂಪಣೆಯ ಕಡೆಗೆ ಒಲಿಸಿಕೊಳ್ಳಬೇಕಾದರೆ ಪೂರ್ವಭಾವಿಯಾಗಿ ಆ ತತ್ತ್ವಗಳ ನಿರೂಪಣೆ ಅನಿವಾರ್ಯ, ಹಾಗೂ ಆವಶ್ಯಕ. ಅದುದರಿಂದ ಮಧ್ಯದ ಎಂಟನೆಯ ಅಧ್ಯಾಯದಲ್ಲಿ ಅವುಗಳ ನಿರೂಪಣೆ ಸಂಗತವೇ ಆಗಿದೆ– ಎಂದು.

## ಪರಮಾತ್ಮನ ಮಹಿಮೆಯ ಪ್ರಶಂಸೆ

**ಅತಿಚಿತ್ರಮಹಿಮಾನಂ ವಕ್ತುಂ ತತ್ರಾದರಜನನಾಯ ಪ್ರತಿಜ್ಞಾಪೂರ್ವಂ ವಕ್ಷ್ಯಮಾಣಂ ಪ್ರಶಂಸತಿ– ಇದಂ ತ್ವಿತಿ ॥ ಗುಹ್ಯತಮಂ ಅತಿಗೋಪ್ಯಮಿದಂ ವಕ್ಷ್ಯಮಾಣಂ ಜ್ಞಾನಮ್ । ಕರ್ಮಣಿ ಲ್ಯುಟ್ । ಜ್ಞಾತವ್ಯಂ ವಿಶೇಷೇಣ ಜ್ಞಾತವ್ಯ-ಸಹಿತಮ್ । ಅನಸೂಯವೇ ಅಸೂಯಾದಿದೋಷಹೀನಾಯ । ಏವಂರೂಪ ಏವಾಧಿಕಾರೀತಿ ಜ್ಞಾಪನಾಯೈತದ್ವಿಶೇಷಣೋಕ್ತಿಃ । ತೇ ತುಭ್ಯಂ ಪ್ರವಕ್ಷ್ಯಾಮಿ ಯದ್‌ಜ್ಞಾತ್ವಾ ಅಶುಭಾನ್ಮೋಕ್ಷ್ಯಸೇ । ಯಚ್ಛಬ್ದಸ್ಯೇದಂತ್ವಿತ್ಯನೇನಾನ್ವಯಃ ॥ 1 ॥**

**ಅನುವಾದ-** (1) ಪರಮಾತ್ಮನ ಅತ್ಯಾಶ್ಚರ್ಯಕರವಾದ ಮಹಿಮೆಯನ್ನು ಹೇಳಲು ಮುಂದಾಗಿ, ತನ್ನ ಈ ನಿರೂಪಣೆಯಲ್ಲಿ ಜಿಜ್ಞಾಸುವಿಗೆ ಆದರ ಉಂಟಾಗುವ ಮೂಲಕ ಆಕರ್ಷಣೆ ಉಂಟಾಗುವಂತೆ ಮಾಡಲು ಮುಂದೆ ಹೇಳಲಾಗುತ್ತಿರುವ ಪ್ರಮೇಯವನ್ನು **ಇದಂ ತು ತೇ ಗುಹ್ಯತಮಂ** ಎಂಬೀ ಶ್ಲೋಕದಿಂದ ಪ್ರಶಂಸಿಸಲಾಗುತ್ತಿದೆ. **ಗುಹ್ಯತಮಂ**= ಅತ್ಯಂತ ರಹಸ್ಯವಾದ **ಇದಂ**= ಮುಂದೆ ಇಲ್ಲಿ ನಿರೂಪಿಸಲ್ಪಡುತ್ತಿರುವ **ಜ್ಞಾನಂ** = ಪ್ರಮೇಯವನ್ನು . (1) ಈ ಜ್ಞಾನ ಶಬ್ದವು ಜ್ಞಾಧಾತುವಿಗೆ ಕರ್ಮಕಾರಕಾರ್ಥದಲ್ಲಿ ಲ್ಯುಟ್ ಎಂಬ ಪ್ರತ್ಯಯ ಸೇರಿದಾಗ ನಿಷ್ಪನ್ನ ವಾಗಿದೆ. ಹಾಗಾಗಿ, **ಜ್ಞಾನಂ** = ಜ್ಞಾನಕ್ಕೆ ವಿಷಯವಾದ ಪ್ರಮೇಯ. **ಸವಿಜ್ಞಾನಂ ಜ್ಞಾನಂ**= (2) ವಿಶೇಷವಾಗಿ ತಿಳಿಯಲ್ಪಡಬೇಕಾದ ಪ್ರಮೇಯಗಳಿಂದ ಸಹಿತವಾದ ಸಾಮಾನ್ಯ ಪ್ರಮೇಯವನ್ನು, **ಅನಸೂಯವೇ**= ಅಸೂಯೆಯೇ ಮೊದಲಾದ ದೋಷರಹಿತನಾದ, **ತೇ** = ನಿನಗೆ. ಇಲ್ಲಿ ನಿರೂಪಿಸಲ್ಪಡುತ್ತಿರುವ ತತ್ತ್ವಜ್ಞಾನಕ್ಕೆ ಇಂತಹ ದೋಷರಹಿತರೇ ಅಧಿಕಾರಿಗಳು ಎಂದು ಸೂಚಿಸಲು, ಅರ್ಜುನನಿಗೆ ಈ ವಿಶೇಷಣವನ್ನು ನೀಡಲಾಗಿದೆ. **ಪ್ರವಕ್ಷ್ಯಾಮಿ** = ನಿರೂಪಿಸುತ್ತೇನೆ. **ಯತ್ ಜ್ಞಾತ್ವಾ**= ಯಾವ ಈ ಪ್ರಮೇಯವನ್ನು ತಿಳಿದು. **ಅಶುಭಾತ್**= ದುಷ್ಟವಾದ ಸಂಸಾರ ದಿಂದ , **ಮೋಕ್ಷ್ಯಸೇ**= ಬಿಡುಗಡೆ ಹೊಂದುವಿ. || 1 ||

**ವಿವರಣೆ-** (1) 'ಜ್ಞಾ' ಎಂಬ ಧಾತುವಿಗೆ ಅವಬೋಧನೆ, ಅರಿವು ಎಂದರ್ಥ. ಅದಕ್ಕೆ ಲ್ಯುಟ್ ಎಂಬ ಪ್ರತ್ಯಯವನ್ನು ಹಚ್ಚಿದಾಗ **'ಜ್ಞಾನ'** ಎಂಬ ಪದವು ನಿಷ್ಪನ್ನವಾಗುತ್ತದೆ. ಈ ಪ್ರತ್ಯಯವು ಸಾಮಾನ್ಯವಾಗಿ ಭಾವಾರ್ಥವನ್ನು ನೀಡುತ್ತದೆ. ಭಾವ ಎಂದರೆ ಧಾತುವಿನ ಅರ್ಥ. ಹೀಗಾಗಿ ಜ್ಞಾನ ಶಬ್ದವು ಸಾಮಾನ್ಯವಾಗಿ **'ಅರಿವು'** ಎಂಬ ಅರ್ಥದಲ್ಲಿರುತ್ತದೆ. ಇಲ್ಲಿ **'ಜ್ಞಾನಂ ಪ್ರವಕ್ಷ್ಯಾಮಿ'** ಎಂದೆನ್ನಲಾಗಿದೆ. ಪ್ರವಚನದಿಂದ ಅರಿವನ್ನು ಮೂಡಿಸಬಹುದು. ಅದನ್ನು ಪ್ರವಚನ ಮಾಡಲು ಸಾಧ್ಯವಿಲ್ಲ. ಹಾಗಾಗಿ ಇಲ್ಲಿಯ ಜ್ಞಾನಶಬ್ದವು ಪ್ರವಚನದಿಂದ ಮೂಡ ಬಹುದಾದ ಜ್ಞಾನಕ್ಕೆ (ಅರಿವಿಗೆ) ವಿಷಯವಾದ ಪ್ರಮೇಯ ಎಂಬ ಅರ್ಥದಲ್ಲಿದೆ. ಹಾಗಾಗಿ ಇಲ್ಲಿ ಲ್ಯುಟ್ ಪ್ರತ್ಯಯವು ಕರ್ಮಕಾರಕಾರ್ಥದಲ್ಲಿದೆ, ಭಾವಾರ್ಥದಲ್ಲಲ್ಲ.

**ವಿವರಣೆ-** (2) ಈ ಶ್ಲೋಕದಲ್ಲಿರುವ ಜ್ಞಾನ ಹಾಗೂ ವಿಜ್ಞಾನ ಎಂಬ ಎರಡು ಪದಗಳೂ ಪರಮಾತ್ಮನ ಮಹಿಮೆ ಎಂಬ ಅರ್ಥದಲ್ಲಿವೆ. ಜ್ಞಾನಶಬ್ದವು ಸಾಮಾನ್ಯ ಮಹಿಮೆಯನ್ನು ಹೇಳುತ್ತಿದ್ದರೆ ವಿಜ್ಞಾನ ಶಬ್ದವು ವಿಶೇಷ ಮಹಿಮೆಯನ್ನು ಹೇಳುತ್ತಿದೆ. ಮುಂದೆ ನಿರೂಪಿಸಲಾಗುವ ಸರ್ವಭೂತವ್ಯಾಪ್ತಿ, ಸರ್ವಭೂತಾಧಾರತ್ವ ಮೊದಲಾದ ಮಹಿಮೆಯನ್ನು ಸಾಮಾನ್ಯ ಮಹಿಮೆ ಎಂದಿಟ್ಟುಕೊಳ್ಳಲಾಗಿದೆ. ಈ ಮಹಿಮೆಯು ಪ್ರಧಾನವಾಗಿ ಸ್ವತಂತ್ರವಾಗಿ ಪರಮಾತ್ಮನಲ್ಲಿರುವಂತೆ, ಮಹಾಲಕ್ಷ್ಮೀ, ಬ್ರಹ್ಮಾದಿದೇವತೆಗಳಲ್ಲೂ ಪರಮಾತ್ಮನಿಂದ ಅನುಗೃಹೀತವಾಗಿ, ಅವನ ಅಧೀನ ವೆನಿಸಿ, ಅಪ್ರಧಾನವಾಗಿ ಇದೆ. ಈ ದೃಷ್ಟಿಯಿಂದ ಇದು ಸಾಮಾನ್ಯಮಹಿಮೆ. ಈ ಮಹಿಮೆಯ

ಅರಿವು ಜೀವರಿಗೆ ಆವಶ್ಯಕ. ಇದರ ಅರಿವಿನಿಂದ, ಮೋಕ್ಷಾದಿಪುರುಷಾರ್ಥ ಲಭಿಸಿದರೆ, ಇದರ ಅರಿವು ಇಲ್ಲವೆಂದಾದಲ್ಲಿ ನರಕಾದ್ಯನರ್ಥವೂ ಅನಿವಾರ್ಯವೆನಿಸಿದೆ . ಹೀಗೆ ಸಾಮಾನ್ಯವಾಗಿ ಎಲ್ಲರೂ ಅರಿತುಕೊಳ್ಳಲೇ ಬೇಕಾಗಿರುವುದರಿಂದಲೂ ಇದು ಸಾಮಾನ್ಯ ಮಹಿಮೆ ಎನಿಸಿದೆ. **ಅಹಂ ಕ್ರತುಃ ಅಹಂ ಯಜ್ಞ** ಎಂಬಿತ್ಯಾದಿಯಾಗಿ ಮುಂದೆ ನಿರೂಪಿಸಲ್ಪಡುವ ಮಾಹಾತ್ಮ್ಯ ವಿಶೇಷವೆನಿಸಿದೆ. ಅದರಿಂದ ಅಭಿಪ್ರೇತವಾಗಿರುವ ಸರ್ವ ಯಜ್ಞಭೋಕ್ತೃತ್ವಾದಿಗಳು, ಅಪ್ರಧಾನ ವಾಗಿಯೂ ಬೇರೆಯವರಲ್ಲಿ ಇಲ್ಲ. ಅದರ ಅರಿವು ಇಲ್ಲವೆಂದಾದರೆ. ನರಕಾದ್ಯನರ್ಥವಿಲ್ಲ. ಆದರೆ ಜೀವನದ ಪರಮಗುರಿಯಾದ ಮೋಕ್ಷವನ್ನು ಸಾಧಿಸಿಕೊಳ್ಳಬೇಕಾದರೆ ಅದರ ಅರಿವು ಅನಿವಾರ್ಯ. ಈ ದೃಷ್ಟಿಯಿಂದ ಅದನ್ನು ಇಲ್ಲಿ 'ವಿಜ್ಞಾನ'= ವಿಶೇಷ, ಪ್ರಮೇಯ= ವಿಶೇಷ ಮಹಿಮೆ ಎಂದು ಉಲ್ಲೇಖಿಸಲಾಗಿದೆ.

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥ 2 ॥**

**ಅರ್ಥ–** ಮುಂದೆ ಇಲ್ಲಿ ಪ್ರವಚನದ ಮೂಲಕ ಮೂಡಿಸಲ್ಪಡುವ ಅರಿವು ಸರ್ವಧಾರಕ ನೆನಿಸಿರುವುದರಿಂದ ಧರ್ಮನೆನಿಸಿರುವ ಪರಮಾತ್ಮವಿಷಯಕವೂ ಸರ್ವೇಂದ್ರಿಯ ಪ್ರೇರಕನಾಗಿದ್ದು 'ಪ್ರತ್ಯಕ್ಷ' ಎಂದು ಕರೆಯಿಸಿಕೊಳ್ಳುತ್ತಿರುವ ಪರಮಾತ್ಮನ ಅಪರೋಕ್ಷಜ್ಞಾನವನ್ನು ಸಾಧಿಸಿ ಕೊಡುವಂತಾದ್ದು ಆಗಿರುವುದರಿಂದ ವಿದ್ಯೆಗಳಲ್ಲೆಲ್ಲಾ ಪ್ರಧಾನ ವಿದ್ಯೆ ಎನಿಸಿದೆ. ಅದು ಗೋಪ್ಯ ವಾದವುಗಳಲ್ಲಿ ಪ್ರಧಾನ ಗೋಪ್ಯವಾಗಿದ್ದು ರಾಜಗುಹ್ಯವೆನಿಸಿದೆ. ಈ ಎಲ್ಲಾ ಕಾರಣಗಳಿಂದಾಗಿ ಉತ್ತಮವೂ ಎನಿಸಿದೆ. ಅಕ್ಷಯಫಲವೆನಿಸಿರುವ ಮೋಕ್ಷಕ್ಕೆ ಸೋಪಾನವೆನಿಸಿರುವ ಈ ಅರಿವು ಸಂಪಾದಿಸಲು ಅತ್ಯಂತ ಸುಲಭವೆನಿಸಿದೆ.

ಪುನಃ ಪ್ರಶಂಸತಿ- **ರಾಜೇತಿ** ॥ ಇದಂ ವಕ್ಷ್ಯಮಾಣಂ । ರಾಜವಿದ್ಯಾ ರಾಜ್ಞೀ ಚಾಸೌ ವಿದ್ಯಾ ಚ ರಾಜವಿದ್ಯಾ । ವಿದ್ಯಾನಾಂ ಪ್ರಧಾನವಿದ್ಯೇತ್ಯರ್ಥಃ । ರಾಜಗುಹ್ಯಂ ಗುಹ್ಯಾನಾಂ ಗೋಪ್ಯಾನಾಂ ಮಧ್ಯೇ ಪ್ರಧಾನಗೋಪ್ಯಮ್ । ಪವಿತ್ರಂ ಪಾವಿತ್ರ್ಯ-ಹೇತುಮ್ । ಅತ ಏವೋತ್ತಮಮ್ । ಪ್ರತ್ಯಕ್ಷಾವಗಮಂ ಅಕ್ಷೇಷು ಪ್ರತಿ ಪ್ರತಿ ಸ್ಥಿತಃ ಪ್ರತ್ಯಕ್ಷೋ ಭಗವಾನ್ । ಕುಗತಿಪ್ರಾದಯ ಇತಿ ಪ್ರಾದಿಸಮಾಸೋ ನಾವ್ಯಯೀ-ಭಾವಃ । ಅವಗಮ್ಯತೇ ಸಾಕ್ಷಾತ್ ಕ್ರಿಯತೇ ಯೇನ ತತ್ ಅವಗಮಮ್ । ಗ್ರಹ-ವೃದೃನಿಶ್ಚಿಗಮಶ್ಚೇತಿ ಕರಣೇ ಗಮೇರಪ್ ಪ್ರತ್ಯಯಃ । ಪ್ರತ್ಯಕ್ಷಸ್ಯ ಹರೇರವಗಮಂ ಪ್ರತ್ಯಕ್ಷಾವಗಮಂ ಸರ್ವೇಂದ್ರಿಯಪ್ರೇರಕ ಭಗವದಪರೋಕ್ಷಜ್ಞಾನಸಾಧನಮ್ ।

**ಅನುವಾದ-** '**ರಾಜವಿದ್ಯಾ**' ಎಂಬ ಎರಡನೆಯ ಶ್ಲೋಕದಲ್ಲಿ ಮುಂದೆ ನಿರೂಪಿಸಲಾಗುತ್ತಿರುವ ಪ್ರಮೇಯವನ್ನು ಪುನಃ ಪ್ರಶಂಸಿಸಲಾಗಿದೆ. **ಇದಂ**= ಮುಂದೆ ನಿರೂಪಣೆಯಿಂದ ಮೂಡಿಸಲಾಗುವ ಅರಿವು **ರಾಜವಿದ್ಯಾ - ರಾಜ್ಞೀವಿದ್ಯಾ** ಮಹಾರಾಣಿಯಂತಹ ವಿದ್ಯೆ ಎನಿಸಿದೆ. ಈ ವಿಶೇಷಣದಿಂದ ವಿದ್ಯೆಗಳಲ್ಲೆಲ್ಲಾ ಪ್ರಧಾನವಿದ್ಯೆ ಎಂದಂತಾಯಿತು. **ರಾಜಗುಹ್ಯಂ**= ಗುಹ್ಯಗಳಲ್ಲೆಲ್ಲಾ- ಅಂದರೆ- ರಹಸ್ಯಗಳಲ್ಲೆಲ್ಲಾ ಪ್ರಧಾನವಾದ ರಹಸ್ಯವೆನಿಸಿದೆ. **ಪವಿತ್ರಂ**= ಪಾವಿತ್ರ್ಯಕ್ಕೆ ಕಾರಣವೆನಿಸಿದೆ. ಆದುದರಿಂದಲೇ ಉತ್ತಮವೆನಿಸಿದೆ. **ಪ್ರತ್ಯಕ್ಷಾವಗಮಮ್** = ಪ್ರತ್ಯಕ್ಷಸ್ಯ ಅವಗಮಂ- ಪ್ರತಿಯೊಂದು ಇಂದ್ರಿಯದಲ್ಲಿ ಪ್ರೇರಕನಾಗಿರುವುದರಿಂದ ಪ್ರತ್ಯಕ್ಷ ಎಂದು ಕರೆಯಲ್ಪಡುವ ಪರಮಾತ್ಮನ (ಪ್ರತ್ಯಕ್ಷಸ್ಯ) ಅಪರೋಕ್ಷಜ್ಞಾನಕ್ಕೆ ಸಾಧನ (**ಅವಗಮಂ**)ವೆನಿಸಿದೆ ಈ ಜ್ಞಾನ. ಹಾಗಾಗಿ ಈ (1) ಪ್ರತ್ಯಕ್ಷ ಶಬ್ದವು ಅವ್ಯಯೀಭಾವಸಮಾಸವೆನಿಸದೆ '**ಕುಗತಿಪ್ರಾದಯಃ**' ಎಂಬ ಸೂತ್ರದಿಂದ ನಿಷ್ಪನ್ನವಾದ '**ಅಕ್ಷೇಷು**' (ಇಂದ್ರಿಯಗಳಲ್ಲಿ) ಪ್ರತಿಪ್ರತಿಸ್ಥಿತಮ್ (ಪ್ರತ್ಯೇಕ ಪ್ರತ್ಯೇಕವಾಗಿ ಸನ್ನಿಹಿತವಾಗಿರುವ) ಎಂಬೀ ಅರ್ಥದಲ್ಲಿರುವ ಪ್ರಾದಿಸಮಾಸವೆನಿಸಿದೆ. (2) ಅವಗಮ ಎಂಬೀಪದವೂ 'ಅವ' ಎಂಬೀ ಉಪಸರ್ಗ ಪೂರ್ವಕವಾದ ಗಮ್ ಧಾತುವಿಗೆ '**ಗ್ರಹವೃದೃನಿಶ್ಚಿಗಮಶ್ಚ**' ಎಂಬೀ ಪಾಣಿನಿಸೂತ್ರಾನುಸಾರವಾಗಿ ಕರಣಾರ್ಥದಲ್ಲಿ 'ಅಪ್' ಪ್ರತ್ಯಯದ ಸಂಯೋಜನೆಯಿಂದ ನಿಷ್ಪನ್ನವಾಗಿದೆ. ಆದುದರಿಂದ **ಪ್ರತ್ಯಕ್ಷಸ್ಯ**= ಸರ್ವೇಂದ್ರಿಯಪ್ರೇರಕನಾದ ಹರಿಯ, **ಅವಗಮಂ**= ಅಪರೋಕ್ಷಜ್ಞಾನಕ್ಕೆ ಸಾಧನವಾಗಿದೆ (ಈ ಜ್ಞಾನ) ಎಂಬೀ ಅರ್ಥದಲ್ಲಿ '**ಪ್ರತ್ಯಕ್ಷಾವಗಮ**' ಶಬ್ದವನ್ನು ಬಳಸಲಾಗಿದೆ.

**ವಿವರಣೆ-** (1) 'ಅಪರೋಕ್ಷ ಜ್ಞಾನಕ್ಕೆ ಸಾಧನವಾದ ಪ್ರಮಾಣ' ಎಂಬ ಅರ್ಥದಲ್ಲಿ ಸಾಮಾನ್ಯವಾಗಿ '**ಪ್ರತ್ಯಕ್ಷ**' ಶಬ್ದದ ಬಳಕೆ. **ಅಕ್ಷಿಣೀ ಪ್ರತಿ= ಅಕ್ಷ್ಣೋಃ ಆಭಿಮುಖ್ಯಂ**= ಇಂದ್ರಿಯಗಳಿಗೆ ವಿಷಯದ ಸನ್ನಿಕರ್ಷ- ಎಂಬೀ ಪಾಣಿನಿ ಸೂತ್ರದಂತೆ ಅವ್ಯಯೀಭಾವ ಸಮಾಸವಾದಾಗ ನಿಷ್ಪನ್ನವಾದ ಪ್ರತ್ಯಕ್ಷ ಶಬ್ದವು ಈ ಅರ್ಥದಲ್ಲಿರುತ್ತದೆ. ಅವ್ಯಯೀಭಾವ ಸಮಾಸಗಳೆಲ್ಲಾ ಅವ್ಯಯವಾಗಿರುವುದರಿಂದ ಹೀಗೆ ನಿಷ್ಪನ್ನವಾದ ಈ ಪ್ರತ್ಯಕ್ಷ ಶಬ್ದವು ಅವ್ಯಯವೆನಿಸಿದ್ದು ಪ್ರಾಯಶಃ ಎಲ್ಲಾ ವಿಭಕ್ತಿಗಳಲ್ಲೂ **ಪ್ರತ್ಯಕ್ಷಂ** ಎಂದೇ ಇರುತ್ತದೆ ಹೊರತು ಬೇರೆಬೇರೆ ವಿಭಕ್ತಿಗಳಲ್ಲಿ ಬೇರೆಬೇರೆ ರೂಪಗಳನ್ನು ತಾಳುವುದಿಲ್ಲ. ಪ್ರಕೃತ ಪ್ರತ್ಯಕ್ಷಾವಗಮ ಎಂಬಲ್ಲಿರುವ ಪ್ರತ್ಯಕ್ಷಶಬ್ದವು ಅವ್ಯಯೀಭಾವವಲ್ಲ. '**ಕುಗತಿಪ್ರಾದಯಃ**' (ಕುಶಬ್ದ, ಗತಿಸಂಜ್ಞೆಯಿರುವ ಶಬ್ದಗಳು ಹಾಗೂ ಪ್ರಾದಿಗಣದಲ್ಲಿ ಸೇರಿರುವ ಉಪಸರ್ಗಗಳು ತಮ್ಮ ಅನ್ವಯಕ್ಕೆ ಅನುಗುಣವಾದ ಪದಗಳ ಜೊತೆಗೆ ಸಮಾಸ ಹೊಂದುತ್ತವೆ- ಎಂಬ ಸೂತ್ರದಂತೆ ನಿಷ್ಪನ್ನವಾದ ತತ್ಪುರುಷಸಮಾಸಗಳಲ್ಲೊಂದಾದ ಪ್ರಾದಿ ಸಮಾಸವೆನಿಸಿದೆ ಇದು. ಹಾಗಾಗಿ '**ಪ್ರಗತಃ ಆಚಾರ್ಯಃ ಪ್ರಾಚಾರ್ಯಃ**' ಎಂದಾಗುವಂತೆ ಪ್ರಾದಿಗಳಲ್ಲಿ ಒಂದಾದ 'ಪ್ರತಿ' ಶಬ್ದವು ತನ್ನ ಅನ್ವಯಕ್ಕೆ ಅನುಗುಣವಾದ '**ಅಕ್ಷೇಷು**' ಪದದ

ಜೊತೆಗೆ ಅಕ್ಷ (ಇಂದ್ರಿಯ)ಗಳಲ್ಲಿ ಪ್ರತಿಸ್ಥಿತಃ (ಇರುವವನು) ಎಂಬ ಅರ್ಥದಲ್ಲಿ ಸಮಾಸಹೊಂದಿ ನಿಷ್ಪನ್ನವಾಗಿದೆ ಈ ಪ್ರತ್ಯಕ್ಷಶಬ್ದ. ಆದುದರಿಂದ ಇದು ಅವ್ಯಯವಲ್ಲ. ಹಾಗಾಗಿ ಷಷ್ಠೀವಿಭಕ್ತಿಯಲ್ಲಿ ಇದು '**ಪ್ರತ್ಯಕ್ಷಸ್ಯ**' ಎಂಬ ರೂಪವನ್ನು ತಾಳುತ್ತಿದೆ. ಹೀಗೆ ಇದು 'ಆರು ಇಂದ್ರಿಯಗಳಲ್ಲಿ ನಿಯಾಮಕನಾಗಿರುವ ಪರಮಾತ್ಮ' ಎಂಬ ವಿಶೇಷಾರ್ಥದಲ್ಲಿದೆ.

**ವಿವರಣೆ-** (2) ಗಮ್ಲೃ ಎಂಬ ಧಾತುವು ಗತ್ಯರ್ಥದಲ್ಲಿದೆ. 'ಗತ್ಯರ್ಥದಲ್ಲಿರುವ ಧಾತುಗಳೆಲ್ಲಾ ಜ್ಞಾನ ಎಂಬ ಅರ್ಥವನ್ನೂ ನೀಡುತ್ತವೆ' ಎಂಬ ನಿಯಮದಂತೆ '**ಅವ**' ಉಪಸರ್ಗ ವಿಶಿಷ್ಟವಾದ '**ಗಮ್**' ಧಾತುವು ಅಪರೋಕ್ಷಜ್ಞಾನ ಎಂಬ ಅರ್ಥದಲ್ಲಿದೆ. ಅದಕ್ಕೆ ಕರಣ-ಕಾರಕಾರ್ಥದಲ್ಲಿ ಅಪ್ ಪ್ರತ್ಯಯ ಸೇರಿದಾಗ ಅವಗಮ್- ಅ(ಪ್) ಅವಗಮ (ಅವಗಮ್ಯತೇ ಅನೇನ= ಯಾವುದರಿಂದ ಪ್ರತ್ಯಕ್ಷನೆನಿಸಿರುವ ಪರಮಾತ್ಮನು ಅಪರೋಕ್ಷವಾಗಿ ತಿಳಿಯಲ್ಪಡುತ್ತಾನೋ ಅಂತಹ ಸಾಧನ ಎಂಬೀ ಅರ್ಥದಲ್ಲಿ )ಪದವು ನಿಷ್ಪನ್ನವಾಗಿದೆ.

**ಧರ್ಮ್ಯಂ ಸರ್ವಧಾರಕತ್ವಾದ್‌ಧರ್ಮೋ ಭಗವಾನ್ । ಧೃಞ್ ಧಾರಣ ಇತ್ಯತಃ ಔಣಾದಿಕೋ ಮನ್ ಪ್ರತ್ಯಯಃ । ಧರ್ಮಾದನಪೇತಂ ತದ್ವಿಷಯಂ ಧರ್ಮ್ಯಮ್ । ಸರ್ವಧಾರಕಭಗವದ್‌ವಿಷಯಪರೋಕ್ಷಜ್ಞಾನಂ ಭಗವದಪ-ರೋಕ್ಷಜ್ಞಪ್ತಿಸಾಧನಮ್ ಅವ್ಯಯಂ ಅಕ್ಷಯಮೋಕ್ಷಫಲಕಂ । ಕರ್ತುಂ ಸಂಪಾದ-ಯಿತುಂ ಸುಸುಖಂ ಅತ್ಯಂತ ಸುಲಭಮಿತ್ಯರ್ಥಃ । ಪ್ರವಕ್ಷ್ಯಾಮೀತಿ ಪೂರ್ವೇ-ಣಾನ್ವಯಃ ॥ 2 ॥**

**ಅನುವಾದ – ಧರ್ಮ್ಯಂ** ಎಂಬಲ್ಲಿರುವ ಧರ್ಮ ಪದವು (1) ಧಾರಣೆ ಎಂಬ ಅರ್ಥದಲ್ಲಿರುವ **ಧೃಞ್** ಧಾತುವಿಗೆ ' **ಔಣಾದಿಕ** 'ವೆಂಬ ವ್ಯಾಕರಣಪ್ರಸಿದ್ಧವಾದ 'ಮನ್' ಎಂಬ ಪ್ರತ್ಯಯ ಸೇರಿದಾಗ ನಿಷ್ಪನ್ನವಾಗಿದೆ . ಹಾಗಾಗಿ ಅದು 'ಸರ್ವಧಾರಕನಾಗಿರುವವನು' ಎಂಬ ಕಾರಣದಿಂದ ಭಗವಂತನನ್ನು ಹೇಳುತ್ತಿದೆ. (2) ಆ ಧರ್ಮ ಶಬ್ದಕ್ಕೆ '**ಧರ್ಮಾತ್ ಅನಪೇತಂ**' ಎಂಬ ಅರ್ಥದಲ್ಲಿ ಯತ್ ಪ್ರತ್ಯಯವನ್ನು ಸಂಯೋಜಿಸಿದಾಗ ಧರ್ಮ+ ಯ = ಧರ್ಮ್ಯ' ಶಬ್ದದ ನಿಷ್ಪತ್ತಿ . ಹಾಗಾಗಿ '**ಧರ್ಮಾತ್ ಅನಪೇತಂ**'= ಧರ್ಮನೆನಿಸಿರುವ ಭಗವಂತನಿಂದ ದೂರವಾಗದೆ ಇರುವಂತಾದ್ದು – ಅಂದರೆ, ಅವನನ್ನು ವಿಷಯೀಕರಿಸುತ್ತಿರುವಂತಾದ್ದು ಎಂಬ ಅರ್ಥವನ್ನು ಇದು ನೀಡುತ್ತಿದೆ. ಹೀಗೆ '**ಧರ್ಮ್ಯ**' ಎಂಬ ವಿಶೇಷಣದಿಂದಾಗಿ ಇಲ್ಲಿ ಮುಂದಿನ ನಿರೂಪಣೆಯಿಂದಾಗಿ ನಿಷ್ಪಾದಿತವಾಗುವ ಜ್ಞಾನವು ಸರ್ವಧಾರಕ ನೆನಿಸಿರುವ ಪರಮಾತ್ಮ ವಿಷಯಕ ಪರೋಕ್ಷಜ್ಞಾನವಾಗಿದ್ದುಕೊಂಡು ಸರ್ವೇಂದ್ರಿಯ ಪ್ರೇರಕನಾದ ಅವನ ಅಪರೋಕ್ಷಜ್ಞಾನಕ್ಕೆ ಸಾಧನ (ಪ್ರತ್ಯಕ್ಷಾವಗಮಂ) ಎನಿಸಿದೆ ಎಂದಾಯಿತು. ಈ ಜ್ಞಾನವು **ಅವ್ಯಯಂ**= ನಾಶರಹಿತ

ವಾದ ಮೋಕ್ಷರೂಪಫಲವುಳ್ಳದ್ದು. ಈ ಜ್ಞಾನವು **ಕರ್ತುಂ**= ಸಂಪಾದಿಸಲು, **ಸುಸುಖಂ**= ಅತ್ಯಂತ ಸುಲಭವೆನಿಸಿದೆ. ಹಿಂದಿನ ಶ್ಲೋಕದಲ್ಲಿರುವ '**ಪ್ರವಕ್ಷ್ಯಾಮಿ**' ಎಂಬಲ್ಲಿಗೆ ಈ ಶ್ಲೋಕ ವಾಕ್ಯವನ್ನು ಅನ್ವಯಿಸಿಕೊಳ್ಳಬೇಕು. ॥ 2 ॥

ವಿವರಣ : (1) ಕ್ರಿಯಾರ್ಥಕವೆನಿಸಿರುವ ಧಾತುಗಳಿಗೆ ಪರದಲ್ಲಿ ಸಂಯೋಜನೆಗೊಳ್ಳುವ ಮೂಲಕ ಶಬ್ದಗಳ ನಿಷ್ಪತ್ತಿಗೆ ಕಾರಣವಾದ ಪ್ರತ್ಯಯಗಳಿಗೆ '**ಕೃತ್**' ಪ್ರತ್ಯಯಗಳೆಂಬ ಪ್ರಸಿದ್ಧಿ. ಅಂತಹ ಪ್ರತ್ಯಯಗಳಲ್ಲಿ. 'ಉಣಾದಿಗಳು' ಎಂದು ಕರೆಯಿಸಿಕೊಳುತ್ತಿರುವ ಅನೇಕ ಪ್ರತ್ಯಯ ಗಳಿವೆ. ಅವುಗಳಲ್ಲಿ 'ಮನ್' ಪ್ರತ್ಯಯವೂ ಒಂದು . ಧಾರಣೆ ಎಂಬ ಅರ್ಥದಲ್ಲಿರುವ '**ಧೃಞ್**' ಧಾತುವಿಗೆ ಕರ್ತೃ ಕಾರಕಾರ್ಥದಲ್ಲಿ ಈ ಪ್ರತ್ಯಯವನ್ನು ಸಂಯೋಜಿಸಿದಾಗ **ಧೃ + ಮ** = **ಧರ್ + ಮ** = ಧರ್ಮ ಎಂಬ ಶಬದ್ದ ನಿಷ್ಪತ್ತಿ. ಹಾಗಾಗಿ ಅದಕ್ಕೆ ಧಾರಣ ಕರ್ತೃ - ಧಾರಕ ಎಂದರ್ಥ. ಧಾರಕರಲ್ಲೆಲ್ಲಾ ಪ್ರಧಾನನೆನಿಸಿರುವವನು ಪರಮಾತ್ಮ. ಆದುದರಿಂದ ಮುಖ್ಯವಾಗಿ ಅದು ಅವನನ್ನೇ ಹೇಳುತ್ತಿದೆ. ಆದುದರಿಂದ ಪ್ರಕೃತ ಅದಕ್ಕೆ ಸರ್ವಧಾರಕನಾದ ಪರಮಾತ್ಮ ಎಂಬ ಅರ್ಥವು ಯುಕ್ತವೇ ಆಗಿದೆ.

**ವಿವರಣೆ**– (2) '**ಧರ್ಮಪಥ್ಯರ್ಥನ್ಯಾಯಾದನಪೇತೇ**' ('ಧರ್ಮ, ಪಥಿನ್, ಅರ್ಥ, ಹಾಗೂ ನ್ಯಾಯ ಎಂಬ ಪದಗಳ ಮುಂದೆ '**ಅನಪೇತ** ' ಎಂಬ ಅರ್ಥದಲ್ಲಿ **ಯತ್** ಪ್ರತ್ಯಯ ಬರುತ್ತದೆ ) ಎಂದು ಪಾಣಿನಿಸೂತ್ರ. ಇದರಂತೆ **ಧರ್ಮ + ಯ(ತ್) ಧರ್ಮ್+ ಯ** = ಧರ್ಮ್ಯ ಎಂಬ ಶಬ್ದದ ನಿಷ್ಪತ್ತಿ. ಹಾಗಾಗಿ ಇದು ಪ್ರಕೃತ ಸರ್ವಧಾರಕನಾದುದರಿಂದ ಧರ್ಮನೆನಿಸಿರುವ ಪರಮಾತ್ಮನಿಂದ ದೂರವಾಗದೆ (ಅನುಪೇತ) ಇರುವಂತಾದ್ದು = ಅವನನ್ನು ಉದ್ದೇಶಿಸಿಕೊಂಡು ಇರುವಂತಾದ್ದು = ಅವನನ್ನು ವಿಷಯೀಕರಿಸುತ್ತಿರುವಂತಾದ್ದು ಎಂಬ ಅರ್ಥದಲ್ಲಿದೆ.

## ಶ್ರದ್ಧೆ ಉಳ್ಳವನಿಗಷ್ಟೇ ಭಗವನ್ಮಾಹಾತ್ಮ್ಯೆಯ ಅರಿವು

**ಅಶ್ರದ್ದಧಾನಾಃ ಪುರುಷಾ ಧರ್ಮ್ಯಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥ 3 ॥**

**ಅರ್ಥ**– ಶತ್ರುತಾಪಕನೇ ! ಧಾರಕನಾದ ಪರಮಾತ್ಮನ ಈ ಜ್ಞಾನದ ವಿಷಯದಲ್ಲಿ ಶ್ರದ್ಧೆಯನ್ನು ಬೆಳೆಸಿಕೊಳ್ಳದಿರುವ ಪುರುಷರು ನನ್ನನ್ನು ತಲುಪದೆ ಮೃತ್ಯುವೆನಿಸಿರುವ ಸಂಸಾರಮಾರ್ಗದಲ್ಲಿ ನಿರಂತರವಾಗಿ ಇದ್ದು ಬಿಡುತ್ತಾರೆ.

**ನನು ತ್ವಯೋಚ್ಯಮಾನಂ ಭಗವದಪರೋಕ್ಷಜ್ಞಪ್ತಿಸಾಧನಂ ತದ್ವಿಷಯ-ಪರೋಕ್ಷಜ್ಞಾನಂ ಉಕ್ತಗುಣಕಂ ಸುಕರಂ ಚೇನ್ನ ಕೋऽಪಿ ಸಂಸಾರೀ ಸ್ಯಾದಿತ್ಯತೋ**

**ವಾ ಅಕುರ್ವತಾಂ ಕಿಮನಿಷ್ಟಮಿತ್ಯತೋ ವಾಽಽಹ- ಅಶ್ರದ್ದಧಾನಾ ಇತಿ ॥ ಧರ್ಮ್ಯಸ್ಯ ಭಗವದ್ವಿಷಯಸ್ಯಾಸ್ಯ ಜ್ಞಾನಸ್ಯಾಶ್ರದ್ದಧಾನಾಃ ಪುಮರ್ಥಹೇತುತ್ವೇ ಶ್ರದ್ಧಾವಿಹೀನಾಃ ಪುರುಷಾಃ ಮಾಮಪ್ರಾಪ್ಯ ಮೃತ್ಯುಸಂಸಾರವರ್ತ್ಮನಿ ನಿವರ್ತಂತೇ ನಿತರಾಂ ವರ್ತಂತೇ ಪತಂತೀತ್ಯರ್ಥಃ ॥ 3 ॥**

**ಅನುವಾದ-** ಮೇಲಿನ ಎರಡನೆಯ ಶ್ಲೋಕದಲ್ಲಿ ನಿರೂಪಿಸಲಾದ ಒಳ್ಳೆಯ ಅಂಶಗಳಿಂದ ಕೂಡಿರುವ, ನಿನ್ನಿಂದ ಮುಂದೆ ನಿರೂಪಿಸಲ್ಪಡುತ್ತಿರುವ, ಪರಮಾತ್ಮನ ಅಪರೋಕ್ಷಜ್ಞಾನಕ್ಕೆ ಸಾಧನವೆನಿಸಿರುವ ಪರಮಾತ್ಮವಿಷಯಕಪರೋಕ್ಷಜ್ಞಾನವು **'ಕರ್ತುಂ ಸುಸುಖಂ'** ಎಂದೆನ್ನಲಾಗಿರುವಂತೆ ಅತ್ಯಂತ ಸುಲಭವೆನಿಸಿದ್ದರೆ ಅದನ್ನು ಸಂಪಾದಿಸಿ ಎಲ್ಲರೂ ಮುಕ್ತಿಯನ್ನು ಪಡೆದು ಯಾರೂ ಸಂಸಾರದಲ್ಲಿ ಮುಂದುವರಿಯಬಾರದಿತ್ತು ಎಂಬ ಅರ್ಜುನನ ಆಶಂಕೆಗೆ ಉತ್ತರವಾಗಿ (1) '**ಅಶ್ರದ್ದಧಾನಾಃ ಪುರುಷಾಃ** ಎಂಬೀ ಶ್ಲೋಕವು ಪ್ರಸ್ತುತವಾಗಿದೆ. ಅಥವಾ ಈ ಶ್ಲೋಕದಲ್ಲಿ 'ಈ ಜ್ಞಾನವನ್ನು ಸಂಪಾದಿಸದೆ ಇರುವವರಿಗೆ ಏನು ಅನಿಷ್ಟವೊದಗಿಬರುತ್ತದೆ ?' ಎಂಬ ಪ್ರಶ್ನೆಗೆ ಭಗವಂತನು (2) ಉತ್ತರಿಸುತ್ತಿದ್ದಾನೆ. **ಧರ್ಮ್ಯಸ್ಯಾಸ್ಯ**= ಸರ್ವಧಾರಕನಾದ ಪರಮಾತ್ಮ ವಿಷಯಕವಾದ ಈ ಜ್ಞಾನದ, **ಅಶ್ರದ್ಧಧಾನಾಃ**= ಪುರುಷಾರ್ಥ ಸಾಧನತ್ವದ ವಿಷಯದಲ್ಲಿ ಶ್ರದ್ಧೆಯನ್ನು ಹೊಂದದಿರುವ ಪುರುಷರು ನನ್ನನ್ನು ತಲುಪದೆ ಮೃತ್ಯುರೂಪದ ಸಂಸಾರ ಮಾರ್ಗದಲ್ಲಿ **ನಿವರ್ತಂತೇ= ನಿತರಾಂ ವರ್ತಂತೇ** = ಬಹಳವಾಗಿ ಇದ್ದುಬಿಡುತ್ತಾರೆ. ಅಂದರೆ- ಅನಿವಾರ್ಯವಾಗಿ ಬಿದ್ದುಕೊಂಡಿರುತ್ತಾರೆ - ಎಂದು ಅಭಿಪ್ರಾಯ. ॥ 3 ॥

**ವಿವರಣೆ-** (1) ಯಾವುದೇ ಸಾಧನವು ಫಲಕಾರಿಯಾಗಬೇಕಾದರೆ ಅದನ್ನು ಸಮರ್ಥವಾಗಿ ಕೈಗೂಡಿಸಿಕೊಳ್ಳಬೇಕು. ಹಾಗಾಗಬೇಕಾದರೆ ಶ್ರದ್ಧೆಯಿರಬೇಕು. ಹಾಗಾಗಿ ಇಲ್ಲಿ ನಿರೂಪಿಸಲಾಗುವ ಮೋಕ್ಷಸಾಧನವು ಅದೆಷ್ಟು ಸುಲಭವಾಗಿದ್ದರೂ ಅವರವರ ಯೋಗ್ಯತಾನುಸಾರವಾಗಿ ಅವರ ಬಗ್ಗೆ ಶ್ರದ್ಧೆಯನ್ನು ಮೈಗೂಡಿಸಿಕೊಳ್ಳದ ಜೀವರು ಆ ನಿಟ್ಟಿನಲ್ಲಿ ಪ್ರಯತ್ನ ಪಡಲಾರರು. ಆದುದರಿಂದ ಅವರು ಶಾಶ್ವತವಾಗಿ ಸಂಸಾರದಲ್ಲಿದ್ದು ಬಿಡುವುದು ಅನಿವಾರ್ಯ ಎಂಬ ಅಭಿಪ್ರಾಯವನ್ನು ಹೊರಹೊಮ್ಮುವ ಮೂಲಕ ಈ ಶ್ಲೋಕವು ಮೊದಲನೆಯ ಆಕ್ಷೇಪಕ್ಕೆ ಉತ್ತರಿಸುತ್ತಿದೆ.

**ವಿವರಣೆ-** (2) ಜೀವರ ಉದ್ಧಾರಕ್ಕಾಗಿ ಇಷ್ಟು ಕಳಕಳಿಯಿಂದ ಇದ್ದರೂ ತಾನು ತೋರಿಸುತ್ತಿರುವ ಈ ಮಾರ್ಗದಲ್ಲಿ ಶ್ರದ್ಧೆಯನ್ನು ತೋರಿಸದೆ ಇರುವವರಿಗೆ ಮೃತ್ಯುಮಯವಾದ ಈ ಸಂಸಾರದಲ್ಲೇ ಶಾಶ್ವತವಾಗಿ ಉಳಿಯುವುದು ಅನಿವಾರ್ಯ ಎಂಬ ಅಭಿಪ್ರಾಯವನ್ನು ಸೂಚಿಸುವ ಮೂಲಕ ಎರಡನೆಯ ಪ್ರಶ್ನೆಗೆ ಈ ಶ್ಲೋಕ ಉತ್ತರಿಸಿದಂತಾಯಿತು.

## ಪರಮಾತ್ಮನು ಜೀವರಲ್ಲಿದ್ದರೂ ಜೀವಾಶ್ರಿತನಲ್ಲ

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್‌ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ 4 ॥**

**ಅರ್ಥ–** ಈ ಸಮಸ್ತಜಗತ್ತು ಅದೃಶ್ಯ ಶರೀರವುಳ್ಳ ನನ್ನಿಂದ ವ್ಯಾಪ್ತವಾಗಿದೆ. ಜಡಸಹಿತ ಜೀವರಾಶಿಗಳೆಲ್ಲಾ ನನ್ನನ್ನು ಆಶ್ರಯಿಸಿಕೊಂಡಿವೆ ಹೊರತು ನಾನು ಅವನ್ನು ಆಶ್ರಯಿಸಿಕೊಂಡಿಲ್ಲ.

**ಯಸ್ಯ ಧರ್ಮ್ಯಪದೇನ ಪ್ರತ್ಯಕ್ಷಾವಗಮಪದೋಕ್ತಭಗವದ್ ಜ್ಞಾನಸಾಧನತ್ವ-ಮುಕ್ತಮ್ । ಯಚ್ಚ ಪ್ರವಕ್ಷ್ಯಾಮೀತಿ ಪ್ರತಿಜ್ಞಾತಮ್ । ಯಚ್ಚ ಜ್ಞಾತ್ವೇತ್ಯಾದಿನಾ ಪ್ರಶಂಸಿತಮ್ । ಯದಕರಣೇ ಚ ನಿಂದಾ ಕೃತಾ । ತದ್‌ಜ್ಞಾನವಿಜ್ಞಾನ-ಯೋರ್ಮಧ್ಯೇ ಜ್ಞಾನಶಬ್ದಿತಂ ಜ್ಞಾತವ್ಯಂ ತಾವದಾಹ ಮಯೇತ್ಯಾದಿನಾ ಅಹಂ ಕ್ರತುರಿತಿ ಪರ್ಯಂತೇನ (9-16) । ಇದಂ ಸರ್ವಂ ಚರಾಚರಾತ್ಮಕಂ ಜಗದವ್ಯಕ್ತ-ಮೂರ್ತಿನಾ । ಬಹುವ್ರೀಹಿಃ । ಮಯಾ ತತಂ ವ್ಯಾಪ್ತಮ್ । ವ್ಯಾಪ್ತತ್ವೇ ಸರ್ವತ್ರ ಕುತೋ ನ ದೃಶ್ಯ ಇತ್ಯತೋಽವ್ಯಕ್ತೇತಿ ವಿಶೇಷಣಮ್ । ತತಮಿತ್ಯುಕ್ತ್ಯಾ ಜಗತ ಆಧಾರತಾ ಸ್ವಸ್ಯಾಧೇಯತಾ ಘಟಾದೇರಿವ ಪ್ರಾಪ್ತಾ । ತಾಂ ನಿರಾಹ-ಮತ್‌ಸ್ಥಾನೀತಿ ॥ ಮದಾಧಾರತಯೈವ ಸರ್ವಭೂತಾನಿ ಸಜಡಜೀವಜಾತಾನಿ । ತೇಷು ಚಾಹಂ ನಾವಸ್ಥಿತಃ ತದಾಧಾರತಯಾ ತದುಪಜೀವನೇನ ನ ವರ್ತ ಇತ್ಯರ್ಥಃ ॥ 4 ॥**

**ಅನುವಾದ–** ಇಲ್ಲಿ ನಿರೂಪಿಸಲಾಗುತ್ತಿರುವ ಜ್ಞಾನ ಹಾಗೂ ವಿಜ್ಞಾನಗಳ ಪೈಕಿ ಜ್ಞಾನ ಶಬ್ದದಿಂದ ಹೇಳಲ್ಪಟ್ಟ ಯಾವ ಪ್ರಮೇಯವನ್ನು ಧರ್ಮ್ಯ ಪದದಿಂದ ನಿರ್ದೇಶಿಸುವ ಮೂಲಕ ಪ್ರತ್ಯಕ್ಷಾವಗಮ ಶಬ್ದದಿಂದ ಉಲ್ಲೇಖಿಸಲ್ಪಟ್ಟ ಭಗವದಪರೋಕ್ಷಜ್ಞಾನಕ್ಕೆ ಸಾಧನವೆಂದು ಹೇಳಲಾಗಿದೆಯೋ ಯಾವ ಆ ಜ್ಞಾನರೂಪ ಪ್ರಮೇಯವನ್ನು 'ಮುಂದೆ ನಿರೂಪಿಸುತ್ತಿದ್ದೇನೆ' ಎಂದು ಶ್ರೀಕೃಷ್ಣನು ಪ್ರತಿಜ್ಞೆಮಾಡಿರುವನೋ, '**ಯತ್ ಜ್ಞಾತ್ವಾ ಮೋಕ್ಷ್ಯಸೇಽಶುಭಾತ್**' ಎನ್ನುವ ಮೂಲಕ ಯಾವುದು ಪ್ರಶಂಸೆಗೆ ಪಾತ್ರವಾಗಿದೆಯೋ ಯಾವುದನ್ನು ಮೈಗೂಡಿಸಿಕೊಳ್ಳದಿದ್ದರೆ 'ಶಾಶ್ವತ ಸಂಸಾರವೇ ಗತಿ' ಎಂದೆನ್ನುವ ಮೂಲಕ ಅನಿಷ್ಟವು ಹೇಳಲ್ಪಟ್ಟಿದೆಯೋ ಅಂತಹ ಜ್ಞಾನರೂಪ ಪ್ರಮೇಯ (ಮಾಹಾತ್ಮ್ಯ)ವನ್ನು ಈ ನಾಲ್ಕನೆಯ ಶ್ಲೋಕದಿಂದ ಆರಂಭಿಸಿ '**ಅಹಂ ಕ್ರತುಃ**' ಎಂಬಿತ್ಯಾದಿ ಹದಿನಾರನೆಯ ಶ್ಲೋಕದ ತನಕವಿರುವ ಹನ್ನೆರಡು ಶ್ಲೋಕಗಳಲ್ಲಿ ಶ್ರೀಕೃಷ್ಣನು ಪ್ರಚುರ ಪಡಿಸುತ್ತಿದ್ದಾನೆ. ಇದಂ **ಸರ್ವಂ**= ಸ್ಥಾವರ ಜಂಗಮರೂಪದ ಈ ಸಮಸ್ತಜಗತ್ತು.

'**ಅವ್ಯಕ್ತಮೂರ್ತಿನಾ**' ಎಂಬ ಪದವು ಬ್ರಹುವ್ರೀಹಿ ಸಮಾಸ. ಹಾಗಾಗಿ **ಅವ್ಯಕ್ತಮೂರ್ತಿನಾ** = ಅದೃಶ್ಯ ಶರೀರವುಳ್ಳ (ನನ್ನಿಂದ) ಎಂದು ಇದರ ಅರ್ಥ. ಅಂತಹ ನನ್ನಿಂದ **ತತಂ**= ವ್ಯಾಪ್ತಿಸಲ್ಪಟ್ಟಿದೆ. ಹೀಗೆ ಎಲ್ಲೆಡೆ ವ್ಯಾಪಿಸಿದ್ದರೆ, ಯಾಕೆ ಗೋಚರಿಸುತ್ತಿಲ್ಲ ಎಂಬ ಪ್ರಶ್ನೆಗೆ ಉತ್ತರವಾಗಿ ಅವ್ಯಕ್ತ= ಅದೃಶ್ಯ ಎಂಬ ವಿಶೇಷಣ. ಯಾವುದು ಯಾವುದನ್ನು ವ್ಯಾಪಿಸಿರುತ್ತದೋ ಅದಕ್ಕೆ ಅದು ಆಧಾರ. ಘಟವು ತಾನು ವ್ಯಾಪಿಸಿರುವ ಭೂತಲವನ್ನು ಆಶ್ರಯಿಸಿರುವುದು ಕಂಡಿದೆಯಷ್ಟೆ. ಹಾಗೇ ಪರಮಾತ್ಮನೂ ಜಗತ್ತಿನಲ್ಲೆಲ್ಲಾ ವ್ಯಾಪಿಸಿದ್ದಾನೆ ಎಂದೊಡನೆ ಜಗತ್ತು ಅವನಿಗೆ ಆಧಾರ ; ಪರಮಾತ್ಮನು ತಾನು ಅಲ್ಲಿ ಆಶ್ರಿತನು ಎಂದು ಅನಿಸೀತು. ಅದನ್ನು '**ಮತ್ಸ್ಥಾನಿ ಸರ್ವಭೂತಾನಿ**' '**ನ ಚಾಹಂ ತೇಷ್ವವಸ್ಥಿತಃ**' ಎಂದೆನ್ನುವ ಮೂಲಕ ಅಲ್ಲಗಳೆಯಲಾಗಿದೆ. **ಸರ್ವಭೂತಾನಿ**= ಜಡಪದಾರ್ಥಗಳಿಂದ ಸಹಿತವಾದ ಜೀವರಾಶಿಗಳೆಲ್ಲಾ **ಮತ್ಸ್ಥಾನಿ**= **ಮದಾಧಾರತಯೈವ**= ನನ್ನನ್ನು ಆಶ್ರಯಿದವುಗಳಾಗಿಯೇ ಇವೆ. **ತೇಷು**= ಅವುಗಳಲ್ಲಿ **ಅಹಂ ನ ಅವಸ್ಥಿತಃ**= ನಾನು ಆಶ್ರಯಿಸಿ ಕೊಂಡವನಾಗಿ ಇಲ್ಲ. ಅವುಗಳನ್ನು ಆಶ್ರಯಿಸಿದ್ದು ಅವುಗಳ ಹಂಗಿನಲ್ಲಿ ಇರುವವನು ನಾನಲ್ಲ ಎಂದಭಿಪ್ರಾಯ. ॥ 4 ॥

## ಜೀವರಿಗೆ ಆಶ್ರಯನಾದ ಪರಮಾತ್ಮ ಇಂದ್ರಿಯಗೋಚರನಲ್ಲ

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ ಮಮಾಽತ್ಮಾ ಭೂತಭಾವನಃ ॥ 5 ॥**

**ಅರ್ಥ**– ಜಡಸಹಿತ ಜೀವರಾಶಿಗಳೆಲ್ಲಾ (ನನ್ನನ್ನು ಆಶ್ರಯಿಸಿದ್ದರೂ) ಸ್ಪರ್ಶನೇಂದ್ರಿಯಾದಿಗಳಿಂದ ನನ್ನನ್ನು ಕಂಡುಕೊಂಡವುಗಳಾಗಿಲ್ಲ. ಅವುಗಳಲ್ಲಿ ಇದ್ದರೂ ಅವುಗಳನ್ನು ಆಶ್ರಯಿಸಿ ಕೊಂಡಿಲ್ಲ ಎಂದಾಗಬೇಕಾದರೆ ಈಶ್ವರ ಸಂಬಂಧಿಯಾದ ನನ್ನ ಸಾಮರ್ಥ್ಯವು ಹೇಗಿದ್ದೀತು ಎಂದೆನ್ನುವುದನ್ನು ಅರ್ಥಮಾಡಿಕೋ. ಜಡಸಹಿತ ಜೀವರಾಶಿಗಳ ಉತ್ಪತ್ತಿಕರ್ತೃವೆನಿಸಿರುವ ನನ್ನ ಶರೀರವೂ ನನ್ನಂತೆ ಅವುಗಳಿಗೆ ಆಧಾರವೆನಿಸಿದೆ. ಅವನ್ನು ಆಶ್ರಯಿಸಿಕೊಂಡದ್ದಾಗಿಲ್ಲ ಆ ನನ್ನ ಶರೀರ.

**ತ್ವಯಿ ಚೇದ್‌ಭೂತಾನಿ ತಿಷ್ಠಂತಿ (ತರ್ಹಿ) ಭೂತಲೇ ವರ್ತಾಮಹೇ ಭೂತಲ-ಶೈತ್ಯಾದಿನಾಽಹಂ ಶೀತೋ ಭವಾಮೀತಿ ಜ್ಞಾನಮಿವ ಭಗವತಿ ವಯಂ ವರ್ತಾ-ಮಹ ಇತಿ ಧೀಃ ಸ್ಯಾತ್ । ತಥಾ ವಹ್ನ್ಯಾದ್ಯೌಷ್ಣಶೈತ್ಯಾಭ್ಯಾಂ ಭೂತಲಾದೇರೌಷ್ಣ್ಯ-ಶೈತ್ಯವದನ್ಯೋನ್ಯಧರ್ಮಸಂಕ್ರಾಂತಿಶ್ಚ ಸ್ಯಾದಿತ್ಯತ ಆಹ – ನ ಚ ಮತ್ಸ್ಥಾನೀತಿ ॥ ತ್ವಗಿಂದ್ರಿಯೇಣ ತಂ ಜ್ಞಾತ್ವಾಽನ್ಯೋನ್ಯಧರ್ಮಸಂಕ್ರಾತಿಂ ಚಾಸಾದ್ಯ ನ ತಿಷ್ಠಂತಿ ।**

**ಭಗವತಃ ಪ್ರಾಕೃತಸ್ಪರ್ಶರಹಿತತ್ವಾತ್। ಅಶಬ್ದಮಸ್ಪರ್ಶಮರೂಪಂ (ಕಠ. 3-15) ಇತ್ಯಾದಿ ಶ್ರುತೇಃ। 'ನ ದೃಶ್ಯಶ್ಚಕ್ಷುಷಾ ಚಾಸೌ ನ ಸ್ಪೃಶ್ಯಃ ಸ್ಪರ್ಶನೇನ ಚ' (ಮೋಕ್ಷ-ಧರ್ಮೇ) ಇತಿ ಸ್ಮೃತೇಃ।**

**ಅನುವಾದ** - ಜೀವರಾಶಿಗಳು ನಿನ್ನಲ್ಲಿ ಇವೆ ಎಂದಾದಲ್ಲಿ, ಭೂತಲವನ್ನು ಆಶ್ರಯಿಸಿರುವ ವ್ಯಕ್ತಿಗೆ ಆ ಭೂತಲದ ಸ್ಪರ್ಶದಿಂದಾಗಿ 'ನಾನು ಶೈತ್ಯ (ತಣ್ಣನೆ)ವನ್ನು ಅನುಭವಿಸುತ್ತಿರುವುದರಿಂದಾಗಿ ಭೂತಲದಲ್ಲಿ ಇದ್ದೇನೆ, ಎಂಬ ರೀತಿಯ ಅರಿವು ಮೂಡುವಂತೆ . ಪರಮಾತ್ಮನ ಸ್ಪರ್ಶವು ಅನುಭವಕ್ಕೆ ಬಂದು ಪರಮಾತ್ಮನಲ್ಲಿ ನಾವು ಇದ್ದೇವೆ' ಎಂಬ ರೀತಿಯ ಅರಿವು ಅವುಗಳಿಗೆ ಉಂಟಾಗಬೇಕಿತ್ತು. ಹಾಗೆಯೇ, ಭೂತಲವನ್ನು ಆಶ್ರಯಿಸಿರುವ ಬೆಂಕಿ ನೀರು ಮೊದಲಾದ ಪದಾರ್ಥಗಳ, ಉಷ್ಣತೆ, ಶೈತ್ಯ ಮೊದಲಾದ ಗುಣಗಳಿಂದಾಗಿ ಆಶ್ರಯವಾದ ಭೂತಲದಲ್ಲಿ ಉಷ್ಣತೆ, ಶೈತ್ಯ ಮೊದಲಾದ ಗುಣಗಳು ಕಾಣಿಸಿಕೊಳ್ಳುವಂತೆ ಜೀವರಾಶಿಯ ಧರ್ಮಗಳು ಪರಮಾತ್ಮನಲ್ಲಿ ಪರಮಾತ್ಮನ ಗುಣಗಳು ಜೀವರಾಶಿಗಳಲ್ಲಿ ಕಾಣಿಸಬೇಕಾದೀತು ಎಂಬ ಆಕ್ಷೇಪಕ್ಕೆ ಉತ್ತರವಾಗಿ **'ನ ಚ ಮತ್ ಸ್ಥಾನಿ ಭೂತಾನಿ'** ಎಂದು ಶ್ರೀಕೃಷ್ಣನು ಹೇಳುತ್ತಿದ್ದಾನೆ. ಆಶ್ರಯವಾದ ಭೂತಲವನ್ನೆಂಬಂತೆ ತಮಗೆ ಆಶ್ರಯನಾದ ನನ್ನನ್ನು ಸ್ಪರ್ಶನೇಂದ್ರಿಯದಿಂದ ಕಂಡುಕೊಂಡು ಪರಸ್ಪರ ಧರ್ಮಗಳ ಪಲ್ಲಟವನ್ನು ಹೊಂದಿ ಜೀವರಾಶಿಗಳು ಇಲ್ಲ ಎನ್ನುವುದು ಈ ಮಾತಿನ ತಾತ್ಪರ್ಯ. ಭೂತಲದಂತೆ ಪರಮಾತ್ಮನಲ್ಲಿ ಪ್ರಾಕೃತ ಗುಣವಿಲ್ಲದಿರುವುದೇ ಇದಕ್ಕೆ ಕಾರಣ. **'ಅಶಬ್ದಮಸ್ಪರ್ಶಮರೂಪಮವ್ಯಯಂ'**- 'ಪರಮಾತ್ಮನು ಶಬ್ದ-ಸ್ಪರ್ಶ-ರೂಪಗಳೆಂಬ ಗುಣಗಳಿಂದ ರಹಿತನಾಗಿರುವನು'- ಎಂಬೀತ್ಯಾದಿ ಶ್ರುತಿವಾಕ್ಯಗಳಿಂದ ಅವನಲ್ಲಿ ಪ್ರಾಕೃತಸ್ಪರ್ಶವಿಲ್ಲ ಎಂದು ಸಿದ್ಧಿಸಿದೆಯಷ್ಟೆ. **'ನ ದೃಶ್ಯಃ ಚಕ್ಷುಷಾ ನ ಸ್ಪೃಶ್ಯಃ ಸ್ಪರ್ಶನೇನ ಚ '**- ಪರಮಾತ್ಮನು ಪ್ರಾಕೃತ ಚಕ್ಷುರಿಂದ್ರಿಯದಿಂದ ನೋಡಲು, ಪ್ರಾಕೃತ ಸ್ಪರ್ಶನೇಂದ್ರಿಯದಿಂದ ಕಂಡುಕೊಳ್ಳಲು ನಿಲುಕುವವನಲ್ಲ ಎಂಬ ಸ್ಮೃತಿ(ಮೋಕ್ಷಧರ್ಮ)ಯಿಂದ ಅವನನ್ನು ಆಶ್ರಿತರಾದ ಜೀವರು ಸ್ಪರ್ಶೇಂದ್ರಿಯದಿಂದ ಕಂಡುಕೊಳ್ಳುತ್ತಿಲ್ಲ ಎಂದೆನ್ನುವುದು ಸಿದ್ಧಿಸುತ್ತಿದೆ.

**ವಿವರಣೆ**- ನೆಲದಲ್ಲಿರುವ ವ್ಯಕ್ತಿಗೆ ಅದರ ತಣ್ಣನೆಯ ಸ್ಪರ್ಶದ ಅನುಭವ ಉಂಟಾಗುವುದು ಅನುಭವಸಿದ್ಧ. ಹಾಗೆಯೇ ಜೀವರು ಪರಮಾತ್ಮನನ್ನು ಆಶ್ರಯಿಸಿ ಕೊಂಡಿರುವುದಾದರೆ ಅವನ ಸ್ಪರ್ಶದ ಅನುಭವ ಉಂಟಾಗುವ ಮೂಲಕ ಅವನಲ್ಲಿ ತಾವು ಇದ್ದೇವೆ ಎಂದೆನಿಸಬೇಕಿತ್ತು. ಇಷ್ಟೇ ಅಲ್ಲದೆ ನೆಲವನ್ನು ಆಶ್ರಯಿಸಿರುವ ಬೆಂಕಿಯಿಂದಾಗಿ ಅದು ಬೆಚ್ಚಗಾಗುವುದೂ, ನೀರಿನಿಂದಾಗಿ ತಣ್ಣಗನಿಸುವುದೂ ಕಂಡಿದೆ. ಹಾಗೇನೇ ತನ್ನಲ್ಲಿ ಆಶ್ರಿತವಾದ ವಸ್ತುಗಳ ಸ್ವಭಾವಧರ್ಮಗಳ ಪಲ್ಲಟ ಪರಮಾತ್ಮನಲ್ಲಿ ಉಂಟಾಗಬೇಕಿತ್ತು ಎಂಬ ಆಕ್ಷೇಪಕ್ಕೆ ಇಲ್ಲಿ ಉತ್ತರನೀಡಲಾಗಿದೆ. ನೆಲವು ಪ್ರಾಕೃತಸ್ಪರ್ಶವುಳ್ಳದ್ದು ; ಹಾಗಾಗಿ ಜೀವರ ಪ್ರಾಕೃತೇಂದ್ರಿಯದ ಮೂಲಕ ಅದರ ಅರಿವು

ಮೂಡಲು ಸಾಧ್ಯ. ಕಾಠಕ ಉಪನಿಷತ್ತು ಪ್ರಚುರಪಡಿಸುತ್ತಿರುವಂತೆ ಪರಮಾತ್ಮನಾದರೋ ಪ್ರಾಕೃತ ಸ್ಪರ್ಶರಹಿತ. ಅವನ ಸ್ಪರ್ಶಗುಣವಾದರೋ ಸ್ವರೂಪಭೂತವಾಧ ಜ್ಞಾನಾನಂದ ರೂಪವುಳ್ಳದ್ದು. ಹಾಗಾಗಿ ಭೂತಲಾದಿಗಳಿಗಿಂತ ವಿಲಕ್ಷಣನಾದ ಅವನು ಅವುಗಳಂತೆ ಅರಿವಿಗೆ ಬರಲು ಸಾಧ್ಯ ವಿಲ್ಲ. ಪ್ರಾಕೃತಗುಣಗಳಿಗೆ ಆಶ್ರಯವೆನಿಸಿರುವ ಭೂತಗಳು ಪರಮಾತ್ಮನ ಅಪ್ರಾಕೃತ ಸ್ಪರ್ಶದ ಪಲ್ಲಟಕ್ಕೆ ಅರ್ಹವೂ ಅಲ್ಲ. ಪ್ರಾಕೃತಗುಣಗಳಿಂದ ದೂರನೆನಿಸಿರುವ ಪರಮಾತ್ಮನಲ್ಲಿ ಭೂತಗುಣ ಗಳ ಪಲ್ಲಟವೂ ಸಾಧ್ಯವಿಲ್ಲ. ಇದು ಈ ಉತ್ತರದ ಹಿಂದಿರುವ ಅಭಿಪ್ರಾಯ.

## ಭೂತಾಧಾರನಾಗಿದ್ದರೂ ಭೂತಾಶ್ರಿತನಲ್ಲ - ಇದರ ಹಿಂದಿರುವ ರಹಸ್ಯ

**ಭೂತಾಧಾರೋಽಪಿ ಕಥಂ ತದನಾಧಾರ ಇತ್ಯತ ಉಕ್ತಮ್- ಪಶ್ಯೇತ್ಯಾದಿ ॥ ಐಶ್ವರಂ ಈಶ್ವರಸಂಬಂಧಿನಂ ಮೇ ಯೋಗಂ ಸಾಮರ್ಥ್ಯಮ್ । ಯೋಗೋಽ-ಸಾವುಪಾಯಃ ಶಕ್ತಿರೇವ ಚೇತಿ ವಚನಾತ್ । ಪಶ್ಯ ಮಮ ತಾದೃಶೀಂ ಶಕ್ತಿ-ಮಿತ್ಯರ್ಥಃ । ಪೂರ್ವತ್ರಾವ್ಯಕ್ತಮೂರ್ತಿನೇತಿ ಮೂರ್ತಾವುಕ್ತಾಯಾಂ ಸಾಽಸ್ಮ-ದಾದೀನಾಮಿವ ಭಿನ್ನೇತಿ ಭ್ರಾಂತಿನಿರಾಸಾಯ ಸ್ವಲಕ್ಷಣಂ ಭೂತಾಧಾರತ್ವಾದಿಕಂ ಸ್ವದೇಹಸ್ಯಾಪ್ಯಾಹ- ಭೂತಭೃದಿತಿ ॥ ಭೂತಭಾವನಃ ಭೂತಾನಾಮುತ್ಪತ್ತಿಕರ್ತಾ ಮಮಾಽತ್ಮಾ ಮಮ ದೇಹಃ ಅಹಮಿವ ಭೂತಭೃತ್ ಭೂತಸ್ಥಶ್ಚ ನ ಭವತೀತ್ಯರ್ಥಃ। ಅತ್ರ ಮಮ ದೇಹ ಇತಿ ವಕ್ತವ್ಯೇ ಮಮಾತ್ಮೇತ್ಯುಕ್ತಿಃ ಅಚೇತನಸ್ಯ ದೇಹಸ್ಯ ಕಥಂ ಭಗವಲ್ಲಕ್ಷಣಂ ಸ್ಯಾದಿತಿ ಶಂಕಾ ಸ್ಯಾತ್ ತನ್ನಿವೃತ್ತಯೇ ತಸ್ಯ ಚೇತನತ್ವಂ ಪೃಥಗ್ ವಾಚ್ಯಂ ಸ್ಯಾತ್ ಆತ್ಮಪದಪ್ರಯೋಗೇ ತು ದೇಹತ್ವಂ ಚೇತನತ್ವಂ ದ್ವಯಮಪ್ಯುಕ್ತಂ ಸ್ಯಾತ್ । ಆತ್ಮಪದಸ್ಯ ದೇಹಚೇತನರೂಪೋಭಯಾರ್ಥತ್ವಾದಿತಿ ॥ 5 ॥**

**ಅನುವಾದ-** ಪರಮಾತ್ಮನು ಜೀವರಾಶಿಯಲ್ಲಿದ್ದರೂ ಅವನ್ನು ಆಶ್ರಯಿಸಿಕೊಂಡಿಲ್ಲ. ಎಂದೆನ್ನುವುದು ಹೇಗೆ ತಾನೆ ಯುಕ್ತವೆನಿಸೀತು? ಎಂಬ ಪ್ರಶ್ನೆಗೆ ಉತ್ತರವಾಗಿ '**ಪಶ್ಯ ಮೇ ಯೋಗ-ಮೈಶ್ವರಂ**' ಎಂದೆನ್ನಲಾಗಿದೆ. **ಐಶ್ವರಂ**= ಅಚಿಂತ್ಯಾದ್ಭುತಶಕ್ತಿಯಿದ್ದು ಈಶ್ವರನೆನಿಸಿರುವ ನನಗೆ ಸಂಬಂಧಿಸಿರುವ, **ಯೋಗಂ**= ಸಾಮರ್ಥ್ಯವನ್ನು ನೋಡು. '**ಯೋಗೋಽಸಾವುಪಾಯಃ ಶಕ್ತಿರೇವ ಚ**' ಎಂಬ ಶಬ್ದಾನುಶಾಸನಾನುಸಾರವಾಗಿ ಯೋಗಶಬ್ದಕ್ಕೆ ಸಾಮರ್ಥ್ಯ ಎಂಬ ಅರ್ಥವು ಯುಕ್ತವೆನಿಸಿದೆ. ಹಾಗಾಗಿ ಅಲ್ಲಿದ್ದರೂ ಅದನ್ನು ಆಶ್ರಯಿಸದೇ ಇರುವುದು' ಎಂಬ ರೀತಿಯ ನನ್ನ ಅಚಿಂತ್ಯಾದ್ಭುತಶಕ್ತಿಯನ್ನು ಅರ್ಥ ಮಾಡಿಕೋ ಎಂದು ಈ ಉತ್ತರದ ಹಿಂದಿರುವ ಅಭಿಪ್ರಾಯ.

ಹಿಂದಿನ ಶ್ಲೋಕದಲ್ಲಿ '**ಅವ್ಯಕ್ತಮೂರ್ತಿನಾ**' ಎಂಬ ವಿಶೇಷಣದಿಂದ ಪರಮಾತ್ಮನಿಗೆ

ಶರೀರವಿದೆ ಎಂದಾದಾಗ ಅದು ನಮ್ಮೆಲ್ಲರ ಶರೀರದಂತೆ ಅವನಿಂದ ಭಿನ್ನವೆನಿಸಿದೆ ಎಂಬ ಭ್ರಾಂತಿಯುಂಟಾಗಬಹುದು. ಅದರ ನಿವಾರಣೆಗಾಗಿ, ತನ್ನ ಅಸಾಧಾರಣ ವ್ಯಕ್ತಿತ್ವವೆನಿಸಿರುವ ಭೂತಾಧಾರತ್ವಾದಿಗಳು ತನ್ನ ದೇಹಕ್ಕೆ ಇವೆ; ಆದುದರಿಂದ ಅದು ತನಗಿಂತ ಭಿನ್ನವಲ್ಲ ಎಂಬ ಅಭಿಪ್ರಾಯದಿಂದ **'ಭೂತಭೃತ್ ನ ಚ ಭೂತಸ್ಥಃ ಮಮಾऽತ್ಮಾ ಭೂತಭಾವನಃ'** ಎಂದೆನ್ನಲಾಗಿದೆ. **ಭೂತಭಾವನಃ**= ಜಡಸಹಿತಜೀವರಾಶಿಗಳ ಉತ್ಪತ್ತಿಕರ್ತೃ ಎನಿಸಿರುವ ಮಮ ಆತ್ಮಾ= ನನ್ನ ದೇಹವೂ ನನ್ನಂತೆಯೇ ಅವುಗಳಿಗೆ ಪ್ರೇರಕವಾಗಿ ವ್ಯಾಪ್ತವೆನಿಸಿದೆ. ಆದರೂ ಅವನ್ನು ಆಶ್ರಯಿಸಿದ್ದಾಗಿ ಇಲ್ಲ ಎಂದು ಈ ವಾಕ್ಯದ ಅಭಿಪ್ರಾಯ. ಇಲ್ಲಿ 'ಅಚೇತನವಾದ ದೇಹವು ಪರಮಚೇತನನೆನಿಸಿರುವ ಪರಮಾತ್ಮನ ಅಸಾಧಾರಣ ವ್ಯಕ್ತಿತ್ವವುಳ್ಳದ್ದಾಗಲು ಹೇಗೆ ಸಾಧ್ಯ' ಎಂಬ ಆಕ್ಷೇಪವು ತಲೆದೋರಬಹುದು. ಅದರ ಪರಿಹಾರಕ್ಕಾಗಿ **'ಮಮ ದೇಹಃ'** ಎಂದೆನ್ನುವ ಬದಲು **'ಮಮ ಆತ್ಮಾ'** ಎಂದೆನ್ನಲಾಗಿದೆ. ಒಂದು ವೇಳೆ 'ಮಮ ದೇಹಃ'ಎಂದು ಹೇಳುತ್ತಿದ್ದರೆ ಈ ಆಕ್ಷೇಪಪರಿಹಾರಕ್ಕಾಗಿ ಪ್ರತ್ಯೇಕವಾಗಿ 'ಅದು ಚೇತನವೂ ಆಗಿದೆ' ಎಂದು ಹೇಳಬೇಕಾದ ಪ್ರಯಾಸಕ್ಕೂ ಅವಕಾಶವಾಗುತ್ತಿತ್ತು. ಆತ್ಮಶಬ್ದಕ್ಕೆ ಶಬ್ದಾನುಶಾಸನದಲ್ಲಿ ದೇಹ ಹಾಗೂ ಆತ್ಮ ಎಂಬ ಎರಡು ಅರ್ಥಗಳೂ ಪ್ರಸಿದ್ಧವಾಗಿರುವುದರಿಂದ. ದೇಹವನ್ನು ಈ ಶಬ್ದದಿಂದ ಹೇಳಿದಾಗ ಅದು ದೇಹವೂ ಆಗಿದೆ ; ಚೇತನವೂ ಆಗಿದೆ ಎಂಬ ಎರಡು ಅಂಶಗಳನ್ನು 'ಮಮ ಆತ್ಮಾ' ಎಂಬ ಒಂದೇ ಮಾತಿನಿಂದ ಹೇಳಿದಂತಾಯಿತು. ॥ 5 ॥

**ವಿವರಣೆ-** ಸ್ವ-ಸ್ವಾಮಿಭಾವ ಸಂಬಂಧವಿರುವ ಎರಡು ವಸ್ತುಗಳು ಪರಸ್ಪರ ಭಿನ್ನವಾಗಿರುವುದು ಲೋಕದಲ್ಲಿ ಕಂಡಿದೆ. ಹಾಗಾಗಿ ನಾಶರಹಿತವಾದ ಮೂರ್ತಿ (ದೇಹ) ಉಳ್ಳವನು ಎಂದಾಗ ತನಗೂ ಆ ದೇಹಕ್ಕೂ ಸ್ವಸ್ವಾಮಿಭಾವ ಸಂಬಂಧಸೂಚಿತವಾಗಿ ಆ ಮೂರ್ತಿಯು ಶ್ರೀಕೃಷ್ಣನಿಗಿಂತ ಭಿನ್ನ ಎಂಬ ಭ್ರಾಂತಿ ಉಂಟಾಗುವುದು ಸಹಜ. ಲೋಕದಲ್ಲಿ ದೇಹವು ದೇಹವನ್ನು ಹೊಂದಿರುವ ಚೇತನನಿಗಿಂತ ಭಿನ್ನವಾಗಿರುವುದು ಕಂಡಿರುವುದರಿಂದ ಈ ಭ್ರಾಂತಿಗೆ ಅವಕಾಶವೂ ಇದೆ. ಈ ಭ್ರಾಂತಿಯನ್ನು ನೇರವಾಗಿ 'ನನ್ನ ಶರೀರವು ನನಗಿಂತ ಭಿನ್ನವಲ್ಲ' ಎಂದೆನ್ನುವ ಮೂಲಕ ಪರಿಹರಿಸದೆ 'ತನ್ನ ಅಸಾಧಾರಣ ಧರ್ಮಗಳಾದ ಜಗದುತ್ಪತ್ತಿಕರ್ತೃತ್ವ, ಜಗದ್‌ವ್ಯಾಪಿತ್ವ ಜಗತ್ತಿನಲ್ಲಿದ್ದರೂ ಅದನ್ನು ಆಶ್ರಯಿಸದೇ ಇರುವಿಕೆ ಎಂಬ ಮಹಿಮೆಗಳನ್ನು 'ತನ್ನ ಶರೀರದಲ್ಲೂ ಇರುವವುಗಳು, ಎಂದೆನ್ನುವ ಮೂಲಕ ಭೇದವಿಲ್ಲದಿರುವುದನ್ನು ತೋರಿಸಿಕೊಟ್ಟು ಇಲ್ಲಿ ಪರಿಹರಿಸಲಾಗಿದೆ. ತನ್ನ ಅಸಾಧಾರಣಧರ್ಮವು ತನ್ನ ಶರೀರದಲ್ಲೂ ಇದೆಯೆಂದರೆ ಅದು ತಾನೇ ಆಗಿರಬೇಕಷ್ಟೆ. ಹಾಗಾಗಲಿಲ್ಲವೆಂದರೆ ತನಗಿಂತ ಹೊರತಾಗಿ ಬೇರೆಡೆಯೂ ಇರುವ ಅಂತಹ ಧರ್ಮವು ಇತರ ಸಾಧಾರಣ ಧರ್ಮವೆನಿಸಿ ಅಸಾಧಾರಣ ಧರ್ಮವೆನಿಸಿಲು ಹೇಗೆ ಸಾಧ್ಯ ?

**ಯಥಾಽಽಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್‌ಸ್ಥಾನೀತ್ಯುಪಧಾರಯ ॥ 6 ॥**

**ಅರ್ಥ** - ಹೇಗೆ ಆಕಾಶದಲ್ಲಿರುವ ಮಹಾವಾಯುವು ತಾನು ಎಲ್ಲಾಕಡೆ ವ್ಯಾಪಿಸಿದ್ದರೂ ತಾನು ಸಂಪರ್ಕ ಹೊಂದಿರುವ ಆಯಾಯ ವಸ್ತುಗಳ ಧರ್ಮಗಳನ್ನು ತನ್ನಲ್ಲಿ ಅಳವಡಿಸಿ ಕೊಳ್ಳುವುದಿಲ್ಲವೋ ಹಾಗೆಯೇ ಎಲ್ಲಾ ಜೀವರಾಶಿಗಳು ನನ್ನಲ್ಲಿದ್ದವುಗಳಾಗಿದ್ದು ನನ್ನ ಸಂಪರ್ಕ ಹೊಂದಿದ್ದರೂ ನನ್ನ ಹಾಗೂ ಅವುಗಳ ಧರ್ಮಗಳು ಪರಸ್ಪರ ಪಲ್ಲಟಗೊಳ್ಳುವುದಿಲ್ಲ ಎಂದೆನ್ನುವುದನ್ನು ದೃಢಪಡಿಸಿಕೋ.

**ಭಗವತಃ ಸರ್ವಾಧಾರತ್ವೇಽಪ್ಯನ್ಯೋಽನ್ಯಧರ್ಮಾಸಂಕ್ರಾತ್ಯಾದಿರಸಂಭಾವಿತ ಇತ್ಯತೋ ದೃಷ್ಟಾಂತೇನ ತದುಪಪಾದಯತಿ- ಯಥೇತಿ ॥ ಅವಕಾಶಂ ವಿನಾಽವಸ್ಥಿತ್ಯಯೋಗಾತ್ ನಿತ್ಯಮಾಕಾಶೇ ಸ್ಥಿತೋ ಮಹಾನ್ವಾಯುಃ ಸರ್ವತ್ರಗೋಽಪಿ ತತ್ತದ್ಧರ್ಮಾನ್ನಾಪ್ನೋತಿ । ಶೈತ್ಯಸೌರಭಾದಿಕಂ ತು ವಾಯುಸಂಬದ್ಧಜಲಾದ್ಯವಯವಗತಮೇವ । ನ ವಾಯುಗತಮ್ । ತಥಾ ಸರ್ವಾಣಿ ಭೂತಾನಿ ಮತ್ಸ್ಥಾನಿ ನಾನ್ಯೋಽನ್ಯಧರ್ಮಸಂಕ್ರಾಂತಿಮಂತೀತ್ಯುಪಧಾರಯೇತಿ ॥ 6 ॥**

**ಅನುವಾದ**- ಪರಮಾತ್ಮನು ಸರ್ವಾಧಾರನೆನಿಸಿದ್ದರೂ ಪರಸ್ಪರ ಧರ್ಮಪಲ್ಲಟವಿಲ್ಲ ಎಂದೆನ್ನುವುದು ಮೊದಲಾದ ಸಂಗತಿಗಳು ಅಸಂಭಾವಿತ ಎಂಬ ಆಕ್ಷೇಪಕ್ಕೆ ಉತ್ತರವಾಗಿ ದೃಷ್ಟಾಂತ ತೋರಿಸಿ ಅದು ಸಂಭಾವಿತ ಎಂದು '**ಯಥಾಽಽಕಾಶಸ್ಥಿತೋನಿತ್ಯಮ್**' ಎಂಬ ಶ್ಲೋಕದಲ್ಲಿ ಉಪಪಾದಿಸಲಾಗುತ್ತಿದೆ. ಅವಕಾಶವಿಲ್ಲದಿರುವಾಗ ಯಾವ ವಸ್ತುವೇ ಆಗಲಿ ಇರುವುದು ಅಸಂಭಾವಿತ. ಹಾಗಾಗಿ ಅವಕಾಶರೂಪದ ಆಕಾಶದಲ್ಲಿ ನಿತ್ಯವೂ ಇರುವ ಅಂತಹ ಮಹಾ ವಾಯುವು ಎಲ್ಲಾ ವಸ್ತುಗಳ ಸಂಪರ್ಕವುಳ್ಳದ್ದಾಗಿದ್ದರೂ ಆ ವಸ್ತುಗಳ ಧರ್ಮಗಳನ್ನು ತನ್ನಲ್ಲಿ ಮೈಗೂಡಿಸಿಕೊಳ್ಳುವುದಿಲ್ಲ. ಗಾಳಿಯು ಬೀಸುವಾಗ ನೀರಿನ ಗುಣವಾದ ಶೈತ್ಯ, ಭೂಮಿಯ ಧರ್ಮವಾದ ಗಂಧ ಇವೇ ಮೊದಲಾದ, ತಾನು ಸಂಪರ್ಕ ಹೊಂದಿರುವ ವಸ್ತುಗಳ ಧರ್ಮಗಳು ನಮ್ಮ ಅನುಭವಕ್ಕೆ ಬಂದರೂ ಆ ಧರ್ಮಗಳು ನೇರವಾಗಿ ವಾಯುವಿನಲ್ಲೇ ಇದ್ದುಕೊಂಡು ಅನುಭವಕ್ಕೆ ಗೋಚರಿಸುತ್ತಿರುವುದಲ್ಲ. ವಾಯುವಿನೊಡನೆ ಬೆರೆತಿರುವ ಆಯಾಯ ವಸ್ತುಗಳ ಸೂಕ್ಷ್ಮಾಂಶಗಳಲ್ಲಿರುವ ಧರ್ಮಗಳವು (ಹಾಗಾಗಿ ಈ ದೃಷ್ಟಾಂತವು ಪ್ರಕೃತ ಸಂಗತವೇ ಆಗಿದೆ.) ಹಾಗೆಯೇ ಎಲ್ಲಾ ಭೂತಗಳು ನನ್ನಲ್ಲಿದ್ದರೂ ಪರಸ್ಪರ ಧರ್ಮಗಳ ಪಲ್ಲಟವುಳ್ಳವುಗಳಾಗುವುದಿಲ್ಲ ಎಂದೆನ್ನುವುದನ್ನು ದೃಢಪಡಿಸಿಕೋ. ॥ 6 ॥

## ಪ್ರಲಯ-ಸೃಷ್ಟಿಕ್ರಿಯೆಯಲ್ಲಿ ಪರಮಾತ್ಮನ ಪ್ರಕೃತಿಯ ಪಾತ್ರ

**ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥ 7 ॥**

**ಅರ್ಥ** – ಕುಂತೀಪುತ್ರನೇ ! ಪ್ರಲಯಕಾಲದಲ್ಲಿ ಜಡಸಹಿತವಾದ ಎಲ್ಲಾ ಜೀವರಾಶಿಗಳು ನನ್ನ ಅಧೀನದಲ್ಲಿರುವ ಪ್ರಕೃತಿಯಲ್ಲಿ ಲೀನವಾಗುತ್ತವೆ . ಪುನಃ ಮುಂದಿನ ಕಲ್ಪದ ಆದಿಯಲ್ಲಿ ಆ ಜೀವರಾಶಿಗಳನ್ನು ನಾನು ವಿಶೇಷವಾಗಿ ಹಾಗೂ ನಾನಾ ಪ್ರಕಾರಗಳಿಂದ ಸೃಷ್ಟಿಸುತ್ತೇನೆ.

**ಪ್ರತಿಜ್ಞಾತಜ್ಞಾನಪ್ರದರ್ಶನಾಯ ಮಯೇತ್ಯಾದಿನಾ ಹರೇರ್ವ್ಯಾಪ್ತತ್ವಸರ್ವಾಧಾರತ್ವಾದ್ಯುಕ್ತ್ವಾ ನ ಚೇತ್ಯಾದಿ ಶ್ಲೋಕದ್ವಯೇನ ತದುಪಪಾದ್ಯಾಧುನಾ ಪುನಃ ಪ್ರತಿಜ್ಞಾತಪ್ರದರ್ಶನಾರ್ಥಂ ಪ್ರಲಯಾದಿಕಾರಣತ್ವಮಾಹ- ಸರ್ವೇತಿ ॥ ಕಲ್ಪಕ್ಷಯೇ ಪ್ರಲಯಕಾಲೇ ಸರ್ವಾಣಿ ಭೂತಾನಿ ಸಜಡಜೀವ ಜಾತಾನಿ ಮಾಮಿಕಾಂ ಮದಧೀನಾಂ ತ್ರಿಗುಣಾತ್ಮಿಕಾಂ ಪ್ರಕೃತಿಂ ಯಾಂತಿ ತತ್ರ ಲೀಯಂತೇ । ಪುನಸ್ತಾನಿ ಭೂತಾನಿ ಕಲ್ಪಾದೌ ವಿಶೇಷೇಣ ವಿವಿಧತಯಾ ಚಾಹಂ ಸೃಜಾಮಿ ॥ 7 ॥**

**ಅನುವಾದ** - 'ಪ್ರವಕ್ಷ್ಯಾಮಿ ಎಂದು ಪ್ರತಿಜ್ಞೆ ಮಾಡಿದಂತೆ ಜ್ಞಾನವನ್ನು ನಿರೂಪಿಸಲು' **'ಮಯಾ ತತಮಿದಂ ಸರ್ವಂ'** ಎಂಬ ನಾಲ್ಕನೆಯ ಶ್ಲೋಕದಲ್ಲಿ ಹರಿಯ ಸರ್ವತ್ರವ್ಯಾಪ್ತಿ-ಸರ್ವಾಧಾರತ್ವಾದಿ ಮಹಿಮೆಗಳನ್ನು ಹೇಳಿ, ಮುಂದಿನ ಎರಡು ಶ್ಲೋಕಗಳಿಂದ ಅವನ್ನು ಉಪಪಾದಿಸಿ, ಪ್ರತಿಜ್ಞೆ ಮಾಡಿರುವಂತೆ ಪುನಃ ಆ ಜ್ಞಾನವನ್ನು ನಿರೂಪಿಸುವ ಉದ್ದೇಶದಿಂದ ಪ್ರಲಯಾದಿಕಾರಣತ್ವರೂಪದ ಮಹಿಮೆಯನ್ನು **'ಸರ್ವಭೂತಾನಿ ಕೌಂತೇಯ'** ಎಂಬ ಶ್ಲೋಕದಲ್ಲಿ ಹೇಳಲಾಗುತ್ತಿದೆ. ಕಲ್ಪಕ್ಷಯೇ- ಪ್ರಲಯಕಾಲದಲ್ಲಿ , **ಸರ್ವಭೂತಾನಿ= (ಸರ್ವಾಣಿ ಭೂತಾನಿ)=** ಜಡಸಹಿತವಾದ ಜೀವರಾಶಿಗಳು **ಮಾಮಿಕಾಂ=** ನನ್ನ ಅಧೀನವಾದ **'ಸತ್ತ್ವ ರಜಸ್'** ತಮಸ್ಸುಗಳೆಂಬ ಮೂರುಗುಣಗಳ ರೂಪದಲ್ಲಿರುವ ಪ್ರಕೃತಿಯನ್ನು, **ಯಾಂತಿ=** ಹೊಂದುತ್ತವೆ . ಅಂದರೆ- ಅದರಲ್ಲಿ ಲೀನವಾಗುತ್ತವೆ. **ಪುನಃ ತಾನಿ=** ಆ ಜೀವರಾಶಿಗಳನ್ನು **ಕಲ್ಪಾದೌ=** ಸೃಷ್ಟಿಯ ಆದಿಯಲ್ಲಿ ನಾನು , **ವಿ=** ವಿಶೇಷವಾಗಿ ಹಾಗೂ ವಿವಿಧಪ್ರಕಾರಗಳಿಂದ ಸೃಷ್ಟಿಸುತ್ತೇನೆ. ॥ 7 ॥

**ವಿವರಣೆ - ವಿ + ಸೃಜಾಮಿ** ಎನ್ನುವುದಕ್ಕೆ ಗೀತಾವಿವೃತಿಯಲ್ಲಿ ವಿಶೇಷೇಣ ಸೃಜಾಮಿ ಎಂದು ವ್ಯಾಖ್ಯಾನಿಸಲಾಗಿದೆ. ಜೀವರು ಅನಾದಿನಿತ್ಯರು. ಹಾಗಿರುವಾಗ ಅವರ ಸೃಷ್ಟಿ ಎನ್ನುವುದು ಅನುಚಿತ ಎಂಬ ಶಂಕೆಗೆ ಇದರಲ್ಲಿ ಉತ್ತರವಿದೆ. ಸ್ವರೂಪತಃ ಅವರಿಗೆ ಸೃಷ್ಟಿ ಇಲ್ಲದಿದ್ದರೂ

ಶರೀರ ಸಂಬಂಧರೂಪದ ಸೃಷ್ಟಿವಿಶೇಷ ಅವರಿಗೂ ಇದ್ದೇ ಇದೆ **ವಿ+ಸೃಜಾಮಿ** ಎಂದೆನ್ನುವುದನ್ನು **'ವಿವಿಧತಯಾ ಸೃಜಾಮಿ'** ಎಂದು ವ್ಯಾಖ್ಯಾನಿಸುವ ಮೂಲಕ ಅವರವರ ಕರ್ಮಾನುಸಾರವಾಗಿ ಬೇರೆ ಬೇರೆ ಯೋನಿಗಳಲ್ಲಿ , ಅಂತಹ ಒಂದೊಂದು ಯೋನಿಯಲ್ಲಿಯೂ ಪರಸ್ಪರ ವಿಲಕ್ಷಣವಾಗಿ ಸೃಷ್ಟಿಸುತ್ತೇನೆ ಎಂಬ ಅರ್ಥದಲ್ಲೂ ವಿ ಶಬ್ದವನ್ನು ಬಳಸಲಾಗಿದೆ ಎಂದು ಗೀತಾವಿವೃತಿಯು ಅಭಿಪ್ರಾಯ ವ್ಯಕ್ತಪಡಿಸಿದೆ.

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥ 8 ॥**

**ಅರ್ಥ–** ನನ್ನ ಅಧೀನವಾದ ಪ್ರಕೃತಿಯನ್ನು ಉಪಾದಾನವನ್ನಾಗಿ ಆಶ್ರಯಿಸಿ ಪ್ರಕೃತಿಯ ಅಧೀನವಾಗಿರುವುದರಿಂದ ಅಸ್ವತಂತ್ರವೆನಿಸಿರುವ, ನನ್ನ ಅಧೀನವಾದ ಪ್ರಕೃತಿಯ ಅಧೀನವಾಗಿರುವುದರಿಂದಲೇ, ಅಕಾರಶಬ್ದವಾಚ್ಯನಾದ ನನ್ನ ಅಧೀನವೂ ಆಗಿರುವ ಸಕಲಜೀವರಾಶಿಗಳನ್ನು ಮತ್ತೆಮತ್ತೆ ವಿಶೇಷವಾಗಿ ಹಾಗೂ ನಾನಾ ಪ್ರಕಾರಗಳಿಂದ ಸೃಷ್ಟಿಸುತ್ತೇನೆ.

**ಸೃಷ್ಟೌ ಪ್ರಕೃತೇರನುಕ್ತೇಃ ಸಾಧನಾನಿ ವಿನೈವ ಸೃಷ್ಟಿಂ ಕರೋತೀತಿ ಪ್ರತೀತಿ-ನಿರಾಸಾಯೋಕ್ತಂ ವಿವೃಣೋತಿ- ಪ್ರಕೃತಿಮಿತಿ ॥ ಸ್ವಾಂ ಸ್ವಾಧೀನಾಂ ಪ್ರಕೃತಿಂ ತ್ರಿ-ಗುಣಾತ್ಮಿಕಾಮವಷ್ಟಭ್ಯ ಉಪಾದಾನತಯಾಽಽಶ್ರಿತ್ಯ ಪ್ರಕೃತೇರ್ವಶಾತ್ ತದಧೀನ-ತ್ವಾದವಶಂ ಸ್ವಾನಧೀನಮ್ । ಯದ್ವಾ ಮದಧೀನಪ್ರಕೃತಿವಶತ್ವಾದೇವ ಅಕಾರ-ವಾಚ್ಯಬ್ರಹ್ಮರೂಪಮದಧೀನಮ್ ಇಮಂ ಕೃತ್ಸ್ನಂ ಭೂತಗ್ರಾಮಂ ಪುನಃ ಪುನಃ ವಿಸೃಜಾಮಿ । ಪ್ರಕೃತ್ಯಾದಿಸಾಧನಾವಷ್ಟಂಭೋ ನ ತೇನ ವಿನಾ ಸ್ರಷ್ಟುಮಸಾ-ಮರ್ಥ್ಯಾತ್ । ಕಿಂತು ಲೀಲಯೈವ । ಪ್ರಕೃತ್ಯಾದೇಃ ಸಾಧನತಾಶಕ್ತೇರ್ಮದಾ-ಯತ್ತತ್ವಾದಿತಿ ಜ್ಞಾಪನಾಯ ಸ್ವಾಮಿತಿ ವಿಶೇಷಣೋಕ್ತಿಃ । ತದುಕ್ತಂ ತದನನ್ಯತ್ವ-ನಯೇ 'ಓಂ ಯುಕ್ತೇಃ ಶಬ್ದಾಂತರಾಚ್ಚ ಓಂ' (2-1-19) ಇತಿ ಸೂತ್ರೇ ॥ 8 ॥**

**ಅನುವಾದ–** ತನ್ನಿಂದ ಸೃಷ್ಟಿಯನ್ನು ಹೇಳುವಾಗ ಪ್ರಕೃತಿಯ ಹೆಸರನ್ನು ಹೇಳದೆ ಇರುವುದರಿಂದ ಯಾವ ಸಾಧನವನ್ನೂ ಬಳಸದೇ ಪರಮಾತ್ಮನಿಂದ ಸೃಷ್ಟಿ ಆಗುತ್ತದೆ ಎಂಬ ತಪ್ಪು ಕಲ್ಪನೆಗೆ ಅವಕಾಶವಿರುವುದರಿಂದ ಅದನ್ನು ಹೋಗಲಾಡಿಸಲು **'ಪ್ರಕೃತಿಂ ಸ್ವಾಂ ಅವಷ್ಟಭ್ಯ'** ಎಂಬ ಶ್ಲೋಕದಲ್ಲಿ ಹಿಂದೆ ಹೇಳಲಾಗಿರುವ ಸೃಷ್ಟಿಯನ್ನು ವಿವರಿಸಲಾಗುತ್ತಿದೆ. **ಸ್ವಾಂ**= ತನ್ನ ಅಧೀನವಾದ, **ಪ್ರಕೃತಿಂ**= ಸತ್ತ್ವರಜಸ್ತಮೋಗಳೆಂಬ ಮೂರು ಗುಣಗಳ ಸಮಷ್ಟಿರೂಪದ ಪ್ರಕೃತಿಯನ್ನು, **ಅವಷ್ಟಭ್ಯ**= ಉಪಾದಾನ(ಮೂಲವಸ್ತು)ವನ್ನಾಗಿ ಸ್ವೀಕರಿಸಿ **ಪ್ರಕೃತೇರ್ವಶಾತ್** = ಆ ಪ್ರಕೃತಿಯ

ವಶವಾಗಿರುವುದರಿಂದ **ಅವಶಂ**= ಅಸ್ವತಂತ್ರವೆನಿಸಿರುವ ಅಥವಾ **ಪ್ರಕೃತೇರ್ವಶಾತ್** = ನನ್ನ ಅಧೀನವಾದ ಪ್ರಕೃತಿಯ ಅಧೀನವಾಗಿರುವುದರಿಂದ **ಅವಶಂ, ಅ**= ಅಕಾರಶಬ್ದವಾಚ್ಯನಾದ ಬ್ರಹ್ಮನೆನಿಸಿರುವ ನನ್ನ **ವಶಂ**= ನನ್ನ ಅಧೀನವಾದ ಪ್ರಕೃತಿಯ ಅಧೀನವಾಗಿ ಅಧೀನವೆನಿಸಿರುವ ಈ ಎಲ್ಲಾ ಜೀವರಾಶಿಯನ್ನು ಮತ್ತೆ ಮತ್ತೆ ನಾನು ವಿಶೇಷವಾಗಿ ಹಾಗೂ ನಾನಾ ಪ್ರಕಾರಗಳಿಂದ ಸೃಷ್ಟಿಸುತ್ತೇನೆ.

ಸೃಷ್ಟಿಯಲ್ಲಿಪರಮಾತ್ಮನು ಪ್ರಕೃತ್ಯಾದಿ ಸಾಧನಗಳನ್ನು ಬಳಸುವುದು ಕೇವಲ ಲೀಲೆಯಿಂದ ಹೊರತು ಅವುಗಳನ್ನು ಆಶ್ರಯಿಸದೆ ಸೃಷ್ಟಿ ಮಾಡುವ ಸಾಮರ್ಥ್ಯವಿಲ್ಲದಿರುವುದರಿಂದಲ್ಲ. ಯಾಕೆಂದರೆ ಪ್ರಕೃತ್ಯಾದಿಗಳಲ್ಲಿರುವ ಸೃಷ್ಟಿಸಾಧನತ್ವರೂಪದ ಶಕ್ತಿಯೂ ತನ್ನ ಅಧೀನವಾಗಿರುವುದರಿಂದ ಅವುಗಳ ಹಂಗು ಪರಮಾತ್ಮನಿಗಿರಲು ಹೇಗೆ ಸಾಧ್ಯ ? ಎಂಬೀ ಪ್ರಮೇಯವನ್ನು ಸೂಚಿಸುವ ಉದ್ದೇಶದಿಂದ ಪ್ರಕೃತಿಯನ್ನು '**ಸ್ವಾಂ**'= ತನ್ನ ಅಧೀನವಾದ', ಎಂಬ ವಿಶೇಷಣ ಪೂರ್ವಕವಾಗಿ ಉಲ್ಲೇಖಿಸಲಾಗಿದೆ. ಈ ಪ್ರಮೇಯವನ್ನು ಬ್ರಹ್ಮಸೂತ್ರದ ಎರಡನೆಯ ಅಧ್ಯಾಯದ ಮೊದಲನೆಯ ಪಾದದ ತದನನ್ಯತ್ವಾಧಿಕರಣದಲ್ಲಿ **ಓಂ ಯುಕ್ತೇಃ ಶಬ್ದಾಂತರಾಚ್ಚ ಓಂ** ಎಂಬ ಸೂತ್ರದಲ್ಲಿ ನಿರೂಪಿಸಲಗಿದೆ.

**ವಿವರಣೆ**– ಪರಮಾತ್ಮನು ತನ್ನ ಸಾಮರ್ಥ್ಯದಿಂದಲೇ ಜಗತ್ತನ್ನು ಸೃಷ್ಟಿಸುತ್ತಾನೆ. ಪ್ರಕೃತ್ಯಾದಿ ಸಾಧನಗಳನ್ನು ಬಳಸುವುದು ಬರೇ ಲೀಲೆಯಿಂದ ಎಂಬ ಪ್ರಮೇಯವನ್ನು ಸಮರ್ಥಿಸಲು ಹೊರಟಿದೆ ಬ್ರಹ್ಮಸೂತ್ರದ '**ತದನನ್ಯತ್ವಾಧಿಕರಣ**'. ಇಲ್ಲಿ '**ಯುಕ್ತೇಃ ಶಬ್ದಾಂತರಾಚ್ಚ**' ಎಂದು ಒಂದು ಸೂತ್ರ. '**ಸಾಧನಾನಾಂ ಸಾಧನತ್ವಂ ಯದಾಽಽತ್ಮಾಧೀನಮುಚ್ಯತೇ । ತದಾ ಸಾಧನ-ಸಂಪತ್ತಿರೈಶ್ವರ್ಯದ್ಯೋತಿಕಾ ಭವೇತ್** ಎಲ್ಲಾಸಾಧನಗಳಲ್ಲಿರುವ ಸಾಧನ ಶಕ್ತಿಯು ಪರಮಾತ್ಮನ ಅಧೀನವೆಂದಾದ ಮೇಲೆ ಸೃಷ್ಟಿಯಲ್ಲಿ ಅವನ ಸಾಧನಗಳ ಬಳಕೆಯು ಅವನ ಐಶ್ವರ್ಯದ ದ್ಯೋತಕವೆನಿಸಿವೆ- ಎಂಬ ಪ್ರಮಾಣವಾಕ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು. ಪರಮಾತ್ಮನ ಸೃಷ್ಟಿಯು ಸಾಧನದ ಅಪೇಕ್ಷೆಯುಳ್ಳದ್ದಲ್ಲ ಎಂದು ಈ ಸೂತ್ರದಲ್ಲಿ ಉಪಪಾದಿಸಲಾಗಿದೆ. ॥ 8 ॥

## ಪರಮಾತ್ಮನಿಗೆ ಕರ್ಮಫಲಲೇಪವಿಲ್ಲ

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ 9 ॥**

**ಅರ್ಥ**– ಧನಂಜಯನೇ ! ಆ ಸೃಷ್ಟ್ಯಾದಿಕರ್ಮಗಳಲ್ಲಿ, ಆಯಾಸ, ಆದರ ಹಾಗೂ ಅಭಿಮಾನರಹಿತನಾದ, ಆದುದರಿಂದಲೇ ಉದಾಸೀನ ವ್ಯಕ್ತಿಯಿಂತೆ ಇರುವ ನನ್ನನ್ನು ಆ ಸೃಷ್ಟ್ಯಾದಿಕರ್ಮಗಳು ಕರ್ಮಬಂಧನಕ್ಕೆ ಒಳಪಡಿಸುತ್ತಿಲ್ಲ.

**ನನು ನಾನಾವಿಧಾಂ ಸೃಷ್ಟಿಂ ಕುರ್ವತಸ್ತವ ಜೀವಸ್ಯೇವ ಕರ್ಮಬಂಧೋಽಸ್ತಿ ಕಿಂ ಇತ್ಯತೋ ನೇತ್ಯಾಹ – ನ ಚೇತಿ ॥ ತಾನಿ ಸೃಷ್ಟ್ಯಾದೀನಿ ಕರ್ಮಾಣಿ ಮಾಂ ನ ನಿಬಧ್ನಂತಿ । ಕುತಃ ? ಉದಾಸೀನವದಾಸೀನಮ್ । ಸ್ವತ ಏವ ಕರ್ತೃತ್ವಂ ನ ಮಾಯಿಕಂ ಚೇತ್ ಕಥಮುದಾಸೀನತಯಾ ವರ್ತನಮಿತ್ಯತ ಉದಾಸೀನ-ತಯಾಽಽಸೀನಮಿತ್ಯನುಕ್ತ್ವಾ ಉದಾಸೀನವದಿತ್ಯುಕ್ತಮ್ । ವಸ್ತುತೋಽನುದಾ-ಸೀನೋಽಪ್ಯುದಾಸೀನಸದೃಶತಯಾ ವರ್ತಮಾನಮಿತ್ಯರ್ಥಃ ।**

**ಅನುವಾದ–** ನಾನಾವಿಧದ ಸೃಷ್ಟಿಯನ್ನು ಮಾಡುತ್ತಿರುವ ನಿನಗೆ ಕರ್ಮನಿರತರಾದ ಜೀವರಿಗೆ ಇರುವಂತೆ ಕರ್ಮಬಂಧನವಿದೆಯೇನೋ ಎಂಬ ಅರ್ಜುನನ ಪ್ರಶ್ನೆಗೆ ಶ್ರೀಕೃಷ್ಣನು ನಕಾರಾತ್ಮಕ ವಾದ ಉತ್ತರವನ್ನು '**ನ ಮಾಂ ಕರ್ಮಾಣಿ ಬಧ್ನಂತಿ**' ಎಂಬ ಶ್ಲೋಕದಲ್ಲಿ ನೀಡುತ್ತಿದ್ದಾನೆ. **ತಾನಿ= ಕರ್ಮಾಣಿ=** ಆ ಸೃಷ್ಟ್ಯಾದಿಕರ್ಮಗಳು ನನ್ನನ್ನು ಕರ್ಮಬಂಧನಕ್ಕೆ ಒಳಪಡಿಸುತ್ತಿಲ್ಲ ಯಾಕೆಂದರೆ. ಅವುಗಳಲ್ಲಿ ತೊಡಗುವಾಗ ನಾನು ಉದಾಸೀನನಂತೆ ಇರುತ್ತೇನೆ. ಪರಮಾತ್ಮನ ಕರ್ತೃತ್ವವು ಮಾಯಾಕಲ್ಪಿತವಾಗಿದ್ದರೆ ಅವನು ಉದಾಸೀನ–ತಟಸ್ಥ ಎಂದನ್ನುವುದು ಯುಕ್ತವೆನಿಸೀತು. ಅದು ಕಲ್ಪಿತವಲ್ಲ ಸ್ವಾಭಾವಿಕ ಎಂದಾದ ಮೇಲೆ ಉದಾಸೀನನಾಗಿರಲು ಹೇಗೆ ಸಾಧ್ಯ ? (ತಟಸ್ಥನಲ್ಲಿ ಕರ್ತೃತ್ವಕ್ಕೆ ಪ್ರಯೋಜಕವಾದ ಕ್ರಿಯೆಯು ಅಸಂಭಾವಿತವಲ್ಲವೇ ?) ಎಂಬ ಆಕ್ಷೇಪಕ್ಕೆ ಅವಕಾಶ ವಾಗಬಾರದೆಂದು 'ಉದಾಸೀನವಾಗಿ ಇರುವವನು' ಎಂದೆನ್ನದೆ 'ಉದಾಸೀನನಂತೆ ಇರುವವನು' ಎಂದೆನ್ನಲಾಗಿದೆ. ವಸ್ತುತಃ ತಟಸ್ಥನೇ ಅಲ್ಲ ; ಅವನ ಸಾದೃಶ್ಯದಿಂದ ಇರುವವನು. ಹಾಗಾಗಿ ಕಾರ್ಯಪ್ರವೃತ್ತನೂ ಆಗಿದ್ದೇನೆ. ಆದುದರಿಂದ ಕರ್ತೃತ್ವವು ಸ್ವಾಭಾವಿಕ ಎಂದೆನ್ನುವುದು ಯುಕ್ತವೇ ಆಗಿದೆ ಎಂದು ಇದರ ಅಭಿಪ್ರಾಯ.

## ಪರಮಾತ್ಮನು ಉದಾಸೀನಸದೃಶ ಹೇಗೆ ?

**ಕಿಂ ತತ್ಸಾದೃಶ್ಯಮಿತ್ಯತ ಉಕ್ತಮ್– ಅಸಕ್ತಂ ತೇಷು ಕರ್ಮಸ್ವಿತಿ ॥ ಉದಾಸೀನಸ್ಯ ಯಥಾ ಸಕ್ತಿರ್ನಾಸ್ತಿ ತಥಾ ಮಮಾಪಿ ತತ್ರ ಸೃಷ್ಟ್ಯಾದಿಕರ್ಮಣಿ ಸಕ್ತಿಶಬ್ದಿತಸ್ಯಾದರಸ್ಯ ಆಯಾಸಸ್ಯ ವಾಽಭಾವಾನ್ನ ನಿಬಧ್ನಂತಿ ಇತ್ಯರ್ಥಃ ॥ 9 ॥**

**ಅನುವಾದ–** ಪರಮಾತ್ಮನಲ್ಲಿರುವ ತಟಸ್ಥನ ಸಾದೃಶ್ಯವು ಯಾವತರದ್ದು ಎಂಬ ಪ್ರಶ್ನೆಗೆ ಉತ್ತರವಾಗಿ '**ಅಸಕ್ತಂ ತೇಷು ಕರ್ಮಸು**' ಎಂದೆನ್ನಲಾಗಿದೆ. ಹೇಗೆ ತಟಸ್ಥ ಪುರುಷನಿಗೆ, ಕೆಲಸದಲ್ಲಿ ಆದರ, ಕೆಲಸದ ಪರಿಣಾಮವಾದ ಆಯಾಸಗಳಿರುವುದಿಲ್ಲವೋ ಹಾಗೆಯೇ ನನಗೆ **ತೇಷು ಕರ್ಮಸು=** ಆ ಸೃಷ್ಟ್ಯಾದಿಕರ್ಮಗಳಲ್ಲಿ 'ಸಕ್ತಿ' ಶಬ್ದದಿಂದ ಹೇಳಲ್ಪಡುವ ಆದರವಾಗಲೀ

ಆಯಾಸವಾಗಲಿ ಇಲ್ಲದಿರುವುದರಿಂದ ಅವು ನನ್ನನ್ನು ಬಂಧನಕ್ಕೆ ಗುರಿಪಡಿಸುತ್ತಿಲ್ಲ ಎಂದು ಅಭಿಪ್ರಾಯ.

**ವಿವರಣೆ–** ಯಾವುದೇ ಕರ್ಮವನ್ನು ಫಲವನ್ನು ಪಡೆಯಬೇಕೆಂಬ ಆಸೆಯಿಂದ ಆದರಾಭಿಮಾನಪೂರ್ವಕವಾಗಿ ಪ್ರಯಾಸಪಟ್ಟು ಮಾಡಿದರೆ, ಅದರಿಂದ ಉಂಟಾಗುವ ಪುಣ್ಯ ಪಾಪಗಳು ಕರ್ತೃವನ್ನು ಬಂಧನಕ್ಕೆ ಒಳಪಡಿಸುತ್ತದೆ. ಪರಮಾತ್ಮನಾದರೋ ಹುಬ್ಬು ಕುಣಿಸುವಿಕೆ ಮಾತ್ರದಿಂದ ಜಗತ್ಸೃಷ್ಟಿಯನ್ನು ಅನಾಯಾಸವಾಗಿ ನಿರ್ವಹಿಸಬಲ್ಲ. ಹಾಗಾಗಿ ಆದರಾಭಿ-ಮಾನವೂ ಅವನಿಗೆ ಆ ಕರ್ಮಗಳಲ್ಲಿಲ್ಲ ಆಯಾಸವೂ ಇಲ್ಲ. ಆದುದರಿಂದ ಅವು ಪುಣ್ಯ-ಪಾಪ ಗಳಿಗೆ ಎಡೆಮಾಡಿಕೊಡವು. ತನ್ಮೂಲಕವಾದ ಕರ್ಮ ಬಂಧವೂ ಅವನಿಗಿಲ್ಲ. ॥ 9 ॥

## ಪರಮಾತ್ಮನು ನಿಷ್ಕ್ರಿಯನಲ್ಲ

**ಮಯಾಽಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾಽನೇನ ಕೌಂತೇಯ ಜಗದ್ವಿಪರಿವರ್ತತೇ ॥ 10 ॥**

**ಅರ್ಥ–** ಪ್ರಕೃತಿಯಿಂದ ನಿರ್ವಹಿಸಲ್ಪಡುತ್ತಿರುವ ಸೃಷ್ಟಿಯನ್ನು ಕಣ್ಣಾರೆ ಗಮನಿಸುತ್ತಾ ಪ್ರಕೃತಿಗೆ ಪ್ರೇರಕನಾಗಿರುವ ನನ್ನಿಂದಾಗಿ ಆ ಪ್ರಕೃತಿಯು ಸ್ಥಾವರಜಂಗಮರೂಪ ಪ್ರಪಂಚವನ್ನು ಸೃಷ್ಟಿಸುತ್ತಿದೆ. ಈ ಕಾರಣದಿಂದಾಗಿಯೇ ಜಗತ್ತು ವಿಶೇಷವಾಗಿ ಪುನಃ ಪುನಃ ಹುಟ್ಟುತ್ತಿದೆ.

**ನನು ಪೂರ್ವಂ ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮೀತ್ಯುಕ್ತ್ವಾ ಉದಾಸೀನ-ವದಾಸೀನಮಿತ್ಯುಕ್ತ್ವಾ ಚ ನಿಷ್ಕ್ರಿಯತ್ವಂ ಪ್ರತೀಯತೇ । ಏವಂ ತರ್ಹಿ ಪ್ರಕೃತಿರೇವ ಸ್ವಾತಂತ್ರ್ಯೇಣ ಜಗತ್ ಪ್ರಸೂಯತೇ ತ್ವಯಿ ತು ಪ್ರಕೃತಿಸನ್ನಿಧಾನಾತ್ ಕರ್ತೃತ್ವೋಪಚಾರಮಾತ್ರಮಿತ್ಯಾಪನ್ನಮಿತ್ಯತ ಆಹ- ಮಯೇತಿ ॥ ಯದ್ಯಪ್ಯೇಷಾ ಶಂಕಾ ಮಾಮಿಕಾಮಿತಿ ಸ್ವಾಮಿತಿ ಅಸಕ್ತಂ ತೇಷು ಕರ್ಮಸು ಇತ್ಯುಕ್ತ್ವಾ ನಿರಸ್ತಾ । ತಥಾಽಪಿ ಸ್ವಸ್ವಾತಂತ್ರ್ಯಂ ಸ್ಪಷ್ಟಂ ವಕ್ತುಂ ಪ್ರಾಗುಕ್ತಪರಿಹಾರಾಚ್ಛಾದನೇನೋಕ್ತಾಂ ಶಂಕಾಂ ಹೃದಿ ಕೃತ್ವಾ ಮಯೇತಿ ಶ್ಲೋಕೇನ ಪರ್ಯಹಾರ್ಷೀದಿತಿ ಜ್ಞೇಯಮ್ ।**

**ಅನುವಾದ–** ಹಿಂದೆ ಆರನೆಯ ಶ್ಲೋಕದಲ್ಲಿ '**ಪ್ರಕೃತಿಂ ಸ್ವಾಂ ಅವಷ್ಟಭ್ಯ ವಿಸೃಜಾಮಿ**' ಎನ್ನುವ ಮೂಲಕ ಸೃಷ್ಟಿಯಲ್ಲಿ ಪ್ರಕೃತಿಯ ಪಾತ್ರವನ್ನು ದೃಢಪಡಿಸಿದ್ದರಿಂದಲೂ ತಾನು ಉದಾಸೀನ ನಂತೆ ಇರುವವನು ಎಂದು ಹೇಳಿದ್ದರಿಂದಲೂ ತಾನು ನಿಷ್ಕ್ರಿಯ ಎಂದು ಅಭಿಪ್ರಾಯ ಪಟ್ಟಂತೆ ತೋರುತ್ತದೆ. ಹಾಗಾದಲ್ಲಿ ಪ್ರಕೃತಿಯೇ ಸ್ವತಂತ್ರವಾಗಿ ಜಗತ್ತನ್ನು ಸೃಷ್ಟಿಸುತ್ತಿದೆ. ಅಂತಹ ಪ್ರಕೃತಿಯ ಸನ್ನಿಧಾನದಿಂದಾಗಿ ಅದರಲ್ಲಿರುವ ಕರ್ತೃತ್ವವು ಆರೋಪಿತವಾಗಿ '**ತಾನು ಕರ್ತೃ**' ಎನ್ನುವುದು

ಉಪಚಾರಮಾತ್ರ ; ವಾಸ್ತವಿಕವಾಗಿ ಕರ್ತೃವಲ್ಲ ಎಂದಂತಾಯಿತು ಎಂಬ ಆಕ್ಷೇಪಕ್ಕೆ **'ಮಯಾಧ್ಯಕ್ಷೇಣ'** ಎಂಬ ಶ್ಲೋಕವು ಉತ್ತರಿಸುತ್ತಿದೆ. **'ಸ್ವಾಂ'** ಪ್ರಕೃತಿಂ, **ಪ್ರಕೃತಿಂ ಮಾಮಿಕಾಂ'** ಎಂದೆನ್ನುವ ಮೂಲಕ ಪ್ರಕೃತಿಯು ಸ್ವತಂತ್ರವಲ್ಲ ಎಂದು ಸೂಚಿಸಿ ಹಾಗೂ **'ಅಸಕ್ತಂ ತೇಷು ಕರ್ಮಸು'** ಎಂದೆನ್ನುವ ಮೂಲಕ 'ತಾನು ನಿಷ್ಕ್ರಿಯನಾದುದರಿಂದ ಉದಾಸೀನನಲ್ಲ; ಕ್ರಿಯೆ ಉಳ್ಳವನಾಗಿದ್ದೂ ಅಂತಹ ಕ್ರಿಯೆಗಳಲ್ಲಿ ಆದರಾದಿಗಳು ಇಲ್ಲದಿರುವುದರಿಂದ ಉದಾಸೀನನಂತೆ ಇರುವವನು ಎಂದು ಸೂಚಿಸಿ ಈ ಆಕ್ಷೇಪವು ಹಿಂದೆಯೇ ಪರಿಹರಿಸಲ್ಪಟ್ಟಿದೆ. ಹಾಗಿದ್ದರೂ ಸೃಷ್ಟಿಯಲ್ಲಿ ತನ್ನ ಸ್ವಾತಂತ್ರ್ಯವನ್ನು ಪ್ರಚುರಪಡಿಸುವುದಕ್ಕಾಗಿ ಹಿಂದೆ ತನ್ನಿಂದಲೇ ಸೂಚಿತವಾದ ಆಕ್ಷೇಪ ಪರಿಹಾರವನ್ನು ಮುಚ್ಚಿಟ್ಟು, ಮೇಲಿನ ಆಕ್ಷೇಪವನ್ನು ಮನಸ್ಸಿನಲ್ಲಿ ಸ್ವತಃ ಕಲ್ಪಿಸಿಕೊಂಡು ಶ್ರೀಕೃಷ್ಣನು ಈ ಶ್ಲೋಕದಲ್ಲಿ ಪರಿಹರಿಸುತ್ತಿದ್ದಾನೆ ಎಂದು ಇಲ್ಲಿ ಅಭಿಪ್ರಾಯ ಪಡಬೇಕಾಗಿದೆ.

**ವಿವರಣೆ–** ಮೇಲಿನ ಆಕ್ಷೇಪದಲ್ಲಿ ಎರಡು ಅಂಶಗಳಿವೆ. ಅದರಲ್ಲಿ ಪ್ರಕೃತಿಯು ಸ್ವತಂತ್ರಕರ್ತೃ ಎಂಬ ಅಂಶವು ಪ್ರಕೃತಿಯನ್ನು **'ಸ್ವಾಂ' 'ಮಾಮಿಕಾಂ'** ಎಂದು ಉಲ್ಲೇಖಿಸುವ ಮೂಲಕ, ಅದು ತನ್ನ ಅಧೀನ; ಸ್ವತಂತ್ರವಲ್ಲ ಹಾಗಾಗಿ ಸ್ವತಂತ್ರಕರ್ತೃವೆನಿಸದು ಎಂದು ಸೂಚಿಸಿ ಪರಿಹರಿಸಲ್ಪಟ್ಟಿದೆ. ಎರಡನೆಯ ಅಂಶವು 'ಪರಮಾತ್ಮನು ನಿಷ್ಕ್ರಿಯನಾದುದರಿಂದ ಕರ್ತೃವೇ ಅಲ್ಲ. ಕೆಂಪಾದ ಜಪಾಕುಸುಮದ (ದಾಸವಾಳ) ಸಂಪರ್ಕದಿಂದ ಬೆಳ್ಳಗಿರುವ ಸ್ಫಟಿಕವು ಕೆಂಪಾಗಿ ತೋರುವಂತೆ ಕರ್ತೃವಾದ ಪ್ರಕೃತಿಯ ಸನ್ನಿಧಾನದಿಂದಾಗಿ ಕರ್ತೃವಲ್ಲದಿದ್ದರೂ ಕರ್ತೃವಾಗಿ ತೋರುತ್ತಿರುವುದು. ಹಾಗಾಗಿ ಅವನು ಕರ್ತೃ ಎಂದೆನ್ನುವುದು ಬರೇ ಉಪಚಾರ ಎಂದು. ಈ ಅಂಶವನ್ನು 'ತಾನು ಉದಾಸೀನನೇ ಅಲ್ಲ, ಉದಾಸೀನನಂತೆ ಇರುವವನಷ್ಟೆ. ಉದಾಸೀನಸಾದೃಶ್ಯವೂ ತನ್ನಲ್ಲಿ ನಿಷ್ಕ್ರಿಯನಾಗಿರುವುದರಿಂದಾಗಿ ಅಲ್ಲ. ಕ್ರಿಯೆಯಿದ್ದರೂ ಅದರಲ್ಲಿ ಆದರ ಆಯಾಸಗಳು ಇಲ್ಲದಿರುವುದಿಂದ (ಅಸಕ್ತಂ ತೇಷುಕರ್ಮಸು) ಎಂದು ನಿರೂಪಿಸಿ ಪರಿಹರಿಸಲಾಗಿದೆ. ಹಾಗಾಗಿ ಈ ಆಕ್ಷೇಪಕ್ಕೆ ಅವಕಾಶವೇ ಇಲ್ಲ : ಹೀಗಿರಲು ಪುನಃ ಆಕ್ಷೇಪಿಸುವುದು ಸರಿಯೇ ಎಂದು ಪ್ರಶ್ನೆ ಇಲ್ಲಿ ಉದ್ಭವಿಸುತ್ತದೆ. 'ಹಿಂದಿನ ಪರಿಹಾರವನ್ನು ಮುಚ್ಚಿಟ್ಟು ಪರಮಾತ್ಮನ ಸ್ವತಂತ್ರ ಕರ್ತೃತ್ವವನ್ನು ದೃಢಪಡಿಸಿಕೊಳ್ಳುವುದಕ್ಕಾಗಿ ಪುನಃ ಆಕ್ಷೇಪಿಸಲಾಗುತ್ತಿದೆ ಎಂದು ಈ ಪ್ರಶ್ನೆಗೆ ಉತ್ತರಿಸಬಹುದಾಗಿದೆ. ಆದರೆ ಅರ್ಜುನನಾದರೂ ಶ್ರೀಕೃಷ್ಣನು ಪರಿಹರಿಸಿದ್ದರೂ ಅದನ್ನು ಮುಚ್ಚಿಟ್ಟು ಪುನಃ ಆಕ್ಷೇಪಿಸುವುದು ಸರಿಯೇ ? ಎಂಬ ಪ್ರಶ್ನೆ ತಲೆದೋರುತ್ತದೆ. ಈ ಪ್ರಶ್ನೆಗೆ ಗೀತಾವಿವೃತಿಕಾರರ ಉತ್ತರ– ಹೀಗೆ ಮುಚ್ಚಿಟ್ಟು ಪುನಃ ಆಕ್ಷೇಪಿಸುತ್ತಿರುವುದು ಅರ್ಜುನನಲ್ಲ ; ಪರಮಾತ್ಮನೇ ತನ್ನ ಆಕ್ಷೇಪ ಪರಿಹಾರವನ್ನು ಮುಚ್ಚಿದಂತೆ ಮಾಡಿ ತನ್ನ ಮನಸ್ಸಿನಲ್ಲೇ ಆಕ್ಷೇಪವನ್ನು ಹುಟ್ಟು ಹಾಕಿಕೊಂಡು ಪರಿಹರಿಸುತ್ತಿದ್ದಾನೆ. ತನ್ನ ಸ್ವಾತಂತ್ರ್ಯವನ್ನು ನಿಚ್ಚಳಗೊಳಿಸುವುದೇ ಇದರ ಉದ್ದೇಶ – ಎಂದು.

**ಅಧ್ಯಕ್ಷೇಣೇತಿ ಪ್ರಾತಿಪದಿಕೇನ ಸಾಕ್ಷಾತ್ಕಾರಃ ತೃತೀಯಯಾ ಚ ಕರ್ತೃತ್ವ-ಮುಚ್ಯತೇ । ಪ್ರಕೃತಿಹೇತುಕಪ್ರಸವಂ ಸಾಕ್ಷಾತ್ ಕುರ್ವತಾ ತತ್ಪ್ರಯೋಜಕಕರ್ತ್ರಾ ಚ ಮಯೇತಿ । ದರ್ಶನಪೂರ್ವಕತ್ವಾತ್ ಪ್ರಯೋಜಕತ್ವಸ್ಯೈವಮುಕ್ತಿಃ । ಯದ್ವಾ ಅಧ್ಯಕ್ಷೇಣಾಧಿಪತಿನಾ ಮಯಾ ಪ್ರಕೃತಿಃ ಸಚರಾಚರಂ ಜಗತ್ಪ್ರಸೂಯತೇ ಜನ-ಯತಿ । ಅನೇನ ಮತ್ಪ್ರಯೋಜಿತಪ್ರಕೃತಿರೂಪಹೇತುನಾ ದರ್ಶನಪೂರ್ವಕಂ ಮದ್ರೂಪಪ್ರಯೋಜಕಕರ್ತೃರೂಪಹೇತುನಾ ಚ ಜಗದ್ವಿಶೇಷೇಣ ಪರಿವರ್ತತೇ ಪುನಃ ಪುನರ್ಜಾಯತೇ ॥ 10 ॥**

**ಅನುವಾದ-** ಪರಮಾತ್ಮನು ತನ್ನನ್ನು ಇಲ್ಲಿ '**ಮಯಾ ಅಧ್ಯಕ್ಷೇಣ**'ಎಂದು ಉಲ್ಲೇಖಿಸುತ್ತಿದ್ದಾನೆ. ಇಲ್ಲಿರುವ 'ಅಧ್ಯಕ್ಷ' ಎಂಬ ಪ್ರಾತಿಪದಿಕಾಂಶದಿಂದ 'ತಾನು ಪ್ರಕೃತಿಯು ನಿರ್ವಹಿಸುತ್ತಿರುವ ಜಗತ್ಸೃಷ್ಟಿಯ ಮೇಲೆ ಕಣ್ಣಿಟ್ಟಿರುವೆನು' ಎಂದೂ ಕರ್ತ್ರರ್ಥದಲ್ಲಿರುವ 'ಇನ' ಎಂಬೀ ತೃತೀಯಾ ವಿಭಕ್ತಿಪ್ರತ್ಯಯ ರೂಪದ ಅಂಶದಿಂದ 'ತಾನು, ಜಗತ್ ಕರ್ತೃವಾಗಿದ್ದೇನೆ' ಎಂದೂ ಅಭಿಪ್ರಾಯ ಪಡುತ್ತಿದ್ದಾನೆ. ಹಾಗಾಗಿ '**ಅಧ್ಯಕ್ಷೇಣ ಮಯಾ**' ಎಂಬ ವಾಕ್ಯಭಾಗದಿಂದ 'ಪ್ರಕೃತಿಯ ಜಗತ್ ಸೃಷ್ಟಿನಿರ್ವಹಣೆಯ ಮೇಲೆ ಕಣ್ಣಿಟ್ಟಿರುವ ಹಾಗೂ ಅದಕ್ಕೆ ಪ್ರೇರಕ- ಕರ್ತೃವೆನಿಸಿರುವ ನನ್ನಿಂದಾಗಿ (ಪ್ರಕೃತಿಯು ಚರಾಚರ ಪ್ರಪಂಚದ ಸೃಷ್ಟಿಯನ್ನು ನಿರ್ವಹಿಸುತ್ತಿದೆ)' ಎಂದಂತಾಯಿತು. ಪ್ರೇರಣೆಯು ಪ್ರೇರೇಪಿಸಲ್ಪಡುವ ವ್ಯಕ್ತಿಯ ಮೇಲೆ ಕಣ್ಣಿಡುವ ಮೂಲಕವೇ ಸಾಧ್ಯವೆನಿಸುವುದರಿಂದ ದರ್ಶನ ಹಾಗೂ ಪ್ರೇರಣೆ. (ಪ್ರಯೋಜಕ ಕರ್ತೃತ್ವ) ಎಂಬ ಎರಡೂ ಅಂಶಗಳು ಸೂಚಿತವಾಗಬೇಕು ಎಂಬ ಉದ್ದೇಶದಿಂದ ಅದನ್ನು ಪ್ರಚುರಪಡಿಸುವ '**ಅಧ್ಯಕ್ಷೇಣ**' ಎಂಬ ಪದವನ್ನು ಬಳಸಲಾಗಿದೆ. ಅಥವಾ (**ಅಧ್ಯಕ್ಷೋಽಧಿಪತಿಃ ಪ್ರೋಕ್ತೋ ಯದಕ್ಷಿಣ್ಯಸ್ಯ ಚೋಪರಿ-** ಅಧಿಪತಿಯ ಕಣ್ಣು ತನ್ನ ಕೈಕೆಳಗಿನವರ ಮೇಲೆ ಇರಬೇಕಾದುದರಿಂದ ಅಧ್ಯಕ್ಷಪದದಿಂದ ಅಧಿಪತಿಯು ಹೇಳಲ್ಪಡುತ್ತಿದ್ದಾನೆ' ಎಂಬ ಶಬ್ದನಿರ್ಣಯವಾಕ್ಯವನ್ನು ಉಲ್ಲೇಖಿಸಿ ಗೀತಾ ತಾತ್ಪರ್ಯದಲ್ಲಿ ಹೇಳಲಾಗಿರುವಂತೆ) **ಅಧ್ಯಕ್ಷೇಣ ಮಯಾ**= ಅಧಿಪತಿಯಾದ ನನ್ನಿಂದಾಗಿ ಪ್ರಕೃತಿಯು ಚರಾಚರ ಪ್ರಪಂಚವನ್ನು, **ಪ್ರಸೂಯತೇ**= ಸೃಷ್ಟಿಸುತ್ತಿದೆ ಎಂದು ಅರ್ಥ. **ಅನೇನ ಹೇತುನಾ**= ನನ್ನಿಂದ ಪ್ರೇರಿಸಲ್ಪಡುತ್ತಿರುವ ಪ್ರಕೃತಿ ರೂಪದ ಹೇತುವಿನಿಂದ ಹಾಗೂ ಅದರ ಮೇಲೆ ಕಣ್ಣಿಡುವ ಮೂಲಕ ಪ್ರೇರಕಕರ್ತೃವೆನಿಸಿರುವ ನನ್ನ ರೂಪದಲ್ಲಿರುವ ಹೇತುವಿನಿಂದ ಜಗತ್ತು **ವಿ+ಪರಿವರ್ತತೇ**= ವಿಶೇಷವಾಗಿ ಪುನಃ ಪುನಃ ಹುಟ್ಟುತ್ತಿದೆ. ॥ 10 ॥

**ವಿವರಣೆ-** ಪ್ರಕೃತಿಯು ಪರಮಾತ್ಮನ ಪ್ರೇರಣೆಯಿಂದಾಗಿ ಸೃಷ್ಟಿಕಾರ್ಯದಲ್ಲಿ ತೊಡಗಿರುವುದರಿಂದ ಸ್ವತಂತ್ರಕರ್ತೃವಲ್ಲ, ಪ್ರೇರಕಕರ್ತೃವೆನಿಸಿರುವುದರಿಂದ ಪರಮಾತ್ಮನು ನಿಷ್ಕ್ರಿಯನೂ ಅಲ್ಲ.

ಕ್ರಿಯಾಶೀಲನಾದ ಅವನಲ್ಲೇ ಕರ್ತೃತ್ವವಿರುವುದುರಿಂದ ಕರ್ತೃತ್ವ ವ್ಯವಹಾರವು ಔಪಚಾರಿಕವಲ್ಲ ಎಂದಂತಾಯಿತು. ಹೀಗಾಗಿ ಮೇಲಿನ ಆಕ್ಷೇಪವು ಪರಿಹೃತವಾಯಿತು.

## ತಾಮಸಜೀವರಿಂದ ಪರಮಾತ್ಮನ ಅವಗಣನೆಗೆ ಕಾರಣ ಹಾಗೂ ಫಲ

**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥ 11 ॥**

**ಮೋಘಾऽಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ 12 ॥**

**ಅರ್ಥ–** ಮನುಷ್ಯರಿಗೆ ಸಂಬಂಧಿಸಿದ ಭೌತಿಕ ಶರೀರವನ್ನು ಆಶ್ರಯಿಸಿರುವವನು ಇವನು ಎಂಬ ಈ ರೀತಿಯ ಮೂಢಜನರ ಭ್ರಾಂತಿಗೆ ವಿಷಯನಾದ ಹಾಗೂ ಅಜ್ಞಾನಿಗಳ ಅವಗಣನೆಗೆ ಅವಕಾಶವಾಗಬೇಕೆಂಬ ಉದ್ದೇಶದಿಂದಲೇ ಮನುಷ್ಯದೇಹದಂತೆ ಕಾಣುವ ದೇಹವನ್ನು ಧರಿಸಿರುವ ನನ್ನನ್ನು ತಾಮಸಸ್ವಭಾವದ ಜನರು ನನ್ನಲ್ಲಿ ಯಾವತ್ತೂ ಇರುವ, ಪರಿಪೂರ್ಣ ವೆನಿಸಿರುವ ಹಾಗೂ ಸರ್ವಸಮರ್ಥವೆನಿಸಿರುವ ನನ್ನ ನಿಜರೂಪವನ್ನು ಅರ್ಥ ಮಾಡಿ ಕೊಳ್ಳದವರಾಗಿ ನನ್ನನ್ನು 'ಅಲ್ಪನಿವನು' ಅಥವಾ 'ರಮಾಬ್ರಹಾದಿಗಳಿಗೆ ಸಮಾನನಿವನು' ಎಂಬ ರೀತಿಯಲ್ಲಿ ಅವಗಣನೆಗೆ ಗುರಿಮಾಡುತ್ತಿದ್ದಾರೆ. ಅಂತಹ ತಾಮಸಜನರು ಫಲಿಸದ ಆಸೆ ಯುಳ್ಳವರೂ ಫಲಿಸದ ಯಜ್ಞಾದಿ ಕರ್ಮವುಳ್ಳವರೂ ಮೋಕ್ಷರೂಪ ಫಲವನ್ನು ತಂದು ಕೊಡದ ಜ್ಞಾನವುಳ್ಳವರೂ ವಾಸ್ತವಿಕತೆಗೆ ವಿರುದ್ಧವಾದ ಚಿಂತನೆಯುಳ್ಳವರೂ, ಅವರ ಭ್ರಾಂತಿಗೆ ಕಾರಣವಾದ ವಿವೇಕನಾಶಕವಾದ ರಾಕ್ಷಸ ಹಾಗೂ ಅಸುರಸಂಬಂಧಿಯಾದ ಸ್ವಭಾವವನ್ನು ಹೊಂದಿರುವವರೂ ಆಗಿದ್ದು ತಮೋಯೋಗ್ಯರೆನಿಸಿರುತ್ತಾರೆ. (ಅಂತವರು ನನ್ನನ್ನು ಅವಗಣನೆಗೆ ಗುರಿಮಾಡುತ್ತಿದ್ದಾರೆ.)

**ಯದ್ಯೇವಂ ಭವಾನ್ ಜಗತಃ ಸೃಷ್ಟಿಸ್ಥಿತಿಸಂಹಾರಾಣಾಂ ಕರ್ತಾ ತರ್ಹಿ ಕುತಃ ಕೇಚಿತ್ ತ್ವಾಮವಜಾನಂತಿ । ಅವಜ್ಞಾನೇऽಪಿ ತೇಷಾಮನರ್ಥಾಭಾವಾತ್ ಸರ್ವಕರ್ತಾ ಅಹಮಿತಿ ಪ್ರಾಗುಕ್ತಮಯುಕ್ತಮತ ಆಹ– ಅವಜಾನಂತೀತ್ಯಾದಿ ದ್ವಯೇನ ॥ ಮಾನುಷೀಂ ತನುಮಾಶ್ರಿತಂ ಮಾನುಷದೇಹಮಧಿಷ್ಠಿತೋऽಯಮಿತಿ ಮೂಢಲೋಕಭ್ರಾಂತಿವಿಷಯಂ ಮಾಮಿತಿ ವಾ । ಅಜ್ಞಾನಾಮವಜ್ಞಾನ-ಕಾರಣತಯಾ ಮಾನುಷೀಂ ಮನುಷ್ಯದೇಹಸಾದೃಶ್ಯೇನ ಪ್ರತೀಯಮಾನಾಂ ತನುಂ ಆಶ್ರಿತಮಿತಿ ವಾऽರ್ಥಃ । ಏತೇನಾತ್ರ ಹರೇಃ ಮಾನುಷದೇಹೋಕ್ತೇಸ್ತಸ್ಯ**

**ಚಾಧಾರೇಣಾನ್ಯೋನ್ಯಧರ್ಮಸಂಕ್ರಾಂತ್ಯಾದೇರವಶ್ಯಂಭಾವಾತ್ ಭೂತಭೃನ್ನ ಚ ಭೂತಸ್ಥ ಇತಿ ಪ್ರಾಗುಕ್ತಿರಯುಕ್ತೇತಿ ನಿರಸ್ತಮ್ । ತಥಾ ತನು-ತನುಮತೋ-ರಭೇದೇಽಪಿ ಆಶ್ರಿತಮಿತ್ಯುಕ್ತಿಶ್ಚ ಚೈತ್ರದೇಹಶ್ಚೈತ್ರಾಧೀನೋ ಯಥಾ ತಥಾ ಭಗವದ್ದೇಹೋಽಪಿ ಸ್ವಾಧೀನ ಇತಿ ಸ್ವಾಧೀನತ್ವಗುಣಯೋಗಾದ್ ಗೌಣೀತಿ ಮಮಾತ್ಮೇತ್ಯತ್ರತ್ಯಾಭೇದೋಕ್ತಿರ್ನ ವಿರುದ್ಧೇತಿ ಜ್ಞೇಯಮ್ । ಏತಾದೃಶಂ ಮಾಂ ಮೂಢಾಸ್ತಾಮಸಾ ಭೂತಮಹೇಶ್ವರಂ ಭೂತಂ ಸದಾವಿದ್ಯಮಾನಂ ಮಹಾಂತ-ಮೀಶ್ವರಂ ಗುಣಪರಿಪೂರ್ಣಂ ಪರಮುತ್ತಮಂ ಮಮ ಭಾವಂ ಯಾಥಾರ್ಥ್ಯಂ ಅಜಾನಂತೋಽವಜಾನಂತಿ ಅವಮತಯಾ ಜಾನಂತಿ । ಬ್ರಹ್ಮರುದ್ರರಮಾದೀನಾಂ ಸಾಮ್ಯದೃಷ್ಟಿಃ ಇತ್ಯಾದಿ ತಾತ್ಪರ್ಯೋಕ್ತದಿಶಾ ಅನ್ಯದಪ್ಯವಜ್ಞಾನಂ ಜ್ಞೇಯಮ್ ।**

**ಅನುವಾದ-** ಒಂದು ವೇಳೆ ಈ ರೀತಿಯಲ್ಲಿ ನೀನು ಜಗತ್ತಿನ ಸೃಷ್ಟಿಸ್ಥಿತಿ ಸಂಹಾರಗಳಿಗೆ ಕರ್ತೃವೆನಿಸಿರುವ ಮಹಾಮಹಿಮೋಪೇತನಾಗಿರುವುದು ವಾಸ್ತವವಾಗಿದ್ದರೆ ನಿನ್ನನ್ನು ಕೆಲವರು ಸಾಮಾನ್ಯ ಮನುಷ್ಯನನ್ನೆಂಬಂತೆ, ಅಥವಾ ಬ್ರಹಾದಿ ಇತರ ದೇವತೆಗಳಿಗೆ ಸಮಾನನ್ನೆಂಬಂತೆ ಯಾಕೆ ಅವಗಣನೆ ಮಾಡುತ್ತಿದ್ದಾರೆ. ಹಾಗೆ ಅವಗಣನೆ ಮಾಡಿದರೂ ಅವರಿಗೆ ಯಾವುದೇ ಅನರ್ಥವಾಗದಿರುವುದರುಂದ 'ನಾನು ಸರ್ವಕರ್ತಾ' ಎಂದು ಹಿಂದೆ ನೀನು ಹೇಳಿರುವುದು ಅಯುಕ್ತ, ಅವಾಸ್ತವ ಎಂದು ಅನಿಸುತ್ತದೆಯಲ್ಲವೇ ಎಂಬ ಆಶಂಕೆಗೆ ಉತ್ತರವಾಗಿ **'ಅವಜಾನಂತಿ ಮಾಂ ಮೂಢಾಃ'** ಎಂಬ ಶ್ಲೋಕ ಹಾಗೂ ಮುಂದಿನ **'ಮೋಘಾಶಾಃ ಮೇಘ ಕರ್ಮಾಣಃ'** ಎಂಬ ಶ್ಲೋಕವು ಪ್ರವೃತ್ತವಾಗಿದೆ. **ಮಾನುಷೀಂ ತನುಂ ಆಶ್ರಿತಂ ಮಾಂ**= ಮೂಢಜನರ 'ಮನುಷ್ಯ ಶರೀರವನ್ನು ಆಶ್ರಯಿಸಿರುವವ ಇವನು ' ಎಂಬ ರೀತಿಯ ಭ್ರಾಂತಿಗೆ ವಿಷಯನಾದ ನನ್ನನ್ನು ಅಥವಾ ಮೂಢರ ಅವಗಣನೆಗೆ ತಾನು ಗುರಿಯಾಗಬೇಕೆಂಬ ಉದ್ದೇಶದಿಂದಲೇ ಮನುಷ್ಯಶರೀರದಂತೆ ಕಾಣಿಸುವ ಶರೀರವನ್ನು ಆಶ್ರಯಿಸಿರುವ ನನ್ನನ್ನು **'ಮಾನುಷೀಂ ತನುಮಾಶ್ರಿತಂ'** ಎಂದೆನ್ನುವುದಕ್ಕೆ 'ಮನುಷ್ಯಶರೀರವನ್ನು ಆಶ್ರಯಿಸಿರುವ' ಎಂದು ಮೇಲ್ನೋಟಕ್ಕೆ ಕಾಣಿಸುವ ಅರ್ಥವನ್ನಿಟ್ಟುಕೊಳ್ಳದೆ ಹೀಗೆ ಎರಡು ರೀತಿಯಲ್ಲಿ ಅರ್ಥೈಸಿರುವುದರಿಂದ 'ಇಲ್ಲಿ ಪರಮಾತ್ಮನಿಗೆ ಮನುಷ್ಯದೇಹವಿದೆಯೆಂದು ಹೇಳಿರುವುದರಿಂದ ಅದಕ್ಕೆ ಮನುಷ್ಯದೇಹ ಸಹಜವಾದ ಆಶ್ರಯಗುಣಗಳ ಪಲ್ಲಟವನ್ನು ಅವಶ್ಯವಾಗಿ ಒಪ್ಪಲೇ ಬೇಕೆಂದಂತಾಗಿ **ಭೂತಭೃತ್ ನ ಚ ಭೂತಸ್ಥಃ** ಎಂದು ಹೇಳುವ ಮೂಲಕ ಹಿಂದೆ ಧರ್ಮ ಪಲ್ಲಟವಿಲ್ಲ ಎಂದು ಹೇಳಿರುವುದು ಸರಿಯೆನಿಸದು' ಎಂಬ ಆಕ್ಷೇಪವನ್ನು ಪರಿಹರಿಸಿದಂತಾಯಿತು.

ಹಾಗೆಯೇ, 'ಶರೀರ ಹಾಗೂ ಶರೀರಧಾರಿಯಾದ ಪರಮಾತ್ಮನಿಗೆ ಅಭೇದವಿದ್ದರೂ **'ತನುಂ ಆಶ್ರಿತಂ'** ಎಂದು ಹೇಳಿರುವುದೂ ಯುಕ್ತವೇ ಆಗಿದೆ.

ಯಾಕೆಂದರೆ ಹೇಗೆ ಚೈತ್ರಶರೀರವುಅದನ್ನು ಧರಿಸಿರುವ ಚೈತ್ರನ ಅಧೀನವೋ ಹಾಗೆಯೇ ಪರಮಾತ್ಮನ ಶರೀರವೂ ಪರಮಾತ್ಮನ ಅಧೀನ ಎಂಬ ಗೌಣಾರ್ಥವನ್ನು ಮನಸಿನಲ್ಲಿಟ್ಟುಕೊಂಡು ಆಶ್ರಿತ ಎಂದೆನ್ನಲಾಗಿದೆ (ಹೊರತು ವಾಸ್ತವಿಕವಾಗಿಯೇ ಆಶ್ರಯಾಶ್ರಯಿಭಾವದ ಅಭಿಪ್ರಾಯ ದಿಂದಲ್ಲ). ಹಾಗಾಗಿದ್ದಲ್ಲಿ ಪರಮಾತ್ಮನಿಗೂ ದೇಹಕ್ಕೂ ಭೇದವನ್ನು ಹೇಳಿದಂತಾಗುತ್ತಿತ್ತು. ಹಾಗಾಗಿ 'ನನ್ನ ಶರೀರವು ನನ್ನಂತೆಯೇ' ಜಗತ್ತಿನ ಉತ್ಪಾದಕವಾಗಿದ್ದು (ಮಮಾತ್ಮಾ ಭೂತಭಾವನ) ನನಗಿಂತ ಅಭಿನ್ನವೆನಿಸಿದೆ ಎಂದು ಅಭೇದವನ್ನು ಹೇಳಿರುವುದು ವಿರುದ್ಧವೆನಿಸದು ಎಂದು ತಿಳಿಯಬೇಕು.

ಮನುಷ್ಯಶರೀರದಂತೆ ತೋರುವ ಶರೀರವನ್ನು ಆಶ್ರಯಿಸಿ 'ಮನುಷ್ಯಶರೀರವನ್ನು ಆಶ್ರಯಿಸಿರುವವನು ಈ ಶ್ರೀಕೃಷ್ಣನು' ಎಂಬ ಈ ರೀತಿಯ ಭ್ರಾಂತಿಗೆ ವಿಷಯನೆನಿಸಿದ ನನ್ನನ್ನು, **ಮೂಢಾಃ**= ತಾಮಸಸ್ವಭಾವದವರು, **ಭೂತಮಹೇಶ್ವರಂ- ಭೂತಂ**= ಯಾವತ್ತು ಇರುವ, **ಮಹಾಂತಂ**= ಪರಿಪೂರ್ಣತೆಯಿಂದ ಕೂಡಿರುವ **ಈಶ್ವರಂ**= ಸರ್ವಸಮರ್ಥವೆನಿಸಿರುವ **ಪರಂ**= ಉತ್ತಮವಾದ **ಮಮ ಭಾವಂ**= ನನ್ನ ಸ್ವಾಭಾವಿಕರೂಪವನ್ನು ತಿಳಿಯದೆ **ಅವಜಾನಂತಿ**= ಅವಮ-ಸಾಮಾನ್ಯ ಮನುಷ್ಯನು ಇವನು ಎಂದು ತಿಳಿಯುತ್ತಿದ್ದಾರೆ. (ಗೀತಾತಾತ್ಪರ್ಯದಲ್ಲಿ ಹೇಳಲಾಗಿರುವಂತೆ ) ಪರಮಾತ್ಮನಲ್ಲಿ ಬ್ರಹ್ಮರುದ್ರ ರಮಾದಿಗಳ ಸಮಾನತೆಯ ಅಥವಾ ಅಭೇದದ ಅಥವಾ ಅಪೂರ್ಣತೆಯ ಭಾವನೆಯ ರೂಪದಲ್ಲಿರುವ ಅನ್ಯಥಾ ಅನುಸಂಧಾನವನ್ನು ಅವನ, **ಅವಜ್ಞಾನ** = ಅವಗಣನೆ ಎಂದು ತಿಳಿಯಬೇಕು. ॥ 11 ॥

## ದ್ವೇಷಪೂರ್ವಕ ಧ್ಯಾನವು ಮೋಕ್ಷಸಾಧನವಲ್ಲ

**ಅವಜಾನತಾಮನರ್ಥಾಭಾವಾದಿತಿ ಹೇತುರಸಿದ್ಧ ಇತಿ ಭಾವೇನ ಫಲಮಾಹ- ಮೋಘೇತಿ ॥ ಮೋಘಾಶಾಃ ವೃಥಾಶಾಃ ಭಗವದ್‌ದ್ವೇಷಿಭಿರಾಶಾಸಿತಸ್ಯ ಸಂಪದಾದೇಃ ಪ್ರಾಪ್ತಾವಪಿ ಆಮುಷ್ಮಿಕಸ್ಯ ನ ಕಸ್ಯಚಿದವಾಪ್ತಿರಿತ್ಯರ್ಥಃ । ಮೋಘ- ಕರ್ಮಾಣಃ ಯಜ್ಞಾದಿಕರ್ಮಾಣಿ ಚ ತೇಷಾಂ ವೃಥೈವ । ತತ್ತ್ವವಿಷಯಕಜ್ಞಾನಂ ಚ ತೇಷಾಂ ವೃಥೈವೇತಿ ಮೋಘಜ್ಞಾನಾಃ । ಜ್ಞಾನಸ್ಯ ಮೋಘತ್ವಂ ನಾಮ ಕೇನಾಪಿ ಬ್ರಹ್ಮರುದ್ರಾದಿಭಕ್ತ್ಯಾದ್ಯುಪಾಯೇನಾನುತ್ಪತ್ತಿರೇವ 'ಓಂ ಸರ್ವಥಾऽಪಿ ತು ತ ಏವೋಭಯಲಿಂಗಾತ್ ಓಂ' (3-4-34) ಇತಿ ಸೂತ್ರಾತ್ । ವಿಚೇತಸೋ ವಿರುದ್ಧಮನಸ್ಕಾಃ । ಕಿಂ ಬಹುನಾ । ಕೋऽಪ್ಯಾಮುಷ್ಮಿಕಃ ಪುಮರ್ಥೋ ನಾಸ್ತ್ಯತ ಏವೇತಿ ಜ್ಞೇಯಮ್ । ದ್ವೇಷಾಚ್ಚೈದ್ಯಾದಯೋ ನೃಪಾಃ (ಭಾಗ. 7-1-32) ಇತ್ಯಾದಿ ನಿತ್ಯಧ್ಯಾನಸ್ತುತ್ಯಾದ್ಯರ್ಥಮಿತಿ ಭಾವಃ ।**

**ಅನುವಾದ–** ಹಿಂದೆ ಹೇಳಲಾಗಿರುವ ಪರಮಾತ್ಮನ ಮಹಿಮೆಯು ಅಯುಕ್ತವೆಂದೆನ್ನುವುದಕ್ಕೆ ಸಮರ್ಥನೆಯಾಗಿ ಮುಂದಿಡಲಾಗಿರುವ 'ಅವನನ್ನು ಅವಗಣನೆ ಮಾಡದವರಿಗೆ ಯಾವ ಅನರ್ಥವೂ ಇಲ್ಲದಿರುವುದರಿಂದ ' ಎಂಬ ಹೇತುವು ಅನರ್ಥವಿರುವುದರಿಂದ ಅಸಿದ್ಧವೆನಿಸಿದೆ ಎಂದು ತೋರಿಸಲು ಅಂತಹ ಮೂಢರಿಗೆ ಸಿಗುವ ಅನರ್ಥರೂಪ ಫಲವನ್ನು **'ಮೋಘಾಶಾಃ'** ಎಂಬಿತ್ಯಾದಿ ಹನ್ನೆರಡನೆಯ ಶ್ಲೋಕದಲ್ಲಿ ಹೇಳಲಾಗುತ್ತಿದೆ. **ಮೋಘಾಶಾಃ**= ಫಲಿಸದ ಆಸೆ ಯುಳ್ಳವರು . ಪರಮಾತ್ಮನ ದ್ವೇಷಿಗಳಿಂದ ಆಶಿಸಲ್ಪಟ್ಟ ಸಂಪತ್ತೇ ಮೊದಲಾದ ಐಹಿಕ ಫಲವು ಲಭಿಸಿದರೂ ಪಾರತ್ರಿಕವಾದ ಮೋಕ್ಷಾದಿ ಫಲವು ಲಭಿಸುವುದಿಲ್ಲ. ಆದುದರಿಂದ 'ಫಲಿಸದ ಆಸೆಯುಳ್ಳವರು ಎಂದಭಿಪ್ರಾಯ. **ಮೋಘಕರ್ಮಾಣಃ**= ಅವರು ಮಾಡಿದ ಯಜ್ಞಾದಿ ಕರ್ಮಗಳು ವ್ಯರ್ಥವೇ ಆಗಿರುತ್ತವೆ. ಅವರ ತತ್ತ್ವವಿಷಯಕಜ್ಞಾನವು ವ್ಯರ್ಥವಾಗುವುದರಿಂದ ಅವರು **ಮೋಘಜ್ಞಾನಾಃ** = ವ್ಯರ್ಥವಾದ ಜ್ಞಾನವುಳ್ಳವರು. ಜ್ಞಾನವು ವ್ಯರ್ಥವಾಗುವುದೆಂದರೆ, ಅದು ಉಂಟಾಗಿ ಫಲಿಸದೆ ಇರುವುದಲ್ಲ, ಬ್ರಹ್ಮರುದ್ರಾದಿಗಳಲ್ಲಿ ಭಕ್ತಿ, ಅವರ ಧ್ಯಾನ ಎಂಬಿತ್ಯಾದಿ ಯಾವುದೇ ಸಾಧನಾನುಷ್ಠಾನಗೈದರೂ ಜ್ಞಾನ ಉಂಟಾಗದಿರುವುದೇ ಆಗಿದೆ. ಇದನ್ನು ಬ್ರಹ್ಮ ಸೂತ್ರಕಾರರು **'ಸರ್ವಥಾऽಪಿ ತು ತ ಏವೋಭಯ ಲಿಂಗಾತ್'** – ಜ್ಞಾನಸಂಪಾದನೆಗಾಗಿ ಎಲ್ಲಾ ರೀತಿಯಲ್ಲಿ ಉತ್ಸಾಹ ತೋರಿಸಿದರೂ ಜ್ಞಾನಯೋಗ್ಯರಷ್ಟೇ ಜ್ಞಾನಸಂಪನ್ನರೆನಿಸುತ್ತಾರೆ. ಅಯೋಗ್ಯರಲ್ಲ– ತತ್ತ್ವಜ್ಞಾನಕ್ಕಾಗಿ ಬ್ರಹ್ಮದೇವರು ಇಂದ್ರ ಹಾಗೂ ವಿರೋಚನರಿಬ್ಬರಿಗೂ ಸಮಾನವಾಗಿ ಉಪದೇಶಿಸಿದರೂ ಜ್ಞಾನಯೋಗ್ಯನಾದ ಇಂದ್ರನಷ್ಟೇ ಜ್ಞಾನವನ್ನು ಸಂಪಾದಿಸಿರುವುದೂ, ಅಯೋಗ್ಯನಾದ ವಿರೋಚನನು ಸಂಪಾದಿಸದೆ ಇರುವುದೂ ಇದಕ್ಕೆ ಸಮರ್ಥನೆಯಾಗಿದೆ' – ಎಂಬ ಸೂತ್ರದಲ್ಲಿ ಪ್ರಚುರಪಡಿಸಿದ್ದಾರಷ್ಟೆ. **ವಿಚೇತಸಃ**= ಪರಮಾತ್ಮನಲ್ಲಿ ದ್ವೇಷಪೂರ್ಣವಾದ ಮನಸ್ಸುಳ್ಳವರು. ಈ ವಿಶೇಷಣದಿಂದ 'ಹೆಚ್ಚಿನ ಮಾತೇಕೆ' ವಿರುದ್ಧ ಜ್ಞಾನವಿರುವುದರಿಂದ ಪರಮಾತ್ಮನ ಅವಗಣನೆ ಮಾಡುವವರಿಗೆ ಆಮುಷ್ಮಿಕ (ಪರಲೋಕಕ್ಕೆ ಸಂಬಂಧಿಸಿದ) ವಾದ ಯಾವ ಫಲವೂ ಇಲ್ಲವೆಂದಂತಾಯಿತು ಎಂದು ತಿಳಿಯಬೇಕು . ಭಾಗವತದ ಏಳನೆಯ ಸ್ಕಂಧದಲ್ಲಿ 'ದ್ವೇಷದಿಂದ ಶಿಶುಪಾಲಾದಿ ರಾಜರು ಮೋಕ್ಷ ಪಡೆದರು' ಎಂದು ಹೇಳಿರುವುದು ನಿರಂತರ ಧ್ಯಾನವನ್ನು ಹೊಗಳುವ ಉದ್ದೇಶದಿಂದ ಹೊರತು ದ್ವೇಷವು ಮೋಕ್ಷ ಸಾಧನವೆಂದು ತೋರಿಸುವ ಉದ್ದೇಶದಿಂದಲ್ಲ.

**ವಿವರಣೆ–** ಭಾಗವತದಲ್ಲಿ ಭಗವದ್‌ದ್ವೇಷಿಗಳಾದ ಶಿಶುಪಾಲಾದಿಗಳು ದ್ವೇಷವನ್ನು ಮುಂದಿಟ್ಟುಕೊಂಡು ನಿರಂತರವಾಗಿ ಪರಮಾತ್ಮನನ್ನು ಧ್ಯಾನಿಸಿ ಜ್ಞಾನಪಡೆದು ಮೋಕ್ಷವನ್ನು ಪಡೆದರು ಎನ್ನಲಾಗಿದೆ. ಹಾಗಿರುವಾಗ ಪರಮಾತ್ಮನ ಅವಗಣನೆ ಮಾಡುವ ದ್ವೇಷಿಗಳಿಗೆ ಜ್ಞಾನವೇ ಉಂಟಾಗುವುದಿಲ್ಲ ; ಮೋಕ್ಷ ರೂಪಫಲವಂತೂ ಸುತರಾಂ ದೊರಕದು ಎನ್ನುವುದು ಹೇಗೆ

ಯುಕ್ತವೆನಿಸೀತು ಎಂಬ ಆಕ್ಷೇಪಕ್ಕೆ ಗೀತಾವಿವೃತಿಯ ಉತ್ತರ– 'ಶಿಶುಪಾಲಾದಿಗಳು ಶಾಪದಿಂದಾಗಿ ಭಗವದ್ ದ್ವೇಷಿಗಳೆನಿಸಿದ್ದು ಸ್ವಭಾವತಃ ಅವರು ಭಕ್ತರೇ ಆಗಿದ್ದರು. ಹಾಗಾಗಿ ಅವರಿಂದ ದ್ವೇಷ ಮೂಲಕವಾಗಿ ನಿರಂತರವಾಗಿ ಧ್ಯಾನಿಸಲ್ಪಟ್ಟಾಗ ಅವರ ಆಗಂತುಕವಾದ ದ್ವೇಷವನ್ನು ಪರಿಗಣಿಸದೆ ಸ್ವಾಭಾವಿಕವಾದ ಭಕ್ತಿಯನ್ನು ಪರಿಗಣಿಸಿ ನಿತ್ಯಧ್ಯಾನದ ಫಲವಾಗಿ ಜ್ಞಾನ ಹಾಗೂ ಮೋಕ್ಷವನ್ನು ಭಗವಂತನು ಅನುಗ್ರಹಿಸಿದ ಎಂದೆನ್ನುವುದರಲ್ಲಿ ತಾತ್ಪರ್ಯ. ಹೀಗೆ ನಿತ್ಯಧ್ಯಾನವು ಫಲಕಾರಿಯಾಗುತ್ತದೆ ಎಂದು ನಿತ್ಯಧ್ಯಾನವನ್ನು ಸ್ತುತಿಸಿದಂತಾಯಿತು ಹೊರತು ದ್ವೇಷವು ಜ್ಞಾನ ಹಾಗೂ ಮೋಕ್ಷಕ್ಕೆ ಕಾರಣವಾಗುತ್ತಿದೆ ಎಂದೆನ್ನುವದನ್ನಲ್ಲ. ಹಾಗಾಗಿ ಇದರಿಂದ ಸ್ವಭಾವತಃ ಪರಮಾತ್ಮನನ್ನು ದ್ವೇಷಿಸಿ ಅವಗಣನೆ ಮಾಡುವವರಿಗೆ ಜ್ಞಾನವನ್ನೋ ತನ್ಮೂಲಕವಾಗಿ ಮೋಕ್ಷವನ್ನೋ ಹೇಳಿದಂತಾಗಲಿಲ್ಲವೆಂದಾಗಿ ಅವರನ್ನು **ಮೋಘಜ್ಞಾನಾಃ ವಿಚೇತಸಃ** ಎಂದು ಜರಿದಿರುವುದು ಯುಕ್ತವೇ ಆಗಿದೆ – ಎಂದು.

## ತಾಮಸ ಜೀವರು ಸ್ವಭಾವತಃ ಮೂಢರು, ಭಗವದ್ ದ್ವೇಷಿಗಳು

**ನನು ಮೌಢ್ಯಾನ್ಮಿಥ್ಯಾಜ್ಞಾನಮಸ್ತು । ಪ್ರಜ್ವಲನಾತ್ಮಕೋ ದ್ವೇಷಃ ಕುತ ಇತ್ಯತೋ ವಾ ಅನ್ಯೇಷಾಮವಿದ್ಯಮಾನಂ ಮೌಢ್ಯಮೇವ ತೇಷಾಂ ಕುತ ಇತ್ಯತೋ ವಾ ತಸ್ಯ ಮೂಲಕಾರಣಮಾಹ– ರಾಕ್ಷಸೀಮಿತಿ ॥ ಮೋಹಿನೀಂ ಬುದ್ಧಿಭ್ರಂಶಕರೀಮ್ ಆಸುರೀಮ್ ಅಸುರಸಂಬಂಧಿನೀಂ ಪ್ರಕೃತಿಂ ಸ್ವಭಾವಮ್ ಆಶ್ರಿತಾಃ ತಮೋ-ಯೋಗ್ಯಾಃ ಮಾಮವಜಾನಂತೀತಿ ಪೂರ್ವೇಣಾನ್ವಯಃ ॥ 12 ॥**

**ಅನುವಾದ–** ಪರಮಾತ್ಮನ ಅವಗಣನೆ ಮಾಡುವವರಿಗೆ ತಮ್ಮ ಮೂಢತೆಯಿಂದಾಗಿ ಅನ್ಯಥಾ ಜ್ಞಾನವುಂಟಾಗುತ್ತದೆ ಎಂದೇನೋ ಯುಕ್ತ ; ಅವನ ವಿಷಯದಲ್ಲಿ 'ಕೆಂಡಕಾರುವುದು' ಎಂಬ ರೀತಿಯ ದ್ವೇಷವಾದರು ಯಾಕೆ ಉಂಟಾಗಬೇಕು ? ಎಂಬ ಪ್ರಶ್ನೆಗೆ ಉತ್ತರವಾಗಿ, ಅಥವಾ ಬೇರೆಯವರಿಗೆ ಇಲ್ಲದಿರುವ ಮೂಢತೆಯಾದರೂ ಅವಗಣನೆ ಮಾಡುವ ಆ ಜೀವರಿಗೆ ಯಾಕೆ ? ಎಂಬ ಪ್ರಶ್ನೆಗೆ ಉತ್ತರವಾಗಿ **'ರಾಕ್ಷಸೀಮ್ ಆಸುರೀಂ ಚೈವ ಪ್ರಕೃತಿಂ ಶ್ರಿತಾಃ'** ಎಂದೆನ್ನಲಾಗಿದೆ. **ಮೋಹಿನೀಂ=** ವಿವೇಕವನ್ನು ನಾಶಗೊಳಿಸುವ, **ಆಸುರೀಂ** ಅಸುರರಿಗೆ ಸಂಬಂಧಿಸಿದ **ಪ್ರಕೃತಿಂ=** ಸ್ವಭಾವವನ್ನು ಆಶ್ರಯಿಸಿರುವ ತಮೋಯೋಗ್ಯರಿವರು. ಇದನ್ನು **'ಮಾಂ ಅವಜಾನಂತಿ'** ಎಂದು ಪೂರ್ವಶ್ಲೋಕಕ್ಕೆ ಅನ್ವಯಿಸಿಕೊಳ್ಳಬೇಕು. ॥ 12 ॥

**ವಿವರಣೆ –** ಇದರಿಂದ ಅವರ ಮೂಢತೆ ಹಾಗೂ ಭಗವದ್ದ್ವೇಷಕ್ಕೆ ಅವರ ಸ್ವಭಾವವೇ ಕಾರಣ. ಹಾಗಾಗಿ ಇತರರಲ್ಲಿ ಇಲ್ಲದ ಮೂಢತೆ ಹಾಗೂ ದ್ವೇಷ ಅವರಿಗೆ ಪರಮಾತ್ಮನಲ್ಲಿ. ಆ

ದ್ವೇಷವು ಮೂಢತೆಯ ಫಲವಲ್ಲ ; ಅವರ ಸ್ವಭಾವಕ್ಕೆ ಅಂಟಿಕೊಂಡಿರುವ ಸಹಜಸ್ಥಿತಿ ಎಂದಂತಾಗಿ ಮೇಲಿನ ಪ್ರಶ್ನೆಗಳಿಗೆ ಉತ್ತರಿಸಿದಂತಾಯಿತು.

## ಉತ್ತಮಜೀವರ ಆದರಪಾತ್ರನಾದ ಪರಮಾತ್ಮನು ನಿರ್ದೋಷನು

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥ 13 ॥**

**ಅರ್ಥ**– ಅರ್ಜುನನೇ ! ಮುಕ್ತಿಯೋಗ್ಯರಾದ ಉತ್ತಮ ಸ್ವಭಾವವನ್ನು ಹೊಂದಿರುವ ಉತ್ತಮವ್ಯಕ್ತಿಗಳು ಜಡಸಹಿತ ಜೀವರಾಶಿಗಳಿಗೆ ಕಾರಣನಾದ, ಯಾವುದೇ ರೀತಿಯ ನಾಶ ರಹಿತನಾದ ನನ್ನನ್ನು ಅರ್ಥ ಮಾಡಿಕೊಂಡು ನನ್ನನ್ನು ಹೊರತಾಗಿ ಬೇರೆಡೆ ಹರಿದಾಡದ ಮನಸ್ಸುಳ್ಳವರಾಗಿ ಸೇವಿಸುತ್ತಿದ್ದಾರೆ.

**ನನು ಭಗವತೋ ದೋಷಿತ್ವಾದೇವಾವಜಾನಂತೀತಿ ಕಿಂ ನ ಸ್ಯಾತ್ । ತಥಾತ್ವೇ ದೈವಪ್ರಕೃತಯೋಽಪ್ಯವಜ್ಞಾಂ ಕುರ್ಯುಃ । ನ ಚೈವಮಸ್ತೀತ್ಯಾಹ- ಮಹಾತ್ಮಾನಸ್ತ್ವಿತಿ ॥ ದೈವೀಂ ಮುಕ್ತಿಯೋಗ್ಯೋತ್ತಮಜೀವಸಂಬಂಧಿನೀಂ ಪ್ರಕೃತಿಂ ಸ್ವಭಾವಂ ಆಶ್ರಿತಾಃ ಮಹಾತ್ಮಾನೋ ಮಹಾಮನಸ್ಕಾಸ್ತು ಭೂತಾದಿಂ ಭೂತಾನಾಂ ಕಾರಣಂ ಅವ್ಯಯಂ ಚತುರ್ವಿಧನಾಶಹೀನಂ ಮಾಂ ಜ್ಞಾತ್ವಾಽನನ್ಯಮನಸೋಽನ್ಯವಿಷಯಕ-ಮನೋಹೀನಾ ಮದೇಕಮನಸ್ಕಾಃ ಸಂತೋ ಮಾಂ ಭಜಂತಿ ಸೇವಂತೇ ॥ 13 ॥**

**ಅನುವಾದ**– ಭಗವಂತನು ದೋಷಯುಕ್ತನಾಗಿರುವುದರಿಂದಲೇ ಅವನನ್ನು ಅವಗಣನೆ ಮಾಡುತ್ತಿದ್ದಾರೆ ಎಂದು ಯಾಕಾಗಬಾರದು ? ಎಂಬ ಪ್ರಶ್ನೆಗೆ 'ಹಾಗಾದಲ್ಲಿ ದೈವೀಪ್ರಕೃತಿಯ ಸಜ್ಜನರೂ ಅವಗಣನೆ ಮಾಡಬೇಕಿತ್ತು ; ಆದರೆ ಹಾಗೆ ಇಲ್ಲ' ಎಂಬ ಉತ್ತರವನ್ನು 'ಮಹಾತ್ಮಾನಸ್ತು ಮಾಂ ಪಾರ್ಥ, ಎಂಬ ಶ್ಲೋಕದಲ್ಲಿ ನೀಡಲಾಗುತ್ತಿದೆ. **ದೈವೀಂ**= ಮುಕ್ತಿಯೋಗ್ಯರಾದ ಉತ್ತಮ ಜೀವರಿಗೆ ಸಂಬಂಧಿಸಿದ **ಪ್ರಕೃತಿಂ** = ಸ್ವಭಾವವನ್ನು ಆಶ್ರಯಿಸಿರುವ, **ಮಹಾತ್ಮಾನಃ**= ಉತ್ತಮ ಮನಸ್ಸುಳ್ಳವರು, **ಭೂತಾದಿಂ** = ಜಡಸಹಿತ ಜೀವರಾಶಿಗಳಿಗೆ ಕಾರಣನಾದ, **ಅವ್ಯಯಂ** = ಸ್ವರೂಪತಃ ನಾಶವೇ ಮೊದಲಾದ ನಾಲ್ಕು ರೀತಿಯ ನಾಶರಹಿತನಾದ ನನ್ನನ್ನು ಅರ್ಥ ಮಾಡಿಕೊಂಡು, **ಅನನ್ಯಮನಸಃ**= ಇತರೆಡೆ ಹರಿದಾಡದೆ ನನ್ನಲ್ಲಿ ಮಾತ್ರ ಕೇಂದ್ರೀಕೃತವಾದ ಮನಸ್ಸುಳ್ಳವರಾಗಿ ನನ್ನನ್ನು, **ಭಜಂತಿ** = ಸೇವಿಸುತ್ತಾರೆ. ॥ 13 ॥

## ಭಕ್ತರು ಪರಮಾತ್ಮನನ್ನು ಭಜಿಸುವ ವಿಧಾನ

**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ 14 ॥**

**ಅರ್ಥ–** ಆ ಮಹಾತ್ಮರು ನನ್ನನ್ನು ನಿರಂತರವಾಗಿ ಕೃಷ್ಣ ಕೃಷ್ಣ ಎಂಬಿತ್ಯಾದಿ ರೀತಿಯಲ್ಲಿ ಕೀರ್ತನೆಗೈಯುತ್ತಾ, ನನ್ನ ಪೂಜಾದಿಕೈಂಕರ್ಯದಲ್ಲಿ ಯತ್ನಪಡುತ್ತಾ ದೃಢವಾಗಿ ಉಪವಾಸಾದಿ ವ್ರತಗಳಲ್ಲಿ ತೊಡಗಿದವರಾಗಿ, ನಿರಂತರವಾಗಿ ನನ್ನಲ್ಲಿ ಮನಸ್ಸಿನ ಏಕಾಗ್ರತೆಯುಳ್ಳವರಾಗಿ ಹಾಗೂ ನಿರಂತರ ಕರ್ಮ ಹಾಗೂ ಜ್ಞಾನರೂಪ ಮೋಕ್ಷೋಪಾಯದಲ್ಲಿ ತೊಡಗಿದವರಾಗಿ ಭಕ್ತಿಯಿಂದ ನಮಸ್ಕಾರ ಮಾಡುವವರಾಗಿ ಸೇವಿಸುತ್ತಿರುತ್ತಾರೆ.

ಭಜನಪ್ರಕಾರಮಾಹ– **ಸತತಮಿತಿ ॥ ಮಾಂ ಸತತಂ ಕೃಷ್ಣ ಕೃಷ್ಣೇತ್ಯಾದಿರೂಪೇಣ ಕೀರ್ತಯಂತಃ ಯತಂತಃ ಮತ್ಪೂಜಾದೌ ಯತ್ನಂ ಕುರ್ವಂತಃ । ದೃಢಾನಿ ಉಪ-ವಾಸಾದಿನಿಯಮವ್ರತಾನಿ ಯೇಷಾಂ ತೇ ದೃಢವ್ರತಾಃ । ನಿತ್ಯಯುಕ್ತಾಃ ನಿತ್ಯಂ ಮಯಿ ಮನೋಯೋಗವಂತಃ। ನಿತ್ಯಂ ಕರ್ಮಜ್ಞಾನೋಪಾಯವಂತ ಇತಿ ವಾ । ಭಕ್ತ್ಯಾ ನಮಸ್ಯಂತಶ್ಚ ಮಾಮುಪಾಸತೇ ॥ 14 ॥**

**ಅನುವಾದ– ಸತತಂ ಕೀರ್ತಯಂತೋ ಮಾಂ** ಎಂಬಿತ್ಯಾದಿ ಶ್ಲೋಕದಲ್ಲಿ ಸಜ್ಜನರು ಪರಮಾತ್ಮವನ್ನು ಸೇವಿಸುವ ರೀತಿಯನ್ನು ಹೇಳಲಾಗುತ್ತಿದೆ. **ಮಾಂ ಸತತಂ ಕೀರ್ತಯಂತಃ=** ನನ್ನನ್ನು ನಿರಂತರವಾಗಿ ಕೃಷ್ಣ ! ಕೃಷ್ಣ ! ಎಂಬಿತ್ಯಾದಿ ರೀತಿಯಲ್ಲಿ ಕೀರ್ತನೆ ಗೈಯುತ್ತಿರುವವರಾಗಿ **ಯತಂತಃ=** ನನ್ನ ಪೂಜಾದಿಗಳಲ್ಲಿ ಪ್ರಯತ್ನ ಪಡುವವರಾಗಿ, **ದೃಢವ್ರತಾಃ=** ದೃಢವಾದ ಉಪವಾಸಾದಿವ್ರತನಿಯಮಗಳು ಯಾರಿಗೆ ಇವೆಯೋ ಅಂತವರಾಗಿ, **ನಿತ್ಯಯುಕ್ತಾಃ=** ನಿರಂತರವಾಗಿ ನನಲ್ಲಿ ಮನಸ್ಸನ್ನು ನೆಟ್ಟವರಾಗಿ ಅಥವಾ **ನಿತ್ಯಯುಕ್ತಾಃ= ಮನೋಯೋಗ-ವಂತಃ=** ಮನಃಪೂರ್ವಕವಾಗಿ ಕರ್ಮ ಹಾಗೂ ಜ್ಞಾನರೂಪದ ಮೋಕ್ಷೋಪಾಯ ಸಂಪಾದನೆ ಯುಳ್ಳವರಾಗಿ ಭಕ್ತಿಯಿಂದ ನನ್ನನ್ನು ನಮಸ್ಕರಿಸುತ್ತಿರುವವರಾಗಿ ಸೇವಿಸುತ್ತಿದ್ದಾರೆ. ॥ 14 ॥

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥ 15 ॥**

**ಅರ್ಥ –** ಬೇರೆ ಕೆಲವು ಮಹಾನುಭಾವರು ಶ್ರವಣ, ಮನನ, ಧ್ಯಾನರೂಪದ ಜ್ಞಾನಯಜ್ಞದಿಂದ ನನ್ನನ್ನು ಪೂಜಿಸುತ್ತಿರುವವರಾಗಿ ಸೇವಿಸುತ್ತಿರುತ್ತಾರೆ. ಸರ್ವತ್ರವ್ಯಾಪ್ತವಾದ ಸರ್ವಾವಯವಗಳಿಂದ ಸಹಿತವಾದ ರೂಪವುಳ್ಳ ನನ್ನನ್ನು ತನ್ನ ನಾನಾರೂಪಗಳ ಐಕ್ಯವುಳ್ಳ

ನಾರಾಯಣನೆಂದೂ, ಸಕಲ ಜಗತ್‌ವಿಲಕ್ಷಣನೆಂದೂ, ವಾಸುದೇವಾದಿ ಚತುರ್ಮೂರ್ತಿರೂಪನೆಂದೂ ನಾರಾಯಣ-ವಾಸುದೇವಾದಿ ಪಂಚಮೂರ್ತಿಗಳುಳ್ಳವನೆಂದೂ. ದ್ವಾದಶ ಮೂರ್ತಿಗಳುಳ್ಳವನೆಂದೂ, ಇಪತ್ತನಾಲ್ಕು ಮೂರ್ತಿಗಳುಳ್ಳವನೆಂದೂ ಎಂಬಿತ್ಯಾದಿ ನಾನಾ ರೀತಿಯಲ್ಲಿ ಸೇವಿಸುತ್ತಿರುತ್ತಾರೆ.

**ಅನ್ಯೇಽಪಿ ಚ ಮಹಾತ್ಮಾನೋ ಜ್ಞಾನಾಖ್ಯಯಜ್ಞೇನ ಮಾಂ ಯಜಂತಃ ಪೂಜಯಂತಃ ಮಾಮುಪಾಸತೇ । ಶ್ರವಣಮನನಧ್ಯಾನಾದಿ ಕುರ್ವಂತಃ ಪರೇಭ್ಯಃ ಉಪದಿಶಂತಶ್ಚ ನಿತ್ಯಂ ಭಗವನ್ಮಾಹಾತ್ಮ್ಯಜ್ಞಾನೇ ರತಾ ಇತ್ಯರ್ಥಃ । ವಿಶ್ವತೋಮುಖಂ ಮುಖಶಬ್ದೋಽತ್ರ ಸರ್ವಾವಯವೋಪೇತರೂಪಪರಃ । ವಿಶ್ವಸ್ಮಿನ್ಸರ್ವತ್ರ ಸ್ಥಿತಂ ಮಾಮೇಕತ್ವೇನ ಪೃಥಕ್‌ತ್ವೇನ ಸರ್ವಜಗದ್ವೈಲಕ್ಷಣ್ಯೇನ ಬಹುಧಾ ಚ ಶುಕ್ಲ-ನೀಲ-ಪೀತಾದಿಭೇದೇನ ಬಹುಧೋಪಾಸತ ಇತಿ ವಾ । ಬಹುಧಾ ಬಹವ ಇತ್ಯರ್ಥಃ । 'ದೈವಮೇವಾಪರೇ ಯಜ್ಞಮ್' (4-24)ಇತ್ಯಾದಿನಾ ಚತುರ್ಥೋಕ್ತದಿಶಾ ಬಹವ ಉಪಾಸತ ಇತಿ ವಾಽರ್ಥಃ । ಯದ್ವಾ 'ಏಕಮೂರ್ತಿಶ್ಚತುರ್ಮೂರ್ತಿರಥವಾ ಪಂಚಮೂರ್ತಿಕಃ' ಇತಿ ತಾತ್ಪರ್ಯೋಕ್ತದಿಶಾ ಸರ್ವರೂಪಾತ್ಮಕನಾರಾಯಣ-ರೂಪೈಕಮೂರ್ತಿತ್ವೇನ ಪೃಥಕ್ತ್ವೇನ ವಾಸುದೇವಾದಿಚತುರ್ಮೂರ್ತಿತ್ವೇನ ಬಹುಧಾ ನಾರಾಯಣವಾಸುದೇವಾದಿಪಂಚಮೂರ್ತಿತ್ವೇನ ವಿಶ್ವತೋಮುಖಂ ದ್ವಾದಶಚತುರ್ವಿಂಶತ್ಯಾದಿಭೇದೇನ ಸ್ಥಿತಂ ಮಾಮುಪಾಸತ ಇತ್ಯರ್ಥಃ ॥ 15 ॥**

**ಅನುವಾದ–** ಇತರ ಕೆಲವು ಮಹಾನುಭಾವರು ಜ್ಞಾನವೆಂಬ ಹೆಸರುಳ್ಳ ಯಜ್ಞದಿಂದ, **ಮಾಂ ಭಜಂತಃ**= ನನ್ನನ್ನು ಪೂಜಿಸುತ್ತಾ ಸೇವಿಸುತ್ತಾರೆ. ಜ್ಞಾನ ಯಜ್ಞದಿಂದ ಪೂಜಿಸುವುದೆಂದರೆ ಶಾಸ್ತ್ರಾದಿಗಳ ಶ್ರವಣ, ಶಾಸ್ತ್ರಾರ್ಥ ಮನನ, ಧ್ಯಾನಗಳನ್ನು ಮಾಡುತ್ತಾ , ಪರರಿಗೆ ಶಾಸ್ತ್ರಾರ್ಥವನ್ನು ಉಪದೇಶಗೈಯುತ್ತಾ ನಿರಂತರವಾಗಿ ಪರಮಾತ್ಮನ ಮಾಹಾತ್ಮ್ಯಜ್ಞಾನದಲ್ಲಿ ತಲ್ಲೀನರಾಗಿರುವುದು ಎಂದರ್ಥ. ವಿಶ್ವತೋಮುಖಃ ಎಂಬಲ್ಲಿರುವ ಮುಖಶಬ್ದವು ಸಕಲ ಅವಯವಗಳಿಂದ ಸಹಿತವಾದ ಪರಮಾತ್ಮನ ರೂಪವನ್ನು ಹೇಳುತ್ತಿದೆ. **ವಿಶ್ವತಃ**= **ವಿಶ್ವಸ್ಮಿನ್**= ಎಲ್ಲೆಡೆ, **ಮುಖಂ**= ಸರ್ವಾವಯವಗಳಿಂದ ಸಹಿತವಾದ ರೂಪವುಳ್ಳವನಾಗಿ ಇರುವ ನನ್ನನ್ನು ತನ್ನ ಎಲ್ಲಾ ರೂಪಗಳ ಐಕ್ಯವುಳ್ಳವನೆಂಬ ರೀತಿಯಲ್ಲಿ, **ಪೃಥಕ್‌ತ್ವೇನ**= ಜಗತ್ತಿಗಿಂತ ವಿಲಕ್ಷಣನೆಂಬ ರೀತಿಯಿಂದ **ಬಹುಧಾ**= ಶುಕ್ಲವರ್ಣನು, ನೀಲವರ್ಣನು ಪೀತವರ್ಣನು ಎಂಬಿತ್ಯಾದಿ ಭಿನ್ನಭಿನ್ನ ರೂಪದಿಂದ ನಾನಾರೀತಿಯಲ್ಲಿ ಅನುಸಂಧಾನಪೂರ್ವಕವಾಗಿ ಸೇವಿಸುತ್ತಾರೆ. ಅಥವಾ. **ಬಹುಧಾ** = ಅನೇಕರು ಎಂದರ್ಥ. ಆಗ ದೈವಮೇವಾಪರೇ ಎಂಬಿತ್ಯಾದಿಯಾಗಿ ನಾಲ್ಕನೆಯ ಅಧ್ಯಾಯದಲ್ಲಿ

ಹೇಳಲಾಗಿರುವಂತೆ ನನ್ನನ್ನು ಅನೇಕರು ಸೇವಿಸುತ್ತಾರೆ' ಎಂದು ಅಭಿಪ್ರಾಯವಾಗುತ್ತದೆ. ಅಥವಾ ಗೀತಾತಾತ್ಪರ್ಯದಲ್ಲಿ–

'ಏಕಮೂರ್ತಿಶ್ಚತುರ್ಮೂರ್ತಿರಥವಾ ಪಂಚಮೂರ್ತಿಕಃ ।
ದ್ವಾದಶಾದಿಪ್ರಭೇದೋ ವಾ ಪೂಜ್ಯತೇ ಸಜ್ಜನೈರ್ಹರಿಃ ॥'

ಎಂದು ಹೇಳಲಾಗಿರುವಂತೆ, **ಏಕತ್ವೇನ** = ಸರ್ವರೂಪಾಭಿನ್ನನಾದ ನಾರಾಯಣನೆಂಬ ಒಂದು ಮೂರ್ತಿಯುಳ್ಳವನನ್ನಾಗಿ, **ಪೃಥಕ್ತ್ವೇನ** = ವಾಸುದೇವ,ಸಂಕರ್ಷಣ,ಪ್ರದ್ಯುಮ್ನ ಹಾಗೂ ಅನಿರುದ್ಧ ಎಂದು ನಾಲ್ಕು ರೂಪವುಳ್ಳವನನ್ನಾಗಿ, **ಬಹುಧಾ** = ನಾರಾಯಣ, ವಾಸುದೇವ,ಸಂಕರ್ಷಣ, ಪ್ರದ್ಯುಮ್ನ , ಅನಿರುದ್ಧ ಎಂಬ ಐದುರೂಪಗಳುಳ್ಳವನನ್ನಾಗಿ, **ವಿಶ್ವತೋ ಮುಖಂ** = ಕೇಶವಾದಿ ದ್ವಾದಶ ರೂಪಗಳುಳ್ಳವನನ್ನಾಗಿ ಹಾಗೂ , ಸಂಕರ್ಷಣಾದಿ ದ್ವಾದಶರೂಪ ಸಹಿತ ಕೇಶವಾದಿ ಇಪ್ಪತ್ನಾಲ್ಕು ರೂಪಗಳುಳ್ಳವನನ್ನಾಗಿ, ಹೀಗೆ ನಾನಾ ರೂಪದಿಂದ ಇರುವ ನನ್ನನ್ನು ಸೇವಿಸುತ್ತಿದ್ದಾರೆ ಎಂದು ಅಭಿಪ್ರಾಯ. ॥ 15 ॥

## ಭಗವಂತನ ವಿಶೇಷಮಹಿಮೆ

**ಅಹಂ ಕ್ರತುರಹಂ ಯಜ್ಞಃ ಸ್ವಧಾऽಹಮಹಮೌಷಧಮ್ ।**
**ಮಂತ್ರೋऽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥ 16 ॥**

**ಅರ್ಥ** – ಯಜ್ಞದೀಕ್ಷೆಯಿಂದ ಆರಂಭಿಸಿ ಅವಭೃಥ ತನಕದ ಕರ್ಮಸಮೂಹರೂಪದ ಕ್ರತುವು ನಾನೇ ಆಗಿರುವೆನು. ದೇವತೆಗಳನ್ನು ಉದ್ದೇಶಿಸಿ ಹವಿರಾದಿದ್ರವ್ಯತ್ಯಾಗ ರೂಪದ ಪ್ರಧಾನ ಕರ್ಮವೆನಿಸಿರುವ ಯಜ್ಞವೂ ನಾನಾಗಿರುವೆನು . ಸ್ವಧಾ ಎಂದು ಉಚ್ಚರಿಸಿ ಪಿತೃಗಳಿಗೆ ನೀಡುವ ತಿಲತರ್ಪಣಾದಿ ಕ್ರಿಯೆಯೂ ನಾನೇ ಆಗಿರುವೆನು. ಹವಿಸ್ಸೂ ನಾನೇ. ಮಂತ್ರವೂ ನಾನೇ. ಆಜ್ಯ (ತುಪ್ಪ)ವೂ ನಾನೇ, ಹೋಮಾಗ್ನಿಯೂ ನಾನೇ. ಹೋಮವೂ ನಾನೇ ಆಗಿರುವೆನು.

**ಜ್ಞಾನಂ ವಿಜ್ಞಾನಸಹಿತಂ ವಕ್ಷ್ಯಾಮೀತಿ ಪ್ರತಿಜ್ಞಾತಜ್ಞಾನವಿಷಯಂ ನಿರೂಪ್ಯ ಅಧುನಾ ವಿಜ್ಞಾನಪ್ರದರ್ಶನಾಯ ತದ್ವಿಷಯಮಾಹ ಅಹಂ ಕ್ರತುರಿತ್ಯಾದಿಚತುಷ್ಟ-ಯೇನ ॥ ಕ್ರತವಃ ದೀಕ್ಷಾದ್ಯವಭೃಥಾಂತಕರ್ಮಕಲಾಪಾಃ ಜ್ಯೋತಿಷ್ಟೋಮಾ-ದಯಃ । ಯಜ್ಞಸ್ತು ದೇವತೋದ್ದೇಶೇನ ದ್ರವ್ಯತ್ಯಾಗರೂಪಂ ಪ್ರಧಾನಂ ಕರ್ಮ । ಕುರುಪಾಂಡವವತ್ಸಾಮಾನ್ಯವಿಶೇಷಭಾವೇನ ಭೇದೋ ಜ್ಞೇಯಃ । ಸ್ವಧಾ ಪಿತೄಣಾಂ ತಿಲೋದಕಾದಿದಾನಮ್ । ಅಹಂ ಕ್ರತುರಿತ್ಯಾದ್ಯಭೇದೋಕ್ತಿಃ ರಸೋऽಹಮಪ್ಸು**

**ಕೌಂತೇಯ ಇತ್ಯಾದಾವಿವ ಕ್ರತ್ವಾದೇಃ ಕ್ರತುತ್ವಾದಿನಿಯಂತೃತ್ವೇನ ಕ್ರತ್ವಂಗಹವಿರಾದಿ-ಭೋಕ್ತೃತ್ವಾದಿನಾ ಧ್ಯೇಯಾ ॥ 16 ॥**

**ಅನುವಾದ–** ಈ ಅಧ್ಯಾಯದ ಆದಿಯಲ್ಲಿ **'ಜ್ಞಾನ ಸಹಿತಂ ವಿಜ್ಞಾನಂ ವಕ್ಷ್ಯಾಮಿ'** ಎಂದು ಮಾಡಲಾಗಿರುವ ಪ್ರತಿಜ್ಞೆಗೆ ಅನುಗುಣವಾಗಿ ಜ್ಞಾನವಿಷಯವನ್ನು ಪ್ರಚುರಪಡಿಸಿ ಈಗ ವಿಜ್ಞಾನ ಶಬ್ದದಿಂದ ಅಭಿಪ್ರೇತವಾದ ಪರಮಾತ್ಮನ ಮಾಹಾತ್ಮ್ಯೆಯನ್ನು ಪ್ರಚುರ ಪಡಿಸುವುದಕ್ಕಾಗಿ **'ಅಹಂ ಕ್ರತುಃ'** ಎಂಬಿತ್ಯಾದಿ ಮುಂದಿನ ನಾಲ್ಕು ಶ್ಲೋಕಗಳು ಪ್ರಸ್ತುತವಾಗಿವೆ. ಯಜ್ಞದೀಕ್ಷೆಯಿಂದ ಆರಂಭಿಸಿ ಕೊನೆಯ ಅವಭೃಥದ ತನಕದ ಎಲ್ಲಾ ಕರ್ಮಗಳ ಸಮೂಹಗಳು ಕ್ರತುಗಳೆನಿವೆ ಜ್ಯೋತಿಷ್ಟೋಮ . ದರ್ಶಯಾಗ , ಪೌರ್ಣಮಾಸಯಾಗ ಇವೆ ಮೊದಲಾದವುಗಳು ಕ್ರತುಗಳು. ಈ ಕರ್ಮಸಮೂಹದಲ್ಲಿಸೇರಿರುವ ಪ್ರಧಾನ ಕರ್ಮವೆನಿಸಿರುವ 'ದೇವತೆಗಳನ್ನು ಉದ್ದೇಶಿಸಿ ಹವಿಸ್ಸು ಮೊದಲಾದ ದ್ರ್ಯವ್ಯದ ತ್ಯಾಗವು', ಯಜ್ಞವೆನಿಸಿದೆ. 'ಕುರುಪಾಂಡವರು' ಎಂದು ಹೇಳುವಂತೆ ಸಾಮಾನ್ಯ ವಿಶೇಷಭಾವದಿಂದ ಭೇದವನ್ನು ಅನುಸಂಧಾನ ಮಾಡಿಕೊಂಡು **'ಅಹಂ ಕ್ರತುಃ ಅಹಂ ಯಜ್ಞಃ'** ಎಂದು ಪ್ರತ್ಯೇಕವಾಗಿ ಹೇಳಲಾಗಿದೆ. **ಸ್ವಧಾ**= ಪಿತೃಗಳಿಗೆ ಸಂಬಂಧಿಸಿದ ತಿಲೋದಕಾದಿದಾನ. **'ರಸೋಽಹಮಪ್ಸು ಕೌಂತೇಯ'** ಅರ್ಜುನನೇ ! ನಾನು ನೀರಿನಲ್ಲಿ ರುಚಿಯೆನಿಸಿರುವೆನು' ಎಂದೆನ್ನುವುದು ಹೇಗೆ ರುಚಿಯಲ್ಲಿರುವ ರುಚಿತನಕ್ಕೆ ನಿಯಾಮಕನಾಗಿರುವುದರಿಂದ ಅಭೇದವನ್ನು ಅನುಸಂಧಾನ ಮಾಡಿಕೊಂಡು ಹೇಳಲ್ಪಟ್ಟಿದೆಯೋ ಹಾಗೆಯೇ ಕ್ರತ್ವಾದಿಗಳಲ್ಲಿರುವ ಕ್ರತುತ್ವಾದಿ ಧರ್ಮಗಳಿಗೆ ನಿಯಾಮಕನಾದುದರಿಂದ 'ನಾನೇ ಕ್ರತು' ಎಂಬಿತ್ಯಾದಿ ರೀತಿಯಲ್ಲಿಅಭೇದವನ್ನು ಅನುಸಂಧಾನ ಮಾಡಿಕೊಂಡು ಹೇಳಲ್ಪಟ್ಟಿದೆ. ಕ್ರತುವಿನ ಅಂಗವಾದ ಹವಿಸ್ಸು ಮೊದಲಾದವುಗಳ ಭೋಕ್ತೃ ಎನಿಸಿರುವುದು ಮಂತ್ರ ಪ್ರತಿಪಾದ್ಯನಾಗಿರುವುದು ಇವೇ ಮೊದಲಾದ ಕಾರಣದಿಂದ **'ಔಷಧೋಽಹಂ' ಆಜ್ಯೋಽಹಂ ಅಗ್ನಿರಹಂ ಹುತಂ ಅಹಂ'** ಎಂದು ಅಭೇದವನ್ನು ಹೇಳಲಾಗಿದೆ ಎಂದೂ ತಿಳಿಯಬೇಕು.

**ವಿವರಣೆ–** ಯುಧಿಷ್ಠಿರಾದಿ ಪಾಂಡುಪುತ್ರರೂ ದುರ್ಯೋಧನಾದಿಗಳಂತೆ ಕುರುವಂಶಜರಾಗಿದ್ದು ಕೌರವರೇ ಆಗಿರುವರು. ಹಾಗಿದ್ದರೂ 'ಕೌರವ ಪಾಂಡವರ ಯುದ್ಧ' ಎಂಬಿತ್ಯಾದಿ ವ್ಯವಹಾರಗಳಲ್ಲಿ ಯುಧಿಷ್ಠಿರಾದಿ ಐವರನ್ನು ಪಾಂಡವರೆಂದು ಪ್ರತ್ಯೇಕವಾಗಿ ಉಲ್ಲೇಖಿಸಲಾಗುವುದು. ಕುರುವಂಶಜರಾದ ಇವರಲ್ಲಿ 'ಪಾಂಡುಪುತ್ರರಾದ ಕುರುವಂಶಜರು' ಎಂಬ ವಿಶೇಷದ ಅಭಿಪ್ರಾಯದಿಂದ, ಸಾಮಾನ್ಯವಿಶೇಷಭಾವವನ್ನಿಟ್ಟುಕೊಂಡು ಕೌರವಶಬ್ದದಿಂದ ಅಭಿಪ್ರೇತರಾದ ದುರ್ಯೋಧನಾದಿ ಕುರುವಂಶಜರಿಗಿಂತ ಪ್ರತ್ಯೇಕವಾಗಿ ಅವರನ್ನು ಉಲ್ಲೇಖಿಸಲಾಗುತ್ತಿದೆ. ಹಾಗೆಯೇ ಯಜ್ಞವೂ ಕ್ರತುವಿನಲ್ಲೇ ಸೇರಿದ್ದರೂ ಯಜ್ಞಸಹಿತ ನಾನಾ ಅಂಗಗಳ ಸಮೂಹವೆನಿಸಿದ್ದು ಸಾಮಾನ್ಯವೆನಿಸಿರುವ ಕ್ರತುವಿಗಿಂತ ಅಂತಹ ಅಂಗಗಳಲ್ಲಿ ಒಂದಾಗಿದ್ದು

ವಿಶೇಷವೆನಿಸಿರುವ ಯಜ್ಞವನ್ನು ಸಾಮಾನ್ಯ-ವಿಶೇಷಭಾವವನ್ನು ಇಟ್ಟುಕೊಂಡು ಪ್ರತ್ಯೇಕವಾಗಿ ಉಲ್ಲೇಖಿಸಲಾಗಿದೆ ಎಂದು ಅಭಿಪ್ರಾಯ ॥ 16 ॥

**ಪಿತಾऽಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ ಸಾಮ ಯಜುರೇವ ಚ ॥ 17 ॥**

**ಅರ್ಥ–** ಈ ಜಗತ್ತಿನ ತಂದೆ, ತಾಯಿ, ಪೋಷಕ, ಪೂಜ್ಯ, ಎಲ್ಲವೂ ನಾನೇ ಆಗಿರುವೆನು. ಜ್ಞೇಯವಾದ ವಸ್ತುಗಳೆಲ್ಲಾ ಜ್ಞೇಯವೆನಿಸಲು ನಾನೇ ಕಾರಣನಾಗಿರುವುದರಿಂದ ವೇದ್ಯ (ಜ್ಞೇಯ) ನಾನೇ ಆಗಿರುವೆನು. ಪವಿತ್ರವಾದ ವಸ್ತುವು ಪವಿತ್ರವೆನಿಸಿರುವುದು ನನ್ನಿಂದಾಗಿಯೇ ಹಾಗಾಗಿ ಪವಿತ್ರವೂ ನಾನೇ. ಓಂಕಾರ, ಋಗ್ಮಂತ್ರ, ಯಜುರ್ಮಂತ್ರ ಹಾಗೂ ಸಾಮಮಂತ್ರ ಇವುಗಳಲ್ಲೆಲ್ಲಾ ಇರುವ ಓಂಕಾರತ್ವ ಋಕ್ತ್ವ, ಯಜುಷ್ಟ್ವ, ಸಾಮತ್ವಾದಿಧರ್ಮಗಳ ನಿಯಾಮಕನಾಗಿದ್ದು ಅವುಗಳಿಂದ ಪ್ರತಿಪಾದ್ಯನೂ ಆಗಿರುವುದರಿಂದ, ಓಂಕಾರ, ಋಕ್, ಯಜುಷ್, ಸಾಮ ಎಲ್ಲವೂ ನಾನೇ ಆಗಿರುವೆನು.

**ಕಿಂಚಾಸ್ಯ ಜಗತಃ ಪಿತಾ ಜನಕಃ ಅಹಂ ಮಾತಾ ಧಾತಾ ಪೋಷಕೋऽಹಮಿತಿ ಸರ್ವತ್ರಾನುವೃತ್ತಿಃ । ಪಿತಾಮಹಃ ಪೂಜ್ಯಃ । ವೇದ್ಯಂ ಜ್ಞೇಯಂ ವಸ್ತು । ಪವಿತ್ರಂ ಚಾಹಮೇವ । ಯದ್ವಾ ವೇದ್ಯಪವಿತ್ರವಸ್ತುನೋರ್ವೇದ್ಯತ್ವಪವಿತ್ರತ್ವಪ್ರದತ್ವಾತ್ ತಥೋಚ್ಯತೇ । ಓಂಕಾರಾದಾವೋಂಕಾರತ್ವಋಕ್ತ್ವಾದಿ ನಿಯಂತೃತ್ವಾತ್ ತದ್ವೇದ್ಯ-ತ್ವಾದಿನಾ ತದಭೇದೋ ಧ್ಯೇಯಃ । ಯದ್ವಾ ಅರ್ಚ್ಯತ್ವಾದೃಕ್ಸಮತ್ವಾಚ್ಚ ಇತ್ಯಾದಿ ಸ್ಮೃತ್ಯುಕ್ತದಿಶಾ ಕ್ರತ್ವಾದಿಭಿನ್ನಸ್ಯ ಹರೇರ್ಯೋಗವೃತ್ತ್ಯಾ ಕ್ರತ್ವಾದಿನಾಮಕತ್ವಮಿಹ ಧ್ಯೇಯಮ್ । ತಥಾ ಹಿ ಕೃತಿಸ್ವರೂಪತ್ವಾತ್ ಕ್ರತುಃ । ಯದಸ್ತಿ ಪ್ರಾಮಾಣಿಕತಯಾ ತಜ್ಜ್ಞಾನಾತೀತಿ ಯಜ್ಞನಾಮಾ । ಸ್ವಂ ಸ್ವಾತ್ಮಾನಂ ಧತ್ತ ಇತಿ ಸ್ವಧಾ । ಉಷದಾಹೇ ಕರ್ಮಣಿ ಘುಙ್ ಉಷಾಃ ಉಷ್ಟಾಃ ತಾಪತ್ರಯದಗ್ಧಾಃ ತೇಷಾಂ ನಿಧಿರಿತ್ಯೌಷಧ ನಾಮಾ । ಮಾನಾದ್ ಜ್ಞಾನಾತ್ ತ್ರಾತೀತಿ ಮನ್ತ್ರನಾಮಾ । ಆ ಸಮನ್ತಾತ್ ಜ್ಯಾಯಸ್ತ್ವಾದಾಜ್ಯನಾಮಾ । ಅಗಸ್ಯ ಸ್ವತೋ ಗತಿಹೀನಸ್ಯ ಜಗತೋ ನೇತೇತ್ಯಗ್ನಿ ನಾಮಾ । ಯಜ್ಞಾದಾವಾಹೂತತ್ವಾತ್ ಹುತನಾಮಾ । ಓಂಮಿತ್ಯಾಕ್ರಿಯತ ಇತ್ಯೋಂಕಾರಃ । ಅರ್ಚ್ಯತ್ವಾತ್ಪೂಜ್ಯತ್ವಾದ್ ಋಙ್ನಾಮಾ । ಸರ್ವರೂಪೇಷು ಸಮತ್ವಾತ್ ಸಾಮನಾಮಾ । ಯಾಜ್ಯತ್ವಾದ್ಯಜುರ್ನಾಮಾ ॥ 17 ॥**

**ಅನುವಾದ–** ಅಷ್ಟೇ ಅಲ್ಲದೆ, ಈ ಜಗತ್ತಿನ ಪಿತಾ= ಜನಕನೂ ನಾನೇ, ತಾಯಿಯೂ,

**ಧಾತಾ**= ಪೋಷಕನೂ (ನಾನೇ) ಇಲ್ಲೆಲ್ಲಾ '**ಪಿತಾಽಹಂ**' ಎಂಬಲ್ಲಿರುವ '**ಅಹಂ**' ಎಂದೆನ್ನುವುದನ್ನು, '**ಮಾತಾಽಹಂ ಧಾತಾಽಹಂ**' **ಪಿತಾಮಹೋಽಹಂ**, ಎಂಬಿತ್ಯಾದಿ ರೀತಿಯಲ್ಲಿ ಅನ್ವಯಿಸಿಕೊಳ್ಳಬೇಕು. **ಪಿತಾಮಹಃ**= ಪೂಜ್ಯನು. **ವೇದ್ಯಂ**= ಜ್ಞಾನಕ್ಕೆ ವಿಷಯವಾದ ವಸ್ತು ಹಾಗೂ ಪವಿತ್ರವಾದ ವಸ್ತು ನಾನೇ ಆಗಿರುವೆನು. ಅಥವಾ ಜ್ಞಾನಕ್ಕೆ ವಿಷಯವಾದ ವಸ್ತುಗಳಲ್ಲಿರುವ ಜ್ಞೇಯತ್ವವನ್ನು ನಾನೇ ಅನುಗ್ರಹಿಸಿರುವುದರಿಂದ 'ನಾನೇ ಜ್ಞೇಯನು' ಎಂದೂ ಪವಿತ್ರವಸ್ತುಗಳಲ್ಲಿರುವ ಪಾವಿತ್ರ್ಯವನ್ನು ನಾನೇ ಅನುಗ್ರಹಿಸಿರುವುದರಿಂದ 'ನಾನೇ ಪವಿತ್ರನು' ಎಂದೂ ಉಲ್ಲೇಖಿಸಲಾಗುತ್ತಿದೆ. ಓಂಕಾರಾದಿಗಳಲ್ಲಿರುವ, ಓಂಕಾರತ್ವ ಮೊದಲಾದ ಧರ್ಮಗಳ ನಿಯಾಮಕನಾಗಿದ್ದು ಅವುಗಳಿಂದ ಪ್ರತಿಪಾದ್ಯನಾಗಿರುವುದರಿಂದ 'ನಾನೇ ಓಂಕಾರ' ಎಂಬಿತ್ಯಾದಿ ರೀತಿಯಲ್ಲಿ ಅಭೇದವನ್ನು ಹೇಳಲಾಗಿದೆ ಎಂದು ಅನುಸಂಧಾನ ಮಾಡಿಕೊಳ್ಳಬೇಕು . ಅಥವಾ ಕ್ರತು ಮೊದಲಾದ ಪದಗಳ ಹಿಂದೆ ಹೇಳಲಾಗಿರುವ ರೂಢಾರ್ಥವನ್ನಿಟ್ಟುಕೊಂಡು '**ಅಹಂ ಕ್ರತುಃ**' ಎಂಬಿತ್ಯಾದಿ ಉಲ್ಲೇಖವಲ್ಲ, ರೂಢಾರ್ಥವೆನಿಸಿರುವ ಕ್ರತು ಮೊದಲಾದವುಗಳಿಂದ ಪರಮಾತ್ಮನು ಭಿನ್ನನಾಗಿರುವುದರಿಂದ. ಅವುಗಳ ಅಭೇದವನ್ನು ಇಟ್ಟುಕೊಳ್ಳುವುದು ಬಾಧಿತ ವೆನಿಸುತ್ತದೆ. ಹಾಗಾಗಿ '**ಅರ್ಚ್ಯತ್ವಾತ್ ಋಕ್, ಸಮತ್ವಾಚ್ಚ ನಿಜರೂಪೇಷು ಸಾಮ ಚ**' ಎಂಬಿತ್ಯಾದಿ ರೀತಿಯಲ್ಲಿ ಸ್ಮೃತಿಯು ಪ್ರಚುರಪಡಿಸುತ್ತಿರುವುದನ್ನು ಆಶ್ರಯಿಸಿ, ಗೀತಾತಾತ್ಪರ್ಯ ದಲ್ಲಿ ವ್ಯಾಖ್ಯಾನಿಸಲಾಗಿರುವಂತೆ ಆಯಾಯ ಪದಗಳ ಯೌಗಿಕಾರ್ಥವನ್ನು ಇಟ್ಟುಕೊಂಡು ಆಯಾಯಾ ಪದಗಳು ಅವನ ಹೆಸರಾಗಿವೆ ಎಂಬೀ ಅಭಿಪ್ರಾಯದಿಂದ ಈ ಎಲ್ಲಾ ಉಲ್ಲೇಖಗಳು ಪ್ರಸ್ತುತವಾಗಿವೆ ಎಂದಿಟ್ಟುಕೊಳ್ಳಬೇಕು. ಪರಮಾತ್ಮನಲ್ಲಿ ಅನ್ವಯಿಸುವಂತೆ ಈ ಪದಗಳ ಯೌಗಿಕಾರ್ಥವು ಹೀಗಿದೆ- ಪರಮಾತ್ಮನು ಕೃತಿ(ಪ್ರಯತ್ನ)ಸ್ವರೂಪನಾಗಿರುವುದರಿಂದ ಕ್ರತು ನಾಮಕನು. **ಯತ್ (ಅಸ್ತಿ ತತ್) ಜಾನಾತಿ**= **ಯತ್ + ಜ್ಞ** = **ಯಜ್ಞಃ**- ಯಾವುದು ಇದೆಯೇ, ಯಾವುದು ಪ್ರಾಮಾಣಿಕ ವಸ್ತುವೋ ಅವನ್ನೆಲ್ಲ ತಿಳಿದಿರುವವನಾದುದರಿಂದ ಅಂದರೆ- ಸರ್ವಜ್ಞನಾಗಿರುವುದುರಿಂದ ಯಜ್ಞನಾಮಕ. **ಸ್ವಂ**= ತನ್ನನ್ನು , **ಧಾ**= ಧತ್ತೇ (ಧಾರಣೆ ಮಾಡಿಕೊಂಡಿದ್ದಾನೆ- ಪರಾಧೀನನಲ್ಲ; ಸ್ವತಂತ್ರನು.) ಆದುದರಿಂದ ಸ್ವಧಾನಾಮಕನು. 'ದಾಹ' ಎಂಬೀ ಅರ್ಥದಲ್ಲಿರುವ 'ಉಷ' ಧಾತುವಿಗೆ ಕರ್ಮಕಾರಕಾರ್ಥದಲ್ಲಿ **ಘಞ್** ಪ್ರತ್ಯಯ ಸೇರಿದಾಗ ಔಷ ಶಬ್ದದ ನಿಷ್ಪತ್ತಿ. ಹಾಗಾಗಿ **ಔಷಃ** = **ಉಷ್ಟಾಃ**= **ದಗ್ಧಾಃ** = ತಾಪತ್ರಯದಗ್ಧರು. ಅವರಿಗೆ **ಧ**= ನಿಧಿ= ಆಶ್ರಯ. ಹಾಗಾಗಿ ಔಷಧನಾಮಕನು. **ಮಾನಾತ್**= **ಜ್ಞಾನಾತ್**- **ತ್ರಾತಿ(ತ್ರ)**- ತನ್ನ ಜ್ಞಾನವೆಂಬ ಸಾಧನೆಯ ಮೂಲಕ ಭಕ್ತರನ್ನು ರಕ್ಷಿಸುವವನು. ಹಾಗಾಗಿ ಮಂತ್ರನಾಮಕನು. **ಆ**= **ಸಮಂತಾತ್**= ಸಕಲಜಗತ್ತಿಗಿಂತ **ಜ್ಯಾಯಾನ್**= ಶ್ರೇಷ್ಠನು ಆಗಿರುವುದರಿಂದ - **ಆ +ಜ್ಯಾಯಾನ್ - ಆಜ್ಯ** ಎಂಬ ಹೆಸರುಳ್ಳವನು. **ಅಗಸ್ಯ** = ಸ್ವತಃ ಪ್ರವೃತ್ತಿ

(ಗಮನ) ರಹಿತವಾದ ಜಗತ್ತಿಗೆ ನೇತಾರನಾಗಿರುವುದರಿಂದ **ಅಗ + ನಿ - ಅಗ್ + ನಿ =** ಅಗ್ನಿನಾಮಕನು. ಯಜ್ಞಾದಿಕರ್ಮಗಳಲ್ಲಿ ಆಯಾಯದೇವತೆಗಳ ಅಂತರ್ಯಾಮಿಯಾಗಿದ್ದು, ಆಯಾಯ ದೇವತೆಗಳ ಹೆಸರುಗಳಿಂದ ಮುಖ್ಯವಾಗಿ ಆಹೂತನಾಗುವುದರಿಂದ= ಕರೆಸಿಕೊಳ್ಳಲ್ಪಡುತ್ತಿರುವುದರಿಂದ '**ಹುತ** ' ಎಂದೆನ್ನುವುದೂ ಅವನ ಹೆಸರು. **ಓಂ ಇತಿ ಆಕ್ರಿಯತೇ**= ಓಂ' ಎಂದು ಕರೆಸಿಕೊಳ್ಳಲ್ಪಡುತ್ತಿದ್ದಾನೆ. ಆದುದರಿಂದ 'ಓಂ' ಕಾರವು ಅವನ ನಾಮವೇ ಆಗಿದೆ. ಅರ್ಚ್ಯನಾದುದರಿಂದ – ಪೂಜ್ಯನಾದುದರಿಂದ 'ಋಕ್' ಎಂಬ ಹೆಸರುಳ್ಳವನೂ ಆಗಿರುವನು. ತನ್ನ ಎಲ್ಲಾ ರೂಪಗಳಲ್ಲಿ ತಾರತಮ್ಯವಿಲ್ಲದೆ ಸಮಾನತೆ ಉಳ್ಳವನಾದುದರಿಂದ ಸಾಮನಾಮಕನೂ ಆಗಿರುವನು. ಯಜ್ಞಗಳಲ್ಲಿ ಆಯಾಯ ದೇವತೆಗಳ ಅಂತರ್ಯಾಮಿಯಾಗಿ, **ಯಾಜ್ಯ**= ಪೂಜ್ಯನಾದುದರಿಂದ '**ಯಜುಸ್**' ಎಂದೆನ್ನುವುದು ಅವನ ಹೆಸರಾಗಿದೆ.

**ವಿವರಣೆ–** ಒಂದು ಪದವನ್ನು ಬಿಡಿಸದೆ ಅಖಂಡವಾಗಿ ತೆಗೆದುಕೊಂಡಾಗ ಅದು ಕೊಡುವ ಅರ್ಥ ರೂಢಾರ್ಥವೆನಿಸಿರುತ್ತದೆ. ಕ್ರತು ಮೊದಲಾದ ಪದಗಳು 'ಯಜ್ಞದೀಕ್ಷೆಯಿಂದ ಆರಂಭಿಸಿ ಕೊನೆಯ ಅವಭೃಥದ ತನಕದ ಕರ್ಮಸಮೂಹ' ಎಂಬಿತ್ಯಾದಿ ಅರ್ಥವನ್ನು ನೀಡುತ್ತಿರುವುದು ಈ ರೀತಿಯಿಂದ. ಹಾಗಾಗಿ ಅವು ರೂಢಾರ್ಥವೆನಿಸಿವೆ. ಪರಮಾತ್ಮನಿಗೂ ಆ ಅರ್ಥಗಳಿಗೂ ಭೇದವಿರುವುದರಿಂದ 'ಅಹಂ ಕ್ರತು ' ಎಂಬಿತ್ಯಾದಿ ರೀತಿಯಲ್ಲಿ ಅಭೇದವನ್ನು ಹೇಳುವುದು ತಪ್ಪೆನಿಸುತ್ತದೆ. ಹಾಗಾಗಿ ಇಂತಹ ತಪ್ಪಿಗೆ ಅವಕಾಶವಾಗದಂತೆ ಇಲ್ಲಿ ಅರ್ಥೈಸುವುದು ಅನಿವಾರ್ಯ. ಅದಕ್ಕಾಗಿ ಈ ಪದಗಳ ಯೌಗಿಕಾರ್ಥವನ್ನು ಇಟ್ಟುಕೊಳ್ಳಬೇಕಾಗಿವೆ. ಒಂದು ಪದವನ್ನು ಒಡೆದು ಅದರ ಬೇರೆ ಬೇರೆ ಭಾಗಗಳಿಂದ ಸಿಗುವ ಅರ್ಥಗಳನ್ನು ಜೋಡಿಸಿ ಪರಿಶೀಲಿಸಿದಾಗ ಸಿಗುವ ಅರ್ಥವನ್ನು ಆ ಪದದ ಯೌಗಿಕಾರ್ಥ ಎಂದೆನ್ನಲಾಗುವುದು. ***ಉದಾ :*** ಅಗ್ನಿಶಬ್ದ, ಇದನ್ನು ಒಡೆಯದೆ ಅಖಂಡವಾಗಿ ತೆಗೆದುಕೊಂಡಾಗ 'ಬೆಂಕಿ' ಎಂಬ ಅರ್ಥ ಸಿಗುತ್ತದೆ. ಇದನ್ನು ಅಗ್+ನಿ ಎಂದು ಬಿಡಿಸಿದಾಗ, ಗಮ್ ಧಾತುವಿನ ರೂಪವಾದ ಗ್ ಎನ್ನುವುದು ಚಲನೆಯುಳ್ಳ ವಸ್ತು ಎಂದು ಹೇಳುತ್ತದೆ. ನಿಷೇಧಾರ್ಥದಲ್ಲಿರುವ 'ಅ' ಎಂದೆನ್ನುವುದು ಅದರ ಹಿಂದಿರುವಾಗ ಅ+ಗ್ ಎಂದಾಗಿ ಅದು ಚಲನೆಯಿಲ್ಲದ ವಸ್ತುವನ್ನು ಹೇಳಿದಾಂತಾಯಿತು 'ನಿ' ಎಂದೆನ್ನುವುದು 'ಪ್ರೇರಣೆ' ಎಂಬ ಅರ್ಥದಲ್ಲಿರುವ 'ನೀ' ಧಾತುವಿನ ರೂಪವಾಗಿರುವುದರಿಂದ '**ಪ್ರೇರಕ**' ಎಂಬ ಅರ್ಥದಲ್ಲಿದೆ. ಹಾಗಾಗಿ ಅ+ಗ್ +ನಿ = ಚಲನೆಯಿಲ್ಲದ – ಸ್ವತಃ ಪ್ರವೃತ್ತಿ ಇಲ್ಲದ ಜಗತ್ತಿಗೆ ಪ್ರೇರಕ ಚಲನೆಯನ್ನು ತಂದುಕೊಡುವವನು ಎಂದರ್ಥವಾಗುತ್ತದೆ. ಹೀಗೆ ಅಗ್ನಿಶಬ್ದವನ್ನು ಒಡೆದು ಪರಿಶೀಲಿಸಿದಾಗ ಸಿಗುವ ಈ ಅರ್ಥವು ಆ ಪದದ ಯೌಗಿಕಾರ್ಥ. ಈ ಅರ್ಥಕ್ಕೂ ಪರಮಾತ್ಮನಿಗೂ ಅಭೇದವು ಸರಿಹೊಂದುವುದರಿಂದ 'ನಾನು ಅಗ್ನಿ' ಎಂದು ಹೇಳಿರುವುದು ಅಬಾಧಿತವೆನಿಸುತ್ತದೆ. ಇಂತಹ ಅರ್ಥ ಎಲ್ಲ ಪದಗಳಿಗಿವೆ.

ಆ ಅರ್ಥದಲ್ಲಿ ಅವು ಪರಮಾತ್ಮನ ಹೆಸರಾಗಿವೆ ಎಂದು ಅಭಿಪ್ರಾಯದಿಂದ **'ಅಹಂ ಕ್ರತುಃ'** ಎಂಬಿತ್ಯಾದಿ ಉಲ್ಲೇಖಗಳು ಪ್ರಸ್ತುತವಾಗಿವೆ ಎಂದೆನ್ನುವುದು ಗೀತಾವಿವೃತಿಯ ಹಾರ್ದವಾಗಿದೆ. ಆಚಾರ್ಯರ ಗೀತಾತಾತ್ಪರ್ಯವನ್ನು ಅನುಸರಿಸಿ ಈ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಿದೆ.

ಕ್ರತ್ವಾದಿ ರೂಢಾರ್ಥಗಳಲ್ಲಿರುವ, ಆ ಪದಗಳು ಆ ಅರ್ಥಗಳನ್ನು ಹೇಳಲು ಕಾರಣವೆನಿಸಿರುವ ಕ್ರತುತ್ವ ಮೊದಲಾದ ಪ್ರವೃತ್ತಿ ನಿಮಿತ್ತಧರ್ಮಗಳು ಪರಮಾತ್ಮನ ಅಧೀನವಾಗಿರುವುದರಿಂದ ಅವನೂ ಆ ಧರ್ಮಗಳುಳ್ಳವನು ಎಂದು ಇಟ್ಟುಕೊಳ್ಳಲು ಸಾಧ್ಯ . ಯುದ್ಧದಲ್ಲಿ ಜಯಗಳಿಸಿರುವವನು ಸಿಪಾಯಿ. ಹಾಗಾಗಿ ಅವನನ್ನು ಜಯಶಾಲಿ ಎನ್ನಲಾಗುವುದು . ಆ ಸಿಪಾಯಿಯು ಜಯಗಳಿಸಲು ಸಾಧ್ಯವಾದುದು, ರಾಜನು ಅವನನ್ನು ತನ್ನ ಸಿಪಾಯಿಯಾಗಿ ಅಂಗೀಕರಿಸಿ, ಪೋಷಿಸಿ, ಯುದ್ಧಕ್ಕೆ ಸನ್ನದ್ಧಗೊಳಿಸಿ ಕಳುಹಿಸಿರುವುದರಿಂದ ಹಾಗಾಗಿ ಅವನ ಆ ಜಯ ರಾಜನ ಅಧೀನ. ಹಾಗಾಗಿ 'ರಾಜನು ಜಯಶಾಲಿಯಾದ' ಎಂದು ಪ್ರಧಾನವಾಗಿ ವ್ಯವಹರಿಸುವುದು ಕಂಡಿದೆ. ರಾಜನಲ್ಲಿ **'ಸ್ವತಃ ಜಯಶಾಲಿ'** ಶಬ್ದದ ಪ್ರವೃತ್ತಿನಿಮಿತ್ತವಾದ ಜಯವು ಇಲ್ಲದಿದ್ದರೂ , ಸಿಪಾಯಿಯಲ್ಲಿರುವ ಆ ಜಯವು ರಾಜನ ಅಧೀನವಾದುದರಿಂದ ರಾಜನೂ ಆ ಜಯಕ್ಕೆ ಭಾಗಿಯಾಗಿರುವುದು ಕಂಡಿದೆಯಷ್ಟೆ. ಹಾಗೆಯೇ, ಕ್ರತ್ವಾದಿರೂಢಾರ್ಥಗಳಲ್ಲಿರುವ ಕ್ರತುತ್ವಾದಿ ಧರ್ಮಗಳು, ಪರಮಾತ್ಮನ ಅಧೀನವೆನಿಸಿರುವುದರಿಂದ, ಅವನಲ್ಲೂ ಇದ್ದಂತಾಗಿ ಅವನೂ ಕ್ರತ್ವಾದಿನಾಮಕನೆನಿಸಿರುವನು. ಹಾಗಾಗಿ ಆ ಪದಗಳ ರೂಢಾರ್ಥವನ್ನು ಇಟ್ಟುಕೊಂಡು ಹೊರಟ ಆಚಾರ್ಯರ ಗೀತಾಭಾಷ್ಯಾನುಸಾರಿ ಅಭಿಪ್ರಾಯವನ್ನು ಗೀತಾವಿವೃತಿಕಾರರು ತಮ್ಮ ಮೊದಲನೆಯ ವ್ಯಾಖ್ಯಾನದಲ್ಲಿ ಮುಂದಿಟ್ಟದ್ದಾರೆ. ॥ 17 ॥

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥ 18 ॥**

**ಅರ್ಥ–** ನಾನು, ಗತಿ, ಭರ್ತೃ, ಪ್ರಭು, ಸಾಕ್ಷಿ, ನಿವಾಸ, ಶರಣ, ಸುಹೃತ್, ಪ್ರಭವ ಪ್ರಲಯ, ಸ್ಥಾನ, ನಿಧಾನ, ಅವ್ಯಯಂ, ಇವೆಲ್ಲವೂ ಆಗಿರುವೆನು.

**ಮುಮುಕ್ಷುಭಿರವಗಮ್ಯತ್ವಾದ್ಗತಿಃ । ಭರ್ತಾ ಪೋಷಕಃ । ಪ್ರಭುಃ ಸ್ವಾಮೀ । ಸಾಕ್ಷಾತ್ಸರ್ವಮೀಕ್ಷತ ಇತಿ ಸಾಕ್ಷೀ । ನಿವಾಸಃ ಆಶ್ರಯಃ । ಶರಣಂ ಭೀತರಕ್ಷಕಃ । ಮುಕ್ತಾಶ್ರಯ ಇತಿ ಯಾವತ್ । ಸುಹೃದನಿಮಿತ್ತೋಪಕಾರೀ । ಪ್ರಭವಃ ಜಗದುತ್ಪತ್ತಿ-ಕರ್ತಾ । ಪ್ರಲಯಕರ್ತೃತ್ವಾತ್ ಪ್ರಲಯೋಽಹಮ್ । ಸ್ಥಾನಂ ಸರ್ವಾಧಾರೋಽ-ಹಮ್ । ನಿತರಾಂ ಧಾರಕತ್ವಾದ್ವಾ ಪ್ರಲಯಕಾಲೇ ಪ್ರಕೃತ್ಯಾದಿಜಗದತ್ರ ನಿಧೀ-**

**ಯತ ಇತಿ ವಾ ನಿಧಾನಮ್ । ತೇನ 'ಪ್ರಕೃತಿಂ ಯಾಂತಿ ಭೂತಾನಿ ಇತುಕ್ತ್ಯ-ವಿರೋಧಃ । ಜಗದ್ವ್ಯಂಜಕತ್ವಾದ್ ಬೀಜಮ್ । ತಥಾತ್ವೇಽಪಿ ಅವಿಕಾರಿತ್ವ-ಪ್ರದರ್ಶನಾಯೋಕ್ತಮವ್ಯಯಮಿತಿ ॥ 18 ॥**

**ಅನುವಾದ–** ಮೋಕ್ಷಾಭಿಲಾಷಿಗಳಿಂದ ಗಮ್ಯನಾಗಿರುವುದರಿಂದ, ಅವಶ್ಯವಾಗಿ ತಿಳಿಯಲ್ಪಡಬೇಕಾದವನಾದುದರಿಂದ ನಾನು ಗತಿನಾಮಕನು . **ಭರ್ತಾ**= ಜಗತ್ತಿನ ಪೋಷಕ. **ಪ್ರಭುಃ**= ಜಗತ್ತಿನ ಸ್ವಾಮಿ. ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡುತ್ತಿರುವುದರಿಂದಾಗಿ ಸಾಕ್ಷಿ ಎನಿಸಿರುವೆನು. **ನಿವಾಸಃ** = ಜಗತ್ತಿನ ಆಶ್ರಯ . **ಶರಣಂ** = ಭೀತರಾದವರನ್ನು ರಕ್ಷಿಸುವವನು. ಸಂಸಾರ ಭೀತರನ್ನು ಸಂಸಾರದಿಂದ ಪಾರು ಮಾಡುವ ಮೂಲಕ ಮುಕ್ತರಿಗೆ ಆಶ್ರಯನಾಗಿರುವವನು ಎಂದು ಇದರ ಅಭಿಪ್ರಾಯ. **ಸುಹೃತ್**= ಯಾವುದೇ ಫಲಾಪೇಕ್ಷೆಯಿಲ್ಲದೆ ಉಪಕಾರ ಮಾಡುವವನು. **ಪ್ರಭವಃ**= ಜಗತ್ತಿನ ಉತ್ಪತ್ತಿ ಕರ್ತೃ. ಪ್ರಲಯಕರ್ತನಾಗಿರುವುದರಿಂದ '**ಪ್ರಲಯೋಽಹಂ**' ಎಂದೆನ್ನಲಾಗಿದೆ. **ಅಹಂ ಸ್ಥಾನಂ**= ನಾನು ಸರ್ವಾಧಾರನಾಗಿರುವೆನು . **ನಿತರಾಂ ಧಾರಕತ್ವಾತ್**= ಸ್ವಲ್ಪವೂ ಕೊರತೆಯುಂಟಾಗದಂತೆ ಚೆನ್ನಾಗಿ ಪೋಷಿಸುತ್ತಿರುವುದರಿಂದ **ನಿ + ಧಾನಂ** = ನಿಧಾನ ನಾಮಕನು. ಅಥವಾ ಪ್ರಲಯಕಾಲದಲ್ಲಿ ಪ್ರಕೃತ್ಯಾದಿಜಗತ್ತು ಈ ನನ್ನಲ್ಲಿ (ಪರಮಾತ್ಮನಲ್ಲಿ) ಆಶ್ರಿತವಗಿರುತ್ತದೆ. ಆದುದರಿಂದ ನಾನು ನಿಧಾನನಾಮಕನಾಗಿರುವೆನು. ಪ್ರಲಯಕಾಲದಲ್ಲಿ ಜಗತ್ತು ಮೊದಲು ಪ್ರಕೃತಿಯಲ್ಲಿ ಲೀನವಾಗಿ ನಂತರ ಅದರ ಜೊತೆ ಪರಮಾತ್ಮನಲ್ಲಿ ಆಶ್ರಿತ ವಾಗಿರುತ್ತದೆ ಎಂದಿದರ ಅಭಿಪ್ರಾಯ. ಹಾಗಾಗಿ ಪ್ರಲಯಕಾಲದಲ್ಲಿ ಜಗತ್ತು ಪರಮಾತ್ಮನಲ್ಲಿ ಆಶ್ರಿತವಾಗಿರುತ್ತದೆ ಎಂದನ್ನುವುದಕ್ಕೆ '**ಕಲ್ಪಕ್ಷಯೇ ಸರ್ವಭೂತಾನಿ ಪ್ರಕೃತಿಂ ಯಾಂತಿ**' – ಪ್ರಲಯ ಕಾಲದಲ್ಲಿ ಜಗತ್ತು ಪ್ರಕೃತಿಯಲ್ಲಿ ಲೀನವಾಗುತ್ತದೆ– ಎಂಬೀ (ಗೀ.ತಾ.9.7) ಮಾತಿನ ವಿರೋಧ ವಿಲ್ಲ. ಪ್ರಕೃತಿಯಲ್ಲಿ ಲೀನವಾಗಿರುವ ಜಗತ್ತನ್ನು ಸೃಷ್ಟಿಕಾಲದಲ್ಲಿ ಅಭಿವ್ಯಕ್ತಗೊಳಿಸುವವನಾದು ದರಿಂದ ಬೀಜನಾಮಕನೂ ನಾನು. ಬೀಜನೆನಿಸಿದ್ದರೂ ಪ್ರಾಕೃತ ಬೀಜಗಳಂತೆ ವಿಕಾರವುಳ್ಳವನಲ್ಲ ಎಂದೆನ್ನುವುದನ್ನು ಪ್ರಚುರಪಡಿಸಲು '**ಅವ್ಯಯಂ** (ಬೀಜಂ)= ವ್ಯತ್ಯಾಸ ಹೊಂದದ ನಿರ್ವಿಕಾರಿ ಯಾದ ಬೀಜ ಎಂದೆನ್ನಲಾಗಿದೆ. ॥ 18 ॥

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ 19 ॥**

**ಅರ್ಥ** – ನಾನು ಆದಿತ್ಯನಲ್ಲಿದ್ದು ತಾಪವನ್ನು ಉಂಟುಮಾಡುತ್ತೇನೆ. ಮೋಡದಲ್ಲಿದ್ದು ಮಳೆಯನ್ನು ಸುರಿಸುತ್ತೇನೆ ಹಾಗೂ ತಡೆಹಿಡಿಯುತ್ತೇನೆ. ನಾನು ಅಮೃತನೆನಿಸಿರುವೆನು. ಮೃತ್ಯುನಾಮಕನೂ ಆಗಿರುವೆನು. ನಾನು '**ಸತ್**' ಎಂದೂ '**ಅಸತ್**' ಎಂದು ಕರೆಯಲ್ಪಡುತ್ತಿರುವೆನು.

**ಕಿಂಚಾಹಮಾದಿತ್ಯಸ್ಥಸ್ತಪಾಮಿ ತಾಪಂ ಕರೋಮಿ । ಮೇಘಚಕ್ರಗತಃ ಸನ್ ವರ್ಷಂ ವೃಷ್ಟಿಂ ಉತ್ಸೃಜಾಮಿ ನಿಗೃಹ್ಣಾಮಿ ಉಪಸಂಹರಾಮಿ । ಅಹಮಿಂದ್ರಿಯೇಷು ಸ್ಥಿತ್ವಾ ತೇಷಾಂ ದೇಹಧಾರಣೇನ ಮೃತಿಂ ಪರಿಹರತೀತಿ ಹೇತೋರಮೃತಂ ಅಹಮ್ । ಪ್ರಲಯಕಾಲಾದನ್ಯಕಾಲೇ ಸಂಹರ್ತೃತ್ವಾತ್ ಮೃತ್ಯುರಹಮ್ । ಸತ್ಕಾರ್ಯಜಾತಮಹಮ್ । ಅಸಚ್ಚ ಕಾರಣಜಾತಮಹಮೇವ । ತನ್ನಿಯಂತೃತ್ವಾದೇರಭೇದೋಕ್ತಿಃ । ಅಹಮಿತ್ಯಸಕೃದುಕ್ತಿರುಪಚಾರನಿವೃತ್ತ್ಯರ್ಥಾ । ಯದ್ವಾ ಸಾಧುಗುಣಪೂರ್ಣತ್ವಾತ್ ಸದಿತ್ಯುಕ್ತೋಽಹಮ್ । ಸಾಧುಗುಣಪೂರ್ಣಪುರುಷಾಂತರರಾಹಿತ್ಯಾದ್ಸದಿತ್ಯುಕ್ತೋಽಹಮೇವೇತ್ಯರ್ಥಃ ॥ 19 ॥**

**ಅನುವಾದ–** ಇಷ್ಟೇ ಅಲ್ಲದೆ **ಅಹಂ ತಪಾಮಿ** = ನಾನು ಸೂರ್ಯನಲ್ಲಿದ್ದು ತಾಪವನ್ನುಂಟು ಮಾಡುತ್ತೇನೆ. ಮೇಘ ಸಮೂಹದಲ್ಲಿದ್ದು **ವರ್ಷಂ ಉತ್ಸೃಜಾಮಿ**= ಮಳೆಯನ್ನು ಸುರಿಸುತ್ತೇನೆ. **ವರ್ಷಂ ನಿಗೃಹ್ಣಾಮಿ**= ಉಪಸಂಹರಾಮಿ ಮೋಡವು ಮಳೆಸುರಿಸುವುದನ್ನು ನಿಲ್ಲಿಸುವಂತೆ ಮಾಡುತ್ತೇನೆ. ಇಂದ್ರಿಯಗಳಲ್ಲಿದ್ದು ದೇಹಧಾರಣೆಯನ್ನು ಮಾಡಿಸುವ ಮೂಲಕ ಅವುಗಳಿಗೆ ಮರಣವನ್ನು ಪರಿಹರಿಸುವೆನು ಎಂಬ ಕಾರಣದಿಂದ ನಾನು ಅಮೃತನಾಮಕನಾಗಿರುವೆನು . ಪ್ರಲಯಕಾಲಕ್ಕಿಂತ ಇತರ ಕಾಲದಲ್ಲಿ ಸಂಹಾರ– ಕರ್ತೃವೆನಿಸಿರುವುದರಿಂದ ಮೃತ್ಯುನಾಮಕನೂ ಆಗಿರುವೆನು. ನಾನು **ಸತ್**= ಕಾರ್ಯಸಮೂಹ ಆಗಿರುವೆನು. **ಅಸತ್ ಚ**= ಕಾರಣಸಮೂಹವೂ ಆಗಿರುವೆನು. ಕಾರ್ಯಸಮೂಹ ಹಾಗೂ ಕಾರಣಸಮೂಹಕ್ಕೆ ಪರಮಾತ್ಮನು ನಿಯಾಮಕ ನಾಗಿರುವುದು ಎಂಬಿತ್ಯಾದಿ ಕಾರಣದಿಂದ ಅವನಲ್ಲಿ ಅವುಗಳ ಅಭೇದವನ್ನು ಔಪಚಾರಿಕವಾಗಿ ಹೇಳಲಾಗಿದೆ. **ಅಹಂ** ಎಂದು ಪುನಃ ಪುನಃ ಹೇಳುತ್ತಿರುವುದು. ಇದೆಲ್ಲಾ ಬರೇ ಉಪಚಾರದ ಮಾತಲ್ಲ. ಮುಖ್ಯಾರ್ಥದಲ್ಲೇ ಇವೆ ಎಂದೆನ್ನುವುದನ್ನು ಸೂಚಿಸುವ ಉದ್ದೇಶದಿಂದ ಅಥವಾ ಗೀತಾತಾತ್ಪರ್ಯದಲ್ಲಿ ಹೇಳಲಾಗಿರುವಂತೆ ಸಾಧುಗುಣಪೂರ್ಣನಾದುದರಿಂದ '**ಸತ್**' ಎಂದೂ ಹೇಳಲ್ಪಡುತ್ತಿರುವವನು ನಾನೇ ಆಗಿರುವೆನು ; ನನಗಿಂತ ಇತರನಾದ ಸಾಧುಗುಣ ಪೂರ್ಣಪುರುಷನು ಇಲ್ಲದಿರುವುದರಿಂದ '**ಅಸತ್**' ಎಂದು ಹೇಳಲ್ಪಡುತ್ತಿರುವವನೂ ನಾನೇ ಆಗಿರುವೆನು ಎಂದೆನ್ನುವುದು '**ಸದಸಚ್ಚಾಹಂ**' ಎಂಬ ಮಾತಿನ ಅಭಿಪ್ರಾಯವಾಗಿದೆ. ॥ 19 ॥

## ತ್ರೈವಿದ್ಯರ ಹಾಗೂ ಭಾಗವತರ ಕರ್ಮಫಲದಲ್ಲಿ ವ್ಯತ್ಯಾಸ ಯಾಕೆ ? ಹೇಗೆ ?

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।**

**ತೇ ಪುಣ್ಯಮಾಸಾದ್ಯ ಸುರೇಂದ್ರಲೋಕಮ್**
**ಅಶ್ನಂತಿ ದಿವ್ಯಾನ್ ದಿವಿ ದೇವಭೋಗಾನ್ ॥ 20 ॥**

**ಅರ್ಥ–** ತ್ರೈವಿದ್ಯರು ನನ್ನನ್ನು ಪೂಜಿಸಿ– ಅಂದರೆ ಇತರ ಆಯಾಯ ದೇವತೆಗಳನ್ನು ಉದ್ದೇಶಿಸಿ ಯಾಗ ಮಾಡಿ ಕೊನೆಯಲ್ಲಿ ಆ ಕರ್ಮವನ್ನು ನನ್ನಲ್ಲಿ ಸಮರ್ಪಿಸಿ, ಹೋಮಿಸಿ ಉಳಿದ ಸೋಮರಸವನ್ನು ಪಾನಮಾಡಿದವರಾಗಿ, ಆದುದರಿಂದಲೇ ಪಾಪರೂಪಕಲ್ಮಷವನ್ನು ಕಳೆದುಕೊಂಡವರಾಗಿ ಸ್ವರ್ಗಾದಿಮಾರ್ಗವನ್ನು ಅನುಗ್ರಹಿಸುವಂತೆ ನನ್ನನ್ನು ಪ್ರಾರ್ಥಿಸುತ್ತಾರೆ. ಅವರು ಪುಣ್ಯದಿಂದ ದೊರಕಬಹುದಾದ ಸುರೇಂದ್ರಲೋಕವೆನಿಸಿರುವ ಸ್ವರ್ಗವನ್ನು ಹೊಂದಿ, ಆ ಸ್ವರ್ಗಲೋಕದಲ್ಲಿ ಲಭಿಸಬಹುದಾದ ಅಲೌಕಿಕ ಭೋಗಗಳನ್ನು ಅನುಭವಿಸುತ್ತಾರೆ.

**ನನು ಸರ್ವಯಜ್ಞಾದಿಭೋಕ್ತೃತ್ವಾದಿನಾಽಹಂಕ್ರತುರಿತ್ಯಾದ್ಯುಕ್ತಿರಿತಿ ಪ್ರಥಮ-ವ್ಯಾಖ್ಯಾನಂ ಯತ್ತದಯುಕ್ತಮ್ । ತಥಾತ್ವೇ ತ್ರೈವಿದ್ಯಕೃತಯಜ್ಞಭೋಕ್ತೃತ್ವಸ್ಯಾಪಿ ಪ್ರಾಪ್ತ್ಯಾ ತೇಷಾಂ ಭಾಗವತಾನಾಂ ಚ ಫಲಭೇದೋ ನ ಸ್ಯಾತ್ । ಭಗವದ್-ಭೋಗನಿಮಿತ್ತಕತ್ವಾತ್ ಕರ್ಮಫಲಸ್ಯ ತಸ್ಯ ಚ ಸರ್ವತ್ರ ಸಾಮ್ಯಾತ್ । ಇತ್ಯತೋ ಭಾಗವತಾನುಷ್ಠಿತಭಗವದ್‌ಭಜನಸ್ಯ ತ್ರೈವಿದ್ಯಕೃತಯಜ್ಞಫಲಾದಪ್ಯತಿಶಯಫಲ-ಮಾಹ– ತ್ರೈವಿದ್ಯೇತ್ಯಾದಿತ್ರಯೇಣ ॥ ತಿಸ್ರೋ ವಿದ್ಯಾ ಋಗ್ಯಜುಃಸಾಮಲಕ್ಷಣಾ ಯೇಷಾಂ ತೇ ತ್ರಿವಿದ್ಯಾಃ । ತ ಏವ ತ್ರೈವಿದ್ಯಾಃ । ವಿಷ್ಣುಂ ಸರ್ವೋತ್ತಮಂ ಜ್ಞಾತ್ವಾಽಪಿ ತ್ರಯ್ಯಾಂ ಮುಖತಃ ಪ್ರತೀಯಮಾನಸ್ವರ್ಗಾದ್ಯುದ್ದೇಶ್ಯಕಾನ್ಯದೇವತಾ-ಯಜನಂ ಬುಧ್ವಾ ತಥೈವಾನುಷ್ಠಾಯಾಂತೇ ವಿಷ್ಣೌ ಸಮರ್ಪಣಂ ಕುರ್ವಂತಃ ತ್ರೈವಿದ್ಯಾಃ ಮಾಂ ಯಜ್ಞೈರಿಷ್ಟ್ವಾಽಂತೇ ಮಯಿ ಸಮರ್ಪ್ಯ ಸೋಮಪಾಃ ಹುತ-ಶೇಷಸೋಮರಸಪಾನವಂತೋಽತ ಏವ ಪೂತಪಾಪಾಃ ಶೋಧಿತಕಲ್ಮಷಾಃ ಸಂತಃ ಸ್ವರ್ಗತಿಂ ಸ್ವರ್ಗಮಾರ್ಗಮ್ । ಸ್ವರಾಖ್ಯಪ್ರಾಪ್ಯಂ ವಾ ಪ್ರತಿ । ಮಾಂ ಪ್ರಾರ್ಥ-ಯಂತೇ । ತೇ ಪುಣ್ಯಂ ಪುಣ್ಯಲಭ್ಯಂ ಸುರೇಂದ್ರಲೋಕಂ ಸ್ವರ್ಗಮಾಸಾದ್ಯ ಪ್ರಾಪ್ಯ ದಿವಿ ಸ್ವರ್ಗೇ ದಿವ್ಯಾನ್ ದ್ಯುಲೋಕಭವಾನ್ । ಅಲೌಕಿಕಾನಿತಿ ವಾ ಭೋಗಾನಶ್ನಂತಿ ಭುಂಜತೇ ॥ 20 ॥**

**ಅನುವಾದ–** ಅಹಂ ಕ್ರತುರಹಂ ಯಜ್ಞಃ ಎಂಬಿತ್ಯಾದಿ ಶ್ಲೋಕಕ್ಕೆ ಎರಡು ರೀತಿಯಲ್ಲಿ ವ್ಯಾಖ್ಯಾನಿಸಲಾಗಿದೆ. ಮೊದಲ ವ್ಯಾಖ್ಯಾನದಲ್ಲಿ 'ನಾನು ಯಜ್ಞಾದಿಗಳಿಗೆ ಸಂಬಂಧಿಸಿದ ಭೋಕ್ತೃವಾಗಿರುವುದರಿಂದ ಕ್ರತುವಾಗಿರುವೆನು ಎಂದು ಅರ್ಥೈಸಲಾಗಿದೆ. ಹೀಗೆ ಎಲ್ಲಾ ಯಜ್ಞ

ಭೋಕ್ತೃವೆಂದಾದರೆ ಭಾಗವತರು ಮಾಡಿದ ಯಜ್ಞದಂತೆ ತ್ರೈವಿದ್ಯರು ಮಾಡಿದ ಯಜ್ಞದಲ್ಲೂ ಪರಮಾತ್ಮನೇ ಭೋಕ್ತೃವೆಂದಾಗಿ ಇಬ್ಬರಿಗೂ ಒಂದೇ ರೀತಿಯ ಫಲವು ದೊರಕಬೇಕಾದೀತು. ಭಾಗವತರಿಗೆ ಕರ್ಮಫಲವಾಗಿ ಮೋಕ್ಷಸಿಗಲು ನಿಮಿತ್ತ ಅವರ ಯಜ್ಞಾದಿಕರ್ಮದಲ್ಲಿ ಭಗವಂತನ ಭೋಗವಿರುವುದು. ಅದು ತ್ರೈವಿದ್ಯರ ಕರ್ಮದಲ್ಲೂ ಇದೆ ಎಂದಾದ ಮೇಲೆ ಅವರಿಗೂ ಭಾಗವತರ ಕರ್ಮಫಲವೇ ಸಿಗಬೇಕಾಗುತ್ತದೆ; ಬೇರೆ ಫಲವಲ್ಲ. (ಆದರೆ ವಾಸ್ತವಿಕವಾಗಿ ಹಾಗೆ ಇಲ್ಲ) ಹಾಗಾಗಿ ಈ ವ್ಯಾಖ್ಯಾನ ಸರಿಯಲ್ಲ ಎಂಬ ಆಕ್ಷೇಪವನ್ನು ಪರಿಹರಿಸಲು '**ತ್ರೈವಿದ್ಯಾಃ ಮಾಂ ಸೋಮಪಾಃ**' ಎಂಬಿತ್ಯಾದಿ ಮೂರು ಶ್ಲೋಕಗಳಲ್ಲಿ ಭಾಗವತರು ಅನುಷ್ಠಾನಗೈಯುವ ಪರಮಾತ್ಮ ಸೇವೆಗೆ ತ್ರೈವಿದ್ಯರು ಅನುಷ್ಠಾನಗೈಯುವ ಕರ್ಮದ ಫಲಕ್ಕಿಂತಲೂ ಹೆಚ್ಚಿನ ಫಲವನ್ನು ಹೇಳಲಾಗುತ್ತದೆ. ಋಗ್ವೇದ, ಯಜುರ್ವೇದ ಸಾಮವೇದ ಎಂಬ ಮೂರು ವಿದ್ಯೆಗಳು ಯಾರಿಗೆ ಇವೆಯೋ ಅವರು ತ್ರಿವಿದ್ಯರು. ಈ ತ್ರಿವಿದ್ಯರೇ ತ್ರೈವಿದ್ಯರು ಎಂದು ಕರೆಸಿಕೊಳ್ಳಲ್ಪಡುತ್ತಿದ್ದಾರೆ. ವಿಷ್ಣುವನ್ನು ಸರ್ವೋತ್ತಮನೆಂದು ಅಂಗೀಕರಿಸಿಯೂ ಮೂರು ವೇದಗಳನ್ನು ಮೇಲಿಂದ ಮೇಲೆ ನೋಡಲಾಗಿ, ಅವುಗಳಲ್ಲಿ ಹೇಳಲ್ಪಟ್ಟಂತೆ ಕಾಣುವುದಕ್ಕೆ ಅನುಗುಣವಾಗಿ 'ಯಾಗವು ಸ್ವರ್ಗಾದಿ ಫಲವನ್ನು ಉದ್ದೇಶಿಸಿಕೊಂಡಿರುವ ಕರ್ಮ ; ಅದು ವಿಷ್ಣುವಿಗಿಂತ ಇತರರಾದ ಇಂದ್ರಾದಿದೇವತೆಗಳಿಗೆ ಸಂಬಂಧಿಸಿದ ಪೂಜೆ' ಎಂದು ಅರಿತು, ಅದರಂತೆ ಸ್ವರ್ಗಾದಿಫಲವನ್ನು ಉದ್ದೇಶಿಸಿ ಇಂದ್ರಾದಿದೇವತೆಗಳನ್ನು ಪೂಜಿಸುತ್ತ ಯಾಗವನ್ನು ಪೂರೈಸಿ ಕೊನೆಗೆ ತಮ್ಮ ಆಯಾಯ ಕರ್ಮವನ್ನು ವಿಷ್ಣುವಿಗೆ ಯಾರು ಸಮರ್ಪಿಸುತ್ತಾರೋ ಅವರು ತ್ರೈವಿದ್ಯರು. ಇವರು **ಮಾಂ ಯಜ್ಞೈಃ ಇಷ್ಟ್ವಾ**= ಯಾಗಗಳ ಕೊನೆಯಲ್ಲಿ ಆಯಾಯ ಕರ್ಮವನ್ನು ನನ್ನಲ್ಲಿ ಸಮರ್ಪಿಸಿ, **ಸೋಮಪಾಃ**= ಆಹುತಿ ಕೊಟ್ಟ ಮೇಲೆ ಉಳಿದ ಸೋಮರಸವನ್ನು ಕುಡಿದವರಾಗಿ ಆದುದರಿಂದಲೇ **ಪೂತಪಾಪಾಃ**= ಪಾಪರೂಪಕಲ್ಮಷವನ್ನು ತೊಳೆದುಕೊಂಡವರಾಗಿ, **ಸ್ವರ್ಗತಿಂ**= ಸ್ವರ್ಗದ ಮಾರ್ಗವನ್ನು ಅಥವಾ 'ಸ್ವಃ' ಎಂಬ ಹೆಸರುಳ್ಳ, ತಾವು ಹೊಂದಬಯಸಿರುವ ಸ್ಥಾನ (ಸ್ವರ್ಗಲೋಕ) ಉದ್ದೇಶಿಸಿ ನನ್ನನ್ನು 'ದಯವಿಟ್ಟು ಅನುಗ್ರಹಿಸು' ಎಂದು ಪ್ರಾರ್ಥಿಸುತ್ತಾರೆ. ಅವರು **ಪುಣ್ಯಂ**= ಪುಣ್ಯದಿಂದ ಹೊಂದಲು ಸಾಧ್ಯವಾದ, **ಸುರೇಂದ್ರ ಲೋಕಂ** = ಸ್ವರ್ಗವನ್ನು, **ಆಸಾದ್ಯ** = ಹೊಂದಿ, **ದಿವಿ**= ಆ ಸ್ವರ್ಗದಲ್ಲಿ, **ದಿವ್ಯಾನ್**= ಸ್ವರ್ಗಲೋಕದಲ್ಲಷ್ಟೇ ದೊರಕುವ ಅಲೌಕಿಕವಾದ ಭೋಗಗಳನ್ನು , **ಅಶ್ನಂತಿ**= ಅನುಭವಿಸುತ್ತಾರೆ. ।। 20 ।।

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾ**
**ಗತಾಗತಂ ಕಾಮಕಾಮಾ ಲಭಂತೇ ।। 21 ।।**

**ಅರ್ಥ–** ಆ ತ್ರೈವಿದ್ಯರು ವಿಪುಲವಾದ ಸ್ವರ್ಗಸುಖವನ್ನು ಅನುಭವಿಸಿ, ಅದಕ್ಕೆ ಕಾರಣವಾದ ಪುಣ್ಯವು ಕಡಿಮೆಯಾಗುತ್ತಿರಲು ಭೂಲೋಕವನ್ನು ಪ್ರವೇಶಿಸುತ್ತಾರೆ. ಪುನಃ ಇದೇ ರೀತಿಯಲ್ಲಿ ಮೂರುವೇದಗಳಲ್ಲಿ ಹೇಳಲಾಗಿರುವ ಧರ್ಮವನ್ನು ಅನುಷ್ಠಾನಗೈದವರಾಗಿ, ವಿಷಯ ಭೋಗವನ್ನು ಇಚ್ಛಿಸುವವರಾಗಿ 'ಸ್ವರ್ಗಕ್ಕೆ ಹೋಗುವುದು, ಹಿಂದಿರುಗಿ ಭೂಮಿಗೆ ಬರುವುದು' ಎಂಬ ರೀತಿಯ ಅವಸ್ಥೆಯನ್ನು ಹೊಂದಿರುತ್ತಾರೆ.

**ಕಿಂಚ ತೇ ಸ್ವರ್ಗಕಾಮೇನಾನ್ಯದೇವತಾಯಾಜಿನಸ್ತಂ ವಿಶಾಲಂ ವಿಪುಲಂ ಸ್ವರ್ಗ-ಸುಖಂ ಭುಕ್ತ್ವಾ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ಭೂಲೋಕಂ ಭುಕ್ತಾವಶಿಷ್ಟ-ಪುಣ್ಯಯುಕ್ತಾಃ ಸಂತಃ ವಿಶಂತಿ । ತದಾಹ ಸೂತ್ರೇ 'ಓಂ ಕೃತಾತ್ಯಯೇಽನು-ಶಯವಾನ್ ದೃಷ್ಟಸ್ಮೃತಿಭ್ಯಾಮ್ ಓಂ' (3-1-8) ಇತಿ । ಪುನರಪ್ಯೇವಂ ತ್ರಯೀ-ಧರ್ಮಂ ವೇದೋಕ್ತಂ ಧರ್ಮಮನುಪ್ರಪನ್ನಾ ಅನುತಿಷ್ಠಂತಃ ಕಾಮಕಾಮಾಃ ಭೋಗೇಚ್ಛವಃ ಗತಾಗತಮ್ । ದ್ವಂದ್ವೈಕವದ್ಭಾವಃ । ಗತೇನ ಸಹಿತಂ ಆಗತಮಿತಿ ವಾ । ಸ್ವರ್ಗಂ ಪ್ರತಿ ಗಮನಂ ತತೋ ಮರ್ತ್ಯಲೋಕಂ ಪ್ರತ್ಯಾಗಮನಂ ಚ ಲಭಂತೇ । ನ ಕದಾಽಪ್ಯಪುನರಾವೃತ್ತಿಂ ಪ್ರಾಪ್ನುವಂತೀತ್ಯರ್ಥಃ ॥ 21 ॥**

**ಅನುವಾದ–** ಇಷ್ಟೇ ಅಲ್ಲದೆ, **ತೇ**= ಸ್ವರ್ಗಾದಿಕಾಮನೆಯಿಂದ ಇತರ ದೇವತೆಗಳನ್ನು ಯಾಗದಲ್ಲಿ ಪೂಜಿಸುವ ಆ ತ್ರೈವಿದ್ಯರು, ಆ **ವಿಶಾಲಂ**= ವಿಪುಲವಾದ. **ಸ್ವರ್ಗಲೋಕಂ**= ಸ್ವರ್ಗಸುಖವನ್ನು ಅನುಭವಿಸಿ ಪುಣ್ಯವು ಕಡಿಮೆಗೊಂಡಾಗ **ಮರ್ತ್ಯ ಲೋಕಂ**= ಭೂಲೋಕ ವನ್ನು ಅನುಭವಿಸಿ ಉಳಿದ ಪುಣ್ಯ ಸಹಿತರಾಗಿ ಪ್ರವೇಶಿಸುತ್ತಾರೆ. 'ಸ್ವರ್ಗದಿಂದ ಹಿಂದಿರುಗುವಾಗ ಪುಣ್ಯಶೇಷಸಹಿತರಾಗಿ ಹಿಂದಿರುಗುತ್ತಾರೆ' ಎಂದೆನ್ನುವುದನ್ನು **'ಕೃತಾತ್ಯಯೇಽನುಶಯವಾನ್ ದೃಷ್ಟಶ್ರುತಿಭ್ಯಾಮ್'** ಶ್ರುತಿ ಹಾಗೂ ಸ್ಮೃತಿಗಳು ಪ್ರಚುರ ಪಡಿಸುತ್ತಿರುವಂತೆ ಪುಣ್ಯಕ್ಷಯವಾದಾಗ ಪುಣ್ಯಶೇಷವುಳ್ಳವನಾಗಿಯೇ ಹಿಂದಿರುಗುತ್ತಾನೆ– ಎಂದು ಬ್ರಹ್ಮಸೂತ್ರಕಾರರು ನಿರೂಪಿಸಿ ರುವರು. ಪುನಃ ಪುನಃ ಇದೇ ರೀತಿಯಲ್ಲಿ **ತ್ರಯೀಧರ್ಮಂ**= ವೇದಗಳಲ್ಲಿ ಹೇಳಲ್ಪಟ್ಟಿರುವ ಧರ್ಮವನ್ನು, **ಅನುಪ್ರಪನ್ನಾಃ**= ಅನುಷ್ಠಾನಗೈದವರಾಗಿ, **ಕಾಮಕಾಮಾಃ**= ವಿಷಯಭೋಗದಲ್ಲಿ ಇಚ್ಛೆಯುಳ್ಳವರಾಗಿ. **ಗತಂ ಚ ಆಗತಂ ಚ ಗತಾಗತಂ** ಎಂದು ದ್ವಂದ್ವ ಸಮಾಸವಾಗಿ ಏಕವದ್ ಭಾವ (ಹಾಗಾಗಿ 'ಗತಾಗತೇ' ಎಂದು ದ್ವಿವಚನದ ಬದಲು ಏಕವಚನ) ಅಥವಾ **'ಗತೇನ ಸಹಿತಂ ಆಗತಂ ಗತಾಗತಂ'** ಎಂಬ ರೀತಿಯ ಮಧ್ಯಮಪದ (ಸಹಿತಪದ) ಲೋಪಗೊಂಡಿರುವ ಕರ್ಮಧಾರಯ ಸಮಾಸವಿದು. **ಗತಾಗತಂ**= ಸ್ವರ್ಗವನ್ನು ಕುರಿತು ಹೋಗುವುದು ಹಾಗೂ

ಅಲ್ಲಿಂದ ಭೂಲೋಕಕ್ಕೆ ಹಿಂದಿರುಗುವುದು ಎಂಬ ಈ ರೀತಿಯ ಸ್ಥಿತಿಯನ್ನು ಹೊಂದುತ್ತಾರೆ. ಪುನಃ ಹಿಂದಿರುಗಿ ಬರದ ಸ್ಥಿತಿಯಾದ ಮೋಕ್ಷವನ್ನು ಪಡೆಯುವುದಿಲ್ಲಎಂದಿದರ ಅಭಿಪ್ರಾಯ.

**ವಿವರಣೆ-** ಮೇಲೆ ಉಲ್ಲೇಖಿಸಲಾಗಿರುವ ಸೂತ್ರದಲ್ಲಿರುವ **'ದೃಷ್ಟಸ್ಮೃತಿಭ್ಯಾಮ್'** ಎಂಬ ಪದದಿಂದ **'ತತಃ ಶೇಷೇಣೇಮಂ ಲೋಕಮಾಯಾತಿ ಪುನಃ ಕರ್ಮ ಕುರುತೇ ಪುನರ್ಗಚ್ಛತಿ ಪುನರಾಗಚ್ಛತಿ'**– ಸ್ವರ್ಗದಲ್ಲಿ ಪುಣ್ಯಫಲವನ್ನು ಅನುಭವಿಸಿಯಾದ ಮೇಲೆ ಪುಣ್ಯಶೇಷದಿಂದ ಸಹಿತರಾಗಿ ಭೂಲೋಕಕ್ಕೆ ಹಿಂದಿರುಗುತ್ತಾರೆ. ಪುನಃ ಕರ್ಮ ಮಾಡುತ್ತಾರೆ. ಮತ್ತೆ ಸ್ವರ್ಗಕ್ಕೆ ಹೋಗುತ್ತಾರೆ. ಪುನಃ ಹಿಂದಿರುಗುತ್ತಾರೆ– ಎಂಬ ಶ್ರುತಿ (ದೃಷ್ಟಿ) ವಾಕ್ಯವನ್ನೂ

'ಭುಕ್ತಶೇಷಾನುಶಯವಾನ್ ಇಮಾಂ ಪ್ರಾಪ್ಯ ಭುವಂ ಪುನಃ ।
ಕರ್ಮ ಕೃತ್ವಾ ಪುನರ್ಗಚ್ಛೇತ್ ಪುನರಾಯಾತಿ ನಿತ್ಯಶಃ ॥'

ಅನುಭವಿಸಿ ಉಳಿದ ಪುಣ್ಯವುಳ್ಳವನಾಗಿ ಈ ಭೂಮಿಗೆ ಬಂದು ಪುನಃ ಕರ್ಮವನ್ನು ಮಾಡಿ ಪುನಃ ಸ್ವರ್ಗಕ್ಕೆ ಹೋಗಬೇಕಾಗುತ್ತದೆ . ಪುನಃ ಹಿಂದಿರುಗುತ್ತಾನೆ ; ಹೀಗೆ ನಿರಂತರವಾಗಿ ಹೋಗಿ ಬರುತ್ತಿರುತ್ತಾನೆ – ಎಂಬ ಸ್ಮೃತಿವಾಕ್ಯವನ್ನೂ ಸೂಚಿಸಲಾಗಿದೆ. ॥ 21 ॥

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥ 22 ॥**

**ಅರ್ಥ**– ನನ್ನನ್ನು ಹೊರತಾಗಿ ಇತರ ವಿಷಯವನ್ನು ಚಿಂತಿಸದೆ ನನ್ನನ್ನೇ ಸ್ಮರಿಸುತ್ತಿರುವ ಯಾವ ಜೀವರು ಭಕ್ತ್ಯುದ್ರೇಕದಿಂದ ಸೇವಿಸುತ್ತಿರುತ್ತಾರೋ ಅಂತಹ ನಿರಂತರವಾಗಿ ಹಾಗೂ ಎಲ್ಲಾ ದೇಶದಲ್ಲಿ, ಶರೀರ ಇಂದ್ರಿಯ ಹಾಗೂ ಮನಸ್ಸುಗಳಿಂದ ನನ್ನ ಸೇವೆಯಲ್ಲಿ ನಿರತರಾಗಿರುವ ಹಾಗೂ ನಿರಂತರವಾಗಿ ನನ್ನ ಸ್ಮರಣೆಯುಳ್ಳ ಜೀವರ ಯೋಗಕ್ಷೇಮವನ್ನು ನಾನು ವಹಿಸಿಕೊಂಡಿರುತ್ತೇನೆ.

**ತ್ರೈವಿದ್ಯಾನಾಂ ಫಲಮುಕ್ತ್ವಾ ಭಾಗವತಾನಾಂ ಫಲಮಾಹ- ಅನನ್ಯಾ ಇತಿ ॥ ನ ವಿದ್ಯತೇಽನ್ಯಶ್ಚಿಂತ್ಯತ್ವೇನ ಯೇಷಾಂ ತೇ ಅನನ್ಯಾಃ ಅನ್ಯದಚಿಂತಯಂತೋ ಮಾಂ ಚಿಂತಯಂತೋ ಯೇ ಜನಾಃ ಪರ್ಯುಪಾಸತೇ ಭಕ್ತ್ಯುದ್ರೇಕೇಣ ಉಪಾಸತೇ ತೇಷಾಂ ನಿತ್ಯಾಭಿಯುಕ್ತಾನಾಂ ನಿತ್ಯಮಭಿ ಸರ್ವಸ್ಮಿನ್‌ದೇಶೇ ಶರೀರೇಂದ್ರಿಯ ಮನೋಭಿರ್ವಾ ಯುಕ್ತಾನಾಂ ಭಗವತ್ಸೇವೋದ್ಯುಕ್ತಾನಾಂ ನಿತ್ಯಂ ತತ್ಸ್ಮರಣ-ವತಾಮಿತಿ ವಾ । ಯೋಗಕ್ಷೇಮಮ್ । ದ್ವಂದ್ವೈಕವದ್ ಭಾವಃ । ಯೋಗಸ್ಯ ಕ್ಷೇಮ ಇತಿ ವಾ । ಅಪ್ರಾಪ್ತಪ್ರಾಪ್ತಿರ್ಯೋಗೋ ಮೋಕ್ಷರೂಪಃ । ತಸ್ಯ ಕ್ಷೇಮಃ ಅನಂತತ್ವಂ ವಹಾಮಿ । ಅಹಮಪುನರಾವೃತ್ತಿಲಕ್ಷಣಂ ಪುರುಷಾರ್ಥಂ ದದಾಮೀತ್ಯರ್ಥಃ ।**

**ಅನುವಾದ–** ತ್ರೈವಿದ್ಯರಿಗೆ ಸಂಬಂಧಿಸಿದ ಫಲವನ್ನು ಹೇಳಿದ ಮೇಲೆ ಈಗ **'ಅನನ್ಯಾಶ್ಚಿಂತಯಂತೋ ಮಾಂ'** ಎಂಬಿತ್ಯಾದಿ ಶ್ಲೋಕದಲ್ಲಿ ಭಾಗವತರಿಗೆ ಸಂಬಂಧಿಸಿದ ಫಲವನ್ನು ಹೇಳಲಾಗುತ್ತಿದೆ. ಪರಮಾತ್ಮನಿಗಿಂತ ಇತರವಾದುದು ಸ್ಮರಣೆಗೆ ವಿಷಯವಾಗಿ ಯಾರಿಗೆ ಸಂಬಂಧಿಸಿದಂತೆ ಇಲ್ಲವೋ ಅವರು **'ಅನನ್ಯರು'** ಹಾಗಾಗಿ **ಅನನ್ಯಾಃ**= ಪರಮಾತ್ಮನಿಗಿಂತ ಇತರವಾದುದನ್ನು ಸ್ಮರಿಸದೇ ಇರುವ, ನನ್ನನ್ನು ಸ್ಮರಿಸುತ್ತಿರುವ, ಯಾವ ಜೀವರು **ಪರಿ**= ಭಕ್ತ್ಯುದ್ರೇಕದಿಂದ ಸೇವಿಸುತ್ತಿದ್ದಾರೋ, ಅಂತಹ, **ನಿತ್ಯಾಭಿಯುಕ್ತಾನಾಂ ನಿತ್ಯಂ** = ನಿರಂತರವಾಗಿ, **ಅಭಿ**= ಎಲ್ಲ ದೇಶದಲ್ಲಿಯೂ ಅಥವಾ **ಅಭಿ**= ಶರೀರೇಂದ್ರಿಯ ಮನಸ್ಸುಗಳಿಂದ, **ಯುಕ್ತಾನಾಂ**= ಪರಮಾತ್ಮನ ಸೇವೆಯಲ್ಲಿ ತೊಡಗಿರುವ ಜೀವರ, **ಯೋಗಶ್ಚ ಕ್ಷೇಮಶ್ಚ ಯೋಗಕ್ಷೇಮಂ** ಎಂದು ನಪುಂಸಕಲಿಂಗ ಹಾಗೂ ಏಕವದ್ ಭಾವವುಳ್ಳ ದ್ವಂದ್ವ ಸಮಾಸ. (ಹಾಗಾಗಿ **ಯೋಗಕ್ಷೇಮೌ** ಎಂದು ದ್ವಿವಚನದ ಬದಲು ಯೋಗಕ್ಷೇಮಂ ಎಂದು ನಪುಂಸಕಲಿಂಗ ಹಾಗೂ ಏಕವಚನ) ಅಥವಾ **ಯೋಗಸ್ಯ ಕ್ಷೇಮಃ ಯೋಗಕ್ಷೇಮಃ ತಂ**= **ಯೋಗಕ್ಷೇಮಂ** ಎಂದು ಷಷ್ಠೀತತ್ಪುರುಷ ಸಮಾಸ. ಆಗ ಯೋಗ ಅಂದರೆ ಮೊದಲು ಕೈಗೂಡದೇ ಇದ್ದ ಫಲದ ಪ್ರಾಪ್ತಿ- ಅಂದರೆ ಮೋಕ್ಷರೂಪಫಲಪ್ರಾಪ್ತಿ ಎಂದರ್ಥ. **ಯೋಗಸ್ಯ** ಹೀಗೆ ಕೈಗೂಡಿದ ಮೋಕ್ಷರೂಪ ಫಲದ **ಕ್ಷೇಮಃ**= ಕೊನೆಗೊಳ್ಳದಂತೆ ಪರಿರಕ್ಷಣೆ ಆ ಫಲಕ್ಕೆ ಕೊನೆಯಿಲ್ಲದಿರುವಿಕೆ. ಅದನ್ನು **ಅಹಂ ವಹಾಮಿ**= ನಾನು ನಿರ್ವಹಿಸುತ್ತೇನೆ. ಪುನಃ ಹಿಂದಿರುಗಿ ಬರದಂತಹ ಅವಸ್ಥೆಯಾದ ಮೋಕ್ಷರೂಪ ಪುರುಷಾರ್ಥವನ್ನು ಅವರಿಗೆ ನಾನು ಅನುಗ್ರಹಿಸುತ್ತೇನೆ ಎಂದಿದರ ಅಭಿಪ್ರಾಯ.

**ವಿವರಣೆ– ಯೋಗ** ಎಂದರೆ ಅಪ್ರಾಪ್ತಸ್ಯ ಪ್ರಾಪ್ತಿಃ = ಇಲ್ಲದಿರುವುದರ ಕೈಗೂಡುವಿಕೆ. **ಕ್ಷೇಮ** ಎಂದರೆ ಪ್ರಾಪ್ತಸ್ಯ ಪರಿರಕ್ಷಣಂ- ಕೈಗೂಡಿದ್ದು ಪುನಃ ಕೈತಪ್ಪದೆ ಇರುವುದು. ಯೋಗಕ್ಷೇಮಂ ಎಂದೆನ್ನುವುದು ದ್ವಂದ್ವಸಮಾಸ ಎಂಬ ಈ ಮೊದಲಪಕ್ಷದಲ್ಲಿ ಯೋಗಂ **ವಹಾಮಿ**= ಕೈಗೂಡದಿದ್ದ ಆಸೆಗಳನ್ನು ಪೂರೈಸುತ್ತೇನೆ. **ಕ್ಷೇಮಂ ವಹಾಮಿ**= ಕೈಗೂಡಿದ್ದು ಕೈತಪ್ಪದಂತೆ ನೋಡಿಕೊಳ್ಳುತ್ತೇನೆ ಎಂದಂತಾಗುವುದು.

**ಭಗವತಃ ಸರ್ವಯಜ್ಞಭೋಕ್ತೃತ್ವಾವಿಶೇಷೇಽಪಿ ತ್ರೈವಿದ್ಯಭಾಗವತಯೋಃ ಫಲಭೇದೋ ಭಗವದ್‌ಯಜನರೂಪೋಪಾಯಭೇದಕೃತ ಇತಿ ದ್ಯೋತನಾ-ಯಾನನ್ಯಾ ಇತ್ಯಾದಿವಿಶೇಷಣೋಕ್ತಿಃ । ತಥಾಹಿ । ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ (7-21) ಇತ್ಯಾದೌ ಪೂರ್ವಂ ತ್ರೈವಿದ್ಯಾ-ನಾಮನ್ಯದೇವತಾಯಾಜಿತ್ವಮುಕ್ತಮ್ । ಭಾಗವತಾನಾಂ ತದ್ವಿರೋಧಿತಯಾಽ-ನನ್ಯಾ ಇತ್ಯುಕ್ತಮ್ । ನತು ಮಾಮಭಿಜಾನಂತಿ ತತ್ತ್ವೇನೇತಿ ತ್ರೈವಿದ್ಯಾನಾಂ**

**ಅತಿಶಯಭಕ್ತಿಜ್ಞಾನಾಭಾವ ಉಕ್ತಃ । ತತ್ತ್ವಜ್ಞಾನಾಭಾವೇ ಭಕ್ತ್ಯಭಾವಸ್ಯ ಸಿದ್ಧ-ತ್ವಾತ್ । ಭಾಗವತಾನಾಂ ತತ್ಪ್ರತಿಯೋಗಿತಯಾ ಭಕ್ತ್ಯುದ್ರೇಕಸೂಚನಾಯ ಪರ್ಯುಪಾಸತ ಇತಿ ಪರಿಶಬ್ದಪ್ರಯೋಗಃ । ತಥೋಪಾಸನಸ್ಯೈವ ಪರ್ಯು-ಪಾಸನತ್ವಾತ್ । 'ಸ್ವರ್ಗತಿಂ ಪ್ರಾರ್ಥಯಂತೇ'। 'ಕಾಮಕಾಮಾ' ಇತಿ ತ್ರೈವಿದ್ಯಾನಾಂ ಕಾಮನಮುಕ್ತಮ್ । ತತ್ಪ್ರತಿಯೋಗಿತಯಾ ಭಾಗವತಾನಾಂ ಚಿಂತಯಂತೋ ಮಾಂ ಮಾಮೇವ ಚಿಂತಯಂತಿ ನ ಕಾಮಮಿತಿ ಕಾಮನಾಭಾವ ಉಕ್ತಃ । ಮಾಮಿಷ್ಟ್ವೇತಿ ಮಾಮೇವ ಯಜಂತ ಇತಿ ತ್ರೈವಿದ್ಯಾನಾಂ ಅಂತೇ ಸಮರ್ಪಣ-ಮುಕ್ತಮ್ । ತತ್ಪ್ರತಿಯೋಗಿತಯಾ ನಿತ್ಯಾಭಿಯುಕ್ತಾನಾಮಿತಿ ಸದಾ ತತ್ಸ್ಮರಣ-ತದುದ್ದೇಶಯುಕ್ತತ್ವಮುಕ್ತಮ್ । ಅತೋ ದ್ವಯೋರ್ವೈಷ್ಣವತ್ವೇಽಪಿ ಭಗವದ್-ಭೋಗ್ಯಕರ್ಮವತ್ತ್ವೇಽಪಿ ಫಲಹೇತೂಪಾಯಭೇದಾತ್ ಫಲಭೇದ ಇತಿ ॥22 ॥**

**ಅನುವಾದ-** ಪರಮಾತ್ಮನು ತ್ರೈವಿದ್ಯರು ಹಾಗೂ ಭಾಗವತರು ಇವರಿಬ್ಬರ ಯಜ್ಞಫಲವನ್ನೂ ಭೋಗಿಸುತ್ತಾನೆ. ಈ ಅಂಶದಲ್ಲಿ ವ್ಯತ್ಯಾಸವಿಲ್ಲ. ಹೀಗೆ ಅವರು ಕೈಗೊಳ್ಳುತ್ತಿರುವ ಯಜ್ಞರೂಪ ಸಾಧನೆಯಲ್ಲಿ ವ್ಯತ್ಯಾಸವಿಲ್ಲದಿದ್ದರೂ, ಅದಕ್ಕೆ ಪೂರಕವಾದ ಭಗವಂತನ ಸೇವಾರೂಪದ ಸಹಕಾರಿಕಾರಣದಲ್ಲಿ ವ್ಯತ್ಯಾಸವಿರುವುದರಿಂದ, ಆದರ ಫಲದಲ್ಲಿ ವ್ಯತ್ಯಾಸವುಂಟಾಗುತ್ತದೆ ಎಂದು ಸೂಚಿಸಲು. ಭಾಗವತ ಸಾಧಕರಲ್ಲಿ 'ಅನನ್ಯಾಃ ಚಿಂತಯಂತೋ ಮಾಂ' ಎಂಬಿತ್ಯಾದಿ ವಿಶೇಷಣಗಳನ್ನು ಇಲ್ಲಿ ಹೇಳಲಾಗಿದೆ. ಇದರಿಂದಾಗಿ ಭಗವಂತನ ಸೇವೆಯಲ್ಲಿ ವ್ಯತ್ಯಾಸವನ್ನು ಹೀಗೆ ಸೂಚಿಸಿದಂತಾಯಿತು– ಹಿಂದೆ 'ಯಾರು ಯಾರು ಯಾವಯಾವ ಬ್ರಹ್ಮರುದ್ರಾದಿ ದೇವತೆಗಳನ್ನು ಅವರಲ್ಲಿ ಭಕ್ತಿಯುಳ್ಳವರಾಗಿ ಶ್ರದ್ಧೆಯಿಂದ ಪೂಜಿಸಲು ಇಚ್ಛಿಸುತ್ತಾರೋ ಅವರವರಿಗೆ ಆಯಾಯ ದೇವತೆಗಳ ವಿಷಯದಲ್ಲಿ ಅಚಲವಾದ ಶ್ರದ್ಧೆಯನ್ನು ಅನುಗ್ರಹಿಸುತ್ತೇನೆ' ಎಂದು ಏಳನೆಯ ಅಧ್ಯಾಯದಲ್ಲಿ ಹೇಳುವ ಮೂಲಕ ತ್ರೈವಿದ್ಯರು ಇತರ ದೇವತೆಗಳನ್ನು ಉದ್ದೇಶಿಸಿ ಯಾಗವನ್ನು ಮಾಡುತ್ತಾರೆ ಎಂದೆನ್ನಲಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ **'ಅನನ್ಯಾಃ'** ಎಂದೆನ್ನುವ ಮೂಲಕ ಭಾಗವತರು ಇತರ ದೇವತೆಗಳನ್ನು ಉದ್ದೇಶಿಸಿ ಯಾಗ ಮಾಡದೆ ಪರಮಾತ್ಮನನ್ನು ಮಾತ್ರ ಉದ್ದೇಶಿಸಿ ಯಾಗ ಮಾಡುತ್ತಾರೆ ಎಂದು ಇಲ್ಲಿ ಹೇಳಲಾಗಿದೆ. 'ನನ್ನನ್ನು ಯಥಾರ್ಥವಾಗಿ ತಿಳಿಯುವುದಿಲ್ಲ, ಎಂದೆನ್ನುವ ಮೂಲಕ ತ್ರೈವಿದ್ಯರಿಗೆ ಅತಿಶಯ ಭಕ್ತಿ ಹಾಗೂ ಜ್ಞಾನ ಇವೆರಡೂ ಇಲ್ಲ ವೆಂದಂತಾಯಿತು. ತತ್ತ್ವಜ್ಞಾನವಿಲ್ಲವೆಂದ ಮೇಲೆ ಅತಿಶಯಭಕ್ತಿಯು ಇಲ್ಲವೆಂಬುದು ಸಿದ್ಧ ವಾಗುತ್ತದೆಯಷ್ಟೆ. ಇದಕ್ಕೆ ವ್ಯತಿರಿಕ್ತವಾಗಿ ಭಾಗವತರಿಗೆ ಪರಮಾತ್ಮನಲ್ಲಿ ಅತಿಶಯ ಭಕ್ತಿಯಿದೆ ಎಂದು ಸೂಚಿಸಲು ಇಲ್ಲಿ **'ಪರ್ಯುಪಾಸತೇ'** ಎಂಬಲ್ಲಿ ಪರಿ ಎಂಬ ವಿಶೇಷಣವನ್ನು ನೀಡಲಾಗಿದೆ.

ಭಕ್ತ್ಯತಿಶಯದಿಂದ ಉಪಾಸನೆಯೇ 'ಪರ್ಯುಪಾಸನೆ' ಎನಿಸಿದೆಯಷ್ಟೆ. ಹಿಂದೆ **'ಕಾಮಕಾಮಾಃ'** ಎಂದೆನ್ನುವ ಮೂಲಕ ತ್ರೈವಿದ್ಯರಿಗೆ ಲೌಕಿಕವಿಷಯಕಾಮನೆಯಿದೆ ಎಂದು ಹೇಳಲಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ ಇಲ್ಲಿ ಭಾಗವತರಿಗೆ **'ಅನನ್ಯಾಃ ಮಾಂ ಚಿಂತಯಂತಃ'** ಎಂದೆನ್ನುವ ಮೂಲಕ ನನ್ನನ್ನಷ್ಟೇ ಸ್ಮರಿಸುತ್ತಾರೆ ಕಾಮವನ್ನಲ್ಲ ಎಂದೆನ್ನುವ ಮೂಲಕ ವಿಷಯಕಾಮನೆ ಇಲ್ಲ ಎಂದು ಸೂಚಿಸಲಾಗಿದೆ. **'ಮಾಮೇವ ಯಜಂತಿ ಅವಿಧಿಪೂರ್ವಕಂ' 'ಮಾಂ ಇಷ್ಟ್ವಾ'** ಎಂದೆನ್ನುವ ಮೂಲಕ ತ್ರೈವಿದ್ಯರು ಅನ್ಯದೇವತೆಗಳನ್ನು ಪೂಜಿಸಿ ಕೊನೆಯಲ್ಲಿ ತನಗೆ ಅರ್ಪಿಸುತ್ತಾರೆ ಎಂದು ಹೇಳಿದರೆ ಇದಕ್ಕೆ ವ್ಯತಿರಿಕ್ತವಾಗಿ **'ನಿತ್ಯಾಭಿಯುಕ್ತಾನಾಂ'** ಎಂದೆನ್ನುವ ಮೂಲಕ ಭಾಗವತರು ನಿರಂತರವಾಗಿ ಪರಮಾತ್ಮನ ಸ್ಮರಣಪೂರ್ವಕವಾಗಿ ಅವನನ್ನಷ್ಟೇ ಉದ್ದೇಶಿಸಿ ಯಾಗ ಮಾಡುತ್ತಾರೆ ಎಂದು ಸೂಚಿಸಲಾಗಿದೆ. ಆದುದರಿಂದ ಇಬ್ಬರೂ ವೈಷ್ಣವರೇ ಆಗಿದ್ದರೂ ಅವರಿಬ್ಬರ ಯಜ್ಞಗಳ ಫಲಭೋಕ್ತೃವು ಪರಮಾತ್ಮನೇ ಆಗಿದ್ದರೂ ಫಲದ ಸಹಕಾರಿಯಾದ ಭಕ್ತ್ಯಾದಿಗಳಲ್ಲಿ ವ್ಯತ್ಯಾಸ ವಿರುವುದರಿಂದ ಫಲದಲ್ಲಿ ವ್ಯತ್ಯಾಸವು ಯುಕ್ತವೇ ಆಗಿದೆ. (ಹಾಗಾಗಿ ಕ್ರತುಶಬ್ದಕ್ಕೆ 'ಯಜ್ಞ-ಫಲಭೋಕ್ತೃವಾಗಿರುವುದರಿಂದ ಕ್ರತುವಾಗಿರುವೆನು ಎಂಬ ರೀತಿಯ ಮೊದಲನೆಯ ವ್ಯಾಖ್ಯಾನ ಯುಕ್ತವೇ ಎಂದಂತಾಯಿತು.) ॥ 22 ॥

**ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾಽನ್ವಿತಾಃ ।**
**ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್ ॥ 23 ॥**

**ಅರ್ಥ** – ಇತರ ದೇವತೆಗಳ ಭಕ್ತರೆನಿಸಿರುವ ಯಾರಾದರೇ ಆಗಲಿ ಶ್ರದ್ಧೆಯಿಂದ ಸಹಿತರಾಗಿ ಯಜ್ಞದಲ್ಲಿ ಬೇರೆ ದೇವತೆಗಳನ್ನು ಉದ್ದೇಶಿಸಿ ಹವಿಸ್ಸನ್ನು ಅರ್ಪಿಸುತ್ತಿದ್ದಾರೆ ಎಂದಾದಲ್ಲಿ ಅವರೂ ಕೂಡಾ ನನ್ನನ್ನೇ ಉದ್ದೇಶಿಸಿ, ಆದರೆ ಯಾವ ವಿಧದಿಂದ ಯಾಗ ಮಾಡಬೇಕೋ ಅದನ್ನು ಮೀರಿ ಯಾಗಮಾಡುತ್ತಿರುತ್ತಾರೆ.

**ಭಾಗವತೇಭ್ಯೋಽನ್ಯದೇವತಾಯಾಜಿನಾಂ ಫಲಭೇದಂ ಸಹೇತುಕಂ ಪ್ರಪಂಚಯತಿ- ಯೇಽಪೀತಿ ॥ ಅನ್ಯದೇವತಾಭಕ್ತಾ ಯೇಽಪಿ ಶ್ರದ್ಧಯಾಽನ್ವಿತಾಃ ಸಂತೋ ಅನ್ಯದೇವತಾ ಯಜಂತೇ । ತದುದ್ದೇಶೇನ ಹವಿಸ್ತ್ಯಾಗಂ ಕುರ್ವಂತಿ । ತೇಽಪಿ ಮಾಮೇವಾವಿಧಿಪೂರ್ವಕಂ ಯಜಂತಿ । ಮದುದ್ದೇಶೇನೈವ ಕರ್ತವ್ಯೇಽಪಿ ಅನ್ಯೋದ್ದೇಶೇನ ಕೃತ್ವಾ ತೇ ತತ್ಕರ್ಮ ಅಂತೇ ಮಯ್ಯರ್ಪಯಂತೀತ್ಯವಿಧಿ-ಪೂರ್ವಕಮಾಸೀತ್ ಮದ್ಯಜನಮಿತಿ ಭಾವಃ ॥ 23 ॥**

**ಅನುವಾದ** - ಭಾಗವತರಿಗಿಂತ (ಭಾಗವತರಿಗೆ ಲಭಿಸುವ ಫಲಕ್ಕಿಂತ) ಅನ್ಯದೇವತೆಗಳನ್ನು

ಉದ್ದೇಶಿಸಿ ಯಾಗ ಮಾಡುವವರಿಗೆ ಸಿಗುವ ಫಲದಲ್ಲಿ ವ್ಯತ್ಯಾಸವಿರುವುದನ್ನು '**ಯೇಽಪ್ಯನ್ಯ-ದೇವತಾಭಕ್ತಾಃ**' ಎಂಬ ಶ್ಲೋಕದಲ್ಲಿ, ಹೇತುವನ್ನು ಮುಂದಿಟ್ಟು ಸಮರ್ಥಿಸಲಾಗುತ್ತಿದೆ. ಅನ್ಯ ದೇವತೆಗಳ ಭಕ್ತರೆನಿಸಿರುವ ಯಾರಾದರೂ ಶ್ರದ್ಧೆಯಿಂದ ಸಹಿತರಾಗಿ **ಅನ್ಯದೇವತಾಃ ಯಜಂತೇ**= ಅನ್ಯದೇವತೆಗಳನ್ನು ಉದ್ದೇಶಿಸಿ ಹವಿಸ್ಸನ್ನು ಅರ್ಪಿಸುತ್ತಿದ್ದಾರೋ ಅವರೂ ಕೂಡ ನನ್ನನ್ನು ಉದ್ದೇಶಿಸಿಯೇ, ಆದರೆ ವಿಧಿಯನ್ನು ಮೀರಿ ಹವಿಸ್ಸನ್ನು ಅರ್ಪಿಸುತ್ತಿದ್ದಾರೆ. ನನ್ನನ್ನೇ ಉದ್ದೇಶಿಸಿ ಹವಿಸ್ಸನ್ನು ಅರ್ಪಿಸಬೇಕಿದ್ದರೂ– ನಿಜವಾದ ವಿಧಿ ಹಾಗಿದ್ದರೂ– ಅನ್ಯ ದೇವತಾ ಉದ್ದೇಶದಿಂಧ ಮಾಡುತ್ತಿರುವ ಕಾರಣ ಅದು ಅವಿಧಿಪೂರ್ವಕವೆನಿಸುತ್ತದೆ. ಆದರೆ ಅವರು ಹಾಗೆ ಮಾಡಿ, ಆ ಕರ್ಮವನ್ನು ಕೊನೆಯಲ್ಲಿ ನನಗೆ ಅರ್ಪಿಸುತ್ತಿದ್ದಾರೆ. ಹಾಗಾಗಿ ನನ್ನನ್ನು ಉದ್ದೇಶಿಸಿ ಮಾಡಿದಂತಾದರೂ, ಅವರ ಈ ನನ್ನ ಪೂಜೆಯು ಅವಿಧಿಪೂರ್ವಕವೆಂದಾಗಿರುತ್ತದೆ ಎಂದು ಇದರ ಅಭಿಪ್ರಾಯ. ।। 23 ।।

**ವಿವರಣೆ**- ಸರ್ವಯಜ್ಞಭೋಕ್ತೃ ಹರಿ ; ಹಾಗಾಗಿ ಸಾಕ್ಷಾತ್ತಾಗಿ ಅವನಿಗೇನೇ ಹವಿಸ್ಸನ್ನು ತ್ಯಾಗ ಮಾಡುವುದು ವಿಹಿತವೆನಿಸಿದೆ. ಈ ವಿಧಿಯಂತೆ ತ್ರೈವಿದ್ಯರು ನಡೆದುಕೊಳ್ಳದೆ, ಇತರ ದೇವತೋದ್ದೇಶದಿಂದ ತ್ಯಾಗ ಮಾಡಿ ಕೊನೆಯಲ್ಲಿ ಪರಮಾತ್ಮನಿಗೆ ತಮ್ಮ ಕರ್ಮವನ್ನು ಅರ್ಪಿಸುವ ಮೂಲಕ 'ಇತರ ದೇವತಗಳ ಮೂಲಕ ಅರ್ಪಿಸುವುದು' ಎಂಬ ರೀತಿಯ ಬಳಸುಮಾರ್ಗದಿಂದ ಎಂಬಂತೆ ಪರಮಾತ್ಮನನ್ನು ಉದ್ದೇಶಿಸಿಯೇ ತ್ಯಾಗ ಮಾಡಿದಂತಾಯಿತು. ಹಾಗಾಗಿ ಈ ಪರಮಾತ್ಮ ಯಜನವು ಅವಿಧಿಪೂರ್ವಕವೆನಿಸಿದೆ. ಆದುದರಿಂದ ವಿಧಿಪೂರ್ವಕವಾಗಿ ಯಾಗ ಮಾಡುವ ಭಾಗವತರ ಕರ್ಮ ಫಲಕ್ಕಿಂತ, ಅವಿಧಿಪೂರ್ವಕವಾಗಿ ಯಾಗ ಮಾಡುವ ತ್ರೈವಿದ್ಯರ ಫಲದಲ್ಲಿ ವ್ಯತ್ಯಾಸವು ಯುಕ್ತವೇ ಆಗಿದೆ ಎಂದಭಿಪ್ರಾಯ.

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ।। 24 ।।**

**ಅರ್ಥ**– ಎಲ್ಲಾ ಯಜ್ಞಪ್ರವರ್ತಕ (ಪ್ರಭು) ಹಾಗೂ ಉದ್ದೇಶ್ಯನು (ಭೋಕ್ತೃ) ನಾನೇ ಆಗಿರುವೆನಷ್ಟೆ. ಅಂತಹ ನನ್ನನ್ನು ಯಥಾವತ್ತಾಗಿ ತಿಳಿದಿದ್ದರೂ ಚೆನ್ನಾಗಿ ತಿಳಿದಿರುವುದಿಲ್ಲ. ಆದುದರಿಂದ ಅವರು ಕರ್ಮ ಫಲವನ್ನು ಅನುಭವಿಸಿ ಪುನಃ ಸ್ವರ್ಗದಿಂದ ಭೂಲೋಕವನ್ನು ಪ್ರವೇಶಿಸುತ್ತಾರೆ.

**ತದ್ಯಜ್ಞಸ್ಯಾಪಿ ಭಗವದ್ಭೋಗ್ಯತ್ವಾತ್ ಕಥಮವಿಧಿಪೂರ್ವಕತೇತ್ಯತೋಽವಿಧಿ ಪೂರ್ವಕತ್ವೇ ಕಾರಣಮಾಹ- ಅಹಂ ಹೀತಿ ।। ಸರ್ವಯಜ್ಞಾನಾಂ ಭೋಕ್ತಾ**

**ಪ್ರಭುಶ್ಚ ಪ್ರವರ್ತಕ ಉದ್ದೇಶ್ಯಶ್ಚ । ತಾದೃಶಂ ಮಾಂ ತು ತತ್ತ್ವೇನ ಅಭಿ ಸಮ್ಯಕ್ ನ ಜಾನಂತಿ । ಅಭೀತ್ಯಸ್ಯ ಸರ್ವೋತ್ತಮತ್ತ್ವೇನ ಹರಿಂ ಜಾನಂತೋಽಪಿ ಯಜ್ಞಾದ್ಯುದ್ದೇಶ್ಯತ್ವಾದಿನಾ ಸಮ್ಯಙ್ ನ ಜಾನಂತೀತ್ಯರ್ಥಃ । ತತ್ತ್ವೇನೇತ್ಯಸ್ಯ ತು ಬ್ರಹ್ಮಾದ್ಯನ್ಯದೇವತಾನಾಂ ತು ತತ್ಪರಿವಾರತ್ವಾದಿಕಂ ನ ಸಮ್ಯಕ್ ಜಾನಂತೀತ್ಯರ್ಥಃ । ಹಿ ಯತೋಽತಸ್ತೇ ಚ್ಯವಂತಿ । ಸ್ವರ್ಗಾನ್ಮರ್ತ್ಯಲೋಕಂ ವಿಶಂತೀತಿ ॥ 24 ॥**

**ಅನುವಾದ–** ಆ ತ್ರೈವಿದ್ಯರ ಯಜ್ಞವೂ ಪರಮಾತ್ಮನಿಂದ ಭೋಗ್ಯವೆಂದಾದಮೇಲೆ ಅದು ಅವಿಧಿಪೂರ್ವಕವೆನಿಸುವುದು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ ಉತ್ತರವಾಗಿ 'ಅಹಂ ಹಿ ಸರ್ವಯಜ್ಞಾನಾಂ' ಎಂಬ ಶ್ಲೋಕದಲ್ಲಿ ಅದು ಅವಿಧಿಪೂರ್ವಕವೆನ್ನುವುದಕ್ಕೆ ಕಾರಣವನ್ನು ಮುಂದಿಡಲಾಗುತ್ತಿದೆ. ಎಲ್ಲಾ ಯಜ್ಞಗಳ **ಭೋಕ್ತಾ**= ಉದ್ದೇಶವಿಷಯನು **ಪ್ರಭುಶ್ಚ**= ಪ್ರವರ್ತಕನೂ ಕೂಡಾ ನಾನೇ ಆಗಿರುವೆನಷ್ಟೇ. ಅಂತಹ ನನ್ನನ್ನು , **ತತ್ತ್ವೇನ**= ಯಥಾವತ್ತಾಗಿ, **ಅಭಿ**= ಚೆನ್ನಾಗಿ ಆ ತ್ರೈವಿದ್ಯರು ತಿಳಿದಿರುವುದಿಲ್ಲ. 'ಚೆನ್ನಾಗಿ' ಎಂದೆನ್ನುವುದು '**ಅಭಿ**' ಶಬ್ದದ ಅರ್ಥ. ಹಾಗಾಗಿ ಪರಮಾತ್ಮನನ್ನು ಸರ್ವೋತ್ತಮನೆಂದು (ತತ್ತ್ವತಃ) ಅರಿತಿದ್ದರೂ ಸರ್ವಯಜ್ಞಗಳಲ್ಲಿ ಸಾಕ್ಷಾತ್ತಾಗಿ ಹವಿಸ್ಸಿನ ಅರ್ಪಣೆಗೆ ಉದ್ದೇಶ್ಯನು ಎಂಬ ಈ ರೀತಿಯಲ್ಲಿ ಚೆನ್ನಾಗಿ ಅರ್ಥ ಮಾಡಿಕೊಂಡಿಲ್ಲವೆಂದಂತಾಯಿತು. **ತತ್ತ್ವೇನ (ನ ಜಾನಂತಿ)** ಎಂದಿರುವುದು ಬ್ರಹ್ಮಾದಿದೇವತೆಗಳನ್ನು ಪರಮಾತ್ಮನ ಪರಿವಾರ ದೇವತೆಗಳು (ಪ್ರಧಾನದೇವತೆಗಳವರಲ್ಲ) ಎಂಬ ಈ ರೀತಿಯಲ್ಲಿ ತಿಳಿದಿಲ್ಲ ಎಂಬ ಅಭಿಪ್ರಾಯದಿಂದ. **ಹಿ**= ಯಾವಕಾರಣದಿಂದ ಹೀಗೆ ಯಥಾವತ್ತಾಗಿ ಹಾಗೂ ಚೆನ್ನಾಗಿ ತಿಳಿದಿಲ್ಲವೋ ಆ ಕಾರಣದಿಂದ, **ತೇ ಚ್ಯವಂತಿ**= ಸ್ವರ್ಗದಿಂದ ಭೂಲೋಕವನ್ನು ಪ್ರವೇಶಿಸುತ್ತಾರೆ. ॥ 24 ॥

**ವಿವರಣೆ-** ಯಾಗಾನುಷ್ಠಾನಕಾಲದಲ್ಲಿ ಪರಮಾತ್ಮನು ಸರ್ವೋತ್ತಮನಾಗಿದ್ದಾನೆ. ಎಲ್ಲ ಯಜ್ಞಗಳಿಗೆ ಸಂಬಂಧಿಸಿದ ಹವಿದ್ರ್ರವ್ಯತ್ಯಾಗದ ಉದ್ದೇಶ್ಯನಾಗಿದ್ದಾನೆ. ಬ್ರಹ್ಮಾದಿ ಆಯಾಯ ಕರ್ಮದೇವತೆಗಳು ಪ್ರಧಾನದೇವತೆಗಳಲ್ಲ ; ಪರಿವಾರ ದೇವತೆಗಳವರು ಎಂಬಿತ್ಯಾದಿ ಯಾವ ಯಾವ ಅನುಸಂಧಾನವಿರಬೇಕೋ ಅದೆಲ್ಲಾ ಮೇಳೈಸಿದ್ದರೆ ಆ ಯಜ್ಞವು ವಿಧಿಪೂರ್ವಕವೆನಿಸುತ್ತದೆ. ತ್ರೈವಿದ್ಯರ ಯಜ್ಞದಲ್ಲಿ ಇವುಗಳಲ್ಲಿ ಕೆಲವು ಅನುಸಂಧಾನಗಳು ಇಲ್ಲದಿರುವುದರಿಂದ ಅದು ಅವಿಧಿಪೂರ್ವಕವೆನಿಸಿದೆ ಎಂದು ಅಭಿಪ್ರಾಯ .

**ಯಾಂತಿ ದೇವವ್ರತಾ ದೇವಾನ್ ಪಿತೃನ್ ಯಾಂತಿ ಪಿತೃವ್ರತಾಃ ।**
**ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಮ್ ॥ 25 ॥**

**ಅರ್ಥ–** ಇಂದ್ರಾದಿ ದೇವತೆಗಳಲ್ಲಿ ನಿಯಮವುಳ್ಳವರಾಗಿ ಅವರನ್ನು ಪೂಜಿಸುತ್ತಿರುವವರು ಆ ದೇವತೆಗಳನ್ನು ಹೊಂದುತ್ತಾರೆ. ಶ್ರಾದ್ಧಾದಿಪಿತೃಪೂಜೆಯಲ್ಲಿ ನಿರತರಾದವರು ಪಿತೃಗಳನ್ನು ಹೊಂದುತ್ತಾರೆ. ಯಕ್ಷಾದಿ ಭೂತಗಳನ್ನು ಪೂಜಿಸುವವರು ಆ ಭೂತಗಳನ್ನು ಹೊಂದುತ್ತಾರೆ. ನನ್ನನ್ನು ಪೂಜಿಸುವವರು ನನ್ನನ್ನು ಹೊಂದುತ್ತಾರೆ.

**ಫಲಭೇದಂ ವಿವಿಚ್ಯ ಪ್ರಪಂಚಯತಿ- ಯಾಂತೀತಿ ॥ ಇಂದ್ರಾದಿದೇವೇಷು ವ್ರತಂ ನಿಯಮೋ ಯೇಷಾಂ ತೇ ತಥಾ । ಇಂದ್ರಾದಿಯಾಜಕಾಃ ಇನ್ದ್ರಾದೀನ್ ಯಾಂತಿ । ಪಿತೃವ್ರತಾಃ ಶ್ರಾದ್ಧಾದಿಕ್ರಿಯಾಪರಾಃ ಪಿತ್ರ್ಯಾನ್ ಯಾಂತಿ । ಭೂತೇಜ್ಯಾ ಭೂತೇಷು ಸಪ್ತಮಾತೃಕಾದಿಷು ಇಜ್ಯಾ ಪೂಜಾ ಯೇಷಾಂ ತೇ ಭೂತೇಜ್ಯಾಃ । ಶಿಷ್ಟಂ ವ್ಯಕ್ತಮ್ ॥ 25 ॥**

**ಅನುವಾದ–** 'ಯಾಂತಿ ದೇವವ್ರತಾ ದೇವಾನ್' ಎಂಬಿತ್ಯಾದಿ ಶ್ಲೋಕದಲ್ಲಿ ತ್ರೈವಿದ್ಯಾದಿಗಳಿಗೂ ಭಾಗವತರಿಗೂ ಲಭಿಸುವ ಫಲದಲ್ಲಿಯ ವ್ಯತ್ಯಾಸವನ್ನು ಪ್ರತ್ಯೇಕಿಸಿ ಹೇಳುವ ಮೂಲಕ ವಿವರಿಸಲಾಗುತ್ತದೆ. **ದೇವವ್ರತಾಃ**= ಇಂದ್ರಾದಿದೇವತೆಗಳಲ್ಲಿ ನಿಯಮ (ವ್ರತ) ಯಾರಿಗೆ ಇದೆಯೋ ಅವರು. ಅಂದರೆ ಇಂದ್ರಾದಿದೇವತೆಗಳನ್ನು ಉದ್ದೇಶಿಸಿ ಹವಿಸ್ಸನ್ನು ತ್ಯಾಗ ಮಾಡುವವರು ಎಂದು ಅಭಿಪ್ರಾಯ. **ದೇವಾನ್**= ಇಂದ್ರಾದಿದೇವತೆಗಳನ್ನು ಹೊಂದುತ್ತಾರೆ. **ಪಿತೃವ್ರತಾಃ**= ಶ್ರಾದ್ಧಾದಿ ಪಿತೃಕ್ರಿಯೆಗಳಲ್ಲಿ ನಿಷ್ಠೆ ಉಳ್ಳವರು ಪಿತೃಗಳನ್ನು ಹೊಂದುತ್ತಾರೆ. **ಭೂತೇಜ್ಯಾಃ**= ಭೂತಗಳಲ್ಲಿ ಅಂದರೆ ಸಪ್ತ ಮಾತೃಕಾದೇವತಾದಿಗಳಲ್ಲಿ ಪೂಜೆ ಉಳ್ಳವರು. ಆ ದೇವತೆಗಳಿಗೆ ಪೂಜೆ ಸಲ್ಲಿಸುವವರು ಭೂತೇಜ್ಯರು ಎಂದಂತಾಯಿತು. '**ಮದ್ಯಾಜಿನೋಽಪಿ ಮಾಂ**' ಎಂದೆನ್ನುವುದರ ಅಭಿಪ್ರಾಯ ಹಿಂದಿನಂತೆಯೇ ಸ್ಪಷ್ಟವಾಗಿದೆ. ॥ 25 ॥

## ಪರಮಾತ್ಮನ ಭಜನೆ ಅತಿಸುಲಭ

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ 26 ॥**

**ಅರ್ಥ–** ಯಾರು ನನಗೆ ನಿಷಿದ್ಧವಲ್ಲದ ಎಲೆಯನ್ನೋ, ಪುಷ್ಪವನ್ನೋ, ಫಲವನ್ನೋ, ನೀರನ್ನೋ ಭಕ್ತಿಯಿಂದ ಅರ್ಪಿಸುತ್ತಾನೋ, ವಿಷಯಭೋಗದಿಂದ ಮನಸ್ಸನ್ನು ನಿಗ್ರಹಿಸಿಕೊಂಡಿರುವ, ವಿರಕ್ತನೆನಿಸಿರುವ ಅಂತಹ ವ್ಯಕ್ತಿಯು ಭಕ್ತಿಯಿಂದ ಅರ್ಪಿತವಾದ ಆ ವಸ್ತುಗಳನ್ನು ನಾನು ಸ್ವೀಕರಿಸುತ್ತೇನೆ.

**ಅನ್ಯದೇವತಾಭಜನಸ್ಯಾಲ್ಪಫಲತ್ವೇಽಪಿ ತದೇವ ಕಾರ್ಯಂ ಸುಶಕತ್ವಾತ್ ।**

**ತ್ವದ್‌ಭಜನಂ ತು ದುರ್ಬಲೈರಶಕ್ಯಂ ಕರ್ತುಂ ತವಾತಿಮಹಿಮತ್ವಾದಿತ್ಯತ ಆಹ-ಪತ್ರಮಿತಿ ॥ ಅನಿಷಿದ್ಧಪತ್ರಾದಿಕಂ ಯೋ ಮಹ್ಯಂ ಭಕ್ತ್ಯಾ ದದಾತಿ । ಪ್ರಯತಾತ್ಮನಃ। 'ಯಮ ಉಪರಮೇ' ಪ್ರಕರ್ಷೇಣೋಪರತಮನಸ್ಕಸ್ಯ ವಿಷಯವಿರಕ್ತಸ್ಯ ಭಕ್ತ್ಯಾ ಸಮರ್ಪಿತಮಶ್ನಾಮಿ । ಭಕ್ತ್ಯೈವಾಹಂ ತುಷ್ಟೋ ಭವಾಮಿ ನ ದ್ರವ್ಯಾದಿನೇತಿ ಭಾವಃ ॥ 26 ॥**

**ಅನುವಾದ–** ಅನ್ಯದೇವತೆಗಳ ಭಜನೆಯು ಅಲ್ಪಫಲವುಳ್ಳದ್ದಾಗಿರಬಹುದು. ಆದರೆ ಮಾಡಲು ಸುಲಭವಾದುದರಿಂದ ಅದನ್ನೇ ಮಾಡಬೇಕು.ನೀನು ಅತ್ಯಂತಮಹಿಮಾಶಾಲಿಯಾಗಿರುವುದರಿಂದ ದುರ್ಬಲರಾದವರು ಭಜಿಸುವುದು ಅಶಕ್ಯವೆನಿಸಿದೆ ಎಂಬ ಆಶಂಕೆಗೆ 'ಪತ್ರಂ ಪುಷ್ಪಂ ಫಲಂ ತೋಯಂ' ಎಂಬಿತ್ಯಾದಿ ಶ್ಲೋಕದಲ್ಲಿ ಉತ್ತರಿಸಲಾಗುತ್ತಿದೆ. ಪತ್ರಪುಷ್ಪಾದಿಗಳೆಂದು ನಿಷಿದ್ಧವಲ್ಲದ ಪತ್ರಪುಷ್ಪಾದಿಗಳು ಹೇಳಲ್ಪಡುತ್ತಿವೆ. ಅವನ್ನು ಯಾರು ನನಗೆ ಭಕ್ತಿಯಿಂದ ಅರ್ಪಿಸುತ್ತಾನೋ, ಎಂದು ಅಭಿಪ್ರಾಯ. '**ಪ್ರಯತಾತ್ಮನಃ**' ಎಂಬಲ್ಲಿರುವ '**ಯತ** ' ಎಂಬ ಪದವು ಉಪರಮ (ಮನೋನಿಗ್ರಹ) ಎಂಬ ಅರ್ಥದಲ್ಲಿರುವ 'ಯಮ' ಧಾತುವಿನರೂಪ. **ಪ್ರಯತಃ ಆತ್ಮಾ ಯಸ್ಯ ಸ ಪ್ರಯತಾತ್ಮಾ, ತಸ್ಯ ಪ್ರಯತಾತ್ಮನಃ. ಪ್ರ**= ಚೆನ್ನಾಗಿ, **ಯತ**= ನಿಗ್ರಹಿಸಲ್ಪಟ್ಟ, **ಆತ್ಮಾ** = ಮನಸ್ಸು ಯಾರಿಗೆ ಇದೆಯೋ ಅಂತಹ ವಿಷಯವಿರಕ್ತನ ಭಕ್ತಿಯಿಂದ ಸಮರ್ಪಿತ (ಭಕ್ತ್ಯಾ ಉಪಹೃತಂ)ವಾದ ಪತ್ರಾದಿಗಳನ್ನು ಸಂತೋಷದಿಂದ ಸ್ವೀಕರಿಸುವೆನು . ಅರ್ಪಿಸಲ್ಪಡುವ ದ್ರವ್ಯಾದಿಗಳಿಂದ ನನ್ನ ಸಂತೋಷವಲ್ಲ. ಆ ಸಮರ್ಪಣೆಯ ಹಿಂದಿರುವ ಭಕ್ತಿಯಿಂದ ಸಂತೋಷ. ಭಕ್ತಿ ಇದೆ ಎಂದಾದರೆ, ಅರ್ಪಿಸಲ್ಪಡುವ ವಸ್ತು ಅದೆಷ್ಟು ಅಲ್ಪವಾಗಿದ್ದರೂ ನಾನು ಆವಶ್ಯಕವಾಗಿ ಪ್ರಸನ್ನನಾಗುವೆನು ಎಂದಿದರ ಅಭಿಪ್ರಾಯ (ಹಾಗಾಗಿ ಪರಮಾತ್ಮನ ಭಜನೆಯು ಅತ್ಯಂತ ಸುಲಭವೆಂದಾಯಿತು) ॥ 26 ॥

## ಪರಮಾತ್ಮನಲ್ಲಿ ಸರ್ವಸಮರ್ಪಣೆ ಹಾಗೂ ಅದರ ಫಲ

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥ 27 ॥**

**ಅರ್ಥ -** ಅರ್ಜುನನೇ ! ನೀನು ವಿಹಿತವೆನಿಸಿರುವ ಯಾವುದನ್ನು ಮಾಡುತ್ತೀಯೋ, ಅನಿಷಿದ್ಧವಾದ ಯಾವುದನ್ನು ಉಣ್ಣುತ್ತೀಯೋ ಶಾಸ್ತ್ರವಿಹಿತವಾದ ಯಾವ ದ್ರವ್ಯವನ್ನು ಹೋಮಿಸುತ್ತೀಯೋ, ಯೋಗ್ಯವ್ಯಕ್ತಿಗಳಿಗೆ ಅನಿಷಿದ್ಧವಾದ ಯಾವುದನ್ನು ದಾನ ಮಾಡುತ್ತೀಯೋ, ವಿಹಿತವಾದ ರೀತಿಯಲ್ಲಿ ಯಾವ ತಪಸ್ಸನ್ನು ಕೈಗೊಳ್ಳುತ್ತೀಯೋ ಅವನ್ನೆಲ್ಲಾ ನನಗೆ ಅರ್ಪಿಸು.

**ಯತೋಽಲ್ಪಮಪಿ ಭಕ್ತ್ಯಾಽರ್ಪಿತಂ ಮಮ ಪ್ರೀತಿಕರಮ್ । ಅತಸ್ತ್ವಮಪಿ ತಥಾ ಕುರ್ವಿತ್ಯುಪಸಂಹರತಿ ಯದಿತಿ ॥ ಹೇ ಕೌನ್ತೇಯ ! ಯತ್ತ್ವಂ ಯದ್ವಿಹಿತಂ ಕರೋಷಿ ವಿಹಿತಮಿತಿ ಸರ್ವತ್ರಾನ್ವೇತವ್ಯಮ್ । ನಿಷಿದ್ಧಾದಿಕರಣಸ್ಯ ಪ್ರತ್ಯವಾಯ-ಹೇತುತ್ವಾತ್ । ಪಾತ್ರಾಯ ಚ ಯದ್‌ದ್ರವ್ಯಾದಿ ದದಾಸಿ ತತ್ಸರ್ವಂ ಮಯಿ ಸಮರ್ಪಣಂ ಕುರುಷ್ವ ॥ 27 ॥**

**ಅನುವಾದ-** ಯಾವಕಾರಣದಿಂದ ಅರ್ಪಿಸಲ್ಪಡುವ ದ್ರವ್ಯವು ಅದೆಷ್ಟು ಅಲ್ಪವಾಗಿದ್ದರೂ ನನಗೆ ಸಂತೋಷವನ್ನುಂಟು ಮಾಡುತ್ತದೋ ಆ ಕಾರಣದಿಂದ ನೀನೂ ಕೂಡಾ ಹಾಗೆಯೇ ಮಾಡು ಎಂದು ಹೇಳುತ್ತಾ ಈ ವಿಚಾರವನ್ನು '**ಯತ್ ಕರೋಷಿ**' ಎಂಬಿತ್ಯಾದಿ ಶ್ಲೋಕದಲ್ಲಿ ಉಪಸಂಹಾರ ಮಾಡಲಾಗುತ್ತಿದೆ. ಕುಂತೀಪುತ್ರನೇ ! ನೀನು **ಯತ್**= ವಿಹಿತವಾದ ಯಾವ ಕರ್ಮವನ್ನು ಮಾಡುವಿಯೋ, ನಿಷಿದ್ಧವಾದುದನ್ನು ಹಾಗೂ ವಿಹಿತವಲ್ಲದ್ದನ್ನು ಮಾಡುವುದು ಪಾಪಕ್ಕೆ ದಾರಿ ಮಾಡಿ ಕೊಡುವುದರಿಂದ ಇಲ್ಲೆಲ್ಲಾ "ವಿಹಿತಂ' ಎಂದನ್ನುವುದನ್ನು ಅನ್ವಯಿಸಿ ಕೊಳ್ಳಬೇಕು. **ಯತ್ ದದಾಸಿ**= ದಾನಸ್ವೀಕರಿಸುವ ಯೋಗ್ಯತೆಯುಳ್ಳವರಿಗೆ ಯಾವ ದ್ರವ್ಯವನ್ನು ದಾನಮಾಡುತ್ತೀಯೋ , ಅವೆಲ್ಲವನ್ನು **ಮದರ್ಪಣಂ- ಮಮ ಅರ್ಪಣಂ ಕುರುಷ್ವ**= ನನ್ನಲ್ಲಿ ಸಮರ್ಪಿಸು. ॥ 27 ॥

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥ 28 ॥**

**ಅರ್ಥ-** ಹೀಗೆ ಎಲ್ಲವನ್ನೂ ನನ್ನಲ್ಲಿ ಸಮರ್ಪಿಸಿದರೆ ಶುಭಾಶುಭ ಫಲವನ್ನು ನೀಡುವ ಕರ್ಮದ ಬಂಧನಗಳಿಂದ ಬಿಡುಗಡೆ ಹೊಂದುವಿ. ಕರ್ಮ ಫಲ ಕಾಮನಾ ತ್ಯಾಗ ಹಾಗೂ ಕರ್ಮಾನುಷ್ಠಾನಗಳಿಂದ ಸಹಿತನಾದಾಗ ಮೋಕ್ಷವನ್ನು ಪಡೆದು ನನ್ನನ್ನು ಹೊಂದುವಿ.

**ತ್ವದರ್ಪಣೇನ ಕಿಮಿತ್ಯತ ಆಹ- ಶುಭಾಶುಭೇತಿ ॥ ಶುಭಾಶುಭಫಲೈರಿತಿ ಬಹುವ್ರೀಹಿಃ । ಏವಂ ಮಯಿ ಸರ್ವಸಮರ್ಪಣೇ ಸತಿ ಶುಭಾಶುಭಫಲಕೈಃ ಕರ್ಮಬಂಧನೈಃ ಮೋಕ್ಷ್ಯಸೇ । ತದೇವ ವ್ಯನಕ್ತಿ- ಸಂನ್ಯಾಸೇತಿ ॥ ಫಲತ್ಯಾಗ-ಕರ್ಮಾನುಷ್ಠಾನಾಭ್ಯಾಂ ಯುಕ್ತಾತ್ಮಾ ವಿಮುಕ್ತಃ ಸನ್ ಮಾಮುಪೈಷ್ಯಸಿ ॥ 28 ॥**

**ಅನುವಾದ -** ಹೀಗೆ ಎಲ್ಲವನ್ನು ನಿನ್ನಲ್ಲಿ ಅರ್ಪಿಸುವುದರಿಂದ ಏನು ಸಿದ್ಧಿಸುತ್ತದೆ ಎಂಬ ಪ್ರಶ್ನೆಗೆ ಉತ್ತರವನ್ನು, '**ಶುಭಾ ಶುಭಫಲೈರೇವಂ**' ಎಂಬಿತ್ಯಾದಿ ಶ್ಲೋಕದಲ್ಲಿ ನೀಡಲಾಗುತ್ತಿದೆ.

**ಶುಭಾಶುಭಾನಿ ಫಲಾನಿ ಯೇಷಾಂ ತಾನಿ ಶುಭಾಶುಭ ಫಲಾನಿ ತೈಃ ಶುಭಾಶುಭಫಲೈಃ** ಎಂದು ಬಹುವ್ರೀಹಿಸಮಾಸ. ಏವಂ= ಈ ರೀತಿಯಲ್ಲಿ ಎಲ್ಲವನ್ನು ನನ್ನಲ್ಲಿ ಅರ್ಪಿಸಿದರೆ ಶುಭಾಶುಭ ಫಲಗಳನ್ನು ಕೊಡುವ ಕರ್ಮಬಂಧನಗಳಿಂದ ಬಿಡುಗಡೆ ಹೊಂದುವಿ. ಈ ವಿಷಯವನ್ನೇ **'ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ'** ಎಂದೆನ್ನುವ ಮೂಲಕ ಸ್ಪಷ್ಟಪಡಿಸಲಾಗುತ್ತಿದೆ. ಕರ್ಮಫಲತ್ಯಾಗ (ಸಂನ್ಯಾಸ) ಹಾಗೂ ವಿಹಿತಕರ್ಮಾನುಷ್ಠಾನ (ಯೋಗ) ಇವುಗಳಿಂದ ಕೂಡಿದವನಾಗಿ ನೀನು ಮುಕ್ತಿ ಹೊಂದಿದವನಾಗಿ ನನ್ನನ್ನು ಸೇರುವಿ. ॥ 28 ॥

## ಸಕಲಜೀವರಲ್ಲಿ ಪರಮಾತ್ಮನ ಸಮದೃಷ್ಟಿ

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್ ॥ 29 ॥**

**ಅರ್ಥ**- ನಾನು ಎಲ್ಲಾ ಜೀವರಲ್ಲಿ ವೈಷಮ್ಯ ಹಾಗೂ ನಿರ್ದಯತೆರಹಿತನಾಗಿರುವೆನು. ಯಾಕೆಂದರೆ ಒಬ್ಬ ಜೀವನು ನನ್ನಲ್ಲಿ ತಾಳಿರುವ ದ್ವೇಷಕ್ಕಿಂತ ಹೆಚ್ಚಿನ ನನ್ನ ದ್ವೇಷಕ್ಕೆ ಅವನು ವಿಷಯನಾಗಿರುವುದಿಲ್ಲ ; ಒಬ್ಬ ಜೀವನು ನನ್ನಲ್ಲಿ ಬೆಳೆಸಿಕೊಂಡಿರುವ ಭಕ್ತಿಗಿಂತ ಹೆಚ್ಚಿನ ನನ್ನ ಪ್ರೀತಿಗೆ ಆ ಜೀವನು ವಿಷಯನಾಗಿರುವುದಿಲ್ಲ. ಯಾವ ಭಕ್ತರು ನನ್ನನ್ನು ಸೇವಿಸುತ್ತಾರೋ ಅವರು ನನ್ನ ಅಧೀನರಾಗಿರುತ್ತಾರೆ. ನಾನು ಅವರ ಅಧೀನನಾಗಿರುತ್ತೇನೆ. ಎಲ್ಲಾ ಜೀವರ ಮಧ್ಯೆ ಭಕ್ತನಾಗಿರುವವನು ನನ್ನ ದ್ವೇಷಕ್ಕೆ ವಿಷಯನಾಗಿ ಇಲ್ಲ. ಅಭಕ್ತನಾಗಿರುವವನು ನನ್ನ ಪ್ರೀತಿಗೆ ವಿಷಯನಾಗಿ ಇಲ್ಲ. ಹಾಗಾಗಿ ಎಲ್ಲಾ ಜೀವರಲ್ಲೂ ನಾನು ಸಾಮ್ಯವುಳ್ಳವನಾಗಿರುವೆನು . ಯಾರು ನನ್ನಲ್ಲಿ ಪ್ರೀತಿಯುಳ್ಳವರಾಗಿರುತ್ತಾರೋ ಅವರಲ್ಲಿ ನಾನು ಪ್ರೀತಿಯುಳ್ಳವನಾಗಿರುತ್ತೇನೆ.

**ನನು ಭಕ್ತ್ಯುಪಹೃತಮಶ್ನಾಮೀತ್ಯುಕ್ತದಿಶಾ ಯದಿ ತ್ವಂ ಭಕ್ತಪ್ರಿಯಃ । ತರ್ಹಿ ದ್ವೇಷಿಣಾಮಪ್ರಿಯಶ್ಚೇತಿ ಸ್ಯಾತ್ । ತಥಾ ಚ ಭಕ್ತೇಷು ದ್ವೇಷಿಷು ಯಥಾಕ್ರಮಂ ಸ್ನೇಹದ್ವೇಷವತ್ತ್ವಾದಲ್ಪಭಕ್ತಸ್ಯ ಕಸ್ಯಚಿದ್ಸುಖರೂಪಂ ಬಹುಫಲಂ ದದಾಸಿ ಅಲ್ಪ-ದ್ವೇಷಿಣೋ ಬಹುದುಃಖರೂಪಂ ದದಾಸಿ ಇತ್ಯಾಪದ್ಯತೇ । ರಾಜಾದೌ ತಥಾ ದರ್ಶನಾತ್ । ಏವಂ ಚ ವೈಷಮ್ಯನೈರ್ಘೃಣ್ಯೇ ಪ್ರಾಪ್ನುತಸ್ತವೇತ್ಯತ ಆಹ-ಸಮೋಽಹಮಿತಿ ॥ ಅಹಂ ಸರ್ವೇಷು ಭೂತೇಷು ಸಮಃ ನ ವೈಷಮ್ಯಾದಿ-ಮಾನ್ । ಯತೋ ಮೇ ತದೀಯಂ ದ್ವೇಷಮಪೇಕ್ಷ್ಯಾಧಿಕಂ ದ್ವೇಷ್ಯೋ ನಾಸ್ತಿ । ತದೀಯಾಂ ಭಕ್ತಿಮಪೇಕ್ಷ್ಯಾಧಿಕಃ ಪ್ರಿಯಶ್ಚ ನಾಸ್ತಿ । ಕಿಂತು ತತ್ತದೀಯದ್ವೇಷ-ಭಕ್ತ್ಯನುಸಾರೇಣ ತತ್ತತ್ಸದೃಶಫಲದ ಏವಾಹಮ್ । ಅತಃ ಸಮೋಽಹಮ್ । ನಹಿ**

**ತತ್ತತ್ಕರ್ಮಾನುಸಾರೇಣಾನುಶಾಸಿತಾ ಯಮೋ ವಿಷಮೋ ಭವತಿ । ತಥಾತ್ವೇ ಸಮವರ್ತೀ ಪರೇತರಾಟ್ ಇತಿ ಪ್ರಸಿದ್ಧಿವಿರೋಧಾತ್ । ತಥೇತಿ ಭಾವೇನ ಭಕ್ತಿಮತಾಂ ಫಲಮಾಹ- ಯ ಇತಿ ॥ ಯೇ ಭಕ್ತಾಃ ಮಾಂ ಭಜಂತಿ ಸೇವಂತೇ ತೇ ಮಯಿ ಮದಧೀನಾಃ ಮದ್ವಶಾಃ ಇತಿ ಜ್ಞಾನವಂತೋ ಭವಂತಿ । ತೇಷು ಚಾಪ್ಯಹಂ ತೇಷಾಂ ವಶೋಽಹಮಿತ್ಯರ್ಥಃ ।**

**ಅನುವಾದ-** ಒಂದು ವೇಳೆ 'ಭಕ್ತಿಯಿಂದ ಅರ್ಪಿಸಿದ್ದನ್ನು ನಾನು ಸ್ವೀಕರಿಸುತ್ತೇನೆ' ಎಂದು ಹೇಳಲಾಗಿರುವಂತೆ ನೀನು ಭಕ್ತಿಯಿಂದ ಪ್ರೀತಿಗೊಳ್ಳುವವನೆಂದಾದಲ್ಲಿ ದ್ವೇಷಿಗಳಿಗೆ ಪ್ರೀತಿ ತೋರಿಸುವುದಿಲ್ಲ ಎಂದಾಯಿತು. ಹಾಗಾಗಿ ಭಕ್ತರಲ್ಲಿ ಸ್ನೇಹ, ದ್ವೇಷಿಗಳಲ್ಲಿ ದ್ವೇಷವಿರುವುದರಿಂದ ಯಾವನೋ ಒಬ್ಬ ಅಲ್ಪಭಕ್ತನಿಗೆ ಸುಖರೂಪದ ಹೆಚ್ಚಿನ ಫಲವನ್ನು ಅನುಗ್ರಹಿಸುತ್ತೀಯ, ಯಾರೋ ಒಬ್ಬ ಅಲ್ಪ ದ್ವೇಷಿಗೆ ಹೆಚ್ಚಿನ ದುಃಖರೂಪ ಫಲವನ್ನು ಕೊಡುತ್ತೀಯ ಎಂದೆನ್ನುವುದು ಸಂಭಾವಿತ ವೆನಿಸುತ್ತದೆ. ರಾಜಾದಿಗಳು ತಮ್ಮ ಅಭಿಮಾನಿಗಳು ಹಾಗೂ ದ್ವೇಷಿಗಳ ವಿಷಯದಲ್ಲಿ ಕ್ರಮವಾಗಿ ಹಾಗೆ ನಡೆದುಕೊಳ್ಳುವುದು ಕಂಡಿದೆಯಷ್ಟೆ. ಹಾಗಾಗಿ ನಿನ್ನಲ್ಲಿ ವೈಷಮ್ಯ ಹಾಗೂ ನಿರ್ದಯತೆ ಎಂಬ ದೋಷಗಳು ಅಂಟಿಕೊಂಡಂತಾಗುತ್ತದೆ ಎಂಬ ಆಕ್ಷೇಪಕ್ಕೆ **'ಸಮೋಽಹಂ ಸರ್ವ-ಭೂತೇಷು'** ಎಂಬೀ ಶ್ಲೋಕದಲ್ಲಿ ಉತ್ತರಿಸಲಾಗುತ್ತಿದೆ. ನಾನು ಎಲ್ಲಾ ಜೀವರಲ್ಲಿ ವೈಷಮ್ಯಾದಿ ಗಳುಳ್ಳವನಲ್ಲ. ಯಾಕೆಂದರೆ ಆ ಜೀವರಲ್ಲಿ ಯಾವನೆ ಒಬ್ಬನು ನನ್ನಲ್ಲಿ ಬೆಳೆಸಿಕೊಂಡಿರುವ ದ್ವೇಷಕ್ಕಿಂತ ಹೆಚ್ಚಿನ ನನ್ನ ದ್ವೇಷಕ್ಕೆ ಆ ಜೀವನು ಗುರಿಯೆನಿಸುವುದಿಲ್ಲ. ಯಾವನೇ ಒಬ್ಬ ಜೀವನು ನನ್ನಲ್ಲಿ ತೋರಿಸುವ ಭಕ್ತಿಗಿಂತ ಹೆಚ್ಚಿನ ನನ್ನ ಪ್ರೀತಿಗೆ ಆ ಜೀವನು ಪಾತ್ರನಾಗುವುದಿಲ್ಲ. ಅವರವರ ದ್ವೇಷ ಅಥವಾ ಭಕ್ತಿಗೆ ಅನುಗುಣವಾಗಿಯೇ ಕಡಿಮೆ ದ್ವೇಷಕ್ಕೆ ಕಡಿಮೆ ದುಃಖ, ಹೆಚ್ಚು ದ್ವೇಷಕ್ಕೆ ಹೆಚ್ಚುದುಃಖ, ಕಡಿಮೆಭಕ್ತಿಗೆ ಕಡಿಮೆಸುಖ, ಹೆಚ್ಚಿನ ಭಕ್ತಿಗೆ ಹೆಚ್ಚಿನ ಸುಖ ಎಂಬೀ ರೀತಿಯಲ್ಲಿ ಸಮಾನವಾದ ಫಲವನ್ನೇ ಕೊಡುತ್ತಿರುತ್ತೇನೆ. ಆದುದರಿಂದ ನಾನು ಎಲ್ಲಾ ಜೀವರ ವಿಷಯದಲ್ಲಿ ವಿಷಮನೆನಿಸದೆ ಸಮದೃಷ್ಟಿಯುಳ್ಳವನೇ ಆಗರುವೆನು. ಆಯಾಯ ಜೀವರ ಪಾಪ ರೂಪ-ಕರ್ಮಗಳಿಗೆ ಅನುಗುಣವಾಗಿ ಅವರನ್ನು ದಂಡಿಸುವ ಯಮಧರ್ಮರಾಜನು ವಿಷಮ ನೆನಿಸಿಲ್ಲವಷ್ಟೆ. ಒಂದು ವೇಳೆ ವಿಷಮನೆನಿಸುವುದಾದರೆ **'ಸಮವರ್ತೀ ಪರೇತರಾಟ್'** - ಪ್ರೇತರಾಜನಾದ ಯಮನು ಎಲ್ಲಾ ಪಾಪಿಗಳ ವಿಷಯದಲ್ಲಿ ಸಮನಾಗಿ ನಡೆದುಕೊಳ್ಳುವವ ನಾಗಿರುವನು' ಎಂಬ ಪ್ರಸಿದ್ಧಿಗೆ ವಿರೋಧವುಂಟಾದೀತು. ಹೀಗೆ ಯಮನಂತೆ ತಾನೂ ಸಮನೆನಿಸಿರುವೆನು ಎಂಬ ಅಭಿಪ್ರಾಯದಿಂದ. ತನ್ನಲ್ಲಿ ಭಕ್ತಿಯನ್ನು ಬೆಳೆಸಿಕೊಂಡಿರುವವನಿಗೆ ಸಿಗುವ ಫಲವನ್ನು **'ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಂ'** ಎಂಬ ವಾಕ್ಯದಲ್ಲಿ ಹೇಳಲಾಗುತ್ತಿದೆ. **ಯೇ=** ಯಾವ ಭಕ್ತರು ನನ್ನನ್ನು ಭಕ್ತಿಯಿಂದ ಭಜಂತಿ

ಸೇವಿಸುತ್ತಾರೋ, ಅವರು **ಮಯಿ=** ನನ್ನ ಅಧೀನರು- ಅಂದರೆ- ನನ್ನ (ಪರಮಾತ್ಮನ) ವಶರಾಗಿರುವೆವು ಎಂಬ ಜ್ಞಾನವುಳ್ಳವರಾಗಿರುತ್ತಾರೆ. **ತೇಷು ಚಾಹಂ=** ಅವರ ಅಧೀನನು ನಾನು ಎಂದು ಅಭಿಪ್ರಾಯ.

**ವಿವರಣೆ – ಮಯಿ ತೇ** ಎಂದೆನ್ನುವುದಕ್ಕೆ ಅವರು ನನ್ನ ಅಧೀನರು' ಎಂದಿಷ್ಟೇ ಅರ್ಥವು ಸರಿಯೆನಿಸದು. ದ್ವೇಷಿಗಳೂ ಪರಮಾತ್ಮನ ಅಧೀನರೇ ಆಗಿರುವುದರಿಂದ 'ತನ್ನ ಅಧೀನ ರಾಗಿರುವುದು' ಭಕ್ತರ ಹೆಗ್ಗಳಿಕೆ ಅನಿಸದಷ್ಟೆ.. ಹಾಗಾಗಿ 'ತನ್ನ ಅಧೀನರು ಎಂಬ ಎಚ್ಚರಿಕೆ ಉಳ್ಳವರು ಭಕ್ತರು' ಎಂಬ ವಿವರಣೆಯನ್ನು ಗೀತಾವಿವೃತಿಯಲ್ಲಿ ಕೊಡಲಾಗಿದೆ. ದ್ವೇಷಿಗಳಿಗೆ ಇಂತಹ ಎಚ್ಚರ ಇಲ್ಲದಿರುವುದರಿಂದ ಇದು ಭಕ್ತರ ಹೆಗ್ಗಳಿಕೆಯೆನಿಸುತ್ತದೆ.

**ಯದ್ವಾ ಸಮ ಇತಿ ಪೂರ್ವಾರ್ಧೇ ಭಕ್ತೋಽಭಕ್ತ ಇತಿ ಪದದ್ವಯಮಧ್ಯಾ-ಹಾರ್ಯಮ್ । ಸರ್ವಭೂತೇಷು ಮೇ ಭಕ್ತಃ ದ್ವೇಷ್ಯೋ ನಾಸ್ತಿ । ಅಭಕ್ತೋ ಮೇ ಪ್ರಿಯೋ ನಾಸ್ತಿ । ಅತಃ ಸಮೋಽಹಮ್ । ಯದಿ ಭಕ್ತೇಷು ದ್ವೇಷಮಭಕ್ತೇಷು ಪ್ರೀತಿಂ ಕುರ್ಯಾಂ ತರ್ಹ್ಯೇವ ವಿಷಮಃ ಸ್ಯಾಂ । ನ ಚೈವಮ್ । ಕಿಂತು ಭಕ್ತ್ಯನು-ಸಾರೇಣ ಫಲದ ಇತಿ ಭಾವೇನಾಽಹ- ಯ ಇತಿ ॥ ಯೇ ಮಯಿ ಪ್ರೀತ್ಯಾ ವರ್ತಂತೇ ತೇಷ್ವಹಂ ಪ್ರೀತ್ಯಾ ವರ್ತ ಇತ್ಯರ್ಥಃ ॥ 29 ॥**

**ಅನುವಾದ–** ಅಥವಾ **'ಸಮೋಽಹಂ'** ಎಂದು ಆರಂಭಗೊಳ್ಳುವ ಈ ಶ್ಲೋಕದ ಪೂರ್ವಾರ್ಧದಲ್ಲಿ **'ಭಕ್ತಃ'** ಹಾಗೂ **'ಅಭಕ್ತಃ'** ಎಂಬೀ ಎರಡು ಪದಗಳನ್ನು ಅಧ್ಯಾಹಾರ ಮಾಡಿ ಕೊಳ್ಳಬೇಕು. ಆಗ **'ಸರ್ವಭೂತೇಷು ಮೇ ಭಕ್ತಃ ದ್ವೇಷ್ಯೋ ನಾಸ್ತಿ ಅಭಕ್ತೋ ಮೇ ಪ್ರಿಯೋ ನಾಸ್ತಿ । ಅತೋಽಹಂ ಸಮಃ-** ಎಲ್ಲಾ ಜೀವರ ಮಧ್ಯೆ ಭಕ್ತನೆನಿಸಿರುವವನು ನನ್ನ ದ್ವೇಷಕ್ಕೆ ಗುರಿಯಾಗಿಲ್ಲ; ಭಕ್ತನಲ್ಲದವನು ನನ್ನ ಪ್ರೀತಿಗೆ ಪಾತ್ರನಾಗಿಲ್ಲ, ಹಾಗಾಗಿ ನಾನು **'ಸಮ'** ಎಂದೆನಿಸಿರುವೆನು– ಎಂದಂತಾಯಿತು. ಭಕ್ತರಲ್ಲಿ ದ್ವೇಷವನ್ನು ಭಕ್ತರಲ್ಲದವರಲ್ಲಿ ಪ್ರೀತಿಯನ್ನು ಮಾಡಿದೆನೆಂದಾದರೆ ಆಗ ನಾನು ವಿಷಮನೆಂದಾದೇನು. ಆದರೆ ಹಾಗೆ ನಾನು ಮಾಡುತ್ತಿಲ್ಲ, ಭಕ್ತಿಗೆ ಅನುಸಾರವಾಗಿಯೇ ಭಕ್ತಿಯ ಫಲವನ್ನು ಅನುಗ್ರಹಿಸುತ್ತಿದ್ದೇನೆ ಎಂಬ ಅಭಿಪ್ರಾಯದಿಂದ **ಯೇ ಭಜಂತಿ ಮಾಂ ಭಕ್ತ್ಯಾ ಮಯಿ ತೇ ತೇಷು ಚಾಹಂ** ಎಂಬ ಉತ್ತರಾರ್ಧ ಹೊರಟಿದೆ. 'ಯಾರು ನನ್ನ ವಿಷಯದಲ್ಲಿ ಪ್ರೀತಿಯಿಂದ ಇರುತ್ತಾರೋ ಅವರಲ್ಲಿ ನಾನೂ ಪ್ರೀತಿಯಿಂದ ಇರುತ್ತೇನೆ ಎಂದೆನ್ನುವುದು **'ತೇ ಮಯಿ ತೇಷು ಚಾಪ್ಯಹಂ'** ಎಂಬ ವಾಕ್ಯದ ಅಭಿಪ್ರಾಯವಾಗಿದೆ. ॥ 29॥

**ವಿವರಣೆ-** ಗೀತಾವಿವೃತಿಯಲ್ಲಿ ಅಥವಾ ಎಂದು ಆರಂಭಿಸಿ ಮುಂದಿಡಲಾಗಿರುವ ಈ ಶ್ಲೋಕದ ವ್ಯಾಖ್ಯಾನವು ಆಚಾರ್ಯರ ಗೀತಾ ತಾತ್ಪರ್ಯದ ಅನುಸಾರಿಯಾಗಿದೆ. ಆದರಲ್ಲಿ

'ನಾಸ್ಯ ಭಕ್ತೋऽಪಿ ಯೋ ದ್ವೇಷ್ಯೋ ನ ಚಾಭಕ್ತೋऽಪಿ ಯಃ ಪ್ರಿಯಃ । ಕಿಂತು ಭಕ್ತ್ಯನುಸಾರೇಣ ಫಲದೋऽತಃ ಸಮೋ ಹರಿಃ । ಎಂಬೀ ಪಾದ್ಮಪುರಾಣದ ವಾಕ್ಯವನ್ನು ಉದಾಹರಿಸುವ ಮೂಲಕ ಈ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಿದೆ.

## ಭಕ್ತಿಯ ಮಹಿಮೆ

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ ಸಮ್ಯಗ್ ವ್ಯವಸಿತೋ ಹಿ ಸಃ ॥ 30 ॥**

**ಅರ್ಥ**– ಅತ್ಯಂತ ಕೆಟ್ಟ ಆಚಾರವುಳ್ಳವನೇ ಆಗಿರಬಹುದು, ಅಂತಹ ವ್ಯಕ್ತಿಯು ಇತರ ದೇವತೆಗಳನ್ನು, ಅವರಲ್ಲಿ ಸ್ವಾತಂತ್ರ್ಯಾನುಸಂಧಾನದಿಂದ ಭಜಿಸದೆ ನನ್ನನ್ನೊಬ್ಬನನ್ನೇ ಸೇವಿಸುತ್ತಿದ್ದಾನೆಂದರೆ, ಅವನು ಸಜ್ಜನನೆಂದೇ ಅಂಗೀಕಾರಾರ್ಹನು. ಅವನು ಯೋಗ್ಯವಾದ ಭಗವತ್ ತತ್ತ್ವನಿಶ್ಚಯವನ್ನು ಮೈಗೂಡಿಸಿಕೊಂಡಿರುವವನೇ ಆಗಿರುವವನಷ್ಟೆ.

**ಭಕ್ತಪ್ರಶಂಸಾ ಕ್ರಿಯತೇ– ಅಪಿ ಚೇದಿತ್ಯಾದಿನಾ ॥ ಸುದುರಾಚಾರೋऽಪಿ ಭಗವದ್‌ಭಕ್ತೋ ಯಃ ಕಶ್ಚಿದ್‌ದೇವಾಂಶಃ ಋಷ್ಯಾದಿಃ ಸ್ವಯೋಗ್ಯಾಧಿಕಪುಣ್ಯಾಪಗಮಾಯ ದೈವಾದತ್ಯಂತದುರಾಚಾರೋऽಪಿ ಅನನ್ಯಭಾಕ್ ಸ್ವಾತಂತ್ರ್ಯೇಣ (ದೇವತಾಂತರ ) ಭಜನಹೀನಃ ಸನ್ ಮಾಂ ಭಜತೇ ಚೇತ್ ಸಃ ಸಾಧುರೇವ ಮಂತವ್ಯಃ । ಕುತಃ ಹಿ ಯಸ್ಮಾದ್‌ಸ ಚಂದ್ರಸೂರ್ಯಾದ್ಯಂಶಃ ಸಮ್ಯಕ್‌ವ್ಯವಸಿತಃ ಸಂಜಾತಸಮೀಚೀನಭಗವತ್ತತ್ತ್ವನಿಶ್ಚಯವಾನತ ಇತ್ಯರ್ಥಃ ॥ 30 ॥**

**ಅನುವಾದ– ಅಪಿ ಚೇದ್** ಸುದುರಾಚಾರೋ ಎಂಬಿತ್ಯಾದಿ ಶ್ಲೋಕದಲ್ಲಿ ಭಕ್ತರ ಪ್ರಶಂಸೆಯನ್ನು ಮಾಡಲಾಗುತ್ತಿದೆ. **ಸುದುರಾಚಾರಃ ಅಪಿ**= ಪರಮಾತ್ಮನ ಭಕ್ತನಾಗಿದ್ದು ದೇವಾಂಶ ಸಂಭೂತನಾದ ಯಾರೋ ಒಬ್ಬ ಋಷಿಯೋ . ಬೇರೊಬ್ಬನೋ, ತನ್ನ ಯೋಗ್ಯತೆಗಿಂತ ಅಧಿಕವಾಗಿ ಸಂಪಾದಿಸಿದ ಪುಣ್ಯದ ಕ್ಷಯಕ್ಕಾಗಿ ದೈವವಶದಿಂದ ಅತ್ಯಂತ ಕೆಟ್ಟ ಆಚಾರವುಳ್ಳವನಾಗಿದ್ದರೂ, **ಅನನ್ಯಭಾಕ್** = ಅವರಲ್ಲಿ ಸ್ವಾತಂತ್ರ್ಯಾನುಸಂಧಾನದಿಂದ ಇತರ ದೇವತೆಗಳನ್ನು ಭಜಿಸದೆ (ಪರಮಾತ್ಮನ ಪರಿವಾರದೇವತೆಗಳಿವರು ಎಂಬ ಅನುಸಂಧಾನದಿಂದ ಇತರ ದೇವತೆಗಳನ್ನು ಭಜಿಸುವುದು ವಿಹಿತವೇ ಆಗಿದೆ ; ಅವರು ಸ್ವತಂತ್ರರು ಎಂಬ ಅನುಸಂಧಾನವಿರಬಾರದು) ನನ್ನನ್ನು ಭಜಿಸುತ್ತಿದ್ದಾನೆ ಎಂದಾದಲ್ಲಿ ಅವನು ಸಜ್ಜನನೆಂದೇ ಅಂಗೀಕಾರಾರ್ಹನು. ಅದು ಯಾಕೆ ಹೀಗೆ ? **ಹಿ** = ಯಾವ ಕಾರಣದಿಂದ ಚಂದ್ರ ಸೂರ್ಯಾದಿ ದೇವತೆಗಳಲ್ಲೊಬ್ಬರ ಅಂಶನೆನಿಸಿರುವ ಅವನು, **ಸಮ್ಯಗ್ ವ್ಯವಸಿತಃ**= ಸಿದ್ಧಿಸಿರುವ ಯೋಗ್ಯ ರೀತಿಯ

ಪರಮಾತ್ಮವಿಷಯಕ ತತ್ತ್ವನಿಶ್ಚಯವುಳ್ಳವನೇ ಆಗಿರುತ್ತಾನೊ ಆ ಕಾರಣದಿಂದ 'ಅವನು ಸಜ್ಜನನೇ ಆಗಿರುವನು ಎಂದು ಅಭಿಪ್ರಾಯ. ।। 30 ।।

**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।**
**ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ।। 31 ।।**

**ಅರ್ಥ-** ಆ ಭಕ್ತನು ಭಗವತ್ ತತ್ತ್ವನಿಶ್ಚಯವುಳ್ಳವನಾದುದರಿಂದ ಆದಷ್ಟು ಬೇಗನೆ ದುರಾಚಾರವನ್ನು ತ್ಯಜಿಸಿ ಧರ್ಮಚಿತ್ತನೆನಿಸುತ್ತಾನೆ. ಶಾಶ್ವತವಾದ ಮೋಕ್ಷ ರೂಪ ಫಲವನ್ನು ಚೆನ್ನಾಗಿ ಪಡೆಯುತ್ತಾನೆ. ಕುಂತಿಪುತ್ರನೇ ! ನನ್ನ ಭಕ್ತನು ಬಹಳ ಕೆಟ್ಟ ಆಚಾರವುಳ್ಳನಾಗಿದ್ದರೂ ನರಕಾದ್ಯನರ್ಥಕ್ಕೆ ಪಾತ್ರನಾಗುವುದಿಲ್ಲಎಂದು ತಿಳಿದುಕೋ.

**ಸಮ್ಯಗ್ ವ್ಯವಸಾಯವತ್ತ್ವೇಽಪಿ ಸುದುರಾಚಾರಃ ಕುತಃ ಸಾಧುರ್ಮಂತವ್ಯಃ ಇತ್ಯತ ಆಹ- ಕ್ಷಿಪ್ರಮಿತಿ ।। ಸಮ್ಯಕ್ ವ್ಯವಸಾಯವತ್ತ್ವಾತ್ ಕ್ಷಿಪ್ರಂ ಧರ್ಮ-ಚಿತ್ತೋ ಭವತಿ । ಶಶ್ವತ್ ಶಾಂತಿಂ ಶಾಶ್ವತಮೋಕ್ಷಂ ಚ ಸಮ್ಯಗಧಿಗಚ್ಛತಿ । ಹೇ ಕೌಂತೇಯ ! ಮೇ ಭಕ್ತಃ ದುರಾಚಾರೋಽಪಿ ನ ಪ್ರಣಶ್ಯತಿ । ನರಕಾದ್ಯನರ್ಥಂ ನ ಪ್ರಾಪ್ನೋತಿ । ಏತಚ್ಚ ದೇವದೇವಾಂಶ-ಋಷ್ಯಾದಿವಿಷಯಂ ಜ್ಞೇಯಮ್ । ।। 31 ।।**

**ಅನುವಾದು-** ಚೆನ್ನಾಗಿ ಪರಮಾತ್ಮತತ್ತ್ವ ನಿಶ್ಚಯವುಳ್ಳವನಾದರೂ, ಅತಿ ಕೆಟ್ಟ ಆಚಾರವುಳ್ಳವನು ಯಾವ ಕಾರಣದಿಂದ ಸಾಧುವೆಂದು ಅಂಗೀಕಾರಾರ್ಹನು ಎಂಬ ಪ್ರಶ್ನೆಗೆ ಉತ್ತರವನ್ನು **'ಕ್ಷಿಪ್ರಂ ಭವತಿ ಧರ್ಮಾತ್ಮಾ'** ಎಂಬ ಶ್ಲೋಕದಲ್ಲಿ ನೀಡಲಾಗುತ್ತಿದೆ. ಚೆನ್ನಾಗಿ ಭಗವಂತನ ತತ್ತ್ವನಿಶ್ಚಯವು ಇರುವುದರಿಂದಲೇ, ಅವನು ಆದಷ್ಟು ಬೇಗನೆ ಸದಾಚಾರದೆಡೆಗೆ ಆಕರ್ಷಿಸಲ್ಪಟ್ಟ ಮನಸುಳ್ಳವನಾಗುತ್ತಾನೆ. **ಶಶ್ವತ್ ಶಾಂತಿಂ ಚ**= ಶಾಶ್ವತ ಮೋಕ್ಷವನ್ನೂ ಕೂಡ ಚೆನ್ನಾಗಿ ಪಡೆಯುತ್ತಾನೆ. ಕುಂತೀ ಪುತ್ರನೇ ! ನನ್ನ ಭಕ್ತನು ದುರಾಚಾರಿಯೆನಿಸಿದ್ದರೂ ನ ಪ್ರಣಶ್ಯತಿ= ನರಕಾದ್ಯನರ್ಥಕ್ಕೆ ಗುರಿಯಾಗುವುದಿಲ್ಲ, ಹೀಗೆ ದುರಾಚಾರಿಯಾಗಿದ್ದರೂ ನರಕಾದ್ಯನರ್ಥಕ್ಕೆ ಗುರಿಯಾಗದೆ ಇರುವುದು, ದೇವತೆಗಳು ದೇವತಾಂಶರು ಹಾಗೂ ಋಷ್ಯಾದಿಗಳು ಇವರಿಗೆ ಸಂಬಂಧಿಸಿದಂತೆ ಹೇಳಲ್ಪಟ್ಟಿದೆ. (ಮನುಷ್ಯರು ಭಗವದ್‌ಭಕ್ತರಾಗಿದ್ದು ದೈವವಶಾತ್ ದುರಾಚಾರಿಗಳಾಗಿದ್ದರೆ ಅವರಿಗೆ ಅನರ್ಥವಿದ್ದೇ ಇದೆ) ಎಂದು ತಿಳಿದುಕೊಳ್ಳಬೇಕು. ।। 31 ।।

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್ ।। 32 ।।**

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥ 33 ॥**

**ಅರ್ಥ-** ಅರ್ಜುನನೇ ! ಯಾರು ಪಾಪಕರ್ಮದಿಂದ ಹೀನಜನ್ಮ ಪಡೆದವರಾಗಿ, ಸ್ತ್ರೀಯರೋ, ವೈಶ್ಯರೋ, ಹಾಗೆಯೇ ಶೂದ್ರರೋ ೀ ಆಗಿರುತ್ತಾರೋ ಅಂತವರೂ ಕೂಡಾ ನನ್ನನ್ನು ಆಶ್ರಯಿಸಿ ಇದ್ದಾರೆ ಎಂದಾದಲ್ಲಿ ಮೋಕ್ಷವನ್ನು ಪಡೆಯುತ್ತಾರೆ. ಹಾಗಿರುವಾಗ ಪುಣ್ಯದ ಕಾರಣದಿಂದ ಬ್ರಾಹ್ಮಣರೆನಿಸಿದವರು, ರಾಜರೆನಿಸಿದವರು ಋಷಿಗಳೆನಿಸಿದವರು, ನನ್ನ ಭಕ್ತರಾಗಿದ್ದಾರೆ ಎಂದಾದಲ್ಲಿ ಮೋಕ್ಷವನ್ನು ಪಡೆಯುತ್ತಾರೆ ; ಹಾಗಿರುವಾಗ ಸ್ವಭಾವತಃ ಸ್ತ್ರೀಯರು, ವೈಶ್ಯರು, ಶೂದ್ರರೂ ಎನಿಸಿದ್ದು ನನ್ನ ಭಕ್ತರೆನಿಸಿರುವವರು ಮೋಕ್ಷಕ್ಕೆ ಹೋಗುತ್ತಾರೆ ಎಂದು ಪ್ರತ್ಯೇಕವಾಗಿ ಹೇಳಬೇಕೇನು ? (ಅವಶ್ಯವಾಗಿ ಹೋಗಿಯೇ ತೀರುತ್ತಾರೆ). ಹೀಗೆ ಭಕ್ತಿಯು ಮೋಕ್ಷಕ್ಕೆ ಕಾರಣವಾಗಿರುವುದರಿಂದ, ಅಶಾಶ್ವತವಾದ, ಸುಖರಹಿತವಾದ ಈ ದೇಹ ಹಾಗೂ ಭೂಲೋಕವನ್ನು ಹೊಂದಿ ನನ್ನನ್ನು ಸೇವಿಸುವವನಾಗು.

**ಕೈಮುತ್ಯೇನ ಚ ಭಕ್ತೇರ್ಮಹಿಮಾನಮಾಹ- ಮಾಂ ಹೀತ್ಯಾದಿನಾ॥ ಹೇ ಪಾರ್ಥ ! ಪಾಪಯೋನಯಃ ಸ್ವಯಮುತ್ತಮವರ್ಣಾ ಅಪಿ ಪಾಪಹೇತುಕಾ ಯೋನಿರ್ಜನ್ಮ ಯೇಷಾಂ ತೇ ಪಾಪಯೋನಯಃ । ತೇ ಕ ಇತ್ಯತ ಉಕ್ತಮ್- ಸ್ತ್ರಿಯ ಇತ್ಯಾದಿನಾ ॥ ಸ್ವತಃ ಪುಮಾಂಸೋಽಪಿ ಪಾಪಾತ್ ಸುದ್ಯುಮ್ನಸ್ಯ ಇಲಾತ್ವ- ಮಿವ ಸ್ತ್ರೀತ್ವಂ ಪ್ರಾಪ್ತಾ ಯೇ ಚ ಸ್ವತೋ ಬ್ರಾಹ್ಮಣಾದಿರಪಿ ಪಾಪಾದ್ ವೈಶ್ಯಾದಿ- ಹೀನವರ್ಣತಾಂ ಪ್ರಾಪ್ತಾಃ ಶೂದ್ರತ್ವಂ ವಾ ಪ್ರಾಪ್ತಾಃ ಮಾಮಾಶ್ರಿತ್ಯ ಸ್ಯುಃ ವರ್ತೇ- ರನ್ ಮಯಿ ಭಕ್ತಿಮಂತೋ ಭವೇಯುಃ ತೇಽಪಿ ಪರಾಂ ಗತಿಂ ಯಾಂತಿ ॥32॥**

**ಪುಣ್ಯಾಃ ಪುಣ್ಯಹೇತುಕಾಃ ಬ್ರಾಹ್ಮಣಾಃ (ಸ್ವರೂಪತಃ) ಶೂದ್ರಾದಿಹೀನ- ವರ್ಣಾ ಅಪಿ ಸ್ವಯಂ ಯದಿ ಪುಣ್ಯವಶೇನ ದೇಹತಃ ಬ್ರಾಹ್ಮಣತ್ವಂ ಪ್ರಾಪ್ತಾಃ ತಥಾ ರಾಜತ್ವಂ ಋಷಿತ್ವಂ ವಾ ಪ್ರಾಪ್ತಾಃ ಪರಾಂ ಗತಿಂ ಯಾಂತಿ । ಕಿಂ ಪುನಃ ಸ್ವಾಭಾವಿಕಾಃ ಏತೇ ಸ್ತ್ರೀವೈಶ್ಯಾದಯಃ ಪರಾಂ ಗತಿಂ ಯಾಂತೀತಿ ವಾಚ್ಯಮಿತ್ಯರ್ಥಃ । ಅತ್ರ ನೈಮಿತ್ತಿಕಸ್ತ್ರೀವೈಶ್ಯಾದಿಗ್ರಹಣಮಧ್ಯೇ ನೈಮಿತ್ತಿಕಪುಂಸಾಂ ಸ್ತ್ರಿಯಃ ಪುಮಾಂಸೋ ವೈಶ್ಯಾಃ ಶೂದ್ರಾಃ ಇತ್ಯನುಕ್ತಿಸ್ತು ಸ್ವಭಾವತಃ ಸ್ತ್ರೀಣಾಂ ಕೇನಾಪಿ ಹೇತುನಾ ಪುಂಸ್ತ್ವಾಭಾವೇನ ನೈಮಿತ್ತಿಕಪುಂಸಾಮಭಾವಾದೇವ । 'ಯಾಂತಿ ಸ್ತ್ರೀತ್ವಂ ಪುಮಾಂಸೋಽಪಿ ಪಾಪತಃ ಕಾಮತೋಽಪಿ ವಾ । ನ ಸ್ತ್ರಿಯೋ ಯಾಂತಿ ಪುಂಸ್ತ್ವಂ ತು ಸ್ವಭಾವಾದೇವ ಯಾಃ ಸ್ತ್ರಿಯಃ' ಇತ್ಯುಕ್ತೇರಿತಿ । ಅತೋ ಭಕ್ತೇಃ**

**ಸಾಧನೋತ್ತಮತ್ವಾದೇವ ಅನಿತ್ಯಮಸುಖಂ ಸುಖಹೀನಂ ಇಮಂ ಭಕ್ಷ್ಯಾದಿಸಾಧನಭೂತಂ ಲೋಕಂ ದೇಹಂ ಭೂಲೋಕಂ ವಾ ಪ್ರಾಪ್ಯ ಅವಿಲಂಬೇನ ಮಾಂ ಭಜಸ್ವ ॥ 33 ॥**

**ಅನುವಾದ**– **'ಮಾಂ ಹಿ ಪಾರ್ಥ'** ಎಂಬಿತ್ಯಾದಿ ಮುಂದಿನ ಎರಡು ಶ್ಲೋಕಗಳಲ್ಲಿ ಕೈಮುತ್ಯನ್ಯಾಯದಿಂದಲೂ (ಅಶಕ್ಯವೆನಿಸಿದ್ದು ಸಾಧ್ಯವಾದರೆ ಶಕ್ಯವೆನಿಸಿದ್ದು ಯಾಕೆ ಸಾಧ್ಯವೆನಿಸದು ಎಂಬ ದಾಟಿಯಲ್ಲಿ ವಿಷಯವನ್ನು ಸಮರ್ಥಿಸುವುದನ್ನು ಕೈಮುತ್ಯನ್ಯಾಯ ಎಂದೆನ್ನಲಾಗುವುದು) ಭಕ್ತಿಯ ಮಾಹಾತ್ಮ್ಯವನ್ನು ಹೇಳಲಾಗುತ್ತಿದೆ. ಅರ್ಜುನನೇ ! **ಪಾಪಯೋನಯಃ** = ಸ್ವತಃ ತಾವು ಪುರುಷರೋ, ಉತ್ತಮ ವರ್ಣದವರೋ ಆಗಿದ್ದು, ಪಾಪಕರ್ಮದಿಂದ ಹೀನ ಜನ್ಮವುಳ್ಳವರೆನಿಸಿದವರು ಯಾರೋ, ಅವರು ಅಂತಹ ಪಾಪಯೋನಿಗಳು ಯಾರು ? ಎಂಬ ಪ್ರಶ್ನೆಗೆ **ಸ್ತ್ರಿಯೋ ವೈಶ್ಯಾಃ** ಎಂಬಿತ್ಯಾದಿವಾಕ್ಯಶೇಷದಿಂದ ಉತ್ತರಿಸಲಾಗುತ್ತಿದೆ. **ಸ್ತ್ರಿಯಃ**= (1) ಸುದ್ಯುಮ್ನ ಎಂಬ ಪುರುಷನು ಇಲಾ ಎಂಬ ಸ್ತ್ರೀಯಾಗಿ ಜನಿಸಿದಂತೆ, 'ಸ್ವಭಾವತಃ' ಪುರುಷರಾಗಿದ್ದರೂ ಪಾಪಕರ್ಮದಿಂದ ಸ್ತ್ರೀತ್ವವನ್ನು ಹೊಂದಿದವರು. ಸ್ವತಃ ಬ್ರಾಹ್ಮಣನೋ ಕ್ಷತ್ರಿಯನೋ ಆಗಿದ್ದು ಪಾಪಕರ್ಮದಿಂದಾಗಿ ವೈಶ್ಯಾದಿ ಹೀನವರ್ಣದವರಾಗಿ ಜನಿಸಿರುವವರು, ಅಥವಾ ಶೂದ್ರತ್ವವನ್ನು ಹೊಂದಿದವರು ( ಇವರೆಲ್ಲರು ಪಾಪಯೋನಿಗಳು) ಇಂತವರೆಲ್ಲಾ ನನ್ನನ್ನು **ಆಶ್ರಯಿಸಿ ಸ್ಯುಃ**= ಇರಬೇಕು ಅಂದರೆ – ನನ್ನಲ್ಲಿ ಭಕ್ತಿಯುಳ್ಳವರಾಗಿರಬೇಕು. ಹಾಗಾದಲ್ಲಿ ಅವರೂ, **ಪರಾಂ ಗತಿಂ**= ಮೋಕ್ಷವನ್ನು ಹೊಂದುತ್ತಾರೆ. ಹಾಗೆಯೇ **ಪುಣ್ಯಾ ಬ್ರಾಹ್ಮಣಾಃ**= ಸ್ವಭಾವತಃ ಶೂದ್ರಾದಿ ಹೀನವರ್ಣದವರಾಗಿದ್ದು, ಪುಣ್ಯರೂಪಕಾರಣವುಳ್ಳವರಾಗಿ ಅಂದರೆ– ಪುಣ್ಯದ ವಶದಿಂದಾಗಿ, ಶಾರೀರಿಕವಾಗಿ ಬ್ರಾಹ್ಮಣರಾಗಿ ಹುಟ್ಟಿರುವವರೋ, ಹಾಗೆಯೆ ರಾಜರಾಗಿಯೋ, ಋಷಿಗಳಾಗಿಯೋ ಆಗಿರುವವರೋ ಅವರೂ ಮೋಕ್ಷವನ್ನು ಪಡೆಯುವರು. **ಕಿಂ ಪುನಃ**= ಸ್ವಾಭಾವಿಕವಾಗಿಯೇ, ಸ್ತ್ರೀ, ವೈಶ್ಯ, ಶೂದ್ರ, ಬ್ರಾಹ್ಮಣ, ರಾಜ, ಋಷಿಗಳೆನಿಸಿರುವ ನನ್ನ ಭಕ್ತರು ಮೋಕ್ಷವನ್ನು ಪಡೆಯುತ್ತಾರೆಂದು ಪ್ರತ್ಯೇಕವಾಗಿ ಹೇಳಬೇಕೇನು ? ॥ 32 ॥

ಇಲ್ಲಿ ಸ್ವಭಾವತಃ ಪುರುಷರಾಗಿದ್ದು ಪಾಪನಿಮಿತ್ತದಿಂದ ಸ್ತ್ರೀಯೆನಿಸಿದವರನ್ನು, ಸ್ವಭಾವತಃ ಬ್ರಾಹ್ಮಣಕ್ಷತ್ರಿಯರಾಗಿದ್ದು ಪಾಪವಶಾತ್, ವೈಶ್ಯ ಶೂದ್ರರೆನಿಸಿದವರು ಇವರನ್ನು ಹೇಳುವಾಗ ಸ್ವಭಾವತಃ ಸ್ತ್ರೀಯರಾಗಿದ್ದು ಪಾಪರೂಪನಿಮಿತ್ತದಿಂದಾಗಿ ಪುರುಷರೆನಿಸಿದವರನ್ನು ಸೇರಿಸಿಕೊಂಡು, 'ಸ್ತ್ರಿಯಃ ಪುಮಾಂಸಃ, ವೈಶ್ಯಾಃ, ಶೂದ್ರಾ' ಎಂದು ಹೇಳಬೇಕಿತ್ತಲ್ಲವೇ ಅವರನ್ನು ಬಿಟ್ಟು ಹೇಳಿರುವುದು ಯಾಕೆ ? ಎಂಬ ಪ್ರಶ್ನೆಗೆ ಇದು ಉತ್ತರ – ಇಂತಹ ನೈಮಿತ್ತಿಕ ಪುರುಷರೆಂದರೆ ಸ್ವಭಾವತಃ ಸ್ತ್ರೀಯರಾಗಿದ್ದು ಪಾಪರೂಪನಿಮಿತ್ತದಿಂದ ಪುರುಷರೆನಿಸಿದವರನ್ನು ಇಟ್ಟುಕೊಳ್ಳಬೇಕಾಗುತ್ತದೆ. ಆದರೆ 'ಸ್ವಭಾವತಃ ಸ್ತ್ರೀಯರಾಗಿದ್ದವರು ಯಾವುದೇ ಕಾರಣದಿಂದ ಪುರುಷರೆನಿಸುವುದು ಎನ್ನುವುದೇ ಇಲ್ಲ. ಹಾಗಾಗಿ ಅಸಂಭಾವಿತವೆನಿಸಿರುವ ನೈಮಿತ್ತಿಕ ಪುರುಷರನ್ನು

ಸೇರಿಸಿಕೊಂಡು ಹೇಳಿಲ್ಲ- ಎಂದು. **ಯಾಂತಿ ಸ್ತ್ರೀತ್ವಂ ಪುಮಾಂಸೋ ಹಿ ಪಾಪತಃ ಕಾಮತೋಽಪಿವಾ । ನ ಸ್ತ್ರಿಯೋ ಯಾಂತಿ ಪುಂಸ್ತ್ವಂ ತು ಸ್ವಭಾವಾದೇವ ಯಾಃ ಸ್ತ್ರಿಯಃ**- ಸ್ವಭಾವತಃ ಪುರುಷರಾದವರು ಪಾಪದಿಂದಲೋ ಇಚ್ಛಾನುಸಾರವಾಗಿಯೋ ಸ್ತ್ರೀತ್ವವನ್ನು ಹೊಂದುತ್ತಾರೆ. ಆದರೆ ಸ್ವಭಾವತಃ ಯಾರು ಸ್ತ್ರೀಯರೇ ಆಗಿರುತ್ತಾರೋ, ಅಂತಹ ಸ್ತ್ರೀಯರು ಸರ್ವಥಾ ಪುರುಷತ್ವವನ್ನು ಹೊಂದುವುದಿಲ್ಲ' ಎಂಬ ಪ್ರಮಾಣದಿಂದ ನೈಮಿತ್ತಿಕಪುರುಷರೆನ್ನುವ ಪ್ರಕಾರವು ಅಸಂಭಾವಿತ ಎಂದು ಸಿದ್ಧವಾಗಿದೆ. ಈ ಎಲ್ಲಾ ಕಾರಣಗಳಿಂದ ಭಕ್ತಿಯು ಸಾಧನಗಳಲ್ಲೆಲ್ಲಾ ಉತ್ತಮವೆನಿಸಿರುವುದರಿಂದಲೇ. ಅಶಾಶ್ವತವಾದ, **ಅಸುಖಂ**= ಸುಖರಹಿತ ವಾದ, **ಇಮಂ**= ಭಕ್ತಿ ಸಂಪಾದನೆಗೆ ಆವಶ್ಯಕವೆನಿಸಿರುವ **ಲೋಕಂ**= ಶರೀರವನ್ನು ಅಥವಾ **ಲೋಕಂ**= ಭೂಲೋಕವನ್ನು ಹೊಂದಿ (ಅದರ ಸಾರ್ಥಕತೆಗಾಗಿ) ತಡಮಾಡದೆ ನನ್ನ ಸೇವಿಸುವವನಾಗು. ॥ 33 ॥

**ವಿವರಣೆ**– (1) ಸುದ್ಯುಮ್ನನೆಂಬ ರಾಜಕುಮಾರನು ಸುಕುಮಾರವನವನ್ನು ಪ್ರವೇಶಿಸಿ, 'ಇಲ್ಲಿಪ್ರವೇಶಿಸಿದ ಪುರುಷರು ಸ್ತ್ರೀಯರಾಗುತ್ತಾರೆ' ಎಂಬೀರೀತಿಯ ಪಾರ್ವತೀ ಶಾಪವಶಾತ್ ಇಳಾ ಎಂಬ ಸ್ತ್ರೀರೂಪವನ್ನು ಪಡೆದ ಕತೆ ಭಾಗವತದ ಒಂಬತ್ತನೆಯ ಸ್ಕಂಧದಲ್ಲಿ ವಿಸ್ತಾರವಾಗಿ ನಿರೂಪಿತವಾಗಿದೆ. ಅದನ್ನು ಗೀತಾವಿವೃತಿಯಲ್ಲಿ 'ಸುದ್ಯುಮ್ನಸ್ಯೇಲಾತ್ವಮಿವ' ಎಂದು ಸೂಚಿಸಲಾಗಿದೆ.

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ 34 ॥**

***॥ ಓಂತತ್ಸದಿತಿ ಶ್ರೀಮದ್‌ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ರಾಜಗುಹ್ಯಯೋಗೋ (ಭಗವನ್ಮಹಿಮಾವರ್ಣನರೂಪಭಕ್ತಿಯೋಗ)ನಾಮ ನವಮೋಽಧ್ಯಾಯಃ ॥***

**ಅರ್ಥ**- ನನ್ನಲ್ಲಿ ಮನಸ್ಸನ್ನು ನಿಶ್ಚಲವಾಗುವಂತೆ ಇಡು. ನನ್ನಲ್ಲಿ ಬೆಳೆಸಿಕೊಂಡ ಭಕ್ತಿಯುಳ್ಳವನಾಗು. ಯಾಗಗಳಲ್ಲಿ ನನ್ನನ್ನೇ ಆರಾಧಿಸು . ನನ್ನನ್ನು ನಮಸ್ಕರಿಸು. ಈ ರೀತಿಯಲ್ಲಿ ಇರುವವನಾಗಿ ಎಲ್ಲಾಸಂದರ್ಭದಲ್ಲೂಮನಸ್ಸನ್ನು ನನ್ನಲ್ಲಿತೊಡಗಿಸಿ, ನನ್ನನ್ನು ಆಶ್ರಯಿಸಿದವ ನಾಗಿ ನನ್ನನ್ನು ಸೇರುವವನಾಗುವಿ.

***ಇಲ್ಲಿಗೆ ಶ್ರೀಕೃಷ್ಣಾರ್ಜುನ ಸಂವಾದರೂಪವಾದ ಭಗವದ್ಗೀತೆಯಲ್ಲಿ ರಾಜಗುಹ್ಯಯೋಗ (ಭಗವನ್ಮಹಿಮಾವರ್ಣನರೂಪಭಕ್ತಿಯೋಗ)ವೆಂಬ ಒಂಬತ್ತನೇ ಅಧ್ಯಾಯವು ಮುಗಿಯಿತು.***

**ಭಜನಪ್ರಕಾರಂ ದರ್ಶಯನ್ ತಸ್ಯ ಫಲಮಾಹ- ಮನ್ಮನಾ ಇತಿ ॥ ಏವಂ ಮನ್ಮನಸ್ತ್ವಾದಿಪ್ರಕಾರೇಣ ಮತ್ಪರಾಯಣಃ ಸನ್ ಆತ್ಮಾನಂ ಮನೋ ಮಯಿ ಯುಕ್ತ್ವಾ ಮಾಮೇವೈಷ್ಯಸಿ ಪ್ರಾಪ್ಸ್ಯಸೀತಿ ॥ 34 ॥**

*॥ ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ ನವಮೋಽಧ್ಯಾಯಃ ॥*

**ಅನುವಾದ** – 'ಮನ್ಮನಾ ಭವ ಮದ್‌ಭಕ್ತಃ' ಎಂಬ ಶ್ಲೋಕದಲ್ಲಿ ತನ್ನನ್ನು ಸೇವಿಸುವ ಪ್ರಕಾರವನ್ನು ತೋರಿಸುತ್ತಾ, ಆ ಸೇವೆಯ ಫಲವನ್ನು ಹೇಳಲಾಗುತ್ತಿದೆ. ಏವಂ = ನನ್ನಲ್ಲಿ ತೊಡಗಿಸಲ್ಪಟ್ಟ ಮನಸ್ಸುಳ್ಳವನು ಎಂಬಿತ್ಯಾದಿ ರೀತಿಯಿಂದ ನನ್ನನ್ನು ಆಶ್ರಯಿಸಿದವನಾಗಿ, ನನ್ನಲ್ಲಿ ಮನಸ್ಸನ್ನು ತೊಡಗಿಸಿ, ನನ್ನನ್ನೇ, ಏಷ್ಯಸಿ = ಹೊಂದುವವನಾಗುವಿ. ॥ 34 ॥

*ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ ಒಂಬತ್ತನೇ ಅಧ್ಯಾಯವು ಮುಗಿಯಿತು.*

# ಅಧ್ಯಾಯ - 10

## ಧ್ಯಾನಕ್ಕೆ ಉಪಯುಕ್ತ ಮಾಹಾತ್ಮ್ಯಗಳ ನಿರೂಪಣೆ

**ಶ್ರೀಭಗವಾನುವಾಚ-**

**ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।**
**ಯತ್ತೇऽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥ 1 ॥**

ಅರ್ಥ– ಪರಮಾತ್ಮನು ಹೇಳಿದನು– ಮಹಾಬಾಹುವೆನಿಸಿರುವ ಅರ್ಜುನನೇ ! ನನ್ನ ಮಾತನ್ನು ಕೇಳಿಸಿಕೊಂಡು ಸಂತೋಷ ಪಡುವಸ್ವಭಾವವುಳ್ಳ ನಿನಗೆ ಹಿತವುಂಟಾಗಲಿ ಎಂಬ ಇಚ್ಛೆಯಿಂದ ನಾನು ಯಾವುದನ್ನು ಹೇಳುತ್ತಿದ್ದೇನೋ, ನನ್ನ ಮಹಿಮೆಯನ್ನು ಪ್ರಚುರಪಡಿಸುವ ಅಂತಹ ಮಾತನ್ನು ಪುನಃ ಕೇಳಿಸಿಕೋ.

### ಗೀತಾವಿವೃತಿ

**ಷಷ್ಠೇऽಧ್ಯಾಯೇ ಧ್ಯಾನಯೋಗ ಉಕ್ತಃ । ನವಮಾಂತೇ ಚ 'ಮನ್ಮನಾ' (9-34) ಇತ್ಯಾದಿನಾ ತದ್ಧ್ಯಾನಂ ಸ್ಮಾರಿತಮ್ । ತಚ್ಚ ಧ್ಯೇಯಸಾಪೇಕ್ಷಮ್ । ಅತೋ ಧ್ಯಾನಾರ್ಥಂ ಭಗವದ್ವಿಭೂತಿರೂಪಾಣಿ ಅತ್ರಾಧ್ಯಾಯೇ ಅಗ್ರೇ 'ಹಂತ ತೇ ಕಥಯಿಷ್ಯಾಮಿ' ಇತ್ಯಾದಿನಾ ಪ್ರಾಚುರ್ಯೇಣ ವಕ್ಷ್ಯನ್ನಾದೌ ಬುದ್ಧ್ಯಾದೀನಾಂ ಮಹರ್ಷ್ಯಾದೀನಾಂ ಚ ಸಾಮರ್ಥ್ಯಾತಿಶಯೋಪೇತತಯಾ ನಿರ್ಮಾಣರೂಪಂ ವಿಶೇಷಕಾರಣತ್ವಂ ಚ ಭಗವತೋ ವಕ್ತಿ । ಯದ್ಯಪಿ 'ಭೋಕ್ತಾರಂ ಯಜ್ಞತಪಸಾಂ' (5-29) ಇತ್ಯಾದಿನಾ ಪಂಚಮಾಂತಾದೌ ಧ್ಯೇಯಮುಕ್ತಮ್ । ತಥಾऽಪಿ ವಿಶಿಷ್ಟಾಧಿಕಾರಿಣಾಂ ಭಗವದ್ವಿಭೂತಯ ಉಪಾಸ್ಯಾ ಇತಿ ತದುಕ್ತಿರತ್ರೇತಿ । ಉಕ್ತರೂಪವಿಶೇಷಕಾರಣತ್ವಮಪಿ ವಿಶಿಷ್ಟಾಧಿಕಾರಿಧ್ಯೇಯಮಿತಿ ತಸ್ಯಾಪ್ಯತ್ರೋಕ್ತಿಃ । ನನು ವಿಭೂತಿರೂಪಾಣ್ಯಪಿ 'ರಸೋऽಹಮಪ್ಸು ಕೌಂತೇಯ' (7-8) ಇತ್ಯಾದಿನಾ 'ಅಹಂ ಕ್ರತುಃ' (9-16) ಇತ್ಯಾದಿನಾ ಚೋಕ್ತಾನ್ಯೇವ । ಸತ್ಯಮ್ । ಅತ್ರ ವಿಸ್ತರೇಣೋಚ್ಯಂತ ಇತ್ಯದೋಷಃ । ಅತ ಏವಾಸ್ಯ ವಿಭೂತ್ಯಧ್ಯಾಯ ಇತಿ**

**ವ್ಯಪದೇಶಃ । ತದುಕ್ತೇರೇವ ಬಹುತ್ವೇನೈಕವಾಕ್ಯತಾ ಚಾಧ್ಯಾಯಸ್ಯ । ವಿಭೂತಿ-ಶಬ್ದಾರ್ಥಮಗ್ರೇ ವಕ್ಷ್ಯಾಮಃ । ತತ್ರ ಪಾರ್ಥಸ್ಯ ಶ್ರೋತೃತ್ವಸಂಪತ್ತಿಪ್ರತಿಪಾದನಾಯ ತದ್ವಿಶೇಷಣೋಕ್ತಿಪೂರ್ವಂ ಸಂಬೋಧ್ಯ ಪ್ರತಿಜಾನೀತೇ- ಭೂಯ ಏವೇತಿ ॥ ಹೇ ಮಹಾಬಾಹೋ! ಭೂಯ ಏವ ಪುನರೇವ ಮೇ ಪರಮಂ ವಚಃ ಮಾಹಾತ್ಮ್ಯ-ಪ್ರತಿಪಾದಕಂ ವಚನಂ ಶೃಣು ಶ್ರುತ್ವಾ ತತ್ರ ನಿಷ್ಠಾಂ ಕುರು । ಪ್ರೀಯಮಾಣಾಯ ಮದ್ವಚಃ ಶ್ರುತ್ವಾ ಸಂತೋಷಂ ಪ್ರಾಪ್ನುವತೇ । ಅನೇನ ಶ್ರೋತೃತ್ವಸಂಪತ್ತಿರುಕ್ತಾ । ತೇ ತುಭ್ಯಂ ಹಿತಕಾಮ್ಯಯಾ ಹಿತೇಚ್ಛಯಾ ವಕ್ಷ್ಯಾಮೀತಿ ॥ 1 ॥**

**ಅನುವಾದ–** ಆರನೆಯ ಅಧ್ಯಾಯದಲ್ಲಿ ಧ್ಯಾನವೆಂಬ ಮೋಕ್ಷೋಪಾಯವು ನಿರೂಪಿತವಾಗಿದೆ. ಒಂಬತ್ತನೆಯ ಅಧ್ಯಾಯದ ಕೊನೆಯಲ್ಲಿ 'ಮನ್ಮನಾಃ = ನನ್ನಲ್ಲಿನೆಟ್ಟಮನಸ್ಸುಳ್ಳವನು- ಎಂದೆನ್ನುವ ಮೂಲಕ ಆ ಧ್ಯಾನದ ಸ್ಮರಣೆ ಉಂಟಾಗುವಂತೆಯೂ ಮಾಡಲಾಗಿದೆ. ಅಂತಹ ಧ್ಯಾನವಾದರೋ ಧ್ಯಾನಕ್ಕೆ ವಿಷಯವಾಗಬೇಕಾದ ವಸ್ತುವನ್ನು ಅವಲಂಬಿಸಿಕೊಂಡಿದೆ. ಹಾಗಾಗಿ ಧ್ಯಾನಕ್ಕೆ ಅನುಕೂಲವನ್ನುಂಟುಮಾಡಲು ಪರಮಾತ್ಮನ ವಿಭೂತಿರೂಪಗಳನ್ನು ಮುಂದೆ ಈ ಅಧ್ಯಾಯದಲ್ಲಿ 'ಹಂತ ತೇ ಕಥಯಿಷ್ಯಾಮಿ' ಎಂಬಿತ್ಯಾದಿ ಶ್ಲೋಕಗಳಲ್ಲಿ ವಿಸ್ತಾರವಾಗಿ ಹೇಳಲಾಗುವುದು . ಅದಕ್ಕಿಂತ ಮೊದಲು ವಿಶೇಷಸಾಮರ್ಥ್ಯದಿಂದ ಸಹಿತವಾಗಿ ಬುದ್ಧ್ಯಾದಿ ತತ್ತ್ವಗಳ ಹಾಗೂ ಋಷ್ಯಾದಿಗಳ ಸೃಷ್ಟಿರೂಪದ ಪರಮಾತ್ಮನ 'ಅಸಾಧಾರಣ ಕಾರಣನೆನಿಸುವಿಕೆಯನ್ನು' ಹೇಳಲಾಗುತ್ತದೆ. ಐದನೆಯ ಅಧ್ಯಾಯದ ಕೊನೆಯಿಂದ ಆರಂಭಿಸಿ 'ಭೋಕ್ತಾರಂ ಯಜ್ಞತಪಸಾಂ' ಎಂದು ಮುಂತಾಗಿ ಧ್ಯಾನಕಾಲದಲ್ಲಿ ಅನುಸಂಧಾನ ಮಾಡಿಕೊಳ್ಳಬೇಕಾದ ಪರಮಾತ್ಮನ ಮಹಾತ್ಮ್ಯೆಯನ್ನು ಹೇಳಲಾಗಿದೆ ಎಂದೇನೋ ಸರಿ. ಆದರೂ ಕೆಲವು ವೈಶಿಷ್ಟ್ಯಪೂರ್ಣ ಅಧಿಕಾರಿಗಳಿಗೆ ಪರಮಾತ್ಮನ ವಿಭೂತಿರೂಪಗಳೇ ಧ್ಯಾನಕ್ಕೆ ಯೋಗ್ಯವಾಗಿರುವುದರಿಂದ ಇಲ್ಲಿ ಧ್ಯಾನಾರ್ಹರೂಪಗಳನ್ನು ಹೇಳಲಾಗುತ್ತಿದೆ. ಬುದ್ಧ್ಯಾದಿತತ್ತ್ವಗಳ ಹಾಗೂ ಋಷಿಗಳ ಸೃಷ್ಟಿ-ರೂಪದ 'ಪರಮಾತ್ಮನ ಅಸಾಧಾರಣಕಾರಣನೆನಿಸುವಿಕೆ ಎಂಬ ಮಹಿಮೆಯು ಇಂತಹ ಅಧಿಕಾರಿಗಳಿಗೆ ಧ್ಯಾನಾರ್ಹವೆನಿಸಿರುವುದರಿಂದ ಅದನ್ನೂ ಇಲ್ಲಿವಿಶೇಷವಾಗಿ ಹೇಳಲಾಗಿದೆ. ಪರಮಾತ್ಮನ ವಿಭೂತಿರೂಪಗಳನ್ನು ಏಳನೆಯ ಅಧ್ಯಾಯದಲ್ಲಿ 'ರಸೋಽಹಮಪ್ಸು ಕೌಂತೇಯ' ಎಂಬಿತ್ಯಾದಿಯಾಗಿ ಹಾಗೂ ಒಂಬತ್ತನೆಯ ಅಧ್ಯಾಯದಲ್ಲಿ 'ಅಹಂ ಕ್ರತುರಹಂ ಯಜ್ಞಃ' ಎಂಬಿತ್ಯಾದಿಯಾಗಿ ಹೇಳಲಾಗಿದೆ ಎಂದೇನೋ ಸರಿ. ಆದರೆ ಇಲ್ಲಿಇನ್ನೂ ಹೆಚ್ಚು ವಿಸ್ತಾರವಾಗಿ ಅವುಗಳನ್ನು ನಿರೂಪಿಸಲಾಗಿರುವುದರಿಂದ ಪುನರುಕ್ತಿಯೆಂದಾಗಲಿ ವ್ಯರ್ಥವೆಂದಾಗಲಿ ಅನಿಸದು. ಹೀಗೆ ವಿಸ್ತಾರವಾಗಿ ವಿಭೂತಿರೂಪಗಳ ನಿರೂಪಣೆ ಇಲ್ಲಿ ಇರುವುದರಿಂದಲೇ ಈ ಅಧ್ಯಾಯವನ್ನು ವಿಭೂತಿಶಬ್ದದಿಂದ ಹೆಸರಿಸಲಾಗಿದೆ. ಬೇರೆ ಕೆಲವು ಪ್ರಮೇಯಗಳ ನಿರೂಪಣೆ

ಇಲ್ಲಿ ಇದ್ದರೂ ವಿಭೂತಿರೂಪಗಳ ನಿರೂಪಣೆಯೇ ಇಲ್ಲಿ ಹೆಚ್ಚಾಗಿರುವುದರಿಂದ ಹೆಚ್ಚಿನ ಭಾಗದಲ್ಲಿ ಏಕಪ್ರಮೇಯ ಪ್ರತಿಪಾದನೆ ಇದ್ದಂತಾಗಿ ಈ ಅಧ್ಯಾಯಕ್ಕೆ ಏಕವಾಕ್ಯತಾವೂ ಯುಕ್ತವೆನಿಸಿದೆ. '**ವಿಭೂತಿ**' ಎಂಬೀ ಪದದ ಅರ್ಥವೇನು ಎಂದೆನ್ನುವುದನ್ನು ಮುಂದೆ ನಿರೂಪಿಸಲಾಗುವುದು. '**ಭೂಯ ಏವ ಪ್ರವಕ್ಷ್ಯಾಮಿ**' ಎಂಬೀ ಶ್ಲೋಕದಲ್ಲಿ 'ಅರ್ಜುನನು ಒಳ್ಳೆಯ ಶ್ರೋತೃವೆನಿಸಲು ಬೇಕಾದ ಅರ್ಹತೆಯುಳ್ಳವನಾಗಿದ್ದಾನೆ' ಎಂದೆನ್ನುವುದನ್ನು ಸೂಚಿಸಲು 'ಪ್ರೀಯಮಾಣಾಯ - ನನ್ನ ಮಾತನ್ನು ಕೇಳಿ ಸಂತೋಷ ಪಡುವವನು' ಎಂಬೀ ವಿಶೇಷಣವನ್ನು ಹಚ್ಚುವ ಮೂಲಕ ಅವನನ್ನು ಉಲ್ಲೇಖಿಸಿ ಕೌಂತೇಯ ಎಂದು ಸಂಬೋಧಿಸಿ ತಾನು ಈ ಅಧ್ಯಾಯದಲ್ಲಿ ಏನನ್ನು ಮಾಡುವನಿದ್ದೇನೆ ಎಂದೆನ್ನುವುದರ ಪ್ರತಿಜ್ಞೆಯನ್ನು ಮಾಡಲಾಗುತ್ತಿದೆ. **ಪರಮಂ**= ಮಾಹಾತ್ಮ್ಯ ಪ್ರತಿಪಾದಕವಾಗಿದ್ದು ಶ್ರೇಷ್ಠವೆನಿಸಿರುವ ನನ್ನ ಮಾತನ್ನು ಕೇಳಿಸಿಕೋ. ಕೇಳಿಸಿಕೊಂಡು, ಅದರಲ್ಲಿ ಶ್ರದ್ಧೆಯನ್ನು ಬೆಳೆಸಿಕೋ. **ಪ್ರೀಯಮಾಣಾಯ**= ನನ್ನ ಮಾತನ್ನು ಕೇಳಿ ಸಂತೋಷ ಪಡುವ ಸ್ವಭಾವವುಳ್ಳ (ನಿನಗೆ). ಈ ವಿಶೇಷಣದಿಂದ ಅರ್ಜುನನಿಗೆ ಶ್ರೋತೃವೆನಿಸಲು ಅರ್ಹತೆ ಇದೆ ಎಂದಂತಾಯಿತು. ಇಂತಹ ನಿನಗೆ , **ಹಿತಕಾಮ್ಯಯಾ**= ಹಿತವಾಗಲಿ ಎಂಬ ಉದ್ದೇಶದಿಂದ ಪ್ರಚುರ ಪಡಿಸಲು ಮುಂದಾಗಿದ್ದೇನೆ ಎಂದು ಅಭಿಪ್ರಾಯ. ॥ 1 ॥

## ದೇವತೆಗಳು ಹಾಗೂ ಮಹರ್ಷಿಗಳ ಅರಿವಿಗೂ ನಿಲುಕದ ಪರಮಾತ್ಮನ ಮಹಿಮೆ

**ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥ 2 ॥**

**ಅರ್ಥ**– ದೇವತೆಗಳ ಸಮೂಹ ಹಾಗೂ ಮಹರ್ಷಿಗಳು ನನ್ನ ಮಹಿಮೆಯನ್ನಾಗಲಿ ನನ್ನ ಅಧೀನವಾದ ಜಗತ್ತಿನ ಉತ್ಪತ್ತಿಯನ್ನಾಗಲಿ ತಿಳಿದಿಲ್ಲ. ದೇವತೆಗಳು ಮನುಷ್ಯರು, ಮಹರ್ಷಿಗಳು ಇವರೆಲ್ಲರಿಗೂ ನಾನೇ ಕಾರಣನಾಗಿರುವುದರಿಂದ ನನಗೆ ಹುಟ್ಟು ಸಲ್ಲದು.

**ಪ್ರತಿಜ್ಞಾತಮಹಿಮಾನಮಾಹ– ನ ಮ ಇತಿ ॥ ಸುರಗಣಾ ಮಹರ್ಷಯಶ್ಚ ಮೇ ಪ್ರಭವಂ ಪ್ರಭಾವಂ ಮಹಿಮಾನಂ ನ ವಿದುಃ । ಪ್ರಭವಮುತ್ಪತ್ತಿಂ ಮದಧೀನಾ-ಮುತ್ಪತ್ತಿಮ್ । ಜಗತ ಇತಿ ಯೋಜ್ಯಮ್ । ನ ವಿದುಃ ನ ಜಾನಂತಿ । ದೇವಾದಿ-ಜಗತೋ ಭಗವದಧೀನಾಮುತ್ಪತ್ತಿಂ ಸುರಗಣಾದಯೋ ನ ಜಾನಂತಿ । ಕಿಮುತಾನ್ಯ ಇತ್ಯರ್ಥಃ । ಯದ್ವಾ ಮೇ ಪ್ರಭವಂ ಮಮೋತ್ಪತ್ತಿಂ ಸುರಗಣಾದಯೋ ನ ವಿದುರಿತ್ಯರ್ಥಃ । ಭಗವನ್ಮಹಿಮವಜ್ಜಗದುತ್ಪತ್ತಿವಚ್ಚ ಭಗವದುತ್ಪತ್ತಿಂ ವಿದ್ಯಮಾನಾಂ ನ ಜಾನಂತೀತಿ ನ ಭ್ರಮಿತವ್ಯಮ್ । ಕಿಂತು ಮಹಿಮಜಗದುತ್ಪತ್ತ್ಯೋಃ ಸತ್ತ್ವಮಿವ**

**ಭಗವದುತ್ಪತ್ತೇ ಸತ್ತ್ವಮೇವ ನಾಸ್ತೀತಿ ತದಭಾವಾದೇವ ನ ವಿದುರಿತಿ ಜ್ಞೇಯಮ್ ।**

**ಅನುವಾದ–** ಹಿಂದಿನ ಶ್ಲೋಕದಲ್ಲಿ ಪ್ರತಿಜ್ಞೆಗೈದಿರುವಂತೆ 'ನ ಮೇ ವಿದುಃ ಸುರಗಣಾಃ' ಎಂಬೀ ಶ್ಲೋಕದಲ್ಲಿ ಪರಮಾತ್ಮನ ಮಹಿಮೆಯನ್ನು ಹೇಳಲಾಗುತ್ತಿದೆ. ದೇವತೆಗಳು ಹಾಗೂ ಮಹರ್ಷಿಗಳು, **ಮೇ ಪ್ರಭವಂ= ಪ್ರಭಾವಂ=** ನನ್ನ ಮಹಿಮೆಯನ್ನು, ತಿಳಿದಿಲ್ಲ. ಮೇ ಪ್ರಭವಂ ಎಂಬಲ್ಲಿ ಅನ್ವಯಿಸುವಂತೆ 'ಜಗತಃ' ಎಂದೆನ್ನುವುದನ್ನು ಸೇರಿಸಿಕೊಳ್ಳಬೇಕು. ಆಗ **ಮೇ=** ನನ್ನ ಅಧೀನವಾದ **ಜಗತಃ ಪ್ರಭವಂ** = ಸಮಸ್ತಜಗತ್ತಿನ ಉತ್ಪತ್ತಿಯನ್ನು ಅರಿತಿಲ್ಲ ಎಂದಂತಾಯಿತು. ದೇವತೆಗಳನ್ನು ಮೊದಲ್ಗೊಂಡು ಸಮಸ್ತಜಗತ್ತಿನ, ನನ್ನ ಅಧೀನವೆನಿಸಿರುವ ಸೃಷ್ಟಿಯನ್ನು ದೇವತೆಗಳು ಹಾಗೂ ಋಷಿಗಳೇ ತಿಳಿದಿಲ್ಲ. ಹಾಗಿರುವಾಗ ಇತರರು ತಿಳಿದಿಲ್ಲ ಎಂದು ಪ್ರತ್ಯೇಕವಾಗಿ ಹೇಳಬೇಕೇನು ? ಎಂದು ಇದರ ಹಿಂದಿರುವ ಅಭಿಪ್ರಾಯವಾಗಿದೆ. **ಅಥವಾ ಮೇ ಪ್ರಭವಂ=** ನನ್ನ ಉತ್ಪತ್ತಿಯನ್ನು ದೇವತೆಗಳು ಹಾಗೂ ಮಹರ್ಷಿಗಳು ತಿಳಿದಿಲ್ಲ ಎಂದಿದರ ಅರ್ಥವಾಗಿದೆ. ಈ ಪಕ್ಷದಲ್ಲಿ ಪರಮಾತ್ಮನ ಮಹಿಮೆ ಹಾಗೂ ಅವನ ಅಧೀನವಾದ ಜಗತ್ತಿನ ಉತ್ಪತ್ತಿ ಇವುಗಳು ವಾಸ್ತವಿಕವಾಗಿ ಇರುವಂತೆ ಪರಮಾತ್ಮನ ಉತ್ಪತ್ತಿಯು ವಾಸ್ತವಿಕವಾಗಿ ಇಲ್ಲ. ಆದುದರಿಂದಲೇ ಸರ್ವಜ್ಞರಾದ ದೇವತೆಗಳು ಹಾಗೂ ಋಷಿಗಳು ಅದು 'ಇದೆ' ಎಂಬೀ ರೀತಿಯಲ್ಲಿ ತಿಳಿದಿಲ್ಲ ಎಂದು ಅರ್ಥವೇ ಹೊರತು ವಾಸ್ತವಿಕವಾಗಿರುವ ಜಗತ್ತಿನ ಉತ್ಪತ್ತಿಯನ್ನು ತಿಳಿಯದಿರುವಂತೆ, ವಾಸ್ತವಿಕವಾಗಿರುವ ಪರಮಾತ್ಮನ ಉತ್ತತ್ತಿಯನ್ನು ತಿಳಿದಿಲ್ಲ ಎಂದು ತಪ್ಪಾಗಿ ತಿಳಿಯಬಾರದು. ಪರಮಾತ್ಮನ ಮಹಿಮೆ ಹಾಗೂ ಅವನ ಅಧೀನವಾದ ಜಗದುತ್ಪತ್ತಿಯಂತೆ ವಾಸ್ತವಿಕವಾಗಿ ಇಲ್ಲದಿರುವುದರಿಂದಲೇ ಪರಮಾತ್ಮನ ಉತ್ತತ್ತಿಯನ್ನು ಅರಿತಿಲ್ಲ ಎಂಬೀ ರೀತಿಯಲ್ಲಿ ತಿಳಿಯಬೇಕು. ಅನ್ಯಥಾ ಅರ್ಥೈಸಿದಂತೆ ಜಾಗರೂಕತೆಯಿಂದ ಇರಬೇಕು.

## ಪರಮಾತ್ಮನ ಉತ್ಪತ್ತಿ ವಾಸ್ತವಿಕವಲ್ಲ

**ಪ್ರಭಾವಜಗತ್ಪ್ರಭವಯೋರಿವ ಮೇ ಪ್ರಭವಃ ಕುತೋ ನೇತಿ ಚೇತ್ ತತ್ರೋಚ್ಯತೇ– ಅಹಮಾದಿರಿತಿ ॥ ದೇವಾನಾಂ ಮನುಷ್ಯಾಣಾಂ ಚ ಉಪಲಕ್ಷಣ- ಮೇತತ್ । ದೇವಾದಿಕೃತ್ಸ್ನಜಗತೋಽಹಮಾದಿಃ ಕಾರಣಂ ಹಿ ಯತೋಽತೋ ಮೇ ಪ್ರಭವೋ ನೇತಿ । ಸರ್ವಸ್ಯ ಮತ್ಸ್ರಷ್ಟತ್ವೇನ ಮಜ್ಜನಕಸ್ಯಾನ್ಯಸ್ಯಾಭಾವಾತ್ । ಅಸತಶ್ಚ ಪೂರ್ವವೃತ್ತಿತ್ವರೂಪಜನಕತ್ವಾಯೋಗಾತ್ । ಆತ್ಮಾಶ್ರಯಾಪತ್ತ್ಯಾ ಮಯ್ಯೈವ ಮಜ್ಜನನಾಯೋಗಾದಿತಿ ಭಾವಃ । ತದಾಹ ಸೂತ್ರೇ– 'ಓಂ ಅಸಂಭವಸ್ತು ಸತೋಽನುಪಪತ್ತೇಃ ಓಂ' (2-3-9) ಇತಿ ॥ 2 ॥**

**ಅನುವಾದ–** ಪರಮಾತ್ಮನ ಮಹಿಮೆ ಹಾಗೂ ಅವನ ಅಧೀನವಾದ ಜಗತ್ತಿನ ಉತ್ಪತ್ತಿಯಂತೆ ಅವನ ಉತ್ಪತ್ತಿಯು ಯಾಕೆ ವಾಸ್ತವಿಕವಲ್ಲ ಎಂಬ ಪ್ರಶ್ನೆಗೆ ಉತ್ತರವಾಗಿ 'ಅಹಮಾದಿರ್ಹಿ ದೇವಾನಾಂ' ಎಂಬಿತ್ಯಾದಿ ಉತ್ತರಾರ್ಧ ಪ್ರಸ್ತುತವಾಗಿದೆ. ಇಲ್ಲಿರುವ '**ದೇವಾನಾಂ**' ಎಂಬ ಪದದಿಂದ ಮನುಷ್ಯರನ್ನೂ ಇಟ್ಟುಕೊಳ್ಳಬೇಕು. ಹಾಗಾಗಿ ಈ ಉತ್ತರಾರ್ಧಭಾಗವು ಹಿ= ಯಾವ ಕಾರಣದಿಂದ, ದೇವತೆಗಳು ಋಷಿಗಳು ಹಾಗೂ ಮನುಷ್ಯರನ್ನು ಒಳಗೊಂಡಿರುವ ಸಮಸ್ತಜಗತ್ತು ಇದಕ್ಕೆಲ್ಲಾ ನಾನು ಕಾರಣ(ಆದಿ)ನಾಗಿರುವೆನು. ಆದುದರಿಂದ ನನಗೆ ಉತ್ಪತ್ತಿಯಿಲ್ಲ ಎಂಬ ಅಭಿಪ್ರಾಯದಲ್ಲಿದೆ. ಎಲ್ಲವೂ ನನ್ನಿಂದಲೇ ಸೃಷ್ಟಿಸಲ್ಪಟ್ಟಿರುವುದರಿಂದ ನನಗಿಂತ ಪೂರ್ವದಲ್ಲಿ ಯಾರು ಇರಲಿಲ್ಲ ಎಂದಂತಾಯಿತು. ಹೀಗೆ ಇಲ್ಲದಿರುವ ವಸ್ತುವಿನಲ್ಲಿ ಕಾರ್ಯದ ಪೂರ್ವ ಕ್ಷಣದಲ್ಲಿ ತಪ್ಪದೆ ಇರುವಿಕೆ' ಎಂಬೀ ಬಗೆಯ ಜನಕತ್ವವು ಅಸಂಭಾವಿತವೆನಿಸುವುದರಿಂದ ನನಗೆ ಜನಕನೆನಿಸಬಹುದಾದ ಬೇರೊಬ್ಬ ವ್ಯಕ್ತಿಯೇ ಇಲ್ಲ, ಆತ್ಮಾಶ್ರಯದೋಷಕ್ಕೆ ಅವಕಾಶ ವುಂಟಾಗುವುದರಿಂದ ನನ್ನಿಂದಲೇ ನನ್ನ ಉತ್ಪತ್ತಿ ಎಂದನ್ನುವುದೂ ಯುಕ್ತವಲ್ಲ. ಹಾಗಾಗಿ ನನಗೆ ಉತ್ಪತ್ತಿಯಿಲ್ಲ' ಎಂದು ಇದರ ತಾತ್ಪರ್ಯವಾಗಿದೆ. ಈ ಪ್ರಮೇಯವನ್ನು '**ಅಸಂಭವಸ್ತು ಸತೋಽನುಪಪತ್ತೇಃ**'– ಸ್ವತಂತ್ರನೆನಿಸಿ 'ಸತ್' ಎಂದೆನಿಸಿರುವ ಪರಮಾತ್ಮನಿಗೆ ಅಸಂಭಾವಿತ ವಾದುದರಿಂದ ಸರ್ವಥಾ ಉತ್ಪತ್ತಿಯಿಲ್ಲ' ಎಂದು ಸೂತ್ರಕಾರರು ಪ್ರಚುರಪಡಿಸಿದ್ದಾರೆ. ॥ 2 ॥

**ವಿವರಣೆ–** 'ಮೇ ಪ್ರಭವಂ ನ ವಿದುಃ' ಎಂಬೀ ವಾಕ್ಯಕ್ಕೆ ಗೀತಾ ವಿವೃತಿಯಲ್ಲಿ ಮೂರು ರೀತಿಯಲ್ಲಿ ಅರ್ಥೈಸಲಾಗಿದೆ. ಈ ಮೂರು ಅರ್ಥಗಳೂ ಗೀತಾಭಾಷ್ಯಾನುಸಾರಿಯಾಗಿವೆ. 'ಪರಮಾತ್ಮನ ಮಹಿಮೆ ಹಾಗೂ ಅವನ ಅಧೀನವಾದ ಜಗತ್ತಿನ ಉತ್ಪತ್ತಿಯನ್ನು ದೇವಾದಿಗಳು ತಿಳಿದಿಲ್ಲ' ಎಂದೆನ್ನುವುದಕ್ಕೆ 'ಅವು ವಾಸ್ತವಿಕವಾಗಿದ್ದರೂ ಅವನ್ನು ದೇವಾದಿಗಳು ಪೂರ್ಣವಾಗಿ ಅರಿತುಕೊಂಡಿಲ್ಲ' ಎಂದು ಅಭಿಪ್ರಾಯವಾಗಿದೆ. 'ದೇವಾದಿಗಳು ಪರಮಾತ್ಮನ ಉತ್ಪತ್ತಿಯನ್ನು ಅರಿತಿಲ್ಲ' ಎನ್ನುವುದಕ್ಕೆ ಇದೇ ಅಭಿಪ್ರಾಯ ಎಂಬ ಭ್ರಾಂತಿಯುಂಟಾಗುವ ಸಾಧ್ಯತೆಯಿದೆ. ಹಾಗಾಗಬಾರದೆಂದು ಗೀತಾವಿವೃತಿಕಾರರು ಎಚ್ಚರಿಸುತ್ತಿದ್ದಾರೆ. ಉತ್ತರಾರ್ಧದಲ್ಲಿ '**ಹಿ**' ಶಬ್ದವನ್ನು ಬಳಸಲಾಗಿದೆ. ಆದುದರಿಂದ ಪೂರ್ವಾರ್ಧದ ಅಭಿಪ್ರಾಯವನ್ನು ಸಮರ್ಥಿಸಲು ಈ ಉತ್ತರಾರ್ಧವಿದೆ ಎಂದೆನ್ನುವುದು ಸ್ಪಷ್ಟವಾಗುತ್ತಿದೆ. ಇದು ಸರಿಹೊಂದಬೇಕಾದರೆ 'ದೇವತೆಗಳನ್ನು ಒಳಗೊಂಡ ಸಮಸ್ತಜಗತ್ತೇ ನನ್ನ ಸೃಷ್ಟಿಯೆನಿಸಿದೆ. ಹಾಗಾಗಿ ನನಗಿಂತಲೂ ಪೂರ್ವದಲ್ಲಿ ಯಾರೂ ಇರಲಿಲ್ಲ ಎಂದಾಯಿತು. ಹಾಗಿರುವಾಗ ನನಗೆ ಜನಕನಿರಲು ಹೇಗೆ ಸಾಧ್ಯ ? ಹಾಗಾಗಿ ನನಗೆ ಉತ್ತತ್ತಿಯಲ್ಲ; ಅದು ಅವಾಸ್ತವ . ಸರ್ವಜ್ಞರೆನಿಸಿರುವ ದೇವತೆಗಳು ಹಾಗು ಮಹರ್ಷಿಗಳು ವಾಸ್ತವವಾದುದನ್ನು ಮಾತ್ರ ತಿಳಿದಾರು . ಅವಾಸ್ತವವಾದುದರಿಂದ ನನ್ನ ಉತ್ಪತ್ತಿಯನ್ನು ಅರಿತಿಲ್ಲ' ಎಂದು ಅರ್ಥೈಸುವುದು ಅನಿವಾರ್ಯ. ಹೀಗೆ ಸೂಕ್ಷ್ಮದೃಷ್ಟಿಯಿಂದ

ಎಚ್ಚರವಹಿಸಿ ಗಮನಿಸಿದಾಗ ಪರಮಾತ್ಮನಿಗೆ ಉತ್ಪತ್ತಿಯಿಲ್ಲ ಎಂದೆನ್ನುವುದು ಸ್ಪಷ್ಟವಾಗುವುದರಿಂದ ಪೂರ್ವಾಪರವನ್ನು ವಿಚಾರ ಮಾಡದೆ ಪ್ರಮಾದದಿಂದ ಅರ್ಥೈಸಿ ಭ್ರಾಂತಿಗೆ ಒಳಗಾಗಬೇಡಿ ಎಂದೆನ್ನುವುದು ಈ ಎಚ್ಚರಿಕೆಯ ಹಿಂದಿರುವ ಅಭಿಪ್ರಾಯವಾಗಿದೆ.

## ಪರಮಾತ್ಮನ ಅರಿವು ಸರ್ವಪಾಪಹರ

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।**
**ಅಸಮ್ಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥ 3 ॥**

**ಅರ್ಥ–** ಯಾವ ಅಧಿಕಾರಿಯು ನನ್ನನ್ನು ಜನ್ಮರಹಿತನೆಂದೂ, ಸರ್ವಪ್ರವರ್ತಕನೆಂದೂ ಜಗತ್ತಿಗೆ ಕಾರಣನೆಂದೂ, ಮುಖ್ಯಪ್ರಾಣನಿಗೂ ಕಾರಣನೆಂದೂ ಜಗತ್ತುಗಳಿಗೆ ಮಹಾಸ್ವಾಮಿ ಎಂದೂ ತಿಳಿದಿರುವನೋ ಅವನು ಮರ್ತ್ಯರ ಮಧ್ಯದಲ್ಲಿ ಭ್ರಾಂತಿರಹಿತನೆನಿಸಿ ಎಲ್ಲಾಪಾಪ ಗಳಿಂದ ಬಿಡುಗಡೆ ಹೊಂದುತ್ತಾನೆ.

**ಸ್ವಜ್ಞಾನಾನ್ಮೋಕ್ಷಾಖ್ಯಮಹಿಮಾನಂ ಚಾಹ- ಯೋ ಮಾಮಿತಿ ॥ ಯೋಽಧಿ-ಕಾರೀ ಅಜಮುತ್ಪತ್ತಿಹೀನಮ್ । ಅನಾದಿಂ ಅನಶ್ಚಾಸಾವಾದಿಶ್ಚ ತಮ್ । ಸರ್ವ-ಚೇಷ್ಟಕಂ ಕಾರಣಭೂತಂ ಚ । ಅನಿತೇರಂತರ್ಣೀತಣ್ಯರ್ಥಾತ್ ಪಚಾದ್ಯಚ್ । ಯದ್ವಾ ಅನಸ್ಯ ಮುಖ್ಯಪ್ರಾಣಸ್ಯ ಕಾರಣಂ ಚ । ಲೋಕಾನಾಂ ಮಹಾಸ್ವಾಮಿನಂ ಮಾಂ ವೇತ್ತಿ ಜಾನಾತಿ ಸ ಮರ್ತ್ಯೇಷು ಅಸಮ್ಮೂಢಃ ಸಮ್ಮೋಹಹೀನಃ ಭ್ರಾಂತಿಹೀನಃ ಸನ್ ಸರ್ವಪಾಪೈಃ ಪ್ರಮುಚ್ಯತೇ ಮುಕ್ತೋ ಭವತಿ ॥ 3 ॥**

**ಅನುವಾದ–** 'ತನ್ನ ಜ್ಞಾನದಿಂದ ಮೋಕ್ಷಪ್ರಾಪ್ತಿ' ಎಂದನ್ನುವುದೊಂದು ಪರಮಾತ್ಮನ ಮಹಿಮೆ. ಅದನ್ನು 'ಯೋ ಮಾಮಜಮನಾದಿಂ' ಎಂಬಿತ್ಯಾದಿ ಶ್ಲೋಕದಲ್ಲಿ ಪ್ರಚುರಪಡಿಸ ಲಾಗುತ್ತಿದೆ. **ಅಜಂ** = ಉತ್ಪತ್ತಿರಹಿತನನ್ನಾಗಿ. ಅನಶ್ಚಾಸೌ ಆದಿಶ್ಚಅನಾದಿಃ, ತಂ ಅನಾದಿಂ ಎಂದು ಕರ್ಮಧಾರಯಸಮಾಸ. '**ಣಿಚ್**'ಪ್ರತ್ಯಯದ ಅರ್ಥವನ್ನು ತನ್ನ ಅರ್ಥದಲ್ಲಿ ಅಡಗಿಸಿ ಕೊಂಡಿರುವ, ಚೇಷ್ಟೆ (ಪ್ರವೃತ್ತಿ ) ಎಂಬ ಅರ್ಥದಲ್ಲಿರುವ 'ಅನ'ಧಾತುವಿಗೆ ಪಚಾದ್ಯಚ್ ಪ್ರತ್ಯಯ ಸೇರಿದಾಗ '**ಅನ**' ಎಂಬ ಪದದ ನಿಷ್ಪತ್ತಿ. ಹಾಗಾಗಿ ಅನ ಎಂದರೆ ಎಲ್ಲರಲ್ಲೂ ಚೇಷ್ಟೆ (ಪ್ರವೃತ್ತಿ) ಯನ್ನುಂಟುಮಾಡುವವನು ಎಂದರ್ಥ. ಆದಿ ಎಂದರೆ, ಎಲ್ಲದಕ್ಕೂ ಕಾರಣನು ಎಂದರ್ಥ. ಆದುದರಿಂದ ಅನಾದಿ ಎಂದೆನ್ನುವುದಕ್ಕೆ ಸರ್ವಚೇಷ್ಟಕನನ್ನಾಗಿ ಹಾಗೂ ಸರ್ವಕಾರಣನನ್ನಾಗಿ ಎಂದು ಅರ್ಥವಾಯಿತು. ಅಥವಾ **ಅನಸ್ಯ ಆದಿಃ ಅನಾದಿಃ । ತಂ ಅನಾದಿಂ** ಎಂದು ಷಷ್ಠೀ ತತ್ಪುರುಷಸಮಾಸ. ಆಗ **ಅನಸ್ಯ** = ಸರ್ವಚೇಷ್ಟಕನೆನಿಸಿರುವ ಮುಖ್ಯಪ್ರಾಣದೇವರಿಗೆ, **ಆದಿಂ**=

ಕಾರಣನನ್ನಾಗಿ ಎಂದರ್ಥವಾಗುತ್ತದೆ ಹಾಗೂ ಜಗತ್ತಿಗೆ ಮಹಾಸ್ವಾಮಿಯನ್ನಾಗಿ ನನ್ನನ್ನು ಯಾರು ತಿಳಿದುಕೊಳ್ಳುತ್ತಾನೋ ಅಂತಹ ಅಧಿಕಾರಿಯು ಮರ್ತ್ಯರಲ್ಲೆಲ್ಲಾ **ಅಸಮ್ಮೂಢಃ**= ಸಮ್ಮೋಹ ರಹಿತನೆನಿಸಿ= ಭ್ರಾಂತಿರಹಿತನೆನಿಸಿ ಎಲ್ಲ ಪಾಪಗಳಿಂದ ಸಂಪೂರ್ಣವಾಗಿ ಬಿಡುಗಡೆ ಹೊಂದುತ್ತಾನೆ. ಅಂದರೆ – ಮುಕ್ತನೆನಿಸುತ್ತಾನೆ.

**ವಿವರಣೆ–** ಅನ ಧಾತುವಿಗೆ ಚೇಷ್ಟೆ (ಪ್ರವೃತ್ತಿ) ಎಂದರ್ಥ. ಹಾಗಾಗಿ ಅನಿತಿ ಎಂದರೆ ಪ್ರವೃತ್ತನಾಗಿದ್ದಾನೆ ಎಂದರ್ಥ. ಈ ಅರ್ಥದಲ್ಲಷ್ಟೆ ಈ ಧಾತುವಿಗೆ '**ಪಚಾದ್ಯಚ್**' ಎಂದು ವ್ಯಾಕರಣದಲ್ಲಿ ಪ್ರಸಿದ್ಧವಾದ '**ಅಚ್**' ಪ್ರತ್ಯಯ ಸೇರಿದರೆ ಉಂಟಾಗುವ 'ಅನ ' ಎಂಬೀ ಪದವು 'ಪ್ರವೃತ್ತಿಯುಳ್ಳವನು' ಎಂಬೀ ಅರ್ಥವನ್ನು ಕೊಡಲು ಸಾಧ್ಯ. ಆದರೆ ಪ್ರಕೃತ ನಮಗೆ ಆ ಪದದಿಂದ ಸಿಗ ಬೇಕಾದ ಅರ್ಥ 'ಪರರಲ್ಲಿ ಪ್ರವೃತ್ತಿಯನ್ನು ಉಂಟು ಮಾಡುವವನು ಎಂದೆನ್ನುವುದಾಗಿದೆ. ಈ ಪದದಿಂದ ಈ ಅರ್ಥಸಿಗಬೇಕೆಂಬ ಉದ್ದೇಶದಿಂದ ಗೀತಾವಿವೃತಿಯಲ್ಲಿ '**ಅಂತರ್ಣೀತ- ಣ್ಯರ್ಥಾತ್ ಅನಿತೇಃ**' ಎಂದೆನ್ನಲಾಗಿದೆ. ಪ್ರಕೃತ ಈ ಅನಧಾತುವು ಪ್ರವೃತ್ತಿ ಎಂದಿಷ್ಟೆ ಅರ್ಥದಲ್ಲಿಲ್ಲ . ತನ್ನ ಈ ಅರ್ಥದ ಜೊತೆಗೆ '**ಣಿಚ್**' ಪ್ರತ್ಯಯದ ಅರ್ಥವಾದ ಪ್ರೇರಣೆಯನ್ನು ಅಡಗಿಸಿಕೊಂಡಿದೆ. ಹಾಗಾಗಿ ಅಂತಹ ಈ ಅನಧಾತುವಿನಿಂದ ನಿಷ್ಪನ್ನವಾದ '**ಅಚ್**' ಪ್ರತ್ಯಯಾಂತ ವಾದ '**ಅನ** ' ಎಂಬ ಈ ಪದವು ಪ್ರವೃತ್ತಿ ಉಳ್ಳವನು ಎಂದು ಅರ್ಥವನ್ನು ಕೊಡದೆ, 'ಪರರಲ್ಲಿ ಆಗಬೇಕಾದ ಪ್ರವೃತ್ತಿಯನ್ನು ಪ್ರೇರಿಸುವವನು' ಎಂಬ ಅರ್ಥವನ್ನು ಕೊಡಲು ಸಮರ್ಥ ವೆನಿಸುತ್ತದೆ. ಆದುದರಿಂದ ಪ್ರಕೃತ ಪರಮಾತ್ಮನ ಪರವಾಗಿ ಈ ಪದದಿಂದ ಸಿಗಬೇಕಾದ, 'ಎಲ್ಲರಲ್ಲಿ ಪ್ರವೃತ್ತಿಯನ್ನು ಪ್ರೇರಿಸುವವನು ಸರ್ವ ಪ್ರವರ್ತಕನು' ಎಂಬೀ ಅರ್ಥವು ಸಿದ್ಧಿಸುತ್ತದೆ ಎಂದಿಷ್ಟು ಈ ಗೀತಾ ವಿವೃತಿಯ ಅಭಿಪ್ರಾಯವಾಗಿದೆ. ॥ 3 ॥

## ಜೀವರಿಗೆ ಬುದ್ಧ್ಯಾದಿ ಪ್ರಧಾನಧರ್ಮಪ್ರದನು ಪರಮಾತ್ಮ

**ಬುದ್ಧಿರ್ಜ್ಞಾನಮಸಮ್ಮೋಹಃ ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋ ಭಾವೋ ಭಯಂ ಚಾಭಯಮೇವ ಚ ॥ 4 ॥**

**ಅರ್ಥ–** 'ಯಾವುದು ಕಾರ್ಯ; ಯಾವುದು ಅಕಾರ್ಯ' ಎಂಬೀ ರೀತಿಯ ವಿವೇಕಜ್ಞಾನ, ಸಾಮಾನ್ಯವಾಗಿ ಎಲ್ಲಾ ವಿಧದ ಜ್ಞಾನ, ಕೈಗೊಳ್ಳಲು ಅನರ್ಹವಾದ ವಿಷಯದಲ್ಲಿ ಇಚ್ಛೆಯುಂಟಾಗದಿರುವುದು, ಭ್ರಾಂತಿ ಸಂಭವಿಸದಿರುವುದು, ಕ್ರೋಧವಿಲ್ಲದಿರುವಿಕೆಯಿಂದ ಸಹಿತವಾದ ಅಪಕಾರಿಗೆ ಅಪಕರಿಸದೇ ಇರುವುದು ಎಂಬೀ ರೀತಿಯ ಸದ್ಗುಣ, ಸರಿಯಾಗಿ ಅರಿತುಕೊಂಡು ಕಾರ್ಯದಲ್ಲಿ ಪ್ರವೃತ್ತಿಮಾಡುವುದು ಹಾಗೂ ಮಾತನಾಡುವುದು, ಇಂದ್ರಿಯಗಳ ನಿಗ್ರಹ,

ಪರಮಾತ್ಮನಲ್ಲಿ ನಿಷ್ಠೆ, ಸುಖ, ದುಃಖ, ಉತ್ಪತ್ತಿ, ಸ್ಥಿತಿ, ಹೆದರಿಕೆ, ಹೆದರಿಕೆಗೆ ವಿರುದ್ಧವಾದ ಮನಃಸ್ಥಿತಿ (ಪ್ರಾಣಿಗಳಲ್ಲಿರುವ ಎಲ್ಲಾ ಈ ಧರ್ಮಗಳು ನನ್ನಿಂದಲೇ ಉಂಟಾಗುತ್ತವೆ).

**ಮುಕ್ತಿಹೇತುಜ್ಞಾನವಿಷಯತ್ವಮಹಿಮಾನಮುಕ್ತ್ವಾ ಬುದ್ಧ್ಯಾದಿಪ್ರದತ್ವ-ಮಹಿಮಾನಂ ಚಾಽಽಹ- ಬುದ್ಧಿರಿತಿ ॥ ಯದ್ವಾ 'ಅಹಮಾದಿರ್ಹಿ ದೇವಾನಾಂ' ಇತಿ ದೇವಾದ್ಯುಪಲಕ್ಷಿತಸರ್ವಕಾರಣತ್ವಂ ಸ್ವಸ್ಯೋಕ್ತಮ್ । ತತ್ರ ಕೇಷಾಂಚಿದ್ ಬುದ್ಧ್ಯಾದೀನಾಂ ಮಹರ್ಷ್ಯಾದೀನಾಂ ಚ ಸಾಮರ್ಥ್ಯಾತಿಶಯೋಪೇತತಯಾ ನಿರ್ಮಾಣರೂಪವಿಶೇಷಕಾರಣತ್ವೋಕ್ತ್ಯಾ ಪ್ರಾಗುಕ್ತಂ ಪ್ರಪಂಚಯತಿ- ಬುದ್ಧಿ-ರಿತ್ಯಾದಿತ್ರಯೇಣ ॥ ಬುದ್ಧಿರಂತಃಕರಣಂ ಕಾರ್ಯಾಕಾರ್ಯನಿಶ್ಚಯೋ ವಾ । ಜ್ಞಾನಂ ತು ಪ್ರತೀತಿಸಾಮಾನ್ಯಮ್ । ಅಸಮ್ಮೋಹಃ ಅಕಾರ್ಯೇಚ್ಛಾಽಭಾವಃ ಮಿಥ್ಯಾಜ್ಞಾನಾಭಾವೋ ವಾ । ಕ್ಷಮಾ ಕ್ರೋಧಾಭಾವೇನ ಸಹಾಪಕರ್ತುರನಪ-ಕರಣಮ್ । ಸತ್ಯಂ ಯಥಾರ್ಥಜ್ಞಾನಪೂರ್ವಕಮನುಷ್ಠಾನಂ ವಚನಂ ವಾ । ದಮ ಇಂದ್ರಿಯನಿಗ್ರಹಃ । ಶಮೋ ಭಗವನ್ನಿಷ್ಠತಾ । ಸುಖಮನುಕೂಲವೇದ-ನೀಯಮ್ । ದುಃಖಂ ಪ್ರತಿಕೂಲವೇದನೀಯಮ್ । ಭವ ಉತ್ಪತ್ತಿಃ । ಭಾವಃ ಸತ್ತಾ । ಭಯಂ ತ್ರಾಸಃ । ಅಭಯಂ ತ್ರಾಸವಿರೋಧಿಮನೋವ್ಯಾಪಾರಃ ॥ 4 ॥**

**ಅನುವಾದ**– ಹಿಂದಿನ ಶ್ಲೋಕದಲ್ಲಿ 'ಮೋಕ್ಷಕ್ಕೆ ಕಾರಣವಾದ ಜ್ಞಾನಕ್ಕೆ ವಿಷಯ ನಾನು' ಎಂಬ ತನ್ನ ಮಹಿಮೆಯನ್ನು ಹೇಳಿ '**ಬುದ್ಧಿರ್ಜ್ಞಾನಂ**' ಎಂಬಿತ್ಯಾದಿ ಮುಂದಿನ ಮೂರು ಶ್ಲೋಕಗಳಲ್ಲಿ 'ಪ್ರಾಣಿಗಳಿಗೆ ಬುದ್ಧ್ಯಾದಿಗಳನ್ನು ಅನುಗ್ರಹಿಸುವವನು' ಎಂಬ ತನ್ನ ಮಹಿಮೆಯನ್ನು ಪರಮಾತ್ಮನು ಪ್ರಚುರಪಡಿಸುತ್ತಿದ್ದಾನೆ. ಅಥವಾ ಹಿಂದೆ ಎರಡನೆಯ ಶ್ಲೋಕದಲ್ಲಿ '**ಅಹಮಾದಿರ್ಹಿ ದೇವಾನಾಂ**' ಎಂಬಿತ್ಯಾದಿ ಮಾತಿನಲ್ಲಿರುವ '**ದೇವಾನಾಂ**' ಎಂಬ ಪದದಿಂದ ಸಕಲ ಜಗತ್ತನ್ನು ಇಟ್ಟುಕೊಂಡು, 'ಸರ್ವ ಕಾರಣನು ಪರಮಾತ್ಮ' ಎಂಬೀ ಪ್ರಮೇಯವು ಹೇಳಲ್ಪಟ್ಟಿದೆ. ಮುಂದಿನ ಮೂರು ಶ್ಲೋಕಗಳಲ್ಲಿ ''ಆ 'ಸರ್ವ'ದಲ್ಲಿ ಸೇರಿರುವ ಬುದ್ಧ್ಯಾದಿ ಗಳನ್ನು ಹಾಗೂ ಮಹರ್ಷ್ಯಾದಿಗಳನ್ನು ವಿಶಿಷ್ಟ ಸಾಮರ್ಥ್ಯವುಳ್ಳವುಗಳನ್ನಾಗಿ ನಿರ್ಮಿಸುವುದು'' ಎಂಬ ಬಗೆಯ ಪರಮಾತ್ಮನ ವಿಶೇಷಕಾರಣತ್ವವನ್ನು ಹೇಳುವ ಮೂಲಕ ಎರಡನೆಯ ಶ್ಲೋಕದಲ್ಲಿ ಹೇಳಲಾಗಿರುವ ಆ ಪ್ರಮೇಯವನ್ನು ವಿವರಿಸಲಾಗುತ್ತಿದೆ. **ಬುದ್ಧಿಃ**= ಅಂತಃಕರಣ ಅಥವಾ ಯಾವುದು ಕಾರ್ಯ ಯಾವುದು ಅಕಾರ್ಯ ಎಂಬ ಈ ರೀತಿಯ ವಿವೇಕ. **ಜ್ಞಾನಂ**= ಸಾಮಾನ್ಯವಾಗಿ ಎಲ್ಲಾವಿಧದ ಅರಿವು. **ಅಸಂಮೋಹಃ**= ಮಾಡಲು ಅನರ್ಹವಾದುದರಲ್ಲಿ 'ಮಾಡಬೇಕು' ಎಂಬ ಈ ರೀತಿಯ ಇಚ್ಛೆ ಉಂಟಾಗದೆ ಇರುವುದು. ಅಥವಾ ಭ್ರಾಂತಿ

ಇಲ್ಲದಿರುವುದು. **ಸತ್ಯಂ** = ಸರಿಯಾಗಿ ಅರಿತು ಕಾರ್ಯನಿರ್ವಹಿಸುವುದು, ಅಥವಾ ಸರಿಯಾಗಿ ಅರಿತುಕೊಂಡು ಮಾತನಾಡುವುದು. **ದಮಃ**= ಇಂದ್ರಿಯ ನಿಗ್ರಹ (ಇಂದ್ರಿಯಗಳ ಮೇಲೆ ಹತೋಟಿ) **ಶಮಃ** = ಪರಮಾತ್ಮನಲ್ಲಿ ನಿಷ್ಠೆ. **ಸುಖಂ**= ಇದು ನನಗೆ ಅನುಕೂಲವಾಗಿದೆ ಎಂಬ ಭಾವನೆಗೆ ವಿಷಯವಾಗಿರುವಂತದ್ದು. **ದುಃಖಂ**= ಇದು ನನಗೆ ಪ್ರತಿಕೂಲವೆನಿಸಿದೆ ಎಂಬ ಭಾವನೆಗೆ ವಿಷಯವಾಗಿರುವಂತದ್ದು. **ಭವಃ**= ಉತ್ಪತ್ತಿ. **ಭಾವಃ**= ಇರುವಿಕೆ , **ಭಯಂ**= ಹೆದರಿಕೆ. **ಅಭಯಂ**= ಭಯಕ್ಕೆ ವಿರುದ್ಧವಾದ ಮನಃಸ್ಥಿತಿ. ॥ 4 ॥

**ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ 5 ॥**

**ಅರ್ಥ–** ಅಹಿಂಸೆ, ಸಮತ್ವ, ತೃಪ್ತಿ , ತಪಸ್ಸು , ದಾನ, ಯಶಸ್ಸು , ಅಪಕೀರ್ತಿ, ಹೀಗೆ ನಾನಾ ವಿಧವಾದ ಈ ಧರ್ಮಗಳೆಲ್ಲಾ ಪ್ರಾಣಿಗಳಿಗೆ ಸಂಬಂಧಿಸಿದಂತೆ ನನ್ನಿಂದಲೇ ಉಂಟಾಗುತ್ತಿವೆ.

**ಅಹಿಂಸಾ ಪರಪ್ರಾಣಿಪೀಡಾಽಭಾವಃ । ಸಮತಾ ದ್ವಂದ್ವೇಷು ನಿರ್ವಿಕಾರತ್ವಮ್ । ತುಷ್ಟಿರ್ವಿಷಯಾಲಂಬುದ್ಧಿಃ । ತಪೋ ಬ್ರಹ್ಮಚರ್ಯಾದಿಃ । ದಾನಂ ಧರ್ಮಾರ್ಜಿತವಿತ್ತಸ್ಯ ಪರಸ್ವತ್ವಾಪಾದನಮ್ । ಯಶಃ ಕೀರ್ತಿಃ । ಅಯಶೋಽಪಕೀರ್ತಿಃ । ಪೃಥಗ್ವಿಧಾಃ ನಾನಾವಿಧಾಃ ಏತೇ ಭಾವಾಃ ಧರ್ಮಾಃ ಭೂತಾನಾಂ ಪ್ರಾಣಿನಾಂ ಮತ್ತ ಏವ ಭವಂತಿ ಇತಿ ॥ 5 ॥**

**ಅನುವಾದ– ಅಹಿಂಸಾ**= ಬೇರೆಪ್ರಾಣಿಗಳನ್ನು ಹಿಂಸಿಸದೆ ಇರುವುದು. **ಸಮತಾ**= ಸುಖ-ದುಃಖ ಮೊದಲಾದ ಪರಸ್ಪರ ವಿರುದ್ಧ ಸ್ಥಿತಿಗಳಲ್ಲಿ ವಿಕಾರ ಹೊಂದದೆ ಇರುವುದು. **ತುಷ್ಟಿಃ**= ಪ್ರಾಪಂಚಿಕ ಭೋಗದ ವಿಷಯದಲ್ಲಿ 'ಸಾಕು' ಎಂಬೀರೀತಿಯ ತೃಪ್ತಿ. **ತಪಃ**= ಬ್ರಹ್ಮಚರ್ಯಾದಿಗಳು. **ದಾನಂ**= ನ್ಯಾಯ ಮಾರ್ಗದಿಂದ ಸಂಪಾದಿಸಿದ ಸಂಪತ್ತನ್ನು ಯೋಗ್ಯರಾದ ಬೇರೆಯವರ ಕೈಗೆ ಸೇರಿಸುವುದು. **ಯಶಃ**= ಕೀರ್ತಿ. **ಅಯಶಃ**= ಅಪಕೀರ್ತಿ, **ಪೃಥಗ್‌ವಿಧಾಃ**= ನಾನಾ ವಿಧವಾದ ಈ ಎಲ್ಲಾ , **ಭಾವಾಃ**= ಧರ್ಮಗಳು, **ಭೂತಾನಾಂ**= ಪ್ರಾಣಿಗಳಿಗೆ ನನ್ನಿಂದಲೇ ಉಂಟಾಗುತ್ತಿವೆ. ॥ 5 ॥

**ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಾಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥ 6 ॥**

**ಅರ್ಥ–** ಹಿಂದಿನ ಮನ್ವಂತರದಲ್ಲಿದ್ದ ಮರೀಚಿ, ಅತ್ರಿ, ಅಂಗೀರಸ,ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ ಎಂಬ ಏಳು ಋಷಿಗಳು, ಯಾವ ನಾಲ್ಕು ಮನುಗಳ ಮಗ, ಮೊಮ್ಮಗ ಎಂಬಿತ್ಯಾದಿ

ರೀತಿಯಿಂದ ಲೋಕದಲ್ಲಿರುವ ಈ ಜೀವರೆಲ್ಲ ಇದ್ದಾರೋ ಅಂತಹ ಬ್ರಹ್ಮದೇವರ ಮನಸ್ಸಿನಿಂದ ಹುಟ್ಟಿರುವ ಸ್ವಾಯಂಭುವ, ಸ್ವಾರೋಚಿಷ, ರೈವತ, ಉತ್ತಮ ಎಂದು ಪ್ರಸಿದ್ಧರಾಗಿರುವ ನಾಲ್ಕು ಮಂದಿ ಮನುಗಳು ಬ್ರಾಹ್ಮಣ , ಕ್ಷತ್ರಿಯ, ವೈಶ್ಯ , ಶೂದ್ರ ಎಂಬೀ ನಾಲ್ಕು ವರ್ಣಗಳಿಗೆ ಸೇರಿರುವ, 'ಜ್ಞಾನಿಗಳಾಗಿರುವುದರಿಂದ' ಮನುಗಳೆಂದು ಗುರುತಿಸಲ್ಪಡುತ್ತಿರುವ ಬ್ರಹ್ಮಾದಿದೇವತೆಗಳು ಇವರೆಲ್ಲರೂ ನನ್ನಿಂದಲೇ ಜನ್ಮವನ್ನು ತಾಳಿರುವರು.

**ನ ಕೇವಲಂ ಭೂತಾನಾಂ ಬುದ್ಧ್ಯಾದಿಧರ್ಮಾಃ ಮತ್ತೋ ಭವಂತಿ । ಕಿಂತು ಭೂತಾನ್ಯಪಿ ಮತ್ತ ಏವ ಭವಂತೀತ್ಯಾಹ- ಮಹರ್ಷಯ ಇತಿ ॥ 'ಮರೀಚಿ-ರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ । ವಸಿಷ್ಠಶ್ಚ ಮಹಾತೇಜಾಃ ಪೂರ್ವೇ ಸಪ್ತರ್ಷಯಃ ಸ್ಮೃತಾಃ' (ಮೋಕ್ಷಧರ್ಮೇ) ಇತ್ಯುಕ್ತಾಃ । ಪೂರ್ವೇ ಪೂರ್ವ-ಮನ್ವಂತರಸ್ಥಾಃ ಸಪ್ತಮಹರ್ಷಯಃ । ಮಾನಸಾಃ ಬ್ರಹ್ಮಣೋ ಮನೋಽಪತ್ಯ-ತಯಾ ಜಾತಾಃ ಪೂರ್ವೇ ಪ್ರಾಥಮಿಕಾಶ್ಚತ್ವಾರಃ ಸ್ವಾಯಂಭುವಸ್ವಾರೋಚಿಷ-ರೈವತೋತ್ತಮಾಖ್ಯಾಃ ಮನವಃ ।**

**ಅನುವಾದ–** ಪ್ರಾಣಿಗಳ ಬುದ್ಧ್ಯಾದಿ ಧರ್ಮಗಳು ನನ್ನಿಂದ ಹುಟ್ಟಿದವು ಎಂದಿಷ್ಟೇ ಅಲ್ಲ. ಪ್ರಾಣಿಗಳೂ ಕೂಡಾ ನನ್ನಿಂದಲೇ ಹುಟ್ಟುತ್ತವೆ ಎಂಬ ಪ್ರಮೇಯವನ್ನು **'ಮಹರ್ಷಯಃ ಸಪ್ತ'** ಎಂಬ ಶ್ಲೋಕದಲ್ಲಿ ಪ್ರಚುರ ಪಡಿಸಲಾಗುತ್ತಿದೆ.

'ಮರೀಚಿರತ್ರ್ಯಂಗೀರಸೌ ಪುಲಸ್ತ್ಯಃ ಪುಲಹಃ ಕ್ರತುಃ ।
ವಸಿಷ್ಠಶ್ಚ ಮಹಾತೇಜಾಃ ಪೂರ್ವೇ ಸಪ್ತರ್ಷಯಃ ಸ್ಮೃತಾಃ ॥ '

ಎಂದು ಮೋಕ್ಷಧರ್ಮದಲ್ಲಿ ಹೇಳಲಾಗಿರುವ, **ಪೂರ್ವೇ**= ಹಿಂದಿನ ಮನ್ವಂತರದಲ್ಲಿದ್ದ ಏಳುಮಂದಿ ಋಷಿಗಳು, **ಮಾನಸಾಃ**= ಬ್ರಹ್ಮದೇವರ ಮನಸ್ಸಿನ ಮಕ್ಕಳಾಗಿರುವ **ಪೂರ್ವೇ**= ಮನುಗಳಲ್ಲಿ ಮೊದಲಿಗರಾಗಿರುವ, ಸ್ವಾಯಂಭುವ, ಸ್ವಾರೋಚಿಷ, ರೈವತ, ಉತ್ತಮ ಎಂದು ಪ್ರಸಿದ್ಧರಾದ ನಾಲ್ಕು ಜನ ಮನುಗಳು.

## ದೇವತೆಗಳಲ್ಲಿಯೂ ವರ್ಣ ವ್ಯವಸ್ಥೆ

**ಯದ್ವಾ ಮನು ಅವಬೋಧನೇ ಇತ್ಯತಃ ಉಪ್ರತ್ಯಯೇ ಬೋಧವೈಶೇಷ್ಯಾದ್ ಬ್ರಹ್ಮಾದ್ಯಾ ದೇವಾಃ ವಿಪ್ರಕ್ಷತ್ರಿಯವೈಶ್ಯಶೂದ್ರಭೇದೇನ ಚತುರ್ಧಾ ಸ್ಥಿತತ್ವಾ-ಚ್ಚತ್ವಾರಃ । ಉಕ್ತಂ ಹಿ ಬೃಹದ್ಭಾಷ್ಯೇ ಪ್ರಥಮಾಧ್ಯಾಯೇ ಚತುರ್ಥೇಽ-ವ್ಯಾಕೃತಬ್ರಾಹ್ಮಣೇ-**

‘ವಿಷ್ಣೋರ್ಬ್ರಾಹ್ಮಣಜಾತಿಃ ಸನ್ ಜಜ್ಞೇ ಬ್ರಹ್ಮಾ ಚತುರ್ಮುಖಃ ।
ಇತೋಽಗ್ರೇ ಜಗತಸ್ತಸ್ಮಾತ್ ಕ್ಷತ್ರಜಾತಿರಜಾಯತ ॥
ವಾಯುಃ ಸದಾಶಿವೋಽನಂತೋ ಗರುಡಃ ಶಕ್ರ ಏವ ಚ ।
ಕಾಮಶ್ಚ ವರುಣಶ್ಚೈವ ಸೋಮಃ ಸೂರ್ಯೋ ಯಮಸ್ತಥಾ ॥
ಏವಮಾದ್ಯಾಃ ಕ್ಷತ್ರಿಯಾಸ್ತು ದೇವತಾ ಬ್ರಹ್ಮನಿರ್ಮಿತಾಃ ॥’ ಇತಿ ।

ತಥಾ,

‘ವಿವಸ್ವದಿಂದ್ರವರುಣವಿಷ್ಣುಭ್ಯೋಽನ್ಯೇಽದಿತೇಃ ಸುತಾಃ ।
ರುದ್ರಾದನ್ಯೇ ತಥಾ ರುದ್ರಾಃ ವಾಯೋರನ್ಯೇ ಚ ವಾಯವಃ ।
ಅಗ್ನೇರನ್ಯೇ ಚ ವಸವೋ ವೈಶ್ಯಾ ಇತ್ಯೇವ ಕೀರ್ತಿತಾಃ ॥
ತಥಾಽಶ್ವಿನೌ ಪೃಥಿವೀ ಚೈವ ಕಾಲಾ ಮೃತ್ಯವ ಏವ ಚ ।
ಶೂದ್ರದೇವಾಃ ಸಮುದ್ದಿಷ್ಟಾ ದೇವವರ್ಣಾ ಇತಿ ಸ್ಮೃತಾಃ ॥’ ಇತಿ ಚ ॥

ವಿವಸ್ವದಿಂದ್ರವರುಣಾನಾಂ ಕ್ಷತ್ರಿಯತ್ವಾದ್ವಿಷ್ಣೋರವರ್ಣತ್ವಾತ್ತೇಭ್ಯೋಽನ್ಯೇಽಷ್ಟಾವಾದಿತ್ಯಾ ಗ್ರಾಹ್ಯಾ ಇತಿ ವಿಷ್ಣುಭ್ಯ ಇತ್ಯುಕ್ತಮ್ । ಅಗ್ನೇರ್ಬ್ರಾಹ್ಮಣತ್ವಾತ್ ಅಗ್ನೇರನ್ಯ ಇತ್ಯುಕ್ತಮ್ । ಸಪ್ತೈವ ವಸವೋ ವೈಶ್ಯಾಃ । ಸದಾಶಿವಸ್ಯ ಕ್ಷತ್ರಿಯತ್ವಾದ್ ರುದ್ರಾದನ್ಯ ಇತ್ಯುಕ್ತಮ್ । ದಶೈವ ರುದ್ರಾ ವೈಶ್ಯಾ ಇತ್ಯರ್ಥಃ । ಮದ್ಭಾವಾ ಮತ್ತೋ ಭಾವೋ ಜನ್ಮ ಯೇಷಾಂ ತೇ ಮದ್ಭಾವಾಃ ಮತ್ತ ಏವೋತ್ಪತ್ತಿಮಂತ ಇತ್ಯರ್ಥಃ । ಲೋಕೇ ಇಮಾಃ ಪ್ರಜಾ ಯೇಷಾಂ ಪ್ರಾಗುಕ್ತಮನೂನಾಂ ಪುತ್ರಪೌತ್ರಾದಿರೂಪೇಣ ವರ್ತಂತೇ ತೇ ಮದ್ಭಾವಾ ಇತ್ಯನ್ವಯಃ । ನ ಚ ‘ತತೋ ಮನೂನ್ ಸಸರ್ಜಾಂತೇ ಮನಸಾ ಲೋಕಭಾವನಾನ್’ (ಭಾಗ 3-21-49) ಇತ್ಯುಕ್ತ್ಯಾ ಬ್ರಹ್ಮಸೃಷ್ಟಾನಾಂ ಸ್ವಾಯಂಭುವಾದೀನಾಂ ಕಥಂ ಮದ್ಭಾವಾ ಇತ್ಯುಕ್ತಿಃ ? ಇತಿ ಶಂಕ್ಯಮ್ । ಬ್ರಹ್ಮಾಂತರ್ಯಾಮಿಣೋ ಮತ್ತೋ ಜನಿಮಂತ ಇತ್ಯರ್ಥಕತ್ವಾನ್ಮದ್ಭಾವಾ ಇತ್ಯಸ್ಯ । ಬ್ರಹ್ಮಾ ತು ದ್ವಾರಮಾತ್ರಮ್ । ನ ಚೈವಮಪಿ ಪ್ರಿಯವ್ರತಾದ್ಯಪತ್ಯತಾದಶಾಯಾಮೇವೋತ್ಪನ್ನಾನಾಂ ತೇಷಾಂ ಮನುಸಂಜ್ಞಕತ್ವೇನ ಮಾನಸತ್ವವೇಲಾಯಾಂ ತದಭಾವೇನ ಮನವ ಇತಿ ಉಕ್ತಿರಯುಕ್ತೇತಿ ವಾಚ್ಯಮ್ । ಮಾನಸದೇಹಾತ್ಯಾಗೇನೈವ ಪ್ರಿಯವ್ರತಾದಾವುತ್ಪನ್ನಾನಾಂ ದ್ವಯೋರ್ದೇಹಯೋರೈಕ್ಯೇನ ಮಾನಸತ್ವೋಪಪತ್ತೇಃ ಇತ್ಯೇತದ್‌ಭಾಷ್ಯಟೀಕಾಯಾಮೇವೋಕ್ತೇಃ ॥ 6 ॥

**ಅನುವಾದ–** ಅಥವಾ ಈ ಮನುಶಬ್ದವು ಜ್ಞಾನ ಎಂಬ ಅರ್ಥದಲ್ಲಿರುವ ಮನು ಧಾತುವಿಗೆ 'ಉ' ಪ್ರತಯ ಸೇರಿದಾಗ ಮನ್ + ಉ = ಮನು ಎಂಬೀರೀತಿಯಲ್ಲಿ ನಿಷ್ಪನ್ನವಾಗಿದ್ದು , ಜ್ಞಾನಾತಿಶಯವಿರುವ ಕಾರಣದಿಂದ ಬ್ರಹ್ಮಾದಿದೇವತೆಗಳನ್ನು ಹೇಳುತ್ತಿದೆ. ಈ ದೇವತೆಗಳು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರ ಎಂಬೀ ಪ್ರಕಾರಗಳಿಂದ ನಾಲ್ಕು ವಿಧ ವಾಗಿರುವುದರಿಂದ ಅವರನ್ನು ಇಲ್ಲಿ **ಚತ್ವಾರಃ** (ನಾಲ್ಕುಮಂದಿ) ಎಂದು ಉಲ್ಲೇಖಿಸಲಾಗಿದೆ. ಬ್ರಹ್ಮಾದಿದೇವತೆಗಳಲ್ಲಿಯೂ ಬ್ರಾಹ್ಮಣಾದಿವರ್ಣವ್ಯವಸ್ಥೆ ಇದೆ ಎಂದೆನ್ನುವುದು ಬೃಹದಾರಣ್ಯಕೋಪನಿಷತ್ ಭಾಷ್ಯದ ಮೊದಲನೆಯ ಅಧ್ಯಾಯದ ನಾಲ್ಕನೆಯ ಅವ್ಯಾಕೃತ ಬ್ರಾಹ್ಮಣದಲ್ಲಿ ಪ್ರಮಾಣವನ್ನು ಉಲ್ಲೇಖಿಸುವ ಮೂಲಕ ಆಚಾರ್ಯರಿಂದ ಹೀಗೆ ನಿರೂಪಿಸಲ್ಪಟ್ಟಿದೆ– 'ಜಗತ್ತಿನ ಆದಿಕಾಲದಲ್ಲಿ ವಿಷ್ಣುವಿನಿಂದ ಚತುರ್ಮುಖ ಬ್ರಹ್ಮದೇವರು ಬ್ರಾಹ್ಮಣ ಜಾತಿಯುಳ್ಳವರಾಗಿ ಜನಿಸಿದರು. ಆ ಬ್ರಹ್ಮದೇವರಿಂದ ಕ್ಷತ್ರಿಯಜಾತಿಯು ಹುಟ್ಟಿತು. ವಾಯುದೇವರು, ರುದ್ರದೇವರು (ಸದಾಶಿವ) ಶೇಷದೇವರು, ಗರುಡದೇವರು, ಇಂದ್ರ (ಶಕ್ರ) ದೇವ, ಇವರೆ ಮೊದಲಾದವರು ಬ್ರಹ್ಮದೇವರಿಂದ ಜನಿಸಿದ ಕ್ಷತ್ರಿಯರೆನಿಸಿರುವರು'– ಎಂದು. ಹಾಗೆಯೇ ವಿವಸ್ವಾನ್, ಇಂದ್ರ, ವರುಣ, ವಿಷ್ಣು ಈ ನಾಲ್ವರಿಗಿಂತ ಇತರರಾದ ಎಂಟು ಮಂದಿ ಅದಿತಿಯ ಮಕ್ಕಳು (ಆದಿತ್ಯರು) ವಾಯುಗಳಲ್ಲಿ ಮುಖ್ಯಪ್ರಾಣನಿಗಿಂತ ಇತರರಾದ ವಾಯು ಗಳು, ಅಷ್ಟವಸುಗಳಲ್ಲಿ ಅಗ್ನಿಗಿಂತ ಇತರರಾದ ಏಳು ಮಂದಿ ವಸುಗಳು, ವೈಶ್ಯರೆಂದು ಪರಿಗಣಿಸಲ್ಪಟ್ಟಿರುವರು' ಹಾಗೆಯೇ ಇಬ್ಬರು ಅಶ್ವಿನಿದೇವತೆಗಳು, ಪೃಥಿವೀದೇವಿ. ಕಾಲದೇವತೆ ಗಳು, ಮೃತ್ಯುದೇವತೆಗಳು ಇವರೆಲ್ಲರೂ ಶೂದ್ರದೇವತೆಗಳೆಂದೇ ಉಲ್ಲೇಖಿಸಲ್ಪಟ್ಟಿದ್ದಾರೆ. ಹೀಗೆ ದೇವತೆಗಳಿಗೆ ಸಂಬಂಧಿಸಿದಂತೆ ವರ್ಣಗಳು ಪ್ರಮಾಣಸಿದ್ಧವೆನಿಸಿವೆ '– ಎಂದು ಬೃಹದಾರಣ್ಯಕ ಭಾಷ್ಯದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಹನ್ನೆರಡು ಮಂದಿ ಆದಿತ್ಯರಲ್ಲಿ ವಿವಸ್ವತ್, ಇಂದ್ರ, ವರುಣ ಈ ಮೂವರು ಕ್ಷತ್ರಿಯರು. ವಿಷ್ಣುರೂಪದ ಆದಿತ್ಯನು ಯಾವವರ್ಣಕ್ಕೂ ಸೇರಿದವನಲ್ಲ ಹಾಗಾಗಿ ವಿವಸ್ವತ್, ಇಂದ್ರ, ವರುಣ ವಿಷ್ಣುಭ್ಯೋಽನ್ಯೇ ಎಂದೆನ್ನುವ ಮೂಲಕ ಈ ನಾಲ್ಕು ಮಂದಿಗಿಂತ ಇತರರಾದ ಎಂಟು ಮಂದಿ ಆದಿತ್ಯರನ್ನು ಮಾತ್ರ ವೈಶ್ಯವರ್ಣಕ್ಕೆ ಸೇರಿದವರನ್ನಾಗಿ ಪರಿಗಣಿಸ ಲಾಗಿದೆ ಎಂದು ಸೂಚಿಸಿದಂತಾಯಿತು. ವಸುಗಳಲ್ಲಿ ಅಗ್ನಿಯು ಬ್ರಾಹ್ಮಣನಾಗಿರುವುದರಿಂದ ಅವನಿಗಿಂತ ಅನ್ಯರಾದ ವಸುಗಳು ವೈಶ್ಯರು ಎಂದೆನ್ನಲಾಗಿದೆ. ಹಾಗಾಗಿ ಎಂಟುಮಂದಿ ವಸುಗಳ ಮಧ್ಯೆ ಏಳು ಮಂದಿ ಮಾತ್ರ ವೈಶ್ಯರೆಂದಾಯಿತು. ಸದಾಶಿವರೂಪದ ರುದ್ರನು ಕ್ಷತ್ರಿಯ ನಾಗಿರುವುದರಿಂದ ಅವನನ್ನು ಹೊರತುಪಡಿಸಲು '**ರುದ್ರಾದನ್ಯೇ ರುದ್ರಾಸ್ತಥಾ** (ವೈಶ್ಯಾಃ)' ಎಂದೆನ್ನಲಾಗಿದೆ. ಹಾಗಾಗಿ ಏಕಾದಶ ರುದ್ರರಲ್ಲಿ ಹತ್ತು ಮಂದಿ ಮಾತ್ರ ವೈಶ್ಯರು ಎಂದಾಯಿತು.

'ಮತ್ತಃ ಭಾವಃ ಯೇಷಾಂ ತೇ ಮದ್ಭಾವಾಃ' ಎಂದು ಬಹುವ್ರೀಹಿಸಮಾಸ. ಇದರಿಂದ ಈ

ಏಳು ಮಂದಿ ಋಷಿಗಳು ಹಾಗೂ ನಾಲ್ಕು ಮಂದಿ ಮನುಗಳು ನನ್ನಿಂದಲೇ (ಮತ್ತಃ) ಹುಟ್ಟುಳ್ಳವರು ಎಂದಂತಾಯಿತು. ಈ ಶ್ಲೋಕದ ಉತ್ತರಾರ್ಧವನ್ನು '**ಲೋಕೇ ಇಮಾಃ ಪ್ರಜಾಃ ಯೇಷಾಂ (ಮನೂನಾಂ ಪುತ್ರಪೌತ್ರಾದಿಭಾವೇನ) ಜಾತಾಃ ತೇ ಮಾನಸಾಃ ಮದ್ಭಾವಾಃ**'– ಲೋಕದಲ್ಲಿರುವ ಈ ಜೀವಿಗಳೆಲ್ಲಾ ಯಾರ ಮಗ, ಮೊಮ್ಮಗ ಮೊದಲಾದ ರೂಪದಿಂದ ಇರುವರೋ ಅಂತಹ ಬ್ರಹ್ಮದೇವರ ಮಾನಸ ಪುತ್ರರಾದ ಮನುಗಳು **ಮದ್ಭಾವಾಃ**= ನನ್ನಿಂದಲೇ ಹುಟ್ಟು ಉಳ್ಳವರು– ಎಂದು ಅನ್ವಯಿಸಿಕೊಳ್ಳಬೇಕು. ಇಲ್ಲಿರುವ '**ಮದ್ಭಾವಾಃ**' ಎಂದೆನ್ನುವುದಕ್ಕೆ 'ಬ್ರಹ್ಮದೇವರ ಅಂತರ್ಯಾಮಿಯಾದ ನನ್ನಿಂದ ಹುಟ್ಟುಳ್ಳವರು' ಎಂದರ್ಥ. ಹಾಗಾಗಿ ಭಾಗವತದ ಮೂರನೆಯ ಸ್ಕಂಧದಲ್ಲಿ 'ಆಮೇಲೆ ಕೊನೆಗೆ ಬ್ರಹ್ಮದೇವರು ಲೋಕಕ್ಕೆ ಕಾರಣನೆನಿಸಿರುವ ಮನುಗಳನ್ನು ತನ್ನ ಮನಸ್ಸಿನಿಂದ ಸೃಷ್ಟಿಸಿದರು' ಎಂಬ ಉಲ್ಲೇಖದಂತೆ ಬ್ರಹ್ಮದೇವರಿಂದ ಸೃಷ್ಟಿಸಲ್ಪಟ್ಟಿರುವ ಸ್ವಾಯಂಭುವ ಮೊದಲಾದ ಮನುಗಳನ್ನು ನನ್ನಿಂದ ಹುಟ್ಟುಳ್ಳವರು (ಮದ್ಭಾವಾಃ) ಎಂದು ಕೃಷ್ಣನು ಹೇಳುತ್ತಿರುವುದು ಹೇಗೆ ಸರಿಯೆನಿಸೀತು' ಎಂಬೀ ಆಕ್ಷೇಪಕ್ಕೆ ಅವಕಾಶವಿಲ್ಲ. ಅವರು ಸಾಕ್ಷಾತ್ತಾಗಿ ಬ್ರಹ್ಮದೇವರ ಅಂತರ್ಯಾಮಿಯಾದ ಪರಮಾತ್ಮನಿಂದ ಹುಟ್ಟಿದವರು. ಬ್ರಹ್ಮದೇವರು ಅವರ ಹುಟ್ಟಿಗೆ ಕೇವಲ ದ್ವಾರದಂತೆ ಇದ್ದವರು 'ಮನುಗಳು ಬ್ರಹ್ಮದೇವರ ಮನಸ್ಸಿನಿಂದ ಹುಟ್ಟಿದ ದೇಹಗಳನ್ನು ತ್ಯಜಿಸದೇನೇ ಪ್ರಿಯವ್ರತಾದಿಗಳ ಮಕ್ಕಳಾಗಿ ಜನಿಸಿದರು. ಹಾಗಾಗಿ ಅವರಿಗೆ ಸಂಬಂಧಿಸಿದ ಬ್ರಹ್ಮಮಾನಸದೇಹ ಹಾಗೂ ಪ್ರಿಯವ್ರತಾದಿಗಳಿಂದ ಹುಟ್ಟಿದ ದೇಹ ಇವೆರಡೂ ಒಂದೇ ಆಗಿರುವುದರಿಂದ ಬ್ರಹ್ಮದೇವರ ಮಾನಸಪುತ್ರರೂ ಮನುಗಳೇ ಆಗಿರುವರು' ಎಂದು ಈ ಬೃಹದಾರಣ್ಯಕ ಭಾಷ್ಯದ ಟೀಕೆಯಲ್ಲಿ ವಿವರಿಸಲಾಗಿದೆ. ಆದುದರಿಂದ 'ಪ್ರಿಯವ್ರತಾದಿಗಳ ಪುತ್ರರಾಗಿ ಜನಿಸಿದಾಗಲಷ್ಟೇ ಈ ಸ್ವಾಯಂಭುವಾದಿಗಳು 'ಮನು' ಎಂಬ ಹೆಸರನ್ನು ಪಡೆದಿರುವುದರಿಂದ, ಬ್ರಹ್ಮದೇವರ ಮಾನಸಪುತ್ರರಾಗಿದ್ದಾಗ, ಅವರಿಗೆ ಆ ಹೆಸರು ಇಲ್ಲವೆಂದಾಯಿತು; ಹಾಗಿರುವಾಗ '**ಮಾನಸಾಃ ಮನವಃ**' ಎಂದಿರುವುದು ಸರಿಯಲ್ಲ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ॥ 6 ॥

## ಎನ್ನ ಮಹಿಮೆಯರಿತವಗೆ ಧ್ಯಾನಸಿದ್ಧಿ

**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।**
**ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ** ॥ 7 ॥

**ಅರ್ಥ**– ಯಾರು ನನ್ನ ಅನನ್ಯಸಾಧಾರಣಸ್ಥಿತಿಯನ್ನು– ಅಂದರೆ– '**ನ ಮೇ ವಿದುಃ ಸುರಗಣಾಃ**' ಎಂಬಿತ್ಯಾದಿಯಾಗಿ ಹೇಳಲ್ಪಟ್ಟ 'ಸುರಗಣಾದಿಗಳ ಅರಿವಿಗೆ ನಿಲುಕದೇ ಇರುವುದು' ಎಂಬೀರೀತಿಯ ಮಹಿಮೆಯನ್ನು ಹಾಗೂ ಬುದ್ಧ್ಯಾದಿ ಸರ್ವಧರ್ಮಗಳ ಹಾಗೂ ಸಪ್ತರ್ಷಿ

ಮನುಗಳ ಸೃಷ್ಟಿಗೆ ಕಾರಣನಾಗಿರುವವನು ಎಂದು ಹೇಳಿರುವುದರಿಂದ ಸೂಚಿಸಲ್ಪಟ್ಟ ನನ್ನ ಸಾಮರ್ಥ್ಯವನ್ನು ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆಯೋ ಅವನು ದೃಢವಾದ ಧ್ಯಾನರೂಪ ಸಾಧನದಿಂದ ಯುಕ್ತನೆನಿಸುತ್ತಾನೆ. ಈ ವಿಷಯದಲ್ಲಿ ಸಂದೇಹ ಪಡಬೇಕಾಗಿಲ್ಲ.

**ಉಕ್ತಮಾಹಾತ್ಮ್ಯಜ್ಞಾನಸ್ಯ ಫಲಮಾಹ– ಏತಾಮಿತಿ ॥ ಏತಾಂ 'ನ ಮೇ ವಿದುಃ ಸುರಗಣಾಃ' ಇತ್ಯಾದಿನೋಕ್ತಾಂ ವಿಭೂತಿಂ ವಿಶಿಷ್ಟಭವನಂ ಸುರಗಣಾದ್ಯವೇದ್ಯತ್ವ-ರೂಪಾಂ ಮಹತ್ತಾಂ ವಕ್ಷ್ಯಮಾಣನಾನಾವಿಧಭವನಂ ವಾ । ಯೋಗಂ ಚ ಬುದ್ಧ್ಯಾದಿಸರ್ವಸ್ರಷ್ಟೃತ್ವೋಕ್ತ್ಯಾ ಲಬ್ಧಮ್, ಪ್ರಭವಪದಸ್ಯ ಪ್ರಭಾವಮಿತಿ ವ್ಯಾಖ್ಯಾನೇನ ಪ್ರಭವಪದೇನೋಕ್ತಂ ವಾ ಮಮ ಸಾಮರ್ಥ್ಯಂ ಚ । 'ಯುಜ್ಯತೇ ಯೇನ ಯೋಗೋಽಸಾವುಪಾಯಃ ಶಕ್ತಿರೇವ ಚ' ಇತ್ಯುಕ್ತೇಃ । ತತ್ತ್ವತೋ ಯೋ ವೇತ್ತಿ ಸೋಽವಿಕಂಪೇನ ನಿಶ್ಚಲೇನ ಯೋಗೇನ ಧ್ಯಾನರೂಪೋಪಾಯೇನ ಯುಜ್ಯತೇ ಯುಕ್ತೋ ಭವತಿ । ಅತ್ರಾರ್ಥೇ ಸಂಶಯೋ ನೇತ್ಯರ್ಥಃ ॥ 7 ॥**

**ಅನುವಾದ–** ಹೀಗೆ ನಿರೂಪಿಸಲಾಗಿರುವ ಮಾಹಾತ್ಮ್ಯಜ್ಞಾನದ ಫಲವನ್ನು **'ಏತಾಂ ವಿಭೂತಿಂ ಯೋಗಂ ಚ'** ಎಂಬಿತ್ಯಾದಿ ಶ್ಲೋಕದಲ್ಲಿ ಹೇಳಲಾಗುತ್ತಿದೆ. **ಏತಾಂ**= **'ನ ಮೇ ವಿದುಃ ಸುರಗಣಾಃ'** ಎಂದು ಮೊದಲಾಗಿ ಹೇಳಲಾಗಿರುವ ನನ್ನ **ವಿಭೂತಿಂ**= ವಿಶಿಷ್ಟವಾದ ಸ್ಥಿತಿಯನ್ನು ಅಂದರೆ- ಸುರಗಣಾದಿಗಳ ಅರಿವಿಗೆ ನಿಲುಕದೇ ಇರುವಿಕೆ ಎಂಬಿತ್ಯಾದಿ ರೀತಿಯ ನನ್ನ ಮಹತ್ತ್ವವನ್ನು, ಅಥವಾ ಮುಂದೆ ಹೇಳಲಾಗುವ ನನ್ನ ನಾನಾರೂಪಗಳ ಸ್ಥಿತಿಯನ್ನು **'ಯುಜ್ಯತೇ ಯೇನ ಯೋಗೋಽಸೌ ಉಪಾಯಃ ಶಕ್ತಿರೇವ ಚ'– ಯುಜ್ಯತೇ ಅನೇನ ಇತಿ ಯೋಗಃ** (ಯಾವುದರಿಂದ ಬೇಕಾಗಿರುವ ವಸ್ತುವು ಕೈ ಸೇರುತ್ತದೋ ಅದು ಯೋಗ) ಎಂದು ಯೋಗ ಶಬ್ದದ ನಿರ್ವಚನ. ಇದರಂತೆ ಯೋಗವೆಂದರೆ ಬೇಕಾಗಿರುವ ವಸ್ತುವಿನ ಪ್ರಾಪ್ತಿಗೆ ಆವಶ್ಯಕವಾದ ಉಪಾಯವೂ ಆಗುತ್ತದೆ; ಸಾಮರ್ಥ್ಯವೂ ಆಗುತ್ತದೆ ' ಎಂದು ಪ್ರಸಿದ್ಧವಾಗಿರುವಂತೆ ಪ್ರಕೃತ ಯೋಗಪದದಿಂದ ಸಾಮರ್ಥ್ಯವನ್ನು ಇಟ್ಟುಕೊಳ್ಳಬೇಕು. ಹಾಗಾಗಿ, **ಯೋಗಂ ಚ**= 'ಬುದ್ಧಿಯನ್ನು ಮೊದಲ್ಗೊಂಡು ಎಲ್ಲದರ ಸೃಷ್ಟಿಕರ್ತನಾಗಿರುವೆನು' ಎಂದೆನ್ನುವ ಮೂಲಕ ಸಿದ್ಧನಾದ ನನ್ನ ಸಾಮರ್ಥ್ಯಾತಿಶಯವನ್ನು ಎಂದು ಅರ್ಥ. ಹಾಗೆಯೇ **'ನ ಮೇ ವಿದುಃ ಸುರಗಣಾಃ ಪ್ರಭವಂ'** ಎಂದೆನ್ನುವುದಕ್ಕೆ ದೇವತೆಗಳು ನನ್ನ ಪ್ರಭಾವವನ್ನು , ಸಾಮರ್ಥ್ಯವನ್ನು ತಿಳಿದಿಲ್ಲ ಎಂದು ವ್ಯಾಖ್ಯಾನಿಸಿರುವುದರಿಂದ, **ಯೋಗಂ** ಎಂದರೆ, ಪ್ರಭವ ಶಬ್ದದಿಂದ ಹೇಳಲ್ಪಟ್ಟಿರುವ ನನ್ನ ಸಾಮರ್ಥ್ಯವನ್ನು ಎಂದೂ ಅರ್ಥ. ಯಥಾವತ್ತಾಗಿ ಯಾರು ತಿಳಿದುಕೊಳ್ಳುತ್ತಾನೋ ಅವನು **ಅವಿಕಂಪೇನ**= ನಿಶ್ಚಲ (ದೃಢ)ವಾದ, **ಯೋಗೇನ**= ಧ್ಯಾನರೂಪದ ಮೋಕ್ಷೋಪಾಯದಿಂದ **ಯುಜ್ಯತೇ**= ಸಹಿತನಾಗುತ್ತಾನೆ. ಅತ್ರ ನ ಸಂಶಯ. ಈ ವಿಷಯದಲ್ಲಿ ಸಂದೇಹವಿಲ್ಲ. ॥ 7 ॥

## ಜ್ಞಾನಿಗಳು ಭಗವಂತನನ್ನು ಭಜಿಸುವ ವಿಧಾನಗಳು

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥ 8 ॥**

**ಅರ್ಥ–** ನಾನು ಸಕಲಜಗತ್ತಿನ ಉತ್ಪತ್ತಿಕಾರಣನಾಗಿದ್ದೇನೆ, ಎಲ್ಲರೂ ನನ್ನಿಂದಾಗಿಯೇ ಪ್ರವೃತ್ತಿ ಉಳ್ಳವರಾಗಿದ್ದಾರೆ ಎಂದು ತಿಳಿದುಕೊಂಡು ಜ್ಞಾನಿಗಳು ಭಕ್ತಿಯುಕ್ತರಾಗಿ ನನ್ನನ್ನು ಸೇವಿಸುತ್ತಿದ್ದಾರೆ.

**ಉಕ್ತಫಲೇ ವಿಶ್ವಾಸಜನನಾರ್ಥಂ ಪೂರ್ವೋಕ್ತಮಹಿಮಜ್ಞಾನಪೂರ್ವಂ ಮಾಂ ಭಜಂತಃ ಸಂತೀತ್ಯಹಮಿತ್ಯಾದಿದ್ವಾಭ್ಯಾಮುಕ್ತ್ವಾ ಪುನಸ್ತೇಷಾಮಿತ್ಯಾದಿದ್ವಾಭ್ಯಾಂ ಫಲಂ ಚ ವ್ಯನಕ್ತಿ । ಪ್ರಭವತ್ಯಸ್ಮಾದಿತಿ ಪ್ರಭವಃ ಸರ್ವಸ್ಯಾಹಮುತ್ಪಾದಕ ಇತ್ಯರ್ಥಃ। ಮತ್ತಃ ಸರ್ವಂ ಪ್ರವರ್ತತೇ । ಇಷ್ಟಾನಿಷ್ಟಪ್ರಾಪ್ತಿಪರಿಹಾರಾದ್ಯನುಕೂಲವ್ಯಾಪಾರವದ್ ಭವತಿ । ಲಯಾದಿರಪಿ ಮದಾಯತ್ತ ಇತ್ಯುಪಲಕ್ಷ್ಯತೇ । ಇತಿ ಮತ್ವಾ ಬುಧಾಃ ಜ್ಞಾನಿನಃ ಭಾವಸಮನ್ವಿತಾಃ ಭಾವೇನ ಭಕ್ತ್ಯಾ ಸಮುಪೇತಾಃ ಸಂತಃ ಮಾಂ ಭಜಂತೇ । ಪತ್ರಪುಷ್ಪಾದಿಭಿರರ್ಚಯಂತಿ ಧ್ಯಾಯಂತಿ ಚೇತ್ಯರ್ಥಃ । ಅತ್ರ ಪೂರ್ವಾರ್ಧೇನ್ಯೆವ ಮಾಮಿತ್ಯಸ್ಯ ಲಾಭಾತ್ಪುನರ್ಮಾಮಿತ್ಯುಕ್ತಿರ್ಜೀವೇಶ್ವರೈಕ್ಯಾಭಿಪ್ರಾಯೇಣ ಸ್ವಾತ್ಮಾನಮುದ್ದಿಶ್ಯಾಹಮೇವ ಸರ್ವಸ್ಯ ಪ್ರಭವ ಇತಿ ಮತ್ವಾ ಭಜಂತ ಇತಿ ಪ್ರತೀತಿನಿರಾಸಾಯ ॥ 8 ॥**

**ಅನುವಾದ–** ಹಿಂದೆ ಹೇಳಲಾಗಿರುವ ತನ್ನ ಮಾಹಾತ್ಮ್ಯಜ್ಞಾನದ ಫಲದಲ್ಲಿ ವಿಶ್ವಾಸವನ್ನು ತಂದುಕೊಡುವ ಉದ್ದೇಶದಿಂದ 'ಹಿಂದೆ ಹೇಳಲಾಗಿರುವ ಮಹಿಮೆಯನ್ನು ಅರಿತು ತನ್ನನ್ನು ಸೇವಿಸುತ್ತಿರುವವರು ಇದ್ದಾರೆ' ಎಂದೆನ್ನುವುದನ್ನು 'ಅಹಂ ಸರ್ವಸ್ಯ ಪ್ರಭವಃ' ಎಂಬ ಎರಡು ಶ್ಲೋಕಗಳಲ್ಲಿ ಹೇಳಿ '**ತೇಷಾಂ ಸತತ ಯುಕ್ತಾನಾಂ**' ಎಂಬ ಮುಂದಿನ ಎರಡು ಶ್ಲೋಕಗಳಲ್ಲಿ ಪುನಃ ಅಂತಹ ಭಜನೆಯ ಫಲವನ್ನು ಪ್ರಚುರಪಡಿಸಲಾಗುತ್ತಿದೆ. '**ಪ್ರಭವತಿ ಅಸ್ಮಾದಿತಿ ಪ್ರಭವಃ**'– ಯಾರಿಂದ ಜಗತ್ತಿನ ಉತ್ಪತ್ತಿಯಾಗುತ್ತಿದೆಯೋ ಅವನು– ಎಂದು ಪ್ರಭವಶಬ್ದದ ನಿರ್ವಚನ ವಾಗಿದೆ. ಹಾಗಾಗಿ '**ಅಹಂ ಸರ್ವಸ್ಯ ಪ್ರಭವಃ**' ಎಂದರೆ ನಾನು ಎಲ್ಲಾ ಜಗತ್ತಿನ ಸೃಷ್ಟಿಕರ್ತನಾಗಿರುವೆನು ಎಂದರ್ಥ. '**ಮತ್ತಃ ಸರ್ವಂ ಪ್ರವರ್ತತೇ**' ಎಂದರೆ 'ನನ್ನಿಂದಾಗಿಯೇ ಎಲ್ಲರೂ ಇಷ್ಟಪ್ರಾಪ್ತಿ ಹಾಗೂ ಅನಿಷ್ಟನಿವೃತ್ತಿ ಮೊದಲಾದ ಉದ್ದೇಶದಿಂದ ಅನುಕೂಲವಾದ ಪ್ರವೃತ್ತಿ ಉಳ್ಳವರಾಗುತ್ತಾರೆ' ಎಂದು ಅರ್ಥ. ಎಲ್ಲಾ ಜಗತ್ತಿನ ಲಯವೇ ಮೊದಲಾದ ಸ್ಥಿತಿಗಳು ನನ್ನ ಅಧೀನ ಎಂದೆನ್ನುವುದನ್ನು ಇಲ್ಲಿ ಸೇರಿಸಿಕೊಳ್ಳಬೇಕು. ಇದನ್ನೆಲ್ಲಾ ಅರಿತು **ಬುಧಾಃ**=

ಜ್ಞಾನಿಗಳು, **ಭಾವೇನ ಸಮನ್ವಿತಾಃ ಭಾವಸಮನ್ವಿತಾಃ**= ಭಕ್ತಿಯಿಂದ ಸಹಿತರಾಗಿ ನನ್ನನ್ನು ಭಜಿಸುತ್ತಿದ್ದಾರೆ. ಪತ್ರಪುಷ್ಪಾದಿಗಳಿಂದ ನನ್ನನ್ನು ಅರ್ಚಿಸುತ್ತಾರೆ ಹಾಗೂ ಧ್ಯಾನಿಸುತ್ತಿದ್ದಾರೆ ಎಂದು ಇವರ ಅಭಿಪ್ರಾಯ. ಇಲ್ಲಿ ಪೂರ್ವಾರ್ಧದಲ್ಲಿ '**ಅಹಂ**' ಹಾಗೂ '**ಮತ್ತಃ**' ಎಂದು ಹೇಳಿರುವುದರಿಂದಲೇ '**ಮಾಂ**= ನನ್ನನ್ನು- ಎಂದೆನ್ನುವುದು ಅರ್ಥಾತ್ ಸಿದ್ಧವಾಗುತ್ತಿದ್ದರೂ ಪುನಃ '**ಮಾಂ**' ಎಂದು ಹೇಳಿದುದರ ಉದ್ದೇಶ 'ಇಲ್ಲಿ ಜೀವೇಶ್ವರ ಐಕ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು ಭಜಕರಾದ ಜ್ಞಾನಿಗಳು ತಮ್ಮನ್ನೇ ಉದ್ದೇಶಿಸಿಕೊಂಡು 'ನಾನೇ ಎಲ್ಲ ಜಗತ್ತಿನ ಉತ್ಪತ್ತಿಕಾರಣನು ನನ್ನಿಂದಲೇ ಜಗತ್ತಿನ ಪ್ರವೃತ್ತಿ ಎಂದು ಅನುಸಂಧಾನ ಮಾಡಿಕೊಂಡು ತಮ್ಮನ್ನೇ ಭಾವಿಸುತ್ತಿದ್ದಾರೆ' ಎಂಬ ಸಂಭಾವಿತವಾಧ ಭ್ರಾಂತಿಪ್ರತೀತಿಯನ್ನು ನಿವಾರಿಸುವುದೇ ಆಗಿದೆ. ॥ 8 ॥

**ವಿವರಣೆ**– 'ನಾನು ಎಲ್ಲದರ ಉತ್ಪತ್ತಿಕಾರಣ; ನನ್ನಿಂದ ಎಲ್ಲವೂ ಪ್ರವೃತ್ತಿ ಉಳ್ಳದ್ದಾಗಿದೆ ಎಂದು ಜ್ಞಾನಿಗಳು ಭಜಿಸುತ್ತಿದ್ದಾರೆ ಎಂದಿಷ್ಟೇ ಹೇಳಿದ್ದರೆ, ಈ ಜ್ಞಾನಿಗಳು ತಾವೇ ಈಶ್ವರನೆಂಬ ಐಕ್ಯಾನುಸಂಧಾನದಿಂದ ಈಶ್ವರನ ಮಹಿಮೆಯುಳ್ಳವರು ತಾವು ಎಂಬ ಭಾವನೆಯಿಂದ ತಮ್ಮನ್ನೇ ಭಜಿಸುತ್ತಿದ್ದಾರೆ ಎಂಬ ಅಪಾರ್ಥಕ್ಕೆ ಅವಕಾಶವಿತ್ತು. ಹಾಗಾಗದಿರಲಿ ಎಂದು '**ಮಾಂ ಭಜಂತೇ**' ಎಂದೆನ್ನಲಾಗಿದೆ. ಇದರಿಂದ 'ಇಲ್ಲಿ ಹೇಳಲಾಗುತ್ತಿರುವುದು ಶ್ರೀಕೃಷ್ಣನ ಭಜನೆ ಹೊರತು, ತಮ್ಮದೇ ಭಜನೆಯನ್ನಲ್ಲ' ಎಂದು ಸ್ಪಷ್ಟಪಡಿಸಿದಂತಾಯಿತು.

**ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್ ।**
**ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥ 9 ॥**

**ಅರ್ಥ**– ಆ ಜ್ಞಾನಿಗಳು ನಿರಂತರವಾಗಿ ನನ್ನಲ್ಲಿ ನೆಟ್ಟ ಮನಸ್ಸುಳ್ಳವರಾಗಿ ನನ್ನನ್ನು ಉದ್ದೇಶಿಸಿಕೊಂಡೆ ಎಲ್ಲಾ ರೀತಿಯ ಕ್ರಿಯೆಗಳಲ್ಲಿ ತೊಡಗಿದವರಾಗಿ, ಉಪದೇಶದ ಮೂಲಕ ಶಿಷ್ಯರಿಗೆ ನನ್ನ ಬಗ್ಗೆ ತಿಳುವಳಿಕೆ ಮೂಡಿಸುತ್ತಾ ಪರಸ್ಪರವಾಗಿ ನನ್ನ ಬಗ್ಗೆ ವರ್ಣನೆಗಳಲ್ಲಿ ನಿರತರಾದವರಾಗಿ ತೃಪ್ತರಾಗಿರುತ್ತಾರೆ ಹಾಗೂ ಸುಖವನ್ನು ಅನುಭವಿಸುತ್ತಿರುತ್ತಾರೆ.

**ಪುನರ್ಭಜನಪ್ರಕಾರಮೇವಾಽಹ- ಮಚ್ಚಿತ್ತಾ ಇತಿ ॥ ಮನ್ನಿಷ್ಠಮನಸ್ಕಾಃ । ಮದ್ಗತಪ್ರಾಣಾಃ ಮದ್ವಿಷಯಚೇಷ್ಟಾವಂತಃ । ಬೋಧಯಂತಃ ಶಿಷ್ಯಾನ್ ಪ್ರತಿ ಬೋಧಯಂತೋ ಮಾಮುಪದೇಶೇನೇತಿ ಯೋಜ್ಯಮ್ । ಪರಸ್ಪರಂ ಮಾಂ ಕಥಯಂತಃ ಕೀರ್ತಯಂತಶ್ಚ ನಿತ್ಯಮಿತಿ ಸರ್ವತ್ರಾನ್ವೇತಿ । ತುಷ್ಯಂತಿ ತೃಪ್ತಾ ಭವಂತಿ । ವಿಷಯೇಷ್ವಲಂಬುದ್ಧಿಮಂತೋ ಭವಂತಿ । ತತ್ರ ಹೇತುಃ ರಮಂತಿ ಚ ಸುಖಮನುಭವಂತಿ ಚೇತಿ ॥ 9 ॥**

**ಅನುವಾದ–** **ಮಚ್ಚಿತ್ತಾಃ** ಎಂಬಿತ್ಯಾದಿ ಶ್ಲೋಕದಲ್ಲಿ ಜ್ಞಾನಿಗಳ ಇನ್ನೂ ಹೆಚ್ಚಿನ ಪರಮಾತ್ಮ ಭಜನೆಯ ಪ್ರಕಾರಗಳನ್ನು ನಿರೂಪಿಸಲಾಗುತ್ತಿದೆ. **ಮಚ್ಚಿತ್ತಾಃ**= ನನ್ನಲ್ಲಿ ಸ್ಥಿರಗೊಳಿಸಿದ ಮನಸ್ಸುಳ್ಳವರು. **ಮದ್ಗತಪ್ರಾಣಾಃ** = ನನ್ನನ್ನು ಉದ್ದೇಶಿಸಿ ಎಲ್ಲಾ ಕ್ರಿಯೆಗಳಲ್ಲಿ ತೊಡಗುವವರು. '**ಬೋಧಯಂತಃ**' ಎಂಬೀ ಪದದಲ್ಲಿ ಅನ್ವಯಿಸುವಂತೆ '**ಶಿಷ್ಯಾನ್ ಪ್ರತಿ ಉಪದೇಶೇನ ಮಾಂ**' ಎಂದೆನ್ನುವುದನ್ನು ಸೇರಿಸಿಕೊಳ್ಳಬೇಕು. ಆಗ '**ಬೋಧಯಂತಃ**' ಎಂದರೆ ಉಪದೇಶದ ಮೂಲಕ ಶಿಷ್ಯರಲ್ಲಿ ನನ್ನ ಬಗ್ಗೆ ಅರಿವು ಮೂಡಿಸುವವರಾಗಿ ಎಂದು ಅರ್ಥವಾಗುತ್ತದೆ. **ಪರಸ್ಪರಂ ಮಾಂ ಕಥಯಂತಃ**= ತಮ್ಮಲ್ಲೇ ಪರಸ್ಪರವಾಗಿ ನನ್ನ ಬಗ್ಗೆ ಚರ್ಚೆಯಲ್ಲಿ ತೊಡಗಿದವರಾಗಿ. ಇಲ್ಲಿರುವ '**ನಿತ್ಯಂ**'= ನಿರಂತರವಾಗಿ ಎಂಬ ಪದವನ್ನು '**ತುಷ್ಯಂತಿ**' ಎಂಬಲ್ಲಿ ಮಾತ್ರ ಅನ್ವಯಿಸದೆ ಮೇಲೆ ಹೇಳಲಾದ ಎಲ್ಲ ವಿಶೇಷಣಗಳಿಗೂ ಅನ್ವಯಿಸಿಕೊಳ್ಳಬೇಕು. **ತುಷ್ಯಂತಿ**= ತೃಪ್ತಿ ಹೊಂದುತ್ತಾರೆ - ಅಂದರೆ- ಪ್ರಾಪಂಚಿಕ ಭೋಗದ ವಿಷಯದಲ್ಲಿ 'ಸಾಕು' ಎಂಬ ಭಾವನೆಯುಳ್ಳವರಾಗುತ್ತಾರೆ ಎಂದು ಅಭಿಪ್ರಾಯ. ಇಂತಹ ತೃಪ್ತಿಗೆ ಕಾರಣವಾಗಿ '**ರಮಂತಿ**' ಎಂದೆನ್ನಲಾಗಿದೆ. ಮೇಲೆ ಹೇಳಲಾಗಿರುವ ನಾನಾ ರೀತಿಯ ಭಜನೆಯಲ್ಲಿ ತೊಡಗಿ ಸುಖವನ್ನು ಅನುಭವಿಸುತ್ತಿರುತ್ತಾರೆ ಹಾಗಾಗಿ ಪ್ರಾಪಂಚಿಕ ಭೋಗಕ್ಕಾಗಿ ಹಾತೊರೆಯದೆ ತೃಪ್ತರಾಗಿರುತ್ತಾರೆ ಎಂದಂತಾಯಿತು. ॥ 9 ॥

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥ 10 ॥**

**ಅರ್ಥ** – ಸತತವಾಗಿ ನನ್ನಲ್ಲಿ ಸ್ಥಿರಗೊಳಿಸಿದ ಮನಸ್ಸುಳ್ಳ, ಪ್ರೀತಿ ಪೂರ್ವಕವಾಗಿ ನನ್ನನ್ನು ಸೇವಿಸುತ್ತಿರುವ ಜ್ಞಾನಿಗಳಿಗೆ, ಯಾವ ಜ್ಞಾನರೂಪಸಾಧನದಿಂದ ನನ್ನನ್ನು ಹೊಂದಲು ಸಾಧ್ಯವೋ ಅಂತಹ ಜ್ಞಾನರೂಪದ ಮೋಕ್ಷಸಾಧನವನ್ನು ನಾನು ಅನುಗ್ರಹಿಸುತ್ತೇನೆ.

**ಸತತಯುಕ್ತಾನಾಂ ನಿತ್ಯಂ ಮಯಿ ನಿಬದ್ಧಚಿತ್ತಾನಾಂ ಪ್ರೀತಿಪೂರ್ವಕಂ ಮಾಂ ಭಜತಾಂ ತೇಷಾಂ ತಮೇವ ಬುದ್ಧಿಯೋಗಂ ಜ್ಞಾನರೂಪಂ ಮುಕ್ತ್ಯುಪಾಯಂ ದದಾಮಿ । ಯೇನ ಬುದ್ಧಿಯೋಗೇನ ಮಾಮುಪಯಾಂತಿ ತಮಿತ್ಯನ್ವಯಃ ॥ 10॥**

**ಅನುವಾದ–** **ಸತತಯುಕ್ತಾನಾಂ**= ಸತತವಾಗಿ ನನ್ನಲ್ಲಿ ಸ್ಥಿರಗೊಳಿಸಿದ ಮನಸ್ಸುಳ್ಳ ಪ್ರೀತಿಪೂರ್ವಕವಾಗಿ ನನ್ನನ್ನು ಸೇವಿಸುತ್ತಿರುವ ಆ ಜ್ಞಾನಿಗಳಿಗೆ, ಅದೇ **ಬುದ್ಧಿಯೋಗಂ**= ಜ್ಞಾನರೂಪದ ಮುಕ್ತಿಸಾಧನವನ್ನು ಅನುಗ್ರಹಿಸುತ್ತೇನೆ. '**ಯೇನ** = ಯಾವ ಜ್ಞಾನರೂಪದ ಸಾಧನದಿಂದ ಅವರು ನನ್ನನ್ನು ಹೊಂದುತ್ತಾರೋ' ಎಂಬ ವಾಕ್ಯ ಭಾಗವನ್ನು **ತಂ ಬುದ್ಧಿಯೋಗಂ** ಎಂಬಲ್ಲಿಗೆ ಅನ್ವಯಿಸಿಕೊಳ್ಳಬೇಕು. ॥ 10 ॥

**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ 11 ॥**

**ಅರ್ಥ–** ಅಂತಹ ಜ್ಞಾನಿಗಳ ಅನುಗ್ರಹಕ್ಕಾಗಿಯೆ, ನಾನು ಆ ಜ್ಞಾನಿಗಳ ಚಿತ್ತವೃತ್ತಿಯಲ್ಲಿ ಇದ್ದವನಾಗಿ ಅಜ್ಞಾನದ ಕಾರ್ಯವಾದ ಸುಖದುಃಖ ಮೊದಲಾದ ಕ್ಲೇಶ ರೂಪದ ಸಂಸಾರ ಬಂಧವನ್ನು, ಪ್ರಕಾಶಿಸುತ್ತಿರುವ ಜ್ಞಾನವೆಂಬ ದೀಪದಿಂದ ನಾಶಪಡಿಸುತ್ತೇನೆ.

**ಅನಾದ್ಯಜ್ಞಾನಕೃತಬಂಧಸತ್ತ್ವಾತ್ ಕಥಂ ತತ್ಪ್ರಾಪ್ತಿರಿತ್ಯತ ಆಹ– ತೇಷಾಮೇವೇತಿ ॥ ತೇಷಾಮನುಕಂಪಾರ್ಥಮನುಗ್ರಹಾರ್ಥಮೇವ । ನ ತು ಕಿಂಚಿತ್ ಫಲಮುದ್ದಿಶ್ಯ । ಅಹಮಜ್ಞಾನಜಂ ತೇಷಾಂ ತಮಃ ಸುಖದುಃಖಾದಿಕ್ಲೇಶರೂಪಬಂಧಂ ಭಾಸ್ವತಾ ವಿರೋಧಿನಾಶನದಕ್ಷತಯಾ ಪ್ರಕಾಶಮಾನೇನ ಜ್ಞಾನಾಖ್ಯದೀಪೇನ ಆತ್ಮಭಾವಸ್ಥಃ ತದೀಯಚಿತ್ತವೃತ್ತಿಸ್ಥಸ್ಸನ್ನಾಶಯಾಮೀತಿ ॥ 11 ॥**

**ಅನುವಾದ–** ಅನಾದ್ಯಜ್ಞಾನ ಕಾರ್ಯವಾದ ಬಂಧನವಿರುವುದರಿಂದ, ಆ ಜ್ಞಾನಿಗಳಿಗೆ ನಿನ್ನ ಪ್ರಾಪ್ತಿ ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ '**ತೇಷಾಮೇವಾನುಕಂಪಾರ್ಥಂ**' ಎಂಬ ಶ್ಲೋಕದಲ್ಲಿ ಉತ್ತರಿಸಲಾಗುತ್ತಿದೆ; ಆ ಜ್ಞಾನಿಗಳ **ಅನುಕಂಪಾರ್ಥಮೇವ**= ಅನುಗ್ರಹಕ್ಕಾಗಿಯೇ ಹೊರತು , ಯಾವುದೆ ಫಲದ ನಿರೀಕ್ಷೆಯಿಂದಲ್ಲ– ನಾನು ಅಜ್ಞಾನದಿಂದ ಪ್ರಾಪ್ತವಾಗಿರುವ **ತಮಃ** = ಅವರ ಸುಖದುಃಖ ಮೊದಲಾದ ಕ್ಲೇಶರೂಪದ ಬಂಧನವನ್ನು, **ಭಾಸ್ವತಾ**= ತನ್ನ ವಿರೋಧಿಯಾದ ಅಜ್ಞಾನವನ್ನು ನಾಶಮಾಡಲು ಸಮರ್ಥವೆನಿಸುವಂತೆ ಪ್ರಕಾಶ ಮಾನವಾದ, **ಜ್ಞಾನದೀಪೇನ**= ಜ್ಞಾನವೆಂಬ ಹೆಸರಿರುವ ದೀಪದಿಂದ, **ಆತ್ಮಬಾವಸ್ಥಃ**= ಆ ಜ್ಞಾನಿಗಳ ಚಿತ್ತವೃತ್ತಿಯಲ್ಲಿ ನೆಲೆಸಿದವನಾಗಿ ನಾಶಮಾಡುತ್ತೇನೆ ಎಂದು (ಉತ್ತರಿಸಲಾಗುತ್ತಿದೆ). ॥ 11 ॥

**ಅರ್ಜುನ ಉವಾಚ –**

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥ 12 ॥**

**ಆಹುಸ್ತ್ವಾಂ ಋಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥ 13 ॥**

**ಅರ್ಥ–** ಅರ್ಜುನನು ಹೇಳಿದನು– ಕೇಶವನೇ ! ನೀನು ಉತ್ತಮವಾದ ಹಾಗೂ ಪರಿಪೂರ್ಣವಾದ ತತ್ತ್ವವೆನಿಸಿರುವಿ; ಶ್ರೇಷ್ಠ ಆಶ್ರಯನೆನಿಸಿರುವಿ.ಪರಮಾತ್ಮನೆನಿಸಿರುವ ನಿನ್ನನ್ನು ವಸಿಷ್ಠಾದಿ ಋಷಿಗಳೂ ದೇವರ್ಷಿಗಳಾದ ನಾರದರೂ, ಅಸಿತರು, ದೇವಲರು, ವ್ಯಾಸರು, ಇವರೆಲ್ಲರೂ

ಪೂರ್ಣಷಡ್ಗುಣ ಸಂಪನ್ನನನ್ನಾಗಿ ನಿರ್ವಿಕಾರನನ್ನಾಗಿ ಲೋಕವಿಲಕ್ಷಣನನ್ನಾಗಿ, ಆದಿದೇವನನ್ನಾಗಿ, ಜನ್ಮರಹಿತನನ್ನಾಗಿ, ವೈಶಿಷ್ಟ್ಯಪೂರ್ಣನಾಗಿ ವಿವಿಧರೂಪದಿಂದಿರುವುದರಿಂದ ವಿಭು ಎಂಬ ಹೆಸರುಳ್ಳವನನ್ನಾಗಿ ಹೇಳುತ್ತಿದ್ದಾರೆ. ನಿನ್ನ ಇಂತಹ ಮಹತ್ತ್ವವನ್ನು 'ಅಹಂ ಸರ್ವಸ್ಯ ಜಗತಃ' ಎಂಬಿತ್ಯಾದಿ ಮಾತುಗಳಿಂದ ಸ್ವತಃ ನೀನೇ ನನಗೆ ಹೇಳುತ್ತಿರುವಿ.

**ಏವಂ ಸಂಕ್ಷೇಪೇಣೋಕ್ತಂ ವಿಭೂತಿಂ ಯೋಗಂ ಚ ಶ್ರುತ್ವಾ ವಿಸ್ತರೇಣ ಜ್ಞಾತುಕಾಮಃ ತತ್ ಸ್ತುತಿಪೂರ್ವಕಂ ತದ್ವಕ್ತುಂ ಪ್ರಾರ್ಥಯತೇ – ಪರಮಿತ್ಯಾದಿಭಿಃ ಸಪ್ತಭಿಃ ॥ ಹೇ ಕೇಶವೇತ್ಯಗ್ರೇತನಮಾಕೃಷ್ಯತೇ । ಭವಾನ್ ಪರಮುತ್ತಮಮಂ ಬ್ರಹ್ಮ ಪರಿಪೂರ್ಣಂ ವಸ್ತು ಪರಂ ಧಾಮ ಉತ್ತಮಾಶ್ರಯಃ ಪರಮಂ ಪವಿತ್ರಂ ತ್ವಾಂ ಋಷಯೋ ವಸಿಷ್ಠಾದ್ಯಾ ದೇವರ್ಷಿರ್ನಾರದೋಽಸಿತಾದಯಶ್ಚ ಪುರುಷಂ ಪೂರ್ಣಷಡ್ಗುಣಂ ಶಾಶ್ವತಂ ನಿರ್ವಿಕಾರಂ ದಿವ್ಯಂ ಲೋಕವಿಲಕ್ಷಣಂ ಆದಿದೇವಂ ಅಜಂ ಜನ್ಮಹೀನಂ ವಿಭುಂ ವಿಶಿಷ್ಟತಯಾ ವಿವಿಧತಯಾ ಚ ಭವನಹೇತುನಾ ವಿಭು-ಶಬ್ದವಾಚ್ಯಮಾಹುಃ ॥ 12 ॥**

**'ಅಹಂ ಸರ್ವಸ್ಯ' ಇತ್ಯಾದಿನಾ ಸ್ವಯಂ ಚ ಮೇ ಮಹ್ಯಂ ಬ್ರವೀಷಿ ವದಸಿ ॥ 13॥**

**ಅನುವಾದ–** '**ಪರಂ ಬ್ರಹ್ಮ ಪರಂ ಧಾಮ**' ಎಂಬಿತ್ಯಾದಿ ಏಳು ಶ್ಲೋಕಗಳಲ್ಲಿ ಹಿಂದೆ ಕೃಷ್ಣನಿಂದ ಸಂಕ್ಷೇಪವಾಗಿ ಹೇಳಲ್ಪಟ್ಟ ಪರಮಾತ್ಮನ ವಿಶಿಷ್ಟಸ್ಥಿತಿ ರೂಪದ ಮಹಿಮೆಯನ್ನು ಹಾಗೂ ಸಾಮರ್ಥ್ಯವನ್ನು ಕೇಳಿಸಿಕೊಂಡ ಅರ್ಜುನನು, ಅವನ್ನು ವಿಸ್ತಾರವಾಗಿ ಕೇಳಿ ತಿಳಿದುಕೊಳ್ಳಬೇಕೆಂಬ ಅಭಿಲಾಷೆಯಿಂದ, ಪರಮಾತ್ಮನನ್ನು ಸ್ತುತಿಸುವ ಮೂಲಕ, ಉಪದೇಶಿಸಲು ಪ್ರಾರ್ಥಿಸುತ್ತಿದ್ದಾನೆ. ಮುಂದಿನ ಹದಿನಾಲ್ಕನೆಯ ಶ್ಲೋಕದಲ್ಲಿರುವ '**ಕೇಶವ**' ಎಂಬ ಪದವು ಈ ಶ್ಲೋಕಕ್ಕೆ ಅನ್ವಯಿಸುತ್ತಿದೆ. ಕೇಶವನೆ ! ನೀನು, **ಪರಂ**= ಉತ್ತಮನೆನಿಸಿರುವ, **ಬ್ರಹ್ಮ**= ಗುಣಪರಿಪೂರ್ಣನೆನಿಸಿರುವ, ತತ್ತ್ವವೆನಿಸಿರುವಿ. **ಪರಂ ಧಾಮ**= ಉತ್ತಮ ಆಶ್ರಯನೆನಿಸಿರುವಿ. ಪರಮ ಪವಿತ್ರನೆನಿಸಿರುವ ನಿನ್ನನ್ನು **ಋಷಯಃ** = ವಸಿಷ್ಠಾದಿ ಋಷಿಗಳು, ದೇವರ್ಷಿನಾರದರು, ಅಸಿತರೇ ಮೊದಲಾದ ಶ್ರೇಷ್ಠವ್ಯಕ್ತಿಗಳು, **ಪುರುಷಂ**= ಪೂರ್ಣಷಡ್ಗುಣನನ್ನಾಗಿ, **ಶಾಶ್ವತಂ**= ನಿರ್ವಿಕಾರನನ್ನಾಗಿ– ಅಂದರೆ– ಯಾವತ್ತೂ ಒಂದೇ ರೀತಿಯಲ್ಲಿರುವವನನ್ನಾಗಿ, **ದಿವ್ಯಂ**= ಲೋಕವಿಲಕ್ಷಣನನ್ನಾಗಿ, ಎಲ್ಲದಕ್ಕೂ ಕಾರಣವೆನಿಸಿರುವ ದೇವನನ್ನಾಗಿ, **ಅಜಂ**= ಜನ್ಮರಹಿತನನ್ನಾಗಿ. **ವಿಭುಂ**= ವಿ= ವಿಶಿಷ್ಟವಾದ ರೀತಿಯಲ್ಲಿ ಹಾಗೂ ವಿವಿಧ ರೀತಿಯಲ್ಲಿ ಇರುವವನಾದುದರಿಂದ '**ವಿಭು**' ಶಬ್ದವಾಚ್ಯನನ್ನಾಗಿ ಹೇಳುತ್ತಿದ್ದಾರೆ. ಇಷ್ಟೇ ಅಲ್ಲದೆ ಸ್ವತಃ ನೀನೇ, ನನಗೆ ನಿನ್ನ ಈ ಮಹತ್ತ್ವವನ್ನು '**ಅಹಂ ಸರ್ವಸ್ಯ**' ಎಂಬಿತ್ಯಾದಿ ವಾಕ್ಯಗಳಿಂದ ಹೇಳುತ್ತಿರುವಿ. ॥ 12–13 ॥

**ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥ 14 ॥**

**ಅರ್ಥ–** ಬ್ರಹ್ಮರುದ್ರರ ಸ್ಥಿತಿಗೆ ಕಾರಣನೆನಿಸಿರುವವನೆ ! (ಕೇಶವ !) ನನ್ನನ್ನು ಉದ್ದೇಶಿಸಿ ಯಾವ ನಿನ್ನ ಮಹಿಮೆಯನ್ನು ನಿರೂಪಿಸುತ್ತಿರುವಿಯೋ ಅದನ್ನು ಸತ್ಯವೆಂದೇ ನಂಬಿರುವೆನು. ಷಡ್ಗುಣೈಶ್ವರ್ಯ ಪೂರ್ಣನೇ ! **'ನ ಯಸ್ಯೇಂದ್ರೋ ನ ವರುಣೋ ನ ಮಿತ್ರಃ'** ಎಂದು ಪ್ರಸಿದ್ಧವಾಗಿರುವಂತೆ ನಿನ್ನ ಸಾಮರ್ಥ್ಯಾತಿಶಯವನ್ನು ದೇವತೆಗಳೂ ಹಾಗೂ ದಾನವರೂ ಅರಿತಿಲ್ಲ.

**ಹೇ ಕೇಶವ ! ಯನ್ಮಾಂ ಪ್ರತಿ ವದಸಿ ಸರ್ವಮೇತನ್ಮಾಹಾತ್ಮ್ಯಮ್ ಋತಂ ಸತ್ಯಮೇವ ಮನ್ಯೇ । ಕೇಶವಶಬ್ದಾರ್ಥ ಉಕ್ತಃ ಪ್ರಥಮಾಧ್ಯಾಯೇ । ಹೇ ಭಗವನ್ ಷಡ್ಗುಣಯುಕ್ತ ತೇ ವ್ಯಕ್ತಿಂ ಸಾಮರ್ಥ್ಯಾತಿಶಯಂ ದೇವಾ ದಾನವಾಶ್ಚ ನ ವಿದುಃ । ಹೀತಿ 'ನ ಯಸ್ಯೇಂದ್ರೋ ವರುಣೋ ನ ಮಿತ್ರಃ' ಇತ್ಯಾದೌ ಪ್ರಸಿದ್ಧಮಿತ್ಯರ್ಥಃ । ॥ 14 ॥**

**ಅನುವಾದ–** ಕೇಶವನೆ ! **ಮಾಂ ಪ್ರತಿ** = ನನ್ನನ್ನು ಉದ್ದೇಶಿಸಿ ಏನನ್ನು ಹೇಳುತ್ತಿರುವೆಯೋ **ತತ್ ಸರ್ವಂ**= ಆ ಎಲ್ಲಾ ನಿನ್ನ ಮಹಿಮೆಯನ್ನು **ಋತಮೇವಂ**= ಸತ್ಯವನ್ನಾಗಿಯೇ ತಿಳಿದಿರುತ್ತೇನೆ. **ಕಶ್ಚ ಈಶಶ್ಚ ಕೇಶೌ । ಕೇಶೌ ಸೃಷ್ಟ್ಯಾದಿನಾ ವರ್ತಯತೀತಿ ಕೇಶವಃ- ಕಃ**= ಬ್ರಹ್ಮದೇವರು. **ಈಶಃ**= ರುದ್ರದೇವರು. ಇವರಿಬ್ಬರನ್ನು ಸೃಷ್ಟ್ಯಾದಿ ತನ್ನ ವ್ಯಾಪಾರದಿಂದ ಇರಗೊಳಿಸಿದವನು. ಹಾಗಾಗಿ ಪರಮಾತ್ಮನು 'ಕೇಶವ'ನೆನಿಸಿರುವನು ಎಂಬುದಾಗಿ ಕೇಶವ ಪದದ ವಿವರಣೆಯನ್ನು ಪ್ರಥಮಾಧ್ಯಾಯದಲ್ಲಿ ನೀಡಲಾಗಿದೆ. ಅದನ್ನು ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು. **ಭಗವನ್**= ಸಮಗ್ರೈಶ್ವರ್ಯಾದಿಷಡ್ಗುಣಯುಕ್ತನೇ ! **ತೇ ವ್ಯಕ್ತಿಂ**= ನಿನ್ನ ಸಾಮರ್ಥ್ಯಾತಿಶಯವನ್ನು ದೇವತೆಗಳು ಹಾಗೂ ದಾನವರು ತಿಳಿಯುತ್ತಿಲ್ಲ' ಇಲ್ಲಿರುವ ಹಿ ಎಂಬೀ ಪದವು ದೇವದಾನವರು ತಿಳಿಯತ್ತಿಲ್ಲ ಎಂಬೀ ವಿಷಯವು **'ನ ಯಸ್ಯೇಂದ್ರೋ ವರುಣೋ ನ ಮಿತ್ರಃ'**= ಇಂದ್ರಾದಿ ದೇವತೆಗಳು ಪರಮಾತ್ಮನ ಸಾಮರ್ಥ್ಯವನ್ನು ಅರಿತಿಲ್ಲ'– ಎಂಬಿತ್ಯಾದಿ ಪ್ರಮಾಣವಾಕ್ಯವು ಪ್ರಚುರಪಡಿಸುತ್ತಿರುವುದರಿಂದ ಪ್ರಸಿದ್ಧವೇ ಆಗಿದೆ ಎಂದು ಸೂಚಿಸುತ್ತಿದೆ. ॥ 14 ॥

**ಸ್ವಯಮೇವಾತ್ಮನಾऽऽತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನಭೂತೇಶ ದೇವದೇವ ಜಗತ್ಪತೇ ॥ 15 ॥**

**ಅರ್ಥ–** ಜೀವಸೃಷ್ಟಿಕರ್ತನೇ ! ಜೀವ ನಿಯಾಮಕನೇ ! ದೇವದೇವನೆ ! ಜಗತ್ಸ್ವಾಮಿಯೇ!

ಪುರುಷೋತ್ತಮನೆ ! ನೀನು ಬೇರೊಂದು ಉಪಾಯದ ಸಹಾಯವನ್ನು ಅಪೇಕ್ಷಿಸದೆ ನಿನ್ನ ಸಾಮರ್ಥ್ಯದಿಂದಲೇ ತನ್ನನ್ನು ತಿಳಿದುಕೊಂಡಿರುವಿ.

**ತರ್ಹಿ ಕೋ ಜಾನಾತೀತ್ಯತ ಆಹ- ಸ್ವಯಮೇವೇತಿ ॥ ಹೇ ಪುರುಷೋತ್ತಮ! ತ್ವಂ ಸ್ವಯಮೇವಾನ್ಯದನಪೇಕ್ಷ್ಯಾತ್ಮನಾ ಸ್ವಸಾಮರ್ಥ್ಯೇನಾಽತ್ಮಾನಂ ವೇತ್ಥ ಜಾನಾಸಿ। ಭೂತಭಾವನ ಭೂತಾನಾಮುತ್ಪಾದಕ ಭೂತೇಶ ಭೂತನಿಯಾಮಕ ॥ 15 ॥**

**ಅನುವಾದ–** ದೇವದಾನವರು ನಿನ್ನ ಸಾಮರ್ಥ್ಯವನ್ನು ತಿಳಿದಿಲ್ಲ ಎಂದಾದಲ್ಲಿ ಯಾರು ತಿಳಿದಿದ್ದಾರೆ ಎಂಬ ಪ್ರಶ್ನೆಗೆ ಉತ್ತರವಾಗಿ 'ಸ್ವಯಮೇವಾಽತ್ಮನಾ' ಎಂಬ ಶ್ಲೋಕವು ಪ್ರಸ್ತುತವಾಗಿದೆ. ಪುರುಷೋತ್ತಮನೇ ! ನೀನು **ಸ್ವಯಮೇವ** = ಬೇರೆ ಉಪಾಯದ ಸಹಾಯವನ್ನು ಅಪೇಕ್ಷಿಸದೆ, **ಆತ್ಮನಾ**= ತನ್ನ ಸಾಮರ್ಥ್ಯದಿಂದಲೇ, **ಆತ್ಮಾನಂ ವೇತ್ಥ**= ತನ್ನನ್ನು ತಿಳಿದಿರುವಿ. **ಭೂತಭಾವನ**= ಜೀವರ ಸೃಷ್ಟಿಕರ್ತನೆ ! **ಭೂತೇಶ**= ಜೀವನಿಯಾಮಕನೇ ! ॥ 15 ॥

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾನ್ ತ್ವಂ ವ್ಯಾಪ್ಯ ತಿಷ್ಠಸಿ ॥ 16 ॥**

**ಅರ್ಥ–** ಯಾವ ನಿನ್ನ ನಾನಾ ವಿಧವಾದ ರೂಪಗಳು (ವಿಭೂತಿಗಳು) ಲೋಕವಿಲಕ್ಷಣವೆನಿಸಿವೆಯೋ, ಯಾವ ಆ ರೂಪಗಳಿಂದ ನೀನು ಈ ಎಲ್ಲಾ ಲೋಕಗಳನ್ನು ವ್ಯಾಪಿಸಿ ಇರುವೆಯೋ. ಆ ನಿನ್ನ ರೂಪಗಳನ್ನು ಸಂಪೂರ್ಣವಾಗಿ ನನಗೆ ತಿಳಿ ಹೇಳಲು ಅರ್ಹನಾಗಿರುವಿ.

**ಏವಂ ಸ್ತುತ್ವಾ ಪ್ರಾರ್ಥಯತೇ- ವಕ್ತುಮಿತಿ ॥ ದಿವ್ಯಾಃ ಯಾ ವಿಭೂತಯಃ । ಯಾಭಿರ್ವಿಭೂತಿಭಿಃ ತ್ವಮಿಮಾನ್ ಲೋಕಾನ್ ವ್ಯಾಪ್ಯ ತಿಷ್ಠಸಿ । ತಾ ವಿಭೂತೀರಶೇಷೇಣ ವಕ್ತುಂ ಅರ್ಹಸೀತ್ಯರ್ಥಃ । ವಿಭೂತಯೋ ನಾಮ ವಿವಿಧತಯಾ ನಾನಾರೂಪತಯಾ ರಾಮಕೃಷ್ಣಾದಿತಯಾ ಭೂತಾನಿ ರೂಪಾಣಿ । ಯದ್ವಾ 'ಯೇಷಾಂ ವಿಷ್ಣುಸ್ವರೂಪಾಣಾಂ ಸನ್ನಿಧೇರನ್ಯವಸ್ತುಷು । ವಿಶಿಷ್ಟತ್ವಂ ಸ್ವಜಾತೇಃ ಸ್ಯಾದ್ ವಿಭೂತ್ಯಾಖ್ಯಾನಿ ತಾನಿ ತು' ಇತ್ಯುಕ್ತದಿಶಾ ಸ್ವಸನ್ನಿಧಿನಿಮಿತ್ತೇನ ವಸ್ತುಷು ಸ್ವಜಾತ್ಯುತ್ತಮತಾಪಾದಕರೂಪಾಣಿ ॥ 16 ॥**

**ಅನುವಾದ–** 'ದಿವ್ಯಾಃ' ಎಂದೆನ್ನುವಲ್ಲಿ ಅನ್ವಯಿಸುವಂತೆ **ಯಾಃ** ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಆಗ **ಯಾಃ ವಿಭೂತಯಃ ದಿವ್ಯಾಃ**= ಯಾವ ನಿನ್ನ ವಿಭೂತಿ ರೂಪಗಳು ಲೋಕವಿಲಕ್ಷಣವೆನಿಸಿವೆಯೋ– ಎಂದಂತಾಯಿತು **ಯಾಭಿಃ**= ಯಾವ ನಿನ್ನ ವಿಭೂತಿ

ರೂಪಗಳಿಂದ ನೀನು ಈ ಲೋಕಗಳನ್ನು ವ್ಯಾಪಿಸಿಕೊಂಡು ಇರುವೆಯೋ. **'ವಕ್ತುಮರ್ಹಸಿ ಅಶೇಷೇಣ'** ಎಂಬಲ್ಲಿಗೆ ಅನ್ವಯಿಸುವಂತೆ, **'ತಾಃ ವಿಭೂತೀಃ'** ಎಂದು ಅಧ್ಯಾಹಾರ ಮಾಡಿ ಕೊಳ್ಳಬೇಕು. ಆ ವಿಭೂತಿ ರೂಪಗಳನ್ನು ಸಂಪೂರ್ಣವಾಗಿ ನನಗೆ ತಿಳಿ ಹೇಳಲು ಅರ್ಹನಾಗಿರುವಿ ಎಂದಂತಾಯಿತು. **ವಿಭೂತಯಃ** ಎಂದರೆ **ವಿ**= **ವಿವಿಧತಯಾ**= ರಾಮ-ಕೃಷ್ಣಾದಿ ನಾನಾ ರೂಪಗಳಿಂದ ಇರುವ **ಭೂತಯಃ**= ರೂಪಗಳು ಎಂದರ್ಥ. ಅಥವಾ **'ಯೇಷಾಂ ವಿಷ್ಣು-ಸ್ವರೂಪಾಣಾಂ ಸನ್ನಿಧೇಸ್ಸರ್ವವಸ್ತುಷು । ವಿಶಿಷ್ಟತ್ವಂ ಸ್ವಜಾತೇಃ ಸ್ಯಾತ್ ವಿಭೂತ್ಯಾಖ್ಯಾನಿ ತಾನಿ ತು ॥'** – ಬೇರೆ ಸರ್ವ ವಸ್ತುಗಳಲ್ಲಿ ವಿಷ್ಣುವಿನ ಯಾವ ರೂಪಗಳ ಸಾನ್ನಿಧ್ಯದಿಂದ, ಆ ವಸ್ತುಗಳು ತಮ್ಮ ಸಜಾತೀಯವಾದ ಇತರ ವಸ್ತುಗಳಿಗಿಂತ ಉತ್ತಮವೆನಿಸಿರುವೆಯೋ ಅಂತಹ ರೂಪಗಳು **'ವಿಭೂತಿ'** ಎಂಬ ಹೆಸರುಳ್ಳವುಗಳು ಆಗಿವೆ ' ಎಂದು ಪ್ರಸಿದ್ಧವಾಗಿರುವಂತೆ **'ವಿಭೂತಯಃ'** ಎಂದರೆ **ವಿಶಿಷ್ಟಾಃ ಭೂತಯಃ**= **ವಿಶಿಷ್ಟಾನಿ ಭೂತಾನಿ**= **ವಸ್ತೂನಿ ಯಾಭ್ಯಃ ತಾಃ** ಯಾವುದರಿಂದಾಗಿ ವಸ್ತುಗಳು ಉತ್ತಮ (ವಿಶಿಷ್ಟ)ವೆನಿಸಿರುವವೋ ಅವು ವಿಭೂತಿಗಳು – ಎಂಬ ವ್ಯುತ್ಪತ್ತಿಗನುಸಾರವಾಗಿ ತಮ್ಮ ಸನ್ನಿಧಾನದ ಕಾರಣದಿಂದಾಗಿ ವಸ್ತುಗಳಿಗೆ ವಿಶಿಷ್ಟತೆ (ಉತ್ತಮತ್ವ) ಯನ್ನು ತಂದುಕೊಡುವ ಪರಮಾತ್ಮನ ರೂಪಗಳು ಎಂದರ್ಥ. ॥ 16 ॥

**ಕಥಂ ವಿದ್ಯಾಮಹಂ ಯೋಗಿನ್ ತ್ವಾಂ ಸದಾ ಪರಿಚಿಂತಯನ್ ।**
**ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ ಮಯಾ ॥ 17 ॥**

**ಅರ್ಥ–** ಅನಂತಶಕ್ತಿರೂಪನೆ ! ಷಡ್ಗುಣೈಶ್ವರ್ಯಸಂಪನ್ನನೇ ! ನಿರಂತರವಾಗಿ ಧ್ಯಾನಿಸುತ್ತಿರುವವನಾದರೂ ನಿನ್ನ ಉಪದೇಶವಿಲ್ಲವೆಂದರೆ, ನಾನು ನಾನಾ ಪ್ರಕಾರದ ಆ ರೂಪಗಳನ್ನು ಹೇಗೆ ತಾನೆ ತಿಳಿದುಕೊಂಡೇನು ? (ತಿಳಿಯಲು ಸಾಧ್ಯವೇ ಇಲ್ಲ) ಈ ಕಾರಣದಿಂದ, ನನ್ನಿಂದ ನೀನು ಯಾವಯಾವ ವಸ್ತುಗಳಲ್ಲಿ ( ಆಯಾಯ ) ಆ ವಸ್ತುಗಳನ್ನು ಸಜಾತೀಯ ಇತರ ವಸ್ತುಗಳಿಗಿಂತ ಉತ್ತಮವನ್ನಾಗಿ ಮಾಡುತ್ತ ಇರುವವನಾಗಿ ಧ್ಯಾನಿಸಲ್ಪಡಬೇಕು. ಅದಕ್ಕಾಗಿ ನೀನು ನನಗೆ ನಿನ್ನ ಆ ರೂಪಗಳನ್ನು ಉಪದೇಶಿಸುವುದು ಅವಶ್ಯವೆನಿಸಿದೆ.

ನಿತ್ಯಂ ಮಚ್ಚಿಂತನಯಾ ವಿಭೂತಿರೂಪಾಣಿ ಜಾನೀಹಿ ಕಿಂ ಮದ್ವಚನ-ಪ್ರಾರ್ಥನಯೇತ್ಯತ ಆಹ– **ಕಥಮಿತಿ ॥** ತ್ವಾಂ ಪರಿಚಿಂತಯನ್ನಪ್ಯಹಂ ತ್ವದ್ವಚನಾ-ಭಾವೇ । ಹೇ ಯೋಗಿನ್ನನಂತಶಕ್ತೇ ವಿಭೂತೀಃ ಕಥಂ ವಿದ್ಯಾಂ ಜಾನೀಯಾಮ್। ಅತೋ ಹೇ ಭಗವನ್ಮಯಾ ಕೇಷು ಕೇಷು ಭಾವೇಷು ಪದಾರ್ಥೇಷು ತೇಷಾಂ ಸ್ವಜಾತ್ಯುತ್ತಮತಾಪಾದಕತಯಾ ಸ್ಥಿತಃ ಸನ್ ಚಿಂತ್ಯೋಽಸಿ ॥ 17 ॥

**ಅನುವಾದ–** ನಿರಂತರವಾಗಿ ನನ್ನನ್ನು ಧ್ಯಾನಿಸುವ ಮೂಲಕ ಸ್ವತಃ ನೀನೇ ಆ ನನ್ನ ವಿಭೂತಿರೂಪಗಳನ್ನು ಅರಿತುಕೋ. ಆದಕ್ಕಾಗಿ '**ಉಪದೇಶಿಸು**' ಎಂದು ನನ್ನನ್ನು ಯಾಕೆ ಪ್ರಾರ್ಥಿಸ ಬೇಕು ? ಎಂಬ ಕೃಷ್ಣನ ಪ್ರಶ್ನೆಗೆ ಅರ್ಜುನನು '**ಕಥಂ ವಿದ್ಯಾಮಹಂ**' ಎಂಬ ಶ್ಲೋಕದಲ್ಲಿ ಉತ್ತರಿಸುತ್ತಿದ್ದಾನೆ. **ತ್ವಾಂ ಸದಾ ಪರಿಚಿಂತಯನ್** ಎಂದನ್ನುವುದು ಅನ್ವಯಿಸುವಂತೆ '**ಅಪಿ ತ್ವದ್ ವಚನಾಭಾವೇ** ! ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಆಗ 'ನಿರಂತರವಾಗಿ ನಿನ್ನನ್ನು ಧ್ಯಾನಿಸುತ್ತಿದ್ದರೂ ನಿನ್ನ ಉಪದೇಶದ ಸಹಾಯವಿಲ್ಲದೆ ಹೇಗೆ ತಾನೆ ನಿನ್ನ ಆ ರೂಪಗಳನ್ನು ಅರಿತುಕೊಳ್ಳಲು ಸಾಧ್ಯ ? ಎಂದಂತಾಯಿತು. **ಯೋಗಿನ್**= ಅನಂತ ಶಕ್ತಿಶಾಲಿಯೇ ! ನಿನ್ನ ವಿಭೂತಿರೂಪಗಳನ್ನು ಹೇಗೆ ತಾನೆ, **ವಿದ್ಯಾಂ**= ತಿಳಿದೇನು ? ಈ ಕಾರಣದಿಂದ ಭಗವಂತನೇ! ನೀನು ನನ್ನಿಂದ, **ಕೇಷು ಕೇಷು ಭಾವೇಷು**= ಯಾವ ಯಾವ ಪದಾರ್ಥಗಳಲ್ಲಿ , ಆ ಪದಾರ್ಥ ಗಳಿಗೆ ತಮ್ಮ ಸಜಾತೀಯವಾದ ಇತರ ಪದಾರ್ಥಗಳಿಗಿಂತ ಶ್ರೇಷ್ಠತೆಯನ್ನು ತಂದುಕೊಡುತ್ತಾ ಇರುವವನಾಗಿ ಧ್ಯಾನಿಸಲು ಅರ್ಹನಾಗಿರುವಿ ? (ಇದಕ್ಕಾಗಿ ನಿನ್ನ ಉಪದೇಶದ ಆವಶ್ಯಕತೆಯಿದೆ.) || 17 ||

**ವಿಸ್ತರೇಣಾಽತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ || 18 ||**

**ಅರ್ಥ–** ನಿನ್ನ ಅಮೃತಸದೃಶವಾದ ಮಾತನ್ನು ಆಲಿಸುತ್ತಿರುವ ನನಗೆ ಯಾವ ಕಾರಣದಿಂದ ತೃಪ್ತಿಯೇ ಉಂಟಾಗುತ್ತಿಲ್ಲವೋ, ಆ ಕಾರಣದಿಂದ ಜನಾರ್ದನನೇ ! ವಸ್ತುಗಳಿಗೆ ವೈಶಿಷ್ಟ್ಯವನ್ನು ತಂದುಕೊಡುವ. ಆ ನಿನ್ನ ನಾನಾ ಪ್ರಕಾರಗಳಲ್ಲಿ ಇರುವ ರೂಪಗಳನ್ನು ಹಾಗೂ ಸಾಮರ್ಥ್ಯವನ್ನು ವಿಸ್ತಾರವಾಗಿ ನನಗೆ ಉಪದೇಶಿಸು.

**ತಮಾತ್ಮನೋ ವಿಭೂತಿಂ ವಸ್ತೂನಾಂ ವಿಶಿಷ್ಟತಾಪ್ರದಮಾತ್ಮನೋ ರೂಪಂ ವಿವಿಧತಯಾ (ನಾನಾವಿಧತಯಾ) ಭೂತಂ ರೂಪಂ ಚ । ಏಕವಚನಂ ಸಮುದಾಯಾಶಯಮ್ । ಯೋಗಂ ಸಾಮರ್ಥ್ಯಂ ಚ ವಿಸ್ತರೇಣ ಭೂಯಃ ಪುನಃ ಪುನಃ ಕಥಯ । ತೇ ವಚೋಽಮೃತಂ ಶೃಣ್ವತೋ ಮೇ ತೃಪ್ತಿರ್ನಾಸ್ತಿ । ಜನಾರ್ದನಶಬ್ದಾರ್ಥ ಉಕ್ತಃ ತೃತೀಯಾಧ್ಯಾಯೇ || 18 ||**

**ಅನುವಾದ – ತಂ ಆತ್ಮನೋ ವಿಭೂತಿಂ**= ವಸ್ತುಗಳಿಗೆ, **ವಿ**= ವಿಶಿಷ್ಟತೆಯನ್ನು ತಂದುಕೊಡುವ ಹಾಗೂ ನಾನಾ ಪ್ರಕಾರದಿಂದ ಇರುವ ತನ್ನ ರೂಪವನ್ನು , **ವಿಭೂತೀಃ** ಎಂದು ಬಹುವಚನದ ಬದಲು **ವಿಭೂತಿಂ** ಎಂದು ಏಕವಚನವನ್ನು ಬಳಸಿರುವುದು ಆ ವಿಭೂತಿ ರೂಪಗಳ ಸಮೂಹ

ಎಂಬ ಅಭಿಪ್ರಾಯದಲ್ಲಿ. **ಯೋಗಂ ಚ** = ತನ್ನ ಸಾಮರ್ಥ್ಯವನ್ನು ಕೂಡಾ ವಿಸ್ತಾರವಾಗಿ ಪುನಃ ಪುನಃ ವರ್ಣಿಸು. **ತೇ ಅಮೃತಂ**= ನಿನ್ನ ಅಮೃತ ಸದೃಶವಾದ ಮಾತನ್ನು ಕೇಳಿಸಿಕೊಳ್ಳುತ್ತಿರುವ ನನಗೆ ತೃಪ್ತಿಯೇ ಇಲ್ಲವಷ್ಟೆ. **ನಜ**= ಜನ= ಹುಟ್ಟಿಲ್ಲದವನು . ಅರ್ದಯತೀತಿ ಅರ್ದನಃ ಸಂಸಾರವನ್ನು ನಾಶಪಡಿಸುವವನು. **ಜನಶ್ಚಾಸೌ ಅರ್ದನಶ್ಚ** = ಜನಾರ್ದನಃ , ತಾನು ಹುಟ್ಟಿಲ್ಲದವನಾಗಿದ್ದು , ತನ್ನ ಭಕ್ತರ ಸಂಸಾರವನ್ನು ನಾಶಪಡಿಸುವ ಮೂಲಕ ಅವರಿಗೂ ಹುಟ್ಟಿಲ್ಲದಂತೆ ಮಾಡುವವನು. ಹೀಗೆ ಜನಾರ್ದನ ಪದದ ನಿಷ್ಪತ್ತಿ ಹಾಗೂ ಅಭಿಪ್ರಾಯವನ್ನು ಮೂರನೆಯ ಅಧ್ಯಾಯದಲ್ಲಿ ತೋರಿಸಲಾಗಿದೆ. ।। 18 ।।

## ಪರಮಾತ್ಮನ ಅಶೇಷ ವಿಭೂತಿಗಳ ನಿರೂಪಣೆ ಅಸಾಧ್ಯ

**ಶ್ರೀಭಗವಾನುವಾಚ -**

**ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ।। 19 ।।**

**ಅರ್ಥ**– ಪರಮಾತ್ಮನು ಹೇಳಿದನು – ಕುರುಶ್ರೇಷ್ಠನೆ ! ಲೋಕವಿಲಕ್ಷಣವೆನಿಸಿರುವ, ವಸ್ತುಗಳಲ್ಲಿ ಮಹತ್ವವನ್ನು ತಂದು ಕೊಡುವ ಹಾಗೂ ವಿವಿಧ ಪ್ರಕಾರಗಳಲ್ಲಿರುವ ನನ್ನ ಯಾವ ರೂಪ ಗಳಿವೆಯೋ , ಅವುಗಳಲ್ಲಿ ಪ್ರಧಾನವೆನಿಸಿರುವ ರೂಪಗಳನ್ನು ನಿನಗೆ ಪ್ರಚುರಪಡಿಸುತ್ತೇನೆ. ನನ್ನ ವಿಸ್ತಾರವಾದ ಇಂತಹ ರೂಪಗಳ ಸಮೂಹಕ್ಕೆ ಕೊನೆ ಎಂಬುದೇ ಇಲ್ಲ.

**'ವಕ್ತುಮರ್ಹಸ್ಯಶೇಷೇಣ' ಇತ್ಯಸ್ಯೋತ್ತರಂ ವದನ್ ಪ್ರತಿಜ್ಞಾಂ ತಾವತ್ ಕರೋತಿ- ಹಂತೇತಿ ।। ಹಂತ ಹರ್ಷೇ । ಯಾ ದಿವ್ಯಾಃ ಆತ್ಮವಿಭೂತಯಃ ವಸ್ತೂನಾಂ ವಿಶಿಷ್ಟತಾಪ್ರದರೂಪಾಣಿ ವಿವಿಧರೂಪಾಣಿ ಚ । ತಾನಿ ರೂಪಾಣಿ ಪ್ರಾಧಾನ್ಯತಃ ಪ್ರಧಾನತಯಾ ಸ್ಥಿತಾನಿ । ತೇ ತುಭ್ಯಂ ಕಥಯಿಷ್ಯಾಮಿ । ಮೇ ವಿಸ್ತರಸ್ಯ ವಿಭೂತಿರಾಶೇರಂತಃ ಸಮಾಪ್ತಿರ್ನಾಸ್ತಿ । ಅತೋ ನಾಶೇಷೇಣ ವಚನಂ ಯುಕ್ತಮಿತಿ ಭಾವಃ ।। 19 ।।**

**ಅನುವಾದ**– 'ನಿನ್ನ ವಿಭೂತಿರೂಪಗಳನ್ನು ಸಂಪೂರ್ಣವಾಗಿ ತಿಳಿಸಿಕೊಡಲು ಅರ್ಹ ನಾಗಿರುವಿ' ಎಂಬ ಅರ್ಜುನನ ಪ್ರಾರ್ಥನೆಗೆ ಉತ್ತರಿಸುತ್ತಾ, ಅವನ ಕೋರಿಕೆಯನ್ನೇನೋ ತಾನು ಪೂರೈಸುತ್ತೇನೆ ಎಂದು ಭಗವಂತನು '**ಹಂತ ತೇ ಕಥಯಿಷ್ಯಾಮಿ**' ಎಂಬೀ ಶ್ಲೋಕದಲ್ಲಿ ಭರವಸೆ ಕೊಡುತ್ತಿದ್ದಾನೆ. ಇಲ್ಲಿರುವ '**ಹಂತ** ' ಎಂಬ ಅವ್ಯಯವು 'ನಿನ್ನ ಪ್ರಾರ್ಥನೆಯನ್ನು ಪೂರೈಸಲು ನನಗೆ ಹರ್ಷವಾಗುತ್ತಿದೆ' ಎಂಬ ಅಭಿಪ್ರಾಯವನ್ನು ಸೂಚಿಸುತ್ತಿದೆ. ದಿವ್ಯವೆನಿಸಿರುವ **ಆತ್ಮ-**

**ವಿಭೂತಯಃ- ಆತ್ಮ**= ನನ್ನ , ವಿ= ವಸ್ತುಗಳಲ್ಲಿ ವಿಶಿಷ್ಟತೆಯನ್ನು ತಂದುಕೊಡುವ ಹಾಗೂ ವಿವಿಧ ಪ್ರಕಾರಗಳಲ್ಲಿರುವ, **ಯಾ ವಿಭೂತಯಃ**= ಯಾವ ರೂಪಗಳಿವೆಯೋ, ಅವುಗಳಲ್ಲಿ ಪ್ರಧಾನ ವೆನಿಸಿರುವ ರೂಪಗಳನ್ನು , **ತೇ**= ನಿನಗಾಗಿ ಹೇಳುತ್ತೇನೆ. ಅತ್ಯಂತ ವಿಶಾಲವಾದ ನನ್ನ ಆ ವಿಭೂತಿಗಳ ಸಮೂಹಕ್ಕೆ **ಅಂತೋ ನಾಸ್ತಿ**= ಕೊನೆಯೆಂಬುದೇ ಇಲ್ಲ. ಹಾಗಾಗಿ ಅರ್ಜುನನ ಕೋರಿಕೆಯಂತೆ ಸಂಪೂರ್ಣವಾಗಿ ಅವುಗಳ ನಿರೂಪಣೆಯು ಸಾಧ್ಯವೆನಿಸದು ಎಂದು ಅಭಿಪ್ರಾಯ. ॥ 19 ॥

## ಸೃಷ್ಟಿ-ಸ್ಥಿತಿ-ಲಯಕಾರಣನಾದ ನಾನು ಜೀವರ ಹೃದಯಗುಹಾವಾಸಿ

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂಚ ಭೂತಾನಾಮಂತ ಏವ ಚ ॥ 20 ॥**

**ಅರ್ಥ**– ನಿದ್ದೆಯನ್ನು ಗೆದ್ದವನೆ ! ನಾನು ಸರ್ವತ್ರ ವ್ಯಾಪ್ತನಾಗಿದ್ದರೂ ವಿಶೇಷವಾಗಿ ಎಲ್ಲಾ ಜೀವರ ಹೃದಯ ಗುಹೆಯಲ್ಲಿ ಇರುವವನು. ಎಲ್ಲಾ ಜೀವರ, ಸೃಷ್ಟಿ, ಸ್ಥಿತಿ ಹಾಗೂ ಲಯ ಇವುಗಳ ಕರ್ತೃವೂ ನಾನಾಗಿರುವೆ.

**'ಕೇಷು ಕೇಷು ಚ ಭಾವೇಷು ಚಿಂತ್ಯಃ' ಇತ್ಯಸ್ಯ ಪ್ರಶ್ನಸ್ಯ ಸರ್ವಭೂತೇಷ್ವಪಿ ಚಿಂತ್ಯ ಇತಿ ಭಾವೇನ ಸರ್ವಭೂತಸ್ಥತ್ವಂ ತಾವತ್ಸಾಮಾನ್ಯತೋ ವಕ್ತಿ- ಅಹಮಿತಿ ॥ ಹೇ ಗುಡಾಕೇಶ ಜಿತನಿದ್ರ । ಅಹಮಾತ್ಮಾ ವ್ಯಾಪ್ತೋಽಪಿ ಸರ್ವಭೂತಾನಾಂ ಹೃದಯ-ಗುಹಾಯಾಂ ಸ್ಥಿತಃ । ಅಹಮೇವ ಭೂತಾನಾಮಾದಿರ್ಮಧ್ಯಮಂತಶ್ಚ । ಸೃಷ್ಟಿ-ಸ್ಥಿತಿ-ಲಯಕರ್ತಾ ಚೇತ್ಯರ್ಥಃ ॥ 20 ॥**

**ಅನುವಾದ**– 'ಯಾವ ಯಾವ ವಸ್ತುಗಳಲ್ಲಿರುವವನಾಗಿ ನೀನು ಧ್ಯಾನಾರ್ಹನಾಗಿರುವೆ ಎಂಬ ಪ್ರಶ್ನೆಗೆ ಉತ್ತರವಾಗಿ 'ಎಲ್ಲಾ ಜೀವರಲ್ಲಿ ತಾನು ಧ್ಯಾನಾರ್ಹನೆನಿಸಿರುವೆನು' ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ 'ಅಹಮಾತ್ಮಾ ಗುಡಾಕೇಶ ' ಎಂಬ ಶ್ಲೋಕದಲ್ಲಿ 'ತನ್ನ ಎಲ್ಲಾ ಜೀವರಲ್ಲಿ ಇರುವಿಕೆ ' ಎಂಬ ಈ ಮಹತ್ವವನ್ನು ಹೇಳಲಾಗುತ್ತಿದೆ. **ಹೇ ಗುಡಾಕೇಶ** != ನಿದ್ದೆಯನ್ನು ಗೆದ್ದವನೆ ! **ಅಹಂ ಆತ್ಮಾ**= ನಾನು ಸರ್ವತ್ರವ್ಯಾಪ್ತನೆನಿಸಿದ್ದರೂ, ವಿಶೇಷವಾಗಿ ಎಲ್ಲಾಜೀವರ (ಸರ್ವಭೂತ) ಹೃದಯ ಗುಹೆಯಲ್ಲಿ (ಆಶಯ) ಇರುವವನು. 'ಎಲ್ಲಾ ಜೀವರ **ಆದಿ**= ಸೃಷ್ಟಿಕರ್ತೃ, **ಮಧ್ಯಂ**= ಸ್ಥಿತಿಕರ್ತೃ ಹಾಗೂ **ಅಂತಃ**= ಲಯಕರ್ತೃವು ನಾನೇ ಆಗಿರುವೆನು' ಎಂದೆನ್ನುವುದು, 'ನಾನು ಎಲ್ಲಾ ಭೂತಗಳ ಆದಿ, ಮಧ್ಯ ಹಾಗೂ ಅಂತ ಇವುಗಳಾಗಿರುವೆನು' ಎಂಬ ಮಾತಿನ ಅಭಿಪ್ರಾಯವಾಗಿದೆ. ॥ 20 ॥

## ವಿಭೂತಿರೂಪಗಳು ಪ್ರತ್ಯಕ್ಷ ಹಾಗೂ ತಿರೋಹಿತ ಎಂದು ಎರಡುವಿಧ

**ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥ 21 ॥**

ಅರ್ಥ– ಹನ್ನೆರಡು ಮಂದಿ ಆದಿತ್ಯರ ಮಧ್ಯದಲ್ಲಿ ನಾನು 'ವಿಷ್ಣು' ಎಂಬ ಆದಿತ್ಯನಾಗಿರುವೆನು. ಪ್ರಕಾಶರೂಪದ ವಸ್ತುಗಳ ಮಧ್ಯ ನಾನು ಎಲ್ಲೆಡೆ ವ್ಯಾಪಿಸಿರುವ ಕಿರಣವುಳ್ಳ ರವಿಯಲ್ಲಿದ್ದು ಅವನಿಗೆ ಇತರ ಪ್ರಕಾಶಮಾನವಸ್ತುಗಳಿಗಿಂತ ಶ್ರೇಷ್ಠತೆಯನ್ನು ತಂದು ಕೊಡುತ್ತಾ ರವಿನಾಮಕನೆನಿಸಿರುವೆನು. ನಲವತ್ತೊಂಬತ್ತು ಮಂದಿ ಮರುತ್‌ಗಳ ಮಧ್ಯೆ ನಾನು ಮರೀಚಿ ಎಂಬ ಮರುತ್‌ನಲ್ಲಿದ್ದು, ಅವನಿಗೆ ಇತರ ಮರುತ್‌ಗಳಗಿಂತ ಉತ್ತಮತ್ವವನ್ನು ತಂದುಕೊಡುತ್ತಾ ಮರೀಚಿ ಎಂಬ ಹೆಸರುಳ್ಳವನಾಗಿರುವೆನು. ನಕ್ಷತ್ರಗಳ ಮಧ್ಯೆ ಇರುವ ಚಂದ್ರನಲ್ಲಿನಾನಿದ್ದು, ಆ ಎಲ್ಲಾ ನಕ್ಷತ್ರಗಳಿಗಿಂತ ಅವನಿಗೆ ಉತ್ಕರ್ಷವನ್ನು ತಂದುಕೊಡುತ್ತಾ 'ಶಶಿ' ಎಂಬ ಹೆಸರುಳ್ಳವನಾಗಿರುವೆನು'.

**ದ್ವಿವಿಧಂ ಹಿ ಭಗವತೋ ವಿಭೂತಿರೂಪಂ ಪ್ರತ್ಯಕ್ಷಂ ತಿರೋಹಿತಂ ಚ । ತತ್ರ ಪ್ರತ್ಯಕ್ಷಂ ವಿಷ್ಣುಕಪಿಲವ್ಯಾಸವಾಸುದೇವರಾಮಾದಿರೂಪಮ್ । ತಿರೋಹಿತಂ ತು ಪದಾರ್ಥೇಷ್ವನ್ಯತ ಉತ್ಕರ್ಷಪ್ರದತ್ವೇನ ಸನ್ನಿಹಿತಮ್ । ದ್ವಿವಿಧವಿಭೂತಿರೂಪಾಣಿ ಸಂಕಲಯ್ಯಾಽಹ – ಆದಿತ್ಯಾನಾಮಿತಿ ॥ ದ್ವಾದಶಾದಿತ್ಯಾನಾಂ ಮಧ್ಯೇ ಅಹಂ ವಿಷ್ಣುರಸ್ಮಿ । ಸರ್ವ(ತ್ರ)ವ್ಯಾಪ್ತತ್ವಾತ್ ಸರ್ವೇಷು ಪ್ರವಿಷ್ಟತ್ವಾದ್ವಾ ವಿಷ್ಣು-ನಾಮಾಽಸ್ಮಿ । ವಿಷ್ಲೃ ವ್ಯಾಪ್ತಾವಿತ್ಯತಃ ಕ್ನುಪ್ರತ್ಯಯಃ । ವಿಶ ಪ್ರವೇಶನೇ ಇತ್ಯತಃ ಕ್ನುಪ್ರತ್ಯಯೇ ಶಕಾರಸ್ಯ ಷತ್ವೇ ವಾ ವಿಷ್ಣುರಿತಿ ಸಿದ್ಧೇಃ । 'ಕೇಷು ಕೇಷ್ವಿತಿ' ಪೃಷ್ಟಸ್ಯೋತ್ತರಮಾಹ – ಜ್ಯೋತಿಷಾಮಿತಿ ॥ ಜ್ಯೋತಿಷಾಂ ಪ್ರಕಾಶರೂಪಾಣಾಂ ಮಧ್ಯೇ ಅಂಶುಮಾನ್ ವಿಶ್ವವ್ಯಾಪಿರಶ್ಮಿಯುಕ್ತೋ ರವಿರಹಮಸ್ಮಿ । ಜ್ಯೋತೀ-ರೂಪೇಭ್ಯೋ ರವೇರಾಧಿಕ್ಯಹೇತುತಯಾ ರವೇಣ ವೇದಶಬ್ದೇನ ಈಯತೇ ಜ್ಞಾಯತೇ ಇತಿ ವ್ಯುತ್ಪತ್ತ್ಯಾ ರವಿನಾಮಕಃ ಸನ್ ರವೌ ಸನ್ನಿಹಿತೋಽಸ್ಮೀತ್ಯರ್ಥಃ । ರವಶಬ್ದ ಉಪಪದೇ ಇಣ್ ಗತಾವಿತ್ಯತಃ ಕ್ವಿಪ್ ಉಪಪದಾಂತಲೋಪಃ । ಮರುತಾಮೇಕೋನಪಂಚಾಶನ್ಮರುತಾಂ ಮಧ್ಯೇ ತೇಭ್ಯೋ ಮರೀಚಿನಾಮ್ನೋ ಮರುತ ಆಧಿಕ್ಯಹೇತುತಯಾ ಮರಶಬ್ದೋಕ್ತೋದಕವಾನ್ ಮೇಘೋ ಮರೀ ತಂ ಚಾಲಯತೀತಿ ವ್ಯುತ್ಪತ್ತ್ಯಾ ಮರೀಚಿಃ ಮರೀಚಿನಾಮಾ ಸನ್ಮರೀಚೌ ಮರುತಿ**

**ಸನ್ನಿಹಿತೋಽಸ್ಮಿ । ನಕ್ಷತ್ರಾಣಾಂ ಮಧ್ಯೇ ತೇಭ್ಯೋ ಶಶಿನ ಆಧಿಕ್ಯಹೇತುತಯಾ ಶಶಶಬ್ದಿತಾತಿಸುಖತ್ತ್ವಹೇತುನಾ ಶಶಿನಾಮಾ ಸನ್ ಶಶಿನಿ ಚಂದ್ರೇ ಸ್ಥಿತೋಽಸ್ಮಿ । ಏವಮಗ್ರೇ ಸರ್ವತ್ರ ತಿರೋಹಿತೇಷ್ವರ್ಥೋ ಧ್ಯೇಯಃ । ಗ್ರಂಥಗೌರವಭಯಾತ್ ನಿರುಕ್ತಿಮಾತ್ರಂ ವಕ್ಷ್ಯಾಮಃ ।। 21 ।।**

**ಅನುವಾದ-** ಪ್ರತ್ಯಕ್ಷ ವಿಭೂತಿರೂಪ ಹಾಗೂ ಗುಪ್ತ ವಿಭೂತಿರೂಪ ಎಂದು ಪರಮಾತ್ಮನ ವಿಭೂತಿ ರೂಪಗಳಲ್ಲಿ ಎರಡು ಪ್ರಕಾರ. ಅವುಗಳಲ್ಲಿ ವಿಷ್ಣು, ಕಪಿಲ, ವ್ಯಾಸ, ವಾಸುದೇವ, ರಾಮ ಇವೇ ಮೊದಲಾದವು ಪ್ರತ್ಯಕ್ಷ ವಿಭೂತಿರೂಪಗಳೆನಿಸಿವೆ. ಪದಾರ್ಥಗಳಲ್ಲಿ ಸನ್ನಿಹಿತವಾಗಿದ್ದು, ಆಯಾಯ ಪದಾರ್ಥಗಳಿಗೆ ಇತರ ಪದಾರ್ಥಗಳಿಗಿಂತ ವಿಶಿಷ್ಟತೆಯನ್ನು ತಂದುಕೊಡುತ್ತಾ, ಆ ಪದಾರ್ಥಗಳನ್ನು ಹೇಳುವ ಪದದಿಂದಲೇ ಮುಖ್ಯವಾಗಿ ಹೇಳಲ್ಪಡುತ್ತಿರುವ ವಿಭೂತಿ ರೂಪಗಳು ತಿರೋಹಿತ (ಗುಪ್ತ) ವಿಭೂತಿ ರೂಪಗಳು. '**ಆದಿತ್ಯಾನಾಮ್ ಅಹಂ ವಿಷ್ಣುಃ**' ಎಂದು ಮುಂತಾಗಿ ಮುಂದಿನ ಶ್ಲೋಕದಲ್ಲಿ ಈ ಎರಡು ರೀತಿಯ ವಿಭೂತಿರೂಪಗಳನ್ನು ಮಿಶ್ರಗೊಳಿಸಿ ನಿರೂಪಿಸ ಲಾಗುತ್ತಿದೆ. ಹನ್ನೆರಡು ಮಂದಿ ಆದಿತ್ಯರ ಮಧ್ಯೆ ನಾನು ವಿಷ್ಣು ಎಂಬ ಹೆಸರಿನ ಆದಿತ್ಯ ನಾಗಿರುವೆನು. ವ್ಯಾಪ್ತಿ ಎಂಬ ಅರ್ಥದಲ್ಲಿರುವ ವಿಷ... ಧಾತುವಿಗೆ '**ಕ್ನು**' ಎಂಬ ಪ್ರತ್ಯಯವು ಸೇರಿದಾಗ **ವಿಷ್+ನು**= 'ವಿಷ್ಣು' ಎಂಬ ಪದವು ನಿಷ್ಪನ್ನವಾಗಿದೆ. ಹಾಗಾಗಿ ಎಲ್ಲೆಡೆ ವ್ಯಾಪಿಸಿ ರುವುದರಿಂದ ಈ ಪ್ರತ್ಯಕ್ಷ ವಿಭೂತಿರೂಪವು ವಿಷ್ಣು ಎಂಬ ಹೆಸರುಳ್ಳದ್ದಾಗಿದೆ. ಅಥವಾ ಪ್ರವೇಶ ಎಂಬ ಅರ್ಥದಲ್ಲಿರುವ '**ವಿಶ್**' ಧಾತುವಿಗೆ '**ಕ್ನು**' ಪ್ರತ್ಯಯ ಸೇರಿದಾಗ, ಧಾತುವಿನ ಶಕಾರಕ್ಕೆ '**ಷ**'ಕಾರವು ಆದೇಶವಾಗಿ ಬಂದು **ವಿಶ್+ ನು, ವಿಷ್ +ನು** ವಿಷ್ಣು ಎಂಬ ಪದದ ನಿಷ್ಪತ್ತಿ. ಹಾಗಾಗಿ ನಿಯಾಮಕನಾಗಿ ಎಲ್ಲವನ್ನು ಪ್ರವೇಶಿಸಿರುವುದರಿಂದ ಈ ವಿಭೂತಿ ರೂಪವು ವಿಷ್ಣು ಎಂಬ ಹೆಸರುಳ್ಳದ್ದಾಗಿದೆ ಎಂದು ಇಟ್ಟುಕೊಳ್ಳಬೇಕು. 'ಯಾವ ಯಾವ ವಸ್ತುಗಳಲ್ಲಿ ವಿಭೂತಿರೂಪಗಳುಳ್ಳವನಾಗಿ ನೀನು ಧ್ಯಾನಾರ್ಹನಾಗಿರುವಿ' ಎಂಬ ಅರ್ಜುನನ ಪ್ರಶ್ನೆಗೆ '**ಜ್ಯೋತಿಷಾಂ ರವಿರಂಶುಮಾನ್**' ಎಂಬಿತ್ಯಾದಿಯಾಗಿ ಉತ್ತರಿಸಲಾಗುತ್ತಿದೆ. **ಜ್ಯೋತಿಷಾಂ** = ಪ್ರಕಾಶಮಾನವಾದ ವಸ್ತುಗಳ ಮಧ್ಯೆ ಜಗತ್ತನ್ನು ವ್ಯಾಪಿಸಿಕೊಂಡಿರುವ ಕಿರಣಗಳುಳ್ಳ ರವಿಯಲ್ಲಿದ್ದು, ಅವನಿಗೆ ಇತರ ಪ್ರಕಾಶಮಾನ ವಸ್ತುಗಳಿಗಿಂತ ಶ್ರೇಷ್ಠತೆಯನ್ನು ಅನುಗ್ರಹಿಸುತ್ತಾ ರವಿ ಎಂಬ ಹೆಸರುಳ್ಳ ವಿಭೂತಿರೂಪವುಳ್ಳವನು ಪರಮಾತ್ಮ. ರವ- ಅಂದರೆ - ಶಬ್ದ = ವೇದ ರೂಪದ ಶಬ್ದ, ಅಂತಹ ರವದಿಂದ **ಈಯತೇ = ಜ್ಞಾಯತೇ** - ತಿಳಿಯಲ್ಪಡುತ್ತಿದ್ದಾನೆ. ( ರವ + ಇ= ರವಿ) ಎಂದು ರವಿಪದದ ವ್ಯುತ್ಪತ್ತಿ. ಹಾಗಾಗಿ ರವದಿಂದ ಅಂದರೆ ಸಮಸ್ತವೇದರಾಶಿಯಿಂದ ಪ್ರತಿಪಾದ್ಯನಾದುದರಿಂದ ಈ ವಿಭೂತಿ ರೂಪವು ರವಿ ಎಂಬ ಹೆಸರುಳ್ಳದ್ದಾಗಿದೆ. ಇದರಿಂದಾಗಿ 'ರವ ಶಬ್ದವು ಉಪಪದವಾಗಿರುವ ಜ್ಞಾನ ಎಂಬ ಅರ್ಥದಲ್ಲಿರುವ **ಇ(ಣ್)** ಎಂಬ ಧಾತುವಿಗೆ

**'ಕ್ವಿಪ್'** ಪ್ರತ್ಯಯ ಸೇರಿದಾಗ, **ರವ +ಇ+ಕ್ವಿಪ್** ಎಂದಾಗಲು, **ಕ್ವಿಪ್** ಪ್ರತ್ಯಯವು ಲೋಪವಾಗಿ **ರವ+ಇ= ರವಿ** ಎಂಬ ಪದವು ನಿಷ್ಪನ್ನವಾಗಿದೆ ಎಂದಂತಾಯಿತು. **ಮರುತಾಂ=** ನಲವತ್ತೊಂಬತ್ತು ಮಂದಿ ಮರುತ್ ದೇವತೆಗಳ ಮಧ್ಯೆ, ಮರೀಚಿ ಎಂಬ ಮರುತ್ ದೇವತೆಯಲ್ಲಿದ್ದು, ಆ ಮರೀಚಿಗೆ ಇತರ ಮರುತ್‌ಗಳಿಗಿಂತ ಶ್ರೇಷ್ಠತೆಯನ್ನು ತಂದುಕೊಟ್ಟಿರುವ ಮರೀಚಿ ಎಂಬ ಹೆಸರುಳ್ಳ. ವಿಭೂತಿರೂಪನು ನಾನಾಗಿರುವೆನು. 'ಮರ' ಎಂದರೆ ನೀರು. **ಮರಂ ಅಸ್ಯಅಸ್ತೀತಿ ಮರೀ=** ಯಾವುದು ನೀರುಳ್ಳದ್ದೋ ಅದು **ಮರೀ** ಎಂಬಿ ವ್ಯುತ್ಪತ್ತಿಯಂತೆ ನೀರುಳ್ಳ ಮೋಡವು **'ಮರಿನ್'** ಎಂದನಿಸಿದೆ. ಇಂತಹ ಮೋಡವನ್ನು ಚಲಿಸುವಂತೆ ಪ್ರೇರಿಸುವುದರಿಂದ **ಮರಿಣಂ ಚಾಲಯತಿ=** ಮೋಡವನ್ನು ಚಲಿಸುವಂತೆ ಮಾಡುತ್ತಾನೆ' ಎಂಬ ವ್ಯುತ್ಪತ್ತಿಯಂತೆ ಪರಮಾತ್ಮನ ಈ ವಿಭೂತಿ ರೂಪವು **ಮರೀಚಿ** ಎಂಬ ಹೆಸರುಳ್ಳದ್ದಾಗಿದೆ ಎಂದು ಇದರ ಅಭಿಪ್ರಾಯವಾಗಿದೆ. ನಕ್ಷತ್ರಗಳ ಮಧ್ಯೆ ಇರುವ ಶಶಿ (ಚಂದ್ರ)ಯಲ್ಲಿ ನಾನು ಇದ್ದು , ಆ ಶಶಿಗೆ ನಕ್ಷತ್ರಗಳಿಗಿಂತ ಉತ್ತಮತ್ವವನ್ನು ಅನುಗ್ರಹಿಸುತ್ತಿರುವ ಶಶಿನಾಮಕ ವಿಭೂತಿರೂಪನು ಆಗಿರುವೆನು. **'ಶಶ'** ಎಂದರೆ ಬಹಳವಾದ ಸುಖ. **ಶಶಃ ಅಸ್ಯ ಅಸ್ತೀತಿ ಶಶೀ=** ಬಹಳವಾದ ಸುಖವುಳ್ಳವನು ಶಶೀ ಎಂಬೀ ವ್ಯುತ್ಪತ್ತಿಯಂತೆ, ಪರಿಪೂರ್ಣಸುಖವುಳ್ಳವನಾಗಿರುವುದರಿಂದ ಈ ವಿಭೂತಿರೂಪವು ಶಶೀ ಎಂಬ ಅನ್ವರ್ಥನಾಮ ವುಳ್ಳದ್ದಾಗಿದೆ ಎಂದು ಅಭಿಪ್ರಾಯ. ಮುಂದೆ ಹೇಳಲಾಗುವ ವಿಭೂತಿರೂಪಗಳಲ್ಲೂ 'ಆಯಾಯ ವಿಶಿಷ್ಟವಸ್ತುಗಳಲ್ಲಿ ವೈಶಿಷ್ಟ್ಯವನ್ನು ತಂದುಕೊಡುವ ಮೂಲಕ ಅಲ್ಲಿರುವುದರಿಂದ ಆಯಾಯ ವಸ್ತುವನ್ನು ಹೇಳುವ ಪದಗಳಿಂದ ಮುಖ್ಯವಾಗಿ ಆಯಾಯ ವಿಭೂತಿರೂಪವು ಹೇಳಲ್ಪಡುತ್ತಿದೆ ಎಂಬುದನ್ನು ಕಂಡುಕೊಳ್ಳಬೇಕು. ಎಲ್ಲವನ್ನು ಹೀಗೆ ವಿವರಿಸುತ್ತ ಹೋದರೆ ಗ್ರಂಥವು ಬಹಳ ವಿಸ್ತಾರವಾಗುವ ಭಯವಿರುವುದರಿಂದ ತುಂಬಾ ವಿಸ್ತಾರವಾದ ವಿವರಣೆಯನ್ನು ಕೈಗೊಳ್ಳದೆ ಆಯಾಯ ವಿಭೂತಿ ರೂಪಗಳಿಗೆ ಅನ್ವಯಿಸುವಂತೆ ಆಯಾಯ ನಾಮಪದಗಳ ನಿರ್ವಚನವನ್ನು ಮಾತ್ರ ಮುಂದೆ ನಿರೂಪಿಸಲಾಗುವುದು. ॥ 21 ॥

**ವಿವರಣೆ–** ಪರಮಾತ್ಮನ ವಿಭೂತಿರೂಪಗಳಲ್ಲಿ ಎರಡು ವಿಧ. ಒಂದು ವಸ್ತು ಅಥವಾ ವ್ಯಕ್ತಿಯಲ್ಲಿದ್ದುಕೊಂಡು ಆ ವಸ್ತು ಅಥವಾ ವ್ಯಕ್ತಿಯಲ್ಲಿ ಶ್ರೇಷ್ಠತೆಯನ್ನು ತಂದು ಕೊಡುತ್ತಾ ಆ ವಸ್ತು ಅಥವಾ ವ್ಯಕ್ತಿಯ ಹೆಸರಿನಿಂದಲೇ ಕರೆಸಿಕೊಳ್ಳಲ್ಪಡುತ್ತಿರುವ ವಿಭೂತಿರೂಪಗಳು ಒಂದು ವಿಧ. ಈ ರೂಪಗಳು ಪ್ರತ್ಯೇಕವಾಗಿ ಕಾಣಸಿಗದೆ, ಆಯಾಯ ವಸ್ತು ಅಥವಾ ವ್ಯಕ್ತಿಯಲ್ಲಿ ಗುಪ್ತ ವಾಗಿರುವುದರಿಂದ ಇವನ್ನು ತಿರೋಹಿತವಿಭೂತಿರೂಪಗಳೆಂದು ಪರಿಗಣಿಸಲಾಗಿದೆ. ಈ ರೂಪಗಳ ಪರವಾಗಿ ವಿಭೂತಿ ಶಬ್ದವನ್ನು , **ವಿ= ವಿಶಿಷ್ಟತಯಾ ಭೂತಿಃ= ಭವನಂ ಯಸ್ಮಾತ್** – ಯಾವ ಪರಮಾತ್ಮನ ರೂಪದಿಂದಾಗಿ ಒಂದು ವಸ್ತು ಅಥವಾ ವ್ಯಕ್ತಿಯು ವಿಶಿಷ್ಟವೆನಿಸಿದೆಯೋ ಅಂತಹ ರೂಪ– ಎಂದು ವಿವರಿಸಲಾಗಿದೆ. **ಉದಾ :** ಶಶಿನಾಮಕವಾದ ವಿಭೂತಿರೂಪ. ಇದು

ಚಂದ್ರನಲ್ಲಿದ್ದುಕೊಂಡು, ಅವನಿಗೆ ತನ್ನ ಜೊತೆ ಬೆಳಗುತ್ತಿರುವ ನಕ್ಷತ್ರಗಳಿಗಿಂತ ವಿಶಿಷ್ಟತೆಯನ್ನು ತಂದುಕೊಡುತ್ತಾ ಚಂದ್ರನ ಹೆಸರಾದ ಶಶಿ ಶಬ್ದದಿಂದ ಕರೆಸಿಕೊಳ್ಳಲ್ಪಡುತ್ತಿದೆ. ಶಶ ಎಂದರೆ ಪರಿಪೂರ್ಣಸುಖ. ಇದು ಈ ರೂಪದ ಮಹಿಮೆಯಾಗಿರುವುದರಿಂದ ಶಶಿ ಎಂಬ ಹೆಸರು ಈ ರೂಪಕ್ಕೆ ಅನ್ವರ್ಥವೆನಿಸಿದೆ. ಪರಮಾತ್ಮನ ರಾಮ,ಕೃಷ್ಣ, ವ್ಯಾಸ, ವಿಷ್ಣು ಮೊದಲಾದ ರೂಪಗಳು ಎರಡನೆ ತರಹದ ವಿಭೂತಿ ರೂಪಗಳು. ಈ ರೂಪಗಳ ಪರವಾಗಿ ವಿಭೂತಿ ಶಬ್ದವನ್ನು **ವಿ= ವಿವಿಧತಯಾ, ಭೂತಿಃ= ಭವನಂ ಯಸ್ಯ=** ಯಾವ ರೂಪದ ಸ್ಥಿತಿಯು, ಪರಮಾತ್ಮನ ವಿವಿಧರೂಪಗಳಲ್ಲಿ ಒಂದೆನಿಸಿದೆಯೋ, ಅಂತಹ ರೂಪ ಎಂದು ವಿವರಿಸಲಾಗಿದೆ. ಇದು ತನ್ನ ಸನ್ನಿಧಾನದಿಂದ ತಾನು ಇರುವ ವಸ್ತು ಅಥವಾ ವ್ಯಕ್ತಿಗೆ ವಿಶಿಷ್ಟತೆಯನ್ನು ತಂದುಕೊಡುವ ರೂಪವಲ್ಲ. ಯಾವ ವಸ್ತು ಅಥವಾ ವ್ಯಕ್ತಿಗಳಿಗಿಂತ ತಾನು ವಿಶಿಷ್ಟನೆನಿಸಿರುವನೋ, ಆ ವಸ್ತು ಅಥವಾ ವ್ಯಕ್ತಿಗಳ ಮಧ್ಯೆ ಪ್ರತ್ಯೇಕವಾಗಿ ಇರುವ ರೂಪವಿದು. ಹೀಗೆ ಪ್ರತ್ಯೇಕವಾಗಿ ಗುರುತಿಸಲು ಸಾಧ್ಯವಾಗಿರುವುದರಿಂದಲೇ ಇದನ್ನು ಪ್ರತ್ಯಕ್ಷ ವಿಭೂತಿ ರೂಪವೆಂದು ಪರಿಗಣಿಸಲಾಗಿದೆ. **ಉದಾ:** ದ್ವಾದಶ ಆದಿತ್ಯರ ಪೈಕಿ ವಿಭೂತಿ ರೂಪವೆನಿಸಿರುವ ವಿಷ್ಣು ಎಂಬ ಹೆಸರಿರುವ ಆದಿತ್ಯ. ಇದು ದ್ವಾದಶ ಆದಿತ್ಯರಲ್ಲಿ ಒಂದು ಹೊರತು ಅವರ ಮಧ್ಯದಲ್ಲಿ ಒಬ್ಬ ಆದಿತ್ಯನಲ್ಲಿರುವ ರೂಪವಲ್ಲ. ಈ ಇಪ್ಪತ್ತೊಂದನೆಯ ಶ್ಲೋಕದಲ್ಲಿ ಹಾಗೂ ಮುಂದಿನ ಶ್ಲೋಕಗಳಲ್ಲಿ ಈ ಎರಡು ರೀತಿಯ ವಿಭೂತಿ ರೂಪಗಳ ನಿರೂಪಣೆಯಿರುವುದರಿಂದ **'ದ್ವಿವಿಧವಿಭೂತಿರೂಪಾಣಿ ಸಂಕಲಯ್ಯ ಆಹ'** ಎಂದು ಗೀತಾವಿವೃತಿಯಲ್ಲಿ ಹೇಳಲಾಗಿದೆ.

**ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥ 22 ॥**

**ಅರ್ಥ–** ವೇದಗಳ ಮಧ್ಯೆ ನಾನು ಸಾಮವೇದದಲ್ಲಿದ್ದು ಅದಕ್ಕೆ (ಋಗ್ವೇದವನ್ನು ಹೊರತು ಪಡಿಸಿ) ಇತರ ವೇದಕ್ಕಿಂತ ಉತ್ತಮತ್ವವನ್ನು ತಂದುಕೊಡುತ್ತ **ಸಾಮ** ಎಂಬ ಹೆಸರುಳ್ಳ ವಿಭೂತಿ ರೂಪವಾಗಿರುವೆನು. ದೇವತೆಗಳ ಮಧ್ಯೆ ವಾಸವ (ಇಂದ್ರ)ನಲ್ಲಿದ್ದು, ಅವನಿಗೆ ಬ್ರಹ್ಮಾದಿ ದೇವತೆಗಳನ್ನು ಹೊರತುಪಡಿಸಿ ಇತರ ದೇವತೆಗಳಿಗಿಂತ ಶ್ರೇಷ್ಠತೆಯನ್ನು ತಂದುಕೊಡುತ್ತ ವಾಸವನಾಮಕ ವಿಭೂತಿರೂಪನು ನಾನಾಗಿರುವೆನು. ಇಂದ್ರಿಯಗಳ ಮಧ್ಯೆ ಮನಸ್ಸಿನಲ್ಲಿದ್ದು, ಅದಕ್ಕೆ ಇತರ ಇಂದ್ರಿಯಗಳಿಗಿಂತ ಶ್ರೇಷ್ಠತೆಯನ್ನು ತಂದುಕೊಡುತ್ತಿರುವ **'ಮನಸ್'** ಎಂಬ ಹೆಸರುಳ್ಳ ವಿಭೂತಿರೂಪನು ನಾನಾಗಿರುವೆನು. ಜೀವಿಗಳಲ್ಲಿ ಅವುಗಳ ಚೇತನಾಕ್ಕೆ ಪ್ರೇರಕನಾಗಿ ಅವುಗಳ ವಿಶಿಷ್ಟಧರ್ಮವೆನಿಸಿರುವ 'ಚೇತನಾ' ವನ್ನು ಅವುಗಳಿಗೆ ಅನುಗ್ರಹಿಸಿದ ಚೇತನಾ ನಾಮಕ ಸ್ತ್ರೀರೂಪದ ವಿಭೂತಿಯು ನಾನಾಗಿರುವೆನು.

**ಸಾಮ್ಯಹೇತುನಾ ಸಾಮ, ವೇದನಹೇತುನಾ ವೇದೇ ಸ್ಥಿತಃ ಸಾಮವೇದ-ನಾಮಾ । ವಸಂತ್ಯತ್ರೇತಿ ವಾಸಃ ಸರ್ವದೇಶಃ ತತ್ರ ಸರ್ವತ್ರ ವರ್ತತ ಇತಿ ವಾಸವಃ । ವಸತೇರಧಿಕರಣೇ ಘಞ್ ತಸ್ಮಿನ್ನುಪಪದೇ ವೃತುಧಾತೋರ್ಡಃ । ಅವಬೋಧರೂಪತ್ವಾನ್ಮನಃ ಮನ್ಯತೇರಸುನ್ । ಚೇತೋನೇತೃತ್ವಾಚ್ಚೇತನಾ । ಸ್ತ್ರೀರೂಪೇಣ ಚೇತನಾಯಾಂ ಸ್ಥಿತತ್ವಾತ್ ಸ್ತ್ರೀಲಿಂಗಮ್ । ಯದ್ವಾ ಭೂತಾನಾಂ ಚೇತನಾರೂಪಸಾರಧರ್ಮದ ಇತ್ಯರ್ಥಃ । ಚೇತನಾ ನಾಮ ಚೇತಸೋ ವ್ಯಾಪ್ತಿಃ । ಸಾ ಚ 'ಬಹುಸ್ಮರಣಶಕ್ತಿಶ್ಚ ಚೇತನೇತ್ಯಭಿಧೀಯತೇ' ಇತ್ಯುಕ್ತದಿಶಾ ಜ್ಞೇಯಾ ॥ 22 ॥**

**ಅನುವಾದ–** ಸಾಮವೇದದಲ್ಲಿರುವ ಪರಮಾತ್ಮನ ವಿಭೂತಿರೂಪವು ಸರ್ವತ್ರ ಸಮವಾಗಿರುವುದರಿಂದ 'ಸಾಮ' ಎಂದೂ, ಜ್ಞಾನ (ವೇದನ) ರೂಪವಾಗಿರುವುದರಿಂದ 'ವೇದ ಎಂದೂ ಅನಿಸಿದ್ದು ಸಾಮವೇದ ಎಂಬ ಹೆಸರುಳ್ಳದ್ದಾಗಿದೆ. '**ವಸತಿ ಅತ್ರ**= ಇಲ್ಲೆಲ್ಲಾ ಜೀವಿಗಳು ವಾಸಿಸುತ್ತಿದ್ದಾರೆ– ಎಂದು **ವಾಸ** ಶಬ್ದದ ನಿರ್ವಚನವಾಗಿದೆ. ಹಾಗಾಗಿ ವಾಸವೆಂದರೆ ಜೀವಿಗಳ ವಾಸಯೋಗ್ಯವಾದ '**ಸರ್ವಪ್ರದೇಶ**' ಅಂತಹ ವಾಸದಲ್ಲಿ ವರ್ತತೇ (ಇದ್ದಾನೆ) ಎಂಬ ಅರ್ಥದಲ್ಲಿ, '**ವಾಸವ**' ಎಂಬ ಹೆಸರು, ಪರಮಾತ್ಮನ ಸರ್ವ ದೇಶವ್ಯಾಪ್ತಿರೂಪದ ಮಹಿಮೆಯನ್ನು ಪ್ರಚುರಪಡಿಸುತ್ತಿದೆ. ಹಾಗಾಗಿ ವಾಸ ಎಂಬ ಅರ್ಥದಲ್ಲಿರುವ 'ವಸ' ಧಾತುವಿಗೆ ಅಧಿ ಕರಣಕಾರಕಾರ್ಥದಲ್ಲಿ '**ಘಞ್**' ಪ್ರತ್ಯಯ ಸೇರಿದಾಗ **ವಸ್ + ಘಞ್ = ವಸ್ + ಅ= ವಾಸ್ + ಅ** = ವಾಸ ಎಂಬ ಪದದ ನಿಷ್ಪತ್ತಿ; ಆ 'ವಾಸ' ಪದವು ಉಪಪದವಾಗಿರುವಾಗ '**ವೃತ್**' ಧಾತುವಿಗೆ '**ಡ**' ಪ್ರತ್ಯಯಸೇರಿದಾಗ **ವಾಸ +ವೃತ್ + ಡ = ವೃತ್ + ಅ = ವ್ +ಅ= ವಾಸ +ವ್ ಅ** = ವಾಸವ ಎಂಬ ಪದದ ನಿಷ್ಪತ್ತಿ ಎಂದಂತಾಯಿತು. ಅವಬೋಧನ (ಜ್ಞಾನ) ಎಂಬ ಅರ್ಥ ದಲ್ಲಿರುವ 'ಮನ' ಧಾತುವಿಗೆ ಅಸುನ್ ಪ್ರತ್ಯಯ ಸೇರಿದಾಗ **ಮನ್ + ಅಸುನ್= ಮನ್ + ಅಸ್**= '**ಮನಸ್**' ಎಂಬ ಪದದ ನಿಷ್ಪತ್ತಿ. ಹಾಗಾಗಿ ಅವಬೋಧ (ಜ್ಞಾನ) ರೂಪವಾಗಿರುವುದರಿಂದ ಮನ ಇಂದ್ರಿಯದಲ್ಲಿರುವ ಪರಮಾತ್ಮನ ವಿಭೂತಿರೂಪವು '**ಮನಸ್**' ಎಂಬ ಹೆಸರುಳ್ಳದ್ದಾಗಿದೆ. ಚೇತಸ್ (ಮನಸ್)ಗೆ ನಾಯಕನಾಗಿರುವುದರಿಂದ ಜೀವನು '**ಚೇತನಾ**' ಎನಿಸಿರುವನು. ಅಂತಹ ಚೇತನಾದಲ್ಲಿ ಸ್ತ್ರೀರೂಪದಿಂದ ಇರುವ ಪರಮಾತ್ಮನ ವಿಭೂತಿ ರೂಪವು '**ಚೇತನಾ**' ಎಂಬ ಸ್ತ್ರೀಲಿಂಗ ಪದದಿಂದ ಕರೆಯಲ್ಪಡುತ್ತಿದೆ ಅಥವಾ ಜೀವಿಗಳಲ್ಲಿರುವ ಸಾರರೂಪದಧರ್ಮಕ್ಕೆ ಚೇತನಾ ಎಂದು ಹೆಸರು. ಅದನ್ನು ಜೀವಿಗಳಿಗೆ ಅನುಗ್ರಹಿಸುತ್ತಿರುವುದ ರಿಂದ ಜೀವಿಗಳಲ್ಲಿರುವ ಪರಮಾತ್ಮನ ವಿಭೂತಿರೂಪವು ಚೇತನಾ ಎಂಬ ಹೆಸರುಳ್ಳದ್ದಾಗಿದೆ ಎಂದಾದರೂ ಇಟ್ಟುಕೊಳ್ಳಬಹುದು. '**ಬಹುಸ್ಮರಣಶಕ್ತಿಶ್ಚ ಚೇತನೇತ್ಯಭಿಧೀಯಿತೇ**'– ಬಹಳ

ವಿಷಯಗಳನ್ನು ಸ್ಮರಣೆಯಲ್ಲಿಟ್ಟುಕೊಳ್ಳುವ ಸಾಮರ್ಥ್ಯವು 'ಚೇತನಾ' ಎಂದು ಹೇಳಲ್ಪಡುತ್ತಿದೆ- ಎಂದು ಹೇಳಲಾಗಿರುವಂತೆ ಜೀವಿಗಳ ಸಾರಭೂತಧರ್ಮವಾದ ಚೇತನಾವು ಬಹು ಸ್ಮರಣ ಸಾಮರ್ಥ್ಯವೆನಿಸಿದೆ. ॥ 22 ॥

**ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।**
**ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥ 23 ॥**

**ಅರ್ಥ–** ಏಕಾದಶ ರುದ್ರರ ಮಧ್ಯೆ ಶಂಕರನೆಂಬ ರುದ್ರನಲ್ಲಿದ್ದು ಅವನಿಗೆ ಇತರ ಹತ್ತು ಮಂದಿ ರುದ್ರರಿಗಿಂತ ಶ್ರೇಷ್ಠತೆಯನ್ನು ತಂದುಕೊಡುತ್ತ ಶಂಕರ ಎಂಬ ಹೆಸರುಳ್ಳ ವಿಭೂತಿರೂಪನು ನಾನಾಗಿರುವೆನು. ಯಕ್ಷರಾಕ್ಷಸರ ಮಧ್ಯೆ ವಿತ್ತೇಶ (ಕುಬೇರ)ನಲ್ಲಿದ್ದು ಅವನಿಗೆ ಇತರ ಯಕ್ಷರಾಕ್ಷಸರಿಗಿಂತ ಶ್ರೇಷ್ಠತೆಯನ್ನು ಅನುಗ್ರಹಿಸುತ್ತಿರುವ ನನ್ನ ವಿಭೂತಿ ರೂಪವು ವಿತ್ತೇಶ ಎಂಬ ಹೆಸರುಳ್ಳದ್ದಾಗಿದೆ. ಎಂಟು ಮಂದಿ ವಸುಗಳ ಮಧ್ಯ ನಾನು ಪಾವಕನೆಂಬ ವಸುವಿನಲ್ಲಿದ್ದು ಅವನಿಗೆ ಇತರ ವಸುಗಳಿಗಿಂತ ಮಹತ್ತ್ವವನ್ನು ಅನುಗ್ರಹಿಸುತ್ತಿರುವ ಪಾವಕನಾಮಕ ವಿಭೂತಿ ರೂಪನು ನಾನಾಗಿರುವೆನು. ಪರ್ವತಗಳ ಮಧ್ಯೆ ಮೇರುವಿನಲ್ಲಿದ್ದು ನಾನು ಅದಕ್ಕೆ ಇತರ ಪರ್ವತಗಳಿಗಿಂತ ವಿಶಿಷ್ಟತೆಯನ್ನು ತಂದುಕೊಡುತ್ತಾ, ಮೇರುನಾಮಕ ವಿಭೂತಿರೂಪನು ಆಗಿರುವೆನು.

**ಸುಖಕಾರಣತ್ವಾತ್ ಶಂಕರನಾಮಾ । ವಿತ್ತಸ್ವಾಮಿತ್ವಾತ್ ವಿತ್ತೇಶನಾಮಾ ಕುಬೇರಸ್ಥಃ । ಪಾವಕಃ ಪಾವಯತಿ ಶೋಧಯತೀತಿ ವ್ಯುತ್ಪತ್ತ್ಯಾ ಪಾವಕನಾಮಾ 'ಪವ ಶುದ್ಧೌ' ಇತ್ಯತೋಽಂತರ್ಣೀತಣ್ಯರ್ಥಾತ್ ಣ್ವುಲ್ । ಶುದ್ಧಿಕರ್ತೇತ್ಯರ್ಥಃ। ಮೇರುರಿತ್ಯತ್ರ ಮಾ ಈರುರಿತಿ ವಿಭಾಗಃ । ಈರಯತಿ ಪ್ರೇರಯತೀತಿ ಈರಃ ಪ್ರೇರಕಃ । ಮಾಶಬ್ದೋ ನಿಷೇಧಾರ್ಥಃ । ಈರಃ ಪ್ರೇರಕೋಽಸ್ಯಾನ್ಯೋ ಮಾ ನಾಸ್ತೀತಿ ಮೇರಃ । ಮೇರ ಏವ ಮೇರುಃ । ಈರ ಪ್ರೇರಣ ಇತ್ಯತಃ ತಾಚ್ಛೀಲ್ಯಾರ್ಥೇ ಉ ಪ್ರತ್ಯಯಃ । ಶಿಖರಿಣಾಂ ಪರ್ವತಾನಾಮ್ ॥ 23 ॥**

**ಅನುವಾದ – ಶಂ ಕರೋತಿ**= ಸುಖವನ್ನು ಉಂಟುಮಾಡುತ್ತಾನೆ ಎಂಬ ವ್ಯುತ್ಪತ್ತಿಯಂತೆ, ಶಂಕರರೂಪ ರುದ್ರದೇವನಲ್ಲಿರುವ ವಿಭೂತಿರೂಪವು ಸುಖಕ್ಕೆ ಕಾರಣವಾದುದರಿಂದ ಶಂಕರ ನಾಮಕವೆನಿಸಿದೆ. **ವಿತ್ತಸ್ಯ ಈಶಃ**– ಸಂಪತ್ತಿಗೆ ಸ್ವಾಮಿ ಎಂಬ ಅರ್ಥದಲ್ಲಿ ಕುಬೇರನಲ್ಲಿರುವ ವಿಭೂತಿರೂಪವು ವಿತ್ತೇಶ ಎಂಬ ಹೆಸರುಳ್ಳದ್ದಾಗಿದೆ. ಶುದ್ಧಿ ಎಂಬ ಅರ್ಥದಲ್ಲಿರುವ **'ಪವ'** ಎಂಬ ಧಾತುವಿಗೆ, ಈ ಧಾತುವು ತನ್ನ ಈ ಅರ್ಥದ ಜೊತೆಗೆ **'ಣಿಚ್'** ಪ್ರತ್ಯಯದ ಅರ್ಥವಾದ ಪ್ರೇರಣೆಯನ್ನು ಹುದುಗಿಸಿಕೊಂಡಾಗ 'ಣ್ವುಲ್' ಎಂಬ ಪ್ರತ್ಯಯ ಸೇರಿದಾಗ, ಪಾವಕ ಎಂಬ

ಪದದ ನಿಷ್ಪತ್ತಿ . ಹಾಗಾಗಿ ಅದಕ್ಕೆ '**ಶುದ್ಧಿಕರ್ತೃ**' ಎಂದು ಅರ್ಥ ಆದುದರಿಂದ **ಪಾವಯತಿ ಇತಿ ಪಾವಕಃ**= ಶುದ್ಧಿಗೊಳಿಸುವುದರಿಂದ ಪಾವಕನೆನಿಸಿರುವನು ಎಂಬ ವ್ಯುತ್ಪತ್ತಿಗನುಸಾರವಾಗಿ, ಪಾವಕ ಎಂಬ ವಸುವಿನಲ್ಲಿರುವ ವಿಭೂತಿರೂಪವು ಪಾವಕ ಎಂಬ ಹೆಸರುಳ್ಳದ್ದಾಗಿದೆ. **ಮಾ ಈರುಃ** ಎಂದು ಮೇರು ಶಬ್ದದ ವಿಭಾಗವಾಗಿದೆ. ಪ್ರೇರಣೆ ಎಂಬ ಅರ್ಥದಲ್ಲಿರುವ ಈರ ಧಾತುವಿಗೆ 'ಅಂತಹ ಸ್ವಭಾವವುಳ್ಳವನು' ಎಂಬ ಅರ್ಥದಲ್ಲಿ '**ಉ**' ಪ್ರತ್ಯಯ ಸೇರಿದಾಗ '**ಈರು**' ಎಂಬ ಪದದ ನಿಷ್ಪತ್ತಿ. ಸಾಮಾನ್ಯವಾಗಿ 'ಈರಯತಿ'– ಪ್ರೇರಿಸುತ್ತಾನೆ ಎಂಬ ವ್ಯುತ್ಪತ್ತಿಯಂತೆ **ಈರ** ಎಂಬ ರೂಪವು ನಿಷ್ಪನ್ನವಾಗುತ್ತಿದೆ. '**ಮಾ**' ಎಂಬ ಅವ್ಯಯವು ನಿಷೇಧಾರ್ಥದಲ್ಲಿದೆ. '**ಮಾ ಈರಃ ಯಸ್ಯಸಃ** – ಯಾರಿಗೆ ಬೇರೊಬ್ಬ ಪ್ರೇರಕನಿಲ್ಲವೋ ಅವನು– ಎಂಬ ವ್ಯುತ್ಪತ್ತಿಯಂತೆ ಮೇರ ಎಂದರೆ ಪ್ರೇರಕ ರಹಿತನು '**ಪ್ರಕೃತ** ' '**ಉ**' ಪ್ರತ್ಯಯವಿರುವುದರಿಂದ '**ಮೇರ** ' ಎಂದೆನ್ನುವುದು '**ಮೇರು**' ಎಂದಾಗಿದೆ. (ಹೀಗೆ ತನಗೆ ಇನ್ನೊಬ್ಬ ಪ್ರೇರಕನು ಇಲ್ಲದಿರುವುದರಿಂದ ಮೇರು ಪರ್ವತದಲ್ಲಿರುವ ಪರಮಾತ್ಮರೂಪವು ಮೇರುನಾಮಕವೆನಿಸಿದೆ) **ಶಿಖರಿಣಾಂ**= ಪರ್ವತಗಳ ಮಧ್ಯದಲ್ಲಿ.॥ 23 ॥

**ವಿವರಣೆ**– '**ಪವ್**' ಧಾತುವಿಗೆ ಶುದ್ಧಿ ಎಂದು ಅರ್ಥ. ಹಾಗಾಗಿ ಅಷ್ಟೇ ಅರ್ಥದಲ್ಲಿ ಅದಕ್ಕೆ **ಣ್ವುಲ್** ಪ್ರತ್ಯಯ ಬಂದಾಗ ಉಂಟಾಗುವ 'ಪಾವಕ' ಎಂಬ ಪದವು. ಶುದ್ಧನಾಗು ಎಂಬ ಅರ್ಥವನ್ನಷ್ಟೇ ಕೊಡಬಹುದು. ಪಾವನಪಾವನನೆನಿಸಿರುವ ಪರಮಾತ್ಮನಿಗೆ ಶುದ್ಧನಾಗು ಎಂಬ ಅರ್ಥದಲ್ಲಿ ಈ ಪದವು ಅನ್ವಯಿಸದು. ಹಾಗಾಗಿ ಈ ಧಾತುವು ತನ್ನ ಈ ಅರ್ಥದ ಜೊತೆಗೆ '**ಣಿಚ್**' ಪ್ರತ್ಯಯದ ಅರ್ಥವನ್ನು ಸೇರಿಸಿಕೊಂಡಿದೆ ಎಂದೆನ್ನಲಾಗಿದೆ. ಇಂತಹ ಧಾತುವಿನಿಂದ ನಿಷ್ಪನ್ನವಾದ ಪಾವಕಶಬ್ದವು 'ಶುದ್ಧಿಯನ್ನು ಪ್ರೇರಿಸುವವನು' ಶುದ್ಧಗೊಳಿಸುವವನು ಎಂಬ ಅರ್ಥವನ್ನು ಕೊಡುವಂತಾಗಿ ಪರಮಾತ್ಮನಲ್ಲಿ ಅನ್ವಯಿಸಲು ಯೋಗ್ಯವೆನಿಸುತ್ತದೆ. 'ಪವ್' ಧಾತುವಿಗೆ ಣ್ವುಲ್ ಪ್ರತ್ಯಯ ಸೇರಿ **ಪವ್ + ಣ್ವುಲ್** ಎಂದಿರುವಾಗ. ಈ ಪ್ರತ್ಯಯದಲ್ಲಿರುವ ಣಕಾರ ಹಾಗೂ ಲಕಾರಕ್ಕೆ ಪಾಣಿನಿ ವ್ಯಾಕರಣದಂತೆ ಲೋಪವಾದಾಗ 'ವು' ಎಂಬ ಅಂಶವಷ್ಟೆ ಉಳಿಯುತ್ತದೆ. ಈ 'ವು' ಅನ್ನುವುದು. '**ಅಕ**' ಎಂಬ ರೂಪವನ್ನು ಪಡೆಯುತ್ತದೆ. ಹಾಗಾಗಿ **ಪವ್ + ಣ್ವುಲ್ = ಪವ್ +ವು = ಪವ್+ ಅಕ = ಪಾವ್ + ಅಕ = ಪಾವಕ** ಎಂಬ ರೂಪ ನಿಷ್ಪತ್ತಿಯ ಪ್ರಕ್ರಿಯೆ ಎನಿಸಿದೆ.

**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।**
**ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ॥ 24 ॥**

**ಅರ್ಥ–** ಅರ್ಜುನನೆ ! ಪುರೋಹಿತರ ಮಧ್ಯೆ ಪ್ರಧಾನಪುರೋಹಿತನೆನಿಸಿರುವ ಬೃಹಸ್ಪತಿಯಲ್ಲಿದ್ದು , ಅವರಿಗೆ ಇತರ ಪುರೋಹಿತರಿಗಿಂತ ಶ್ರೇಷ್ಠತೆಯನ್ನು ತಂದು ಕೊಡುತ್ತಾ ಬೃಹಸ್ಪತಿ ನಾಮಕ ವಿಭೂತಿ ರೂಪವುಳ್ಳವನನ್ನಾಗಿ ನನ್ನನ್ನು ತಿಳಿದುಕೋ. ಸೇನಾನಾಯಕರ ಮಧ್ಯದಲ್ಲಿನಾನು ಸ್ಕಂದನಲ್ಲಿದ್ದು ಅವನಿಗೆ ಇತರ ಸೇನಾನಾಯಕರಿಗಿಂತ ಉತ್ತಮತ್ವವನ್ನು ತಂದುಕೊಡುತ್ತಿರುವ ಸ್ಕಂದ ಎಂಬ ಹೆಸರುಳ್ಳ ವಿಭೂತಿರೂಪನು ನಾನಾಗಿರುವೆನು. ಸರೋವರಗಳ ಮಧ್ಯೆ ಸಮುದ್ರದಲ್ಲಿದ್ದು, ಅದಕ್ಕೆ ಸರೋವರಗಳಿಗಿಂತ ಮಹತ್ವವನ್ನು ಅನುಗ್ರಹಿಸುತ್ತಿರುವ 'ಸಾಗರ ' ಎಂಬ ಹೆಸರುಳ್ಳ ವಿಭೂತಿರೂಪನು ನಾನಾಗಿರುವೆನು.

**ಪುರೋಧಸಾಂ ಪುರೋಹಿತಾನಾಂ । ಬೃಹತಾಂ ಪತಿತ್ವಾದ್ ಬೃಹಸ್ಪತಿ-ನಾಮಾನಮ್ । ಸೇನಾನೀನಾಂ ಸೇನಾನೇತ್ೃಣಾಮ್ । ಸ್ಕಂದನಾದ್ ಸ್ವಸ್ಮಾಜ್ಜಗತೋ ನಿಷ್ಕಾಸನಾತ್ ಸ್ಕಂದನಾಮಾ । ಸ್ಕಂದಿರ್ಗತಿವಿಶೋಷಣಯೋರಿತಿ ಧಾತೋರಚ್ । ಸರಸಾಂ ಸರೋವರಾಣಾಂ ಸಾಗರಃ । ಗಿರತೀತಿ ಗರಃ । ಗೃ ನಿಗರಣೇ ಪಚಾದ್ಯಚ್ । ಸಾರಸ್ಯ ಗರಃ ಸಾಗರಃ । ರಶಬ್ದಲೋಪೋ ನಿರುಕ್ತತ್ವಾತ್ । ಸಾರಭೋಕ್ತೃತ್ವಾತ್ ಸಾಗರನಾಮಾ ಸಮುದ್ರಸ್ಥಃ ॥ 24 ॥**

**ಅನುವಾದ– ಪುರೋಧಸಾಂ**= ಪುರೋಹಿತರ ಮಧ್ಯೆ. ಬೃಹತಾಂ **ಪತಿತ್ವಾತ್**= ಶ್ರೇಷ್ಠರಾದ ರಮಾಬ್ರಹ್ಮಾದಿಗಳ ಸ್ವಾಮಿಯಾಗಿರುವುದರಿಂದ– ಪರಮಾತ್ಮನ ಬೃಹಸ್ಪತಿಯಲ್ಲಿರುವ ವಿಭೂತಿ ರೂಪವು '**ಬೃಹಸ್ಪತಿ**' ಎಂಬ ಹೆಸರುಳ್ಳದ್ದಾಗಿದೆ. **ಸೇನಾನೀನಾಂ**= ಸೇನಾನಾಯಕರ ಮಧ್ಯೆ. ಗತಿ ಹಾಗೂ ಒಣಗಿಸು ಎಂಬ ಅರ್ಥಗಳಲ್ಲಿರುವ **ಸ್ಕಂದ್** ಧಾತುವಿಗೆ ಅಚ್ ಪ್ರತ್ಯಯ ಸೇರಿದಾಗ **ಸ್ಕಂದ್ + ಅಚ್ = ಸ್ಕಂದ್+ ಅ = ಸ್ಕಂದ** ಎಂಬೀ ಪದದ ನಿಷ್ಪತ್ತಿ. ಹಾಗಾಗಿ ಪರಮಾತ್ಮನ ಈ ವಿಭೂತಿ ರೂಪವು, **ಸ್ಕಂದನಾತ್** = ಸೃಷ್ಟಿಕಾಲದಲ್ಲಿ ಜಗತ್ತನ್ನು ತನ್ನಿಂದ ಹೊರಹಾಕುವುದರಿಂದಾಗಿ '**ಸ್ಕಂದ**' ಎಂಬ ಹೆಸರುಳ್ಳದ್ದಾಗಿದೆ. **ಸರಸಾಂ**= ಸರೋವರಗಳ ಮಧ್ಯೆ ಸಾಗರದಲ್ಲಿರುವ ಪರಮಾತ್ಮನ ರೂಪವು ಸಾಗರನಾಮಕವೆನಿಸಿದೆ. ನಿಗರಣ (ನುಂಗು) ಎಂಬ ಅರ್ಥದಲ್ಲಿರುವ **ಗೃ** ಎಂಬ ಧಾತುವಿಗೆ **ಪಚಾದ್ಯಚ್** ಪ್ರತ್ಯಯಸೇರಿದಾಗ **ಗೃ + ಅಚ್ = ಗೃ + ಅ = ಗರ್ +ಅ =ಗರ** ಎಂದ ಶಬ್ದದ ನಿಷ್ಪತ್ತಿ . ಹಾಗಾಗಿ ಗರ ಅಂದರೆ ನುಂಗುವವನು, (ತಿನ್ನುವವನು) ಎಂದು ಅರ್ಥ. **ಸಾರಸ್ಯ ಗರಃ = ಸಾಗರಃ** ಎಂದು ನಿರ್ವಚನವು ಪ್ರಮಾಣ ಸಿದ್ಧವಾಗಿರುವುದರಿಂದ, ಸಾರಶಬ್ದದ 'ರ' ಎಂಬ ಅಂಶಕ್ಕೆ ಲೋಪವಾದಾಗ, **ಸಾರಗರ**= ಸಾಗರ ಎಂದಾಗುತ್ತದೆ. ಹಾಗಾಗಿ, ಸಮುದ್ರದಲ್ಲಿರುವ ಪರಮಾತ್ಮನ ವಿಭೂತಿರೂಪವು ಸಾರವನ್ನು ಉಣ್ಣುವುದರಿಂದಾಗಿ ಸಾಗರ ಎಂಬ ಹೆಸರುಳ್ಳದ್ದಾಗಿದೆ. ॥ 24 ॥

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।**
**ಯಜ್ಞಾನಾಂ ಜಪಯಜ್ಞೋऽಸ್ಮಿ ಸ್ಥಾವರಾಣಾಂ ಹಿಮಾಲಯಃ ॥ 25 ॥**

**ಅರ್ಥ–** ಮಹರ್ಷಿಗಳ ಮಧ್ಯೆ ನಾನು ಭೃಗುಋಷಿಯಲ್ಲಿದ್ದು, ಅವನಿಗೆ ಇತರ ಋಷಿಗಳಿಗಿಂತ ಉತ್ತಮತ್ವವನ್ನು ಅನುಗ್ರಹಿಸುತ್ತಾ ಭೃಗು ಎಂಬ ಹೆಸರುಳ್ಳ ವಿಭೂತಿರೂಪನಾಗಿರುವೆನು. ಮಾತುಗಳ ಮಧ್ಯೆ ಪ್ರಧಾನವೆನಿಸಿರುವ ಅಕ್ಷರ ನಾಮಕ ಓಂಕಾರದಲ್ಲಿದ್ದು ಅದಕ್ಕೆ ಇತರ ಮಾತುಗಳಿಗಿಂತ ಶ್ರೇಷ್ಠತೆಯನ್ನು ತಂದು ಕೊಡುತ್ತಿರುವವನಾಗಿ ಅಕ್ಷರ ಎಂಬ ಹೆಸರುಳ್ಳ ವಿಭೂತಿ ರೂಪನು ನಾನಾಗಿರುವೆನು. 'ಯಜ್ಞಗಳ ಮಧ್ಯೆ ಜಪ ಯಜ್ಞದಲ್ಲಿದ್ದು. ಅದಕ್ಕೆ ಜ್ಞಾನಯಜ್ಞವನ್ನು ಹೊರತು ಪಡಿಸಿ ಇತರ ಎಲ್ಲಾ ಯಜ್ಞಗಳಿಗಿಂತ ವೈಶಿಷ್ಟ್ಯವನ್ನು ತಂದುಕೊಡುತ್ತಾ ಜಪಯಜ್ಞ ನಾಮಕನೆನಿಸಿರುವೆನು. ಅಚರ ವಸ್ತುಗಳ ಮಧ್ಯೆ ಹಿಮಾಲಯ ಪರ್ವತದಲ್ಲಿದ್ದು, ಅದಕ್ಕೆ ಇತರ ಅಚರವಸ್ತುಗಳಿಗಿಂತ ಆಧಿಕ್ಯವನ್ನು ತಂದುಕೊಡುತ್ತಿರುವ, ಹಿಮಾಲಯನಾಮಕ ವಿಭೂತಿ ರೂಪನು ನಾನಾಗಿರುವೆನು.

**ವಿರೋಧಿನಾಂ ಭರ್ಜನಾದ್‌ದಹನಾದ್‌ಭೃಗುನಾಮಾ ಭೃಗುಸ್ಥಃ । ಮುಖ್ಯ-ತ್ವಾದೇಕಮ್ । ಚತುರ್ವಿಧನಾಶಹೀನತ್ವಾದ್‌ಅಕ್ಷರನಾಮಾ ಪ್ರಣವಸ್ಥಃ । ಜಾನ್ ಜಾತಾನ್ ಪಾತೀತಿ ಜಪಃ ಯಾಜ್ಯತ್ವಾದ್ ಯಜ್ಞಃ । ಜಪಶ್ಚಾಸೌ ಯಜ್ಞಶ್ಚೇತಿ ವ್ಯುತ್ಪತ್ತ್ಯಾ ಜಪಯಜ್ಞನಾಮಾ ಜಪರೂಪಯಜ್ಞಸ್ಥಃ । ಸ್ಥಾವರಾಣಾಂ ಗತಿ-ಹೀನಾನಾಂ ಹಿಮಾಲಯ ಇತಿ । ಹ್ರೀಶ್ಚ ಮಾಚ ತಯೋರಾಲಯ ಆಶ್ರಯಃ ಹ್ರೀಮಾಲಯಃ ಸ ಏವ ಹಿಮಾಲಯಃ । ಹ್ರೀಶ್ರೀಶಬ್ದಿತಲಕ್ಷ್ಮೀರೂಪದ್ವಯಸ್ಯ ಆಶ್ರಯತ್ವಾದ್ ಹಿಮವತ್ಪರ್ವತಸ್ಥಃ ॥ 25 ॥**

**ಅನುವಾದ– ಭರ್ಜನಾತ್ ಭೃಗುಃ=** ತನ್ನ ವಿರೋಧಿಗಳನ್ನು ಭರ್ಜನ ಮಾಡುವುದರಿಂದ ಅಂದರೆ– ಸುಟ್ಟು ಹಾಕುವುದರಿಂದ ಭೃಗುವಿನಲ್ಲಿರುವ ಪರಮಾತ್ಮನ ವಿಭೂತಿರೂಪವು ಭೃಗು ಎಂಬ ಹೆಸರುಳ್ಳದ್ದಾಗಿದೆ. ಮಾತುಗಳ ಮಧ್ಯದಲ್ಲಿ ಪ್ರಧಾನವೆನಿಸಿರುವುದರಿಂದ ಓಂಕಾರವನ್ನು **'ಏಕಂ'** ಎಂದು ವಿಶೇಷಣವನ್ನು ಕೊಟ್ಟು ಉಲ್ಲೇಖಿಸಲಾಗಿದೆ. ಈ ಓಂಕಾರ (ಪ್ರಣವ)ದಲ್ಲಿರುವ ಪರಮಾತ್ಮನ ರೂಪವು ನಾಲ್ಕೂರೀತಿಯ ನಾಶಕ್ಕೆ ಒಳಗಾಗದಿರುವುದರಿಂದ **'ಅಕ್ಷರ '** ಎಂಬ ಹೆಸರುಳ್ಳದ್ದಾಗಿದೆ. **ಜಪಶ್ಚಾಸೌ ಯಜ್ಞಶ್ಚ, ಜಪಯಜ್ಞಃ** ಎಂದು ಕರ್ಮಧಾರಯ ಸಮಾಸ. **ಜಾನ್= ಜಾತಾನ್=** ಹುಟ್ಟಿದವರನ್ನು , **ಪಾತಿ=** ರಕ್ಷಿಸುತ್ತಾನೆ ಎಂಬ ವ್ಯುತ್ಪತ್ತಿಯಂತೆ ಪರಮಾತ್ಮನು **ಜ+ಪ=** ಜಪವೆನಿಸಿರುವನು. ಯಾಗಗಳಲ್ಲಿ ಪೂಜ್ಯನಾದುದರಿಂದ ಯಜ್ಞ-

ನಾಮಕನೂ ಆಗಿರುವನು . ಹಾಗಾಗಿ ಜಪಯಜ್ಞದಲ್ಲಿರುವ ಪರಮಾತ್ಮನ ವಿಭೂತಿರೂಪವು, ಜಪ ಯಜ್ಞ ಎಂಬ ಹೆಸರುಳ್ಳದ್ದಾಗಿದೆ. **ಸ್ಥಾವರಾಣಾಂ**= ಚಲನೆ ರಹಿತವಾದ ವಸ್ತುಗಳ ಮಧ್ಯೆ. **ಹ್ರೀ ಚ ಮಾಚ ಹ್ರೀಮೇ . ಹ್ರೀಮಯೋಃ ಆಲಯಃ= ಆಶ್ರಯಃ** 'ಹ್ರೀಮಾಲಯಃ' ಎಂದು ದ್ವಂದ್ವಸಮಾಸಸಹಿತವಾದ ಷಷ್ಠೀತತ್ಪುರುಷಸಮಾಸ. 'ಹ್ರೀ'ಮಾಲಯ ಎಂದೆನ್ನುವುದೇ ನಿರ್ವಚನದ ಬಲದಿಂದ '**ಹಿಮಾಲಯ**' ಎಂದಾಗಿದೆ. '**ಮಾ**' ಎಂದರೆ '**ಶ್ರೀ**' ಎಂದರ್ಥ. ಹಾಗಾಗಿ '**ಹ್ರೀ**' ಹಾಗೂ '**ಶ್ರೀ**' ಎಂದು ಹೆಸರುಳ್ಳ ಲಕ್ಷ್ಮೀದೇವಿಯ ಎರಡು ರೂಪಗಳಿಗೆ ಆಶ್ರಯವಾದುದರಿಂದ ಈ ವಿಭೂತಿರೂಪವು ಹಿಮಾಲಯವೆಂಬ ಹೆಸರುಳ್ಳದ್ದಾಗಿದೆ. ।। 25 ।।

**ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ।। 26 ।।**

**ಅರ್ಥ–** ಎಲ್ಲಾ ವಿಧವಾದ ಮರಗಳ ಮಧ್ಯೆ ಅಶ್ವತ್ಥ ಮರದಲ್ಲಿದ್ದು ಅದಕ್ಕೆ ಇತರ ಮರಗಳಿಗಿಂತ ಉತ್ತಮತ್ವವನ್ನು ಅನುಗ್ರಹಿಸುತ್ತಿರುವ ಅಶ್ವತ್ಥ ಎಂಬ ಹೆಸರಿನ ವಿಭೂತಿರೂಪನು ನಾನಾಗಿರುವೆನು . ದೇವರ್ಷಿಗಳ ಮಧ್ಯೆ ನಾರದರಲ್ಲಿದ್ದು . ಅವರಿಗೆ ಇತರ ದೇವರ್ಷಿಗಳಿಗಿಂತ ಉತ್ತಮತ್ವವನ್ನು ಅನುಗ್ರಹಿಸುತ್ತಿರುವ ನಾರದ ಎಂಬ ವಿಭೂತಿರೂಪನು ನಾನಾಗಿರುವೆನು. ಗಂಧರ್ವರ ಮಧ್ಯೆ ಚಿತ್ರರಥನೆಂಬ ಗಂಧರ್ವನಲ್ಲಿದ್ದು ಅವನಿಗೆ ಇತರ ಗಂಧರ್ವರಿಗಿಂತ ವೈಶಿಷ್ಟ್ಯವನ್ನು ತಂದುಕೊಡುತ್ತಾ ನಾನು ಚಿತ್ರರಥನಾಮಕ ವಿಭೂತಿರೂಪನಾಗಿರುವೆನು. ಸಿದ್ಧರ ಮಧ್ಯೆ ಶ್ರೇಷ್ಠನೆನಿಸಿರುವ ಕಪಿಲಮುನಿಯು ನಾನಾಗಿರುವೆನು.

**ಅಶ್ವವತ್ತಿಷ್ಠತೀತ್ಯಶ್ವತ್ಥನಾಮಾ ಅಶ್ವತ್ಥಗತಃ । ನರಾಣಾಮಪೇಕ್ಷಿತಂ ನಾರಮ್ । ತದ್‌ದದಾತೀತಿ ನಾರದನಾಮಾ ನಾರದಸ್ಥಃ । ವಿಚಿತ್ರಾಧಿದೇವಾದಿರಥವತ್ತ್ವಾತ್ ಚಿತ್ರರಥನಾಮಾ ತನ್ನಾಮಕಗಂಧರ್ವಸ್ಥಿತಃ । ಸುಖರೂಪತ್ವಾತ್ಕಃ । ಪಾಲ್ಯತೇ ಜಗದನೇನೇತಿ ಪಿಃ । ಪಾ ರಕ್ಷಣ ಇತ್ಯತಃ ಕಿಃ । 'ಆತೋ ಲೋಪ ಇಟಿ ಚ' ಇತ್ಯಾಕಾರಲೋಪಃ । ಲೀಯತೇ ಜಗದನೇನೇತಿ ಲಃ । ಲೀ ಶ್ಲೇಷಣ ಇತ್ಯತೋ ಡಃ । ಲಾ ಆದಾನ ಇತ್ಯತೋ ವಾ ಕಃ । ಕಶ್ಚಾಸೌ ಪಿಶ್ಚಾಸೌ ಲಶ್ಚೇತಿ ಕಪಿಲಃ । ಕಂ ಸುಖಂ ಪಿಬತ್ಯನುಭವತಿ ಲೀಲಯೇತಿ ವಾ ಕಪಿಲಃ ।। 26 ।।**

**ಅನುವಾದ– ಅಶ್ವವತ್ ತಿಷ್ಠತೀತಿ ಅಶ್ವತ್ಥಃ** ಎಂಬ ವ್ಯುತ್ಪತ್ತಿಯಂತೆ ಹಯಗ್ರೀವಾವತಾರನಾಗಿ ಅಶ್ವ(ಕುದುರೆ)ದ ರೂಪದಲ್ಲಿ ಇರುವವನಾದುದರಿಂದ ಅಶ್ವತ್ಥಮರದಲ್ಲಿರುವ ಪರಮಾತ್ಮನ ವಿಭೂತಿರೂಪವು ಅಶ್ವತ್ಥನಾಮಕವೆನಿಸಿದೆ. ಮನುಷ್ಯ (ನರ)ರಿಗೆ ಸಂಬಂಧಿಸಿದ ಅವರಿಂದ

ಅಪೇಕ್ಷಿತವಾದ ಫಲವು '**ನರಾಣಾಂ ಇದಂ ನಾರಂ**'ಎಂಬ ವ್ಯುತ್ಪತ್ತಿಗನುಸಾರವಾಗಿ 'ನಾರ' ಎಂದೆನಿಸಿದೆ. **ನಾರಂ ದದಾತಿ**= ನರರಿಂದ ಅಪೇಕ್ಷಿಸಲ್ಪಟ್ಟ ಫಲವನ್ನು ಕೊಡುತ್ತಿದ್ದಾನೆ ಎಂಬ ವ್ಯುತ್ಪತ್ತಿಯಂತೆ, ತನ್ನ ಭಕ್ತರ ಅಪೇಕ್ಷೆಯನ್ನು ಪೂರೈಸುತ್ತಿರುವುದರಿಂದ ನಾರದರಲ್ಲಿರುವ ಪರಮಾತ್ಮನ ವಿಭೂತಿರೂಪವು ನಾರದ ಎಂಬ ಹೆಸರುಳ್ಳದ್ದಾಗಿದೆ. ಅಧಿದೈವಾದಿ ವಿಚಿತ್ರ ರಥವುಳ್ಳದ್ದಾದುದರಿಂದ ಚಿತ್ರರಥನೆಂಬ ಗಂಧರ್ವನಲ್ಲಿರುವ ಪರಮಾತ್ಮನ ವಿಭೂತಿರೂಪವು 'ಚಿತ್ರರಥ' ಎಂಬ ಹೆಸರುಳ್ಳದ್ದಾಗಿದೆ. '**ಕ**' ಎಂದರೆ ಸುಖ. ಸುಖರೂಪನಾದುದರಿಂದ ಪರಮಾತ್ಮನು 'ಕ' ಎನಿಸಿರುವನು. ರಕ್ಷಣೆ ಎಂಬ ಅರ್ಥದಲ್ಲಿರುವ ಪಾ ಧಾತುವಿಗೆ '**ಕಿ**' ಎಂಬ ಪ್ರತ್ಯಯ ಸೇರಿ, **ಪಾ + ಕಿ= ಪಾ + ಇ** ಎಂದಿರಲು '**ಆತೋ ಲೋಪ ಇಟಿ ಚ**' ಎಂಬ ಪಾಣಿನಿಸೂತ್ರದಂತೆ, **ಪಾ** ಧಾತುವಿನ ಆಕಾರಕ್ಕೆ ಲೋಪವಾಗಿ **ಪ್ + ಇ**= ಪಿ ಎಂಬ ಶಬ್ದದ ನಿಷ್ಪತ್ತಿ . ಹಾಗಾಗಿ 'ಇವನಿಂದ ಜಗತ್ತು ರಕ್ಷಿಸಲ್ಪಡುತ್ತಿದೆ ಎಂಬ ಅರ್ಥದಲ್ಲಿ ಪರಮಾತ್ಮನು 'ಪಿ' ಎನಿಸಿರುವನು. ಲೀನವಾಗು ಎಂಬ ಅರ್ಥದಲ್ಲಿರುವ 'ಲೀ' ಎಂಬ ಧಾತುವಿಗೆ '**ಡ**' ಪ್ರತ್ಯಯ ಸೇರಿದಾಗ **ಲೀ +ಡ +ಲೀ+ಅ = ಲ್ +ಅ= ಲ** ಎಂಬ ಪದದ ನಿಷ್ಪತ್ತಿ. ಅಥವಾ ಸ್ವೀಕರಿಸು ಎಂಬ ಅರ್ಥದಲ್ಲಿರುವ '**ಲಾ**' ಎಂಬ ಧಾತುವಿಗೆ '**ಕ**' ಎಂಬ ಪ್ರತ್ಯಯ ಸೇರಿದಾಗ ಧಾತುವಿನ ಆಕಾರಕ್ಕೆ ಲೋಪವಾಗಿ **ಲಾ +ಕ = ಲಾ + ಅ = ಲ್ +ಅ = ಲ** ಎಂಬ ಪದದ ನಿಷ್ಪತ್ತಿ . ಹಾಗಾಗಿ, ಜಗತ್ತು ಪ್ರಲಯಕಾಲದಲ್ಲಿ ಪರಮಾತ್ಮನಲ್ಲಿ ಲೀನವಾಗುವುದರಿಂದ, ಜಗತ್ತನ್ನು ತನ್ನಲ್ಲಿ ಸ್ವೀಕರಿಸುತ್ತಿರುವುದರಿಂದ ಪರಮಾತ್ಮನು 'ಲ' ಎಂದೆನಿಸಿರುವನು. ಹೀಗೆ ಪರಮಾತ್ಮನ ಈ ಮುನಿರೂಪದ ಪ್ರತ್ಯಕ್ಷ ವಿಭೂತಿ ರೂಪವು ಸುಖರೂಪವೂ (ಕ) ಜಗದ್ರಕ್ಷಕವೂ (ಪಿ) ಜಗತ್ತನ್ನು ತನ್ನಲ್ಲಿ ಲೀನಗೊಳಿಸಿ ಸ್ವೀಕರಿಸುತ್ತಿರುವುದೂ ಆಗಿರುವುದರಿಂದ ಕಪಿಲ ಎಂಬ ಹೆಸರುಳ್ಳದ್ದಾಗಿದೆ. ಅಥವಾ ಸುಖಂ (ಕಂ) **ಪಿಬತಿ** = ಅನುಭವಿಸುತ್ತಿದೆ (ಪಿ) ಲೀಲಿಯಾ (ಲ) ಎಂಬ ವ್ಯುತ್ಪತ್ತಿಯಂತೆ ಲೀಲೆಯಿಂದ ಸುಖವನ್ನು ಅನುಭವಿಸುತ್ತಿರುವುದರಿಂದ ಈ ಮುನಿರೂಪವು ಕಪಿಲ ಎಂಬ ಹೆಸರುಳ್ಳದ್ದಾಗಿದೆ. ॥ 26 ॥

**ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।**
**ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಮ್ ॥ 27 ॥**

**ಅರ್ಥ**– ಕುದುರೆಗಳ ಮಧ್ಯೆ ಕ್ಷೀರಸಮುದ್ರದಿಂದ ಉದ್ಭವಿಸಿದ, **ಉಚ್ಚೈಃಶ್ರವಸ್** ನಲ್ಲಿದ್ದು ಅದಕ್ಕೆ ಇತರ ಕುದುರೆಗಳಿಗಿಂತ ಉತ್ತಮತ್ವವನ್ನು ಅನುಗ್ರಹಿಸುತ್ತಿರುವ ನನ್ನ ವಿಭೂತಿರೂಪವು **ಉಚ್ಚೈಃ ಶ್ರವಸ್** ಎಂಬ ಹೆಸರುಳ್ಳದ್ದಾಗಿದೆ ಎಂದು ತಿಳಿದುಕೋ. ಶ್ರೇಷ್ಠ ಆನೆಗಳ ಮಧ್ಯೆ ಐರಾವತವೆಂಬ ಇಂದ್ರನ ಆನೆಯಲ್ಲಿದ್ದು, ಅದಕ್ಕೆ ಶ್ರೇಷ್ಠತೆಯನ್ನು ತಂದುಕೊಡುತ್ತಿರುವ ಐರಾವತ ಎಂಬ ಹೆಸರುಳ್ಳವನನ್ನಾಗಿ ನನ್ನನ್ನು ತಿಳಿದುಕೋ. ಮನುಷ್ಯರ ಮಧ್ಯದಲ್ಲಿ ಚಕ್ರವರ್ತಿ ಮೊದಲಾದ

ರಾಜರಲ್ಲಿದ್ದು ಅವರಿಗೆ ಮನುಷ್ಯರ ಮಧ್ಯದಲ್ಲಿ ಶ್ರೇಷ್ಠತೆಯನ್ನು ತಂದುಕೊಡುತ್ತಿರುವ ನನ್ನ ವಿಭೂತಿರೂಪವನ್ನು ನರಾಧಿಪ ಎಂಬ ಹೆಸರುಳ್ಳದ್ದನ್ನಾಗಿ ತಿಳಿದುಕೋ .

**ಅತ್ಯುತ್ಕೃಷ್ಟಕೀರ್ತಿಮತ್ತ್ವಹೇತುನಾ ಉಚ್ಚೈಃಶ್ರವೋನಾಮಾನಮಮೃತೋ-ದ್ಭವಂ ಕ್ಷೀರಸಮುದ್ರಜಾತೋಚ್ಚೈ ಶ್ರವಃಸ್ಥಂ ವಿದ್ಧಿ । 'ತದೈರಂ ಮದೀಯಂ ಸರಃ' ಇತಿ ಮುಕ್ತಿಸ್ಥಸರಸೋ ಲಕ್ಷ್ಮ್ಯಾತ್ಮಕತ್ವೋಕ್ತೇಃ ಐರಂ ಶ್ರೀಃ ತಾಮವತೀತಿ ಐರಾವತ-ನಾಮಾನಂ ಇಂದ್ರವಾಹನಸ್ಥಂ ವಿದ್ಧಿ । ನರೇಶ್ವರತ್ವ ಹೇತುನಾ ನರಾಧಿಪನಾಮಾನಂ ಚಕ್ರವರ್ತ್ಯಾದಿಸ್ಥಂ ವಿದ್ಧಿ ॥ 27 ॥**

**ಅನುವಾದ– ಅಮೃತೋದ್ಭವಂ ಉಚ್ಚೈಃಶ್ರವಸಂ=** ಕ್ಷೀರಸಮುದ್ರದಿಂದ ಉದ್ಭವಿಸಿದ ಉಚ್ಚೈಃಶ್ರವಸ್ ಎಂಬ ಕುದುರೆಯಲ್ಲಿರುವ ಈ ವಿಭೂತಿರೂಪವನ್ನು **'ಉಚ್ಚೈಃ ಶ್ರವಃ ಯಸ್ಯಸಃ-** ಅತ್ಯುತ್ಕೃಷ್ಟವಾದ ಕೀರ್ತಿಯುಳ್ಳದ್ದಾದುದರಿಂದ 'ಉಚ್ಚೈಃಶ್ರವಸ್' ಎಂಬ ಹೆಸರುಳ್ಳದ್ದನ್ನಾಗಿ ತಿಳಿದುಕೋ. **'ತದೈರಂ ಮದೀಯಂ ಸರಃ'** ಶ್ವೇತದ್ವೀಪವೆಂಬ ವಿಷ್ಣುಧಾಮದಲ್ಲಿ ಲಕ್ಷ್ಮ್ಯಾತ್ಮಕವಾದ ಸುಖಕರವಾದ ಸರೋವರವಿದೆ ಎಂದು ನಿರೂಪಿಸುವ ಮೂಲಕ ಈ ಐರಸರೋವರ ಲಕ್ಷ್ಮೀಸ್ವರೂಪವೆಂದು ಹೇಳಲಾಗಿರುವುದರಿಂದ ಐರ= ಲಕ್ಷ್ಮೀದೇವಿ. **ಐರಂ ಅವತಿ=** ಲಕ್ಷ್ಮೀದೇವಿಯನ್ನು ರಕ್ಷಿಸುತ್ತಾನೆ– ಎಂಬ ವ್ಯುತ್ಪತ್ತಿಯಂತೆ, ಲಕ್ಷ್ಮೀದೇವಿಯ ರಕ್ಷಕನಾದುದರಿಂದ ಇಂದ್ರನ ವಾಹನವಾದ ಐರಾವತದಲ್ಲಿರುವ ಪರಮಾತ್ಮನ ವಿಭೂತಿ ರೂಪವನ್ನು, **'ಐರಾವತ'** ಎಂಬ ಹೆಸರುಳ್ಳದ್ದನ್ನಾಗಿ ತಿಳಿದುಕೋ. ಚಕ್ರವರ್ತಿಗಳೇ ಮೊದಲಾದ ನರಾಧಿಪರಲ್ಲಿರುವ ಪರಮಾತ್ಮನ ವಿಭೂತಿರೂಪವನ್ನು ನರರಿಗೆ ಸ್ವಾಮಿ (ಅಧಿಪತಿ) ಆಗಿರುವುದರಿಂದ ನರಾಧಿಪ ಎಂಬ ಹೆಸರುಳ್ಳದ್ದನ್ನಾಗಿ ತಿಳಿದುಕೋ. ॥ 27 ॥

**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥ 28 ॥**

**ಅರ್ಥ–** ನಾನು ಆಯುಧಗಳ ಮಧ್ಯೆ ವಜ್ರಾಯುಧದಲ್ಲಿದ್ದು ಅದಕ್ಕೆ ಸುದರ್ಶನ ಚಕ್ರವನ್ನು ಹೊರತುಪಡಿಸಿ ಇತರ ಆಯುಧಗಳಿಗಿಂತ ಶ್ರೇಷ್ಠತೆಯನ್ನು ತಂದುಕೊಡುತ್ತ ವಜ್ರನಾಮಕನಾಗಿರುವೆನು. ಹಸುಗಳ ಮಧ್ಯೆ ಕಾಮಧೇನುವಿನಲ್ಲಿದ್ದು ಅವಳಿಗೆ ಇತರ ಹಸುಗಳಿಗಿಂತ ವಿಶಿಷ್ಟತೆಯನ್ನು ಅನುಗ್ರಹಿಸುತ್ತಾ **'ಕಾಮಧುಕ್'** ಎಂಬ ಹೆಸರುಳ್ಳವನಾಗಿರುವೆನು. ಜೀವಿಗಳ ಜನ್ಮಕ್ಕೆ ಪ್ರಮುಖಕಾರಣನಾದ ಕಂದರ್ಪ (ಮನ್ಮಥ)ನಲ್ಲಿದ್ದು ನಾನು ಕಂದರ್ಪನಾಮಕನೆನಿಸಿರುವೆನು. ಸರ್ಪಗಳ ಮಧ್ಯೆ ವಾಸುಕಿಯಲ್ಲಿದ್ದು ಅವನಿಗೆ ಇತರ ಸರ್ಪಗಳಿಗಿಂತ

ಶ್ರೇಷ್ಠತೆಯನ್ನು ತಂದುಕೊಡುತ್ತಿರುವ 'ವಾಸುಕಿ' ಎಂಬ ಹೆಸರುಳ್ಳ ವಿಭೂತಿರೂಪನು ನಾನಾಗಿರುವೆನು.

**ಸರ್ವದೋಷವರ್ಜಿತತ್ವಾದರಿಭಿರ್ವರ್ಜನಾದ್ವಾ ವಜ್ರನಾಮಾ ಇಂದ್ರಾ-ಯುಧಸ್ಥಃ । ಕಾಮಿತಾರ್ಥದೋಗ್ಧೃತ್ವಾತ್ ಕಾಮಧುಜ್‌ನಾಮಾ ಕಾಮಧೇನು-ಸ್ಥಃ । ಕಂ ಸುಖಂ ತಸ್ಯ ದರಾಃ ಪ್ರಭೇದಾಃ ತಾನ್ ಪಿಬತ್ಯನುಭವತೀತಿ ಕಂದರ್ಪನಾಮಾ ಪ್ರಕೃಷ್ಟಜನನಕಾರಣಮನ್ಮಥಸ್ಥಃ । ಸರ್ಪಾಣಾಮೇಕಶಿರಸಾಂ । ವಾಸಸ್ಯ ಕಂ ವಾಸಕಮ್ ಅತಿಶಯಾರ್ಥ ಉಕಾರಃ ವಾಸುಕಃ ತದ್‌ದಾತೃತ್ವೇನ ತದ್ವಾನ್ ವಾಸುಕಿಃ । ಮತ್ವರ್ಥಕ ಇಕಾರಪ್ರತ್ಯಯಃ । 'ವಾಸುಕಿರ್ವಾಸಸುಖದಃ' ಇತಿ ನಿರುಕ್ತೇಃ ॥ 28 ॥**

**ಅನುವಾದ**– ಇಂದ್ರನ ವಜ್ರಾಯುಧದಲ್ಲಿರುವ ಪರಮಾತ್ಮನ ವಿಭೂತಿರೂಪವು **ಸರ್ವ-ದೋಷವರ್ಜಿತತ್ವಾತ್**= ಎಲ್ಲಾ ದೋಷಗಳಿಂದ ದೂರವಾಗಿರುವುದರಿಂದ ಅಥವಾ ತನ್ನ ಶತ್ರುಗಳಿಂದ **ವರ್ಜಿತತ್ವಾತ್**= ದೂರದಲ್ಲಿರುವುದರಿಂದ '**ವಜ್ರ**' ಎಂಬ ಹೆಸರುಳ್ಳದ್ದಾಗಿದೆ. ಕಾಮಧೇನುವಿನಲ್ಲಿರುವ ಪರಮಾತ್ಮನ ವಿಭೂತಿರೂಪವು ತನ್ನ ಭಕ್ತರ ಕಾಮನೆಗಳನ್ನೆಲ್ಲಾ ಉದಾರವಾಗಿ ಪೂರೈಸುತ್ತಿರುವುದರಿಂದ '**ಕಾಮಧುಕ್**' ಎಂಬ ಹೆಸರುಳ್ಳದ್ದಾಗಿದೆ. ಜೀವಿಗಳ ಜನ್ಮಕ್ಕೆ ಪ್ರಕೃಷ್ಟಕಾರಣನೆನಿಸಿರುವ ಮನ್ಮಥನಲ್ಲಿರುವ ಪರಮಾತ್ಮನ ವಿಭೂತಿರೂಪವು **ಕಸ್ಯ** = ಸುಖದ, **ದರಾನ್**= ನಾನಾ ಪ್ರಭೇದಗಳನ್ನು **ಪಿಬತಿ**= ಅನುಭವಿಸುತ್ತಿದೆ ಎಂಬ ಅರ್ಥದಲ್ಲಿ **ಕಂ (ಸುಖದ) + ದರ** (ಪ್ರಭೇದಗಳನ್ನು) (**ಪಿಬತಿ** = ಅನುಭವಿಸುತ್ತದೆ)= **ಕಂದರ್ಪ** ಎಂಬ ಹೆಸರುಳ್ಳದ್ದಾಗಿದೆ. **ಸರ್ಪಾಣಾಂ** = ಒಂದೇ ತಲೆಯುಳ್ಳ ನಾಗಗಳ ಮಧ್ಯೆ. **ವಾಸಸ್ಯ ಕಂ= ವಾಸಕಂ**– ಅಂದರೆ ವಾಸಕ್ಕೆ ಸಂಬಂಧಿಸಿದ ಸುಖ. **ವಾಸ** ಎಂಬಲ್ಲಿರುವ ಅಕಾರಕ್ಕೆ ಅತಿಶಯಾರ್ಥದಲ್ಲಿ ಉಕಾರ ಬಂದು **ವಾಸುಕ** ಎಂದಾಗಿದೆ. ಇಂತಹ ವಾಸಕ್ಕೆ ಸಂಬಂಧಿಸಿದ ಸುಖವನ್ನು (ವಾಸುಕವನ್ನು) ಭಕ್ತರಿಗೆ ಅನುಗ್ರಹಿಸುತ್ತಿರುವುದರಿಂದ, ಅಂತಹ ವಾಸುಕ ಉಳ್ಳವನು ಪರಮಾತ್ಮ. ಹಾಗಾಗಿ '**ವಾಸುಕ** ' ಶಬ್ದಕ್ಕೆ, **ಮತುಪ್** ಪ್ರತ್ಯಯದ ಅರ್ಥವಾದ 'ಅದು ಉಳ್ಳವನು' (ವಾಸುಕ ಉಳ್ಳವನು) ಎಂಬೀ ಅರ್ಥದಲ್ಲಿ 'ಇ' ಎಂಬ ಪ್ರತ್ಯಯಸೇರಿದಾಗ **ವಾಸುಕ + ಇ = ವಾಸುಕಿ** ಎಂದಾಗಿದೆ. ಆದುದರಿಂದ ಪರಮಾತ್ಮನ ಈ ವಿಭೂತಿರೂಪವು ಭಕ್ತರಿಗೆ ವಾಸದ ಸುಖವನ್ನು ಅನುಗ್ರಹಿಸುತ್ತಿರುವುದರಿಂದ ವಾಸುಕಿ ಎಂಬ ಹೆಸರುಳ್ಳದ್ದಾಗಿದೆ '**ವಾಸುಕಿರ್ವಾಸ ಸುಖದಃ**' (ವಾಸದ ಸುಖವನ್ನು) ಕೊಡುವವನು ಎಂಬ ನಿರ್ವಚನವು ಪ್ರಮಾಣಸಿದ್ಧವಾಗಿರುವುದರಿಂದ ಪರಮಾತ್ಮನಿಗೆ ಅನ್ವಯಿಸುವಂತೆ ವಾಸುಕಿಶಬ್ದಕ್ಕೆ ಈ ಅರ್ಥವು ಯುಕ್ತವೇ ಆಗಿದೆ. ॥ 28 ॥

**ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।**
**ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥ 29 ॥**

**ಅರ್ಥ–** ನಾಗಗಳ ಮಧ್ಯೆ ನಾನು ಅನಂತ (ಶೇಷ)ನಲ್ಲಿದ್ದು ಅವನಿಗೆ ಇತರ ನಾಗಗಳಿಗಿಂತ ಶ್ರೇಷ್ಠತೆಯನ್ನು ಅನುಗ್ರಹಿಸುತ್ತಾ, ಅನಂತ ಎಂಬ ಹೆಸರುಳ್ಳವನಾಗಿರುವೆನು. ಜಲಚರಗಳ ಮಧ್ಯೆ ಅವುಗಳ ಸ್ವಾಮಿಯಾದ ವರುಣದೇವನಲ್ಲಿರುವ ವರುಣ ಎಂಬ ಹೆಸರುಳ್ಳ ವಿಭೂತಿರೂಪನು ನಾನಾಗಿರುವೆನು. ಪಿತೃದೇವತೆಗಳ ಮಧ್ಯೆ ಅರ್ಯಮ ಎಂಬ ಪಿತೃದೇವತೆಯಲ್ಲಿದ್ದು ಆ ದೇವತೆಗೆ ಇತರ ಪಿತೃದೇವತೆಗಳಿಗಿಂತ ಶ್ರೇಷ್ಠತೆಯನ್ನು ತಂದುಕೊಡುತ್ತಿರುವ ನಾನು '**ಅರ್ಯಮಾ**' ಎಂಬ ಹೆಸರುಳ್ಳವನಾಗಿರುವೆನು. ಲೋಕವನ್ನು ನಿಯಂತ್ರಣ ಮಾಡುತ್ತಿರುವವರ ಮಧ್ಯ ನಾನು ಯಮದೇವನಲ್ಲಿದ್ದು ಅವನಿಗೆ ಇತರ ಲೋಕನಾಯಕರಿಗಿಂತ ಶ್ರೇಷ್ಠತೆಯನ್ನು ತಂದುಕೊಡುತ್ತಾ ಯಮ ಎಂಬ ಹೆಸರುಳ್ಳವನಾಗಿರುವೆನು.

**ನಾಗಾನಾಮನೇಕಶಿರಸಾಂ ದೇಶಕಾಲಗುಣಾನಂತ್ಯಹೇತುನಾಽನಂತನಾಮಾ ಶೇಷಗತಃ । ಯಾದಸಾಂ ಜಲಚರಾಣಾಂ ಉತ್ಕೃಷ್ಟಾನಂದದತ್ವಾದ್ವರುಣನಾಮಾ ವರುಣಸ್ಥಃ । 'ಣಶ್ಚ ನಿರ್ವೃತಿವಾಚಕಃ' ಇತ್ಯುಕ್ತೇಃ । ವರಶಬ್ದಸ್ಯ ಉಕಾರೋಽಂತಾ-ದೇಶಃ । ವೃಣೋತೀತಿ ವಾ ವರುಣಃ ವೃಞ ಉಣಪ್ರತ್ಯಯಃ । ಋ ಗತಾವಿತಿ ಧಾತೋರ್ಯಪ್ರತ್ಯಯೇ ಅರ್ಯಂ ಜ್ಞೇಯಂ ತನ್ಮಾತಿ ಜಾನಾತೀತ್ಯರ್ಯಮ-ನಾಮಾ ತನ್ನಾಮಕಪಿತೃಸ್ಥಃ । ಸಂಯಮತಾಂ ನಿಯಮನಂ ಕುರ್ವತಾಂ ಯಮಃ ನಿಯಮನಹೇತುನಾ ಯಮನಾಮಾ ಯಮಾಖ್ಯಸಾರಧರ್ಮಪ್ರದಃ (ಇತ್ಯರ್ಥಃ)। ॥ 29 ॥**

**ಅನುವಾದ– ನಾಗಾನಾಂ=** ಅನೇಕ ತಲೆಗಳುಳ್ಳ ಸರ್ಪಗಳ ಮಧ್ಯೆ. ಶೇಷದೇವರಲ್ಲಿರುವ ಪರಮಾತ್ಮನ ವಿಭೂತಿರೂಪವು ಎಲ್ಲಾ ದೇಶ ಹಾಗೂ ಕಾಲದಲ್ಲಿ ವ್ಯಾಪ್ತವಾಗಿದ್ದು ಗುಣಪರಿಪೂರ್ಣ ನೆನಿಸುವ ಮೂಲಕ ದೇಶತಃ ಕಾಲತಃ ಗುಣತಃ ಆನಂತ್ಯವುಳ್ಳದ್ದಾದುದರಿಂದ ಅನಂತ ಎಂಬ ಹೆಸರುಳ್ಳದ್ದಾಗಿದೆ. **ಯಾದಸಾಂ=** ನೀರಿನಲ್ಲಿ ವಾಸಿಸುವ ಜೀವಿಗಳಿಗೆ ಸಂಬಂಧಿಸಿದ '**ಣಶ್ಚ ನಿರ್ವೃತಿವಾಚಕಃ**'– 'ಣ'– ಎಂದೆನ್ನುವುದು ಸುಖವನ್ನು ಹೇಳುತ್ತಿದೆ– ಎಂಬ ಪ್ರಸಿದ್ಧಿ ಇರುವುದರಿಂದ 'ಣ' ಅಂದರೆ ಸುಖ. **ವರಃ ಣಃ ಯಸ್ಮಾತ್ಸ ವರುಣಃ** ಯಾರಿಂದಾಗಿ ಶ್ರೇಷ್ಠವಾದ ಮೋಕ್ಷಸುಖವು ಲಭ್ಯವೋ ಅವನು ವರುಣ– ವರಶಬ್ದದ ಕೊನೆಯಲ್ಲಿರುವ 'ಅ'ಕಾರಕ್ಕೆ 'ಉ'ಕಾರ ಬಂದು, ವರಣ ಎಂದೆನ್ನುವುದು ವರುಣ ಎಂದಾಗಿದೆ. ಹಾಗಾಗಿ

ವರುಣನಲ್ಲಿರುವ ಪರಮಾತ್ಮನ ವಿಭೂತಿರೂಪವು ಮೋಕ್ಷರೂಪದ ಉತ್ಕೃಷ್ಟ ಸುಖವನ್ನು ಅನುಗ್ರಹಿಸುತ್ತಿರುವುದರಿಂದ ವರುಣ ಎಂಬ ಹೆಸರುಳ್ಳದ್ದಾಗಿದೆ. ಅಥವಾ ಸ್ವೀಕರಿಸು ಎಂಭೀ ಅರ್ಥದಲ್ಲಿರುವ **ವೃ(ಞ್)** ಧಾತುವಿಗೆ, **ವೃಣೋತಿ=** ಸ್ವೀಕರಿಸುತ್ತಾನೆ ಎಂಬ ಅರ್ಥದಲ್ಲಿ **'ಉಣ'** ಪ್ರತ್ಯಯ ಸೇರಿದಾಗ **ವೃ+ ಉಣ= ವರ್ +ಉಣ = ವರುಣ** ಎಂಬ ಪದವು ನಿಷ್ಪನ್ನವಾಗಿದೆ. ಭಕ್ತರನ್ನು ಅನುಗ್ರಹಿಸುವುದಕ್ಕಾಗಿ ಸ್ವೀಕರಿಸುತ್ತಿರುವುದರಿಂದ ಈ ವಿಭೂತಿರೂಪವು ವರುಣ ಎಂಬ ಹೆಸರುಳ್ಳದ್ದಾಗಿದೆ ಎಂದಂತಾಯಿತು. ಗತಿ(ಜ್ಞಾನ) ಎಂಬ ಅರ್ಥದಲ್ಲಿರುವ **'ಋ'** ಎಂಬ ಧಾತುವಿಗೆ **'ಯ'** ಎಂಬ ಪ್ರತ್ಯಯವು ಸೇರಿದಾಗ **ಋ +ಯ = ಅರ್ +ಯ=** ಅರ್ಯ ಎಂಬ ಪದದ ನಿಷ್ಪತ್ತಿ. **ಅರ್ಯ=** ಜ್ಞಾನಕ್ಕೆ ವಿಷಯವಾದುದು. **ಅರ್ಯಂ ಮಾತಿ=** ಜ್ಞಾನ ವಿಷಯವನ್ನು ಅರಿತುಕೊಂಡಿದ್ದಾನೆ ಎಂಬ ವ್ಯುತ್ಪತ್ತಿಯಂತೆ **ಅರ್ಯ+ಮಾ=** ಅರ್ಯಮ ಶಬ್ದದ ನಿಷ್ಪತ್ತಿ. ಹಾಗಾಗಿ ಜ್ಞಾನವಿಷಯವೆನಿಸಲು ಅರ್ಹವಾದ ಎಲ್ಲವನ್ನು ತಿಳಿದಿರುವುದರಿಂದ (ಸರ್ವಜ್ಞನಾಗಿರುವುದರಿಂದ) ಅರ್ಯಮಾ ಎಂಬ ಪಿತೃದೇವತೆಯಲ್ಲಿರುವ ಪರಮಾತ್ಮನ ರೂಪವು ಅರ್ಯಮಾ ಎಂಬ ಹೆಸರುಳ್ಳದ್ದಾಗಿದೆ. **ಸಂಯಮತಾಂ=** ನಿಯಮನ ಮಾಡುವವರಿಗೆ ಅವರಲ್ಲಿರುವ ಸಾರಭೂತಧರ್ಮವೆನಿಸಿರುವ ನಿಯಮನ ಶಕ್ತಿಯನ್ನು ಕೊಡುತ್ತಾ ಎಲ್ಲವನ್ನು ಹತೋಟಿಯಲ್ಲಿ ಇಟ್ಟುಕೊಂಡಿರುವುದರಿಂದ ಯಮನಲ್ಲಿರುವ ಈ ವಿಭೂತಿರೂಪವು **'ಯಮ'** ಎಂಬ ಹೆಸರುಳ್ಳದ್ದಾಗಿದೆ ಎಂದು ಅಭಿಪ್ರಾಯ. ॥ 29 ॥

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇಂದ್ರೋऽಹಂ ವೈನತೇಯಶ್ಚ ಪಕ್ಷಿಣಾಮ್ ॥ 30 ॥**

**ಅರ್ಥ–** ದೈತ್ಯರ ಮಧ್ಯೆ ನಾನು ಪ್ರಹ್ಲಾದನಲ್ಲಿದ್ದು ಅವನಿಗೆ ಇತರ ದೈತ್ಯರಿಗಿಂತ ಶ್ರೇಷ್ಠತೆಯನ್ನು ತಂದುಕೊಡುತ್ತಿರುವ ಪ್ರಹ್ಲಾದನಾಮಕ ವಿಭೂತಿರೂಪನಾಗಿರುವೆನು. ಬಂಧನವನ್ನುಂಟು ಮಾಡುತ್ತಿರುವ ವಸ್ತುಗಳ ಮಧ್ಯೆ ಕಾಲದಲ್ಲಿದ್ದು, ಅದಕ್ಕೆ ಇತರ ಬಂಧಕ ವಸ್ತುಗಳಿಗಿಂತ ಶ್ರೇಷ್ಠತೆಯನ್ನು ತಂದು ಕೊಡುತ್ತಿರುವ ಕಾಲನಾಮಕನು ನಾನಾಗಿರುವೆನು. ಮೃಗಗಳ ಮಧ್ಯೆ ಮೃಗರಾಜನೆನಿಸಿರುವ ಸಿಂಹದಲ್ಲಿದ್ದು ಅದಕ್ಕೆ ಶ್ರೇಷ್ಠತೆಯನ್ನು ತಂದುಕೊಡುತ್ತಿರುವ ಮೃಗೇಂದ್ರನಾಮಕ ವಿಭೂತಿರೂಪನು ನಾನಾಗಿರುವೆನು. ಪಕ್ಷಿಗಳ ಮಧ್ಯೆ ವೈನತೇಯ (ಗರುಡ)ನಲ್ಲಿದ್ದು ಅವನಿಗೆ ಇತರ ಪಕ್ಷಿಗಳಿಗಿಂತ ಉತ್ತಮತ್ವವನ್ನು ಅನುಗ್ರಹಿಸುತ್ತಿರುವ ನಾನು ವೈನತೇಯ ಎಂಬ ಹೆಸರುಳ್ಳವನು.

**ಪ್ರಕೃಷ್ಟಃ ಹ್ಲಾದಃ ಸುಖಂ ಯಸ್ಯೇತಿ ಪ್ರಹ್ಲಾದನಾಮಾ ತನ್ನಾಮಕದೈತ್ಯಸ್ಥಃ । ಕಲಯತಾಮಾಕಲಯತಾಂ ಬಂಧನಾದಿ ಕುರ್ವತಾಂ ವಾ ಕಾಲಃ । ಕಲ ಜ್ಞಾನ ಇತಿ**

**ಧಾತೋಃ ಸರ್ವಮಾಕಲಯತೀತಿ ಕಾಲನಾಮಾ ಕಾಲಸ್ಥಃ । ಸ್ವಾತ್ಮಾನಂ ಮೃಗಯಂತ್ಯನ್ವೇಷಯಂತೀತಿ ಮೃಗಾಃ ಭಕ್ತಾಸ್ತದಧಿಪತಿತ್ವಾತ್ ಮೃಗೇಂದ್ರನಾಮಾ ಮೃಗೇಂದ್ರಸ್ಥಃ । ವಿಶೇಷೇಣ ನತಾಃ ವಿನತಾಸ್ತೇಷಾಂ ಆಶ್ರಯತಯಾ ತತ್ಸಂಬಂಧೀ ವೈನತೇಯಃ । 'ವೈನತೇಯೋ ನತಾಸ್ಪದಃ' ಇತಿ ನಿರ್ವಚನಾತ್ । ಸಂಬಂಧೇ ಢಕ್ ॥ 30 ॥**

**ಅನುವಾದ–** ಪ್ರಹ್ಲಾದನೆಂಬ ದೈತ್ಯನಲ್ಲಿರುವ ವಿಭೂತಿರೂಪವು **ಪ್ರಕೃಷ್ಟಃ ಹ್ಲಾದಃ ಯಸ್ಯ ಸಃ**– ಯಾರ ಸುಖವು ಉತ್ಕೃಷ್ಟವಾಗಿದಯೋ ಅವನು– ಎಂಬ ವ್ಯುತ್ಪತ್ತಿಯಂತೆ ಅತ್ಯುತ್ತಮ ಸುಖ ರೂಪವಾಗಿರುವುದರಿಂದ ಪ್ರಹ್ಲಾದನಾಮಕವೆನಿಸಿದೆ. **ಕಲಯತಾಂ**= ಒಳ್ಳೆಯ ಅರಿವುಳ್ಳವರ ಮಧ್ಯೆ ಅಥವಾ ಬಂಧನಾದಿಗಳನ್ನುಂಟು ಮಾಡುವ ವಸ್ತುಗಳ ಮಧ್ಯೆ. ಜ್ಞಾನ ಎಂಬ ಅರ್ಥದಲ್ಲಿರುವ ಕಲಧಾತುವಿನಿಂದ ಕಾಲಶಬ್ದವು ನಿಷ್ಪನ್ನವಾಗಿದೆ. ಹಾಗಾಗಿ ಕಾಲದಲ್ಲಿರುವ ಪರಮಾತ್ಮನ ವಿಭೂತಿರೂಪವು ಎಲ್ಲವನ್ನು ತಿಳಿದಿದೆ (ಸರ್ವಜ್ಞನೆನಿಸಿದೆ) ಎಂಬ ಅಭಿಪ್ರಾಯದಿಂದ **ಕಾಲ** ಎಂಬ ಹೆಸರುಳ್ಳದ್ದಾಗಿದೆ. **ಆತ್ಮಾನಂ ಮೃಗಯಂತಿ**= ಅನ್ವೇಷಯಂತಿ ಪರಮಾತ್ಮ ನನ್ನು ಹುಡುಕುತ್ತಿರುತ್ತಾರೆ– ಎಂಬ ವ್ಯುತ್ಪತ್ತಿಯಂತೆ, ಪರಮಾತ್ಮನ ಹುಡುಕಾಟದಲ್ಲಿ ತೊಡಗಿರುವ ಭಕ್ತರನ್ನು ಮೃಗ ಎಂಬ ಪದವು ಹೇಳುತ್ತಿದೆ. ಇಂತಹ ಭಕ್ತರಿಗೆ ಅಧಿಪತಿಯಾಗಿರುವುದರಿಂದ ಸಿಂಹದಲ್ಲಿರುವ ವಿಭೂತಿರೂಪವು ಮೃಗೇಂದ್ರ ನಾಮಕವೆನಿಸಿದೆ. **ವಿಶೇಷೇಣ ನತಾಃ**= ಪರಮಾತ್ಮ ನನ್ನು ವಿಶೇಷವಾಗಿ ನಮಿಸುತ್ತಿರುವ ಭಕ್ತರು **'ವಿನತ'** ಎಂದೆನಿಸಿರುವರು. ಅವರಿಗೆ ಪರಮಾತ್ಮನು ಆಶ್ರಯನಾಗಿದ್ದು ಸಂಬಂಧಿಯೆನಿಸಿರುವುದರಿಂದ, ವಿನತರ ಸಂಬಂಧಿ ಎಂಬ ಅರ್ಥದಲ್ಲಿ **'ಢಕ್'** ಪ್ರತ್ಯಯ ಸೇರಿ ನಿಷ್ಪನ್ನವಾದ ವೈನತೇಯ ಎಂಬ ಪದವು ವಿನತರಿಗೆ ಆಶ್ರಯ-ನಾದುದರಿಂದ ಪರಮಾತ್ಮನಾಮವೆನಿಸಿದೆ. **ವೈನತೇಯೋ ನತಾಸ್ಪದಃ**– ನಮಿಸುವವರಿಗೆ ಆಶ್ರಯ ನೆನಿಸಿರುವವನು ವೈನತೇಯನೆನಿಸಿರುವನು ಎಂಬೀ ನಿರ್ವಚನವು ಪ್ರಮಾಣಸಿದ್ಧವಾಗಿರು ವುದರಿಂದ (ಸಾಮಾನ್ಯವಾಗಿ **ಅಪತ್ಯ** = ಸಂತತಿ ಎಂಬ ಅರ್ಥದಲ್ಲಿ ಪ್ರಸಿದ್ಧವಾಗಿದ್ದಾಗಿದ್ದರೂ) ಪ್ರಕೃತ ಸಂಬಂಧ ಎಂಬ ಅರ್ಥದಲ್ಲಿ **'ಢಕ್'** ಪ್ರತ್ಯಯ ಬಂದಿರುವುದು ಯುಕ್ತವೇ ಆಗಿದೆ. ॥ 30 ॥

**ವಿವರಣೆ–** ಪಾಣಿನಿ ವ್ಯಾಕರಣದಂತೆ ಪ್ರತ್ಯಯದ ಆದಿಯಲ್ಲಿರುವ ಢಕಾರಕ್ಕೆ **'ಏಯ್'** ಎಂಬ ಆದೇಶಬರುತ್ತದೆ. ಹಾಗಾಗಿ ವಿನತ + ಢ(ಕ್) ಎಂದಿರುವಾಗ 'ಢ್' ಎಂಬಿ ಅಂಶಕ್ಕೆ **ಏಯ್** ಬಂದಾಗ **ವಿನತ + ಏಯ್ + ಅ** = **ವಿನತೇಯ** = **ವೈನತೇಯ** ಎಂಬ ಪದವು ನಿಷ್ಪನ್ನವಾಗಿದೆ.

**ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥ 31 ॥**

**ಅರ್ಥ–** ಶುದ್ಧಿಯನ್ನುಂಟುಮಾಡುವ ವಸ್ತುಗಳ ಮಧ್ಯೆ ಅಥವಾ ವೇಗವುಳ್ಳ ವಸ್ತುಗಳ ಮಧ್ಯೆ. ನಾನು ಪವನ (ವಾಯು)ನಲ್ಲಿದ್ದು ಅದಕ್ಕೆ ಇತರ ಅಂತಹ ವಸ್ತುಗಳಿಗಿಂತ ವಿಶಿಷ್ಟತೆಯನ್ನು ತಂದು ಕೊಡುತ್ತಾ ಪವನ ಎಂಬ ಹೆಸರುಳ್ಳ ವಿಭೂತಿ ರೂಪನು ಆಗಿರುವೆನು. ಶಸ್ತ್ರಧಾರಿಗಳ ಮಧ್ಯೆ ರಾಮನೆಂಬ ಹೆಸರುಳ್ಳ ಪ್ರತ್ಯಕ್ಷ ವಿಭೂತಿರೂಪನು ನಾನಾಗಿರುವೆನು. ಮೀನುಗಳ ಮಧ್ಯೆ ಮಕರ (ಮೊಸಳೆ)ದಲ್ಲಿದ್ದು ಅದಕ್ಕೆ ಇತರ ಮೀನುಗಳಿಗಿಂತ ಶ್ರೇಷ್ಠತೆಯನ್ನು ಅನುಗ್ರಹಿಸುತ್ತಿರುವ ಮಕರ ನಾಮಕ ವಿಭೂತಿರೂಪನು ನಾನಾಗಿರುವೆನು . ನದಿಗಳ ಮಧ್ಯೆ ಜಾಹ್ನವಿ (ಗಂಗಾನದಿ)ಯಲ್ಲಿದ್ದು ಅದಕ್ಕೆ ಶ್ರೇಷ್ಠತೆಯನ್ನು ತಂದು ಕೊಂಡುತ್ತಾ 'ಜಾಹ್ನವಿ' ಎಂಬ ಹೆಸರುಳ್ಳವನು ನಾನಾಗಿದ್ದೇನೆ.

**ಪವತಾಂ ಶೋಧಕಾನಾಂ ವೇಗವತಾಂ ವಾ । ಪಾಂತೀತಿ ಪಾಃ 'ಪಾ ರಕ್ಷಣೇ' ಕ್ವಿಪ್ । ಪಾಭಿಃ ಪಾಲಕೈಃ ವನನೀಯತ್ವಾದ್‌ಭಜನೀಯತ್ವಾತ್ ಪವನಃ ಪವನಸ್ಥಃ । ಲೋಕಂ ರಮಯತೀತಿ ರಾಮಃ । ಲೋಕೋಽಸ್ಮಾದ್ರಮತ ಇತಿ ವಾ ರಾಮಃ । ರಮೇರ್ಘಞ್ । ಝಷಾಣಾಂ ಮೀನಾನಾಮ್ । ಮಾಙ್‌ಮಾನ ಇತ್ಯತೋ ಮಾಶಬ್ದೇನ ಜ್ಞಾನಂ ತಸ್ಯಾಲ್ಪತಾಜ್ಞಾಪನಾಯ ಹ್ರಸ್ವತಯಾ ನಿರ್ದೇಶಃ । 'ಊನಾರ್ಥೇ ಚೋನಮಿಷ್ಯತೇ' ಇತ್ಯುಕ್ತೇಃ । ಲೋಕಸ್ಯ ಮಂ ಅಲ್ಪಜ್ಞಾನಂ ಕರೋತೀತಿ ಮಕರನಾಮಾ ಮಕರಾಖ್ಯಜಂತುಗತಃ । ಅಸಾರತಯಾ ಸಂಸಾರಂ ಜಹತಸ್ತ್ಯಜತೋಽವತಿ ರಕ್ಷತೀತಿ ಜಾಹ್ನವೀನಾಮಾ ಗಂಗಾಸ್ಥಃ ॥ 31 ॥**

**ಅನುವಾದ– ಪವತಾಂ**= ಶುದ್ಧಿಯನ್ನುಂಟು ಮಾಡುವ ವಸ್ತುಗಳ ಮಧ್ಯೆ ಅಥವಾ ವೇಗವುಳ್ಳ ವಸ್ತುಗಳಮಧ್ಯೆ. ರಕ್ಷಣೆ ಎಂಬ ಅರ್ಥದಲ್ಲಿರುವ 'ಪಾ' ಧಾತುವಿಗೆ ರಕ್ಷಿಸುತಿದ್ದಾನೆ ಎಂಬ ಅರ್ಥದಲ್ಲಿ **ಕ್ವಿಪ್** ಸೇರಿದಾಗ 'ಪಾ' ಎಂಬ ಪದದ ನಿಷ್ಪತ್ತಿ. ಹಾಗಾಗಿ ಪವನನಲ್ಲಿರುವ ವಿಭೂತಿ ರೂಪವು **ಪಾಭಿಃ** = ರಕ್ಷಕರಿಂದ ವನನೀಯ (ಭಜಿಸಲು ಅರ್ಹ)ವಾಗಿರುವುದರಿಂದ ಪವನ ಎಂಬ ಹೆಸರುಳ್ಳದ್ದಾಗಿದೆ. ಸಂತೋಷ ಎಂಬ ಅರ್ಥದಲ್ಲಿರುವ '**ರಮ್**' ಧಾತುವಿಗೆ **ಘಞ್** ಪ್ರತ್ಯಯ ಸೇರಿದಾಗ **ರಮ್+ ಘಞ್ ರಾಮ್ + ಘಞ್ = ರಾಮ್ + ಅ** = ರಾಮ ಎಂಬ ಪದದ ನಿಷ್ಪತ್ತಿ. ಭಕ್ತ ಲೋಕವನ್ನು ಸಂತೋಷಗೊಳಿಸುತ್ತಾನೆ. ಇವನಿಂದಾಗಿ ಭಕ್ತ ಲೋಕವು ಸಂತೋಷಗೊಳ್ಳುತ್ತಿದೆ ಎಂಬ ಕಾರಣದಿಂದ ಈ ಪ್ರತ್ಯಕ್ಷ ವಿಭೂತಿರೂಪವು ರಾಮ ಎಂಬ ಹೆಸರುಳ್ಳದ್ದಾಗಿದೆ. **ಝಷಾಣಾಂ** = ಮೀನುಗಳ ಮಧ್ಯೆ ಜ್ಞಾನ ಎಂಬ ಅರ್ಥದಲ್ಲಿರುವ '**ಮಾ**'

ಧಾತುವಿನಿಂದ ನಿಷ್ಪನ್ನವಾದ ಪದ 'ಮಾ' ಎಂದೆನ್ನುವುದು. ಹಾಗಾಗಿ ಅದು ಜ್ಞಾನ ಎಂಬ ಅರ್ಥದಲ್ಲಿದೆ. ಊನಾರ್ಥೇ ಚೋನಮಿಷ್ಯತೇ- ಅಲ್ಪತೆಯನ್ನು ಸೂಚಿಸುವುದಕ್ಕಾಗಿ ದೀರ್ಘಾಕ್ಷರವಿರಬೇಕಾದಲ್ಲಿ ಹ್ರಸ್ವವು ಬಳಸಲ್ಪಡುತ್ತಿದೆ- ಎಂದು ಪ್ರಸಿದ್ಧವಾಗಿರುವಂತೆ '**ಅಲ್ಪ**' ಎಂಬೀ ಅರ್ಥದಲ್ಲಿ ಆ ಕಾರವು ಹ್ರಸ್ವವೆನಿಸಿ 'ಮ' ಎಂದಾಗುತ್ತದೆ. ಆದುದರಿಂದ **ಮಂ** = (ತನ್ನ ವಿಷಯದಲ್ಲಿ ಅಲ್ಪಜ್ಞಾನವನ್ನು) **ಕರೋತಿ**= ಉಂಟು ಮಾಡುತ್ತಿದೆ ಎಂಬೀ ಕಾರಣದಿಂದ ಮೊಸಳೆಯಲ್ಲಿರುವ ವಿಭೂತಿರೂಪವು ಮಕರನಾಮಕವೆನಿಸಿದೆ. ಸಂಸಾರವು ತನ್ನ ವಿಷಯದಲ್ಲಿ ಅಸಾರ-ವಾಗಿರುವುದರಿಂದ, ಅದನ್ನು **ಜಹತಃ** = ತ್ಯಜಿಸುವವರನ್ನು **ಅವತಿ** = ರಕ್ಷಿಸುತ್ತಾನೆ (**ಜಾಹ್ನ + ಅವ= ಜಾಹ್ನವೀ**) ಎಂಬೀ ಕಾರಣದಿಂದ ಗಂಗೆಯಲ್ಲಿರುವ ವಿಭೂತಿರೂಪವು ಜಾಹ್ನವೀ ಎಂಬ ಹೆಸರುಳ್ಳದ್ದಾಗಿದೆ. ॥ 31 ॥

**ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥ 32 ॥**

**ಅರ್ಥ**– ಅರ್ಜುನನೇ ! ಸೃಷ್ಟಿಸಲ್ಪಡುವ ವಸ್ತುಗಳ ಸೃಷ್ಟಿ, ಸ್ಥಿತಿ ಹಾಗೂ ಲಯಗಳಿಗೆ ನಾನೇ ಕಾರಣ ನೆನಿಸಿರುವೆನು. ವಿದ್ಯೆಗಳ ಮಧ್ಯೆ ಅಧ್ಯಾತ್ಮವಿದ್ಯೆಯಲ್ಲಿದ್ದು ಅದಕ್ಕೆ ಇತರ ವಿದ್ಯೆಗಳಿಗಿಂತ ಶ್ರೇಷ್ಠತೆಯನ್ನು ಅನುಗ್ರಹಿಸುತ್ತಾ ನಾನು ಅಧ್ಯಾತ್ಮ ವಿದ್ಯಾ ಎಂಬ ಹೆಸರುಳ್ಳವನಾಗಿರುವೆನು. ವಾದ, ಜಲ್ಪ ಹಾಗೂ ವಿತಂಡಾ ಎಂದು ಮೂರು ವಿಧವಾದ ಶಾಸ್ತ್ರಾರ್ಥಚರ್ಚೆ(ಕಥಾ)ಯಲ್ಲಿ ತೊಡಗಿರುವವರಲ್ಲಿರುವ ವಾದರೂಪ ಚರ್ಚೆಯಲ್ಲಿದ್ದು ಅದಕ್ಕೆ ಇತರ ಎರಡು ವಿಧವಾದ ಚರ್ಚೆಗಳಿಗಿಂತ ಶ್ರೇಷ್ಠತೆಯನ್ನು ತಂದುಕೊಡುತ್ತಾ ನಾನು ವಾದ ಎಂಬ ಹೆಸರುಳ್ಳವನಾಗಿರುವೆನು.

**ಸೃಜ್ಯಂತ ಇತಿ ಸರ್ಗಾಃ ಭೂತಾನಿ ತೇಷಾಂ ಸೃಷ್ಟಿಸ್ಥಿತಿಲಯಹೇತುರಹ-ಮೇವೇತ್ಯರ್ಥಃ । ಆತ್ಮನೋ ಜೀವಾನಧಿಕೃತ್ಯ ಪತಿತ್ವೇನ ವರ್ತತೇ ಜ್ಞಪ್ತಿಸ್ವರೂಪ-ಶ್ಚೇತ್ಯಧ್ಯಾತ್ಮವಿದ್ಯಾನಾಮಾ ಬ್ರಹ್ಮವಿದ್ಯಾಸ್ಥಃ । ಪ್ರವದತಾಂ ಜಲ್ಪವಿತಂಡಾದಿಕಥಾಂ ಕುರ್ವತಾಂ ವಾಚ್ಯತ್ವಹೇತುನಾ ವಾದನಾಮಾ ವಾದಕಥಾಸ್ಥಃ ॥ 32 ॥**

**ಅನುವಾದ– ಸೃಜ್ಯಂತೇ ಇತಿ ಸರ್ಗಾಃ = ಸರ್ಗಾಃ** ಎಂದರೆ ಸೃಷ್ಟಿಸಲ್ಪಡುತ್ತಿರುವ ವಸ್ತುಗಳು ಎಂದರ್ಥ. ಅವುಗಳಿಗೆ '**ಆದಿಃ ಮಧ್ಯಂ ಅಂತಶ್ಚ ಅಹಮೇವ** = ನಾನೇ ಸೃಷ್ಟಿ, ಸ್ಥಿತಿ ಹಾಗೂ ಲಯಗಳ ಕಾರಣನೆನಿಸಿರುವೆನು. **ಆತ್ಮನಃ ಅಧಿಕೃತ್ಯ ವರ್ತತೇ ಇತಿ ಅಧ್ಯಾತ್ಮಾ** ಎಂಬೀ ವ್ಯುತ್ಪತ್ತಿಯಂತೆ ಜೀವರಿಗೆ ಪತಿ(ಸ್ವಾಮಿ)ಯಾಗಿ ಇರುವುದರಿಂದ ಪರಮಾತ್ಮನು '**ಅಧ್ಯಾತ್ಮಾ**' ಎನಿಸಿರುವನು. ಜ್ಞಾನರೂಪನಾಗಿರುವುದರಿಂದ '**ವಿದ್ಯಾ**' ಎನಿಸಿರುವನು. ಹೀಗೆ ಜೀವರ ಅಧಿ

ಪತಿಯಾಗಿದ್ದು ಜ್ಞಾನ ರೂಪನಾಗಿರುವುದರಿಂದ ಅಧ್ಯಾತ್ಮ ವಿದ್ಯೆಯಲ್ಲಿರುವ ಪರಮಾತ್ಮನ ವಿಭೂತಿರೂಪವು ಅಧ್ಯಾತ್ಮವಿದ್ಯಾ ಎಂಬ ಹೆಸರುಳ್ಳದ್ದಾಗಿದೆ. **ಪ್ರವದತಾಂ**= ವಾದ, ಜಲ್ಪ ಹಾಗೂ ವಿತಂಡಾ ಎಂದು ಮೂರು ವಿಧವಾದ ಚರ್ಚೆ (ಕಥಾ) ಯಲ್ಲಿ ತೊಡಗಿರುವ ವಾದಿಗಳಿಗೆ ಸಂಬಂಧಿಸಿದ ವಾದರೂಪದ ಕಥಾದಲ್ಲಿರುವ ಪರಮಾತ್ಮನ ರೂಪವು ಸರ್ವಶಬ್ದವಾಚ್ಯ ವಾಗಿರುವುದರಿಂದ ವಾದ ಎಂಬ ಹೆಸರುಳ್ಳದ್ದಾಗಿದೆ. ॥ 32 ॥

**ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ ।**
**ಅಹಮೇವಾಕ್ಷಯಃ ಕಾಲೋ ಧಾತಾಽಹಂ ವಿಶ್ವತೋಮುಖಃ ॥ 33 ॥**

**ಅರ್ಥ–** ಅಕ್ಷರಗಳ ಮಧ್ಯೆ ಅಕಾರದಲ್ಲಿದ್ದು ಅದಕ್ಕೆ ಇತರ ಅಕ್ಷರಗಳಿಗಿಂತ ಶ್ರೇಷ್ಠತೆಯನ್ನು ತಂದುಕೊಡುತ್ತಾ ನಾನು 'ಅಕಾರ' ನಾಮಕನಾಗಿರುವೆನು. ಸಮಾಸಗಳ ಮಧ್ಯೆ ದ್ವಂದ್ವ ಸಮಾಸದಲ್ಲಿದ್ದು ಅದಕ್ಕೆ ಇತರ ಸಮಾಸಗಳಿಗಿಂತ ಮಹತ್ವವನ್ನು ತಂದುಕೊಡುತ್ತಿರುವ ನನ್ನ ವಿಭೂತಿರೂಪವು ದ್ವಂದ್ವ ಎಂಬ ಹೆಸರುಳ್ಳದ್ದಾಗಿದೆ. ಕೊನೆಯ ಅವಧಿ ಇಲ್ಲದಿರುವುದರಿಂದ ಅಕ್ಷಯವೆನಿಸಿರುವ ತ್ರಿಕಾಲಪ್ರವಾಹದಲ್ಲಿರುವ ನನ್ನ ರೂಪವು ಅಕ್ಷಯಕಾಲ ಎಂಬ ಹೆಸರುಳ್ಳ ದ್ದಾಗಿದೆ. ಚತುರ್ಮುಖಬ್ರಹ್ಮನಲ್ಲಿ, ಧಾತೃ ಹಾಗೂ ವಿಶ್ವತೋಮುಖ ಎಂಬ ಹೆಸರಿನಲ್ಲಿರುವ ವಿಭೂತಿರೂಪನು ನಾನಾಗಿರುವೆನು.

**'ಅ' ಇತ್ಯಾಕ್ರಿಯಮಾಣತ್ವಾದ್ ಅಕಾರನಾಮಾ ಅಕಾರಸ್ಥಃ । ಸಾಮಾಸಿಕಸ್ಯ ಸಮಾಸಸಮೂಹಸ್ಯ । ಬಹಿರಂತರ್ದ್ವಿರೂಪತ್ವೇನ ದ್ವಂದ್ವನಾಮಾ ದ್ವಂದ್ವ-ಸಮಾಸಸ್ಥಃ । ಕ್ಷಯಹೀನತ್ವಾದ್ಅಕ್ಷಯನಾಮಾ ಸಂಹರ್ತೃತ್ವಾತ್ ಕಾಲನಾಮಾ ಸನ್ । ಅಕ್ಷಯಕಾಲಸ್ಥಃ ಉತ್ತರಾವಧಿಶೂನ್ಯಃ ತ್ರಿಕಾಲಗತಃ । ಕಲ ಚ್ಛೇದನ ಇತಿ ಧಾತೋಃ । ಧಾತಾ ಧಾರಣಪೋಷಣಕರ್ತಾ । ಡುಧಾಞ್ ಧಾರಣ-ಪೋಷಣಯೋಃ । ಸರ್ವದಿಙ್ಮುಖತ್ವಹೇತುನಾ ವಿಶ್ವತೋಮುಖನಾಮಾ ಚತುರ್ಮುಖಸ್ಥ ಇತ್ಯೇಕೇ । ಸರ್ವತ್ರ ಸ್ಥಿತಮುಖೋಪಲಕ್ಷಿತಸರ್ವಾವಯವವಾನ್ ಇತ್ಯನ್ಯೇ ॥ 33 ॥**

**ಅನುವಾದ–** ಅಕಾರದಲ್ಲಿರುವ ಪರಮಾತ್ಮನ ರೂಪವು 'ಅ' ಎಂದು ಕರೆಯಲ್ಪಡುತ್ತಿರುವುದ ರಿಂದ 'ಅ ಇತಿ ಆಕ್ರಿಯತೇ ಇತಿ ಅಕಾರಃ' ಎಂಬ ವ್ಯುತ್ಪತ್ತಿಗನುಸಾರವಾಗಿ ಅಕಾರ ಎಂಬ ಹೆಸರುಳ್ಳದ್ದಾಗಿದೆ. **ಸಾಮಾಸಿಕಸ್ಯ** = ಸಮಾಸಗಳ ಸಮೂಹದ ಮಧ್ಯೆ, ದ್ವಂದ್ವ ಸಮಾಸದಲ್ಲಿರುವ ಪರಮಾತ್ಮನ ರೂಪವು ಎಲ್ಲಾ ವಸ್ತುಗಳ ಹೊರಗೆ ಹಾಗೂ ಒಳಗೆ ಎಂಬ ರೀತಿಯಲ್ಲಿ ಎರಡು

ರೂಪದಿಂದ ಇರುವ ಕಾರಣದಿಂದಾಗಿ ದ್ವಂದ್ವ ಎಂಬ ಹೆಸರುಳ್ಳದ್ದಾಗಿದೆ. **ಅಕ್ಷಯಕಾಲಸ್ಥಃ** = ಕೊನೆಯಿಲ್ಲದಿರುವ ಕಾಲ ಪ್ರವಾಹದಲ್ಲಿರುವ ಪರಮಾತ್ಮನ ರೂಪ. ಅದು ಕ್ಷಯ (ನಾಶ-ಕೊನೆ) ರಹಿತವಾಗಿರುವುದರಿಂದ ಅಕ್ಷಯೆಂಬ ಹೆಸರುಳ್ಳದ್ದಾಗಿದೆ. ಕಾಲ ಎಂಬ ಪದವು 'ತುಂಡರಿಸು' ಎಂಬ ಅರ್ಥದಲ್ಲಿರುವ ಕಲ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಹಾಗಾಗಿ ಅಕ್ಷಯ ಕಾಲದಲ್ಲಿರುವ ಪರಮಾತ್ಮನ ರೂಪವು ಸಂಸಾರವನ್ನು ತುಂಡರಿಸುವುದರಿಂದ (ನಾಶ ಪಡಿಸುವುದರಿಂದ) ಕಾಲ ಎಂಬ ಹೆಸರುಳ್ಳದ್ದ ಅಗಿದೆ. '**ಧಾತಾ**' ಎಂದೆನ್ನುವುದು ಧಾರಣೆ ಹಾಗೂ ಪೋಷಣೆ ಎಂಬ ಅರ್ಥಗಳಲ್ಲಿರುವ '**ಧಾಞ್**' ಎಂಬ ಧಾತುವಿನಿಂದ ನಿಷ್ಪನ್ನವಾಗಿದ್ದು ಧಾರಣ ಪೋಷಣಕರ್ತೃವಾಗಿರುವುದರಿಂದ ಚತುರ್ಮುಖ ಬ್ರಹ್ಮನಲ್ಲಿರುವ ವಿಭೂತಿರೂಪದ ಹೆಸರೆನಿಸಿದೆ. ನಾಲ್ಕು ಮುಖಗಳಿರುವುದರಿಂದ ವಿಶ್ವತೋ ಮುಖನೆನಿಸಿರುವ ಚತುರ್ಮುಖ ಬ್ರಹ್ಮದೇವರಲ್ಲಿರುವ ಪರಮಾತ್ಮನ ರೂಪವು ಎಲ್ಲ ದಿಕ್ಕುಗಳಿಗೂ ಮುಖ ಮಾಡಿರುವ ಕಾರಣ ದಿಂದಾಗಿ ವಿಶ್ವತೋಮುಖ ಎಂಬ ಹೆಸರುಳ್ಳದ್ದಾಗಿದೆ ಎಂದು ಕೆಲವರು ಅರ್ಥೈಸುತ್ತಾರೆ. ಇನ್ನು ಕೆಲವರು ಇಲ್ಲಿರುವ ಮುಖಶಬ್ದದಿಂದ ಪರಮಾತ್ಮನ ಎಲ್ಲಾ ಅವಯವಗಳನ್ನು ಇಟ್ಟುಕೊಂಡು ಈ ರೂಪವು ಮುಖ ಮೊದಲ್ಗೊಂಡು ಎಲ್ಲಾ ಅವಯವಗಳಿಂದ ಎಲ್ಲಾಕಡೆ ವ್ಯಾಪಿಸಿರುವುದರಿಂದ ವಿಶ್ವತೋಮುಖ ಎಂಬ ಹೆಸರುಳ್ಳದ್ದಾಗಿದೆ ' ಎಂದು ಅಭಿಪ್ರಾಯ ಪಡುತ್ತಾರೆ. ॥ 33 ॥

**ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।**
**ಕೀರ್ತಿಃ ಶ್ರೀರ್ವಾಕ್ ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥ 34 ॥**

**ಅರ್ಥ**– ನಾನು ಸರ್ವಸಂಹಾರಕರ್ತೃವಾದ ಮೃತ್ಯುವಿನಲ್ಲಿದ್ದು ಮುಖ್ಯವಾಗಿ ಸರ್ವಮಾರಕ ನಾಗಿರುವುದರಿಂದ ಮೃತ್ಯು ಎಂಬ ಹೆಸರುಳ್ಳವನಾಗಿರುವೆನು. ಮುಂದೆ ಹುಟ್ಟ ಬೇಕಾದ ವಸ್ತುಗಳಿಗೆ ಸಂಬಂಧಿಸಿದ ಉದ್ಭವದಲ್ಲಿ (ಹುಟ್ಟಿನಲ್ಲಿ) ಉದ್ಭವ ಎಂಬ ಹೆಸರುಳ್ಳವನಾಗಿರುವೆನು. ಕೀರ್ತಿಯಲ್ಲಿ ಕೀರ್ತಿನಾಮಕನಾಗಿಯೂ ಸಂಪತ್ತಿನಲ್ಲಿ ಶ್ರೀ ಎಂಬ ಹೆಸರುಳ್ಳವನಾಗಿಯೂ , ಸ್ತ್ರೀಯರ ಮಾತಿನಲ್ಲಿ 'ವಾಕ್' ಎಂಬ ಹೆಸರುಳ್ಳವನಾಗಿಯೂ, ಸ್ಮರಣಶಕ್ತಿಯಲ್ಲಿ ಸ್ಮೃತಿನಾಮಕ ನಾಗಿಯೂ, ಬುದ್ಧಿಶಕ್ತಿಯಲ್ಲಿ ಮೇಧಾ ಎಂಬ ಹೆಸರುಳ್ಳವನಾಗಿಯೂ, ಧೈರ್ಯದಲ್ಲಿ ಧೃತಿನಾಮಕನಾಗಿಯೂ, ಸಹನೆಯಲ್ಲಿ 'ಕ್ಷಮಾ' ಎಂಬ ಹೆಸರುಳ್ಳವನಾಗಿಯೂ ಇರುವೆನು.

**ಸರ್ವಹರೋ ಮಾರಕತ್ವಹೇತುನಾ ಮೃತ್ಯುಸ್ಥಃ । ಭವಿಷ್ಯತಾಮುತ್ಪತ್ಸ್ಯಮಾನಾನಾಂ ಉದ್ಭಾವಯತೀತಿ ವ್ಯುತ್ಪತ್ತ್ಯೋದ್ಭವನಾಮಾ ಉದ್ಭವಸ್ಥಃ । ಕೀರ್ತ್ಯತ್ವಾಶ್ರಯತ್ವವಕ್ತೃತ್ವಹೇತುಭಿಃ ಕೀರ್ತಿಶ್ರೀವಾಙ್ನಾಮಾ ಸನ್ ಕೀರ್ತೌ**

**ಶ್ರಿಯಾಂ ವಾಚಿ ಚ ಸ್ಥಿತಃ । ಸ್ಮರಣೀಯತ್ವಾದ್ ಸ್ಮೃತಿನಾಮಾ ಸ್ಮೃತಿಸ್ಥಃ । ಮೇಧಾಧೃತಿಕ್ಷಮಾರೂಪತ್ವಾತ್ ತತ್ತನ್ನಾಮಾ ಮೇಧಾಧೃತಿಕ್ಷಮಾಸ್ಥಃ ॥ 34 ॥**

**ಅನುವಾದ-** ಮೃತ್ಯುವಿನಲ್ಲಿರುವ ಸರ್ವನಾಶಕವಾದ ಪರಮಾತ್ಮನ ರೂಪವು ಎಲ್ಲದಕ್ಕೂ ಮಾರಕ(ನಾಶಕ)ವೆನಿಸಿರುವುದರಿಂದ ಮೃತ್ಯು ಎಂಬ ಹೆಸರುಳ್ಳದ್ದಾಗಿದೆ. **ಭವಿಷ್ಯತಾಂ**= ಮುಂದೆ ಹುಟ್ಟಬೇಕಾದ ವಸ್ತುಗಳಿಗೆ ಸಂಬಂಧಿಸಿದ. '**ಉದ್ಭವ**' ಎಂಬ ಕ್ರಿಯೆಯಲ್ಲಿರುವ ಪರಮಾತ್ಮನ ರೂಪವು, **ಉದ್ಭಾವಯತೀತಿ ಉದ್ಭವಃ**= ಹುಟ್ಟಿಸುವ ಕಾರಣದಿಂದಾಗಿ ಉದ್ಭವ ಎಂಬ ಹೆಸರುಳ್ಳದ್ದಾಗಿದೆ. ಕೀರ್ತಿಯಲ್ಲಿರುವ ಪರಮಾತ್ಮನ ರೂಪವು **ಕೀರ್ತ್ಯತ್ವಾತ್ ಕೀರ್ತಿಃ**= ಹೊಗಳಲು ಯೋಗ್ಯವಾಗಿರುವುದರಿಂದ ಕೀರ್ತಿ ಎಂಬ ಹೆಸರುಳ್ಳದ್ದು. ಸಂಪತ್ತಿನಲ್ಲಿರುವ ಪರಮಾತ್ಮನ ರೂಪ **ಆಶ್ರಯತ್ವಾತ್ ಶ್ರೀಃ**= ಆಶ್ರಯವಾಗಿರುವುದರಿಂದ ಶ್ರೀ ಎಂಬ ಹೆಸರುಳ್ಳದ್ದು. ವಾಕ್ (ಮಾತು) ನಲ್ಲಿರುವ ಪರಮಾತ್ಮನ ರೂಪವು. **ವಕ್ತೃತ್ವಾತ್ವಾಕ್**= ಮಾತುಗಾರನಾಗಿರುವುದರಿಂದ ವಾಕ್ ಎಂಬ ಹೆಸರುಳ್ಳದ್ದು. ಸ್ಮೃತಿ (ಸ್ಮರಣಶಕ್ತಿ)ಯಲ್ಲಿರುವ ಪರಮಾತ್ಮನ ರೂಪವು ಅವಶ್ಯವಾಗಿ ಸ್ಮರಿಸಲ್ಪಡಬೇಕಾಗಿರುವುದರಿಂದ ಸ್ಮೃತಿ ಎಂಬ ಹೆಸರುಳ್ಳದ್ದು. ಮೇಧಾ (ಬುದ್ಧಿಶಕ್ತಿ)ದಲ್ಲಿರುವ ರೂಪವು ಮೇಧಾರೂಪವಾಗಿರುವುದರಿಂದ ಮೇಧಾ ಎಂಬ ಹೆಸರುಳ್ಳದ್ದೂ, 'ಧೃತಿ' (ಧೈರ್ಯ)ದಲ್ಲಿರುವ ವಿಭೂತಿರೂಪವು ಧೃತಿಸ್ವರೂಪವಾಗಿರುವುದರಿಂದ 'ಧೃತಿ' ಎಂಬ ಹೆಸರುಳ್ಳದ್ದು, ಕ್ಷಮಾ(ಸಹನಾಶಕ್ತಿ)ದಲ್ಲಿರುವ ರೂಪವು ಕ್ಷಮಾರೂಪವಾದುದರಿಂದ ಕ್ಷಮಾ ಎಂಬ ಹೆಸರುಳ್ಳದ್ದೂ ಆಗಿದೆ. ॥ 34 ॥

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋऽಹಮ್ ಋತೂನಾಂ ಕುಸುಮಾಕರಃ ॥ 35 ॥**

**ಅರ್ಥ-** ಸಾಮಗಳ ಮಧ್ಯೆ ಬೃಹತ್‌ಸಾಮದಲ್ಲಿದ್ದು ಅದಕ್ಕೆ ಶ್ರೇಷ್ಠತೆಯನ್ನು ಅನುಗ್ರಹಿಸುತ್ತಿರುವ ನನ್ನ ವಿಭೂತಿರೂಪವು '**ಬೃಹತ್ ಸಾಮ**' ಎಂದು ಕರೆಯಲ್ಪಡುತ್ತದೆ. ಛಂದಸ್ಸುಗಳ ಮಧ್ಯೆ ಗಾಯತ್ರೀ ಛಂದಸ್ಸಿನಲ್ಲಿದ್ದು. ಅದಕ್ಕೆ ಇತರ ಛಂದಸ್ಸುಗಳಿಗಿಂತ ಮಹತ್ವವನ್ನು ತಂದು ಕೊಡುತ್ತಿರುವ '**ಗಾಯತ್ರೀ**' ಎಂಬ ಹೆಸರುಳ್ಳ ವಿಭೂತಿರೂಪನು ನಾನಾಗಿರುವೆನು. ಮಾಸಗಳ ಮಧ್ಯೆ ಮಾರ್ಗಶೀರ್ಷ' ಮಾಸದಲ್ಲಿದ್ದು ಅದಕ್ಕೆ ಇತರ ಮಾಸಗಳಿಂದ ವೈಶಿಷ್ಟ್ಯವನ್ನು ಅನುಗ್ರಹಿಸುತ್ತಾ '**ಮಾರ್ಗಶೀರ್ಷ**' ಎಂಬ ಹೆಸರುಳ್ಳ ವಿಭೂತಿರೂಪನು ನಾನಾಗಿರುವೆನು. ಋತುಗಳ ಮಧ್ಯೆ ಕುಸುಮಾಕರ (ವಸಂತ) ಋತುನಲ್ಲಿ ಶ್ರೇಷ್ಠತೆಯನ್ನು ತಂದುಕೊಡುತ್ತಿರುವ ನಾನು ಕುಸುಮಾಕರ ಎಂಬ ಹೆಸರುಳ್ಳವನಾಗಿರುವೆನು.

**ಬೃಹತ್ಸಾರತ್ವಾದ್ಬೃಹತ್ಸಃ ಅಮೇಯತ್ವಾದಮಃ ಬೃಹತ್ಸಶ್ಚಾಸಾವಮಶ್ಚೇತಿ ಬೃಹತ್ಸಾಮನಾಮಾ । ರಥಂತರವೈರೂಪವೈರಾಜಶಾಕ್ವರಾದಿಸಾಮ್ನಾಂ ಮಧ್ಯೇ ತದಾಧಿಕ್ಯಹೇತುತಯಾ ಬೃಹತ್ಸಾಮಸ್ಥಃ । ಸ್ವಗಾಯಕಾನ್ ತ್ರಾತೀತಿ ವ್ಯುತ್ಪತ್ತ್ಯಾ ಗಾಯತ್ರೀನಾಮಾ ತ್ರಿಷ್ಟುಪ್‌ಜಗತ್ಯಾದಿ ಛಂದೋಭ್ಯ ಆಧಿಕ್ಯಹೇತುತಯಾ ಗಾಯತ್ರೀಚ್ಛಂದಸ್ಥಃ । ಮಾರ್ಗಾಣಾಂ ಶೀರ್ಷಸ್ಥಾನತ್ವಾತ್ ಮಾರ್ಗಶೀರ್ಷ-ನಾಮಾ ಮಾಸೇಭ್ಯ ಆಧಿಕ್ಯಹೇತುತಯಾ ಮಾರ್ಗಶೀರ್ಷಮಾಸಸ್ಥಃ । ಕುತ್ಸಿತಾಂ ಸುಷ್ಠುಭೂತಾಂ ಚ ಮಾಂ ಜ್ಞಾನಂ ಕರೋತೀತಿ ಕುಸುಮಾಕರನಾಮಾ ಅನ್ಯಋತುಭ್ಯ ಆಧಿಕ್ಯಹೇತುನಾ ವಸಂತಋತುಸ್ಥಃ ॥ 35 ॥**

**ಅನುವಾದ-** ಶ್ರೇಷ್ಠರಾದ ಬ್ರಹ್ಮಾದಿಗಳಿಗಿಂತ ಸಾರನಾಗಿರುವುದರಿಂದ= ಶ್ರೇಷ್ಠನಾಗಿರುವುದರಿಂದ ಪರಮಾತ್ಮನು 'ಬೃಹತ್ಸಃ' ಎಂದೆನಿಸಿರುವನು. ಅಮೇಯನಾದುದರಿಂದ = ತಿಳಿದುಕೊಳ್ಳಲು ಅಶಕ್ಯನಾದುದರಿಂದ 'ಅಮ' ಎಂದೂ ಎನಿಸಿರುವನು. ಹಾಗಾಗಿ ಬೃಹತ್‌ಸಾಮದಲ್ಲಿರುವ ಪರಮಾತ್ಮನ ವಿಭೂತಿರೂಪವು **ಬೃಹತ್ಸ+ಅಮ= ಬೃಹತ್ಸಾಮ** ಎಂಬ ಹೆಸರುಳ್ಳದ್ದಾಗಿದೆ. ಈ ರೂಪವು ರಥಂತರ, ವೈರೂಪ, ವೈರಾಜ, ಶಾಕ್ವರ ಇವೇ ಮೊದಲಾದ ಸಾಮಗಳ ಮಧ್ಯೆ '**ಬೃಹತ್ ಸಾಮ**'ದಲ್ಲಿದ್ದು ಅದಕ್ಕೆ ರಥಂತರಾದಿ ಸಾಮಗಳಿಗಿಂತ ಇರುವ ಆಧಿಕ್ಯಕ್ಕೆ ಕಾರಣವಾಗಿದ್ದುಕೊಂಡು ನೆಲೆಸಿದೆ. ಗಾಯತ್ರೀಛಂದಸ್ಸಿನಲ್ಲಿರುವ ಪರಮಾತ್ಮನ ವಿಭೂತಿರೂಪವು. ತ್ರಿಷ್ಟುಪ್, ಜಗತೀ,ಮೊದಲಾದ ಛಂದಸ್ಸುಗಳಿಗಿಂತ ಅದಕ್ಕೆ ಶ್ರೇಷ್ಠತೆಯನ್ನು ತಂದು ಕೊಡುತ್ತಿದ್ದು, **ಸ್ವಗಾಯಕಾನ್ ತ್ರಾತಿ**= ತನ್ನ ಗುಣಗಾನ ಮಾಡುವವರನ್ನು ರಕ್ಷಿಸುತ್ತಿದೆ- ಎಂಬ ವ್ಯುತ್ಪತ್ತಿಯಂತೆ. **ಗಾಯತ್+ತ್ರಾತಿ= ಗಾಯತ್+ತ್ರೀ= ಗಾಯತ್ರೀ** ಎಂಬ ಹೆಸರುಳ್ಳದ್ದಾಗಿದೆ. ಇತರ ಮಾಸಗಳಿಗಿಂತ ಮಾರ್ಗಶೀರ್ಷಮಾಸದಲ್ಲಿ ಆಧಿಕ್ಯಕ್ಕೆ ಕಾರಣವಾಗಿ ಆ ಮಾಸದಲ್ಲಿರುವ ಪರಮಾತ್ಮನ ವಿಭೂತಿರೂಪವು '**ಮಾರ್ಗಾಣಾಂ ಶೀರ್ಷಮಿವ**' ಎಂಬ ವ್ಯುತ್ಪತ್ತಿಗೆ ಅನುಗುಣವಾಗಿ ಅರ್ಚಿರಾದಿ ಮಾರ್ಗಗಳ ಕೊನೆಯಲ್ಲಿದ್ದು ಆ ಮಾರ್ಗಗಳ ಮೂಲಕ ತಲುಪಬೇಕಾದ ಕೊನೆಯ ಸ್ಥಾನವಾಗಿ ಶಿರಸ್ಸಿನಂತೆ ಇರುವುದರಿಂದ ಮಾರ್ಗಶೀರ್ಷ ಎಂಬ ಹೆಸರುಳ್ಳದ್ದಾಗಿದೆ. ಇತರ ಋತುಗಳಿಗಿಂತ ವಸಂತ ಋತುವಿಗೆ ಆಧಿಕ್ಯವನ್ನು ತಂದುಕೊಡುವುದಕ್ಕಾಗಿ ಆ ಋತುವಿನಲ್ಲಿರುವ ಪರಮಾತ್ಮನ ವಿಭೂತಿರೂಪವು **ಕುಮಾಂ ಹಾಗೂ ಸುಮಾಂ**= ದುಷ್ಟರಿಗೆ ಕೆಟ್ಟಜ್ಞಾನ ಹಾಗೂ ಸಜ್ಜನರಿಗೆ ಒಳ್ಳೆಯ ಜ್ಞಾನವನ್ನು ಉಂಟುಮಾಡು (ಕರೋತಿ)ತ್ತಿರುವುದರಿಂದ **ಕುಮಾ +ಸುಮಾ +ಕರ** = ಕುಸುಮಾಕರ ಎಂಬ ಹೆಸರುಳ್ಳದ್ದಾಗಿದೆ. ॥ 35 ॥

**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ॥ 36 ॥**

**ಅರ್ಥ–** ಮೋಸದಲ್ಲಿ ತೊಡಗಿರುವವರಿಗೆ ಸಂಬಂಧಿಸಿದ ಜೂಜಾಟದಲ್ಲಿ ನಾನು ದ್ಯೂತ ಎಂಬ ಹೆಸರುಳ್ಳವನಾಗಿ ಇರುವೆನು. ತೇಜಸ್ವಿಗಳ ತೇಜಸ್ಸಿನಲ್ಲಿ 'ತೇಜಸ್, ಎಂಬ ಹೆಸರುಳ್ಳವನಾಗಿ ನಾನು ಇರುವೆನು. ಜಯಶಾಲಿಗಳ ಜಯದಲ್ಲಿ ಜಯನಾಮಕನೂ, ನಿಶ್ಚಯರೂಪದ ಜ್ಞಾನವುಳ್ಳವರಿಗೆ ಸಂಬಂಧಿಸಿದ ನಿಶ್ಚಯರೂಪಜ್ಞಾನದಲ್ಲಿ ನಾನು ವ್ಯವಸಾಯ ಎಂಬ ಹೆಸರುಳ್ಳವನೂ, ಸತ್ವಶಾಲಿಗಳಿಗೆ ಸಂಬಂಧಿಸಿದ ಸತ್ತ್ವಗುಣದಲ್ಲಿ ನಾನು ಸತ್ತ್ವ ಎಂಬ ಹೆಸರುಳ್ಳವನೂ ಆಗಿರುವೆನು.

**ಛಲಯತಾಂ ಕಾಪಟ್ಯಮಾಚರತಾಂ ಕ್ರೀಡಾಪರತ್ವಹೇತುನಾ ದ್ಯೂತನಾಮಾ ದ್ಯೂತಸ್ಥಃ । ಪ್ರಕಾಶಕತ್ವಾತ್ತೇಜೋನಾಮಾ ತೇಜಃಸ್ಥಃ । ಜಯಿನಾಂ ಜಯರೂಪ-ಸಾರಪ್ರದತ್ವಹೇತುನಾ ಜಯೋಽಸ್ಮಿ । ವ್ಯವಸಾಯೋ ನಿಶ್ಚಯಃ । ವ್ಯವಸಾಯಿನಾಂ ವ್ಯವಸಾಯರೂಪಸಾರಧರ್ಮದಾತಾಽಸ್ಮೀತ್ಯರ್ಥೋ ಜ್ಞೇಯಃ । ಸತ್ತ್ವವತಾಂ ಸತ್ತ್ವರೂಪಸಾರಧರ್ಮಪ್ರದೋಽಸ್ಮೀತ್ಯರ್ಥಃ ॥ 36 ॥**

**ಅನುವಾದ–** **ಛಲಯತಾಂ=** ವಂಚನೆಯಲ್ಲಿ ತೊಡಗಿರುವವರಿಗೆ ಸಂಬಂಧಿಸಿದ ಜೂಜಿನಲ್ಲಿರುವ ಪರಮಾತ್ಮನ ರೂಪವು ಜಗತ್ ಸೃಷ್ಟ್ಯಾದಿ ಕ್ರೀಡೆಯಲ್ಲಿ ತೊಡಗಿರುವುದರಿಂದ '**ದ್ಯೂತ** ' ಎಂಬ ಹೆಸರುಳ್ಳದ್ದಾಗಿದೆ. (ಈ ದ್ಯೂತ ಶಬ್ದವು – ಕ್ರೀಡೆ ಎಂಬ ಅರ್ಥದಲ್ಲಿರುವ '**ದಿವ್**' ಧಾತುವಿನಿಂದ ನಿಷ್ಪನ್ನವಾಗಿದ್ದು ಕ್ರೀಡಾ ತತ್ಪರ ಎಂಬ ಅರ್ಥದಲ್ಲಿದೆ) ತೇಜಸ್ಸಿನಲ್ಲಿರುವ ಪರಮಾತ್ಮನ ವಿಭೂತಿರೂಪವು ಪ್ರಕಾಶವನ್ನುಂಟುಮಾಡುವ ಕಾರಣದಿಂದಾಗಿ '**ತೇಜಸ್**' ಎಂಬ ಹೆಸರುಳ್ಳದ್ದಾಗಿದೆ. ಜಯಶಾಲಿಗಳಿಗೆ ಸಂಬಂಧಿಸಿದ ಜಯವೆಂಬ ಪ್ರಕೃಷ್ಟಧರ್ಮವನ್ನು ಅನುಗ್ರಹಿಸುತ್ತಿರುವುದರಿಂದ, ಜಯದಲ್ಲಿರುವ ನಾನು ಜಯನಾಮಕನಾಗಿರುವೆನು. ವ್ಯವಸಾಯ ಅಂದರೆ ನಿಶ್ಚಯ. ನಿಶ್ಚಯಶಾಲಿಗಳಿಗೆ ಸಂಬಂಧಿಸಿದ ವ್ಯವಸಾಯ ರೂಪ ಉತ್ಕೃಷ್ಟ ಧರ್ಮವನ್ನು ಅನುಗ್ರಹಿಸುತ್ತಿರುವುದರಿಂದ ವ್ಯವಸಾಯದಲ್ಲಿರುವ ನಾನು ವ್ಯವಸಾಯ ಎಂಬ ಹೆಸರುಳ್ಳವನಾಗಿರುವೆನು ಎಂದು '**ವ್ಯವಸಾಯೋಽಸ್ಮಿ**' ಎಂದೆನ್ನುವುದರ ಅಭಿಪ್ರಾಯವೆಂದು ತಿಳಿದುಕೊಳ್ಳಬೇಕು. ಸತ್ತ್ವಶಾಲಿಗಳಿಗೆ ಸಂಬಂಧಿಸಿದ ಸತ್ತ್ವರೂಪದ ಉತ್ತಮಧರ್ಮವನ್ನು ಅನುಗ್ರಹಿಸುತ್ತಿರುವ ಕಾರಣದಿಂದ ನಾನು ಸತ್ತ್ವ ಎಂಬ ಹೆಸರುಳ್ಳವನು ಎಂದು '**ಸತ್ತ್ವಂ ಸತ್ತ್ವವತಾಂ ಅಹಂ**' ಎಂದೆನ್ನುವುದರ ಅಭಿಪ್ರಾಯವಾಗಿದೆ. ॥ 36 ॥

**ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥ 37 ॥**

**ಅನುವಾದ-** ಯಾದವರ ಮಧ್ಯೆ ನಾನು ವಾಸುದೇವನೆಂಬ ಪ್ರತ್ಯಕ್ಷ ವಿಭೂತಿರೂಪನಾಗಿರುವೆನು. ಪಾಂಡವರ ಮಧ್ಯೆ ಧನಂಜಯ (ಅರ್ಜುನ)ನಲ್ಲಿದ್ದು, ಅವನಿಗೆ ಭೀಮನನ್ನು ಹೊರತುಪಡಿಸಿ ಇತರ ಪಾಂಡವರಿಗಿಂತ ಶ್ರೇಷ್ಠತೆಯನ್ನು ತಂದುಕೊಡುತ್ತಾ ನಾನು ಧನಂಜಯ ಎಂಬ ಹೆಸರುಳ್ಳವನಾಗಿರುವೆನು. ಮುನಿಗಳ ಮಧ್ಯೆ ನಾನು 'ವ್ಯಾಸ' ಎಂಬ ಹೆಸರುಳ್ಳ ಪ್ರತ್ಯಕ್ಷ ವಿಭೂತಿರೂಪನಾಗಿರುವೆನು. ಜ್ಞಾನಿಗಳ ಮಧ್ಯೆ ನಾನು ಕವಿಗಳೆನಿಸಿರುವ ಶುಕ್ರಾಚಾರ್ಯರಲ್ಲಿದ್ದು ಅವರಿಗೆ ಇತರ ಕವಿ(ಜ್ಞಾನಿ)ಗಳಿಗಿಂತ ಶ್ರೇಷ್ಠತೆಯನ್ನು ಅನುಗ್ರಹಿಸುತ್ತ 'ಉಶನಸ್' ಎಂಬ ಹೆಸರುಳ್ಳವನಾಗಿರುವೆನು.

**ವಾಸಯತಿ ಸರ್ವಮಾಚ್ಛಾದಯತಿ ನಿವಾಸಯತೀತಿ ವಾ ವಾಸುಃ । 'ವಸ ಆಚ್ಛಾದನೇ' 'ವಸ ನಿವಾಸೇ' ಇತ್ಯತೋ ವಾ ಣ್ಯಂತಾದುಣ್ । ಸರ್ವತ್ರ ವಸತೀತಿ ವಾ ವಾಸುಃ ವಸತೇರುಣ್ । ಸ ಚಾಸೌ ದೇವಶ್ಚ ಕ್ರೀಡಾದಿಗುಣವಿಶಿಷ್ಟಶ್ಚೇತಿ ವಾಸುದೇವಃ । ಧನಂ ಜಯತೀತಿ ಧನಂಜಯನಾಮಾ ಧನಂಜಯಸ್ಥಃ । ಸರ್ವಸ್ಮಾದ್ ವುಶಿಷ್ಟತ್ವಾದ್ ವಿಃ ಆಸಮಂತಾತ್ಸಃ ಗತಃ । ಸೃಗತಾವಿತ್ಯತೋ ಡಃ । ವಿಶ್ಚಾಸಾವಾಸಶ್ಚ ಸರ್ವಗತಶ್ಚೇತಿ ವ್ಯಾಸಃ । ಯದ್ವಾ ವಿಶಿಷ್ಟಾ ಆಸಾ ಸ್ಥಿತಿರ್ಯಸ್ಯಾಸೌ ವ್ಯಾಸಃ । ಆಸ ಉಪವೇಶನೇ ಇತಿ ಧಾತೋಃ । ಉಶ ಇಚ್ಛಾಯಾಮಿತಿ ಧಾತೋಃ ಸರ್ಗಾದೀಚ್ಛಾವತ್ತ್ವಾದುಶನಾನಾಮಾ ಸನ್ನುಶನಾ ಕವಿಃ ಉಶನಸಿ ಕವೌ ಸ್ಥಿತ ಇತ್ಯರ್ಥಃ ॥ 37 ॥**

**ಅನುವಾದ-** 'ಮರೆ ಮಾಚು' ಎಂಬ ಅರ್ಥದಲ್ಲಿರುವ ಅಥವಾ 'ನಿವಾಸ' ಎಂಬ ಅರ್ಥದಲ್ಲಿರುವ '**ಣಿಚ್**' ಪ್ರತ್ಯಯಾಂತವಾದ 'ವಸ' ಧಾತುವಿಗೆ **ಉಣ್** ಪ್ರತ್ಯಯ ಸೇರಿದಾಗ **ವಸ್ + ಣಿಚ್ + ಉ= ವಾಸಿ +ಉ = ವಾಸ್ + ಉ= ವಾಸು** ಎಂಬ ಪದದ ನಿಷ್ಪತ್ತಿ. ಮುಚ್ಚಿ ಹಾಕುವವನು, ಅಥವಾ ವಾಸಿಸುವಂತೆ ಮಾಡುವವನು ಎಂದು ಇದರ ಅರ್ಥ. ಅಥವಾ ಣಿಜಂತವಲ್ಲದ, 'ನಿವಾಸ' ಎಂಬ ಅರ್ಥದಲ್ಲಿರುವ 'ವಸ' ಧಾತುವಿಗೆ '**ಉಣ್**' ಪ್ರತ್ಯಯ ಸೇರಿದಾಗ **ವಸ್ + ಉ** = ವಾಸ್ + ಉ = ವಾಸು ಎಂಬ ಪದದ ನಿಷ್ಪತ್ತಿ . ಆಗ ಅದು ಎಲ್ಲೆಡೆ ವಾಸಿಸುವವನು ಎಂಬ ಅರ್ಥದಲ್ಲಿದೆ. ದೇವ ಪದವು ಕ್ರೀಡಾದಿಗುಣವಿಶಿಷ್ಟನು ಎಂಬ ಅರ್ಥದಲ್ಲಿದೆ. ಹೀಗಾಗಿ ಸಂಸಾರಾವಸ್ಥೆಯಲ್ಲಿ ಜೀವರ ಸ್ವರೂಪವನ್ನು ಮುಚ್ಚುವವನು . ಎಲ್ಲರನ್ನೂ ವಾಸಿಸುವಂತೆ ಮಾಡುವವನು, ಎಲ್ಲೆಡೆ ವಾಸಿಸುವವನೂ (ವಾಸು) ಕ್ರೀಡಾದಿಗುಣ ವಿಶಿಷ್ಟನೂ (ದೇವ) ಆಗಿರುವುದರಿಂದ ಯಾದವರ ಮಧ್ಯದಲ್ಲಿರುವ ಪರಮಾತ್ಮನ ವಿಭೂತಿರೂಪವು ವಾಸುದೇವ ಎಂಬ ಹೆಸರುಳ್ಳದ್ದಾಗಿದೆ. ಅರ್ಜುನನಲ್ಲಿರುವ ಪರಮಾತ್ಮನ

ವಿಭೂತಿ ರೂಪವು ಧನವನ್ನು- ಸಂಪತ್ತನ್ನು- ಗೆದ್ದಿರುವುದರಿಂದ **'ಧನಂ ಜಯತಿ'** ಎಂಬ ವ್ಯುತ್ಪತ್ತಿಯಂತೆ ಧನಂಜಯ ಎಂಬ ಹೆಸರುಳ್ಳದ್ದಾಗಿದೆ. ಚರಾಚರಸಕಲಜಗತ್ತಿಗಿಂತ ವಿಶಿಷ್ಟ ವೆನಿಸಿರುವುದರಿಂದ ಪರಮಾತ್ಮನು 'ವಿ' ಎಂದೆನಿಸಿರುವನು. **ಸಮಂತಾತ್**= ಎಲ್ಲೆಡೆ ಎಂಬ ಅರ್ಥದಲ್ಲಿರುವ **'ಆಙ್'**ಎಂಬ ಉಪಸರ್ಗ ವಿಶಿಷ್ಟವಾದ, **'ಗತಿ'** ಎಂಬ ಅರ್ಥದಲ್ಲಿರುವ **'ಸೃ'** ಧಾತುವಿಗೆ 'ಡ 'ಪ್ರತ್ಯಯ ಸೇರಿದಾಗ **'ಆಸ'** ಎಂಬ ಪದದ ನಿಷ್ಪತ್ತಿ. ಹಾಗಾಗಿ **'ಆಸ'** ಎಂದರೆ ಎಲ್ಲೆಡೆ ಇರುವವನು ಎಂದರ್ಥ. ವಿಶಿಷ್ಟನಾಗಿದ್ದು ಎಲ್ಲೆಡೆ ಇರುವವನಾದುದರಿಂದ ಮುನಿಗಳ ಮಧ್ಯದಲ್ಲಿರುವ ಪ್ರತ್ಯಕ್ಷವಿಭೂತಿರೂಪವು **ವ್ಯಾಸ (ವಿ + ಆಸ = ವ್ಯಾಸ)** ಎಂಬ ಹೆಸರುಳ್ಳದ್ದಾಗಿದೆ ಅಥವಾ **ವಿ**= ವಿಶಿಷ್ಟವಾದ **ಆಸಾ** = ಸ್ಥಿತಿ ಉಳ್ಳವನು. **ವಿ + ಆಸ = ವ್ಯಾಸ** ಎಂಬ ಹೆಸರುಳ್ಳವನು. ಈ ಪಕ್ಷದಲ್ಲಿ **'ಆಸ'** ಎಂಬ ಪದವು ಉಪವೇಶ (ಇರುವಿಕೆ) ಎಂಬ ಅರ್ಥದಲ್ಲಿರುವ 'ಆಸ ' ಧಾತುವಿನಿಂದ ನಿಷ್ಪನ್ನವಾಗಿದೆ. 'ಇಚ್ಛೆ' ಎಂಬ ಅರ್ಥದಲ್ಲಿರುವ **'ವಶ'** ಧಾತುವಿನಿಂದ ನಿಷ್ಪನ್ನವಾದ ಪದ 'ಉಶನಾ' ಎಂದೆನ್ನುವುದು. **'ಉಶನಾ ಕವಿಃ'** ಎಂದರೆ ಜ್ಞಾನಿಗಳಾದ ಶುಕ್ರಾಚಾರ್ಯರಲ್ಲಿರುವವ ಎಂದರ್ಥ. ಹಾಗಾಗಿ ಶುಕ್ರಾಚಾರ್ಯರಲ್ಲಿರುವ ಪರಮಾತ್ಮನ ರೂಪವು ಸೃಷ್ಟ್ಯಾದಿಕ್ರಿಯೆಗಳಲ್ಲಿ ಇಚ್ಛೆ ಉಳ್ಳದ್ದಾದುದರಿಂದ 'ಉಶನಾ' ಎಂಬ ಹೆಸರುಳ್ಳದ್ದಾಗಿದೆ. ॥ 37 ॥

**ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್ ॥ 38 ॥**

**ಅರ್ಥ–** ದಂಡಿಸುವ ಅಧಿಕಾರಿಗಳಿಗೆ ದಂಡನಾಶಕ್ತಿರೂಪಧರ್ಮವನ್ನು ಅನುಗ್ರಹಿಸುತ್ತಿರುವುದರಿಂದ 'ದಂಡ' ಎಂಬ ಹೆಸರುಳ್ಳ ವಿಭೂತಿ ರೂಪನು ನಾನಾಗಿರುವೆನು. ಗೆಲ್ಲಲು ಇಚ್ಛಿಸುವ ವ್ಯಕ್ತಿಗಳಲ್ಲಿ ನೀತಿರೂಪದ ಶ್ರೇಷ್ಠ ಧರ್ಮವನ್ನು ಅನುಗ್ರಹಿಸುತ್ತಾ ನೀತಿನಾಮಕ ವಿಭೂತಿ ರೂಪನು ನಾನಾಗಿರುವೆನು. ರಹಸ್ಯವಾದ ವಸ್ತುಗಳಿಗೆ ಸಂಬಂಧಿಸಿದ ಮೌನದಲ್ಲಿ 'ಮೌನ ' ಎಂಬ ಹೆಸರಿನ ವಿಭೂತಿರೂಪನು ನಾನಾಗಿರುವೆನು. ಜ್ಞಾನಿಗಳಿಗೆ ಸಂಬಂಧಿಸಿದ ಜ್ಞಾನರೂಪ-ಸಾರಭೂತಧರ್ಮದಲ್ಲಿದ್ದು ಜ್ಞಾನನಾಮಕ ನಾನಾಗಿರುವೆನು.

**ದಮಯತಾಂ ದಂಡಂ ಕುರ್ವತಾಂ ದಂಡನಹೇತುನಾ ದಂಡನಾಮಾ ದಂಡನರೂಪಧರ್ಮದಾತಾಽಸ್ಮೀತ್ಯರ್ಥಃ । ಜಿಗೀಷತಾಂ ನೀತಿರಸ್ಮಿ ನೀತಿರೂಪ-ಸಾರಪ್ರದೋಽಸ್ಮಿ । ಗುಹ್ಯಾನಾಂ ಗೋಪನೀಯಾನಾಂ ಮುನೀನಾಮೀಡ್ಯತ್ವ-ಸಂಬಂಧೇನ ಮುನೀನಾಮಿದಂ ಮೌನಮ್ । ಶಬ್ದಸ್ವಭಾವಾನ್ನಪುಂಸಕತಾ । ಮುನಿಸಂಬಂಧಿತಯಾ ಮೌನನಾಮಾ ಮೌನಸ್ಥಃ । ಜ್ಞಾನವತಾಂ ಜ್ಞಾನಾಖ್ಯ-**

**ಸಾರದೋಽಹಮಿತ್ಯರ್ಥಃ । ಸ್ವಯಂ ಚ ಜ್ಞಾನರೂಪತ್ವೇನ ಜ್ಞಾನನಾಮಾ । ಅತ್ರ ಶಶ್ಯಾದಿಷು ವಿಜಾತೀಯಶ್ರೈಷ್ಠ್ಯದಂ ವಿಭೂತಿರೂಪಮುಕ್ತಮ್ । ನಕ್ಷತ್ರಾದೀನಾಂ ವಿಜಾತೀಯತ್ವಾತ್ । 'ಸತ್ತ್ವಂ ಸತ್ತ್ವವತಾಂ' ಇತ್ಯಾದೌ ಧರ್ಮಿಷು ಸತ್ತ್ವಾದಿ-ಸಾರಧರ್ಮದಂ ವಿಭೂತಿರೂಪಮುಕ್ತಂ ಜ್ಞೇಯಮ್ । ತಥೈವ ದರ್ಶಿತಮ್ ಅಸ್ಮಾಭಿಸ್ತತ್ರ ತತ್ರೈವ । ರುದ್ರಾಣಾಂ ಶಂಕರಃ' ಇತ್ಯಾದೌ ಸಜಾತೀಯಶ್ರೈಷ್ಠ್ಯದಂ ವಿಭೂತಿರೂಪಮುಕ್ತಮ್ । ವಾಸವೋಶನೋಧನಂಜಯಜಪಯಜ್ಞವಜ್ರಸಾಮ-ವೇದಾನಾಂ ಸಜಾತೀಯೈಕದೇಶಾಧಿಕ್ಯದಂ ವಿಭೂತಿರೂಪಮುಕ್ತಮ್ । ತೇಷಾಂ ಸಜಾತೀಯಸರ್ವಶ್ರೈಷ್ಠ್ಯಾಭಾವಾತ್ । ದೇವೇಷು ಕವಿತ್ವಾದಿಗುಣೇಷು ಚ ಬ್ರಹ್ಮಣಃ, ಪಾರ್ಥೇಷು ಭೀಮಸ್ಯ, ಯಜ್ಞೇಷು ಜ್ಞಾನಯಜ್ಞಸ್ಯ, ಆಯುಧೇಷು ಚಕ್ರಸ್ಯ, ವೇದೇಷು ಋಗ್ವೇದಸ್ಯಾಽಧಿಕ್ಯಾತ್ ॥ 38 ॥**

**ಅನುವಾದ– ದಮಯತಾಂ**= ದಂಡನೆಯನ್ನು ವಿಧಿಸುವವರಿಗೆ ಸಂಬಂಧಿಸಿದ ದಂಡನೆಯಲ್ಲಿರುವ ನಾನು ದಂಡನ ಎಂಬ ಕ್ರಿಯೆ ಉಳ್ಳವನಾಗಿ ಇತರ ದಂಡನೆ ಕರ್ತೃಗಳಲ್ಲಿ ದಂಡನ ರೂಪ ಧರ್ಮವನ್ನು ಕೊಡುತ್ತಿರುವವನು ಆಗಿರುವುದರಿಂದ ದಂಡ ಎಂಬ ಹೆಸರುಳ್ಳವನು ಆಗಿರುವೆನು. ಗೆಲ್ಲಲು ಇಚ್ಛಿಸುವವರಲ್ಲಿರುವ ನೀತಿ ಎಂಬ ವಿಶಿಷ್ಟಧರ್ಮವನ್ನು ಅನುಗ್ರಹಿಸುವವನು ನಾನಾಗಿರುವೆನು. **ಗುಹ್ಯಾನಾಂ**= ಮುಚ್ಚಿಡಲು ಯೋಗ್ಯವಾದ ವಸ್ತುಗಳಿಗೆ ಸಂಬಂಧಿಸಿದ ಮೌನದಲ್ಲಿರುವ ಪರಮಾತ್ಮನ ವಿಭೂತಿರೂಪವು ಮುನಿಗಳಿಂದ ಸ್ತುತ್ಯವಾಗಿರುವ ಮೂಲಕ ಮುನಿಗಳಿಗೆ ಸಂಬಂಧಿಸಿರುವುದರಿಂದ **ಮುನೀನಾಂ ಇದಂ** (ಮುನಿಗಳಿಗೆ ಸಂಬಂಧಿಸಿದ್ದು) **ಮೌನಂ** ಎಂಬ ವ್ಯುತ್ಪತ್ತಿಯಂತೆ ಮೌನ ಎಂಬ ಹೆಸರುಳ್ಳದ್ದಾಗಿದೆ. ಮೌನ ಶಬ್ದವು ಸ್ವಭಾವತಃ ನಪುಂಸಕಲಿಂಗವಾಗಿರುವುದರಿಂದ, ಪ್ರಕೃತ ಪರಮಾತ್ಮನನ್ನು ಹೇಳುತ್ತಿದ್ದರೂ ಪುಲ್ಲಿಂಗದಲ್ಲಿ ಇರದೆ ನಪುಂಸಕಲಿಂಗದಲ್ಲಿ ಇದೆ. ಜ್ಞಾನಿಗಳಿಗೆ ಸಂಬಂಧಿಸಿದ ಜ್ಞಾನರೂಪ ಪ್ರಧಾನಧರ್ಮವನ್ನು ಅನುಗ್ರಹಿಸುತ್ತಿರುವುದರಿಂದ **'ಅಹಂ ಜ್ಞಾನವತಾಂ ಜ್ಞಾನಂ'** ಎಂದೆನ್ನಲಾಗಿದೆ. ಸ್ವತಃ ಪರಮಾತ್ಮನು ಜ್ಞಾನರೂಪನಾಗಿರುವುದರಿಂದ ಜ್ಞಾನನಾಮಕನೂ ಆಗಿರುವನು ಎಂದೂ ಇದರ ಅಭಿಪ್ರಾಯವಾಗಿದೆ. ಚಂದ್ರನು ನಕ್ಷತ್ರವಲ್ಲವಾದುದರಿಂದ ನಕ್ಷತ್ರಗಳು ಅವನಿಗೆ ವಿಜಾತೀಯಗಳು. ವರುಣನು ಜಲಚರ ಜೀವಿಯಲ್ಲ ಹಾಗಾಗಿ ಜಲಚರಜೀವಿಗಳು ಅವನ ವಿಜಾತೀಯಗಳು. ಆದುದರಿಂದ ಚಂದ್ರನಲ್ಲಿ ಹೇಳಲಾಗಿರುವ ನಕ್ಷತ್ರಗಳಿಗಿಂತ ಶ್ರೇಷ್ಠತೆ, ಹಾಗೂ ವರುಣನಲ್ಲಿ ಹೇಳಲಾಗಿರುವ ಜಲಚರಗಳಿಗಿಂತ ಶ್ರೇಷ್ಠತೆ ವಿಜಾತೀಯ ಶ್ರೇಷ್ಠತೆ ಎನಿಸಿದೆ. ಹಾಗಾಗಿ ಇವರಲ್ಲಿರುವ ವಿಭೂತಿರೂಪವು ವಿಜಾತೀಯ ವೈಶಿಷ್ಟ್ಯವನ್ನು ಅನುಗ್ರಹಿಸುವಂತಹದ್ದಾಗಿದೆ.

**'ಸತ್ತ್ವವತಾಮಹಂ ಸತ್ತ್ವಂ' 'ದಂಡೋ ದಮಯತಾಂ' ಜಿಗೀಷೂಣಾಂ ನೀತಿರಸ್ಮಿ** ; ಎಂಬಿತ್ಯಾದಿ ನಿರೂಪಣೆಗಳಲ್ಲಿ ಮುಂದಿಡಲಾಗಿರುವ ವಿಭೂತಿರೂಪಗಳು, ವಸ್ತುವಿಶೇಷದಲ್ಲಿ ಸಜಾತೀಯ ಅಥವಾ ವಿಜಾತೀಯ ವೈಶಿಷ್ಟ್ಯವನ್ನು ತಂದುಕೊಡುವಂತದ್ದಲ್ಲ. ಸತ್ತ್ವಾದಿ ಆಯಾಯ ಧರ್ಮಗಳುಳ್ಳ ವಸ್ತುಗಳಲ್ಲಿ ಸಾರಭೂತವಾದ ಸತ್ತ್ವಾದಿಧರ್ಮಗಳನ್ನು ಅನುಗ್ರಹಿಸುತ್ತಿರುವ ವಿಭೂತಿ ರೂಪಗಳು ಅವು ಆಗಿವೆ ಎಂಬ ವಿಶೇಷವನ್ನು ಗಮನಿಸಬೇಕು. ಅಂತಹ ಆಯಾಯ ವಿಭೂತಿರೂಪಗಳನ್ನು ನಿರೂಪಿಸುವ ಗೀತಾವಾಕ್ಯಗಳನ್ನು ವ್ಯಾಖ್ಯಾನಿಸುವಾಗ ನಮ್ಮಿಂದ (ಗೀತಾವಿವೃತಿಕಾರರಿಂದ) ಈ ವಿಶೇಷಾಂಶವು ಎತ್ತಿ ತೋರಿಸಲ್ಪಟ್ಟಿದೆ. **ರುದ್ರಾಣಾಂ ಶಂಕರಃ ಆಯುಧಾನಾಂ ವಜ್ರಂ, ಧೇನೂನಾಂ ಕಾಮಧುಕ್** ಎಂಬಿತ್ಯಾದಿ ನಿರೂಪಣೆಗಳಲ್ಲಿ ಸಜಾತೀಯ ವಸ್ತುಗಳಗಿಂತ ಆಯಾಯ ವಸ್ತುಗಳಲ್ಲಿ ಶ್ರೇಷ್ಠತೆಯನ್ನು ತಂದುಕೊಡುತ್ತಿರುವ ವಿಭೂತಿರೂಪಗಳು ಹೇಳಲ್ಪಟ್ಟಿವೆ. ದೇವತೆಗಳಲ್ಲಿ ಚತುರ್ಮುಖ ಬ್ರಹ್ಮದೇವರು ಸರ್ವಾಧಿಕರು. ಹಾಗಾಗಿ ಇಂದ್ರನಲ್ಲಿರುವ ದೇವತಾಶ್ರೇಷ್ಠತೆಯೆಂದರೆ ಬ್ರಹ್ಮದೇವರನ್ನು ಹೊರತುಪಡಿಸಿದ ದೇವತಾವೈಶಿಷ್ಟ್ಯ . ಕವಿತ್ವಗುಣದ ವಿಷಯದಲ್ಲೂ ಬ್ರಹ್ಮ ದೇವರೇ ಸರ್ವಕವಿಗಳಿಗಿಂತ ಅಧಿಕರು. ಹಾಗಾಗಿ ಶುಕ್ರಾಚಾರ್ಯರಲ್ಲಿ ಹೇಳಲಾಗಿರುವ ಕವಿಶ್ರೇಷ್ಠತೆಯು ಬ್ರಹ್ಮದೇವರನ್ನು ಹೊರತು ಪಡಿಸಿದ ಕವಿಶ್ರೇಷ್ಠತೆಯಾಗಿದೆ. ಪಾಂಡವರಲ್ಲಿ ಭೀಮನು ಸರ್ವಾಧಿಕನು. ಹಾಗಾಗಿ ಅರ್ಜುನನಲ್ಲಿ ಹೇಳಲಾಗಿರುವ ಪಾಂಡವಶ್ರೇಷ್ಠತೆಯು ಭೀಮನನ್ನು ಹೊರತುಪಡಿಸಿದ ಪಾಂಡವ ಶ್ರೇಷ್ಠತೆ ಎನಿಸಿದೆ. ಯಜ್ಞಗಳಲ್ಲಿ ಜ್ಞಾನಯಜ್ಞವು ಸರ್ವಾಧಿಕವೆನಿಸಿರುವುದರಿಂದ, ಜಪಯಜ್ಞಕ್ಕೆ ಹೇಳ ಲಾಗಿರುವ ಯಜ್ಞಶ್ರೇಷ್ಠತೆಯು ಜ್ಞಾನಯಜ್ಞವನ್ನು ಹೊರತುಪಡಿಸಿದ ಶ್ರೇಷ್ಠತೆಯೆನಿಸಿದೆ. ಆಯುಧಗಳಲ್ಲಿ ಸುದರ್ಶನಚಕ್ರವು ಸರ್ವಾಧಿಕವಾಗಿರುವುದರಿಂದ, ವಜ್ರಾಯುಧಕ್ಕೆ ಹೇಳ ಲಾಗಿರುವ ಆಯುಧಶ್ರೇಷ್ಠತೆಯು ಸುದರ್ಶನವನ್ನು ಹೊರತುಪಡಿಸಿದ ಆಯುಧ ಶ್ರೇಷ್ಠತೆ ಎನಿಸಿದೆ. ವೇದಗಳಲ್ಲಿ ಋಗ್ವೇದವು ಸರ್ವಶ್ರೇಷ್ಠವಾಗಿರುವುದರಿಂದ, ಸಾಮವೇದಕ್ಕೆ ಹೇಳ ಲಾಗಿರುವ ವೇದಶ್ರೇಷ್ಠತೆಯು ಋಗ್ವೇದವನ್ನು ಹೊರತುಪಡಿಸಿದ ವೇದ ಶ್ರೇಷ್ಠತೆಯಾಗಿದೆ. ಹಾಗಾಗಿ, ಇಂದ್ರ, ಶುಕ್ರಾಚಾರ್ಯ, ಅರ್ಜುನ, ಜಪಯಜ್ಞ, ವಜ್ರಾಯುಧ ಹಾಗೂ ಋಗ್ವೇದಗಳಲ್ಲಿ ಎಲ್ಲ ಸಜಾತೀಯ ವಸ್ತುಗಳಿಗಿಂತ ಆಧಿಕ್ಯವಿಲ್ಲವೆಂದಂತಾಯಿತು. ಆದುದರಿಂದ ಇವುಗಳಲ್ಲಿ ಹೇಳಲಾಗಿರುವ ವಿಭೂತಿ ರೂಪಗಳು ಸಕಲ ಸಜಾತೀಯ ವಸ್ತುಗಳಿಗಿಂತ ವಿಶಿಷ್ಟತೆ ಯನ್ನು ತಂದು ಕೊಡುವಂತದ್ದಲ್ಲ; ಸಜಾತೀಯವಾದ ವಸ್ತುಗಳಲ್ಲಿ ಕೆಲವು ವಸ್ತುಗಳಿಗಿಂತ ಮಾತ್ರ ವೈಶಿಷ್ಟ್ಯವನ್ನು ತಂದುಕೊಡುವಂತಾದ್ದು ಎಂದೆನ್ನುವುದನ್ನು ಇಲ್ಲಿ ಗಮನಿಸಬೇಕು. ॥ 38 ॥

**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ ಸ್ಯಾನ್ಮಯಾ ಭೂತಂ ಚರಾಚರಮ್ ॥ 39 ॥**

**ಅರ್ಥ–** ಎಲ್ಲಾ ವಸ್ತುಗಳ ಮೂಲಕಾರಣವೆನಿಸಿರುವ ಪ್ರಕೃತಿಗೆ ಶ್ರೇಷ್ಠತೆಯನ್ನು ತಂದು ಕೊಡುತ್ತಿರುವುದರಿಂದ ಅದರಲ್ಲೂ ನಾನಿರುವೆನು. ನನ್ನಿಂದ ಹೊರತಾಗಿ ಯಾವುದು ಇರಬಹುದೋ ಅಂತಹ ಜಂಗಮ ಅಥವಾ ಸ್ಥಾವರವೆನಿಸಿರುವ ವಸ್ತುವೊಂದಿಲ್ಲ.

**ಬೀಜಂ ಕಾರಣಂ ತದಪ್ಯಹಮೇವ ಶ್ರೈಷ್ಠ್ಯದತ್ವೇನ । ಭಗವತಃ ಸರ್ವಗತತ್ವಂ ಕುತೋ ಮಾನಾದಿತ್ಯತ ಆಹ- ನ ತದಿತಿ ॥ ಮಯಾ ವಿನಾ ಯದ್ಭೂತಂ ಸ್ಯಾತ್ ತಚ್ಚರಾಚರಂ ನಾಸ್ತಿ ಯತೋಽತೋಽಹಂ ಸರ್ವತ್ರ ಸ್ಥಿತ ಇತ್ಯರ್ಥಃ । ಯದ್ವಾ ರವಿಪ್ರಭೃತಿಷು ಶ್ರೈಷ್ಠ್ಯದತ್ವೇನ ತವ ಸನ್ನಿಧಾವುಕ್ತೇ ಜ್ಯೋತಿರಾದಿಷು ನೇತಿ ಪ್ರಾಪ್ತಂ ಅತಃ ಸರ್ವತ್ರಾಹಮಸ್ಮೀತಿ ವ್ಯತಿರೇಕಮುಖೇನಾಽಹ – ನ ತದಿತಿ ॥ 39 ॥**

**ಅನುವಾದ–** 'ಬೀಜಂ' ಅಂದರೆ ಮೂಲಕಾರಣ. ಅದಕ್ಕೆ ಶ್ರೇಷ್ಠತೆಯನ್ನು ತಂದು ಕೊಡುವವನು ತಾನಾಗಿರುವುದರಿಂದ 'ನಾನೇ ಬೀಜನೆನಿಸಿರುವೆನು ಎಂದೆನ್ನಲಾಗಿದೆ. 'ಪರಮಾತ್ಮನು ಸರ್ವಗತನೆನ್ನುವುದು ಯಾವ ಪ್ರಮಾಣದಿಂದ ಸಿದ್ಧಿಸುತ್ತದೆ ಎಂಬ ಪ್ರಶ್ನೆಗೆ ಉತ್ತರ ವಾಗಿ '**ನ ತದಸ್ತಿ ವಿನಾ ಯತ್ ಸ್ಯಾತ್ ಮಯಾ ಭೂತಂ ಚರಾಚರಂ**' ಎಂದೆನ್ನಲಾಗಿದೆ. ನನ್ನಿಂದ ಹೊರತಾಗಿ ಯಾವುದು ಇರಬಹುದೋ ಅಂತಹ ಚರಾಚರವಸ್ತುವು ಯಾವ ಕಾರಣದಿಂದ ಇಲ್ಲವೋ ಆ ಕಾರಣದಿಂದ ನಾನು ಎಲ್ಲೆಡೆ ಇರುವವನು ಆಗಿರುವೆನು. ಪ್ರಕಾಶ ಮಯವಾದ ವಸ್ತು ಮೊದಲಾದವುಗಳ ಮಧ್ಯೆ ರವಿ ಮೊದಲಾದವರಲ್ಲಿ ಮಾತ್ರ ಶ್ರೇಷ್ಠತೆಯನ್ನು ತಂದುಕೊಡುತ್ತಾ ನಿನ್ನ ಸನ್ನಿಧಾನ ಇದೆ ಎಂದಾದರೆ, ಇತರ ಪ್ರಕಾಶಮಯ ವಸ್ತುಗಳೇ ಮೊದಲಾದವುಗಳಲ್ಲಿ ನಿನ್ನ ಸನ್ನಿಧಾನವಿಲ್ಲವೆಂದಾಯಿತಲ್ಲವೆ ಎಂಬ ಆಕ್ಷೇಪಕ್ಕೆ ಉತ್ತರವಾಗಿ, ಎಲ್ಲದರಲ್ಲೂ, ನನ್ನ ಸಾನ್ನಿಧ್ಯವಿದೆ ಎಂದು ನೇರವಾಗಿ ಹೇಳದೆ, 'ನಾನಿಲ್ಲದಿರುವ ವಸ್ತುವಿಲ್ಲ' ಎಂಬ ಧಾಟಿಯ ವ್ಯತಿರೇಕ ರೂಪದ ಬಳಸು ಮಾರ್ಗದಿಂದ '**ನ ತದಸ್ತಿ**' ಎಂಬಿತ್ಯಾದಿ ಈ ವಾಕ್ಯವು ಹೊರಟಿದೆ ಎಂದಾದರೂ ಅರ್ಥೈಸಬಹುದಾಗಿದೆ. ॥ 39 ॥

## ಭಗವದ್ ವಿಭೂತಿರೂಪಗಳ ಗಣನೆಗೆ ಪರ್ಯವಸಾನವಿಲ್ಲ

**ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥ 40 ॥**

**ಅರ್ಥ–** ಶತ್ರುತಾಪಕನೇ ! ನನ್ನ ಅಲೌಕಿಕವಾದ ವಿಭೂತಿರೂಪಗಳಿಗೆ ಕೊನೆ (ಪರಿಮಿತಿ) ಎಂಬುದೇ ಇಲ್ಲ . '**ಅಹಮಾತ್ಮಾ ಗುಡಾಕೇಶ**' ಎಂದು ಆರಂಭಿಸಿ, '**ಆದಿತ್ಯಾನಾಂ ಅಹಂ**' ಎಂಬಿತ್ಯಾದಿಯಾಗಿ ಇಷ್ಟರ ತನಕ ಒಂದೊಂದು ವಿಭೂತಿರೂಪಗಳನ್ನು ಎತ್ತಿತೋರಿಸುವ

ಮೂಲಕ ವಿಭೂತಿರೂಪಗಳ ಸಂಕ್ಷೇಪವು ನನ್ನಿಂದ ನಿರೂಪಿಸಲ್ಪಟ್ಟಿತು . ನಿನಗೆ ಪ್ರಚುರ ಪಡಿಸುವುದಕ್ಕಾಗಿ ಈಗಾಗಲೆ ನನ್ನ ಮನಸ್ಸಿನಲ್ಲಿರುವ ನನ್ನ ವಿಭೂತಿರೂಪಗಳ ವಿಸ್ತಾರವು ಇನ್ನು ಮುಂದೆ ಈಗ ನನ್ನಿಂದ ಹೇಳಲ್ಪಡುತ್ತದೆ.

**ಸಂಕ್ಷೇಪಕರಣೇ ಕಾರಣಂ ದರ್ಶಯನ್ನುಪಸಂಹರತಿ- ನಾಂತ ಇತಿ ॥ ಅಂತಃ ಪರ್ಯವಸಿತಿಃ । ಅತ್ರ ಏಷ ಇತಿ ಪದಮಾವರ್ತತೇ । ಏಷ 'ಅಹಮಾತ್ಮಾ ಗುಡಾಕೇಶ' ಇತಿ 'ಆದಿತ್ಯಾನಾಮಹಂ ವಿಷ್ಣುಃ' ಇತ್ಯಾದಿನಾ ವಿಭೂತಿರೂಪಸಂಕ್ಷೇಪ ಉದ್ದೇಶತಃ ಶೃಂಗಗ್ರಾಹಿಕಯಾ ಇದಮಿತಿ ವಿಶಿಷ್ಯ ನಿರ್ದೇಶೇನ ಮಯಾ ಪ್ರೋಕ್ತಃ । ಏಷ ತು ವಕ್ಷ್ಯಮಾಣತಯಾ ಹೃದಿಸ್ಥಸ್ತು ವಿಭೂತೇರ್ವಿಸ್ತರೋ ಮಯಾ ಪ್ರೋಕ್ತಃ ಪ್ರೋಚ್ಯತೇ । ವರ್ತಮಾನೇ ನಿಷ್ಠಾಪ್ರತ್ಯಯಃ । ಪುರಾ ಪ್ರೋಕ್ತ ಇತಿ ವಾಽರ್ಥಃ ॥ 40 ॥**

**ಅನುವಾದ–** ವಿಭೂತಿರೂಪಗಳ ನಿರೂಪಣೆಯನ್ನು ಸಂಕ್ಷೇಪಗೊಳಿಸಿದ್ದಕ್ಕೆ 'ಕೊನೆಯಿಲ್ಲದಿರುವುದರಿಂದ ಎಲ್ಲಾ ವಿಭೂತಿ ರೂಪನಿರೂಪಣೆಯು ಅಸಾಧ್ಯ' ಎಂಬ ಕಾರಣವನ್ನು ಸೂಚಿಸುತ್ತ **'ನಾಂತೋಽಸ್ತಿ ಮಮ ದಿವ್ಯಾನಾಂ'** ಎಂಬಿತ್ಯಾದಿ ಶ್ಲೋಕದಲ್ಲಿ ಉಪಸಂಹಾರ ಮಾಡಲಾಗುತ್ತಿದೆ. **ಅಂತಃ= ಪರ್ಯವಸಿತಿಃ** = ಕೊನೆ. ಈ ಶ್ಲೋಕದ ಉತ್ತರಾರ್ಧದಲ್ಲಿ 'ಏಷ' ಎಂಬ ಪದವನ್ನು ಎರಡು ಸಲ ಇಟ್ಟುಕೊಂಡು, '**ಏಷಃ ಉದ್ದೇಶತಃ ಪ್ರೋಕ್ತಃ ಏಷಃ ವಿಭೂತೇಃ ವಿಸ್ತರೋ ಮಯಾ ಪ್ರೋಕ್ತಃ**' ಎಂದು ವಾಕ್ಯಯೋಜನೆ ಮಾಡಬೇಕು **ಏಷಃ ಉದ್ದೇಶತಃ ಪ್ರೋಕ್ತಃ**= ಇಷ್ಟರ ತನಕ ಅಹಮಾತ್ಮಾ ಗುಡಾಕೇಶ ಎಂದು ಆರಂಭಿಸಿ **'ಆದಿತ್ಯಾನಾಂ ಅಹಂ ವಿಷ್ಣುಃ'** ಎಂಬಿತ್ಯಾದಿಯಾಗಿ ವಿಭೂತಿರೂಪಗಳ ಸಂಕ್ಷೇಪವು 'ಇದು ಇಲ್ಲಿ ವಿಭೂತಿರೂಪ, ಇದು ಇಲ್ಲಿ ವಿಭೂತಿ ರೂಪ' ಎಂಬೀರೀತಿಯಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಎತ್ತಿತೋರಿಸುವ ಮೂಲಕ (ಉದ್ದೇಶತಃ) ಹೇಳಲ್ಪಟ್ಟಿತು. **ಏಷ ವಿಭೂತೇರ್ವಿಸ್ತರಃ ಮಯಾಪ್ರೋಕ್ತಃ** ಎಂಬ ವಾಕ್ಯದಲ್ಲಿರುವ ಪ್ರೋಕ್ತ ಶಬ್ದದಲ್ಲಿ ವರ್ತಮಾನಾರ್ಥದಲ್ಲಿ '**ಕ್ತ**'ಪ್ರತ್ಯಯ ಬಂದಿದೆ. ಹಾಗಾಗಿ 'ಪ್ರೋಕ್ತಃ' ಎಂದರೆ (ಹೇಳಲ್ಪಟ್ಟಿತು ಎಂಬ ಭೂತಕಾಲಾರ್ಥದ ಬದಲು) ಹೇಳಲ್ಪಡುತ್ತಿದೆ ಎಂದರ್ಥ ವಾಯಿತು ಹಾಗಾಗಿ **ಏಷ**= ನಿನಗೆ ಮುಂದೆ ಪ್ರಚುರಪಡಿಸಬೇಕೆಂಬ ಉದ್ದೇಶದಿಂದ ಈಗಾಗಲೇ ನನ್ನ ಮನಸ್ಸಿನಲ್ಲಿ ಸಿದ್ಧವಾಗಿರುವ, ವಿಭೂತಿಯ ವಿಸ್ತಾರವು ಈಗ ಇನ್ನು ಮುಂದೆ ನನ್ನಿಂದ ಹೇಳಲ್ಪಡುತ್ತಿದೆ ಎಂದು ಈ ವಾಕ್ಯಭಾಗದ ಅರ್ಥವಾಯಿತು. ಅಥವಾ ಪುರಾಪದವನ್ನು ಅಧ್ಯಾಹಾರ ಮಾಡಿ **ಪುರಾ ಪ್ರೋಕ್ತಃ** = ಹಿಂದೆ ಹೇಳಲ್ಪಟ್ಟಿತ್ತು ಎಂದು ಅನ್ವಯಿಸಿಕೊಳ್ಳಬೇಕು. ಆಗ **ಪ್ರೋಕ್ತಃ** ಎಂಬಲ್ಲಿ ಭೂತಕಾಲಾರ್ಥದಲ್ಲೇ 'ಕ್ತ' ಪ್ರತ್ಯಯ ಎಂದಾಗುವುದು. ॥ 40 ॥

## ಭಗವದ್ ವಿಭೂತಿಗಳ ಸಾಮಾನ್ಯಲಕ್ಷಣ

**ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥ 41 ॥**

ಅರ್ಥ- ಯಾವ ಯಾವ ವಸ್ತುವು ತನ್ನ ಜಾತಿಗೆ ಸೇರಿದ ಇತರ ಪದಾರ್ಥಗಳಿಗಿಂತ ಶ್ರೇಷ್ಠತೆಯಿಂದ ಕೂಡಿದೆಯೋ, ಸಂಪದ್ ಭರಿತವಾಗಿದೆಯೋ ಅಥವಾ ಉತ್ತರೋತ್ತರ ಅಭಿವೃದ್ಧಿ ಶೀಲವೆನಿಸಿದೆಯೋ, ಅಂತ ವಸ್ತುವೆಲ್ಲವನ್ನೂ, ನನ್ನ ಪ್ರಕಾಶರೂಪದ ಅಂಶದ ಸಹಭಾವ ವುಳ್ಳದ್ದನ್ನಾಗಿ ಅನುಸಂಧಾನ ಮಾಡಿಕೋ.

ತಮೇವ ವಿಭೂತಿವಿಸ್ತರಂ ಲಕ್ಷಣೋಕ್ತ್ಯಾಽಽಹ- **ಯದ್ಯದಿತಿ ॥** ಯದ್ಯತ್ ಸತ್ತ್ವಂ ವಸ್ತು ವಿಭೂತಿಮತ್ ಸ್ವಜಾತಿತಃ ಶ್ರೈಷ್ಠ್ಯೋಪೇತಂ ಶ್ರೀಮತ್ ಸಂಪದ್ಯುಕ್ತಂ ಊರ್ಜಿತಮ್ ಅಭಿವೃದ್ಧ್ಯುಪೇತಂ ವಾ ತತ್ತದ್ವಸ್ತು ಮಮ ತೇಜೋರೂಪೇಣ ಪ್ರಕಾಶರೂಪೇಣಾಂಶೇನ ಸಹ ಭವತೀತಿ ತೇಜೋಽಂಶಸಂಭವಮೇವಾವಗಚ್ಛ ಜಾನೀಹಿ ॥ 41 ॥

ಹಿಂದಿನ ಶ್ಲೋಕದಲ್ಲಿ ಆಶ್ವಾಸನೆ ನೀಡಿದಂತೆ ತನ್ನ ಆ ವಿಭೂತಿ ರೂಪಗಳ ವಿಸ್ತಾರವನ್ನು ಅವುಗಳ ಸಾಮಾನ್ಯ ಲಕ್ಷಣವನ್ನು ಹೇಳುವ ಮೂಲಕ **'ಯದ್ಯದ್ ವಿಭೂತಿಮತ್ ಸತ್ತ್ವಂ'** ಎಂಬ ಶ್ಲೋಕದಲ್ಲಿ ಪ್ರಚುರ ಪಡಿಸಲಾಗುತ್ತಿದೆ. **ಯದ್ ಯದ್ ಸತ್ತ್ವಂ**= ಯಾವ ಯಾವ ವಸ್ತುವು, **ವಿಭೂತಿಮತ್**= ತನ್ನ ಜಾತಿಯಲ್ಲಿ ಶ್ರೇಷ್ಠತೆಯಿಂದ ಕೂಡಿದೆಯೋ, **ಶ್ರೀಮತ್**= ಸಂಪದ್ಭರಿತ ವಾಗಿದೆಯೋ, **ಊರ್ಜಿತಂ ವಾ** ಅಥವಾ ಅಭಿವೃದ್ಧಿಯಿಂದ ಸಹಿತವಾಗಿದೆಯೋ, **ತತ್ತತ್**= ಆಯಾಯ ವಸ್ತುವನ್ನು , **ಮಮ ತೇಜೋಽಂಶಸಂಭವಂ**= ನನ್ನ ಪ್ರಕಾಶರೂಪದ ಅಂಶದ ಸಹವಾಸವುಳ್ಳದ್ದನ್ನಾಗಿ, **ಅವಗಚ್ಛ** = ಅರಿತುಕೋ. ॥ 41 ॥

## ಅರ್ಜುನನಿಗೆ ವಿಭೂತಿಜ್ಞಾನಮಾತ್ರದಿಂದ ಫಲವಿಲ್ಲ

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥ 42 ॥**

*॥ ಓಂತತ್ಸದಿತಿ ಶ್ರೀಮದ್ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ವಿಭೂತಿಯೋಗೋ ನಾಮ ದಶಮೋಽಧ್ಯಾಯಃ ॥*

**ಅರ್ಥ–** ಅಥವಾ ವಿಭೂತ್ಯಾದಿಗಳಿಂದ ಸಹಿತವಾದ ರವಿ ಮೊದಲಾದವರಲ್ಲಿರುವ ಪರಿಮಿತ ವಿಭೂತಿರೂಪಗಳ ವಿಸ್ತಾರವು ತಿಳಿಯಲ್ಪಟ್ಟರೂ ನಿನಗೇನು ಫಲ. (ಆದರಿಂದ ಸಿಗಬಹುದಾದ ಫಲವು ನಿನ್ನ ಅರ್ಹತೆಯಂತೆ ಸಿಗಬೇಕಾದ ಫಲಕ್ಕಿಂತ ಅಲ್ಪವಾದುದರಿಂದ ನಿನ್ನಂತವರ ಮಟ್ಟಿಗೆ ಅದು ಫಲವೇ ಅಲ್ಲ) ನಾನು ಈ ಸಮಸ್ತ ಜಗತ್ತನ್ನು ನನ್ನ ಅನಂತ ಅಂಶಗಳ ಮಧ್ಯೆ ಕೇವಲ ಒಂದು ಅಂಶದಿಂದ ವ್ಯಾಪಿಸಿಕೊಂಡು ಇರುವೆನು.

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ ಭಗವದ್ಗೀತೆಯಲ್ಲಿ*
*ವಿಭೂತಿಯೋಗವೆಂಬ ಹತ್ತನೆಯ ಅಧ್ಯಾಯವು ಮುಗಿಯಿತು.*

ಲಕ್ಷಣಮುಖೇನೋಕ್ತ ತತ್ತದ್‌ವಸ್ತುನಿಷ್ಠವಿಭೂತಿವಿಸ್ತರಾದಪ್ಯಧಿಕವಿಭೂತಿ-ವಿಸ್ತರಮಾಹ- **ಅಥವೇತಿ ॥** ಅಥವೇತಿ ಪಕ್ಷಾಂತರೇ । ಏತೇನ ಬಹುನಾ ವಿಭೂತ್ಯಾದಿಯುಕ್ತರವಿಪ್ರಭೃತಿ ತತ್ತದ್‌ವಸ್ತುನಿಷ್ಠಪರಿಚ್ಛಿನ್ನ ವಿಭೂತಿರೂಪಾಣಾಂ ವಿಸ್ತರೇಣ ಜ್ಞಾತೇನ ತವ ಕಿಮ್ । ನ ಕಿಮಪಿ ಫಲಮ್ । ವಕ್ಷ್ಯಮಾಣವ್ಯಾಪ್ತ-ಜ್ಞಾನಫಲಾದಲ್ಪಫಲತ್ವಾದಾಕ್ಷೇಪಃ । ನತು ವೈಫಲ್ಯಾದಿತಿ ಭಾವಃ । ತರ್ಹಿ ಕಿಂ ಜ್ಞಾತವ್ಯಮಿತ್ಯತ ಆಹ- **ವಿಷ್ಟಭ್ಯೇತಿ ॥** ಇದಂ ಪ್ರಮಾಣಾವಗತಂ ಕೃತ್ಸ್ನಂ ಜಗದೇಕಾಂಶೇನ ಅನಂತಾಂಶಮಧ್ಯೇ ಏಕಾಂಶೇನೈವ ವಿಷ್ಟಭ್ಯ ವ್ಯಾಪ್ಯ ಸ್ಥಿತಃ । ಸರ್ವಾಂಶೇನ ವ್ಯಾಪ್ತುಂ ಜಗತ್ಸಹಸ್ರಮಪಿ ನಾಲಮ್ । ಅತಃ ತಾದೃಶಾಪರ್ಯ-ವಸಿತವ್ಯಾಪ್ತಿಮಾನಹಮ್ । ಅತಸ್ತದ್ ಜ್ಞಾನಮಾವಶ್ಯಕಮಿತಿ ಭಾವಃ । ನ ಚೈತದ್‌ಜ್ಞಾನಾದೇವ ಮೋಕ್ಷಸಿದ್ಧೌ ಪ್ರಾಗುಕ್ತಪರಿಚ್ಛಿನ್ನ ವಿಭೂತಿರೂಪಾಣಾಂ ಜ್ಞಾನಂ ವ್ಯರ್ಥಮಿತಿ ತದುಕ್ತಿರ್ವ್ಯರ್ಥೇತಿ ಶಂಕ್ಯಮ್ । 'ಅಜ್ಞಾತ್ವೈನಂ ಸರ್ವವಿಶೇಷಯುಕ್ತಂ ದೇವಂ ಪರಂ ಕೋ ವಿಮುಚ್ಯೇತ ಬಂಧಾತ್' ಇತಿ ಶ್ರುತ್ಯಾ ಪ್ರಾಗುಕ್ತಜ್ಞಾನಸ್ಯಾವಶ್ಯಕತ್ವಾತ್ । ಮಹಾಫಲಾಧಿಕಾರಿತ್ವಾತ್ ತವೋಭಯಜ್ಞಾನ-ಮಾವಶ್ಯಕಮ್ । ನ ವಿಶೇಷಜ್ಞಾನಮಾತ್ರೇಣಾಲಮಿತಿ ತವೈತೇನ ಜ್ಞಾತೇನ ಕಿಮಿತಿ ಭಾವೇನ ತವೇತ್ಯುಕ್ತಮ್ ॥ 42 ॥

*॥ ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ*
*ದಶಮೋಽಧ್ಯಾಯಃ ॥*

**ಅನುವಾದ–** ಪ್ರಚುರಪಡಿಸಲಾದ ಆಯಾಯ ವಸ್ತುಗಳಲ್ಲಿರುವ ವಿಭೂತಿರೂಪಗಳ ವಿಸ್ತರಕ್ಕಿಂತಲೂ ಅಧಿಕವಾದ ವಿಭೂತಿವಿಸ್ತರವನ್ನು ಲಕ್ಷಣವನ್ನು ಹೇಳುವ ಮೂಲಕ '**ಅಥವಾ**

**ಬಹುನೈತೇನ** ’ ಎಂಬೀ ಶ್ಲೋಕದಲ್ಲಿ ಪ್ರಚುರ ಪಡಿಸಲಾಗುತ್ತಿದೆ. ಅಥವಾ ಎಂಬ ಅವ್ಯಯವು ‘ಇದು ಹಿಂದೆ ಹೇಳಲಾದ ಪಕ್ಷಕ್ಕಿಂತ ಬೇರೆಯದಾದ ಪಕ್ಷ ’ ಎಂಬ ಅರ್ಥದಲ್ಲಿದೆ. **ಜ್ಞಾತೇನ ಏತೇನ ಬಹುನಾ=** ತಿಳಿಯಲ್ಪಟ್ಟ, ಈ ವಿಭೂತ್ಯಾದಿಗಳಿಂದ ಸಹಿತರಾದ ರವಿ ಮೊದಲಾದವರಲ್ಲಿ ಇರುವ ಪರಿಮಿತ ಸ್ವರೂಪದ ವಿಭೂತಿರೂಪಗಳ ವಿಸ್ತಾರದಿಂದ, **ತವ ಕಿಂ=** ನಿನಗೆ ಏನಾಗ ಬೇಕಾಗಿದೆ. ಅಂತಹ ವಿಭೂತಿವಿಸ್ತಾರಜ್ಞಾನದಿಂದ ನಿನಗೆ ಫಲವಿಲ್ಲ ಎಂದು ಹೇಳಿದಂತಾಯಿತು. ಅದರ ಜ್ಞಾನ ಸರ್ವಥಾ ನಿಷ್ಫಲ ಎಂದೆನ್ನುವುದು ಈ ಆಕ್ಷೇಪದ ಹಿಂದಿರುವ ಅಭಿಪ್ರಾಯವಲ್ಲ. ಮುಂದೆ ಇಲ್ಲಿ ಹೇಳಲಾಗುವ ವ್ಯಾಪ್ತ ವಿಭೂತಿಗಳ ವಿಸ್ತಾರ ಜ್ಞಾನದ ಫಲಕ್ಕಿಂತ ಈ ವಿಸ್ತಾರಜ್ಞಾನದ ಫಲವು ಅಲ್ಪ ಎಂದೆನ್ನುವುದಷ್ಟೇ ಇದರ ಅಭಿಪ್ರಾಯವಾಗಿದೆ. ಈ ವಿಭೂತಿ ವಿಸ್ತಾರವನ್ನು ತಿಳಿಯುವ ಆವಶ್ಯಕತೆ ಇಲ್ಲವೆಂದಾದಲ್ಲಿ ಫಲಕ್ಕಾಗಿ ನಾನು ಏನನ್ನು ಅವಶ್ಯವಾಗಿ ತಿಳಿದುಕೊಳ್ಳಬೇಕು ಎಂಬ ಅರ್ಜುನನ ಪ್ರಶ್ನೆಗೆ ‘**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್** ಎಂದು ಉತ್ತರಿಸಲಾಗುತ್ತಿದೆ. **ಇದಂ =** ಪ್ರಮಾಣದಿಂದ ಸಿದ್ಧವಾಗಿರುವ, **ಕೃತ್ಸ್ನಂ ಜಗತ್=** ಸಮಸ್ತ ಜಗತ್ತನ್ನು , **ಏಕಾಂಶೇನ =** ನನ್ನ ಅನಂತ ಅಂಶಗಳ ಮಧ್ಯೆ ಕೇವಲ ಒಂದು ಅಂಶದಿಂದ ‘**ಅಹಂ ವಿಷ್ಟಭ್ಯ ಸ್ಥಿತಃ =** ನಾನು ವ್ಯಾಪಿಸಿಕೊಂಡು ಇರುವೆನು. ಇದರಿಂದ ‘ನನ್ನ ಅನಂತವಾದ ಆ ಎಲ್ಲಾ ಅಂಶಗಳಿಂದ ನಾನು ವ್ಯಾಪಿಸಬೇಕಾದರೆ ಸಾವಿರಾರು ಜಗತ್ತುಗಳು ಇದ್ದರೂ ಸಾಲದು. ಹಾಗಾಗಿ ಅಷ್ಟರ ಮಟ್ಟಿನ ಕೊನೆಯೆ ಇಲ್ಲದ ವ್ಯಾಪ್ತಿ ಉಳ್ಳವನು ನಾನಾಗಿರುವೆನು. ಆದುದರಿಂದ ಈ ಪ್ರಮೇಯದ ಜ್ಞಾನವು ನಿನಗೆ ಆವಶ್ಯಕ ಎಂದಂತಾಯಿತು. ಪರಮಾತ್ಮನ ಇಂತಹ ಮಹಿಮೆಯ ಜ್ಞಾನದಿಂದಲೇ ಮೋಕ್ಷರೂಪ ಫಲವು ದೊರಕುವುದೆಂದಾದಲ್ಲಿ, ಹಿಂದೆ ಹೇಳಲಾದ, ಪರಿಮಿತಿ ಯುಳ್ಳ ವಿಭೂತಿರೂಪಗಳ, ಜ್ಞಾನವು ವ್ಯರ್ಥವೆಂದಾಯಿತು. ಹಾಗಾದಾಗ ಆ ವಿಭೂತಿರೂಪಗಳ ನಿರೂಪಣೆಯೂ ವ್ಯರ್ಥವೆನಿಸಿತಲ್ಲವೆ ಎಂಬ ಆಕ್ಷೇಪ ಸರಿಯಲ್ಲ. ಯಾಕೆಂದರೆ ಶ್ರುತಿಯು ‘**ಅಜ್ಞಾತ್ವೈ ನಂ ಸರ್ವ ವಿಶೇಷಯುಕ್ತಂ ದೇವಂ ಪರಂ ಕೋ ವಿಮುಚ್ಯೇತ ಬಂಧಾತ್**– ಎಲ್ಲಾ ರೀತಿಯ ರೂಪ ವಿಶೇಷವುಳ್ಳವನನ್ನಾಗಿ ಈ ಸರ್ವೋತ್ತಮನಾದ ಪರಮಾತ್ಮನನ್ನು ತಿಳಿಯದೆ ಯಾರು ತಾನೇ ಬಂಧದಿಂದ ಬಿಡುಗಡೆ ಹೊಂದಲು ಸಾಧ್ಯ – ಎಂದು ಸಾರಿ ಹೇಳುವ ಮೂಲಕ, ಪರಮಾತ್ಮನ ಅಂತಹ ವಿಭೂತಿ ರೂಪಗಳ ಜ್ಞಾನವೂ ಮೋಕ್ಷಕ್ಕಾಗಿ ಆವಶ್ಯಕ ಎಂದು ಪ್ರಚುರಪಡಿಸುತ್ತಿದೆಯಷ್ಟೆ ! ಅರ್ಜುನನಾದರೊ ಅಂತಹ ವಿಭೂತಿರೂಪಜ್ಞಾನದಿಂದ ಸಿಗುವ ಫಲಕ್ಕಿಂತಲೂ ಹೆಚ್ಚಿನ ಫಲಕ್ಕೆ ಅರ್ಹನಾಗಿರುವನು. ಹಾಗಾಗಿ ಅವನಿಗೆ ಅವುಗಳ ಜ್ಞಾನವಷ್ಟೇ ಸಾಲದುಅವುಗಳ ಜ್ಞಾನವೂ ಬೇಕು, ಇಲ್ಲಿ ಉತ್ತರಾರ್ಧದಲ್ಲಿ ಹೇಳಲಾಗಿರುವ ಮಹಾಮಹಿಮೆಯ ಜ್ಞಾನವೂ ಬೇಕು ಎಂಬೀ ಅಭಿಪ್ರಾಯದಿಂದ ‘ಇಂತಹ ವಿಭೂತಿರೂಪಗಳ ವಿಸ್ತಾರವೆಂಬ ಪ್ರಮೇಯ ಜ್ಞಾನದಿಂದ ನಿನಗೇನಾಗಬೇಕಾಗಿದೆ’ ಎಂದು ಹೇಳಲಾಗಿದೆ ಹೊರತು

ಫಲಕ್ಕಾಗಿ ಆದರ ಜ್ಞಾನದ ಆವಶ್ಯಕತೆಯೇ ಇಲ್ಲ ಎಂಬ ಅಭಿಪ್ರಾಯದಿಂದಲ್ಲ. ಈ ಅಭಿಪ್ರಾಯವನ್ನು ಪ್ರಚುರಪಡಿಸುವುದಕ್ಕಾಗಿಯೇ ಏನು ಪ್ರಯೋಜನ ಎಂದಿಷ್ಟೇ ಹೇಳದೆ **'ಜ್ಞಾತೇನ ತವ ಕಿಂ'** (ಅರ್ಜುನನಿಗೆ ಏನು ಪ್ರಯೋಜನ) ಎಂದು **'ತವ'** ಎಂಬ ಪದದಿಂದ ವಿಶೇಷವಾಗಿ ಅರ್ಜುನನನ್ನು ಉಲ್ಲೇಖಿಸಲಾಗಿದೆ. ॥ 42 ॥

***ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ ಹತ್ತನೆಯ ಅಧ್ಯಾಯವು ಮುಗಿಯಿತು.***

# ಅಧ್ಯಾಯ - 11

## ವಿಶ್ವರೂಪದರ್ಶನದ ಆಕಾಂಕ್ಷೆ

**ಅರ್ಜುನ ಉವಾಚ –**

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ**

**॥ 1 ॥**

**ಅರ್ಥ–** ಅರ್ಜುನ ಹೇಳಿದ – ಶ್ರೀಕೃಷ್ಣನೇ ನನ್ನ ಅನುಗ್ರಹಕ್ಕಾಗಿ ಅತಿ ರಹಸ್ಯವಾದ ಭಗವಂತನ ಬಗೆಗೆ ಇರುವ, ಅಧ್ಯಾತ್ಮವೆನಿಸುವ ಮಾತನ್ನು ನೀನು ಹೇಳಿರುವಿ. ಆದ್ದರಿಂದ ಬಂಧುಸ್ನೇಹ ಮುಂತಾದ ಸ್ವರೂಪವುಳ್ಳ ನನ್ನ ಮೋಹವು ಅಡಗಿದೆ.ದೂರವಾಗಿದೆ.

### ಗೀತಾವಿವೃತಿ

**ಓಂ ॥ ಪೂರ್ವಾಂತೇ 'ವಿಷ್ಟಭ್ಯಾಹಮಿದಂ ಕೃತ್ಸ್ನಮ್' ಇತಿ ವ್ಯಾಪ್ತ-ರೂಪೋಪಾಸನಂ ಸಂಕ್ಷೇಪೇಣೋಕ್ತಮ್ । ಸಂಕ್ಷೇಪೇಣೋಕ್ತರೂಪಸ್ಯ ಬುದ್ಧ್ಯಾ-ವನಾರೋಹೇಣಾಶಕ್ಯಧ್ಯಾನತ್ವಾತ್ ತದ್ಧ್ಯಾನಸೌಕರ್ಯಾಯ ಪ್ರಾಕ್ ಸಂಕ್ಷೇ-ಪೇಣೋಕ್ತವಿಶ್ವರೂಪಸ್ಥಿತಿರತ್ರ ವಿಸ್ತರೇಣೋಚ್ಯತ ಇತಿ ಪೂರ್ವಾನಂತರ್ಯ-ಮರ್ಥಭೇದಶ್ಚಾಸ್ಯೇತಿ ಧ್ಯೇಯಮ್ । ವಿಶ್ವರೂಪಂ ಜ್ಞಾತುಂ ತತ್ಪ್ರಷ್ಟು ಕಾಮಃ ಪ್ರಾಗುಕ್ತಮನುವದತ್ಯರ್ಜುನಃ- ಮದನುಗ್ರಹಾಯೇತಿ ದ್ವಾಭ್ಯಾಮ್ ॥ ಪರಮಂ ಗುಹ್ಯಮತಿಗೋಪ್ಯಂ ಆತ್ಮಾನಂ ಭಗವಂತಮ್ ಅಧಿಕೃತ್ಯ ಸ್ಥಿತಮಧ್ಯಾತ್ಮಂ ಅಧ್ಯಾತ್ಮ-ನಾಮಕಂ ಯದ್ವಚಃ ತ್ವಯಾ ಮದನುಗ್ರಹಾಯೋಕ್ತಮ್ । ತೇನ ಬಂಧುಸ್ನೇಹಾದಿ-ರೂಪೋಽಯಂ ಮೋಹೋ ವಿಗತೋಽಪಗತಃ ಮಮ ॥ 1 ॥**

**ಅನುವಾದ-** ಹಿಂದಿನ ಅಧ್ಯಾಯದ ಕೊನೆಯಲ್ಲಿ 'ವಿಷ್ಟಭ್ಯಾಹಮಿದಂ ಕೃತ್ಸ್ನಂ' ಮುಂತಾಗಿ ವ್ಯಾಪ್ತರೂಪದ ಉಪಾಸನೆಯನ್ನು ಸಂಕ್ಷೇಪವಾಗಿ ಹೇಳಿದೆ. ಸಂಕ್ಷೇಪವಾಗಿ ಹೇಳಿದ ರೂಪವು ಬುದ್ಧಿಯಲ್ಲಿ ಆರೂಢವಾಗದಿರುವುದರಿಂದ ಧ್ಯಾನವು ಅಶಕ್ಯವಾಗಿದೆ. ಆದ್ದರಿಂದ ಧ್ಯಾನಿಸಲು

ಅನುಕೂಲವಾಗಲೆಂದು ಹಿಂದೆ ಸಂಕ್ಷೇಪವಾಗಿ ಹೇಳಿದ ವಿಶ್ವರೂಪದ ಇರುವಿಕೆಯನ್ನು ಈ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳುತ್ತಾರೆ. ಹೀಗೆ ಹಿಂದಿನ ಅಧ್ಯಾಯದಿಂದ ಆನಂತರ್ಯ ಸಂಬಂಧವಿದೆ. ಹೇಳುವ ಪ್ರಮೇಯದಲ್ಲಿ ಅಂತರವೂ (ಹಿಂದಿನದಕ್ಕಿಂತ ವ್ಯತ್ಯಾಸವೂ) ಇದೆ ಎಂದು ತಿಳಿಯಬೇಕು. ವಿಶ್ವರೂಪವನ್ನು ತಿಳಿಯಲು ಅದನ್ನು ಕೇಳಲು ಇಚ್ಛಿಸುವ ಅರ್ಜುನನು ಹಿಂದೆ ಹೇಳಿದ್ದನ್ನು 'ಮದನುಗ್ರಹಾಯ' ಮುಂತಾಗಿ ಎರಡು ಶ್ಲೋಕಗಳಿಂದ ಅನುವಾದಿಸುತ್ತಿದ್ದಾನೆ. **ಪರಮಂ ಗುಹ್ಯಂ** = ಅತಿಗೋಪ್ಯವಾದ, **ಆತ್ಮಾನಂ**= ಭಗವಂತನ ಬಗ್ಗೆ ಇರುವುದೇ ಅಧ್ಯಾತ್ಮ ಎನಿಸುತ್ತದೆ. ಅಧ್ಯಾತ್ಮ ಎನಿಸುವ ಯಾವ ಮಾತನ್ನು ನೀನು ನನ್ನ ಅನುಗ್ರಹಕ್ಕಾಗಿ ಹೇಳಿರುವೆಯೋ ಆದರಿಂದ ಬಂಧುಸ್ನೇಹ ಮುಂತಾದ ಸ್ವರೂಪವುಳ್ಳ ನನ್ನ ಈ ಮೋಹವು, **ವಿಗತಃ** = ದೂರಸರಿಯಿತು. ॥ 1 ॥

**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥ 2 ॥**

**ಅರ್ಥ–** ಹೇ ಕಮಲದಳದಂತೆ ವಿಸ್ತಾರವಾದ ಕಣ್ಣುಳ್ಳವನೇ ! ನಿನ್ನಿಂದ ಎಲ್ಲಾ ಪ್ರಾಣಿಗಳ ಉತ್ಪತ್ತಿನಾಶಗಳನ್ನು ವಿಸ್ತಾರವಾಗಿ ಕೇಳಿರುವೆನು. ನಿನ್ನ ಮುಗಿಯದ (ನಾಶವಿಲ್ಲದ) ಮಾಹಾತ್ಮ್ಯವನ್ನು ನಾನು ಕೇಳಿರುವೆನು.

**ಹೇ ಕಮಲದಲವದಾಯತನೇತ್ರ ! ತ್ವತ್ತಃ ಭೂತಾನಾಂ ಭವಾಪ್ಯಯೌ । 'ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ' (7-3) ಇತ್ಯಾದಿನಾ ಸಪ್ತಮಾಧ್ಯಾಯಾದಿಷು ವಿಸ್ತರಶೋ ಮಯಾ ಶ್ರುತೌ । ಅವ್ಯಯಂ ಮಾಹಾತ್ಮ್ಯ-ಮಪಿ ಚ ಶ್ರುತಮ್ ॥ 2 ॥**

**ಅನುವಾದ–** ಹೇ ಕಮಲದಳದಂತೆ ವಿಸ್ತಾರವಾದ ಕಣ್ಣುಳ್ಳವನೆ ! ನಿನ್ನಿಂದ ಪ್ರಾಣಿಗಳ ಉತ್ಪತ್ತಿನಾಶಗಳನ್ನು 'ನಾನು ಇಡೀ ಜಗತ್ತಿಗೆ ಉತ್ಪಾದಕನು ನಾಶಕನು' (7-6) ಮುಂತಾಗಿ ಏಳನೇ ಅಧ್ಯಾಯ ಮುಂತಾದೆಡೆ ವಿಸ್ತಾರವಾಗಿ ನಾನು ಕೇಳಿರುವೆನು. ನಾಶರಹಿತವಾದ ನಿನ್ನ ಮಾಹಾತ್ಮ್ಯವನ್ನೂ ಕೇಳಿರುವೆನು. ॥ 2 ॥

**ಏವಮೇತದ್ಯಥಾಽಽತ್ಥ ತ್ವಮಾತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥ 3 ॥**

**ಅರ್ಥ–** ಹೇ ಪರಮೇಶ್ವರನೇ ! ಯಾವ ರೀತಿಯಿಂದ ನಿನ್ನ ಬಗ್ಗೆ ನೀನು

ಹೇಳಿರುವೆಯೋ ಅದು ಹಾಗೆಯೇ ಇದೆ. ನಿನ್ನ ಮಾತು ಸತ್ಯವೇ. ಪುರುಷೋತ್ತಮನೇ! ಅಚಿಂತ್ಯಶಕ್ತಿಯುಳ್ಳ ನಿನ್ನ ರೂಪವನ್ನು ನೋಡಲು ನಾನು ಇಚ್ಛಿಸುವೆನು.

**ತದ್‌ವಚನಂ ಸ್ತುವನ್ ಜ್ಞಾತವ್ಯವಿಶ್ವರೂಪಾವಿರ್ಭಾವಂ ಪ್ರಾರ್ಥಯತೇ-ಏವಮಿತ್ಯಾದಿದ್ವಾಭ್ಯಾಮ್ ॥ ಹೇ ಪರಮೇಶ್ವರ ! ಯಥಾ ಯೇನ ಪ್ರಕಾರೇಣಾ-ತ್ಮಾನಂ ತ್ವಮಾತ್ಥ ವದಸಿ ಏತದ್‌ವಚನಂ ಏವಮೇವ ಸತ್ಯಮೇವ । ಹೇ ಪುರುಷೋತ್ತಮ ! ಐಶ್ವರಮಚಿನ್ತ್ಯಶಕ್ತಿಕಂ ತೇ ರೂಪಂ ದ್ರಷ್ಟುಮಿಚ್ಛಾಮಿ ॥ 3 ॥**

**ಅನುವಾದ-** ಹೇ ಪರಮೇಶ್ವರನೇ ! **ಯಥಾ**= ಯಾವರೀತಿಯಿಂದ ನಿನ್ನನ್ನು ನೀನು, **ಆತ್ಥ**= ಹೇಳಿರುವಿಯೋ, **ಏತತ್**= ಈ ಮಾತು, **ಏವಮೇವ**= ಸತ್ಯವೇ. ಹೇ ಪುರುಷೋತ್ತಮನೇ ! **ಐಶ್ವರಂ** = ಅಚಿಂತ್ಯಶಕ್ತಿಯುಳ್ಳ ನಿನ್ನ ರೂಪವನ್ನು ನೋಡಲಿಚ್ಛಿಸುವೆನು. ॥ 3 ॥

**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ॥ 4 ॥**

**ಅರ್ಥ-** ಹೇ ಸಮರ್ಥನೇ ! 'ಆ ರೂಪವು ನನ್ನಿಂದ ನೋಡಲು ಶಕ್ಯವೆಂದು ನೀನು ತಿಳಿದಿರುವಿಯಾದರೆ, ಸರ್ವ ಉಪಾಯಗಳಿಗೆ ಸ್ವಾಮಿಯೇ ! ನೀನು ನಿನ್ನ ಯಾವ ವಿಕಾರವಿಲ್ಲದ ಸ್ವರೂಪವನ್ನು ನನಗೆ ತೋರಿಸು.

**ಹೇ ಪ್ರಭೋ ! ಸಮರ್ಥ ! ತದ್ರೂಪಂ ಮಯಾ ದ್ರಷ್ಟುಂ ಶಕ್ಯಮಿತಿ ಯದಿ ಮನ್ಯಸೇ ತತಸ್ತರ್ಹಿ ಯೋಗೇಶ್ವರ ! ಸರ್ವೋಪಾಯಪತೇ ! ತ್ವಮವ್ಯಯ-ಮಾತ್ಮಾನಂ ಸ್ವರೂಪಂ ಮೇ ಮಹ್ಯಂ ದರ್ಶಯ । ಪ್ರಾರ್ಥನಾಯಾಂ ಲೋಟ್ । ಪ್ರಭೋ ಇತಿ ವಚನಂ ತವಾತಿಸಮರ್ಥತ್ವಾತ್ ತ್ವಚ್ಛಕ್ತ್ಯಾ ಏವ ಅತೀಂದ್ರಿಯಸ್ಯಾಪಿ ದರ್ಶನಂ ಸ್ಯಾದಿತಿ ಜ್ಞಾಪನಾಯ ॥ 4 ॥**

**ಅನುವಾದ- ಹೇ ಪ್ರಭೋ !**= ಸಮರ್ಥನೇ, **ತತ್**= ಆ ರೂಪವು ನನ್ನಿಂದ ನೋಡಲು ಶಕ್ಯವೆಂದು ನೀನು ತಿಳಿಯುವಿಯಾದರೆ, **ತತಃ**= ಆ ಪಕ್ಷದಲ್ಲಿ, **ಯೋಗೇಶ್ವರ !**= ಎಲ್ಲ ಸಾಧನೆಗಳಿಗೆ ಸ್ವಾಮಿಯೇ , ನೀನು ನಾಶರಹಿತವಾದ **ಆತ್ಮಾನಂ** = ನಿನ್ನ ಸ್ವರೂಪವನ್ನು, **ಮೇ**= ನನಗೆ ತೋರಿಸು. '**ದರ್ಶಯ**' ಎಂಬಲ್ಲಿ ಪ್ರಾರ್ಥನೆ ಎಂಬರ್ಥದಲ್ಲಿ ಲೋಟ್‌ಲಕಾರದ ಪ್ರಯೋಗ ವಿದೆ. ಅರ್ಜುನನು ಹೀಗೆ ಭಗವಂತನಲ್ಲಿ ಪ್ರಾರ್ಥಿಸುತ್ತಿದ್ದಾನೆ. ಪ್ರಭೋ ಎಂಬ ಅರ್ಜುನನ ಮಾತು ನೀನು ಅತಿ ಸಮರ್ಥನಾದ್ದರಿಂದ, ಅತೀಂದ್ರಿಯವಾದರೂ (ಕಣ್ಣಿಗೆ ಕಾಣಲು ಅಶಕ್ಯವಾದರೂ) ಆ ನಿನ್ನ ರೂಪದ ದರ್ಶನ ಮಾಡಿಸಲು ಸಮರ್ಥ ಎಂದು ತಿಳಿಸಲು ಇದೆ. ॥ 4 ॥

## ನೋಡೆನ್ನ ವಿಶ್ವರೂಪ

**ಶ್ರೀಭಗವಾನುವಾಚ –**

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ 5 ॥**

**ಅರ್ಥ**– ಅರ್ಜುನನೇ ! ನನ್ನ ಅಪ್ರಾಕೃತಗಳಾದ ಬಿಳಿ ಮುಂತಾದ ಅನೇಕ ಬಣ್ಣಗಳುಳ್ಳ ಅನೇಕ ಆಕಾರಗಳುಳ್ಳ ನೂರಾರು ಮತ್ತು ಸಾವಿರಾರು ಅನೇಕ ರೂಪಗಳನ್ನು ನೋಡು .

**ಏವಂ ಕೌತೂಹಲಾನ್ವಿತೇನ ಪಾರ್ಥೇನ ಪ್ರಾರ್ಥಿತೋ ಭಗವಾನ್ ರೂಪಂ ದಿದರ್ಶಯಿಷುರಾದೌ ದರ್ಶನಂ ಕುರ್ವಿತಿ ವಿಧತ್ತೇ– ಪಶ್ಯೇತ್ಯಾದಿನಾ ಚತುಷ್ಟ-ಯೇನ ॥**

**ತೇ ರೂಪಂ ದ್ರಷ್ಟುಮಿಚ್ಛಾಮೀತ್ಯೇಕರೂಪದೃಷ್ಟಿಪ್ರಾರ್ಥನೇಽಪಿ, ದಿವ್ಯಾನ್ಯ-ಪ್ರಾಕೃತಾನಿ ನಾನಾಭೂತಾಃ ಶುಕ್ಲಾದಿವರ್ಣಾಃ ಆಕೃತಯಃ ಸಂಸ್ಥಾನವಿಶೇಷಾಃ ಯೇಷಾಂ ತಾನಿ । ಶತಶಃ ಸಹಸ್ರಶಃ ಬಹೂನೀತಿ ಯಾವತ್ । ಮೇ ರೂಪಾಣಿ ಪಾರ್ಥ ಪಶ್ಯೇತಿ ಬಹುರೂಪದರ್ಶನೋಕ್ತಿಃ ಏಕಸ್ಯೈವ ರೂಪಸ್ಯಾಚಿಂತ್ಯ-ಶಕ್ತ್ಯಾ ವಿಶೇಷಬಲೇನ ಚಾನಂತರೂಪಸಮುದಾಯಾತ್ಮಕತ್ವಾಭಿಪ್ರಾಯೇಣೇತಿ ಜ್ಞೇಯಮ್ । ನಾನಾವಿಧಾನೀತ್ಯಸ್ಯ ವಿವರಣಂ ನಾನಾವರ್ಣೇತ್ಯಾದಿ ॥ 5 ॥**

**ಅನುವಾದ**– ಹೀಗೆ ಕುತೂಹಲದಿಂದ ಕೂಡಿರುವ ಅರ್ಜುನನಿಂದ ಪ್ರಾರ್ಥಿಸಲ್ಪಟ್ಟ ಭಗವಂತನು ತನ್ನ ದಿವ್ಯ ರೂಪವನ್ನು ತೋರಿಸಲು ಇಚ್ಛೆ ಉಳ್ಳವನಾಗಿ ಮೊದಲು **'ಪಶ್ಯ'** ಮುಂತಾಗಿ ನಾಲ್ಕು ಶ್ಲೋಕಗಳಿಂದ ನೋಡು ಎಂದು ವಿಧಿಸುತ್ತಿದ್ದಾನೆ. ನಿನ್ನ ರೂಪವನ್ನು ನೋಡಲು ಬಯಸುತ್ತೇನೆಂದು ಒಂದು ರೂಪದ ದರ್ಶನಕ್ಕಾಗಿ ಅರ್ಜುನನು ಪ್ರಾರ್ಥಿಸಿರುವನು. ಹಾಗಿದ್ದರೂ ನನ್ನ ರೂಪಗಳನ್ನು ನೋಡೆಂದು ಕೃಷ್ಣನ ಅನೇಕ ರೂಪಗಳ ದರ್ಶನದ ಬಗ್ಗೆ ಮಾತಿದೆ. ಅದರ ಅಭಿಪ್ರಾಯ– ಭಗವಂತನ ಒಂದೇ ರೂಪವು ಅಚಿಂತ್ಯ ಶಕ್ತಿಯಿಂದಲೂ ವಿಶೇಷ ಬಲ ದಿಂದಲೂ ಅನಂತರೂಪಸಮುದಾಯ ಸ್ವರೂಪವಾಗಿದೆ ಎಂದು ತಿಳಿಯಬೇಕು. **ದಿವ್ಯಾನಿ**= ಅಪ್ರಾಕೃತಗಳು **ನಾನಾವಿಧಾನಿ**= ಬಿಳಿ ಮುಂತಾದ ಅನೇಕ ಬಣ್ಣಗಳು ಆಕೃತಿಗಳು ಸಂಸ್ಥಾನ ವಿಶೇಷಗಳು (ಆಕಾರಗಳು) ಯಾವುಗಳಿಗಿವೆಯೋ ಅವು ನಾನಾವರ್ಣಾಕೃತಿಗಳು ಎಂದೆನಿ ಸುತ್ತವೆ. **'ಶತಶಃ ಸಹಸ್ರಶಃ'** ಎಂದರೆ ಅನೇಕವೆಂದರ್ಥ. ನಾನಾವಿಧವಾಗಿದೆ ಎಂಬುದನ್ನೇ ನಾನಾವರ್ಣಾಕೃತಿಗಳೆಂದು ವಿವರಿಸಲಾಗಿದೆ. ॥ 5 ॥

**ಪಶ್ಯಾದಿತ್ಯಾನ್ ವಸೂನ್ ರುದ್ರಾನ್ ಅಶ್ವಿನೌ ಮರುತಸ್ತಥಾ ।**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥ 6 ॥**

**ಅರ್ಥ–** ಭರತವಂಶದವನೇ ! ಹನ್ನೆರಡು ಆದಿತ್ಯರನ್ನು, ಎಂಟುವಸುಗಳನ್ನು , ಹನ್ನೊಂದು ರುದ್ರರನ್ನು ಹಾಗೂ ಐವತ್ತು ಮರುತ್ತರನ್ನು ನೋಡು, ಈವರೆಗೆ ನೋಡದ ಅನೇಕ ಆಶ್ಚರ್ಯಗಳನ್ನು ನೋಡು.

**ಪಶ್ಯೇತ್ಯುಕ್ತೌ ಕಸ್ತತ್ರ ವಿಶೇಷ ಇತ್ಯತ ಆಹ– ಪಶ್ಯೇತಿ ॥ ದ್ವಾದಶಾದಿತ್ಯಾನಷ್ಟೌ ವಸೂನೇಕಾದಶರುದ್ರಾನ್ ಪಂಚಾಶನ್ಮರುತಃ । ತಥಾಶಬ್ದಃ ಸಮುಚ್ಚಯೇ । ಅದೃಷ್ಟಪೂರ್ವಾಣಿ ಪೂರ್ವಮದೃಷ್ಟಾನಿ ಬಹೂನಿ ಆಶ್ಚರ್ಯಾಣಿ ಅದ್ಭುತಾನಿ ಚ ॥ 6 ॥**

**ಅನುವಾದ–** ಹನ್ನೆರಡು ಆದಿತ್ಯರನ್ನು , ಎಂಟು ವಸುಗಳನ್ನು , ಹನ್ನೊಂದು ರುದ್ರರನ್ನು, ಐವತ್ತು ಮರುತ್ತರನ್ನು ತಥಾ ಎಂಬ ಶಬ್ದವು ಇವರೆಲ್ಲರನ್ನು ಸೇರಿಸಿ ಎಂಬರ್ಥದಲ್ಲಿದೆ. **ಅದೃಷ್ಟ-ಪೂರ್ವಾಣಿ** = ಹಿಂದೆ ನೋಡದ ಅನೇಕ ಆಶ್ಚರ್ಯಗಳನ್ನು ಅದ್ಭುತಗಳನ್ನು ಎಂದರ್ಥ. ॥ 6 ॥

**ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥ 7 ॥**

**ಅರ್ಥ–** ನಿದ್ರೆಯನ್ನು ಗೆದ್ದವನೇ ! ಈ ನಾನು ತೋರಿಸುವ ನನ್ನ ರೂಪದಲ್ಲಿರುವ ಎಲ್ಲ ಚರಾಚರಪ್ರಾಣಿಗಳನ್ನು ಒಂದೇ ಕಡೆ ಇರುವಂತೆ ಈಗ ನೋಡು. ಇನ್ನೇನನ್ನು ನೋಡಲು ಇಚ್ಛಿಸುವೆಯೋ ಅವೆಲ್ಲವನ್ನು ನನ್ನ ದೇಹದಲ್ಲಿ ನೋಡು.

**ಮಮ ದೇಹೇ ಮದೀಯೇ ರೂಪೇ ಪಶ್ಯ । ಕೃತ್ಸ್ನಮಿತ್ಯಸ್ಯ ವಿವರಣಂ ಸಚರಾಚರಮಿತಿ । ಜಗತ್ । ಇಹ ತವ ಪ್ರದರ್ಶನೀಯೇ ಮಮ ದೇಹೇ । ಏಕಸ್ಥಮೇಕದೇಶಸ್ಥಮದ್ಯ ಪಶ್ಯ ಹೇ ಗುಡಾಕೇಶ ಜಿತನಿದ್ರ । ಯಚ್ಚಾನ್ಯದ್ ದ್ರಷ್ಟುಮಿಚ್ಛಸಿ ತತ್ಸರ್ವಂ ಮಮ ದೇಹೇ ಪಶ್ಯ ॥ 7 ॥**

**ಅನುವಾದ– ಮಮ ದೇಹೇ** = ನನ್ನ ರೂಪದಲ್ಲಿ ನೋಡು, **ಕೃತ್ಸ್ನಂ** ಅಂದರೆ ಎಲ್ಲಾ ಎಂದರ್ಥ. ಇದರ ವಿವರಣೆಯನ್ನೇ **ಸಚರಾಚರಂ** (ಎಲ್ಲ ಜಂಗಮಸ್ಥಾವರಗಳಿಂದ ಕೂಡಿದ ) ಎಂಬ ಪದ ವಿವರಿಸಿದೆ. ಜಗತ್ತನ್ನು , **ಇಹ** = ನಿನಗೆ ತೋರಿಸುವ ನನ್ನ ದೇಹದಲ್ಲಿ **ಏಕಸ್ಥಂ** ಅಂದರೆ ಒಂದೇ ಕಡೆ ಇರುವಂತೆ ನೋಡು. **ಹೇ ಗುಡಾಕೇಶ** != ನಿದ್ರೆಯನ್ನು ಗೆದ್ದವನೇ ! ಇನ್ನೇನನ್ನು ನೋಡಲು ಇಚ್ಛಿಸುವೆಯೋ ಅದೆಲ್ಲವನ್ನು ನನ್ನ ದೇಹದಲ್ಲಿ ನೋಡು. ॥ 7 ॥

**ಹೊಸಕಣ್ಣು ಹಚ್ಚುವೆ ವಿಶ್ವರೂಪ ಕಾಂಬುವುದಕೆ**

**ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥ 8 ॥**

**ಅರ್ಥ**– ನೀನು ಈ ನಿನ್ನ ಕಣ್ಣಿನಿಂದ ನನ್ನನ್ನು ನೋಡಲು ಸಮರ್ಥನಲ್ಲ. ನಿನಗೆ ಅಲೌಕಿಕವಾದ ದೃಷ್ಟಿಯನ್ನು ನೀಡುವೆನು. ನನ್ನ ಸರ್ವನಿಯಾಮಕತ್ವದ ಸಾಮರ್ಥ್ಯವನ್ನು ನೋಡು.

**ತ್ವಂ ದ್ರಷ್ಟುಮಿಚ್ಛಸಿ । ಮಯಾಽಪ್ಯುಚ್ಯತೇ ಪಶ್ಯೇತಿ । ತಥಾಽಪಿ ತ್ವಂ ತ್ವನೇನ ಸ್ವಚಕ್ಷುಷಾ ಮಾಂ ದ್ರಷ್ಟುಂ ನ ಶಕ್ಯಸೇ ನ ಶಕ್ತೋ ಭವಿಷ್ಯಸಿ । ಅತಸ್ತೇ ದಿವ್ಯಂ ಅಲೌಕಿಕಂ ಚಕ್ಷುರ್ದದಾಮಿ ದರ್ಶನಶಕ್ತಿಂ ದದಾಮಿ । ಐಶ್ವರಮ್ ಈಶ್ವರ-ಭೂತಮತ್ಸಂಬಂಧಿಯೋಗಂ ಸಾಮರ್ಥ್ಯಂ ಪಶ್ಯೇತಿ ॥ 8 ॥**

**ಅನುವಾದ** – ನೀನು ನೋಡಲು ಇಚ್ಛಿಸುತ್ತಿ . ನೋಡೆಂದು ನಾನೂ ಹೇಳುತ್ತಿರುವೆನು. ಹಾಗಿದ್ದರೂ ನೀನು ಈ ನಿನ್ನ ಕಣ್ಣಿನಿಂದ ನನ್ನನ್ನು ನೋಡಲು ಸಮರ್ಥನಲ್ಲ. ಆದ್ದರಿಂದ ನಿನಗೆ ದಿವ್ಯವಾದ ಅಲೌಕಿಕವಾದ ಕಣ್ಣನ್ನು ಅಂದರೆ ನೋಡುವ ಶಕ್ತಿಯನ್ನು ನೀಡುವೆನು . **ಐಶ್ವರಂ** = ಸರ್ವನಿಯಾಮಕನಾದ ನನ್ನಲ್ಲಿರುವ ಸಾಮರ್ಥ್ಯವನ್ನು ನೋಡು ಎಂದರ್ಥ. ॥ 8 ॥

**ಸಂಜಯ ಉವಾಚ -**

**ಏವಮುಕ್ತ್ವಾ ತತೋ ರಾಜನ್ ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥ 9 ॥**

**ಅರ್ಥ**– ಸಂಜಯ ಹೇಳಿದ– ರಾಜನಾದ ಧೃತರಾಷ್ಟ್ರನೇ 'ಅರ್ಜುನ, ನನ್ನ ರೂಪಗಳನ್ನು ನೋಡು ' ಮುಂತಾಗಿ ಕೃಷ್ಣನು ಹೇಳಿ ಮಹಾಸಾಧನಗಳಿಗೂ ಅನಂತಶಕ್ತಿಗಳಿಗೂ ಸ್ವಾಮಿಯಾದ ಎಲ್ಲಾ ಯಜ್ಞಗಳ ಭಾಗಗಳನ್ನು ಸ್ವೀಕರಿಸುವುದರಿಂದ ಹರಿ ಎನಿಸುವ ಕೃಷ್ಣನು ಅರ್ಜುನನಿಗೆ ಅನೇಕ ವೈಭವಗಳಿಂದ ಕೂಡಿದ ತನ್ನ ಐಶ್ವರರೂಪವನ್ನು ತೋರಿಸಿದ.

**ಅನಂತರವೃತ್ತಾಂತಂ ಧೃತರಾಷ್ಟ್ರಂ ಪ್ರತಿ ಸಂಜಯ ಉವಾಚ । ತದಾಹ- ಏವಮಿತಿ ॥ 'ಪಶ್ಯ ಮೇ ಪಾರ್ಥರೂಪಾಣಿ' ಇತ್ಯಾದಿಪ್ರಕಾರೇಣೋಕ್ತ್ವಾ ಇತ್ಯರ್ಥಃ । ಮಹತಾಂ ಯೋಗಾನಾಮುಪಾಯಾನಾಮ್ ಅನಂತಶಕ್ತೀನಾಂ ವೇಶ್ವರಃ । ಕುತ ಏತದಿತ್ಯತ ಉಕ್ತಮ್- ಹರಿರಿತಿ ॥ ಸರ್ವಯಜ್ಞಾದಿಭಾಗ-ಹರಣಾದ್ಧರಿಃ । ಪರಮಮನೇಕವಿಭವೋಪೇತಮ್ । 'ಇಡೋಪಹೂತಂ**

**ಗೇಹೇಷು ಹರೇ ಭಾಗಂ ಕ್ರತುಷ್ವಹಮ್ । ವರ್ಣೋ ಮೇ ಹರಿತಃ ಶ್ರೇಷ್ಠಃ ತಸ್ಮಾದ್ಧರಿರಿತಿ ಸ್ಮೃತಃ'ಇತಿ ಮೋಕ್ಷಧರ್ಮೋಕ್ತೇಃ । ಗೇಹೇಷು ಇಷ್ಟಿಗೃಹೇಷ್ವಿತ್ಯರ್ಥಃ । ಹರತೇರಿಕಾರಪ್ರತ್ಯಯಃ । ಅಪ್ರಾಕೃತವಿಗ್ರಹಸ್ಯ ಸಾಕಾರಸ್ಯಾನಂತಪೂಜಾಸ್ಥಾನೇಷು ಯುಗಪತ್ಸನ್ನಿಧಾನೇನ ಭಾಗಹಾರಿಣೋ ಮಹಾಯೋಗೇಶ್ವರ ತ್ವಂ ಕಿಂ ವಕ್ತವ್ಯಮಿತಿ ಭಾವಃ ॥ 9 ॥**

**ಅನುವಾದ**- ನಂತರ ನಡೆದ ವಿಚಾರವನ್ನು ಸಂಜಯನು ಧೃತರಾಷ್ಟ್ರನಿಗೆ ಹೇಳಿದ – ಅದನ್ನೇ 'ಏವಂ' ಮುಂತಾಗಿ ಹೇಳುತ್ತಾರೆ. **ಏವಂ** = ಹೀಗೆ- ಅರ್ಜುನನೇ ನನ್ನ ರೂಪಗಳನ್ನು ನೋಡು ಮುಂತಾದ ರೀತಿಯಿಂದ ಎಂದರ್ಥ. ಶ್ರೇಷ್ಠಯೋಗಗಳಿಗೆ= ಉಪಾಯಗಳಿಗೆ ಅನಂತ ಶಕ್ತಿಗಳಿಗೂ ಸ್ವಾಮಿಯಾದವ . ಇದು ಹೇಗೆ ಸಿದ್ಧಿಸುತ್ತದೆ ಎಂದರೆ ಹರಿ ಎಂಬ ಶಬ್ದದಿಂದಲೇ ಸಿದ್ಧಿಸುತ್ತದೆ. ಎಲ್ಲಾ ಯಜ್ಞಗಳ ಭಾಗ ಸ್ವೀಕರಿಸುವುದರಿಂದಲೇ ಹರಿ ಎನಿಸಿದ್ದಾನೆ. **ಪರಮಂ**= ಅನೇಕ ವೈಭವಗಳಿಂದ ಕೂಡಿದ. 'ಯಜ್ಞದ ಮನೆಗಳಲ್ಲಿ ಯಜ್ಞಗಳಲ್ಲಿ ನೀಡಲ್ಪಟ್ಟ ನನ್ನ ಭಾಗವನ್ನು ಸ್ವೀಕರಿಸುತ್ತೇನೆ. ನನ್ನ ಬಣ್ಣವೂ ಶ್ರೇಷ್ಠವಾದ ಹಸಿರು ಆಗಿದೆ. ಆದ್ದರಿಂದ ನಾನು ಹರಿ ಎನಿಸಿದ್ದೇನೆ.' ಎಂಬ ಮೋಕ್ಷಧರ್ಮದ ವಚನವೇ ಈ ವಿಚಾರದಲ್ಲಿ ಪ್ರಮಾಣವಾಗಿದೆ. ಈ ಪ್ರಮಾಣದಲ್ಲಿ ಗೇಹೇಷು ಎಂದರೆ ಯಜ್ಞಗೃಹಗಳಲ್ಲಿ ಎಂದರ್ಥ. **'ಹೃಞ್'** ಎಂಬ ಧಾತುವಿಗೆ ಇಕಾರಪ್ರತ್ಯಯ ಬಂದು ಹರಿ ಎಂದು ರೂಪವಾಗಿದೆ. ಅಪ್ರಾಕೃತ ಶರೀರವುಳ್ಳವನು ಆಕಾರದಿಂದ ಕೂಡಿದವನು ಅನಂತ ಪೂಜಾಸ್ಥಾನಗಳಲ್ಲಿ ಒಂದೇ ಕಾಲದಲ್ಲಿ ಸನ್ನಿಹಿತನಾಗಿದ್ದು ತನ್ನ ಭಾಗವನ್ನು ಸ್ವೀಕರಿಸುವನೆಂದಮೇಲೆ ಮಹಾಯೋಗೇಶ್ವರ ಎಂದು ಬೇರೆ ಏನು ಹೇಳಬೇಕು? ಎಂದು ಆಶಯ. ॥9॥

## ವಿಸ್ಮಯಗಳ ತವರಾದ ವಿಶ್ವರೂಪ

**ಅನೇಕವಕ್ತ್ರನಯನಮನೇಕಾದ್ಭುತದರ್ಶನಮ್ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥ 10 ॥**

**ಅರ್ಥ**– ಅನಂತ ಮುಖಗಳು, ಕಣ್ಣುಗಳು ಇರುವಂತಹದು. ಅನಂತ ಅದ್ಭುತಗಳ ದರ್ಶನವುಳ್ಳದ್ದು. ಅನಂತ ದಿವ್ಯ ಆಭರಣಗಳನ್ನು ಧರಿಸಿದ್ದು. ದಿವ್ಯವಾದ ಅನೇಕ ಎತ್ತಿರುವ ಆಯುಧಗಳುಳ್ಳದ್ದೂ ಆದ ರೂಪವನ್ನು ತೋರಿಸಿದ.

**ತದ್ರೂಪಮಾಹ - ಅನೇಕೇತಿ ॥ ಅನೇಕಾನಿ ವಕ್ತ್ರಾಣಿ ನಯನಾನಿ ಯಸ್ಯ ತತ್ । ಅನೇಕಶಬ್ದೋಽನಂತವಾಚೀ । ಅನೇಕೇಷಾಮದ್ಭುತಾನಾಂ ದರ್ಶನಂ ಯಸ್ಮಿನ್ನಿತ್ಯನೇಕಾದ್ಭುತದರ್ಶನಂ ರೂಪಂ ದರ್ಶಯಾಮಾಸೇತ್ಯನುಷಂಗಃ ॥ 10 ॥**

**ಅನುವಾದ -** ಸಂಜಯನು ಆ ರೂಪವನ್ನು ವಿವರಿಸುತ್ತಿದ್ದಾನೆ. ಅನೇಕ ಮುಖಗಳೂ, ಕಣ್ಣುಗಳೂ ಉಳ್ಳದ್ದು. ಅನೇಕ ಶಬ್ದವು ಅನಂತ ಎಂಬರ್ಥವನ್ನು ಹೇಳುತ್ತದೆ. ಅನೇಕ ಅದ್ಭುತಗಳ ನೋಡುವಿಕೆಯುಳ್ಳ ರೂಪವನ್ನು ಅನೇಕಾದ್ಭುತ ದರ್ಶನ ಎಂದಿದ್ದಾರೆ. ಅದನ್ನು ತೋರಿಸಿದ, ಎಂದು ಹಿಂದಿನಿಂದ ತಂದು ಸೇರಿಸಬೇಕು. ॥ 10 ॥

**ದಿವ್ಯಮಾಲಾಂಬರಧರಂ ದಿವ್ಯಗಂಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಮ್ ॥ 11 ॥**

**ಅರ್ಥ–** ಆ ರೂಪವು ದಿವ್ಯಮಾಲೆಗಳನ್ನು ವಸ್ತ್ರಗಳನ್ನು ಧರಿಸಿದೆ. ದಿವ್ಯಗಂಧದಿಂದ ಅನುಲೇಪಿಸಲ್ಪಟ್ಟಿದೆ. ಎಲ್ಲ ಆಶ್ಚರ್ಯ ಸ್ವರೂಪವಾಗಿದೆ. ಲೀಲಾತ್ಮಕವಾದದ್ದು, ಜಯರೂಪವಾದದ್ದು, ಪ್ರಕಾಶರೂಪವಾದದ್ದು, ಸಂಹಾರಾತ್ಮವಾದದ್ದು, ಪ್ರಶಂಸನೀಯವಾದದ್ದು, ಆನಂದರೂಪವಾದದ್ದು, ಸುಖದಿಂದ ತುಂಬಿ ತುಳುಕಿರುವುದು, ಜ್ಞಾನರೂಪವಾದದ್ದೂ, ಎಲ್ಲೆಡೆ ವ್ಯಾಪ್ತವಾದದ್ದು. ಎಲ್ಲ ದೇಶಕಾಲಗಳಿಂದಲೂ ಗುಣಗಳಿಂದಲೂ ಪೂರ್ಣವಾದದ್ದು. ಎಲ್ಲ ದಿಕ್ಕುಗಳಲ್ಲೂ ಮುಖವುಳ್ಳದ್ದು, ಅಥವಾ ಅನಂತ ಮುಖವುಳ್ಳದ್ದು.

**ಸರ್ವಾಶ್ಚರ್ಯಮಯಂ ಸರ್ವಾಶ್ಚರ್ಯಾತ್ಮಕಮ್ । ತಾದಾತ್ಮ್ಯಾರ್ಥೇ ಮಯಟ್ । ದೇವಂ ಕ್ರೀಡಾದಿಗುಣಮ್ । ಅನಂತಂ ದೇಶಕಾಲಗುಣಾ-ಪರಿಚ್ಛಿನ್ನಮ್ । ವಿಶ್ವತೋಮುಖಂ ಸರ್ವದಿಕ್ಷು ಮುಖಂ ಯಸ್ಯ ತದ್ವಿಶ್ವತೋ-ಮುಖಮ್ । ಅನಂತಮುಖಮಿತಿ ವಾ ॥ 11 ॥**

**ಅನುವಾದ- ಸರ್ವಾಶ್ಚರ್ಯಮಯಂ=** ಎಲ್ಲ ಆಶ್ಚರ್ಯ ಸ್ವರೂಪವಾದದ್ದು. ಒಂದರ ಸ್ವರೂಪವಾಗಿದೆ ಎಂಬರ್ಥದಲ್ಲಿ 'ಮಯಟ್' ಪ್ರತ್ಯಯದ ಪ್ರಯೋಗವಿದೆ. **ದೇವಂ=** ಲೀಲೆ, ಜಯ, ಪ್ರಕಾಶ, ಸಂಹಾರ, ಪ್ರಶಂಸನೀಯತೆ, ಆನಂದ, ಜ್ಞಾನ, ವ್ಯಾಪ್ತಿ, ಮುಂತಾದ ಗುಣವುಳ್ಳದ್ದೂ ಗುಣರೂಪವೂ ಆಗಿದೆ. **ಅನಂತಂ=** ದೇಶಕಾಲಗುಣಗಳಿಂದ ಪರಿಮಿತಿ ಇಲ್ಲದ್ದು. **ವಿಶ್ವತೋ ಮುಖಂ =** ಎಲ್ಲ ದಿಕ್ಕುಗಳಲ್ಲೂ ಮುಖವುಳ್ಳದ್ದು ಅಥವಾ ಅನಂತ ಮುಖವುಳ್ಳದ್ದು. ॥ 11 ॥

**ಸಾವಿರಸೂರ್ಯರ ಕಾಂತಿ ಕಂಗೊಳಿಸುತ್ತಿದೆ ಕೃಷ್ಣನ ಮೊಗದಲ್ಲಿ**

**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾತ್ ಭಾಸಸ್ತಸ್ಯ ಮಹಾತ್ಮನಃ ॥ 12 ॥**

**ಅರ್ಥ–** ಆಕಾಶದಲ್ಲಿ ಒಮ್ಮೆಲೇ ಉದಿತರಾದ ಅನಂತ ಸೂರ್ಯರ ಒಂದೇ ಕಾಲದಲ್ಲಿ ಬೆಳಗುವ ಪ್ರಭೆ ಇದ್ದಿದ್ದರೆ ಅದು ಆ ವಿಶಿಷ್ಟರೂಪದ ಪ್ರಭೆಗೆ ಸಮವಾಗುತ್ತಿತ್ತು. ಮತ್ತೊಂದು ಸಮವಾಗದು.

**ಕಿಂಚ ದಿವ್ಯಾಕಾಶೇ ಸೂರ್ಯಸಹಸ್ರಸ್ಯಾನನ್ತಸೂರ್ಯರಾಶೇಃ ಯುಗಪದುತ್ಥಿತಸ್ಯೇತಿ ಶೇಷಃ । ಪ್ರಭಾ ಯುಗಪದುತ್ಥಿತಾ ಸ್ಯಾತ್ ಸಾ ಪ್ರಭಾ ತಸ್ಯ ಮಹಾತ್ಮನೋ ವಿಶ್ವರೂಪಸ್ಯ ಭಾಸಃ ಪ್ರಭಾಯಾಃ ಸದೃಶೀ ಸ್ಯಾತ್ ನಾನ್ಯಾऽಸ್ತ್ಯುಪಮೇತ್ಯರ್ಥಃ । ॥ 12 ॥**

**ಅನುವಾದ-** ಮತ್ತೇನೆಂದರೆ **ದಿವಿ**= ಆಕಾಶದಲ್ಲಿ , **ಸೂರ್ಯಸಹಸ್ರಸ್ಯ**= ಒಟ್ಟಿಗೆ ಉದಯಿಸಿರುವ ಎಂದು ಶೇಷಪೂರಣ ಮಾಡಿಕೊಳ್ಳಬೇಕು. ಅಂತಹ ಅನಂತ ಸೂರ್ಯ ರಾಶಿಯ ಪ್ರಭೆಯು ಒಟ್ಟಿಗೆ ಬೆಳಗಿದ್ದರೆ ಆ ಪ್ರಭೆಯು ಆ ಮಹಾತ್ಮನ ವಿಶ್ವರೂಪದ, **ಭಾಸಃ**= ಪ್ರಭೆಗೆ ಸಮವಾಗುತ್ತಿತ್ತು. ಈ ವಿಶ್ವರೂಪದ ಪ್ರಭೆಗೆ ಮತ್ತೊಂದು ಉಪಮೆ ಇಲ್ಲ. ॥ 12 ॥

**ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ ।**
**ಅಪಶ್ಯತ್ ದೇವದೇವಸ್ಯ ಶರೀರೇ ಪಾಂಡವಸ್ತದಾ ॥ 13 ॥**

**ಅರ್ಥ–** ದೇವದೇವನ ಶರೀರವಾದ ವಿಶ್ವರೂಪವನ್ನು ಭಗವಂತ ತೋರಿಸಿದಾಗ ಅದರಲ್ಲಿ ಪಾಂಡುಪುತ್ರನು ದೇವ, ದಾನವ, ಮಾನವ ಮುಂತಾದ ಅನೇಕ ಪ್ರಕಾರಗಳಿಂದ ಅನೇಕ ವಿಧವಾಗಿ ಬೇರೆ ಬೇರೆಯಾಗಿರುವ ಇಡೀ ಜಗತ್ತನ್ನೇ ಒಂದೇ ಕಡೆಯಲ್ಲಿ ನೋಡಿದನು.

**ತತಃ ಕಿಂ ಜಾತಮಿತ್ಯತ ಆಹ- ತತ್ರೇತಿ ॥ ಭಗವತಾ ಪ್ರದರ್ಶಿತೇ ಸತಿ ದೇವದೇವಸ್ಯ ಶರೀರೇ ವಿಶ್ವರೂಪೇ ದೇವದಾನವಮಾನವಾದಿಭೇದೇನಾನೇಕಧಾ ಪ್ರವಿಭಕ್ತಂ ಕೃತ್ಸ್ನಂ ಜಗದೇಕಸ್ಥಮೇಕದೇಶಸ್ಥಂ ತದಾऽಪಶ್ಯತ್ ॥ 13 ॥**

**ಅನುವಾದ -** ಮುಂದೇನಾಯಿತು . ಈ ಶಂಕೆಯನ್ನು 'ತತ್ರ' ಮುಂತಾಗಿ ಪರಿಹರಿಸುತ್ತಾನೆ. ಭಗವಂತನು ತೋರಿಸಿದಾಗ ದೇವದೇವನ ಶರೀರವಾದ ವಿಶ್ವರೂಪದಲ್ಲಿ ದೇವ,ದಾನವ, ಮಾನವ ಮುಂತಾದ ಪ್ರಕಾರಗಳಿಂದ ಅನೇಕ ರೀತಿಯಾಗಿ ಭಿನ್ನವಾಗಿರುವ ಇಡೀ ಜಗತ್ತನ್ನು, **ಏಕಸ್ಥಂ**= ಒಂದೇ ಪ್ರದೇಶದಲ್ಲಿರುವಂತೆ ಆಗ ನೋಡಿದನು. ॥ 13 ॥

**ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥ 14 ॥**

**ಅರ್ಥ–** ಅನಂತರ ಆ ಧನಂಜಯನು ಆಶ್ಚರ್ಯಗೊಂಡವನಾಗಿ ರೋಮಾಂಚಿತನಾದನು. ಮುಡಿಯಿಂದ ದೇವನಾದ ಕೃಷ್ಣನನ್ನು ನಮಸ್ಕರಿಸಿ ಅಂಜಲಿಬದ್ಧನಾಗಿ ಮಾತನಾಡಿದನು.

**ದರ್ಶನಾನಂತರಂ ಕಿಮಕರೋದಿತ್ಯತ ಆಹ- ತತ ಇತಿ ॥ ದರ್ಶನಾನಂತರಮ್ ॥ 14 ॥**

**ಅನುವಾದ –** ನೋಡಿದ ನಂತರ ಏನು ಮಾಡಿದ ಎಂಬ ಶಂಕೆಯನ್ನು 'ತತಃ' ಮುಂತಾಗಿ ಪರಿಹರಿಸುತ್ತಾರೆ. ತತಃ = ನೋಡಿದ ನಂತರ. ॥ 14 ॥

## ನೀನು ವಿಶ್ವಾಧಾರ

**ಅರ್ಜುನ ಉವಾಚ -**

**ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥಮ್**
**ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥ 15 ॥**

**ಅರ್ಥ–** ಅರ್ಜುನ ಹೇಳಿದ– ದೇವನೆ ! ನಿನ್ನ ದೇಹದಲ್ಲಿ ಎಲ್ಲ ದೇವತೆಗಳನ್ನು ಹಾಗೆಯೇ ಪ್ರಾಣಿವಿಶೇಷಗಳ ಸಮೂಹಗಳನ್ನು ಚತುರ್ಮುಖ ಬ್ರಹ್ಮನನ್ನು, ಕಮಲಾಸನ ಚತುರ್ಮುಖನಲ್ಲಿ ಆಶ್ರಿತನಾದ ರುದ್ರನನ್ನು ಎಲ್ಲ ಋಷಿಗಳನ್ನು, ಅದ್ಭುತ ಸರ್ಪಗಳನ್ನು ನೋಡುತ್ತಿರುವೆನು.

**ಕಿಮಭಾಷತೇತ್ಯತೋ ದೃಷ್ಟರೂಪಾನುವಾದಪೂರ್ವಂ ಸ್ತುತಿಮಕರೋದಿತ್ಯಾಹ- ಅರ್ಜುನ ಉವಾಚೇತ್ಯಾದಿನಾ ॥ ಸರ್ವಾನ್ ದೇವಾನ್ ಸರ್ವಾನ್ ಪ್ರಾಣಿವಿಶೇಷಸಮೂಹಾಂಶ್ಚ ಇತ್ಯರ್ಥಃ । ಬ್ರಹ್ಮಾಣಂ ಚತುರ್ಮುಖಮ್ । ಕಮಲಾಸನೇ ಚತುರ್ಮುಖೇ ಸ್ಥಿತಂ ಈಶಂ ರುದ್ರಮ್ । ತದುಕ್ತಂ ಪಾದ್ಮೇ- 'ವಿಷ್ಣುಂ ಸಮಾಶ್ರಿತೋ ಬ್ರಹ್ಮಾ ಬ್ರಹ್ಮಣೋಽಂಕಗತೋ ಹರಃ । ಹರಸ್ಯಾಂಗವಿಶೇಷೇಷು ದೇವಾಃ ಸರ್ವೇಽಪಿ ಸಂಸ್ಥಿತಾಃ' ಇತಿ । ತವ ದೇಹೇ ದೇವಾನಿತ್ಯತ್ರಾಪಿ ಪರಂಪರಯೇತಿ ಜ್ಞೇಯಮ್ । ದಿವ್ಯಾನ್ ಅದ್ಭುತಾನುರಗಾನ್ ಸರ್ಪಾಂಶ್ಚ ತವ ದೇಹೇ ಪಶ್ಯಾಮಿ ॥ 15 ॥**

**ಅನುವಾದ -** ಏನು ಮಾತನಾಡಿದ ಎಂಬ ಶಂಕೆಗೆ ನೋಡಿದ್ದನ್ನು ಅನುವಾದಿಸಿ ಸ್ತೋತ್ರ ಮಾಡಿದ ಎಂದು 'ಅರ್ಜುನ ಉವಾಚ ' ಮುಂತಾಗಿ ಹೇಳುತ್ತಾರೆ. ಎಲ್ಲ ದೇವತೆಗಳನ್ನು

ಪ್ರಾಣಿವಿಶೇಷಗಳ ಸಮೂಹಗಳನ್ನು ಎಂದರ್ಥ. **ಬ್ರಹ್ಮಾಣಂ**= ಚತುರ್ಮುಖನನ್ನು , ಕಮಲಾಸನನಾದ ಚತುರ್ಮುಖನಲ್ಲಿ ಇರುವ **ಈಶಂ**= ರುದ್ರನನ್ನು , 'ಬ್ರಹ್ಮದೇವರು ವಿಷ್ಣುವನ್ನು ಆಶ್ರಯಿಸಿರುವರು. ರುದ್ರನು ಬ್ರಹ್ಮನ ತೊಡೆಯಲ್ಲಿರುವನು. ಎಲ್ಲಾ ದೇವತೆಗಳು ರುದ್ರದೇವರ ಬೇರೆ ಬೇರೆ ಅಂಗಗಳಲ್ಲಿ ಆಶ್ರಿತರಾಗಿದ್ದಾರೆ' ಎಂದು ಪಾದ್ಮ ಪುರಾಣದಲ್ಲಿ ಹೇಳಿದೆ. ನಿನ್ನ ದೇಹದಲ್ಲಿ ದೇವತೆಗಳನ್ನು ನೋಡಿದೆ ಎಂದರೆ ನಿನ್ನ ದೇಹದಲ್ಲಿ ಬ್ರಹ್ಮನನ್ನು , ಅವನಲ್ಲಿ ರುದ್ರನನ್ನು , ಅವನಲ್ಲಿ ಎಲ್ಲಾ ದೇವತೆಗಳನ್ನು ಎಂದು ಪರಂಪರೆಯಾಗಿ ಇರುವುದನ್ನು ನೋಡಿದೆ ಎಂದರ್ಥ. **ದಿವ್ಯಾನ್**= ಅದ್ಭುತಗಳಾದ, **ಉರಗಾನ್** = ಸರ್ಪಗಳನ್ನು ನಿನ್ನ ದೇಹದಲ್ಲಿ ನೋಡುತ್ತಿರುವೆನು. ॥ 15 ॥

**ಅನೇಕಬಾಹೂದರವಕ್ತ್ರನೇತ್ರಂ ಪಶ್ಯಾಮಿ**
**ತ್ವಾಂ ಸರ್ವತೋಽನಂತರೂಪಮ್ ।**
**ನಾಂತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥ 16 ॥**

**ಅರ್ಥ**– ಹೇ ಪೂರ್ಣರೂಪನೇ ! ಜಗತ್ಪತಿಯೇ ! ಅನಂತ ಬಾಹುಗಳೂ , ಉದರಗಳೂ, ಮುಖಗಳೂ, ಕಣ್ಣುಗಳೂ, ಉಳ್ಳ ಎಲ್ಲೆಡೆಯು ಅಪರಿಮಿತವಾದ ರೂಪವುಳ್ಳ ನಿನ್ನನ್ನು ನೋಡುತ್ತಿರುವೆನು. ನಿನ್ನ ಮೊದಲನ್ನು , ಮಧ್ಯವನ್ನು , ಕೊನೆಯನ್ನು ನಾನು ನೋಡುತ್ತಿಲ್ಲ.

**'ಅನೇಕಬಾಹೂದರವಕ್ತ್ರನೇತ್ರಂ' ಇತ್ಯತ್ರಾಪಿ ಅನೇಕನಯನಮಿತ್ಯತ್ರೇವಾನೇಕಶಬ್ದೋಽನಂತವಾಚೀ । ಪ್ರಾಗುಕ್ತಾನುವಾದರೂಪತ್ವಾದಪೌನರುಕ್ತ್ಯಮ್ । ಸರ್ವತಃ ಸರ್ವಸ್ಮಿನ್ ದೇಶೇ ಅನಂತಾನ್ಯಪರಿಮಿತ ರೂಪಾಣಿ ಯಸ್ಯ ತಮ್ । ಹೇ ವಿಶ್ವರೂಪ ಪೂರ್ಣರೂಪ ! 'ಸರ್ವಂ ಸಮಸ್ತಂ ವಿಶ್ವಂ ಚ ಅನಂತಂ ಪೂರ್ಣಮೇವ ಚ ' ಇತ್ಯುಕ್ತೇಃ । ವಿಶ್ವೇಶ್ವರ ಜಗತ್ಪತೇ । ತವಾದಿಂ ಮಧ್ಯಮ್ ಅಂತಂ ವಾ ನ ಪಶ್ಯಾಮಿ । ನಞಃ ತ್ರಿರುಕ್ತಿರಾದರಾರ್ಥಾ । ಅತ ಏವಾದ್ಯಂತಯೋರಭಾವಾದೇವ ಮಧ್ಯಾಭಾವಸಿದ್ಧೌ ಪುನರ್ಮಧ್ಯಂ ನೇತ್ಯುಪಚಾರನಿವೃತ್ತ್ಯರ್ಥಮ್ ॥ 16 ॥**

**ಅನುವಾದ**– 'ಅನೇಕಬಾಹೂದರವಕ್ತ್ರನೇತ್ರಂ' ಎಂಬಲ್ಲಿ ಹಿಂದೆ ಹೇಳಿದ **ಅನೇಕವಕ್ತ್ರನಯನಂ** ಎಂಬಲ್ಲಿ ಹೇಳಿದಂತೆ ಅನೇಕ ಶಬ್ದವು ಅನಂತ ಎಂಬ ಅರ್ಥವನ್ನು ಹೇಳುತ್ತದೆ. ಹಿಂದೆ ಹೇಳಿದ್ದನ್ನು ಅನುವಾದಿಸಿ ಹೆಚ್ಚಿನ ವಿಧಾನ ಮಾಡುವುದರಿಂದ ಪೌನರುಕ್ತ್ಯದೋಷಕ್ಕೆ ಅವಕಾಶವಿಲ್ಲ. **ಸರ್ವತಃ**= ಎಲ್ಲ ದೇಶಗಳಲ್ಲೂ ಅನಂತ, ಪರಿಮಿತಿ ಇಲ್ಲದ ರೂಪವುಳ್ಳವ ಎಂದರ್ಥ. ಹೇ ವಿಶ್ವರೂಪ ! ಪೂರ್ಣರೂಪವುಳ್ಳವನೇ. ಸರ್ವ, ಸಮಸ್ತ, ವಿಶ್ವ ಅನಂತ, ಪೂರ್ಣ

ಎಂಬುದಾಗಿ ವಿಶ್ವಶಬ್ದಕ್ಕೆ ಪೂರ್ಣವೆಂದೇ ಅರ್ಥವು ಹೇಳಿದೆ. **ವಿಶ್ವೇಶ್ವರ** = ಜಗತ್ತಿನ ಸ್ವಾಮಿಯೇ ನಿನ್ನ ಮೊದಲನ್ನು ಮಧ್ಯವನ್ನು ಕೊನೆಯನ್ನಾಗಲೀ ನೋಡುತ್ತಿಲ್ಲ. ಇಲ್ಲವೆನ್ನುವ ಅರ್ಥವುಳ್ಳ **'ನಞ್'** ಶಬ್ದವನ್ನು ಒಮ್ಮೆ ಹೇಳಿದರೂ ಪ್ರತ್ಯೇಕವಾಗಿ ಅನ್ವಯ ಮಾಡಲು ಬರುತ್ತಿತ್ತು. ನಿನ್ನ ಮೊದಲು , ಮಧ್ಯ, ಅಂತ್ಯಗಳು ಇಲ್ಲವೇ ಇಲ್ಲ ಎಂಬ ವಿಚಾರದಲ್ಲಿ ಆದರವನ್ನು ಸೂಚಿಸಲು ಮೂರು ಬಾರಿ ಪ್ರತ್ಯೇಕವಾಗಿ ಹೇಳಿದೆ. ಮೊದಲು ತುದಿ ಇಲ್ಲದಿರುವುದರಿಂದಲೇ ಮಧ್ಯ ಇಲ್ಲವೆಂದು ಸಿದ್ಧಿಸುತ್ತದೆ. ಹಾಗಿದ್ದರೂ ಮತ್ತೆ ಮಧ್ಯವಿಲ್ಲವೆಂದು ಹೇಳಿದ್ದು ಈ ಮಾತು ಕೇವಲ ಬಾಯಿಮಾತಿನ ಔಪಚಾರಿಕವಾದ ಮಾತಲ್ಲ. ವಾಸ್ತವವಾಗಿಯೂ ಅವನಿಗೆ ಮಧ್ಯವಿಲ್ಲವೆಂಬ ಆಶಯದಿಂದ ಹೇಳಿದೆ. || 16 ||

**ಕಿರೀಟಿನಂ ಗದಿನಂ ಚಕ್ರಿಣಂ ಚ**
**ತೇಜೋರಾಶಿಂ ಸರ್ವತೋ ದೀಪ್ತಿಮಂತಮ್ ।**
**ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾತ್**
**ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ || 17 ||**

**ಅರ್ಥ–** ಕಿರೀಟ, ಗದೆ, ಚಕ್ರಗಳನ್ನು ಧರಿಸಿರುವವನು . ತೇಜೋರಾಶಿಯಾಗಿರುವವನು. ಎಲ್ಲೆಡೆಯು ಕಾಂತಿಯನ್ನು ಸೂಸುವ, ಕಣ್ಣುಕುಕ್ಕುವ, ನೋಡಲಾಗದ ಎಲ್ಲೆಡೆಯಿಂದಲೂ ಬೆಳಗಿದ ಅಗ್ನಿಸೂರ್ಯರಂತೆ ಬೆಳಗುತ್ತಿರುವ ಅಪರಿಮಿತಕಾಂತಿಯುಳ್ಳ ನಿನ್ನನ್ನು ನೋಡುತ್ತಿರುವೆನು.

**ದೀಪ್ತಯೋರನಲಾರ್ಕಯೋರ್ದ್ಯುತಿರಿವ ದ್ಯುತಿಃ ಪ್ರಕಾಶೋ ಯಸ್ಯ ತಮ್ ಇತ್ಯುಕ್ತ್ವಾ ಪ್ರಾಪ್ತಪರಿಮಿತಿಶಂಕಾವ್ಯುದಾಸಾಯೋಕ್ತಮಪ್ರಮೇಯಮಿತಿ ಅಮಿತ-ದ್ಯುತಿಮಿತ್ಯರ್ಥಃ || 17 ||**

**ಅನುವಾದ–** ಬೆಳಗಿದ ಅಗ್ನಿಸೂರ್ಯರ ಕಾಂತಿಯಂತೆ ಕಾಂತಿ – ಪ್ರಕಾಶವುಳ್ಳವನು ಎಂಬ ಮಾತಿನಿಂದ ಭಗವಂತನ ಕಾಂತಿಗೆ ಪರಿಮಿತಿ ಇದೆಯೇ ? ಎಂಬ ಶಂಕೆ ಬಂದೀತು. ಅದನ್ನು ನಿರಾಕರಿಸಲು **ಅಪ್ರಮೇಯಂ** = ಅಪರಿಮಿತಕಾಂತಿಯುಳ್ಳವನು ಎಂದಿರುವರು. || 17 ||

## ನೀನು ಧರ್ಮರಕ್ಷಕ

**ತ್ವಮಕ್ಷರಂ ಪರಮಂ ವೇದಿತವ್ಯಂ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**

**ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ**
**ಸನಾತನಸ್ತ್ವಂ ಪುರುಷೋ ಮತೋ ಮೆ ॥ 18 ॥**

**ಅರ್ಥ**– ನೀನು ಪರಮಾಕ್ಷರನೆಂದು ತಿಳಿಯಲ್ಪಡುವವನು. ನೀನು ಈ ಜಗತ್ತಿಗೆ ಮುಖ್ಯಾಶ್ರಯನು, ನೀನು ಯಾವ ವಿಕಾರವಿಲ್ಲದವನು. ಹ್ರಾಸವಿಲ್ಲದವನು. ನೀನು ಅನಾದಿ ಪರಂಪರೆಯಿಂದ ಬಂದ ಧರ್ಮದ ರಕ್ಷಕನು. ಅನಾದಿನಿತ್ಯಪುರುಷನು ಎಂದು ನಾನು ತಿಳಿದಿರುವೆನು.

**ಪರಂ ನಿಧಾನಂ ಮುಖ್ಯಾಶ್ರಯಃ । ಶಾಶ್ವತಧರ್ಮಗೋಪ್ತಾ ಅನಾದಿ-ಪರಂಪರಾಪ್ರಾಪ್ತಧರ್ಮರಕ್ಷಕಃ । ಅವ್ಯಯೋ ಹ್ರಾಸಹೀನಃ ಸನಾತನೋಽ-ನಾದಿನಿತ್ಯಃ ಪುರುಷೋ ಮೇ ಮತಃ ॥ 18 ॥**

**ಅನುವಾದ**- **ಪರಂ ನಿಧಾನಂ**= ಮುಖ್ಯಾಶ್ರಯನು, **ಶಾಶ್ವತಧರ್ಮಗೋಪ್ತಾ**= ಅನಾದಿ ಪರಂಪರೆಯಿಂದ ಬಂದ ಧರ್ಮದ ರಕ್ಷಕನು. **ಅವ್ಯಯಃ**= ಹ್ರಾಸವಿಲ್ಲದವನು, **ಸನಾತನಃ**= ಮೊದಲು ಕೊನೆ ಇಲ್ಲದ ಪುರುಷನೆಂದು ನಾನು ತಿಳಿದಿರುವೆನು. ॥ 18 ॥

## ನಿನಗೆ ಮೊದಲು-ಕೊನೆಗಳಿಲ್ಲ. ನಿನ್ನ ಅನಂತ ಶಕ್ತಿಯಿಂದ ಎಲ್ಲ ವಿಶ್ವ ಬೆಳಗುತ್ತಿದೆ

**ಅನಾದಿಮಧ್ಯಾಂತಮನಂತವೀರ್ಯಮ್**
**ಅನಂತಬಾಹುಂ ಶಶಿಸೂರ್ಯನೇತ್ರಮ್ ।**
**ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ**
**ಸ್ವತೇಜಸಾ ವಿಶ್ವಮಿದಂ ತಪಂತಮ್ ॥ 19 ॥**

**ಅರ್ಥ**– ನೀನು ಗುಣಗಳಿಂದ ಮೊದಲು, ಮಧ್ಯ , ತುದಿ ಇಲ್ಲದವನು . ಅನಂತವೀರ್ಯ, ಅನಂತ ಬಾಹುಗಳುಳ್ಳವನು . ಚಂದ್ರ ಸೂರ್ಯರು ನಿನ್ನ ಕಣ್ಣನ್ನು ಆಶ್ರಯಿಸಿರುವರು. ನಿನ್ನ ಕಣ್ಣಿಂದ ಹುಟ್ಟಿದವರು. ಬೆಳಗುವ ಅಗ್ನಿಯು ನಿನ್ನ ಮುಖದಲ್ಲಿದ್ದಾನೆ. ನಿನ್ನ ಮುಖದಿಂದ ಹುಟ್ಟಿದ್ದಾನೆ. ನಿನ್ನ ತೇಜಸ್ಸಿನಿಂದ ಈ ಜಗತ್ತನ್ನೇ ಬೆಳಗುವ, ಬೆಚ್ಚಗಿಡುವ ನಿನ್ನನ್ನು ನೋಡುತ್ತಿರುವನು.

**ಅನಾದಿಮಧ್ಯಾಂತಂ ಆದಿಮಧ್ಯಾಂತಶೂನ್ಯಮ್ । ಗುಣತೋಽತ್ರಾದಿ-ಮಧ್ಯಾಂತಹೀನತ್ವಮುಚ್ಯತೇ । 'ನಾಂತಂ ನ ಮಧ್ಯಂ' ಇತ್ಯತ್ರ ದೇಶತಃ । ಅತೋ ನ ಪೌನರುಕ್ತ್ಯಮ್ । ಶಶಿಸೂರ್ಯೌ ನೇತ್ರಯೋರ್ಯಸ್ಯ ತಮಿತಿ ವಾ ಜನ್ಯಜನಕಭಾವೇನ ವಾಽಭೇದೋಕ್ತಿಃ । ದೇವಾನಾಂ**

**ಬಹುರೂಪತ್ವಾದನೇಕಾಶ್ರಯತ್ವಂ ಯುಕ್ತಮಿತಿ 'ಚಂದ್ರಮಾ ಮನಸೋ ಜಾತ' (ಖುಗ್ವೇದಖಿಲೇಷು) ಇತಿ ಮನೋಜಾತತಯಾ ತದಾಶ್ರಯತ್ವಮಪ್ಯವಿರುದ್ಧಮ್ । ದೀಪ್ತಹುತಾಶವಕ್ತ್ರಮಿತಿ ಜನ್ಯಜನಕಭಾವೇನಾಶ್ರಯಾಶ್ರಯಿಭಾವೇನ ವೇತಿ ಧ್ಯೇಯಮ್ (ಜ್ಞೇಯಮ್) ॥ 19 ॥**

**ಅನುವಾದ-** ಹಿಂದೆ **'ನಾಂತಂ ನ ಮಧ್ಯಂ'** ಎಂಬಲ್ಲಿ ಭಗವಂತನಿಗೆ ದೇಶದಿಂದ ಆದಿ ಮಧ್ಯ ಅಂತ್ಯವಿಲ್ಲವೆಂದು ಹೇಳಿದೆ. ಈ ಶ್ಲೋಕದಲ್ಲಿ **ಅನಾದಿ ಮಧ್ಯಾಂತಂ=** ಆದಿ ಮಧ್ಯ ಕೊನೆ ಯಿಲ್ಲದವನೆಂದು ಗುಣಗಳಿಂದ ತುದಿಮಧ್ಯ ಕೊನೆಯಿಲ್ಲವೆಂದು ಹೇಳುತ್ತಿದ್ದಾರೆ. ಆದ್ದರಿಂದ ಪೌನರುಕ್ತ್ಯದೋಷಕ್ಕೆ ಅವಕಾಶವಿಲ್ಲ. ಚಂದ್ರಸೂರ್ಯರು ಇವನ ಕಣ್ಣಿನಲ್ಲಿದ್ದಾರೆ. ಅಥವಾ ಚಂದ್ರಸೂರ್ಯರಿಗೆ ಇವನ ಕಣ್ಣು ಕಾರಣವಾಗಿದೆ ಎಂಬರ್ಥದಲ್ಲಿ ಚಂದ್ರಸೂರ್ಯರೇ ಇವನ ಕಣ್ಣು ಎಂದು ಹೇಳಿದ್ದಾರೆ. ಖುಗ್ವೇದಖಿಲದಲ್ಲಿ **'ಚಂದ್ರಮಾ ಮನಸೋ ಜಾತಃ'** ಎಂಬುದಾಗಿ ಚಂದ್ರನು ಭಗವಂತನ ಮನಸ್ಸಿನಿಂದ ಹುಟ್ಟಿದವನಾಗಿ ಅವನ ಮನಸ್ಸನ್ನು ಆಶ್ರಯಿಸಿದ್ದಾನೆ ಎಂದಿದ್ದರೂ ದೇವತೆಗಳಿಗೆ ಅನೇಕ ರೂಪಗಳಿರುವುದರಿಂದ ಅನೇಕ ಕಡೆ ಇರುವುದು ವಿರುದ್ಧವಲ್ಲ. **ದೀಪ್ತಹುತಾಶ ವಕ್ತ್ರಂ=** ಭಗವಂತನ ಮುಖವು ಬೆಳಗುವ ಅಗ್ನಿಗೆ ಕಾರಣವೆಂದು ಅಥವಾ ಆಶ್ರಯವೆಂದು ಅರ್ಥವನ್ನು ತಿಳಿಯಬೇಕು. ॥ 19 ॥

**ದ್ಯಾವಾಪೃಥಿವ್ಯೋರಿದಮಂತರಂ ಹಿ**
**ವ್ಯಾಪ್ತಂ ತ್ವಯ್ಯೈಕೇನ ದಿಶಶ್ಚ ಸರ್ವಾಃ ।**
**ದೃಷ್ಟ್ವಾಽದ್ಭುತಂ ರೂಪಮುಗ್ರಂ ತವೇದಂ**
**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥ 20 ॥**

**ಅರ್ಥ–** ದ್ಯು-ಪೃಥಿವೀಲೋಕಗಳ ಈ ನಡುಭಾಗವನ್ನು ಒಂದು ರೂಪದಿಂದ ವ್ಯಾಪಿಸಿರುವಿ. ಬೇರೆ ರೂಪಗಳಿಂದ ಎಲ್ಲಾ ದಿಕ್ಕುಗಳಿಂದ ವ್ಯಾಪಿಸಿರುವಿ. ಮಹಾತ್ಮನೇ ! ನಿನ್ನ ಅದ್ಭುತವಾದ, ಭಯಂಕರದಂತಿರುವ ರೂಪವನ್ನು ನೋಡಿ ಮೂರು ಲೋಕದಲ್ಲಿರುವ ಬಹಳ ಭಕ್ತರು ಭಯಗೊಂಡಿದ್ದಾರೆ. ಈ ರೂಪವನ್ನು ಮನಸ್ಸಿನಿಂದ ಅನುಸಂಧಾನ ಮಾಡಿ ಭಯ ಗೊಂಡಿರುವ ಮೂರುಲೋಕದಲ್ಲಿರುವ ಭಕ್ತರೂ ಅಭಕ್ತರೂ ನನ್ನಂತೆಯೇ ಬಹಳ ಭಯ ಗೊಂಡಿರುವರು.

**ದ್ಯಾವಾಪೃಥಿವ್ಯೋರಿದಮಂತರಂ ಮಧ್ಯಂ ಏಕೇನ ತ್ವಯಾ ಏಕರೂಪೇಣ (ತ್ವಯಾ) ವ್ಯಾಪ್ತಮ್ । ರೂಪಾಂತರೈಸ್ತು ಸರ್ವಾ ದಿಶೋ ವ್ಯಾಪ್ತಾ ಇತ್ಯರ್ಥಃ ।**

ತ್ವಯೇತ್ಯೇಕವಚನೇನೈವೈಕೇನೇತಿ ಲಾಭೇ ಪುನರೇಕೇನೇತ್ಯುಕ್ತಿಃ ಏಕೇನ ರೂಪೇಣ ದ್ಯಾವಾಪೃಥಿವ್ಯಂತರವ್ಯಾಪ್ತಿಸೂಚನಾಯ । ಹೇ ಮಹಾತ್ಮಂಸ್ತವೇದಮುಗ್ರಂ ಭಯಂಕರಮದ್ಭುತಂ ರೂಪಂ ದೃಷ್ಟ್ವಾ ಲೋಕತ್ರಯಂ ಪ್ರವ್ಯಥಿತಂ ಅತಿಭೀತಂ ಪಶ್ಯಾಮೀತ್ಯನ್ವಯಃ । ಭೂಮೇರ್ಭಾರಹಾರಾಯ ಪ್ರವೃತ್ತತ್ವಾದುಗ್ರಮಿವ ನ ತೂಗ್ರಮೇವ । ತದುಗ್ರತ್ವಮಪಿ ಕೇಷಾಂಚಿತ್ ಸಂಹಾರ್ಯತ್ವಕಾರಣವಿಶೇಷಾ-ದನಭ್ಯಾಸರೂಪಕಾರಣಾದ್ವಾ । ಅಭ್ಯಾಸೇ ತು ಆನಂದ ಏವ ತದ್ದರ್ಶನಾದ್ ಭವತಿ । ಅತ್ರ ಲೋಕತ್ರಯಪದೇನ ಲೋಕತ್ರಯಸ್ಥಭಕ್ತವರ್ಗಗ್ರಹಃ । ಅಭಕ್ತಾನಾಂ ತದ್‌ದೃಷ್ಟೇರೇವಾಭಾವಾತ್ । ಯದ್ವಾ ತದ್ರೂಪಮದೃಷ್ಟ್ವಾಽಪಿ ಮನಸಾ ತದನು-ಸಂಧಾಯೈವ ಬಿಭ್ಯಜ್ಜನಂ ದೃಷ್ಟ್ವಾಽರ್ಜುನೋಽಹಮಿವ ಏತೇಽಪಿ ದೃಷ್ಟ್ವಾ ಬಿಭ್ಯತೀತಿ ಬುದ್‌ಧ್ವಾ ಲೋಕತ್ರಯಂ ಪ್ರವ್ಯಥಿತಂ ಪಶ್ಯಾಮೀತ್ಯಾಹೇತಿ ಜ್ಞೇಯಮ್ । ಅಸ್ಮಿನ್ ಪಕ್ಷೇ ಲೋಕತ್ರಯಶಬ್ದೋ ಭಕ್ತಾಭಕ್ತವರ್ಗಪರಃ ॥ 20 ॥

**ಅನುವಾದ - ದ್ಯಾವಾ ಪೃಥಿವ್ಯೋರಿದಮಂತರಂ**= ದ್ಯುಲೋಕ ಪೃಥಿವೀಲೋಕಗಳ ಈ ಮಧ್ಯಭಾಗವು. **ಏಕೇನ ತ್ವಯಾ**= ಒಂದುರೂಪವುಳ್ಳ ನಿನ್ನಿಂದ ವ್ಯಾಪ್ತವಾಗಿದೆ. ಬೇರೆ ರೂಪಗಳಿಂದ ಎಲ್ಲ ದಿಕ್ಕುಗಳೂ ವ್ಯಾಪಿಸಲ್ಪಟ್ಟಿವೆ ಎಂದರ್ಥ. ತ್ವಯಾ ಎಂಬಲ್ಲಿಯ ಏಕವಚನದಿಂದಲೇ ಒಬ್ಬನಿಂದ ಎಂಬರ್ಥ ಸಿದ್ಧವಾದರೂ ಮತ್ತೆ ಒಬ್ಬನಿಂದ ಎನ್ನುವ ಮಾತು ಒಂದು ರೂಪದಿಂದ ದ್ಯುಪೃಥಿವೀ ಲೋಕಗಳ ಮಧ್ಯವನ್ನು ವ್ಯಾಪಿಸಿರುವಿ ಎಂಬರ್ಥವನ್ನು ಸೂಚಿಸಲು ಇದೆ. ಹೇ ಮಹಾತ್ಮನೇ ನಿನ್ನ ಈ ಉಗ್ರ – ಭಯಂಕರವಾದ ಅದ್ಭುತರೂಪವನ್ನು ನೋಡಿ ಮೂರು ಲೋಕಗಳನ್ನು **ಪ್ರವ್ಯಥಿತಂ**= ಬಹಳ ಭಯಗೊಂಡಿದ್ದನ್ನಾಗಿ ನೋಡುತ್ತಿದ್ದೇನೆ ಎಂದು ಅನ್ವಯವಿದೆ. ಭಗವಂತನ ಈ ಕೃಷ್ಣರೂಪವು ಭೂಮಿಯ ಭಾರವನ್ನು ಅಪಹರಿಸಲು ಪ್ರವೃತ್ತವಾದ್ದರಿಂದ ಭಯಂಕರವಾದಂತಿದೆ. ಭಯಂಕರವೇ ಆಗಿಲ್ಲ. ಆ ಉಗ್ರತೆಯೂ ಕೂಡ ಕೆಲವರಿಗೆ ಸಂಹರಿಸಲ್ಪಡುವ ವಿಶೇಷ ಕಾರಣದಿಂದ ಅಥವಾ ಈವರೆಗೆ ನೋಡದಿರುವುದರಿಂದ ಇದೆ. ನೋಡಿ ಅಭ್ಯಾಸವಿರುವವರಿಗೆ ಆ ರೂಪದರ್ಶನದಿಂದ ಆನಂದವೇ ಉಂಟಾಗುತ್ತದೆ. ಇಲ್ಲಿ ಭಕ್ತರಲ್ಲದವರಿಗೆ ಭಗವಂತನ ಆ ರೂಪದ ದರ್ಶನವೇ ಇಲ್ಲದಿರುವುದರಿಂದ ಲೋಕತ್ರಯವೆಂಬ ಶಬ್ದದಿಂದ ಮೂರು ಲೋಕದಲ್ಲಿರುವ ಭಕ್ತರ ಸಮೂಹ ಎಂದರ್ಥವನ್ನು ಗ್ರಹಿಸಬೇಕು. ಅಥವಾ ಆ ರೂಪವನ್ನು ನೋಡದೆಯೇ ಮನಸ್ಸಿನಿಂದ ಅನುಸಂಧಾನ ಮಾಡಿಯೇ ಹೆದರುವ ಜನರನ್ನು ನೋಡಿ ಅರ್ಜುನನು ನನ್ನಂತೆ ಇವರು ನೋಡಿ ಹೆದರುತ್ತಿದ್ದಾರೆ ಎಂದು ತಿಳಿದು, ಹೆದರಿದ ಮೂರು ಲೋಕವನ್ನು ನೋಡುತ್ತಿದ್ದೇನೆ ಎಂದು ಹೇಳುತ್ತಾನೆ ಎಂದರ್ಥ ತಿಳಿಯಬೇಕು . ಈ ಪಕ್ಷದಲ್ಲಿ ಲೋಕತ್ರಯಶಬ್ದವು ಭಕ್ತರನ್ನು ಮತ್ತು ಅಭಕ್ತರನ್ನು ಹೇಳುತ್ತದೆ. ॥ 20 ॥

**ಅಚ್ಚರಿಕಂಗಳಿಂದ ವೀಕ್ಷಿಸುತಿಹರು ನಿನ್ನ ಎಲ್ಲರೂ**

**ಅಮೀ ಹಿ ತ್ವಾ ಸುರಸಂಘಾ ವಿಶಂತಿ**
**ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ।**
**ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ**
**ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥ 21 ॥**

**ಅರ್ಥ**– ಈ ಮುಕ್ತರಾದ ದೇವತೆಗಳ ವರ್ಗಗಳು ನಿನ್ನನ್ನು ಪ್ರವೇಶಿಸುತ್ತಿರುವರು. ಕೆಲವರು ಭೀತರಾಗಿ ಅಂಜಲಿಬದ್ಧರಾಗಿ ಸ್ತೋತ್ರ ಮಾಡುತ್ತಿರುವರು ಮಹರ್ಷಿಗಳ ಸಿದ್ಧರ ಸಮೂಹಗಳು ಜಗತ್ತಿಗೆ ಮಂಗಳವಾಗಲಿ ಎಂದು ಈ ನಿನ್ನ ಗುಣಗಳಿಂದ ತುಂಬಿರುವ ಸ್ತೋತ್ರಗಳಿಂದ ನಿನ್ನನ್ನು ಸ್ತುತಿಸುತ್ತಿರುವರು.

**ಅನ್ಯದಪಿ ಸ್ವದೃಷ್ಟಮಾಹಾರ್ಜುನಃ– ಅಮೀ ಹೀತಿ ॥ ಸುರಸಂಘಾಃ ಮುಕ್ತ-ದೇವವರ್ಗಾಃ । 'ಪ್ರವೇಶೋ ನಿರ್ಗಮಶ್ಚೈವ ಮುಕ್ತಾನಾಂ ಸ್ವೇಚ್ಛಯಾ ಭವೇತ್' ಇತಿ ವಚನಾತ್ । ತೇನ 'ಪಶ್ಯಾಮಿ ದೇವಾಂಸ್ತವ ದೇವ ದೇಹ' ಇತ್ಯನೇನ ನ ಪೌನರುಕ್ತ್ಯಮ್ । ಅತ್ರ ಮುಕ್ತಾನಾಂ ತತ್ರಾಮುಕ್ತಾನಾಂ ಉಕ್ತೇಃ । ಪುಷ್ಕಲಾ-ಭಿರ್ಗುಣಪೂರ್ಣಾಭಿಃ ಸ್ತುತಿಭಿಃ ಸ್ತುವಂತಿ ॥21॥**

**ಅನುವಾದ**– ಅರ್ಜುನ ತಾನು ನೋಡಿದ ಬೇರೆ ವಿಚಾರವನ್ನೂ 'ಅಮೀ ಹಿ' ಮುಂತಾಗಿ ಹೇಳುತ್ತಿದ್ದಾನೆ. ಮುಕ್ತರಿಗೆ ತಮ್ಮಿಚ್ಛೆಗೆ ಅನುಸಾರವಾಗಿ ಭಗವಂತನಲ್ಲಿ ಪ್ರವೇಶವೂ ಹೊರಗೆ ಬರುವಿಕೆಯೂ ಇದೆ ಎಂಬ ಮಾತಿನಂತೆ ಇಲ್ಲಿ 'ಸುರಸಂಘಾಃ' ಎಂದರೆ ಮುಕ್ತರಾದ ದೇವತೆಗಳ ಸಮೂಹಗಳು ಎಂದರ್ಥ. ಹೀಗರ್ಥ ಮಾಡಿರುವುದರಿಂದ ಈ ಶ್ಲೋಕದಲ್ಲಿ ಮುಕ್ತರನ್ನೂ ಹಿಂದೆ ಅಮುಕ್ತರನ್ನೂ ಹೇಳಿರುವುದರಿಂದ, ಈ ಹಿಂದೆ ದೇವನೇ ! ನಿನ್ನ ದೇಹದಲ್ಲಿರುವ ದೇವತೆಗಳನ್ನು ನೋಡುತ್ತಿರುವೆನು ಎಂಬ ಮಾತಿನಿಂದ ಪುನರುಕ್ತಿದೋಷವಿಲ್ಲ. **ಪುಷ್ಕಲಾಭಿಃ**= ಗುಣಗಳಿಂದ ತುಂಬಿರುವ ಸ್ತೋತ್ರಗಳಿಂದ ಸ್ತುತಿಸುತ್ತಾರೆ. ॥ 21 ॥

**ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ**
**ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।**
**ಗಂಧರ್ವಯಕ್ಷಾಸುರಸಿದ್ಧಸಂಘಾ**
**ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥ 22 ॥**

**ಅರ್ಥ** – ಯಾವ ರುದ್ರರೂ, ಆದಿತ್ಯರೂ , ವಸುಗಳೂ, ಸಾಧ್ಯರೂ, ವಿಶ್ವೇದೇವತೆಗಳೂ, ಅಶ್ವಿನೀದೇವತೆಗಳೂ, ಮರುತ್ತುಗಳೂ, ಊಷ್ಮಪರೆನಿಸುವ ಪಿತೃಗಳೂ, ಗಂಧರ್ವ, ಯಕ್ಷ , ಅಸುರ, ಸಿದ್ಧರ ಸಮೂಹಗಳು ಈ ಎಲ್ಲರೂ ಆಶ್ಚರ್ಯಗೊಂಡವರಾಗಿ ನಿನ್ನನ್ನು ನೋಡುತ್ತಿದ್ದಾರೆ.

**ಊಷ್ಮಪಾಃ ಪಿತರಃ 'ಊಷ್ಮಭಾಗಾ ಹಿ ಪಿತರ' ಇತಿ ಶ್ರುತೇಃ । ಗಂಧರ್ವಾದೀನಾಂ ಸಂಘಾಃ ॥ 22 ॥**

**ಅನುವಾದ**– 'ಪಿತೃಗಳು ಊಷ್ಮಭಾಗವುಳ್ಳವರು' ಎಂದು ಶ್ರುತಿ ಇರುವುದರಿಂದ **'ಊಷ್ಮಪಾಃ'** ಎಂದರೆ ಪಿತೃಗಳು ಎಂದರ್ಥ. ಗಂಧರ್ವ ಮುಂತಾದವರ ಸಮೂಹಗಳು. ॥ 22 ॥

**ರೂಪಂ ಮಹತ್ತೇ ಬಹುವಕ್ತ್ರನೇತ್ರಂ**
**ಮಹಾಬಾಹೋ ಬಹುಬಾಹೂರುಪಾದಮ್ ।**
**ಬಹೂದರಂ ಬಹುದಂಷ್ಟ್ರಾಕರಾಲಂ**
**ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಽಹಮ್ ॥ 23 ॥**

**ಅರ್ಥ**– ಹೇ ಮಹಾಬಾಹುವುಳ್ಳವನೇ ! ನಿನ್ನ ಈ ಮಹಾರೂಪವು ಅನಂತ ಮುಖ ಕಣ್ಣುಗಳುಳ್ಳದ್ದು ಅನಂತ ಬಾಹು , ತೊಡೆ , ಪಾದಗಳುಳ್ಳದ್ದು . ಅನಂತ ಉದರಗಳುಳ್ಳದ್ದು. ಅನಂತ ಕೋರೆ ಹಲ್ಲುಗಳಿಂದ ಭಯಂಕರವಾದದ್ದು . ಇದನ್ನು ನೋಡಿರುವ ಭಕ್ತರೂ ಹಾಗೂ ನಾನೂ ಹೆದರಿರುವೆವು. ಭಕ್ತರೂ ಅಭಕ್ತರೂ ಮನಸ್ಸಿನಿಂದ ಅನುಸಂಧಾನ ಮಾಡಿಯೇ ಹೆದರಿರುವರು.

**ಬಹುದಂಷ್ಟ್ರಾಭಿಃ ಕರಾಲಂ ವಿರೂಪಮ್ । ಲೋಕಾಃ ಭಕ್ತವರ್ಗಾಃ । ಭಕ್ತಾಭಕ್ತವರ್ಗಾರ್ಥತ್ವೇ ತು ಲೋಕತ್ರಯಮಿತ್ಯತ್ರೇವಾಭಿಪ್ರಾಯೋ ಧ್ಯೇಯಃ । ತಥಾಽಹಮಪಿ ಪ್ರವ್ಯಥಿತಃ ॥ 23 ॥**

**ಅನುವಾದ** – ಅನೇಕ ಕೋರೆ ಹಲ್ಲುಗಳಿಂದ ಕರಾಳವಾಗಿದೆ. ವಿರೂಪವಾಗಿದೆ. ಲೋಕಗಳು= ಭಕ್ತವರ್ಗಗಳು . ಭಕ್ತರ ಅಭಕ್ತರ ವರ್ಗಗಳು ಎಂಬರ್ಥದಲ್ಲಿ ಲೋಕತ್ರಯಂ ಎಂಬ 20ನೇ ಶ್ಲೋಕದ ಪದಕ್ಕೆ ಎಂಬಂತೆ ಭಗವಂತನ ರೂಪವನ್ನು ಮನಸ್ಸಿನಿಂದ ಅನುಸಂಧಾನ ಮಾಡಿಯೇ ಹೆದರಿದವರು ಎಂಬ ಆಶಯವನ್ನು ತಿಳಿಯಬೇಕು . ಹಾಗೆಯೇ ನಾನೂ ಹೆದರಿರುವೆನು. ॥ 23 ॥

## ಗಗನಚುಂಬಿಯಾದ ನಿನ್ನ ರೂಪ ಗಾಬರಿವುಂಟುಮಾಡಿದೆ

**ನಭಃಸ್ಪೃಶಂ ದೀಪ್ತಮನೇಕವರ್ಣಂ**
**ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।**
**ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ**
**ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ॥ 24 ॥**

**ಅರ್ಥ–** ಎಲ್ಲೆಡೆ ವ್ಯಾಪಿಸಿರುವ , ಎಲ್ಲೆಡೆ ಪ್ರವೇಶಿಸಿರುವವನೇ ! ನಿನ್ನೀ ರೂಪವು ಆಕಾಶವನ್ನು ಮುಟ್ಟುತ್ತಿದೆ. ಬೆಳಗಿದೆ. ಅನೇಕ ಬಣ್ಣವುಳ್ಳದ್ದು. ತೆರೆದ ಬಾಯಿಯುಳ್ಳದ್ದು. ಬೆಳಗಿದ ವಿಶಾಲವಾದ ಕಣ್ಣುಗಳುಳ್ಳದ್ದು . ಈ ನಿನ್ನನ್ನು ನೋಡಿ ನನ್ನ ಮನಸ್ಸು ಬೆದರಿದೆ. ಧೈರ್ಯವನ್ನು ಪಡೆಯುತ್ತಿಲ್ಲ. ಸುಖವನ್ನು ಹೊಂದುತ್ತಿಲ್ಲ.

**ವ್ಯಾತ್ತಾನನಂ ವಿವೃತಮುಖಮ್ । ಅಂತರಾತ್ಮಾ ಮನಃ । ನ ವಿಂದಾಮಿ ನ ಪ್ರಾಪ್ನೋಮಿ । ಶಮಂ ಸುಖಂ ಚ ನ ವಿಂದಾಮಿ । ನ ಪ್ರಾಪ್ನೋಮಿ । ವಿಷ್ಣುಶಬ್ದಾರ್ಥ ಉಕ್ತಃ ದಶಮೇಽಧ್ಯಾಯೇ ॥ 24 ॥**

**ಅನುವಾದ-** **ವ್ಯಾತ್ತಾನನಂ**= ತೆರೆದ ಬಾಯಿಯುಳ್ಳದ್ದು . **ಅಂತರಾತ್ಮಾ**= ಮನಸ್ಸು. **ನ ವಿಂದಾಮಿ**= ಪಡೆಯುತ್ತಿಲ್ಲ . **ಶಮಂ**= ಸುಖವನ್ನು ಹೊಂದುತ್ತಿಲ್ಲ. ವಿಷ್ಣುಶಬ್ದದ ಅರ್ಥವನ್ನು 10ನೇ ಅಧ್ಯಾಯದ 21ನೇ ಶ್ಲೋಕದಲ್ಲಿ ಹೇಳಿದೆ. ॥ 24 ॥

**ದಂಷ್ಟ್ರಾಕರಾಲಾನಿ ಚ ತೇ ಮುಖಾನಿ**
**ದೃಷ್ಟ್ವೈವ ಕಾಲಾನಲಸನ್ನಿಭಾನಿ ।**
**ದಿಶೋ ನ ಜಾನೇ ನ ಲಭೇ ಚ ಶರ್ಮ**
**ಪ್ರಸೀದ ದೇವೇಶ ಜಗನ್ನಿವಾಸ ॥ 25 ॥**

**ಅರ್ಥ–** ಕೋರೆ ಹಲ್ಲುಗಳಿಂದ ವಿಕೃತಗಳಾದ ಪ್ರಳಯಕಾಲದ ಅಗ್ನಿಯಂತೆ ಜ್ವಲಿಸುವ ನಿನ್ನ ಮುಖಗಳನ್ನು ನೋಡಿಯೇ ದಿಙ್ಮೂಢನಾಗಿರುವೆನು. ಸುಖವನ್ನು ಹೊಂದುತ್ತಿಲ್ಲ . ದೇವಶ್ರೇಷ್ಠನೇ ! ಜಗದಾಧಾರನೇ ! ನನ್ನಲ್ಲಿ ಪ್ರಸನ್ನನಾಗು.

**ದಂಷ್ಟ್ರಾಕರಾಲಾನಿ ದಂಷ್ಟ್ರಾಭಿರ್ವಿರೂಪಾಣಿ । ಕಾಲೇತಿ ಪ್ರಲಯಕಾಲಾಗ್ನಿ-ಸನ್ನಿಭಾನಿ ಸಮಪ್ರಭಾಣಿ । ನ ಜಾನೇ ನ ಜಾನಾಮಿ । ಶರ್ಮ ಸುಖಂ ಚ ನ ವಿಂದಾಮಿ । ಜಗನ್ನಿವಾಸ ಜಗದಾಧಾರ ॥ 25 ॥**

ಅನುವಾದ- ದಂಷ್ಟ್ರಾಕರಾಲಾನಿ= ಕೋರೆಹಲ್ಲುಗ್ಗಳಿಂದ ವಿಕೃತವಾಗಿರುವ. ಕಾಲವೆಂದರೆ ಪ್ರಳಯಕಾಲದ ಅಗ್ನಿ ಸದೃಶವಾದವುಗಳು. ಪ್ರಳಯಾಗ್ನಿಯ ಸಮಾನ ತೇಜಸ್ಸುಳ್ಳವುಗಳು. ನ ಜಾನೇ= ದಿಕ್ಕುಗಳನ್ನು ತಿಳಿಯುತ್ತಿಲ್ಲ. ಶರ್ಮ= ಸುಖವನ್ನು ಹೊಂದುತ್ತಿಲ್ಲ . ಜಗನ್ನಿವಾಸ= ಜಗದಾಧಾರನೇ ! ॥ 25 ॥

## ಮೃತ್ಯುವಿನಿಂದ ಆಲಿಂಗಿತರಾದ ನಮ್ಮವರು ಹಾಗೂ ಕೌರವರು ನಿನ್ನಲ್ಲಿ ಪ್ರವೇಶ ಪಡೆಯುತಿಹರು

**ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ**
**ಸರ್ವೇ ಸಹೈವಾವನಿಪಾಲಸಂಘೈಃ ।**
**ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಽಸೌ**
**ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥ 26 ॥**

**ಅರ್ಥ**– ಈ ಎಲ್ಲಾ ರಾಜರ ಸಮೂಹಗಳೊಂದಿಗೆ ಈ ಧೃತರಾಷ್ಟ್ರನ ಮಕ್ಕಳೂ ನಿನ್ನ ಮುಖವನ್ನು ಪ್ರವೇಶಿಸುತ್ತಿದ್ದಾರೆ. ಭೀಷ್ಮ , ದ್ರೋಣ, ಹಾಗೆ ಸೂತ ಪುತ್ರನಾದ ಈ ಕರ್ಣನೂ ಯೋಧರಲ್ಲಿ ಶ್ರೇಷ್ಠರಾದ ನಮ್ಮವರೊಂದಿಗೆ ನಿನ್ನನ್ನು ಪ್ರವೇಶಿಸುತ್ತಿದ್ದಾರೆ.

**ತ್ವಾ ತ್ವಾಂ ಸೂತಪುತ್ರಃ ಕರ್ಣಃ । ಯೋಧಮುಖ್ಯೈಃ ಯೋಧೇಷು ಭಟೇಷು ಪ್ರಧಾನೈಃ ಅಸ್ಮದೀಯೈಃ ಸಹ ॥ 26 ॥**

**ಅನುವಾದ- ತ್ವಾ**= ನಿನ್ನನ್ನು , **ಸೂತಪುತ್ರಃ**= ಕರ್ಣನು **ಯೋಧಮುಖ್ಯೈಃ**= ಯೋಧರಲ್ಲಿ-ಭಟರಲ್ಲಿಪ್ರಧಾನರಾದ ನಮ್ಮವರೊಂದಿಗೆ . ॥ 26 ॥

**ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ**
**ದಂಷ್ಟ್ರಾಕರಾಲಾನಿ ಭಯಾನಕಾನಿ ।**
**ಕೇಚಿದ್ವಿಲಗ್ನಾ ದಶನಾಂತರೇಷು**
**ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ॥ 27 ॥**

**ಅರ್ಥ** – ಈ ಹಿಂದೆ ಹೇಳಿದ ಧೃತರಾಷ್ಟ್ರನ ಮಕ್ಕಳೇ ಮುಂತಾದವರು ಕೋರೆ ಹಲ್ಲುಗಳಿಂದ ವಿರೂಪಗಳಾದ ಭಯಂಕರವಾದ ನಿನ್ನ ಮುಖಗಳನ್ನು ತ್ವರೆಯಿಂದ ಪ್ರವೇಶಿಸುತ್ತಿದ್ದಾರೆ. ಕೆಲವರು ಆ ಕಾಲದಲ್ಲಿ ಸಾಯುವವರು ಹಲ್ಲುಗಳ ಎಡೆಗಳಲ್ಲಿ ಸಿಕ್ಕಿಕೊಂಡವರಾಗಿ ಪುಡಿಪುಡಿಯಾಗಿರುವ ತಲೆಗಳಿಂದ ಕೂಡಿದವರಾಗಿ ಕಾಣಿಸುತ್ತಿದ್ದಾರೆ.

ತೇ ಪ್ರಾಗುಕ್ತಧೃತರಾಷ್ಟ್ರಪುತ್ರಾದಯಃ ತೇ ತವ ವಕ್ತ್ರಾಣಿ ವಿಶಂತೀತ್ಯತ್ರ ತೇಷಾಂ ಭಗವನ್ಮುಖಾಭಿಮುಖಚೇಷ್ಟಾಭಾವೇಪಿ ಭಗವಾನೇವಾನೇಕಮುಖೈಃ ಸೇನಾ-ದ್ವಯಸ್ಥಯೋಧಾನ್ ಗ್ರಸಿತ್ವಾ ತಿಷ್ಠತೀತ್ಯುಪಚಾರೇಣ ವಿಶಂತೀತ್ಯುಕ್ತಿಃ ಜ್ಞೇಯಾ । ಏವಮಗ್ರೇऽಪಿ । ಕೇಚಿತ್ತಸ್ಮಿನ್ ಮುಹೂರ್ತ ಏವ ಮರಿಷ್ಯಮಾಣಾಃ । ಕೇಚಿದ್ ದಶನಾಂತರೇಷು ವಿಲಗ್ನಾಃ ಚೂರ್ಣಿತೈಃ ಶತಶಃ ಸೂಕ್ಷ್ಮರೇಖೋಪೇತಶೀರ್ಣ-ಘಟವತ್ ಶತಶಃ ಸೂಕ್ಷ್ಮರೇಖೋಪೇತತಯಾ ಭಿನ್ನೈಃ ಉತ್ತಮಾಂಗೈಃ ಶಿರೋಭಿ-ರುಪಲಕ್ಷಿತಾಃ ಸಂತಃ ದೃಶ್ಯಂತೇ ಮಯೇತ್ಯರ್ಥಃ । ಮಂದದೃಷ್ಟೀನಾಂ ಅನ್ಯೇಷಾಂ ತಥಾ ದೃಷ್ಟ್ಯಭಾವೇऽಪ್ಯರ್ಜುನಸ್ಯ ದಿವ್ಯದೃಷ್ಟಿಮತ್ತ್ವಾತ್ತಥಾ ದರ್ಶನಂ ಯುಕ್ತಮಿತಿ ಜ್ಞೇಯಮ್ । ಯಥಾऽನ್ಯೈರದೃಷ್ಟಸ್ಯಾಪಿ ಪುರೂರವಸೋ ಜರಾऽಶ್ವಿಭ್ಯಾಂ ದೃಷ್ಟಾ ತಥೇತಿ । ವ್ಯಕ್ತಮೇತದ್ವಿಷ್ಣುಧರ್ಮೇ ಏಕೋನವಿಂಶೇऽಧ್ಯಾಯೇ । (ತಥಾಹಿ-ಪುರೂರವಸೋ ರೂಪಂ ದ್ರಷ್ಟುಮಾಗತಾವಶ್ವಿನೌ ಪ್ರತಿ ಪುರೂರವಾ ರಾಜಾ ತೈಲಾಭ್ಯಕ್ತಃ ಸನ್ ಸ್ನಾತಃ ಭೂಷಣಯುತಃ ಸನ್ ಆಗಮಿಷ್ಯಾಮಿ ತದಾ ಮದ್ರೂಪಂ ದ್ರಷ್ಟವ್ಯಮಿತ್ಯುಕ್ತೇ 'ಅಪ್ರಸಾಧಿತಮೇವಾಶು ಭವಂತಂ ವಸುಧಾಧಿಪ । ಪಶ್ಯಾವೋ ಭೂಷಿತಂ ತ್ವಾಂ ವೈ ವಸ್ತ್ರಾಲಂಕರಣಾನ್ವಿತಂ' ಇತ್ಯಶ್ವಿಭ್ಯಾಮುಕ್ತೇ ತೂಷ್ಣೀಂ ಬಹಿರ್ಗತಸ್ಯ ರಾಜ್ಞಃ ಸಾಂಗೋಪಾಂಗಾದಿಕಂ ಸರ್ವಂ ಸಮಪಶ್ಯತಾಮ್ ।

ಶಿರೋಲಲಾಟಬಾಹ್ವಾಸ್ಯನಯನಾದಿವಿಲೋಕನಮ್ ।
ಕೃತ್ವಾऽಚಿರಂ ಮಹೀಪಾಲಮೂಚತುಸ್ತಾವರಿಂದಮೌ ॥
ಪ್ರವಿಶ್ಯ ಸ್ನಾಹಿ ಭೂಪಾಲ ಯಥಾರ್ಹೈಶ್ಚ ವಿಭೂಷಣೈಃ ।
ವಿಭೂಷಿತತನುಂ ಭೂಯಸ್ತ್ವಾಂ ದ್ರಕ್ಷ್ಯಾವೋ ನರೇಶ್ವರಮ್ ॥

ಇತ್ಯಶ್ವಿಭ್ಯಾಮುಕ್ತೋ ರಾಜಾ ಗೃಹಂ ಪ್ರವಿಶ್ಯ ಸ್ನಾತ್ವಾऽನುಲಿಪ್ತೋ ವಸ್ತ್ರಾಲಂಕಾ-ರಾದಿಭೂಷಿತಃ ಸನ್ನಶ್ವಿನೋಃ ಸಮೀಪಮಾಗತಃ ॥ ತದಾ ತೌ ತದ್ರೂಪಂ ದೃಷ್ಟ್ವಾ ಹಾಸಂ ಚಕ್ರತುಃ । ತದಾ ರಾಜ್ಞಾ ಹಾಸಕಾರಣೇ ಪೃಷ್ಟೇ-

'ಶೃಣು ಭೂಪಾಲ ಸಕಲಮಾವಯೋರ್ಹಾಸಕಾರಣಮ್ ।
ಯುಷ್ಮದ್ದರ್ಶನಸಂಭೂತಂ ಕ್ಷಣಾಪಚಯಹೇತುಕಮ್ ॥
ಅತಸ್ತಸ್ಯಾಭವತ್ಪೂರ್ವಂ ಯಾದೃಶೀ ತೇ ಸ್ವರೂಪತಾ ।
ಸಾಂಪ್ರತಂ ತಾದೃಶೀ ನೇಯಂ ಭೂಷಿತಸ್ಯಾಪಿ ಭೂಷಣೈಃ ॥

**ದಿವ್ಯೇನ ಚಕ್ಷುಷಾ ಭೂಪ ಕಾಲಸ್ಯಾಸ್ಯ ಚ ತಸ್ಯ ಚ ।**
**ವಪುಃಪರಿಣತಿಂ ಸ್ವಸ್ಮಾತ್ ಪಶ್ಯಾವೋಽಪಚಯಪ್ರದಾಮ್ ॥'**

**ಇತ್ಯಾದಿನೇತಿ ಭಾವಃ ॥ 27 ॥**

**ಅನುವಾದ**- ಈ ಹಿಂದೆ ಹೇಳಿದ ಧೃತರಾಷ್ಟನ ಮಕ್ಕಳೇ ಮುಂತಾದವರು **ತೇ**= ನಿನ್ನ ಮುಖಗಳನ್ನು ಪ್ರವೇಸಿಸುತ್ತಿದ್ದಾರೆ ಎಂಬಲ್ಲಿ ಅವರು ಭಗವಂತನ ಮುಖಕ್ಕೆ ಅಭಿಮುಖವಾಗಿ ಹೋಗದಿದ್ದರೂ ಭಗವಂತನೇ ಅನೇಕ ಮುಖಗಳಿಂದ ಎರಡು ಸೇನೆಗಳಲ್ಲಿರುವ ಯೋಧರನ್ನು ನುಂಗಿ ನಿಂತಿದ್ದಾನೆ ಎಂದರ್ಥ. ಔಪಚಾರಿಕವಾಗಿ ಅವರೇ ಪ್ರವೇಶಿಸುತ್ತಿದ್ದಾರೆ ಎಂಬ ಮಾತನ್ನು ತಿಳಿಯಬೇಕು. ಮುಂದೆಯೂ ಇದೇ ರೀತಿ ಅರ್ಥೈಸಬೇಕು. ಆ ಮುಹೂರ್ತದಲ್ಲೇ ಸಾಯುವವರು. 'ಕೇಚಿತ್' ದಶನಾಂತರೇಷು **ವಿಲಗ್ನಾಃ**= ಹಲ್ಲುಗಳ ಎಡೆಗಳಲ್ಲಿ ಸಿಕ್ಕಿಕೊಂಡವರು. **ಚೂರ್ಣಿತೈಃ**= ನೂರಾರು ಸೂಕ್ಷ್ಮ ರೇಖೆಗಳಿಂದ ಕೂಡಿರುವುದರಿಂದ ತುಂಡಾದ ಉತ್ತಮಾಂಗ ಗಳಿಂದ - ಶಿರಸ್ಸುಗಳಿಂದ ಕೂಡಿದವರಾಗಿ ನನಗೆ ಕಾಣಿಸುತ್ತಿದ್ದಾರೆ. ಮಂದ ದೃಷ್ಟಿಯುಳ್ಳ ಇತರರಿಗೆ ಹಾಗೆ ಕಾಣಿಸದಿದ್ದರೂ ದಿವ್ಯದೃಷ್ಟಿ ಇರುವುದರಿಂದ ಅರ್ಜುನನಿಗೆ ಹಾಗೆ ಕಾಣಿಸುವುದು ಉಚಿತವಾಗಿದೆ ಎಂದು ತಿಳಿಯಬೇಕು. ಹೇಗೆ ಬೇರೆಯವರಿಂದ ಪುರೂರವ ರಾಜನ ಮುಪ್ಪು ಕಾಣಿಸಲ್ಪಡದಿದ್ದರೂ ಅಶ್ವಿನೀದೇವತೆಗಳಿಂದ ಕಾಣಿಸಲ್ಪಟ್ಟಿತ್ತೋ ಅಂತೆಯೇ. ವಿಷ್ಣುಧರ್ಮದಲ್ಲಿ 21ನೇ ಅಧ್ಯಾಯದಲ್ಲಿ ಸ್ಪಷ್ಟವಾಗಿದೆ. (ಹೇಗೆಂದರೆ). ಪುರೂರವಸ್ಸನ್ನು ನೋಡಲು ಬಂದ ಅಶ್ವಿನೀ ದೇವತೆಗಳಿಗೆ ರಾಜನು ತೈಲಾಭ್ಯಂಜನ ಮಾಡಿ, ಸ್ನಾನಮಾಡಿ, ಭೂಷಣಗಳಿಂದ ಕೂಡಿದವನಾಗಿ ಬರುವೆನು . ಆಗ ನನ್ನ ರೂಪವನ್ನು ನೋಡಬೇಕು ಎಂದಾಗ ಅಶ್ವಿನೀ ದೇವತೆಗಳು ಹೇಳಿದರು- ಭೂಮಿಪತಿಯೇ ! ಪ್ರಸಾಧನಗಳನ್ನು ಮಾಡಿಕೊಂಡಿಲ್ಲದಿದ್ದರೂ (ನಿನ್ನನ್ನು ಭೂಷಿತನನ್ನಾಗಿಯೂ ವಸ್ತ್ರಾಲಂಕಾರಗಳಿಂದ ಕೂಡಿದವನನ್ನಾಗಿಯೂ ) ಶೀಘ್ರವೆ ನೋಡುವೆವು ಎಂದರು. ಆಗಲೇ ಹೊರಗೆ ಬಂದಿರುವ ರಾಜನ ಎಲ್ಲಾ ಅಂಗಗಳಿಂದ ಕೂಡಿದ ಉಪಾಂಗಗಳನ್ನು ನೋಡಿದರು. ತಲೆ, ಹಣೆ, ಬಾಹುಗಳು, ಮುಖ, ಕಣ್ಣುಗಳು ಮುಂತಾದವುಗಳನ್ನು ಬೇಗನೆ ನೋಡಿ ಆ ಶತ್ರುಸಂಹಾರಕರು ರಾಜನಿಗೆ ಹೇಳಿದರು- ರಾಜನೇ ! ಅರಮನೆಗೆ ಪ್ರವೇಶಿಸಿ, ಸ್ನಾನ ಮಾಡು, ಯೋಗ್ಯವಾದ ಆಭೂಷಣಗಳಿಂದ ಅಲಂಕರಿಸಲ್ಪಟ್ಟ ಶರೀರವುಳ್ಳ ರಾಜನಾದ ನಿನ್ನನ್ನು ಮತ್ತೊಮ್ಮೆ ನೋಡುವೆವು ಎಂದರು. ಹೀಗೆ ಹೇಳಿದಾಗ ರಾಜನು ಮನೆಯನ್ನು ಪ್ರವೇಶಿಸಿ, ಸ್ನಾನ ಮಾಡಿ, ಗಂಧಾದಿಲೇಪನಗಳನ್ನು ಮಾಡಿಕೊಂಡು ವಸ್ತ್ರ ಅಲಂಕಾರಗಳಿಂದ ಭೂಷಿತನಾಗಿ ಅಶ್ವಿನೀದೇವತೆ ಗಳ ಸಮೀಪಕ್ಕೆ ಬಂದನು. ಆಗ ಅವರು ಅವನ ರೂಪವನ್ನು ನೋಡಿ ನಕ್ಕರು. ಆಗ ರಾಜನು ನಗಲು ಕಾರಣವನ್ನು ಕೇಳಿದಾಗ ಹೇಳಿದರು- ರಾಜನೇ ನಮ್ಮ ನಗುವಿಗೆ ಕಾರಣವನ್ನು ಕೇಳು- ಈಗಾಗಲೇ ನಿನ್ನನ್ನು ಮೊದಲೇ ನೋಡಿದ ಕಾಲದಿಂದ ಈವರೆಗೆ ಅನೇಕ ಕ್ಷಣಗಳು ಕಳೆದಿವೆ. ಅಷ್ಟು

ಸಮಯದಲ್ಲಿ ಹಿಂದೆ ನಿನ್ನ ಸೌಂದರ್ಯ ಹೇಗಿದ್ದಿತೋ ಈಗ ಅಲಂಕಾರಗಳಿಂದ ಅಲಂಕರಿಸಲ್ಪಟ್ಟರೂ ಹಾಗಿಲ್ಲ. ರಾಜನೇ 'ನಮ್ಮ ದಿವ್ಯದೃಷ್ಟಿಯಿಂದ ಈ ಕಾಲದಲ್ಲಿರುವ ಶರೀರದಲ್ಲಿ (ಮತ್ತು ಆ ಕಾಲದ ಶರೀರ ಮೊದಲಿನ ತನ್ನಿಂದಲೇ) ಕುಗ್ಗುವಿಕೆ ನೀಡುವ ಸೂಕ್ಷ್ಮ ಪರಿಣತಿಯನ್ನು ನೋಡುತ್ತಿದ್ದೇವೆ 'ಮುಂತಾಗಿ ದಿವ್ಯದೃಷ್ಟಿ ಇರುವವರಿಗೆ ಸೂಕ್ಷ್ಮ ದರ್ಶನವಾಗುತ್ತದೆ ಎಂದಿದ್ದಾರೆ. ॥ 27 ॥

**ಯಥಾ ನದೀನಾಂ ಬಹವೋಽಂಬುವೇಗಾಃ**
**ಸಮುದ್ರಮೇವಾಭಿಮುಖಾ ದ್ರವಂತಿ ।**
**ತಥಾ ತವಾಮೀ ನರಲೋಕವೀರಾ**
**ವಿಶಂತಿ ವಕ್ತ್ರಾಣ್ಯಭಿ ವಿಜ್ವಲಂತಿ ॥ 28 ॥**

**ಅರ್ಥ–** ಹೇಗೆ ನದಿಗಳ ಅನೇಕ ರಭಸದ ಪ್ರವಾಹಗಳು ಸಮುದ್ರದೆಡೆಗೆ ಹರಿಯುತ್ತವೋ ಅಂತೆಯೇ ಈ ಮನುಷ್ಯಲೋಕದ ವೀರರು ಬೆಳಗುತ್ತಿರುವ ನಿನ್ನ ಮುಖವನ್ನು ಎದುರಾಗಿ ಪ್ರವೇಶಮಾಡುತ್ತಿದ್ದಾರೆ.

**ವಿಜ್ವಲಂತಿ ದೀಪ್ಯಮಾನಾನಿ ವಕ್ತ್ರಾಣಿ ॥ 28 ॥**

**ಅನುವಾದ–** ವಿಜ್ವಲಂತಿ = ಬೆಳಗುವ ಮುಖಗಳನ್ನು . ॥ 28 ॥

**ಯಥಾ ಪ್ರದೀಪ್ತಂ ಜ್ವಲನಂ ಪತಂಗಾ**
**ವಿಶಂತಿ ನಾಶಾಯ ಸಮೃದ್ಧವೇಗಾಃ ।**
**ತಥೈವ ನಾಶಾಯ ವಿಶಂತಿ ಲೋಕಾಃ**
**(ಸ್ತ)ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥ 29 ॥**

**ಅರ್ಥ–** ಹೇಗೆ ವೇಗವುಳ್ಳ ಪತಂಗಗಳು ನಾಶಕ್ಕೆ ಕಾರಣವಾದ ಬೆಂಕಿಯನ್ನು ಪ್ರವೇಶಿಸುತ್ತವೋ ಅಂತೆಯೇ ಈ ಎಲ್ಲಾ ಜನರು ವೇಗವುಳ್ಳವರಾಗಿ ತಮ್ಮ ನಾಶಕ್ಕೆ ಕಾರಣವಾಗಿ ನಿನ್ನ ಮುಖಗಳನ್ನು ಪ್ರವೇಶಿಸುತ್ತಿದ್ದಾರೆ.

**ತವಾಪಿ ವಕ್ತ್ರಾಣಿ ಸಮೃದ್ಧವೇಗಾ ಇತ್ಯತ್ರ ಭಗವತಾ ಅತಿತೀವ್ರಂ ಗ್ರಸ್ಯಮಾನತ್ವಾದ್‌ತಥೋಪಚರ್ಯತ ಇತಿ ಭಾವಃ ॥ 29 ॥**

**ಅನುವಾದ –** 'ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ' ಎಂಬಲ್ಲಿ ಭಗವಂತನೇ ಅತಿತೀವ್ರವಾಗಿ ನುಂಗುವುದರಿಂದ ಅವರೇ ಪ್ರವೇಶ ಮಾಡುತ್ತಾರೆ ಎಂಬುದು ಔಪಚಾರಿಕ ಪ್ರಯೋಗ – ಗೌಣ ಪ್ರಯೋಗ. ॥ 29 ॥

**ಲೇಲಿಹ್ಯಸೇ ಗ್ರಸಮಾನಃ ಸಮಂತಾತ್**
**ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ ।**
**ತೇಜೋಭಿರಾಪೂರ್ಯ ಜಗತ್ ಸಮಗ್ರಂ**
**ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ॥ 30 ॥**

**ಅರ್ಥ–** ಎಲ್ಲ ಜನರನ್ನು ಜ್ವಲಿಸುವ ಮುಖಗಳಿಂದ ಎಲ್ಲೆಡೆಯಿಂದ ನುಂಗುತ್ತಾ ಕೋಪದಿಂದ ರಕ್ತಸಿಕ್ತವಾದ ತುಟಿಗಳನ್ನು ನಾಲಿಗೆಯಿಂದ ಆಸ್ವಾದಿಸುವಂತೆ ನೆಕ್ಕುತ್ತಿರುವಿ. ಹೇ ಜಗದ್ವ್ಯಾಪ್ತನೇ! ನಿನ್ನ ತೀಕ್ಷ್ಣವಾದ ಪ್ರಭೆಗಳು ತಮ್ಮ ಪ್ರಕಾಶ ಶಕ್ತಿಯಿಂದ ಇಡೀ ಜಗತ್ತನ್ನೇ ದೇಹ ಮುಂತಾದ ಪದಾರ್ಥಗಳಲ್ಲಿ ಬಿಸಿಯನ್ನುಂಟು ಮಾಡುತ್ತಿವೆ .

**ಸಮಗ್ರಾನ್‌ಲೋಕಾನ್ ಜನಾನ್ ಜ್ವಲದ್ಭಿರ್ವದನೈಃ ಸಮಂತಾದ್‌ಗ್ರಸಮಾನಃ ಮುಖಾಂತಃಕುರ್ವಾಣಃ ಲೇಲಿಹ್ಯಸೇ । ಕೋಪೇನ ರುಧಿರಾಸಿಕ್ತಮೋಷ್ಠ ಪುಟಾದಿಕಂ ಜಿಹ್ವಾಗ್ರೇಣಾಸ್ವಾದಯಸೀವಾಸಕೃತ್‌ಸ್ಪೃಶಸಿ । ಹೇ ವಿಷ್ಣೋ ! ತವೋಗ್ರಾಃ ತೀಕ್ಷ್ಣಾಃ ಭಾಸಃ ಪ್ರಭಾಃ ತೇಜೋಭಿಃ ಪ್ರಕಾಶನಶಕ್ತಿಭಿಃ ಸಮಗ್ರಂ ಜಗದಾಪೂರ್ಯ ವ್ಯಾಪ್ಯ ಪ್ರತಪಂತಿ ದೇಹಾದಿಪದಾರ್ಥೇಷೂಷ್ಮಾಣಂ ಜನಯಂತಿ ॥ 30 ॥**

**ಅನುವಾದ- ಸಮಗ್ರಾನ್ ಲೋಕಾನ್**= ಎಲ್ಲಾ ಜನರನ್ನು ಜ್ವಲಿಸುವ ಮುಖಗಳಿಂದ ಎಲ್ಲೆಡೆಯಿಂದ, **ಗ್ರಸಮಾನಃ**= ಮುಖದ ಒಳಗೆ ಸೇರಿಸುತ್ತಾ. **ಲೇಲಿಹ್ಯಸೇ**= ಕೋಪದಿಂದ ರಕ್ತಸಿಕ್ತವಾದ ತುಟಿ ಮುಂತಾದ್ದನ್ನು ನಾಲಿಗೆಯ ತುದಿಯಿಂದ ಆಸ್ವಾದಿಸುವಂತೆ ಮುಟ್ಟುತ್ತಿರುವಿ. ಹೇ ವ್ಯಾಪ್ತನಾದ ಜಗತ್ಪ್ರವಿಷ್ಟನಾದವನೇ ! ನಿನ್ನ **ಉಗ್ರಾಃ**= ತೀಕ್ಷ್ಣಗಳಾದ **ಭಾಸಃ**= ಪ್ರಭೆಗಳು , **ತೇಜೋಭಿಃ**= ಪ್ರಕಾಶಗೊಳಿಸುವ ಶಕ್ತಿಗಳಿಂದ ಎಲ್ಲಾ ಜಗತ್ತನ್ನು, **ಆಪೂರ್ಯ**= ತುಂಬಿ, ದೇಹ ಮುಂತಾದ ಪದಾರ್ಥಗಳಲ್ಲಿ ಬೇಗೆಯನ್ನು ಉಂಟು ಮಾಡುತ್ತಿವೆ. ॥ 30 ॥

**ಆಖ್ಯಾಹಿ ಮೇ ಕೋ ಭವಾನುಗ್ರರೂಪೋ**
**ನಮೋऽಸ್ತು ತೇ ದೇವವರ ಪ್ರಸೀದ ।**
**ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ**
**ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥ 31 ॥**

**ಅರ್ಥ–** ನೀನು ಏಕೆ ಉಗ್ರರೂಪವುಳ್ಳವನಾಗಿರುವೆ . ನನಗೆ ತಿಳಿಸು . ದೇವಶ್ರೇಷ್ಠನೇ ನಿನಗೆ

ನಮಸ್ಕಾರವು. ಪ್ರಸನ್ನನಾಗು. ಆದಿಪುರುಷನಾದ ನಿನ್ನನ್ನು ತಿಳಿಯಲು ಇಚ್ಛಿಸುತ್ತೇನೆ. ನಿನ್ನ ಪ್ರವೃತ್ತಿಯನ್ನು ತಿಳಿಯಲಾರೆನು.

**ಭಗವತ್ಸ್ವರೂಪಂ ತದೀಯಗುಣಕರ್ಮಾಣಿ ಜಾನನ್ನಪ್ಯರ್ಜುನಃ ಅಜ್ಞಾತ-ಗುಣಕರ್ಮವಿಶೇಷಜ್ಞಾನಾರ್ಥಂ ಪೃಚ್ಛತಿ- ಆಖ್ಯಾಹೀತಿ ॥ ಉಗ್ರರೂಪೋ ಭವಾನ್ ಕಃ ಕಿಂಧರ್ಮಕಃ । ಕಿಮರ್ಥಮುಗ್ರರೂಪ ಇತ್ಯರ್ಥಃ ॥ 31 ॥**

**ಅನುವಾದ** – ಭಗವಂತನ ಸ್ವರೂಪವನ್ನು ಅವನ ಗುಣಕರ್ಮಗಳನ್ನು ತಿಳಿದವನಾದರೂ ಅರ್ಜುನನು, ತಿಳಿಯದ ಗುಣಕರ್ಮವಿಶೇಷಗಳನ್ನು ತಿಳಿಯಲು 'ಆಖ್ಯಾಹಿ' ಮುಂತಾಗಿ ಕೇಳುತ್ತಾನೆ. ಉಗ್ರರೂಪೀ ಭವಾನ್ ಕಃ= ಯಾವ ಧರ್ಮ ಉಳ್ಳವನು ? ಯಾವ ಕಾರಣಕ್ಕಾಗಿ ಉಗ್ರರೂಪವುಳ್ಳವನಾಗಿರುವಿ ಎಂದರ್ಥ. ॥ 31 ॥

## ಲೋಕಕ್ಷಯಕಾರಿ ಮೃತ್ಯು ನಾನಾಗಿಹೆ

**ಶ್ರೀಭಗವಾನುವಾಚ -**

**ಕಾಲೋಽಸ್ಮಿ ಲೋಕಕ್ಷಯಕೃತ್‌ಪ್ರವೃದ್ಧೋ**
**ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ ।**
**ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ**
**ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥ 32 ॥**

**ಅರ್ಥ**– ನಾನು ಕಾಲನಾಗಿರುವೆನು. ಪೂರ್ಣಷಡ್ಗುಣಗಳಿಂದ ತುಂಬಿರುವೆನು. ಹಾಗೆಯೇ ಜಗತ್ತಿಗೆ ಬಂಧಕನು, ಸಂಹಾರಕನು , ಜ್ಞಾನದಾತೃವು, ದೇಶಕಾಲಗಳಿಂದ ತುಂಬಿದ ಅನಾದಿ ನಿತ್ಯನು , ಲೋಕದ ಕ್ಷಯವನ್ನುಂಟು ಮಾಡುವುದಕ್ಕಾಗಿ ಯುದ್ಧ ಭೂಮಿಯಲ್ಲಿರುವ ಜನರನ್ನು ಪ್ರತ್ಯಕ್ಷವಾಗಿ ಸಂಹರಿಸಲು ಪ್ರವೃತ್ತನಾಗಿರುವೆನು. ನೀನು ಧರ್ಮರಾಜ ಮುಂತಾದವರನ್ನು ಹೊರತಾಗಿ ಪರಸ್ಪರ ಪ್ರತಿಸ್ಪರ್ಧಿಯಾಗಿರುವ ಎರಡು ಸೇನೆಗಳಲ್ಲಿರುವ ಎಲ್ಲಾ ಯೋಧರು ಇನ್ನು ಮುಂದೆ ಇಲ್ಲವಾಗುತ್ತಾರೆ.

**ಏವಮರ್ಥಿತೋ ಭಗವಾನ್ ಸ್ವಗುಣಾದೀನಾಹ-ಕಾಲೋಽಸ್ಮೀತಿ ॥ 'ಕಲ ಬಂಧನೇ ಕಲ ಸಂಹರಣೇ ಕಲ ಜ್ಞಾನೇ ಕಲ ವಿದ್ರಾವಣೇ [1]ಕಲ ಕಾಮಧೇನುಃ' ಇತಿ ಧಾತುಪಾಠಾತ್ ಪೂರ್ಣ(ಷಡ್)ಸದ್ಗುಣೈಃ ಕಲಿತತ್ವಾತ್ ಸಮ್ಬದ್ಧತ್ವಾತ್ಕಾಲಃ**

1. ಕಲ ಕಾಮಧೇನೌ

ಪೂರ್ಣಸದ್ಗುಣೋ(ಷಡ್ಗುಣೋ)ಽಸ್ಮೀತ್ಯರ್ಥಃ । ತಥಾ ಜಗದ್ಬಂಧನಸಂಹರಣ-ಬೋಧನವಿದ್ರಾವಣಾದಿಕರ್ಮಯುಕ್ತತ್ವಾಚ್ಚ ಕಾಲೋಽಸ್ಮೀತ್ಯರ್ಥಃ । ಕಲತೇಃ ಕರ್ಮಣಿ ಕರ್ತರಿ ಚ ಅಣ್, ಘಞ್‌ಪ್ರತ್ಯಯೋ ವಾ । ಕಿಮರ್ಥಮುಗ್ರರೂಪ ಇತ್ಯಸ್ಯೋತ್ತರಮ್- **ಲೋಕಕ್ಷಯಕೃದಿತ್ಯಾದಿ ॥** ಪ್ರವೃದ್ಧೋ ದೇಶಕಾಲತಃ ಪರಿ-ಪೂರ್ಣಃ । ಅನಾದಿನಿತ್ಯ ಇತಿ ವಾ । ಲೋಕಸ್ಯ ಕ್ಷಯಕೃದ್‌ಭವನ್ನಿಹ ಯುದ್ಧ-ಮಂಡಲಗತಾನ್ ಲೋಕಾನ್ ಜನಾನ್ ಪ್ರತ್ಯಕ್ಷತ ಏವ ಸಂಹರ್ತುಂ ಪ್ರವೃತ್ತೋಽಸ್ಮಿ । ತರ್ಹಿ [1]ಪಾರ್ಥಾನಪಿ ಸಂಹರ್ತುಂ ಪ್ರವೃತ್ತಃ ಕಿಮಿತ್ಯತ ಆಹ- **ಋತೇಽಪೀತಿ ॥** ಅಪಿರ್ಧರ್ಮಾದಿಸಮುಚ್ಚಯೇ । ಧರ್ಮಾದಿಪಂಚ= ಪಾಂಡವಾನ್ ಅಶ್ವತ್ಥಾಮಕೃತವರ್ಮಕೃಪಾಂಶ್ಚ ವಿನೇತ್ಯರ್ಥಃ । ಪ್ರತ್ಯನೀಕೇಷು ಪರಸ್ಪರಂ ಪ್ರತಿಸ್ಪರ್ಧಿತಯಾ ಸ್ಥಿತೇ ಸೇನಾದ್ವಯೇ । ಅಕ್ಷೌಹಿಣೀಬಹುತ್ವಾಭಿ-ಪ್ರಾಯೇಣ ಬಹುವಚನಮ್ । ಯೇಽವಸ್ಥಿತಾ ಯೋಧಾಸ್ತೇ ಸರ್ವೇ ನ ಭವಿಷ್ಯಂತೀತ್ಯರ್ಥಃ ॥ 32 ॥

**ಅನುವಾದ-** ಹೀಗೆ ಪ್ರಾರ್ಥಿಸಲ್ಪಟ್ಟ ಭಗವಂತನು ತನ್ನ ಗುಣ ಮುಂತಾದವನ್ನು '**ಕಾಲೋಸ್ಮಿ**' ಮುಂತಾಗಿ ಹೇಳುತ್ತಾನೆ. '**ಕಲ**' ಧಾತು, ಬಂಧನ ಎಂಬರ್ಥದಲ್ಲೂ, ಸಂಹಾರ ಎಂಬರ್ಥದಲ್ಲೂ ಜ್ಞಾನ, ಓಡಿಸುವಿಕೆ, ಅಭೀಷ್ಟಗಳನ್ನು ನೀಡುವುದು ಎಂಬರ್ಥಗಳಲ್ಲಿ ಇದೆ ಎಂದು ಧಾತು ಪಾಠವಿರುವುದರಿಂದ ಪೂರ್ಣವಾದ ಐಶ್ವರ್ಯ ಮುಂತಾದ ಆರು ಗುಣಗಳಿಂದ ಸಂಬದ್ಧ ನಾಗಿರುವುದರಿಂದ- ತುಂಬಿರುವುದರಿಂದ ನಾನು **ಕಾಲನು**= ಪೂರ್ಣವಾದ ಸದ್ಗುಣ ಗಳಿರುವವನು, ಐಶ್ವರ್ಯ ಮುಂತಾದ ಆರು ಗುಣಗಳಿರುವವನು ಎಂದರ್ಥ. ಹಾಗೆಯೇ ಜಗತ್ತಿಗೆ ಬಂಧನ, ಸಂಹಾರ, ಜ್ಞಾನ, ಓಡಿಸುವುದು ಮುಂತಾದ ಕರ್ಮಗಳನ್ನು ನೀಡುವುದರಿಂದ ಕಾಲನಾಮಕನಾಗಿರುವೆನು ಎಂದರ್ಥ. '**ಕಲ**' ಧಾತುವಿಗೆ ಕರ್ಮ ಮತ್ತು ಕರ್ತೃ ಎರಡರ್ಥ ದಲ್ಲೂ '**ಅಣ್**' ಅಥವಾ '**ಘಞ್**' ಪ್ರತ್ಯಯ ಬಂದು ಕಾಲವೆಂದು ರೂಪವಾಗಿದೆ. ಏಕೆ ಉಗ್ರ ರೂಪವುಳ್ಳವನೆಂಬುವುದಕ್ಕೆ ಉತ್ತರವನ್ನು '**ಲೋಕಕ್ಷಯಕೃತ್**' ಮುಂತಾಗಿ ಹೇಳುತ್ತಿದ್ದಾನೆ. **ಪ್ರವೃದ್ಧಃ** = ದೇಶಕಾಲಗಳಿಂದ ಪರಿಪೂರ್ಣನು ಅಥವಾ ತುದಿಮೊದಲಿಲ್ಲದವನು ಎಂದರ್ಥ. ಲೋಕದ ನಾಶವನ್ನು ಮಾಡುವವನಾಗಿ ಇಲ್ಲಿ ಯುದ್ಧರಂಗದಲ್ಲಿಯ ಜನರನ್ನು ಎದುರಿನಲ್ಲೇ ಸಂಹರಿಸಲು ಪ್ರವೃತ್ತನಾಗಿರುವೆನು. ಹಾಗಾದರೆ ಪಾಂಡವರನ್ನೂ ಸಂಹರಿಸಲು ಪ್ರವೃತ್ತ ನಾಗಿರುವೆಯೋ ಎಂಬುದಕ್ಕೆ '**ಋತೇಽಪಿ**' ಮುಂತಾಗಿ ಉತ್ತರಿಸುತ್ತಿದ್ದಾನೆ. ನಿನ್ನನ್ನು ಹೊರತಾಗಿ

1. ಪಾರ್ಥಾನಾಮಪಿ

ಎಂದರ್ಥ. ಇಲ್ಲಿ ಅಪಿಶಬ್ದವು ಧರ್ಮರಾಜ ಮುಂತಾದವರನ್ನು ಸೇರಿಸಿಕೊಳ್ಳಬೇಕೆಂಬರ್ಥದಲ್ಲಿದೆ. ಧರ್ಮರಾಜ ಮುಂತಾದ ಐದು ಪಾಂಡವರನ್ನು, ಅಶ್ವತ್ಥಾಮ, ಕೃತವರ್ಮ, ಕೃಪಾಚಾರ್ಯರನ್ನು ಹೊರತಾಗಿ ನಾಶ ಮಾಡುತ್ತೇನೆ. **ಪ್ರತ್ಯನೀಕೇಷು** = ಪರಸ್ಪರವಾಗಿ ಪ್ರತಿಸ್ಪರ್ಧಿಗಳಾಗಿ ನಿಂತಿರುವ ಎರಡು ಸೇನೆಗಳಲ್ಲಿ. ಸಂಸ್ಕೃತದಲ್ಲಿ ಎರಡು ವಸ್ತುಗಳಿದ್ದಾಗ ಬಹುವಚನವಿರುವುದಿಲ್ಲ ದ್ವಿವಚನವಿರುತ್ತದೆ. ಇಲ್ಲಿ ಸೈನ್ಯಗಳು ಎರಡಾದರೂ ಅಕ್ಷೋಹಿಣಿಗಳು ಬಹಳವಿರುವುದರಿಂದ ಸೈನ್ಯಗಳಲ್ಲಿ ಎಂದು ಬಹುವಚನವನ್ನು ಪ್ರಯೋಗಿಸಿದ್ದಾರೆ. ಯುದ್ಧರಂಗದಲ್ಲಿ ಯಾರಿದ್ದಾರೋ ಅವರೆಲ್ಲರೂ ಇಲ್ಲವಾಗುತ್ತಾರೆ ಎಂದರ್ಥ. ॥ 32 ॥

## ಎಲ್ಲ ನಾನೇ ಮಾಡುವೆ, ಹೆಸರಿಗೆ ಮಾತ್ರ ನೀನಿರು

**ತಸ್ಮಾತ್ ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಮ್ ।**
**ಮಯ್ಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ 33 ॥**

**ಅರ್ಥ**– ನಾನೇ ಜನರನ್ನು ಸಂಹರಿಸಲು ಇಲ್ಲಿ ಪ್ರವೃತ್ತನಾದ್ದರಿಂದ ನಿನಗೆ ವಿಜಯದಲ್ಲಿ ಸಂದೇಹವಿಲ್ಲದಿರುವುದರಿಂದ ಯುದ್ಧಕ್ಕೆ ಸನ್ನದ್ಧನಾಗು ಶತ್ರುಗಳನ್ನು ಗೆದ್ದು ಕೀರ್ತಿಯನ್ನು ಪಡೆ . ಸಮೃದ್ಧವಾದ ರಾಜ್ಯವನ್ನು ಅನುಭವಿಸು. ಈಗಾಗಲೇ ಆಯುಷ್ಯಾಪಹಾರ ಮಾಡಿರುವುದರಿಂದ ಮರಣವನ್ನು ಸಮೀಪಿಸಿರುವ ಮೃತರಂತಿರುವವರನ್ನು ಪ್ರತ್ಯಕ್ಷವಾಗಿ ಸಂಹರಿಸು. ಎಡ-ಬಲ ಕೈಗಳಿಂದ ಬಾಣವನ್ನು ಪ್ರಯೋಗಿಸುವವನೇ ! ನೀನು ಕೇವಲ ನಿಮಿತ್ತನಾಗು. ನಿನ್ನೊಳಗಿದ್ದು ನಾನೇ ಸಂಹರಿಸುವೆನು.

**ಪೂರ್ವಂ ದ್ವಿತೀಯೇ 'ನ ಚೈತದ್‌ವಿದ್ಮಃ ಕತರನ್ನೋ ಗರೀಯೋ ಯದ್ವಾ ಜಯೇಮ ಯದಿ ವಾ ನೋ ಜಯೇಯುಃ' (2-6) ಇತಿ ವದಂತಂ ಪಾರ್ಥಂ ಪ್ರತಿ ಸಂದೇಹೇಽಪಿ ಯುದ್ಧೇ ಪ್ರವೃತ್ತಿರ್ಯುಕ್ತಾ । ಪಕ್ಷದ್ವಯೇಽಪಿ ಫಲಲಾಭಾತ್ । 'ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್' (2-37) ಇತ್ಯುತ್ತರಮುಕ್ತಮ್ । ಇದಾನೀಂ ತವ ಪರಾಜಯಶಂಕಾ ನಾಸ್ತೀತ್ಯಾಹ- ತಸ್ಮಾದಿತಿ ದ್ವಯೇನ ॥ ಯಸ್ಮಾದಹಮೇವ ಲೋಕಾನ್ ಸಮಾಹರ್ತುಂ ಇಹ ಪ್ರವೃತ್ತಃ ತಸ್ಮಾದ್ ವಿಜಯೇ ಸನ್ದೇಹಾಭಾವಾದುತ್ತಿಷ್ಠ ಯೋದ್ಧುಂ ಸನ್ನದ್ಧೋ ಭವ । ಶತ್ರೂನ್ ಜಿತ್ವಾ ಯಶೋ ಲಭಸ್ವ ಸಮೃದ್ಧಂ ರಾಜ್ಯಂ ಭುಂಕ್ಷ್ವ । ಪೂರ್ವಮೇವ ಮಯಾ ನಿಹತಾಃ ನಿಹತಪ್ರಾಯಾಃ ಅಪಹೃತಾಯುಷ್ಟ್ವೇನ ಸನ್ನಿಹಿತಮರಣಾಃ**

**ಸಂತಿ । ತಾನ್ ಪ್ರತ್ಯಕ್ಷತೋ ಹಂತುಂ ಹೇ ಸವ್ಯಸಾಚಿನ್ ತ್ವಂ ನಿಮಿತ್ತಮಾತ್ರಂ ಭವ । ಪಶ್ಚಾದಪಿ ತ್ವಯಿ ಸ್ಥಿತ್ವಾऽಹಮೇವ ಹನಿಷ್ಯಾಮೀತಿ ಭಾವಃ ॥ 33 ॥**

**ಅನುವಾದ**- ಹಿಂದೆ ಎರಡನೇ ಅಧ್ಯಾಯದಲ್ಲಿ ಯುದ್ಧದಲ್ಲಿಗೆಲ್ಲುತ್ತೇವೋ ಇಲ್ಲವೋ ? ಯಾವುದು ಶ್ರೇಷ್ಠವೆಂದು ತಿಳಿಯಲಾರೆನು (2-6) ಎಂದು ಹೇಳಿದ ಅರ್ಜುನನಿಗೆ ಫಲದಲ್ಲಿ ಸಂದೇಹವಿದ್ದರೂ ಯುದ್ಧದಲ್ಲಿ ಪ್ರವೃತ್ತಿ ಸರಿಯಾಗಿದೆ. ಯುದ್ಧದಲ್ಲಿಮೃತನಾದರೆ ಸ್ವರ್ಗವನ್ನು ಸೇರುವಿ. ಗೆದ್ದರೆ ರಾಜ್ಯವನ್ನು ಭೋಗಿಸು. (2-37) ಎಂದು ಸೋಲು, ಗೆಲುವು ಎರಡು ಪಕ್ಷಗಳಲ್ಲೂ ಫಲವಿದೆ. ಆದ್ದರಿಂದ ಯುದ್ಧ ಪ್ರವೃತ್ತಿ ಸರಿ ಎಂದು ಉತ್ತರ ನೀಡಿದೆ. ಈಗ ನಿನಗೆ ಪರಾಜಯ ಶಂಕೆಯೂ ಇಲ್ಲವೆಂದು '**ತಸ್ಮಾತ್**' ಮುಂತಾಗಿ ಎರಡು ಶ್ಲೋಕದಿಂದ ಹೇಳುತ್ತಾನೆ. ಯಾವ ಕಾರಣದಿಂದ ಈ ಜನರನ್ನು ಸಂಹರಿಸಲು ನಾನು ಪ್ರವೃತ್ತನಾಗಿರುವೆನೊ ಆದ್ದರಿಂದ ವಿಜಯದಲ್ಲಿ ಸಂದೇಹವಿಲ್ಲದಿರುವುದರಿಂದ **ಉತ್ತಿಷ್ಠ**= ಯುದ್ಧ ಮಾಡಲು ಸನ್ನದ್ಧನಾಗು, ಶತ್ರುಗಳನ್ನು ಗೆದ್ದು ಕೀರ್ತಿಯನ್ನು ಪಡೆ . ಸಮೃದ್ಧವಾದ ರಾಜ್ಯವನ್ನು ಅನುಭವಿಸು. ಮೊದಲೇ ನನ್ನಿಂದ **ನಿಹತಾಃ**= ಸಂಹರಿಸಲ್ಪಟ್ಟಂತಿರುವ ಆಯುಷ್ಯಾಪಹರಣದಿಂದ ಮೃತ್ಯುವನ್ನು ಸಮೀಪಿಸಿದವರಾಗಿದ್ದಾರೆ. ಅವರನ್ನು ಪ್ರತ್ಯಕ್ಷವಾಗಿ ಕೊಲ್ಲಲು ಹೇ ಸವ್ಯಸಾಚಿಯೇ (ಎಡಬಲ ಕೈಗಳಿಂದ ಬಾಣಗಳನ್ನು ಬಿಡುವವನೇ) ನೀನು ಕೇವಲ ನಿಮಿತ್ತನಾಗು. ಮುಂದೆ ಕೂಡಾ ನಿನ್ನಲ್ಲಿದ್ದು ನಾನೇ ಅವರನ್ನು ಸಂಹರಿಸುವೆನು ಎಂದು ಆಶಯ. ॥ 33 ॥

**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾऽನ್ಯಾನಪಿ ಯೋಧವೀರಾನ್ ।**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ**
**ಯುಧ್ಯಸ್ವ ಜೇತಾऽಸಿ ರಣೇ ಸಪತ್ನಾನ್ ॥ 34 ॥**

**ಅರ್ಥ**– ನನ್ನಿಂದ ಈಗಾಗಲೇ ಕೊಲ್ಲಲ್ಪಟ್ಟಂತಿರುವ ದ್ರೋಣರನ್ನು , ಭೀಷ್ಮರನ್ನು, ಜಯದ್ರಥ ನನ್ನು , ಕರ್ಣನನ್ನು ಹಾಗೇ ಬೇರೆ ವೀರರಾದ ಯೋಧರನ್ನು ನೀನು ಕೊಲ್ಲು.ದುಃಖಿಸಬೇಡ. ಯುದ್ಧಮಾಡು. ಯುದ್ಧದಲ್ಲಿಶತ್ರುಗಳನ್ನು ಗೆಲ್ಲುವಿ.

**ನನು ದ್ರೋಣೋ ಧನುರ್ವಿದ್ಯಾಚಾರ್ಯಃ ಭೀಷ್ಮಃ ಸ್ವಚ್ಛಂದಮೃತ್ಯುಃ । ಯೋऽಸ್ಯ ಶಿರಃ ಛಿತ್ವಾ ಭೂಮೌ ಪಾತಯೇತ್ ತಚ್ಛಿರೋ ಭೇತ್ಸ್ಯತ ಇತಿ ಪಿತುರ್ವರೇಣ ಬಲಿಷ್ಠಃ ಸೈಂಧವಃ । ವಾಸವಶಕ್ತ್ಯಾ ಕರ್ಣೋ ಬಲವಾನ್ । ಏವಮನ್ಯೇ ಚ ಬಲಿಷ್ಠಾಃ ಸಂತಿ । ತೇ ಕಥಂ ಮಯಾ ಜೇಯಾ ಇತ್ಯತ ಆಹ- ದ್ರೋಣಂ ಚೇತಿ ॥ 34 ॥**

**ಅನುವಾದ-** ದ್ರೋಣರು ಧನುರ್ವಿದ್ಯೆಯಲ್ಲಿಗುರುಗಳು . ಭೀಷ್ಮರು ಇಚ್ಛಾಮರಣಿಗಳು. ಜಯದ್ರಥನು- ಯಾರು ಇವನ ಶಿರಸ್ಸನ್ನು ಕಡಿದು ಭೂಮಿಯಲ್ಲಿ ಬೀಳಿಸುವರೋ ಅವರ ತಲೆಯು ಸೀಳುತ್ತದೆ ಎಂಬ ತಂದೆಯ ವರದಿಂದ ಬಲಿಷ್ಠನಾಗಿರುವನು. ಇಂದ್ರನು ನೀಡಿದ ಶಕ್ತಿ ಆಯುಧದಿಂದ ಕರ್ಣನು ಬಲಿಷ್ಠನಾಗಿರುವನು. ಹೀಗೆ ಅವರನ್ನು ನಾನು ಹೇಗೆ ಗೆಲ್ಲಲಿ ಎಂಬ ಶಂಕೆಗೆ 'ದ್ರೋಣಂ ಚ' ಮುಂತಾಗಿ ಉತ್ತರಿಸುತ್ತಾನೆ. ।। 34 ।।

## ಭೀತನಾದ ಅರ್ಜುನನ ಪ್ರಾರ್ಥನೆ

**ಸಂಜಯ ಉವಾಚ -**

**ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಂಜಲಿರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಽಽಹ ಕೃಷ್ಣಂ**
**ಸಗದ್ಗದಂ ಭೀತಭೀತಃ ಪ್ರಣಮ್ಯ ।। 35 ।।**

**ಅರ್ಥ-** ಸಂಜಯನು ಹೇಳಿದ- ಕೇಶವನ ಈ ಮಾತನ್ನು ಕೇಳಿ ಅರ್ಜುನ ಅಂಜಲಿ ಬದ್ಧನಾದ. ಭಯದಿಂದ ಅಂಗಗಳು ನಡುಗಿದವು. ಮತ್ತೆಮತ್ತೆ ಕೃಷ್ಣನನ್ನು ನಮಸ್ಕರಿಸಿ ಅತ್ಯಂತ ಭೀತನಾಗಿ ಮತ್ತೆ ನಮಸ್ಕರಿಸಿ ಗದ್ಗದಕಂಠನಾಗಿ ಕೃಷ್ಣನಿಗೆ ಹೇಳಿದ.

**ತತಃ ಕಿಂ ಜಾತಮಿತಿ ಧಾರ್ತರಾಷ್ಟ್ರಹಾರ್ದಂ ಪರಿಹರ್ತುಂ ಸಂಜಯ ಉವಾಚ । ಕಿಮಿತ್ಯತ ಆಹ- ಏತದಿತ್ಯಾದಿನಾ ।। ವೇಪಮಾನಃ ಭಯ-ಕಂಪಿತಾಂಗಃ । ಭೀತಭೀತಃ ಅತ್ಯಂತಭೀತಃ ।। 35 ।।**

**ಅನುವಾದ-** ಮುಂದೇನಾಯಿತು ಎಂಬ ಧೃತರಾಷ್ಟ್ರನ ಶಂಕೆಯನ್ನು ಪರಿಹರಿಸಲು ಸಂಜಯನು ಹೇಳಿದ. ಅದು ಏನೆಂದು 'ಏತತ್' ಮುಂತಾಗಿ ಹೇಳುತ್ತಾರೆ. **ವೇಪಮಾನಃ=** ಭಯದಿಂದ ನಡುಗಿದ ಅಂಗವುಳ್ಳವನು. **ಭೀತಭೀತಃ=** ಬಹಳವಾಗಿ ಹೆದರಿದವ. ।। 35 ।।

## ಸುಜನರಿಗೆ ಶಂಕರ - ಕುಜನರಿಗೆ ಭಯಂಕರ

**ಅರ್ಜುನ ಉವಾಚ -**

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ ಪ್ರಹೃಷ್ಯತ್ಯನುರಜ್ಯತೇ ಚ ।**

**ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ**
**ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ ॥ 36 ॥**

**ಅರ್ಥ–** ಅರ್ಜುನ ಹೇಳಿದ— ಹೇ ಇಂದ್ರಿಯನಿಯಾಮಕನೆ ! ನಿನ್ನ ಕೀರ್ತಿಯಿಂದ ಜಗತ್ತು ಸಂತುಷ್ಟವಾಗುತ್ತದೆ. ನಿನ್ನಲ್ಲಿ ಅನುರಾಗವುಳ್ಳದ್ದಾಗುತ್ತಿದೆ. ಇದು ಸರಿಯೇ. ಎಲ್ಲಾ ರಾಕ್ಷಸರು ಭಯಗೊಂಡು ದಿಕ್ಕುಗಳಿಗೆ ಪಲಾಯನ ಮಾಡುತ್ತಿದ್ದಾರೆ. ಎಲ್ಲ ಸಿದ್ದರ ಸಮೂಹಗಳು ನಿನ್ನನ್ನು ನಮಸ್ಕರಿಸುತ್ತಿವೆ.

**ತದ್ವಚನಮಾಹ– ಸ್ಥಾನ ಇತ್ಯಾದಿನಾ ॥ ಹೇ ಹೃಷೀಕೇಶ ! ಸರ್ವೇಂದ್ರಿಯ-ಪ್ರೇರಕ ! ತವ ಪ್ರಕೀರ್ತ್ಯಾ ಜಗತ್ಪ್ರಹೃಷ್ಯತಿ ಅನುರಜ್ಯತೇ ಚೇತ್ಯಾದಿ(ಕಂ) ಸ್ಥಾನೇ । ಅವ್ಯಯಮೇತತ್ । ಯುಕ್ತಮೇವೇತ್ಯರ್ಥಃ ॥ 36 ॥**

**ಅನುವಾದ–** ಅರ್ಜುನನ ಮಾತನ್ನು 'ಸ್ಥಾನೇ' ಮುಂತಾಗಿ ಹೇಳುತ್ತಾರೆ. **ಹೇ ಹೃಷೀಕೇಶ=** ಎಲ್ಲ ಇಂದ್ರಿಯಗಳಿಗೆ ಪ್ರೇರಕನೇ ! ನಿನ್ನ ಶ್ರೇಷ್ಠಕೀರ್ತಿಯಿಂದ ಈ ಜಗತ್ತು ಸಂತುಷ್ಟವಾಗುತ್ತಿದೆ. ನಿನ್ನಲ್ಲಿ ಅನುರಾಗ ಉಳ್ಳದ್ದಾಗಿದೆ. ಮುಂತಾದ್ದು ಉಚಿತವೇ. ಸ್ಥಾನೇ ಎನ್ನುವುದು ಅವ್ಯಯವು. ಉಚಿತವೇ ಆಗಿದೆ ಎಂದರ್ಥ. ॥ 36 ॥

**ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್**
**ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ।**
**ಅನಂತ ದೇವೇಶ ಜಗನ್ನಿವಾಸ**
**ತ್ವಮಕ್ಷರಂ ಸದಸತ್ತತ್ಪರಂ ಯತ್ ॥ 37 ॥**

**ಅರ್ಥ–** ಹೇ ಮಹಾತ್ಮನೇ ! ಪೂರ್ಣವಾದ ವ್ಯಾಪ್ತಿಯುಳ್ಳವನೇ ! ಪೂರ್ಣವಾದ ಸ್ವೀಕಾರ ಉಳ್ಳವನೇ ! ಪೂರ್ಣವಾದ ವಿಷಯಾನುಭವವಿರುವವನೇ ! ಪೂರ್ಣವಾದ ನಿತ್ಯಸತ್ತಾ ಇರುವವನೇ ! ಅತ್ಯಂತ ಶ್ರೇಷ್ಠನಾದ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಮಾಡುವ ನಿನಗೆ ಈ ಜಗತ್ತು ಏಕೆ ನಮಸ್ಕರಿಸುವುದಿಲ್ಲ? ನಮಸ್ಕರಿಸಿಯೇ ತೀರುತ್ತದೆ . ಕೊನೆಯಿಲ್ಲದವನೇ, ದೇವತೆಗಳಿಗೂ ನಿಯಾಮಕನೇ, ಜಗದಾಶ್ರಯನೇ, ಮೂರ್ತಾಮೂರ್ತವಾದ ಜಗತ್ತಿಗಿಂತ ಶ್ರೇಷ್ಠನಾಗಿರುವ ಅಕ್ಷರನು ನೀನೇ ಆಗಿರುವಿ.

**ಕಥಂ ಯುಕ್ತಮಿತ್ಯತ ಆಹ– ಕಸ್ಮಾದಿತಿ ॥ ಹೇ ಮಹಾತ್ಮನ್ ! ಮಹಾಂಶ್ಚಾಸಾ-ವಾತ್ಮಾ ಚ ತಸ್ಯ ಸಂಬುದ್ಧಿಃ ಮಹಾತ್ಮನ್ । ಮಹಚ್ಛಬ್ದೋಽತ್ರ**

**ಪೂರ್ಣವಾಚೀ । ಆತ್ಮಶಬ್ದೋಽಪಿ 'ಯಚ್ಚಾಪ್ನೋತಿ' (ಭಾರತೇ) ಇತ್ಯಾದಿ-ಸ್ಮೃತೇರಾಪ್ತ್ಯಾದಾನವಿಷಯಾನುಭವನಿತ್ಯಸತ್ತಾರೂಪಾರ್ಥಚತುಷ್ಟಯವಾಚೀ । ಪೂರ್ಣಾಪ್ತ್ಯಾದಿಮಾನ್ ಇತ್ಯರ್ಥಃ । ಗರೀಯಸೇ ಗುರುತಮಾಯ, ಬ್ರಹ್ಮಣ-ಶ್ಚತುರ್ಮುಖಸ್ಯಾಪ್ಯಾದಿಕರ್ತ್ರೇ ತೇ ತುಭ್ಯಂ ಕಸ್ಮಾನ್ನ ನಮೇರನ್ । ನಮೇಯು-ರೇವ । ಅನಂತ ಅಂತಶೂನ್ಯ । (ದೇವೇಶ) ದೇವಾನಾಮೀಶ । ಜಗನ್ನಿವಾಸ ಜಗದಾಶ್ರಯ । [1]ಯತ್ಸದಸದ್ಭಾವಾಭಾವಾತ್ಮಕಂ ಜಗತ್ತತ್ಪರಂ ತದುತ್ತಮಮಕ್ಷ-ರಮ್ । ತ್ವಮೇವೇತ್ಯರ್ಥಃ ॥ 37 ॥**

**ಅನುವಾದ-** ಅದು ಹೇಗೆ ಉಚಿತವೆನ್ನುವುದನ್ನು **'ಕಸ್ಮಾತ್'** ಮುಂತಾಗಿ ಹೇಳುತ್ತಿದ್ದಾರೆ. ಪೂರ್ಣನಾದ ಆತ್ಮನು ಎಂದರ್ಥ. **ಮಹಾತ್ಮನ್** ಶಬ್ದದ ಸಂಬೋಧನಾವಿಭಕ್ತಿಯಲ್ಲಿ **'ಮಹಾತ್ಮನ್'** ಎಂದು ರೂಪವಾಗುತ್ತದೆ. ಇಲ್ಲಿ ಮಹತ್ ಎಂಬ ಶಬ್ದವು ಪೂರ್ಣ ಎಂಬರ್ಥವನ್ನು ಹೇಳುತ್ತಿದೆ. ಆತ್ಮಶಬ್ದವೂ ಕೂಡ **'ಯಚ್ಚಾಪ್ನೋತಿ'** ಮುಂತಾದ (ಮಹಾಭಾರತದಲ್ಲಿ) ಸ್ಮೃತಿಗನು ಸಾರವಾಗಿ ಎಲ್ಲವನ್ನೂ ವ್ಯಾಪಿಸುವುದು, ಸ್ವೀಕರಿಸುವುದು, ವಿಷಯಾನುಭವ ಮಾಡುವುದು, ನಿತ್ಯವಾದ ಇರುವಿಕೆ ಎಂಬ ನಾಲ್ಕು ಅರ್ಥಗಳನ್ನು ಹೇಳುತ್ತದೆ. ಪೂರ್ಣವಾದ ವ್ಯಾಪ್ತಿ ಮುಂತಾದ್ದು ಉಳ್ಳವನು ಎಂದರ್ಥ. **ಗರೀಯಸೇ=** ಅತ್ಯಂತ ಶ್ರೇಷ್ಠನಾದ , **ಬ್ರಹ್ಮಣಃ =** ಚತುರ್ಮುಖನಿಗೂ ಸೃಷ್ಟಿಯನ್ನುಂಟು ಮಾಡುವ, **ತೇ=** ನಿನಗೆ ಏಕೆ ನಮಸ್ಕರಿಸುವುದಿಲ್ಲ ? ಅವಶ್ಯವಾಗಿ ನಮಸ್ಕರಿಸುತ್ತಾರೆ. **ಅನಂತ=** ಕೊನೆ ಇಲ್ಲದವನೇ. **ದೇವೇಶ =** ದೇವತೆಗಳಿಗೆ ನಿಯಾಮಕನೇ ! **ಜಗನ್ನಿವಾಸ=** ಜಗತ್ತಿಗೆ ಆಶ್ರಯನೇ, ಯಾವ ಸತ್-ಅಸತ್ ಎನಿಸುವ ಜಗತ್ತಿದೆಯೋ, ಅದಕ್ಕಿಂತ ಉತ್ತಮನಾದ ಅಕ್ಷರನೆನಿಸುವವನು ನೀನೇ ಎಂದರ್ಥ. ॥ 37 ॥

## ಎಲ್ಲೆಡೆ ವ್ಯಾಪಿಸಿದ ನಿನ್ನ ರೂಪಗಳು ಅನಂತ

**ತ್ವಮಾದಿದೇವಃ ಪುರುಷಃ ಪುರಾಣಃ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ**
**ತ್ವಯಾ ತತಂ ವಿಶ್ವಮನಂತರೂಪ ॥ 38 ॥**

**ಅರ್ಥ–** ನೀನು ಆದಿದೇವನು . ಪೂರ್ಣವಾದ ಷಡ್ಗುಣಗಳಿರುವವನು . ಸನಾತನನು ಈ ಜಗತ್ತಿಗೆ ಶ್ರೇಷ್ಠ ಆಶ್ರಯನು. ಎಲ್ಲವನ್ನೂ ತಿಳಿದವನು. ಎಲ್ಲರಿಂದ ತಿಳಿಯಬೇಕಾದವನು

1. ಯತ್ಸದಸದ್ಭಾವಾತ್ಮಕಮ್

ನೀನೊಬ್ಬನೇ. ಶ್ರೇಷ್ಠ ತೇಜಸ್ಸಮೂಹನು ನೀನೇ. ಕಾಲದಿಂದಲೂ ಅಂತ್ಯವಿಲ್ಲದ ರೂಪವುಳ್ಳವನೇ ! ನಿನ್ನಿಂದ ಜಗತ್ತೇ ವ್ಯಾಪಿಸಲ್ಪಟ್ಟಿದೆ.

**ನಿಧಾನಮಾಶ್ರಯಃ । ವೇತ್ತಾಽಸಿ ವೇದಿತಾಽಸಿ ಪರಿಜ್ಞಾತಾಽಸಿ । ವೇದ್ಯಂ ಚ ತ್ವಮೇವ । ಪರಂ ಧಾಮ ತೇಜೋಜಾತಂ ಚ ತ್ವಮೇವ । ಅನಂತರೂಪ । ಕಾಲತೋಽಂತಹೀನಂ ರೂಪಂ ಯಸ್ಯ ತಸ್ಯ ಸಮ್ಬುದ್ಧಿಃ । ನಚ 'ನಾಂತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ' ಇತ್ಯನೇನ 'ತ್ವಯಾ ತತಮಿ'ತ್ಯಸ್ಯ ಪೌನರುಕ್ತ್ಯಂ ಶಂಕ್ಯಮ್ । ನಾಂತಂ ಪಶ್ಯಾಮೀತ್ಯುಕ್ತೇ ವಿದ್ಯಮಾನಮಪ್ಯಂತಂ ಸ್ವಯಂ ನ ಪಶ್ಯಾಮೀತ್ಯಪಿ ಪ್ರತೀತ್ಯಾ ಪರಿಮಾಣಾನಂತ್ಯಂ ನೇಶ್ವರಸ್ಯ ಸಿಧ್ಯತೀತ್ಯತೋ ನ ಕೇವಲಮಹಂ ನ ಪಶ್ಯಾಮಿ । ತ್ವಯಾ ತತಂ ಚ ವಿಶ್ವಮಿತ್ಯುಕ್ತತ್ವೇನ ಸಪ್ರಯೋ-ಜನತ್ವಾನ್ನ ಪುನರುಕ್ತಿರಿತಿ [1]ಜ್ಞೇಯಮ್ । ದ್ಯಾವಾಪೃಥಿವ್ಯೋರಿದಮಂತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ಇತಿ 'ತ್ವಯಾ ತತಂ ವಿಶ್ವಮನಂತರೂಪ' ಇತ್ಯಾದ್ಯಭ್ಯಾಸೋ ವಿಷ್ಣೋರ್ದೇಶಕಾಲಗುಣೈಃ ಆನಂತ್ಯೇ ಸ್ವಸ್ಯ ಮಹಾತಾತ್ಪರ್ಯ-ಜ್ಞಾಪನಾರ್ಥಂ ಇತಿ ನ ಪೌನರುಕ್ತ್ಯಂ ಶಂಕ್ಯಮ್ ॥ 38 ॥**

**ಅನುವಾದ- ನಿಧಾನಂ**= ಆಶ್ರಯ, **ವೇತ್ತಾಸಿ**= ವೇದಿತನಾಗಿರುವಿ, ತಿಳಿಯುವವನಾಗಿರುವಿ. ತಿಳಿಯಲ್ಪಡುವವನೂ ನೀನೇ. **ಪರಂಧಾಮ** = ತೇಜಸ್ಸಮೂಹನೂ ನೀನೇ. **ಅನಂತರೂಪ** = ಕಾಲದಿಂದ ಕೊನೆಯಿಲ್ಲದ ರೂಪವುಳ್ಳವನು. ಈ ಶಬ್ದದ ಸಂಬೋಧನಾವಿಭಕ್ತಿಯ ರೂಪವಿದಾಗಿದೆ. **ತ್ವಯಾ ತತಂ** = ನಿನ್ನಿಂದ ಜಗತ್ತು ವ್ಯಾಪ್ತವಾಗಿದೆ ಎಂಬ ವಾಕ್ಯಕ್ಕೆ, ನಿನ್ನ ತುದಿ, ಮಧ್ಯ, ಆದಿಯನ್ನು ನಾನು ಕಾಣುವುದಿಲ್ಲ ಎಂಬ ವಾಕ್ಯದಿಂದ ಪುನರುಕ್ತಿ ದೋಷವನ್ನು ಶಂಕಿಸಬಾರದು. ನಿನ್ನ ಕೊನೆಯನ್ನು ನಾನು ನೋಡುವುದಿಲ್ಲವೆಂದಾಗ ಇರುವ ಕೊನೆಯನ್ನು ನಾನು ಸ್ವಯಂ ನೋಡುವುದಿಲ್ಲ ಎಂಬ ಅರ್ಥವು ತೋರುವುದರಿಂದ ಭಗವಂತನಿಗೆ ಪರಿಮಾಣದಿಂದ ಅಂತ್ಯವಿಲ್ಲೆಂಬರ್ಥ ಸಿದ್ಧವಾಗುವುದಿಲ್ಲ, ಆದ್ದರಿಂದ ಕೇವಲ ನಾನು ಸ್ವತಃ ನೋಡುವುದಿಲ್ಲವೆಂದಷ್ಟೇ ಅರ್ಥವಲ್ಲ, ನೀನು ಜಗತ್ತನ್ನು ವ್ಯಾಪಿಸಿರುವಿ ಎಂದು ಹೇಳಿರುವುದರಿಂದ- ಪ್ರಯೋಜನವಿರುವುದರಿಂದ ಪುನರುಕ್ತಿದೋಷವಿಲ್ಲವೆಂದು ತಿಳಿಯಬೇಕು . ದ್ಯುಲೋಕ ಪೃಥಿವೀ ಲೋಕಗಳ ಈ ಮಧ್ಯಭಾಗವು ಎಲ್ಲಾ ದಿಕ್ಕುಗಳು ನಿನ್ನೊಬ್ಬನಿಂದಲೇ ವ್ಯಾಪಿಸಲ್ಪಟ್ಟಿವೆ ಎಂದು ಮತ್ತು ಕಾಲದಿಂದ ಅಂತ್ಯವಿಲ್ಲದವನೇ ನೀನು ಜಗತ್ತನ್ನು ವ್ಯಾಪಿಸಿರುವಿ ಮುಂತಾಗಿ ಪುನಃಪುನಃ ಹೇಳಿರುವುದು

1. ಜ್ಞೇಯಮಿತಿ

ವಿಷ್ಣುವಿಗೆ ದೇಶಕಾಲ ಗುಣಗಳಿಂದ ಅಂತ್ಯವಿಲ್ಲವೆಂಬ ವಿಷಯದಲ್ಲಿ ತನ್ನ ಮಹಾತಾತ್ಪರ್ಯವಿದೆ ಎಂದು ತಿಳಿಸಲು ಇದೆ. ಆ ಕಾರಣ ಇಲ್ಲಿ ಪುನರುಕ್ತಿದೋಷವನ್ನು ಶಂಕಿಸಬಾರದು. ।। 38 ।।

## ಎಲ್ಲ ದೇವತೆಗಳಲ್ಲಿ ಹರಿಯುವ ಶಕ್ತಿ ನಿನ್ನದು

**ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ**
**ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ।**
**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ**
**ಪುನಶ್ಚ ಭೂಯೋಽಪಿ ನಮೋ ನಮಸ್ತೇ ।। 39 ।।**

**ಅರ್ಥ**– ನೀನು ಬಲಜ್ಞಾನರೂಪನಾದ್ದರಿಂದ ವಾಯು. ದೋಷದೂರನಾದ್ದರಿಂದ ಯಮನು. ಸ್ವಯಂ ಕ್ರಿಯೆಯಿಲ್ಲದಿರುವ ಜಗತ್ತನ್ನು ಪ್ರೇರಿಸುವುದರಿಂದ ಅಗ್ನಿಯು. ಭಕ್ತರನ್ನು ಸ್ವೀಕರಿಸುವುದರಿಂದ ವರುಣನು . ಬಹಳ ಸುಖದಿಂದ ಕೂಡಿದವನಾದ್ದರಿಂದ ಶಶಾಂಕನು. ಪ್ರಜಾಪಾಲನೆ ಮಾಡುವುದರಿಂದ ಪ್ರಜಾಪತಿಯು . ಪಿತಾಮಹನಾದ ಬ್ರಹ್ಮನಿಗೂ ತಂದೆಯಾಗಿ ಪ್ರಪಿತಾಮಹನೂ ನೀನೆ. ನಿನಗೆ ಸಾವಿರಬಾರಿ ಪುನಃ ಪುನಃ ನಮಸ್ಕಾರಗಳು. ಮತ್ತೆಮತ್ತೆ ಬಹಳವಾಗಿ ನಿನಗೆ ನಮಸ್ಕರಿಸುವೆನು.

**ಗುಣಾಂತರಯುಕ್ತತ್ವೇನ ಪುನಃ ಸ್ತೌತಿ- ವಾಯುರಿತಿ ।। ವಾಯುರ್ಬಲ-ಜ್ಞಾನರೂಪಃ । ಯಮಃ ದೋಷೋಪರತಿಮಾನ್ । ಅಗ್ನಿಃ ಸ್ವತೋ ಗತಿಹೀನ-ಜಗನ್ನೇತಾ । ವೃಣುತೇ ಭಕ್ತಾನಿತಿ ವರುಣಃ । [1]ಅತಿಸುಖಾಂಕಿತತ್ವಾತ್ ಶಶಾಂಕಃ । ಪ್ರಜಾಪಾಲನಾತ್ ಪ್ರಜಾಪತಿಃ ।। 39 ।।**

**ಅನುವಾದ- ವಾಯುಃ**= ಬಲ,ಜ್ಞಾನರೂಪನು. **ಯಮಃ**= ದೋಷಗಳಿಂದ ದೂರನು . **ಅಗ್ನಿಃ**= ಸ್ವಯಂ ಕ್ರಿಯೆಯಿಲ್ಲದ ಜಗತ್ತಿಗೆ ಪ್ರೇರಕನು. ಭಕ್ತರನ್ನು ಸ್ವೀಕರಿಸುವುದರಿಂದ ವರುಣನೆನಿಸುತ್ತಾನೆ. ಬಹಳ ಸುಖದಿಂದ ಚಿಹ್ನಿತನಾದ್ದರಿಂದ ಶಶಾಂಕ ಎನಿಸುತ್ತಾನೆ. ಪ್ರಜೆಗಳನ್ನು ಪಾಲಿಸುವುದರಿಂದ ಪ್ರಜಾಪತಿಯು. ।। 39 ।।

## ಅನಂತವೀರ್ಯನಿಗಿರಲಿ ಅನಂತ ನಮನ

**ನಮಃ ಪುರಸ್ತಾದಥ ಪೃಷ್ಠತಸ್ತೇ**
**ನಮೋಽಸ್ತು ತೇ ಸರ್ವತ ಏವ ಸರ್ವ ।**

---
1. ಅತಿಸುಖಾಂತಿಕತ್ವಾತ್

**ಅನಂತವೀರ್ಯಾಮಿತವಿಕ್ರಮಸ್ತ್ವಂ**
**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥ 40 ॥**

**ಅರ್ಥ–** ನಿನಗೆ ಎದುರಿನಿಂದ ನಮಸ್ಕಾರಗಳು. ಮತ್ತು ಹಿಂದಿನಿಂದಲೂ ನಮಸ್ಕಾರಗಳು. ದಕ್ಷಿಣ, ಉತ್ತರ ಮುಂತಾದ ಎಲ್ಲಾ ಕಡೆಗಳಿಂದಲೂ ನಮಸ್ಕಾರಗಳು. ಹೇ ಪೂರ್ಣನೇ ! ನೀನು ಅನಂತ ವೀರ್ಯವುಳ್ಳವನು. ಅನಂತ ಪರಾಕ್ರಮವುಳ್ಳವನು. ಎಲ್ಲಾ ವಿಶ್ವವನ್ನು ವ್ಯಾಪಿಸಿರುವುದ ರಿಂದ ಸರ್ವ ಎನಿಸುವವನು.

**ಸರ್ವತಃ ದಕ್ಷಿಣೋತ್ತರಾದಿಸರ್ವಪಾರ್ಶ್ವೇಭ್ಯಃ ನಮೋಽಸ್ತು ತೇ । ಹೇ ಸರ್ವ ಪರಿಪೂರ್ಣ ! ನನು 'ಸರ್ವಂ ಖಲ್ವಿದಂ ಬ್ರಹ್ಮ '(ಛಾಂ. 3-14-1) ಇತಿ ಶ್ರುತೌ ಇದಂ ಸರ್ವಂ ಚ ಜಗದ್ ಬ್ರಹ್ಮೇತಿ ಸರ್ವಸ್ಯ ಜಗತೋ ಬ್ರಹ್ಮಾತ್ಮಕತ್ವೋಕ್ತೇಃ 'ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ । ತ್ವಯಾ ತತಮಿದಂ ವಿಶ್ವಮ್' ಇತ್ಯಾದ್ಯ-ಯುಕ್ತಮಿತ್ಯತಃ ಶ್ರುತಿಗತಸರ್ವಶಬ್ದಾರ್ಥಮಾಹ- ಸರ್ವಮಿತಿ ॥ ಸರ್ವಂ ವಿಶ್ವಂ ಸಮಾಪ್ನೋಷಿ ವ್ಯಾಪ್ನೋಷಿ ಯತಃ ತತಃ ಸರ್ವೋಽಸಿ । 'ಸರ್ವಂ ಖಲ್ವಿದಂ ಬ್ರಹ್ಮ' 'ಪುರುಷ ಏವೇದಂ ಸರ್ವಂ' (ತೈ. ಆ. 3-12) ಇತ್ಯಾದಿಶ್ರುತಿಸ್ಥಸರ್ವಶಬ್ದ-ವಾಚ್ಯೋಽಸಿ । ಇದಂ ಬ್ರಹ್ಮ ಸರ್ವಂ ಖಲು ಸರ್ವಜಗದ್ವ್ಯಾಪಿ ಖಲ್ವಿತ್ಯಾದಿ-ರೂಪೇಣ ಶ್ರುತ್ಯರ್ಥೋ ಜ್ಞೇಯಃ । ನತು ಜಗದಾತ್ಮಕತ್ವೇನ ಇತ್ಯಭಿಪ್ರಾಯಃ ॥40॥**

**ಅನುವಾದ- ಸರ್ವತಃ**= ದಕ್ಷಿಣ, ಉತ್ತರ ಮುಂತಾದ ಎಲ್ಲಾ ಕಡೆಗಳಿಂದಲೂ ನಿನಗೆ ನಮಸ್ಕಾರಗಳು. **ಹೇ ಸರ್ವ!**= ಪರಿಪೂರ್ಣನೇ ! **'ಸರ್ವಂ ಖಲ್ವಿದಂ ಬ್ರಹ್ಮ'** (ಛಾ.3-14-1) ಎಂಬ ಶ್ರುತಿಯಲ್ಲಿ ಈ ಜಗತ್ತೆಲ್ಲಾ ಬ್ರಹ್ಮಸ್ವರೂಪ ಎಂದಿದೆ. ಎಲ್ಲ ಜಗತ್ತಿಗೂ ಬ್ರಹ್ಮ ಸ್ವರೂಪತ್ವವನ್ನು ಹೇಳಿರುವುದರಿಂದ ನೀನು ಈ ಜಗತ್ತಿಗೆ ಮುಖ್ಯಾಶ್ರಯನು. ನಿನ್ನಿಂದ ಈ ಜಗತ್ತು ವ್ಯಾಪ್ತವಾಗಿದೆ. ಮುಂತಾದ್ದು ಸರಿಯಲ್ಲ ಎಂಬ ಶಂಕೆಯನ್ನು ಪರಿಹರಿಸಲು ಶ್ರುತಿಯಲ್ಲಿರುವ ಸರ್ವಶಬ್ದದ ಅರ್ಥವನ್ನು **'ಸರ್ವಂ'** ಮುಂತಾಗಿ ಹೇಳುತ್ತಾನೆ. **ಸರ್ವಂ**= ವಿಶ್ವವನ್ನು, **ಸಮಾಪ್ನೋಷಿ**= ವ್ಯಾಪಿಸಿರುವುದರಿಂದ ನೀನು ಸರ್ವ ಎನಿಸಿರುವಿ. **'ಸರ್ವಂ ಖಲ್ವಿದಂ ಬ್ರಹ್ಮ'** (ಛಾ.1-14-1) **'ಪುರುಷ ಏವೇದಂ ಸರ್ವಂ'** ( ತೈ.ಅ.3-12) ಮುಂತಾದ ಶ್ರುತಿಗಳಲ್ಲಿರುವ ಸರ್ವಶಬ್ದಗಳಿಂದ ಹೇಳಲ್ಪಟ್ಟಿರುವಿ. ಇದಂ ಬ್ರಹ್ಮ ಈ ಪರಮಾತ್ಮನು **'ಸರ್ವಂ ಖಲು'** ಎಲ್ಲಾ ಜಗತ್ತನ್ನು ವ್ಯಾಪಿಸಿರುವನಷ್ಟೆ, ಮುಂತಾಗಿ ಶ್ರುತಿಯ ಅರ್ಥವನ್ನು ತಿಳಿಯಬೇಕು . ಬ್ರಹ್ಮ ಜಗತ್ಸ್ವರೂಪನೆಂದು ತಿಳಿಯಬಾರದು ಎಂದು ಆಶಯ. ॥ 40 ॥

## ಅಜ್ಞಾನದಿಂದಾದ ಅಪಚಾರದ ಬಗ್ಗೆ ಕ್ಷಮೆ ಇರಲಿ

**ಸಖೇತಿ ಮತ್ವಾ ಪ್ರಸಭಂ ಯದುಕ್ತಂ**
**ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।**
**ಅಜಾನತಾ ಮಹಿಮಾನಂ ತವೇದಂ**
**ಮಯಾ ಪ್ರಮಾದಾತ್ ಪ್ರಣಯೇನ ವಾಽಪಿ ॥ 41 ॥**

**ಅರ್ಥ**– ನಿನ್ನ , ಜಗತ್ತನ್ನು ಸೃಷ್ಟಿಮಾಡುವಿಕೆ ಮುಂತಾದ ಮಹಿಮೆಯನ್ನು ತಿಳಿಯದ ನನ್ನಿಂದ ಪರವಶತೆಯಿಂದ, ಸ್ನೇಹದಿಂದಾಗಲೀ , ಮಿತ್ರನೆಂಬ ಭಾವನೆಯಿಂದಾಗಲೀ ಹೇ ಕೃಷ್ಣ ! ಹೇ ಯಾದವ ! ಹೇ ಸಖನೇ ! ಎಂಬುದಾಗಿ ಗೌರವವಿಲ್ಲದೇ ನಾನು ಹೇಳಿರುವುದನ್ನು ಕ್ಷಮಿಸು.

**ಏತಾದೃಶಮಾಹಾತ್ಮ್ಯಂ ಭಗವಂತಂ ಪ್ರತಿ ಯದಪರಾದ್ಧಂ ತತ್‌ಕ್ಷಂತವ್ಯ-ಮಿತ್ಯಾಹ- ಸಖೇತ್ಯಾದಿನಾ ॥ ಇದಂ ಪ್ರಾಗುಕ್ತಂ ಜಗತ್‌ಸ್ರಷ್ಟೃತ್ವಾದಿಕಂ ಮಹಿ-ಮಾನಂ ಅಜಾನತಾ ಮಯಾ ಪ್ರಮಾದಾತ್‌ಪಾರವಶ್ಯಾತ್‌ಪ್ರಣಯೇನ ವಾ ಸ್ನೇಹೇನ ವಾ ಸಖೇತಿ ಮತ್ವಾ ಹೇ ಕೃಷ್ಣ ಹೇ ಯಾದವ ಹೇ ಸಖೇತಿ ಪ್ರಸಭಂ ಅಬಹುಮಾನಂ ಯಥಾ ತಥಾ ಯದುಕ್ತಂ ತತ್ ಕ್ಷಾಮಯೇ ಕ್ಷಮಾಪಯೇ ಇತ್ಯಗ್ರೇತನೇನಾನ್ವಯಃ । ಹೇ ಸಖ ಇತಿ ವಿಚ್ಛಿದ್ಯ ವಕ್ತವ್ಯೇ ಸಂಧಿಶ್ಛಾಂಧಸಃ ॥ 41॥**

**ಅನುವಾದ**- ಇಂತಹ ಮಾಹಾತ್ಮ್ಯವುಳ್ಳ ಭಗವಂತನ ಬಗ್ಗೆ ತಾನು ಮಾಡಿರುವ ಅಪರಾಧವನ್ನು ಕ್ಷಮಿಸಬೇಕೆಂದು '**ಸಖೇತಿ**' ಮುಂತಾಗಿ ಹೇಳುತ್ತಾನೆ. **ಇದಂ**= ಹಿಂದೆ ಜಗತ್ಸೃಷ್ಟಿ ಮಾಡುವಿಕೆ ಮುಂತಾದ ಮಹಿಮೆಯನ್ನು ತಿಳಿಯದ ನನ್ನಿಂದ. **ಪ್ರಮಾದಾತ್**= ಪರವಶತೆಯಿಂದ, **ಪ್ರಣಯೇನ ವಾ** = ಸ್ನೇಹದಿಂದಾಗಲೀ **ಸಖೇತಿ**= ಮಿತ್ರನೆಂದು ತಿಳಿದು. **ಹೇ ಕೃಷ್ಣ ! ಹೇ ಯಾದವ ! ಹೇ ಸಖೇ !** ಎಂದು **ಪ್ರಸಭಂ**= ಗೌರವವಿಲ್ಲದಂತೆ ಏನನ್ನು ಹೇಳಿರುವೆನೋ ಅದನ್ನು **ಕ್ಷಾಮಯೇ**= ಕ್ಷಮಿಸು ಎಂದು ಪ್ರಾರ್ಥಿಸುತ್ತೇನೆ ಎಂದು ಮುಂದಿನ ಶ್ಲೋಕದಲ್ಲಿರುವ ಪದದಿಂದ ಅನ್ವಯವನ್ನು ಮಾಡಬೇಕು. **ಹೇ ಸಖ ಇತಿ** ಎಂಬಲ್ಲಿ ವ್ಯಾಕರಣನಿಯಮದಂತೆ ಸಂಧಿಮಾಡದೆ ಬೇರೆಯಾಗಿಯೇ ಹೇಳಬೇಕು. ಆದರೂ ವೇದತುಲ್ಯ ಗ್ರಂಥವಾದ್ದರಿಂದ ಸಂಧಿ ಮಾಡಿ '**ಸಖೇತಿ**' ಎಂದಿದೆ ॥ 41 ॥

**ಯಚ್ಚಾಪಹಾಸಾರ್ಥಮಸತ್ಕೃತೋಽಸಿ**
**ವಿಹಾರಶಯ್ಯಾಸನಭೋಜನೇಷು ।**

**ಏಕೋಽಥವಾಪ್ಯಚ್ಯುತ ತತ್ಸಮಕ್ಷಂ**
**ತತ್ಕ್ಷಾಮಯೇ ತ್ವಾಮಹಮಪ್ರಮೇಯಮ್ ॥ 42 ॥**

**ಅರ್ಥ**– ಎಲ್ಲಾ ಗುಣಗಳಿಂದ ಚ್ಯುತಿ ಇಲ್ಲದವನೇ ! ಕ್ರೀಡೆ, ಮಲಗುವಿಕೆ, ಆಸನ, ಭೋಜನಾದಿಗಳ ಪ್ರಸಂಗಗಳಲ್ಲಿ ಸರ್ವೋತ್ತಮನಾಗಿ ಅಸತ್ಕಾರಕ್ಕೆ ಅನರ್ಹನಾದರೂ ಯಾವ ಅಪಹಾಸಕ್ಕಾಗಿ ಅಪಮಾನಿತನಾಗಿರುವೆಯೋ ಅದನ್ನು ಪೂರ್ಣವಾಗಿ ತಿಳಿಯಲಾರದ ನಿನ್ನ ಎದುರಿನಲ್ಲೇ ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ.

**ಕಿಂಚ ಅಥವೇತಿ ಪಕ್ಷಾಂತರೇ । ಹೇ ಅಚ್ಯುತ ಸರ್ವಗುಣೈಶ್ಚ್ಯುತಿಹೀನ । ವಿಹಾರಃ ಕ್ರೀಡಾ ತದಾದಿಷು ಏಕೋಽಪಿ ತ್ವಂ ಸರ್ವೋತ್ತಮೋಽಪಿ ಅಸತ್ಕಾರಾನರ್ಹೋಽಪಿ ಇತಿ ಯಾವತ್ । ಯದಪಹಾಸಾರ್ಥಮಸತ್ಕೃತೋಽಸಿ ಅವಮತೋಽಸಿ ತದಪ್ರಮೇಯಂ ತ್ವಾಂ ಸಮಕ್ಷಂ ತ್ವತ್ಪುರತೋಽಹಂ ಕ್ಷಮಾಪಯೇ ಕ್ಷಮಸ್ವೇತಿ ಪ್ರಾರ್ಥಯೇ । ಏಕಶಬ್ದೇ ಏ ಶಬ್ದ ಏಕವಾಚೀ । ಕಶಬ್ದಸ್ತು ಕರೋತೇರಂತರ್ಣೀತಣ್ಯರ್ಥಾತ್ ಕೇವಲಾದ್ವಾ ಡ ಪ್ರತ್ಯಯೇ ಕ ಇತಿ ಕರ್ತೃವಾಚೀ ಕಾರಯಿತೃವಾಚೀ ಚ । ಏ ಏಕೋಽಸಹಾಯ ಏವ ಕಃ ಕರ್ತಾ ಕಾರಯಿತಾ ಚೇತ್ಯೇಕಃ ಸರ್ವೋತ್ತಮಃ ಅನ್ಯನಿರಪೇಕ್ಷ ಕರ್ತೃತ್ವಾದಿಮತ ಏವ ಸರ್ವೋತ್ತಮತ್ವಾದಿತಿ ಅತ್ರ ಏಕಶಬ್ದಃ ಸರ್ವೋತ್ತಮಪರೋ ಧ್ಯೇಯಃ ॥ 42॥**

**ಅನುವಾದ**– **ಕಿಂಚ, ಅಥವಾ** ಎಂಬ ಶಬ್ದಗಳು ಮತ್ತೊಂದು ಪಕ್ಷದಲ್ಲಿ ಎಂಬರ್ಥದಲ್ಲಿವೆ. **ಹೇ ಅಚ್ಯುತ**= ಎಲ್ಲಾ ಗುಣಗಳಿಂದ ಚ್ಯುತಿರಹಿತನೇ ! **ವಿಹಾರ** = ಕ್ರೀಡೆಯು ಆದೇ ಮೊದಲಾದ ಪ್ರಸಂಗಗಳಲ್ಲಿ, **ಏಕೋಽಪಿ**= ನೀನು ಸರ್ವೋತ್ತಮನಾಗಿದ್ದರೂ , ಅಸತ್ಕಾರಕ್ಕೆ ಅನರ್ಹನಾದರೂ ಎಂದು ಆಶಯ. ಅಪಹಾಸಕ್ಕಾಗಿ **ಅಸತ್ಕೃತೋಽಸಿ**= ಏನು ಅಪಮಾನಿತನಾಗಿರುವೆಯೋ ಅದನ್ನು ಯಾರಿಂದಲೂ ಪೂರ್ಣವಾಗಿ ತಿಳಿಯಲಾಗದ ನಿನ್ನನ್ನು . **ಸಮಕ್ಷಂ**= ನಿನ್ನ ಎದುರೇ ನಾನು , **ಕ್ಷಮಾಪಯೇ** = ಕ್ಷಮಿಸು ಎಂದು ಪ್ರಾರ್ಥಿಸುತ್ತೇನೆ. 'ಏಕ ' ಎಂಬ ಶಬ್ದದಲ್ಲಿ 'ಏ' ಎಂಬ ಶಬ್ದವು ಒಬ್ಬನು ಎಂದು ಹೇಳುತ್ತದೆ. ಕ ಶಬ್ದವು ಣಿಜಂತ ಅರ್ಥವುಳ್ಳ ಕೃಧಾತುವಿನಿಂದ ಅಥವಾ ಕೇವಲ ಕೃಧಾತುವಿನಿಂದ ಡಪ್ರತ್ಯಯ ಬಂದಾಗ 'ಕ' ಎಂಬುದಾಗಿ ಕರ್ತೃವನ್ನು, ಮಾಡಿಸುವವನನ್ನು ಹೇಳುತ್ತದೆ. ಏ= ಏಕಃ– ಬೇರೆಯವರ ಸಹಾಯವಿಲ್ಲದೆಯೇ ಮಾಡುವವನೂ, ಮಾಡಿಸುವವನೂ ಎಂಬರ್ಥದಲ್ಲಿ ಇದೆ. **ಏಕಃ**= ಸರ್ವೋತ್ತಮನು– ಇನ್ನೊಬ್ಬರ ಅಪೇಕ್ಷೆ ಇಲ್ಲದೇ ಕರ್ತೃತ್ವ ಮುಂತಾದ್ದು ಇರುವವನು ಸರ್ವೋತ್ತಮನಾಗಿದ್ದಾನೆ. ಹೀಗೆ ಏಕ ಶಬ್ದವು ಸರ್ವೋತ್ತಮನನ್ನು ಹೇಳುತ್ತಿದೆ ಎಂದು ತಿಳಿಯಬೇಕು. ॥ 42 ॥

**ನಿನಗಿಂತ ಹಿತರಾರು ?**

**ಪಿತಾऽಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋऽಸ್ತ್ಯಭ್ಯಧಿಕಃ ಕುತೋऽನ್ಯೋ**
**ಲೋಕತ್ರಯೇऽಪ್ಯಪ್ರತಿಮಪ್ರಭಾವ ॥ 43 ॥**

**ಅರ್ಥ–** ನೀನು ಸ್ಥಾವರ ಜಂಗಮಾತ್ಮಕವಾದ ಈ ಲೋಕಕ್ಕೆ ತಂದೆಯಾಗಿರುವಿ. ಪೂಜ್ಯನೂ, ಶ್ರೇಷ್ಠಗುರುವೂ ಆಗಿರುವಿ. ಮೂರು ಲೋಕದಲ್ಲೂ ಅಸದೃಶ ಐಶ್ವರ್ಯ ಉಳ್ಳವನೇ ! ನಿನಗೆ ಸಮಾನನಾದವನು ಇನ್ನೊಬ್ಬನು ಇರುವುದಿಲ್ಲ. ಅಧಿಕನು ಹೇಗಿದ್ದಾನು ?

**ಅಸತ್ಕಾರಾನರ್ಹತಾಮೇವ ಗುಣಾಂತರೋಕ್ತ್ಯಾ ವ್ಯನಕ್ತಿ- ಪಿತಾಸೀತ್ಯಾದಿನಾ ॥ ತ್ವಮಸ್ಯ ಚರಾಚರಸ್ಯ ಲೋಕಸ್ಯ ಪಿತಾऽಸಿ ಜನಕೋऽಸಿ । ಅತ ಏವ ಪೂಜ್ಯೋ ಗರೀಯಾನ್ ಗುರುರತ್ಯಂತಂ ಗುರುಶ್ಚ । ಅಪ್ರತಿಮಪ್ರಭಾವ ಅನುಪಮೈಶ್ವರ್ಯ । ॥ 43 ॥**

**ಅನುವಾದ-** ನೀನು ಚರಾಚರಾತ್ಮಕವಾದ ಲೋಕಕ್ಕೆ **ಪಿತಾಸಿ=** ತಂದೆಯಾಗಿರುವಿ. ಆದ್ದರಿಂದಲೇ ಪೂಜ್ಯನು. **ಗರೀಯಾನ್ ಗುರುಃ** = ಅತ್ಯಂತವಾಗಿ ಗುರುವಾಗಿರುವಿ. **ಅಪ್ರತಿಮ ಪ್ರಭಾವ=** ಅಸದೃಶ ಐಶ್ವರ್ಯವುಳ್ಳವನೇ ! ॥ 43 ॥

**ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ॥ 44 ॥**

**ಅರ್ಥ–** ಯಾವ ಕಾರಣದಿಂದ ಹಿಂದೆ ಹೇಳಿದ ಮಹಿಮೆ ಉಳ್ಳವನೋ ಆದ್ದರಿಂದ ನನ್ನೀ ಶರೀರವನ್ನು ಭೂಮಿಯಲ್ಲಿಟ್ಟು ನಿಯಾಮಕನಾದ ಸ್ತೋತ್ರಾರ್ಹನಾದ ನಿನ್ನನ್ನು ನಾನು ನಮಸ್ಕರಿಸಿ ಪ್ರಸನ್ನಗೊಳಿಸುವೆನು. ದೇವನೇ ! ತಂದೆಯು ಮಗನ, ಮಿತ್ರನು ಮಿತ್ರನ, ಪ್ರಿಯನು ಪ್ರಿಯನ ಅಪರಾಧವನ್ನು ಸಹಿಸುವಂತೆ ನನ್ನ ಅಪರಾಧವನ್ನು ಸಹಿಸು.

**ಯಸ್ಮಾದುಕ್ತಮಹಾಮಹಿಮಾ ತಸ್ಮಾತ್ಕಾಯಂ ಭೂಮೌ ಪ್ರಣಿಧಾಯ**

**ಈಶಮೀಡ್ಯಂ ಸ್ತುತ್ಯಂ ತ್ವಾಂ ಪ್ರಣಮ್ಯ ಪ್ರಸಾದಯೇ । ಹೇ ದೇವ ಪಿತ್ರಾದಿಃ ಪುತ್ರಾದೇರಿವಾಪರಾಧಂ ಸೋಢುಮರ್ಹಸಿ ॥ 44 ॥**

**ಅನುವಾದ** - ಯಾವ ಕಾರಣದಿಂದ ಹಿಂದೆ ಹೇಳಿದ ಮಹಿಮೆ ಉಳ್ಳವನೋ ಆದ್ದರಿಂದ ಭೂಮಿಯಲ್ಲಿ ಶರೀರವನ್ನಿಟ್ಟು , **ಈಶಂ**= ನಿಯಾಮಕನೂ , **ಈಡ್ಯಂ**= ಸ್ತೋತ್ರಾರ್ಹನೂ ಆದ, **ತ್ವಾಂ**= ನಿನ್ನನ್ನು ನಮಸ್ಕರಿಸಿ ಸಂತೋಷಗೊಳಿಸುವೆನು. ಹೇ ದೇವನೇ ! ತಂದೆ ಮುಂತಾದವರು ಮಗ ಮುಂತಾದವರ ಅಪರಾಧವನ್ನೆಂಬಂತೆ ನನ್ನ ಅಪರಾಧವನ್ನು ಸಹಿಸು. ॥ 44 ॥

**ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ**
**ಭಯೇನ ಚ ಪ್ರವ್ಯಥಿತಂ ಮನೋ ಮೇ ।**
**ತದೇವ ಮೇ ದರ್ಶಯ ದೇವ ರೂಪಂ**
**ಪ್ರಸೀದ ದೇವೇಶ ಜಗನ್ನಿವಾಸ ॥ 45 ॥**

**ಅರ್ಥ**- ಹೇ ದೇವನೇ ! ಈವರೆಗೆ ನೋಡದ ನಿನ್ನ ರೂಪವನ್ನು ನೋಡಿ ಸಂತುಷ್ಟನಾಗಿರುವೆನು. ಹಾಗೆಯೇ ಭಯದಿಂದ ನನ್ನ ಮನಸ್ಸು ನಡುಗಿದೆ. ಆದ್ದರಿಂದ ದೇವತೆಗಳಿಗೆ ನಿಯಾಮಕನೇ ! ಜಗದಾಧಾರನೇ ನಿನ್ನ ಮೊದಲಿನ ರೂಪವನ್ನು ತೋರಿಸು. ಪ್ರಸನ್ನನಾಗು.

**ಏವಂ ಕ್ಷಮಾಪ್ಯ ಪ್ರಾರ್ಥಯತೇ- ಅದೃಷ್ಟೇತಿ ॥ ಹೇ ದೇವ ! ಪೂರ್ವ-ಮದೃಷ್ಟಮದೃಷ್ಟಪೂರ್ವಂ ತವ ರೂಪಂ ದೃಷ್ಟ್ವಾ ಹೃಷಿತೋಽಸ್ಮಿ । ತಥಾ ಭಯೇನ ಚ ಮೇ ಮನಃ ಪ್ರವ್ಯಥಿತಂ ಪ್ರಚಲಿತಮ್ । ಅತೋ ಹೇ ದೇವೇಶ! ಜಗನ್ನಿವಾಸ ತದೇವ ರೂಪಂ ಮೇ ದರ್ಶಯ ಪ್ರಸೀದ ॥ 45 ॥**

**ಅನುವಾದ**- ಹೀಗೆ ಕ್ಷಮೆಬೇಡಿ ಪ್ರಾರ್ಥಿಸುತ್ತಾನೆ- '**ಅದೃಷ್ಟ**' ಮುಂತಾಗಿ- ಹೇ ದೇವನೇ ! ಹಿಂದೆ ನೋಡದ್ದು ಅದೃಷ್ಟಪೂರ್ವವೆನಿಸುತ್ತದೆ. ಆ ನಿನ್ನ ರೂಪವನ್ನು ನೋಡಿ ಸಂತುಷ್ಟನಾಗಿರುವೆನು. ಹಾಗೇ ಭಯದಿಂದ ನನ್ನ ಮನಸ್ಸು , **ಪ್ರವ್ಯಥಿತಂ**= ನಡುಗಿದೆ. ಆದ್ದರಿಂದ ಹೇ ದೇವ ಶ್ರೇಷ್ಠನೇ ! ಜಗದಾಧಾರನೇ ! ನಿನ್ನ ಆ ರೂಪವನ್ನು ತೋರಿಸು ಪ್ರಸನ್ನನಾಗು. ॥ 45 ॥

**ಕಿರೀಟಿನಂ ಗದಿನಂ ಚಕ್ರಹಸ್ತಮ್**
**ಇಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ**
**ಸಹಸ್ರಬಾಹೋ ಭವ ವಿಶ್ವಮೂರ್ತೇ ॥ 46 ॥**

**ಅರ್ಥ** – ಹೇಗೆ ವಿಶ್ವರೂಪವನ್ನು ನೋಡಿರುವೆನೋ ಹಾಗೆಯೇ ಹಿಂದೆ ನೋಡಿರುವ ನಾಲ್ಕು ಭುಜಗಳುಳ್ಳ ರೂಪದಿಂದ ಕಿರೀಟ ಧರಿಸಿದ ಗದೆಯುಳ್ಳ ಕೈಯಲ್ಲಿ ಚಕ್ರವನ್ನು ಹಿಡಿದಿರುವ ನಿನ್ನನ್ನು ನಾನು ನೋಡಲು ಇಚ್ಛಿಸುತ್ತೇನೆ . ಹೇ ಅನಂತ ಬಾಹು ಉಳ್ಳವನೇ ! ಗುಣಪೂರ್ಣವಾದ ಶರೀರ ಉಳ್ಳವನೇ ! ಎಲ್ಲೆಡೆ ರೂಪ ಉಳ್ಳವನೇ ! ಮೊದಲಿನಂತೆಯೇ ಆಗಿರು.

**ತದೇವೇತ್ಯುಕ್ತಂ ರೂಪಮಾಹ- ಕಿರೀಟಿನಮಿತಿ ॥ ಯಥಾ ವಿಶ್ವರೂಪಂ ದೃಷ್ಟವಾನ್ ಅಸ್ಮಿ ತಥೈವ ತೇನೈವ ಪೂರ್ವದೃಷ್ಟೇನ ಚತುರ್ಭುಜೇನ ರೂಪೇಣ ತ್ವಾಂ ದ್ರಷ್ಟುಮಿಚ್ಛಾಮಿ । ಹೇ ಸಹಸ್ರಬಾಹೋ ಅನಂತಬಾಹೋ ವಿಶ್ವಮೂರ್ತೇ ಗುಣಪೂರ್ಣವಿಗ್ರಹ ಇತಿ ವಾ ವಿಶ್ವಸ್ಮಿನ್‌ಮೂರ್ತಿರ್ಯಸ್ಯೇತಿ ವಾಽರ್ಥಃ ॥ 46॥**

**ಅನುವಾದ**- ಅದೇ ಎಂದು ಹೇಳಿದ ರೂಪವನ್ನು 'ಕಿರೀಟಿನಂ' ಮುಂತಾಗಿ ವಿವರಿಸಿ ಹೇಳುತ್ತಿದ್ದಾನೆ. ಹೇಗೆ ವಿಶ್ವರೂಪವನ್ನು ನೋಡಿರುವೆನೋ ಹಾಗೆ ಹಿಂದೆ ನೋಡಿರುವ ನಾಲ್ಕು ಭುಜಗಳುಳ್ಳ ರೂಪದಿಂದ ನಿನ್ನನ್ನು ನೋಡಲು ಇಚ್ಛಿಸುವೆನು. **ಹೇ ಸಹಸ್ರಬಾಹೋ** != ಅನಂತ ಬಾಹು ಉಳ್ಳವನೇ ! **ವಿಶ್ವಮೂರ್ತೇ**!= ಗುಣಗಳಿಂದ ತುಂಬಿದ ಶರೀರವುಳ್ಳವನೇ ! ಅಥವಾ ಎಲ್ಲೆಡೆ ರೂಪ ಉಳ್ಳವನೇ ! ಎಂದರ್ಥ. ॥ 46 ॥

## ಕರುಣೆಯಿಂದ ತೋರಿರುವೆ ವಿಶ್ವರೂಪ

**ಶ್ರೀ ಭಗವಾನುವಾಚ –**

**ಮಯಾ ಪ್ರಸನ್ನೇನ ತವಾರ್ಜುನೇದಂ**
**ರೂಪಂ ಪರಂ ದರ್ಶಿತಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವಮನಂತಮಾದ್ಯಂ**
**ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥ 47 ॥**

**ಅರ್ಥ**– ಶ್ರೀಭಗವಂತನು ಹೇಳಿದನು– ಹೇ ಅರ್ಜುನ ! ಸಂತುಷ್ಟನಾದ ನನ್ನಿಂದ, ನಿನಗೆ ಈ ಶ್ರೇಷ್ಠವಾದ ರೂಪವು ತೋರಿಸಲ್ಪಟ್ಟಿದೆ. ಅದು ತೇಜೋರೂಪವಾಗಿದೆ. ದೇಶಕಾಲಗಳಲ್ಲಿ ವ್ಯಾಪಿಸಿದೆ. ಸನಾತನವಾಗಿದೆ. ನಿನಗಿಂತ ಯೋಗ್ಯತೆಯಲ್ಲಿ ಕಡಿಮೆಯಾದವರಿಂದ ನೋಡಲ್ಪಟ್ಟಿಲ್ಲ. ಅವರಿಂದಲೂ ಅರ್ಜುನನಂತೆ ನೋಡಲ್ಪಟ್ಟಿಲ್ಲ.

**ಭಕ್ತ್ಯತಿಶಯೋತ್ಪಾದನಾಯ ವಿಶ್ವರೂಪಪ್ರದರ್ಶನಸ್ಯ ದೌರ್ಲಭ್ಯಮಾಹ- ಮಯೇತಿ ॥ ಹೇ ಅರ್ಜುನ ! ಪ್ರಸನ್ನೇನ ಮಯಾ ಆತ್ಮಯೋಗಾತ್ ಸ್ವರೂಪ- ಸಾಮರ್ಥ್ಯಾತ್ ಪರಮುತ್ತಮಮ್ ಇದಂ ರೂಪಂ ತವ ದರ್ಶಿತಮ್ । ತದ್**

**ವಿಶಿನಷ್ಟಿ । ತೇಜೋಮಯಂ ಪ್ರಚುರತೇಜಸ್ಸ್ವರೂಪಮ್ । ವಿಶ್ವಂ ಪೂರ್ಣಮ್ ಅನಂತಂ ದೇಶಕಾಲಾಪರಿಚ್ಛಿನ್ನಮ್, ಆದ್ಯಂ ತ್ವದನ್ಯೇನ ನ ದೃಷ್ಟಪೂರ್ವಮಿತ್ಯಸ್ಯ ತ್ವತ್ತೋಽಧಮ್ಮೈರದೃಷ್ಟಪೂರ್ವಮಿತ್ಯರ್ಥಃ । ತೈರಪಿ ಸ್ವಯೋಗ್ಯತಾನುರೋಧೇನ ದೃಷ್ಟತ್ವೇಽಪಿ ಅರ್ಜುನವನ್ನ ದೃಷ್ಟಮಿತ್ಯದೃಷ್ಟತ್ವೋಕ್ತಿಃ । ತಥಾ ತ್ವಯಾ ತ್ವಿಂದ್ರ-ಶರೀರೇಣ ದೃಷ್ಟಪೂರ್ವಮಿತ್ಯಪಿ ತ್ವದನ್ಯೇನೇತಿ ವಿಶೇಷಣಾಲ್ಲಭ್ಯತೇ । ಯನ್ಮೇ ರೂಪಂ ದರ್ಶಿತಮಿತ್ಯನ್ವಯಃ । ಅತ್ರ ವಿಶ್ವರೂಪಸ್ಯ ಪರಮಿತ್ಯುತ್ತಮತ್ವೋಕ್ತಿಃ ಅಜ್ಞ-ಜನಾಪೇಕ್ಷಯೈವ । ಬ್ರಹ್ಮಾದೀನಾಂ ಕೃಷ್ಣಾದ್ಯವತಾರೇಷ್ವಪಿ ಪರತ್ವಧೀಸತ್ತ್ವಾದಿತಿ । ॥ 47 ॥**

**ಅನುವಾದ** – ಹೆಚ್ಚಿನ ಭಕ್ತಿಯನ್ನು ಹುಟ್ಟಿಸಲು ವಿಶಿಷ್ಟರೂಪ ಪ್ರದರ್ಶನ ಬಹಳ ದುರ್ಲಭ ಎಂದು ಶ್ರೀಕೃಷ್ಣ 'ಮಯಾ' ಮುಂತಾಗಿ ಹೇಳುತ್ತಿದ್ದಾನೆ. ಹೇ ಅರ್ಜುನ ! ಪ್ರಸನ್ನನಾದ ನಾನು, **ಆತ್ಮಯೋಗಾತ್**= ಸ್ವರೂಪಸಾಮರ್ಥ್ಯದಿಂದ, **ಪರಂ**= ಉತ್ತಮವಾದ ರೂಪವನ್ನು ನಿನಗೆ ತೋರಿಸಿರುವೆನು. ಅದರ ವಿಶೇಷವನ್ನು ಹೇಳುತ್ತಾನೆ. **ತೇಜೋ ಮಯಂ**= ಬಹಳವಾದ ತೇಜಸ್ಸ್ವರೂಪವಾದದ್ದು. **ವಿಶ್ವಂ** ಪೂರ್ಣವಾದದ್ದು. **ಅನಂತಂ**= ದೇಶಕಾಲಗಳಿಂದ ಪರಿಮಿತಿ ಇಲ್ಲದ್ದು. ಅನಾದಿ ಕಾಲದ್ದು, ನಿನ್ನನ್ನು ಬಿಟ್ಟು ಬೇರೆಯವರಿಂದ ನೋಡಲ್ಪಟ್ಟಿಲ್ಲ ಎಂದರೆ ನಿನಗಿಂತ ಅಧಮರಿಂದ ನೋಡಲ್ಪಟ್ಟದ್ದಲ್ಲ ಎಂದರ್ಥ. ಅವರು ತಮ್ಮ ಯೋಗ್ಯತೆಗನುಗುಣವಾಗಿ ನೋಡಿದರೂ ಅರ್ಜುನನಂತೆ ನೋಡಿಲ್ಲ ಎಂದಿರುವುದು. ಹಾಗೆಯೇ ನಿನಗಿಂತ ಬೇರೆ ಯವರಿಂದ ನೋಡಲ್ಪಟ್ಟಿಲ್ಲವೆಂಬಲ್ಲಿ ನೀನು ಇಂದ್ರಶರೀರದಿಂದ ನೋಡಿರುವೆ ಎಂದು ಸಿದ್ಧ ವಾಗುತ್ತದೆ. ಯಾವ ರೂಪವನ್ನು ನಾನು ತೋರಿಸಿರುವೆನೋ ಅದನ್ನು ಎಂದು ಶಬ್ದ ಅನ್ವಯವನ್ನು ಹೇಳಬೇಕು. ಇಲ್ಲಿ ಅಜ್ಞಜನರ ಅಪೇಕ್ಷೆಯಿಂದ ವಿಶ್ವರೂಪವನ್ನು, **ಪರಂ**= ಉತ್ತಮ ಎಂದಿದ್ದಾರೆ. ಬ್ರಹ್ಮಾದಿಗಳಿಗೆ ಕೃಷ್ಣ ಮುಂತಾದ ಅವತಾರಗಳಲ್ಲೂ ಉತ್ತಮತ್ವ ಬುದ್ಧಿ ಇರುತ್ತದೆ. ॥ 47 ॥

**ನ ವೇದಯಜ್ಞಾಧ್ಯಯನೈರ್ನ ದಾನೈಃ**
**ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।**
**ಏವಂರೂಪಃ ಶಕ್ಯ ಅಹಂ ನೃಲೋಕೇ**
**ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥ 48 ॥**

**ಅರ್ಥ** – ಹೇ ಕುರು ಶ್ರೇಷ್ಠನೇ ! ವೇದಗಳ, ಯಜ್ಞಗಳ ಅಧ್ಯಯನಗಳಿಂದ, ಅಗ್ನಿಹೋತ್ರ ಮುಂತಾದ ಕ್ರಿಯೆಗಳಿಂದ ಕಠೋರವಾದ ಕೃಚ್ಛ್ರ, ಚಾಂದ್ರಾಯಣ ಮುಂತಾದ ತಪಸ್ಸುಗಳಿಂದ ಹಿಂದೆ ಹೇಳಿದ ರೂಪವುಳ್ಳ ನಾನು ಈ ಮನುಷ್ಯ ಲೋಕದಲ್ಲಿ ನಿನಗಿಂತ ಬೇರೆಯಾದ ತಾರತಮ್ಯ ದಲ್ಲಿ ಕೆಳಗಿನವರಿಂದ ನಿನ್ನಂತೆ ನೋಡಲು ಶಕ್ಯನಾಗದವನು.

**ನನು ಅರ್ಜುನಾದವರ್ಯೈಃ ಸ್ವತೋಽರ್ಜುನವನ್ನ ದೃಷ್ಟಮಪಿ ವಿಶ್ವರೂಪಂ ವೇದಾದಿಸಾಧನೈರರ್ಜುನೇನೇವ ತದವರ್ಯೈರಪಿ ತಥಾ ದೃಶ್ಯತಾಮಿತ್ಯತ ಆಹ- ನ ವೇದೇತಿ ॥ ವೇದಾನಾಂ ಯಜ್ಞಾನಾಂ ಚಾಧ್ಯಯನೈರಗ್ನಿಹೋತ್ರಾದಿಕ್ರಿಯಾಭಿಃ । ಉಗ್ರೈಃ ಕೃಚ್ಛ್ರಚಾಂದ್ರಾಯಣಾದಿತಪೋಭಿರೇವಂರೂಪಃ ಪ್ರಾಕ್ ಪ್ರದರ್ಶಿತ-ವಿಶ್ವರೂಪೋಽಹಂ ನೃಲೋಕೇ ತ್ವದನ್ಯೇನ ತ್ವತ್ತೋಽವರೇಣ ತ್ವದ್ವದ್‌ದ್ರಷ್ಟುಂ ನ ಶಕ್ಯ ಇತ್ಯರ್ಥಃ । ಸರ್ವಾತ್ಮನಾಽರ್ಜುನಾದನ್ಯೇನಾದೃಷ್ಟಾರ್ಥತ್ವೇ 'ದೃಷ್ಟ್ವಾಽದ್ಭುತಂ ರೂಪಮಿ'ತಿ ಪ್ರಾಗುಕ್ತವಿರೋಧ ಇತಿ ಜ್ಞೇಯಮ್ ॥ 48 ॥**

**ಅನುವಾದ-** ಅರ್ಜುನನಿಗಿಂತ ತಾರತಮ್ಯದಲ್ಲಿ ಕೆಳಗಿರುವವರು ಸ್ವತಃ ಅರ್ಜುನನಂತೆ ನೋಡದಿದ್ದರೂ ವಿಶ್ವರೂಪವನ್ನು ವೇದಾಧ್ಯಯನ ಮೊದಲಾದ ಸಾಧನಗಳಿಂದ ಅರ್ಜುನನು ನೋಡಿದಂತೆ ಕೆಳಗಿನವರು ನೋಡಬಹುದು ಎಂಬ ಶಂಕೆಯನ್ನು 'ನ ವೇದ' ಮುಂತಾಗಿ ಪರಿಹರಿಸುತ್ತಾರೆ. ವೇದಗಳ, ಯಜ್ಞಗಳ ಅಧ್ಯಯನಗಳಿಂದ ಅಗ್ನಿಹೋತ್ರ ಮುಂತಾದ ಕ್ರಿಯೆಗಳಿಂದ, ಉಗ್ರವಾದ ಕೃಚ್ಛ್ರ, ಚಾಂದ್ರಾಯಣ ಮುಂತಾದ ತಪಸ್ಸುಗಳಿಂದ. ಏವಂರೂಪಃ= ಹಿಂದೆ ತೋರಿಸಿದ ವಿಶ್ವರೂಪವುಳ್ಳ ನಾನು ಈ ಮನುಷ್ಯಲೋಕದಲ್ಲಿ ನಿನಗಿಂತ ಬೇರೆಯಾದ ನಿನಗಿಂತ ಕೆಳಗಿನವರಿಂದ ನಿನ್ನಂತೆ ನೋಡಲು ಶಕ್ಯನಾದವನಲ್ಲ ಎಂದರ್ಥ. ಸರ್ವಥಾ ಅರ್ಜುನನಿಗಿಂತ ಬೇರೆಯವರಿಂದ ನೋಡಲಾಗದವನು ಎಂದರೆ **'ದೃಷ್ಟ್ವಾದ್ಭುತಂ ರೂಪಂ'** ಮುಂತಾಗಿ ಹಿಂದೆ ಭಕ್ತರು ನೋಡಿ ನಡುಗಿರುವುದನ್ನು ಹೇಳಿದ್ದಕ್ಕೆ ವಿರೋಧ ಬರುತ್ತಿತ್ತೆಂದು ತಿಳಿಯಬೇಕು. ॥ 48 ॥

**ಮಾ ತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರಮೀದೃಙ್ ಮಮೇದಮ್ ।**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ**
**ತದೇವ ಮೇ ರೂಪಮಿದಂ ಪ್ರಪಶ್ಯ ॥ 49 ॥**

**ಅರ್ಥ –** ಘೋರವಾದ ಹೀಗೆ ಅನಂತ ಬಾಹು ಮುಂತಾಗಿವುಳ್ಳ ನನ್ನೀರೂಪವನ್ನು ನೋಡಿದ ನಿನಗೆ ದುಃಖವಿರದಿರಲಿ. ವಿಮೂಢತೆಯು ಇಲ್ಲದಿರಲಿ ಭಯರಹಿತನಾಗಿ ಸಂತುಷ್ಟ ಮನಸ್ಸುಳ್ಳವನಾಗಿ ಮತ್ತೆ ಈ ಹಿಂದೆ ನೋಡಿದ ಆ ರೂಪವನ್ನೇ ನೋಡು.

**ಅದೃಷ್ಟಪೂರ್ವಮಿತ್ಯಾದಿನಾ ಪ್ರಾರ್ಥಿತಸ್ಯೋತ್ತರಮಾಹ- ಮಾ ತ ಇತಿ ॥ ಘೋರಂ ಸಂಹರ್ತೃರೂಪಂ ಈದೃಗೀದೃಶಂ ಅನಂತಬಾಹ್ವಾದಿರೂಪಂ ದೃಷ್ಟ್ವಾ ತೇ ವ್ಯಥಾ ಮಾಽಸ್ತು । ವಿಮೂಢಭಾವೋ ವಿಮೂಢತ್ವಂ ಚ ಮಾಽಸ್ತು । ವ್ಯಪಗತ-**

**ಭಯಃ ಪ್ರೀತಮನಾಶ್ಚ ಸನ್ ಪುನಸ್ತ್ವಂ ತದೇವ ರೂಪಂ ಪೂರ್ವದೃಷ್ಟಮೇವ ರೂಪಂ ಪ್ರಪಶ್ಯೇತಿ ॥ 49 ॥**

**ಅನುವಾದ-** **'ಅದೃಷ್ಟಪೂರ್ವಂ'** ಮುಂತಾಗಿ ಮೊದಲ ರೂಪವನ್ನೇ ತೋರಿಸು ಎಂಬ ಪ್ರಾರ್ಥನೆಗೆ **'ಮಾ ತೇ'** ಮುಂತಾಗಿ ಉತ್ತರವನ್ನು ಹೇಳುವನು. **ಘೋರಂ**= ಸಂಹರ್ತೃ-ರೂಪವನ್ನು. **ಈದೃಕ್**= ಇಂತಹ ಅನಂತಬಾಹು ಮುಂತಾಗಿ ಉಳ್ಳರೂಪವನ್ನು ನೋಡಿ ನಿನಗೆ ದುಃಖವಿಲ್ಲದಿರಲಿ. **ವಿಮೂಢಭಾವಃ**= ವಿಮೂಢತೆಯು ಇಲ್ಲದಿರಲಿ. ಭಯರಹಿತನೂ ಸಂತುಷ್ಟನೂ ಆಗಿ ಮತ್ತೆ ನೀನು **ತದೇವ ರೂಪಂ** = ಮೊದಲು ನೋಡಿದ ರೂಪವನ್ನು ನೋಡು ಎಂದರ್ಥ. ॥ 49 ॥

**ಸಂಜಯ ಉವಾಚ -**

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।**
**ಆಶ್ವಾಸಯಾಮಾಸ ಚ ಭೀತಮೇನಂ**
**ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥ 50 ॥**

**ಅರ್ಥ**– ವಾಸುದೇವನು ಅರ್ಜುನನಿಗೆ ಹೀಗೆ ಹೇಳಿ ತನ್ನ ಮೊದಲ ರೂಪವನ್ನು ತೋರಿಸಿದನು. ಮಹಾತ್ಮನಾದ ಕೃಷ್ಣನು ಮತ್ತೆ ಸೌಮ್ಯವಾದ ಶರೀರವುಳ್ಳವನಾಗಿ ಭಯ ಗೊಂಡಿರುವ ಅರ್ಜುನನನ್ನು ಮತ್ತೆ ಸಾಂತ್ವನಗೊಳಿಸಿದನು ಎಂದು ಸಂಜಯನು ಹೇಳಿದನು.

**ತತಃ ಕಿಂ ಜಾತಮಿತಿ ಧಾರ್ತರಾಷ್ಟ್ರಹಾರ್ದಂ ನಿರಸಿತುಂ ಸಂಜಯ ಉವಾಚ ಇತ್ಯರ್ಜುನಮಿತ್ಯಾದಿನಾ ॥ ಇತ್ಯುಕ್ತ್ವೇತ್ಯನ್ವಯಃ । ತಥಾಶಬ್ದಃ ಸಮುಚ್ಚಯೇ । ಸ್ವಕಂ ರೂಪಂ ದರ್ಶಯಾಮಾಸ ಚೇತ್ಯರ್ಥಃ । ಸ್ವಕಂ ಸ್ವಕೀಯತಯಾ ಪ್ರದರ್ಶನೀಯ-ಮಿತ್ಯರ್ಥಃ । ವಿಶ್ವರೂಪಂ ನ ಸ್ವಕೀಯಂ ಇದಂ ತು ಸ್ವಕೀಯಮಿತಿ ಲೋಕ-ಭ್ರಾಂತಿವಿಷಯಮಿತಿ ಯಾವತ್ । ಭೀತಮೇನಂ ಭೂಯ ಆಶ್ವಾಸಯಾಮಾಸ ಚ । ಕಿಂ ಕೃತ್ವಾ ? ಮಹಾತ್ಮಾ ಸೌಮ್ಯವಪುರ್ಭೂತ್ವೇತಿ ॥ 50 ॥**

**ಅನುವಾದ** - ಮುಂದೇನಾಯಿತು ? ಎಂಬ ಧೃತರಾಷ್ಟ್ರನ ಶಂಕೆಯನ್ನು ದೂರ ಮಾಡಲು 'ಸಂಜಯ ಹೇಳಿದ '– **'ಇತ್ಯರ್ಜುನಂ'** ಮುಂತಾಗಿ . ಹೀಗೆ ಹೇಳಿ ಎಂದು ಅನ್ವಯ. ತಥಾ ಎಂಬ ಶಬ್ದವು 'ಹೇಳುವುದು, ತೋರಿಸುವುದು' ಎಂಬ ಎರಡು ಕ್ರಿಯೆಗಳ ಸಮುಚ್ಚಯ ಎಂಬರ್ಥ ದಲ್ಲಿದೆ. ತನ್ನ ರೂಪವನ್ನು ತೋರಿಸಿದ ಎಂದರ್ಥ. **ಸ್ವಕಂ**= ತನ್ನ ರೂಪವೆಂದು ತೋರಿಸ

ಬೇಕಾಗಿರುವ ರೂಪವನ್ನು ಎಂದರ್ಥ. ವಿಶ್ವರೂಪವು ಅವನದ್ದಲ್ಲ , ಈ ರೂಪವಾದರೋ ಅವನದ್ದು ಎಂಬ ಲೋಕದ ಭ್ರಾಂತಿಗೆ ವಿಷಯವಾದದ್ದು ಎಂದು ಆಶಯ. ಹೆದರಿರುವ ಅರ್ಜುನನನ್ನು ಮತ್ತೆ ಸಾಂತ್ವನಗೊಳಿಸಿದನು . ಏನು ಮಾಡಿ ? ಮಹಾತ್ಮನು ಸೌಮ್ಯಶರೀರ-ವುಳ್ಳವನಾಗಿ ಎಂದರ್ಥ. ॥ 50 ॥

**ಅರ್ಜುನ ಉವಾಚ -**

**ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥ 51 ॥**

**ಅರ್ಥ**– ಓ ಜನಾರ್ದನನೇ ! ಮನುಷ್ಯನಂತೆ ಕಾಣುವ ಈ ನಿನ್ನ ಸೌಮ್ಯರೂಪವನ್ನು ನೋಡಿ ನಾನೀಗ ಪ್ರಸನ್ನಮನಸ್ಕನಾಗಿರುವೆನು. ಹಿಂದಿನ ಸ್ವಭಾವವಾದ ಸ್ವಸ್ಥತೆಯನ್ನು ಹೊಂದಿರುವೆನು.

ವಿಶ್ವರೂಪತಿರೋಧಾನೇನ ಕೃಷ್ಣರೂಪ(ಪ್ರ)ದರ್ಶನೇನಾಶ್ವಾಸಿತೋಽಸ್ಮೀತ್ಯಾಹ– **ಅರ್ಜುನೋ ದೃಷ್ಟ್ವೇತಿ** ॥ ಕಿಂಚ ಮನುಷ್ಯವದ್‌ದೃಶ್ಯಮಾನತ್ವಾತ್ ಮಾನುಷಂ ಇದಂ ಸೌಮ್ಯಮಕ್ರೂರಂ[1] ತವ ರೂಪಂ ದೃಷ್ಟ್ವಾ ಇದಾನೀಂ ಸಚೇತಾಃ ಪ್ರಸನ್ನಚಿತ್ತಃ ಸಂವೃತ್ತೋ ಜಾತೋಽಸ್ಮಿ । ಪ್ರಕೃತಿಂ ಪೂರ್ವಸ್ವಭಾವಂ ಸ್ವಸ್ಥತಾಂ ಗತೋಽಸ್ಮೀತ್ಯುವಾಚೇತ್ಯನ್ವಯಃ ॥ 51 ॥

**ಅನುವಾದ**- ವಿಶ್ವರೂಪವನ್ನು ಅಂತರ್ಧಾನ ಮಾಡಿ ಕೃಷ್ಣರೂಪ ಪ್ರದರ್ಶನದಿಂದ ಆಶ್ವಾಸನೆಗೊಂಡಿರುವೆನೆಂದು ಅರ್ಜುನನು **'ದೃಷ್ಟ್ವಾ'** ಮುಂತಾಗಿ ಹೇಳುತ್ತಾನೆ. ಮತ್ತೆ ಮನುಷ್ಯನಂತೆ ಕಾಣಿಸುವುದರಿಂದ ಮಾನುಷ ಎನಿಸುವ **ಸೌಮ್ಯಂ** = ಕ್ರೂರವಲ್ಲದ ಈ ನಿನ್ನ ರೂಪವನ್ನು ನೋಡಿ ಈಗ , **ಸಚೇತಾಃ** = ಪ್ರಸನ್ನಮನಸ್ಕನು , **ಸಂವೃತ್ತಃ**= ಆಗಿರುವೆನು. **ಪ್ರಕೃತಿಂ**= ಹಿಂದಿನ ಸ್ವಭಾವವನ್ನು ಹೊಂದಿರುವೆನು ಎಂದು ಹೇಳಿದ ಎಂದು ಅನ್ವಯ ಹೇಳಬೇಕು. ॥ 51 ॥

## ವಿಶ್ವರೂಪದರ್ಶನ ದೊರಕದೆಲ್ಲರಿಗೆ

**ಶ್ರೀ ಭಗವಾನುವಾಚ –**

**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥ 52 ॥**

1. ಅಕ್ರೂರಮ್ ಇದಮ್

**ಅರ್ಥ**– ನನ್ನ ಯಾವ ರೂಪವನ್ನು ನೋಡಿರುವೆಯೋ ದೇವತೆಗಳು ಅದನ್ನು ನೋಡಲು ಇಚ್ಛೆಯುಳ್ಳವರಾಗಿ ಯಾವುದನ್ನು ನೋಡಿದರೋ ಆ ಈ ವಿಶ್ವರೂಪವು ಕೆಲವರಿಗೆ ಸುಲಭವಾಗಿ ದರ್ಶನೀಯವಾಗಿದೆ. ಕೆಲವರಿಗೆ ಸುಖದಿಂದಲೂ, ದುಃಖದಿಂದಲೂ ದರ್ಶನೀಯವಾಗಿದೆ.

**ಭಯಂಕರಂ ರೂಪಂ ಕಿಮರ್ಥಂ ದರ್ಶಿತವಾನಸೀತ್ಯತಃ ವಿಶ್ವರೂಪದೃಷ್ಟೇರ್ಮಹಿಮಾನಮಾಹ ಭಗವಾನ್– ಸುದುರ್ದರ್ಶಮಿತಿ । ಯನ್ಮಮ ರೂಪಂ ದೃಷ್ಟವಾನಸಿ । ಅಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣೋ ಯೇ ದೇವಾಃ ತೇಽಪಿ ಯದ್‌ದೃಷ್ಟವಂತಸ್ತದಿದಂ ಸುದುರ್ದರ್ಶಮ್ । ಕೇಷಾಂಚಿತ್‌ಸುಖೇನ ದರ್ಶನೀಯಮ್ । ಕೇಷಾಂಚಿತ್ ಸುಖೇನ ದುಃಖೇನ ಚ ದರ್ಶನೀಯಮಿತ್ಯರ್ಥಃ । ದೇವಾನಾಮಪ್ಯಪೇಕ್ಷಿತತ್ವಾತ್ ತವ ಶತ್ರುವಧೇ ನಿಮಿತ್ತಮಾತ್ರತ್ವಜ್ಞಾಪನಾಯ ಚೈತದ್‌ರೂಪಂ ದರ್ಶಿತಮಿತಿ ಭಾವಃ ॥ 52 ॥**

**ಅನುವಾದ**– ಭಯಂಕರ ರೂಪವನ್ನು ಏಕೆ ತೋರಿಸಿರುವಿ ಎಂಬ ಶಂಕೆಗೆ ಉತ್ತರವಾಗಿ ವಿಶ್ವರೂಪದ ದರ್ಶನದ ಮಹಿಮೆಯನ್ನು ಭಗವಂತನು '**ಸುದುರ್ದರ್ಶಂ**' ಮುಂತಾಗಿ ಹೇಳುತ್ತಾನೆ. ಯಾವ ನನ್ನ ರೂಪವನ್ನು ನೋಡಿರುವೆಯೋ ಈ ರೂಪವನ್ನು ಯಾವಾಗಲೂ ನೋಡಲು ಇಚ್ಛೆಯುಳ್ಳ ಯಾವ ದೇವತೆಗಳಿರುವರೋ ಅವರೂ ಯಾವುದನ್ನು ನೋಡುತ್ತಾರೋ. ಆ ಈ ರೂಪವು **ಸುದುರ್ದರ್ಶಂ**= ಕೆಲವರಿಗೆ ಸುಖದಿಂದ ದರ್ಶನೀಯವಾಗಿದೆ. ಕೆಲವರಿಗೆ ಸುಖದಿಂದಲೂ ದುಃಖದಿಂದಲೂ ದರ್ಶನೀಯವಾಗಿದೆ ಎಂದರ್ಥ. ಈ ರೂಪದರ್ಶನವು ದೇವತೆಗಳಿಂದಲೂ ಅಪೇಕ್ಷಿತವಾದ್ದರಿಂದ ನೀನು ಶತ್ರುವಧಕ್ಕೆ ಕೇವಲ ನಿಮಿತ್ತನಾಗಿರುವೆ ಎಂದು ತಿಳಿಸಲು ಈ ರೂಪವು ತೋರಿಸಲ್ಪಟ್ಟಿದೆ ಎಂದು ಆಶಯ ॥ 52 ॥

## ಕೇವಲ ಭಕ್ತಿಯಿಂದ ನಾನೊಲಿವೆ

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥ 53 ॥**

**ಅರ್ಥ**– ಹೇಗೆ ನೋಡಿರುವೆಯೋ ಈ ವಿಶ್ವರೂಪವುಳ್ಳ ನಾನು ವೇದಗಳಿಂದಲೂ, ತಪಸ್ಸಿನಿಂದಲೂ, ದಾನದಿಂದಲೂ, ಯಜ್ಞಗಳಿಂದಲೂ ನೋಡಲು ಶಕ್ಯನಲ್ಲ.

**ಕಿಂಚಾತಿ ದುರ್ಲಭದರ್ಶನಂ ತೇ ಮಯಾ ಕಾರಿತಮಿತಿ ಭಾವೇನಾಽಽಹ–**

**ನಾಹಮಿತಿ ॥ ಯಥಾ ದೃಷ್ಟವಾನಸಿ ಏವಂವಿಧೋ ವಿಶ್ವರೂಪವಾನಿತ್ಯರ್ಥಃ ॥ 53 ॥**

**ಅನುವಾದ-** ಮತ್ತೂ ಬಹಳ ದುರ್ಲಭವಾದ ದರ್ಶನವನ್ನು ನಾನು ನಿನಗೆ ಮಾಡಿಸಿರುವೆನು ಎಂಬ ಆಶಯದಿಂದ ಕೃಷ್ಣನು 'ನಾಹಂ' ಎಂಬುದಾಗಿ ಹೇಳುತ್ತಾನೆ. ಹೇಗೆ ನೋಡಿರುವೆಯೋ ಹಾಗೆಯೇ ವಿಶ್ವರೂಪವುಳ್ಳವನೆಂದರ್ಥ ॥ 53 ॥

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ 54 ॥**

**ಅರ್ಥ–** ಅರ್ಜುನನೇ ! ಶತ್ರುಸಂತಾಪಕನೇ ಅಸಾಧಾರಣವಾದ ಬೇರೆ ಸಹಾಯವಿಲ್ಲದ ಭಕ್ತಿಯಿಂದಲಾದರೋ ಹೀಗಿರುವ ನಾನು ಇರುವಂತೆ ತಿಳಿಯಲು, ನೋಡಲು, ಸಾಯುಜ್ಯವನ್ನು ಹೊಂದಲು ಶಕ್ಯನಾಗುವೆನು.

**ಕೇನೋಪಾಯೇನ ದ್ರಷ್ಟುಂ ಶಕ್ಯ ಇತ್ಯತ ಆಹ- ಭಕ್ತ್ಯೇತಿ ॥ ವೇದಾದಿತೋ ವಿಶೇಷದ್ಯೋತಕಸ್ತುಶಬ್ದಃ । ಅನನ್ಯಯಾಽನ್ಯಾಸಾಧಾರಣಯಾ ಅಸಹಾಯಯೇತಿ ವಾ । ತತ್ತ್ವೇನ ಜ್ಞಾತುಂ ದ್ರಷ್ಟುಂ ಪ್ರವೇಷ್ಟುಂ ಸಾಯುಜ್ಯಂ ಪ್ರಾಪ್ತುಂ ಚ ಶಕ್ಯೋಽಹಮಿತಿ ॥ 54 ॥**

**ಅನುವಾದ-** ಯಾವ ಉಪಾಯದಿಂದ ನೋಡಲು ಶಕ್ಯ ಎಂಬ ಶಂಕೆಯನ್ನು 'ಭಕ್ತ್ಯಾ' ಮುಂತಾಗಿ ಪರಿಹರಿಸುತ್ತಾರೆ. 'ತು' ಶಬ್ದವು ವೇದಾದಿಗಳಿಗಿಂತ ಭಕ್ತಿಗೆ ವಿಶೇಷವನ್ನು ಸೂಚಿಸುತ್ತದೆ. **ಅನನ್ಯಯಾ**= ಬೇರೆ ಸಾಧನೆಗಳಿಗಿಂತ ಅಸಾಧಾರಣವಾದ ಅಥವಾ ಬೇರೆ ಸಾಧನಗಳ ಸಹಾಯ ವಿಲ್ಲದ ಎಂದರ್ಥ. ಯಥಾರ್ಥವಾಗಿ ತಿಳಿಯಲು, ನೋಡಲು, ಪ್ರವೇಷ್ಟುಂ= ಸಾಯುಜ್ಯವನ್ನು ಹೊಂದಲು ನಾನು ಶಕ್ಯನು ಎಂದರ್ಥ. ॥ 54 ॥

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥ 55 ॥**

॥ ಓಂತತ್ಸದಿತಿ ಶ್ರೀಮದ್‌ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ವಿಶ್ವರೂಪದರ್ಶನಂ ನಾಮ
ಏಕಾದಶೋಽಧ್ಯಾಯಃ ॥

**ಅರ್ಥ–** ಓ ಪಾಂಡುಪುತ್ರನೇ ! ನಾನೇ ಉತ್ತಮನೆಂಬ ಜ್ಞಾನ ಉಳ್ಳವನಾಗಿ ಫಲ

ಸ್ನೇಹರಹಿತನಾಗಿ ನನ್ನ ಪ್ರೀತಿಗಾಗಿ ಕರ್ಮವನ್ನು ಮಾಡುವ, ಎಲ್ಲಾ ಪ್ರಾಣಿಗಳಲ್ಲೂ ದ್ವೇಷ ಮಾಡದ ನನ್ನ ಭಕ್ತನು ನನ್ನನ್ನು ಹೊಂದುತ್ತಾನೆ.

**ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ ಭಗವದ್ಗೀತೆಯಲ್ಲಿ**
**ವಿಶ್ವರೂಪದರ್ಶನವೆಂಬ ಹನ್ನೊಂದನೆಯ ಅಧ್ಯಾಯವು ಮುಗಿಯಿತು.**

**'ಅನನ್ಯಯೇತ್ಯುಕ್ತ್ಯಾ ಜಾತಾನ್ಯತ್ಯಾಗಭ್ರಾಂತಿಂ ನಿರಾಹ- ಮತ್ಕರ್ಮಕೃದಿತಿ ॥ ಅಹಮೇವ ಪರಮೋ ಯಸ್ಯ ಸ ತಥಾ । ಮದುತ್ತಮತಾಜ್ಞಾನವಾನಿತ್ಯರ್ಥಃ । ಸಂಗವರ್ಜಿತಃ ಫಲಸ್ನೇಹಹೀನಃ ಯಃ ಸ ಮಾಮೇತೀತಿ ॥ 55 ॥**

**॥ ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ**
**ಏಕಾದಶೋಽಧ್ಯಾಯಃ ॥**

**ಅನುವಾದ** - ಅನನ್ಯಯಾ ಎಂದು ಹೇಳಿದ್ದರಿಂದ ಉಂಟಾದ, ಬೇರೆ ಸಾಧನಗಳನ್ನು ತ್ಯಾಗ ಮಾಡಬೇಕು ಎಂಬ ಭ್ರಾಂತಿಯನ್ನು ನಿರಾಕರಿಸುತ್ತಾನೆ. ಯಾರಿಗೆ ನಾನೇ ಸರ್ವೋತ್ತಮನೋ ಅವನು ಮತ್ಪರಮನು. ನನ್ನ ಸರ್ವೋತ್ತಮತ್ವಜ್ಞಾನವುಳ್ಳವನೆಂದರ್ಥ. **ಸಂಗವರ್ಜಿತಃ**= ಫಲಸ್ನೇಹವಿಲ್ಲದವನು ಯಾರೋ ಅವನು ನನ್ನನ್ನು ಸೇರುತ್ತಾನೆ. ॥ 55 ॥

**ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ**
**ಹನ್ನೊಂದನೆಯ ಅಧ್ಯಾಯವು ಮುಗಿಯಿತು.**

# ಅಧ್ಯಾಯ - 12

## ಸಿರಿ ಮತ್ತು ಹರಿಯುಪಾಸಕರಲ್ಲಿ ಮುಕ್ತಿ ಯಾರಿಗೆ ಸುಲಭ ?

**ಅರ್ಜುನ ಉವಾಚ -**

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥ 1 ॥**

**ಅರ್ಥ-** ಯಾವ ಭಕ್ತರು, ಸತತ ಧ್ಯಾನ-ಕರ್ಮಯೋಗವುಳ್ಳವರಾಗಿ, ಹಿಂದೆ ವರ್ಣಿಸಿದ ಮಹಿಮಾನ್ವಿತನಾದ ನಿನ್ನನ್ನು, ಉಪಾಸನೆ ಮಾಡುವರೋ ಮತ್ತು ಯಾವ ಭಕ್ತರು ದೇಹನಾಶ ವಿಲ್ಲದ ಅವ್ಯಕ್ತತತ್ತ್ವಾಭಿಮಾನಿನಿಯಾದ ಶ್ರೀದೇವಿಯನ್ನು ಉಪಾಸಿಸುವರೋ ಇವರೀರ್ವರಲ್ಲಿ ಯಾರು ಹೆಚ್ಚು ಮುಕ್ತಿಯ ಉಪಾಯ ತಿಳಿದವರು ?

### ಗೀತಾವಿವೃತಿ

**ದೇವದೇವ್ಯುಪಾಸನಯೋರ್ಮಧ್ಯೇ ದೇವೋಪಾಸನಸ್ಯಾಧಿಕ್ಯಾಯ ತದುಪಾಸನಮಾಹ ಅಸ್ಮಿನ್ನಧ್ಯಾಯೇ । ಭಗವದುಪಾಸ್ತ್ಯಾಧಿಕ್ಯಪರತ್ವಾದಸ್ಯ ಭಗವನ್ಮಾಹಾತ್ಮ್ಯಪರಷಟ್ಕಾಂತರ್ಭಾವಶ್ಚ । 'ತಮೇವಂ ವಿದ್ವಾನ್' (ತೈ.ಆ. 3-12-7) ಇತ್ಯಾದೌ ಭಗವದುಪಾಸ್ತೇರಿವ 'ಶ್ರಿಯಂ ವಸಾನಾ ಅಮೃತತ್ವಮಾಯನ್' ಇತ್ಯಾದಿ ಶ್ರುತೌ ಶ್ರಿಯಂ ಪ್ರತ್ಯುಪಾಸೀನಾ ಅಮೃತತ್ವಂ ಪ್ರಾಪ್ತಾ ಇತಿ ಶ್ರೀದೇವ್ಯುಪಾಸ್ತೇರಪಿ ಮುಕ್ತಿ ಹೇತುತ್ವಾವಗಮೇನ ಜಾಯಮಾನಪರಕೀಯಸಂದೇಹಮಾಹೃತ್ಯ ವಿಶೇಷಯುಕ್ತಿಬುಭುತ್ಸಯಾ ಪೃಚ್ಛತಿ- ಏವಮಿತಿ ॥**

**ಅನುವಾದ-** ಸಿರಿದೇವಿ- ಸಿರಿಯರಸನ ಉಪಾಸನೆಗಳಲ್ಲಿ , ಸಿರಿಯರಸನ ಉಪಾಸನೆ ಸರ್ವಶ್ರೇಷ್ಠವೆಂದು ತಿಳಿಸಲು, ಅವನ ಉಪಾಸನೆಯನ್ನು ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ. ಶ್ರೀಹರಿಯ ಉಪಾಸನೆಯ ಪಾರಮ್ಯಪ್ರತಿಪಾದಕವಾದುದರಿಂದ, ಹರಿಮಾಹಾತ್ಮ್ಯಬೋಧಕ

ವಾದ ನಡುವಿನ ಆರು ಅಧ್ಯಾಯಗಳಲ್ಲಿ ಈ ಅಧ್ಯಾಯದ ಸೇರ್ಪಡೆಯಾಗಿರುವುದು ಸಮುಚಿತವಾಗಿದೆ.

**'ತಮೇವಂ ವಿದ್ವಾನ್'** (ತೈ. ಆ. 3.12.7) ಎಂಬ ಶ್ರುತಿಯು (1)ಶ್ರೀಪತಿಯ ಉಪಾಸನೆ ಮುಕ್ತಿಸಾಧನ ಎಂದು ಪ್ರತಿಪಾದಿಸುತ್ತಿರುವಂತೆ **'ಶ್ರಿಯಂ ವಸಾನಾ ಅಮೃತತ್ವಮಾಯನ್'** ಇವೇ ಮೊದಲಾದ ಶ್ರುತಿಗಳಲ್ಲಿ (2) 'ಶ್ರೀದೇವಿಯ ಉಪಾಸಕರು ಅಮೃತತ್ವವನ್ನು ಪಡೆಯುವರು' ಎಂಬುದಾಗಿ ಶ್ರೀತತ್ತ್ವೋಪಾಸನೆಗೂ ಮುಕ್ತಿಕಾರಣತ್ವವು ಪ್ರತಿಪಾದಿತವಾಗಿದೆ. ಇದರಿಂದ ಪರರಿಗೆ ಬರುವ ಸಂದೇಹವನ್ನು ತಾನು ಎತ್ತಿಕೊಂಡು ಸಿರಿಯರಸನ ಉಪಾಸನೆಯ ಹಿರಿಮೆಯ ವಿಷಯದಲ್ಲಿ ವಿಶೇಷಯುಕ್ತಿಯನ್ನು ಅರಿಯಬಯಸಿದ ಅರ್ಜುನನು ಪ್ರಶ್ನಿಸುತ್ತಾನೆ- **'ಏವಮ್'** ಎಂಬುದಾಗಿ.

**ನಚ ದೇವ್ಯುಪಾಸ್ತೇರ್ಮುಕ್ತಿಹೇತುತ್ವಮುಪಚರಿತಮ್ 'ಅಂತವತ್ತು ಫಲಂ ತೇಷಾಮ್' ಇತಿ ಸಾಪ್ತಮಿಕನ್ಯಾಯಾತ್ । ಅತೋ ನಾಸ್ಯ ಸಂದೇಹಹೇತುತ್ವಮಿತಿ ಶಂಕ್ಯಮ್ । ಬ್ರಹ್ಮಾದಿ ದೇವಾನಾಂ ಜನಿಮೃತಿಮತ್ತ್ವೇನ ತದುಪಾಸ್ತೇರಂತವತ್ ಫಲಕತ್ವೇಽಪಿ ಶ್ರಿಯಸ್ತು 'ಚತುಷ್ಕಪರ್ದಾ' ಇತ್ಯಾದೌ ನಿತ್ಯಯೌವನಜ್ಞಾನ-ಮಯತ್ವದೇವಪೂಜ್ಯತ್ವಾದಿಮಹಾಮಹಿಮ್ನಃ ಶ್ರವಣೇನ ತದುಪಾಸ್ತೇರ್ಮುಕ್ತಿ-ಹೇತುತ್ವಸಂಭವೇನ ಸಂದೇಹಹೇತುತ್ವಂ ಮನ್ವಾನಸ್ಯಾಯಂ ಪ್ರಶ್ನಃ । ಯೇ ಭಕ್ತಾಃ 'ಸತತಯುಕ್ತಾಃ 'ಸತತಂ ಧ್ಯಾನಕರ್ಮಯೋಗವಂತಃ ಏವಂ ದೃಷ್ಟಶ್ರುತರೂಪಂ ತ್ವಾಂ ಏವಂ 'ಮತ್ಕರ್ಮಕೃತ್' ಇತ್ಯಾದ್ಯುಕ್ತಪ್ರಕಾರೇಣ ಪರ್ಯುಪಾಸತೇ, ಯೇಽಪಿ ಚಾಕ್ಷರನಾಮಕಮವ್ಯಕ್ತಂ ಚಿತ್ಪ್ರಕೃತಿಂ ಪರಿ ಶ್ರದ್ಧಯಾ ಭಕ್ತ್ಯಾದಿಪೂರ್ವಕ-ಮುಪಾಸತೇ ತೇಷಾಂ ಮಧ್ಯೇ ಕೇ ಯೋಗವಿತ್ತಮಾಃ ಮೋಕ್ಷೋಪಾಯಜ್ಞೇಷು ಶ್ರೇಷ್ಠಾಃ ಇತ್ಯುವಾಚಾರ್ಜುನಃ ಇತ್ಯನ್ವಯಃ । ಏವಮಿತ್ಯಸ್ಯ ತ್ವಾಮಿತ್ಯತ್ರೋಪಾಸತ ಇತ್ಯತ್ರ ಚಾನ್ವಯಃ । ಏವಮಿತ್ಯಸ್ಯ ಪೂರ್ವಪರಾಮರ್ಶಿತ್ವಾತ್ ಪೂರ್ವಾ-ನಂತರ್ಯಮಪ್ಯಸ್ಯಾಧ್ಯಾಯಸ್ಯ ಧ್ಯೇಯಮ್ । ಅತ್ರಾವ್ಯಕ್ತಮಿತ್ಯೇವ ವಾಚ್ಯೇ ಅಕ್ಷರಮಿತಿ ತದ್‌ವಿಶೇಷಣೋಕ್ತಿಃ ಕ್ಷರಣವದ್‌ಭ್ಯೋ ಬ್ರಹ್ಮಾದಿದೇವಾಂತರೇಭ್ಯೋ ವೈಲಕ್ಷಣ್ಯಪ್ರದರ್ಶನೇನ ಪ್ರಶ್ನಸಂಭಾವನಾರ್ಥಾ ॥ 1 ॥**

ಇಲ್ಲಿ ಒಂದು ಶಂಕೆ ಸಹಜ- 'ಶ್ರೀದೇವಿಯ ಉಪಾಸನೆ ಮುಕ್ತಿಸಾಧನವೆಂದು ವರ್ಣಿತ ವಾದರೂ ಅದೂ ಔಪಚಾರಿಕ. (ಈ ವರ್ಣನೆ ವಸ್ತುನಿಷ್ಠವಲ್ಲ) ಏಕೆಂದರೆ. 'ಅಂತವತ್ತು ಫಲಂ

**ತೇಷಾಂ**' (ಭ.ಗೀ. 7.23) ಎಂಬುದಾಗಿ ಸಪ್ತಮಾಧ್ಯಾಯದಲ್ಲಿ (3) ಈ ಬಗ್ಗೆ ವಿವರಿಸಲಾಗಿದೆ. ಆದ್ದರಿಂದ ಶ್ರೀತತ್ತ್ವೋಪಾಸನೆ ಮುಕ್ತಿಸಾಧನೆಯೆಂಬ ಶಂಕೆ ಇಲ್ಲಿ ಉದ್ಭವಿಸಲಾರದಲ್ಲವೆ ?

ಪ್ರಕೃತ ಸಂದೇಹದ ಔಚಿತ್ಯವನ್ನು ಹೀಗೆ ವಿವರಿಸಬಹುದಾಗಿದೆ – 'ಬ್ರಹ್ಮಾದಿದೇವತೆಗಳಿಗೆ ಜನನ–ಮರಣಗಳಿರುವುದರಿಂದ ಅವರ ಉಪಾಸನೆಯಿಂದ ಶಾಶ್ವತ ಮುಕ್ತಿರೂಪವಾದ ಫಲವು ದೊರಕದೆಯೇ, ಅಶಾಶ್ವತಫಲವೇ ದೊರಕಬಹುದು. ಆದರೆ, '**ಚತುಷ್ಕಪರ್ದಾ**' ಇತ್ಯಾದಿ ಶ್ರುತಿಗಳಲ್ಲಿ ಶ್ರೀದೇವಿಯು, ನಿತ್ಯಯೌವನಸಂಪನ್ನಳು– ಜ್ಞಾನಮಯಶರೀರಳು. ಸಕಲ ದೇವತೆಗಳಿಂದ ಪೂಜ್ಯಳು ಇತ್ಯಾದಿ ಮಹಿಮೆಗಳು ಕೇಳಿಬಂದಿದೆ. ಹೀಗಾಗಿ ಅವಳು ಇತರ ದೇವತೆಗಳಿಗಿಂತ ವಿಶಿಷ್ಟಳಾದ ಕಾರಣ ಅವಳ ಉಪಾಸನೆ ಮುಕ್ತಿ ಕಾರಣವಾಗಬಹುದು ಎಂಬ ಶಂಕೆ ಸಹಜ. ಈ ಹಿನ್ನೆಲೆಯಲ್ಲಿ ಪ್ರಶ್ನೆ ಸಮಂಜಸವಾಗಿದೆ.

**(ಶ್ಲೋಕಾರ್ಥ)**– ಯಾವ ಭಕ್ತರು '**ಸತತಯುಕ್ತಾಃ**' ಧ್ಯಾನ–ಕರ್ಮರೂಪವಾದ ಉಪಾಯವುಳ್ಳವರು '**ಏವಂ**' ಹಿಂದೆ ದರ್ಶನ–ಶ್ರವಣಗೋಚರನಾದ ನಿನ್ನನ್ನು '**ಏವಂ**'– '**ಮತ್ಕರ್ಮಕೃತ್**' (ಭ.ಗೀ. 11.55) ಎಂಬಲ್ಲಿ ವರ್ಣಿಸಿದಂತೆ (4) '**ಪರ್ಯುಪಾಸತೇ**' ಸೇವೆಗೈಯುವರೋ '**ಯೇಽಪಿ**' ಯಾರು '**ಅಕ್ಷರಮ್**' ಅಕ್ಷರನಾಮಕಳೂ '**ಅವ್ಯಕ್ತಮ್**' ಅವ್ಯಕ್ತಾಭಿಮಾನಿನಿಯೂ ಆದ ರಮೆಯನ್ನು ಶ್ರದ್ಧೆಯಿಂದ ಭಕ್ತಿಪೂರ್ವಕವಾಗಿ ಉಪಾಸನೆ ಮಾಡುವರೋ ಇವರೀರ್ವರಲ್ಲಿ ಯಾರು '**ಯೋಗವಿತ್ತಮಾಃ**' ಮೋಕ್ಷೋಪಾಯವನ್ನು ತಿಳಿದವರಲ್ಲಿ ಶ್ರೇಷ್ಠರು ಎಂಬುದಾಗಿ ಅರ್ಜುನನು ಪ್ರಶ್ನಿಸಿದನು.

'**ಏವಂ**' ಎಂಬ ಪದಕ್ಕೆ '**ತ್ವಾಮ್**' ಮತ್ತು '**ಉಪಾಸತೇ**' ಎಂಬ ಪದದೊಂದಿಗೆ ಅನ್ವಯ ಮಾಡಿಕೊಳ್ಳಬೇಕು. ('**ಏವಂ**' = **ದೃಷ್ಟಶ್ರುತರೂಪಂ ತ್ವಾಂ** '**ಏವಮ್**'– '**ಮತ್ಕರ್ಮಕೃತ್**' ಇತ್ಯಾದ್ಯುಕ್ತ ಪ್ರಕಾರೇಣ ಉಪಾಸತೇ) '**ಏವಂ**' ಎಂಬ ಪದವು ಪೂರ್ವದಲ್ಲಿ ಉಪವರ್ಣಿಸಿದ ಅನುಭವ– ಶ್ರವಣವಿಷಯನಾದ ಪರಮಾತ್ಮನನ್ನು ಪರಾಮರ್ಶ ಮಾಡುತ್ತಿರುವುದರಿಂದ ಪೂರ್ವಾಧ್ಯಾಯದ ನಂತರ ಅವನ ಉಪಾಸನೆಯೇ ಮುಕ್ತಿ ಸಾಧನವೆಂದು ಸಮರ್ಥಿಸುವ ಈ ಅಧ್ಯಾಯವು ಬಂದಿರುವುದು ಸಂಗತವಾಗಿದೆ.

ಇಲ್ಲಿ '**ಅವ್ಯಕ್ತಮ್**' ಎಂಬ ಪದದಿಂದಲೇ ರಮೆಯನ್ನು ತಿಳಿಸಿದಂತಾಗುವುದು. ಆದರೂ '**ಅಕ್ಷರಮ್**' ಎಂಬ ವಿಶೇಷಣ ನೀಡಿರುವುದು, ಬ್ರಹ್ಮಾದಿಗಳಲ್ಲಿ ಇಲ್ಲದ ಕೇವಲ ರಮೆಯಲ್ಲಿರುವ ವೈಶಿಷ್ಟ್ಯವನ್ನೂ ತೋರಿಸಲು. ಬ್ರಹ್ಮಾದಿದೇವತೆಗಳಿಗೆ ಶರೀರನಾಶವಿರುವುದರಿಂದ ಅವರು '**ಕ್ಷರರು**'. ರಮೆ, ವಿಜ್ಞಾನಾನಂದಮಯವಾದ ನಿತ್ಯಶರೀರವುಳ್ಳವಳಾದ ಕಾರಣ ಅಕ್ಷರಳೆನಿಸಿದ್ದಾಳೆ. ಆದ್ದರಿಂದ ಇತರದೇವತೆಗಳ ಉಪಾಸನೆಯಿಂದ ದೊರಕದ ಮುಕ್ತಿಯು, ರಮೆಯ ಉಪಾಸನೆಯಿಂದ ದೊರಕಬಹುದು ಎಂಬ ಶಂಕೆ ಸಮಂಜಸ.

**ವಿವರಣೆ**- 1. **'ತಮೇವಂ ವಿದ್ವಾನ್'** ಎಂಬ ಶ್ರುತಿಯ ಪೂರ್ಣಪಾಠ ಮತ್ತು ಅರ್ಥ ಹೀಗಿದೆ- **ತಮೇವಂ ವಿದ್ವಾನ್ ಅಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ।** ಪರಮಾತ್ಮನ ಮಹಿಮೆಗಳನ್ನು ಸರಿಯಾಗಿ ತಿಳಿದವನು ಮುಕ್ತಿ ಪಡೆಯುವನು, ಮುಕ್ತಿಗೆ ಪರಮಾತ್ಮನ ಸಾಕ್ಷಾತ್ಕಾರಕ್ಕಿಂತ ಬೇರೆ ದಾರಿ ಇಲ್ಲ.

2. ಶ್ರೀದೇವಿಯ ಉಪಾಸನೆ ಮುಕ್ತಿ ಕಾರಣವೆಂದು ಪ್ರತಿಪಾದಿಸುವ ಶ್ರುತಿಗಳ ಪಾಠ - ಅರ್ಥಗಳು ಹೀಗಿವೆ-

**'ಶ್ರಿಯಂ ವಸಾನಾ ಅಮೃತತ್ವಮಾಯನ್ ಭವಂತಿ ಸತ್ಯಾ ಸಮಿಥಾ ಮಿತದ್ರೌ'**

'ಲಕ್ಷ್ಮೀದೇವಿಯ ಉಪಾಸಕರು ಮುಕ್ತಿ ಪಡೆವರು. ಅವರ ಇಷ್ಟಾರ್ಥಗಳೆಲ್ಲ ಮುಕ್ತ ಲೋಕಗಳಲ್ಲಿ ಈಡೇರುವವು'

**'ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ'**

'ಮಹತ್ತತ್ತ್ವಕ್ಕಿಂತ ಹಿರಿದಾದ ಅನಾದಿ-ನಿತ್ಯವಾದ ಶ್ರೀತತ್ತ್ವವನ್ನು ಉಪಾಸಿಸಿ ಮುಕ್ತಿ ಪಡೆಯುತ್ತಾನೆ.'

3. ಭಗವದ್ಗೀತೆಯ ಸಪ್ತಮಾಧ್ಯಾಯದಲ್ಲಿ ಬರುವ ಈ ಶ್ಲೋಕದ ಪಾಠ ಮತ್ತು ಅರ್ಥ ಹೀಗಿದೆ-

'ಅಂತವತ್ತು ಫಲಂ ತೇಷಾಂ ತದ್‌ಭವತ್ಯಲ್ಪಮೇಧಸಾಮ್ ।
ದೇವಾನ್ ದೇವಯಜೋ ಯಾಂತಿ ಮದ್‌ಭಕ್ತಾ ಯಾಂತಿ ಮಾಮಪಿ ॥' (ಭ.ಗೀ 7.23)

'ರಮಾ - ಬ್ರಹ್ಮಾದಿ ದೇವತೆಗಳ ಆರಾಧಕರಿಗೆ ದೊರಕುವ ಫಲ ಅಲ್ಪಕಾಲೀನವಾದುದು. (ಶಾಶ್ವತವಲ್ಲ) ದೇವತೆಗಳ ಪೂಜಕರು ವಿನಾಶವುಳ್ಳ ಅವರ ಲೋಕಕ್ಕೆ ತೆರಳುವರು. ನನ್ನ ಆರಾಧಕರು, ಪರಿವಾರರಾದ ದೇವತೆಗಳ ಮೂಲಕ ನನ್ನನ್ನೇ ಹೊಂದುವರು.'

4. **'ಮತ್ಕರ್ಮಕೃತ್'** ಎಂಬ ಶ್ಲೋಕದ ಪಾಠ ಮತ್ತು ಅರ್ಥ ಹೀಗಿದೆ -

ಮತ್ಕರ್ಮಕೃತ್ ಮತ್ಪರಮಃ ಮದ್‌ಭಕ್ತಃ ಸಂಗವರ್ಜಿತಃ ।
ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥ (ಭ.ಗೀ. 11.55)

**ಅರ್ಥ** - ಓ ಅರ್ಜುನ ! ಹರಿಪ್ರೀತಿಗಾಗಿ ಕರ್ಮಾನುಷ್ಠಾನಗೈಯುವವನು, ನನ್ನಲ್ಲಿ ಪಾರಮ್ಯ ಬುದ್ಧಿ ಯುಳ್ಳವನು, ನನ್ನ ಭಕ್ತನು, ದುರ್ಜನರ ಸಹವಾಸ ತೊರೆದವನು, ಎಲ್ಲಾ ಪ್ರಾಣಿಗಳಲ್ಲಿ 'ವೈರ 'ಭಾವ ತಳೆಯದವನು ನನ್ನನ್ನು ಹೊಂದುತ್ತಾನೆ.

## ಹರಿಯ ಆರಾಧಕರು ಮುಕ್ತಿಯ ಉಪಾಯವರಿತವರು

**ಶ್ರೀ ಭಗವಾನುವಾಚ –**

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥ 2 ॥**

**ಅರ್ಥ**– ಯಾರು ನನ್ನಲ್ಲಿ ಮನಸ್ಸನ್ನು ನೆಲೆಗೊಳಿಸಿ ಕರ್ಮಯೋಗ –ಧ್ಯಾನಯೋಗಗಳಿಂದ ಉತ್ತಮವಾದ ಶ್ರದ್ಧೆಯುಳ್ಳವರಾಗಿ ನನ್ನನ್ನು ಉಪಾಸನೆ ಮಾಡುವರೋ ಅವರು ಮುಕ್ತಿಯ ಉಪಾಯವನ್ನು ಹೆಚ್ಚು ಚೆನ್ನಾಗಿ ತಿಳಿದವರೆಂದು ನನ್ನ ಆಶಯ.

**ಅವ್ಯಕ್ತೋಪಾಸಕಾನ್ಮದುಪಾಸಕಾ ಏವೋತ್ತಮಾ ಇತ್ಯಾಹ– ಮಯೀತಿ ॥ ಯೇ ಮಯಿ ಸಮ್ಯಙ್‌ಮನ ಆವೇಶ್ಯ ನಿತ್ಯಯುಕ್ತಾಃ ನಿತ್ಯಂ ಕರ್ಮಯೋಗ–ಧ್ಯಾನ–ಯೋಗವತ್ತ್ವೇನ ನಿತ್ಯಯುಕ್ತಾಃ । ಪರಯಾ ಶ್ರದ್ಧಯೋಪೇತಾಶ್ಚ ಸಂತಃ ಮಾಮ್ ಉಪಾಸತೇ ತೇ ಯುಕ್ತತಮಾಃ । ಮೋಕ್ಷೋಪಾಯವಿತ್ಸು ಶ್ರೇಷ್ಠಾಃ ಮೇ ಮತಾ ಇತ್ಯರ್ಥಃ ॥ 2 ॥**

**ಅನುವಾದ**– ಅವ್ಯಕ್ತಾಭಿಮಾನಿನಿಯಾದ ರಮೆಯ ಉಪಾಸಕರಿಗಿಂತ ನನ್ನ ಉಪಾಸಕರೇ ಶ್ರೇಷ್ಠರೆಂದು ನಿರೂಪಿಸುತ್ತಿದ್ದಾನೆ – '**ಮಯಿ**' ಎಂಬ ಶ್ಲೋಕದಲ್ಲಿ.

ಯಾರು ನನ್ನಲ್ಲಿ ಚೆನ್ನಾಗಿ ಮನಸ್ಸನ್ನು ನೆಲೆಗೊಳಿಸಿ '**ನಿತ್ಯಯುಕ್ತಾಃ**' ಕರ್ಮಯೋಗ–ಧ್ಯಾನಯೋಗರೂಪ ಉಪಾಯವುಳ್ಳವರಾಗಿ ಉತ್ತಮವಾದ ಶ್ರದ್ಧಾಸಂಪನ್ನರಾಗಿ ನನ್ನನ್ನು ಉಪಾಸಿಸುವರೋ ಅವರು ಮೋಕ್ಷೋಪಾಯವನ್ನು ತಿಳಿದವರಲ್ಲಿ ಅತಿ ಶ್ರೇಷ್ಠರೆಂದು ನನ್ನ ಅಭಿಮತ. ॥ 2 ॥

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥ 3 ॥**

**ಅರ್ಥ**– ಯಾರು ದೇಹನಾಶರಹಿತಳಾದ, ಬುದ್ಧಿಗೆ ನಿಲುಕದ, ಸೂಕ್ಷ್ಮಳಾದ, ಎಲ್ಲೆಡೆ ಇರುವ, ಅಚಿಂತ್ಯಳೂ ಅವ್ಯಾಕೃತಾಕಾಶಾಭಿಮಾನಿನಿಯೂ ಅಚಲಳೂ ನಿರ್ವಿಕಾರಳೂ ಆದ ಲಕ್ಷ್ಮೀದೇವಿಯನ್ನು ಉಪಾಸಿಸುವರೋ ಅವರು (ನನ್ನನ್ನೇ ಪಡೆಯುವರು)

**ನನ್ವವ್ಯಕ್ತೋಪಾಸಕಾನಾಂ ಮೋಕ್ಷಾಭಾವೇ 'ಶ್ರಿಯಂ ವಸಾನಾ ಅಮೃತತ್ವ–ಮಾಯನ್' ಇತ್ಯಾದಿಶ್ರುತಿವಿರೋಧಃ । ಮೋಕ್ಷಸತ್ತ್ವೇ ಚ ಕಥಂ ತ್ವದುಪಾಸಕಾನಾ–**

**ಮೇವ ಯುಕ್ತತಮತ್ವಂ ಫಲಸಾಮ್ಯಾದಿತ್ಯತ ಆಹ- ಯೇ ತ್ವಿತಿ ॥ ಯದ್ವಾ ಉಕ್ತಶ್ರುತ್ಯಾದಿನಾಽವ್ಯಕ್ತೋಪಾಸಕಾನಾಂ ಮತ್ಪ್ರಾಪ್ತಿರೂಪಮೋಕ್ಷಸತ್ವೇಽಪಿ ತದುಪಾಸನಂ ಕಷ್ಟಸಾಧ್ಯಮ್ । ಮದುಪಾಸನಂ ನ ತಥಾ । ಅತೋ ಮದುಪಾಸಕಾ ಏವೋತ್ತಮಾ ಇತ್ಯಾಹ- ಯೇ ತ್ವಿತ್ಯಾದಿನಾ ಶ್ಲೋಕಪಂಚಕೇನ ॥ ಅಕ್ಷರಮ್ ಅವಿನಾಶಿ । ಸೂಕ್ಷ್ಮತ್ವಾತ್ ಅನಿರ್ದೇಶ್ಯಮ್ । ಅಪ್ರಸಿದ್ಧತ್ವಾತ್ ಜಗದುಪಾದಾನ-ಪ್ರಕೃತ್ಯಭಿಮಾನಿತ್ವಾಚ್ಚಾವ್ಯಕ್ತನಾಮಕಂ ಶ್ರೀತತ್ತ್ವಂ ಪರ್ಯುಪಾಸತೇ ವಿಷ್ಣುಭಕ್ತಿ-ವಿಷ್ಣೂತ್ತಮತ್ವಜ್ಞಾನವಿಷ್ಣೂಪಾಸನಾದಿಪೂರ್ವಕಮುಪಾಸತೇ । ತದ್‌ವಿಶಿನಷ್ಟಿ - ಸರ್ವತ್ರಗಮಿತಿ ॥ ದೇಶತೋ ವ್ಯಾಪ್ತಮ್ । ಗುಣಬಾಹುಲ್ಯಾದಚಿಂತ್ಯಮ್ । ಕೂಟಸ್ಥಂ ಕೂಟೇಽವ್ಯಾಕೃತಾಕಾಶೇ ಅಭಿಮಾನಿತಯಾ ಸ್ಥಿತಮ್ । ಕದಾಽಪಿ ಸ್ವಪದಾದಭ್ರಷ್ಟತ್ವಾದಚಲಮ್। ಧ್ರುವಂ ನಿರ್ವಿಕಾರಮಿತಿ ॥ 3 ॥**

**ಅನುವಾದ–** ಅವ್ಯಕ್ತತತ್ತ್ವಾಭಿಮಾನಿನಿಯಾದ ಶ್ರೀದೇವಿಯ ಉಪಾಸಕರಿಗೆ ಮುಕ್ತಿಯು ದೊರಕದಿರುವಲ್ಲಿ '**ಶ್ರಿಯಂ ವಸಾನಾ ಅಮೃತತ್ವಮಾಯನ್**' ಎಂಬ ಶ್ರೀದೇವಿಯ ಉಪಾಸನೆಗೆ ಮುಕ್ತಿಫಲವೆಂದು ತಿಳಿಸುವ ಶ್ರುತಿವಿರೋಧ ಬರಲಾರದೆ ? ಮುಕ್ತಿಯು ದೊರಕುವುದೆಂದು ಒಪ್ಪಿದರೆ, ನಿನ್ನ ಉಪಾಸಕರೇ ಶ್ರೇಷ್ಠರೆಂಬ ಹೇಳಿಕೆ ಎಷ್ಟು ಸಮಂಜಸ ? ಏಕೆಂದರೆ, ಈರ್ವರ ಉಪಾಸನೆಯೂ ಮುಕ್ತಿಕಾರಣವಾಗಿದೆ. ಈ ಶಂಕೆಗೆ 'ಯೇ ತ್ವಕ್ಷರಂ' ಎಂಬ ಶ್ಲೋಕ ಉತ್ತರಿಸುತ್ತಿದೆ.

ಅಥವಾ ಹಿಂದೆ ತಿಳಿಸಿದ ಶ್ರುತಿಗಳಿಗೆ ಅನುಗುಣವಾಗಿ ಅವ್ಯಕ್ತೋಪಾಸಕರಿಗೆ ಮುಕ್ತಿ ದೊರಕುತ್ತದೆಯಾದರೂ ಅವ್ಯಕ್ತತತ್ವದ ಉಪಾಸನೆ ಕಷ್ಟಸಾಧ್ಯವಿದೆ. ನನ್ನ ಉಪಾಸನೆ ಕಷ್ಟಸಾಧ್ಯವಲ್ಲ. ಆದ್ದರಿಂದ ನನ್ನ ಉಪಾಸಕರು ಶ್ರೇಷ್ಠರೆಂದು '**ಯೇ ತ್ವಕ್ಷರಮ್**' ಇತ್ಯಾದಿ ಐದು ಶ್ಲೋಕಗಳಿಂದ ಪ್ರತಿಪಾದಿಸುತ್ತಿರುವನು . ಈ ಶ್ಲೋಕದಲ್ಲಿ '**ಅಕ್ಷರಮ್**' '**ಅನಿರ್ದೇಶ್ಯಮ್**' ಇತ್ಯಾದಿಯಾಗಿ ಶ್ರೀದೇವಿಯನ್ನು ವರ್ಣಿಸಿದ್ದಾರೆ. ಶರೀರನಾಶವಿಲ್ಲದ ಕಾರಣ ಅವಳು 'ಅಕ್ಷರ'ಳೆನಿಸಿದ್ದಾಳೆ. ಸೂಕ್ಷ್ಮಳಾದುದರಿಂದ '**ಅನಿರ್ದೇಶ್ಯ**' ಎನಿಸಿರುವಳು. ಅಜ್ಞರಿಗೆ ಅಪ್ರಸಿದ್ಧಳಾದ ಕಾರಣ ಮತ್ತು ವಿಶ್ವದ ಉಪಾದಾನಕಾರಣವೆನಿಸಿದ ಪ್ರಕೃತಿಗೆ ಅಭಿಮಾನಿನಿಯಾದುದರಿಂದಲೂ '**ಅವ್ಯಕ್ತ**' ಎನಿಸಿರುವಳು. ಎಲ್ಲೆಡೆ ವ್ಯಾಪ್ತಳಾದುದರಿಂದ '**ಸರ್ವತ್ರಗ**' ಎನಿಸಿರುವಳು. ಅನಂತಗುಣಳಾದುದರಿಂದ '**ಅಚಿಂತ್ಯ**'ಳೆನಿಸಿರುವಳು. ಅವ್ಯಾಕೃತಾಕಾಶಕ್ಕೆ ಅಭಿಮಾನಿನಿಯಾದುದರಿಂದ '**ಕೂಟಸ್ಥ**'ಳೆನಿಸಿರುವಳು. ಎಂದೆಂದೂ ಸ್ಥಾನಭ್ರಷ್ಟಳಾಗದ ಕಾರಣ '**ಅಚಲ**'ಳೆನಿಸಿರುವಳು. ನಿರ್ವಿಕಾರಳಾದುದರಿಂದ '**ಧ್ರುವ**'ನೆನಿಸಿರುವಳು. ಇಂತಹ ಶ್ರೀತತ್ತ್ವವನ್ನು ವಿಷ್ಣುಭಕ್ತಿ – ವಿಷ್ಣುಪಾರಮ್ಯಜ್ಞಾನ– ವಿಷ್ಣೂಪಾಸನಾ–ಪೂರ್ವಕವಾಗಿ ಯಾರು ಉಪಾಸನೆ ಮಾಡುವರೋ (ಅವರು ನನ್ನನ್ನೇ ಹೊಂದುವರು) ॥ 3 ॥

**ಸನ್ನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।**
**ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ॥ 4 ॥**

**ಅರ್ಥ**- ಇಂದ್ರಿಯಗಳನ್ನೆಲ್ಲ ಹಿಡಿತದಲ್ಲಿರಿಸಿಕೊಂಡು ಎಲ್ಲೆಡೆ ಇರುವ ಪರಮಾತ್ಮನ ರೂಪಗಳಲ್ಲಿ ಏಕತೆಯನ್ನು ಚಿಂತಿಸುತ್ತಾ, ಎಲ್ಲ ಜೀವಿಗಳ ಹಿತಸಾಧನೆಯಲ್ಲಿ ತೊಡಗಿ, ಯಾರು ಲಕ್ಷ್ಮಿಯನ್ನು ಉಪಾಸಿಸುವರೋ ಅವರು ನನ್ನನೇ ಹೊಂದುವರು.

**ತದುಪಾಸನಾಯಾಮಿತಿಕರ್ತವ್ಯತಾಮಾಹ- ಸನ್ನಿಯಮ್ಯೇತಿ ॥ ಇಂದ್ರಿಯ-ಗ್ರಾಮಂ ಇಂದ್ರಿಯಸಮುದಾಯಂ ಸನ್ನಿಯಮ್ಯ ವಿಷಯೇಭ್ಯ ಉಪಸಂಹೃತ್ಯ ಸರ್ವತ್ರ ಸಮಬುದ್ಧಯಃ ಷಷ್ಠಾಧ್ಯಾಯೋಕ್ತದಿಶಾ [1]ಸಮ್ಯಗ್‌ಜ್ಞಾನವಂತಃ ಸರ್ವ-ಭೂತಹಿತೇ ರತಾಶ್ಚ ಸಂತಃ ಪರ್ಯುಪಾಸತ ಇತ್ಯನ್ವಯಃ । ಅತ್ರ ಅಕ್ಷರತ್ವಾದಿ-ವಿಶೇಷಣಂ ಮೋಕ್ಷದಾನಶಕ್ತಿದ್ಯೋತನಾಯ । ತೇ ಮಾಮೇವ ಪ್ರಾಪ್ನುವಂತೀತಿ । ॥ 4 ॥**

**ಅನುವಾದ**- ಶ್ರೀದೇವಿಯ ಉಪಾಸನೆಯಲ್ಲಿ ಸಹಕಾರಿಗಳನ್ನು ನಿರೂಪಿಸುತ್ತಿದ್ದಾರೆ- 'ಸನ್ನಿಯಮ್ಯ' ಎಂಬ ಶ್ಲೋಕದಲ್ಲಿ. 'ಇಂದ್ರಿಯಗ್ರಾಮಮ್' ಅಂದರೆ ಎಲ್ಲ ಇಂದ್ರಿಯಗಳನ್ನು ಎಂದರ್ಥ. 'ಸನ್ನಿಯಮ್ಯ'- ವಿಷಯ (ಭೋಗ) ಪದಾರ್ಥಗಳಿಂದ ಹೊರಸೆಳೆದು. '**ಸರ್ವತ್ರ ಸಮಬುದ್ಧಯಃ**'- ಆರನೆಯ ಅಧ್ಯಾಯದಲ್ಲಿ ತಿಳಿಸಿದಂತೆ ಯಥಾರ್ಥ ಜ್ಞಾನಸಂಪನ್ನರಾಗಿ ಎಲ್ಲ ಜೀವಿಗಳ ಹಿತವನ್ನು ಬಯಸುವವರಾಗಿ ಯಾರು ಲಕ್ಷ್ಮಿಯನ್ನು '**ಪರ್ಯುಪಾಸತೇ**' ಉಪಾಸನೆಗೈವರೋ ಅವರು ನನ್ನನ್ನೇ ಹೊಂದುವರು. ಇಲ್ಲಿ '**ಅಕ್ಷರಮ್**' ಇತ್ಯಾದಿ ವಿಶೇಷಣಗಳು ಮೋಕ್ಷವನ್ನು ಕರುಣಿಸುವ ಶಕ್ತಿ ಶ್ರೀದೇವಿಗೆ ಇದೆಯೆಂದು ತಿಳಿಸಲು ಬಂದಿವೆ. ॥ 4 ॥

## ಕೇವಲ ರಮೆಯ ಉಪಾಸಕರಿಗೆ ಶ್ರಮವಧಿಕ

**ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ 5 ॥**

**ಅರ್ಥ**- ಕೇವಲ ರಮೆಯ ಉಪಾಸಕರಿಗೆ ಆಯಾಸ ಹೆಚ್ಚು. ಹೇಗೆಂದರೆ ಅವ್ಯಕ್ತತತ್ವಾಭಿ-ಮಾನಿನಿಯಾದ ರಮೆಯ ಉಪಾಸನೆಯ ಮೂಲಕ ನನ್ನನ್ನು ಹೊಂದುವ ಪ್ರಯತ್ನವು ಆಯಾಸದಾಯಕ.

1. 'ಸಾಮ್ಯಜ್ಞಾನವಂತಃ' ಇತಿ ಕ್ವಚಿತ್

**ಅವ್ಯಕ್ತೋಪಾಸಕಾನಾಮಪಿ ತ್ವತ್ಪ್ರಾಪ್ತಿರೂಪಮೋಕ್ಷಸತ್ತ್ವೇ ಕಥಂ ತ್ವದುಪಾಸ-ಕಾನಾಂ ಉತ್ತಮತೇತ್ಯತ ಆಹ- ಕ್ಲೇಶ ಇತಿ ॥ ಅವ್ಯಕ್ತೇ ವಿಷ್ಣುಂ ವಿನಾಕೃತಶ್ರೀತತ್ತ್ವೇ ಆಸಕ್ತಚಿತ್ತಾನಾಂ ತೇಷಾಂ ಕ್ಲೇಶಃ ಅಧಿಕತರಃ ಅತ್ಯಂತಾಧಿಕಃ । ಕಥಮಿತ್ಯತ ಆಹ- ಅವ್ಯಕ್ತಾ ಹೀತಿ ॥ ಗತಿಶಬ್ದೋ ಗಮ್ಯತೇऽನೇನೇತಿ ಕರಣವ್ಯುತ್ಪತ್ತ್ಯಾ ಮಾರ್ಗ-ಪರಃ । ಅವ್ಯಕ್ತಶಬ್ದಸ್ತದುಪಾಸನಂ ಲಕ್ಷಯಿತ್ವಾ ತದ್ದ್ವಾರಕಲಕ್ಷಕಃ । ಅವ್ಯಕ್ತೋ-ಪಾಸನದ್ವಾರಕೋ ಭಗವತ್ಪ್ರಾಪ್ತಿಮಾರ್ಗಃ ದುಃಖಂ ಯಥಾ ಭವತಿ ತಥಾ ದೇಹವದ್ಭಿರವಾಪ್ಯತೇ ಹಿ । ಪ್ರಾಗುಕ್ತಪರಿಶಬ್ದಾರ್ಥಪೂರ್ವಕಮುಪಾಸನಂ ಇಂದ್ರಿಯಗ್ರಾಮಾತಿನಿಯಮನಂ, ಷಷ್ಠೋಕ್ತಪ್ರಕಾರೇಣ ಸರ್ವತ್ರ ಸಮಬುದ್ಧಿತ್ವಂ ಸರ್ವಭೂತಹಿತಕರತ್ವಂ ಸುಷ್ಠ್ವಾಚಾರಂ ಚ ವಿನಾ ನ ದೇವೀಪ್ರಸಾದಃ । ತೇನ ವಿನಾ ನೇಶ್ವರಪ್ರಸಾದಃ । ತೇನ ವಿನಾ ನ ತತ್ಪ್ರಾಪ್ತಿರಿತಿ ತದುಪಾಸ್ತಿದ್ವಾರಕಭಗವತ್ಪ್ರಾಪ್ತಿ-ಮಾರ್ಗಸ್ಯ ಕ್ಲೇಶತರತ್ವಂ ಧ್ಯೇಯಮ್ ॥ 5 ॥**

**ಅನುವಾದ-** ಅವ್ಯಕ್ತ (ಶ್ರೀ) ಉಪಾಸಕರಿಗೂ ನಿನ್ನನ್ನು ಹೊಂದುವ ಮುಕ್ತಿಯು ಲಭ್ಯವಾದರೆ, ನಿನ್ನ ಉಪಾಸಕರೇ ಶ್ರೇಷ್ಠರೆಂಬುದು ಹೇಗೆ ? ಎಂಬ ಪ್ರಶ್ನೆಗೆ '**ಕ್ಲೇಶಃ ಅಧಿಕತರಃ**' ಎಂಬ ಶ್ಲೋಕ ಉತ್ತರಿಸುತ್ತಿದೆ. '**ಅವ್ಯಕ್ತಾಸಕ್ತಚೇತಸಾಮ್**' ವಿಷ್ಣುವನ್ನು ಆರಾಧಿಸದೆಯೇ ಕೇವಲ ಶ್ರೀದೇವಿಯ ಆರಾಧಕರಿಗೆ '**ಕ್ಲೇಶಃ**' ಸಮಸ್ಯೆಯು '**ಅಧಿಕತರಃ**' ಅತಿಹೆಚ್ಚು. ಹೇಗೆಂದರೆ , ಅವ್ಯಕ್ತೋಪಾಸನೆಯ ಮೂಲಕ ವಿಷ್ಣುವನ್ನು ಹೊಂದುವ ಮಾರ್ಗವು ಅತಿದುಃಖದಾಯಕ. '**ಅವ್ಯಕ್ತಾ ಹಿ ಗತಿಃ**' ಎಂಬಲ್ಲಿ '**ಗಮ್ಯತೇ ಅನೇನ ಇತಿ ಗತಿಃ**' ಎಂಬ ಕರಣ ವ್ಯುತ್ಪತ್ತಿಯಿಂದ ಗತಿಶಬ್ದವು ಮಾರ್ಗಪರ ವಾಗಿದೆ. 'ಅವ್ಯಕ್ತಾ' ಎಂಬ ಶಬ್ದವು ಅವ್ಯಕ್ತೋಪಾಸನೆಯ ಮೂಲಕ ಶ್ರೀಹರಿಯನ್ನು ತಲುಪುವ ಮಾರ್ಗಪರವಾಗಿದೆ ಈ ಮಾರ್ಗದಲ್ಲಿ ಸಾಧಕರಿಗೆ ಬಹುದುಃಖವಿದೆ. ಹಿಂದೆ '**ಪರ್ಯು-ಪಾಸತೇ**' (12.3) ಎಂಬಲ್ಲಿ '**ಪರಿ**' ಎಂಬ ಉಪಸರ್ಗದಿಂದ ವಿವೃತವಾದ ಉಪಾಸನೆಯು ಬೇಕು . ಸಕಲೇಂದ್ರಿಯ ನಿಯಮನ ಬೇಕು, ಷಷ್ಠಾಧ್ಯಾಯದಲ್ಲಿ ತಿಳಿಸಿದಂತೆ ಎಲ್ಲೆಡೆ ಸಮ ಬುದ್ಧಿಯನ್ನು ಹೊಂದಿರಬೇಕು. ಸರ್ವಭೂತಗಳಲ್ಲಿ ಹಿತಸಾಧನಾದೃಷ್ಟಿ , ಪರಿಶುದ್ಧವಾದ ಆಚಾರ ಇವುಗಳಿಲ್ಲದೇ ಶ್ರೀದೇವಿಯ ಪ್ರಸನ್ನತೆ ಆಗುವುದಿಲ್ಲ, ಶ್ರೀದೇವಿಯ ಅನುಗ್ರಹವಿಲ್ಲದೆ ಶ್ರೀಹರಿಯ ಪ್ರಸಾದವಿಲ್ಲ. ಅವನ ಅನುಗ್ರಹವಿಲ್ಲದೇ ಅವನನ್ನು ಹೊಂದುವುದು ಸಾಧ್ಯವೇ ಇಲ್ಲ. ಈ ಹಿನ್ನೆಲೆಯಲ್ಲಿ ಶ್ರೀದೇವಿಯ ಉಪಾಸನೆಯ ಮೂಲಕ ಪರಮಾತ್ಮನನ್ನು ಹೊಂದುವ ಮಾರ್ಗವು ಅತಿ ಕ್ಲೇಶದಾಯಕ. (ಅಧಿಕತರಃ ಎಂಬಲ್ಲಿರುವ ತರಪ್ ಪ್ರತ್ಯಯವು ಈ ಮಾರ್ಗವು ಅತ್ಯಂತ ಕ್ಲೇಶದಾಯಕವೆಂದು ತಿಳಿಸುತ್ತಿದೆ.) ॥ 5 ॥

## ಸಾಧನೆಯಲ್ಲಿ ನ್ಯೂನತೆಗಳಿದ್ದರೂ ಹರಿ ಕೃಪೆ ತೋರುವನು ಅನನ್ಯ ಭಕ್ತರಿಗೆ

**ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥ 6 ॥**

ಅರ್ಥ- ಯಾರು ಸಕಲ ಕರ್ಮಗಳನ್ನು ನನ್ನ ಪೂಜಾರೂಪವೆಂದು ಚಿಂತಿಸಿ, ನಾನೇ ಮಾಡಿಸುವನೆಂದು ತಿಳಿದು, ಶ್ರೀದೇವಿ ಮೊದಲಾದವರನ್ನು ನನ್ನ ಪರಿವಾರರೆಂದು ಅನುಸಂಧಾನ ಗೈದು ಅಲ್ಪವಾಗಿಯಾದರೂ ಉಪಾಸಿಸುವರೋ (ಅವರನ್ನು ನಾನು ಬಹುಬೇಗ ಉದ್ಧರಿಸುತ್ತೇನೆ.)

**ಮದುಪಾಸನೇ ನ ತಥಾ ಕ್ಲೇಶ ಇತ್ಯಾಹ- ಯೇ ತ್ವಿತಿ ॥ ಪೂರ್ವಸ್ಮಾದ್-ವೈಲಕ್ಷಣ್ಯದ್ಯೋತಕಸ್ತುಶಬ್ದಃ । ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಸರ್ವಸ್ವತಂತ್ರೋ ಹರಿರೇವ ಮಯಿ ಸ್ಥಿತ್ವಾ ಸ್ವಪೂಜಾತ್ವೇನ ಕರ್ಮಾಣಿ ಸ್ವಾಧೀನ-ಕರ್ತ್ರಾ ಮಯಾ ಕಾರಯತೀತ್ಯನುಸಂಧಾಯ ಸಮರ್ಪ್ಯೇತಿ ವಾ । ಮತ್ಪರಾಃ ಅಹಮೇವೋತ್ತಮ ಇತಿ ಜಾನಂತಃ ಅನನ್ಯೇನೈವ ಯೋಗೇನ ಅವ್ಯಕ್ತೋಪಾಸನಾಂ ವಿನಾ ಕೃತೇನ ಧ್ಯಾನೇನ । ಕೇವಲಮದ್ವಿಷಯಧ್ಯಾನೇನಾಪೀತಿ ಯಾವತ್ । ಮಾಂ ಧ್ಯಾಯಂತ ಉಪಾಸತೇ । ಅತ್ರ ಉಪಾಸತ ಇತ್ಯುಕ್ತ್ವಾ ಪರ್ಯುಪಾಸತ ಇತ್ಯುಕ್ತಾವ್ಯಕ್ತೋಪಾಸನಮಿವ ನಾತಿಶಯಿತೋಪಾಸನಮ್ । ಅತೀವೇಂದ್ರಿಯ-ನಿಯಮನಾದಿಕಂ ಮತ್ಪ್ರಸಾದೇ ನಾಪೇಕ್ಷಿತಮಿತಿ ನ ಕ್ಲೇಶ ಇತಿ ಸೂಚಿತಮ್ । ತಥಾ 'ನ ಚಿರಾತ್ 'ಇತ್ಯನೇನಾವ್ಯಕ್ತಾಪರೋಕ್ಷೇ ಯಾವಾನ್ ಪ್ರಯಾಸಸ್ತಾವತಾ ಯದಿ ಮಾಮುಪಾಸತೇ ತದೂನೇನ ವಾ ತದಾ ಮದಪರೋಕ್ಷಮೇವ ಭವತೀ-ತ್ಯತೋಽಪಿ ನ ಕ್ಲೇಶ ಇತಿ ಸೂಚಿತಮ್ । ತೇಷಾಮಹಂ ಸಮುದ್ಧರ್ತಾ ಭವಾಮೀತ್ಯನೇನೇಂದ್ರಿಯಸಂಯಮಾದ್ಯೂನಭಾವೇಽಪಿ ದೇವೀವದ್ದೇವೋ ನೋಪೇಕ್ಷತೇ ಕಿಂತು ತಾನಿ ಸಾಧನಾನಿ ಭಕ್ತಿಮತಃ ಸ್ವಯಮೇವಾಪ್ರಯತ್ನೇನ ದದಾತೀತಿ ಚಾತಿಸೌಕರ್ಯಂ ಭಕ್ತಾನಾಂ ಭಗವದುಪಾಸನೇ ಇತಿ ಭಾವಃ । ಯದ್ವಾ 'ಕ್ಲೇಶೋಽಧಿಕತರ' ಇತಿ ಶ್ಲೋಕೇ ಅವ್ಯಕ್ತೋಪಾಸ್ತಿಮಾರ್ಗಸ್ಯ ಕ್ಲೇಶತರತ್ವೋಕ್ತ್ಯೈವ ಸುಷ್ಠ್ವಾಚಾರಾದೇರೂನತ್ವೇಽಪಿ ಮತ್ಪ್ರಸಾದೋ ಭವತ್ಯೇವೇತ್ಯಕ್ಲೇಶತ್ವಾದ್ ಮದುಪಾಸ್ತಿಮಾರ್ಗ ಏವ ಶ್ರೇಷ್ಠ ಇತಿ ತಾತ್ಪರ್ಯಗತ್ಯೋಕ್ತಪ್ರಾಯತ್ವಾದ್ ಹೇತ್ವಂತರೇಣಾಪಿ ಭಗವದುಪಾಸ್ತಿಮಾರ್ಗಃ ಶ್ರೇಷ್ಠ ಇತ್ಯಾಹ- ಯೇ ತ್ವಿತಿ ॥ ಪೂರ್ವಾರ್ಧಸ್ಯ ಪ್ರಾಗಿವಾರ್ಥಃ । ಅನನ್ಯೇನೈವ । ಅನ್ಯಶಬ್ದೋ ಲಕ್ಷ್ಮ್ಯಾದ್ಯನ್ಯ-**

**ದೇವತಾವಾಚೀ ಸನ್ ತನ್ನಿಷ್ಠಸ್ವಾತಂತ್ರ್ಯಪರಿವಾರತ್ವವಿಷಯ(ಕ)ಪರಃ । ಸ ನ ಭವತೀತ್ಯನನ್ಯಃ । ತೇನ ಯೋಗೇನ ಧ್ಯಾನೇನ ಭಗವದಧೀನತಯಾ ತತ್ಪರಿವಾರತ್ವೇನ ಲಕ್ಷ್ಮೀಬ್ರಹ್ಮಾದಿಸಹಿತೇನ ಧ್ಯಾನಯೋಗೇನೇತಿ ಯಾವತ್ । 'ಓಂ ಅಂಗಾವ ಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಮ್ ಓಂ'(3-3-57) ಇತ್ಯಾದಿ ಸೂತ್ರಾತ್ ಮಾಂ ಧ್ಯಾಯಂತ ಉಪಾಸತೇ ॥ 6 ॥**

**ಅನುವಾದ-** ನನ್ನ ಉಪಾಸನೆ ಮಾಡುವಲ್ಲಿ ಹೆಚ್ಚಿನ ಕ್ಲೇಶವಿಲ್ಲವೆಂದು ಶ್ರೀ ಕೃಷ್ಣನು ಉಪದೇಶಿಸುತ್ತಿರುವನು- **'ಯೇ ತು'** ಎಂಬ ಶ್ಲೋಕದಲ್ಲಿ, ಶ್ರೀತತ್ತ್ವೋಪಾಸನೆಗಿಂತ ವೈಲಕ್ಷಣ್ಯವನ್ನು ತಿಳಿಸಲು **'ತು'** ಶಬ್ದವಿದೆ. **'ಯೇ ತು ಸರ್ವಾಣಿ ಕರ್ಮಾಣಿ ಮಯಿ ಸನ್ನ್ಯಸ್ಯ'**- ಯಾರು ಎಲ್ಲ ಕರ್ಮಗಳನ್ನು ಸರ್ವತಂತ್ರಸ್ವತಂತ್ರನಾದ ಶ್ರೀಹರಿಯೇ ನನ್ನಲ್ಲಿದ್ದು, (ಜೀವನಲ್ಲಿದ್ದು) ತನ್ನ (ಶ್ರೀಹರಿ) ತನ್ನ ಪೂಜಾರೂಪವಾಗಿ ಕರ್ಮಗಳನ್ನು ತನ್ನ ಅಧೀನನಾದ ಜೀವನಿಂದ ಮಾಡಿಸುತ್ತಿರುವನೆಂದು ಅನುಸಂಧಾನಗೈದು ಅಥವಾ ಅವನಲ್ಲಿ ಸಮರ್ಪಿಸಿ, **'ಮತ್ಪರಾಃ'** ನಾನೇ ಉತ್ತಮನೆಂದು ತಿಳಿಯುತ್ತ **'ಅನನ್ಯೇನೈವ ಯೋಗೇನ'** ಶ್ರೀತತ್ತ್ವೋಪಾಸನೆಯನ್ನು ತೊರೆದು ಕೇವಲ ಹರಿಯ ಧ್ಯಾನದಿಂದ **'ಮಾಂ ಧ್ಯಾಯಂತ ಉಪಾಸತೇ'** ನನ್ನನ್ನು ಧ್ಯಾನದ ಮೂಲಕ ಉಪಾಸಿಸುವರೋ, (ಅವರನ್ನು ಶ್ರೀಘ್ರವಾಗಿ ಸಂಸಾರದಿಂದ ಉದ್ಧರಿಸುವೆನು) .

ಇಲ್ಲಿ 'ಉಪಾಸತೇ' ಎಂಬ ಪದಪ್ರಯೋಗದ ಮೂಲಕ ಶ್ರೀಕೃಷ್ಣನು, ಹಿಂದೆ ಬಂದ ಶ್ರೀದೇವಿಯ ಉಪಾಸನೆಗೆ ಸಂಬಂಧಿಸಿದಂತೆ **'ಪರ್ಯುಪಾಸತೇ'** ಎಂಬಲ್ಲಿ **'ಪರಿ'** ಉಪಸರ್ಗದ ಮೂಲಕ ಸೂಚಿಸಿದ ಅತಿಶಯಿತವಾದ ಉಪಾಸನೆಯ ಅಗತ್ಯವಿಲ್ಲವೆಂದು ತಿಳಿಸುತ್ತಿರುವನು. ಇದರಂತೆ ಶ್ರೀದೇವಿಯ ಉಪಾಸನೆಗೆ ಅಗತ್ಯವಿರುವಷ್ಟು ಇಂದ್ರಿಯಜಯವು ಹರಿಯ ಒಲುಮೆಗೆ ಅನಗತ್ಯವೆಂದು ನಾರಾಯಣೋಪಾಸನಾಮಾರ್ಗವು ಕ್ಲೇಶರಹಿತವೆಂದು ತಿಳಿಸುತ್ತಿರುವನು.

**'ನಚಿರಾತ್'** (12.7) ಎಂಬ ವಾಕ್ಯವಿನ್ಯಾಸದಿಂದ ಅವ್ಯಕ್ತತತ್ತ್ವೋಪಾಸನೆಯಲ್ಲಿ ಎಷ್ಟು ಶ್ರಮವಿದೆಯೋ ಅಷ್ಟರಿಂದಲಾಗಲೀ ಅಥವಾ ಅದಕ್ಕಿಂತ ಸ್ವಲ್ಪ ಕಡಿಮೆ ಪ್ರಯಾಸ ದಿಂದಲಾಗಲೀ ನನ್ನ ಸಾಕ್ಷಾತ್ಕಾರವೇ ದೊರಕುವುದರಿಂದ ಈ ಮಾರ್ಗವು **'ಕ್ಲೇಶದಾಯಕವಲ್ಲ'** ಎಂದು ತಿಳಿಸಲಾಗಿದೆ.

**'ತೇಷಾಮಹಂ ಸಮುದ್ಧರ್ತಾ ಭವಾಮಿ'** (12.7) ಎಂಬ ವಚನದಿಂದ ಕೃಷ್ಣನು, ಸ್ವಲ್ಪಮಟ್ಟಿಗೆ ಇಂದ್ರಿಯ ಸಂಯಮನವೇ ಮೊದಲಾದ ಸಾಮಗ್ರಿಗಳ ಕೊರತೆ ಇದ್ದರೂ, ಶ್ರೀದೇವಿಯಂತೆ ನಾರಾಯಣನು ಭಕ್ತರನ್ನು ತ್ಯಜಿಸುವುದಿಲ್ಲ, ಭಕ್ತಿ ಉಳ್ಳ ಉಪಾಸಕನಿಗೆ ತಾನೇ

ಆ ಸಾಧನಗಳನ್ನು ಅಪ್ರಯತ್ನವಾಗಿ ಕೊಡುತ್ತಾನೆ .ಆದ್ದರಿಂದ ಶ್ರೀಹರಿಯ ಉಪಾಸನೆಗೆ ಹೆಚ್ಚು ಸೌಕರ್ಯವಿದೆ .

ಅಥವಾ **'ಕ್ಲೇಶೋಽಧಿಕತರಃ'** ಎಂಬ ಶ್ಲೋಕದಲ್ಲಿ ಅವ್ಯಕ್ತೋಪಾಸನಾಮಾರ್ಗವು ಕ್ಲೇಶದಾಯಕವೆಂದು ತಿಳಿಸಿದ್ದರಿಂದಲೇ, ಸ್ವಲ್ಪ ಸದಾಚಾರಾದಿಗಳ ಊನತೆ ಇದ್ದರೂ ತನ್ನ ಪ್ರಸಾದ ದೊರಕುವುದೆಂದು ಶ್ರೀಕೃಷ್ಣನು ಕ್ಲೇಶದಾಯಕವಲ್ಲದ ನನ್ನ ಉಪಾಸನೆಯೇ ಶ್ರೇಷ್ಠವೆನ್ನುತ್ತಿದ್ದಾನೆ ಎಂದು ತಾನಾಗಿಯೇ ತಿಳಿದು ಬರುವುದು. ಅದರಿಂದ, ಶೀಘ್ರ ಮುಕ್ತಿದಾಯಕವಾಗಿದೆ ಎಂಬ ಇನ್ನೊಂದು ಕಾರಣದಿಂದಲೂ ತನ್ನ ಉಪಾಸನೆಯೇ ಶ್ರೇಷ್ಠವೆಂದು **'ಯೇ ತು'** ಎಂಬ ಶ್ಲೋಕದಲ್ಲಿ ತಿಳಿಸುತ್ತಿರುವನು ಎಂದು ತಿಳಿಯಬೇಕು.

ಪೂರ್ವಾರ್ಧದ ಆಶಯವನ್ನೂ ಹಿಂದಿನಂತೆಯೇ . **'ಅನನ್ಯೇನೈವ ಯೋಗೇ ನ'** ಎಂಬಲ್ಲಿ **'ಅನ್ಯ'** ಶಬ್ದವು ಲಕ್ಷ್ಮೀ ಮೊದಲಾದ ದೇವತೆಗಳನ್ನು ತಿಳಿಸುತ್ತದೆ. ಅವರಲ್ಲಿ ಸ್ವಾತಂತ್ರ್ಯವನ್ನೂ ಹರಿ ಪರಿವಾರದವರಲ್ಲ ಎಂಬ ಭಾವನೆಯನ್ನೂ ತಾಳದಿರುವುದೇ 'ಅನನ್ಯಭಾವ 'ವೆನಿಸಿದೆ. ಹೀಗೆ ಲಕ್ಷ್ಮೀ ಮೊದಲಾದ ದೇವತೆಗಳು ಸ್ವತಂತ್ರರಲ್ಲ ಮತ್ತು ಹರಿದಾಸರು (ಹರಿಪರಿವಾರ) ಎಂಬ ಭಾವನೆಯೊಂದಿಗೆ, ಅಂಗಾವಬದ್ಧಾಸ್ತು **'ನ ಶಾಖಾಸು ಹಿ ಪ್ರತಿವೇದಮ್'** (ಬ್ರ.ಸೂ.3.3.57) ಎಂಬ ಸೂತ್ರ ತಿಳಿಸಿದಂತೆ ಉಪಾಸಿಸುವವರು ನನ್ನನ್ನು ಹೊಂದುತ್ತಾರೆ.

**ವಿವರಣೆ- 'ಅಂಗಾವಬದ್ಧಾಸ್ತು'** ಎಂಬ ಸೂತ್ರದ ಸಾರ ಹೀಗಿದೆ- ಹರಿಯ ಕಣ್ಣು-ಕಿವಿ-ಹೃದಯ ಮುಂತಾದ ಅಂಗಗಳಲ್ಲಿ ಆಶ್ರಯಪಡೆದ ದೇವತೆಗಳನ್ನು ಹರಿಪರಿವಾರರೆಂದೇ ಉಪಾಸನೆ ಮಾಡಬೇಕು. ಉತ್ತಮ ದೇವತೆಗಳ ಗುಣಗಳನ್ನು ಕೆಳಗಿನ ಕಕ್ಷೆಯ ದೇವತೆಗಳಲ್ಲಿ ಉಪಾಸನೆ ಮಾಡಬಾರದು . ಕೆಳಗಿನ ಕಕ್ಷೆಯ ದೇವತೆಗಳ ಗುಣಗಳನ್ನು ಉತ್ತಮ ದೇವತೆಗಳಲ್ಲಿ ಉಪಾಸನ ಮಾಡಬಹುದು .

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್ ॥ 7 ॥**

**ಅರ್ಥ** - ಲಕ್ಷ್ಮೀಸಹಿತನಾದ ನನ್ನಲ್ಲಿ ಬಗೆಯನ್ನು ನೆಲೆಗೊಳಿಸಿದವರನ್ನು ಮರಣ ರೂಪವಾದ ಸಂಸಾರಸಾಗರದಿಂದ ಬಹುಬೇಗ ಉದ್ಧರಿಸುತ್ತೇನೆ.

**ತೇಷಾಂ ಮಯ್ಯಾವೇಶಿತಚೇತಸಾಮಹಂ ಮೃತ್ಯುಸಂಸಾರಸಾಗರಾತ್ ಮೃತ್ಯು - ರೂಪಸಂಸಾರಸಮುದ್ರಾನ್ನ ಚಿರಾಚ್ಛೀಘ್ರಂ ಸಮುದ್ಧರ್ತಾ ಭವಾಮೀತ್ಯರ್ಥಃ । ಅತ್ರ ನಚಿರಾದಿತ್ಯುಕ್ತ್ಯಾ ಶ್ರಿಯಾ ಸಹ ಭಗವದುಪಾಸನೇ ದ್ವಯೋರಪಿ ಪರಮಪ್ರಸಾದ-**

**ಸಂಭವೇನ ಅಚಿರಾನ್ಮೋಕ್ಷೋ ಭವತಿ । ಪೃಥಗವ್ಯಕ್ತೋಪಾಸನಪಕ್ಷೇ ತು ಪೂರ್ವಂ ಕಿಂಚಿದ್‌ಭಗವದುಪಾಸನಂ ಕೃತ್ವಾ ಬಹುಕಾಲಂ ಪೃಥಕ್ ಶ್ರಿಯಮುಪಾಸ್ಯ ಪುನಃ ಶ್ರಿಯಾ ಸಹ ಭಗವದುಪಾಸನಂ ತು ನಿರಂತರಂ ಕಾರ್ಯಮ್ । ತತೋ ಮುಕ್ತಿರಿತಿ ಚಿರೇಣೈವ ಭವತೀತ್ಯತೋಽಚಿರೇಣ ಮುಕ್ತಿಹೇತುತ್ವಾಚ್ಚ ಭಗವದುಪಾಸನ-ಮೇವಾಧಿಕಮಿತ್ಯುಕ್ತಂ ಭವತಿ । ತದುಕ್ತಮ್ । 'ವಿಷ್ಣುನಾ ಸಹಿತಾ ಧ್ಯಾತಾ ಸಾಽಪಿ ತುಷ್ಟಿಂ ಪರಾಂ ವ್ರಜೇತ್' ಇತ್ಯಾದಿ ॥ 7 ॥**

**ಅನುವಾದ-** ನನ್ನಲ್ಲಿ ಮನಸ್ಸನ್ನು ಇಟ್ಟ ಸಾಧಕರಿಗೆ ಮರಣರೂಪವಾದ ಸಂಸಾರ-ಸಾಗರದಿಂದ ಬಹುಬೇಗ ಉದ್ಧರಿಸುವೆನು. ಇಲ್ಲಿ '**ನ ಚಿರಾತ್**' ಎಂದು ಹೇಳಿದ್ದರಿಂದ, (ಶ್ರೀದೇವಿಯನ್ನು )ಪರಮಾತ್ಮನ ಜೊತೆಗೆ ಉಪಾಸನೆ ಮಾಡಿದಲ್ಲಿ , ಈರ್ವರ ಪರಮಾ-ನುಗ್ರಹವೂ ದೊರಕಿ ಶೀಘ್ರವಾಗಿ ಮುಕ್ತಿ ದೊರಕುವುದು. ಪ್ರತ್ಯೇಕವಾಗಿ ಶ್ರೀದೇವಿಯ ಉಪಾಸನೆ ಮಾಡುವುದಾದರೆ ಮೊದಲು ಸ್ವಲ್ಪಕಾಲ ನಾರಾಯಣನ ಉಪಾಸನೆ ಮಾಡಿ, ನಂತರ ಬಹುಕಾಲ ಪ್ರತ್ಯೇಕವಾಗಿ ಶ್ರೀದೇವಿಯ ಉಪಾಸನೆಗೈದು, ಮತ್ತು ನಾರಾಯಣನೊಡನೆ ಶ್ರೀದೇವಿಯ ಉಪಾಸನೆ ಬಹುಕಾಲ ಮಾಡಬೇಕು. ಅನಂತರ ಮುಕ್ತಿ ದೊರಕುವುದು. ಹೀಗೆ ಪ್ರತ್ಯೇಕ ಶ್ರೀತತ್ತ್ವೋಪಾಸನೆಯಿಂದ ಮುಕ್ತಿ ವಿಲಂಬವಾಗಿ ದೊರಕುವುದು. ನಾರಾಯಣನ ಜೊತೆಗೆ ಅಪ್ರಧಾನಳಾಗಿ ಸಿರಿದೇವಿಯನ್ನು ಉಪಾಸಿಸಿದರೆ, ಶೀಘ್ರವೇ ಮುಕ್ತಿ ದೊರಕುವುದರಿಂದ ಶ್ರೀಹರಿಯ ಉಪಾಸನೆಯೇ ಶ್ರೇಷ್ಠವೆನಿಸಿದೆ. ಈ ಅಂಶವು '**ವಿಷ್ಣುನಾ ಸಹಿತಾ ಧ್ಯಾತಾ ಸಾಽಪಿ ತುಷ್ಟಿಂ ಪರಾಂ ವ್ರಜೇತ್**' ಪ್ರಮಾಣಸಿದ್ಧವಾಗಿದೆ. ಈ ಪ್ರಮಾಣವಚನವು, ವಿಷ್ಣುವಿನ ಜೊತೆಗೆ ಪರಿವಾರ ಎಂಬ ಭಾವದಿಂದ ಸಿರಿದೇವಿಯನ್ನು ಉಪಾಸಿಸಿದರೆ ಅವಳು ಅತ್ಯಂತ ಸಂತುಷ್ಟಳಾಗುವಳೆಂದು ಸಾರುತ್ತಿದೆ. ॥ 7 ॥

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ 8 ॥**

**ಅರ್ಥ-** ನನ್ನಲ್ಲಿಯೇ ಮನಸ್ಸಿಡು. ಅದಾಗದಿದ್ದರೆ ನಿರ್ಣಯಾತ್ಮಕವಾದ ಬುದ್ಧಿಯನ್ನು ನನ್ನಲ್ಲಿಡು. (ಜ್ಞಾನ ಸಂಪಾದಿಸು) ನನ್ನನ್ನು ಪಡೆದ ನಂತರ (ಸಾಕ್ಷಾತ್ಕರಿಸಿಕೊಂಡ ಮೇಲೆ) ಮುಕ್ತಿ ಹೊಂದುವಿ.

**ಏವಮುಕ್ತದಿಶಾ ಭಗವದುಪಾಸ್ತೇರೇವೋತ್ತಮತ್ವಾತ್ ತದೇವ ಕುರು । ತದಶಕ್ತೌ ತತ್ಸಿದ್ಧ್ಯರ್ಥಂ ಉಪಾಯಾಂತರಾಣಿ ಸಂಪಾದಯೇತ್ಯಾಹ- ಮಯೀ-ತ್ಯಾದಿಚತುಷ್ಟಯೇನ ॥ ಮಯ್ಯೇವ ಮನ ಆಧತ್ಸ್ವ ಆಧೇಹಿ ಮಾಮುಪಾಸ್ವೇತಿ**

**ಯಾವತ್ । ತದಲಾಭೇ ಮಯಿ ಬುದ್ಧಿಂ ನಿವೇಶಯ । ಮದ್ವಿಷಯಂ ಜ್ಞಾನಂ ಸಂಪಾದಯ । ಅತ ಊರ್ಧ್ವಂ ಮತ್ಸಂಪತ್ತ್ಯನಂತರಂ ಮಯ್ಯೇವ ನಿವಸಿಷ್ಯಸಿ ನಿರ್ದುಃಖಾನಂದಾನುಭವಾತ್ಮಿಕಾಂ ಸ್ಥಿತಿಂ ಪ್ರಾಪ್ಸ್ಯಸಿ ॥ 8 ॥**

**ಅನುವಾದ-** ಹೀಗೆ ಹಿಂದೆ ತಿಳಿಸಿದಂತೆ ಪರಮಾತ್ಮನ ಉಪಾಸನೆಯು ಅತ್ಯುತ್ತಮ-ವಾದುದರಿಂದ ಅದನ್ನೇ ಮಾಡು. ಅದು ಸಾಧ್ಯವಾಗದ ತನಕ ಅದನ್ನು ದೊರಕಿಸಿಕೊಡುವ ಇತರ ಸಾಧನಗಳನ್ನು ಅನುಷ್ಠಾನದಲ್ಲಿರಿಸಿಕೋ, ಎಂದು 'ಮಯಿ' ಇತ್ಯಾದಿ ಮುಂದಿನ ನಾಲ್ಕು ಶ್ಲೋಕಗಳಿಂದ ಕೃಷ್ಣನು ಸಾಧನಗಳನ್ನು ಉಪದೇಶಿಸುತ್ತಿರುವನು. **'ಮಯ್ಯೇವ ಮನ ಆಧತ್ಸ್ವ'**- ನನ್ನನ್ನೇ ಉಪಾಸಿಸು . ಉಪಾಸನೆ ಸಾಧ್ಯವಾಗದಿರುವಲ್ಲಿ ನನ್ನಲ್ಲಿ ಬುದ್ಧಿಯನ್ನಿರಿಸು . ಶಾಸ್ತ್ರಗಳ ಮೂಲಕ ನನ್ನ ಜ್ಞಾನವನ್ನು ಸಂಪಾದಿಸು. ನನ್ನನ್ನು ಪಡೆದ ಮೇಲೆ ದುಃಖವಿಲ್ಲ. ನಿತ್ಯಾನಂದಾನುಭವ ವನ್ನು ಪಡೆಯುವಿ. ॥ 8 ॥

### ಅಭ್ಯಾಸ ನಿಷ್ಕಾಮಕರ್ಮಗಳು ನನ್ನನ್ನು ಹೊಂದಲು ಸಾಧನಗಳು

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಽಽಪ್ತುಂ ಧನಂಜಯ ॥ 9 ॥**

**ಅರ್ಥ-** ನನ್ನಲ್ಲಿ ಸ್ಥಿರವಾಗಿ ಮನಸ್ಸನ್ನು ಇಡಲು ಸಾಧ್ಯವಾಗದಿರುವಲ್ಲಿ ಅಭ್ಯಾಸರೂಪವಾದ ಉಪಾಯದಿಂದ ನನ್ನ ಜ್ಞಾನವನ್ನು ಸಂಪಾದಿಸಲು ಬಯಸು .

**ಅಥೇತ್ಯರ್ಥಾಂತರೇ । ಸ್ಥಿರಂ ಯಥಾ ತಥಾ ಮಯಿ ಚಿತ್ತಂ ಸಮಾಧಾತುಂ ನ ಶಕ್ನೋಷಿ । ತತೋ ಮನಃಸಮಾಧಾನಾಶಕ್ತತ್ವಾದ್‌ಪುನಃ ಪುನಃ ಪ್ರತ್ಯಾಹಾರೇಣ ಭಗವನ್ಮನಃಸಮಾಧಾನರೂಪಾಭ್ಯಾಸಲಕ್ಷಣೋಪಾಯೇನ ಮಾಮಾಪ್ತುಂ ಜ್ಞಾತುಮಿಚ್ಛ ॥ 9 ॥**

**ಅನುವಾದ-** 'ಅಥ ' ಎಂಬ ಪದವು ಇದು ಇನ್ನೊಂದು ಪ್ರಮೇಯವೆಂದು ತಿಳಿಸುತ್ತಿದೆ. ಸ್ಥಿರವಾಗಿ ನನ್ನಲ್ಲಿ ಮನಸ್ಸನ್ನು ನಿಲ್ಲಿಸಲು ಅಸಮರ್ಥನಾದರೆ, ಭೋಗವಸ್ತುಗಳಲ್ಲಿ ಚಲಿಸುವ ಮನಸ್ಸನ್ನು ಮತ್ತೆ ಮತ್ತೆ ನನ್ನಲ್ಲಿ ನೆಲೆಗೊಳಿಸುವ ಅಭ್ಯಾಸ (ಪ್ರಯತ್ನ) ರೂಪವಾದ ಉಪಾಯದಿಂದ ನನ್ನನ್ನು ತಿಳಿಯ ಬಯಸು ॥ 9 ॥

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥ 10 ॥**

**ಅರ್ಥ**- ಜ್ಞಾನ ಸಂಪಾದನೆಯಲ್ಲಿ ಪ್ರಯತ್ನ ಮಾಡುವುದಕ್ಕೂ ಅಸಮರ್ಥನಾದರೆ ನನ್ನ ಪ್ರೀತಿಗಾಗಿ ಕರ್ಮಾನುಷ್ಠಾನ ಮಾಡು. ಇದರಿಂದಲೂ ಸಿದ್ಧಿ ನಿಶ್ಚಿತ.

**ಅಭ್ಯಾಸೇऽಪ್ಯಶಕ್ತೋऽಸಿ ತದಾ ಮತ್ಕರ್ಮಪರಮಃ ಮತ್ಪ್ರೀತ್ಯರ್ಥಂ ಮದ್ವಿಷಯ-ಕರ್ಮಾನುಷ್ಠಾನಮೇವ ಪರಮಮುತ್ತಮಂ ಯಸ್ಯ ಸ ತಥಾ ತಾದೃಶೋ ಭವ । ತಾವತಾ ಕಥಮಿಷ್ಟಸಿದ್ಧಿರಿತ್ಯತ ಆಹ- ಮದರ್ಥಮಿತಿ ॥ ಕುರ್ವನ್ನಪೀತ್ಯರ್ಥಃ । ॥ 10 ॥**

**ಅನುವಾದ**- ಹಿಂದೆ ತಿಳಿಸಿದಂತೆ ಅಭ್ಯಾಸರೂಪವಾದ ಉಪಾಯವನ್ನು ರೂಢಿಸಿಕೊಳ್ಳಲು ಸಾಧ್ಯವಾಗದಿರುವಲ್ಲಿ ಶ್ರೇಷ್ಠವೆನಿಸಿದ, ಹರಿಪ್ರೀತಿಕಾರಣವಾದ ಕರ್ಮಾನುಷ್ಠಾನವನ್ನು ಮಾಡು. ನನ್ನ ಪ್ರೀತಿಗಾಗಿಯೇ ಕರ್ಮಾನುಷ್ಠಾನ ಮಾಡುವುದರಿಂದಲೂ ನೀನು ಸಿದ್ಧಿಯನ್ನು ಪಡೆಯುವೆ. ॥ 10 ॥

**ಅಥೈತದಪ್ಯಶಕ್ತೋऽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ 11 ॥**

**ಅರ್ಥ**- ವೇದೋಕ್ತಕರ್ಮಗಳನ್ನು ಎಲ್ಲವನ್ನೂ ನನ್ನ ಪ್ರೀತಿಗಾಗಿ ಮಾಡುವ ಮನೋದಾರ್ಢ್ಯ (ಶ್ರದ್ಧೆ) ಇಲ್ಲವಾದರೆ, ಇತರ ದೇವತೆಗಳ ಪ್ರೀತಿಗಾಗಿ ಮಾಡಿದ ಕರ್ಮಗಳನ್ನು ಅಂತ್ಯದಲ್ಲಿ ನನಗೆ ಸಮರ್ಪಿಸು. ಅನಂತರ ಮನಸ್ಸನ್ನು ನಿಗ್ರಹಿಸಿ ಎಲ್ಲ ಕರ್ಮಗಳ ಫಲಕಾಮನೆಯನ್ನೂ ತ್ಯಜಿಸು. (ಕರ್ಮಫಲವನ್ನು ನನಗೆ ಅರ್ಪಿಸು).

**ಅಥೇತಿ ಪ್ರಾಗ್ವತ್ । ಏತದಪಿ ಸರ್ವಾಣ್ಯಪಿ ಜಪಾರ್ಚನಾದೀನಿ ಕರ್ಮಾಣಿ ಮದುದ್ದೇಶ್ಯಕಾನಿ ಮತ್ಪ್ರೀತ್ಯರ್ಥಕಾನೀತ್ಯನುಷ್ಠಾನಮಪಿ ಕರ್ತುಮ-ಶಕ್ತೋऽಸಿ । ತರ್ಹಿ ದೇವತಾಂತರೋದ್ದೇಶೇನ ಕರ್ಮಾಣಿ ಕೃತ್ವಾऽಂತೇ ಮಯಿ ಸಮರ್ಪಣರೂಪಂ ಮದ್ಯೋಗಂ ಮತ್ಕರ್ಮವತ್ತ್ವೇ ಉಪಾಯಮ್ । ಅಂತೇ ಮಯಿ ಸಮರ್ಪಣಂ ಸರ್ವಕರ್ಮಣಾಂ ವೈಷ್ಣವತ್ವೇನ ಕರಣೇ ಯ ಉಪಾಯಸ್ತಮಾಶ್ರಿತೋ ಭವ । ತತೋ ಮದ್ಯೋಗಾತ್ ಯತಾತ್ಮವಾನ್ ನಿಯತಮನಸ್ಕಃ ಸರ್ವಕರ್ಮಫಲತ್ಯಾಗಂ ಕುರ್ವಿತ್ಯರ್ಥಃ । ಸರ್ವಪ್ರಕಾರೇಣಾಪಿ ಮದುಪಾಸನಮೇವ ತ್ವದುಪಲಕ್ಷಿತೈಃ ಸರ್ವೈಃ ಕಾರ್ಯಮಿತಿ ತಾತ್ಪರ್ಯಾರ್ಥಃ । ॥ 11 ॥**

**ಅನುವಾದ-** ಅಥ ಶಬ್ದವು ಹಿಂದಿನಂತೆಯೇ ಇದು ಇನ್ನೊಂದು ಪ್ರಮೇಯವೆಂದು ಸೂಚಿಸುತ್ತದೆ. ಜಪ-ದೇವತಾರ್ಚನೆ ಇತ್ಯಾದಿ ಎಲ್ಲ ಪುಣ್ಯಕಾರ್ಯಗಳನ್ನು ನನ್ನ ಪ್ರೀತಿಗಾಗಿ ಅನುಷ್ಠಾನ ಮಾಡಲು ಸಾಧ್ಯವಾಗದಿರುವಲ್ಲಿ, ಇತರ ದೇವತೆಗಳ ಪ್ರೀತಿಗಾಗಿ ಆಚರಿಸಿದ ಕರ್ಮಗಳನ್ನು ಅಂತಿಮವಾಗಿ ನನಗೆ ಸಮರ್ಪಿಸು. ವಿಷ್ಣುಪ್ರೀತಿಗಾಗಿ ಕರ್ಮಾನುಷ್ಠಾನ ಮಾಡುವುದೇ ಧ್ಯೇಯವಾಗಬೇಕು. ನಂತರ ಈ ಉಪಾಯದಿಂದ ಮನಸ್ಸನ್ನು ನಿಗ್ರಹಿಸಿ ಎಲ್ಲ ಕರ್ಮಗಳ ಫಲವನ್ನು ತ್ಯಜಿಸು . ಎಲ್ಲ ರೀತಿಯಿಂದಲೂ ನನ್ನ ಉಪಾಸನೆಯೇ ನಿನ್ನಂತಿರುವ (ಬದ್ಧರಾದ ಜೀವರಿಂದ) ಮಾಡಲ್ಪಡಬೇಕು. ॥ 11 ॥

## ಅಪರೋಕ್ಷ ಜ್ಞಾನಿಗೆ ಮುಕ್ತಿ

**ಶ್ರೇಯೋ ಹಿ ಜ್ಞಾನಮಭ್ಯಾಸಾದ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗಃ ತ್ಯಾಗಾಚ್ಛಾಂತಿರನಂತರಮ್ ॥ 12 ॥**

**ಅರ್ಥ-** ಅಭ್ಯಾಸಕ್ಕಿಂತ ಜ್ಞಾನವು ಶ್ರೇಷ್ಠ. ಜ್ಞಾನಸಂಪಾದನೆಗಿಂತ ಧ್ಯಾನವು ಶ್ರೇಷ್ಠ. ಸಕಾಮಧ್ಯಾನಕ್ಕಿಂತ ಕರ್ಮಫಲತ್ಯಾಗ ಪೂರ್ವನಿಷ್ಕಾಮ ಧ್ಯಾನವು ಶ್ರೇಯಸ್ಕರ. ಇದಕ್ಕಿಂತ ಅಪರೋಕ್ಷಜ್ಞಾನವು ಶ್ರೇಷ್ಠ. ಅದಕ್ಕಿಂತ ಮುಕ್ತಿ ಉತ್ತಮ.

**ಮಯೀತ್ಯಾದಿನೋಕ್ತಧ್ಯಾನಾಲಾಭೇ ಜ್ಞಾನಂ ತದಲಾಭೇಽಭ್ಯಾಸಯೋಗ ಇತ್ಯೇತತ್ಸಮರ್ಥಯತೇ- ಶ್ರೇಯೋ ಹೀತಿ ॥ ಅಜ್ಞಾನಪೂರ್ವಕಾ-ದಭ್ಯಾಸಾದ್ ಜ್ಞಾನಂ ಶ್ರೇಯಃ । ಜ್ಞಾನಮಾತ್ರಾದ್ಜ್ಞಾನಪೂರ್ವಕಧ್ಯಾನಂ ಶ್ರೇಯಃ । ತಸ್ಮಾದ್ಧ್ಯಾನಾತ್ ಜ್ಞಾನಪೂರ್ವಕಸಕಾಮಧ್ಯಾನಾದಿತ್ಯರ್ಥಃ । ಕರ್ಮಫಲತ್ಯಾಗಃ ಶ್ರೇಯಾನ್ । ಏತಾದೃಶಸಕಾಮಧ್ಯಾನಾತ್ಕರ್ಮಫಲ-ತ್ಯಾಗೋಪಲಕ್ಷಿತತಾದೃಶನಿಷ್ಕಾಮಧ್ಯಾನಂ ಶ್ರೇಯ ಇತಿ (ಧ್ಯೇಯಮ್) ಯೋಜ್ಯಮ್ । ಫಲತ್ಯಾಗಾತ್ಕರ್ಮಫಲತ್ಯಾಗೋಪಲಕ್ಷಿತನಿಷ್ಕಾಮಧ್ಯಾನಾ-ದಿತ್ಯರ್ಥಃ । ಅಪರೋಕ್ಷಜ್ಞಾನಂ ಶ್ರೇಯ ಇತಿ ಯೋಜ್ಯಮ್ । ಅನಂತರಂ ಶಾಂತಿರ್ಮೋಕ್ಷ ಇತ್ಯರ್ಥಃ ॥ 12 ॥**

**ಅನುವಾದ–** 'ಮಯ್ಯೇವ ಮನ ಆಧತ್ಸ್ವ' ಎಂಬ ಶ್ಲೋಕದಲ್ಲಿ ತಿಳಿಸಿದಂತೆ ಧ್ಯಾನ ಮಾಡಲು ಸಾಧ್ಯವಾಗದಿರುವಲ್ಲಿ, ಜ್ಞಾನವನ್ನು ಸಂಪಾದಿಸಬೇಕು. ಅದನ್ನೂ ಮಾಡಲು ಸಾಧ್ಯವಾಗದಿರುವಾಗ ಅಭ್ಯಾಸರೂಪವಾದ ಉಪಾಯವನ್ನು ಆಶ್ರಯಿಸಬೇಕೆಂದು ಹಿಂದೆ ಹೇಳಿದ ಪ್ರಮೇಯವನ್ನು ಸಮರ್ಥಿಸುತ್ತಿರುವನು – 'ಶ್ರೇಯೋ ಹಿ' ಎಂಬ ಶ್ಲೋಕದ ಮೂಲಕ.

ಅಜ್ಞಾನಪೂರ್ವಕವಾದ ಅಭ್ಯಾಸಕ್ಕಿಂತ ಜ್ಞಾನವು ಶ್ರೇಷ್ಠ . ಜ್ಞಾನಮಾತ್ರಕ್ಕಿಂತ ಜ್ಞಾನದ ಬಲದಿಂದ ನಡೆಸುವ ಧ್ಯಾನವು ಶ್ರೇಷ್ಠ. ಧ್ಯಾನಕ್ಕಿಂತ (ಸಕಾಮಧ್ಯಾನಕ್ಕಿಂತ) ಕರ್ಮಫಲತ್ಯಾಗವು ಶ್ರೇಯಸ್ಕರ. ಅಂದರೆ ಸಕಾಮಧ್ಯಾನಕ್ಕಿಂತ ಕರ್ಮಫಲತ್ಯಾಗಶಬ್ದದಿಂದ ವಿವಕ್ಷಿತವಾದ ನಿಷ್ಕಾಮ ಧ್ಯಾನವು ಶ್ರೇಷ್ಠವೆನಿಸಿದೆ. ನಿಷ್ಕಾಮಧ್ಯಾನಕ್ಕಿಂತ ಅಪರೋಕ್ಷಜ್ಞಾನವು ಶ್ರೇಷ್ಠವೆನಿಸಿದೆ. ಅದಕ್ಕಿಂತಲೂ ಮೋಕ್ಷವು ಉತ್ತಮವೆನಿಸಿದೆ. ॥ 12 ॥

## ಶ್ರೀಹರಿಯ ಅನುಗ್ರಹಸಾಧನಗಳು

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥ 13 ॥**

**ಅರ್ಥ-** ಯಾರನ್ನೂ ದ್ವೇಷಿಸದವ, ಎಲ್ಲರಲ್ಲೂ ಮೈತ್ರಿ ಹೊಂದಿದವ, ಕರುಣೆಯುಳ್ಳವನು, ಅಹಂಕಾರ-ಮಮಕಾರ ತೊರೆದವನು ಸುಖದುಃಖಗಳನ್ನು ಸಮವಾಗಿ ಸ್ವೀಕರಿಸುವವನು ಸಹನಶೀಲನು . (ನನಗೆ ಪ್ರಿಯನು)

**'ಯೇ ತು ಸರ್ವಾಣಿ ಕರ್ಮಾಣಿ' ಇತ್ಯುಕ್ತಂ ತದುಪಲಕ್ಷಿತಧರ್ಮಾಂತ-ರೋಕ್ತ್ಯಾ ಪ್ರಪಂಚಯತಿ- ಅದ್ವೇಷ್ಟೇತ್ಯಾದಿನಾ ॥ 'ಅದ್ವೇಷ್ಟಾ' ಅಪ್ರಿಯಮ್ ಅಕುರ್ವನ್ । ಕ್ಲೇಶಸ್ಥಾನಂ ನಿರೂಪ್ಯ ತತೋ ರಕ್ಷಿತಾ 'ಮೈತ್ರಃ' । 'ಕರುಣಃ' ಕೃಪಾ-ವಾನ್ । 'ನಿರ್ಮಮಃ' ಮಮೇದಮಿತಿ ಸ್ವಾತಂತ್ರ್ಯಬುದ್ಧಿಹೀನಃ । 'ನಿರಹಂಕಾರಃ' ಅವಿದ್ಯಮಾನಾತ್ಮಗುಣಾಭಿಮಾನಮೋಹಹೀನಃ । ಹೇಯತಯಾ ದುಃಖಸಮಂ ವೈಷಯಿಕಸುಖಂ ಯಸ್ಯ ಸ ಸಮದುಃಖಸುಖಃ । ಕ್ಷಮೀ ಸಹಿಷ್ಣುಃ ॥ 13 ॥**

**ಅನುವಾದ- 'ಯೇ ತು ಸರ್ವಾಣಿ ಕರ್ಮಾಣಿ'** (12.6) ಎಂಬಲ್ಲಿ ಹೇಳಿದ್ದನ್ನು ಪರಮಾತ್ಮನ ಅನುಗ್ರಹಕ್ಕೆ ಕಾರಣವಾದ ಬೇರೆ ಸಾಧನಗಳೊಂದಿಗೆ **'ಅದ್ವೇಷ್ಟಾ'** ಇತ್ಯಾದಿ ಶ್ಲೋಕಗಳಿಂದ ವಿವರಿಸುತ್ತಿರುವನು.

**'ಅದ್ವೇಷ್ಟಾ'**- ಅಪ್ರಿಯ ಮಾಡದವನು **'ಮೈತ್ರಃ'**- ಬರಲಿರುವ ಆಪತ್ತನ್ನು ಮೊದಲೇ ತಿಳಿದು ರಕ್ಷಿಸುವವನು. **'ಕರುಣಃ'** - ಕೃಪೆಯುಳ್ಳವನು **'ನಿರ್ಮಮಃ'**- ಇದು ನನ್ನದು ಎಂಬ ಸ್ವಾತಂತ್ರ್ಯ ಬುದ್ಧಿ ತೊರೆದವನು **'ನಿರಹಂಕಾರಃ'**- ತನ್ನಲ್ಲಿ ಇಲ್ಲದ ಗುಣಗಳ ಬಗೆಗೆ ಅಭಿಮಾನ ಮತ್ತು ಭ್ರಮೆಗಳಿಲ್ಲದವನು. (ತನ್ನ ಇತಿ-ಮಿತಿಗಳನ್ನು ಸರಿಯಾಗಿ ಅರಿತವನು) **'ಸಮದುಃಖಸುಃಖಃ'**- ದುಃಖವು ಹೇಗೆ ತ್ಯಾಜ್ಯವೋ ಹಾಗೆಯೇ ವಿಷಯಸುಖವೂ ಹೇಯ (ತ್ಯಾಜ್ಯ)ವೆಂದು ಅರಿತವನು **'ಕ್ಷಮೀ'**- ಕ್ಷಮಾಗುಣವುಳ್ಳವನು. ॥ 13 ॥

**ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ ॥ 14 ॥**

**ಅರ್ಥ**- ಯಾವಾಗಲೂ ಸಂತುಷ್ಟ ಚಿತ್ತನು, ಸದಾ ಜ್ಞಾನಸಾಧನಗಳನ್ನು ಅನುಷ್ಠಾನ ಮಾಡುವವನು, ಮನೋನಿಗ್ರಹಸಂಪನ್ನನು, ತತ್ತ್ವನಿರ್ಣಯವುಳ್ಳವನು, ನನ್ನಲ್ಲಿ ಮನಸ್ಸು-ಬುದ್ಧಿಗಳನ್ನು ನೆಲೆಗೊಳಿಸಿದವನು ಇಂಥ ಯಾವ ಭಕ್ತನಿರುವನೋ ಅವನು ನನಗೆ ಪ್ರಿಯನು.

**'ಸಂತುಷ್ಟಃ' ಅಲಂಬುದ್ಧಿಮಾನ್ । 'ಯೋಗೀ' ಕರ್ಮಧ್ಯಾನರೂಪಜ್ಞಾನೋಪಾಯವಾನ್ । 'ಯತಾತ್ಮಾ' ವಿಷಯೇಭ್ಯ ಉಪಸಂಹೃತ ಚಿತ್ತಃ। 'ದೃಢನಿಶ್ಚಯಃ' ಅಪ್ರಾಮಾಣ್ಯಶಂಕಾಶೂನ್ಯತತ್ತ್ವನಿಶ್ಚಯವಾನ್ ।ಮಯ್ಯರ್ಪಿತೇ ಮನೋಬುದ್ಧೀ ಯಸ್ಯ ಸ ತಥೋಕ್ತಃ ॥ 14 ॥**

**ಅನುವಾದ**- **'ಸಂತುಷ್ಟಃ'** ಸಿಕ್ಕಿದ್ದರಲ್ಲಿಯೇ ತೃಪ್ತಿಯುಳ್ಳವನು **'ಯೋಗೀ'**- ಕರ್ಮ-ಧ್ಯಾನರೂಪ ಉಪಾಯವುಳ್ಳವನು **'ಯತಾತ್ಮಾ'**- ಭೋಗವಸ್ತುಗಳಿಂದ ಮನವನ್ನು ಹೊರ ಸೆಳೆದವನು **'ದೃಢನಿಶ್ಚಯಃ'**- ಇದು ಅಪ್ರಮಾಣವೆಂಬ ಶಂಕೆ ಇಲ್ಲದಂತೆ ತತ್ತ್ವನಿಶ್ಚಯವುಳ್ಳವನು. **'ಮಯ್ಯರ್ಪಿತಮನೋಬುದ್ಧಿಃ'** ನನ್ನಲ್ಲಿಯೇ ನೆಲೆಗೊಳಿಸಿದ ಮನಸ್ಸು ಮತ್ತು ಬುದ್ಧಿಯುಳ್ಳ ಯಾವ ಭಕ್ತನಿರುವನೋ ಅವನು ನನಗೆ ಪ್ರಿಯನು ॥ 14 ॥

**ಯಸ್ಮಾನ್ನೋದ್ವಿಜತೇ ಲೋಕೋ**
**ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈ-**
**ರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥ 15 ॥**

**ಅರ್ಥ**- ಯಾರಿಂದ ಸಮಾಜವು ಉದ್ವಿಗ್ನಗೊಳ್ಳುವುದಿಲ್ಲವೋ, ಯಾರು ಸಮಾಜದಿಂದ ಉದ್ವಿಗ್ನನಾಗುವುದಿಲ್ಲವೋ ಹರ್ಷ- ಕೋಪ-ಭಯ-ಉದ್ವೇಗಗಳಿಂದ ಯಾರು ಮುಕ್ತರೋ ಅವರು ನನಗೆ ಪ್ರಿಯರು.

**ಕಿಂಚ ಯಸ್ಮಾಲ್ಲೋಕೋ ನೋದ್ವಿಜತೇ ನ ಬಿಭೇತಿ ಲೋಕಸ್ಯ ಭಯಹೇತುರ್ಯೋ ನ ಭವತಿ । ಯಶ್ಚ ಸರ್ವಮೀಶಾಧೀನಂ ಬುದ್ಧ್ವಾ ಲೋಕಾಜ್ಜನಾತ್ ನೋದ್ವಿಜತೇ । ಯಶ್ಚ ಹರ್ಷಾಮರ್ಷಭಯೋದ್ವೇಗೈಃ । ಹರ್ಷೋ ನಾಮ (ಮದಾತ್) ಸದಾಽಧರ್ಮಾಯ ಮನಃಪ್ರವೃತ್ತಿಃ । ಅಮರ್ಷೋ ರೋಷಃ ।**

**ಉದ್ವೇಗೋ ಮನಃಕಂಪ ವಿಶೇಷಃ । ತೈರ್ಮುಕ್ತೋ ಹೀನಃ । ಸ ಚೇತ್ಯತ್ರ ಭಕ್ತ ಇತ್ಯನುಷಜ್ಯತೇ । ಮೇ ಪ್ರಿಯಃ ॥ 15 ॥**

**ಅನುವಾದ**- ಯಾರ ಪ್ರವೃತ್ತಿಗಳಿಂದ ಸಮಾಜವು (ಜನತೆಯು) ಭಯ ಪಡುವುದಿಲ್ಲವೋ, ಯಾರು ಎಲ್ಲವೂ ಪರಮಾತ್ಮನ ಅಧೀನವೆಂದು ತಿಳಿದು ಜನತೆಯಿಂದ ಉದ್ವಿಗ್ನನಾಗ-ದಿರುವನೋ, ಅಂತಹ ಹರ್ಷ-ಅಮರ್ಷ-ಭಯ-ಉದ್ವೇಗಗಳಿಂದ ಮುಕ್ತನಾದ ಭಕ್ತನು ನನಗೆ ಪ್ರಿಯನು. ಸುಖಮದದಿಂದ, ಅಧರ್ಮದಲ್ಲಿ ಉಂಟಾಗುವ ಮನಃಪ್ರವೃತ್ತಿಯನ್ನು ಪ್ರಕೃತ 'ಹರ್ಷ'ವೆನ್ನುತ್ತಾರೆ. 'ಅಮರ್ಷ'ವೆಂದರೆ ರೋಷ. 'ಉದ್ವೇಗ''ವೆಂದರೆ ಮನಸ್ಸು ಕಂಪಿಸುವುದು. (ಏರಿಳಿತಕ್ಕೆ ಒಳಪಡುವುದು) ॥ 15 ॥

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥ 16 ॥**

**ಅರ್ಥ**- ಕ್ಷುದ್ರಕಾಮನೆ ಇಲ್ಲದವನು, ಶುದ್ಧನು, ದಕ್ಷನು, ಉಪಕಾರ-ಅಪಕಾರಗಳಲ್ಲಿ ಉದಾಸೀನನು, ಮನಃಕ್ಲೇಶವಿಲ್ಲದವನು, ಎಲ್ಲ ಅನಗತ್ಯ ಪ್ರಯತ್ನಗಳಿಂದ ದೂರವಿರುವ ಯಾವ ನನ್ನ ಭಕ್ತನಿರುವನೋ ಅವನು ನನಗೆ ಪ್ರಿಯನು.

**ಕಿಂಚ ಅನಪೇಕ್ಷೋ ಭಗವತ್ಪ್ರೀತ್ಯನ್ಯತ್ರ ಕ್ವಾಪ್ಯಪೇಕ್ಷಾಹೀನಃ । ಶುಚಿಃ ಬಾಹ್ಯಾಂತರಶುದ್ಧಿಮಾನ್ । ದಕ್ಷಃ ಭಗವತ್ಕರ್ಮಕರಣೇ ಪಟುಃ । ಉದಾಸೀನಃ ಕರ್ತವ್ಯೋಪಕಾರಾಪಕಾರಯೋರುಪೇಕ್ಷಕಃ । ಗತವ್ಯಥಃ ಪರಕೃತಾಪಕಾರೈ-ರಪ್ರಾಪ್ತಮನಃಕ್ಲೇಶಃ । ಸರ್ವಾರಂಭಪರಿತ್ಯಾಗೀತ್ಯಸ್ಯ 'ಅವೈಷ್ಣವಸರ್ವಾರಂಭ-ಪರಿತ್ಯಾಗೀ', 'ಸರ್ವಾರಂಭಾಭಿಮಾನತ್ಯಾಗೀ', 'ಸರ್ವಾರಂಭಫಲತ್ಯಾಗೀ' 'ಭಗವತಿ ಸರ್ವಾರಂಭಸಮರ್ಪಣರೂಪತ್ಯಾಗವಾನ್' ಇತಿ ಚತುರ್ಧಾಽರ್ಥಃ । ॥ 16 ॥**

**ಅನುವಾದ**- '**ಅನಪೇಕ್ಷಃ**' ಪರಮಾತ್ಮನ ಪ್ರೀತಿಯನ್ನು ಹೊರತುಪಡಿಸಿ ಇನ್ನಾವ ಕಾಮನೆ ಇಲ್ಲದವನು, '**ಶುಚಿಃ**'- ಒಳ-ಹೊರ ಶುದ್ಧಿ ಇರುವವನು. '**ದಕ್ಷಃ**'- ಪರಮಾತ್ಮನಿಗೆ ಪ್ರಿಯವಾದ ಕರ್ಮಮಾಡುವುದರಲ್ಲಿ ಸಮರ್ಥನು, '**ಉದಾಸೀನಃ**'- ಮಾಡಬೇಕಾದ ಉಪಕಾರ ಮತ್ತು ಅಪಕಾರಗಳಿಂದ ದೂರವಿರುವವನು, '**ಗತವ್ಯಥಃ**'- ಇನ್ನೊಬ್ಬರು ಮಾಡಿದ ಅಪಕಾರದಿಂದ ಮನಃಕ್ಲೇಶವನ್ನು ಮಾಡಿಕೊಳ್ಳದವನು. '**ಸರ್ವಾರಂಭಪರಿತ್ಯಾಗೀ**' (1) ವಿಷ್ಣು ಪ್ರಿಯಕರ ವಲ್ಲದ ಪ್ರಯತ್ನದಿಂದ ದೂರವಿರುವವ, (2) ಸರ್ವಕಾರ್ಯಗಳಲ್ಲೂ ಅಭಿಮಾನತೊರೆದವನು.

(3) ಎಲ್ಲ ಕಾರ್ಯಗಳ ಫಲತೊರೆದವನು. (4) ಎಲ್ಲ ಕಾರ್ಯಗಳನ್ನು ಪರಮಾತ್ಮನಲ್ಲಿ ಅರ್ಪಿಸುವ ತ್ಯಾಗಾಸಕ್ತನು ಎಂಬುದಾಗಿ ನಾಲ್ಕು ಅರ್ಥಗಳನ್ನು ತಿಳಿಯಬೇಕು. ಇಂತಹ ಭಕ್ತನು ನನಗೆ ಪ್ರಿಯನು. ।। 16 ।।

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ।। 17 ।।**

**ಅರ್ಥ-** ಯಾರು ಎಂದೂ ಹರ್ಷಗೊಳ್ಳುವುದಿಲ್ಲ, ದ್ವೇಷಿಸುವುದಿಲ್ಲ , ದುಃಖಿಸುವುದಿಲ್ಲ ಏನನ್ನೂ ಬಯಸುವುದಿಲ್ಲ ಮತ್ತು ಶುಭ-ಅಶುಭಕಾರ್ಯಗಳನ್ನು ತ್ಯಜಿಸಿರುತ್ತಾನೆ, ಅಂತಹ ಭಕ್ತನು ನನಗೆ ಪ್ರಿಯನು..

**'ಹರ್ಷಾಮರ್ಷಭಯೋದ್ವೇಗೈರ್ಮುಕ್ತ' ಇತ್ಯುಕ್ತೇ ನಿಷ್ಠಾಪ್ರತ್ಯಯೇನಾತೀತತ್ವ-ಪ್ರತೀತ್ಯಾ ಕಾಲಾಂತರೇ ಹರ್ಷಾದಿಮಾನಿತಿ ಶಂಕಾ ಸ್ಯಾತ್ । ತನ್ನಿರಾಸಾಯ ತದ್ ವ್ಯನಕ್ತಿ- ಯೋ ನ ಹೃಷ್ಯತೀತ್ಯಾದಿನಾ ।। 'ನಾನದ್ಯತನವತ್ಕ್ರಿಯಾಪ್ರಬಂಧ-ಸಾಮೀಪ್ಯಯೋರಿತಿ' (ಪಾ.ಸೂ. 3-3-134) ಸೂತ್ರೇಣ ಕ್ರಿಯಾಸಾತತ್ಯರೂಪ-ಕ್ರಿಯಾಪ್ರಬಂಧೇ ವಿಹಿತಲಟ್‌ಪ್ರತ್ಯಯಾಂತತ್ವೇನ ಹೃಷ್ಯತೀತ್ಯಾದೇರ್ಯಾವಜ್ಜೀವಂ ಹೃಷ್ಯತೀತ್ಯಾದಿರರ್ಥಃ । ನ ಹೃಷ್ಯತಿ ನ ದ್ವೇಷ್ಟೀತ್ಯಾದಿರೂಪೇಣ ನಞ್‌ಸಂಬಂಧೇ ಸತಿ ಕದಾಽಪಿ ನ ಹೃಷ್ಯತೀತ್ಯಾದಿರರ್ಥೋ ಭವತೀತಿ ಭಾವಃ । ಉದಾಹೃತಂ ಚ ವೃತ್ತೌ ತಾರ್ತೀಯತೃತೀಯಪಾದೇ । ಯಾವಜ್ಜೀವಮನ್ನಮದಾದಿತ್ಯಾದಿ । ಸರ್ವಾರಂಭಪರಿತ್ಯಾಗೀತಿ ಸಾಮಾನ್ಯತ ಉಕ್ತಮ್ । ವಿಶೇಷೋಕ್ತ್ಯಾ ವ್ಯನಕ್ತಿ- ಶುಭಾಶುಭೇತಿ ।। ಜ್ಞಾನ-ಭಕ್ತಿ-ವೈರಾಗ್ಯಾದ್ಯನ್ಯಶುಭತ್ಯಾಗೀತ್ಯರ್ಥಃ । ಅತ ಏವ ತದನ್ಯನ್ನ ಕಾಂಕ್ಷತೀತ್ಯರ್ಥೋ ನ ಕಾಂಕ್ಷತೀತ್ಯಸ್ಯ ಜ್ಞೇಯಃ । ಏವಂ ಲೋಕಾನ್ನೋದ್ವಿಜತ ಇತ್ಯಸ್ಯಾಪಿ ಹರ್ಷಾಮರ್ಷಭಯಮುಕ್ತ ಇತ್ಯನೇನಾಪೌನ-ರುಕ್ತ್ಯಂ ಧ್ಯೇಯಮ್ । ಉಕ್ತಶಂಕಾನಿರಾಸಾರ್ಥತ್ವಾದಿತಿ ।। 17 ।।**

**ಅನುವಾದ-** 'ಹರ್ಷಾಮರ್ಷಭಯೋದ್ವೇಗೈರ್ಮುಕ್ತಃ' (12.15) ಎಂಬ ಶ್ಲೋಕದಲ್ಲಿ 'ಮುಕ್ತಃ' ಎಂಬಲ್ಲಿರುವ 'ನಿಷ್ಠಾ' ಪ್ರತ್ಯಯದಿಂದ 'ಅತೀತತ್ವ'ವು ಪ್ರತೀತವಾಗುವುದು. ಆದುದರಿಂದ ಮುಂದೊಂದು ದಿನ ಈ ಭಾವಗಳು ಬರಬಹುದೆಂಬ ಶಂಕೆ ಸಹಜ. ಅದನ್ನು ನಿರಾಕರಿಸಲು 'ಯೋ ನ ಹೃಷ್ಯತಿ' ಎಂಬ ಶ್ಲೋಕವು ಪ್ರವೃತ್ತವಾಗಿದೆ. 'ನಾನದ್ಯತನವತ್ಕ್ರಿಯಾ-ಪ್ರಬಂಧ ಸಾಮೀಪ್ಯಯೋಃ' (ಪಾ.ಸೂ. 3.3.135) ಎಂಬ ಸೂತ್ರ ತಿಳಿಸುವಂತೆ ಕ್ರಿಯೆಯ

ಅವಿರತಿಯನ್ನು ಸೂಚಿಸುವ ಲಟ್ ಪ್ರತ್ಯಯಾಂತವಾದ 'ಹೃಷ್ಯತಿ' ಎಂಬ ಪ್ರಯೋಗಕ್ಕೆ, 'ಬದುಕಿರುವವರೆಗೆ ಹರ್ಷಪಡುವನು' ಎಂದರ್ಥ. 'ನ ಹೃಷ್ಯತಿ' 'ನ ದ್ವೇಷ್ಟಿ' ಎಂಬಲ್ಲಿ 'ನಞ್' ಸಂಬಂಧ ಬಂದಾಗ 'ಎಂದೂ ಹರ್ಷ ಪಡಲಾರನು' 'ಎಂದೂ ದ್ವೇಷ ಮಾಡನು' ಇತ್ಯಾದಿಯಾಗಿ ಅರ್ಥವು ಸಂಭವಿಸುವುದು. ವೃತ್ತಿಯಲ್ಲಿ ಮೂರನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ಹೀಗೆ ತಿಳಿಸಲಾಗಿದೆ- 'ಯಾವಜ್ಜೀವಮನ್ನಮದಾತ್'. ಅನ್ನದಾನ ಮಾಡಿದನು ಎಂದು ಹೇಳಬೇಕಾದಲ್ಲಿ ಬದುಕಿರುವ ತನಕ (ಯಾವಜ್ಜೀವಮ್) ಎಂಬ ಅಂಶ ಸೇರಿಸಲಾಗಿದೆ.

**'ಸರ್ವಾರಂಭಪರಿತ್ಯಾಗೀ'** ಎಂಬುದಾಗಿ **'ಸಾಮಾನ್ಯತಃ'** ಹೇಳಲಾಯಿತು. ಅದನ್ನೇ ಇಲ್ಲಿ **'ಶುಭಾಶುಭಪರಿತ್ಯಾಗೀ'** ಎಂಬುದಾಗಿ ವಿವರಿಸುತ್ತಿದ್ದಾರೆ- ಜ್ಞಾನ-ಭಕ್ತಿ-ವೈರಾಗ್ಯಕ್ಕಿಂತ ಭಿನ್ನವಾದ ಶುಭವನ್ನು ತೊರೆದವನು ಎಂದರ್ಥ. ಇದರಂತೆ **'ನ ಕಾಂಕ್ಷತಿ'** ಎನ್ನುವುದಕ್ಕೂ ಅಮಂಗಲವಾದುದನ್ನು ಬಯಸುವುದಿಲ್ಲ ಮತ್ತು ಮಂಗಲವಾದುದದರಲ್ಲೂ ಬಂಧಕವಾದುದನ್ನು ಬಯಸುವುದಿಲ್ಲ ಎಂದರ್ಥ. ಇದರಂತೆ, ನಮ್ಮ ವಿವರಣೆಯಂತೆ, **'ಲೋಕಾನ್ನೋದ್ವಿಜತೇ ಯಃ'** ಎಂಬುದಕ್ಕೆ **'ಹರ್ಷಾಮರ್ಷಭಯೋದ್ವೇಗೈಃ ಮುಕ್ತಃ'** ಎಂಬುದಕ್ಕೂ ಪುನರುಕ್ತಿ ಇರುವುದಿಲ್ಲ. ಹಿಂದೆ ಹೇಳಿದ ಶಂಕೆ ಪರಿಹಾರವಾಗುತ್ತದೆ. ॥ 17 ॥

**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ॥ 18 ॥**

**ಅರ್ಥ-** ಶತ್ರು-ಮಿತ್ರರಲ್ಲಿ ಸಮನು, ಹಾಗೆಯೇ ಮಾನಾಪಮಾನಗಳಲ್ಲಿ ನಿರುದ್ವಿಗ್ನನಾಗಿರುವನು, ಶೀತ ಮತ್ತು ಉಷ್ಣಸ್ಪರ್ಶಗಳಿಂದಾಗುವ ಸುಖದುಃಖಗಳಲ್ಲಿ ಹಿಗ್ಗದೇ-ಕುಗ್ಗದೇ ಇರುವವನು, ಫಲಾಪೇಕ್ಷೆ ತೊರೆದವನು, (ನನಗೆ ಪ್ರಿಯನು),

**ಕಿಂಚ ಸಮಃ ಶತ್ರೌ ಚ ಮಿತ್ರೇ ಚೇತ್ಯಾದಿ । ಪೂರ್ವಂ ಸಮದುಃಖಸುಖ ಇತಿ ಸಾಮಾನ್ಯೇನೋಕ್ತಮ್ । ತದ್‌ವಿಶಿಷ್ಯೋಕ್ತ್ಯಾ ವ್ಯನಕ್ತಿ- ಶೀತೋಷ್ಣೇತ್ಯಾದಿ ॥ ಶೀತೋಷ್ಣಾದಿವಿಷಯಜನ್ಯಸುಖದುಃಖೇಷು ಸಮಃ ಉತ್ಸೇಕಾನುತ್ಸೇಕಹೀನಃ । ಸಂಗವಿವರ್ಜಿತಃ ಫಲಸ್ನೇಹಹೀನಃ ॥ 18 ॥**

**ಅನುವಾದ-** ಹಿಂದೆ, ಸುಖ-ದುಃಖಗಳನ್ನು ಸಮವಾಗಿ ಸ್ವೀಕರಿಸುವವನು ಎಂದು ಸಾಮಾನ್ಯವಾಗಿ ಭಕ್ತನ ಲಕ್ಷಣವನ್ನು ತಿಳಿಸಲಾಗಿದೆ. ಸುಖ-ದುಃಖಗಳಲ್ಲಿ ಸಮತೆ ಹೇಗೆಂಬುದನ್ನೂ 'ಶೀತೋಷ್ಣ' ಇತ್ಯಾದಿ ಪದದ ಮೂಲಕ ವಿಶೇಷವಾಗಿ ವಿವರಿಸಲಾಗಿದೆ. ಶೀತಲವಾದ ವಿಷಯವಸ್ತುವಿನ ಸಂಪರ್ಕದಿಂದಾಗುವ ಸುಖ ಮತ್ತು ಉಷ್ಣವಸ್ತುವಿನ ಸಂಪರ್ಕದಿಂದಾಗುವ

ದುಃಖಗಳಲ್ಲಿ ಸಂತಸ-ನಿರುತ್ಸಾಹಗಳಿಲ್ಲದವನು, ಸುಖ-ದುಃಖಗಳಲ್ಲಿ ಸಮನೆನಿಸಿದ್ದಾನೆ. 'ಸಂಗವಿವರ್ಜಿತ'ನೆಂದರೆ ಫಲಕಾಮನೆ ತೊರೆದವನೆಂದರ್ಥ. ॥ 18 ॥

**ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ ಮೇ ಪ್ರಿಯೋ ನರಃ ॥ 19 ॥**

**ಅರ್ಥ-** ನಿಂದೆಯಂತೆಯೇ ಸ್ತೋತ್ರವನ್ನೂ ತ್ಯಾಜ್ಯವೆಂದು ತಿಳಿದವನು, ಮನನಶೀಲನು, ಪರಮಾತ್ಮನು ನೀಡಿರುವುದರ ಬಗ್ಗೆ ತೃಪ್ತನು, ಒಂದೆಡೆ ನಿಲ್ಲದವನು. ತತ್ತ್ವನಿಶ್ಚಯವುಳ್ಳವನು ನನ್ನಲ್ಲಿ ಭಕ್ತಿಯುಳ್ಳವನು ನನಗೆ ಪ್ರಿಯನು.

**ಕಿಂಚ 'ತುಲ್ಯನಿಂದಾಸ್ತುತಿಃ' ಹೇಯತ್ವೇನ ನಿಂದಾಯಾಃ ತುಲ್ಯಾ ಸ್ತುತಿರ್ಯಸ್ಯ ಸ ತಥಾ । ಅನಿಕೇತಃ ಅನಿಯತವಾಸಃ । ಅಕಾರವಾಚ್ಯಭಗವದಾಶ್ರಯೋ ವಾ । ಸ್ಥಿರಮತಿಃ ಕುತರ್ಕೈರಚಂಚಲಜ್ಞಾನಃ । ಯೋ ಮದ್ಭಕ್ತಃ ಭಕ್ತಿಮಾನಿತಿ ಭಕ್ತೇರ್ಬಹುವಾರೋಕ್ತಿರದ್ವೇಷ್ಟೇತ್ಯಾದಿನೋಕ್ತೇಷು ಧರ್ಮೇಷು ಭಕ್ತೇರಾಧಿಕ್ಯಜ್ಞಾಪನಾಯ । ಅತ್ರ ಸುಖಾದಿಷು ಸಾಮ್ಯಂ ಹರ್ಷಾದಿರಾಹಿತ್ಯಂ ಚ ಪ್ರಾಯೇಣೇತಿ ಜ್ಞೇಯಮ್ । 'ಪ್ರಾಯಃ ಸುಖಾದಿಷು ಸಮಃ ಪ್ರಾಯೋ ಹರ್ಷಾದಿವರ್ಜಿತಃ' ಇತ್ಯಾದೇಃ । 'ಸಂತುಷ್ಟಃ ಸತತಮ್' (12.14) ಇತ್ಯಸ್ಯ 'ಸಂತುಷ್ಟೋ ಯೇನ ಕೇನಚಿತ್' ಇತ್ಯೇತದ್ವ್ಯಾಖ್ಯಾನರೂಪಮಿತ್ಯ-ಪೌನರುಕ್ತ್ಯಮ್ ॥ 19 ॥**

**ಅನುವಾದ-** ಭಕ್ತನ ಲಕ್ಷಣವನ್ನೇ ಇಲ್ಲಿಯೂ ವಿವರಿಸುತ್ತಿದ್ದಾರೆ- ನಿಂದೆ-ಸ್ತುತಿಗಳನ್ನು ಸಮವಾಗಿ ಸ್ವೀಕರಿಸುವುದೆಂದರೆ, ನಿಂದನೆ ಹೇಗೆ ಹೇಯ (ತ್ಯಾಜ್ಯ)ವೋ ಸ್ತುತಿ ಹಾಗೇ ಸ್ವೀಕರಿಸಲು ಅನರ್ಹವೆಂದು ತಿಳಿದವನು. 'ಅನಿಕೇತ' ಎಂದರೆ ಒಂದೆಡೆ ಸ್ಥಿರವಾಗಿ ನಿಲ್ಲದವನು. ಅಥವಾ 'ಅ'ಕಾರವಾಚ್ಯನಾದ ಪರಮಾತ್ಮನೇ ತನಗೆ ಆಸರೆ ಎಂದು ಅನುಸಂಧಾನಶೀಲನು. '**ಸ್ಥಿರಮತಿ**' ಎಂದರೆ ಕುತರ್ಕಗಳಿಂದ ನಂಬಿಕೆ ಕಳೆದುಕೊಳ್ಳದವನು. ಈ ಪ್ರಕರಣದಲ್ಲಿ '**ಯೋ ಮದ್‌ಭಕ್ತಃ**' '**ಭಕ್ತಿಮಾನ್**' ಇತ್ಯಾದಿಯಾಗಿ ಭಕ್ತಿಯನ್ನು ಅನೇಕಬಾರಿ ಉಲ್ಲೇಖಿಸಿರುವುದು, '**ಅದ್ವೇಷ್ಟಾ**' ಇತ್ಯಾದಿಯಾಗಿ ಆರಂಭಿಸಿ ಹೇಳಿದ ಅನೇಕ ಸಾಧನಗಳಲ್ಲಿ ಭಕ್ತಿಯ ಸಾರ್ವಭೌಮತೆ ಜ್ಞಾಪಿಸಲೋಸುಗ.

ಭಕ್ತನ ಲಕ್ಷಣವನ್ನು ಹೇಳುವಾಗ, ಸುಖ-ದುಃಖಗಳನ್ನು ಸಮವಾಗಿ ಸ್ವೀಕರಿಸುವವನು,

ಹರ್ಷರಹಿತನು, ಇತ್ಯಾದಿಯಾಗಿ ವರ್ಣಿಸಿದ್ದು, ಹೆಚ್ಚಿನ ಪ್ರಸಂಗದ (ಪ್ರಾಯಿಕ) ಸ್ಥಿತಿಯನ್ನು ಗಮನದಲ್ಲಿರಿಸಿ ವರ್ಣಿಸಲಾಗಿದೆ. (ಅಲ್ಪಕಾಲಿಕ ಭಾವನಾತರಂಗಗಳ ವ್ಯತ್ಯಾಸವು ನಗಣ್ಯ)

'**ಪ್ರಾಯಃ ಸುಖಾದಿಷು ಸಮಃ ಪ್ರಾಯೋ ಹರ್ಷಾದಿವರ್ಜಿತಃ**' ಎಂಬುದಾಗಿ ಸ್ಮೃತಿಯು ಭಕ್ತನ ಉಪವರ್ಣಿತ ಸ್ಥಿತಿಯು ಪ್ರಾಯಿಕವಾಗಿ (ಹೆಚ್ಚಾಗಿ) ಇರುವಂಥಹದೆಂದು ನಿರೂಪಿಸಿದೆ. '**ಸಂತುಷ್ಟಃ ಸತತಂ**' (12.14) ಎಂಬಲ್ಲಿ ತಿಳಿಸಿದ ಅಂಶವನ್ನು ಇಲ್ಲಿ '**ಸಂತುಷ್ಟೋ ಯೇನ ಕೇನಚಿತ್**' (12.19) ಎಂಬುದಾಗಿ ವ್ಯಾಖ್ಯಾನಿಸಲಾಗಿದೆ. ಅದ್ದರಿಂದ ಪುನರುಕ್ತಿ ಶಂಕೆ ಇಲ್ಲ. || 19 ||

**ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ || 20 ||**

*|| ಓಂತತ್ಸದಿತಿ ಶ್ರೀಮದ್‌ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಭಕ್ತಿಯೋಗೋ ನಾಮ ದ್ವಾದಶೋಽಧ್ಯಾಯಃ ||*

**ಅರ್ಥ**– ಹಿಂದೆ ತಿಳಿಸಿದ ಸಾಧನಗಳಲ್ಲಿ ಒಂದೊಂದನ್ನು ಅನುಷ್ಠಾನ ಮಾಡುವವರೂ ನನಗೆ ಪ್ರಿಯರು. ನನ್ನ ಪ್ರೀತಿಕಾರಣವಾದ, ಮುಕ್ತಿ ಸಾಧನವಾದ ಈ ಎಲ್ಲ ಸಾಧನಗಳನ್ನೂ ಯಾರು, ನನ್ನ ಪಾರಮ್ಯ ಪ್ರಜ್ಞೆಯೊಂದಿಗೆ ಶ್ರದ್ಧೆಯಿಂದ ರೂಢಿಸಿಕೊಳ್ಳುವರೋ ಅವರು ನನಗೆ ಅತ್ಯಂತ ಪ್ರಿಯರು.

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ ಭಗವದ್ಗೀತೆಯಲ್ಲಿ ಭಕ್ತಿಯೋಗವೆಂಬ ಹನ್ನೆರಡನೆಯ ಅಧ್ಯಾಯವು ಮುಗಿಯಿತು.*

**ಅದ್ವೇಷ್ಟಾ ಸರ್ವಭೂತಾನಾಮಿತ್ಯಾದಾವದ್ವೇಷಾದಿಕಂ ಯತ್ಪೃಥಕ್ ಪ್ರೀತಿ-ಮಾತ್ರಸಾಧನಮುಕ್ತಂ, 'ಸ ಮೇ ಪ್ರಿಯಃ' 'ಸ ಚ ಮೇ ಪ್ರಿಯಃ' ಇತ್ಯಾದಿನಾ ತತ್ಸರ್ವಂ ಮಿಲಿತಂ ಯತ್ರಾಸ್ತಿ ಸ ತು ಮೇಽತ್ಯಂತಂ ಪ್ರಿಯ ಇತಿ ಪ್ರಾಗುಕ್ತಂ ಪಿಂಡೀಕೃತ್ಯೋಪಸಂಹರತಿ– ಯೇ ತ್ವಿತಿ || ಧರ್ಮ್ಯಾಮೃತಂ ಧಾರಕತ್ವಾದ್ಧರ್ಮೋ ವಿಷ್ಣುಸ್ತದುಪಾಸನಾಂಗತ್ವಾದುಪಚಾರೇಣ ಧರ್ಮ್ಯಮ್ । ಅಮೃತಶಬ್ದಿತಮುಕ್ತಿ-ಸಾಧನಮಮೃತಮ್ । ಧರ್ಮ್ಯಂ ಚ ತದಮೃತಂ ಚ ಧರ್ಮ್ಯಾಮೃತಮ್ । ಯಥೋಕ್ತಮದ್ವೇಷ್ಟೇತ್ಯಾದಿನೋಕ್ತಮದ್ವೇಷಾದಿಕಂ ಪ್ರೀತಿಸಾಧನಂ ಸಮಸ್ತಮ್ ।**

**ಶ್ರದ್ದಧಾನಾಃ ಆಸ್ತಿಕ್ಯವಂತಃ । ಮತ್ಪರಮಾಃ ಮದುತ್ತಮತಾಜ್ಞಾನಿನಃ ಸಂತೋ ಯೇ ಪರ್ಯುಪಾಸತೇ ಸಮ್ಯಗನುತಿಷ್ಠಂತಿ ತೇ ಭಕ್ತಾಃ ಅತೀವ ಮೇ ಪ್ರಿಯಾಃ ಇತ್ಯರ್ಥಃ। ॥ 20 ॥**

***॥ ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ ದ್ವಾದಶೋಽಧ್ಯಾಯಃ ॥***

**ಅನುವಾದ-** **'ಅದ್ವೇಷ್ಟಾ ಸರ್ವಭೂತಾನಾಮ್'** ಇತ್ಯಾದಿಯಾಗಿ ಹಿಂದೆ ಹೇಳಿದ ದ್ವೇಷಿಸದಿರುವುದೇ ಮೊದಲಾದ ಒಂದೊಂದೇ ಉಪಾಯದ ಅನುಸರಣೆ ನನ್ನ ಪ್ರೀತಿಕಾರಣವೆಂದು **'ಸ ಮೇ ಪ್ರಿಯಃ' 'ಸ ಚ ಮೇ ಪ್ರಿಯಃ'** ಇತ್ಯಾದಿಯಾಗಿ ತಿಳಿಸಲಾಯಿತು. ಈ ಎಲ್ಲ ಸಾಧನಗಳನ್ನು ಯಾರು ಒಟ್ಟಿಗೆ ಮೈಗೂಡಿಸಿಕೊಳ್ಳುವರೋ ಅವರು ನನಗೆ ಅತ್ಯಂತ ಪ್ರಿಯರೆಂದು ತಿಳಿಸುತ್ತ **'ಯೇ ತು'** ಎಂಬ ಶ್ಲೋಕದಲ್ಲಿ ಸಕಲ ಸಾಧನಾನುಷ್ಠಾನದ ಮಹತ್ವವನ್ನು ತಿಳಿಸುತ್ತಿದ್ದಾನೆ. **'ಧರ್ಮ್ಯಾಮೃತಮ್'** ಎಂಬ ಪದದ ಅರ್ಥ ಹೀಗಿದೆ- ವಿಶ್ವಧಾರಕನಾದುದರಿಂದ ಪರಮಾತ್ಮನು **'ಧರ್ಮ '** ಎನಿಸಿರುವನು. ಅವನ ಉಪಾಸನೆಗೆ ಸಾಧಕವಾದವು **'ಧರ್ಮ್ಯ'** ಎನಿಸಿದ್ದಾವೆ. ಮುಕ್ತಿಸಾಧನವಾದುದರಿಂದ ಇವೇ **'ಅಮೃತ'** ವೆನಿಸಿದ್ದಾವೆ. **'ಯಥೋಕ್ತಮ್'** ಎಂದರೆ **'ಅದ್ವೇಷ್ಟಾ ಸರ್ವಭೂತಾನಾಮ್'** ಇತ್ಯಾದಿಯಾಗಿ ಹಿಂದೆ ವರ್ಣಿಸಿದ ದ್ವೇಷತ್ಯಾಗ ಮೊದಲಾದವು ಶ್ರೀಹರಿಯ ಪ್ರೀತಿಸಾಧನಗಳು. **'ಶ್ರದ್ಧಧಾನಾಃ'** ಎಂದರೆ ಆಸ್ತಿಕ್ಯ ಬುದ್ಧಿಯುಳ್ಳವರಾಗಿ, **'ಮತ್ಪರಮಾಃ'** ನನ್ನನ್ನು ಸರ್ವೋತ್ತಮನೆಂದು ತಿಳಿದವರಾಗಿ **'ಪರ್ಯುಪಾಸತೇ'** ಚೆನ್ನಾಗಿ ಈ ಸಾಧನಗಳನ್ನು ಯಾರು ಅನುಷ್ಠಾನಗೈಯುವರೋ ಅಂತಹ ಭಕ್ತರು ನನಗೆ ಅತ್ಯಂತ ಪ್ರಿಯರು. ॥ 20 ॥

***ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿಯಿತು.***

# ಅಧ್ಯಾಯ - 13

## ಅಧ್ಯಾಯಕ್ಕೆ ಅವತರಣಿಕೆ

## ಪ್ರಕೃತಿ-ಪುರುಷ-ಕ್ಷೇತ್ರ-ಕ್ಷೇತ್ರಜ್ಞರ ಬಗ್ಗೆ ಜಿಜ್ಞಾಸೆ

### ಗೀತಾವಿವೃತಿ

**ಶ್ರೀ ಹರಿಃ ಓಂ ॥ ಪೂರ್ವಷಟ್ಕದ್ವಯೋಕ್ತಾರ್ಥಸಂಗ್ರಹಪರೋಽಯಮಧ್ಯಾಯಃ । ತಥಾಹಿ । ಯತ್ಪ್ರಥಮಷಟ್ಕೇ 'ತ್ರೈಗುಣ್ಯವಿಷಯಾ ವೇದಾಃ' (2-45) ಇತ್ಯಾದಿನಾ ಪ್ರಾಚುರ್ಯೇಣ ಜ್ಞಾನಸಾಧನಮಾಷಷ್ಠಸಮಾಪ್ತೇರುಕ್ತಮ್, ಯಚ್ಚ ತತ್ರ ದ್ವಿತೀಯೇಽಧ್ಯಾಯೇ 'ನ ತ್ವೇವಾಹಂ' (2-12) ಇತ್ಯಾದಿನಾಽನಾದಿನಿತ್ಯತ್ವಾದಿನಾ ಜೀವಸ್ವರೂಪಮುಕ್ತಮ್, ಯಚ್ಚ ದ್ವಿತೀಯಷಟ್ಕೇ ಭಗವತ್‌ಸ್ವರೂಪಮುಕ್ತಮ್, ಯದಪಿ ಸಪ್ತಮೇ 'ಭೂಮಿರಾಪಃ' (7-4) ಇತ್ಯಾದಿನಾ ಕ್ಷೇತ್ರಶಬ್ದಿತಂ ಭಗವದಾವಾಸಸ್ಥಾನಮುಕ್ತಮ್, ತದ್ವಿಕೀರ್ಣತಯೋಕ್ತಂ ಸರ್ವಂ ಬುದ್ಧ್ಯಾರೋಹಾರ್ಥಂ ಸಂಕ್ಷಿಪ್ಯಾಸ್ಮಿನ್ನಧ್ಯಾಯೇ ಪ್ರಶ್ನಪೂರ್ವಕಂ ಪ್ರದರ್ಶ್ಯತೇ- ಪ್ರಕೃತಿಮಿತ್ಯಾದಿನಾ ॥**

**ಅನುವಾದ-** ಹಿಂದಿನ ಎರಡು ಷಟ್ಕಗಳಲ್ಲಿ[1] ಹೇಳಿರುವ ವಿಷಯಗಳ ಸಂಗ್ರಹಪರವಾಗಿದೆ ಈ ಅಧ್ಯಾಯ. ಅದೆಂತೆಂದರೆ- ಪ್ರಥಮ ಷಟ್ಕದಲ್ಲಿ 'ತ್ರೈಗುಣ್ಯ ವಿಷಯಾ ವೇದಾಃ' (2-45) ಮೊದಲಾದ ಶ್ಲೋಕಗಳಿಂದ ಆರನೇ ಅಧ್ಯಾಯ ಮುಗಿಯುವಲ್ಲಿಯ ತನಕವೂ ಹೆಚ್ಚಾಗಿ ಜ್ಞಾನಸಾಧನದ ಬಗ್ಗೆ ಏನೊಂದು ನಿರೂಪಿಸಲ್ಪಟ್ಟಿದೆಯೋ, ಹಾಗೂ ಅದೇ ಪ್ರಥಮಷಟ್ಕದ ದ್ವಿತೀಯಾಧ್ಯಾಯದಲ್ಲಿ 'ನ ತ್ವೇವಾಹಂ (2-12) ಎಂಬಿತ್ಯಾದಿ ಶ್ಲೋಕಗಳ ಮೂಲಕ ಅನಾದಿನಿತ್ಯತ್ವಮೊದಲಾದ ಜೀವಸ್ವರೂಪವು ಹೇಳಲ್ಪಟ್ಟಿದೆಯೋ, ಹಾಗೂ ದ್ವಿತೀಯಷಟ್ಕದಲ್ಲಿ

1. ಗೀತೆಯಲ್ಲಿ ಹದಿನೆಂಟು ಅಧ್ಯಾಯಗಳು. ಆರರ ಮೂರು ಗುಂಪುಗಳು.ಆರರ ಗುಂಪನ್ನು ಷಟ್ಕವೆಂದಿದ್ದಾರೆ.

ಭಗವಂತನ ಸ್ವರೂಪವು ಏನೆಂದು ನಿರೂಪಿಸಲ್ಪಟ್ಟಿದೆಯೋ ಹಾಗೂ ಸಪ್ತಮಾಧ್ಯಾಯದಲ್ಲಿ **'ಭೂಮಿರಾಪಃ'** (7-4) ಎಂಬಿತ್ಯಾದಿ ಶ್ಲೋಕಗಳಿಂದ ಕ್ಷೇತ್ರವೆಂಬ ಹೆಸರುಳ್ಳ ಭಗವದಾವಾಸ ಸ್ಥಳಗಳು ಉಕ್ತವಾಗಿವೆಯೋ (ವಿಕೀರ್ಣತಯಾ ಉಕ್ತಂ) ಚಲ್ಲಾಪಿಲ್ಲಿಯಾಗಿ ಹೇಳಲ್ಪಟ್ಟಿರುವ ಈ ಎಲ್ಲವನ್ನೂ (ಜ್ಞಾನಸಾಧನ, ಜೀವಸ್ವರೂಪ, ಭಗವಂತ ಹಾಗೂ ಕ್ಷೇತ್ರವೆಂಬ ನಾಲ್ಕೂ ವಿಷಯ ಗಳನ್ನೂ) ಬುದ್ಧಿಯಲ್ಲಿ ನಿಲ್ಲುವುದಕ್ಕಾಗಿ ಸಂಕ್ಷೇಪಗೊಳಿಸಿ ಈ ಅಧ್ಯಾಯದಲ್ಲಿ (ಅರ್ಜುನನ) ಪ್ರಶ್ನೆಯನ್ನು ಮುಂದಿಟ್ಟುಕೊಂಡು ತೋರಿಸಲಾಗುತ್ತಿದೆ. ಪ್ರಕೃತಿಂ ಎಂಬ ಶ್ಲೋಕದಿಂದ.

**ವಿವರಣೆ-** **'ಸರ್ವಾರ್ಥ ಸಂಕ್ಷೇಪೋಽಯಂ'** ಎಂದಿದೆ ಗೀತಾತಾತ್ಪರ್ಯ. ಈ ಹದಿಮೂರನೆಯ ಅಧ್ಯಾಯ ಹೇಗೆ ಪೂರ್ವೋಕ್ತಸರ್ವಾರ್ಥಸಂಗ್ರಹರೂಪವೆಂಬುದನ್ನು ಶ್ರೀರಾಯರು ವಿವರಿಸಿದ್ದಾರೆ.

ಭಗವಂತನ ಸ್ವರೂಪ, ಜೀವಸ್ವರೂಪ , ಜ್ಞಾನಸಾಧನ ಹಾಗೂ ಭಗವದಾವಾಸಸ್ಥಾನವಾದ ಕ್ಷೇತ್ರದ ಬಗ್ಗೆ ಪ್ರಥಮಷಟ್ಕ ಹಾಗೂ ದ್ವಿತೀಯ ಷಟ್ಕದಲ್ಲಿ ಅಲ್ಲಲ್ಲಿ ನಿರೂಪಿಸಲಾಗಿತ್ತು. ಇದೀಗ ಅವೆಲ್ಲದರ ಬಗ್ಗೆ ಸಂಕ್ಷೇಪ ನಿರೂಪಣೆ ಬಯಸಿ ಅರ್ಜುನ ಪ್ರಶ್ನಿಸುತ್ತಿದ್ದಾನೆ.

**ಅರ್ಜುನ ಉವಾಚ -**

**ಪ್ರಕೃತಿಂ ಪುರುಷಂ ಚೈವ ಕ್ಷೇತ್ರಂ ಕ್ಷೇತ್ರಜ್ಞಮೇವ ಚ ।**
**ಏತದ್ವೇದಿತುಮಿಚ್ಛಾಮಿ ಜ್ಞಾನಂ ಜ್ಞೇಯಂ ಚ ಕೇಶವ ॥ 1 ॥**

**ಅರ್ಥ-** ಅರ್ಜುನ ಕೇಳಿದನು - ಕೇಶವನೇ ! ಪ್ರಕೃತಿ, ಪುರುಷ (ಜೀವ) ಕ್ಷೇತ್ರ, ಕ್ಷೇತ್ರಜ್ಞ, ಜ್ಞಾನ (ಜ್ಞಾನಸಾಧನ) ಹಾಗೂ ಜ್ಞೇಯ (ಪರಮಾತ್ಮ) ಎಂಬ ವಿಷಯಗಳ ಬಗ್ಗೆ ತಿಳಿಯ ಬಯಸಿದ್ದೇನೆ.

**ಪುರುಷಂ ಜೀವಮ್ । ಜ್ಞಾನಂ ಜ್ಞಾನಸಾಧನಮ್ ॥ 1 ॥**

**ಅನುವಾದ-**(ಈ ಶ್ಲೋಕದಲ್ಲಿ) ಪುರುಷನೆಂದರೆ ಜೀವ. ಜ್ಞಾನವೆಂದರೆ ಜ್ಞಾನಸಾಧನ. ॥ 1 ॥

**ವಿವರಣೆ-** ಆರರ ಬಗ್ಗೆ ಅರ್ಜುನ ಪ್ರಶ್ನಿಸಿದ್ದಾನೆ. ಅವುಗಳಲ್ಲಿ ಪ್ರಕೃತಿ, ಪುರುಷ ಎಂಬುದು ಒಂದು ಜೋಡಿ. ಕ್ಷೇತ್ರ, ಕ್ಷೇತ್ರಜ್ಞ ಎಂಬುದು ಎರಡನೆಯ ಯುಗ್ಮ. ಜ್ಞಾನ ಜ್ಞೇಯವೆಂಬುದು ಮೂರನೆಯ ಜೊತೆ.

ಪ್ರಕೃತಿ ಎರಡು ಬಗೆ . ಚಿತ್ ಹಾಗೂ ಅಚಿತ್. ಪುರುಷನೂ ಎರಡು. ಜೀವಾತ್ಮ ಹಾಗೂ ಪರಮಾತ್ಮ. ಸಾಮಾನ್ಯವಾಗಿ ಪ್ರಕೃತಿಶಬ್ದದೊಡನೆ ಬಳಸಿದ ಪುರುಷ ಶಬ್ದದಿಂದ ಪರಮಾತ್ಮನನ್ನು ಮಾತ್ರ ಇಟ್ಟುಕೊಳ್ಳುವುದಿದೆ. ಇಲ್ಲಿ ಜೀವನನ್ನೂ ಇಟ್ಟುಕೊಳ್ಳಬೇಕೆಂದು ರಾಯರು ತಿಳಿಸುತ್ತಿದ್ದಾರೆ.

ಏಕೆಂದರೆ ಮುಂದೆ ಶ್ರೀಕೃಷ್ಣನ ಉತ್ತರದಲ್ಲಿ '**ಪುರುಷಃ**' **ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್**' ಎಂದು ಜೀವನೂ '**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ**' ಎಂದು ದೇವನೂ ಪುರುಷ ಶಬ್ದದಿಂದ ನಿರೂಪಿಸಲ್ಪಟ್ಟಿದ್ದಾರೆ.

ಹಾಗೆಯೇ ಜ್ಞಾನವೆಂದರೆ ಜ್ಞಾನಸಾಧನವೆಂದರ್ಥ. '**ಜ್ಞಾಯತೇ ಅನೇನ**' ಎಂಬ ಕರಣವ್ಯುತ್ಪತ್ತಿಯಿಂದ. ಭಾವವ್ಯುತ್ಪತ್ತಿಯಿಂದ ಜ್ಞಪ್ತಿಯೆಂಬ ಪ್ರಸಿದ್ಧಾರ್ಥವನ್ನು ಮಾತ್ರ ಸ್ವೀಕರಿಸಲಾಗದು. ಏಕೆಂದರೆ ಮುಂದೆ '**ಏತದ್ ಜ್ಞಾನಮಿತಿ ಪ್ರೋಕ್ತಂ**' ಎಂದು ಉತ್ತರಿಸುವಾಗ ಅಮಾನಿತ್ವಮೊದಲಾದ ಇಪ್ಪತ್ತು ಜ್ಞಾನಸಾಧನಗಳನ್ನು ಜ್ಞಾನವೆನ್ನುತ್ತಾನೆ ಕೃಷ್ಣ.

**ಶ್ರೀ ಭಗವಾನುವಾಚ -**

**ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞಮಿತಿ ತದ್ವಿದಃ ॥ 2 ॥**

**ಅರ್ಥ**- ಶ್ರೀಭಗವಂತನೆಂದನು- ಕೌಂತೇಯ ! ಈ ಶರೀರವು (ಅಂದರೆ ಅವ್ಯಕ್ತಮಹ-ದಹಂಕಾರಾದಿಯು) ಕ್ಷೇತ್ರವೆಂದು ಕರೆಯಲ್ಪಟ್ಟಿದೆ . ಇದನ್ನು ಯಾರು ತಿಳಿಯುತ್ತಾನೋ ಅವನನ್ನು ಕ್ಷೇತ್ರಜ್ಞನೆಂದು ಕ್ಷೇತ್ರವನ್ನು ಬಲ್ಲವರು ಕರೆಯುತ್ತಾರೆ.

## ಕ್ಷೇತ್ರದ ಬಗ್ಗೆ ಹೇಳಹೊರಟುದೇಕೆ ?

**ನನು ಭಗವತ್ಸ್ವರೂಪಜ್ಞಾನಸ್ಯೈವ ಪೂರ್ವೋಕ್ತದಿಶಾ ಮುಕ್ತಿಹೇತುತ್ವಾತ್ ತತ್ಸ್ವರೂಪೋಕ್ತಿರ್ಯುಕ್ತಾ । ಕ್ಷೇತ್ರಸ್ವರೂಪಂ 'ಮಹಾಭೂತಾನಿ' (13-6) ಇತ್ಯಾದಿನಾ ಕಿಮರ್ಥಮತ್ರೋಚ್ಯತ ಇತಿ ಚೇನ್ನ । ಕ್ಷೇತ್ರಜ್ಞತ್ವವಿಶಿಷ್ಟಭಗವದ್ ಜ್ಞಾನೋಪಯೋಗಿತ್ವಾತ್ ಕ್ಷೇತ್ರೋಕ್ತಿರಿತಿ ಕ್ಷೇತ್ರೋದ್ದೇಶಪೂರ್ವಂ ಭಗವತಃ ಕ್ಷೇತ್ರಜ್ಞತ್ವಮಾಹ- ಇದಮಿತಿ ॥**

**ಅನುವಾದ** – ಹಿಂದೆ ಹೇಳಿರುವಂತೆ ಭಗವತ್‌ಸ್ವರೂಪದ ಜ್ಞಾನವೇ ಮುಕ್ತಿಹೇತು-ವಾಗಿರುವುದರಿಂದ ಭಗವತ್‌ಸ್ವರೂಪವನ್ನು ಹೇಳುವುದು ಉಚಿತ. '**ಮಹಾಭೂತಾನಿ**' (13-6) ಎಂದು ಆರಂಭಿಸಿ ಕ್ಷೇತ್ರ ಸ್ವರೂಪವು ಇಲ್ಲಿ ಏತಕ್ಕಾಗಿ ನಿರೂಪಿತವಾಗುತ್ತಿದೆ ? ಎಂಬ ಆಕ್ಷೇಪಕ್ಕೆ ಇಷ್ಟೇ ಉತ್ತರ. ಕ್ಷೇತ್ರಜ್ಞನಾದ ಭಗವಂತನ ಅರಿವಿಗಾಗಿ ಕ್ಷೇತ್ರದ ಬಗ್ಗೆ ಹೇಳಿದುದು ಎಂದು. ಅದಕ್ಕಾಗಿ ಕ್ಷೇತ್ರವನ್ನು ನಿರ್ದೇಶಿಸಿ ಭಗವಂತನು ಕ್ಷೇತ್ರಜ್ಞನೆನ್ನುತ್ತಿದ್ದಾನೆ '**ಇದಂ ಶರೀರಂ**' ಎಂಬ ಶ್ಲೋಕದಿಂದ.

**ಕೌಂತೇಯ, ಇದಂ ಶರೀರಮ್ ಅವ್ಯಕ್ತಮಹದಹಂಕಾರಾದಿಕಂ ಭಗವದಾವಾಸಸ್ಥಾನತ್ವಾತ್ ಕ್ಷೀಯತೇ ಸ್ಥೀಯತೇಽತ್ರ ಭಗವತೇತಿ ವ್ಯುತ್ಪತ್ತ್ಯಾ ಕ್ಷೇತ್ರಮಿತ್ಯಭಿಧೀಯತೇ । ಏತದವ್ಯಕ್ತಾದಿಕಂ ಕ್ಷೇತ್ರಶಬ್ದಿತಂ ಯೋ ವೇತ್ತಿ ಜಾನಾತಿ ತಂ ತದ್ವಿದಃ ಕ್ಷೇತ್ರವಿದಃ ಕ್ಷೇತ್ರಜ್ಞಮಿತಿ ಪ್ರಾಹುರಿತ್ಯರ್ಥಃ । ಶರೀರಶಬ್ದಸ್ಯಾವ್ಯಕ್ತಾದಿಪರತ್ವಂ ಚ ಸ್ವಪರಿಣಾಮದೇಹಾದಿವಿಯೋಗದ್ವಾರಾ ಜೀವಸ್ಯ ಹಿಂಸಾದಿಹೇತುತ್ವಾತ್ ಶರ್, ಶೃ ಹಿಂಸಾಯಾಮಿತಿ ಧಾತೋಃ, ಭಗವತಾ ಪ್ರೇರ್ಯತ್ವಾದೀರಂ ಚ । ಈರ ಪ್ರೇರಣ ಇತಿ ಧಾತೋಃ । ಶರ್ ಚ ತದೀರಂ ಚೇತಿ ಶರೀರಮಿತಿ ವ್ಯುತ್ಪತ್ತೇರಿತಿ ಜ್ಞೇಯಮ್ । ತೇನ ಸಂಘಾತಶ್ಚೇತನೇತಿ ಸಂಘಾತಪದೇನ ಕ್ಷೇತ್ರವಿಕಾರೇಷ್ವೇಕದೇಶತ್ವೇನೋಕ್ತಶರೀರಸ್ಯ ಕಥಂ ಸಮಸ್ತಕ್ಷೇತ್ರತ್ವಮುಚ್ಯತ ಇತಿ ಶಂಕಾ ನಿರಸ್ತಾ । ॥ 2 ॥**

**ಅನುವಾದ–** ಕುಂತಿಯ ಮಗನೇ, **ಇದಂ ಶರೀರಂ**= ಅವ್ಯಕ್ತ, ಮಹತ್ತತ್ತ್ವ, ಅಹಂಕಾರತತ್ತ್ವ ಮೊದಲಾದವು ಭಗವದಾವಾಸಸ್ಥಾನವಾದುದರಿಂದ **ಕ್ಷೀಯತೇ**= **ಸ್ಥೀಯತೇ ಅತ್ರ ಭಗವತಾ**= ಭಗವಂತನಿಂದ ಇಲ್ಲಿ ವಾಸಮಾಡಲ್ಪಡುತ್ತದೆ ಎಂಬ ವ್ಯುತ್ಪತ್ತಿಯಿಂದ[1] ಕ್ಷೇತ್ರವೆಂದು ಕರೆಯಲ್ಪಡುತ್ತಿದೆ. **ಏತತ್**= ಅವ್ಯಕ್ತ ಮೊದಲಾದುವನ್ನು ಕ್ಷೇತ್ರ ಶಬ್ದದಿಂದ ಹೇಳಲ್ಪಟ್ಟುವನ್ನು ಯಾರು **ವೇತ್ತಿ**= ತಿಳಿಯುತ್ತಾನೋ ಅವನನ್ನು **ತದ್ವಿದಃ**= ಕ್ಷೇತ್ರವನ್ನು ತಿಳಿದವರು ಕ್ಷೇತ್ರಜ್ಞನೆಂದು ಹೇಳುವರೆಂದರ್ಥ.

## ಶರೀರವೆಂದರೆ ಅವ್ಯಕ್ತಾದಿ ತತ್ವಗಳು

ಶರೀರಶಬ್ದವು ಅವ್ಯಕ್ತಾದಿಗಳನ್ನು ಹೇಳುವುದೆಂತೆಂದರೆ. ತನ್ನ (ಅವ್ಯಕ್ತಾದಿಗಳ) ಪರಿಣಾಮವಾದ ದೇಹಗೇಹಾದಿಗಳ ವಿಯೋಗದ ಮೂಲಕ ಜೀವನಿಗೆ ಹಿಂಸೆಗೆ ಹೇತುವಾದ್ದರಿಂದ '**ಶೃ ಹಿಂಸಾಯಾಂ**' ಎಂಬ ಧಾತುವಿನಿಂದಾಗಿ (ಈ ಅವ್ಯಕ್ತಾದಿಯು) ಶರ್ ಎನಿಸಿದೆ. ಭಗವಂತನಿಂದ ಪ್ರೇರಿಸಲ್ಪಡುವುದರಿಂದ 'ಈರ ಪ್ರೇರಣೇ' ಎಂಬ ಧಾತುವಿನಿಂದ '**ಈರ** ' ಎಂದೆನಿಸಿದೆ. ಶರ್ ಹಾಗೂ ಈರವಾದುದರಿಂದ ಶರೀರವೆಂದು ಕರೆಸಿಕೊಂಡಿದೆ. ಹೀಗೆ ವ್ಯುತ್ಪತ್ತಿಯನ್ನು ಇಟ್ಟುಕೊಂಡುದರಿಂದ ಶರೀರಶಬ್ದವು ಅವ್ಯಕ್ತಾದಿಗಳನ್ನು ಹೇಳಿದೆಯೆಂದು ತಿಳಿಯಬೇಕು. ಈ ರೀತಿ ವ್ಯಾಖ್ಯಾನಿಸಿದುದರಿಂದ '**ಸಂಘಾತಶ್ಚೇತನಾ**' ಎಂಬಲ್ಲಿ ಸಂಘಾತ ಪದದಿಂದ ಕ್ಷೇತ್ರವಿಕಾರಗಳಲ್ಲಿ ಏಕದೇಶವಾಗಿ ಹೇಳಲ್ಪಡುವ ಶರೀರವನ್ನು 'ಸಮಸ್ತ ಕ್ಷೇತ್ರವಿದು' ಎಂದು ಹೇಗೆ ತಾನೇ ಹೇಳುತ್ತಾರೆ? ಎಂಬ ಶಂಕೆ ಪರಿಹೃತವಾಗಿದೆ. ॥ 2 ॥

---

1. ವ್ಯಾಕರಣಶಾಸ್ತ್ರದ ಪ್ರಕಾರ ಶಬ್ದದ ಮೂಲವನ್ನು ವಿವೇಚಿಸಿ ಪ್ರಕೃತಿ ಪ್ರತ್ಯಯಗಳನ್ನು ಒಡೆದು ಅರ್ಥನಿಷ್ಕರ್ಷೆ ಮಾಡುವ ವಿಧಾನಕ್ಕೆ ವ್ಯುತ್ಪತ್ತಿಯೆನ್ನಲಾಗುತ್ತಿದೆ.

ವಿವರಣೆ- ಕ್ಷೇತ್ರದ ಬಗ್ಗೆ ಪ್ರಶ್ನಿಸಲ್ಪಟ್ಟ ಕೃಷ್ಣ ಈ ಶರೀರವು ಕ್ಷೇತ್ರವೆಂದ. ಆದರೆ ಮುಂದೆ ಆರನೇ ಶ್ಲೋಕದಲ್ಲಿ 'ಮಹಾಭೂತಾನ್ಯಹಂಕಾರಃ' ಎಂದು ಆರಂಭಿಸಿ ಇಪ್ಪತ್ತೇಳು ವಸ್ತುಗಳನ್ನು ಉಲ್ಲೇಖಿಸಿ ಇವು ಕ್ಷೇತ್ರವೆನ್ನುತ್ತಾನೆ. ಈ ಇಪ್ಪತ್ತೇಳರಲ್ಲಿ (ಸಂಘಾತಶ್ಚೇತನಾ ಧೃತಿಃ) ಸಂಘಾತ ಅಂದರೆ ದೇಹವೂ ಒಂದು. ಅಂತಹ ದೇಹವೆಂಬ ಏಕದೇಶವನ್ನು ಮಾತ್ರ ಕ್ಷೇತ್ರವೆನ್ನುವುದು ಪೂರ್ವಾಪರಗಳಲ್ಲಿ ಅನುಚಿತವಾಗುತ್ತದೆ. ಆದ್ದರಿಂದಲೇ ಇಲ್ಲಿಯ ಶರೀರ ಶಬ್ದಕ್ಕೆ ವಿಶಾಲವಾದ ಅರ್ಥವನ್ನು ಸ್ವೀಕರಿಸಲಾಗಿದೆ. ಶರೀರವೆಂದರೆ ಮುಂದೆ ಹೇಳುವ ಮಹಾಭೂತ, ಅಹಂಕಾರ ಮೊದಲಾದ ತತ್ವಗಳೇ ಆಗಿದೆ. ಇದು ಕ್ಷೇತ್ರ. ಏಕೆಂದರೆ ಶರೀರವೆಂದರೇನು ? 'ಶರ್' ಹಾಗೂ ಈರವೇ ಶರೀರ. 'ಶರ್' ಎಂದರೆ ಹಿಂಸಿಸುವಂಥದು. ಈರವೆಂದರೆ ಪ್ರೇರೇಪಿಸಲ್ಪಡುವಂಥದು. ಅವ್ಯಕ್ತಾದಿ ತತ್ವಗಳಿಂದಾದ ದೇಹಾದಿವಿಯೋಗಗಳಿಂದಲೇ ಜೀವನಿಗೆ ಹಿಂಸೆ. ಅದೂ ದೇವನಿಂದ ಪ್ರೇರಿತ ವಾಗಿ ಜೀವನನ್ನು ಹಿಂಸಿಸುತ್ತದೆ. ಆದ್ದರಿಂದ ಈ ತತ್ವಗಳು ಶರೀರವೆನಿಸಿದೆ. ದೇವನು ಅವುಗಳಲ್ಲಿ ನೆಲೆನಿಂತುದರಿಂದ ಅವೇ ಕ್ಷೇತ್ರವೆನಿಸಿವೆ. 'ಕ್ಷಿ ನಿವಾಸಗತ್ಯೋಃ' ಎಂಬ ಧಾತುಪಾಠದಂತೆ ಕ್ಷಿಧಾತುವಿಗೆ ನಿವಾಸವೆಂದೂ ಅರ್ಥ. 'ಕ್ಷೀಯತೇ ಸ್ಥೀಯತೇ ಅತ್ರ' ಎಂಬ ವ್ಯುತ್ಪತ್ತಿಯಿಂದ ಭಗವದಾವಾಸಸ್ಥಾನವಾದ ಅವ್ಯಕ್ತಾದಿತತ್ವಗಳು ಕ್ಷೇತ್ರವೆಂದೂ ಕರೆಸಿಕೊಂಡಿವೆ. ಗೀತಾತಾತ್ಪರ್ಯ ದಲ್ಲಿ ಒಂದು ಶ್ಲೋಕದಲ್ಲಿ ಈ ವಿಷಯ ತಿಳಿಸಲ್ಪಟ್ಟಿದೆ –

ಹಿಂಸಾಹೇತುಶ್ಚ ಜೀವಸ್ಯ ಪರೇಣ ಪ್ರೇರ್ಯತೇ ಚ ಯತ್ ।
ಅವ್ಯಕ್ತಾದಿ ಶರೀರಂ ತು ತತ್ ಕ್ಷೇತ್ರಂ ಕ್ಷೀಯತೇಽತ್ರ ಯತ್ ॥

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತದ್‌ಜ್ಞಾನಂ ಮತಂ ಮಮ ॥ 3 ॥**

ಅರ್ಥ- ಭರತಕುಲೋದ್ಭವನಾದ ಪಾರ್ಥ ! ಅವ್ಯಕ್ತಾದಿ ಸರ್ವಕ್ಷೇತ್ರವಿಷಯದಲ್ಲೂ ಅರಿವುಳ್ಳ ನನ್ನನ್ನೇ ಕ್ಷೇತ್ರಜ್ಞನೆಂದು ತಿಳಿ. ಕ್ಷೇತ್ರ ಕ್ಷೇತ್ರಜ್ಞರ ಜ್ಞಾನವೆಂಬುದು ಸರಿಯಾದ ಜ್ಞಾನವೆಂದು ನನ್ನ ಅಭಿಪ್ರಾಯ.

**ಜೀವಸ್ಯಾಪಿ ಕಿಂಚಿತ್ ಕ್ಷೇತ್ರಜ್ಞಾನಾತ್ ಸ ಕಿಂ ಕ್ಷೇತ್ರಜ್ಞ ಇತ್ಯತ ಆಹ- ಕ್ಷೇತ್ರಜ್ಞಂ ಚೇತಿ ॥ ಸರ್ವಕ್ಷೇತ್ರೇಷ್ವವ್ಯಕ್ತಾದಿಷು ಕ್ಷೇತ್ರಜ್ಞಂ ತು ಮಾಂ ವಿದ್ಧಿ । ನ ಜೀವಮ್ । ಕ್ಷೇತ್ರಕ್ಷೇತ್ರಜ್ಞಯೋರ್ಯದ್‌ಜ್ಞಾನಂ ತದ್‌ಜ್ಞಾನಂ ಮಮ ಸಮ್ಯಗ್-ಜ್ಞಾನಂ ಮತಮಿತ್ಯರ್ಥಃ । ಅತ್ರ ಸರ್ವಕ್ಷೇತ್ರೇಷ್ವಿತ್ಯುಕ್ತಿರಿದಂ ಶರೀರಮಿತ್ಯತ್ರ ಶರೀರಪದೋಕ್ತಾವ್ಯಕ್ತಾದೇಃ ಕ್ಷೀಯತೇಽತ್ರೇಶ್ವರೇಣೇತಿ ವ್ಯುತ್ಪತ್ತ್ಯಾ ಕ್ಷೇತ್ರಪದ-ವಾಚ್ಯತ್ವಮಿತಿ ಸೂಚನಾಯ ॥ 3 ॥**

**ಅನುವಾದ–** ಜೀವನಿಗೂ ಕ್ಷೇತ್ರದ ಬಗ್ಗೆ ಅಲ್ಪಜ್ಞಾನವಿರುವುದರಿಂದ ಅವನು ಕ್ಷೇತ್ರಜ್ಞನೇನು? ಎಂಬ ಪ್ರಶ್ನೆಯೇಳುವುದರಿಂದ ಹೇಳುತ್ತಿದ್ದಾನೆ. '**ಕ್ಷೇತ್ರಜ್ಞಂ ಚ**' ಎಂಬುದಾಗಿ. **ಸರ್ವಕ್ಷೇತ್ರೇಷು=** ಅವ್ಯಕ್ತ ಮೊದಲಾದ ಕ್ಷೇತ್ರಗಳ ವಿಷಯದಲ್ಲಿ ಕ್ಷೇತ್ರಜ್ಞನನ್ನಾಗಿ ನನ್ನನ್ನೇ ತಿಳಿ. ಜೀವನನ್ನಲ್ಲ. ಕ್ಷೇತ್ರ ಹಾಗೂ ಕ್ಷೇತ್ರಜ್ಞರ ಬಗೆಗಿನ ಏನು ಜ್ಞಾನವಿದೆ ಆ ಜ್ಞಾನವು ಸರಿಯಾದ ಜ್ಞಾನವೆಂದು ನನ್ನ ಅಭಿಪ್ರಾಯ ಎಂದು ಈ ಶ್ಲೋಕದ ಅರ್ಥ. ಇಲ್ಲಿ ಸರ್ವಕ್ಷೇತ್ರೇಷು ಎಂದು ಹೇಳಿದುದು (ಏಕೆಂದರೆ) '**ಇದಂ ಶರೀರಮ್**' ಎಂಬ ಶ್ಲೋಕದಲ್ಲಿ ಶರೀರ ಪದದಿಂದ ಹೇಳಲ್ಪಟ್ಟ ಅವ್ಯಕ್ತಾದಿಗಳು **ಕ್ಷೀಯತೇ ಅತ್ರ ಈಶ್ವರೇಣ=** ಭಗವಂತನು ಇಲ್ಲಿ ವಾಸಿಸಿದ್ದಾನೆ' ಎಂಬ ವ್ಯುತ್ಪತ್ತಿಯಿಂದ ಕ್ಷೇತ್ರಪದದಿಂದ ವಾಚ್ಯಗಳಾಗಿವೆ ಎಂದು ಸೂಚಿಸುವುದಕ್ಕಾಗಿ. || 3 ||

**ವಿವರಣೆ-** '**ಏತದ್ ಯೋವೇತ್ತಿ**' ಎಂಬ ಹಿಂದಿನ ಶ್ಲೋಕದಲ್ಲಿ ಕ್ಷೇತ್ರವನ್ನು ತಿಳಿದ ಭಗವಂತನು ಕ್ಷೇತ್ರಜ್ಞನೆಂದು ಹೇಳಿ ಆಗಿದೆ. ಹಾಗಿದ್ದೂ '**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ**' ಎಂದು ಹೇಳುದುದರ ಅಭಿಪ್ರಾಯವೇನೆಂದರೆ ಜೀವನಿಗೂ ಕ್ಷೇತ್ರದ ಬಗ್ಗೆ ಸ್ವಲ್ಪ ಜ್ಞಾನವಿರುವುದರಿಂದ ಕ್ಷೇತ್ರಜ್ಞನೆಂಬ ಶಬ್ದದಿಂದ ಅವನನ್ನೂ ತೆಗೆದುಕೊಳ್ಳುವ ಪ್ರಸಂಗವಿರುವುದರಿಂದ ಅವನನ್ನು ವ್ಯಾವೃತ್ತಿ ಮಾಡಿ ಭಗವಂತನೇ ಕ್ಷೇತ್ರನೆಂದು ದೃಢಪಡಿಸುವುದು. ಹೀಗೆ ಭಗವಂತನೇ ಕ್ಷೇತ್ರಜ್ಞನೆಂದು ದೃಢಪಡಿಸುವ ಅಭಿಪ್ರಾಯವಿಲ್ಲವಾಗಿದ್ದರೆ ಹಿಂದಿನ ಶ್ಲೋಕದಲ್ಲೇ ಕ್ಷೇತ್ರವನ್ನು ತಿಳಿದ ಭಗವಂತನು ಕ್ಷೇತ್ರಜ್ಞನೆಂದು ಹೇಳಿರುವುದರಿಂದ ಮತ್ತೆ '**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ**' ನಾನು ಕ್ಷೇತ್ರಜ್ಞನೆಂದು ತಿಳಿ ಎಂಬುದು ವ್ಯರ್ಥವಾಗುವುದು.

'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' ಎಂದಷ್ಟೇ ಹೇಳಿದ್ದರೆ ಸಾಕಿತ್ತು. 'ಸರ್ವಕ್ಷೇತ್ರೇಷು' ಎಂದು ಹೇಳಿದುದು ಏಕೆಂದರೆ ಅವ್ಯಕ್ತಾದಿಗಳೂ ಕ್ಷೇತ್ರಗಳೇ ಆಗಿವೆಯೆಂದು ತಿಳಿಸುವುದಕ್ಕಾಗಿ. ಕ್ಷೇತ್ರವೆಂದರೆ ಭಗವದಾವಾಸಸ್ಥಾನವೆಂದರ್ಥ. '**ಕ್ಷೀಯತೇ ವಸತಿ ಅತ್ರ ಭಗವಾನ್**' ಎಂಬ ವ್ಯುತ್ಪತ್ತಿಯಿಂದ '**ಸರ್ವಕ್ಷೇತ್ರೇಷು ಸ್ಥಿತಂ**' '**ಮಾಂ ಕ್ಷೇತ್ರಜ್ಞಂ ವಿದ್ಧಿ**' ಎಂದು ಭಗವಂತನು ಸರ್ವಕ್ಷೇತ್ರಗಳಲ್ಲಿ ಸ್ಥಿತನಾಗಿದ್ದಾನೆ ಎಂದುದರಿಂದ ಅವ್ಯಕ್ತಾದಿಗಳಲ್ಲಿ ಕ್ಷೇತ್ರಶಬ್ದವು ಅನ್ವರ್ಥವೆಂದು ತಿಳಿಯುತ್ತದೆ.

**ತತ್ಕ್ಷೇತ್ರಂ ಯಚ್ಚ ಯಾದೃಕ್ ಚ ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು || 4 ||**

**ಅರ್ಥ–** ಆ ಕ್ಷೇತ್ರ ಎಂಥದು ? ಹೇಗಿದೆ ? ಅದರ ವಿಕಾರಗಳೇನು ? ಎಂಥವನಿಂದ ಅದರಲ್ಲಿ ಪ್ರವೃತ್ತಿ ? ಆ ಪ್ರವರ್ತಕ ಯಾರು ? ಅವನ ಪ್ರಭಾವವೇನು ? ಈ ಎಲ್ಲವನ್ನೂ ಸಂಕ್ಷೇಪವಾಗಿ ನನ್ನಿಂದ ಕೇಳು.

**ಕ್ಷೇತ್ರಾದಿಸ್ವರೂಪಂ ವಕ್ತುಂ ಪ್ರತಿಜಾನೀತೇ- ತತ್ ಕ್ಷೇತ್ರಮಿತಿ ॥ ತತ್ ಕ್ಷೇತ್ರಂ ಯದ್‌ಭಗವನ್ನಿವಾಸಸ್ಥಾನತಯಾ ಕ್ಷೇತ್ರಪದೋಕ್ತಮ್ । ದೇಹದ್ವಾರಾ ಜೀವ- ಹಿಂಸಾಹೇತುತಯಾ ಈಶ್ವರಪ್ರೇರ್ಯತ್ವಹೇತುನಾ ಚ ಶರೀರಪದೇನ ಪ್ರಕೃತಂ ಅವ್ಯಕ್ತಾದಿ, ಯಚ್ಚ ಯತ್ಸ್ವರೂಪಂ ಯಾದೃಕ್ ಯತ್ಪ್ರಕಾರಂ ಯದ್ವಿಕಾರಿ । ಕರ್ಮಧಾರಯಾತ್ ಮತುಪ್ । ಯೇನ ವಿಕಾರೇಣ (ಸಂ) ಯುಕ್ತಮ್ । ಯತಃ ಯಾದೃಶಪ್ರವೃತ್ತ್ಯನುಕೂಲಧರ್ಮ ಯುಕ್ತಾತ್ಪುರುಷಾತ್ । ಯತ್ । ಇಣಃ ಶತ್ರಂತಂ ರೂಪಮ್ । ಗತಿಮತ್ । ಪ್ರವರ್ತತ ಇತಿ ಯಾವತ್ । ಸಚ ಪ್ರವರ್ತಕಃ ಯಃ ಯತ್ಸ್ವರೂಪಃ ಯತ್ಪ್ರಭಾವಃ ಯಾದೃಶಪ್ರವೃತ್ತ್ಯನುಕೂಲಧರ್ಮೇತರ- ಸಾಮರ್ಥ್ಯವಾನ್, ತತ್ಸರ್ವಂ ಸಮಾಸೇನ ಸಂಕ್ಷೇಪೇಣ ಮೇ ಸಕಾಶಾತ್‌ಶೃಣು ಶ್ರುತ್ವಾ ನಿಷ್ಠಾಂ ಕುರು ॥ 4 ॥**

**ಅನುವಾದ–** ಕ್ಷೇತ್ರಾದಿಗಳ ಸ್ವರೂಪವನ್ನು ಹೇಳುವುದಕ್ಕೆ ಪ್ರತಿಜ್ಞೆ[1] ಮಾಡುತ್ತಿದ್ದಾನೆ. 'ತತ್ ಕ್ಷೇತ್ರಂ' ಎಂಬ ಶ್ಲೋಕದಲ್ಲಿ. **ತತ್ ಕ್ಷೇತ್ರಂ** = ಏನೊಂದು ಭಗವಂತನ ನಿವಾಸಸ್ಥಾನವೆಂದು ಕ್ಷೇತ್ರ ಪದದಿಂದ ಹೇಳಲ್ಪಟ್ಟುದು. ದೇಹದ ಮೂಲಕ ಜೀವನಿಗೆ ಹಿಂಸಾ ಹೇತುವಾದ್ದರಿಂದ (ಶರ್ ಎಂದೂ) ಹಾಗೂ ಈಶ್ವರನಿಂದ ಪ್ರೇರಿಸಲ್ಪಡುವುದರಿಂದ (ಈರ ಎಂದೂ) ಶರೀರ ಪದದಿಂದ ಪ್ರಕೃತವಾದ **ಅವ್ಯಕ್ತಾದಿಗಳು ಯತ್**= ಯಾವ ಸ್ವರೂಪದವು? (ಹಾಗೂ) **ಯಾದೃಕ್**= ಎಷ್ಟು ವಿಧವಾಗಿದೆ 'ಯದ್ವಿಕಾರಿ' (ಎಂಬಲ್ಲಿ) ಕರ್ಮಧಾರಯವಾದ ಯದ್ವಿಕಾರ ಶಬ್ದದ ಮೇಲೆ ಮತುಬರ್ಥಪ್ರತ್ಯಯ ಬಂದಿದೆ. ಯಾವ ವಿಕಾರವುಳ್ಳದ್ದು? (ಎಂದರ್ಥ) **ಯತಃ**– ಎಂತಹ ಪ್ರವೃತ್ತಿಗೆ ಅನುಕೂಲವಾದ ಸಾಮರ್ಥ್ಯವುಳ್ಳ ಪುರುಷನಿಂದ 'ಯತ್' ಇದು 'ಇಣ್ ಗತೌ' ಧಾತುವಿನ ಶತೃಪ್ರತ್ಯಯಾಂತವಾದ ರೂಪ. ಗತಿಯುಳ್ಳದ್ದು (ಎಂದರ್ಥ) ಪ್ರವೃತ್ತಿ ಮಾಡುತ್ತದೆ ಎಂದು ಅಭಿಪ್ರಾಯ. **ಸ ಚ**= ಆ ಪ್ರವರ್ತಕನು, **ಯಃ**= ಎಂಥ ಸ್ವರೂಪದವ ? **ಯತ್ ಪ್ರಭಾವಃ**= ಪ್ರವೃತ್ತಿಗೆ ಬೇಕಾದ ಸಾಮರ್ಥ್ಯಕ್ಕಿಂತ ಬೇರೆಯಾದ ಎಂತಹ ಸಾಮರ್ಥ್ಯವುಳ್ಳವ ? **ತತ್**= ಆ ಎಲ್ಲವನ್ನೂ , **ಸಮಾಸೇನ**= ಸಂಕ್ಷೇಪವಾಗಿ, **ಮೇ**= ನನ್ನ ದೆಸೆಯಿಂದ **ಶೃಣು**= ಕೇಳಿ ಗಟ್ಟಿಮಾಡಿಕೋ. ॥ 4 ॥

**ವಿವರಣೆ-** '**ಯದ್ವಿಕಾರಿ**' ಎಂಬ ಶಬ್ದಕ್ಕೆ ಸಾಮಾನ್ಯವಾಗಿ ಯಾವುದರ ವಿಕಾರವೆಂಬ ಅರ್ಥ ಹೇಳುತ್ತದೆ. ಇಲ್ಲಿ ಬೇಕಾದ ಅರ್ಥ ಯಾವ ವಿಕಾರವುಳ್ಳದ್ದು ? ಎಂಬುದು. ಅದಕ್ಕಾಗಿ ಯದ್ವಿಕಾರಿ

1.ಯಾವುದೇ ವಿಷಯವನ್ನು ಹೇಳಲು ಪ್ರಾರಂಭಿಸುವಾಗ 'ನಾನು ಇದೀಗ ಇಂಥಹ ವಿಷಯವನ್ನು ಹೇಳುತ್ತೇನೆ 'ಎಂಬ ಪೀಠಿಕಾವಾಕ್ಯವನ್ನು ಶಾಸ್ತ್ರದ ಪರಿಭಾಷೆಯಲ್ಲಿ 'ಪ್ರತಿಜ್ಞೆ' ಎನ್ನಲಾಗುತ್ತದೆ. 'ಸೂತ್ರಾರ್ಥ ಉಚ್ಯತೇ' ಎಂಬ ಆಚಾರ್ಯರ ಮಾತು ಪ್ರತಿಜ್ಞೆ.

ಎಂಬಲ್ಲಿ **'ಯಸ್ಯ ವಿಕಾರಿ'** ಎಂಬ 'ಷಷ್ಠೀ' ತತ್ಪುರುಷವನ್ನು ಮಾಡದೇ **'ಯಶ್ಚಾಸೌ ವಿಕಾರಶ್ಚ'** ಎಂಬ ಕರ್ಮಧಾರಯಸಮಾಸವನ್ನು ಮಾಡಬೇಕು. 'ಯದ್ವಿಕಾರ' ಎಂಬ ಕರ್ಮಧಾರಯದ ಮೇಲೆ ಅದು ಉಳ್ಳದ್ದು ಎಂಬ ಅರ್ಥದ ಮತುಬರ್ಥಕ 'ಇನಿ' ಪ್ರತ್ಯಯವನ್ನು ಮಾಡಿದಾಗ ಯದ್ವಿಕಾರಿಯೆಂಬ ಶಬ್ದ ಯಾವ ವಿಕಾರದಿಂದ ಕೂಡಿರುವಂಥದು ? ಎಂಬ ಅರ್ಥವನ್ನು ನೀಡುತ್ತದೆ.

**ಯತಶ್ಚ ಯತ್** ಎಂಬಲ್ಲಿರುವ 'ಯತ್' ಶಬ್ದವು 'ಯದ್' ಎಂಬ ಶಬ್ದದ ರೂಪವಲ್ಲ. ಅದು 'ಇಣ್ ಗತೌ' ಧಾತುವಿನ ಶತೃಪ್ರತ್ಯಯಾಂತವಾದ ರೂಪ. 'ಇಣ್' ಧಾತುವಿಗೆ ಗತಿಯೆಂಬ ಅರ್ಥವಿರುವುದರಿಂದ 'ಯತ್' ಎಂದರೆ ಗತಿಯುಳ್ಳದ್ದು ಪ್ರವೃತ್ತಿಯುಳ್ಳದ್ದು ಎಂಬ ಅರ್ಥವು ಸ್ಫುರಿಸಿದೆ.

**ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತಂ ॥ 5 ॥**

**ಅರ್ಥ-** ಈ ಕ್ಷೇತ್ರ ಸ್ವರೂಪವು ಋಷಿಗಳಿಂದ ಬಹುಬಗೆಯಿಂದ ಹೇಳಲ್ಪಟ್ಟಿದೆ. ನಾನಾ ವೇದಗಳಿಂದಲೂ ಪ್ರತ್ಯೇಕವಾಗಿ ವರ್ಣಿಸಲ್ಪಟ್ಟಿದೆ. ಯುಕ್ತಿಗಳಿಂದ ಕೂಡಿದ ಬ್ರಹ್ಮಸೂತ್ರಪದಗಳಿಂದಲೂ ನಿರ್ಣೀತವಾಗಿದೆ. (ಅಂಥದ್ದನ್ನು ಕೇಳು)

**ಶ್ರೋತೃವಿಶ್ವಾಸಜನನಾಯ ಉಚ್ಯಮಾನಂ ಪ್ರಾಮಾಣಿಕಮಿತ್ಯಾಹ- ಋಷಿಭಿರಿತಿ ॥ ತದಿತ್ಯನುಷಜ್ಯತೇ । ಯತ್ಶೃಣ್ವಿತ್ಯುಕ್ತಂ ಕ್ಷೇತ್ರಾದಿಸ್ವರೂಪಂ ತದ್-ಋಷಿಭಿರ್ಬಹುಧಾ ಗೀತಮ್ । ಗೈ ಶಬ್ದೇ । ಉಕ್ತಮಿತ್ಯರ್ಥಃ ವಿವಿಧೈಃ ಛಂದೋಭಿರ್ವೇದೈಃ । ಪ್ರತ್ಯೇಕಂ ಗೀತಮಿತಿ ಸರ್ವತ್ರಾನುಷಜ್ಯತೇ । ಹೇತುಮದ್ಭಿಃ ನ್ಯಾಯೋಪೇತೈಃ ಬ್ರಹ್ಮಸೂತ್ರಪದೈಶ್ಚ ವಿನಿಶ್ಚಿತಮೇವ ಶೃಣ್ವಿತ್ಯನ್ವಯಃ ॥ 5 ॥**

**ಅನುವಾದ-** ಶ್ರೋತೃಗಳಿಗೆ ವಿಶ್ವಾಸವನ್ನು ಹುಟ್ಟಿಸುವುದಕ್ಕಾಗಿ ಹೇಳುತ್ತಿರುವ ವಿಷಯ ಪ್ರಾಮಾಣಿಕವಾಗಿದೆಯೆನ್ನುತ್ತಿದ್ದಾನೆ. 'ಋಷಿಭಿಃ' ಎಂಬ ಶ್ಲೋಕದಿಂದ.

**'ತತ್'** ಎಂಬುದನ್ನು (**'ತತ್ ಸಮಾಸೇನ ಮೇ ಶೃಣು'** ಎಂಬ ಹಿಂದಿನ ಶ್ಲೋಕದಿಂದ) ಅನುಷಂಗ[1] ಮಾಡಿಕೊಳ್ಳಬೇಕು. ಶೃಣು ಎಂದು ಹೇಳಲ್ಪಟ್ಟ ಯಾವ ಕ್ಷೇತ್ರಾದಿ ಸ್ವರೂಪವಿದೆ

1. ವಾಕ್ಯಾಂತರದ ಪದಗಳೊಡನೆ ಸಂಬಂಧಕ್ಕೆ ಅನುಷಂಗವೆಂದು ಹೆಸರು. ಹಿಂದಿನ ವಾಕ್ಯಾಂತರದ ಪದಗಳನ್ನು ಪ್ರಕೃತ ಇಟ್ಟುಕೊಳ್ಳುವುದನ್ನು ಅನುಷಂಗವೆಂದು ವ್ಯವಹರಿಸಲಾಗುತ್ತದೆ.

ಅದು ಋಷಿಗಳಿಂದ ಹಲವು ಬಗೆಯಿಂದ **ಗೀತಂ** ಇದು 'ಗೈ ಶಬ್ದೇ' ಎಂಬ ಧಾತುವಿನ ರೂಪ. ಹೇಳಲ್ಪಟ್ಟಿದೆಯೆಂದರ್ಥ. ವಿವಿಧಗಳಾದ **ಛಂದೋಭಿಃ** = ವೇದಗಳಿಂದ. **ಗೀತಂ** ಎಂಬುದನ್ನು ಪ್ರತಿಬಾರಿಯೂ ಎಲ್ಲೆಡೆ ಸಂಬಂಧವಿಟ್ಟುಕೊಳ್ಳಬೇಕು. **ಹೇತುಮದ್ಭಿಃ**= ನ್ಯಾಯದಿಂದ ಕೂಡಿರುವ ಬ್ರಹ್ಮಸೂತ್ರದ ಪದಗಳಿಂದ ನಿರ್ಣೀತವಾಗಿಯೇ ಹೇಳಲ್ಪಟ್ಟಿರುವ ಕ್ಷೇತ್ರಾದಿಸ್ವರೂಪದ ಬಗ್ಗೆ ಕೇಳು ಎಂದು ಅನ್ವಯ. ॥ 5 ॥

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ ॥ 6 ॥**

**ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।**
**ಏತತ್ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥ 7 ॥**

**ಅರ್ಥ**– ಪಂಚಮಹಾಭೂತಗಳು ಅಹಂಕಾರತತ್ತ್ವ ಮಹತ್ತತ್ತ್ವ ಅವ್ಯಕ್ತತತ್ತ್ವ ಹನ್ನೊಂದು ಇಂದ್ರಿಯಗಳು, ಪಂಚಜ್ಞಾನೇಂದ್ರಿಯಗೋಚರಗಳಾದ ಶಬ್ದಾದಿ ಪಂಚವಿಷಯಗಳು, (ಇವು ಕ್ಷೇತ್ರ) ಇಚ್ಛೆ, ದ್ವೇಷ, ಸುಖ, ದುಃಖ, ಶರೀರ, ಮನೋವ್ಯಾಪ್ತಿ ಹಾಗೂ ಧೈರ್ಯ ಇವು ವಿಕಾರ ಸಹಿತವಾದ ಕ್ಷೇತ್ರ. ಸಂಕ್ಷೇಪವಾಗಿ ಹೇಳಿದ್ದೇನೆ.

**ಕ್ಷೇತ್ರಂ ಯಚ್ಚ ಯಾದೃಕ್ ಚ ತಚ್ಛೃಣ್ವಿತಿ ಪ್ರತಿಜ್ಞಾತಮಾಹ– ಮಹಾಭೂತಾನೀತಿ ॥ ಪಂಚಮಹಾಭೂತಾನಿ । ಮಹತ್ತತ್ತ್ವಮಪ್ಯಹಂಕಾರಶಬ್ದೇನ ಗೃಹ್ಯತೇ । ಬುದ್ಧಿರಂತಃಕರಣವಿಶೇಷಃ । ಅವ್ಯಕ್ತಂ ತ್ರಿಗುಣಾತ್ಮಕಂ ಪ್ರಧಾನಮ್ । 'ಇಂದ್ರಿಯಾಣಿ ದಶೈಕಂ ಚ' ಇತಿ ಜ್ಞಾನೇಂದ್ರಿಯಮನೋಭೇದೇನೈಕಾದಶೇಂದ್ರಿಯಾಣಿ । ಇಂದ್ರಿಯಗೋಚರಾಃ ಶ್ರೋತ್ರಾದಿ ವಿಷಯಾಃ ಶಬ್ದಾದ್ಯಾಃ ಪಂಚ ಚ । ಏತತ್ಕ್ಷೇತ್ರಂ ಸಮಾಸೇನ ಸಂಕ್ಷೇಪೇಣ ಮಹಾಭೂತತ್ವಾದಿಪ್ರಕಾರೋಪೇತಮುದಾಹೃತಮಿತ್ಯನ್ವಯಃ ॥ 6 ॥**

## ಕ್ಷೇತ್ರ ಹಾಗೂ ಕ್ಷೇತ್ರವಿಕಾರಗಳು

**ಅನುವಾದ**– ಕ್ಷೇತ್ರ ಸ್ವರೂಪವೇನು ? ಹಾಗೂ ಅದರ ವಿಕಾರಗಳೇನು ? ಅದನ್ನು ಹೇಳುತ್ತೇನೆ ಕೇಳು ಎಂದು ಪ್ರತಿಜ್ಞೆ ಮಾಡಿದುದನ್ನು ಈಗ ಹೇಳುತ್ತಿದ್ದಾನೆ. ಮಹಾಭೂತಾನಿ ಎಂಬ ಶ್ಲೋಕದಲ್ಲಿ, **ಮಹಾಭೂತಾನಿ**= ಐದು ಮಹಾಭೂತಗಳು (ಭೂಮಿ, ನೀರು, ಬೆಂಕಿ, ಗಾಳಿ, ಆಕಾಶಗಳು) ಅಹಂಕಾರ ಎಂಬ ಶಬ್ದದಿಂದ ಮಹತ್ತತ್ತ್ವವನ್ನೂ ಗ್ರಹಿಸಬೇಕು. ಬುದ್ಧಿಯೆಂಬುದು

ಅಂತಃಕರಣದ ಪ್ರಭೇದ[1]. ಅವ್ಯಕ್ತವೆಂದರೆ ಸತ್ವರಜಸ್ತಮೋಗುಣಾತ್ಮಕವಾದ ಪ್ರಕೃತಿ. ಇಂದ್ರಿಯಾಣಿ ದಶೈಕಂ ಚ ಎಂಬುದಾಗಿ ಜ್ಞಾನೇಂದ್ರಿಯ ಐದು, ಕರ್ಮೇಂದ್ರಿಯ ಐದು, ಹಾಗೂ ಮನಸ್ಸು ಎಂಬ ಹನ್ನೊಂದು ಇಂದ್ರಿಯಗಳು. **ಇಂದ್ರಿಯಗೋಚರಾಃ**= ಶ್ರೋತ್ರ ಮೊದಲಾದ ಐದು ಇಂದ್ರಿಯಗಳಿಗೆ ವಿಷಯಗಳೆನಿಸಿದ ಶಬ್ದ ಮೊದಲಾದ (ಶಬ್ದ, ಸ್ಪರ್ಶ, ರೂಪ,ರಸ,ಗಂಧ) ಐದು. **ಏತತ್‌ಕ್ಷೇತ್ರಂ**= ಈ ಕ್ಷೇತ್ರವು, **ಸಮಾಸೇನ**= ಸಂಕ್ಷೇಪವಾಗಿ ಮಹಾಭೂತತ್ವ ಮೊದಲಾದ ಪ್ರಕಾರಗಳಿಂದ ಕೂಡಿದ್ದಾಗಿ ಹೇಳಲ್ಪಟ್ಟಿದೆ ಎಂದು (ಮುಂದಿನ ಶ್ಲೋಕದೊಂದಿಗೆ) ಅನ್ವಯ. ||6||

**ಕ್ಷೇತ್ರಂ ಯದ್ವಿಕಾರೀತಿ ಪ್ರತಿಜ್ಞಾತಕ್ಷೇತ್ರವಿಕಾರಮಾಹ- ಇಚ್ಛೇತಿ || ಸಂಘಾತೋ ದೇಹಃ । ಚೇತನಾ ಚೇತಸೋ ವ್ಯಾಪ್ತಿಃ । ಧೃತಿರ್ಧೈರ್ಯಮ್ । ಏತತ್ ಪ್ರಾಗುಕ್ತಂ ಕ್ಷೇತ್ರಂ ಇಚ್ಛಾದಿವಿಕಾರೋಪೇತಂ ಸಂಕ್ಷೇಪೇಣೋಕ್ತಮಿತ್ಯರ್ಥಃ ।**

**ಅನುವಾದ–** 'ಕ್ಷೇತ್ರವು ಯಾವ ವಿಕಾರವುಳ್ಳದ್ದೋ' ಎಂದು ಪ್ರತಿಜ್ಞೆ ಮಾಡಿದ ಕ್ಷೇತ್ರ ವಿಕಾರ ಗಳನ್ನು ಹೇಳುತ್ತಿದ್ದಾನೆ. 'ಇಚ್ಛಾದ್ವೇಷಃ' ಎಂಬ ಶ್ಲೋಕದಲ್ಲಿ. **ಸಂಘಾತ**= ದೇಹ. **ಚೇತನಾ**= ಮನಸ್ಸಿನ ವ್ಯಾಪ್ತಿ (ಹರಿವು) **ಧೃತಿ**= ಧೈರ್ಯ. ಹಿಂದೆ ಹೇಳಿದ ಈ ಕ್ಷೇತ್ರವು ಇಚ್ಛೆ ಮೊದಲಾದ ವಿಕಾರದ ಜೊತೆಗೆ ಸಂಕ್ಷೇಪವಾಗಿ ಹೇಳಲ್ಪಟ್ಟಿದೆ ಎಂದು ಶ್ಲೋಕದ ಅರ್ಥ.

## ಕ್ಷೇತ್ರ ಹಾಗೂ ಕ್ಷೇತ್ರವಿಕಾರಗಳ ಅಭಿಮಾನಿಶಕ್ತಿಗಳು

**ಮಹಾಭೂತಾದಿಕ್ಷೇತ್ರಾಭಿಮಾನಿನಃ ತದ್ವಿಕಾರೇಚ್ಛಾದ್ಯಭಿಮಾನಿನಶ್ಚಾವಶ್ಯಂ ಜ್ಞೇಯತ್ವಾದುಚ್ಯಂತೇ । ಆಕಾಶಾಭಿಮಾನೀ ವಿಘ್ನೇಶಃ । ವಾಯುಮಾನೀ ಮುಖ್ಯವಾಯುಜೋ ಮರೀಚಿನಾಮಾ । ಅಗ್ನಿಮಾನೀ ವಹ್ನಿಃ । ಅಬಭಿಮಾನೀ ವರುಣಃ । ಭೂಮಿಮಾನಿನೀ ಧರಾದೇವೀ ।**

**ಅನುವಾದ –** ಮಹಾಭೂತ ಮೊದಲಾದ ಕ್ಷೇತ್ರದ ಅಭಿಮಾನಿ ದೇವತೆಗಳನ್ನು ಹಾಗೂ ಕ್ಷೇತ್ರದ ವಿಕಾರಗಳಾದ ಇಚ್ಛಾ, ದ್ವೇಷ ಮೊದಲಾದವುಗಳ ಅಭಿಮಾನಿಗಳನ್ನು ಅವಶ್ಯ ತಿಳಿಯ ಬೇಕಿರುವುದರಿಂದ ಹೇಳುತ್ತೇವೆ. ಆಕಾಶಕ್ಕೆ ಅಭಿಮಾನಿ ವಿಘ್ನೇಶನಾದ ಗಣಪತಿ. ವಾಯುವಿಗೆ

---

1. ಬಾಹ್ಯಕರಣವು ಐದು ಇರುವಂತೆ ಅಂತಃಕರಣವೂ ನಾಲ್ಕು. ಮನಸ್ಸು, ಬುದ್ಧಿ, ಅಹಂಕಾರ ಹಾಗೂ ಚಿತ್ತ. ಮನಸ್ಸಿನದು ಸಂಶಯವುಂಟುಮಾಡುವ ಕೆಲಸ. ಬುದ್ಧಿ ನಿಶ್ಚಯಿಸುವಂಥದು. ಅಹಂಕಾರ ಕರ್ತೃತ್ವಪ್ರಜ್ಞೆಯನ್ನುಂಟುಮಾಡಿದರೆ ಚಿತ್ತವು ಸ್ಮೃತಿ ಹೇತುವಾಗಿದೆ. ಆದ್ದರಿಂದ ಬುದ್ಧಿಯು ಅಂತಃಕರಣದ ಒಂದು ಪ್ರಭೇದ.

ಅಭಿಮಾನಿ ಮುಖ್ಯಪ್ರಾಣನ ಮಗನಾದ ಮರೀಚಿಯೆಂಬುವವ. ಅಗ್ನಿಗೆ ಅಭಿಮಾನಿ ವಹ್ನಿ. (ಅಗ್ನಿಪುರುಷ) ನೀರಿಗೆ ಅಭಿಮಾನಿ ವರುಣ. ಭೂಮಿಗೆ ಅಭಿಮಾನಿನಿ ಧರಾದೇವಿ.

**ಅಹಂಕಾರಃ ಶಿವಃ । ಮಹಾನ್‌ಬ್ರಹ್ಮಾ । ಬುದ್ಧಿರುಮಾ । ಅವ್ಯಕ್ತಂ ಶ್ರೀದೇವೀ । ಇಂದ್ರಿಯೇಷು ಮನೋऽಭಿಮಾನಿನಃ ಸ್ಕಂದೇಂದ್ರಾನಿರುದ್ಧಾಃ । ಶ್ರೋತ್ರಂ ಚಂದ್ರಃ । ತ್ವಕ್ ವಾಯುಸುತೋ ಮರುತ್ । ಚಕ್ಷುಃ ಸೂರ್ಯಃ । ಜಿಹ್ವಾ ವರುಣಸ್ಯ ರೂಪಾಂತರಮ್ । ಘ್ರಾಣಮಶ್ವಿನೌ । ವಾಗಗ್ನಿಃ । ಹಸ್ತೌ ವಾಯುಸುತೌ ಮರುತೌ । ಪಾದೌ ತು ವಿಷ್ಣುನಾವಿಷ್ಟೌ ಶಚೀಸುತೌ ಯಜ್ಞಶಂಭುನಾಮಕೌ । ಪಾಯುರ್ಯಮಃ । ಉಪಸ್ಥಃ ಶಿವಃ ಮನುಶ್ಚ । ಇಂದ್ರಿಯಗೋಚರೇಷು ಶಬ್ದಸ್ಪರ್ಶರೂಪರಸಗಂಧಾಭಿಮಾನಿನಃ ಶಿವಪುತ್ರಾಃ ಪಂಚ ಜ್ಞೇಯಾಃ । ವಿಕಾರೇಷು ಇಚ್ಛಾ ಶ್ರೀರ್ಭಾರತೀ ಚ । ದ್ವೇಷದುಃಖಾಭಿಮಾನಿನೌ ಕಲಿದ್ವಾಪರೌ । ಸುಖಂ ಮುಖ್ಯವಾಯುಃ ।**

**ಅನುವಾದ–** ಅಹಂಕಾರಾಭಿಮಾನಿ ರುದ್ರ. ಮಹತ್ತತ್ವಕ್ಕೆ ಬ್ರಹ್ಮಾ. ಬುದ್ಧಿತತ್ವಕ್ಕೆ ಉಮಾದೇವಿ. ಅವ್ಯಕ್ತತತ್ವಕ್ಕೆ ಶ್ರೀದೇವಿ (ಲಕ್ಷ್ಮೀದೇವಿ). ಇಂದ್ರಿಯಗಳಲ್ಲಿ ಮನಸ್ಸಿಗೆ ಅಭಿಮಾನಿಗಳು ಸ್ಕಂದ, ಇಂದ್ರ ಹಾಗೂ ಅನಿರುದ್ಧ. (ಕಾಮನ ಮಗ) ಶ್ರೋತ್ರೇಂದ್ರಿಯಕ್ಕೆ ಅಭಿಮಾನಿ ಚಂದ್ರ. ತ್ವಗಿಂದ್ರಿಯಕ್ಕೆ ವಾಯುಸುತನಾದ ಮರುತ್. ಚಕ್ಷುರಿಂದ್ರಿಯಕ್ಕೆ ಸೂರ್ಯ. ಜಿಹ್ವೆಗೆ (ರಸನೇಂದ್ರಿಯಕ್ಕೆ) ವರುಣನ ಮತ್ತೊಂದು ರೂಪ. ಘ್ರಾಣೇಂದ್ರಿಯಕ್ಕೆ ಅಶ್ವಿನೀದೇವತೆಗಳು. ವಾಗಿಂದ್ರಿಯಕ್ಕೆ ಅಗ್ನಿ. ಹಸ್ತಗಳಿಗೆ ವಾಯುಸುತರಾದ ಇಬ್ಬರು ಮರುತ್‌ಗಳು. ಪಾದಗಳಿಗೆ ವಿಷ್ಣುವಿನಿಂದ ಆವಿಷ್ಟರಾದ ಯಜ್ಞ ಹಾಗೂ ಶಂಭು ಎಂಬ ಶಚಿಯ ಮಕ್ಕಳಿಬ್ಬರು. ಪಾಯು (ಮಲ ವಿಸರ್ಜನೇಂದ್ರಿಯ)ವಿಗೆ ಯಮ. ಉಪಸ್ಥ (ಜನನೇಂದ್ರಿಯ)ಕ್ಕೆ ಶಿವ ಹಾಗೂ ಮನು. ಇಂದ್ರಿಯ ವಿಷಯಗಳಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಿಗೆ ಅಭಿಮಾನಿಗಳು ಶಿವಪುತ್ರರಾದ ಐವರು ಎಂದು ತಿಳಿಯಬೇಕು. ಕ್ಷೇತ್ರದ ವಿಕಾರಗಳಲ್ಲಿ ಇಚ್ಛೆಗೆ ಅಭಿಮಾನಿನಿಯರು ಶ್ರೀದೇವಿ ಹಾಗೂ ಭಾರತೀದೇವಿ. ದ್ವೇಷ ಹಾಗೂ ದುಃಖಕ್ಕೆ ಅಭಿಮಾನಿಗಳು ಕ್ರಮವಾಗಿ ಕಲಿ ಹಾಗೂ ದ್ವಾಪರ. ಸುಖಕ್ಕೆ ಮುಖ್ಯವಾಯು.

**ಧೃತಿಃ ಸರಸ್ವತೀಭಾರತೀ ಚ । ಚೇತನಾ ಶ್ರೀಃ । ಸಂಘಾತಮಾನಿನೋऽನ್ಯೇ ಚೇತನಾಃ ಜ್ಞೇಯಾಃ । ಅಭಿಮಾನಿನಾಂ ಪ್ರಾಗುಕ್ತವ್ಯುತ್ಪತ್ತ್ಯಾ ಭಗವನ್ನಿವಾಸತ್ವಾ-ದೇವ ಕ್ಷೇತ್ರನಾಮತ್ವಮ್ । ಕ್ಷೇತ್ರವಿಕಾರತ್ವಮಪಿ ಮಹದಾದಿಭ್ಯೋऽತಿಶಯೇನ ವಿಕಾರತಯಾ ಸ್ಥಿತತ್ವಾದಿತಿ ಜ್ಞೇಯಮ್ ॥ 7 ॥**

**ಅನುವಾದ–** ಧೃತಿಗೆ, ಧೈರ್ಯಕ್ಕೆ ಸರಸ್ವತೀ,ಭಾರತೀದೇವಿಯರು. ಚೇತನಾ ಎನಿಸಿದ ಚಿತ್ತವ್ಯಾಪ್ತಿಗೆ ಶ್ರೀದೇವಿ. ಸಂಘಾತವೆನಿಸಿದ ದೇಹಕ್ಕೆ ಅಭಿಮಾನಿಗಳು ಬೇರೆ ಚೇತನಗಳೆಂದು ತಿಳಿಯಬೇಕು. ಈ ಅಭಿಮಾನಿದೇವತೆಗಳಿಗೆ ಹಿಂದೆ ಹೇಳಿದ ವ್ಯುತ್ಪತ್ತಿಯಿಂದ (ಕ್ಷೀಯತೇ ಸ್ಥೀಯತೇ ಭಗವತಾ ಅತ್ರ) ಭಗವಂತನ ನಿವಾಸವಾದುದರಿಂದಲೇ ಕ್ಷೇತ್ರವೆಂಬ ಹೆಸರು. ಇಚ್ಛಾದಿಗಳು ಮಹತ್ತತ್ವಾದಿಗಳಿಗಿಂತ ಅತಿಶಯಿತವಾಗಿ ವಿಕಾರವಾಗಿ ಇರುವುದರಿಂದ ಕ್ಷೇತ್ರದ ವಿಕಾರಗಳೆಂದು ಕರೆಸಿಕೊಂಡಿವೆ ಎಂದು ತಿಳಿಯಬೇಕು . ॥ 7 ॥

**ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥ 8 ॥**

**ಅರ್ಥ–** ತನ್ನ ಹೆಗ್ಗಳಿಕೆಯನ್ನು ಹೇಳಿಕೊಳ್ಳದಿರುವುದು. ದಂಭ ಬಿಡುವುದು, ಅಹಿಂಸೆ, ಸಹಿಷ್ಣುತೆ, ಪ್ರಾಮಾಣಿಕತೆ, ಜ್ಞಾನಿಗಳ ಸೇವೆ, ಶೌಚ, ಸ್ವಧರ್ಮದಲ್ಲಿ ದೃಢತೆ, ಮನೋನಿಗ್ರಹ. (ಇವೆಲ್ಲವೂ ಜ್ಞಾನಸಾಧನಗಳು)

## ದೇವನ ದರ್ಶನಕ್ಕೆ ಇಪ್ಪತ್ತು ದಾರಿಗಳು

**ಏವಂ ಪ್ರತಿಜ್ಞಾತಾರ್ಥಷಟ್ಕಮಧ್ಯೇ ಯಚ್ಚ ಯಾದೃಕ್ಚ ಯದ್ವಿಕಾರೀತಿ ತ್ರಯಮುಕ್ತ್ವಾ ಯತಶ್ಚ ಯದಿತಿ (ಅಗ್ರೇ) ವಕ್ಷ್ಯನ್ ತತಃ ಪ್ರಾಕ್ ಸ ಚ ಯೋ ಯತ್ಪ್ರಭಾವಶ್ಚೇತಿ ಪ್ರತಿಜ್ಞಾತಾರ್ಥದ್ವಯಂ 'ಜ್ಞೇಯಂ ಯತ್ತತ್' ಇತ್ಯಾದಿನಾ ವಕ್ತುಂ ನ ಯಾದೃಶತಾದೃಶೇನ ಶ್ರವಣೇನ ತದನುಭವಾರೂಢಂ ಭವತೀತಿ ಭಾವೇನ ವಕ್ಷ್ಯಮಾಣಜ್ಞೇಯದ್ವಯಭೂತಭಗವದ್‌ಜ್ಞಾನಸ್ಯ ಸಾಧನಾನ್ಯಾಹ- ಅಮಾನಿತ್ವಮಿತ್ಯಾದಿಪಂಚಕೇನ ॥**

**ಅನುವಾದ–** ಈ ರೀತಿ ಪ್ರತಿಜ್ಞಾತವಾದ ಆರು ವಿಷಯಗಳ ಮಧ್ಯದಲ್ಲಿ ಕ್ಷೇತ್ರದ ಸ್ವರೂಪವೆಂಥದು ? ಪ್ರಕಾರಗಳೆಂಥವು ? ಅದರ ವಿಕಾರಗಳಾವುವು ? ಎಂಬ ಮೂರನ್ನು ನಿರೂಪಿಸಿ ಯಾರಿಂದ ಪ್ರವೃತ್ತಿ ? ಎಂಬುದವನ್ನು ಮುಂದೆ ಹೇಳಲಿರುವವನಾಗಿ ಅದಕ್ಕೆ ಮೊದಲು ಪ್ರವರ್ತಕನಾರು ? ಅವನ ಸಾಮರ್ಥ್ಯವೇನು ? ಎಂಬ ಪ್ರತಿಜ್ಞಾತವಾದ ಎರಡು ವಿಷಯಗಳನ್ನು **'ಜ್ಞೇಯಂ ಯತ್ತತ್ ಪ್ರವಕ್ಷ್ಯಾಮಿ'** (13-18) ಎಂಬಿತ್ಯಾದಿ ಶ್ಲೋಕಗಳಿಂದ ಹೇಳಲು ಅಂತಿಂಥಾ ಶ್ರವಣದಿಂದ ಅದು ಅನುಭವದಲ್ಲಿ ನೆಲೆಗೊಳ್ಳದು ಎಂಬ ಅಭಿಪ್ರಾಯದಿಂದ ಹೇಳಲಿರುವ ಎರಡು ಜ್ಞೇಯಗಳೆನಿಸಿದ ಭಗವಂತನ ಜ್ಞಾನಕ್ಕೆ ಸಾಧನಗಳನ್ನು ಹೇಳುತ್ತಿದ್ದಾನೆ 'ಅಮಾನಿತ್ವಂ' ಮೊದಲಾದ ಐದು ಶ್ಲೋಕಗಳಿಂದ.

**ಅಮಾನಿತ್ವಮಾತ್ಮನಃ ಶ್ಲಾಘನರಾಹಿತ್ಯಮ್ । ಆತ್ಮಾಲ್ಪತ್ವಂ ಜ್ಞಾತ್ವಾಽಪಿ ಮಹತ್ತ್ವಪ್ರದರ್ಶನಂ ದಂಭಃ । ತದ್ರಾಹಿತ್ಯಮದಂಭಿತ್ವಮ್ । ಕ್ಷಾಂತಿಃ ಸಹಿಷ್ಣುತ್ವಮ್ । ಆರ್ಜವಂ ಸನ್ಮಾರ್ಗೇ ಮನೋವಾಕ್ಕಾಯಕರ್ಮಣಾಮವೈಪರೀತ್ಯಮ್ । ಆಚಾರ್ಯೋಪಾಸನಂ ಜ್ಞಾನಿನಾಂ ಸೇವಾ । ಶೌಚಂ ಬಾಹ್ಯಾಂತರಶುದ್ಧಿಃ । 'ಶೌಚಂ ತು ದ್ವಿವಿಧಂ ಪ್ರೋಕ್ತಂ ಬಾಹ್ಯಮಾಭ್ಯಂತರಂ ತಥಾ । ಮೃಜ್ಜಲಾಭ್ಯಾಂ ಸ್ಮೃತಂ ಬಾಹ್ಯಂ ಭಾವಶುದ್ಧಿಸ್ತಥಾಽಽಂತರಮ್' ಇತಿ ಸ್ಮೃತೇಃ । ಸ್ಥೈರ್ಯಂ ಭಯಾದಿನಾ ಸ್ವಧರ್ಮಾದಚಲನಮ್ । ಆತ್ಮವಿನಿಗ್ರಹಃ ವಿಶೇಷೇಣ ಮನಸೋ ನಿಯಮನಮ್ ।। 8 ।।**

**ಅನುವಾದ–** 'ಅಮಾನಿತ್ವ' ತನ್ನ ಹೆಗ್ಗಳಿಕೆಯನ್ನು ತಾನೇ ಹೊಗಳಿಕೊಳ್ಳದಿರುವಿಕೆ. ತನ್ನ ಅಲ್ಪತೆಯನ್ನು ತಿಳಿದೂ ಮಹತ್ವವನ್ನು ತೋರ್ಪಡಿಸುವುದಕ್ಕೆ ಡಂಭವೆಂದು ಹೆಸರು. ಈ ದಂಭವಿಲ್ಲದಿರುವಿಕೆ ಅದಂಭಿತ್ವ. **ಕ್ಷಾಂತಿ** = ಸಹನಶೀಲತೆ. **ಆರ್ಜವ** = ಸನ್ಮಾರ್ಗದಲ್ಲಿ ಮನಸ್ಸು, ವಾಕ್, ಕಾಯ ಕರ್ಮಗಳ ಏಕರೂಪತೆ. **ಆಚಾರ್ಯೋಪಾಸನಂ**= ಜ್ಞಾನಿಗಳ ಸೇವೆ. **ಶೌಚ**= ಒಳಹೊರಗಿನ ಶುದ್ಧಿ. ಹೀಗೆ ಸ್ಮೃತಿಯಿದೆ– 'ಶೌಚವು ಬಾಹ್ಯ, ಆಭ್ಯಂತರವೆಂದು ಎರಡು ವಿಧವೆಂದು ಹೇಳಲ್ಪಟ್ಟಿದೆ. ಮೃತ್ತಿಕಾ, ನೀರುಗಳಿಂದ ಬಾಹ್ಯಶೌಚವೆಂದೂ ಭಾವಶುದ್ಧಿಯು ಆಂತರ ಶೌಚವೆಂದೂ ಸ್ಮೃತವಾಗಿದೆ ' ಎಂದು. **ಸ್ಥೈರ್ಯ**= ಭಯ–ಕ್ರೋಧಾದಿಗಳಿಂದ ಸ್ವಧರ್ಮವನ್ನು ಬಿಡದಿರುವುದು. **ಆತ್ಮವಿನಿಗ್ರಹ**= ವಿಶೇಷವಾಗಿ ಮನಸ್ಸಿನ ಹತೋಟಿ. ।। 8 ।।

**ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ।। 9 ।।**

**ಅರ್ಥ**– ವಿಷಯಪದಾರ್ಥಗಳಲ್ಲಿ ಆಸಕ್ತಿ ಇಲ್ಲದಿರುವುದು. ಅಹಂಕಾರ ಪಡದಿರುವುದು. ಜನನ, ಮರಣ, ಮುಪ್ಪು ರೋಗಗಳಲ್ಲಿರುವ ದುಃಖ ದೋಷಗಳನ್ನು ಸದಾ ಚಿಂತಿಸುತ್ತಿರುವುದು (ಇವೆಲ್ಲವೂ ಜ್ಞಾನಸಾಧನಗಳು)

**ಇಂದ್ರಿಯಾರ್ಥೇಷು ವೈರಾಗ್ಯಂ ಶಬ್ದಾದಿಷು ರಾಗಾಭಾವಃ । ಅನಹಂಕಾರಃ ಅವಿದ್ಯಮಾನಾತ್ಮಗುಣಾಭಿಮಾನಮೋಹಾಭಾವಃ । ಜನ್ಮಾದಿಷು ದುಃಖ-ದೋಷಯೋರನುದರ್ಶನಮಿತಿ ವಾ ದುಃಖರೂಪಸ್ಯ ದೋಷಸ್ಯಾನುದರ್ಶನಮಿತಿ ವಾ । ಅನುಕ್ಷಣಮನುಸಂಧಾನಮಿತ್ಯರ್ಥಃ ।। 9 ।।**

**ಇಂದ್ರಿಯಾರ್ಥೇಷು ವೈರಾಗ್ಯಂ**= ಶಬ್ದಾದಿವಿಷಯಗಳಲ್ಲಿ ಆಸಕ್ತಿ ಬಿಡುವುದು. **ಅನಹಂಕಾರ**= ತನ್ನಲ್ಲಿ ಇಲ್ಲದಿರುವ ಸದ್ಗುಣಗಳು ತನ್ನಲ್ಲಿ ಉಂಟೆಂದು ಭ್ರಮಿಸದಿರುವುದು. ಜನ್ಮ, ಮೃತ್ಯು, ಜರಾ, ವ್ಯಾಧಿಗಳಲ್ಲಿ ದುಃಖ ಹಾಗೂ ದೋಷಗಳ ಅಥವಾ ದುಃಖವೆಂಬ ದೋಷದ **ಅನುದರ್ಶನ**= ಅನುಕ್ಷಣವೂ ಅನುಸಂಧಾನವೆಂದರ್ಥ. ॥ 9 ॥

**ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥ 10 ॥**

**ಅರ್ಥ**- ಪುತ್ರ-ಪತ್ನಿ-ಗೃಹಾದಿಗಳಲ್ಲಿ ಮೋಹರಾಹಿತ್ಯ. ಅತ್ಯಾಸಕ್ತಿರಾಹಿತ್ಯ. ಇಷ್ಟ-ಅನಿಷ್ಟ ಗಳೊದಗಿ ಬಂದಾಗ (ಹಿಗ್ಗದೆ ಕುಗ್ಗದೆ) ಸದಾ ಸಮಚಿತ್ತನಾಗಿರುವುದು. (ಇವೆಲ್ಲವೂ ಜ್ಞಾನ-ಸಾಧನ)

**ಪುತ್ರದಾರಗೃಹಾದಿಷು ಅಸಕ್ತಿಃ ಸ್ನೇಹಾಭಾವಃ । ಅನಭಿಷ್ವಂಗಃ ಅತಿಪಕ್ವ-ಸ್ನೇಹಾಭಾವಃ । ಇಷ್ಟಾನಿಷ್ಟೋಪಪತ್ತಿಷು । ಉಪಪತ್ತಿಃ ಪ್ರಾಪ್ತಿಃ, ತತ್ರ ನಿತ್ಯಂ ಸಮಚಿತ್ತತ್ವಂ ಹರ್ಷವಿಷಾದಯೋರಭಾವಃ ॥ 10 ॥**

**ಅನುವಾದ**- ಪುತ್ರ-ಹೆಂಡತಿ-ಮನೆ ಮೊದಲಾದವುಗಳಲ್ಲಿ , **ಅಸಕ್ತಿ**:= ಸ್ನೇಹವಿಲ್ಲದಿರು ವುದು. **ಅನಭಿಷ್ವಂಗಃ**= ಅತ್ಯಾಸಕ್ತಿ ಇಲ್ಲದಿರುವಿಕೆ. ಇಷ್ಟಾನಿಷ್ಟೋಪಪತ್ತಿಷು ಎಂಬಲ್ಲಿ ಉಪಪತ್ತಿ ಯೆಂದರೆ ಪ್ರಾಪ್ತಿ. ಇಷ್ಟಾನಿಷ್ಟಗಳು ಒದಗಿ ಬಂದಾಗ, **ಸದಾ ಸಮಚಿತ್ತತ್ವ**= ಹಿಗ್ಗು ಬೇಸರಗಳು ಇಲ್ಲದಿರುವಿಕೆ. ॥ 10 ॥

**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥ 11 ॥**

**ಅರ್ಥ** - ಬೇರೆ ದೇವತೆಗಳನ್ನು ಸ್ವತಂತ್ರರೆಂದು ಬಗೆಯದೆ ನನ್ನಲ್ಲಿಯೇ (ಕೃಷ್ಣನಲ್ಲಿಯೇ) ಸ್ಥಿರವಾದ ಭಕ್ತಿ, ಏಕಾಂತ ಸ್ಥಲದಲ್ಲಿ ಇರುವಿಕೆ, ಜನಸಮೂಹದ ನಡುವೆ ಇರಲು ಬಯಸದಿರುವುದು (ಇವೆಲ್ಲಾ ಜ್ಞಾನಸಾಧನಗಳು).

**ಅನನ್ಯಯೋಗೇನ ರಮಾಬ್ರಹ್ಮಾದಿಸ್ವಾತಂತ್ರ್ಯಸಂಬಂಧೇನ, ತದವಿಷಯಿಣೀತಿ ಯಾವತ್ । ಅತ ಏವಾವ್ಯಭಿಚಾರಿಣೀ ಮಯಿ ಭಕ್ತಿಃ । ವಿವಿಕ್ತದೇಶಸೇವಿತ್ವಂ ಜನಸಮ್ಮರ್ದಹೀನಶುದ್ಧಸ್ಥಾನಸ್ಥಿತಿಃ ॥ 11 ॥**

**ಅನುವಾದ** - **ಅನನ್ಯಯೋಗೇನ**= ರಮಾಬ್ರಹ್ಮಾದಿ (ಇತರ ದೇವತೆ)ಗಳಲ್ಲಿ ಸ್ವಾತಂತ್ರ್ಯದ

ಸಂಬಂಧ(ಯೋಗ)ವಿಲ್ಲದ ಅಂದರೆ ಅವರಲ್ಲಿ ಸ್ವಾತಂತ್ರ್ಯವನ್ನು ವಿಷಯೀಕರಿಸದ ಆದ್ದರಿಂದಲೇ 'ಅವ್ಯಭಿಚಾರಿಣೀ'[1] ಎನಿಸಿಕೊಂಡ ನನ್ನಲ್ಲಿ ಮಾಡುವ ಭಕ್ತಿಯು. **ವಿವಿಕ್ತದೇಶಸೇವಿತ್ವಂ**= ಜನಜಂಗುಳಿಯಿಲ್ಲದ ಪರಿಶುದ್ಧಸ್ಥಾನದಲ್ಲಿ ಇರುವುದು. ॥ 11 ॥

**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।**
**ಏತದ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥ 12 ॥**

**ಅರ್ಥ**– ಪರಮಾತ್ಮ ತತ್ತ್ವಜ್ಞಾನದಲ್ಲಿಯೇ ನಿತ್ಯವೂ ತತ್ಪರನಾಗಿರುವುದು. ಅಪರೋಕ್ಷಜ್ಞಾನಕ್ಕಾಗಿ ಶಾಸ್ತ್ರಚಿಂತನೆಯನ್ನು ಮಾಡುವುದು, ಈ ಸಾಧನಗಳು ಜ್ಞಾನವೆಂದು (ಜ್ಞಾನಸಾಧನವೆಂದು) ಹೇಳಲ್ಪಟ್ಟಿವೆ. ಇದಕ್ಕೆ ವಿಪರೀತವಾದವುಗಳೆಲ್ಲ ಅಜ್ಞಾನ. (ಅವು ಜ್ಞಾನಸಾಧನಗಳಲ್ಲ)

**ಅಧ್ಯಾತ್ಮಜ್ಞಾನನಿತ್ಯತ್ವಂ ಆತ್ಮಾನ (ಪರಮಾತ್ಮಾನ)ಮಧಿಕೃತ್ಯ ಸ್ಥಿತೇ ಜ್ಞಾನೇ ನಿಯತತ್ವಂ ತತ್ತ್ವಜ್ಞಾನಾರ್ಥದರ್ಶನಮ್ । ಅಪರೋಕ್ಷಜ್ಞಾನಾರ್ಥಂ ಶಾಸ್ತ್ರ-ಪರ್ಯಾಲೋಚನಮ್ । ಏತದ್ 'ಅಮಾನಿತ್ವಂ' ಇತ್ಯಾದಿನೋಕ್ತಂ ವಿಂಶತಿ-ಧರ್ಮಜಾತಂ ಜ್ಞಾನಮಿತಿ ಜ್ಞಾಯತೇಽನೇನೇತಿ ಕರಣವ್ಯುತ್ಪತ್ತ್ಯಾ ಜ್ಞಾನ-ಸಾಧನಂ ಪ್ರೋಕ್ತಮ್ । ಅತೋಽನ್ಯಥಾ ಯದಸ್ತಿ ತದಜ್ಞಾನಂ ಜ್ಞಾನಸಾಧನಂ ನೇತ್ಯರ್ಥಃ ।**

**ಅನುವಾದ– ಅಧ್ಯಾತ್ಮಜ್ಞಾನ ನಿತ್ಯತ್ವಂ**= ಪರಮಾತ್ಮ ಕುರಿತಾಗಿ ಇರುವ ಜ್ಞಾನದಲ್ಲಿ ಅವಿರತ ಆಸಕ್ತಿ, **ತತ್ತ್ವಜ್ಞಾನಾರ್ಥದರ್ಶನಮ್**= ಅಪರೋಕ್ಷಜ್ಞಾನಕ್ಕಾಗಿ ಶಾಸ್ತ್ರಪರ್ಯಾಲೋಚನೆ. **ಏತತ್**= ಅಮಾನಿತ್ವಂ ಮೊದಲಾದ (ನಾಲ್ಕುವರೆ) ಶ್ಲೋಕಗಳಲ್ಲಿ ಹೇಳಿದ ಇಪ್ಪತ್ತು ಧರ್ಮಗಳ ಸಮುದಾಯವು **ಜ್ಞಾನಮಿತಿ**= ಜ್ಞಾಯತೇ ಅನೇನ ಎಂಬ ಕರಣವ್ಯುತ್ಪತ್ತಿಯಿಂದ ಜ್ಞಾನಸಾಧನವೆಂದು ಹೇಳಲ್ಪಟ್ಟಿದೆ. ಇವಕ್ಕಿಂತ ವಿಪರೀತವಾದುದು ಏನಿದೆ ಅವೆಲ್ಲವೂ **ಅಜ್ಞಾನ**= ಜ್ಞಾನಸಾಧನವಲ್ಲವೆಂದರ್ಥ.

---

1. ಅದಲ್ಲದೇ ಇರುವುದರಲ್ಲಿ ಅದೆಂಬ ಅರಿವು ಅಥವಾ ಅದು ಇಲ್ಲದೆ ಇರುವಲ್ಲಿ ಅದು ಇದೆಯೆಂಬ ಅರಿವು ವ್ಯಭಿಚಾರಿಯೆನಿಸುತ್ತದೆ. ಸರ್ವಸ್ವತಂತ್ರರಲ್ಲದ ರಮಾ-ಬ್ರಹ್ಮಾದಿಗಳು ಸರ್ವ-ಸ್ವತಂತ್ರರೆಂದು ತಪ್ಪು ತಿಳಿದು ಭಗವಂತನಲ್ಲಿ ಮಾಡುವ ಭಕ್ತಿ ವ್ಯಭಿಚಾರಿಣಿಯೆನಿಸಿದೆ. ಭಗವದ್ವ್ಯತಿರಿಕ್ತವೆಲ್ಲಾ ಅಸ್ವತಂತ್ರವೆಂಬ ಅರಿವಿನೊಂದಿಗೆ ಭಗವಂತನಲ್ಲಿ ಮಾಡುವ ಭಕ್ತಿ ಅವ್ಯಭಿಚಾರಿಣೀ ಭಕ್ತಿ. ಈ ಅವ್ಯಭಿಚಾರಿತ್ವವನ್ನೇ 'ಅನನ್ಯಯೋಗೇನ' ಎಂಬ ಮಾತು ವಿವರಿಸಿದೆ.

**ಯದ್ವಾ ಜ್ಞಾನಶಬ್ದಃ ಭಾವವ್ಯುತ್ಪತ್ತ್ಯಾ ಸಂವಿತ್ಪರಶ್ಚ । ತತ್ತ್ವಜ್ಞಾನಾರ್ಥಸ್ಯ ತತ್ತ್ವಜ್ಞಾನವಿಷಯಸ್ಯ ವಿಷ್ಣೋರ್ದರ್ಶನಂ ಅಪರೋಕ್ಷಜ್ಞಾನಮಿತ್ಯರ್ಥಃ । ಏತದ್‌ಭಗವದ್ವಿಷಯಾಪರೋಕ್ಷಜ್ಞಾನಂ ಜ್ಞಾನಮಿತಿ ಪ್ರೋಕ್ತಮ್ । ಅತೋऽನ್ಯಥಾ ಯತ್ ತದ್‌ಜ್ಞಾನಂ ನ ಭವತೀತಿ । ಇಹ ಜ್ಞಾನಶಬ್ದೋ ಜ್ಞಾನ-ತತ್ಸಾಧನೋಭಯಪರಃ। ತತ್ತ್ವಜ್ಞಾನಾರ್ಥದರ್ಶನಮಿತ್ಯಯಮಪ್ಯುಕ್ತದಿಶಾ ಶಾಸ್ತ್ರ-ಪರ್ಯಾಲೋಚನರೂಪಜ್ಞಾನಸಾಧನಪರಃ, ಅಪರೋಕ್ಷಜ್ಞಾನಪರಶ್ಚ। ತತಶ್ಚೈತಚ್ಛಬ್ದೇನೋಭಯಂ ಪರಾಮೃಶ್ಯ ಜ್ಞಾನಶಬ್ದೇನ ಭಾವಕರಣೋಭಯವ್ಯುತ್ಪತ್ತ್ಯಾ ಜ್ಞಾನಸಾಧನತ್ವಜ್ಞಾನತ್ವಯೋರ್ವಿಧಾನಂ ಯುಕ್ತಮಿತಿ ಜ್ಞೇಯಮ್ ॥ 12 ॥**

**ಅನುವಾದ–** ಅಥವಾ ಜ್ಞಾನಶಬ್ದವು ಭಾವವ್ಯುತ್ಪತ್ತಿಯಿಂದ **ಸಂವಿತ್** (ಜ್ಞಾನ) ಎಂಬ ಅರ್ಥದಲ್ಲಿಯೂ ಇದೆ. **ತತ್ವಜ್ಞಾನಾರ್ಥಸ್ಯ** = ತತ್ವಜ್ಞಾನವಿಷಯನಾದ ವಿಷ್ಣುವಿನ, **ದರ್ಶನಂ**= ಅಪರೋಕ್ಷಜ್ಞಾನವೆಂದರ್ಥ. ಈ ಭಗವದ್‌ವಿಷಯಕ ಅಪರೋಕ್ಷಜ್ಞಾನವು ಜ್ಞಾನವೆಂದು ಹೇಳಲ್ಪಟ್ಟಿದೆ. ಇದಕ್ಕಿಂತ ಬೇರೆಯಾದದ್ದು ಜ್ಞಾನವಲ್ಲವೆಂದು ಇಲ್ಲಿ ಜ್ಞಾನ ಶಬ್ದವು ಜ್ಞಾನ ಹಾಗೂ ಜ್ಞಾನಸಾಧನವೆಂಬ ಎರಡೂ ಅರ್ಥದಲ್ಲಿರುವಂಥದು . '**ತತ್ವಜ್ಞಾನಾರ್ಥದರ್ಶನಂ**' ಎಂಬ ಮಾತು ಈಗ ತಿಳಿಸಿದಂತೆ ಶಾಸ್ತ್ರಪರ್ಯಾಲೋಚನವೆಂಬ ಜ್ಞಾನಸಾಧನವನ್ನೂ ಅಪರೋಕ್ಷ ಜ್ಞಾನವನ್ನೂ ಹೇಳುವಂಥದು. ಆದ್ದರಿಂದ (**ಏತದ್ ಜ್ಞಾನಮಿತಿ ಪ್ರೋಕ್ತಂ** ಎಂಬಲ್ಲಿರುವ) **ಏತದ್** ಶಬ್ದದಿಂದ ಎರಡನ್ನೂ (ಶಾಸ್ತ್ರಪರ್ಯಾಲೋಚನ ಹಾಗೂ ಭಗವದಪರೋಕ್ಷಜ್ಞಾನವೆಂಬ ಎರಡನ್ನೂ) ತೆಗೆದುಕೊಂಡು '**ಜ್ಞಾನ** 'ವೆಂಬ ಶಬ್ದದಿಂದ ಭಾವವ್ಯುತ್ಪತ್ತಿ ಹಾಗೂ ಕರಣವ್ಯುತ್ಪತ್ತಿ ಇವೆರಡರಿಂದಲೂ ಜ್ಞಾನಸಾಧನತ್ವ ಹಾಗೂ ಜ್ಞಾನತ್ವ ಎಂಬ ಎರಡನ್ನೂ ವಿಧಾನ ಮಾಡುತ್ತಿರುವುದು ಯುಕ್ತವಾಗಿದೆಯೆದು ತಿಳಿಯಬೇಕು. ॥ 12 ॥

**ವಿವರಣೆ–** ಮುಂದಿನ ಹದಿಮೂರನೇ ಶ್ಲೋಕದಲ್ಲಿ ಶ್ರೀಕೃಷ್ಣನು ಪರತತ್ವದ ಬಗ್ಗೆ ಹೇಳ ಹೊರಟಿದ್ದಾನೆ. ಆತ ಹೇಳಿದುದನ್ನು ಸುಮ್ಮನೆ ಕೇಳಿದರೆ ಅಪರೋಕ್ಷಜ್ಞಾನವಾಗಲಾರದು. ಅದಕ್ಕೆ ಸಾಧನೆ ಬೇಕು. ಸಾಧಕನಾಗಬೇಕು. ಅಂತಹ ಸಾಧನಗಳು ಇಪ್ಪತ್ತು. ಅವನ್ನು ಅಮಾನಿತ್ವ ಮೊದಲಾದ ಐದು ಶ್ಲೋಕಗಳಲ್ಲಿ ಹೇಳಲಾಗಿದೆ. ಅಲ್ಲಿರುವ ಅಮಾನಿತ್ವ, ಅದಂಭಿತ್ವ, ಸ್ಥೈರ್ಯ, ಮೊದಲಾದ ಕ್ಲಿಷ್ಟ ಶಬ್ದಗಳ ಅರ್ಥವನ್ನು ವಿವೃತಿಯಲ್ಲಿ ಸರಳವಾಗಿ ಚೇತೋಹಾರಿಯಾಗಿ ನಿರೂಪಿಸಲಾಗಿದೆ. ಸಮಾನಾರ್ಥಕಗಳಂತೆ ಕಾಣುವ ಅಸಕ್ತಿ ಅನಭಿಷ್ವಂಗ ಶಬ್ದಗಳಿಗೆ ವಿವಕ್ಷಿತ ಅರ್ಥತಾತ್ಪರ್ಯವೈಲಕ್ಷಣ್ಯವನ್ನೂ ಗೀತಾಭಾಷ್ಯಕ್ಕೆ ಅನುಗುಣವಾಗಿ ತಿಳಿಸಲಾಗಿದೆ.

ಇಪ್ಪತ್ತು ಸಾಧನಗಳನ್ನು ಹೇಳಿದ ಕೃಷ್ಣ ಉಪಸಂಹರಿಸುತ್ತಾ 'ಇವೆಲ್ಲವೂ ಜ್ಞಾನಗಳು. ಇದಕ್ಕೆ ವ್ಯತಿರಿಕ್ತವಾದುದು ಅಜ್ಞಾನ 'ವೆನ್ನುತ್ತಾನೆ. ಸಾಧನಗಳನ್ನು ಹೇಳಿ 'ಇವು ಸಾಧನಗಳು' ಎನ್ನುವುದರ ಬದಲು 'ಇವು ಜ್ಞಾನಗಳು' ಎಂದುದು ಹೇಗೆ ?

ಈ ಪ್ರಶ್ನೆಯನ್ನು ಭಾಷ್ಯದಲ್ಲಿ 'ಜ್ಞಾನಗಳು' ಎಂದರೆ 'ಜ್ಞಾನ ಸಾಧನಗಳು' ಎಂದು ಅರ್ಥೈಸಿ ಪರಿಹರಿಸಲಾಗಿದೆ. ತಾತ್ಪರ್ಯದಲ್ಲಿ 'ತತ್ವಜ್ಞಾನಾರ್ಥದರ್ಶನ'ಶಬ್ದವನ್ನು ಅಪರೋಕ್ಷಜ್ಞಾನ ಪರವಾಗಿ ಗ್ರಹಿಸಿದ್ದಾರೆ . ಈಗ ಇಲ್ಲಿಹೇಳಿದ ಇಪ್ಪತ್ತರಲ್ಲಿಎಲ್ಲವೂ ಕೇವಲ ಜ್ಞಾನಸಾಧನಗಳಲ್ಲ. ಕೊನೆಯದು ಸಾಧ್ಯವಾದ ಜ್ಞಾನವೂ ಹೌದು. 'ತತ್ವಜ್ಞಾನಾರ್ಥದರ್ಶನಮ್' ಎಂದು ಕೊನೆಯಲ್ಲಿ ಹೇಳಿದುದು ತತ್ವಜ್ಞಾನವಿಷಯನಾದ ಭಗವಂತನ ಅಪರೋಕ್ಷಜ್ಞಾನವೆಂದಿಟ್ಟು ಕೊಂಡರೆ ಜ್ಞಾನ ಸಾಧನ ಹಾಗೂ ಜ್ಞಾನವನ್ನು ಬೇರಕೆಯಾಗಿ ಹೇಳಿ ಉಪಸಂಹಾರದಲ್ಲಿ 'ಇವು ಜ್ಞಾನವೆನಿಸಿವೆ 'ಎಂದುದು ಅದೆಂತು ಹೊಂದೀತು ? ಈ ಪ್ರಶ್ನೆಯನ್ನು ತಾತ್ಪರ್ಯದಲ್ಲಿ ಹೀಗೆ ಪರಿಹರಿಸಿದ್ದಾರೆ .

ಇಲ್ಲಿರುವ **'ತತ್ವಜ್ಞಾನಾರ್ಥದರ್ಶನಮ್'** ಎಂಬ ಪದ ಅಪರೋಕ್ಷಜ್ಞಾನ ಹಾಗೂ ಅದಕ್ಕೆ ಸಾಧನವಾದ ಶಾಸ್ತ್ರಾರ್ಥ ಪರ್ಯಾಲೋಚನ ಎಂಬ ಎರಡೂ ಅರ್ಥದಲ್ಲಿದೆ. 'ಇವು ಜ್ಞಾನ ವೆನಿಸಿವೆ' ಎಂಬಲ್ಲಿರುವ ಜ್ಞಾನಶಬ್ದವೂ ಜ್ಞಾನಸಾಧನ ಹಾಗೂ ಜ್ಞಾನ ಎಂಬ ಎರಡೂ ಅರ್ಥದಲ್ಲಿದೆ. **'ಏತದ್ ಜ್ಞಾನಮಿತಿಪ್ರೋಕ್ತಂ'** ಎಂಬಲ್ಲಿಯ **'ಏತದ್'**ಶಬ್ದದಿಂದ ಕೊನೆಯ ದಾದ ಅಪರೋಕ್ಷಜ್ಞಾನವನ್ನು ತೆಗೆದುಕೊಂಡು ಅದು ಜ್ಞಾನವೆಂದೂ ಶಾಸ್ತ್ರಾರ್ಥ ಪರ್ಯಾಲೋಚನೆಯೊಂದಿಗೆ ಇಪ್ಪತ್ತು ಜ್ಞಾನಸಾಧನಗಳನ್ನು ತೆಗೆದುಕೊಂಡು ಜ್ಞಾನಸಾಧನ ವೆಂದೂ ಅರ್ಥೈಸಿಕೊಳ್ಳಬೇಕು.

'ಜ್ಞಾನವೆಂಬ ಒಂದೇ ಶಬ್ದಕ್ಕೆ ಕರಣವ್ಯುತ್ಪತ್ತಿಯಿಂದ ಜ್ಞಾನಸಾಧನವೆಂದೂ ಭಾವವ್ಯುತ್ಪತ್ತಿ ಯಿಂದ ಜ್ಞಾನವೆಂದೂ ಅರ್ಥ. ಇಲ್ಲಿಜ್ಞಾ ಎಂಬುದು ಮೂಲಧಾತು. ಇದಕ್ಕೆ ಅರಿವು ಎಂದರ್ಥ. ಆ ಧಾತುವಿಗೆ ಅನ (ಲ್ಯುಟ್) ಎಂಬ ಪ್ರತ್ಯಯ ಸೇರಿದೆ. ಜ್ಞಾ + ಅನ= ಜ್ಞಾನವಾಗಿದೆ. ಅನ(ಲ್ಯುಟ್) ಪ್ರತ್ಯಯವು ಜ್ಞಾಧಾತುವಿನ ಮೇಲೆ ಎರಡು ಅರ್ಥದಲ್ಲಿಬರುತ್ತದೆ. ಕರಣ ಹಾಗೂ ಭಾವ. ಕರಣವೆಂದರೆ ಸಾಧನ. ಕರಣವೆಂಬ ಅರ್ಥದಲ್ಲಿ 'ಅನ ' ಸೇರಿದರೆ ಜ್ಞಾನವೆಂದರೆ ಅರಿವಿಗೆ ಸಾಧನವೆಂದರ್ಥವಾಗುತ್ತದೆ. ಇದನ್ನೇ ಕರಣವ್ಯುತ್ಪತಿಯೆನ್ನುವುದು. ಭಾವಾರ್ಥದಲ್ಲಿ 'ಅನ ' ಸೇರಿದರೆ ಜ್ಞಾನವೆಂಬ ಶಬ್ದಕ್ಕೆ ಧಾತುವಿನ ಅರ್ಥವೇ ಅರ್ಥವಾಗಿಬಿಡುತ್ತದೆ. ಭಾವವೆಂದರೆ ಧಾತ್ವರ್ಥ. ಆದ್ದರಿಂದ ಭಾವವ್ಯುತ್ಪತ್ತಿಯಲ್ಲಿ ವ್ಯುತ್ಪನ್ನ ಶಬ್ದಕ್ಕೆ ಧಾತ್ವರ್ಥವೇ ಅರ್ಥವು. ಈಗ ಜ್ಞಾನವೆಂದರೆ ಅರಿವು ಎಂದೇ ಅರ್ಥ.

**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯದ್ಜ್ಞಾತ್ವಾಽಮೃತಮಶ್ನುತೇ ॥**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ 13 ॥**

**ಅರ್ಥ**– ಯಾವುದನ್ನು ತಿಳಿದರೆ ಮೋಕ್ಷಪ್ರಾಪ್ತಿಯೋ ಅಂತಹ ಜ್ಞೇಯ ಯಾವುದೆಂದು ಹೇಳುತ್ತೇನೆ. ಪರಬ್ರಹ್ಮವು ಜ್ಞೇಯ. ಪ್ರಾಕೃತದೇಹೇಂದ್ರಿಯವರ್ಜಿತವಾದುದು ಪರಬ್ರಹ್ಮ. ಅದು ಸತ್ (ವ್ಯಕ್ತಪ್ರಪಂಚ) ಅಲ್ಲ. ಅಸತ್ (ಅವ್ಯಕ್ತಪ್ರಪಂಚ)ಕೂಡಾ ಅಲ್ಲ. ಅದು ಸದಸದ್-ವಿಲಕ್ಷಣವೆಂದು ಹೇಳಲ್ಪಟ್ಟಿದೆ.

**ಏವಂ ಜ್ಞಾನಂ ಜ್ಞಾನಸಾಧನಂ ಚೋಕ್ತ್ವಾಽಧುನಾ ಸ ಚ ಯೋ ಯತ್-ಪ್ರಭಾವಶ್ಚೇತಿ ಪ್ರತಿಜ್ಞಾತಜ್ಞೇಯಸ್ವರೂಪಂ ತತ್ಪ್ರಭಾವಂ ಚ ಪ್ರತಿಜ್ಞಾಪೂರ್ವಕ-ಮಾಹ– ಜ್ಞೇಯಮಿತ್ಯಾದಿನಾ ॥ ಆದರಜನನಾಯ ತದ್ಜ್ಞಾನಸ್ಯ ಫಲಮಾಹ-ಯದ್ಜ್ಞಾತ್ವೇತಿ ॥ 'ಸ ಚ ಯ' ಇತಿ ಪ್ರತಿಜ್ಞಾತಜ್ಞೇಯಸ್ವರೂಪೋಕ್ತಿಃ- ಪರಂ ಬ್ರಹ್ಮೇತಿ ॥ ನಾಮೋಕ್ತ್ಯಾ ತತ್ಸ್ವರೂಪಸ್ಯಾವಗತೇಃ । ಅಹಮೇವೇತಿ ವಕ್ತವ್ಯೇ 'ಅಕ್ಷರಂ ಬ್ರಹ್ಮ ಪರಮಮ್' (8.3) ಇತಿ ಅಷ್ಟಮೋಕ್ತದಿಶಾ ಬ್ರಹ್ಮ ಸ್ವಯಮೇವೇತಿ ಸಿದ್ಧಮಿತಿ ಭಾವಃ ।**

## ಅವನಾರು ? ಅವನ ಸಾಮರ್ಥ್ಯವೇನು ?

**ಅನುವಾದ**– ಈ ರೀತಿ ಜ್ಞಾನ ಮತ್ತು ಜ್ಞಾನಸಾಧನಗಳನ್ನು ಹೇಳಿ ಈಗ ಅವನಾರು? ಅವನ ಸಾಮರ್ಥ್ಯವೇನು ? ಎಂಬುದಾಗಿ ಪ್ರತಿಜ್ಞಾತವಾದ (ಇದನ್ನು ತಿಳಿಸುತ್ತೇನೆ ಎದು ಕೃಷ್ಣ ಹೇಳಿರುವ) ಜ್ಞೇಯಸ್ವರೂಪ ಹಾಗೂ ಅದರ ಪ್ರಭಾವವನ್ನು ಪ್ರತಿಜ್ಞಾಪೂರ್ವಕವಾಗಿ (ಇಂಥದನ್ನು ಹೇಳುತ್ತೇನೆ ಎಂಬ ಮಾತಿನ ಜೊತೆಗೆ) ಹೇಳುತ್ತಿದ್ದಾನೆ– 'ಜ್ಞೇಯಂ ಯತ್ತತ್' ಮೊದಲಾದ ಶ್ಲೋಕಗಳಿಂದ. (ಈ ವಿಷಯವನ್ನು ಕೇಳುವುದರಲ್ಲಿ) ಆದರ ಹುಟ್ಟುವುದಕ್ಕಾಗಿ ಅದನ್ನು ತಿಳಿಯುವುದರ ಫಲವನ್ನು ಹೇಳುತ್ತಿದ್ದಾನೆ **'ಯದ್ ಜ್ಞಾತ್ವಾಽಮೃತಮಶ್ನುತೇ'** ಎಂಬುದಾಗಿ. ಅವನಾರು ? ಎಂದು (ನಾಲ್ಕನೇ ಶ್ಲೋಕದಲ್ಲಿ) ಪ್ರತಿಜ್ಞಾತವಾದ ಜ್ಞೇಯ ಸ್ವರೂಪವನ್ನು ಹೇಳಿದ್ದು ಪರಂಬ್ರಹ್ಮ ಎಂಬ ಶಬ್ದದಿಂದ. ಹೆಸರು ಹೇಳುವುದರಿಂದ ಜ್ಞೇಯದ ಸ್ವರೂಪ ತಿಳಿಯುವುದರಿಂದ 'ನಾನೇ ಜ್ಞೇಯ' ಎಂದು ಹೇಳುವುದರ ಬದಲು **'ಅಕ್ಷರಂ ಬ್ರಹ್ಮ ಪರಮಮ್'** (8-3) ಎಂಬ ಅಷ್ಟಮಾಧ್ಯಾಯದ ಮಾತಿನಲ್ಲಿಯೆಂಬಂತೆ ತಾನೇ (ಶ್ರೀಕೃಷ್ಣನೇ) ಬ್ರಹ್ಮವೆಂದು ಸಿದ್ಧವಾಗುವುದೆಂದು ಅಭಿಪ್ರಾಯ.

**ವಿವರಣೆ– 'ಸ ಚ ಯ' ಯತ್ ಪ್ರಭಾವಶ್ಚ ತತ್ ಸಮಾಸೇನ ಮೇ ಶೃಣು** ಎಂದಿದ್ದ

ಶ್ರೀಕೃಷ್ಣ ನಾಲ್ಕನೇ ಶ್ಲೋಕದಲ್ಲಿ, ಆ ಪ್ರವರ್ತಕನ ಸ್ವರೂಪವನ್ನೂ ಸಾಮರ್ಥ್ಯವನ್ನೂ ಹೇಳುತ್ತೇನೆ ಕೇಳು ಎಂದು. ಆಗ 'ಕೇಳು' ಎಂದುದನ್ನು ಈಗ ಹೇಳಹೊರಟಿದ್ದಾನೆ. 'ಪರಬ್ರಹ್ಮವೇ ಅದು ' ಎಂದು. 'ಪ್ರವರ್ತಕನಾದ ಶಕ್ತಿ ನಾನೇ' ಎನ್ನುವುದರ ಬದಲು 'ಪರಬ್ರಹ್ಮ' ಎಂದು ಹೆಸರು ಹೇಳುವುದು ಏಕೆ ? ಎಂಬ ಪ್ರಶ್ನೆಯುದಿಸುತ್ತದೆ. ಇದಕ್ಕುತ್ತರವನ್ನು **'ಅಕ್ಷರಂ ಬ್ರಹ್ಮ ಪರಮಮ್** ಎಂಬ ಎಂಟನೇ ಅಧ್ಯಾಯವ ಮೂರನೇ ಶ್ಲೋಕವ್ಯಾಖ್ಯಾನದಲ್ಲಿ ನೀಡಿದೆ. ಏನೆಂದರೆ- 'ನಾನೇ' ಎಂದಷ್ಟೇ ಹೇಳಿದರೆ ವ್ಯಕ್ತಿ ತಿಳಿಯುವುದೇ ಹೊರತು ಸ್ವರೂಪ ತಿಳಿಯದು. 'ಪರಬ್ರಹ್ಮ' ಎಂದಾಗ 'ದೇಶಕಾಲಗುಣಗಳಿಂದ ಪೂರ್ಣನಾದುದು' ಎಂಬ ವಿಷ್ಣುವಿನ ಸ್ವರೂಪವೂ ತಿಳಿಯುವುದು. ದೇಶ – ಕಾಲ – ಗುಣಗಳಿಂದ ಬೃಹತ್ ಆದುದೇ ಬ್ರಹ್ಮವೆನಿಸುವುದರಿಂದ. ಅಂತಹ ವಿಷ್ಣುವು ಕೃಷ್ಣನೇ ಎಂಬುದು ತಿಳಿದೇ ಇರುವುದರಿಂದ ಪರಬ್ರಹ್ಮನು ಕೃಷ್ಣನೇ ಎಂದೂ ತಿಳಿಯುವುದು. ಅರ್ಜುನರಿಗೆ ಕೃಷ್ಣನಲ್ಲಿ ಪರಬ್ರಹ್ಮತ್ವವನ್ನು (ದೇಶ- ಕಾಲ-ಗುಣಪೂರ್ಣತೆಯನ್ನು) ತಿಳಿಸುವುದು ಈ ಪರೋಕ್ಷನಿರ್ದೇಶದ ಉದ್ದೇಶವಾಗಿದೆ.

**ಸ ಚ ಯತ್ಪ್ರಭಾವ ಇತ್ಯುಕ್ತಮಾಹ- ಅನಾದಿಮದಿತ್ಯಾದಿನಾ ॥ ಆದಿರೇಷಾ-ಮಸ್ತೀತ್ಯಾದಿಮಂತಿ ದೇಹೇಂದ್ರಿಯಾದೀನಿ । ತತೋ ಬಹುವ್ರೀಹಿಃ । ಪ್ರಾಕೃತ ದೇಹೇಂದ್ರಿಯಗುಣಕರ್ಮಾದಿಹೀನಮಿತ್ಯರ್ಥಃ । ಭಗವಾನ್‌ಕ್ಷೇತ್ರಾಂತರ್ಗತೋ ಭೂತ್ವಾ ಕ್ಷೇತ್ರಜ್ಞ ಇತ್ಯುಚ್ಯತೇ ಕಿಮಿತ್ಯತೋ ನೇತ್ಯಾಹ- ನೇತಿ ॥ ತದ್ ಬ್ರಹ್ಮ ಸದ್ ವ್ಯಕ್ತಶಬ್ದಿತಕಾರ್ಯಜಾತಾಂತರ್ಗತಂ ನೇತ್ಯುಚ್ಯತೇ । ಅಸದವ್ಯಕ್ತಶಬ್ದಿತ-ಕಾರಣಾಂತರ್ಗತಂ ನೇತ್ಯುಚ್ಯತೇ । 'ವ್ಯಕ್ತಾವ್ಯಕ್ತವಿಲಕ್ಷಣ' ಇತಿ ಸ್ಮೃತೇಃ । ಯದ್ವಾ 'ಮೂರ್ತಾಮೂರ್ತವ್ಯತೀತತ್ವಾನ್ನ ಸತ್ತನ್ನಾಸದುಚ್ಯತೇ' ಇತಿ ಸ್ಮೃತ್ಯುಕ್ತದಿಶಾ ಮೂರ್ತಂ ನ, ಅಮೂರ್ತಂ ಚ ನೇತ್ಯುಚ್ಯತ ಇತಿ, 'ನೇತಿ ನೇತಿ' ಇತ್ಯಾದಿ ಶ್ರುತಾವಿತ್ಯರ್ಥಃ ॥ 13 ॥**

**ಅನುವಾದ**– ಅವನೆಂಥ ಸಾಮರ್ಥ್ಯವುಳ್ಳವ ? ಎಂಬುದನ್ನು ಹೇಳುತ್ತಿದ್ದಾನೆ. ಅನಾದಿಮತ್ ಮೊದಲಾದ ವಿಶೇಷಣಗಳಿಂದ. ಆದಿ (ಹುಟ್ಟು) ಉಳ್ಳ ದೇಹೇಂದ್ರಿಯಾದಿಗಳು ಆದಿಮತ್‌ಗಳು. ಈ ಆದಿಮತ್ ಶಬ್ದವನ್ನು 'ನಞ್' ಬಹುವ್ರೀಹಿಸಮಾಸಕ್ಕೊಳಪಡಿಸಿದಾಗ **ಅನಾದಿಮತ್** ಎಂದಾಗಿದೆ. ಪ್ರಾಕೃತವಾದ (ಹುಟ್ಟುಳ್ಳ) ದೇಹ, ಇಂದ್ರಿಯ, ಗುಣ, ಕರ್ಮಗಳಿಲ್ಲದ್ದು ಎಂದರ್ಥ. (ಅದರದು ಅಪ್ರಾಕೃತವಾದ ದೇಹ, ಅಪ್ರಾಕೃತವಾದ ಹುಟ್ಟಿಲ್ಲದ ಇಂದ್ರಿಯ. ಅಂಥದೇ ಗುಣಕರ್ಮಗಳು.) ಭಗವಂತನು ಕ್ಷೇತ್ರದಲ್ಲಿ ಸೇರಿದವನಾಗಿ (ತಾನೂ ಕ್ಷೇತ್ರವೇ ಆಗಿದ್ದೂ) ಕ್ಷೇತ್ರಜ್ಞನೆನಿಸಿಕೊಂಡಿಹನೋ ? ಎಂಬ ಶಂಕೆಗೆ ಇಲ್ಲವೆಂದು ಉತ್ತರಿಸುತ್ತಿದ್ದಾನೆ. 'ನ

**ಸತ್ತನ್ನಾಸದುಚ್ಯತೇ**' ಎಂದು. **ತತ್**= ಬ್ರಹ್ಮವು **ಸತ್**= ವ್ಯಕ್ತವೆಂದು ಕರೆಸಿಕೊಂಡ ಕಾರ್ಯ ಸಮುದಾಯದಲ್ಲಿ ಸೇರಿದ್ದು **ನ ಇತಿ ಉಚ್ಯತೇ**= ಅಲ್ಲವೆನಿಸಿದೆ. **ಅಸತ್**= ಅವ್ಯಕ್ತವೆಂದು ಕರೆಸಿಕೊಂಡ ಕಾರಣದಲ್ಲಿ ಸೇರಿದ್ದೂ **ನ**= ಅಲ್ಲವೆನಿಸಿದೆ. '**ವ್ಯಕ್ತಾವ್ಯಕ್ತವಿಲಕ್ಷಣಃ**'= 'ಬ್ರಹ್ಮವು ವ್ಯಕ್ತವೂ ಅಲ್ಲ ಅವ್ಯಕ್ತವೂ ಅಲ್ಲ' ಎಂಬ ಸ್ಮೃತಿಯಿರುವುದರಿಂದ. ಅಥವಾ 'ಮೂರ್ತ ಹಾಗೂ ಅಮೂರ್ತಗಳಿಂದ ವಿಲಕ್ಷಣವಾದುದರಿಂದ ಬ್ರಹ್ಮವು ಸತ್ ಅಲ್ಲ ಅಸತ್ತೂ ಅಲ್ಲವೆನಿಸಿದೆ' ಎಂಬ ಸ್ಮೃತಿಯಲ್ಲಿ ಹೇಳಿದಂತೆ ಮೂರ್ತವೂ ಅಲ್ಲ ಅಮೂರ್ತವೂ ಅಲ್ಲ ಎಂಬುದಾಗಿ 'ನೇತಿ ನೇತಿ' ಮೊದಲಾದ ಶ್ರುತಿಗಳಲ್ಲಿ ಬ್ರಹ್ಮವು ಹೇಳಲ್ಪಡುತ್ತಿದೆ ಎಂದರ್ಥ. ॥ 13 ॥

**ವಿವರಣೆ**– '**ಅನಾದಿಮತ್**' ಶಬ್ದಕ್ಕೆ ಮೇಲ್ನೋಟಕ್ಕೆ ಹೊಳೆಯುವ ಹುಟ್ಟು ಇಲ್ಲದ್ದು ಕಾರಣವಿಲ್ಲದ್ದು (ಅನಾದಿಯಾದದ್ದು) ಎಂದಷ್ಟೇ ಅರ್ಥವನ್ನು ಇಟ್ಟುಕೊಳ್ಳಕೂಡದು. ಅಷ್ಟೇ ಅರ್ಥವಾದರೆ '**ಅನಾದಿ**' ಎಂಬ ಶಬ್ದ ಸಾಕಿತ್ತು. '**ಮತುಪ್**' ಬೇಕಿರಲಿಲ್ಲ. ಆದ್ದರಿಂದ **ಆದಿಮತ್** ಇಲ್ಲದ್ದು **ಅರ್ಥಾತ್ ಆದಿಮತ್** ಆದ ಪ್ರಾಕೃತ ದೇಹಾದಿ ವರ್ಜಿತನೆಂಬರ್ಥವು ಸ್ವೀಕಾರ್ಯ. '**ಆದಿಮದ್ದೇಹವರ್ಜಿತಂ ಅನಾದಿಮತ್' ಅನ್ಯಥಾ ಅನಾದಿ ಇತ್ಯೇವ ಸ್ಯಾತ್**' (ಗೀ.ಭಾಷ್ಯ)

'ಭಗವಂತನು ಕ್ಷೇತ್ರದಲ್ಲಿ ತಾನೂ ಒಬ್ಬನಾಗಿದ್ದು ಕ್ಷೇತ್ರಜ್ಞನಲ್ಲವೆಂದು ತಿಳಿಸಲು 'ನ ಸತ್ತನ್ನಾಸದುಚ್ಯತೇ' ಎನ್ನಲಾಗಿದೆ. ಅನೇಕಾರ್ಥವಾದ ಸತ್ ಶಬ್ದಕ್ಕೆ ವ್ಯಕ್ತವೆಂದೂ ಮೂರ್ತವೆಂದೂ ಅರ್ಥವಿದೆ. ಅಸತ್ ಶಬ್ದಕ್ಕೆ ಅವ್ಯಕ್ತವೆಂದೂ ಅಮೂರ್ತವೆಂದೂ ಅರ್ಥವಿದೆ. '**ಮೂರ್ತಂ ಸದಿತಿ ಸಂಪ್ರೋಕ್ತಂ ಅಮೂರ್ತಂ ಅಸದುಚ್ಯತೇ**' ಎಂಬಿತ್ಯಾದಿ ಸ್ಮೃತಿಗಳು ಇಲ್ಲಿ ಪ್ರಮಾಣ. ಆದ್ದರಿಂದ '**ನ ಸತ್ತನ್ನಾಸದುಚ್ಯತೇ**' ಎಂಬ ಮಾತಿಗೆ 'ಬ್ರಹ್ಮವು ವ್ಯಕ್ತ ಅವ್ಯಕ್ತಗಳಿಗಿಂತ ವಿಲಕ್ಷಣವಾದುದು ಅಥವಾ ಮೂರ್ತಾಮೂರ್ತವಿಲಕ್ಷಣವೆಂದು ಹೇಳಲ್ಪಡುತ್ತದೆ.' ಎಂದರ್ಥ ಎಲ್ಲಿ ಹೇಳಲ್ಪಡು ವುದು ? ಎಂದರೆ 'ನೇತಿ ನೇತಿ' ಎಂದಿತ್ಯಾದಿ ಶ್ರುತಿಗಳಲ್ಲಿ.

**ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ 14 ॥**

**ಅರ್ಥ**– ಆ ಪರಬ್ರಹ್ಮ ಎಲ್ಲಾ ಅವಯವಗಳಲ್ಲೂ (ಎಲ್ಲೆಡೆಯೂ) ಕೈಕಾಲುಗಳ ಶಕ್ತಿಯುಳ್ಳದ್ದು. ಎಲ್ಲೆಡೆಯೂ ಕಣ್ಣು, ತಲೆ, ಮುಖಗಳ ಕಾರ್ಯಶಕ್ತಿಯುಳ್ಳದ್ದು. ಅದು ಲೋಕದಲ್ಲಿ ಎಲ್ಲೆಡೆ ಕಿವಿಯುಳ್ಳದ್ದು. ಅದು ಲೋಕದಲ್ಲಿ ಸರ್ವವನ್ನೂ ಆವರಿಸಿ ನಿಂತಿದೆ.

ಪುನಸ್ತತ್ಪ್ರಭಾವಮಾಹ- **ಸರ್ವತ ಇತಿ** ॥ ಕಥಂ ಜಗದ್ವೈಲಕ್ಷಣ್ಯಂ ಹರೇರಿತ್ಯತೋ ವಾಽಽಹ- **ಸರ್ವತ ಇತಿ** ॥ ತತ್ಪ್ರಾಗುಕ್ತಂ ಪರಂ ಬ್ರಹ್ಮ

ಸರ್ವತಃ ಸರ್ವಾವಯವೇಷು ಪಾಣಿಪಾದಂ ದ್ವಂದ್ವೈಕವದ್‌ಭಾವಃ ಪ್ರಾಣ್ಯಂಗತ್ವಾತ್ । ತೇನ ತಚ್ಛಕ್ತಿರ್ಲಕ್ಷ್ಯತೇ । ಪಾಣಿಪಾದಾದಿಶಕ್ತಿಮ(ಂತಃ)ತ್ಸರ್ವೇಽಪ್ಯವಯವಾಃ ಸ್ವಸ್ವೇತರಾವಯವಶಕ್ತಿಮಂತ ಇತ್ಯರ್ಥಃ । ಶುಕ್ಲಕೃಷ್ಣಕೇಶಾವತಾರಯೋರ್ಬಲರಾಮಕೃಷ್ಣಯೋಃ ಪಾಣಿಪಾದಾದಿ ಶಕ್ತೇರ್ದರ್ಶನಾತ್ । ಏವಂ ಸರ್ವತಃ ಸರ್ವಾವಯವೇಷು ಚಕ್ಷುರಾದಿ ಶಕ್ತಿಮದಿತ್ಯರ್ಥಃ । ಸರ್ವತಃ ಸರ್ವಾವಯವೇಷು ಶ್ರುತಿಮಚ್ಛ್ರೋತ್ರೇಂದ್ರಿಯ ಶಕ್ತಿಮತ್ । ಸರ್ವೇಂದ್ರಿಯಾಣಾಂ ವಿಷಯಾನ್ ಕರ್ಮಾಣಿ ಚ ಸರ್ವೇಂದ್ರಿಯೈಃ ವೇತ್ತಿ ಕರೋತಿ ಚೇತಿ ಯಾವತ್ । ಲೋಕೇ ಜಗತಿ ಸರ್ವಂ ವಸ್ತು ಆವೃತ್ಯ ತಿಷ್ಠತಿ ವ್ಯಾಪ್ಯ ವರ್ತತೇ । ಯದ್ವಾ ಸರ್ವತಃ ಸರ್ವತ್ರ ದೇಶೇ ಸ್ಥಿತಂ ತದ್‌ಬ್ರಹ್ಮ ಪಾಣಿಪಾದಾಕ್ಷಿಶಿರಃಪ್ರಭೃತ್ಯವಯವೋಪೇತಂ ಸತ್ ಲೋಕೇ ಸರ್ವಂ ವಸ್ತು ವ್ಯಾಪ್ಯ ತಿಷ್ಠತಿ ಇತಿ । ಅಣೋರಣುತರೈಃ ಪಾಣಿಪಾದಾದ್ಯವಯವೋಪೇತೈಃ ಅನಂತರೂಪೈಃ ಸರ್ವತ್ರ ಸ್ಥಿತಂ ಸತ್ ವ್ಯಾಪ್ತರೂಪೇಣ ಚ ಸರ್ವಮಪಿ ವ್ಯಾಪ್ಯ ವರ್ತತೇ ಬ್ರಹ್ಮೇತಿ ಭಾವಃ। ॥ 14 ॥

## ಪರಮಾತ್ಮನ ಎಲ್ಲಾ ಅವಯವಗಳಿಗೂ ಎಲ್ಲಾ ಅವಯವಗಳ ಶಕ್ತಿ ಇದೆ

**ಅನುವಾದ**- ಮತ್ತೆ ಆ ಬ್ರಹ್ಮನ ಸಾಮರ್ಥ್ಯವನ್ನು ಹೇಳುತ್ತಿದ್ದಾನೆ. **ಸರ್ವತಃ** ಎಂಬುದಾಗಿ ಅಥವಾ ಜಗದ್ವೈಲಕ್ಷಣ್ಯ ಶ್ರೀಹರಿಗೆ ಹೇಗೆ ? ಎಂಬುದಕ್ಕೆ ಉತ್ತರಿಸುತ್ತಿದ್ದಾನೆ ಈ ಸರ್ವತ ಎಂಬ ಶ್ಲೋಕದಿಂದ. **ತತ್** = ಹಿಂದೆ ಹೇಳಿದ ಪರಬ್ರಹ್ಮವು **ಸರ್ವತಃ**= ಎಲ್ಲಾ ಅವಯವಗಳ ಪಾಣಿಪಾದಂ ಇಲ್ಲಿ ಪಾಣಿಪಾದಗಳು ಪ್ರಾಣ್ಯಂಗವಾದುದರಿಂದ ದ್ವಂದ್ವೈಕವದ್‌ಭಾ ವುಂಟಾಗಿದೆ[1]. ಅದರಿಂದ ಪಾಣಿಪಾದಗಳ ಶಕ್ತಿಯನ್ನು ಲಕ್ಷಣಾವೃತ್ತಿಯಿಂದ ಇಟ್ಟುಕೊಳ್ಳಬೇಕು ಕೈಕಾಲುಗಳ ಶಕ್ತಿಯುಳ್ಳದ್ದು (ಎಂದರ್ಥವಾಯಿತು) ಎಲ್ಲಾ ಅವಯವಗಳೂ ತಮಗಿಂತ ಬೇ ಅವಯವಗಳ ಶಕ್ತಿಯುಳ್ಳವುಗಳು ಎಂದರ್ಥ. ಭಗವಂತನ ಶುಕ್ಲಕೇಶಾವತಾರನಾದ ಬಲರಾ

---

1. 'ದ್ವಂದ್ವಶ್ಚ ಪ್ರಾಣಿತೂರ್ಯಸೇನಾಂಗಾನಾಮ್' (ಪಾ.ಸೂ. 2-4-2) ಎಂಬ ಸೂತ್ರದಿಂ ಪ್ರಾಣಿಗಳ ಅವಯವಗಳನ್ನು ಹೇಳುವ ಶಬ್ದಗಳೊಂದಿಗೆ ದ್ವಂದ್ವಸಮಾಸವು ಏಕವಚನವನ ಹೊಂದುತ್ತದೆ. 'ಸ ನಪುಂಸಕಂ' ಎಂಬ ಸೂತ್ರದಿಂದ ನಪುಂಸಕಲಿಂಗವನ್ನೂ ಪಡೆಯುತ್ತದೆ. ಇದನ ದ್ವಂದ್ವೈಕವದ್ಭಾವವೆನ್ನಲಾಗುತ್ತದೆ. 'ಪಾಣ್ಯೋಃ ಪಾದಯೋಶ್ಚ ಸಮಾಹಾರಃ' (ಅಥವಾ 'ಪಾಣೀನಾ ಪಾದಾನಾಂ ಚ ಸಮಾಹಾರಃ') ಎಂದು ವಿಗ್ರಹವಾಕ್ಯ. ಇಲ್ಲಿ ಪಾಣಿ ಪಾದಗಳು ಪ್ರಾಣ್ಯಂ ವಾದುದರಿಂದ ದ್ವಂದ್ವೈಕವದ್‌ಭಾವ.

ಹಾಗೂ ಕಪ್ಪುಕೂದಲಿನ ಅವತಾರಸ್ವರೂಪವೆನಿಸಿದ ಕೃಷ್ಣರಲ್ಲಿ ಪಾಣಿಪಾದಾದಿಶಕ್ತಿಯು ಕಾಣಿಸುತ್ತಿರುವುದರಿಂದ (ಸರ್ವಾವಯವಗಳೂ ಸರ್ವಾವಯವಶಕ್ತಿಮತ್‌ಗಳು.) ಇದೇ ರೀತಿ **ಸರ್ವತಃ**= ಸರ್ವಾವಯವಗಳಲ್ಲಿ, **ಅಕ್ಷಿಶಿರೋಮುಖಂ**= ಕಣ್ಣು, ತಲೆ, ಮುಖಗಳ ಶಕ್ತಿಯುಳ್ಳದ್ದೆಂದರ್ಥ. **ಸರ್ವತಃ**= ಸರ್ವಾವಯವಗಳಲ್ಲಿ **ಶ್ರುತಿಮತ್**= ಶ್ರೋತ್ರೇಂದ್ರಿಯದ ಶಕ್ತಿಯುಳ್ಳದ್ದು. ಎಲ್ಲ ಇಂದ್ರಿಯಗಳ ವಿಷಯಗಳನ್ನು ಶಬ್ದಾದಿಗಳನ್ನು ಎಲ್ಲಾ ಇಂದ್ರಿಯಗಳಿಂದಲೂ ತಿಳಿಯುತ್ತದೆ ಹಾಗೂ ಎಲ್ಲಾ ಇಂದ್ರಿಯಗಳ ಕರ್ಮಗಳನ್ನು ಎಲ್ಲಾ ಇಂದ್ರಿಯಗಳಿಂದ ಮಾಡುತ್ತದೆಯೆಂದರ್ಥ. **ಲೋಕೇ**= ಜಗತ್ತಿನಲ್ಲಿ ಎಲ್ಲಾ ವಸ್ತುಗಳನ್ನು ವ್ಯಾಪಿಸಿದೆ. ಅಥವಾ, **ಸರ್ವತಃ** = ಎಲ್ಲಾ ಪ್ರದೇಶಗಳಲ್ಲೂ ಇರುವ ಆ ಪರಬ್ರಹ್ಮವು ಕೈಕಾಲು ಕಣ್ಣು ತಲೆ ಮೊದಲಾದ ಅವಯವಗಳುಳ್ಳದ್ದಾಗಿ ಲೋಕದಲ್ಲಿ ಎಲ್ಲವನ್ನೂ ವ್ಯಾಪಿಸಿ ನಿಂತಿದೆ (ಎಂದೂ ವ್ಯಾಖ್ಯಾನಿಸಬಹುದು) ಅಣುವಿಗಿಂತಲೂ ಸೂಕ್ಷ್ಮತರವೆನಿಸಿದ ಪಾಣಿಪಾದಾದ್ಯವಯವಗಳಿಂದ ಕೂಡಿದ ಅನಂತ ರೂಪಗಳಿಂದ ಎಲ್ಲೆಡೆ ಇರುವುದಾಗಿ ವ್ಯಾಪ್ತರೂಪದಿಂದ ಎಲ್ಲವನ್ನೂ ವ್ಯಾಪಿಸಿಕೊಂಡೂ ಆ ಬ್ರಹ್ಮವಿದೆ ಎಂದು ಅಭಿಪ್ರಾಯ.

**ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್ ।**
**ಅಸಕ್ತಂ ಸರ್ವಭುಕ್ಚೈವ (ಭೃಚ್ಚೈವ)ನಿರ್ಗುಣಂ ಗುಣಭೋಕ್ತೃ ಚ ॥ 15 ॥**

**ಅರ್ಥ**– ಎಲ್ಲಾ ಇಂದ್ರಿಯಗಳನ್ನೂ ಶಬ್ದಾದಿಗುಣಗಳನ್ನೂ ತಿಳಿದು ತಿಳಿಸುವಂಥದು. ಸ್ವರೂಪಕ್ಕಿಂತ ಬೇರೆಯಾದ ಹಾಗೂ ಪ್ರಾಕೃತವಾದ ಇಂದ್ರಿಯಗಳಿಲ್ಲದ್ದು. ಪುಣ್ಯಪಾಪಗಳ ಲೇಪವಿಲ್ಲದ್ದು. ಸರ್ವವನ್ನೂ ಉಣ್ಣುವಂಥದು (ಎಲ್ಲವನ್ನು ಭರಿಸುವಂಥದು) ಪ್ರಾಕೃತಗುಣ ರಹಿತ. ಅಪ್ರಾಕೃತ ಗುಣ ಭೋಕ್ತೃ.

**ಕಿಂ ಚ ಸರ್ವೇಂದ್ರಿಯಗುಣಾಭಾಸಂ ತದ್‌ಬ್ರಹ್ಮ ಸರ್ವಾಣೀಂದ್ರಿಯಾಣಿ ಗುಣಾನ್ ಶಬ್ದಾದಿವಿಷಯಾಂಶ್ಚಾಭಾಸಯತಿ ಪ್ರತ್ಯಾಯಯತಿ ಪ್ರತ್ಯೇತಿ ವಾ ಸರ್ವೇಂದ್ರಿಯಗುಣಾಭಾಸಮ್ । ಭಾಸೃ ದೀಪ್ತೌ ಇತ್ಯತಃ ಪಚಾದ್ಯಚ್ । ಪ್ರಾಕೃತಾನಾಂ ಭಿನ್ನಾನಾಂ ಚೇಂದ್ರಿಯಾಣಾಮಭಾವಾತ್‌ಸರ್ವೇಂದ್ರಿಯ-ವಿವರ್ಜಿತಮ್ । ಅಸಕ್ತಂ ನಿರ್ಲೇಪಮ್ । ಸರ್ವಂ ಭುಂಕ್ತೆ ಇತಿ ಸರ್ವಭುಕ್ ಚ । ಸರ್ವಸಂಹರ್ತೃ ಇತಿ ವಾ ಸರ್ವಸಾರಭೋಕ್ತೃ ಇತಿ ವಾಽರ್ಥಃ । ಸರ್ವಭೃಚ್ಚೇತಿ ಪಾಠಾಂತರಮ್ । ಗುಣಭೋಕ್ತೃ ಚ ಸರ್ವಕಲ್ಯಾಣಗುಣಭೋಕ್ತೃ ಚೇತ್ಯರ್ಥಃ ॥ 15 ॥**

ಅಷ್ಟೇ ಅಲ್ಲದೇ ಆ ಬ್ರಹ್ಮವು **ಸರ್ವೇಂದ್ರಿಯಗುಣಾಭಾಸಂ**= ಎಲ್ಲಾ ಇಂದ್ರಿಯಗಳನ್ನೂ **ಗುಣಾನ್**= ಶಬ್ದವೇ ಮೊದಲಾದ ವಿಷಯಗಳನ್ನೂ , **ಆಭಾಸಯತಿ**= ತಿಳಿಸುತ್ತದೆ ಅಥವಾ ತಿಳಿಯುತ್ತದೆ. ಅಂಥದು ಸರ್ವೇಂದ್ರಿಯಗುಣಾಭಾಸಮ್. ಭಾಸೃದೀಪ್ತೌ ಎಂಬ ಧಾತುವಿಗೆ ಪಚಾದ್ಯಚ್[1] ಪ್ರಾಕೃತಗಳಾದ ಹಾಗೂ ಸ್ವರೂಪವ್ಯತಿರಿಕ್ತಗಳಾದ ಇಂದ್ರಿಯಗಳು ಇಲ್ಲವಾದ್ದರಿಂದ ಸರ್ವೇಂದ್ರಿಯವಿವರ್ಜಿತ. **ಅಸಕ್ತಂ**= ನಿರ್ಲೇಪ. ಎಲ್ಲವೂ ಇವನಿಂದ ತಿನ್ನಲ್ಪಡುತ್ತದೆಯಾದ್ದರಿಂದ **ಸರ್ವಭುಕ್**. ಸರ್ವಸಂಹರ್ತೃ ಎಂದೂ ಸರ್ವದರ ಸಾರ ಭೋಕ್ತ ಎಂದೂ ಅರ್ಥೈಸಬಹುದು. 'ಸರ್ವಭೃಚ್ಚ' ಎಂಬುದಾಗಿ ಪಾಠಾಂತರವಿದೆ. **ಗುಣಭೋಕ್ತೃ ಚ**= ಎಲ್ಲಾ ಕಲ್ಯಾಣಗುಣಗಳ ಭೋಕ್ತೃವೂ ಕೂಡ ಎಂದರ್ಥ. ॥ 15 ॥

**ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥ 16 ॥**

**ಅರ್ಥ**- ಆ ಬ್ರಹ್ಮ ಎಲ್ಲದರ ಒಳಗೂ ಹೊರಗೂ ಇರುವಂಥದು. ತನ್ನಲ್ಲಿ ವ್ಯತ್ಯಾಸವಿಲ್ಲದ್ದು ಎಲ್ಲೆಡೆ ಸಂಚರಿಸುವಂಥದು. ಸೂಕ್ಷ್ಮವಾದುದರಿಂದ ಅದು ಇಂದ್ರಿಯಗಳಿಗೆ ನಿಲುಕದ್ದು ವ್ಯಾಪ್ತವಾದ ಅದು ದೂರದಲ್ಲಿದ್ದೂ ಹತ್ತಿರದಲ್ಲೂ ಇದೆ.

**ಕಿಂಚ ಭೂತಾನಾಂ ಸರ್ವಪ್ರಾಣಿನಾಂ ಬಹಿರಂತಶ್ಚ ಪರಂ ಬ್ರಹ್ಮ ತಿಷ್ಠತೀತ್ಯನುಷಜ್ಯತೇ । ಅನ್ಯಥಾಭಾವರಾಹಿತ್ಯಾದಚರಮ್ । ಸರ್ವದೇಶೇಷು ಚರಣಾದ್ ಗಮನಾಚ್ಚರಮ್ । ಸೂಕ್ಷ್ಮತ್ವಾದಪ್ರತಿಘತ್ವಾತ್ತದ್‌ಬ್ರಹ್ಮಾವಿಜ್ಞೇಯಂ ಅಗ್ರಾಹ್ಯಮಿಂದ್ರಿಯಾವಿಷಯಃ । ಸರ್ವಗತತ್ವಾದ್‌ದೂರೇ ಅಂತಿಕೇ ಸಮೀಪೇ ಚ ಸ್ಥಿತಂ ತತ್ ॥ 16 ॥**

**ಅನುವಾದ- ಅಲ್ಲದೇ ಭೂತಾನಾಂ**= ಎಲ್ಲಾ ಪ್ರಾಣಿಗಳ ಹೊರಗೂ ಒಳಗೂ ಪರಬ್ರಹ್ಮ ಇದೆ (ತಿಷ್ಠತಿ) ಎಂಬುದನ್ನು (ಹದಿನಾಲ್ಕನೇ ಶ್ಲೋಕದಿಂದ) ಇಟ್ಟುಕೊಳ್ಳಬೇಕು. ಬ್ರಹ್ಮದ ವ್ಯತ್ಯಾಸ (ಅಥವಾ ವಿಕಾರ)ವಿಲ್ಲದಿರುವುದರಿಂದ ಅದು ಅಚರ. ಎಲ್ಲ ದೇಶಗಳಲ್ಲ ಸಂಚರಿಸುವುದರಿಂದ ಚರ. **ಸೂಕ್ಷ್ಮತ್ವಾತ್**= ಯಾವುದಕ್ಕೂ ನಿಲುಕದಿರುವುದರಿಂದ ಆ ಬ್ರಹ್ಮ

1. 'ನಂದಿಗ್ರಹಿಪಚಾದಿಭ್ಯೋ ಲ್ಯುಣಿನ್ಯಚಃ' (ಪಾ.ಸೂ. 3.1.134) ಎಂಬ ಸೂತ್ರದಲ್ಲಿ ಪಚಾ ಗಣಗಳಲ್ಲಿ ಸೇರಿದ ಧಾತುಗಳಿಗೆ ಅಚ್ ಎಂಬ ಪ್ರತ್ಯಯವನ್ನು ಹೇಳಲಾಗಿದೆ. ಪಚಾದಿಗಣ ಆಕೃತಿಗಣವೆನಿಸಿದ್ದು ಆದರಲ್ಲಿ ಭಾಸೃ ಧಾತುವನ್ನೂ ಸೇರಿಸಿಕೊಂಡು ಅಚ್‌ಪ್ರತ್ಯಯದಿಂದ ಆಭಾ ವೆಂಬ ರೂಪವಾಗಿದೆ.

**ಅವಿಜ್ಞೇಯಂ**= ಇಂದ್ರಿಯಗಳಿಗೂ ನಿಲುಕದೆ ಅಗ್ರಾಹ್ಯವಾಗಿದೆ. ಎಲ್ಲೆಡೆ ವ್ಯಾಪ್ತವಾಗಿರುವುದರಿಂದ ದೂರದಲ್ಲೂ **ಅಂತಿಕೇ**= ಸಮೀಪದಲ್ಲೂ ಇರುವಂಥದು ಅದು. ॥ 16 ॥

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ।**
**ಭೂತಭರ್ತೃ ಚ ತದ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥ 17 ॥**

**ಅರ್ಥ**– ಆ ಬ್ರಹ್ಮವು ನಾನಾ ಚೇತನಗಳಲ್ಲಿ ಅಂತರ್ಗತನಾಗಿ ಒಬ್ಬನೇ ಇರುತ್ತದೆ. ಆದರೆ ಬೇರೆ ಬೇರೆಯೋ ಎಂಬಂತೆ ಗೋಚರಿಸುತ್ತದೆ. ಅದು ಪ್ರಾಣಿಜಾತದ ರಕ್ಷಕ, ಭಕ್ಷಕ ಮತ್ತು ಜನಕ ಎಂದು ತಿಳಿಯಬೇಕು.

**ಕಿಂಚ ಭೂತೇಷು ನಾನಾವಿಧಪ್ರಾಣಿಷ್ವವಿಭಕ್ತಮೇವ ವಿಭಕ್ತಮಿವ ಸ್ಥಿತಮ್ । ಅಜ್ಞಾನಾಂ ತಥಾ ಪ್ರತೀತಮಿತಿ ಯಾವತ್ । ಭೂತಭರ್ತೃ ಭೂತಾನಾಂ ಭರ್ತೃ ಧಾರಣಪೋಷಣಕರ್ತೃ ತದ್‌ಬ್ರಹ್ಮ ಜ್ಞೇಯಮ್ । ಗ್ರಸಿಷ್ಣು ಪ್ರಲಯೇ ಸರ್ವಭಕ್ಷಕಮ್ । ಪ್ರಭವಿಷ್ಣು ಸೃಷ್ಟಿಕಾಲೇ ಸರ್ವೋತ್ಪಾದಕಂ ಚ ॥ 17 ॥**

**ಅನುವಾದ**– ಅಲ್ಲದೇ (ಆ ಬ್ರಹ್ಮವು) **ಭೂತೇಷು**= ನಾನಾವಿಧ ಪ್ರಾಣಿಗಳಲ್ಲಿ ಬೇರೆಬೇರೆಯಾಗಿರದೇ (ಒಂದೇ ಆಗಿದ್ದು) ಬೇರೆಬೇರೆ ಎಂಬಂತೆ ಇರುವಂಥದು. ಅಜ್ಞರಿಗೆ ಬೇರೆಬೇರೆಯೆಂಬಂತೆ ತೋರುವಂಥದು ಎಂದು ಭಾವ. **ಭೂತಭರ್ತೃ**= ಚೇತನಗಳ ಪೊರೆದು ಪೋಷಿಸುವಂಥದೆಂದು ತಿಳಿಯಬೇಕು . **ಗ್ರಸಿಷ್ಣು** = ಪ್ರಲಯ ಕಾಲದಲ್ಲಿ ಸರ್ವಭಕ್ಷಕ. ಮತ್ತು **ಪ್ರಭವಿಷ್ಣು** = ಸೃಷ್ಟಿಕಾಲದಲ್ಲಿ ಸರ್ವವನ್ನೂ ಸೃಜಿಸುವಂಥದು. ॥ 17 ॥

**ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ॥ 18 ॥**

**ಅರ್ಥ**– ಆ ಬ್ರಹ್ಮವು ಸೂರ್ಯಾದಿಜ್ಯೋತಿಗಳಿಗೂ ಜ್ಯೋತಿ. ('ತಮಸಃ ಪರಸ್ತಾತ್' ಎಂಬ ಶ್ರುತಿಗಳಲ್ಲಿ) ತಮಸ್ಸನ್ನು ಮೀರಿದುದು ಎಂದು ಹೇಳಲ್ಪಟ್ಟಿದೆ. ಅದು ಜ್ಞಾನರೂಪ. ಸ್ವಪ್ರಕಾಶ. ಜ್ಞಾನದ ಬಲದಿಂದ ಮುಕ್ತಿಯಲ್ಲಿ ಪ್ರಾಪ್ಯ. ಎಲ್ಲರ ಹೃದಯದಲ್ಲೂ ನೆಲೆನಿಂತದ್ದು.

**ಕಿಂಚ ತದ್ ಬ್ರಹ್ಮ ಜ್ಯೋತಿಷಾಂ ಸೂರ್ಯಾದೀನಾಮಪಿ ಜ್ಯೋತಿಃ ಪ್ರಕಾಶಶಕ್ತಿಪ್ರದಮ್ । ತಮಸಃ ಅವ್ಯಕ್ತಾನ್ಮೃತ್ಯೋಃ ಅಜ್ಞಾನಾದ್ವಾ ಪರಮತಿಕ್ರಾನ್ತಂ ಉಚ್ಯತೇ । 'ತಮಸಃ ಪರಸ್ತಾತ್' ಇತಿ ಶ್ರುತ್ಯಾದಾವಿತ್ಯರ್ಥಃ । ಜ್ಞಾನಂ ಪ್ರಕಾಶಸ್ವರೂಪಮ್ । ಜ್ಞೇಯಂ ಸ್ವೇನ ಜ್ಞಾತವ್ಯರೂಪಂ ಸ್ವಪ್ರಕಾಶಮಿತ್ಯರ್ಥಃ ।**

**ಜೀವಾನಾಂ ಸ್ವಪ್ರಕಾಶತ್ವೇऽಪಿ ತಸ್ಯೇಶಾಧೀನತ್ವಾತ್ । ಅಸ್ಯ ಚಾನ್ಯಾನಪೇಕ್ಷ-ತ್ವಾತ್ । ಸ್ವಕರ್ಮಕತ್ವಸ್ಯ (ಕ್ರಿಯಾತ್ವಕರ್ಮತ್ವಯೋರೇಕತ್ರ ವಿರೋಧೇನ) ದುರ್ಘಟತ್ವಾಚ್ಚ ತದುಕ್ತಿರ್ಭಗವತೋ ಮಹಿಮೇತಿ ಯತ್ಪ್ರಭಾವ ಇತ್ಯಸ್ಯೋತ್ತರಂ ಭವತೀತಿ ಭಾವಃ । ಜ್ಞಾನಗಮ್ಯಮಪರೋಕ್ಷಜ್ಞಾನೇನ ಮುಕ್ತೌ ಪ್ರಾಪ್ಯಮ್ । ಸರ್ವಸ್ಯ ಹೃದಿ ವಿಷ್ಠಿತಮ್ ವಿಶೇಷೇಣ ಸ್ಥಿತಮ್ ।**

**ಅನುವಾದ-** ಅಷ್ಟೇ ಅಲ್ಲದೆ ಆ ಬ್ರಹ್ಮವು **ಜ್ಯೋತಿಷಾಂ=** ಸೂರ್ಯಚಂದ್ರಾದಿ ಬೆಳಕು ಗಳಿಗೂ, **ಜ್ಯೋತಿಃ=** ಬೆಳಗುವ ಶಕ್ತಿಯನ್ನಿತ್ತಿರುವಂಥದು. **ತಮಸಃ=** ಪ್ರಕೃತಿಗಿಂತ, ಮೃತ್ಯುವಿಗಿಂತ, ಅಥವಾ ಅಜ್ಞಾನಕ್ಕಿಂತ **ಪರಂ=** ಆ ಮೂರನ್ನೂ ಅತಿಕ್ರಮಿಸಿ (ಆಚೆಗೆ ಇರುವಂಥದೆಂದು) ಹೇಳಲ್ಪಡುತ್ತಿದೆ. '**ತಮಸಃ ಪರಸ್ತಾತ್**' ಎಂಬ ಶ್ರುತಿಮೊದಲಾದವುಗಳಲ್ಲಿ (ಹೇಳಲ್ಪಡುತ್ತಿದೆ) ಎಂದರ್ಥ. **ಜ್ಞಾನಂ=** ಪ್ರಕಾಶರೂಪವು, **ಜ್ಞೇಯಂ=** ತನ್ನಿಂದಲೇ ತಿಳಿಯಲ್ಪಡುವಂಥದು. ಸ್ವಪ್ರಕಾಶವೆಂದರ್ಥ. ಜೀವರೂ ಸ್ವಪ್ರಕಾಶರಾಗಿದ್ದರೂ ಅವರ ಸ್ವಪ್ರಕಾಶತ್ವವು ಭಗವಂತನ ಅಧೀನವಾಗಿರುವುದರಿಂದ ಈ ಭಗವಂತನ ಸ್ವಪ್ರಕಾಶತ್ವವಾದರೂ ಅಪರಾಧೀನವಾಗಿರುವುದ ರಿಂದ (ಈ ಪರಬ್ರಹ್ಮದ ಮಹಿಮೆಯಲ್ಲಿ ಸ್ವಪ್ರಕಾಶತ್ವವನ್ನೂ ಹೇಳಲಾಗಿದೆ.) ಅಲ್ಲದೇ ಒಂದು ಕ್ರಿಯೆ ತನಗೆ ತಾನೇ ಕರ್ಮವಾಗುವುದು (ತನ್ನನ್ನು ತಾನೇ ತಿಳಿಯುವುದು) ಕೂಡುವುದಿಲ್ಲವಾದ್ದ ರಿಂದಲೂ ಅಂಥಹ ದುರ್ಘಟಸ್ವಪ್ರಕಾಶತ್ವದ ಉಕ್ತಿಯು ಭಗವಂತನ ಮಹಿಮೆಯೆಂದು 'ಎಂಥ ಸಾಮರ್ಥ್ಯವುಳ್ಳದ್ದು ಬ್ರಹ್ಮ?' ಎಂಬುದಕ್ಕೆ ಉತ್ತರವಾಗುತ್ತದೆಯೆಂದು ಅಭಿಪ್ರಾಯ. **ಜ್ಞಾನಗಮ್ಯಂ=** ಅಪರೋಕ್ಷಜ್ಞಾನದಿಂದ ಮುಕ್ತಿಯಲ್ಲಿ ಹೊಂದಲ್ಪಡುವಂಥದು. ಎಲ್ಲರ ಹೃದಯದಲ್ಲಿ **ವಿಷ್ಠಿತಂ=** ವಿಶೇಷವಾಗಿ ಇರುವಂಥದು.

**ಸರ್ವಗತತ್ವೇನ 'ದೂರಸ್ಥಂ ಚಾಂತಿಕೇ ಚ ತತ್' 'ಸರ್ವಮಾವೃತ್ಯ ತಿಷ್ಠತೀ'ತ್ಯುಕ್ತಾವಪಿ ಹೃದ್ಯಲ್ಪದೇಶೇ ಸ್ಥಿತ್ಯುಕ್ತಿರ್ಯುಕ್ತಾ । 'ಓಂ ಅರ್ಭಕೌಕಸ್ತ್ವಾತ್ ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ ಓಂ' ಇತಿ (1-2-7) 'ಓಂ ಅನ್ಯಭಾವವ್ಯಾವೃತ್ತೇಶ್ಚ ಓಂ' (1-3-12) ಇತ್ಯಾದಿ ಸೂತ್ರೇ-ಣಾಣುರೂಪೇಣಾವಸ್ಥಿತೇರುಕ್ತತ್ವಾತ್ । ಅತ ಏವ ಚರಮಿತ್ಯುಕ್ತಿರಪ್ಯುಪಪನ್ನೇತಿ ಭಾವಃ ॥ 18 ॥**

## ಸರ್ವಗತವಾದುದೂ ಹೃದಯದಲ್ಲಿದೆ

**ಅನುವಾದ–** ಬ್ರಹ್ಮವು ಸರ್ವಗತವಾದ್ದರಿಂದ '**ದೂರಸ್ಥಂ ಚಾಂತಿಕೇ ಚ ತತ್**' ದೂರದಲ್ಲಿ ಹತ್ತಿರದಲ್ಲೂ ಇದೆ '**ಸರ್ವಮಾವೃತ್ಯ ತಿಷ್ಠತಿ** 'ಎಲ್ಲವನ್ನೂ ಆವರಿಸಿ ನಿಂತಿದೆ' ಎಂದು

(ಹದಿನಾರನೇ ಮತ್ತು ಹದಿನಾಲ್ಕನೇ ಶ್ಲೋಕದಲ್ಲಿ) ಹೇಳಿದ್ದರೂ ಹೃದಯವೆಂಬ ಅಲ್ಪಪ್ರದೇಶದಲ್ಲಿ ಇದೆಯೆಂದುದು ಯುಕ್ತವಾಗುತ್ತದೆ. **'ಅರ್ಭಕೌಕಸ್ತ್ವಾತ್ ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ'** (ಬ್ರ.ಸೂ. 1.2.7) **'ಅನ್ಯಭಾವವ್ಯಾವೃತ್ತೇಶ್ಚ'** (ಬ್ರ.ಸೂ. 1.3.12) ಮೊದಲಾದ ಸೂತ್ರದಿಂದ ಬ್ರಹ್ಮನ ಅಣುರೂಪದಿಂದ ಇರುವಿಕೆಯನ್ನು ಉಪಪಾದಿಸಿರುವುದರಿಂದ. ಆದ್ದರಿಂದಲೇ ಎಲ್ಲೆಡೆ ಸಂಚರಿಸುವಂಥದು (ಚರಮ್) ಎಂದು ಹೇಳಿದುದೂ ಹೊಂದುತ್ತದೆ ಎಂದು ಭಾವ. ॥ 18 ॥

**ವಿವರಣೆ–** **'ದೂರಸ್ಥಂ ಚಾಂತಿಕೇ ಚ ತತ್'** **'ಸರ್ವಮಾವೃತ್ಯ ತಿಷ್ಠತಿ'** ಎಂಬ ಮಾತುಗಳಿಂದ ಬ್ರಹ್ಮವು ಸರ್ವಗತವಾಗಿದ್ದು ದೂರದಲ್ಲೂ ಹತ್ತಿರದಲ್ಲಿಯೂ ಇದೆ. ಪ್ರಪಂಚವನ್ನು ಆವರಿಸಿದೆ ಎಂದಿದೆ. ಇದೀಗ **'ಹೃದಿ ಸರ್ವಸ್ಯ ವಿಷ್ಠಿತಮ್'** ಎಂಬುದಾಗಿ ಸರ್ವರ ಹೃದಯಗುಹೆಯೆಂಬ ಸೂಕ್ಷ್ಮಸ್ಥಾನದಲ್ಲಿ ಆ ಬ್ರಹ್ಮವಿದೆಯೆಂದು ಹೇಳಲಾಗುತ್ತಿದೆ. ಎಲ್ಲೆಡೆ ವ್ಯಾಪಿಸಿದ ಬೃಹತ್ತಾದ ಬ್ರಹ್ಮವು ಅಲ್ಪದೇಶವಾದ ಹೃದಯದಲ್ಲಿರುವುದು ಯುಕ್ತವೇ ಆಗಿದೆ. ಅಣುರೂಪದಿಂದ ಅದು ಎಲ್ಲರ ಹೃದಯಗುಹೆಯಲ್ಲಿದೆ ಎಂಬುದನ್ನು ಬ್ರಹ್ಮಸೂತ್ರವು ಸಿದ್ಧಾಂತಿಸಿದೆ. **'ಅಸ್ಥೂಲೋಽನಣು'** ಎಂಬ ಶ್ರುತಿ ಬ್ರಹ್ಮನಲ್ಲಿ ಪ್ರಪಂಚದ ವಸ್ತುಗಳಲ್ಲಿರುವ ಸ್ಥೂಲತೆಯಾಗಲೀ ಅಣುತ್ವವಾಗಲೀ ಇರುವುದಲ್ಲ. ಅದಕ್ಕಿಂತ ವಿಲಕ್ಷಣವಾದ ಸ್ಥೂಲತೆ ಅಣುತ್ವಗಳು ಅವನಲ್ಲಿವೆ ಎಂದಿದೆ. ಆದ್ದರಿಂದಲೇ ಪ್ರಪಂಚದ ವಸ್ತುಗಳು ಅಣುವಾದವು ಮಹತ್ತಾಗದಿದ್ದರೂ ಬ್ರಹ್ಮ ಅಣುವೂ ಮಹತ್ತೂ ಆಗಬಲ್ಲದು. ಇದನ್ನೇ **'ಅನ್ಯಭಾವವ್ಯಾವೃತ್ತೇಶ್ಚ'** ಎಂಬ ಸೂತ್ರ ಹೇಳಿದೆ. ಆಕಾಶವು ಎಲ್ಲದರ ಹೊರಗಿದ್ದರೂ ಅಲ್ಪಸ್ಥಾನದಲ್ಲೂ ಇರುವಂತೆ ಬ್ರಹ್ಮವು ಸರ್ವಗತವಾಗಿದ್ದರೂ ಹೃದಯ ಗುಹೆಯೆಂಬ ಅಲ್ಪಸ್ಥಾನದಲ್ಲಿರುವಿಕೆಯು ಯುಕ್ತವೆಂದು **'ಅರ್ಭಕೌಕಸ್ತ್ವಾತ್ .....'** ಎಂಬ ಸೂತ್ರವೂ ತಿಳಿಸಿದೆ.

ಒಂದು ವೇಳೆ ಬ್ರಹ್ಮವು ಸರ್ವಗತ ಮಾತ್ರವಾಗಿದ್ದು ಆಣುವಲ್ಲವಾಗಿದ್ದರೆ **'ಅಚರಂ ಚರಮೇವಚ** 'ಎಂಬಲ್ಲಿ ಬ್ರಹ್ಮನನ್ನು ಸರ್ವತ್ರ ಸಂಚಾರಿ ಎಂಬರ್ಥದಲ್ಲಿ ಚರವೆಂದುದು ಕೂಡಲಾರದು. ವ್ಯಾಪ್ತವಾದುದು ಚರವಾಗಲಾರದಷ್ಟೇ. ಹೃದಯಸ್ಥಿತತ್ವವನ್ನು (ಅಲ್ಪದೇಶ ಸ್ಥಿತತ್ವವನ್ನು) ಒಪ್ಪಿರುವುದರಿಂದಲೇ '**ಚರ** 'ವೆಂದುದೂ ಹೊಂದಿಕೆಯಾಗುತ್ತಿದೆ.

**ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ 19 ॥**

**ಅರ್ಥ–** ಹೀಗೆ ಕ್ಷೇತ್ರ, ಜ್ಞಾನ, ಜ್ಞಾನಸಾಧನ, ಜ್ಞೇಯವನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ಇದನ್ನು ತಿಳಿದು ನನ್ನ ಭಕ್ತನು ಮೋಕ್ಷಕ್ಕೆ ಅರ್ಹನಾಗುತ್ತಾನೆ.

**ಉಕ್ತಮುಪಸಂಹೃತ್ಯ ತದ್‌ಜ್ಞಾನಂ ಸ್ತೌತಿ– ಇತಿ ಕ್ಷೇತ್ರಮಿತಿ ॥ ಮಹಾ-ಭೂತಾನೀತ್ಯಾದಿನಾ ಕ್ಷೇತ್ರಮ್ । ಇಚ್ಛೇತ್ಯಾದಿನಾ ತದ್‌ವಿಕಾರಶ್ಚೇತ್ಯಪಿ ಗ್ರಾಹ್ಯಮ್ । ಜ್ಞಾನಶಬ್ದೋಽತ್ರ ಜ್ಞಪ್ತಿತತ್ಸಾಧನೋಭಯಪರಃ । 'ಅಮಾನಿತ್ವಂ' ಇತ್ಯಾದಿನಾ ಜ್ಞಾನಸಾಧನಸ್ಯ 'ತತ್ತ್ವಜ್ಞಾನಾರ್ಥದರ್ಶನಮ್' ಇತ್ಯತ್ರ ಭಗವದಪ-ರೋಕ್ಷಜ್ಞಪ್ತೇಶ್ಚೋಕ್ತತ್ವಾತ್ । 'ಜ್ಞೇಯಂ ಯತ್ತತ್' ಇತ್ಯಾದಿನಾ ಜ್ಞೇಯಂ ಚೋಕ್ತಮ್ । ಸಮಾಸತಃ ಸಂಕ್ಷೇಪೇಣ । ಮದ್ಭಾವಾಯ ಮಯಿ ಸ್ಥಿತಯೇ ಉಪಪದ್ಯತೇ ಯೋಗ್ಯೋ ಭವತಿ ।**

**ಅನುವಾದ-** ಇಲ್ಲಿಯ ತನಕ ಹೇಳಿದುದನ್ನು ಉಪಸಂಹರಿಸಿ ಅದರ ಜ್ಞಾನವನ್ನು ಪ್ರಶಂಸಿಸುತ್ತಿದ್ದಾನೆ– **'ಇತಿ ಕ್ಷೇತ್ರಂ'** ಎಂಬ ಶ್ಲೋಕದಲ್ಲಿ. 'ಮಹಾಭೂತಾನಿ ....(ಶ್ಲೋಕ-6) ಮೊದಲಾದ ಶ್ಲೋಕಗಳಿಂದ ಕ್ಷೇತ್ರವು **'ಇಚ್ಛಾದ್ವೇಷಃ'**(ಶ್ಲೋ.7) ಎಂಬುದಾಗಿ ಕ್ಷೇತ್ರದ ವಿಕಾರವೂ ಕೂಡ ಎಂಬುದಾಗಿಯೂ ಇಟ್ಟುಕೊಳ್ಳಬೇಕು. ಇಲ್ಲಿನ ಜ್ಞಾನಶಬ್ದವು ಜ್ಞಾನ ಮತ್ತು ಜ್ಞಾನ ಸಾಧನವೆಂಬ ಎರಡೂ ಅರ್ಥದಲ್ಲಿದೆ. 'ಅಮಾನಿತ್ವಂ..' ಮೊದಲಾದ ಶ್ಲೋಕಗಳಿಂದ ಜ್ಞಾನಸಾಧನ ಹಾಗೂ **'ತತ್ವಜ್ಞಾನಾರ್ಥದರ್ಶನಂ'** ಎಂಬ ಪದದಿಂದ ಭಗವದಪರೋಕ್ಷ-ಜ್ಞಾನವೂ ಹೇಳಲ್ಪಟ್ಟಿರುವುದರಿಂದ. **'ಜ್ಞೇಯಂ ಯತ್ತತ್'** (ಶ್ಲೋಕ-13) ಮೊದಲಾದ ಶ್ಲೋಕಗಳಿಂದ ಜ್ಞಾನವಿಷಯ ಬ್ರಹ್ಮವೂ, **ಸಮಾಸೇನ**= ಸಂಕ್ಷೇಪವಾಗಿ ಹೇಳಲ್ಪಟ್ಟಿತು. **ಮದ್ಭಾವಾಯ**= ನನ್ನಲ್ಲಿ ಸ್ಥಿತಿಗಾಗಿ (ಅಂದರೆ ಮೋಕ್ಷಕ್ಕಾಗಿ) **ಉಪಪದ್ಯತೇ**= ಯೋಗ್ಯ ನಾಗುತ್ತಾನೆ. (ಹಿಂದೆ ಹೇಳಿದುದನ್ನು ತಿಳಿದವನು)

## ಪೌರ್ವಾಪರ್ಯ ಸರಿಯಾಗಿದೆ

**ಯದ್ಯಪ್ಯತ್ರ ಜ್ಞೇಯೇ ಬ್ರಹ್ಮಣಿ ಪ್ರತಿಪಾದಿತೇ ಕೇನ ಸಾಧನೇನೇದಂ ಬುದ್ಧ್ಯಾರೂಢಂ ಭವೇದಿತ್ಯಾಕಾಂಕ್ಷಾಯಾಂ 'ಜ್ಞೇಯಮಿತ್ಯಾದಿಕಂ' ಪೂರ್ವ-ಮುಕ್ತ್ವಾ 'ಅಮಾನಿತ್ವಂ' ಇತ್ಯಾದಿಕಂ ತದ್‌ಜ್ಞಾನಸಾಧನಂ ಪಶ್ಚಾದ್‌ವಾಚ್ಯಮ್ । ತಥಾಽಪಿ ಸಾಧನಸ್ಯೇಚ್ಛಾದಿರೂಪಕ್ಷೇತ್ರವಿಕಾರೇಷ್ವಂತರ್ಭಾವಜ್ಞಾಪನಾರ್ಥ-ತ್ವಾತ್ ಯತ್ಪ್ರಭಾವಪದೋಕ್ತ ಪ್ರೇರಕತ್ವಸ್ಯಾಲೌಕಿಕಪ್ರಮೇಯಸ್ಯ ಬುದ್ಧ್ಯಾರೋಹೇ ಸಾಧನಾನಾಮಪ್ಯುಪಯೋಗಾಚ್ಚ ಸಾಧನಾನಂತರಮೇವ ಯತ್ಪ್ರಭಾವಶ್ಚೇತ್ಯಸ್ಯ ವಾಚ್ಯತ್ವಾತ್ ತತ್ಪ್ರಸಂಗೇನ ಜ್ಞೇಯಸ್ಯಾಪಿ ಪಶ್ಚಾದೇವೋಕ್ತಿಃ ।**

**ಅನುವಾದ-** ವಸ್ತುತಃ ಇಲ್ಲಿ ಜ್ಞೇಯನಾದ ಬ್ರಹ್ಮನನ್ನು ಪ್ರತಿಪಾದಿಸಿದಾಗ 'ಯಾವ

ಸಾಧನದಿಂದ ಅದನ್ನು ಬುದ್ಧ್ಯಾರೂಢವಾಗಿಸಿಕೊಳ್ಳಬಹುದು ? ಎಂಬ ಆಕಾಂಕ್ಷೆಯು ಉಂಟಾದಾಗ (ಉಂಟಾಗುವುದರಿಂದ) **'ಜ್ಞೇಯಂ ಯತ್ತತ್'** ಎಂಬಿತ್ಯಾದಿ ಶ್ಲೋಕಗಳನ್ನು (ಬ್ರಹ್ಮಸ್ವರೂಪವನ್ನು) ಮೊದಲು ಹೇಳಿ ಆಮೇಲೆ **'ಅಮಾನಿತ್ವಮದಂಭಿತ್ವಂ'** ಮೊದಲಾದ ಬ್ರಹ್ಮಜ್ಞಾನಸಾಧನಗಳನ್ನು ಹೇಳುವುದು ಉಚಿತವಿತ್ತು. ಹಾಗಿದ್ದರೂ ಜ್ಞಾನ ಸಾಧನಗಳು ಇಚ್ಛಾದ್ವೇಷ ಮೊದಲಾದ ಕ್ಷೇತ್ರವಿಕಾರಗಳಲ್ಲಿ ಸೇರುವುವವೆಂಬುದನ್ನು ಜ್ಞಾಪಿಸುವುದಕ್ಕಾಗಿ (ಜ್ಞಾನಸಾಧನಗಳನ್ನು ಕ್ಷೇತ್ರವಿಕಾರದ ಜೊತೆಗೆ ಹೇಳಲಾಗಿದೆ) ಅಲ್ಲದೇ ಯತ್ಪ್ರಭಾವ ಪದದಿಂದ ಹೇಳಲ್ಪಟ್ಟ ಪ್ರೇರಕತ್ವವೆಂಬ ಅಲೌಕಿಕ ಪ್ರಮೇಯವು ಬುದ್ಧ್ಯಾರೂಢವಾಗುವಲ್ಲಿ ಜ್ಞಾನಸಾಧನಗಳು ಬಹಳ ಪ್ರಯೋಜಕಗಳಾಗುವುದರಿಂದಲೂ ಸಾಧನವನ್ನು ಹೇಳಿದ ಮೇಲೆ ಯೇ **'ಯತ್ ಪ್ರಭಾವಶ್ಚ?** ಎಂಬುದನ್ನು ಹೇಳಬೇಕಾಗಿರುವುದರಿಂದಲೂ ಆ ಜ್ಞೇಯಪ್ರಭಾವ ನಿರೂಪಣೆಯ ಪ್ರಸಂಗದಲ್ಲಿ ಜ್ಞೇಯವನ್ನೂ (ಜ್ಞಾನಸಾಧನವನ್ನು ಹೇಳಿದ) ನಂತರವೇ ಹೇಳಲಾಗಿದೆ.

**ವಿವರಣೆ–** ಇಲ್ಲಿ ಹೇಳಿದುದರಲ್ಲಿ ಪೂರ್ವಾಪರೀಕಾರವಿದೆಯೇ ? ಎಂಬ ಚಿಂತನೆಯಿದೆ. ಮೊದಲು ಬ್ರಹ್ಮಸ್ವರೂಪವನ್ನು ಹೇಳಬೇಕು. ಆಗ ಹೇಳಿದ ಬ್ರಹ್ಮಸ್ವರೂಪವನ್ನು ಬುದ್ಧ್ಯಾರೂಢಗೊಳಿಸಿಕೂಳ್ಳುವ ಬಗ್ಗೆ ಸಾಧನಗಳ ಜಿಜ್ಞಾಸೆ ಹುಟ್ಟಿದಾಗ ಅಮಾನಿತ್ವ ಮೊದಲಾದ ಇಪ್ಪತ್ತು ಜ್ಞಾನಸಾಧನಗಳನ್ನು ಹೇಳಬೇಕು. ಆದರೆ ಇಲ್ಲಿ ಬ್ರಹ್ಮಸ್ವರೂಪ ಪ್ರಭಾವಗಳನ್ನು ಹೇಳುವುದರ ಮೊದಲು ಜ್ಞಾನಸಾಧನ ಹೇಳಿದುದು ಹೇಗೆ ಸರಿ ? ಮೊದಲೇ ಜ್ಞಾನಸಾಧನವನ್ನು ಹೇಳಲು ಕಾರಣವಿದೆ. ಜ್ಞಾನಸಾಧನವು ಅರ್ಜುನ ಕೇಳಿರುವ ಕ್ಷೇತ್ರವಿಕಾರಗಳಲ್ಲಿ ಸೇರಿದೆ. ಅಮಾನಿತ್ವ ಮೊದಲಾದವೂ ಇಚ್ಛಾದ್ವೇಷಾದಿಗಳಂತೆ ಕ್ಷೇತ್ರವಿಕಾರಗಳೆಂದು ತಿಳಿಸಬೇಕಾದರೆ ಆ ಕ್ಷೇತ್ರವಿಕಾರಗಳ ಜೊತೆಗೇ ಹೇಳಬೇಕು. ಕ್ಷೇತ್ರವಿಕಾರಗಳನ್ನು ಹೇಳಿದ ಮೇಲೆ ಮಧ್ಯದಲ್ಲಿ ಐದಾರು ಶ್ಲೋಕಗಳಿಂದ ಬ್ರಹ್ಮ ಸ್ವರೂಪ ಪ್ರಭಾವಗಳನ್ನು ಹೇಳಿ ನಂತರ ಅಮಾನಿತ್ವಾದಿ ಸಾಧನಗಳನ್ನು ಹೇಳಿದ್ದರೆ ಅವುಗಳು ಕ್ಷೇತ್ರವಿಕಾರಗಳೆಂಬುದನ್ನು ತಿಳಿಯಲಾಗುತ್ತಿರಲಿಲ್ಲ. ಅದಕ್ಕಾಗಿ ಬ್ರಹ್ಮಸ್ವರೂಪ ತಿಳಿಸುವ ಮೊದಲೇ ಜ್ಞಾನಸಾಧನಗಳನ್ನು ಹೇಳಲಾಗಿದೆ.

**ನನ್ವಥಾಽಪಿ ಉದ್ದೇಶಕ್ರಮಾನುಸಾರೇಣ 'ಯತಶ್ಚ ಯತ್' ಇತ್ಯೇತತ್ಪ್ರಥಮಮುಕ್ತ್ವಾ 'ಸಚ ಯೋ ಯತ್ಪ್ರಭಾವಶ್ಚೇ' ತ್ಯೇತತ್ಪಶ್ಚಾದ್ವಕ್ತವ್ಯಮಿತ್ಯೇತದಪ್ಯನೇನೈವ ನಿರಸ್ತಮ್ । ವಿಕಾರಾಂತರ್ಭಾವಜ್ಞಾಪನಾಯ ಇಚ್ಛಾದ್ಯುಕ್ತ್ಯನಂತರಂ ಅಮಾನಿತ್ವಾದೇಃ 'ಸಚ ಯೋ ಯತ್ಪ್ರಭಾವಶ್ಚೇ'ತ್ಯುಕ್ತಸ್ಯ ವಾಚ್ಯತ್ವಾತ್ ಬಹುತ್ವಾಚ್ಚ 'ಸ ಚ ಯೋ ಯತ್ಪ್ರಭಾವಶ್ಚೇ' ತ್ಯೇತದುಕ್ತ್ಯಪೇಕ್ಷಯಾ 'ಯತಶ್ಚ ಯದಿತ್ಯೇ' ತದುಕ್ತೇರಲ್ಪತ್ವಾತ್ ತತ್ಸರ್ವೋಕ್ತ್ಯನನ್ತರಂ ಪಶ್ಚಾತ್ 'ಯತಶ್ಚ ಯದಿ' ತ್ಯಸ್ಯೋಕ್ತಿಃ ॥ 19 ॥**

**ಅನುವಾದ–** 'ನೋಡಿ, ಹಾಗಿದ್ದರೂ ಉದ್ದೇಶಕ್ರಮವನ್ನು ಅನುಸರಿಸಿ ಯತಶ್ಚ ಯತ್ (ಯಾರಿಂದ ಪ್ರವೃತ್ತಿ ?) ಎಂಬುವನ್ನು ಮೊದಲು ಹೇಳಿ **ಸಚ ಯೋ ಯತ್‌ಪ್ರಭಾವಶ್ಚ?** (ಅವನ ಸ್ವರೂಪವೇನು ? ಸಾಮರ್ಥ್ಯವೇನು ?) ಎಂಬುದನ್ನು ನಂತರ ಹೇಳಬೇಕಿತ್ತು ! ಎಂಬ ಶಂಕೆಯೂ ಹಿಂದೆ ಕೊಟ್ಟ ಉತ್ತರದಿಂದಲೇ ಸಮಾಧಾನಿಸಲ್ಪಟ್ಟಿದೆ. ಹೇಗೆಂದರೆ (ಅಮಾನಿತ್ವಾದಿಗಳಿಗೆ) ಕ್ಷೇತ್ರವಿಕಾರಾಂತರ್ಭಾವವನ್ನು ತಿಳಿಸಲು ಇಚ್ಛಾದಿಕ್ಷೇತ್ರವಿಕಾರಗಳನ್ನು ಹೇಳಿದ ನಂತರದಲ್ಲೇ ಅಮಾನಿತ್ವ ಮೊದಲಾದ ಜ್ಞಾನಸಾಧನವನ್ನು ಉಪೋದ್ಘಾತ ಪ್ರಕ್ರಿಯೆಯಿಂದ ಮೊದಲೇ ಹೇಳಬೇಕಿರುವುದರಿಂದ ಅದನ್ನು ಹೇಳಿದ ಮೇಲೆಯೇ ಹಿಂದೆ ಹೇಳಿದಂತೆ '**ಸ ಚ ಯೋ ಯತ್‌ಪ್ರಭಾವಶ್ಚ**' ಅವನ ಸ್ವರೂಪ ಪ್ರಭಾವಗಳೇನು? ಎಂಬುದನ್ನು ಹೇಳಬೇಕಾಗಿದೆ. ಅಲ್ಲದೇ ಪ್ರಭಾವವೂ ಬಹುವಾಗಿದೆ. ಸ್ವರೂಪ ಪ್ರಭಾವಗಳ ಪ್ರಶ್ನೆಗೆ ನೀಡಬೇಕಾದ ಉತ್ತರಕ್ಕಿಂತ ಪ್ರವರ್ತಕನಾರು ? ಎಂಬ ಪ್ರಶ್ನೆಗೆ ಉತ್ತರವು ಅಲ್ಪವಾಗಿದೆಯಾದ್ದರಿಂದಲೂ ಎಲ್ಲಾ ಪ್ರಭಾವವನ್ನೂ ಹೇಳಿದ ನಂತರ '**ಯತಶ್ಚ ಯತ್**' ಪ್ರವರ್ತಕನಾರು ? ಎಂಬ ಪ್ರಶ್ನೆಗೆ ಉತ್ತರಿಸಲಾಗಿದೆ. ॥ 19 ॥

**ವಿವರಣೆ–** ಗೀತಾಭಾಷ್ಯದಲ್ಲಿ– **ವಿಕಾರಾಂತರ್ಭಾವಾತ್ ಜ್ಞಾನಸಾಧನಂ ಪ್ರಥಮತ ಉಕ್ತಮ್ ಬಹುತ್ವಾತ್, ಸಾಧನಾತ್ಯುಪಯೋಗಾತ್ ಪ್ರಭಾವಃ (ಪ್ರಥಮತ ಉಕ್ತಃ)**, ಎಂದು ಹೇಳಲಾಗಿದೆ. ಈ ಭಾಷ್ಯದ ವಿಸ್ತೃತ ವ್ಯಾಖ್ಯಾನ ಇಲ್ಲಿಯ ವಿವೃತಿಯಾಗಿದೆ. '**ತತ್ ಕ್ಷೇತ್ರಂ ಯಚ್ಚ ಯಾದೃಕ್ ಚ** '– ಎಂಬ ನಾಲ್ಕನೆ ಶ್ಲೋಕದಲ್ಲಿ ಮುಂದೆ ಹೇಳಲಿರುವ ವಿಷಯಗಳನ್ನು ಕೃಷ್ಣ ನಿರ್ದೇಶಿಸಿದ್ದಾನೆ. ಯಾವ ಅನುಕ್ರಮದಲ್ಲಿ ನಿರ್ದೇಶಿಸಿರುವನೋ ಅದೇ ಕ್ರಮದಲ್ಲಿ ಮುಂದೆ ಉತ್ತರಿಸಲಿಲ್ಲ. ಕ್ರಮ ವ್ಯತ್ಯಾಸ ಮಾಡಿದ್ದಾನೆ. **ಯತಶ್ಚ ಯತ್** ಎಂಬುದಕ್ಕಿಂತ ಮೊದಲು **ಯತ್‌ಪ್ರಭಾವಃ** ಎಂಬುದಕ್ಕೆ ಉತ್ತರಿಸಲಾಗಿದೆ. ಅದಕ್ಕೆ ಕಾರಣ ಎರಡು . ಮೊದಲನೆಯದಾಗಿ **ಯತ್ ಪ್ರಭಾವಃ** ಎಂಬ ಪ್ರಶ್ನೆಗೆ ಉತ್ತರ ದೀರ್ಘವಾಗಿರುವುದು. ಎರಡನೆಯದಾಗಿ ಅಲೌಕಿಕವಾದ ಪ್ರಭಾವವನ್ನು ತಿಳಿಯಬೇಕಾದರೆ ಜ್ಞಾನಸಾಧನಗಳ ಉಪಯೋಗ ಬಹಳವಾಗಿರುವುದು.

**ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ 20 ॥**

**ಅರ್ಥ–** ಪ್ರಕೃತಿ ಹಾಗೂ ಪುರುಷ ಇವೆರಡನ್ನೂ ಅನಾದಿಯೆಂದು ತಿಳಿ. ಇಚ್ಛಾದ್ವೇಷಾದಿ-ವಿಕಾರಗಳನ್ನು ಸತ್ವಾದಿಗುಣಗಳನ್ನೂ ಪ್ರಕೃತಿಯಿಂದ ಜನ್ಯವಾದವುಗಳೆಂದು ತಿಳಿ.

ಏವಮುಕ್ತದಿಶಾ ಯತಶ್ಚ ಯದಿತಿ ಪ್ರತಿಜ್ಞಾತಪ್ರೇರಕಸ್ವರೂಪಸ್ಯ ಪ್ರಭಾವೋಕ್ತ್ಯನಂತರಂ ವಾಚ್ಯತ್ವಸಿದ್ಧೌ ಪ್ರೇರಕಜ್ಞಾನಸ್ಯ ಪ್ರೇರ್ಯಜ್ಞಾನಸಾಪೇಕ್ಷತ್ವಾತ್ಪ್ರೇರಣೀಯಂ ಸಪ್ರಕಾರಂ ಪುರುಷಾದಿರೂಪಂ ಕ್ಷೇತ್ರಂ ತಾವದಾಹ – **ಪ್ರಕೃತಿಂ ಇತಿ ॥** ನ ಚೈತತ್ 'ಏತತ್ ಕ್ಷೇತ್ರಮಿತಿ' ಶ್ಲೋಕೇ ನ ಪ್ರತಿಜ್ಞಾತಮಿತಿ ಶಂಕ್ಯಮ್ । 'ಯಾದೃಕ್ ಚೇ' ತ್ಯನೇನ ಪ್ರತಿಜ್ಞಾತತ್ವಾತ್ । ತರ್ಹಿ ಮಹಾಭೂತಾನೀತ್ಯಾದ್ಯುಕ್ತ್ಯವಸರೇ ಪ್ರಾಗೇವ ವಾಚ್ಯಮಿತಿ ನ ಶಂಕ್ಯಮ್ । ವಕ್ಷ್ಯಮಾಣಪ್ರೇರಕಸ್ವರೂಪೋಕ್ತ್ಯುಪಯೋಗಿತಯಾಽಪೇಕ್ಷಿತಪ್ರೇರ್ಯಸ್ವರೂಪಸ್ಯಾತ್ರಾವಶ್ಯಂ ವಾಚ್ಯತ್ವಾತ್ಪ್ರಾಗಪ್ಯುಕ್ತೌ ಗೌರವಾಪತ್ತೇರಿತಿ ಭಾವಃ । ಏವಂ ಚ ಪ್ರಕೃತಿಪದೇನ 'ಮಹಾಭೂತಾನಿ' ಇತ್ಯಾದಿನಾ ಪ್ರಾಗುಕ್ತಪಂಚವಿಂಶತಿತತ್ತ್ವಾನಿ ಗೃಹ್ಯಂತೇ, ವಿಕಾರಶಬ್ದೇನ ಚ ಪ್ರಾಗುಕ್ತೇಚ್ಛಾದಯಃ ಸರ್ವೇ ಪ್ರಕೃತಿವಿಕಾರಾಃ । ಗುಣತ್ರಯಸ್ಯಾಲ್ಪವಿವಕ್ಷಯಾ ಪೃಥಗುಪಾದಾನಮ್ । ಪುರುಷೋಽತ್ರ ಜೀವಃ । ಪ್ರಕೃತಿಂ ಪಂಚವಿಂಶತಿತತ್ತ್ವಾನಿ ಪುರುಷಂ ಜೀವಂ ಚ ಉಭಾವಪ್ಯನಾದೀ ವಿದ್ಧಿ । ತಥಾ ಪ್ರಕೃತಿಸಂಭವಾನ್ ಪ್ರಧಾನೋಪಾದಾನಕಾನಿಚ್ಛಾದಿ ವಿಕಾರಾನ್ ಸತ್ತ್ವಾದಿಗುಣಾಂಶ್ಚ ವಿದ್ಧೀತ್ಯರ್ಥಃ । ತಥಾ ಚೇಶ್ವರಾತಿರಿಕ್ತಃ ಸರ್ವೋಽಪಿ ಚೇತನಾಚೇತನವರ್ಗಃ ಪ್ರೇರ್ಯಪ್ರಪಂಚೋಽತ್ರೋಕ್ತೋ ಭವತಿ ।

**ಅನುವಾದ–** ಈ ರೀತಿ ಹಿಂದೆ ಹೇಳಿರುವಂತೆ 'ಪ್ರೇರಕನಾರು ?' ಎಂಬ ಪ್ರತಿಜ್ಞಾತವಾದ ಪ್ರೇರಕ ಸ್ವರೂಪದ ಪ್ರಭಾವವನ್ನು ಹೇಳಿದ ಮೇಲೆ ಪ್ರೇರಕ ಯಾವುದೆಂಬುದನ್ನು ಹೇಳುವುದಕ್ಕೆ ಅವಕಾಶ ಪ್ರಾಪ್ತಿಯಾಗಿದೆ. ಆದರೆ ಪ್ರೇರಕದ ಅರಿವಾಗಬೇಕಾದರೆ ಪ್ರೇರ್ಯವಾದುದರ ಅರಿವಿನ ಅಪೇಕ್ಷೆಯಿದೆ. ಅದಕ್ಕಾಗಿ ಪ್ರೇರ್ಯವಾದ (ಪ್ರೇರೇಪಿಸಲ್ಪಡುವ) ಪುರುಷಾದಿ ಕ್ಷೇತ್ರವನ್ನು ಪ್ರಭೇದಗಳ ಜೊತೆಗೆ ಹೇಳತೊಡಗಿದ್ದಾನೆ 'ಪ್ರಕೃತಿಂ' ಎಂಬ ಶ್ಲೋಕದಿಂದ. ಈ ವಿಷಯವನ್ನು **ತತ್ ಕ್ಷೇತ್ರಂ ಯಚ್ಚ** (ಶ್ಲೋ.4) ಎಂಬ ಶ್ಲೋಕದಲ್ಲಿ ಪ್ರತಿಜ್ಞೆ ಮಾಡಿಲ್ಲವಲ್ಲಾ ? ಎಂದು ಶಂಕಿಸಬಾರದು. **ಯಾದೃಕ್ ಚ** ? ಕ್ಷೇತ್ರದ ವಿಕಾರಗಳಾವುವು ? ಎಂಬುದಾಗಿ ಪ್ರತಿಜ್ಞಾತವಾಗಿದೆ. ಹಾಗಿದ್ದರೆ **ಮಹಾಭೂತಾನ್ಯಹಂಕಾರಃ** (ಶ್ಲೋ.6,7) ಎಂಬುದಾಗಿ ಕ್ಷೇತ್ರವಿಕಾರಗಳನ್ನು ಹೇಳುವ ಸಂದರ್ಭದಲ್ಲೇ ಹಿಂದೆಯೇ ಹೇಳಬೇಕಿತ್ತು ಎಂದೂ ಶಂಕಿಸಬಾರದು. ಈಗ ಮುಂದೆ ಹೇಳಲಿರುವ ಪ್ರೇರಕನ ಸ್ವರೂಪವನ್ನು ಹೇಳುವುದಕ್ಕಾಗಿ ಅಪೇಕ್ಷಿತವಾದ ಪ್ರೇರ್ಯದ ಸ್ವರೂಪವನ್ನು ಇಲ್ಲಂತೂ ಅವಶ್ಯವಾಗಿ ಹೇಳಬೇಕಿರುವುದರಿಂದ ಹಿಂದೆಯೂ (**ಮಹಾಭೂತಾನಿ** ಎಂಬಲ್ಲಿಯೂ) ಹೇಳಿದ್ದಿದ್ದರೆ ಗ್ರಂಥಗೌರವವುಂಟಾಗುತ್ತಿತ್ತು (ಗ್ರಂಥವನ್ನು ಸುಮ್ಮನೆ

ಬೆಳೆಸಿದಂತಾಗುತ್ತಿತ್ತು) ಎಂದು ಅಭಿಪ್ರಾಯ. ಆದ್ದರಿಂದ ಪ್ರಕೃತಿ ಎಂಬ ಪದದಿಂದ 'ಮಹಾಭೂತಾನಿ ಇತ್ಯಾದಿಯಾಗಿ ಆರನೇ ಶ್ಲೋಕದಲ್ಲಿ ಹೇಳಿದ ಇಪ್ಪತ್ತೈದು ತತ್ತ್ವಗಳನ್ನು ಇಟ್ಟುಕೊಳ್ಳಬೇಕು. 'ವಿಕಾರಾನ್' ಎಂಬ ವಿಕಾರಶಬ್ದದಿಂದ ಹಿಂದೆ ಇಚ್ಛಾದ್ವೇಷ- ಎಂಬ ಏಳನೇ ಶ್ಲೋಕದಲ್ಲಿ ಹೇಳಿದ ಎಲ್ಲಾ ಪ್ರಕೃತಿವಿಕಾರಗಳನ್ನೂ ಇಟ್ಟುಕೊಳ್ಳಬೇಕು. (ಗುಣತ್ರಯವು ಪ್ರಕೃತಿವಿಕಾರವೇ ಆದರೂ) ಗುಣತ್ರಯಕ್ಕೆ ಅಲ್ಪ ಮಾತ್ರ ಉಪಚಯ (ವಿಕಾರ)ವಿರುವುದರಿಂದ ಅದನ್ನು ಪ್ರತ್ಯೇಕವಾಗಿ ಗ್ರಹಿಸಲಾಗಿದೆ. ಪುರುಷನೆಂದರೆ ಇಲ್ಲಿ ಜೀವ. **ಪ್ರಕೃತಿಂ** = ಇಪ್ಪತ್ತೈದು ತತ್ತ್ವಗಳನ್ನು **ಪುರುಷಂ ಚ** = ಜೀವನನ್ನೂ ಇಬ್ಬರನ್ನೂ ಅನಾದಿಯೆಂದು ತಿಳಿ. ಹಾಗೆಯೇ **ಪ್ರಕೃತಿಸಂಭವಾನ್** = ಪ್ರಕೃತಿಯೇ ಉಪಾದಾನ ಕಾರಣವಾಗಿ ಉಳ್ಳದ್ದನ್ನಾಗಿ ಇಚ್ಛೆ ಮೊದಲಾದ ವಿಕಾರಗಳನ್ನೂ ಸತ್ತ್ವಾದಿಗುಣಗಳನ್ನೂ ತಿಳಿ ಎಂದರ್ಥ. ಹಾಗಾಗಿ ಈಶ್ವರನೊಬ್ಬನನ್ನು ಹೊರತುಪಡಿಸಿ ಪ್ರೇರ್ಯಪ್ರಪಂಚವೆನಿಸಿದ ಎಲ್ಲಾ ಚೇತನಾಚೇತನ ಸಮುದಾಯವು ಇಲ್ಲಿ ಹೇಳಲ್ಪಟ್ಟದ್ದಾಗಿದೆ.

**ಯದ್ವಾ ಪ್ರಕೃತಿಂ ಚಿದಚಿತ್ಪ್ರಕೃತೀ ಪುರುಷಂ ಜೀವಂ ಪರಮಾತ್ಮಾನಂ ಚ ಉಭೌ । ಉಭೇ ಚೇತ್ಯಪಿ ಸಂಗೃಹ್ಯತೇ । ಅನಾದೀ ವಿದ್ಧೀತ್ಯರ್ಥಃ । ವಿಕಾರಾನಿಚ್ಛಾದೀನ್ ಸತ್ತ್ವಾದಿಗುಣಾಂಶ್ಚ ಪ್ರಕೃತಿಸಮ್ಭವಾನ್ ಪ್ರಕೃತ್ಯುಪಾದಾನಕಾನ್ ವಿದ್ಧಿ । ಗುಣಾನಾಂ ವಿಕಾರತ್ವೇऽಪೀಚ್ಛಾದ್ಯಪೇಕ್ಷಯಾऽಲ್ಪವಿಕಾರತ್ವಾದಿಚ್ಛಾದೀನಾಮಧಿಕವಿಕಾರತ್ವವಿವಕ್ಷಯಾ ಪೃಥಗುಕ್ತಾಃ ಜ್ಞೇಯಾಃ । ತಾತ್ಪರ್ಯೇ ತು ಪ್ರಕೃತಿಪದೇನ ಚಿದಚಿತ್ಪ್ರಕೃತ್ಯೋಃ ಪುರುಷಪದೇನ ಜೀವೇಶ್ವರಯೋರ್ಗ್ರಹಣಾಯ ಉಭೌ ಇತ್ಯುಕ್ತಿರಿತ್ಯುಕ್ತಮ್ ॥ 20 ॥**

**ಅನುವಾದ**– ಅಥವಾ **ಪ್ರಕೃತಿಂ**= ಚಿತ್ ಪ್ರಕೃತಿ ಹಾಗೂ **ಅಚಿತ್** ಪ್ರಕೃತಿಯನ್ನು **ಪುರುಷಂ**= ಜೀವನನ್ನು ಮತ್ತು ಪರಮಾತ್ಮನನ್ನು **ಉಭೌ**= ಇಬ್ಬರನ್ನೂ, **ಉಭೇ ಚ** (ಎರಡು ಪ್ರಕೃತಿಗಳನ್ನು) ಎಂದೂ ಇಟ್ಟುಕೊಳ್ಳಬೇಕು. ಅನಾದಿಯೆಂದು ತಿಳಿ ಎಂದರ್ಥ. **ವಿಕಾರಾನ್** = ಇಚ್ಛೆ ಮೊದಲಾದವುಗಳನ್ನು ಸತ್ತ್ವಾದಿಗುಣಗಳನ್ನು ಕೂಡ, **ಪ್ರಕೃತಿಸಂಭವಾನ್**= ಪ್ರಕೃತಿಯ ಪರಿಣಾಮಗಳೆಂದು ತಿಳಿ. ಸತ್ತ್ವಾದಿಗುಣಗಳು ಪ್ರಕೃತಿಯ ವಿಕಾರಗಳೇ ಆಗಿದ್ದರೂ ಇಚ್ಛಾದಿಗಳೊಂದಿಗೆ ಹೋಲಿಸಿ ನೋಡಿದಾಗ ಅತ್ಯಲ್ಪವಿಕಾರಗಳಾದ್ದರಿಂದ ಇಚ್ಛಾದಿಗಳ ಅಧಿಕವಿಕಾರತ್ವವನ್ನು ಅನುಲಕ್ಷಿಸಿ (ಗುಣಗಳಿಗಿಂತ) ಬೇರೆಯಾಗಿ (ಇಚ್ಛಾದಿ ವಿಕಾರಗಳು) ಹೇಳಲ್ಪಟ್ಟಿವೆಯೆಂದು ತಿಳಿಯಬೇಕು. ಗೀತಾತಾತ್ಪರ್ಯದಲ್ಲಿಯಾದರೋ ಪ್ರಕೃತಿಪದದಿಂದ **ಚಿತ್** ಪ್ರಕೃತಿ ಹಾಗೂ **ಅಚಿತ್** ಪ್ರಕೃತಿಗಳನ್ನೂ ಪುರುಷಪದದಿಂದ ಜೀವೇಶ್ವರರಿಬ್ಬರನ್ನೂ ತೆಗೆದುಕೊಳ್ಳಲಿಕ್ಕಾಗಿ ಶ್ಲೋಕದಲ್ಲಿ '**ಉಭೌ**'ಎನ್ನಲಾಗಿದೆ ಎಂದು ನಿರೂಪಿತವಾಗಿದೆ. ॥ 20 ॥

**ವಿವರಣೆ– ಯತಶ್ಚ ಯತ್**= ಪ್ರೇರಕನಾರು ? ಎಂಬೊಂದು ಪ್ರಶ್ನೆಗೆ ಇನ್ನೂ ಉತ್ತರಿಸಿಲ್ಲ. ಮುಂದೆ ಇಪ್ಪತ್ತಮೂರನೆಯ ಶ್ಲೋಕದಲ್ಲಿ ಉತ್ತರಿಸಲಿದ್ದಾನೆ. ಅದಕ್ಕೆ ಮೊದಲು ಮುಂದೆ ನಿರೂಪಿಸಲಿರುವ ಪ್ರೇರಕನಿಂದ ಪ್ರೇರ್ಯವಾದವುಗಳನ್ನು ಈ ಶ್ಲೋಕದಲ್ಲಿ ಸಂಗ್ರಹಿಲಾಗಿದೆ. ಇಲ್ಲಿರುವ ಪ್ರಕೃತಿ, ಪುರುಷ, ವಿಕಾರ, ಗುಣ ಎಂಬ ನಾಲ್ಕು ಶಬ್ದಗಳಿಂದ ಪ್ರೇರ್ಯವಾದ ಸಮಗ್ರ ಪ್ರಪಂಚವನ್ನು ಹೇಳಲಾಗಿದೆ.

ಸತ್ವರಜಸ್ತಮೋಗುಣಗಳು ವಸ್ತುತಃ ಪ್ರಕೃತಿಯ ವಿಕಾರಗಳೇ ಆಗಿವೆ . ಆದ್ದರಿಂದ ಗೀತೆಯ ವಿಕಾರವೆಂಬ ಪದದಿಂದಲೇ ಅವುಗಳೂ ಸಂಗ್ರಹಿಸಲ್ಪಡುತ್ತಿರಲು 'ಗುಣಾನ್' ಎಂದು ಗುಣ ಗಳನ್ನು ಪ್ರತ್ಯೇಕವಾಗಿ ಹೇಳಲು ಕಾರಣವೆಂದರೆ ಗುಣಗಳಿಗೂ ಇಚ್ಛಾದಿಗಳಿಗೂ ವ್ಯತ್ಯಾಸವನ್ನು ತಿಳಿಸುವುದು. ತ್ರಿಗುಣವೂ ಪ್ರಕೃತಿವಿಕಾರವೇ. ಆದರೆ ಇಚ್ಛಾದಿಗಳಂತೆ ಅಲ್ಲ. ವಸ್ತುತಃ ಸೃಷ್ಟಿಕಾಲ ದಲ್ಲಿ ಯಾವುದೂ ಹೊಸದಾಗಿ ಇರಗೊಳ್ಳುವುದಲ್ಲ. ಪ್ರಲಯದಲ್ಲಿದ್ದುದೇ ಉಪಚಯಗೊಳ್ಳು ವುದು. ಅದರಲ್ಲಿ ತ್ರಿಗುಣಗಳಿಗೆ ಸೃಷ್ಟಿಕಾಲದಲ್ಲಿ ಸೃಷ್ಟಿಯೆಂದರೆ ಅತ್ಯಲ್ಪವಾದ ಉಪಚಯ. ಅದೊಂದು ವಿಕಾರವೆಂದೇ ಹೇಳಲಾಗದಷ್ಟು ಚಿಕ್ಕ ವಿಕಾರ. ಆದ್ದರಿಂದಲೇ ಮಧುಚ್ಛಂದಸ ಶಾಖೆಯಲ್ಲಿ ತ್ರಿಗುಣವನ್ನು ಕಾರ್ಯವೆಂದೂ ಅಕಾರ್ಯವೆಂದೂ ಕರೆಯಲಾಗಿದೆ. '**ಕಾರ್ಯಾ- ಕಾರ್ಯಾಃ ಗುಣಾಸ್ತಿಸ್ರಃ, ಯತಃ ಸ್ವಲ್ಪೋದ್ಭವೋ ಜನೌ**' ಎಂಬುದಾಗಿ. ಇಚ್ಛಾದಿ ಗುಣಗಳಿಗೆ ಅಧಿಕವಿಕಾರವಿರುವುದರಿಂದಲೇ ಅವು ವಿಕಾರವೆಂಬ ಶಬ್ದದಿಂದಲೂ ವಿಕಾರವೆಂದೇ ಹೇಳಲಾಗದಷ್ಟು ಅಲ್ಪೋಪಚಯವುಳ್ಳ ತ್ರಿಗುಣಗಳು ಗುಣಶಬ್ದದಿಂದಲೂ ಇಲ್ಲಿ ಹೇಳಲ್ಪಟ್ಟಿದೆ.

**ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಸ್ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥ 21 ॥**

**ಅರ್ಥ–** ಶರೀರೇಂದ್ರಿಯಗಳ ಸಂಪಾದನೆಯಲ್ಲಿ ಜೀವನಿಗೆ ಪ್ರಕೃತಿ(ದುರ್ಗೆ)ಯು ಹೇತು ವೆಂದು ಹೇಳಲ್ಪಟ್ಟಿದೆ. ಸುಖದುಃಖಗಳನ್ನು ಜೀವನು ಅನುಭವಿಸುವಲ್ಲಿ ಪುರುಷನು (ದೇವನು) ಹೇತುವೆಂದು ಹೇಳಲ್ಪಡುತ್ತದೆ. ಅಥವಾ ದೇಹೇಂದ್ರಿಯಗಳ ಪರಿಣಾಮಕ್ರಿಯೆಗೆ ಅಚಿತ್ ಪ್ರಕೃತಿ (ಪ್ರಧಾನವು) ಹೇತು. ಸುಖದುಃಖಗಳ ಅನುಭವದಲ್ಲಿ ಚೇತನನೆನಿಸಿದ ಜೀವನು ಕರ್ತೃ.

**ಪ್ರಕೃತಿಸಮ್ಭವತ್ವಂ ವಿಕಾರಾಣಾಂ ವ್ಯನಕ್ತಿ- ಕಾರ್ಯೇತಿ ॥ ಕಾರ್ಯಂ ಶರೀರಮ್ । ಕಾರಣಾನೀಂದ್ರಿಯಾಣಿ । ಜೀವಸ್ಯ ಯದ್‌ದೇಹೇಂದ್ರಿಯಕರ್ತೃತ್ವಂ ತತ್ರ ಕಾರಣಂ ಚಿತ್ಪ್ರಕೃತಿರುಚ್ಯತೇ । ಸುಖದುಃಖಾನಾಂ ಭೋಕ್ತೃತ್ವೇ ಜೀವಸ್ಯ ಪ್ರಕೃತಿವಿಕಾರಸುಖದುಃಖಾನಾಂ ಸ್ವೀಯತಯಾ ಸಾಕ್ಷಾತ್ಕಾರರೂಪೇ ಭೋಗೇ ಪುರುಷೋ ಭಗವಾನ್ ಹೇತುರುಚ್ಯತೇ ।**

**ಅನುವಾದ-** (ವಿಕಾರಗಳು ಪ್ರಕೃತಿ ಸಂಭವಗಳೆಂದು ಹೇಳಿದೆ) ವಿಕಾರಗಳು ಪ್ರಕೃತಿಸಂಭವಗಳು ಹೇಗೆಂಬುದನ್ನು ವ್ಯಕ್ತಗೊಳಿಸುತ್ತಿದ್ದಾನೆ. 'ಕಾರ್ಯಕಾರಣ' ಎಂಬ ಈ ಶ್ಲೋಕದಲ್ಲಿ, **ಕಾರ್ಯ**= ಶರೀರ. **ಕಾರಣ** = ಇಂದ್ರಿಯಗಳು. ಜೀವನಿಗೆ ದೇಹೇಂದ್ರಿಯ ಕರ್ತೃತ್ವದಲ್ಲಿ **ಚಿತ್** ಪ್ರಕೃತಿಯು ಕಾರಣವೆಂದು ಹೇಳಲ್ಪಟ್ಟಿದೆ. **ಸುಖದುಃಖಾನಾಂ ಭೋಕ್ತೃತ್ವೇ**= ಜೀವನಿಗೆ ಪ್ರಕೃತಿವಿಕಾರಗಳೆನಿಸಿದ ಸುಖದುಃಖಗಳ ('ಇದು ನನ್ನ ದುಃಖ, ನನ್ನ ಸುಖ' ಎಂಬುದಾಗಿ) ಆತ್ಮಸಂಬಂಧಿಯಾಗಿ ಅನುಭವವೆಂಬ ಭೋಗಕ್ಕೆ , **ಪುರುಷಃ**= ಭಗವಂತನು ಹೇತುವೆಂದು ಹೇಳಲ್ಪಟ್ಟಿದ್ದಾನೆ.

## ಹರಿಯೊಬ್ಬನೇ ಸರ್ವಹೇತು

**ಅತ್ರ ಹರೇಃ ಸರ್ವಹೇತುತ್ವೇನ ಜೀವಗತದೇಹೇಂದ್ರಿಯಕರ್ತೃತ್ವಹೇತುತ್ವಸತ್ವೇಽಪಿ, ದೇವ್ಯಾಃ ಸುಖದುಃಖಭೋಗದಾನೇ ಪ್ರವೃತ್ತಿರಲ್ಪಾ । ಕಾರ್ಯಕಾರಣಕರ್ತೃತ್ವೇ ಭೋಗದಾನಪ್ರವೃತ್ತ್ಯಪೇಕ್ಷಯಾಽಧಿಕಾ । ಅತಃ ಕಾರ್ಯಕಾರಣಕರ್ತೃತ್ವೇ ಪ್ರಕೃತಿರ್ಹೇತುರಿತಿ ಪುರುಷಸ್ತು ಸುಖದುಃಖಭೋಗದಾನಹೇತುರಿತಿ ವಿಶಿಷ್ಯೋಕ್ತಿರ್ಯುಕ್ತಾ । ಅತ ಏವ ಪೂರ್ವಾಪರಾರ್ಧಯೋರುಚ್ಯತ ಇತಿ ದ್ವಿವಾರಮುಕ್ತಿಃ ।**

**ಅನುವಾದ-** ಇಲ್ಲಿ ಹರಿಯು ಸರ್ವಕ್ಕೂ ಕಾರಣನಾದ್ದರಿಂದ ಜೀವನಲ್ಲಿರುವ ದೇಹೇಂದ್ರಿಯ ಕರ್ತೃತ್ವಕ್ಕೆ ಹೇತುವಾಗಿದ್ದರೂ, ಹಾಗೆಯೇ ಚಿತ್ ಪ್ರಕೃತಿಯೆನಿಸಿದ ಶ್ರೀದೇವಿಯು ಜೀವರಿಗೆ ಸುಖದುಃಖಭೋಗವನ್ನು ಕೊಡುವಲ್ಲಿ ಹೇತುವಾಗಿದ್ದರೂ ಸುಖದುಃಖ ಭೋಗವನ್ನು ಕೊಡುವಲ್ಲಿ ಶ್ರೀದೇವಿಗೆ ಅಲ್ಪವಾದ ಪ್ರವೃತ್ತಿ ಮಾತ್ರ ಇದೆ. (ಜೀವನಿಗೆ) ಶರೀರೇಂದ್ರಿಯಾದಿಗಳ ಕರ್ತೃತ್ವವನ್ನುಂಟು ಮಾಡುವಲ್ಲಿ ಭೋಗದಾನ ಪ್ರವೃತ್ತಿಗಿಂತ ಅಧಿಕವಾದ ಪ್ರವೃತ್ತಿಯಿದೆ. ಆದ್ದರಿಂದ (ಇಬ್ಬರಿಗೂ ಎರಡನ್ನೂ ಕುರಿತು ಹೇತುತ್ವವಿದ್ದರೂ) ಶರೀರೇಂದ್ರಿಯ ಕರ್ತೃತ್ವದಲ್ಲಿ ಪ್ರಕೃತಿಯು ಹೇತುವೆಂದೂ ಪುರುಷ(ಹರಿ)ನಾದರೋ ಸುಖದುಃಖಭೋಗದಾನಕ್ಕೆ ಹೇತುವೆಂದೂ ವಿಶೇಷತೆಯ ಹೇಳಿಕೆ ಹೊಂದುತ್ತದೆ. ಆದ್ದರಿಂದಲೇ ಪೂರ್ವಾರ್ಧದಲ್ಲೂ ಉತ್ತರಾರ್ಧದಲ್ಲೂ **'ಉಚ್ಯತೇ'** (ಹೇಳಲ್ಪಡುತ್ತದೆ') ಎಂದು ಎರಡು ಬಾರಿ ಹೇಳಿದೆ.

**ವಿವರಣೆ-** ಜೀವನು ಕರ್ಮದ ಮರ್ಮವರಿಯದೆ ಕರ್ಮಜಾಲದಲ್ಲಿ ಸಿಕ್ಕಿಹಾಕಿಕೊಂಡು ಬದ್ಧನಾಗಿ ಶರೀರೇಂದ್ರಿಯಗಳನ್ನು ತಾನೇ ಸಂಪಾದಿಸಿಕೊಳ್ಳುತ್ತಾನೆ. ನಾನಾ ಕರ್ಮದ ಬಲದಿಂದ ನಾನಾ ಶರೀರಗಳು. ಜೀವನ ಈ ಕಾರ್ಯಕಾರಣಕರ್ತೃತ್ವಕ್ಕೆ ದೇವಿ ದುರ್ಗೆಯೇ ಕಾರಣ. ಅಜ್ಞಾನವನ್ನು ಉಂಟುಮಾಡುವ ಈ ತಮೋಭಿಮಾನಿನಿ ಜೀವನ ಬಂಧಕ ಕರ್ಮಕ್ಕೆ ಕಾರಣಳು.

ಇವಳೇ ಚಿತ್ ಪ್ರಕೃತಿ. ಲಬ್ಧವಾದ ಶರೀರೇಂದ್ರಿಯಗಳ ಮೂಲಕ ಸುಖದುಃಖಗಳನ್ನು ಜೀವನು ಭೋಗಿಸುವಂತೆ ಭೋಗಶಕ್ತಿ ನೀಡುವವ ಪರಮಪುರುಷನಾದ ನಾರಾಯಣ. ವಸ್ತುತಃ ನಾರಾಯಣ ಅದಕ್ಕೂ ಕಾರಣ. ದುರ್ಗೆ ಇದಕ್ಕೂ ಕಾರಣ. ಹಾಗಿದ್ದರೂ ದುರ್ಗೆಯ ಪ್ರವೃತ್ತಿ ಯಾವ ವಿಷಯದಲ್ಲಿ ಹೆಚ್ಚಾಗಿದೆಯೆಂಬುದನ್ನು ಲಕ್ಷಿಸಿ ಶರೀರೇಂದ್ರಿಯ ಕರ್ತೃತ್ವದಲ್ಲಿ ಆಕೆಯು ಹೇತುವೆನ್ನಲಾಗಿದೆ. ಭೋಕ್ತೃತ್ವದ ವಿಷಯದಲ್ಲಿ ಆಕೆಯ ಪ್ರವೃತ್ತಿ ಕಡಿಮೆಯಿರುವುದರಿಂದ ಆಕೆಯನ್ನು ಹೇತುವೆನ್ನದೆ ಪರಮಪುರುಷನನ್ನು ಹೇತುವೆನ್ನಲಾಗಿದೆ.

**ಯದ್ವಾ ಕಾರ್ಯಕಾರಣಕರ್ತೃತ್ವೇ ದೇಹೇಂದ್ರಿಯಾಣಾಂ ಪರಿಣಾಮ-ಕ್ರಿಯಾಯಾಂ ಪ್ರಕೃತಿಃ ಪ್ರಧಾನಂ ಹೇತುರುಚ್ಯತೇ । ಪುರುಷೋ ಜೀವಃ ಸುಖ-ದುಃಖಾನಾಂ ಭೋಕ್ತೃತ್ವೇ ಅನುಭವೇ ಹೇತುಃ ಕರ್ತೋಚ್ಯತೇ ಇತ್ಯರ್ಥಃ ॥ 21॥**

**ಅನುವಾದ-** ಅಥವಾ (ಶ್ಲೋಕಕ್ಕೆ ಹೀಗೂ ಅರ್ಥ) **ಕಾರ್ಯಕಾರಣಕರ್ತೃತ್ವೇ=** ದೇಹೇಂದ್ರಿಯಾದಿಗಳ ಪರಿಣಾಮಕ್ರಿಯೆಯಲ್ಲಿ **ಪ್ರಕೃತಿ=** ಪ್ರಧಾನವು (ಅಚಿತ್ ಪ್ರಕೃತಿಯು) ಹೇತುವೆನಿಸಿದೆ. **ಪುರುಷಃ =** ಜೀವನು ಸುಖದುಃಖಗಳ **ಭೋಕ್ತೃತ್ವೇ=** ಅನುಭವದಲ್ಲಿ **ಹೇತುಃ=** ಕರ್ತೃವೆಂದು ಹೇಳಲ್ಪಡುತ್ತಾನೆ ಎಂದೂ ಅರ್ಥ. ॥ 21 ॥

**ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್ ।**
**ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥ 22 ॥**

**ಅರ್ಥ-** ಜೀವನು ಪ್ರಾಕೃತಶರೀರದಲ್ಲಿದ್ದುಕೊಂಡು ಪ್ರಕೃತಿಯಿಂದುಂಟಾಗುವ ಸುಖಾದಿ ಗಳನ್ನು ಅನುಭವಿಸುತ್ತಾನೆ. ಇದು ಅನುಭವಸಿದ್ಧ. ಈ ಜೀವನಿಗೆ ಉತ್ತಮ ಅಥವಾ ಹೀನ ಯೋನಿಗಳಲ್ಲಿ ಜನ್ಮವುಂಟಾಗುವುದಕ್ಕೆ ಅವನ ಸತ್ವಾದಿಗುಣಗಳ ಸಂಬಂಧವು ನಿಮಿತ್ತ.

**ನನು ಪ್ರಕೃತಿಕೃತದೇಹೇಂದ್ರಿಯಸಂಬಂಧೇನ ಸುಖದುಃಖಾದಿಭೋಕ್ತಾ ಜೀವಸ್ತನ್ನಿಯಾಮಿಕೇ ದೇವದೇವ್ಯಾವಿತಿ ಯತ್ತದಯುಕ್ತಮ್ । ದೇಹಾದಿ ಸಮ್ಬನ್ಧಾದೇರ್ಮಿಥ್ಯಾತ್ವಾದಿತ್ಯತ ಆಹ- ಪುರುಷ ಇತಿ ॥ ಪುರುಷೋ ಜೀವಃ ಪ್ರಕೃತಿಸ್ಥಃ ಪ್ರಕೃತಿಕಾರ್ಯದೇಹಾದೌ ಸ್ಥಿತಃ ಪ್ರಕೃತಿಜಾನ್ ಗುಣಾನ್ಸುಖಾದೀನ್ ಭುಂಕ್ತೇ । ಹೀತಿ ನಿರ್ಬಾಧಾನುಭವಸಿದ್ಧತ್ವಂ ಸೂಚಯತಿ । ತೇನ ತದ್ವಿರೋಧಾನ್ನ ಮಿಥ್ಯಾತ್ವಂ ಸುಖಾದೇರಿತ್ಯುಕ್ತಂ ಭವತಿ । ಏತೇನ 'ಕಾರ್ಯಕಾರಣಕರ್ತೃತ್ವ' ಇತ್ಯತ್ರ ಜೀವದೇಹಸ್ಥತ್ವಸ್ಯ, 'ಭೋಕ್ತೃತ್ವೇ ಸುಖದುಃಖಾನಾಂ' ಇತ್ಯತ್ರ ಸುಖಾದಿ-ಭೋಗಸ್ಯೋಕ್ತೇಸ್ತಾಭ್ಯಾಮಸ್ಯ ಪೌನರುಕ್ತ್ಯಮಿತಿ ನಿರಸ್ತಮ್ । ಮಿಥ್ಯಾತ್ವ-**

**ನಿರಾಸಾಯ ಸಾಕ್ಷ್ಯನುಭವವಿರೋಧಂ ಮಿಥ್ಯಾವಾದಿನಾಂ ದರ್ಶಯಿತುಂ ಪ್ರಾಗುಕ್ತಸ್ಯೈವಾತ್ರ ಪುನರಭಿಧಾನಾತ್ । ಶುದ್ಧಸ್ಯ ಜೀವಸ್ಯ ಪ್ರಕೃತಿಸ್ಥತ್ವೇ ಕಿಂ ಕಾರಣಮಿತ್ಯತ ಆಹ- ಕಾರಣಮಿತಿ ॥ ಅಸ್ಯ ಜೀವಸ್ಯ ॥ 22 ॥**

**ಅನುವಾದ-** ಪ್ರಕೃತಿಯಿಂದಾದ ದೇಹೇಂದ್ರಿಯಗಳ ಸಂಬಂಧದಿಂದ ಸುಖದುಃಖಾದಿಗಳನ್ನು ಭೋಗಿಸುವವ ಜೀವನು. ಅದಕ್ಕೆ ನಿಯಾಮಕರು ದೇವ ನಾರಾಯಣ ಹಾಗೂ ದೇವೀ ದುರ್ಗೆಯೆಂದಿರಲ್ಲಾ ! ಅದು ಯುಕ್ತವಾಗದು. ದೇಹಾದಿಗಳ ಸಂಬಂಧ ಮೊದಲಾದವು ಮಿಥ್ಯೆಯಾಗಿರುವುದರಿಂದ ಎಂಬ ಆಕ್ಷೇಪದ ನಿವಾರಣೆಗಾಗಿ ಹೇಳುತ್ತಿದ್ದಾನೆ. '**ಪುರುಷಃ ಪ್ರಕೃತಿಸ್ಥಃ**'– ಎಂಬ ಶ್ಲೋಕವನ್ನು. **ಪುರುಷಃ** = ಜೀವನು, **ಪ್ರಕೃತಿಸ್ಥಃ**= ಪ್ರಕೃತಿಯ ಕಾರ್ಯವಾದ ದೇಹಾದಿಗಳಲ್ಲಿ ಇರುವವನಾಗಿ **ಪ್ರಕೃತಿಜಾನ್‌ಗುಣಾನ್**= ಪ್ರಕೃತಿಪರಿಣಾಮವಾದ ಸುಖಾದಿ ಗುಣಗಳನ್ನು ಅನುಭವಿಸುತ್ತಾನೆ. 'ಹಿ' ಎಂಬ ಪದದಿಂದ ಅಬಾಧಿತವಾದ ಅನುಭವದಿಂದ (ಈ ವಿಷಯವು) ಪ್ರಮಾಣಿತವಾಗಿದೆಯೆಂದು ಸೂಚಿಸುತ್ತಿದ್ದಾನೆ. ಆದ್ದರಿಂದ ಈ ಅಬಾಧಿತ ಅನುಭವದ ವಿರೋಧವಿರುವುದರಿಂದ ಸುಖಾದಿಗಳು ಮಿಥ್ಯೆಗಳಲ್ಲವೆಂದಂತಾಗುತ್ತದೆ . ಹೀಗೆ ವ್ಯಾಖ್ಯಾನಿಸಿದುದರಿಂದ '**ಕಾರ್ಯಕಾರಣಕರ್ತೃತ್ವೇ**' ಎಂಬಲ್ಲಿ ಜೀವನು ದೇಹದಲ್ಲಿರುವನೆಂದೂ, '**ಭೋಕ್ತೃತ್ವೇ ಸುಖದುಃಖಾನಾಂ**' ಎಂಬಲ್ಲಿ ಜೀವನಿಗೆ ಸುಖದುಃಖಾದಿಭೋಗವುಂಟೆಂದೂ ಹೇಳಿರುವುದರಿಂದ (ಇಲ್ಲಿ ಮತ್ತೆ ದೇಹಸ್ಥಿತನಾದ ಪುರುಷ ಪ್ರಾಕೃತಸುಖಾದಿಗಳನ್ನು ಭೋಗಿಸುತ್ತಾನೆ ಎಂದುದರಿಂದ) ಇದಕ್ಕೆ ಪೌನರುಕ್ತ್ಯ ಉಂಟಾಗಿದೆಯೆಂಬ ಆಕ್ಷೇಪವು ಪರಿಹೃತವಾಗಿದೆ. ದೇಹಾದಿಗಳು ಮಿಥ್ಯೆಯೆಂಬ ವಾದವನ್ನು ನಿರಾಸಮಾಡುವುದಕ್ಕಾಗಿ ಮಿಥ್ಯೆಯೆಂಬವರಿಗೆ ಸಾಕ್ಷ್ಯನುಭವದ ವಿರೋಧವನ್ನು ತೋರಿಸಲು ಹಿಂದಿನ ಶ್ಲೋಕದಲ್ಲಿ ಹೇಳಿದುದನ್ನೇ ಇಲ್ಲಿ ಮತ್ತೆ ಹೇಳಿದುದರಿಂದ. ಶುದ್ಧನಾದ ಜೀವನಿಗೆ ಪ್ರಾಕೃತದೇಹಗಳಲ್ಲಿ ಸ್ಥಿತಿಗೆ ಏನು ಕಾರಣವೆಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾನೆ. 'ಕಾರಣಂ ಗುಣಸಂಗಃ ಅಸ್ಯ' ಎಂಬುದಾಗಿ. **ಅಸ್ಯ** = ಜೀವನಿಗೆ.

**ಉಪದ್ರಷ್ಟಾಽನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥ 23 ॥**

**ಅರ್ಥ-** ಸರ್ವೇಶ್ವರನಾದ ಪರಮಪುರುಷನಾದ ದೇವನೇ ಎಲ್ಲರಿಗಿಂತ ಎತ್ತರದಲ್ಲಿ ನೋಡುವವ. ಬುದ್ಧಿಪೂರ್ವಕವಾಗಿ ಪ್ರೇರಿಸುವವ. ಸರ್ವಧಾರಕ, ಸರ್ವಫಲಭೋಕ್ತೃ ಮಹಾಶಕ್ತಿಶಾಲಿ. ಪರಮಚೇತನ. ಈ ದೇಹದಲ್ಲಿರುವನೆಂದು ಹಿಂದೆಯೇ ಹೇಳಲ್ಪಟ್ಟಿರುವ ಕ್ಷೇತ್ರಜ್ಞನೇ ಇವ.

**ಸಾಧ್ವಸಾಧುಯೋರ್ನ್ಯುತ್ಪತ್ತೌ ಸತ್ತ್ವಾದಿಗುಣಸಂಗೋ ನಿಮಿತ್ತಮಾತ್ರ-**

**ಕಾರಣಮ್ । ಭಗವಾನೇವ ತು ಸ್ವತನ್ತ್ರಕಾರಣಮಿತ್ಯಾಹ- ಉಪದ್ರಷ್ಟೇತಿ ॥ ಅನುಮನ್ತಾ ಪುನಃ ಪುನಃ ಕರ್ತವ್ಯಸ್ಯ ವಿಶೇಷೇಣಾಲೋಚಕಃ । ಯದ್ವಾ ಅನು ಸ್ವಾನುಕೂಲ್ಯೇನ ಸ್ವಮನೋಽವಿಕ್ಷೇಪಕತಯೇತಿ ಯಾವತ್ । ಮಂತಾ (ಮತ್ಯಾ) ಮತಿಪೂರ್ವಂ ಇತಿ ಯಾವತ್ । ಪ್ರೇರಯತೀತ್ಯನುಮನ್ತಾ । ತತ್ರ ಹೇತುರುಪ-ದ್ರಷ್ಟೇತಿ । ಸರ್ವೇಭ್ಯ ಉಪರಿ ವರ್ತಮಾನಃ । ಉತ್ತಮಃ ಸನ್ನಿತಿ ಯಾವತ್ । ದ್ರಷ್ಟಾ, ಭರ್ತಾ ಸರ್ವ(ಧಾರಕಃ) ಭಾರಕಃ ಸರ್ವಪೋಷಕ ಇತಿ ಯಾವತ್ । ಭೋಕ್ತಾ ಸರ್ವಕರ್ಮಫಲಸಾರಭುಕ್ । ಮಹಾಶಕ್ತಿತ್ವಾತ್ ಮಹೇಶ್ವರಃ । ಪರಮಾತ್ಮಾ ಪರಮಚೇತನಃ । ಇತಿ ಶಬ್ದೋ ಹೇತ್ವರ್ಥಃ ಸನ್ ಸರ್ವತ್ರಾನ್ವೀಯಮಾನಃ ಅನುಮನ್ತೃತ್ವೇ ಉಪದ್ರಷ್ಟೃತ್ವಾದ್ಭರ್ತೃತ್ವಾದಾದಿತ್ಯಾದಿರೂಪೇಣ ಹೇತ್ವರ್ಥಕೋ ಧ್ಯೇಯಃ । ಉಪದ್ರಷ್ಟೃತ್ವಾದಿ ಹೇತುಭ್ಯೋಽನುಮನ್ತಾ ಪುರುಷ ಉಕ್ತ ಇತಿ । ಚ ಶಬ್ದೋ ಹೇತುಸಮುಚ್ಚಯೇ । ಕೋಽನುಮಂತಾ ಪುರುಷ ಇತ್ಯತಃ ಅಸ್ಮಿನ್ ದೇಹೇಽಪ್ಯುಕ್ತ ಇತಿ ಉಕ್ತಮ್ । ದೇಹಸ್ಥತ್ವೇನೋಕ್ತಶ್ಚ ಭಗವಾನ್ ಸ್ವಯಮೇವ, 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು' ಇತಿ ಸ್ವಸ್ಯ ದೇಹಸ್ಥತ್ವೇನ ಪ್ರಾಗುಕ್ತತ್ವಾದಿತಿ ಭಾವಃ । ಏತೇನ ಯತಶ್ಚ ಯದಿತ್ಯನೇನ ಯಾದೃಗ್ಧರ್ಮ ವಿಶಿಷ್ಟಾದ್ಯತ್ಕ್ಷೇತ್ರಂ ಪ್ರವರ್ತತೇ ಏತನ್ಮೇ ಶೃಣ್ವಿತಿ ಪ್ರಾಕ್ ಪ್ರತಿಜ್ಞಾತಮಪ್ಯುಕ್ತಂ ಭವತಿ । ಉಪದ್ರಷ್ಟೃತ್ವಾದಿಧರ್ಮವಿಶಿಷ್ಟಾತ್ಪ್ರವರ್ತತ ಇತಿ ॥ 23 ॥**

**ಅನುವಾದ–** ಒಳ್ಳೆಯ ಹಾಗೂ ಕೆಟ್ಟಯೋನಿಗಳಲ್ಲಿ ಜನ್ಮವೆತ್ತಲು ಸತ್ವಾದಿಗುಣಗಳ ಸಂಬಂಧವು ನಿಮಿತ್ತಕಾರಣವು ಮಾತ್ರ. ಭಗವಂತನೊಬ್ಬನೇ ಸ್ವತಂತ್ರಕಾರಣನು ಎನ್ನುತ್ತಿದ್ದಾನೆ. **'ಉಪದ್ರಷ್ಟಾ'** ಎಂಬ ಶ್ಲೋಕದಿಂದ.

**ಅನುಮಂತಾ** = ಮಾಡಬೇಕಾದ ಕಾರ್ಯದ ಕುರಿತು ಮತ್ತೆ ಮತ್ತೆ ಪರ್ಯಾಲೋಚಿಸು-ವವನು. ಅಥವಾ **ಅನು**= ತನಗೆ ಅನುಕೂಲವಾಗುವಂತೆ ಅಂದರೆ ತನ್ನ ಮನಸ್ಸು ವಿಕ್ಷಿಪ್ತಗೊಳ್ಳ ದಂತೆ, **ಮಂತಾ** = ಬುದ್ಧಿಪೂರ್ವಕವಾಗಿ ಪ್ರೇರಿಸುವವನಾದರಿಂದ ಅನುಮಂತಾ. ಅದಕ್ಕೆ ಹೇತು 'ಉಪದ್ರಷ್ಟಾ' ಎಂಬುದು. **ಉಪ**= ಬ್ರಹ್ಮಾದಿ ಎಲ್ಲರಿಗಿಂತಲೂ ಮೇಲೆ ಇದ್ದುಕೊಂಡು ಅಂದರೆ ಉತ್ತಮನಾಗಿದ್ದುಕೊಂಡು, **ದ್ರಷ್ಟಾ**= ಜೀವವ್ಯಾಪಾರಾದಿಗಳನ್ನು ನೋಡುವವ. **ಭರ್ತಾ**= ಸರ್ವ ಭರಣ ಮಾಡುವವ. ಎಲ್ಲವನ್ನು ಪೋಷಿಸುವವನೆಂದರ್ಥ. **ಭೋಕ್ತಾ**= ಎಲ್ಲಾ ಕರ್ಮಗಳ ಫಲದ ಸಾರಭೋಕ್ತೃ. ಮಹಾಶಕ್ತಿಯಿರುವುದರಿಂದ ಮಹೇಶ್ವರ. **ಪರಮಾತ್ಮಾ** = ಪರಮ ಚೇತನ. **'ಇತಿ'**

ಶಬ್ದವು ಹೇತುವೆಂಬ ಅರ್ಥದಲ್ಲಿದ್ದು[1] ಎಲ್ಲೆಡೆ ಅನ್ವಯವನ್ನು ಹೊಂದುತ್ತಾ ಅನುಮಂತೃತ್ವದಲ್ಲಿ ಉಪದ್ರಷ್ಟೃವಾದ್ದರಿಂದ, ಭರ್ತೃವಾದ್ದರಿಂದ ಇತ್ಯಾದಿರೂಪವಾಗಿ ಹೇತ್ವರ್ಥದಲ್ಲಿದೆಯೆಂದು ತಿಳಿಯಬೇಕು. ಪುರುಷನು- 'ಅನುಮಂತೃ' ಎಂದೆನ್ನಲು ಉಪದ್ರಷ್ಟೃತ್ವ ಮೊದಲಾದವು ಕಾರಣಗಳೆಂಬುದಾಗಿ 'ಚ' ಎಂಬ ಶಬ್ದವು ಹೇತುವನ್ನು ಸಮುಚ್ಚಯ[2] ಮಾಡುತ್ತಿದೆ. ಅಂತಹ ಅನುಮಂತೃವಾದ ಪುರುಷನಾರು ? ಎಂಬ ಪ್ರಶ್ನೆಗುತ್ತರವಾಗಿ 'ಈ ದೇಹದಲ್ಲಿರುವನೆಂದು ಹೇಳಲ್ಪಟ್ಟವನು' ಎನ್ನಲ್ಪಟ್ಟಿದೆ. ದೇಹದಲ್ಲಿರುವನೆಂದು ಹೇಳಲ್ಪಟ್ಟವ ಸ್ವಯಂ ಭಗವಂತನೇ. **'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು'** ಸರ್ವದೇಹಗಳಲ್ಲೂ ಇದ್ದು ಕ್ಷೇತ್ರವನ್ನು ಅರಿತವನು ನಾನೇ ಎಂದು ತಿಳಿ' ಎನ್ನುತ್ತಾ ತಾನು ದೇಹದಲ್ಲಿರುವವನೆಂದು ಹಿಂದೆ ಹೇಳಿರುವುದರಿಂದ ಎಂದು ಭಾವ. ಇದರಿಂದ **'ಯತಶ್ಚ ಯತ್'** **ಯತಃ**= ಎಂತಹ ಮಾಹಾತ್ಮ್ಯ ಯುಳ್ಳವನಿಂದ **ಯತ್** = ಕ್ಷೇತ್ರವು ಪ್ರವೃತ್ತಿ ಪಡೆದಿದೆ ? ಎಂಬ ವಿಷಯವನ್ನು ನನ್ನಿಂದ ಕೇಳು' ಎಂದು ಹಿಂದೆ (4ನೇ ಶ್ಲೋಕದಲ್ಲಿ) ಪ್ರತಿಜ್ಞಾತವಾದುದು ಇಲ್ಲಿ ಉತ್ತರಿಸಲ್ಪಟ್ಟಂತಾಗಿದೆ. ಉಪದ್ರಷ್ಟೃತ್ವಮೊದಲಾದ ಮಹಾತ್ಮೆಯುಳ್ಳವನಿಂದ ಪ್ರವೃತ್ತಿ ಪಡೆದಿದೆ ಎಂಬುದಾಗಿ. ॥ 23 ॥

**ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಸ್ಸಹ ।**
**ಸರ್ವಥಾ ವರ್ತಮಾನೋऽಪಿ ನ ಸ ಭೂಯೋऽಭಿಜಾಯತೇ ॥ 24 ॥**

**ಅರ್ಥ**- ಯಾವಾತನು ಈ ಪ್ರಕೃತಿ, ಪುರುಷರನ್ನು ಪ್ರಾಕೃತ ಸತ್ವಾದಿಗುಣಗಳೊಂದಿಗೆ ತಿಳಿಯುತ್ತಾನೋ ಅವನು ಹೇಗೆ ಬದುಕಿದರೂ ಮತ್ತೊಮ್ಮೆ ಹುಟ್ಟಲಾರ. ಮುಕ್ತನಾಗಿ ಬಿಡುತ್ತಾನೆ.

**'ಪ್ರಕೃತಿಂ ಪುರುಷಂ ಚೈವ ವಿದ್ಧಿ' ಇತ್ಯುಕ್ತಾರ್ಥೇ ಬುಭುತ್ಸಾತಿಶಯೋ-**

---

1. 'ಇತಿ' ಎಂಬ ಅವ್ಯಯವು ಅನೇಕಾರ್ಥಕ. ಹೇಮಕೋಶವು ಹತ್ತು ಅರ್ಥಗಳನ್ನು ಹೇಳಿದೆ. 'ಇತಿ ಸ್ವರೂಪೇ ಸಾನ್ನಿಧ್ಯೇ ವಿವಕ್ಷಾನಿಯಮೇऽಪಿ ಚ । ಹೇತೌ ಪ್ರಕಾರಪ್ರತ್ಯಕ್ಷ ಪ್ರಕಾಶೇಷ್ವವಧಾರಣೇ । ಏವಮರ್ಥೇ ಸಮಾಪ್ತೌ ಸ್ಯಾತ್' (ಹೇಮಕೋಶ) ಅನ್ಯೋನ್ಯದರ್ಶನಂ ಭವಿಷ್ಯತೀತಿ ಸ ತತ್ರ ಜಗಾಮ' ಎಂಬಲ್ಲಿ ಇತಿ ಶಬ್ದವು ಹೇತ್ವರ್ಥಕವಾಗಿದೆ. ಹಾಗೆಯೇ ಪರಮಾತ್ಮೇತಿ ಚಾಪ್ಯುಕ್ತಃ ಎಂಬಲ್ಲಿಯ ಇತಿ ಶಬ್ದವೂ ಹೇತ್ವರ್ಥಕ. ಅದನ್ನು ಅನುಮಂತಾ ಕುತಃ ? ಉಪದ್ರಷ್ಟಾ ಇತಿ, ಭರ್ತಾ ಇತಿ. ಭೋಕ್ತಾ ಇತಿ, ಮಹೇಶ್ವರಃ ಇತಿ, ಪರಮಾತ್ಮಾ ಇತಿ ಎಂಬುದಾಗಿ ಸಂಬಂಧವಿಟ್ಟುಕೊಂಡಾಗ ಉಪದ್ರಷ್ಟೃ ಭರ್ತೃ ಮೊದಲಾದ ಕಾರಣದಿಂದ ಆತ ಅನುಮಂತೃ ಎಂದರ್ಥವಾಗುತ್ತದೆ.

2. ಪರಸ್ಪರನಿರಪೇಕ್ಷವಾದವುಗಳಿಗೆ ಒಂದು ಕ್ರಿಯೆಯಲ್ಲಿ ಅನ್ವಯವು ಸಮುಚ್ಚಯ, ಈಶ್ವರಂ ಗುರುಂ ಚ ಭಜಸ್ವ' ಎಂಬಲ್ಲಿ ಚ ಶಬ್ದವು ಸಮುಚ್ಚಯಾರ್ಥಕ. ಅಂತೆಯೇ ಉಪದ್ರಷ್ಟಾ ಇತಿ ಚ ಭರ್ತೇತಿ ಚ. ಭೋಕ್ತೇತಿ ಚ . ಅನುಮಂತಾ ಭವತಿ ಎಂದಾಗ ಚ ಶಬ್ದವು ಸಮುಚ್ಚಯಾರ್ಥಕ.

**ತ್ವಾದನಾಯ ತದ್‌ಜ್ಞಾನಫಲಮಾಹ- ಯ ಏನಮಿತಿ ॥ ಯೋಽಧಿಕಾರೀ ಏನಂ ಪುರುಷಂ ಜೀವಪರಾಖ್ಯದ್ವಿವಿಧಪುರುಷಂ ಜಡಾಜಡಾಖ್ಯದ್ವಿವಿಧಪ್ರಕೃತಿಂ ಚ ತತ್ತದ್ಗುಣೈಃ ಸಹ ವೇತ್ತಿ ಪರೋಕ್ಷತೋ ವಿದಿತ್ವಾಽಪರೋಕ್ಷತೋ ಜಾನಾತಿ ಸ ಪುಮಾನ್‌ಸರ್ವಥಾ ವರ್ತಮಾನೋಽಪಿ ಪ್ರಮಾದಾದನ್ಯಾಯಪ್ರವೃತ್ತಿಮಾನಪಿ ಭೂಯಃ ಪುನರ್ನಾಭಿಜಾಯತೇ ಮುಕ್ತೋ ಭವತೀತ್ಯರ್ಥಃ । ತದುಕ್ತಂ ಸೂತ್ರೇ- 'ಓಂ ಕಾಮಕಾರೇಣ ಚೈಕೇ ಓಂ' (3-4-15) ಇತಿ ॥ 24 ॥**

## ಜ್ಞಾನಿಗೆ ಹೇಗಿದ್ದರೂ ಮೋಕ್ಷ

'ಪ್ರಕೃತಿಯನ್ನೂ ಪುರುಷನನ್ನೂ ಅನಾದಿಯೆಂದು ತಿಳಿ' (ಶ್ಲೋ.20) ಎಂದು ಹೇಳಿರುವ ವಿಷಯದಲ್ಲಿ ತಿಳಿಯುವ ಉತ್ಕಟ ಬಯಕೆಯನ್ನು ಹುಟ್ಟಿಸಲು ಪ್ರಕೃತಿಪುರುಷ ಜ್ಞಾನದ ಫಲವನ್ನು ತಿಳಿಸುತ್ತಾನೆ. **'ಯ ಏನಂ'** ಎಂಬ ಶ್ಲೋಕದಿಂದ. **ಯಃ**= ಮೋಕ್ಷಕ್ಕೆ ಅಧಿಕಾರಿಯು **ಏನಂ ಪುರುಷಂ**= ಜೀವ ಮತ್ತು ಪರಮಾತ್ಮ ಎಂಬ ಎರಡು ವಿಧ ಪುರುಷರನ್ನು **ಪ್ರಕೃತಿಂ**= ಜಡ ಹಾಗೂ ಚೇತನವೆಂಬ (ಚಿತ್ ಪ್ರಕೃತಿ ಹಾಗೂ ಅಚಿತ್ ಪ್ರಕೃತಿ) ದ್ವಿವಿಧ ಪ್ರಕೃತಿಯನ್ನೂ ಅವುಗಳ ಗುಣಗಳೊಂದಿಗೆ **ವೇತ್ತಿ**= ಶಾಸ್ತ್ರದಿಂದ ಪರೋಕ್ಷವಾಗಿ ತಿಳಿದು ಅಪರೋಕ್ಷ ಜ್ಞಾನ ಸಂಪಾದಿಸಿ ಕೊಳ್ಳುತ್ತಾನೋ, **ಸಃ**= ಆ ಪುರುಷನು ಸರ್ವಥಾ **ವರ್ತಮಾನೋಽಪಿ**= **ಪ್ರಮಾದವಶಾತ್** ಅನ್ಯಾಯಮಾರ್ಗದಲ್ಲಿ ಪ್ರವೃತ್ತಿ ಮಾಡಿದರೂ **ಭೂಯಃ**= ಮತ್ತೆ, **ನಾಭಿಜಾಯತೇ**= ಹುಟ್ಟುವುದಿಲ್ಲ ಮುಕ್ತನಾಗುತ್ತಾನೆಂದರ್ಥ. ಅದು ಬ್ರಹ್ಮಸೂತ್ರದಲ್ಲೂ ಹೇಳಲ್ಪಟ್ಟಿದೆ. **'ಕಾಮಕಾರೇಣ ಚೈಕೇ'** (3.4.15) ಎಂದು.

**ವಿವರಣೆ**– ಬ್ರಹ್ಮಸೂತ್ರದ ಕಾಮಚಾರಾಧಿಕರಣದಲ್ಲಿ ಜ್ಞಾನಿಯ ಪ್ರಾಮಾದಿಕ ಅಧರ್ಮಾ-ಚರಣೆಯು ಮೋಕ್ಷವನ್ನು ಅಡ್ಡಗಟ್ಟಲಾರದು ಎನ್ನಲಾಗಿದೆ. **'ಸ್ತುತಯೇ ಅನುಮತಿರ್ವಾ'** ಎಂಬ ಸೂತ್ರದಲ್ಲಿ **' ಸ ಬ್ರಾಹ್ಮಣಃ ಕೇನ ಸ್ಯಾತ್ ಯೇನ ಸ್ಯಾತ್'** ಎಂಬ ಶ್ರುತ್ಯರ್ಥವನ್ನು ನಿರ್ಧರಿಸಿ **'ಕಾಮಕಾರೇಣ ಚೈಕೇ'** ಎನ್ನಲಾಗಿದೆ. ಏಕೇ = ಕೆಲವು ಶ್ರುತಿಗಳು **'ಕಾಮಚಾರಾಃ ಕಾಮಭಕ್ಷಾಃ ಕಾಮವಾದಾಃ ಕಾಮೇನ್ನೈವೇಮಂ ದೇಹಮುತ್‌ಸೃಜ್ಯಾಥ ಪರಾತ್ಪರಮೀಯುಃ'** ಎಂಬಿಂಥವು, **ಕಾಮಕಾರೇಣ** = ಕೆಲವೊಮ್ಮೆ ಸ್ವಚ್ಛಂದ ಆಚರಣೆಯಿಂದ ಅಧರ್ಮಮಾರ್ಗದಲ್ಲಿ ಸಾಗಿದರೂ ಎಚ್ಚೆತ್ತುಕೊಳ್ಳುತ್ತಾನೆ. ಅವನಿಗೆ ಮೋಕ್ಷವಿದೆಯೆಂದು ಸಾರಿದೆಯೆಂದರ್ಥ. ॥ 24 ॥

**ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥ 25 ॥**

**ಅರ್ಥ**- ಕೆಲವರು ಧ್ಯಾನದ ಮೂಲಕ ಬುದ್ಧಿಯೆಂಬ ಅಂತಃಕರಣದ ಮೂಲಕ ಭಗವಂತನನ್ನು ದೇಹದೊಳಗೆ ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ಮತ್ತೆ ಕೆಲವರು ಸಾಂಖ್ಯಯೋಗದಿಂದ, ಇನ್ನೂ ಹಲವರು ಕರ್ಮಯೋಗದಿಂದ ಸಾಕ್ಷಾತ್ಕಾರವನ್ನು ಸಾಧಿಸುತ್ತಾರೆ.

## ದೇವರನ್ನು ಕಾಣುವ ಮಾರ್ಗಗಳು

**ಪರಮಪುರುಷಾದಿದರ್ಶನೇ ಸಾಧನಮಾಹ– ಧ್ಯಾನೇನೇತಿ ॥ ಕೇಚಿತ್ ಶ್ರವಣಮನನೋಪೇತಾಃ ಧ್ಯಾನೇನಾತ್ಮನಾ ಬುದ್ಧ್ಯಾಽಽತ್ಮಾನಂ ಭಗವಂತಂ ಆತ್ಮನಿ ದೇಹೇ ಪಶ್ಯಂತಿ । ಅನ್ಯೇ ಸಾಂಖ್ಯೇನ ಯೋಗೇನ ವೇದೋಕ್ತಭಗವತ್-ಸ್ವರೂಪಪರೋಕ್ಷಜ್ಞಾನೇನ ಧ್ಯಾನೇನ ಚೇತ್ಯನುಷಜ್ಯತೇ । ಆತ್ಮಾನಂ ಪಶ್ಯಂತಿ । ಅಪರೇ ಶ್ರವಣಾದಿಹೀನಾಃ ಕರ್ಮಯೋಗೇನ ಚ ಕರ್ಮರೂಪೋಪಾಯೇನ ಸಾಂಖ್ಯೇನ ಧ್ಯಾನೇನ ಚೇತ್ಯನುಷಜ್ಯತೇ । ಸಾಧುಕರ್ಮಾನುಷ್ಠಾನಲಬ್ಧಭಗವತ್-ಪ್ರಸಾದಜನ್ಯಶ್ರವಣಮನನಧ್ಯಾನೈರಾತ್ಮಾನಂ ಪಶ್ಯಂತಿ । ಧ್ಯಾನೇ ಅಶಕ್ತಾನಾಂ ಸಾಂಖ್ಯಸಂಪಾದನದ್ವಾರಾ ಧ್ಯಾನಸಂಪಾದನೇನ ತತ್ರಾಪ್ಯಶಕ್ತಾನಾಂ ಕರ್ಮೋ-ಪಾಯೇನ ಶ್ರವಣಾದಿಸಂಪಾದನೇನಾತ್ಮದರ್ಶನಮಿತ್ಯವಸ್ಥಾಭೇದಮಾಶ್ರಿತ್ಯಾಯ-ಮರ್ಥೋ ಭಾಷ್ಯೋಕ್ತಃ ।**

**ಅನುವಾದ**– ಪರಮಪುರುಷನ ದರ್ಶನಕ್ಕೆ ಸಾಧನಗಳನ್ನು ಹೇಳುತ್ತಿದ್ದಾನೆ. 'ಧ್ಯಾನೇನ' ಎಂಬ ಶ್ಲೋಕದಿಂದ. **ಕೇಚಿತ್**= ಶ್ರವಣ-ಮನನಗಳುಳ್ಳ ಕೆಲವರು ಧ್ಯಾನದಿಂದ, **ಆತ್ಮನಾ**= ಬುದ್ಧಿಯಿಂದ **ಆತ್ಮಾನಂ**= ಭಗವಂತನನ್ನು , **ಆತ್ಮನಿ**= ದೇಹದಲ್ಲಿ ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ಬೇರೆಯವರು, **ಸಾಂಖ್ಯೇನ ಯೋಗೇನ**= ವೇದೋಕ್ತವಾದ ಭಗವತ್ ಸ್ವರೂಪವನ್ನು ಪರೋಕ್ಷವಾಗಿ ತಿಳಿಯುವುದರಿಂದ, **ಧ್ಯಾನೇನ ಚ**= ಧ್ಯಾನದಿಂದಲೂ ಕೂಡ ಎಂದು ಇಟ್ಟುಕೊಳ್ಳಬೇಕು. ಭಗವಂತನನ್ನು ಕಾಣುತ್ತಾರೆ. ಇನ್ನೂ ಕೆಲವರು ಶ್ರವಣ-ಮನನಾದಿಗಳನ್ನು ಮಾಡದವರು **ಕರ್ಮಯೋಗೇನ ಚ**= ಕರ್ಮವೆಂಬ ಉಪಾಯದಿಂದ, ಸಾಂಖ್ಯದಿಂದ ಹಾಗೂ ಧ್ಯಾನದಿಂದ ಎಂದು 'ಚ ' ಶಬ್ದದ ಸಂಬಂಧ. ನಿಷ್ಕಾಮನೆಯ ಶುಭಕರ್ಮಾನುಷ್ಠಾನದಿಂದ ಭಗವಂತನ ಅನುಗ್ರಹ ಪಡೆದು ಅದರಿಂದ ಲಭಿಸುವ ಶ್ರವಣ,ಮನನ,ಧ್ಯಾನಗಳಿಂದ ಭಗವಂತನನ್ನು ಕಾಣುತ್ತಾರೆ. ಧ್ಯಾನದಲ್ಲಿ ಅಶಕ್ತರಿಗೆ ಶ್ರವಣ ಮನನ ಸಂಪಾದನೆಯ ಮೂಲಕ ಧ್ಯಾನ ಸಾಮರ್ಥ್ಯವನ್ನು ಪಡೆಯುವುದರ ಮೂಲಕ ದರ್ಶನ. ಶ್ರವಣ, ಮನನ ಸಂಪಾದನೆಯಲ್ಲೂ ಅಶಕ್ತರಿಗೆ ನಿಷ್ಕಾಮಕರ್ಮದಿಂದ ಶ್ರವಣಾದಿ ಸಂಪಾದಿಸಿ ಆತ್ಮದರ್ಶನ. ಹೀಗೆ ಅವಸ್ಥಾಭೇದವನ್ನು ಅನುಲಕ್ಷಿಸಿ ಈ ಅರ್ಥವನ್ನು ಭಾಷ್ಯದಲ್ಲಿ ಹೇಳಲಾಗಿದೆ.

## ಯೋಗ್ಯತೆಗೆ ಸರಿಯಾಗಿ ಸಾಧನ

**ತಾತ್ಪರ್ಯೇ–ತು ಕೇಚಿದೃಷಯಃ ಸ್ವಪ್ರತಿಭಯಾಽನ್ಯತಃ ಶ್ರವಣೇನ ಚ ಹರಿಂ ಜ್ಞಾತ್ವಾ ಆತ್ಮನಾ ಮನಸಾ ಆತ್ಮನಿ ಹೃದಯೇ ಆತ್ಮಾನಂ ಪರಮಾತ್ಮಾನಂ ಧ್ಯಾನೇನ ಪಶ್ಯಂತಿ । ಸಾಕ್ಷಾತ್ಕುರ್ವಂತಿ । ಕೇಚಿದಿತ್ಯುಕ್ತ್ಯಾಽನ್ಯೇ ನಾರದಾದ್ಯಾಃ ಋಷಯಸ್ತು ಬಹಿರಪಿ ಪಶ್ಯಂತಿ ಇತಿ ಸೂಚಿತಮ್ । 'ಕೇಚಿದೃಷಯೋ ನಾರದಾದ್ಯಾ ಬಹಿಸ್ತ್ವಪಿ' ಇತಿ ಸ್ಮೃತೇಃ । 'ಋಷಯೋಽಂತಃಪ್ರಕಾಶಾ' ಇತಿ ಸೂತ್ರಭಾಷ್ಯೋಕ್ತಶ್ರುತಿಸ್ತು ನಾರದಾದ್ಯನ್ಯವಿಷಯೇತಿ ಜ್ಞಾತವ್ಯಮ್ । ಅನ್ಯೇ ದೇವಾಸ್ತು ಸಾಂಖ್ಯೇನ ಯೋಗೇನ ಸ್ವಪ್ರತಿಭಾಖ್ಯ ಜ್ಞಾನರೂಪೋಪಾಯೇನ ಧ್ಯಾನೇನ ವಿನೈವ ವಿಷ್ಣು-ಪ್ರಸಾದಲಬ್ಧಸ್ವಪ್ರತಿಭಾಖ್ಯಜ್ಞಾನೇನ ಬಹಿರಂತಶ್ಚ ವಿಷ್ಣುಂ ಪಶ್ಯಂತೀತ್ಯರ್ಥಃ । ಅಪರೇ ಕ್ಷತ್ರಿಯವರಾ ರಾಜಾನಃ ಕರ್ಮಯೋಗೇನಾಶ್ವಮೇಧಾದಿ ಕರ್ಮ-ರೂಪೋಪಾಯೇನ ಶ್ರವಣೇನ ಸ್ವಪ್ರತಿಭಯಾ ಚ ನಿತ್ಯಂ ಭಗವಂತಂ ಸ್ಮರಂತೋಽ-ಶ್ವಮೇಧಾದಿ ಯಜ್ಞಕರ್ಮಕಾಲೇ ಯಜ್ಞಭಾಗಾರ್ಥಮಾಗತಮಾತ್ಮಾನಂ ಪಶ್ಯಂತೀ-ತ್ಯರ್ಥಃ । ಶ್ರವಣಪ್ರತಿಭಯೋರಲ್ಪತ್ವಾದತ್ರಾನುಕ್ತಿಃ ॥ 25 ॥**

**ಅನುವಾದ**- ಗೀತಾತಾತ್ಪರ್ಯದಲ್ಲಿ (ಬೇರೆ ಅರ್ಥವನ್ನು ಹೀಗೆ ಹೇಳಿದೆ) ಕೆಲವು ಋಷಿಗಳು ತಮ್ಮ ಪ್ರತಿಭೆಯಿಂದ ಹಾಗೂ ಬೇರೆಯವರಿಂದ ಶ್ರವಣ ಮಾಡಿಯೂ ಹರಿಯನ್ನು ತಿಳಿದು, **ಆತ್ಮನಾ**= ಮನಸ್ಸಿನಿಂದ **ಆತ್ಮನಿ**= ಹೃದಯದಲ್ಲಿ **ಆತ್ಮಾನಂ**= ಪರಮಾತ್ಮನನ್ನು ಧ್ಯಾನದಿಂದ **ಪಶ್ಯಂತಿ**= ಸಾಕ್ಷಾತ್ಕರಿಸಿಕೊಳ್ಳುತ್ತಾರೆ. **ಕೇಚಿತ್** (ಕೆಲವರು) ಎಂದಿರುವದರಿಂದ ಬೇರೆ ನಾರದಾದಿ ಋಷಿಗಳು ಹೃದಯದಿಂದ ಹೊರಗೂ ನೋಡುತ್ತಾರೆ ಎಂದು ಸೂಚಿತವಾಗಿದೆ. 'ನಾರದಾದಿ ಕೆಲವು ಋಷಿಗಳು ಹೊರಗೂ ಕೂಡಾ ಕಾಣುತ್ತಾರೆ' ಎಂದು ಸ್ಮೃತಿಯಿರುವುದರಿಂದ. '**ಋಷಯೋಽಂತಃಪ್ರಕಾಶಾಃ**' 'ಋಷಿಗಳು ಹೃದಯದೊಳಗೆ ನೋಡುವವರು' ಎಂಬ ಬ್ರಹ್ಮ ಸೂತ್ರಭಾಷ್ಯದಲ್ಲಿ ಹೇಳಿದ ಶ್ರುತಿಯಾದರೋ ನಾರದಾದಿ ಕೆಲವು ಋಷಿಗಳನ್ನು ಹೊರತುಪಡಿಸಿ ಉಳಿದ ಋಷಿಗಳ ಬಗ್ಗೆಯೆಂದು ತಿಳಿಯಬೇಕು. **ಅನ್ಯೇ**= ದೇವತೆಗಳು, **ಸಾಂಖ್ಯೇನ ಯೋಗೇನ**= ತನ್ನ ಪ್ರತಿಭೆಯೆಂಬ ಜ್ಞಾನೋಪಾಯದಿಂದ ಧ್ಯಾನವಿಲ್ಲದೆಯೇ ವಿಷ್ಣುಪ್ರಸಾದ ದಿಂದ ಲಬ್ಧವಾದ ತಮ್ಮ ಪ್ರತಿಭೆಯೆಂಬ ಜ್ಞಾನಬಲದಿಂದ ದೇಹದ ಒಳಗೂ ಹೊರಗೂ ವಿಷ್ಣುವನ್ನು ಕಾಣುತ್ತಾರೆ ಎಂದರ್ಥ. **ಅಪರೇ**= ಕ್ಷತ್ರಿಯ ಶ್ರೇಷ್ಠರಾದ ರಾಜರುಗಳು, **ಕರ್ಮಯೋಗೇನ**= ಅಶ್ವಮೇಧಾದಿ ಕರ್ಮವೆಂಬ ಸಾಧನದಿಂದ, ಶ್ರವಣದಿಂದ ಹಾಗೂ ಸ್ವಪ್ರತಿಭಾಬಲದಿಂದ ನಿತ್ಯವೂ ಭಗವಂತನನ್ನು ಸ್ಮರಿಸುತ್ತಾ ಅಶ್ವಮೇಧಾದಿಯಜ್ಞ-

ಕರ್ಮಾನುಷ್ಠಾನದ ಕಾಲದಲ್ಲಿ ಯಜ್ಞಭಾಗದ ಸ್ವೀಕಾರಕ್ಕಾಗಿ ಬಂದ ಪರಮಾತ್ಮನನ್ನು ಕಾಣುತ್ತಾರೆಂದರ್ಥ. ಈ ರಾಜರಿಗೆ ಶ್ರವಣ ಮತ್ತು ಪ್ರತಿಭೆ ಅಲ್ಪವಾದ ಸಾಧನವಾದ್ದರಿಂದ (ಗೀತೆಯಲ್ಲಿ) ಅದನ್ನು ಹೇಳಿಲ್ಲ. ॥ 25 ॥

**ಅನ್ಯೇ ತ್ವೇವಮಜಾನಂತಃ ಶ್ರುತ್ವಾಽನ್ಯೇಭ್ಯ ಉಪಾಸತೇ ।**
**ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ 26 ॥**

**ಅರ್ಥ–** ಇನ್ನೂ ಕೆಲವರು ಹಿಂದೆ ಹೇಳಿದಂತೆ ದೇವರನ್ನು ತಿಳಿಯಲು ಅಸಮರ್ಥರಾಗಿದ್ದು ತಿಳಿದವರಿಂದ ಶ್ರವಣ ಮಾಡಿ ಧ್ಯಾನೋಪಾಸನೆಗೈಯುತ್ತಾರೆ. ಅವರೂ ಕೂಡ ಬಹುವಾಗಿ ಶ್ರವಣ ಮಾಡುತ್ತಾ ಮೃತ್ಯುವನ್ನು ದಾಟಿಯೇ ದಾಟುತ್ತಾರೆ.

**ಅನ್ಯೇ ತು ಮನುಷ್ಯಾಸ್ತು ಏವಂ ಸ್ವಪ್ರತಿಭಾಬಲೇನಾತ್ಮಾನಮಜಾನಂತಃ ಅನ್ಯೇಭ್ಯಃ ಶ್ರುತ್ವಾ ಮತ್ವೇತ್ಯಪಿ ಗ್ರಾಹ್ಯಮ್ । ಉಪಾಸತೇ ಧ್ಯಾಯಂತಿ । ತತಃ ಪಶ್ಯಂತಿ ಚ । ತೇಽಪಿ ಚ ಅಲ್ಪತರಪ್ರತಿಭಾವಂತೋಽಪಿ ಶ್ರುತಿಪರಾಯಣಾಃ ಬಹು-ಶ್ರವಣವಂತಃ ಸಂತಃ ಮೃತ್ಯುಂ ಸಂಸಾರಂ ಅತಿತರಂತ್ಯೇವೇತ್ಯರ್ಥಃ ॥ 26 ॥**

**ಅನುವಾದ– ಅನ್ಯೇತು**= ಮನುಷ್ಯರಾದರೋ, **ಏವಂ**= ತಮ್ಮ ಪ್ರತಿಭಾಬಲದಿಂದ ಪರಮಾತ್ಮನನ್ನು ತಿಳಿಯದವರಾಗಿ ತಿಳಿದ ಬೇರೆಯವರಿಂದ ಕೇಳಿ ತಿಳಿದು ಎಂದೂ ಇಟ್ಟು ಕೊಳ್ಳಬೇಕು. **ಉಪಾಸತೇ**= ಧ್ಯಾನಿಸುತ್ತಾರೆ. ಅಮೇಲೆ ಸಾಕ್ಷಾತ್ಕಾರವನ್ನೂ ಪಡೆಯುತ್ತಾರೆ. **ತೇಽಪಿ ಚ**= ಅವರು ಅತ್ಯಲ್ಪವಾದ ಪ್ರತಿಭೆಯುಳ್ಳವರಾದರೂ ಶ್ರುತಿ, **ಪರಾಯಣಾಃ**= ತುಂಬ ಶ್ರವಣ ಮಾಡುವವರಾಗಿ, **ಮೃತ್ಯುಂ**= ಸಂಸಾರವನ್ನು ದಾಟಿಯೇ ದಾಟುತ್ತಾರೆಂದರ್ಥ. ॥ 26 ॥

**ವಿವರಣೆ–** ಎಲ್ಲರೂ ಒಂದೇ ಸಾಧನದಿಂದ ದೇವನನ್ನು ಕಾಣಲಾರರು. ಅನಾದಿಯಾದ ಯೋಗ್ಯತೆ ಅನಾದಿಯಿಂದ ಭಿನ್ನವಾಗಿದೆ. ಎಲ್ಲರಿಗೂ ಬೇಕಾದ ಅನಿವಾರ್ಯವಾದ ಸಾಧನ ಭಗವದನುಗ್ರಹ. ಕೆಲವರಿಗೆ ದೇಹದಲ್ಲಿ ಹೃದಯಗುಹೆಯಲ್ಲಿ ಮಾತ್ರ ದೇವದರ್ಶನವಾಗುವುದು. ಇನ್ನು ಕೆಲವರಿಗೆ ಹೊರಗೂ ದರ್ಶನ ಶಕ್ಯ. ಕೆಲವರಿಗೆ ಪ್ರತಿಭೆಯೆಂಬುದು ಸಾಧನ. ಈ ಪ್ರತಿಭೆಯಲ್ಲಿಯೂ ಸ್ಪಷ್ಟತೆ, ಅತಿಸ್ಪಷ್ಟತೆ. ಅತಿತರ ಸ್ಪಷ್ಟತೆ ಮೊದಲಾದ ತಾರತಮ್ಯವಿದೆ. ಬೇರೆಯವರಲ್ಲಿ ಶ್ರವಣ ಮಾಡದೇ ಒಳಗಿನಿಂದಲೇ ಹೊಳೆಯುವ ಶಕ್ತಿ ಪ್ರತಿಭೆ. ಇದು ಭಗವದನುಗ್ರಹದಿಂದ ದೇವತೆಗಳಿಗೆ ಪ್ರಾಪ್ತವಾಗುವಂಥದು. ಶ್ರುತಿ ಸ್ಮೃತಿಗಳನ್ನು ಓದದೇ ಉಂಟಾದ ಆದರೆ ಶ್ರುತಿಸ್ಮೃತಿಗಳ ಅರ್ಥಕ್ಕೆ ಸಂವಾದಿಯಾದ ಈ ಅಶ್ರುತಪ್ರತಿಭಾನವೇ ದೇವತೆಗಳಿಗೆ ಭಗವದ್ದರ್ಶನ ಸಾಧನವಾಗಿದೆ. ಈ ಪ್ರತಿಭಾಶಕ್ತಿಯಿಂದ ಇವರು ದೇಹದ ಒಳಗೂ

ಹೊರಗೂ ದೇವನನ್ನು ಕಾಣುವರು. ಚಕ್ರವರ್ತಿಗಳಿಗೆ ಅಶ್ವಮೇಧಾದಿಕರ್ಮಾನುಷ್ಠಾನವು ಭಗವದ್ದರ್ಶನಕ್ಕೆ ಮುಖ್ಯ ಸಾಧನ. ಈ ಚಕ್ರವರ್ತಿಗಳು ಶ್ರವಣ ಹಾಗೂ ದೈವದತ್ತ ಪ್ರತಿಭೆಯ ಬಲದಿಂದ ನಿತ್ಯ ಧ್ಯಾನಿಸುತ್ತಾರೆ. ಯಜ್ಞಕಾಲದಲ್ಲಿ ಮಂತ್ರದಿಂದ ಆಹೂತನಾಗಿ ಭಾಗಸ್ವೀಕಾರಕ್ಕೆ ಬಂದ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ಆದರೆ ಮನುಷ್ಯರಲ್ಲಿ ಉತ್ತಮರು ಪ್ರತಿಭೆಯಿಂದಲೇ ದೇವನನ್ನು ಕಾಣಲಾರರು. ಇವರು ಶ್ರವಣ ಮಾಡುತ್ತಾರೆ. ತಿಳಿದವರು ಇವರಿಗೆ ಹೇಳಿದರೇ ಇವರ ಉಪಾಸನೆ. ಕೇಳುವುದೇ ಇವರ ಜಾಯಮಾನ. ಕೇಳಿದಂತೆ ಚಿಂತಿಸಿ ಧ್ಯಾನಿಸುತ್ತಾರೆ. ಕೊನೆಗೊಮ್ಮೆ ಸಾಕ್ಷಾತ್ಕಾರವನ್ನೂ ಪಡೆದುಬಿಡುತ್ತಾರೆ. ಇವರ ಪ್ರತಿಭೆ ಅತ್ಯಲ್ಪ. ಶ್ರವಣ ಬಲು ದೊಡ್ಡದ್ದು. ಇವರೂ ಸಂಸಾರಸಾಗರವನ್ನು ಈಸುವುದರಲ್ಲಿ ಸಂಶಯವಿಲ್ಲ.

**ಯಾವತ್ಸಂಜಾಯತೇ ಕಿಂಚಿತ್ಸತ್ತ್ವಂ ಸ್ಥಾವರಜಂಗಮಮ್ ।**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ ತದ್ವಿದ್ಧಿ ಭರತರ್ಷಭ ॥ 27 ॥**

**ಅರ್ಥ**– ಭರತಶ್ರೇಷ್ಠ, ಸ್ಥಾವರ ಜಂಗಮವೆಂಬ ಜೀವಿಗಳೇನೇನು ಇವೆಯೋ ಅವೆಲ್ಲವೂ ಕ್ಷೇತ್ರ ಹಾಗೂ ಕ್ಷೇತ್ರಜ್ಞರ (ಚಿತ್ ಪ್ರಕೃತಿ–ಪರಮಾತ್ಮರ) ಸಂಯೋಗದಿಂದಲೇ ಜನಿಸಿವೆಯೆಂದು ತಿಳಿ.

**ಕಾರ್ಯೋಪಾದಾನತ್ವ ಪ್ರಕೃತ್ಯುಪಾದಾನಕದೇಹಯೋಗಿತ್ವಸರ್ವತ್ರಸಮತ್ವ-ರೂಪಧರ್ಮಯುಕ್ತತಯಾ ಪ್ರಕೃತಿಪುರುಷೇಶ್ವರಸ್ವರೂಪಂ ಪುನರಪ್ಯಾಹ-ಯಾವದಿತಿ ॥ ನ ಚಾಪ್ರತಿಜ್ಞಾತೋಕ್ತಿದೋಷಃ । ಪ್ರಕೃತಿಪುರುಷಧರ್ಮೋಕ್ತೇಃ 'ಯಾದೃಕ್ ಚ' ಇತ್ಯತ್ರೇಶ್ವರಧರ್ಮೋಕ್ತೇಶ್ಚ 'ಯತ್ಪ್ರಭಾವ' ಇತ್ಯತ್ರ ಪ್ರತಿಜ್ಞಾತೇಽಂತರ್ಭಾವಾತ್ । ಯಾವತ್ಸ್ಥಾವರಜಂಗಮಾತ್ಮಕಂ ಸತ್ತ್ವಂ ಜೀವ-ಜಾತಂ ತತ್ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ ಚಿತ್ಪ್ರಕೃತಿಪರಮಾತ್ಮನೋಃ ಸಂಯೋಗಾ-ಜ್ಜಾಯತೇ ಪ್ರಾದುರ್ಭವತೀತಿ ವಿದ್ಧಿ । ಯದ್ವಾ 'ಉಪದ್ರಷ್ಟಾ' ಇತ್ಯಾದಿನಾ ಸದಸದ್ಯೋನಿಜನ್ಮಸು ಭಗವಾನೇವ ಸ್ವತಂತ್ರಕಾರಣಮಿತಿ ಯದುಕ್ತಂ ತತ್ ಪ್ರಪಂಚಯತಿ- ಯಾವದಿತಿ ॥ ಉಕ್ತ ಏವಾರ್ಥಃ ॥ 27 ॥**

**ಅನುವಾದ**– ಕಾರ್ಯಗಳಿಗೆಲ್ಲ ಉಪಾದಾನವಾಗಿರುವಿಕೆ (ಪ್ರಕೃತಿಧರ್ಮ) ಪ್ರಕೃತಿಯು ಉಪಾದಾನವಾಗಿ ಉಳ್ಳ ದೇಹ ಸಂಬಂಧವಿರುವಿಕೆ (ಜೀವಧರ್ಮ) ಎಲ್ಲೆಡೆ ಸಮವಾಗಿರುವಿಕೆ (ಈಶ್ವರಧರ್ಮ)ಯೆಂಬ ಧರ್ಮಗಳಿಂದ ಯುಕ್ತವಾಗಿರುವ ಪ್ರಕೃತಿ, ಜೀವ, ಈಶ್ವರ ಸ್ವರೂಪವನ್ನು ಇನ್ನೂ ಹೇಳುತ್ತಿದ್ದಾನೆ. 'ಯಾವತ್' ಎಂಬ ಶ್ಲೋಕದಿಂದ. ಹೇಳುತ್ತೇನೆ ಎಂದು ಪ್ರತಿಜ್ಞೆ ಮಾಡದಿರುವುದನ್ನು ಹೇಳುತ್ತಿರುವುದಾಗಿ ದೋಷವಿಲ್ಲ. ಪ್ರತಿಜ್ಞಾತವಾದ **ಯಾದೃಕ್ ಚ**=

ಪ್ರೇರ್ಯವಾದ ಕ್ಷೇತ್ರವು ಯಾವ ರೀತಿಯದು ? (ಶ್ಲೋಕ. 4) ಎಂಬಲ್ಲಿ ಪ್ರಕೃತಿ ಧರ್ಮ ಹಾಗೂ ಜೀವಧರ್ಮದ ಉಕ್ತಿಯು , **ಯತ್ ಪ್ರಭಾವಃ**= ಪ್ರೇರಕನ ಪ್ರಭಾವವೆಂಥಹುದು ? ಎಂಬಲ್ಲಿ ಈಶ್ವರಧರ್ಮದ ಉಕ್ತಿಯೂ ಸೇರಿಬಿಟ್ಟಿದೆ.

**ಶ್ಲೋಕಾರ್ಥ-** ಸ್ಥಾವರ (ಅಚರ) ಜಂಗಮ(ಚರ)ಎನಿಸಿದ ಯಾವ ಯಾವ, **ಸತ್ವಂ**= ಜೀವ ಜಾತವಿದೆಯೋ ಅವೆಲ್ಲಾ ಕ್ಷೇತ್ರಕ್ಷೇತ್ರಜ್ಞ , **ಸಂಯೋಗಾತ್**= ಚಿತ್‌ಪ್ರಕೃತಿ ಹಾಗೂ ಪರಮಾತ್ಮನ ಸಂಯೋಗದಿಂದ, **ಜಾಯತೇ**= ಆವಿರ್ಭವಿಸುತ್ತದೆಯೆಂದು ತಿಳಿ. ಅಥವಾ (ಇನ್ನೊಂದು ರೀತಿಯ ಅವತರಣಿಕೆ) '**ಉಪದ್ರಷ್ಟಾನು ಮಂತಾ ಚ**' (ಶ್ಲೋಕ. 23) ಎಂಬಿತ್ಯಾದಿ ಯಾಗಿ ಮೇಲು ಕೀಳು ಯೋನಿಗಳಲ್ಲಿ ಜನ್ಮವೆತ್ತಲು ಭಗವಂತನೇ ಸ್ವತಂತ್ರಕಾರಣನೆಂದು ಹೇಳಿದುದನ್ನು ವಿವರಿಸುತ್ತಿದ್ದಾನೆ- '**ಯಾವತ್**' ಎಂಬ ಈ ಶ್ಲೋಕದಿಂದ. ಅರ್ಥ ಹಿಂದೆ ಹೇಳಿದುದೇ. ॥ 27 ॥

**ವಿವರಣೆ-** ಜಗವೆಲ್ಲವು ಕ್ಷೇತ್ರ-ಕ್ಷೇತ್ರಜ್ಞರ ಸಂಯೋಗದಿಂದ ಆವಿರ್ಭವಿಸಿದೆ. ಇಲ್ಲಿ ಕ್ಷೇತ್ರ ವೆಂದರೆ ಶ್ರೀದೇವಿ. '**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್**'ನನ್ನ ಪತ್ನಿ ಶ್ರೀದೇವಿ- ಅವಳಲ್ಲಿ ನಾನು ಗರ್ಭವನ್ನಿಡುವೆನು ಎಂದು ಕಷ್ಣನ ಮಾತು ಮುಂದೆ ಬರಲಿದೆ. ಅವಳಲ್ಲಿ ವಿಷ್ಣು ಇರುವುದರಿಂದಲೇ ಅವಳಿಗೆ ಕ್ಷೇತ್ರವೆಂಬ ಹೆಸರು. '**ವಿಷ್ಣುರತ್ರ ಕ್ಷಿಯತೀತಿ ಕ್ಷೇತ್ರಮ್**' **ಕ್ಷಿ- ನಿವಾಸಗತ್ಯೋಃ** ಎಂಬ ಧಾತುವಿನ ರೂಪವಿದು. ಕ್ಷೇತ್ರವೆಂದರೆ ವಿಷ್ಣುವಿನ ವಾಸದ ಮನೆ. ಅದು ಶ್ರೀದೇವಿ.

ಆದ್ದರಿಂದ ಕ್ಷೇತ್ರಕ್ಷೇತ್ರಜ್ಞರ ಸಂಯೋಗವೆಂದರೆ ಲಕ್ಷ್ಮೀನಾರಾಯಣ ಸಂಯೋಗ. ಪ್ರಕೃತಿ-ಪುರುಷಸಂಯೋಗ. ಅದೇ ಎಲ್ಲಾ ಸೃಷ್ಟಿಗೆ ಮೂಲಹೇತು.

**ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ ।**
**ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ 28 ॥**

**ಅರ್ಥ-** ಸರ್ವಸಮರ್ಥನಾದ ಶ್ರೀಹರಿಯನ್ನು ಸರ್ವಪ್ರಾಣಿಗಳಲ್ಲೂ ಸಮನೆಂದೂ ವಿನಾಶಿಗಳಲ್ಲಿ ನೆಲೆನಿಂತೂ ಅವಿನಾಶಿಯೆಂದೂ ಯಾರು ತಿಳಿಯುವನೋ ಅವನೇ ತಿಳಿದವನು.

**'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು' ಇತಿ ಹರೇಃ ಸರ್ವಶರೀರಸ್ಥತ್ವಂ ಯದುಕ್ತಂ ತದಯುಕ್ತಮ್ । ತಥಾತ್ವೇಽಧಿಷ್ಠಾನತಾರತಮ್ಯಾತ್ತಾರತಮ್ಯಮ್, ದುಃಖಿಸಹಾವಸ್ಥಾನಾದ್ ದುಃಖಂ ಚ ಸ್ಯಾದಿತ್ಯತ ಆಹ- ಸಮಮಿತಿ ॥ ಸರ್ವೇಷು ತಾರತಮ್ಯೋಪೇತೇಷು ಪ್ರಾಣಿಷು ತಿಷ್ಠಂತಂ ಪರಮೇಶ್ವರಮ್ ಅಚಿಂತ್ಯಶಕ್ತಿಕಂ**

**ಹರಿಂ ಸಮಂ ನ್ಯೂನಾಧಿಕಹೀನಂ ಸರ್ವತ್ರಾಶೇಷಸದ್ಗುಣೋಪೇತಮ್, ಏವಂ ಯಃ ಪಶ್ಯತಿ । ವಿನಶ್ಯತ್ಸು ಸುಖ ದುಃಖಜನಿಮೃತ್ಯಾದಿದೋಷವತ್ಸು ಭೂತೇಷು ತಿಷ್ಠಂತಂ ಅವಿನಶ್ಯಂತಂ ದುಃಖಾದಿದೋಷಹೀನಂ ಯಃ ಪಶ್ಯತಿ ಸ ಪಶ್ಯತಿ । ಸ ಏವ ಯಥಾರ್ಥಜ್ಞಾನವಾನಿತ್ಯರ್ಥಃ ॥ 28 ॥**

**ಅನುವಾದ**- **'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು'**- ಸರ್ವಕ್ಷೇತ್ರಗಳಲ್ಲೂ ನೆಲೆನಿಂತು ತಿಳಿದಿರುವ ಕ್ಷೇತ್ರಜ್ಞನು ನಾನೇ ಎಂದು ತಿಳಿ' ಎಂದು ಶ್ರೀಹರಿಗೆ ಸರ್ವಶರೀರದಲ್ಲಿ ಸ್ಥಿತಿಯು ಏನೊಂದು ಹೇಳಲ್ಪಟ್ಟಿದೆ ಅದು ಸರಿಯಲ್ಲ. ಅವನು ಎಲ್ಲ ಶರೀರದಲ್ಲಿದ್ದರೆ ಅವನಿರುವ ಅಧಿಷ್ಠಾನಗಳ ಮೇಲು ಕೀಳುಗಳಿಂದ ಅವನಿಗೂ ತಾರತಮ್ಯವೂ ದುಃಖಿಗಳ ಜೊತೆಗಿನ ಸ್ಥಿತಿಯಿಂದ ದುಃಖವೂ ಉಂಟಾಗಬೇಕಾದೀತು ಎಂಬ ಶಂಕೆಗೆ ಸಮಾಧಾನಿಸುತ್ತಿದ್ದಾನೆ- **'ಸಮಂ ಸರ್ವೇಷು'** ಎಂಬ ಶ್ಲೋಕದಲ್ಲಿ. **ಸರ್ವೇಷು**= ತಾರತಮ್ಯದಿಂದ ಕೂಡಿರುವ ಪ್ರಾಣಿಗಳಲ್ಲಿ ಸ್ಥಿತನಾಗಿರುವ **ಪರಮೇಶ್ವರಂ**= ಅಚಿಂತ್ಯಶಕ್ತಿಯುಳ್ಳ ಶ್ರೀಹರಿಯನ್ನು, **ಸಮಂ**= ನ್ಯೂನತೆ ಆಧಿಕ್ಯ ಇಲ್ಲದವನನ್ನಾಗಿ ಅಂದರೆ ಎಲ್ಲೆಡೆ ಸರ್ವಗುಣಸಂಪನ್ನನನ್ನಾಗಿ ಯಾರು ಕಾಣುತ್ತಾನೋ ಅಲ್ಲದೇ **ವಿನಶ್ಯತ್ಸು** = ಸುಖ-ದುಃಖ, ಹುಟ್ಟು-ಸಾವು ಮೊದಲಾದ ದೋಷವುಳ್ಳ ಪ್ರಾಣಿಗಳಲ್ಲಿ ಇರುತ್ತಾ, **ಅವಿನಶ್ಯಂತಂ**= ದುಃಖ ಮೊದಲಾದ ದೋಷವಿಲ್ಲದವನನ್ನಾಗಿ ಯಾರು ತಿಳಿಯುತ್ತಾನೋ ಅವನು, **ಪಶ್ಯತಿ**= ಕಾಣುತ್ತಾನೆ. ಅವನೇ ಯಥಾರ್ಥಜ್ಞಾನವುಳ್ಳವನೆಂದರ್ಥ. ॥ 28 ॥

**ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।**
**ನ ಹಿನಸ್ತ್ಯಾತ್ಮನಾಽಽತ್ಮಾನಂ ತತೋ ಯಾತಿ ಪರಾಂ ಗತಿಮ್ ॥ 29 ॥**

**ಅರ್ಥ**- (ಅಂತಹ ಜ್ಞಾನಿಯು) ಎಲ್ಲೆಡೆ ನೆಲೆನಿಂತಿರುವ ಈಶ್ವರನನ್ನು ಎಲ್ಲೆಲ್ಲೂ ಏಕಪ್ರಕಾರನನ್ನಾಗಿ ತಿಳಿಯುತ್ತಾ ಸ್ವಬುದ್ಧಿಯಿಂದ ತನ್ನನ್ನು ಅಧೋಗತಿಗಿಳಿಸುವುದಿಲ್ಲ. ಜ್ಞಾನದ ಬಲದಿಂದ ಪರಗತಿಯನ್ನೈದುವನು.

**ಸಾಮ್ಯಾದಿಜ್ಞಾನಸ್ಯ ಫಲಮಾಹ- ಸಮಮಿತಿ ॥ ಸರ್ವತ್ರ ಸಮವಸ್ಥಿತಂ ನಿರ್ದೋಷಾಶೇಷಸದ್ಗುಣತಯಾ ಸಮ್ಯಗವಸ್ಥಿತಂ ಈಶ್ವರಂ ಸಮಂ ಸರ್ವತ್ರ ನಿರ್ದೋಷಾಶೇಷಸದ್ಗುಣತಯೈಕಪ್ರಕಾರಮ್ 'ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ' (2-3-11) ಇತಿ ಸೂತ್ರೋಕ್ತದಿಶಾ ಪಶ್ಯನ್ ಆತ್ಮನಾ ಬುದ್ಧ್ಯಾ ಆತ್ಮಾನಂ ಸ್ವಾತ್ಮಾನಂ ಚ ನ ಹಿನಸ್ತಿ ನರಕೇ ನ ಪಾತಯತಿ । ತತೋ ಜ್ಞಾನಾತ್ಪರಾಂ ಗತಿಂ ಮುಕ್ತಿಂ ಚ ಯಾತೀತ್ಯರ್ಥಃ ॥ 29 ॥**

**ಅನುವಾದ-** ದೇವನು ಎಲ್ಲೆಡೆ ಸಮನಾಗಿದ್ದಾನೆ ಇತ್ಯಾದಿ ಜ್ಞಾನದ ಫಲವನ್ನು ಹೇಳುತ್ತಿದ್ದಾನೆ. **'ಸಮಂ...'** ಎಂಬ ಈ ಶ್ಲೋಕದಿಂದ. ಸರ್ವತ್ರ **ಸಮವಸ್ಥಿತಂ**= ಎಲ್ಲೆಡೆ ದೋಷರಹಿತನಾಗಿ ಸದ್ಗುಣಭರಿತನಾಗಿ ಚೆನ್ನಾಗಿ ಸ್ಥಿತನಾಗಿರುವ ಈಶ್ವರನನ್ನು, **ಸಮಂ ಸರ್ವತ್ರ**= ಎಲ್ಲೆಡೆ ನಿರ್ದೋಷಾಶೇಷ ಸದ್ಗುಣನಾಗಿಯೇ ಇರುವನೆಂದು ಏಕಪ್ರಕಾರನೆಂದು **ನ ಸ್ಥಾನತೋಽಪಿ ಪರಸ್ಯ ಉಭಯ ಲಿಂಗಂ ಸರ್ವತ್ರ ಹಿ** (2-2-11) ಎಂಬ ಸೂತ್ರದಲ್ಲಿ ಹೇಳಿದಂತೆ ಕಾಣುತ್ತಾ, **ಆತ್ಮನಾ**= ಬುದ್ಧಿಯಿಂದ, **ಆತ್ಮಾನಂ**= ಸ್ವಾತ್ಮನನ್ನು , **ನ ಹಿನಸ್ತಿ**= ನರಕದಲ್ಲಿ ಬೀಳಿಸಿಕೊಳ್ಳುವುದಿಲ್ಲ. **ತತಃ**= ಜ್ಞಾನದಿಂದ, **ಪರಾಂ ಗತಿಂ**= ಮುಕ್ತಿಯನ್ನೂ ಕೂಡ ಹೊಂದುತ್ತಾನೆ ಎಂದರ್ಥ. ॥ 29 ॥

**ವಿವರಣೆ-** 'ನಸ್ಥಾನತೋಽಪಿ ....' ಎಂಬ ಅಧಿಕರಣ ಭಗವಂತನ ಎಲ್ಲ ರೂಪಗಳಿಗೂ ಅಭೇದವನ್ನು ಸಾರಿದೆ. **'ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೇ'** 'ಏಕೋ ದೇವಃ ಸರ್ವಭೂತೇಷು ಗೂಢಃ' ಅಮಾತ್ರೋಽನಂತಮಾತ್ರಶ್ಚ' ಇತ್ಯಾದಿ ಶ್ರುತಿಗಳು ಎಲ್ಲೆಡೆ ಇರುವ ದೇವನಿಗೆ ಭೇದವಿಲ್ಲವೆಂದಿವೆ. ದಕ್ಷಿಣಾಕ್ಷಿ ಕಂಠ ಮೊದಲಾದೆಡೆ ಇರುವ ರೂಪಗಳಿಗೂ ಹೃದಯದಲ್ಲಿರುವ ಪ್ರಾಜ್ಞನಿಗೂ ಸ್ಥಾನಭೇದ ನಿಮಿತ್ತವಾಗಿಯೂ ಭೇದವಿಲ್ಲ. **ಪರಸ್ಯ**= ಬ್ರಹ್ಮನಿಗೆ **ಸ್ಥಾನತೋಽಪಿ**= ಸ್ಥಾನಭೇದನಿಮಿತ್ತವಾಗಿಯೂ, **ಉಭಯಲಿಂಗಂ**= ಭಿನ್ನರೂಪವು, **ನ**= ಇರುವುದಿಲ್ಲ. **ಸರ್ವತ್ರ**= ಎಲ್ಲೆಡೆ ಏಕರೂಪದವ. **ಹಿ**= ಇದು ಶ್ರುತ್ಯಾದಿಪ್ರಮಾಣಸಿದ್ಧ.

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾऽತ್ಮಾನಮಕರ್ತಾರಂ ಸ ಪಶ್ಯತಿ ॥ 30 ॥**

**ಅರ್ಥ-** ಜೀವನ ಪೂರ್ವಕರ್ಮಗಳನ್ನು ಉದ್ಬೋಧಿಸಿ ಅವುಗಳಿಗನುಸಾರವಾಗಿ ಎಲ್ಲ ಕರ್ಮಗಳನ್ನೂ ದೇವನೇ ಮಾಡುವನೆಂದೂ ಅವನಿಗೆ ಮತ್ತೊಬ್ಬ ಕರ್ತಾರನಿಲ್ಲವೆಂದೂ ಯಾರು ಕಾಣುವನೋ ಅವನು ಜ್ಞಾನಿ. ಅಥವಾ ಪ್ರಕೃತಿಯನ್ನು ನಿಮಿತ್ತವಾಗಿಟ್ಟುಕೊಂಡು ಪರಮಾತ್ಮನಿಂದ ಎಲ್ಲ ಕರ್ಮಗಳು ನಡೆಯುವವೆಂದೂ ತಾನು (ಜೀವ) ಕರ್ತೃತ್ವವಿಷಯದಲ್ಲಿ ಅಸ್ವತಂತ್ರ ನೆಂದೂ ತಿಳಿದವ. ದೇವನನ್ನು ಸಾಕ್ಷಾತ್ ಕಾಣಬಲ್ಲವ.

**ನನ್ವೀಶ್ವರಃ ಕರ್ಮಾನಪೇಕ್ಷಯೈವ 'ಉಪದ್ರಷ್ಟಾ' ಇತ್ಯತ್ರೋಕ್ತದಿಶಾ ಯದಿ ಸದಸದ್ಯೋನಿಜನ್ಮಸು ಸ್ವತಂತ್ರಕಾರಣಮ್, ತರ್ಹಿ ತಸ್ಯ ವೈಷಮ್ಯಾದಿದೋಷಃ ಸ್ಯಾತ್ । ಕರ್ಮಾಪೇಕ್ಷಿತಾಯಾಂ ಸ್ವಾತಂತ್ರ್ಯಪ್ರಚ್ಯುತಿಸ್ತಸ್ಯ ಸ್ಯಾತ್ । ತಸ್ಯಾಪಿ ಕರ್ತ್ರಂತರಸತ್ತ್ವಾಚ್ಚ ಸ್ವಾತಂತ್ರ್ಯಹಾನಿರೇವೇತ್ಯತ ಆಹ- ಪ್ರಕೃತ್ಯೇತಿ ॥ ಲ್ಯಬಂತಮೇತತ್ । ಚ ಶಬ್ದಾತ್ಪೂರ್ವಪ್ರಕೃತೇಶ್ವರೋಽನುಷಜ್ಯತೇ । ಈಶ್ವರೇಣೈವ**

**ಪ್ರಕೃತ್ಯ ಪೂರ್ವತನಂ ಜೀವಕರ್ಮ ಉದ್ಬೋಧ್ಯ ತದನುಸೃತ್ಯ ಕ್ರಿಯಮಾಣಾನಿ ಸರ್ವಕರ್ಮಾಣಿ ಯಃ ಪಶ್ಯತಿ । ತಥಾ ಸ್ವಾತ್ಮಾನಂ ಚಾಕರ್ತಾರಂ ಅಸ್ವತನ್ತ್ರಂ ಚ ಯಃ ಪಶ್ಯತಿ ಸ ಪಶ್ಯತಿ ಪರಮೇಶ್ವರಮಿತ್ಯರ್ಥಃ ।**

**ಅನುವಾದ-** ಒಂದು ಆಕ್ಷೇಪ. ಈಶ್ವರನು ಜೀವಕರ್ಮವನ್ನು ಅಪೇಕ್ಷಿಸದೆ ಉಪದ್ರಷ್ಟಾ (ಶ್ಲೋ.23) ಎಂಬಲ್ಲಿ ಹೇಳಿದಂತೆ ಶುಭಾಶುಭಯೋನಿಗಳಲ್ಲಿ ಜನ್ಮಕ್ಕೆ ಸ್ವತಂತ್ರಕಾರಣ-ನಾಗುವುದಾದರೆ ಅವನಿಗೆ ಪಕ್ಷಪಾತ ಮುಂತಾದ ದೋಷವುಂಟಾಗುತ್ತದೆ. ಕರ್ಮವನ್ನು ಅಪೇಕ್ಷಿಸುತ್ತಾನೆಂದಾದರೆ ಅವನ ಸ್ವಾತಂತ್ರ್ಯಕ್ಕೆ ಧಕ್ಕೆಯುಂಟಾಗುತ್ತದೆ. ಅಲ್ಲದೇ ಅವನಿಗೂ ಬೇರೆ ಕರ್ತೃಗಳು ಇರುವುದರಿಂದ ಸ್ವಾತಂತ್ರ್ಯಹಾನಿ ಇದ್ದೇ ಇದೆ.

ಈ ಆಕ್ಷೇಪಕ್ಕೆ ಸಮಾಧಾನ- 'ಪ್ರಕೃತ್ಯೈವ' ಎಂಬ ಶ್ಲೋಕದಲ್ಲಿದೆ. ಪ್ರಕೃತ್ಯ ಎಂಬುದು ಲ್ಯಪ್ ಪ್ರತ್ಯಯಾಂತ ಅವ್ಯಯ. 'ಚ'ಶಬ್ದದಿಂದ ಪೂರ್ವದಲ್ಲಿ ಪ್ರಕೃತನಾಗಿದ್ದ ಈಶ್ವರನನ್ನು ಇಟ್ಟುಕೊಳ್ಳಬೇಕು. ಈಶ್ವರನಿಂದಲೇ, ಪ್ರಕೃತ್ಯ= ಪೂರ್ವತನವಾದ ಜೀವನ ಕರ್ಮಗಳನ್ನು ಉದ್ಬೋಧಗೊಳಿಸಿ ಅದಕ್ಕೆ ಅನುಸಾರವಾಗಿ ಮಾಡಲ್ಪಡುವ ಎಲ್ಲಾ ಕರ್ಮಗಳನ್ನು ಯಾರು ತಿಳಿಯುತ್ತಾನೋ. ಹಾಗೆಯೇ, **ಆತ್ಮಾನಂ**= ಪರಮಾತ್ಮನನ್ನು , **ಅಕರ್ತಾರಂ**= ಕರ್ತೃಹೀನನೆಂದೂ ಯಾರು ತಿಳಿಯುವನೋ ಅವನು ಪರಮೇಶ್ವರನ ದರ್ಶನವನ್ನು ಪಡೆಯಬಲ್ಲ ಎಂದರ್ಥ.

**ಯದ್ವಾ 'ಉಪದ್ರಷ್ಟಾ' ಇತ್ಯತ್ರೋಕ್ತಭವತ್‌ಸ್ವಾತಂತ್ರ್ಯಜ್ಞಾನಸ್ಯ ಫಲಮಾಹ- ಪ್ರಕೃತ್ಯೇತಿ ॥ ತೃತೀಯಾಂತಮಿದಮ್ । ಚಶಬ್ದಾತ್‌ಪ್ರಕೃತೇಶ್ವರೇಣ ಕರ್ತ್ರಾ ಪ್ರಕೃತ್ಯಾ ನಿಮಿತ್ತಭೂತಯಾ ಕ್ರಿಯಮಾಣಾನಿ ಸರ್ವಶಃ ಕರ್ತಾ ಯಃ ಪಶ್ಯತಿ । ತಥಾ ಸ್ವಾತ್ಮಾನಂ ಚಾಕರ್ತಾರಂ ಅಸ್ವತಂತ್ರಂ ಚ ಯಃ ಪಶ್ಯತಿ ಸ ಪಶ್ಯತಿ ಹರಿ-ಮಿತ್ಯರ್ಥಃ । ತಥಾ ಚ ಸೂತ್ರಮ್- 'ಓಂ ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್ ಓಂ'(2-3-42) ಇತಿ । ಕರ್ತೃರಾಹಿತ್ಯಾತ್ ಸ್ವಾತಂತ್ರ್ಯಮ್ । ಸ್ವಾಧೀನಸತ್ತಾಕತತ್ತದೀಯಪೂರ್ವಕರ್ಮಾಪೇಕ್ಷ್ಯ ಸರ್ವಂ ಕರೋತೀತಿ ನ ವೈಷಮ್ಯಾದಿದೋಷ ಇತಿ ಭಾವಃ । ತದುಕ್ತಂ 'ಓಂ ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ ಓಂ' (2-1-35) ಇತಿ ॥ 30 ॥**

**ಅನುವಾದ-** ಅಥವಾ (ಹೀಗೂ ವ್ಯಾಖ್ಯಾನಿಸಬಹುದು) ಉಪದ್ರಷ್ಟಾ (ಶ್ಲೋಕ-23) ಎಂಬಲ್ಲಿ ಹೇಳಿದ ಭಗವತ್‌ಸ್ವಾತಂತ್ರ್ಯವನ್ನು ತಿಳಿಯುವುದಕ್ಕೆ ಫಲವನ್ನು ಹೇಳುತ್ತಿದ್ದಾನೆ. ಪ್ರಕೃತ್ಯಾ ಎಂಬುದಾಗಿ. ಪ್ರಕೃತ್ಯಾ ಎಂಬುದು ತೃತೀಯಾವಿಭಕ್ತ್ಯಂತ ಪದ. 'ಚ' ಶಬ್ದದಿಂದ ಪ್ರಕೃತನಾದ

ಈಶ್ವರನೆಂಬ ಕರ್ತೃವಿನಿಂದ ನಿಮಿತ್ತವಾದ , **ಪ್ರಕೃತ್ಯಾ**= ಪ್ರಕೃತಿಯಿಂದ ಮಾಡಲ್ಪಡತಕ್ಕವೆಂದು ಎಲ್ಲಾ ಕರ್ಮಗಳನ್ನು ಯಾರು ತಿಳಿಯುವನೋ ಹಾಗೆಯೇ **ಆತ್ಮಾನಂ**= ತನ್ನನ್ನು , **ಅಕರ್ತಾರಂ**= ಅಸ್ವತಂತ್ರನೆಂದು ಯಾರು ತಿಳಿಯುತ್ತಾನೋ ಅವನು ಹರಿಯನ್ನು ಸಾಕ್ಷಾತ್ಕರಿಸಿಕೊಳ್ಳುವನೆಂದರ್ಥ. ಬ್ರಹ್ಮಸೂತ್ರವೂ ಹೀಗೆಂದಿದೆ. '**ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್** ' (3.2.42) ಎಂದು. ಕರ್ತೃವಿಲ್ಲವಾದುದರಿಂದ ಹರಿಗೆ ಸ್ವಾತಂತ್ರ್ಯ. ತನ್ನ ಅಧೀನವಾಗಿಯೇ ಇರುವ ಆಯಾಯಾ ಜೀವಕರ್ಮಗಳನ್ನು ಅಪೇಕ್ಷಿಸಿ ಎಲ್ಲವನ್ನೂ ಮಾಡುವುದರಿಂದ ವೈಷಮ್ಯಾದಿದೋಷ (ಪಕ್ಷಪಾತಾದಿದೋಷ) ವಿಲ್ಲ ಎಂದು ಅಭಿಪ್ರಾಯ. ಅದೂ ಸೂತ್ರೋಕ್ತ. 'ವೈಷಮ್ಯ-ನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ' (2.1.35) ಎಂದು. ॥ 30 ॥

**ವಿವರಣೆ-** ಪ್ರಕೃತ್ಯೈವ ಚ ಕರ್ಮಾಣಿ- ಎಂಬ ಈ ಶ್ಲೋಕ ಕೂಟಶ್ಲೋಕದಂತಿದೆ. ಮೇಲ್ನೋಟಕ್ಕೆ ಪ್ರಕೃತಿಯೊಂದೇ ಕರ್ತೃವೆಂದೂ ಪರಮಾತ್ಮನೂ ಜೀವನೂ ಅಕರ್ತೃವೆಂದೂ ಘೋಷಿಸಿದೆ. ಆದರೆ ಇದು ಪೂರ್ವಾಪರ ವಿರುದ್ಧ. ಸೂತ್ರಗಳಿಗೆ ಹೊಂದದ್ದು. '**ಅಹಂ ಸರ್ವಸ್ಯ ಪ್ರಭವಃ**' ಎಂದ ದೇವನು ನಾನು ಅಕರ್ತನೆನ್ನಬಲ್ಲನೇ ? **ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ**' ಎಂಬ ಶ್ರುತಿ ದೇವ ಕರ್ತೃವೆಂದು ಉದ್ಘೋಷಿಸಿಲ್ಲವೇ ? **ಜನ್ಮಾದ್ಯಸ್ಯ ಯತಃ** ಎಂದಿಲ್ಲವೇ ಸೂತ್ರ, ಪುರಾಣ ? ಆದ್ದರಿಂದ ಈ ಗೀತೆಗೆ ಅರ್ಥ ಬೇರೆ. ಪ್ರಕೃತ್ಯ ಎಂಬುದು ಲ್ಯಬಂತಶಬ್ದ. ಸ್ಕಾಂದವು ಹೀಗೆ ಬಳಸಿದೆ. '**ಸ್ವಯಂ ಪ್ರಕೃತ್ಯ ಭಗವಾನ್ ಕರೋತಿ ನಿಖಿಲಂ ಜಗತ್' ನೈವ ಕರ್ತಾ ಹರೇಃ ಕಶ್ಚಿತ್ ಅಕರ್ತಾ ತೇನ ಕೇಶವಃ ॥** ಹೀಗಾಗಿ 'ಕರ್ಮಾಣಿ ಪ್ರಕೃತ್ಯ ಸ್ವಯಂ ಕ್ರಿಯಮಾಣಾನಿ ಕರ್ಮಾಣಿ ಸರ್ವಶಃ' ಎಂದು ಗೀತೆಯನ್ನು ವ್ಯಾಖ್ಯಾನಿಸಬೇಕು. ಜೀವನ ಪೂರ್ವಕರ್ಮಗಳನ್ನು ಮುಂದಿಟ್ಟುಕೊಂಡು ಅದಕ್ಕನುಸಾರವಾಗಿ ಸ್ವಯಂ ದೇವನು ಎಲ್ಲವನ್ನು ಮಾಡುವನು ಎಂದರ್ಥವಾಯಿತು. '**ಪೂರ್ವಂತು ಬಾದರಾಯಣೋ ಹೇತುವ್ಯಪದೇಶಾತ್**' ಎಂಬ ಸೂತ್ರವೂ ಹೀಗೆ ಹೇಳುತ್ತದೆ . ಅಲ್ಲಿ '**ಪುಣ್ಯೇನ ಪುಣ್ಯಂ ಲೋಕಂ ನಯತಿ**' ಎಂಬಿತ್ಯಾದಿ ಶ್ರುತಿಗೆ ಅನುಗುಣವಾಗಿ ಈಶ್ವರನೂ ಜೀವಕರ್ಮವೂ ಫಲಕಾರಣವೆಂದು ನಿರ್ಧರಿಸಲಾಗಿದೆ.

ಆತ್ಮನು ಅಕರ್ತನೆಂಬ ಈ ಗೀತೆಯ ಮಾತು ಒಂದು ಒಗಟಿನ ಮಾತು. ಇದಕ್ಕೆ ಎರಡು ಅವಿರುದ್ಧಾರ್ಥಗಳನ್ನು ಗ್ರಹಿಸಬಹುದು. ಆತ್ಮನೆಂದರೆ ಪರಮಾತ್ಮ ಅವನು ಅಕರ್ತನೆಂದರೆ ಅವನಿಗೊಬ್ಬ ಕರ್ತೃವಿಲ್ಲ. ಪರಮಾತ್ಮನನ್ನು ಸೃಷ್ಟಿಸುವ, ಪ್ರೇರಿಸುವ ಕರ್ತೃವಿಲ್ಲ. ಪರಮಾತ್ಮನು ಅಕರ್ತನೆಂಬ ಮಾತು ಎಲ್ಲಿ ಬಂದರೂ ಇದೇ ಅರ್ಥ. **ನ ವಿದ್ಯತೇ ಕರ್ತಾ ಯಸ್ಯ ಸಃ ಅಕರ್ತಾ** ಎಂದೇ ಹೊರತು 'ಕರ್ತಾ ನಭವತಿ' ಎಂದಲ್ಲ.

ಆತ್ಮನೆಂದರೆ ಜೀವನನ್ನೂ ಇಟ್ಟುಕೊಳ್ಳಬಹುದು ಅವನು ಅಕರ್ತನೆಂದರೆ ಸ್ವತಂತ್ರ ಕರ್ತೃವಲ್ಲವೆಂದರ್ಥ. ಧನದಲ್ಲಿಸ್ವಾತಂತ್ರ್ಯವಿಲ್ಲದ ಕೋಶಪಾಲಕನಲ್ಲಿ ಅಧನನೆಂಬ ಶಬ್ದದಂತೆ ಕರ್ತೃತ್ವದಲ್ಲಿ ಸ್ವಾತಂತ್ರ್ಯವಿಲ್ಲದ ಜೀವನಲ್ಲಿ ಅಕರ್ತನೆಂಬ ಪದವಿದೆ.

ನಮ್ಮ ಪೂರ್ವಕರ್ಮವನ್ನು ಅನುಸರಿಸಿ ನಮ್ಮ ಈಗಿನ ಕರ್ಮಕ್ಕೆ ದೇವ ಕರ್ತೃ. ಆದ್ದರಿಂದಲೇ ಅವನಲ್ಲಿ ವೈಷಮ್ಯಾದಿಗಳನ್ನು ಆಕ್ಷೇಪಿಸುವಂತಿಲ್ಲ. ಅವರವರ ಕರ್ಮಕ್ಕೆ ತಕ್ಕ ಫಲವೀಯುವವ ಅವ. ಅದಕ್ಕೆ ಮತ್ತೊಂದನ್ನು ಅಪೇಕ್ಷಿಸುವುದಾದರೆ ಅಸ್ವಾತಂತ್ರ್ಯವನ್ನು ಶಂಕಿಸಬೇಕು. ಆದರೆ ಇನ್ನೊಬ್ಬ ಹೇಳಿ ಅವ ಕರ್ಮವನ್ನು ಅಪೇಕ್ಷಿಸಿದ್ದರೆ ಅವನು ಅಸ್ವತಂತ್ರನಾಗಬೇಕಿತ್ತು. ಆದರೆ ಅವ ಅಕರ್ತ. ಅವನಿಗೆ ಕರ್ತೃವಿಲ್ಲ. ಅವನು ಯಾರ ಅಡಿಯಾಳೂ ಅಲ್ಲ. ಸ್ವೇಚ್ಛೆಯಿಂದ ಕರ್ಮವನ್ನು ಮಾನದಂಡವಾಗಿ ಇಟ್ಟುಕೊಂಡಿದ್ದಾನೆ. ಅಲ್ಲದೇ ಆ ಕರ್ಮಗಳೂ ಅವನ ಅಧೀನ. ಈ ಎಲ್ಲಾ ವಿಷಯ ಬ್ರಹ್ಮಸೂತ್ರದ ವೈಷಮ್ಯ-ನೈರ್ಘೃಣ್ಯಾಧಿಕರಣದಲ್ಲಿ ನಿರೂಪಿತವಾಗಿದೆ.

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥ 31 ॥**

**ಅರ್ಥ**- ಪರಸ್ಪರ ಭಿನ್ನರಾಗಿರುವ ಜೀವರನ್ನು ಒಬ್ಬನೇ ದೇವನಲ್ಲಿ ಇರುವವರನ್ನಾಗಿಯೂ ಅದೇ ದೇವನಿಂದ ಉತ್ಪನ್ನರಾಗುವವರನ್ನಾಗಿಯೂ ಯಾವಾಗ ತಿಳಿಯುವನೋ ಆಗ ಪರಮಾತ್ಮನನ್ನು ಹೊಂದುತ್ತಾನೆ.

**ನ ಕೇವಲಂ ಭಗವತಃ ಸರ್ವಪ್ರೇರಕತ್ವಾದಿ ಜ್ಞಾನಮಾತ್ರೇಣಾಲಮ್ । ಕಿಂತು ತಸ್ಯ 'ಓಂ ಅವಸ್ಥಿತೇರಿತಿ ಕಾಶಕೃತ್ಸ್ನಃ ಓಂ' (1-4-23) ಇತಿ ಸೂತ್ರೋಕ್ತದಿಶಾ ಸರ್ವಾಧಾರತ್ವಾದ್ಯಪಿ ಜ್ಞಾತವ್ಯಮಿತ್ಯುಚ್ಯತೇ- ಯದೇತಿ ॥ ಭೂತಪೃಥಗ್ಭಾವಂ ಭೂತಾನಾಂ ಜೀವಾನಾಂ ಪೃಥಕ್ತ್ವಂ ಭೇದಂ ಏಕಸ್ಥಮೇಕಸ್ಮಿನ್ ವಿಷ್ಣೌ ಸ್ಥಿತಮ್ । ಕಿಮುಕ್ತಂ ಭವತಿ । ವಿಷ್ಣ್ವನ್ಯೋಽನ್ಯಂ ಚ ಪೃಥಗ್ಭೂತಂ ಭೂತಗ್ರಾಮಮೇಕ-ವಿಷ್ಣ್ವಾಶ್ರಿತಂ ಯದಾನುಪಶ್ಯತೀತ್ಯುಕ್ತಂ ಭವತಿ । ತತ ಏವ ವಿಷ್ಣುತ ಏವ ವಿಸ್ತಾರಮುತ್ಪತ್ತಿಂ ಚ ಭೂತಾನಾಮಿತ್ಯನ್ವೇತಿ । ಅನು ತಾರತಮ್ಯೇನ ಪಶ್ಯತಿ । ತದಾ ಬ್ರಹ್ಮ ಸಮ್ಪದ್ಯತೇ ಪ್ರಾಪ್ನೋತಿ ॥ 31 ॥**

**ಅನುವಾದ**- ಕೇವಲ ಭಗವಂತನು ಸರ್ವಪ್ರೇರಕನೆಂದು ತಿಳಿದರೆ ಸಾಲದು. ಮತ್ತೇನೆಂದರೆ

ಅವನಿಗೆ 'ಅವಸ್ಥಿತೇರಿತಿ ಕಾಶಕೃತ್ಸ್ನಃ' (1-4-23) ಎಂಬ ಸೂತ್ರದಲ್ಲಿ[1] ಹೇಳಿದಂತೆ ಸರ್ವಾಧಾರತ್ವಾದಿಗಳನ್ನೂ ತಿಳಿಯಬೇಕೆನ್ನುತ್ತಿದೆ 'ಯದಾ...' ಎಂಬ ಈ ಶ್ಲೋಕ. **ಭೂತಪೃಥಗ್ಭಾವಂ ; ಭೂತಾನಾಂ**= ಜೀವರ, **ಪೃಥಕ್ತ್ವಂ**= ಭೇದವನ್ನು, **ಏಕಸ್ಥಂ**= ಒಬ್ಬನೇ ವಿಷ್ಣುವಿನಲ್ಲಿ ಸ್ಥಿತವಾದ. ಏನೆಂದಂತಾಯಿತು ? ವಿಷ್ಣುವಿಗಿಂತ ಮತ್ತು ಪರಸ್ಪರವಾಗಿ ಭಿನ್ನವಾದ ಜೀವಜಾತವನ್ನು ಒಬ್ಬ ವಿಷ್ಣುವಿನಲ್ಲಿ ಆಶ್ರಿತವೆಂದು ಯಾವಾಗ ತಿಳಿಯುತ್ತಾನೋ ಎಂದಂತಾಯಿತು. **ತತ ಏವ**= ಆ ವಿಷ್ಣುವಿನಿಂದಲೇ, **ವಿಸ್ತಾರಂ**= ಪ್ರಾಣಿಗಳಿಗೆ ಉತ್ಪತ್ತಿಯನ್ನೂ ಎಂದು ಅನ್ವಯಿಸಬೇಕು. **ಅನು**= ತಾರತಮ್ಯದ ಜೊತೆ , **ಪಶ್ಯತಿ**= ತಿಳಿಯುತ್ತಾನೋ ಆಗ ಪರಮಾತ್ಮನನ್ನು , **ಸಂಪದ್ಯತೇ**= ಹೊಂದುತ್ತಾನೆ.

**ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಽಯಮವ್ಯಯಃ ।**
**ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥ 32 ॥**

**ಅರ್ಥ**- ಕುಂತೀತನೂಜ, ಈ ಪರಮಾತ್ಮನು ಜೀವಿಗಳ ಶರೀರದಲ್ಲಿದ್ದರೂ ಅನಾದಿಯಾಗಿರುವುದರಿಂದಲೂ ಗುಣತ್ರಯರಹಿತನಾದುದರಿಂದಲೂ ನಾಶರಹಿತನು. ಲೋಕವಿಲಕ್ಷಣ ಕರ್ತಾರನಾದ ಆತ ಅಕರ್ತ. ಲೇಪವಿಲ್ಲದವ.

**ನನು ಸರ್ವಭೂತೇಷು ತಿಷ್ಠತೋ ನ ವಿನಾಶ ಇತ್ಯಯುಕ್ತಮ್ । ಶರೀರಸಮ್ಬನ್ಧೇ ವ್ಯಯಾದೇರಾವಶ್ಯಕತ್ವಾದಿತ್ಯತೋ ಹೇತೂಕ್ತಿಪೂರ್ವಂ ವ್ಯಯಲೇಪಾದ್ಯಭಾವಮಾಹ- ಅನಾದಿತ್ವಾದಿತಿ ॥ ಶರೀರಸ್ಥೋಽಪ್ಯಯಂ ಪರಮಾತ್ಮಾ ಅನಾದಿತ್ವಾತ್ ನಿರ್ಗುಣತ್ವಾತ್ ಸತ್ತ್ವಾದಿಗುಣಹೀನತ್ವಾಚ್ಚ ಅವ್ಯಯಃ । ನಾಶಾದಿವ್ಯಯಹೀನಃ । ಚಿಂತಾಸಂತಾಪದುಃಖಾದಿನಾ ನ ಲಿಪ್ಯತೇ ನ ಸಮ್ಬಧ್ಯತೇ । ಲೌಕಿಕಕ್ರಿಯಾವಿಲಕ್ಷಣಕ್ರಿಯಾವತ್ತ್ವಾನ್ನ ಕರೋತಿ ಚ । ಅನಾದಿತ್ವಹೇತೋರ್ಭಾವತ್ವೇ ಸತೀತಿ ವಿಶೇಷಣಾನ್ನ ಪ್ರಾಗಭಾವೇ ವ್ಯಭಿಚಾರಃ ಶಂಕ್ಯಃ ।**

---

1. ಎಲ್ಲಾ ಶಬ್ದವೂ ಪರಮಮುಖ್ಯ ವೃತ್ತಿಯಿಂದ ಭಗವಂತನನ್ನೇ ಹೇಳುತ್ತಿರಲು ಅವನಿಂದ ಎಳೆದು ಉಳಿದ ಕರ್ಮಗಳನ್ನೂ ಅವು ಪ್ರತಿಪಾದಿಸುವ ಉದ್ದೇಶವೇನು ? ಎಂಬ ಚಿಂತನೆಯಲ್ಲಿ ಕಾಶಕೃತ್ಸ್ನ್ಯರು ಹೇಳುತ್ತಾರೆ ಸರ್ವಾಧಾರನಾದ ಭಗವಂತನಲ್ಲಿ ಎಲ್ಲ ಕರ್ಮಾದಿಗಳಿವೆ. ಕರ್ಮಾದಿ ಎಲ್ಲಕ್ಕೂ ಅವ ಆಧಾರ ಎಂಬ ಪರಿಜ್ಞಾನವನ್ನು ನಮಗುಂಟುಮಾಡಲು ಕರ್ಮಾದಿ ಪ್ರತಿಪಾದನೆಯಿದೆ ಎಂದು. ಅವಸ್ಥಿತೇಃ = ಎಲ್ಲವೂ ದೇವನಲ್ಲಿ ಆಶ್ರಿತವಾಗಿರುವುದರಿಂದ.

## ಪರಮಾತ್ಮನು ಅನಿತ್ಯದಲ್ಲಿದ್ದರೂ ನಿತ್ಯ

**ಅನುವಾದ–** ಎಲ್ಲಾ ಜೀವಿಗಳಲ್ಲೂ ಸ್ಥಿತನಾದ(ಭಗವಂತನಿಗೆ)ವನಿಗೆ ವಿನಾಶವಿಲ್ಲವೆಂಬುದು ಸರಿಯಾಗದು. ಶರೀರದ ಸಂಬಂಧವಿದ್ದ ಮೇಲೆ ನಾಶವೇ ಮೊದಲಾದ ಚ್ಯುತಿಯೆಂಬುದು ಆವಶ್ಯಕವಾದುದರಿಂದ ಎಂಬ ಆಕ್ಷೇಪಕ್ಕೆ ಸಕಾರಣವಾಗಿ ನಾಶ, ಲೇಪಾದಿಗಳು ಇಲ್ಲವೆನ್ನುತ್ತಿದ್ದಾನೆ 'ಅನಾದಿತ್ವಾತ್ ...' ಎಂಬ ಈ ಶ್ಲೋಕದಿಂದ. ಶರೀರದಲ್ಲಿದ್ದರೂ ಕೂಡಾ ಈ ಪರಮಾತ್ಮನು ಅನಾದಿಯಾದ್ದರಿಂದ ಹಾಗೂ, **ನಿರ್ಗುಣತ್ವಾತ್**= ಸತ್ವಾದಿಗುಣಹೀನನಾದ್ದರಿಂದ, **ಅವ್ಯಯಃ**= ನಾಶವೇ ಮೊದಲಾದ ಚ್ಯುತಿರಹಿತನು. ಚಿಂತೆ, ಬೇಗುದಿ, ದುಃಖ ಮೊದಲಾದವುಗಳಿಂದ ಆತ ನ ಲಿಪ್ಯತೇ ಸಂಬಂಧ ಹೊಂದುವುದಿಲ್ಲ. ಲೋಕದ ಕ್ರಿಯೆಗಿಂತ ವಿಲಕ್ಷಣವಾದ ಕ್ರಿಯೆ ಯಿರುವುದರಿಂದ ಈತ 'ನ ಕರೋತಿ' ಕ್ರಿಯಾವುಳ್ಳವನಲ್ಲ (ಎನ್ನಲಾಗಿದೆ) ಅನಾದಿತ್ವಹೇತುವಿಗೆ 'ಭಾವತ್ವೇ ಸತಿ' ಎಂಬ ವಿಶೇಷಣವನ್ನೀಯುವುದರಿಂದ ಪ್ರಾಗಭಾವದಲ್ಲಿ ಅತಿ ಪ್ರಸಕ್ತವಾಗಿದೆ ಯೆಂದು ಶಂಕಿಸಬಾರದು.

**ವಿವರಣೆ–** ಜೀವಶರೀರಕ್ಕೆ ನಾಶವಿದೆ. ಆದರೆ ಅದರಲ್ಲಿರುವ ದೇವನಿಗೆ ನಾಶವಿಲ್ಲ. ಅವ ಅವ್ಯಯ. ಅದಕ್ಕೆ ಎರಡು ಕಾರಣ ಒಂದು ಅವನು ಅನಾದಿ. ಎರಡನೆಯದು ನಿರ್ಗುಣ. ಇದರಲ್ಲಿ ಗುಣತ್ರಯ ರಹಿತವಾದ್ದರಿಂದ ಅವ್ಯಯವೆಂಬುದು ಉಚಿತ. ಅನಾದಿಯಾದ್ದರಿಂದ ಅವ್ಯಯವೆನ್ನುವಂತಿಲ್ಲ. ಏಕೆಂದರೆ ಪ್ರಾಗಭಾವವೆಂಬುದು ಅನಾದಿ. ಆದರೆ ಅದಕ್ಕೆ ನಾಶವಿದೆ. ವಸ್ತುವಿಗೆ ಉತ್ಪತ್ತಿಗಿಂತ ಮುಂಚೆ ಇರುವ ಅಭಾವ ಪ್ರಾಗಭಾವ. ಇದು ಅನಾದಿಕಾಲದಿಂದ ಇತ್ತು. ವಸ್ತು ಜನಿಸಿದೊಡನೆ ನಷ್ಟವಾಯಿತು. ಹಾಗಾದರೆ ಅನಾದಿಯಾಗಿಯೂ ನಾಶವಾಗಿರುವ ಪ್ರಾಗಭಾವದಂತೆ ಪರಮಾತ್ಮನೂ ಅನಾದಿಯಾಗಿಯೂ ನಾಶವುಳ್ಳವನು ಏಕಾಗಿರಬಾರದು ? ಈ ಶಂಕೆಗೆ ಇಷ್ಟು ಉತ್ತರ. ಕೇವಲ ಅನಾದಿಯಾಗಿದ್ದಾನೆ ಎಂಬ ಕಾರಣಕೊಟ್ಟು ಹರಿಯನ್ನು ನಾವು ಅವ್ಯಯನೆನ್ನುತ್ತಿಲ್ಲ. ಮತ್ತೇನೆಂದರೆ ಭಾವವಾಗಿದ್ದು ಅನಾದಿಯಾಗಿರುವ ಕಾರಣದಿಂದ. ಪ್ರಾಗಭಾವವು ಅಭಾವವಾಗಿದೆ. ಭಾವವಸ್ತುವೆನಿಸಿದ ಅನಾದಿಯು ನಾಶ ಹೊಂದಿದುದಕ್ಕೆ ಉದಾಹರಣೆಯಿಲ್ಲ. ಆದ್ದರಿಂದ ಈ ನ್ಯಾಯವು ಸರಿಯಾಗಿದೆ. **'ಈಶ್ವರಃ ನಿತ್ಯಃ' ಅನಾದಿ-ಭಾವತ್ವಾತ್** ॥'

**ಯದ್ವಾ 'ಸರ್ವಂ ಖಲ್ವಿದಂ ಬ್ರಹ್ಮ' (ಛಾಂ 3-14-1) 'ಪುರುಷ ಏವೇದಂ ಸರ್ವಂ' (ಮುಂ 2-1-10) ಇತ್ಯಾದಿನಾ ವಿಷ್ಣೋಃ ಸರ್ವಚಿದಚಿದಾತ್ಮಕತ್ವ-ಪ್ರತೀತೇರ್ವಾದ್ಯಂತರೈಸ್ತಥೋಕ್ತೇಶ್ಚ ಕಥಂ ಭೂತಾನಾಂ ವಿಷ್ಣೋಃ ಪೃಥಗ್ಭಾವ ಇತ್ಯತಃ ಶ್ರುತಿತಾತ್ಪರ್ಯಾಪರಿಜ್ಞಾನಾದಿಪ್ರಾಪ್ತಮದ್ವೈತಂ ಸಹೇತುಕಂ ನಿರಾಹ-ಅನಾದಿತ್ವಾದಿತಿ ॥ ಅಯಂ ಪರಮಾತ್ಮಾ ಶರೀರಸ್ಥೋಽಪಿ ಶರೀರಾಭಿಮಾನಿತಯಾ**

**ತತ್ಸ್ಥಸುಖದುಃಖಾದಿಭೋಕ್ತೃತಯಾ ಶರೀರಸ್ಥೋಽತ್ರ ಜೀವೋಽಭಿಮತಃ । ಶರೀರಸ್ಥೋಽಪಿ ನ ಭವತಿ । ಜೀವಾತ್ಮಕೋಽಪಿ ನ ಭವತಿ । ಕಿಮು ವಾಚ್ಯಂ ಜಡಾತ್ಮಕೋ ನ ಭವತೀತಿ ಅಪೇರರ್ಥಃ । ಕುತಃ ಅನಾದಿತ್ವಾತ್ । ದೇಹ-ಯೋಗನಿಮಿತ್ತಾದಿಮತ್ತ್ವಹೀನತ್ವಾದಿತಿ ಯಾವತ್ । ಸತ್ತ್ವಾದಿಗುಣಹೀನತ್ವಾದ್ ದೇಹವ್ಯಯನಿಮಿತ್ತವ್ಯಯಹೀನತ್ವಾತ್ । ಕರೋತಿ, ಸರ್ವಕರ್ತೃತ್ವಾನ್ನ ಲಿಪ್ಯತೇ ಸರ್ವಕರಣನಿಮಿತ್ತಫಲಾಭೋಕ್ತೃತ್ವಾಚ್ಚ । ಜೀವಸ್ಯ ಚೋಕ್ತಹೇತುಪಂಚಕ-ವಿಪರ್ಯಯವತ್ತ್ವಾದಿತಿ ಭಾವಃ । ಈಶ್ವರಃ ಕರೋತಿ ನ ಲಿಪ್ಯತೇ । ಜೀವಸ್ತು 'ಪರಾತ್ತು ತಚ್ಛ್ರುತೇಃ' ಇತಿ (2-3-41) ಸೂತ್ರೋಕ್ತದಿಶಾ ಕರ್ತೃಶಕ್ತೇರಪೀ-ಶಾಧೀನತಯಾ ಸ್ವಾತಂತ್ರ್ಯಾಭಾವಾನ್ನ ಕರೋತಿ । ಪರಾಧೀನಕರ್ತೃತಯಾ ಲಿಪ್ಯತೇ ಚೇತಿ ಯೋಜನಾ ॥ 32 ॥**

## ದೇವ ಜೀವರು ಒಂದೆಂತು ?

**ಅನುವಾದ**- ಅಥವಾ (ಇನ್ನೊಂದು ಬಗೆಯ ವ್ಯಾಖ್ಯಾನವಿದೆ) **'ಸರ್ವಂ ಖಲ್ವಿದಂ'** ಬ್ರಹ್ಮ- 'ಇವೆಲ್ಲವೂ ಬ್ರಹ್ಮವೇ' (ಛಾಂದೋಗ್ಯೋಪನಿಷತ್ 3-14-1) **'ಪುರುಷ ಏವೇದಂ ಸರ್ವಂ'** ಈ ಸರ್ವವೂ ಪುರುಷನೇ (ಮುಂಡಕೋಪನಿಷತ್ 2-1-10) ಇವೇ ಮೊದಲಾದ ಶ್ರುತಿವಾಕ್ಯಗಳಿಂದ ವಿಷ್ಣುವಿಗೆ ಚೇತನಾಚೇತನಾತ್ಮಕವಾದ ಸರ್ವ ಜಗತ್ತಿಗಿಂತ ಅಭೇದವು ಮೇಲ್ನೋಟಕ್ಕೆ ಕಾಣುವುದರಿಂದ ಹಾಗೂ ಬೇರೆ ವಾದಿಗಳು ಹಾಗೆಯೇ ಹೇಳುತ್ತಿರುವುದರಿಂದ ಜೀವಜಾತಕ್ಕೆ ವಿಷ್ಣುವಿಗಿಂತ ಭೇದವಿರುವುದು ಹೇಗೆ ? (**ಭೂತಪೃಥಗ್ಭಾವಂ** ಎಂದು ಹಿಂದಿನ ಶ್ಲೋಕದಲ್ಲಿ ಹೇಳುವುದು ಸರಿಯಲ್ಲವಷ್ಟೇ) ಎಂಬ ಪ್ರಶ್ನೆಗೆ ಉತ್ತರವಾಗಿ ಶ್ರುತಿಯ ಸರಿಯಾದ ಅಭಿಪ್ರಾಯದ ಅಜ್ಞಾನದಿಂದಾಗಿ ಪ್ರಾಪ್ತವಾದ ಅದ್ವೈತವನ್ನು ಸಕಾರಣವಾಗಿ ನಿರಾಕರಿಸುತ್ತಿದ್ದಾನೆ 'ಅನಾದಿ-ತ್ವಾತ್- ಎಂಬ ಶ್ಲೋಕದಿಂದ. **ಅಯಂ**= ಪರಮಾತ್ಮನು, **ಶರೀರಸ್ಥೋಽಪಿ**= ಶರೀರದಲ್ಲಿ ಅಭಿಮಾನವಿದ್ದು ಶರೀರದ ಮೂಲಕ ಸುಖದುಃಖಗಳನ್ನು ಭೋಗಿಸುವ ಜೀವನು ಇಲ್ಲಿ ಶರೀರಸ್ಥಶಬ್ದದಿಂದ ವಿವಕ್ಷಿತನಾಗಿದ್ದಾನೆ. (ಪರಮಾತ್ಮನು) **ಶರೀರಸ್ಥೋಽಪಿ ನ ಭವತಿ**= ಜೀವಾಭಿನ್ನನಲ್ಲ. ಜೀವಾಭಿನ್ನನೇ ಅಲ್ಲವೆಂದ ಮೇಲೆ ಜಡಾಭಿನ್ನನಲ್ಲವೆಂದು ಹೇಳತಕ್ಕದ್ದೇನಿದೆ ? ಎಂಬುದು 'ಅಪಿ'ಯ ಅರ್ಥ. ಏಕೆ ಅಭಿನ್ನನಲ್ಲ ? (ಐದು ಕಾರಣಗಳಿವೆ) **ಅನಾದಿತ್ವಾತ್**= ದೇಹಸಂಬಂಧದಿಂದಾಗುವ ಉತ್ಪತ್ತಿ ಇಲ್ಲದವನಾದ್ದರಿಂದ, **ನಿರ್ಗುಣತ್ವಾತ್**= ಸತ್ತ್ವಾದಿಗುಣ ಹೀನನಾದ್ದರಿಂದ, **ಅವ್ಯಯಃ**= ದೇಹದ ನಾಶದಿಂದಾಗುವ ನಾಶವಿಲ್ಲದವನಾದ್ದರಿಂದ, **ಕರೋತಿ**= ಸರ್ವಕರ್ತೃವಾದ್ದರಿಂದ, **ನ ಲಿಪ್ಯತೇ**= ಎಲ್ಲವನ್ನೂ ಮಾಡಿದರೂ ಅದರಿಂದಾಗುವ

ಫಲವನ್ನು ಅನುಭವಿಸದವನಾದ್ದರಿಂದಲೂ. ಈ ಐದು ಹೇತುಗಳು ಜೀವನಲ್ಲಿ ಇಲ್ಲವಾದ್ದರಿಂದ (ದೇವನು ಜೀವಾಭಿನ್ನನಲ್ಲ) ಎಂದು ಅಭಿಪ್ರಾಯ. ಈಶ್ವರನು ಕರ್ತಾರನಾಗಿದ್ದಾನೆ ಆದರೆ ಲೇಪವಿಲ್ಲ. ಜೀವನಾದರೂ **ಪರಾತ್ತು ತಚ್ಛ್ರುತೇಃ**' (2-3-41) ಎಂಬ ಸೂತ್ರದಲ್ಲಿ[1] ಹೇಳಿರುವಂತೆ ಜೀವನ ಕರ್ತೃತ್ವಶಕ್ತಿಯೂ ಈಶ್ವರಾಧೀನವಿರುವ ನಿಮಿತ್ತ ಸ್ವಾತಂತ್ರ್ಯ-ವಿಲ್ಲದ್ದರಿಂದ ಕರ್ತೃವಲ್ಲ. ಪರಾಧೀನಕರ್ತೃವಾದ್ದರಿಂದ ಕರ್ಮದ ಲೇಪವನ್ನು ಹೊಂದುತ್ತಾನೆ ಎಂದು ಯೋಜಿಸಿಕೊಳ್ಳಬೇಕು. || 32 ||

**ವಿವರಣೆ-** ಗೀತಾತಾತ್ಪರ್ಯದಲ್ಲಿ ಈ ಶ್ಲೋಕಕ್ಕೆ ಮಾರ್ಮಿಕವಾದ ಅರ್ಥವನ್ನು ಹೇಳಲಾಗಿದೆ. ಆ ಅರ್ಥವನ್ನೂ ಶ್ರೀರಾಯರು ಇಲ್ಲಿ ಸಂಗ್ರಹಿಸಿದ್ದಾರೆ. 'ಯದಾ ಭೂತಪೃಥಗ್ಭಾವಮ್' ಎಂಬ ಹಿಂದಿನ ಶ್ಲೋಕದಲ್ಲಿ ಜೀವೇಶ್ವರಾದಿಗಳಲ್ಲಿ ಭೇದವನ್ನು ತಿಳಿದವನು ಬ್ರಹ್ಮಸಂಪತ್ತಿ ಪಡೆಯುವನು ಎಂದಿದೆ. ಆದರೆ ಸರ್ವಾಭೇದವನ್ನು ಹೇಳುವ ಹತ್ತು ಹಲವು ಶ್ರುತಿಗಳಿರುವಾಗ ಇದು ಅಸಂಗತವೆಂಬ ಶಂಕೆ ಉದಿಸೀತು. ಅದರ ಸಮಾಧಾನಕ್ಕಾಗಿ ಈ ಮಾತು ಕೃಷ್ಣನದು. ಶ್ರುತಿಯ ಸರಿಯಾದ ಅಭಿಪ್ರಾಯ ತಿಳಿಯದೆ ಮಂದಿ ಐಕ್ಯವಾದವನ್ನು ಆರಂಭಿಸಿದ್ದಾರೆ. ಎಷ್ಟು ಮಾತ್ರಕ್ಕೂ ಬ್ರಹ್ಮ ಜೀವನಲ್ಲ. ಜೀವನೇ ಅಲ್ಲವೆಂದ ಮೇಲೆ ಜಡವಾಗುವುದೆಂತು ಶಕ್ಯ ? ದೇವ ಜೀವನಲ್ಲ ಎಂಬುದಕ್ಕೆ ಐದು ಕಾರಣಗಳನ್ನು ನೀಡಲಾಗಿದೆ.

1. ಶರೀರದ ಉತ್ಪತ್ತಿಯಿಂದ ಜೀವನಿಗೂ ಉತ್ಪತ್ತಿಯಿದೆ, ದೇವನಿಗಿಲ್ಲ.
2. ಜೀವ ತ್ರಿಗುಣಸಂಬಂಧದಿಂದ ಏಳುಬೀಳುಗಳುಳ್ಳವ. ದೇವ ತ್ರಿಗುಣಾತೀತ.
3. ಶರೀರದ ಸಾವಿನಿಂದ ಜೀವನಿಗೂ ಸಾವಿದೆ. ದೇವನಿಗಿಲ್ಲ.
4. ಜೀವ ಅಸ್ವತಂತ್ರನಾದ್ದರಿಂದ ಸ್ವತಃ ಯಾವುದಕ್ಕೂ ಕರ್ತೃವಲ್ಲ. ದೇವ ಸರ್ವಕರ್ತೃ.
5. ಜೀವನು ಶರೀರಗತ ದುಃಖಾದಿಗಳನ್ನು ಅನುಭವಿಸುತ್ತಾ ಕೃಶನಾಗುತ್ತಿದ್ದಾನೆ. ದೇವ ಹಾಗಿಲ್ಲ. ಜೀವಶರೀರದಲ್ಲೇ ಇದ್ದರೂ ಅಲ್ಲಿ ಅಭಿಮಾನವಿಲ್ಲ. ಸುಖಾದಿಗಳ ಭೋಗವಿಲ್ಲ. 'ಅನಶ್ನನ್ನನ್ಯಃ ಅಭಿಚಾಕಶೀತಿ'.

ಇವರಿಬ್ಬರು ಒಂದಾಗುವುದೆಂತು ? ಅದು ಅಸಾಧ್ಯ. ಶ್ರುತ್ಯರ್ಥದ ಅಪರಿಜ್ಞಾನದ ಕೂಸು ಈ ಐಕ್ಯ.

---

1. ಕರ್ತೃತ್ವಾಧಿಕರಣದಲ್ಲಿನ ಈ ಸೂತ್ರದಲ್ಲಿ ಜೀವಕರ್ತೃತ್ವವು ಪರಮಾತ್ಮಾಧೀನವೆಂದಿದೆ. ಪರಾತ್ ತು= ಜೀವಕರ್ತೃತ್ವವು ಪರಮಾತ್ಮಾಧೀನವೇ. ತಚ್ಛ್ರುತೇಃ= ಆ ವಿಷಯದಲ್ಲಿ 'ಕರ್ತೃತ್ವಂ ಕರಣತ್ವಂ ಚ' ಮುಂತಾದ ಶ್ರುತಿ ಪ್ರಮಾಣವಿರುವುದರಿಂದ.

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾಽಽತ್ಮಾ ನೋಪಲಿಪ್ಯತೇ ॥ 33 ॥**

**ಅರ್ಥ**- ಹೇಗೆ ಎಲ್ಲೆಡೆ ತುಂಬಿದ ಆಕಾಶ ಸೂಕ್ಷ್ಮವಾದ್ದರಿಂದ ಯಾವುದರ ಲೇಪವನ್ನೂ ಹೊಂದುವುದಿಲ್ಲವೋ ಅಂತೆಯೇ ಉಚ್ಚನೀಚಗಳಾದ ಎಲ್ಲಾ ದೇಹದಲ್ಲಿ ಸ್ಥಿತನಾಗಿದ್ದರೂ ದೇವ ಲೇಪ ಹೊಂದುವುದಿಲ್ಲ.

**ಪರಮಾತ್ಮನೋ ಲೇಪಾಭಾವಂ ದೃಷ್ಟಾಂತೇನೋಪಪಾದಯತಿ- ಯಥೇತಿ ॥ ಪಂಕಾದಿಸರ್ವಗತಮಪ್ಯಾಕಾಶಂ ಸೌಕ್ಷ್ಮ್ಯಾದಪ್ರತಿಘತ್ವಾನ್ನೋಪಲಿಪ್ಯತೇ ಯಥಾ ತಥಾ ಸರ್ವತ್ರ ನೀಚೋಚ್ಚಾದಿದೇಹೇ ಸ್ಥಿತೋಽಪ್ಯಾತ್ಮಾ ಪರಮಾತ್ಮಾ ನೋಪ-ಲಿಪ್ಯತೇ ॥ 33 ॥**

**ಅನುವಾದ**- ಪರಮಾತ್ಮನಿಗೆ ಲೇಪವಿಲ್ಲವೆಂಬುದನ್ನು ದೃಷ್ಟಾಂತದೊಂದಿಗೆ ಉಪಪಾದಿಸ ಹೊರಟಿದ್ದಾನೆ 'ಯಥಾ' ಎಂಬ ಶ್ಲೋಕದಿಂದ. ಕೆಸರು ಮೊದಲಾದ ಎಲ್ಲೆಡೆ ಆಕಾಶವು ತುಂಬಿದ್ದರೂ, **ಸೌಕ್ಷ್ಮ್ಯಾತ್**= ಸೂಕ್ಷ್ಮವಾದ್ದರಿಂದ ಲಿಪ್ತವಾಗುವುದಿಲ್ಲವೆಂತೋ ಅಂತೆಯೇ, **ಸರ್ವತ್ರ**= ಉತ್ತಮ, ಹೀನಗಳಾದ ಎಲ್ಲಾ ದೇಹದಲ್ಲಿ ಸ್ಥಿತನಾಗಿದ್ದರೂ, **ಆತ್ಮಾ**= ಪರಮಾತ್ಮನು ಲಿಪ್ತನಾಗುವುದಿಲ್ಲ. ॥ 33 ॥

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥ 34 ॥**

**ಅರ್ಥ**- ಅರ್ಜುನ, ಒಬ್ಬನೇ ಸೂರ್ಯ ಈ ಲೋಕವನ್ನೆಲ್ಲಾ ಬೆಳಗುವಂತೆ ಎಲ್ಲ ಕ್ಷೇತ್ರದಲ್ಲಿ ನೆಲೆನಿಂತ ಒಬ್ಬನೇ ದೇವ ಎಲ್ಲಾ ಕ್ಷೇತ್ರಗಳನ್ನೂ ಬೆಳಗಿ ಕ್ಷೇತ್ರಜ್ಞನೆನಿಸಿದ್ದಾನೆ.

**ಯತ್ಕ್ಷೇತ್ರಜ್ಞತ್ವವಿಶಿಷ್ಟತಯಾ ಭಗವದ್ಜ್ಞಾನಾರ್ಥಂ ಕ್ಷೇತ್ರಾದಿಕಮುಕ್ತಮ್ । ತತ್ಕ್ಷೇತ್ರಜ್ಞತ್ವಂ ದೃಷ್ಟಾಂತೇನ ವ್ಯನಕ್ತಿ- ಯಥೇತಿ ॥ ಯಥೈಕೋ ರವಿಃ ಇಮಂ ಲೋಕಂ ಕೃತ್ಸ್ನಂ ಪ್ರಕಾಶಯತಿ ತಥೈಕಃ ಕ್ಷೇತ್ರೀ ಕ್ಷೇತ್ರಸ್ಥಃ ಪರಮಾತ್ಮಾ ಕೃತ್ಸ್ನಂ ಕ್ಷೇತ್ರಂ ಚೇತನಾಚೇತನರೂಪಂ ಪ್ರಕಾಶಯತಿ ॥ 34 ॥**

**ಅನುವಾದ**- ಯಾವ ಕ್ಷೇತ್ರಜ್ಞತ್ವವಿಶಿಷ್ಟಭಗವಂತನ ಅರಿವಿಗಾಗಿ ಕ್ಷೇತ್ರ ಮೊದಲಾದುವನ್ನು ಹೇಳಿತೋ ಅಂತಹ ಕ್ಷೇತ್ರಜ್ಞತ್ವವನ್ನು ದೃಷ್ಟಾಂತದೊಂದಿಗೆ ವ್ಯಕ್ತಗೊಳಿಸುತ್ತಿದ್ದಾನೆ. **'ಯಥಾ ಪ್ರಕಾಶಯತ್ಯೇಕಃ'**= ಎಂಬ ಶ್ಲೋಕದಿಂದ. ಹೇಗೆ ಒಬ್ಬನೇ ಸೂರ್ಯ ಈ ಸಮಗ್ರ

ಲೋಕವನ್ನು ಬೆಳಗುತ್ತಾನೋ ಹಾಗೆಯೇ ಒಬ್ಬನೇ, ಕ್ಷೇತ್ರೀ = ಕ್ಷೇತ್ರಗಳಲ್ಲಿ ಸ್ಥಿತನಾದ ಪರಮಾತ್ಮನು , ಕೃತ್ಸ್ನಂ ಕ್ಷೇತ್ರಂ = ಚೇತನಾಚೇತನಾತ್ಮಕವಾದ ಎಲ್ಲಾ ಕ್ಷೇತ್ರಗಳನ್ನೂ ಬೆಳಗುತ್ತಾನೆ. (ಕ್ಷೇತ್ರವನ್ನೆಲ್ಲಾ ತನ್ನ ಜ್ಞಾನಕ್ಕೆ ಗೋಚರವನ್ನಾಗಿಸಿ ಕ್ಷೇತ್ರಜ್ಞನಾಗಿದ್ದಾನೆಂದರ್ಥ.)

**ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ ।**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್ ॥ 35 ॥**

*॥ ಓಂತತ್ಸದಿತಿ ಶ್ರೀಮದ್‌ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಕ್ಷೇತ್ರಕ್ಷೇತ್ರಜ್ಞಯೋಗೋ ನಾಮ ತ್ರಯೋದಶೋಽಧ್ಯಾಯಃ ॥*

**ಅರ್ಥ-** ಈ ರೀತಿ ಕ್ಷೇತ್ರ-ಕ್ಷೇತ್ರಜ್ಞರೊಳಗಿನ ಭೇದವನ್ನೂ ಭೂತಪ್ರಕೃತಿಬಂಧದಿಂದ ಜೀವನ ಬಿಡುಗಡೆಗೆ ಸಾಧನವನ್ನೂ ಯಾರು ಜ್ಞಾನದೃಷ್ಟಿಯಿಂದ ಅರಿವರೋ ಅವರು ಪರಗತಿಯನ್ನು ಹೊಂದುವರು.

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ ಭಗವದ್ಗೀತೆಯಲ್ಲಿ ಕ್ಷೇತ್ರಕ್ಷೇತ್ರಜ್ಞಯೋಗವೆಂಬ ಹದಿಮೂರನೆಯ ಅಧ್ಯಾಯವು ಮುಗಿಯಿತು.*

**ಫಲೋಕ್ತ್ಯಾಽಧ್ಯಾಯಾರ್ಥಮುಪಸಂಹರತಿ- ಕ್ಷೇತ್ರೇತಿ ॥ ಕ್ಷೇತ್ರ-ಕ್ಷೇತ್ರಜ್ಞಯೋರೇವ ಮುಕ್ತಪ್ರಕಾರೇಣಾಂತರಂ ಭೇದಂ ಜ್ಞಾನಚಕ್ಷುಷಾ ವಿವೇಕದೃಷ್ಟ್ಯಾ ಯೇ ವಿದುಃ । ತಥಾ ಭೂತೇಭ್ಯಃ ಪ್ರಕೃತೇಶ್ಚ ಜೀವಾನಾಂ ಮೋಕ್ಷೋ ಯೇನೇತಿ ವಾ ಭೂತಾನಾಂ ಜೀವಾನಾಂ ಅಚೇತನಪ್ರಕೃತೇಃ ಸಕಾಶಾನ್ಮೋಕ್ಷೋ ಯೇನೇತಿ ವಾ ತದಮಾನಿತ್ವಾದಿಕಂ ಪ್ರಾಗುಕ್ತಮೋಕ್ಷಸಾಧನಂ ಚ ಯೇ ವಿದುಃ ತೇ ಬ್ರಹ್ಮ ಯಾಂತೀತಿ ॥ 35 ॥**

*॥ ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ ತ್ರಯೋದಶೋಽಧ್ಯಾಯಃ ॥*

**ಅನುವಾದ** - ಫಲವನ್ನು ಹೇಳುತ್ತಾ ಅಧ್ಯಾಯದ ವಿಷಯವನ್ನು ಮುಗಿಸುತ್ತಿದ್ದಾನೆ '**ಕ್ಷೇತ್ರಕ್ಷೇತ್ರಜ್ಞಯೋಃ**' ಎಂಬ ಶ್ಲೋಕದ ಮೂಲಕ. ಕ್ಷೇತ್ರ-ಕ್ಷೇತ್ರಜ್ಞರಿಗೆ, **ಏವಂ**= ಹಿಂದೆ ನಿರೂಪಿಸಿದಂತೆ **ಅಂತರಂ**= ಭೇದವನ್ನು , **ಜ್ಞಾನಚಕ್ಷುಷಾ**= ವಿವೇಕದೃಷ್ಟಿಯಿಂದ ಯಾರು ತಿಳಿಯುವವರೋ ಹಾಗೆಯೇ ಪಂಚಭೂತಗಳಿಂದ ಹಾಗೂ ಪ್ರಕೃತಿಯಿಂದ ಜೀವರಿಗೆ ಮುಕ್ತಿಯು

ಯಾವುದರಿಂದಲೋ ಅಂತಹ ಅಥವಾ ಜೀವರಿಗೆ ಅಚಿತ್ ಪ್ರಕೃತಿಯಿಂದ ಬಿಡುಗಡೆ ಯಾವುದರಿಂದಲೋ ಅಂತಹ '**ಅಮಾನಿತ್ವಮದಂಭಿತ್ವಂ**' ಮುಂತಾಗಿ ಹಿಂದೆ ಹೇಳಿದ ಮೋಕ್ಷ ಸಾಧನಗಳನ್ನು ಯಾರು ತಿಳಿವರೋ ಅವರು ಬ್ರಹ್ಮವನ್ನು ಹೊಂದುತ್ತಾರೆ ಎಂದರ್ಥ. ॥ 34 ॥

***ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ ಹದಿಮೂರನೆಯ ಅಧ್ಯಾಯವು ಮುಗಿಯಿತು.***

# ಅಧ್ಯಾಯ - 14

## ಕಾಮಾದಿಗಳ ವರ್ಜನ ಜ್ಞಾನಸಾಧನ

**ಶ್ರೀ ಭಗವಾನುವಾಚ –**

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।**
**ಯದ್ ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥ 1 ॥**

ಅರ್ಥ– ತಿಳಿಯಬೇಕಾದ ವಿಷಯಗಳಲ್ಲಿ ಉತ್ತಮವಾದ ಮತ್ತೊಂದು ಪ್ರಮೇಯವನ್ನು ಮತ್ತೆ ಹೇಳುತ್ತೇನೆ. ಯಾವುದನ್ನು ತಿಳಿದು ಮನನ ಮಾಡುವವರೆಲ್ಲರೂ ಈ ಸಂಸಾರದಿಂದ ಬಿಡುಗಡೆಯನ್ನು ಅಂದರೆ ಮೋಕ್ಷವನ್ನು ಹೊಂದುವರು.

### ಗೀತಾವಿವೃತಿ

**॥ ಓಂ ॥ 'ಬುದ್ಧಿರ್ಯೋಗೇ ತ್ವಿಮಾಂ ಶೃಣು' (2-39) ಇತಿ ದ್ವಿತೀಯೇ ಪ್ರತಿಜ್ಞಾಯ ಆಷಷ್ಠಸಮಾಪ್ತೇಃ ಕಾಮಾದಿವರ್ಜನಾದೀತಿಕರ್ತವ್ಯತಾಸಹಿತಂ ಕರ್ಮಧ್ಯಾನಲಕ್ಷಣಂ ಜ್ಞಾನಸಾಧನಮುಕ್ತಮ್ । ತತ್ರೇತಿಕರ್ತವ್ಯತಾಂಶಂ ಉತ್ತರಾಧ್ಯಾಯಪಂಚಕೇನ ಪ್ರಪಂಚಯತೀತಿ ಪ್ರಘಟ್ಟಾರ್ಥಃ ।**

'ಬುದ್ಧಿರ್ಯೋಗೇ ತ್ವಿಮಾಂ ಶೃಣು' ಎಂದು ಎರಡನೆಯ ಅಧ್ಯಾಯದಲ್ಲಿ ಪ್ರತಿಜ್ಞೆ ಮಾಡಿ ಮುಂದೆ ಆರನೇ ಅಧ್ಯಾಯ ಸಮಾಪ್ತಿವರೆಗೆ ಕಾಮಾದಿವರ್ಜನಾದಿರೂಪ ಕ್ರಮಸಹಿತವಾದ ಧ್ಯಾನರೂಪವಾದ ಕರ್ಮವೆಂಬ ಜ್ಞಾನಸಾಧನವನ್ನು ಹೇಳಲಾಯಿತು. ಅದರಲ್ಲಿ ಕಾಮಾದಿ ವರ್ಜನಾದಿ ರೂಪವಾದ ಇತಿಕರ್ತವ್ಯತಾಂಶವನ್ನು ಮುಂದಿನ ಹದಿನಾಲ್ಕರಿಂದ ಹದಿನೆಂಟನೆ ಅಧ್ಯಾಯದವರೆಗೆ ಐದು ಅಧ್ಯಾಯಗಳಲ್ಲಿ ವಿವರಿಸಲಾಗುತ್ತದೆ ಎಂಬುದು ಸಮಗ್ರ ಪ್ರಘಟ್ಟದ ಅಭಿಪ್ರಾಯ.

**ತತ್ರ ಬಂಧಪ್ರಕಾರೇ ಜ್ಞಾತೇ ಸತ್ಯೇವ ತನ್ಮೋಚನಸಾಧನಸ್ಯ ತದಿತಿಕರ್ತವ್ಯಸ್ಯ ಚ ಅನುಷ್ಠಾನಾಯ ತತ್ಪ್ರಪಂಚನಂ ಯುಜ್ಯತೇ । ಬಂಧಶ್ಚ 'ಕಾರಣಂ ಗುಣ-**

**ಸಂಗೋಽಸ್ಯ' (13-22) ಇತಿ ಪೂರ್ವಾಧ್ಯಾಯೋಕ್ತದಿಶಾ ತ್ರಿಗುಣಾತ್ಮಕಃ । ಅತೋ 'ಯಾವತ್ ಸಂಜಾಯತೇ' (13-27) ಇತ್ಯಾದಿನಾ ಪೂರ್ವಾಧ್ಯಾಯೋಕ್ತ ಕ್ಷೇತ್ರಕ್ಷೇತ್ರಜ್ಞಸಂಯೋಗಹೇತುಕಪ್ರಾಣಿ ಜನನ ವಿವರಣಪೂರ್ವಕಂ ತ್ರಿಗುಣವಿಕಾರಸ್ಥಿತಿಂ ತದತ್ಯಯೋಪಾಯಂ ಚ ದರ್ಶಯತಿ ಅಸ್ಮಿನ್ ಅಧ್ಯಾಯೇ ।**

**'ಕಾರ್ಯತೇ ಹ್ಯವಶಃ ಕರ್ಮ' (3-5) ಇತಿ ತೃತೀಯಾಧ್ಯಾಯೇ ಸಂಕ್ಷೇಪೇಣ ತ್ರೈಗುಣ್ಯಸ್ಯ ಉಕ್ತತ್ವೇಽಪಿ ಇಹ ತಸ್ಯ ವಿವಿಚ್ಯ ಕೀರ್ತನಮ್ ಇತಿ ಜ್ಞೇಯಮ್ ॥**

**ಅನುವಾದ-** ಅಲ್ಲಿಬಂಧನದ ರೀತಿ ತಿಳಿದರೇನೆ ಅದರಿಂದ ಬಿಡುಗಡೆಯ ಸಾಧನವನ್ನು ಮತ್ತು ಅದರ ಕ್ರಮವನ್ನು ಅನುಷ್ಠಾನಗೊಳಿಸಲು ಸಾಧ್ಯ. ಆದುದರಿಂದ ಬಂಧನದ ವಿವರಣೆಯನ್ನು ಹೇಳುವುದು ಯುಕ್ತವಾಗಿದೆ. ಬಂಧನವಾದರೋ **'ಕಾರಣಂ ಗುಣ ಸಂಗೋಽಸ್ಯ'** ಎಂದು ಹಿಂದಿನ (13) ಅಧ್ಯಾಯದಲ್ಲಿ ತಿಳಿಸಿದಂತೆ ತ್ರಿಗುಣಾತ್ಮಕವಾದುದು. ಆದ್ದರಿಂದ **'ಯಾವತ್ ಸಂಜಾಯತೇ....'** ಮುಂತಾದ ಮಾತುಗಳಿಂದ ಪೂರ್ವಾಧ್ಯಾಯದಲ್ಲಿ ಜೀವರ ಜನನವನ್ನು ಕುರಿತು ಚಿತ್‌ಪ್ರಕೃತಿ-ಪರಮಾತ್ಮರ ಸಂಬಂಧವು ಕಾರಣವೆಂದು ತಿಳಿಸಿರುವುದನ್ನು ವಿವರಿಸುತ್ತ ತ್ರಿಗುಣವಿಕಾರಸ್ಥಿತಿಯನ್ನು ಅದನ್ನು ದಾಟುವ ಉಪಾಯವನ್ನು ಕೂಡ ಈ ಅಧ್ಯಾಯದಲ್ಲಿತಿಳಿಸುತ್ತಾನೆ ಶ್ರೀಕೃಷ್ಣ.

**ಕಾರ್ಯತೇ ಹ್ಯವಶಃ ಕರ್ಮ** ಎಂದು ಮೂರನೇಯ ಅಧ್ಯಾಯದಲ್ಲಿ ಸಂಕ್ಷೇಪವಾಗಿ ತ್ರೈಗುಣ್ಯವನ್ನು ಅಂದರೆ ತ್ರಿಗುಣಗಳ ಕಾರ್ಯವನ್ನು ಹೇಳಿದೆಯಾದರೂ ಈ ಅಧ್ಯಾಯದಲ್ಲಿ ಅದನ್ನು ಬಿಡಿಸಿ ವಿವರವಾಗಿ ಹೇಳಿದ್ದಾರೆಂದು ತಿಳಿಯಬೇಕು.

**ಶ್ರೋತುಃ ಆದರಜನನಾಯ ವಕ್ಷ್ಯಮಾಣಮರ್ಥಂ ಪ್ರತಿಜ್ಞಾಯ ಸ್ತೌತಿ- 'ಪರಮ್' ಇತಿ ದ್ವಯೇನ ॥ ಪರಮ್= ಅನ್ಯದ್ । ಭೂಯಃ= ಪುನಃ, ಪ್ರವಕ್ಷ್ಯಾಮಿ । ತತ್ ಕಿಮ್ ಇತ್ಯತ ಉಕ್ತಮ್ - ಜ್ಞಾನಾನಾಮ್ ಇತಿ ॥ ಕರ್ಮಣಿ ಲ್ಯುಟ್ । ಜ್ಞಾತವ್ಯಾನಾಂ ಮಧ್ಯೇ ಉತ್ತಮಂ ಜ್ಞಾನಂ= ಜ್ಞಾತವ್ಯಮ್ ಯದ್ ಜ್ಞಾತ್ವಾ ಮುನಯಃ= ಮನನಶೀಲಾಃ ಸರ್ವೇ, ಇತಃ= ಸಂಸಾರಾತ್, ಪರಾಂ ಸಿದ್ಧಿಂ= ಮೋಕ್ಷಂ, ಗತಾಃ = ಪ್ರಾಪ್ತಾಃ ॥**

ಶ್ರೋತೃಗಳಿಗೆ ಆದರ ಹುಟ್ಟಿಸಲು ಮುಂದೆ ಹೇಳಲಿರುವ ವಿಷಯವನ್ನು ಪ್ರತಿಜ್ಞೆ ಮಾಡಿ ಅದನ್ನು ಪ್ರಶಂಸೆ ಮಾಡುತ್ತಿದ್ದಾನೆ - ಪರಮ್ - ಎಂಬ ಎರಡು ಶ್ಲೋಕದಿಂದ.

**ಪರಂ**= ಬೇರೆ . **ಭೂಯಃ**= ಮತ್ತೆ ಹೇಳುತ್ತೇನೆ. ಅದೇನೆಂದರೆ ಹೇಳೋಣವಾಗುತ್ತದೆ-

ಜ್ಞಾನಾನಾಂ ಎಂದು. ಜ್ಞಾಧಾತುವಿಗೆ ಕರ್ಮಾರ್ಥದಲ್ಲಿ ಲ್ಯುಟ್‌ಪ್ರತ್ಯಯ ಬಂದು ಜ್ಞಾನ ಎಂದಾಗಿದೆ. ತಿಳಿಯಲ್ಪಡಬೇಕಾದ ಎಂದರ್ಥ. ತಿಳಿಯಲ್ಪಡಬೇಕಾದ ವಿಷಯಗಳ ಮಧ್ಯದಲ್ಲಿ, **ಉತ್ತಮಂ ಜ್ಞಾನಂ**= ಉತ್ತಮವಾದ ಜ್ಞಾತವ್ಯಾಂಶವನ್ನು. **ಯದ್ ಜ್ಞಾತ್ವಾ** = ಯಾವುದನ್ನು ತಿಳಿದು **ಮುನಯಃ**= ಮನನ ಶೀಲರಾದ ಎಲ್ಲರೂ **ಇತಃ** = ಈ ಸಂಸಾರದಿಂದ, **ಪರಾಂ ಸಿದ್ಧಿಂ**= ಮೋಕ್ಷವನ್ನು **ಗತಾಃ**= ಹೊಂದಿರುವರು. ॥ 1 ॥

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇऽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥ 2 ॥**

**ಅರ್ಥ-** ಈ ಜ್ಞಾನವನ್ನು ಹೊಂದಿ ನನ್ನ ಸಾರೂಪ್ಯವನ್ನು ಪಡೆದವರು ಸೃಷ್ಟಿಕಾಲದಲ್ಲಿ ಹುಟ್ಟುವುದೂ ಇಲ್ಲ, ಪ್ರಲಯಕಾಲದಲ್ಲಿ ವ್ಯಥೆಗೊಳ್ಳುವುದೂ ಇಲ್ಲ.

**ಇದಂ ಜ್ಞಾನಂ ವಕ್ಷ್ಯಮಾಣಾರ್ಥಜ್ಞಾನಮುಪಾಶ್ರಿತ್ಯ ಸಂಪಾದ್ಯ ಮಮ ಸಾಧರ್ಮ್ಯಂ ಸಾರೂಪ್ಯಂ ಆಗತಾಃ ಪ್ರಾಪ್ತಾಃ । ಶಿಷ್ಟಂ ವ್ಯಕ್ತಮ್ ॥ 2 ॥**

**ಅನುವಾದ- ಇದಂ-** ಮುಂದೆ ಹೇಳುವ ಪ್ರಮೇಯದ ಜ್ಞಾನವನ್ನು , **ಉಪಾಶ್ರಿತ್ಯ**= ಸಂಪಾದಿಸಿ, ನನ್ನ , **ಸಾಧರ್ಮ್ಯಂ**= ಸಾರೂಪ್ಯವನ್ನು, **ಆಗತಾಃ**= ಹೊಂದಿದವರು. ಉಳಿದ ಶ್ಲೋಕದ ಅರ್ಥ ಸ್ಪಷ್ಟವಾಗಿದೆ. ॥ 2 ॥

## ಶ್ರೀದೇವಿಯ ಮೂಲಕ ವಿಶ್ವೋತ್ಪತ್ತಿ

**ಮಮ ಯೋನಿರ್ಮಹದ್ ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।**
**ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥ 3 ॥**

**ಅರ್ಥ –** ಅರ್ಜುನ ! ಚೇತನ ಪ್ರಕೃತಿಯಾದ ಮಹಾಲಕ್ಷ್ಮಿ ನನ್ನ ಪತ್ನಿಯಾಗಿರುವಳು. ಇಪ್ಪತ್ತ ನಾಲ್ಕು ತತ್ವಾಂಶಗಳಿಂದ ಸಹಿತರಾದ ಜೀವರನ್ನು ನಾನು ನನ್ನ ಉದರದಿಂದ ರೇತಸ್ಸಿನ ರೂಪದಲ್ಲಿ ಹೊರಗೆ ತಂದು ಅವಳ ಉದರದಲ್ಲಿ ಇಡುತ್ತೇನೆ. ಅದರಿಂದ ಜೀವಿಗಳೆಲ್ಲರ ದೇಹ ಸಂಬಂಧ ರೂಪವಾದ ಜನನ ಉಂಟಾಗುವುದು.

**ಪ್ರತಿಜ್ಞಾತಾರ್ಥಮಾಹ- ಮಮ ಇತಿ ॥ ಮಹದ್ ಬ್ರಹ್ಮ= ಮಹತೀ ಚಿತ್-ಪ್ರಕೃತಿಃ । ಮಮ ಯೋನಿಃ= ಭಾರ್ಯಾ, ತಸ್ಮಿನ್ = ಬ್ರಹ್ಮಣಿ ಚಿತ್ಪ್ರಕೃತೌ ಗರ್ಭಂ ದಧಾಮಿ । ಚತುರ್ವಿಂಶತಿತತ್ವಾಂಶಯುತಾನ್ ಜೀವಾನ್ ಸ್ವೋದರಸ್ಥಾನ್ ರೇತೋರೂಪೇಣ ನಿರ್ವಾಸ್ಯ ಚಿತ್ ಪ್ರಕೃತ್ಯುದರೇ ನಿಕ್ಷಿಪಾಮಿ ಇತ್ಯರ್ಥಃ । ತತಃ**

**ತತ್ರ ನಿಕ್ಷೇಪಾದ್ ಭೂತಾನಾಂ ಪ್ರಾಣಿನಾಂ ದೇಹಯೋಗರೂಪಸಂಭವೋ= ಜನ್ಮ ಭವತಿ ! 'ಓಂ ಜ್ಞೋಽತ ಏವ ಓಂ (2-3-18) ಓಂ ಯುಕ್ತೇಃ ಶಬ್ದಾಂತರಾಚ್ಚ ಓಂ (2-3-19) ಇತಿ ಸೂತ್ರಕೃದುಕ್ತೇಃ ॥ 3 ॥**

**ಅನುವಾದ-** ಪ್ರತಿಜ್ಞೆ ಮಾಡಿದ ವಿಷಯವನ್ನು ಈ ಶ್ಲೋಕದಲ್ಲಿ ಹೇಳುತ್ತಿದ್ದಾನೆ. **ಮಹದ್ ಬ್ರಹ್ಮ**= ಹಿರಿಯಳಾದ ಚಿತ್‌ಪ್ರಕೃತಿಯು ನನ್ನ, **ಯೋನಿಃ** = ಹೆಂಡತಿಯು. **ತಸ್ಮಿನ್**= ಆ ಚಿತ್ ಪ್ರಕೃತಿಯಲ್ಲಿಗರ್ಭವನ್ನು ಇಡುತ್ತೇನೆ. ಇಪ್ಪತ್ತನಾಲ್ಕು ತತ್ವಾಂಶಗಳಿಂದ ಕೂಡಿದ, ನನ್ನ ಉದರ ದಲ್ಲಿರುವ ಜೀವರನ್ನು ರೇತಸ್ಸಿನ ರೂಪದಿಂದ ಹೊರ ಎಳೆದು ಚಿತ್‌ಪ್ರಕೃತಿಯ ಉದರದಲ್ಲಿ ಇಡುತ್ತೇನೆಂದು ಅಭಿಪ್ರಾಯ. **ತತಃ**= ಅಲ್ಲಿ ಇಡುವುದರಿಂದ ಎಲ್ಲ ಪ್ರಾಣಿಗಳ ದೇಹಯೋಗ ರೂಪವಾದ ಜನ್ಮವಾಗುತ್ತದೆ. **ಓಂ ಜ್ಞೋಽತ ಏವ ಓಂ, ಓಂ ಯುಕ್ತೇಃ ಶಬ್ದಾಂತರಾಚ್ಚ ಓಂ** ಎಂಬ ಬ್ರಹ್ಮಸೂತ್ರಗಳಲ್ಲಿ ಇದನ್ನೆ ಹೇಳಲಾಗಿದೆ. **ಜ್ಞಃ**= ಜೀವನೂ ಸಹ, **ಅತ ಏವ**= ಪರಮಾತ್ಮ ನಿಂದಲೇ ಹುಟ್ಟುವವನು. **ಯುಕ್ತೇಶ್ಚ**- ಜೀವನು ಸ್ವರೂಪದಿಂದ ನಿತ್ಯನಾಗಿದ್ದರೂ ಅವನಿಗೆ ದೇಹ ಸಂಬಂಧರೂಪ ಉತ್ಪತ್ತಿಯು ಯುಕ್ತವೇ ಆದುದರಿಂದ ಜೀವನು ಉತ್ಪತ್ತಿಯುಳ್ಳವನು. ॥ 3 ॥

## ಸೃಷ್ಟಿಗೆ ನಾನು ಬೀಜಪ್ರದನಾದ ತಂದೆ

**ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ ।**
**ತಾಸಾಂ ಬ್ರಹ್ಮ ಮಹದ್‌ಯೋನಿರಹಂ ಬೀಜಪ್ರದಃ ಪಿತಾ ॥ 4 ॥**

**ಅರ್ಥ-** ದೇವ, ಮನುಷ್ಯ, ತಿರ್ಯಕ್, ಮುಂತಾದ ಎಲ್ಲ ಜಾತಿಗಳಲ್ಲಿ ಯಾವ ಯಾವ ಶರೀರಗಳು ಹುಟ್ಟುತ್ತವೆಯೋ ಅವುಗಳಿಗೆಲ್ಲ ಚೇತನ ಪ್ರಕೃತಿಯಾದ ಮಹಾಲಕ್ಷ್ಮಿ ಭೂಮಿಯಂತೆ ಕಾರಣಳು. ಆ ಭೂಮಿಯಲ್ಲಿ ಬೀಜಬಿತ್ತುವ ತಂದೆ ನಾನು.

**ನ ಕೇವಲಮಾದಿಸರ್ಗೇ ಏವಾನಯೋಃ ಕಾರಣತ್ವಂ ಕಿಂತು ಸರ್ವದಾ ಇತ್ಯಾಹ- ಸರ್ವೇತಿ ॥ ದೇವಮನುಷ್ಯತಿರ್ಯಗಾದಿಯೋನಿಷು ಯಾಃ ಮೂರ್ತಯಃ= ಕಾರ್ಯವ್ಯಕ್ತಯಃ ಸಂಭವಂತಿ ತಾಸಾಂ ಮಹದ್ ಬ್ರಹ್ಮ= ಮಹಾಲಕ್ಷ್ಮೀಃ ಯೋನಿಃ= ಕ್ಷೇತ್ರರೂಪಂ ಕಾರಣಮ್ । ಅಹಂ ಬೀಜಪ್ರದಃ= ಗರ್ಭಾಧಾನಕರ್ತಾ ಪಿತಾ ॥**

**ಅನುವಾದ-** ಕೇವಲ ಆದಿಸೃಷ್ಟಿಯಲ್ಲಿಯೇ ಲಕ್ಷ್ಮೀನಾರಾಯಣರು ಕಾರಣರಲ್ಲ, ಯಾವಾಗಲೂ ಸೃಷ್ಟಿಯನ್ನು ಕುರಿತು ಲಕ್ಷ್ಮೀನಾರಾಯಣರೇ ಕಾರಣರೆಂದು ಹೇಳುತ್ತಿದ್ದಾನೆ ಈ ಶ್ಲೋಕದಲ್ಲಿ. **ಸರ್ವಯೋನಿಷು** = ದೇವ, ಮನುಷ್ಯ, ತಿರ್ಯಗಾದಿ ಎಲ್ಲ ಜನ್ಮಗಳಲ್ಲಿಯೂ

**ಯಾಃ ಮೂರ್ತಯಃ** = ಯಾವ ಶರೀರಗಳು, **ಸಂಭವಂತಿ**= ಹುಟ್ಟುತ್ತವೆಯೋ ಅವುಗಳಿಗೆ, **ಮಹದ್‌ಬ್ರಹ್ಮ**= ಮಹಾಲಕ್ಷ್ಮಿಯು **ಯೋನಿಃ**= ಭೂಮಿಯಂತೆ ಕಾರಣಳು. **ಅಹಂ**= ನಾನು, **ಬೀಜಪ್ರದಃ ಪಿತಾ**= ಗರ್ಭಾಧಾನ ಮಾಡುವ ತಂದೆ. ॥ 4 ॥

## ಸತ್ತ್ವಾದಿಗುಣಗಳು ಜೀವ ಬಂಧಕ

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥ 5 ॥**

**ಅರ್ಥ**- ಮಹಾಬಾಹುವೇ ! ತ್ರಿಗುಣಾತ್ಮಕ ಪ್ರಕೃತಿಯಿಂದ ಸಂಭವಿಸುವ ಅದರ ಅಂಶರೂಪವಾದ ಸತ್ತ್ವ ರಜಸ್ ತಮಸ್ ಎಂಬ ಮೂರು ಗುಣಗಳು ಹಾಗೂ ಚೇತನಪ್ರಕೃತಿ ಮಹಾಲಕ್ಷ್ಮಿಯಿಂದ ಸೃಷ್ಟಿಕಾಲದಲ್ಲಿ ಹೊರ ಬರುವ ಸದ್ಗುಣಮೂರ್ತಿಯೂ ಸತ್ತ್ವ ಅಭಿಮಾನಿನಿಯೂ ಆದ್ದರಿಂದ ಸತ್ತ್ವವೆನಿಸಿರುವ ಶ್ರೀದೇವಿ, ಸೃಷ್ಟ್ಯಾದಿ ರಂಜನೆಗೈಯುವವಳೂ ರಜೋಗುಣಾಭಿಮಾನಿನಿಯೂ ಆದುದರಿಂದ ರಜಸ್ ಎನಿಸಿರುವ ಭೂದೇವಿಯು, ಜೀವರ ಸುಖ ನಾಶಮಾಡುವವಳೂ , ತಮೋಗುಣ ಅಭಿಮಾನಿನಿಯೂ ಆದಕಾರಣ ತಮಸ್ ಎನಿಸಿರುವ ದುರ್ಗಾದೇವಿ ಹೀಗೆ ಲಕ್ಷ್ಮಿಯ ಮೂರು ರೂಪಗಳು ದೇಹದಲ್ಲಿರುವ ಸ್ವರೂಪತಃ ನಾಶರಹಿತ ನಾದ ಜೀವನನ್ನು ಬಂಧಿಸುತ್ತವೆ.

**ಯಾವತ್ ಸಂಜಾಯತ (13-27) ಇತ್ಯುಕ್ತಂ ಶ್ಲೋಕದ್ವಯೇನ ವಿವೃತ್ಯ ಇದಾನೀಂ ಯೋ ಹಿ ಬದ್ಧೋಽಸ್ಮಿ ಇತಿ ಜಾನಾತಿ ಸ ಏವ ತನ್ನಿವೃತ್ತಿಸಾಧನಂ ವಿಜಿಜ್ಞಾಸ್ಯ ಜ್ಞಾತ್ವಾ ಅನುತಿಷ್ಠತಿ । ಅತೋ ಬಂಧೋಚ್ಛೇದಃ ಸಾಧನಾನು-ಷ್ಠಾನಾಯ ತತ್‌ಸಾಧನಜ್ಞಾಪನಾರ್ಥಂ ಜಿಜ್ಞಾಸಾಮುತ್ಪಾದಯಿತುಂ ಗುಣತ್ರಯ-ಬಂಧಪ್ರಕಾರಂ ತಾವದಾಹ– ಸತ್ತ್ವಮ್ ಇತಿ ॥**

**ಅನುವಾದ**- 'ಯಾವತ್ ಸಂಜಾಯತೇ ಕಿಂಚಿತ್'- ಎಂಬ 13ನೇ ಅಧ್ಯಾಯದ ಶ್ಲೋಕ ದಲ್ಲಿ ಎಲ್ಲ ಸ್ಥಾವರ ಜಂಗಮಗಳು ಚಿತ್‌ಪ್ರಕೃತಿ ಪರಮಾತ್ಮರ ಸಂಯೋಗದಿಂದ ಹುಟ್ಟುತ್ತವೆ ಎಂದು ಹೇಳಿದ್ದನ್ನು ಈ ಅಧ್ಯಾಯದ 3 ಮತ್ತು 4ನೆಯ ಶ್ಲೋಕಗಳಿಂದ ವಿವರಿಸಲಾಯಿತು. ಈಗ ಗುಣತ್ರಯ ಬಂಧನಪ್ರಕಾರವನ್ನು ಹೇಳುತ್ತಿದ್ದಾನೆ. ಇದರ ಉದ್ದೇಶ ಹೀಗಿದೆ-

ಯಾರು ತಾನು ಬದ್ಧನಾಗಿದ್ದೇನೆಂದು ತಿಳಿಯುತ್ತಾನೆ ಅವನು ಮಾತ್ರವೇ ಬಂಧನಿವೃತ್ತಿಯ ಸಾಧನವನ್ನು ವಿಚಾರ ಮಾಡಿ ತಿಳಿದು ಅದನ್ನು ಅನುಷ್ಠಾನ ಮಾಡುತ್ತಾನೆ. ಆದ್ದರಿಂದ ಬಂಧನಿವೃತ್ತಿ ಸಾಧನವನ್ನು ಅನುಷ್ಠಾನ ಮಾಡಬೇಕಾದರೆ ಆ ಸಾಧನದ ಬಗ್ಗೆ ತಿಳಿಯುವ ಬಯಕೆ

ಹುಟ್ಟಬೇಕು. ಅದಕ್ಕೋಸ್ಕರ ಗುಣತ್ರಯದಿಂದಾಗುವ ಬಂಧನದ ರೀತಿಯನ್ನು ಈಗ ಕೃಷ್ಣನು ತಿಳಿಸುತ್ತಿದ್ದಾನೆ- ಸತ್ತ್ವಂ ಎಂಬ ಪದ್ಯದಿಂದ.

**ಪ್ರಕೃತಿ ಸಂಭವಾಃ= ತ್ರಿಗುಣಾತ್ಮಕ ಜಡಪ್ರಕೃತಿತಃ ಸಂಭವಂತಃ, ತದಂಶಭೂತಾಃ ಸತ್ತ್ವಂ ರಜಸ್ತಮ ಇತಿ ಗುಣಾಃ ತಥಾ ಪ್ರಕೃತಿಸಂಭವಾಃ= ಚಿತ್‌ಪ್ರಕೃತಿತಃ ಸೃಷ್ಟಿಕಾಲೇ ವಿಭಜ್ಯಮಾನಾಃ ಸದ್ಗುಣತ್ವ-ಸೃಷ್ಟ್ಯಾದಿರಂಜನಕರ್ತೃತ್ವಜೀವಗ್ಲಪನಹೇತುತ್ವ-ನಿಮಿತ್ತೈಃ ಕ್ರಮಾತ್ ಸತ್ವರಜಸ್ತಮಶ್ಶಬ್ದಿತಾಃ ಶ್ರೀಭೂದುರ್ಗಾಖ್ಯಾಃ ಗುಣಾಃ ಕ್ರಮಾದ್ ಗುಣತ್ರಯಾಭಿಮಾನಿನ್ಯಃ ತಿಸ್ರಃ ದೇವ್ಯಶ್ಚ ದೇಹೇ ಸ್ಥಿತಮವ್ಯಯಂ= ಸ್ವರೂಪತಃ ವ್ಯಯಹೀನಂ ಜೀವಮ್ । ಜಾತ್ಯೇಕವಚನಮ್ । ಜೀವಜಾತಂ ನಿಬಧ್ನಂತಿ ।**

**ಅನುವಾದ-** ಪ್ರಕೃತಿಸಂಭವಾಃ= ತ್ರಿಗುಣಾತ್ಮಕ ಜಡ ಪ್ರಕೃತಿಯಿಂದ ಉಂಟಾಗುವ, ಆ ಪ್ರಕೃತಿಯ ಅಂಶಗಳಾದ ಸತ್ತ್ವ-ರಜಸ್-ತಮಸ್ ಎಂಬ ಗುಣಗಳು ಹಾಗೆಯೇ, **ಪ್ರಕೃತಿ-ಸಂಭವಾಃ=** ಚೇತನ ಪ್ರಕೃತಿ ಮಹಾಲಕ್ಷ್ಮಿಯಿಂದ ಸೃಷ್ಟಿಕಾಲದಲ್ಲಿ ಹೊರಗೆ ಬರುವ ಸದ್ಗುಣ ಮೂರ್ತಿಯಾಗಿದ್ದು ಸತ್ವಗುಣಕ್ಕೆ ಅಭಿಮಾನಿನಿಯಾದುದರಿಂದ ಸತ್ವ ಎನಿಸುವ ಶ್ರೀದೇವಿ, ಸೃಷ್ಟಿ ಮುಂತಾದ ರೂಪವಾದ ರಂಜನೆಯನ್ನು ಮಾಡುತ್ತ ರಜೋಗುಣದ ಅಭಿಮಾನಿನಿ ಆಗಿರುವುದರಿಂದ ರಜಸ್ ಎನಿಸುವ ಭೂದೇವಿ, ಜೀವನಿಗೆ ಸುಖನಾಶ ಮಾಡುವ ಕಾರಣದಿಂದ ಹಾಗೂ ತಮೋಗುಣಕ್ಕೆ ಅಭಿಮಾನಿನಿಯಾಗಿರುವುದರಿಂದಲೂ ತಮಸ್ ಎಂದು ಕರೆಸಿಕೊಳ್ಳುವ ದುರ್ಗಾದೇವಿ ಎಂಬ ಮಹಾಲಕ್ಷ್ಮಿಯ ಮೂರು ರೂಪಗಳು ದೇಹದಲ್ಲಿರುವ ಸ್ವರೂಪತಃ ನಾಶರಹಿತನಾದ ಸಂಸಾರಿಜೀವನನ್ನು ಬಂಧಿಸುತ್ತವೆ.

**ಸರ್ವಾಸಾಂ ಸರ್ವಜೀವಬಂಧಕತ್ತ್ವೇಽಪಿ ಸತ್ತ್ವಮಾನಿನೀ ಶ್ರೀಃ ದೇವಬಂಧಿಕಾ, ರಜೋಽಭಿಮಾನಿನೀ ಭೂದೇವೀ ಮನುಷ್ಯಬಂಧಿಕಾ, ತಮೋಽಭಿಮಾನಿನೀ ದುರ್ಗಾ ದೈತ್ಯಬಂಧಿಕಾ, ಇತಿ ವಿಶೇಷೋ ಜ್ಞೇಯಃ । ಅತ್ರ ದೇಹೇ ಇತ್ಯುಕ್ತಿಃ ಭೂತಪೂರ್ವಗತ್ಯಾ ಮುಕ್ತಾನಾಮಪಿ ದೇಹಿತ್ವಾತ್ ತದ್‌ವ್ಯಾವೃತ್ತ್ಯರ್ಥಾ ॥ 5 ॥**

**ಅನುವಾದ-** ರಮಾದೇವಿಯ ಎಲ್ಲರೂಪಗಳೂ ಎಲ್ಲ ಜೀವರನ್ನು ಬಂಧಿಸುತ್ತಿದ್ದರೂ ವಿಶೇಷವಾಗಿ ಸತ್ತ್ವಾಭಿಮಾನಿನಿ ಶ್ರೀದೇವಿ ದೇವತೆಗಳನ್ನು, ರಜೋಽಭಿಮಾನಿನಿ ಭೂದೇವಿ ಮನುಷ್ಯರನ್ನು ತಮೋಭಿಮಾನಿನಿ ದುರ್ಗಾದೇವಿ ದೈತ್ಯರನ್ನೂ ಬಂಧಿಸುವಳು. 'ದೇಹದಲ್ಲಿರುವ ಜೀವನನ್ನು ಎಂದು ಹೇಳಿದ್ದರಿಂದ ಹಿಂದೆ ಸಂಸಾರ ಅವಸ್ಥೆಯಲ್ಲಿ ದೇಹಿಗಳಾಗಿದ್ದರೂ ಈಗ ದೇಹದ ಬಂಧನವಿರದ ಮುಕ್ತರನ್ನು ತ್ರಿಗುಣಗಳು ಬಂಧಿಸುವುದಿಲ್ಲ ಎಂದು ತಿಳಿಯುತ್ತದೆ.॥ 5

## ಸತ್ವಗುಣದ ಬಂಧನ ಕ್ರಮ

**ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥ 6 ॥**

**ಅರ್ಥ-** ಪಾಪರಹಿತನೆ ! ಆ ಮೂರುಗುಣಗಳಲ್ಲಿ ಸತ್ತ್ವಗುಣವು, ಆ ಮೂರು ಲಕ್ಷ್ಮೀ ರೂಪಗಳಲ್ಲಿ ಶ್ರೀರೂಪವು ನಿರ್ಮಲವಾದುದರಿಂದ ಜ್ಞಾನಜನಕವು ರೋಗಾದಿಪರಿಹಾರಕವು ಆಗಿ ಸುಖಾಸಕ್ತಿಯಿಂದ ಜ್ಞಾನಾಸಕ್ತಿಯಿಂದಲೂ ದೇವತೆಗಳನ್ನು ಬಂಧಿಸುತ್ತದೆ.

**ಶ್ರೀಭೂದುರ್ಗಾಭಿಃ ಕ್ರಿಯಮಾಣಂ ದೇವಾದಿತ್ರಿತಯವಿಷಯಬಂಧನ-ಪ್ರಕಾರಂ ವಿವಿಚ್ಯ ಆಹ- ತತ್ರೇತ್ಯಾದಿತ್ರಯೇಣ ॥ ತತ್ರ = ತೇಷು ಗುಣೇಷು, ತಾಸು ದೇವೀಷು, ಸತ್ತ್ವಂ= ಸತ್ತ್ವಾಭಿಮಾನಿ ಶ್ರೀತತ್ತ್ವಂ, ನಿರ್ಮಲತ್ವಾತ್, ಅನಾಮಯಂ= ನ ವಿದ್ಯತೇ ಆಮಯಃ= ವ್ಯಾಧ್ಯಾದ್ಯುಪದ್ರವಃ ಯಸ್ಮಾತ್ ತತ್, ತಚ್ಚ ಪ್ರಕಾಶಕಂ= ತತ್ವಜ್ಞಾನೋತ್ಪಾದಕಂ ಸತ್, ಸುಖಸಂಗೇನ, ತತ್ವಜ್ಞಾನಸಂಗೇನ ಚ ದೇವಾನ್ ಬಧ್ನಾತಿ ॥**

**ಅನುವಾದ-** ಶ್ರೀಭೂದುರ್ಗೆಯರಿಂದ ಮಾಡಲ್ಪಡುವ ದೇವ-ಮನುಷ್ಯ-ದೈತ್ಯರ ಬಂಧನದ ರೀತಿಯನ್ನು ಪ್ರತ್ಯೇಕವಾಗಿ ಹೇಳುತ್ತಿದ್ದಾರೆ 'ತತ್ರ' ಎಂಬ ಮುಂದಿನ ಮೂರು ಶ್ಲೋಕಗಳಿಂದ.

**ತತ್ರ**= ಆ ಮೂರು ಗುಣಗಳಲ್ಲಿ ಆ ಮೂರು ಲಕ್ಷ್ಮೀರೂಪಗಳಲ್ಲಿ, **ಸತ್ತ್ವಂ**= ಸತ್ತ್ವಾಭಿಮಾನಿ ಶ್ರೀತತ್ವವು ನಿರ್ಮಲವಾದುದರಿಂದ, **ಅನಾಮಯಂ**= ರೋಗಾದಿಪರಿಹಾರಕವಾಗಿ, **ಪ್ರಕಾಶಕಂ**= ಜ್ಞಾನಜನಕವಾಗಿ, **ಸುಖಸಂಗೇನ**= ಸುಖಾಸಕ್ತಿಯಿಂದಲೂ, **ಜ್ಞಾನಸಂಗೇನ ಚ**= ಜ್ಞಾನಾಸಕ್ತಿಯಿಂದಲೂ ದೇವತೆಗಳನ್ನು ಬಂಧಿಸುತ್ತದೆ. ॥ 6 ॥

## ರಜೋಗುಣ ಕರ್ಮಾಸಕ್ತಿ ನೀಡುವ ಮೂಲಕ ಬಂಧಕ

**ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್ ।**
**ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್ ॥ 7 ॥**

**ಅರ್ಥ -** ಕೌಂತೇಯ ! ಆಸೆ, ಆಸಕ್ತಿಗಳಿಗೆ ಕಾರಣವಾದ ರಜೋಗುಣವು ಅದರ ಅಭಿಮಾನಿ ಭೂರೂಪವು ಸೃಷ್ಟ್ಯಾದಿರೂಪರಂಜನೆಯನ್ನು ಮಾಡುವ ಸ್ವಭಾವವುಳ್ಳದ್ದು ಎಂದು ತಿಳಿ. ಅದು ಮನುಷ್ಯ ಜೀವನನ್ನು ಕರ್ಮಾಸಕ್ತಿಯಿಂದ ಬಂಧಿಸುತ್ತದೆ.

**ತೃಷ್ಣಾ ನಾಮ ಇದಂ ಮೇ ಭೂಯಾದಿತ್ಯಾಶಾ । ಸಂಗೋ ವಸ್ತುಷ್ವಾಸಕ್ತಿಃ । ತಯೋಃ ಸಮುದ್ಭವೋ ಯಸ್ಮಾತ್ತತ್ । ರಜೋಭಿಮಾನಿನೀ ಭೂದೇವೀ ಭೂತತ್ವಂ ಚ ರಾಗಾತ್ಮಕಂ ಸೃಷ್ಟ್ಯಾದಿರಂಜನಸ್ವರೂಪಂ ವಿದ್ಧಿ । ತದ್ ದ್ವಿವಿಧಂ ರಜಃ ಕರ್ಮಸಂಗೇನ ದೇಹಿನಂ ಮಾನುಷಂ ಜೀವಂ ಬಧ್ನಾತಿ ॥ 7 ॥**

**ಅನುವಾದ-** ತೃಷ್ಣಾ ಎಂದರೆ ಇದು ನನಗೆ ಬೇಕೆಂಬ ಆಸೆ. **ಸಂಗಃ=** ವಸ್ತುಗಳಲ್ಲಿ ಆಸಕ್ತಿಯು. ಅವುಗಳ ಕಾರಣವಾದ ರಜೋಗುಣವೂ ಅದರ ಅಭಿಮಾನಿ ಭೂರೂಪವೂ ಅಂದರೆ ಭೂತತ್ವವು **ರಾಗಾತ್ಮಕಂ** = ಸೃಷ್ಟ್ಯಾದಿರೂಪರಂಜನೆಯ ಸ್ವಭಾವವುಳ್ಳದ್ದೆಂದು ತಿಳಿ . **ತದ್**= ಆ ಎರಡು ಬಗೆಯ ರಜೋಗುಣವು ಅಂದರೆ ರಜೋಗುಣ ಮತ್ತು ಅದರ ಅಭಿಮಾನಿ ಭೂರೂಪವು ಕರ್ಮಾಸಕ್ತಿಯಿಂದ ಮನುಷ್ಯಜೀವರನ್ನು ಬಂಧಿಸುತ್ತದೆ. ॥ 7 ॥

## ತಮೋಗುಣದ ಬಂಧನ ಪ್ರಕಾರ

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।**
**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥ 8 ॥**

**ಅರ್ಥ-** ಅಜ್ಞಾನಕ್ಕೆ ಕಾರಣವಾದ ತಮೋಗುಣವು ಅದರ ಅಭಿಮಾನಿ ದುರ್ಗಾ ತತ್ವವು ಎಲ್ಲ ದೈತ್ಯರಿಗೆ ಮಿಥ್ಯಾಜ್ಞಾನ ಜನಕವೆಂದು ತಿಳಿ. ಅದು ಪ್ರಮಾದ, ಆಲಸ್ಯ, ನಿದ್ರೆಗಳಿಂದ ದೈತ್ಯರನ್ನು ಬಂಧಿಸುತ್ತದೆ.

**ಅಜ್ಞಾನಂ ಜಾಯತೇ ಯತಃ ತದಜ್ಞಾನಜಂ ತಮಃ ತಮೋಽಭಿಮಾನಿನೀ ದುರ್ಗಾ, ತತ್ತ್ವಂ ಚ ಸರ್ವದೇಹಿನಾಂ ಮೋಹನಂ= ಮಿಥ್ಯಾಜ್ಞಾನಜನಕಂ ವಿದ್ಧಿ । ತದ್ = ದ್ವಿರೂಪಂ ತಮಃ ಪ್ರಮಾದಾದಿಭಿಃ ದೈತ್ಯಜನಂ ನಿಬಧ್ನಾತಿ ॥ 8 ॥**

**ಅನುವಾದ-** ಅಜ್ಞಾನ ಯಾವುದರಿಂದ ಹುಟ್ಟುವುದೋ ಆ ತಮೋಽಭಿಮಾನಿನಿ ದುರ್ಗೆ ಮತ್ತು ತಮೋಗುಣವು ಕೂಡ, ಎಲ್ಲದೈತ್ಯರಿಗೂ ಮಿಥ್ಯಾಜ್ಞಾನಜನಕವೆಂದು, ವಿದ್ಧಿ= ತಿಳಿ. ಆ ಎರಡು ಬಗೆಯ ತಮಸ್ಸು ಅಧರ್ಮಬುದ್ಧಿ,ಆಲಸ್ಯ , ನಿದ್ರೆಗಳಿಂದ ದೈತ್ಯಜನರನ್ನು ಬಂಧಿಸುತ್ತದೆ. ॥ 8 ॥

## ತ್ರಿಗುಣಗಳ ಕಾರಬಾರು

**ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥ 9 ॥**

**ಅರ್ಥ**– ಸತ್ತ್ವಗುಣ, ಅದರ ಅಭಿಮಾನಿ ಶ್ರೀತತ್ತ್ವವು ಸುಖವಿಷಯದಲ್ಲಿ ಪ್ರವೃತ್ತಿವುಂಟು ಮಾಡುತ್ತದೆ. ರಜೋಗುಣವು ಅದರ ಅಭಿಮಾನಿ ಭೂತತ್ತ್ವವು ಕರ್ಮವಿಷಯದಲ್ಲಿ ಪ್ರವೃತ್ತಿ ವುಂಟು ಮಾಡುತ್ತದೆ. ತಮೋಗುಣವು ಅದರ ಅಭಿಮಾನಿ ದುರ್ಗಾತತ್ತ್ವವು ಮನಸ್ಸಿನ ಜ್ಞಾನ ಶಕ್ತಿಯನ್ನು ತಡೆ ಹಿಡಿದು ಅಧರ್ಮಬುದ್ಧಿ, ಆಲಸ್ಯ, ನಿದ್ರೆಗಳಲ್ಲಿ ಪ್ರವೃತ್ತಿವುಂಟುಮಾಡುತ್ತದೆ.

**ಸತ್ತ್ವಾದೀನಾಂ ಸುಖಾದಿಸಂಪಾದನೇನೈವ ಬಂಧಕತ್ವಮ್ ಇತಿ ನಿಯಮಂ ದೃಢಯತಿ- ಸತ್ತ್ವಮ್ ಇತಿ ॥ ಸತ್ತ್ವಂ= ಸತ್ತ್ವಾಭಿಮಾನಿನೀ ಶ್ರೀಶ್ಚ ಸುಖೇ= ಸುಖವಿಷಯೇ ಸಂಜಯತಿ= ಪ್ರವರ್ತಯತಿ ಇತ್ಯರ್ಥಃ। ರಜಃ ರಜೋಭಿಮಾನಿನೀ ಭೂದೇವೀ ಚ ಕರ್ಮವಿಷಯೇ ಸಂಜಯತಿ । ತಮಸ್ತು ತಮೋಭಿಮಾನಿನೀ ದುರ್ಗಾ ಚ ಜ್ಞಾನಮಾವೃತ್ಯ= ಮನಸಃ ತತ್ತ್ವಜ್ಞಾನಶಕ್ತಿಂ ಪ್ರತಿಬದ್ಧ್ಯ ಪ್ರಮಾದೇ= ಅಧರ್ಮೇ ಅಧರ್ಮಬುದ್ಧ್ಯಾದಿರೂಪೇ ಸಂಜಯತಿ। ಉತಶಬ್ದಾದ್ ಆಲಸ್ಯಾದಿ-ಗ್ರಹಃ ॥ 9 ॥**

**ಅನುವಾದ**- ಸತ್ತ್ವಾದಿಗುಣಗಳು ಸುಖಾದಿಗಳನ್ನುಂಟುಮಾಡುವ ಮೂಲಕವೇ ಬಂಧಕಗಳು ಎಂಬ ನಿಯಮವನ್ನು ದೃಢಪಡಿಸುತ್ತಿದ್ದಾರೆ 'ಸತ್ತ್ವಂ' ಎಂಬ ಶ್ಲೋಕದಿಂದ. ಸತ್ತ್ವಗುಣವು ಮತ್ತು ಅದರ ಅಭಿಮಾನಿಯಾದ ಶ್ರೀದೇವಿ ಸುಖವಿಷಯದಲ್ಲಿ ಪ್ರವೃತ್ತಿವುಂಟು ಮಾಡುತ್ತಾರೆ. ರಜೋಗುಣವು ಅದರ ಅಭಿಮಾನಿ ಭೂತತ್ತ್ವವು ಕರ್ಮವಿಷಯದಲ್ಲಿ ಪ್ರವೃತ್ತಿ ವುಂಟು ಮಾಡುತ್ತದೆ. ತಮೋಗುಣವು ಅದರ ಅಭಿಮಾನಿ ದುರ್ಗಾತತ್ತ್ವವು, ಮನಸ್ಸಿನ ತತ್ತ್ವಜ್ಞಾನಶಕ್ತಿಯನ್ನು ತಡೆ ಹಿಡಿದು ಅಧರ್ಮಬುದ್ಧಿ, ಆಲಸ್ಯ ,ನಿದ್ರೆಗಳಲ್ಲಿ ಪ್ರವೃತ್ತಿವುಂಟು ಮಾಡುತ್ತದೆ. ಶ್ಲೋಕದಲ್ಲಿ 'ಉತ'(=ಕೂಡ) ಶಬ್ದದಿಂದ ಆಲಸ್ಯ ನಿದ್ರೆಗಳನ್ನು ತೆಗೆದುಕೊಳ್ಳಬೇಕು. ॥ 9 ॥

## ಹರಿಕರುಣೆಯಿಂದ ಸತ್ವಗುಣವೃದ್ಧಿಯಾದಾಗ ಉಳಿದೆರಡು ಉದಾಸೀನವಾಗುವವು

**ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।**
**ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ॥ 10 ॥**

**ಅರ್ಥ**- ಅರ್ಜುನ ! ಈಶ್ವರೇಚ್ಛೆಯಿಂದ ಸತ್ತ್ವಗುಣವು ಉತ್ಕಟವಾದಾಗ ರಜಸ್ತಮೋ-ಗುಣಗಳನ್ನು , ರಜೋಗುಣವು ಉತ್ಕಟವಾದಾಗ ಸತ್ವತಮೋಗುಣಗಳನ್ನು, ತಮೋಗುಣವು ಉತ್ಕಟವಾದಾಗ ಸತ್ತ್ವರಜೋಗುಣಗಳನ್ನು ಮೆಟ್ಟಿನಿಂತು ತನ್ನ ಕಾರ್ಯ ಮಾಡಲು

ಸಮರ್ಥವಾಗುತ್ತದೆ. ಅಭಿಮಾನಿದೇವತಾರೂಪಗಳಲ್ಲಿ ಒಂದು ಕಾರ್ಯಪ್ರವೃತ್ತವಾದಾಗ ಉಳಿದೆರಡು ಉದಾಸೀನವಾಗಿರುತ್ತದೆ.

**ನನು ತ್ರಯಾಣಾಂ ಸರ್ವಬಂಧಕತ್ವಸಾಮ್ಯಾತ್ ಕಥಂ ಕಸ್ಯಚಿದೇವ ಗುಣಸ್ಯ ಕಾರ್ಯಂ ದೃಶ್ಯತೇ ಇತ್ಯತಃ ಉತ್ಕಟತ್ವಾನುತ್ಕಟತ್ವಾಭ್ಯಾಂ ಇತಿ ಭಾವೇನಾಹ- ರಜ ಇತಿ ॥ ಈಶ್ವರೇಚ್ಛಯಾ ಸತ್ತ್ವಂ ಉತ್ಕಟಂ ಸತ್ ರಜಸ್ತಮಶ್ಚಾಭಿಭೂಯ ಸ್ವಕಾರ್ಯದಕ್ಷಂ ಭವತಿ । ರಜಃ ತಥಾ ಉತ್ಕಟಂ ಸತ್ ತಮಃ ಸತ್ತ್ವಂ ಚ ಅಭಿಭೂಯ ಸ್ವಕಾರ್ಯದಕ್ಷಂ ಭವತಿ । ತಮಶ್ಚ ಉತ್ಕಟಂ ಸತ್ ರಜಃ ಸತ್ವಂ ಚ ಅಭಿಭೂಯ ಸ್ವಕಾರ್ಯಕಾರಿ ಭವತೀತ್ಯರ್ಥಃ । ಅಭಿಭವಶಬ್ದಿತಕಾರ್ಯಶಕ್ತಿ-ಪ್ರತಿಬಂಧೋ ಗುಣಾನಾಮೇವ । ದೇವಾನಾಂ ತು ಔದಾಸೀನ್ಯಮೇವೇತಿ ಜ್ಞಾತವ್ಯಮ್ ॥ 10 ॥**

**ಅನುವಾದ-** ಮೂರು ಗುಣಗಳು ಸಮಾನವಾಗಿ ಎಲ್ಲರಿಗೂ ಬಂಧಕವಾಗಿರುವಾಗ ಯಾವುದೊ ಒಂದೇ ಗುಣದ ಕಾರ್ಯ ಕಾಣುತ್ತದೆಯಲ್ಲ ಅದು ಹೇಗೆ? ಎಂದರೆ ಉತ್ಕಟತೆ ಹಾಗೂ ಅನುತ್ಕಟತೆಗಳಿಂದ ಎಂಬ ಅಭಿಪ್ರಾಯದಿಂದ ಹೇಳುತ್ತಿದ್ದಾರೆ. ಪರಮಾತ್ಮನ ಇಚ್ಛೆಯಿಂದ ಸತ್ತ್ವಗುಣವು ಉತ್ಕಟವಾದಾಗ ರಜೋಗುಣತಮೋಗುಣಗಳ ಕಾರ್ಯ ಶಕ್ತಿಯನ್ನು ತಡೆದು ತನ್ನ ಕಾರ್ಯವನ್ನು ಮಾಡಲು ಸಮರ್ಥವಾಗುತ್ತದೆ. ಹಾಗೆಯೇ ರಜೋಗುಣವು ಉತ್ಕಟವಾದಾಗ ತಮೋಗುಣ ಸತ್ವಗುಣಗಳ ಕಾರ್ಯಶಕ್ತಿಯನ್ನು ತಡೆದು ತನ್ನ ಕಾರ್ಯವನ್ನು ಮಾಡಲು ಸಮರ್ಥವಾಗುತ್ತದೆ. ತಮೋಗುಣವು ಉತ್ಕಟವಾದಾಗ ರಜೋಗುಣ ಸತ್ತ್ವಗುಣಗಳ ಕಾರ್ಯ ಸಾಮರ್ಥ್ಯವನ್ನು ತಡೆದು ತನ್ನ ಕಾರ್ಯವನ್ನು ಮಾಡುತ್ತದೆ. ಅಭಿಭವಶಬ್ದದ ಅರ್ಥವಾದ ಕಾರ್ಯಶಕ್ತಿಯ ತಡೆಯು ಗುಣಗಳಿಗೆ ಮಾತ್ರ. ಅಭಿಮಾನಿದೇವತೆಗಳು ಒಬ್ಬರು ಕಾರ್ಯ ಮಾಡುವಾಗ ಉಳಿದವರು ಉದಾಸೀನರಾಗಿರುತ್ತಾರಷ್ಟೆ. ॥ 10 ॥

## ಸತ್ತ್ವಾದಿಗಳಿಂದ ದೇಹದಲ್ಲಿ ಕಾಣುವ ಪರಿಣಾಮಗಳು

**ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾದ್ ವಿವೃದ್ಧಂ ಸತ್ತ್ವಮಿತ್ಯುತ ॥ 11 ॥**

**ಅರ್ಥ-** ಈ ದೇಹದಲ್ಲಿ ಶ್ರೋತ್ರಾದಿ ಸರ್ವದ್ವಾರಗಳಲ್ಲಿ ಶಬ್ದಾದಿ ಜ್ಞಾನರೂಪವಾದ ಪ್ರಕಾಶ ಮತ್ತು ಸುಖವು ಯಾವಾಗ ಉಂಟಾಗುವುದೋ ಆಗ ಸತ್ತ್ವಗುಣವು ಉತ್ಕಟವಾಗಿದೆಯೆಂದು ತಿಳಿಯಬೇಕು.

**ಕೇನ ಲಿಂಗೇನ ಸತ್ತ್ವಾದಿವೃದ್ಧಿರ್ಜ್ಞೇಯೇತ್ಯತ ಆಹ- ಸರ್ವೇತ್ಯಾದಿತ್ರಯೇಣ ॥ ಅಸ್ಮಿನ್ ದೇಹೇ ಸರ್ವದ್ವಾರೇಷು ಶ್ರೋತ್ರಾದಿಷು ಜ್ಞಾನಂ ಶಬ್ದಾದಿಜ್ಞಾನಾತ್ಮಕಃ ಪ್ರಕಾಶಃ । ಉತಶಬ್ದಾತ್ ಸುಖಾದಿ ಚೋಪಜಾಯತೇ ಯದಾ ತದಾ ಸತ್ತ್ವಂ ವಿವೃದ್ಧಮಿತಿ ವಿದ್ಯಾಜ್ಜಾನೀಯಾತ್ ॥ 11 ॥**

**ಅನುವಾದ-** ಯಾವ ಗಮಕದಿಂದ ಸತ್ತ್ವಾದಿಗುಣಗಳ ವೃದ್ಧಿಯನ್ನು ತಿಳಿಯಬೇಕು? ಎಂದರೆ ಹೇಳುತ್ತಿದ್ದಾರೆ- ಸರ್ವದ್ವಾರೇಷು ಇತ್ಯಾದಿ ಮೂರು ಶ್ಲೋಕಗಳಿಂದ. **ಸರ್ವದ್ವಾರೇಷು=** ಶ್ರೋತ್ರ ಮುಂತಾದ ಎಲ್ಲ ದ್ವಾರಗಳಲ್ಲಿ **ಜ್ಞಾನಂ=** ಈ ದೇಹದಲ್ಲಿ ಶಬ್ದಾದಿಗಳ ಜ್ಞಾನರೂಪವಾದ ಪ್ರಕಾಶವು 'ಉತ' (ಕೂಡ) ಶಬ್ದದಿಂದ ಸುಖಾದಿಗಳೂ ಕೂಡ ಯಾವಾಗ ಉಂಟಾಗುವುದೋ ಆಗ ಸತ್ತ್ವಗುಣವು ಅಭಿವೃದ್ಧವಾಗಿದೆಯೆಂದು ತಿಳಿಯಬೇಕು. ॥ 11 ॥

**ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ॥ 12 ॥**

**ಅರ್ಥ-** ಭರತವಂಶದ ಶ್ರೇಷ್ಠನೇ ! ಲೋಭ, ವ್ಯರ್ಥಪರಿಶ್ರಮ, ಕಾಮ್ಯಕರ್ಮದಲ್ಲಿ ತೊಡಗುವುದು, ಮನಸ್ಸಿನಲ್ಲಿ ಅಶಾಂತಿ, ಅಭಿಲಾಷೆಗಳು ರಜೋಗುಣವು ಉತ್ಕಟವಾದಾಗ ಉಂಟಾಗುತ್ತದೆ.

**ಲೋಭೋ ಧನಾದೇರತ್ಯಾಗೇಚ್ಛಾ । ಪ್ರವೃತ್ತಿರ್ವ್ಯರ್ಥೋದ್ಯೋಗಃ । ಕಾಮ್ಯ-ಕರ್ಮಣಾಮಾರಂಭಃ । ಅಶಮಃ ಚಿತ್ತಸ್ಯಾನುಪರತಿಃ । ಅಪ್ರಾಪ್ತಾಭಿಲಾಷಃ ಸ್ಪೃಹಾ । ಏತಾನಿ ವಿವೃದ್ಧೇ ರಜಸಿ ಜಾಯಂತೇ । ಏತೈ ರಜೋವೃದ್ಧಿರ್ಜ್ಞೇಯೇತಿ ಭಾವಃ ॥ 12 ॥**

**ಅನುವಾದ- ಲೋಭಃ=** ಧನಾದಿಗಳನ್ನು ಬಿಡದಿರುವ ಬಯಕೆ ! **ಪ್ರವೃತ್ತಿಃ=** ವ್ಯರ್ಥವಾದ ಪ್ರವೃತ್ತಿಗಳು. **ಕರ್ಮಣಾಂ ಆರಂಭಃ =** ಕಾಮ್ಯಕರ್ಮಗಳಲ್ಲಿ ತೊಡಗುವುದು. **ಅಶಮಃ=** ಮನದ ಅಶಾಂತಿ. **ಸ್ಪೃಹಾ=** ಪಡೆಯದೆ ಇರುವ ವಸ್ತುಗಳ ಅಭಿಲಾಷೆ. ಇವುಗಳು ರಜೋಗುಣವು ಉತ್ಕಟವಾದಾಗ ಉಂಟಾಗುತ್ತವೆ. ಇವುಗಳಿಂದ ರಜೋಗುಣವು ವೃದ್ಧಿಯಾಗಿದೆಯೆಂದು ತಿಳಿಯಬೇಕು. ॥ 12 ॥

**ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ ॥ 13 ॥**

**ಅರ್ಥ-** ಕುರುನಂದನ ! ಶ್ರೋತ್ರಾದಿಗಳಲ್ಲಿ ಶಬ್ದಾದಿ ಜ್ಞಾನಾಭಾವ, ಸತ್ಕಾರ್ಯದಲ್ಲಿ ತೊಡಗದಿರುವಿಕೆ, ಅನವಧಾನತೆ , ವಿಪರೀತಜ್ಞಾನ ಇವುಗಳು ತಮೋಗುಣ ಉತ್ಕಟವಾದಾಗ ಉಂಟಾಗುತ್ತವೆ.

**ಅಪ್ರಕಾಶಃ ಶ್ರೋತ್ರಾದಿಷು ಶಬ್ದಾದಿಜ್ಞಾನಾಭಾವಃ । ಅಪ್ರವೃತ್ತಿರನುದ್ಯಮಃ । ಪ್ರಮಾದೋಽನವಧಾನಮ್ । ಮೋಹೋ ವಿಪರ್ಯಯಃ । ಏತಾನಿ ತಮಸಿ ವಿವೃದ್ಧೇ ಜಾಯಂತೇ । ಏತೈರ್ಲಿಂಗೈಸ್ತಮೋವೃದ್ಧಿರ್ಜ್ಞೇಯೇತಿ ಭಾವಃ ॥ 13 ॥**

**ಅನುವಾದ- ಅಪ್ರಕಾಶಃ** = ಶ್ರೋತ್ರಾದಿಗಳಲ್ಲಿ ಶಬ್ದಾದಿಜ್ಞಾನಾಭಾವವು. **ಅಪ್ರವೃತ್ತಿಃ**= ಸತ್ಕಾರ್ಯದಲ್ಲಿ ಚಟುವಟಿಕೆಯಿಲ್ಲದಿರುವುದು . **ಪ್ರಮಾದಃ**= ಅವಧಾನವಿಲ್ಲದಿರುವುದು. **ಮೋಹಃ**= ವಿಪರೀತ ಜ್ಞಾನ. ಇವುಗಳು ತಮೋಗುಣವು ಅಭಿವೃದ್ಧಿಯಾದಾಗ ಉಂಟಾಗುತ್ತವೆ. ಇವುಗಳಿಂದ ತಮೋಗುಣದ ವೃದ್ಧಿಯನ್ನು ತಿಳಿಯಬೇಕು ಎಂದು ಅಭಿಪ್ರಾಯ. ॥ 13 ॥

## ಸತ್ತ್ವಾದಿಗುಣವೃದ್ಧಿ-ಹ್ರಾಸಗಳಿಂದ ಮರಣದಲ್ಲಿ ವೈವಿಧ್ಯ

**ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾನಮಲಾನ್ ಪ್ರತಿಪದ್ಯತೇ ॥ 14 ॥**

**ಅರ್ಥ-** ಸತ್ತ್ವಗುಣ ಉತ್ಕಟವಾದಾಗ ಜೀವನು ಮರಣವನ್ನು ಹೊಂದಿದರೆ ಆ ವಿಷ್ಣುಜ್ಞಾನಿಗಳಾದ ಸಾತ್ವಿಕರ ಕುಲದಲ್ಲಿ ನಿರ್ಮಲವಾದ ದೇಹಗಳನ್ನು ಪಡೆಯುತ್ತಾನೆ.

**ಸತ್ತ್ವಾದಿಗುಣವೃದ್ಧ್ಯವಸ್ಥಾಯಾಂ ಮೃತಾನಾಂ ಗತಿಭೇದಮಾಹ- ಯದೇತಿ ದ್ವಯೇನ ॥ ಯದಾ ಸತ್ತ್ವೇ ವಿವೃದ್ಧೇ ದೇಹಭೃತ್ಪ್ರಲಯಂ ಯಾತಿ ಮ್ರಿಯತೇ ತದೋತ್ತಮವಿದಾಂ ವಿಷ್ಣುಜ್ಞಾನಿನಾಂ ಅಮಲಾನ್ನಿರ್ದೋಷಾನ್ಲೋಕಾನ್ ದೇಹಾನ್ ಪ್ರತಿಪದ್ಯತೇ । ಸಾತ್ತ್ವಿಕಕುಲೇ ಜಾಯತ ಇತ್ಯರ್ಥಃ ॥ 14 ॥**

**ಅನುವಾದ-** ಸತ್ತ್ವಾದಿಗುಣಗಳು ವೃದ್ಧಿಯಾದಾಗ ಮೃತರಾದವರ ಗತಿಗಳ ವ್ಯತ್ಯಾಸವನ 'ಯದಾ....' ಎಂಬ ಎರಡು ಶ್ಲೋಕಗಳಿಂದ ಹೇಳುತ್ತಾರೆ. ಯಾವಾಗ ಸತ್ತ್ವಗುಣವು ಉತ್ಕ ವಾದಾಗ ದೇಹಧಾರಿ ಜೀವನು ಸಾಯುವನೋ ಆಗ, **ಉತ್ತಮವಿದಾಂ**= ವಿಷ್ಣುಜ್ಞಾನಿಗ **ಅಮಲಾನ್**= ನಿರ್ದೋಷಗಳಾದ, **ಲೋಕಾನ್**= ದೇಹಗಳನ್ನು ಹೊಂದುತ್ತಾನೆ. ಸಾತ್ವಿಕಕು ದಲ್ಲಿ ಹುಟ್ಟುತ್ತಾನೆ. ಎಂದು ಅರ್ಥ. ॥ 14 ॥

**ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥ 15 ॥**

**ಅರ್ಥ-** ರಜೋಗುಣವು ಉತ್ಕಟವಾದಾಗ ಮೃತನಾಗಿ, ಕಾಮ್ಯಕರ್ಮ ಮಾಡುವವರ ಕುಲದಲ್ಲಿ ಹುಟ್ಟುತ್ತಾನೆ. ಹಾಗೆಯೇ ತಮೋಗುಣವು ಪ್ರವೃದ್ಧವಾದಾಗ ಸತ್ತವನು ದೈತ್ಯರ ಕುಲದಲ್ಲಿ ಹುಟ್ಟುತ್ತಾನೆ.

**ರಜಸಿ ಪ್ರವೃದ್ಧೇ ಪ್ರಲಯಂ ಗತ್ವಾ ಮೃತ್ವಾ ಕರ್ಮಸಂಗಿಷು ಕಾಮ್ಯಕರ್ಮಿಣಾಂ ಕುಲೇ ಜಾಯತೇ । ತಥಾ ತಮಸಿ ಪ್ರವೃದ್ಧೇ ಪ್ರಲೀನೋ ಮೃತಃ ಮೂಢಯೋನಿಷು ದೈತ್ಯಾನಾಂ ಕುಲೇಷು ಜಾಯತೇ ॥ 15 ॥**

**ಅನುವಾದ-** ರಜೋಗುಣವು ಉತ್ಕಟವಾದಾಗ, **ಪ್ರಲಯಂ ಗತ್ವಾ**= ಸತ್ತು, **ಕರ್ಮಸಂಗಿಷು**= ಕಾಮ್ಯಕರ್ಮ ಮಾಡುವವರ ವಂಶದಲ್ಲಿ ಹುಟ್ಟುತ್ತಾನೆ. ಹಾಗೆಯೇ ತಮೋಗುಣವು ಪ್ರವೃದ್ಧವಾದಾಗ, **ಪ್ರಲೀನಃ**= ಸತ್ತವನು. **ಮೂಢಯೋನಿಷು**= ದೈತ್ಯರ ಕುಲಗಳಲ್ಲಿ ಹುಟ್ಟುತ್ತಾನೆ. ॥ 15 ॥

**ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ ।**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥ 16 ॥**

**ಅರ್ಥ-** ಜ್ಞಾನಿಗಳ ಕುಲದಲ್ಲಿ ಹುಟ್ಟಿ ಉತ್ತಮವಾಗಿ ಆಚರಿಸಿದ ಕರ್ಮಕ್ಕೆ ಸಾತ್ವಿಕವಾದ ದುಃಖ ಲೇಶವಿಲ್ಲದ ಫಲವೆನ್ನುವರು. ರಾಜಸ ಕರ್ಮಕ್ಕೆ ದುಃಖಮಿಶ್ರವಾದ ಸುಖವು ಫಲವೆನ್ನುವರು. ತಾಮಸಕರ್ಮಕ್ಕೆ ಅಜ್ಞಾನ ಹಾಗು ಅಜ್ಞಾನಕಾರ್ಯವು ಫಲವೆನ್ನುವರು.

**ಸಾತ್ತ್ವಿಕಾದಿಕರ್ಮಣಾಂ ಫಲಮಾಹ- ಕರ್ಮಣಇತ್ಯಾದಿದ್ವಯೇನ ॥ ವಿದ್ವತ್ಕುಲಪ್ರಸೂತೇನ ಸುಷ್ಠುಕೃತಸ್ಯ ಕರ್ಮಣಃ ಸಾತ್ತ್ವಿಕಂ ನಿರ್ಮಲಂ= ದುಃಖಗಂಧಹೀನಂ ಫಲಮಾಹುಃ । ರಜಸಃ= ರಾಜಸಕರ್ಮಣಸ್ತು ದುಃಖಂ= ದುಃಖಮಿಶ್ರಂ ಸುಖಮಾಹುಃ । ತಮಸಸ್ತು= ತಾಮಸಕರ್ಮಣಃ ಅಜ್ಞಾನಂ= ಅಜ್ಞಾನಕಾರ್ಯಂ ಚ ಫಲಮಾಹುಃ ॥ 16 ॥**

**ಅನುವಾದ-** ಸಾತ್ವಿಕ, ರಾಜಸ, ತಾಮಸ ಕರ್ಮಗಳ ಫಲವನ್ನು ಹೇಳುತ್ತಾರೆ. '**ಕರ್ಮಣಃ**' ಮುಂತಾದ ಎರಡು ಶ್ಲೋಕಗಳಿಂದ. ತತ್ವಜ್ಞಾನಿಗಳ ಕುಲದಲ್ಲಿ ಹುಟ್ಟಿದವನು ಉತ್ತಮವಾಗಿ ಆಚರಿಸಿದ ಕರ್ಮಕ್ಕೆ ಸಾತ್ವಿಕವಾದ, **ನಿರ್ಮಲಂ** = ದುಃಖಲೇಶವಿಲ್ಲದ ಸುಖವು ಫಲವೆನ್ನುತ್ತಾರೆ. **ರಜಸಸ್ತು**= ರಾಜಸಕರ್ಮಕ್ಕಾದರೋ, **ದುಃಖಂ** = ದುಃಖಮಿಶ್ರವಾದ ಸುಖವು ಫಲವೆನ್ನುತ್ತಾರೆ. **ತಮಸಸ್ತು** = ತಾಮಸ ಕರ್ಮಕ್ಕೆ ಅಜ್ಞಾನ ಹಾಗು ಅದರ ಕಾರ್ಯಗಳು ಫಲವೆನ್ನುತ್ತಾರೆ. ॥ 16 ॥

**ಸತ್ತ್ವಾತ್ ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥ 17 ॥**

**ಅರ್ಥ**- ಸತ್ತ್ವಗುಣದಿಂದ ಪರ ಅಪರತತ್ವಗಳ ಜ್ಞಾನವುಂಟಾಗುತ್ತದೆ. ರಜೋಗುಣದಿಂದ ಸ್ವರ್ಗಾದಿಸುಖಗಳ ಲೋಭವುಂಟಾಗುತ್ತದೆ . ತಮೋಗುಣದಿಂದ ಅಧರ್ಮಬುದ್ಧಿ, ವಿಪರೀತ ಜ್ಞಾನಗಳು ಆಗಿಯೇ ಆಗುವವು . ಅಜ್ಞಾನವೂ ಉಂಟಾಗುತ್ತದೆ.

**ನಿರ್ಮಲತ್ವಾದಿಫಲಂ ಚ ಕಿಮಿತ್ಯತೋ ವಿವಿಚ್ಯಾಹ- ಸತ್ತ್ವಮಿತ್ಯಾದಿನಾ ॥ ಜ್ಞಾನಂ ಪರಾಪರತತ್ತ್ವವಿಷಯಮ್ । ಲೋಭಃ ಸ್ವರ್ಗಾದಿವಿಷಯಾಸಕ್ತಿಃ । ಭವತ ಏವೇತ್ಯನ್ವಯಃ । ಅಜ್ಞಾನಂ ಚ ಭವತೀತ್ಯರ್ಥಃ ॥ 17 ॥**

**ಅನುವಾದ**- ನೈರ್ಮಲ್ಯಾದಿ ಫಲವೇನು ? ಎಂದರೆ ಬಿಡಿಸಿ ಹೇಳುತ್ತಿದ್ದಾರೆ. 'ಸತ್ತ್ವಂ' ಮುಂತಾದ ಶ್ಲೋಕಗಳಿಂದ, **ಜ್ಞಾನಂ**= ಪರ ಅಪರ ತತ್ವವಿಷಯಕವಾದ ಜ್ಞಾನ. **ಲೋಭಃ** = ಸ್ವರ್ಗಾದಿವಿಷಯಗಳಲ್ಲಿ ಆಸಕ್ತಿ. **ಭವತಃ ಏವ**= (ಆಗಿಯೇ ಆಗುತ್ತದೆ) ಎಂದು ಅನ್ವಯ ಅಜ್ಞಾನವೂ ಉಂಟಾಗುತ್ತದೆ ಎಂದು ಅರ್ಥ. ॥ 17 ॥

**ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥ 18 ॥**

**ಅರ್ಥ**- ಸಾತ್ವಿಕರು ಜ್ಞಾನದಿಂದ ಮೇಲಿನ ಜನೋಲೋಕ ಮುಂತಾದ ಲೋಕಗಳನು ಹೊಂದುತ್ತಾರೆ. ರಾಜಸರು ಕಾಮ್ಯಕರ್ಮದಿಂದ ಮಧ್ಯದ ಸ್ವರ್ಗಾದಿಗಳನ್ನು ಹೊಂದುತ್ತಾರೆ ನೀಚವಾದ ತಮೋಗುಣದ ಪರಿಣಾಮವಾದ ಅಜ್ಞಾನವನ್ನು ಹೊಂದಿರುವ ತಾಮಸರು ಕೆಳಗಿ ನರಕಕ್ಕೆ ಹೋಗುತ್ತಾರೆ.

**ಜ್ಞಾನಲೋಭಪ್ರಮಾದಾದೇಃ ಸತ್ತ್ವಾದಿಗುಣೇಭ್ಯಃ ಸಾಕ್ಷಾಜ್ಜನ್ಯತ್ವೇಽಪಿ ತಸ್ಯ ಸ್ವರೂಪತೋಽಫಲತ್ವಾತ್ತಜ್ಜನ್ಯಫಲಾನ್ಯಾಹ- ಊರ್ಧ್ವಮಿತಿ ॥ ಸತ್ತ್ವಸ್ಥಾಃ= ಸಾತ್ತ್ವಿಕಾಃ ಜ್ಞಾನೇನೋರ್ಧ್ವಂ= ಜನಆದಿಲೋಕಂ ಗಚ್ಛಂತಿ । ರಾಜಸಾಃ= ಕಾಮ್ಯ-ಕರ್ಮಿಣಃ ಮಧ್ಯೇ= ಸ್ವರ್ಗಾದೌ ತಿಷ್ಠಂತಿ । ಜಘನ್ಯಗುಣಃ= ತಮಃ ತದ್‌ವೃತ್ತಿಃ= ತತ್ಪರಿಣಾಮಾಜ್ಞಾನಂ ತನ್ನಿಷ್ಠಾಸ್ತದ್ವಂತ ಇತ್ಯರ್ಥಃ । ಅಧಃ= ನಿರಯಂ ಗಚ್ಛಂತಿ । ॥ 18 ॥**

**ಅನುವಾದ** - ಜ್ಞಾನಲೋಭ ಪ್ರಮಾದಾದಿಗಳು ಸತ್ತ್ವಾದಿಗುಣಗಳಿಂದಲೇ ನೇರವಾ

ಉಂಟಾಗುತ್ತವೆಯಾದರೂ ಅವು ಫಲಸ್ವರೂಪಗಳಲ್ಲವಾದುದರಿಂದ ಆ ಗುಣಗಳಿಂದ ಉಂಟಾಗುವ ಫಲಗಳನ್ನು ಹೇಳುತ್ತಿದ್ದಾರೆ. '**ಊರ್ಧ್ವಂ....**' ಎಂದು . **ಸತ್ತ್ವಸ್ಥಾಃ** = ಸಾತ್ತ್ವಿಕರು ಜ್ಞಾನದಿಂದ, **ಊರ್ಧ್ವಂ**= ಮೇಲಿನ ಜನ ಮೊದಲಾದ ಲೋಕವನ್ನು ಹೊಂದುತ್ತಾರೆ. **ರಾಜಸಾಃ**= ಕಾಮ್ಯಕರ್ಮಿಗಳು, **ಮಧ್ಯೇ**= ಸ್ವರ್ಗಾದಿಗಳಲ್ಲಿ ಇರುತ್ತಾರೆ. **ಜಘನ್ಯಗುಣ**= ನೀಚವಾದ ತಮೋಗುಣದ , **ವೃತ್ತಿ** = ಪರಿಣಾಮವಾದ ಅಜ್ಞಾನವನ್ನು **ಸ್ಥಾಃ**= ಹೊಂದಿರುವ ತಾಮಸರು, **ಅಧಃ** = ಕೆಳಗಿನ ನರಕವನ್ನು ಹೊಂದುತ್ತಾರೆ. ॥ 18 ॥

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾಽನುಪಶ್ಯತಿ ।**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ 19 ॥**

**ಅರ್ಥ**- ಜೀವನು ಸತ್ವಾದಿ ಗುಣಗಳಿಗಿಂತ ಬೇರೆ ಪರಿಣಾಮಿ ಕರ್ತೃ ಇಲ್ಲವೆಂದು ಯಾವಾಗ ತಿಳಿಯುವನೋ, ಗುಣಗಳಿಗಿಂತ ಉತ್ತಮನೆಂದು ಸ್ವತಂತ್ರ ಪರಮಾತ್ಮನನ್ನು ಯಾವಾಗ ತಿಳಿಯುವನೋ ಆಗ ಆ ಜ್ಞಾನಿಯು ನನ್ನಲ್ಲಿ ಜ್ಞಾನಾನಂದಾತ್ಮಕ ಮೋಕ್ಷದ ಸ್ಥಿತಿಯನ್ನು ಪಡೆಯುತ್ತಾನೆ. ಅಥವಾ ಗುಣಗಳಿಗಿಂತ ಬೇರೆ ಸ್ವತಂತ್ರ ಕರ್ತೃ ಎಂದೂ ಗುಣಗಳಿಂದ ಉತ್ತಮನೆಂದೂ ಪರಮಾತ್ಮನನ್ನು ಜೀವನು ಯಾವಾಗ ತಿಳಿಯುವನೋ ಆಗ ಅವನು ಪುರುಷನೆನಿಸಲು ಯೋಗ್ಯ. ಇಲ್ಲದಿದ್ದರೆ ಅವನು ಪಶು. ಏಕೆಂದರೆ ಆ ಜ್ಞಾನವುಳ್ಳವನೇ ಜ್ಞಾನಾನಂದಾತ್ಮಕ ಮೋಕ್ಷದ ಸ್ಥಿತಿಯನ್ನು ಪಡೆಯುತ್ತಾನೆ.

**ಏವಂ ತ್ರಯೋ ಗುಣಾ ವಿವಿಚ್ಯೋಕ್ತಾಃ । ತೇಷಾಂ ಜಗದ್‌ಬಂಧಕತ್ವಂ ತೇಭ್ಯಃ ಸಾಕ್ಷಾತ್ಪರಮ್ಪರಯಾ ಚ ಜನ್ಯಫಲಾನಿ ಚೋಕ್ತಾನಿ । ಏವಂ ತ್ರೈಗುಣ್ಯಸ್ಯ 'ಕಾರ್ಯತೇ ಹ್ಯವಶ' (3-5) ಇತ್ಯತ್ರ ಸಂಕ್ಷೇಪೇಣೋಕ್ತಸ್ಯೇಹ ವಿವಿಚ್ಯ ಕೀರ್ತನೇ ಕೃತೇ ಸತಿ ತರ್ಹಿ ಗುಣಾ ಏವ ಸರ್ವೋತ್ತಮಾಃ ನತು ತತೋಽನ್ಯಃ ಸರ್ವೋತ್ತಮೋಽಸ್ತೀತಿ ಶಂಕಾ ಸ್ಯಾತ್ ತಾಂ ನಿರಾಕರೋತಿ- ನಾನ್ಯಮಿತಿ ॥ ದ್ರಷ್ಟಾ ಜೀವಃ ಯದಾ ಗುಣೇಭ್ಯೋಽನ್ಯಂ ಕರ್ತಾರಂ ಪರಿಣಾಮಿಕರ್ತಾರಂ ನಾನು-ಪಶ್ಯತಿ । ಗುಣೇಭ್ಯಶ್ಚ ಪರಂ ಸ್ವತಂತ್ರಂ ಪರಮಾತ್ಮಾನಂ ವೇತ್ತಿ ಸ ಜ್ಞಾನೀ ಮದ್ಭಾವಂ ಜ್ಞಾನಾನಂದಾತ್ಮಿಕಾಂ ಸ್ಥಿತಿಂ ಅಧಿಗಚ್ಛತಿ ಪ್ರಾಪ್ನೋತಿ ।**

**ಅನುವಾದ** - ಹೀಗೆ ಇಲ್ಲಿಯವರೆಗೆ ಮೂರು ಗುಣಗಳನ್ನು ಬಿಡಿಸಿ ಹೇಳಲಾಯಿತು. ಆ ಗುಣಗಳು ಜಗದ್ಬಂಧಕಗಳೆಂಬುದನ್ನು , ಅವುಗಳಿಂದ ನೇರವಾಗಿ ಮತ್ತು ಪರಂಪರೆಯಾಗಿ ಉಂಟಾಗುವ ಫಲಗಳನ್ನು ಹೇಳಿದ್ದಾಯಿತು . **ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈಃ**

**ಗುಣೈಃ** ಎಂದು ಮೂರನೇ ಅಧ್ಯಾಯದಲ್ಲಿ ಸಂಕ್ಷೇಪವಾಗಿ ಹೇಳಿದ ಗುಣಗಳ ಕಾರ್ಯವನ್ನು ಈ ಅಧ್ಯಾಯದಲ್ಲಿ ವಿವೇಚಿಸಿ ಹೇಳಿದಾಗ ಹಾಗಾದರೆ ಗುಣಗಳೇ ಸರ್ವೋತ್ತಮಗಳು. ಅದಕ್ಕಿಂತ ಬೇರೊಂದು ಸರ್ವೋತ್ತಮ ಇಲ್ಲ ಎಂದು ಶಂಕೆ ಬರಬಹುದು. ಆ ಶಂಕೆಯನ್ನು ನಿರಾಕರಿಸುತ್ತಿದ್ದಾರೆ. **ದ್ರಷ್ಟಾ**= ಜೀವನು ಯಾವಾಗ ಸತ್ತ್ವಾದಿಗುಣಗಳಿಗಿಂತ **ಬೇರೆ ಕರ್ತಾರಂ**= ಪರಿಣಾಮಿ ಕರ್ತೃವನ್ನು ಇದೆಯೆಂದು ತಿಳಿಯುವುದಿಲ್ಲವೋ. ಗುಣಗಳಿಗಿಂತಲೂ ಭಿನ್ನನೂ ಉತ್ತಮನೂ ಸ್ವತಂತ್ರನೂ ಆದ ಪರಮಾತ್ಮನನ್ನು ಕರ್ತೃವೆಂದು ತಿಳಿಯುವನೋ ಅಂತಹ ಜ್ಞಾನಿಯು, **ಮದ್ಭಾವಂ**= ನನ್ನಲ್ಲಿ ಜ್ಞಾನಾನಂದಾತ್ಮಕವಾದ ಸ್ಥಿತಿಯನ್ನು ಹೊಂದುತ್ತಾನೆ.

**ಯದ್ವಾ ಏತೇಭ್ಯೋ ಗುಣೇಭ್ಯೋಽನ್ಯಂ ಕರ್ತಾರಂ ಈಶಂ ಯದಾಽನು-ಪಶ್ಯತಿ ತದಾ ದ್ರಷ್ಟೈವ ನಾ । ನೃಶಬ್ದೋಽಯಮ್ । ಪುರುಷಃ, ಅನ್ಯಥಾ ಪಶುಃ । ನ ಕೇವಲಂ ಗುಣೇಭ್ಯೋಽನ್ಯತ್ವೇನ ಕರ್ತಾರಂ ಪಶ್ಯನ್ ನಾ= ಪುರುಷಃ ಕಿಂತು ಗುಣೇಭ್ಯಃ ಪರಮುತ್ತಮಂ ಉತ್ತಮತ್ವೇನಾಪಿ ಪಶ್ಯನ್ ಪುರುಷಃ । ಕುತಃ ? ಸ ಏವಂ ಪಶ್ಯನ್ ಯಸ್ಮಾದ್ ಅನ್ಯದ್ಭಾವಂ ಅಧಿಗಚ್ಛತಿ ಅತ ಇತಿ ॥ 19 ॥**

**ಅನುವಾದ**- ಅಥವಾ ಈ ಸತ್ತ್ವಾದಿಗುಣಗಳಿಗಿಂತ ಬೇರೆಯಾದ ಸ್ವತಂತ್ರಕರ್ತೃ ಪರಮಾತ್ಮನನ್ನು ಯಾವಾಗ ತಿಳಿಯುವನೋ ಆಗ ಅವನು ಪುರುಷ. ಇಲ್ಲದಿದ್ದರೆ ಅವನು ಪಶುವೇ. ಕೇವಲ ಗುಣಗಳಿಗಿಂತ ಬೇರೆಯೆಂಬುದಾಗಿ ಪರಮಾತ್ಮನನ್ನು ತಿಳಿದವನೇ ಪುರುಷನೆಂದಲ್ಲ ಗುಣಗಳಿಗಿಂತ ಉತ್ತಮನೆಂದೂ ಪರಮಾತ್ಮನನ್ನು ತಿಳಿದಾಗಲೇ ಅವನು ಪುರುಷ. ಏಕೆಂದರೆ ಆ ತಿಳುವಳಿಕೆಯುಳ್ಳವನೇ ಜ್ಞಾನಾನಂದಾತ್ಮಕ ಮೋಕ್ಷಸ್ಥಿತಿಯನ್ನು ಪಡೆಯುತ್ತಾನೆ. ॥ 19 ॥

**ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈಃ ವಿಮುಕ್ತೋಽಮೃತಮಶ್ನುತೇ ॥ 20 ॥**

**ಅರ್ಥ**- ಜೀವನು ಸತ್ತ್ವಾದಿಗುಣಗಳ ಪರಿಣಾಮಿಯಾದ ದೇಹಗಳಲ್ಲಿ ಪ್ರಕಟವಾಗುವ ಮೂರು ಗುಣಗಳನ್ನು ಮೀರಿನಿಂತೇ ಜನನ-ಮರಣ ಮುಪ್ಪು ದುಃಖಗಳಿಂದ ಬಿಡುಗಡೆಗೊಂಡು ಪರಬ್ರಹ್ಮನನ್ನು ಹೊಂದುತ್ತಾನೆ.

**ಏವಂ ಸುಖದುಃಖಾದಿರೂಪಬನ್ಧಸ್ಯ ಗುಣತ್ರಯನಿಬಂಧನತ್ವಾತ್ತದತ್ಯಯೇ ಸತ್ಯೇವ ಬಂಧಹಾನಿರ್ನಾನ್ಯಥೇತ್ಯಾಹ- ಗುಣಾನಿತಿ ॥ ತತ್ತದ್ಗುಣಪರಿಣಾಮಿ-ದೇಹೇಷು ಪ್ರಕಟೀಭೂತಾನ್ ತ್ರೀನ್ ಗುಣಾನತೀತ್ಯೈವ ಜನ್ಮಾದಿಭಿರ್ವಿ-ಮುಕ್ತೋಽಮೃತಮಶ್ನುತೇ ಪರಂ ಬ್ರಹ್ಮ ಪ್ರಾಪ್ನೋತಿ ॥ 20 ॥**

ಅನುವಾದ- ಹೀಗೆ ಸುಖದುಃಖಾದಿ ರೂಪಬಂಧನಕ್ಕೆ ಗುಣತ್ರಯವು ಕಾರಣವಾದ್ದರಿಂದ ಅದನ್ನು ದಾಟಿದರೇನೆ ಬಂಧಹಾನಿಯಾಗುವುದು. ಇಲ್ಲದಿದ್ದರೆ ಬಂಧಪರಿಹಾರ ಸಾಧ್ಯವಿಲ್ಲ ವೆಂದು ಹೇಳುತ್ತಿದ್ದಾರೆ. (ದೇಹಸಮುದ್ಭವಾನ್=) ಆಯಾಯಾಗುಣಗಳ ಪರಿಣಾಮಿಯಾದ ದೇಹಗಳಲ್ಲಿ ಪ್ರಕಟವಾಗಿರುವ ಸತ್ತ್ವಾದಿ ಮೂರುಗುಣಗಳನ್ನು ದಾಟಿಯೇ ಜನ್ಮ, ಮೃತ್ಯು, ಜರಾ, ದುಃಖಗಳಿಂದ ಬಿಡುಗಡೆಗೊಂಡು **ಅಮೃತಂ** = ಪರಬ್ರಹ್ಮನನ್ನು , **ಅಶ್ನುತೇ**= ಹೊಂದುತ್ತಾನೆ. ॥ 20 ॥

## ತ್ರಿಗುಣಗಳ ಕಪಿಮುಷ್ಟಿಯಿಂದ ಬಿಡುಗಡೆ ಹೇಗೆ ?

**ಅರ್ಜುನ ಉವಾಚ -**

**ಕೈರ್ಲಿಂಗೈಸ್ತ್ರೀನ್ ಗುಣಾನೇತಾನತೀತೋ ಭವತಿ ಪ್ರಭೋ ।**
**ಕಿಮಾಚಾರಃ ಕಥಂ ಚೈತಾನ್ ತ್ರೀನ್ ಗುಣಾನತಿವರ್ತತೇ ॥ 21 ॥**

ಅರ್ಥ- ಪ್ರಭುವೇ, ಸತ್ತ್ವಾದಿ ಮೂರುಗುಣಗಳನ್ನು ಮೀರಿ ನಿಂತವನು ಯಾವ ಲಕ್ಷಣದಿಂದ ಯುಕ್ತನಾಗಿರುವನು ? ಎಂತಹ ಆಚಾರವುಳ್ಳವನು ? ಯಾವ ಉಪಾಯದಿಂದ ಈ ಮೂರುಗುಣಗಳನ್ನು ಮೀರುತ್ತಾನೆ ?

**ಗುಣಾನತೀತ್ಯೇತ್ಯುಕ್ತೇ ಸತಿ ಪೃಚ್ಛತಿ- ಕೈರಿತಿ ॥ ಏತಾನ್ ಸರ್ವಬಂಧಕಾನ್ ಸತ್ತ್ವಾದಿಗುಣಾನತೀತೋಽತಿಕ್ರಾಂತಃ ಪುಮಾನ್ಕೈರ್ಲಿಂಗೈರ್ಲಕ್ಷಣೈರ್ಯುಕ್ತೋ ಭವತಿ । ಹೇ ಪ್ರಭೋ ಕಿಮಾಚಾರಃ ಕೀದೃಶಾಚಾರವಾನ್ । ಕಥಂ ಕೇನೋ- ಪಾಯೇನೈತಾನ್ ತ್ರೀನ್ ಗುಣಾನತಿವರ್ತತೇ ॥ 21 ॥**

ಅನುವಾದ- 'ಗುಣಗಳನ್ನು ಮೀರಿನಿಂತು' ಎಂದು ಕೃಷ್ಣ ಹೇಳಿದರೆ ಅರ್ಜುನ ಕೇಳುತ್ತಿದ್ದಾನೆ. ಏತಾನ್= ಎಲ್ಲರನ್ನು ಬಂಧಿಸುವ ಸತ್ತ್ವಾದಿಗುಣಗಳನ್ನು ಮೀರಿದ ಪುರುಷನು ಯಾವ ಲಕ್ಷಣ ಗಳಿಂದ ಕೂಡಿರುತ್ತಾನೆ ? ಹೇ ಪ್ರಭುವೇ ! **ಕಿಮಾಚಾರಃ**= ಎಂತಹ ಆಚರಣೆವುಳ್ಳವನು ? **ಕಥಂ**= ಯಾವ ಉಪಾಯದಿಂದ ಈ ಮೂರು ಗುಣಗಳನ್ನು ಮೀರುತ್ತಾನೆ ? ॥ 21 ॥

## ಪರಮಾತ್ಮ ವಿಷಯಕ ಜ್ಞಾನ-ಪ್ರವೃತ್ತಿಗಳು ತ್ರಿಗುಣವಿಕಾರನಿವರ್ತಕಗಳು

**ಶ್ರೀ ಭಗವಾನುವಾಚ -**

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥ 22 ॥**

**ಅರ್ಥ-** ಪಾಂಡುನಂದನ ! ಗುಣಗಳನ್ನು ಮೀರಿನಿಂತವನು ಸತ್ತ್ವಗುಣದಿಂದಾಗುವ ಜ್ಞಾನವನ್ನು ರಜೋಗುಣದಿಂದಾಗುವ ಪ್ರವೃತ್ತಿಯನ್ನು ತಮೋಗುಣದಿಂದಾಗುವ ಅಜ್ಞಾನವನ್ನು ಕೂಡ ಲೌಕಿಕ ವಿಷಯದಲ್ಲಿ ಸಾಮಾನ್ಯವಾಗಿ ಬೇಡವೆನ್ನುವುದಿಲ್ಲ. ಹೋದಾಗ ಮತ್ತೆ ಬರಬೇಕೆನ್ನುವುದಿಲ್ಲ. ಭಗವಂತನ ವಿಷಯದಲ್ಲಿ ಜ್ಞಾನ, ಪ್ರವೃತ್ತಿಗಳನ್ನು ಬೇಕೆನ್ನುತ್ತಾನೆ. ಅಜ್ಞಾನವನ್ನು ಬೇಡವೆನ್ನುತ್ತಾನೆ.

ಬೇರೆಯವರಲ್ಲಿ ಜ್ಞಾನ ಪ್ರವೃತ್ತಿಗಳು ಬಂದರೆ ದ್ವೇಷಿಸುವುದಿಲ್ಲ. ಅಜ್ಞಾನ ಹೋದರೆ ಮತ್ತೆ ಬರಲೆಂದು ಬಯಸುವುದಿಲ್ಲ.

**ಇತಿ ಪೃಷ್ಟೋ ಭಗವಾನ್ ಉತ್ತರಮಾಹ-ಪ್ರಕಾಶಂ ಚೇತ್ಯಾದಿನಾ ॥ ಸತ್ತ್ವಾದಯೋ ಗುಣಾ ಹಿ ದ್ವಿವಿಧಾಃ ಸ್ಥೂಲಾಃ, ಸೂಕ್ಷ್ಮಾಶ್ಚ । ಸ್ಥೂಲೇಭ್ಯೋ ಲೌಕಿಕಾಃ ಪ್ರಕಾಶಪ್ರವೃತ್ತಿಮೋಹಾಃ ಜಾಯಂತೇ । ಸೂಕ್ಷ್ಮೇಭ್ಯಸ್ತು ಪರಮೇಶ್ವ-ರಾದಿವಿಷಯಾಃ । ತತ್ರಾದ್ಯೇಭ್ಯಃ, ಸತ್ತ್ವಾದಿಗುಣೇಭ್ಯಃ ಕ್ರಮಾಜ್ಜಾತಂ ಪ್ರಕಾಶಂ ಪ್ರವೃತ್ತಿಶಬ್ದಿತಮುದ್ಯೋಗಂ ಮೋಹಶಬ್ದಿತಮಜ್ಞಾನಂ ಚೇತ್ಯೇತಾನಿ ಸಂಪ್ರವೃತ್ತಾನಿ ಪ್ರಾಯೋ ನ ದ್ವೇಷ್ಟಿ । ನಿವೃತ್ತಾನಿ ಚ ನ ಕಾಂಕ್ಷತಿ । ಗುಣಾತೀತ ಇತ್ಯನು-ಷಜ್ಯತೇ । ದ್ವಿತೀಯೇ ತು ವಿಷ್ಣುವಿಷಯಪ್ರಕಾಶಂ ಪ್ರವೃತ್ತಿಂ ಚೇಚ್ಛತಿ ಮೋಹಂ ಚ ದ್ವೇಷ್ಟೀತ್ಯರ್ಥಃ ।**

**ಅನುವಾದ-** ಹೀಗೆ ಅರ್ಜುನನಿಂದ ಕೇಳಲ್ಪಟ್ಟ ಭಗವಂತನು ಉತ್ತರವನ್ನು ಹೇಳುತ್ತಾನೆ. ಸತ್ತ್ವಗುಣ, ರಜೋಗುಣ ತಮೋಗುಣಗಳು ಸ್ಥೂಲವಾದವು ಸೂಕ್ಷ್ಮವಾದವು ಎಂದು ಎರಡು ಬಗೆ. ಸ್ಥೂಲವಾದ ಸತ್ತ್ವಾದಿಗುಣಗಳಿಂದ ಪ್ರಪಂಚವಿಷಯದಲ್ಲಿ ಜ್ಞಾನ ಪ್ರವೃತ್ತಿ ಮೋಹಗಳು ಉಂಟಾಗುತ್ತವೆ. ಸೂಕ್ಷ್ಮಗಳಾದ ಸತ್ತ್ವಾದಿಗುಣಗಳಿಂದ ಪರಮಾತ್ಮನ ವಿಷಯದಲ್ಲಿ ಜ್ಞಾನ ಪ್ರವೃತ್ತಿ ಮೋಹಗಳು ಉಂಟಾಗುತ್ತವೆ. ಆ ಎರಡು ಬಗೆಯ ಗುಣಗಳಲ್ಲಿ ಸ್ಥೂಲಗಳಾದ ಸತ್ತ್ವಾದಿ ಗುಣಗಳಿಂದ ಕ್ರಮವಾಗಿ ಉಂಟಾದ ಜ್ಞಾನ, ಪ್ರವೃತ್ತಿಶಬ್ದವಾಚ್ಯವಾದ ಕರ್ಮದಲ್ಲಿ ತೊಡಗುವಿಕೆ ಯನ್ನು ಮೋಹಶಬ್ದವಾಚ್ಯವಾದ ಅಜ್ಞಾನವನ್ನು ಹೀಗೆ ಇವುಗಳನ್ನು ಅವು ಬಂದಾಗ ಸಾಮಾನ್ಯ ವಾಗಿ ದ್ವೇಷಿಸುವುದಿಲ್ಲ. ಹೋದಾಗ ಮತ್ತೆ ಬರಲೆಂದು ಬಯಸುವುದೂ ಇಲ್ಲ. ಗುಣಾತೀತನ ಎಂದು ಹಿಂದಿನ ಶ್ಲೋಕದಿಂದ ಇಲ್ಲಿಗೆ ಅನುಷಂಗ ಮಾಡಬೇಕು.

ಸೂಕ್ಷ್ಮಸತ್ತ್ವಾದಿಗಳಿಂದ ವಿಷ್ಣುವಿಷಯಕ ಜ್ಞಾನವನ್ನು ಹಾಗು ಪ್ರವೃತ್ತಿಯನ್ನು ಬಯಸುತ್ತಾನೆ ಅಜ್ಞಾನವನ್ನು ಮಾತ್ರ ದ್ವೇಷಿಸುತ್ತಾನೆ. ಅಂದರೆ ಬೇಡವೆನ್ನುತ್ತಾನೆ ಎಂದು ಅರ್ಥ. ॥ 21 ॥

**ಯದ್ವಾ ಪುರುಷಾಂತರೇ ಪ್ರಕಾಶಾದಿಸಾಧುಗುಣಜಾತಾನಿ ಸಂಪ್ರವೃತ್ತಾನಿ ನ ದ್ವೇಷ್ಟಿ । ಮೋಹಾದ್ಯಸಾಧುಧರ್ಮಜಾತಂ ನಿವೃತ್ತಂ ನ ಕಾಂಕ್ಷತೀತ್ಯರ್ಥಃ । ಪರಸ್ಯೇಷ್ಟಾನಿಷ್ಟಹಾನಿಪ್ರಾಪ್ತೀ ನೇಚ್ಛತಿ ಗುಣಾತೀತ ಇತಿ ಭಾವಃ ॥ 22 ॥**

**ಅನುವಾದ-** ಅಥವಾ ಬೇರೆಯವರಲ್ಲಿ ಜ್ಞಾನಾದಿ ಸದ್ಗುಣ ಸಮೂಹಗಳು ಬಂದರೆ ದ್ವೇಷಿಸುವುದಿಲ್ಲ. ಅಜ್ಞಾನಾದಿ ದುರ್ಗುಣಸಮೂಹ ಹೋದರೆ ಬರಲೆಂದು ಬಯಸುವುದಿಲ್ಲ. ಬೇರೆಯವರಿಗೆ ಇಷ್ಟಹಾನಿಯನ್ನು ಅನಿಷ್ಟಪ್ರಾಪ್ತಿಯನ್ನೂ ಗುಣಾತೀತನು ಬಯಸುವುದಿಲ್ಲ ಎಂದು ತಾತ್ಪರ್ಯ.

**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।**
**ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥ 23 ॥**

**ಅರ್ಥ-** ಸತ್ತ್ವಾದಿಗುಣಗಳನ್ನು ಮೀರಿನಿಂತ ಯಾರು ಉದಾಸೀನನಲ್ಲದಿದ್ದರೂ ಉದಾಸೀನನಂತೆ ಇರುವವನಾಗಿ ವೈಷ್ಣವಕರ್ಮಗಳನ್ನು ಮಾಡುತ್ತ ಗುಣತ್ರಯದಿಂದ ಮನೋವಿಕಾರವನ್ನು ಹೊಂದುವುದಿಲ್ಲವೋ, ಗುಣಗಳು ಪರಮಾತ್ಮನ ಇಚ್ಛೆಯಂತೆ ಪ್ರವರ್ತಿಸುತ್ತವೆ ಹೊರತು ಸ್ವತಂತ್ರವಾಗಿ ಅಲ್ಲ ಎಂದು ತಿಳಿಯುವನೋ. ಅವನು ತ್ರಿಗುಣಗಳ ಪ್ರಭಾವಕ್ಕೆ ಒಳಗಾಗಿ ಅವೈಷ್ಣವಾಚಾರಗಳನ್ನು ಮಾಡುವುದಿಲ್ಲ. ವೈಷ್ಣವಾಚಾರಗಳನ್ನೇ ಮಾಡುತ್ತಾನೆ.

**ಏವಂ ಕೈರ್ಲಿಂಗೈರಿತಿ ಪ್ರಶ್ನಸ್ಯೋತ್ತರಮುಕ್ತ್ವಾ ಕಿಮಾಚಾರ ಇತ್ಯಸ್ಯೋತ್ತರಮಾಹ- ಉದಾಸೀನವದಿತಿ ॥ ಯೋ ಗುಣಾತೀತಃ ಪುಮಾನುದಾಸೀನವದಾಸೀನಃ । ನ ತೂದಾಸೀನ ಏವ । ವೈಷ್ಣವಧರ್ಮಾನುಷ್ಠಾನಾತ್ । ಗುಣೈಃ ಸತ್ತ್ವಾದಿಭಿರ್ನವಿಚಾಲ್ಯತೇ । ತತ್ಕೃತವಿಕಾರಂ ನ ಪ್ರಾಪ್ನೋತಿ ಗುಣಾಃ ಸತ್ತ್ವಾದಯಃ ಪರಮೇಶ್ವರೇಚ್ಛಯಾ ಪ್ರವರ್ತಂತೇ ನ ಸ್ವತಂತ್ರಾ ಇತ್ಯೇವಂ ಯೋಽವತಿಷ್ಠತಿ ವೇತ್ತಿ ಸ ನ ಇಂಗತೇ ಗುಣಕೃತಾವೈಷ್ಣವಕರ್ಮಕರಣಾಯ ನ ಚೇಷ್ಟತ ಇತಿ । ವೈಷ್ಣವಾನ್ಯೇವ ಕರ್ಮಾಣ್ಯಾಚರತಿ ನಾನ್ಯಾನೀತಿ ತದಾಚಾರ ಇತಿ ಭಾವಃ ॥ 23 ॥**

**ಅನುವಾದ-** ಹೀಗೆ ಗುಣತ್ರಯವನ್ನು ಮೀರಿನಿಂತವನು ಯಾವ ಲಕ್ಷಣದಿಂದ ಕೂಡಿರುವನೆಂಬ ಪ್ರಶ್ನೆಗೆ ಉತ್ತರ ಹೇಳಿ, ಎಂತಹ ಆಚಾರವುಳ್ಳವನು ? ಎಂಬ ಪ್ರಶ್ನೆಗೆ ಉತ್ತರ ಹೇಳುತ್ತಿದ್ದಾರೆ- **ಯಃ**= ಮೂರುಗುಣಗಳನ್ನು ಮೀರಿನಿಂತ ಯಾವ ಪುರುಷನು ಉದಾಸೀನನಂತೆ ಇರುವನು. ಉದಾಸೀನನೇ ಆಗಿರುವುದಿಲ್ಲ. ಏಕೆಂದರೆ ಅವನು ವೈಷ್ಣವಧರ್ಮವನ್ನು ಅನುಷ್ಠಾನ ಮಾಡುತ್ತಿರುತ್ತಾನೆ. **ಗುಣೈಃ** = ಸತ್ತ್ವಾದಿಗುಣಗಳಿಂದ, **ನ ವಿಚಾಲ್ಯತೇ** = ಆ ಗುಣಗಳಿಂದಾಗುವ

ವಿಕಾರವನ್ನು ಹೊಂದುವುದಿಲ್ಲ. **ಗುಣಾಃ**= ಸತ್ತ್ವಾದಿಗುಣಗಳು, **ವರ್ತಂತೇ ಇತ್ಯೇವ**= ಪರಮೇಶ್ವರೇಚ್ಛೆಯಿಂದ ಪ್ರವರ್ತಿಸುವವು. ಸ್ವತಂತ್ರವಾಗಿ ಅಲ್ಲ. ಹೀಗೆಂದು ಯಾರು **ಅವತಿಷ್ಠತಿ**= ತಿಳಿಯುವನೋ. **ಸಃ ನ ಇಂಗತೇ**= ಅವನು ಗುಣಗಳಿಗೆ ವಶನಾಗಿ ಅವೈಷ್ಣವಕರ್ಮ ಮಾಡಲು ತೊಡಗುವುದಿಲ್ಲ. ವೈಷ್ಣವಕರ್ಮಗಳನ್ನೇ ಮಾಡುತ್ತಾನೆ. ಬೇರೆ ಕರ್ಮಗಳನ್ನಲ್ಲ. ಹೀಗೆ ಗುಣಾತೀತನ ಆಚಾರ.

**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥ 24 ॥**

**ಅರ್ಥ**- ಗುಣಾತೀತನು ಧೈರ್ಯದಿಂದ ದುಃಖ ಹಾಗು ವೈಷಯಿಕಸುಖಗಳೆರಡನ್ನು ಸಾಮಾನ್ಯವಾಗಿ ಹೇಯವೆಂದು ಸಮವಾಗಿ ಕಾಣುವನು ಸಾಮಾನ್ಯವಾಗಿ ನಿರ್ವಿಕಾರನು. ಸಾಮಾನ್ಯವಾಗಿ ಮಣ್ಣುಕಲ್ಲುಬಂಗಾರ ಎಲ್ಲವನ್ನು ನಿಂದೆ-ಸ್ತುತಿಗಳನ್ನು ಹೇಯವಾಗಿ ಸಮವಾಗಿ ಕಾಣುವನು.

**ಆಚಾರಾಂತರಂ ಚಾಹ- ಸಮೇತಿ ॥ ಪ್ರಾಯೇಣ ಹೇಯತಯಾ ದುಃಖಸಮಂ ವೈಷಯಿಕಂ ಸುಖಂ ಯಸ್ಯ ಸ ಸಮದುಃಖಸುಖಃ । ಗುಣಾತೀತ ಇತ್ಯನುಷಜ್ಯತೇ । ಸ್ವಸ್ಥಃ ಪ್ರಾಯೇಣ ನಿರ್ವಿಕಾರಃ । ಹೇಯತ್ವೇನ ಲೋಷ್ಟಾಶ್ಮಸಮಂ ಕಾಂಚನಂ ಯಸ್ಯ ಸ ಸಮಲೋಷ್ಟಾಶ್ಮಕಾಂಚನಃ । ಪ್ರಾಯ ಇತಿ ಸರ್ವತ್ರ ಯೋಜ್ಯಮ್ । ಹೇಯತ್ವೇನಾಪ್ರಿಯತುಲ್ಯಂ ಪ್ರಿಯಂ ಯಸ್ಯ ಸ ತುಲ್ಯಪ್ರಿಯಾಪ್ರಿಯಃ । ಹೇಯತ್ವೇನ ನಿಂದಯಾ ತುಲ್ಯಾ ಆತ್ಮನಃ ಸ್ವಸ್ಯ ಸಂಸ್ತುತಿರ್ಯಸ್ಯ ಸ ತಥಾ । ಸಮತ್ವಾದಿಕಂ ಕೇನ ಸ್ಯಾದಿತ್ಯತ ಉಕ್ತಮ್- ಧೀರ ಇತಿ ॥ ಧೈರ್ಯೇಣೇತ್ಯರ್ಥಃ ।**

**ಅನುವಾದ**- ಮತ್ತೊಂದು ಆಚಾರವನ್ನು ಹೇಳುತ್ತಿದ್ದಾರೆ. ಸಾಮಾನ್ಯವಾಗಿ ಹೇಯತೆಯಿಂದ ದುಃಖಕ್ಕೆ ಸಮಾನವಾದುದು ವೈಷಯಿಕಸುಖವೆಂದು ಭಾವಿಸುವವನು ಸಮದುಃಖಸುಖನು. ಗುಣಾತೀತನು ಎಂದು ಹಿಂದಿನಿಂದ ಇಲ್ಲೂ ಸೇರಿಸಿಕೊಳ್ಳಬೇಕು. **ಸ್ವಸ್ಥಃ**= ಸಾಮಾನ್ಯವಾಗಿ ವಿಕಾರ ರಹಿತನು. ಯಾರಿಗೆ ಸಾಮಾನ್ಯವಾಗಿ ಕಲ್ಲು, ಮಣ್ಣು ಬಂಗಾರ ಹೇಯವಾಗಿ ಸಮಾನವೆನಿಸು ವುದೋ ಅವನು ಸಮಲೋಷ್ಟಾಶ್ಮಕಾಂಚನನು. **ಪ್ರಾಯಃ** = ಸಾಮಾನ್ಯವಾಗಿ ಯಾರಿಗೆ ಅಪ್ರಿಯ ಹಾಗು ಪ್ರಿಯಗಳೆರಡೂ ಹೇಯವಾಗಿ ಸಮಾನವೆನಿಸುವುದೋ ಅವನು ತುಲ್ಯಪ್ರಿಯಾಪ್ರಿಯನು. ಯಾರಿಗೆ ಸಾಮಾನ್ಯವಾಗಿ ತನ್ನ ನಿಂದೆ-ಸ್ತುತಿಗಳೆರಡು ಹೇಯವಾಗಿ ಸಮಾನವೆನಿಸುವುದೋ ಅವನು ತುಲ್ಯನಿಂದಾತ್ಮಸಂಸ್ತುತಿಯು. ಈ ಸಮತ್ವಾದಿಗಳೆಲ್ಲ ಯಾವುದರಿಂದ ಆಗುವುದು !

ಎಂದರೆ ಹೇಳುತ್ತಿದ್ದಾರೆ ಧೀರಃ ಎಂದು. ಧೈರ್ಯದಿಂದ ವೈಷಯಿಕ ಸುಖ-ದುಃಖ ಮೊದಲಾದ ದ್ವಂದ್ವಗಳಲ್ಲಿ ಸಮತೆಯನ್ನು ಸಂಪಾದಿಸಬೇಕು.

**ಯದ್ವಾ ವಿಷ್ಣುಭಜನಾದಿವಿಷಯೇ ಸಮದುಃಖಸುಖ ಇತ್ಯಾದಿ ಯೋಜ್ಯಮ್ । ಕಿಮುಕ್ತಂ ಭವತಿ । ವಿಷ್ಣುಭಜನಾದೌ ದುಃಖಸತ್ತ್ವೇ ತತ್ತ್ಯಾಗೇ ಸುಖಸತ್ತ್ವೇಽಪಿ ವಿಷ್ಣುಭಜನಾದಿಕಂ ಸಮಮೇಕಪ್ರಕಾರಮೇವ ಕಾರ್ಯಮಿತ್ಯುಕ್ತಂ ಭವತಿ । ಏವಮಗ್ರೇಽಪಿ । ಅನುಷ್ಠಾನೇ ಲೋಷ್ಟಾಶ್ಮಾದ್ಯನಭಿಮತಪ್ರಾಪ್ತಿಃ ತತ್ತ್ಯಾಗೇ ಕಾಂಚನಾದ್ಯಭಿಮತಂ ಪ್ರಯಚ್ಛತೀತಿ ವಿಷ್ಣುಭಜನಾದಿಕಂ ನ ತ್ಯಾಜ್ಯಮ್ । ಲೌಕಿಕ-ಪುಮರ್ಥಪ್ರಾಪ್ತಿಹಾನಾವಪಿ ವಿಷ್ಣುಭಜನಾದಿಕಂ ನ ತ್ಯಾಜ್ಯಮಿತ್ಯರ್ಥಃ । ಅನನು-ಷ್ಠಾನೇಽನುಷ್ಠಾನೇ ಪ್ರಿಯಾಪ್ರಿಯಯೋಃ ಪ್ರಾಪ್ತಾವಪಿ ವಿಷ್ಣುಭಜನಾದೌ ತುಲ್ಯ ಏವ । ಸದಾಽನುಷ್ಠೇಯಮೇವೇತ್ಯರ್ಥಃ । ತಥಾಽನುಷ್ಠಾನಾನನುಷ್ಠಾನಯೋಃ ಕ್ರಮಾನ್ನಿಂದಾತ್ಮಸ್ತುತ್ಯೋಃ ಪ್ರಾಪ್ತೌ ಸತ್ಯಾಮಪಿ ವಿಷ್ಣುಭಕ್ತ್ಯಾದೌ ತುಲ್ಯ ಏವ । ನ ತ್ಯಾಜ್ಯಂ ವಿಷ್ಣುಭಕ್ತ್ಯಾದೀತ್ಯರ್ಥಃ । ತತ್ರ ಹೇತುರ್ಧೀರಃ= ಧೀಮಾನ್ ವಿಷ್ಣು-ಮಾಹಾತ್ಮ್ಯಜ್ಞಾನವಾನ್ ಸ್ವಸ್ಥಃ ವಿಷ್ಣುಧರ್ಮಾದಚಲ ಇತಿ ॥ 24 ॥**

**ಅನುವಾದ-** ಅಥವಾ , ಸಮದುಃಖಸುಖ ಇತ್ಯಾದಿಗಳನ್ನು ವಿಷ್ಣುಭಜನಾದಿ ವಿಷಯಗಳಲ್ಲಿ ಯೋಜನೆ ಮಾಡಿಕೊಳ್ಳಬೇಕು. ಏನು ಹೇಳಿದಂತಾಗುತ್ತದೆ ಎಂದರೆ- ವಿಷ್ಣುಮಹಿಮೆಯ ಜ್ಞಾನವಿರುವವನಾದುದರಿಂದ ಪರಮಾತ್ಮನ ಆರಾಧನೆಯನ್ನು ಮಾಡಿದರೆ ದುಃಖ ಅದನ್ನು ಬಿಟ್ಟರೆ ಸುಖ ಎಂದಿದ್ದರೂ ಪರಮಾತ್ಮನ ಆರಾಧನೆಯನ್ನು ಒಂದೇರೀತಿಯಾಗಿ ಮಾಡಬೇಕು ಎಂದು. ಹೀಗೆ ಮುಂದೆಯೂ ಅರ್ಥೈಸಬೇಕು. ವಿಷ್ಣುಧರ್ಮ ಅನುಷ್ಠಾನ ಮಾಡಿದರೆ ಕಲ್ಲು ಮಣ್ಣು ಮುಂತಾದ ಇಷ್ಟವಲ್ಲದುದರ ಪ್ರಾಪ್ತಿಯು ಅನುಷ್ಠಾನಬಿಟ್ಟರೆ ಬಂಗಾರ ಮುಂತಾದ ಇಷ್ಟವನ್ನು ಕೊಡುತ್ತಾನೆಂಬ ಕಾರಣದಿಂದ ವಿಷ್ಣು ಆರಾಧನೆಯನ್ನು ಬಿಡಬಾರದು. ಲೌಕಿಕಪುರುಷಾರ್ಥ ಹಾನಿಯಾದರೂ ಕೂಡ ವಿಷ್ಣುಭಜನಾದಿಗಳನ್ನು ಬಿಡಬಾರದೆಂದರ್ಥ. ವೈಷ್ಣವ ಆಚಾರ ಬಿಟ್ಟರೆ ಪ್ರಿಯಪ್ರಾಪ್ತಿ ಮಾಡಿದರೆ ಅಪ್ರಿಯಪ್ರಾಪ್ತಿ ಎಂದಾದರೂ ವಿಷ್ಣು ಭಜನೆಯಲ್ಲಿಸಮಾನವಾಗಿಯೇ ಇರಬೇಕು. ಯಾವಾಗಲೂ ಅನುಷ್ಠಾನ ಮಾಡಲೇಬೇಕು ಎಂದು ಭಾವ. ಹಾಗೆಯೇ ಪರಮಾತ್ಮನ ಸೇವೆ ಮಾಡಿದರೆ ನಿಂದೆ, ಮಾಡದಿದ್ದರೆ ಸ್ತುತಿ ಎಂದಾಗಲೂ ವಿಷ್ಣುಭಕ್ತ್ಯಾದಿಗಳಲ್ಲಿ ಸಮವಾಗಿರಬೇಕು ಬಿಡಬಾರದು. ಆ ವಿಷಯದಲ್ಲಿ ಕಾರಣ- ಅವನು ಧೀರಃ= ಧೀಮಂತ= ವಿಷ್ಣುಮಾಹಾತ್ಮ್ಯ ಜ್ಞಾನವುಳ್ಳವನು. **ಸ್ವಸ್ಥಃ**= ವಿಷ್ಣುಧರ್ಮದಲ್ಲಿ ಅಚಲ ಎಂದು. ॥ 24 ॥

**ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।**
**ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥ 25 ॥**

**ಅರ್ಥ-** ಮಾನ-ಅಪಮಾನ, ಮಿತ್ರಪಕ್ಷ ಶತ್ರುಪಕ್ಷ, ಇವುಗಳಲ್ಲಿ ಸಾಮಾನ್ಯವಾಗಿ ಎರಡನ್ನೂ ಹೇಯವೆಂದು ಸಮಾನವಾಗಿ ಕಾಣುವವನು, ಎಲ್ಲ ಕಾಮ್ಯಕರ್ಮಗಳನ್ನು ಬಿಟ್ಟವನು- ಇವನು ಗುಣಾತೀತನೆನಿಸುವನು. ಅಥವಾ ಪರಮಾತ್ಮನ ಆರಾಧನೆಯನ್ನು ಬಿಟ್ಟರೆ ಸನ್ಮಾನ, ಮಾಡಿದರೆ ಅಪಮಾನ ಎಂದಾಗಲಿ, ಮಾಡಿದರೆ ತಮ್ಮವರು ಶತ್ರುಪಕ್ಷಕ್ಕೆ ಸೇರುವರು ಬಿಟ್ಟರೆ ಮಿತ್ರಪಕ್ಷಕ್ಕೆ ಬರುವರು ಎಂದಾಗಲಿ ಹೇಗೆ ಆಗಲಿ ತಾನು ಭಗವಂತನ ಆರಾಧನೆಯನ್ನು ಮಾಡುತ್ತಲೇ ಇರುವವನು. ಯಾವುದೇ ಕ್ಷುದ್ರ ಪ್ರಯೋಜನದ ಲಾಭಕ್ಕಾಗಿ ಅವೈಷ್ಣವಕರ್ಮವನ್ನು ಮಾಡದವನು ಗುಣಾತೀತನೆನಿಸುವನು.

**ತಥಾ ಮಾನಾಪಮಾನಯೋಃ ಪ್ರಾಪ್ತಾವಪಿ ವಿಷ್ಣುಭಕ್ತ್ಯಾದೌ ತುಲ್ಯ ಏವ । ನ ತ್ಯಾಜ್ಯಂ ತದಿತ್ಯರ್ಥಃ । ಕೃತಾವಕೃತೌ ಚಾರಿಪಕ್ಷಮಿತ್ರಪಕ್ಷಯೋಃ ಸತ್ತ್ವೇಽಪಿ ವಿಷ್ಣುಭಕ್ತ್ಯಾದಿ ಕಾರ್ಯಮೇವೇತ್ಯರ್ಥಃ । ಪೂರ್ವಂ 'ನ ಇಂಗತೇ' ಇತಿ ಸಾಮಾನ್ಯತೋಽವೈಷ್ಣವಕರ್ಮಾರಂಭತ್ಯಾಗೋಕ್ತಾವಪಿ ಪ್ರಯೋಜನ ವಿಶೇಷಾಪೇಕ್ಷಯಾಽಪಿ ನಾವೈಷ್ಣವಕರ್ಮಾರಂಭವಾನಿತ್ಯಾಹ- ಸರ್ವಾರಂಭ-ಪರಿತ್ಯಾಗೀತಿ ॥ ಕೇನಚಿತ್ಪ್ರಯೋಜನೇನಾಪ್ಯವೈಷ್ಣವಸರ್ವಕರ್ಮಾರಂಭಮ-ಕುರ್ವನ್ನಿತ್ಯರ್ಥಃ ।**

**ಅನುವಾದ-** ಹಾಗೆಯೇ ಮಾನ ಅಪಮಾನಗಳೂ ಬಂದರೂ ವಿಷ್ಣುಭಕ್ತಿ, ಮುಂತಾದವಲ್ಲಿ ಸಮಾನವಾಗಿಯೇ ಇರುವನು. ಅಂದರೆ ವಿಷ್ಣುಭಕ್ತ್ಯಾದಿಗಳನ್ನು ಬಿಡಬಾರದು ಎಂದು ಅರ್ಥ. ವಿಷ್ಣುಭಕ್ತಿ ಮಾಡಿದರೆ ತನ್ನವರು ಶತ್ರುಪಕ್ಷ ಸೇರಿಯಾರು ಮಾಡದಿದ್ದರೆ ಮಿತ್ರಪಕ್ಷಕ್ಕೆ ಬಂದಾರು ಏನೇ ಆಗಲಿ ವಿಷ್ಣುಭಕ್ತಿ ಮುಂತಾದವನ್ನು ಮಾಡಲೇಬೇಕು ಎಂದು ಅರ್ಥ. ಹಿಂದೆ 'ನ ಇಂಗತೇ' ಎಂದು ಸಾಮಾನ್ಯವಾಗಿ ಅವೈಷ್ಣವಕರ್ಮ ಮಾಡುವುದಿಲ್ಲವೆಂದು ಹೇಳಿದರೂ ವಿಶೇಷ ಪ್ರಯೋಜನದ ಅಪೇಕ್ಷೆಯಿಂದಲೂ ಅವೈಷ್ಣವ ಕರ್ಮವನ್ನು ಮಾಡುವುದಿಲ್ಲ ಎಂದು ಹೇಳುತ್ತಿದ್ದಾರೆ- ಸರ್ವಾರಂಭಪರಿತ್ಯಾಗೀ ಎಂದು. ಯಾವ ಪ್ರಯೋಜನದಿಂದಲೂ ಅವೈಷ್ಣವ ಸರ್ವಕರ್ಮಾರಂಭವನ್ನು ಮಾಡದಿರುವವನಾಗಿ ಎಂದರ್ಥ.

**ಯದ್ವಾ 'ನೇಂಗತ' ಇತ್ಯಲ್ಪಾವೈಷ್ಣವಕರ್ಮತ್ಯಾಗಃ, ಅತ್ರ ತು ಅತಿದೀರ್ಘಾ-ವೈಷ್ಣವಕರ್ಮತ್ಯಾಗ ಇತಿ ನ ಪುನರುಕ್ತಿಃ ॥ 25 ॥**

**ಅನುವಾದ-** ಅಥವಾ 'ನೇಂಗತೇ' ಎಂದು ಅಲ್ಪ ಅವೈಷ್ಣವಕರ್ಮವನ್ನು ಮಾಡುವುದಿಲ್ಲ ವೆಂದು ಹಿಂದೆ ಹೇಳಲಾಗಿದೆ. ಇಲ್ಲಿ ಅತೀ ದೀರ್ಘವಾದ ಅವೈಷ್ಣವಕರ್ಮವನ್ನು ಮಾಡುವುದಿಲ್ಲ ವೆಂದು ಹೇಳುತ್ತಿರುವುದರಿಂದ ಪುನರುಕ್ತಿ ಇಲ್ಲ.

## ನಿತ್ಯಭಕ್ತನು ಹರಿಪ್ರಿಯ

**ಮಾಂ ಚ ಯೋऽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥ 26 ॥**

**ಅರ್ಥ-** ನಿತ್ಯವಾದ ಭಕ್ತಿ ಎಂಬ ಉಪಾಯದಿಂದ ಯಾರು ನನ್ನನ್ನು ಸೇವಿಸುವನೋ ಅವನು ಗುಣತ್ರಯದ ಅದರ ಅಭಿಮಾನಿ ಶ್ರೀಭೂದುರ್ಗೆಯರ ಬಂಧನದಿಂದ ಮುಕ್ತನಾಗಿ ಚೇತನ-ಪ್ರಕೃತಿಯಾದ ಮಹಾಲಕ್ಷ್ಮಿಯಂತೆ ತನ್ನ ಯೋಗ್ಯತಾನುಸಾರ ತಾನೂ ಭಗವಂತನಿಗೆ ಪ್ರಿಯ ನಾಗಲು ಶಕ್ತನಾಗುವನು. ಚೇತನ ಪ್ರಕೃತಿಯಾದ ಮಹಾಲಕ್ಷ್ಮಿಯನ್ನೇ ಹೊಂದುವನು.

**ಏವಂ ಗುಣಾತೀತಲಕ್ಷಣಂ ಆಚಾರಂ ಚೋಕ್ತ್ವಾ ಕಥಂ 'ಗುಣಾನತಿವರ್ತತ' ಇತಿ ಪ್ರಶ್ನಸ್ಯೋತ್ತರಮಾಹ- ಮಾಂ ಚೇತಿ ॥ ಅವ್ಯಭಿಚಾರೇಣ ಭಕ್ತಿಯೋಗೇನ ನಿತ್ಯಭಕ್ತ್ಯಾಖ್ಯೋಪಾಯೇನ ಮಾಂ ಚ ಸೇವತೇ । ಗುಣಾನ್‌ಸತ್ತ್ವಾದಿಗುಣೈಃ ತದಭಿಮಾನಿ ಶ್ರೀದೇವ್ಯಾದಿಭಿಃ ಕೃತಬಂಧಂ ಸಮತೀತ್ಯ ಬ್ರಹ್ಮಭೂಯಾಯ । ಬ್ರಹ್ಮ-ಶಬ್ದೋऽತ್ರ ಚಿತ್ಪ್ರಕೃತಿಪರಃ । ಚಿತ್ಪ್ರಕೃತಿವದ್ಭೂಯಂ ಭವನಂ ಬ್ರಹ್ಮಭೂಯಮ್ । ಸಾ ಯಥಾ ವಿಷ್ಣುಪ್ರಿಯಾ ತಥಾ ಗುಣಾತೀತೋऽಪಿ ವಿಷ್ಣುಪ್ರಿಯೋ ಭವತೀ-ತ್ಯರ್ಥಃ । ಯದ್ವಾ ಬ್ರಹ್ಮಣಿ ಚಿತ್ಪ್ರಕೃತೌ ಭೂಯಾಯ- ಭಾವಾಯ ಚಿತ್ಪ್ರಕೃತಿ-ಪ್ರಾಪ್ತಯೇ ಕಲ್ಪತೇ ಶಕ್ತೋ ಭವತಿ ॥ 26 ॥**

**ಅನುವಾದ-** ಹೀಗೆ ಗುಣಾತೀತನ ಲಕ್ಷಣವನ್ನು ಮತ್ತು ಆಚಾರವನ್ನು ಹೇಳಿ 'ಗುಣಗಳನ್ನು ಹೇಗೆ ಮೀರುವನು ? ಎಂಬ ಪ್ರಶ್ನೆಗೆ ಉತ್ತರ ಹೇಳುತ್ತಿದ್ದಾರೆ- **ಅವ್ಯಭಿಚಾರೇಣ ಭಕ್ತಿಯೋಗೇನ**= ನಿತ್ಯವಾದ ಭಕ್ತಿ ಎಂಬ ಉಪಾಯದಿಂದ ನನ್ನನ್ನು ಯಾರು ಸೇವಿಸುತ್ತಾನೆ. ಅವನು **ಗುಣಾನ್ ಸಮತೀತ್ಯ**= ಸತ್ತ್ವಾದಿಗುಣಗಳಿಂದ ಅದರ ಅಭಿಮಾನಿ ಶ್ರೀದೇವಿ-ಭೂದೇವಿ- ದುರ್ಗಾದೇವಿ ಯರಿಂದ ಉಂಟಾದ ಬಂಧನವನ್ನು ಚೆನ್ನಾಗಿ ಮೀರಿ **ಬ್ರಹ್ಮಭೂಯಾಯ**= ಇಲ್ಲಿ ಬ್ರಹ್ಮಶಬ್ದವು ಚಿತ್ ಪ್ರಕೃತಿವಾಚಕ. ಚಿತ್‌ಪ್ರಕೃತಿಯಂತೆ ಆಗುವಿಕೆಯೇ ಬ್ರಹ್ಮಭೂಯ. ಅಂದರೆ ಚಿತ್‌ಪ್ರಕೃತಿ ಯು ಹೇಗೆ ವಿಷ್ಣುಪ್ರಿಯಳೋ ಹಾಗೇ ಗುಣಾತೀತನೂ ವಿಷ್ಣುಪ್ರಿಯನಾಗುತ್ತಾನೆ ಎಂದರ್ಥ.

ಅಥವಾ ಬ್ರಹ್ಮ= ಚಿತ್ ಪ್ರಕೃತಿಯಲ್ಲಿ, ಭೂಯಾಯ= ಪ್ರಾಪ್ತಿಗಾಗಿ, ಕಲ್ಪತೇ= ಸಮರ್ಥನಾಗುತ್ತಾನೆ. ॥ 26 ॥

**ಬ್ರಹ್ಮಣೋ ಹಿ ಪ್ರತಿಷ್ಠಾಽಹಮಮೃತಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥ 27 ॥**

*॥ ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಪ್ರಕೃತಿಗುಣತ್ರಯವಿಭಾಗಯೋಗೋನಾಮ ಚತುರ್ದಶೋಽಧ್ಯಾಯಃ ॥*

ಅರ್ಥ- ಮಹಾಲಕ್ಷ್ಮಿಗೆ, ಅಳಿವಿರದ ಮುಕ್ತವರ್ಗಕ್ಕೆ ಕೂಡ ಮತ್ತು ಅಕ್ಷಯಫಲವುಳ್ಳ ನಿಷ್ಕಾಮಧರ್ಮಕ್ಕೆ ಮತ್ತು ಆನಂದ ತಾರತಮ್ಯದ ಕೊನೆಯಾದ ಮೋಕ್ಷಸುಖಕ್ಕೂ ನಾನೇ ಆಧಾರ.

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ
ಭಗವದ್ಗೀತೆಯಲ್ಲಿ ವಿಭಾಗಯೋಗವೆಂಬ
ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು.*

ನನು ಗುಣಾತೀತಸ್ಯ ಭಗವತ್ಪ್ರಾಪ್ತ್ಯಾದಿಕಮೇವ ವಾಚ್ಯಮ್ । ಲಕ್ಷ್ಮೀಪ್ರಾಪ್ತಿಃ ಕಿಮರ್ಥಮುಚ್ಯತೇ ಇತ್ಯತಸ್ತತ್ಪ್ರಾಪ್ತೌ ಮತ್ಪ್ರಾಪ್ತಿರೇವ ಭವತಿ । ತಸ್ಯಾಃ ಮತ್ಸ್ಥತ್ವಾದಿತಿ ಭಾವೇನಾಹ- ಬ್ರಹ್ಮಣ ಇತಿ ॥ ಬ್ರಹ್ಮಣೋ ಮಹಾಲಕ್ಷ್ಮ್ಯಾಃ ಅವ್ಯಯಸ್ಯಾಮೃತಸ್ಯ ಚ ಮುಕ್ತವರ್ಗಸ್ಯ ಶಾಶ್ವತಸ್ಯಾಕ್ಷಯಫಲಸ್ಯ ನಿಷ್ಕಾಮ-ಧರ್ಮಸ್ಯ ಐಕಾಂತಿಕಸ್ಯ ಅಸ್ಮಾದಿದಮಧಿಕಮಿತಿ ಗಣನೇ ಏಕಮೇವಾಂತೇ ಯಸ್ಯ ತದೈಕಾಂತಿಕಂ ತಸ್ಯ ದುಃಖಾಸಂಭಿನ್ನಸ್ಯ ಸುಖಸ್ಯ ಮೋಕ್ಷಸ್ಯೇತ್ಯರ್ಥಃ । ಪ್ರತಿಷ್ಠಾ ಆಧಾರಃ । ಅತೋ ಮದವಿಯೋಗಿನೀಂ ಲಕ್ಷ್ಮೀಂ ಪ್ರಾಪ್ತೋ ಮಾಮೇವ ಪ್ರಾಪ್ತೋ ಭವತಿ । ಗುಣಾತೀತೋ ಲಕ್ಷ್ಮೀಸಮೀಪಂ ಪ್ರಾಪ್ಯ ತದನುಗೃಹೀತೋ ಹರಿಂ ಪಶ್ಚಾದಾಪ್ನೋತೀತಿ ಪರಮ್ಪರಾದ್ಯೋತನಾಯೈವಮುಕ್ತಿರಿತಿ ಜ್ಞೇಯಮ್ ॥ 27 ॥

*॥ ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ
ಚತುರ್ದಶೋಽಧ್ಯಾಯಃ ॥*

**ಅನುವಾದ-** ಗುಣಾತೀತನಿಗೆ ಭಗವತ್ ಪ್ರಾಪ್ತಿಯನ್ನೇ ಹೇಳಬೇಕು. ಲಕ್ಷ್ಮೀಪ್ರಾಪ್ತಿಯನ್ನು ಏತಕ್ಕಾಗಿ ಹೇಳಲಾಗಿದೆ ? ಎಂದರೆ ಲಕ್ಷ್ಮಿಯನ್ನು ಹೊಂದಿದರೆ ನನ್ನ ಪ್ರಾಪ್ತಿಯೇ ಆಗುತ್ತದೆ. ಏಕೆಂದರೆ ಅವಳು ನನ್ನಲ್ಲಿಯೇ ಇರುವುದು ಎಂಬ ಅಭಿಪ್ರಾಯದಿಂದ ಹೇಳುತ್ತಿದ್ದಾರೆ. **ಬ್ರಹ್ಮಣಃ=** ಮಹಾಲಕ್ಷ್ಮಿಗೆ, **ಅವ್ಯಯಸ್ಯ ಅಮೃತಸ್ಯ ಚ=** ನಾಶವಿರದ ಮುಕ್ತವರ್ಗಕ್ಕೂ, **ಶಾಶ್ವತಸ್ಯ=** ಅಕ್ಷಯಫಲವೀವ ನಿಷ್ಕಾಮಧರ್ಮಕ್ಕೂ, **ಐಕಾಂತಿಕಸ್ಯ=** ಇದಕ್ಕಿಂತ ಇದು ಅಧಿಕ ಎಂಬ ಪರಿಗಣನೆಯಲ್ಲಿ ಒಂದೇ ಯಾವುದಕ್ಕೆ ಕೊನೆಯಾಗಿದೆಯೋ ಅದು ಐಕಾಂತಿಕ. ಅಂದರೆ ದುಃಖಮಿಶ್ರವಲ್ಲದ ಸುಖರೂಪವಾದ ಮೋಕ್ಷಕ್ಕೆ ಎಂದು ಅರ್ಥ. **ಪ್ರತಿಷ್ಠಾ=** ಆಧಾರನು, ಆದ್ದರಿಂದ ನನ್ನ ಅವಿಯೋಗಿನಿಯಾದ ಲಕ್ಷ್ಮಿಯನ್ನು ಹೊಂದಿದವನು ನನ್ನನ್ನೇ ಹೊಂದಿದವನಾಗುತ್ತಾನೆ. ಗುಣಾತೀತನು ಲಕ್ಷ್ಮಿಯ ಸಮೀಪಕ್ಕೆ ಹೋಗಿ ಅವಳಿಂದ ಅನುಗೃಹೀತನಾಗಿ ಆಮೇಲೆ ಶ್ರೀಹರಿಯನ್ನು ಸೇರುತ್ತಾನೆ ಎಂಬ ಕ್ರಮವನ್ನು ತಿಳಿಸುವುದಕ್ಕಾಗಿ ಹೀಗೆ ಹೇಳಿರುವುದೆಂದು ತಿಳಿಯಬೇಕು. ॥ 27 ॥

ಅನಯಾ ಸೇವಯಾ ಪ್ರೀತೋ ಗುಣಬಂಧವಿನಾಶಕೃತ್ ।
ಭೂಯಾಚ್ಛ್ರೀರಾಘವೇಂದ್ರಾರ್ಯ ಹೃದ್ಗವಾಯುಪ್ರಿಯೋ ಹರಿಃ ॥

*ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ*
**ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು.**

# ಅಧ್ಯಾಯ - 15

## ಜಗದ್ವೃಕ್ಷದ ಅರಿವು

**ಶ್ರೀಭಗವಾನುವಾಚ -**

**ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ 1 ॥**

**ಅನುವಾದ–** ಪ್ರಕೃತಿ ಮಹತ್ತತ್ವ ಅಹಂಕಾರ ಮುಂತಾದ ಇಪ್ಪತ್ತೈದು ತತ್ವಗಳಿಂದಾಗಿರುವ ಈ ಜಗತ್ತು ಒಂದು ವೃಕ್ಷದಂತಿದೆ. ಸರ್ವೋತ್ತಮವಾದ ಪರಮಾತ್ಮ ತತ್ವ ಇದಕ್ಕೆ ಭೂಮಿಯಂತೆ ಮೂಲಾಧಾರ. ಜಡಪ್ರಪಂಚದಲ್ಲಿ ಸರ್ವೋತ್ತಮವಾದ ಮೂಲ ಪ್ರಕೃತಿಯ ಮೂರು ಗುಣಗಳು ಮೂರು ತಾಯಿಬೇರಿನಂತೆ ಮೂಲಾಧಾರವಾಗಿ ಪರಿಣಮಿಸಿವೆ. ಅಸ್ವತಂತ್ರ ಪ್ರಪಂಚದಲ್ಲಿ ಸರ್ವೋತ್ತಮವಾದ ಲಕ್ಷ್ಮೀತತ್ವವೇ ಮೂಲಪ್ರಕೃತಿಗೆ ಅಭಿಮಾನಿನಿಯಾದುದರಿಂದ ಅದೂ ಬೇರಿನಂತೆಯೇ ಮೂಲಾಧಾರ. ಮೂರು ಉತ್ತಮ ತತ್ವಗಳಿಗಿಂತ ಕೆಳಗಿನವುಗಳಾದ ಮಹತ್ತತ್ವ ಅಹಂಕಾರ, ಬುದ್ಧಿ , ಪಂಚಮಹಾಭೂತಗಳೆಂಬ ಎಂಟು ತತ್ತ್ವಗಳೂ ಅವುಗಳ ಅಭಿಮಾನಿಗಳೂ ಈ ಜಗದ್ವೃಕ್ಷಕ್ಕೆ ಕೊಂಬೆಗಳಂತೆ . ಈ ವೃಕ್ಷ ಸದಾ ಪರಿಣಾಮ ಹೊಂದುತ್ತಲೇ ಇರುವುದರಿಂದ ಇಂದಿನಂತೆ ನಾಳೆ ಇರುವುದಿಲ್ಲ. ಕುದುರೆಯಂತೆ ಚಂಚಲ ಸ್ವಭಾವ ಉಳ್ಳದ್ದೂ ಆಗಿದೆ. ಆದರೆ ಎಂದೂ ನಿಃಶೇಷವಾಗಿ ನಾಶ ಹೊಂದಲಾರದು. ಪ್ರತಿ ಕಲ್ಪದಲ್ಲಿಯೂ ಹುಟ್ಟುತ್ತದೆ, ನಾಶ ಹೊಂದುತ್ತದೆ. 'ಪ್ರವಾಹತಃ' ಅನಾದಿನಿತ್ಯ ಎಂದು ಹೇಳುತ್ತಾರೆ. ಮರದಲ್ಲಿ ಎಲೆಗಳು ಚಿಗುರಿದ ಬಳಿಕವೇ ಫಲೋತ್ಪತ್ತಿಯಾಗುವಂತೆ ಈ ಜಗದ್ವೃಕ್ಷದಲ್ಲಿ ವೇದಗಳೂ ಅವುಗಳ ಅಭಿಮಾನಿಗಳೂ ಎಲೆಗಳಂತಿದ್ದು ಕಾಮ ಮೋಕ್ಷಗಳೆಂಬ ಎರಡು ಪುರುಷಾರ್ಥಗಳು ಫಲಿಸಲು ಕಾರಣವಾಗಿವೆ. ಯಾರು ಈ ಜಗದ್ವೃಕ್ಷವನ್ನು ತಿಳಿದು ಕೊಳ್ಳುವನೋ ಅವನೇ ವೇದದ ತಿರುಳನ್ನರಿತವನೆನಿಸುತ್ತಾನೆ.

### ಗೀತಾವಿವೃತಿ

**ತ್ರಯೋದಶಾಧ್ಯಾಯೇ ಸಂಸಾರಹೇತುಭೂತಂ ಪ್ರಕೃತಿ ಮಹದಹಂಕಾರಾದಿ-ತತ್ತ್ವಜಾತರೂಪಂ ಕ್ಷೇತ್ರಶಬ್ದಿತಂ ಜಗತ್ಸ್ವರೂಪಮ್ ಉಕ್ತಮ್ । 'ಯ ಏನಂ ವೇತ್ತಿ ಪುರುಷಂ' (13-24) ಇತ್ಯಾದಿನಾ ಭಗವದಾದಿಜ್ಞಾನರೂಪಃ ತದತ್ಯಯೋ-**

**ಪಾಯಶ್ಲೋಕ್ತಃ । ತದ್ದ್ವಯಮತ್ರ ದರ್ಶಯತಿ । ನನು ಪೂರ್ವಾಧ್ಯಾಯ ಏವ ತದ್ದ್ವಯಂ ದರ್ಶಿತಮಿತಿ ಚೇನ್ನ । ತತ್ರ ಸಂಸಾರಹೇತ್ವೇಕದೇಶಗುಣಾನಾಮೇವ ಪ್ರವೃತ್ತಿರ್ದರ್ಶಿತಾ । ಅತ್ರ ಪುನಃ ಸಮಗ್ರಂ ಸಂಸಾರಹೇತುಪ್ರಕೃತ್ಯಾದಿಜಗತ್-ಸ್ವರೂಪಂ ಪ್ರದರ್ಶ್ಯ ತದತ್ಯಯೇಚ್ಛಾಮುತ್ಪಾದ್ಯ ತತ್ಸಾಧನಜಿಜ್ಞಾಸುಂ ಪ್ರತಿ ಪ್ರಾಗುಕ್ತತದತ್ಯಯ (ಸಾಧನಂ ಪ್ರಪಂಚಯತಿ) ಸಾಧನಪ್ರಪಂಚನಾತ್ । ಅತ ಏವ ಪೂರ್ವಾನಂತರ್ಯಮಸ್ಯ । ತದತ್ಯಯಸಾಧನಪ್ರಪಂಚನಪ್ರಸಂಗಾದೇವ ಭಗವನ್ಮಹಿಮಾನಂ ಚ ದರ್ಶಯತೀತಿ ಜ್ಞೇಯಮ್ ।**

**ಅನುವಾದ–** ಹದಿಮೂರನೆ ಅಧ್ಯಾಯದಲ್ಲಿ ಸಂಸಾರಕ್ಕೆ ಕಾರಣವಾದ ಪ್ರಕೃತಿ, ಮಹತ್ತತ್ವ, ಅಹಂಕಾರತತ್ವ ಮುಂತಾದ ತತ್ವಸಮೂಹರೂಪವಾದ ಜಗತ್ತಿನ ಸ್ವರೂಪ ಉಕ್ತವಾಗಿದೆ. ಅದಕ್ಕೆ ಕ್ಷೇತ್ರವೆಂದು ಹೆಸರು. '**ಯ ಏನಂ ವೇತ್ತಿ ಪುರುಷಂ**' (ಗೀ.13.24) ಎಂದು ಮುಂತಾಗಿ ಹಿಂದೆ ಭಗವಂತ ಮುಂತಾದ ತತ್ವಗಳ ಜ್ಞಾನವು ಸಂಸಾರವನ್ನು ದಾಟುವ ಉಪಾಯ ಎಂದೂ ಉಕ್ತವಾಗಿದೆ. ಅವೆರಡನ್ನೂ ಈ ಅಧ್ಯಾಯದಲ್ಲಿ ಶ್ರೀಕೃಷ್ಣ ತೋರಿಸುತ್ತಾನೆ. ಹಿಂದಿನ ಅಧ್ಯಾಯ ದಲ್ಲಿಯೇ ಅವೆರಡನ್ನೂ ತೋರಿಸಿಯಾಗಿದೆ ನಿಜ. ಆದರೆ ಅಲ್ಲಿ ಸಂಸಾರಕ್ಕೆ ಕಾರಣವಾದವುಗಳಲ್ಲಿ ಒಂದಂಶವಾದ ಗುಣಗಳ ಪ್ರವೃತ್ತಿಯನ್ನು ಮಾತ್ರ ತೋರಿಸಲಾಗಿದೆ. ಇಲ್ಲಿ ಪುನಃ ಪೂರ್ತಿಯಾಗಿ ಸಂಸಾರಕ್ಕೆ ಕಾರಣವಾದ ಪ್ರಕೃತಿಮುಂತಾದ ಜಗತ್ಸ್ವರೂಪವನ್ನು ತೋರಿಸಿ, ಅದನ್ನು ದಾಟಲು ಇಚ್ಛೆ ಮೂಡುವಂತೆ ಮಾಡಿ, ಅದಕ್ಕೆ ಏನು ಸಾಧನವೆಂದು ತಿಳಿಯ ಬಯಸುವವನಿಗೆ ಹಿಂದೆ ಹೇಳಿದ ಸಾಧನವನ್ನು ವಿವರಿಸುತ್ತಾನೆ ಶ್ರೀಕೃಷ್ಣ. ಅದರಿಂದ ಹಿಂದಿನ ಅಧ್ಯಾಯದ ಅನಂತರ ಈ ಅಧ್ಯಾಯ ಬಂದಿರುವುದು ಯುಕ್ತವೇ ಆಗಿದೆ. ಸಂಸಾರವನ್ನು ದಾಟುವ ಉಪಾಯವನ್ನು ವಿವರಿಸುತ್ತ ಪ್ರಾಸಂಗಿಕವಾಗಿ ಭಗವಂತನ ಮಹಿಮೆಯನ್ನು ಕೂಡ ತೋರಿಸುತ್ತಿದ್ದಾನೆ ಶ್ರೀಕೃಷ್ಣ ಎಂಬುದನ್ನೂ ಗಮನಿಸಬೇಕು.

ಜಗತ್ಸ್ವರೂಪಂ ತಾವದಾಹ- **ಊರ್ಧ್ವೇತ್ಯಾದಿಸಾರ್ಧಶ್ಲೋಕದ್ವಯೇನ ॥ ಊರ್ಧ್ವಶಬ್ದ ಉನ್ನತವಾಚೀ ಸನ್ ಸರ್ವೋತ್ತಮತ್ವಾದಚಿತ್ಪ್ರಕೃತಿಪರೋಽತ್ರ ಜ್ಞೇಯಃ । ವಿಷ್ಣೋಃ ಸರ್ವೋತ್ತಮತ್ವಾತ್ ಪರತಂತ್ರೇಷು ಚಿತ್ಪ್ರಕೃತೇಃ ಸರ್ವೋತ್ತಮತ್ವಾತ್ ಅಚಿತ್ಪ್ರಕೃತೇರಚೇತನೇಷೂತ್ತಮತ್ವಾತ್ ಊರ್ಧ್ವಾಃ ವಿಷ್ಣುಚಿದಚಿತ್ಪ್ರಕೃತಯೋ ವೃಕ್ಷಸ್ಯ ಮೂಲಾನೀವ ಮೂಲಾನಿ ಯಸ್ಯ ಸವಿಕಾರಾ-ವ್ಯಕ್ತಾದಿಪ್ರಾಗುಕ್ತಪಂಚವಿಂಶತಿತತ್ತ್ವಾತ್ಮಕಸ್ಯ ಜಗದಾಖ್ಯವೃಕ್ಷಸ್ಯ ತಮೂರ್ಧ್ವ-ಮೂಲಮ್ । ಶ್ವ ಏಕರೂಪೇಣ ನ ತಿಷ್ಠತೀತಿ ವ್ಯುತ್ಪತ್ತ್ಯಾ ಅಶ್ವವಚ್ಚಂಚಲತ್ವೇನ**

**ತಿಷ್ಠತೀತಿ ವಾಽಶ್ವತ್ಥನಾಮಕಮ್ । ಸುಪಿ ಸ್ಥ ಇತಿ ಕಃ, ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಸಸ್ಯ ತಕಾರಃ । ಜಗದಾಖ್ಯಂ ಚಿದಚಿದಾತ್ಮಕಂ ವೃಕ್ಷಮ್ । ತತ್ರಾಯಂ ವಿವೇಕಃ । ಪ್ರಸಿದ್ಧವೃಕ್ಷಸ್ಯ ಧರಾದೇವೀವತ್ ವಿಷ್ಣುರ್ಜಗದ್ ವೃಕ್ಷಸ್ಯ ಪೃಥಙ್ ಮೂಲಮ್ । ಅಚಿತ್‌ಪ್ರಕೃತಿಃ ಸತ್ತ್ವಾದಿ ತ್ರಿಗುಣಾತ್ಮಿಕಾ ವೃಕ್ಷಸ್ಯ ಮೃದ್ವತ್ಪರಿಣಾಮಿತಯಾ ಮೂಲಮ್ । ತ್ರಿಮೂಲೋ ಹಿ ಜಗದ್‌ವೃಕ್ಷೋ ಜಡಪ್ರಕೃತಿರಪಿ ತ್ರಿಗುಣಾತ್ಮಕತ್ವಾತ್ ಮೂಲತ್ರಯಾತ್ಮನಾ ತ್ರಿಭಿರ್ಗುಣೈಃ ಪರಿಣಮತೇ । ಚಿತ್-ಪ್ರಕೃತಿಸ್ತು ತದಧಿಷ್ಠಾತೃತ್ವಾನ್ಮೂಲ ಭಾಗವದ್ ಜ್ಞಾತವ್ಯೇತಿ ।**

**ಅನುವಾದ–** ಮೊದಲಿಗೆ ಜಗತ್ತಿನ ಸ್ವರೂಪವನ್ನು '**ಊರ್ಧ್ವಮೂಲಂ**' ಎಂದು ಮುಂತಾಗಿ ಎರಡೂವರೆ ಶ್ಲೋಕಗಳಲ್ಲಿ ವರ್ಣಿಸುತ್ತಾನೆ. '**ಊರ್ಧ್ವ**' ಶಬ್ದ ಉತ್ತಮ ಎಂಬ ಅರ್ಥಕ್ಕೆ ವಾಚಕವಾದುದರಿಂದ ಇಲ್ಲಿ ಉತ್ತಮರಾದ ವಿಷ್ಣು ಚಿತ್ಪ್ರಕೃತಿ ಅಚಿತ್ ಪ್ರಕೃತಿಗಳ ಪರವಾಗಿದೆ ಎಂದು ತಿಳಿಯಬೇಕು. ಏಕೆಂದರೆ ವಿಷ್ಣು ಸರ್ವೋತ್ತಮ. ಪರತಂತ್ರ ತತ್ವಗಳಲ್ಲಿ ಚಿತ್ಪ್ರಕೃತಿ ಸರ್ವೋತ್ತಮಳು. ಅಚೇತನಗಳಲ್ಲಿ ಜಡ ಪ್ರಕೃತಿ ಉತ್ತಮ. ಆದರಿಂದ '**ಊರ್ಧ್ವಮೂಲಂ**' ಎಂದರೆ 'ಊರ್ಧ್ವ'ರೆನಿಸಿರುವ ವಿಷ್ಣುಚಿತ್ಪ್ರಕೃತಿ ಜಡಪ್ರಕೃತಿಗಳು ಹಿಂದೆ ಹೇಳಿದ ಅವ್ಯಕ್ತ ಮುಂತಾದ ಇಪ್ಪತ್ತೈದು ತತ್ವಗಳು ಮತ್ತು ಅವುಗಳ ವಿಕಾರಗಳಿಂದ ಕೂಡಿದ ಈ ಜಗತ್ತೆಂಬ ಮರಕ್ಕೆ ಮೂಲ ಅಂದರೆ ಮೂಲಾಧಾರ, ಬೇರುಗಳಂತೆ. ಹೀಗಾಗಿ ಜಗತ್ತು ಊರ್ಧ್ವಮೂಲವೆನಿಸಿದೆ. ಅದು '**ಅಶ್ವತ್ಥ**' ಎನಿಸಿದೆ ಏಕೆಂದರೆ '**ಶ್ವಃ**' ನಾಳೆ, ಇಂದು ಕಂಡಂತೆ ಜಗತ್ತಿರುವುದಿಲ್ಲ, ಏನಾದರೂ ಪರಿಣಾಮ ಹೊಂದಿರುತ್ತದೆ. ಅಥವಾ '**ಅಶ್ವ**' ಕುದುರೆಯಂತೆ ಚಂಚಲವಾಗಿರುತ್ತದೆ. '**ಷ್ಠಾ**' ಧಾತುವಿಗೆ '**ಸುಪಿ ಸ್ಥಃ**' ಎಂಬ ಸೂತ್ರದಂತೆ '**ಕ**' ಪ್ರತ್ಯಯ. '**ಆತೋ ಲೋಪ ಇಟಿ ಚ**' ಎಂದು ಆಕಾರಲೋಪ. ಸಕಾರಕ್ಕೆ ತಕಾರಾದೇಶ. ಚೇತನಾಚೇತನಾತ್ಮಕವಾದ ಜಗತ್ತೆಂಬ ವೃಕ್ಷವನ್ನು '**ಅಶ್ವತ್ಥ**' ಎನ್ನುತ್ತಾರೆ. ಇಲ್ಲಿ 'ಮೂಲ' ಎಂದರೆ, ವೃಕ್ಷಕ್ಕಿಂತ ಬೇರೆಯಾಗಿದ್ದು , ಅದಕ್ಕೆ ಧರಾದೇವಿಯಂತೆ ಆಧಾರವಾಗಿರುವ ವಿಷ್ಣು ಜಗತ್ತೆಂಬ ವೃಕ್ಷಕ್ಕೆ ಮೂಲ ಅಂದರೆ ಮೂಲಾಧಾರ. ಮಣ್ಣಿನ ಪರಿಣಾಮರೂಪವಾದ ವೃಕ್ಷಕ್ಕೆ ಮಣ್ಣು ಕೂಡ ಮೂಲಾಧಾರವಾಗಿರುವಂತೆ, ಸತ್ವಾದಿ ತ್ರಿಗುಣಾತ್ಮಕವಾದ ಜಡಪ್ರಕೃತಿಯ ಪರಿಣಾಮರೂಪವಾದ ಜಗದ್‌ವೃಕ್ಷಕ್ಕೆ ಆ ಪ್ರಕೃತಿಯೂ ಮೂಲಾಧಾರ. ಅದಕ್ಕೆ ಅಭಿಮಾನಿನಿಯಾದ ಚಿತ್‌ಪ್ರಕೃತಿಯೂ ಮೂಲಾಧಾರ. ಜಗದ್ ವೃಕ್ಷಕ್ಕೆ ಬೇರೆವೃಕ್ಷದಂತೆ ಮೂರು ಬೇರುಗಳಿವೆ. ಜಡ ಪ್ರಕೃತಿ ತ್ರಿಗುಣಾತ್ಮಕವಾಗಿರುವುದರಿಂದ ಮೂರು ಗುಣಗಳಿಂದ ಮೂರು ಬೇರುಗಳಾಗಿ ಅದು ಪರಿಣಮಿಸುತ್ತದೆ. ಚಿತ್‌ಪ್ರಕೃತಿ ಅವುಗಳಿಗೆ ಅಭಿಮಾನಿಯಾದ ಪ್ರಯುಕ್ತ ಅವಳೂ ಮೂರು ಬೇರುಗಳಂತೆ ಎಂದು ತಿಳಿಯಬೇಕು.

**ಅಧಃಶಬ್ದೋ ನೀಚವಾಚೀ । ವಿಷ್ಣ್ವಾದಿಪ್ರಾಗುಕ್ತತ್ರಿತಯಾಪೇಕ್ಷಯಾಽಧಃ ನೀಚಾಃ ಪಂಚಭೂತಸಹಿತಾಃ ಮಹದಹಂಕಾರಬುದ್ಧಯೋಽಷ್ಟೌ ಪದಾರ್ಥಾಃ ಸಾಭಿಮಾನಿನಃ ಶಾಖಾ ಇವ ಶಾಖಾಃ ಯಸ್ಯ ತಥಾ ತಮ್ ।**

**ಅನುವಾದ–** 'ಅಧಶ್ಚೋರ್ಧ್ವಂ' ಎಂಬಲ್ಲಿ ಅಧಃ ಎಂದರೆ ಉತ್ತಮವಲ್ಲದ್ದು , ಕಡಿಮೆಯಾಗಿರುವಂಥದ್ದು ಎಂದರ್ಥ. ವಿಷ್ಣು ಮುಂತಾದ ಹಿಂದೆ ಹೇಳಿದ ಮೂರು ತತ್ವಗಳಿಗಿಂತ ಕಡಿಮೆಯವುಗಳಾದ ಮಹತ್ತತ್ವ, ಅಹಂಕಾರತತ್ವ,ಬುದ್ಧಿತತ್ವ ಮತ್ತು ಪಂಚಭೂತಗಳೆಂಬ ಎಂಟು ಪದಾರ್ಥಗಳು ಮತ್ತು ಅವುಗಳ ಅಭಿಮಾನಿಗಳು ಜಗದ್ ವೃಕ್ಷಕ್ಕೆ ಶಾಖೆಗಳಂತಿದ್ದಾರೆ.

**ಅವ್ಯಯಂ ಸರ್ವಥಾಽನುಚ್ಛಿದ್ಯಮಾನಮ್ । ಪೂರ್ವಕಲ್ಪೇ ಯಥಾ ಸ್ಥಿತಂ ತಥೈವ ಕಲ್ಪಾಂತರೇಽಪಿ ಸ್ಥಿತಂ ಪ್ರವಾಹತೋಽನಾದಿನಿತ್ಯಮಿತಿ ಯಾವತ್ । ಪ್ರಾಹುಃ, ಪ್ರಾಜ್ಞಾ ಇತ್ಯರ್ಥಃ ।**

**ಅನುವಾದ–** ಈ ಜಗದ್ವೃಕ್ಷ 'ಅವ್ಯಯ' ಎಂದರೆ ಪೂರ್ತಿಯಾಗಿ ಎಂದೂ ನಾಶವಾಗುವುದಿಲ್ಲ. ಪೂರ್ವಕಲ್ಪದಲ್ಲಿ ಅದು ಹೇಗೆ ಇದ್ದಿತೋ ಹಾಗೇ ಬೇರೆ ಕಲ್ಪದಲ್ಲಿಯೂ ಇರುತ್ತದೆ. ಪ್ರವಾಹರೂಪದಿಂದ ಅದು ಅನಾದಿನಿತ್ಯವಾಗಿದೆ. 'ಪ್ರಾಹುಃ' ಬಲ್ಲವರು ಹಾಗೆ ಹೇಳುತ್ತಾರೆ ಎಂದರ್ಥ.

**ಲೋಕೇ ಪರ್ಣೋತ್ಪತ್ತಾವೇವ ಫಲೋದಯದರ್ಶನಾತ್, ಛಂದಸಾಂ ಕಾಮಮೋಕ್ಷರೂಪಫಲಹೇತುತ್ವಾತ್, ಯಸ್ಯ ಜಗದಾಖ್ಯವೃಕ್ಷಸ್ಯ ಛಂದಾಂಸಿ ವೇದವಾಕ್ಯಜಾತಾನಿ ಅಭಿಮಾನಿಸಹಿತಾನಿ ಪರ್ಣಾನೀವ ಪರ್ಣಾನಿ ಆಹುಃ । ಏತೇನ ಜಗದ್ವೃಕ್ಷಃ ಕಾಮಮೋಕ್ಷರೂಪದ್ವಿಫಲ ಇತ್ಯುಕ್ತಂ ಭವತಿ । ಯಸ್ತಂ ಜಗದ್ವೃಕ್ಷಂ ವೇದ ಸ ವೇದವಿತ್ ವೇದಾರ್ಥಜ್ಞ ಇತ್ಯರ್ಥಃ ॥ 1 ॥**

**ಅನುವಾದ–** ಲೋಕದಲ್ಲಿ ಮರಗಳಲ್ಲಿ ಎಲೆಗಳು ಚಿಗುರಿ ಚೆನ್ನಾಗಿ ಬೆಳೆದ ಬಳಿಕವೇ ಹಣ್ಣುಗಳುಂಟಾಗುವುದು ಕಂಡಿರುವುದರಿಂದ, ಕಾಮ ಮತ್ತು ಮೋಕ್ಷ ರೂಪವಾದ ಫಲಕ್ಕೆ ಕಾರಣವಾಗಿರುವ ವೇದವಾಕ್ಯ ಸಮೂಹಗಳು ಮತ್ತು ಅವುಗಳ ಅಭಿಮಾನಿದೇವತೆಗಳು ಜಗದ್ವೃಕ್ಷಕ್ಕೆ ಚೆನ್ನಾಗಿ ಬೆಳೆದ ಎಲೆಗಳಂತಿವೆ ಎಂದು ಹೇಳುತ್ತಾರೆ. ಇದರಿಂದ ಜಗದ್ವೃಕ್ಷಕ್ಕೆ ಕಾಮ ಮತ್ತು ಮೋಕ್ಷಗಳೆಂದು ಎರಡು ಫಲಗಳೆಂದೂ ಹೇಳಿದಂತಾಗುವುದು. ಯಾರು ಆ ಜಗದ್ವೃಕ್ಷವನ್ನು ತಿಳಿಯುವನೋ ಅವನು ವೇದವೇತ್ತ, ಅಂದರೆ ವೇದಾರ್ಥಗಳನ್ನು ಬಲ್ಲವನೆನಿಸುತ್ತಾನೆ ಎಂದರ್ಥ. ॥ 1 ॥

**ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ**
**ಗುಣಪ್ರವೃದ್ಧಾ ವಿಷಯಪ್ರವಾಲಾಃ।**
**ಅಧಶ್ಚ ಮೂಲಾನ್ಯನುಸಂತತಾನಿ**
**ಕರ್ಮಾನುಬಂಧೀನಿ ಮನುಷ್ಯಲೋಕೇ ॥ 2 ॥**

**ಅರ್ಥ–** ಆ ಜಗದ್ವೃಕ್ಷದ ಕೊಂಬೆಗಳಂತಿರುವ ಮಹದಾದಿ ತತ್ವಗಳು ತಮ್ಮ ಪರಿಣಾಮ ರೂಪವಾಗಿದ್ದು ತಮಗಿಂತ ಕೆಳಗಿನದಾದ ಭೌತಿಕ ಶರೀರಾದಿ ಪದಾರ್ಥಗಳಲ್ಲಿಯೂ, ತಮಗೆ ಕಾರಣ ರೂಪವಾಗಿದ್ದು ತಮಗಿಂತ ಉತ್ತಮವಾದ ಮೂಲ ಪ್ರಕೃತಿಯಲ್ಲಿಯೂ ಸೂಕ್ಷ್ಮ ರೂಪದಿಂದ ವ್ಯಾಪಿಸಿವೆ. ಬೇರುಗಳಂತಿರುವ ಸತ್ವಾದಿಗುಣಗಳಿಂದ ಬೆಳವಣಿಗೆಯನ್ನು ಹೊಂದಿವೆ . ತಾತ್ಕಾಲಿಕ ಸುಖದಾಯಕವಾಗಿರುವುದರಿಂದ ಶಬ್ದಾದಿ ವಿಷಯಪದಾರ್ಥಗಳೇ ಈ ಕೊಂಬೆಗಳಿಗೆ ಚಿಗುರುಗಳಂತೆ ಇವೆ. ಮನುಷ್ಯಲೋಕದಲ್ಲಿ ಕರ್ಮಾನುಸಾರ ಫಲ ನೀಡುವ ಪರಮಾತ್ಮ ಚೇತನಪ್ರಕೃತಿ ಜಡಪ್ರಕೃತಿ ಸತ್ವಾದಿಗುಣಗಳೆಂಬ ಬೇರುಗಳು ತಮಗಿಂತ ಕೆಳಗಿನದಾದ ಮಹದಾದಿ ರೂಪವಾದ ಕೊಂಬೆಗಳಲ್ಲಿ ವ್ಯಾಪಿಸಿ ಕೊಂಡಿದೆ.

**ತಸ್ಯ ಜಗದಾಖ್ಯವೃಕ್ಷಸ್ಯ ಶಾಖಾಃ ಶಾಖಾಸ್ಥಾನೀಯಾಃ ಮಹದಾದ್ಯಾಃ ಅಷ್ಟೌ ಪದಾರ್ಥಾಃ ಚಿದಚಿದ್ರೂಪಾಃ, ಅಧಃ ಸ್ವಾಪೇಕ್ಷಯಾಽಪ್ರಕೃಷ್ಟಕಾರ್ಯಭೂತ ಶರೀರಾದೌ ಸ್ವಾಪೇಕ್ಷಯೋತ್ಕೃಷ್ಟೋರ್ಧ್ವ ಶಬ್ದೋಕ್ತೇ ಕಾರಣಭೂತಾವ್ಯಕ್ತೇ ಚ ಸೂಕ್ಷ್ಮರೂಪೇಣ ಪ್ರಸೃತಾಃ ವ್ಯಾಪ್ತಾಃ । ಕಿಂರೂಪಾಃ ಶಾಖಾ ಇತ್ಯತ ಉಕ್ತಂ ಗುಣಪ್ರವೃದ್ಧಾ ಇತ್ಯಾದಿ । ಗುಣೈಃ ಸತ್ತ್ವಾದಿಭಿಃ ಪ್ರವೃದ್ಧಾಃ । ಗುಣಾನಾ-ಮರ್ವಾಚೀನಮೂಲತ್ವಾತ್ತಾದೃಶಮೂಲೈರೇವ ಪ್ರವೃದ್ಧೇ ವೃಕ್ಷೇ ಶಾಖಾನಾಂ ಪ್ರವೃದ್ಧಿರ್ದೃಷ್ಟೇತಿ ಭಾವಃ ।**

**ಅನುವಾದ–** ಆ ಜಗತ್ತೆಂಬ ವೃಕ್ಷದ ಶಾಖೆಗಳು, ಶಾಖಾಸ್ಥಾನದಲ್ಲಿರುವ ಮಹತ್ತತ್ ಮುಂತಾದ ಎಂಟು ತತ್ವಗಳು ಮತ್ತು ಅವುಗಳ ಅಭಿಮಾನಿಗಳು **'ಅಧಃ ಊರ್ಧ್ವಂ ಪ್ರಸೃತಾಃ'** 'ಕೆಳಗೆ', ಅಂದರೆ, ತಮಗಿಂತ ಕಡಿಮೆಯವುಗಳಾದ, ತಮ್ಮಿಂದ ಹುಟ್ಟಿರುವ ಪ್ರಾಣಿ ಶರೀರ ಮುಂತಾದವುಗಳಲ್ಲಿ, ಮತ್ತು 'ಮೇಲೆ' ಅಂದರೆ, ತಮಗಿಂತ ಶ್ರೇಷ್ಠವಾದ, ತಮಗೆ ಕಾರಣ ವಾಗಿರುವ ಮೂಲಪ್ರಕೃತಿಯಲ್ಲಿ ಸೂಕ್ಷ್ಮರೂಪದಿಂದ ವ್ಯಾಪಿಸಿವೆ. ಆ ಶಾಖೆಗಳು ಎಂಥ ಗಳೆಂದರೆ **'ಗುಣಪ್ರವೃದ್ಧಾಃ'** ಎಂದು ಮುಂತಾಗಿ ವರ್ಣಿಸಲಾಗಿದೆ. ಗುಣಗಳಿಂದ ಅಂದ ಸತ್ವರಜಸ್ತಮೋಗುಣಗಳಿಂದ ಬೆಳೆದಿವೆ. ಗುಣಗಳು ಜಗದ್‌ವೃಕ್ಷಕ್ಕೆ ಹೊಸ ಬೇರುಗಳೆನಿಸ

ವುದರಿಂದ ಅಂಥ ಬೇರುಗಳಿಂದಲೇ ವೃಕ್ಷ ಬೆಳೆದಾಗ ಶಾಖೆಗಳು ಬೆಳೆಯುವುದು ಕಂಡಿದೆ ಎಂದು ಅಭಿಪ್ರಾಯ.

**ವಿಷಯಪ್ರವಾಲಾಃ । ತಾತ್ಕಾಲಿಕಸುಖಹೇತುತ್ವಸಾಮ್ಯಾತ್ ಶಬ್ದಾದ್ಯಾಃ ವಿಷಯಾ ಏವ ಪ್ರವಾಲಾಃ ಪಲ್ಲವಾ ಯಾಸಾಂ ತಾಃ ವಿಷಯಪ್ರವಾಲಾಃ । ಮೂಲಾನಿ ಊರ್ಧ್ವಪದೇನ ಪ್ರಕೃತಾನಿ ವಿಷ್ಣೋ ರೂಪಾಣಿ ಜಡಾಜಡಪ್ರಕೃತೀ ಸತ್ತ್ವ-ರಜಸ್ತಮಾಂಸಿ ಚ ಅಧಃ ಜಗದಾಖ್ಯವೃಕ್ಷಸ್ಯ ಅಧೋಭಾಗೇಷು ಚ । ಶಾಖಾಸ್ವಪೀತಿ ಯಾವತ್ । ಅನುಸಂತತಾನಿ ವ್ಯಾಪ್ತಾನಿ । ಕೀದೃಶಾನಿ ಮೂಲಾನೀತ್ಯತ ಉಕ್ತಂ ಕರ್ಮಾನುಬಂಧೀನೀತಿ । ಮನುಷ್ಯಲೋಕೇ ಕರ್ಮಾಣಿ ಅಪೇಕ್ಷ್ಯ ಫಲ-ದಾತೃತ್ವಾತ್ಕರ್ಮಾನುಬಂಧೀನಿ ಇತಿ ।**

**ಅನುವಾದ–** 'ವಿಷಯ ಪ್ರವಾಲಾಃ' ಮರದಲ್ಲಿ ಸಿಗುವ ಚಿಗುರೆಲೆಗಳು ತಾತ್ಕಾಲಿಕ ಸುಖಕಾರಣವಾಗಿರುವಂತೆ ಜಗತ್ತಿನಲ್ಲಿ ಸಿಗುವ ಶಬ್ದಾದಿ ವಿಷಯ ಭೋಗ ಪದಾರ್ಥಗಳೂ ತಾತ್ಕಾಲಿಕ ಸುಖಕಾರಣವಾಗುವುದರಿಂದ ಈ ಸಾಮ್ಯದ ದೃಷ್ಟಿಯಿಂದ ವಿಷಯಪದಾರ್ಥಗಳು ಜಗದ್‌ವೃಕ್ಷದ ಶಾಖೆಗಳಿಗೆ ಚಿಗುರೆಲೆಗಳಂತಿವೆ. 'ಮೂಲಾನಿ' ಊರ್ಧ್ವಶಬ್ದದಿಂದ ಹಿಂದೆ ಉಕ್ತವಾಗಿರುವ ವಿಷ್ಣುವಿನ ರೂಪಗಳು, ಚೇತನಾಚೇತನ ಪ್ರಕೃತಿಗಳು ಮತ್ತು ಸತ್ವರಜಸ್ ತಮಸ್ಸುಗಳು 'ಅಧಃ' ಜಗದ್‌ವೃಕ್ಷದ ಕೆಳಭಾಗದಲ್ಲಿ ಅಂದರೆ ಶಾಖೆಗಳಲ್ಲಿಯೂ 'ಅನು-ಸಂತತಾನಿ' ವ್ಯಾಪಿಸಿವೆ. 'ಮೂಲ'ಗಳು ಎಂಥವುಗಳೆಂದರೆ, ಹೇಳುತ್ತಾರೆ – 'ಕರ್ಮಾನು-ಬಂಧೀನಿ' ಎಂದು. ಮನುಷ್ಯಲೋಕದಲ್ಲಿ ಕರ್ಮಾನುಸಾರ ಫಲ ನೀಡುವುದರಿಂದ ಕರ್ಮಾನುಬಂಧಿಗಳೆನಿಸಿವೆ.

**ತಥಾ ಚೋಕ್ತಮ್ । ಬ್ರಹ್ಮ ವಾ ಅಸ್ಯ ಪೃಥಜ್‌ಮೂಲಂ, ಪ್ರಕೃತಿಃ ಸಮೂಲಮ್, ಸತ್ತ್ವಾದಯೋಽರ್ವಾಚೀನಮೂಲಮ್, ಭೂತಾನಿ ಶಾಖಾಃ, ಛಂದಾಂಸಿ ಪರ್ಣಾನಿ, ದೇವಾಃ ನೃತಿರ್ಯಂಚಶ್ಚ ಶಾಖಾಃ, ಪತ್ರೇಭ್ಯೋ ಹಿ ಫಲಂ ಜಾಯತೇ । ಮಾತ್ರಾಃ ಶಿಫಾಃ । ಮುಕ್ತಿಃ ಫಲಮಮುಕ್ತಿಃ ಫಲಮ್ । ಮೋಕ್ಷೋ ರಸೋಽಮೋಕ್ಷೋ ರಸ (ಭಾಲ್ಲವೇಯ ಶಾಖಾಯಾಂ) ಇತ್ಯಾದಿ ಶ್ರುತೇಃ ।**

**॥ 2 ॥**

**ಅನುವಾದ–** ಗೀತೆಯಲ್ಲಿ ಹೇಳಿದ ಈ ಜಗದ್‌ವೃಕ್ಷವು ಭಾಲ್ಲವೇಯ ಶಾಖೆಯ ಶ್ರುತಿಯಲ್ಲಿ ಹೀಗೆ ಉಕ್ತವಾಗಿದೆ–

'ಜಗದ್ವೃಕ್ಷಕ್ಕೆ ಪರಮಾತ್ಮ ಮಣ್ಣಿನಂತೆ ಆಧಾರವಾದ ಮೂಲ. ಪ್ರಕೃತಿ ಬೇರು. ಸತ್ತ್ವಾದಿಗುಣಗಳು ಹೊಸಬೇರು. ಪಂಚಭೂತಗಳು ಶಾಖೆಗಳು. ವೇದಗಳು ಎಲೆಗಳು. ದೇವ, ಮಾನವ, ಪ್ರಾಣಿಶರೀರಗಳು ಉಪಶಾಖೆಗಳು. ಎಲೆಗಳಿಂದ ಫಲ ಉಂಟಾಗುತ್ತದೆ. ಭೂತ-ಸೂಕ್ಷ್ಮಗಳು ಬೀಳಲುಗಳು ವಿಷಯ ಪದಾರ್ಥಗಳು ಚಿಗುರೆಲೆಗಳು. ಜ್ಞಾನವೂ ಫಲ. ಕರ್ಮವೂ ಫಲ. ಮೋಕ್ಷಸುಖವೂ ರಸ. ಕಾಮಸುಖವೂ ರಸ.' II 2 II

## ವಿರಕ್ತಿಸಹಿತವಾದ ಜ್ಞಾನವೆಂಬ ಕತ್ತಿಯಿಂದ ವೃಕ್ಷವನ್ನು ಕಡಿದು ಮೂಲಾಧಾರನಾದ ಹರಿಯನ್ನು ಅರಿಯಬೇಕು

**ನ ರೂಪಮಸ್ಯೇಹ ತಥೋಪಲಭ್ಯತೇ**
**ನಾಂತೋ ನ ಚಾದಿರ್ನ ಚ ಸಂಪ್ರವಿಷ್ಟಃ ।**
**ಅಶ್ವತ್ಥಮೇನಂ ಸುವಿರೂಢಮೂಲಮ್**
**ಅಸಂಗಶಸ್ತ್ರೇಣ ದೃಢೇನ ಛಿತ್ವಾ II 3 II**

**ತತಃ ಪರಂ ತತ್ಪರಿಮಾರ್ಗಿತವ್ಯಂ**
**ಯಸ್ಮಿನ್ ಗತಾ ನ ನಿವರ್ತಂತಿ ಭೂಯಃ ।**
**ತಮೇವ ಚಾದ್ಯಂ ಪುರುಷಂ ಪ್ರಪದ್ಯೇ**
**ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ II 4 II**

**ಅರ್ಥ–** ವ್ಯತ್ಯಾಸ ಹೊಂದುತ್ತಲೇ ಇರುವುದರಿಂದ ಇದರ ನಿಜರೂಪ ಕಾಣಲು ಸಿಗುವುದಿಲ್ಲ. ಇದರೊಳಗೆ ಇರುವ ಸೃಷ್ಟಿ, ಲಯಕರ್ತನೂ ಕಾಣಲು ಸಿಗುವುದಿಲ್ಲ. ಪ್ರಬಲ ಮೂಲಾಧಾರ ಮತ್ತು ಬೇರುಗಳುಳ್ಳ ಈ ಜಗದ್ವೃಕ್ಷವನ್ನು ವೈರಾಗ್ಯಸಹಿತವಾದ ಜ್ಞಾನವೆಂಬ ಕತ್ತಿಯಿಂದ ಕಡಿದು ಅಂದರೆ, ಮೂಲಾಧಾರವಾದ ಪರಮಾತ್ಮನನ್ನೂ , ಜಗತ್ತನ್ನೂ ಬೇರೆ ಬೇರೆಯಾಗಿ ವಿವೇಚಿಸಿ ತಿಳಿದು ಬಳಿಕ ಆ ಪರಮಾತ್ಮನನ್ನು ಶಾಸ್ತ್ರ- ಶ್ರವಣಾದಿಗಳಿಂದ ಅನ್ವೇಷಣ ಮಾಡಬೇಕು ಅವನನ್ನು ಹೊಂದಿದವರು ತಿರುಗಿ ಸಂಸಾರಕ್ಕೆ ಬರಲಾರರು. ಈ ಅನಾದಿ ಸಂಸಾರಕ್ಕೆ ಮೂಲ ಪ್ರವರ್ತಕನಾದ ಆ ಆದಿಪುರುಷನನ್ನೆ ಶರಣು ಹೊಂದಬೇಕು.

**ಅಸ್ಯ ಜಗದ್ವೃಕ್ಷಸ್ಯ ರೂಪಂ ಯಥಾ ಸ್ಥಿತಂ ತಥೇಹ ಲೋಕೇ ನೋಪಲಭ್ಯತೇ ವಿಕಾರಿತ್ವಾದಿತಿ ಭಾವಃ । ಜಗತೋ ಜನ್ಮಸಂಹಾರಕರ್ತೃತ್ವಹೇತುನಾಽಽ-ದ್ಯಂತಪದೋಕ್ತೋ ವಿಷ್ಣುಃ ಸಂಪ್ರವಿಷ್ಟಶ್ಚ ಜಗದ್ವೃಕ್ಷಮನುಪ್ರವಿಷ್ಟೋಽಪಿ**

**ನೋಪಲಭ್ಯತೇ । 'ನಾಂತೋ ನ ಚಾದಿಃ ನ ಚ ಸಂಪ್ರವಿಷ್ಟ ಉಪಲಭ್ಯತೇ' ಇತಿ ವಾಕ್ಯತ್ರಯೇಣಾನುಪಲಂಭೋಕ್ತಿರಾದರಾರ್ಥಾ ।**

**ಅನುವಾದ–** ಈ ಜಗದ್ ವೃಕ್ಷದ ಸ್ವರೂಪ ಅದು ಹೇಗಿದೆಯೋ ಹಾಗೆ ಲೋಕದಲ್ಲಿ ಗೋಚರವಾಗುವುದಿಲ್ಲ, ಪರಿಣಾಮ ಹೊಂದುತ್ತಲೇ ಇರುವುದರಿಂದ, ಎಂದು ಅಭಿಪ್ರಾಯ. 'ಅಂತಃ ಆದಿಃ' ಜಗತ್ತಿನ ಉತ್ಪತ್ತಿಲಯಗಳಿಗೆ ಕಾರಣನಾದ್ದರಿಂದ ಆದಿ ಎಂದೂ ಅಂತ ಎಂದೂ ಕರೆಸಿಕೊಳ್ಳುವ ವಿಷ್ಣು 'ಸಂಪ್ರವಿಷ್ಟಶ್ಚ' ಜಗದ್‌ವೃಕ್ಷದಲ್ಲಿ ಒಳಗೆ ವ್ಯಾಪಿಸಿದ್ದರೂ ಗೋಚರ ನಾಗುವುದಿಲ್ಲ. 'ಆದಿಯೂ ಅಂತ್ಯನೂ ಒಳಗೆ ವ್ಯಾಪಿಸಿದವನೂ ಆದ ವಿಷ್ಣು ಗೋಚರ ನಾಗುವುದಿಲ್ಲ ಎಂದು ಒಂದು ವಾಕ್ಯದಲ್ಲಿ ಹೇಳಬೇಕಾಗಿದ್ದನ್ನು 'ಆದಿಯೂ ಗೋಚರ ನಾಗುವುದಿಲ್ಲ, ಅಂತ್ಯನೂ ಗೋಚರನಾಗುವುದಿಲ್ಲ ಒಳಗೆ ಪ್ರವೇಶಿಸಿರುವವನೂ ಗೋಚರ ನಾಗುವುದಿಲ್ಲ' ಎಂದು ಮೂರು ವಾಕ್ಯಗಳಲ್ಲಿ ಹೇಳಿದ್ದು ಈ ವಿಷಯದಲ್ಲಿ ತನಗೆ (ಗೀತಾಚಾರ್ಯನಿಗೆ) ಆದರವಿದೆ ಎಂದು ತಿಳಿಸುವುದಕ್ಕಾಗಿ.

**ಅಸ್ತ್ವೇವಂ ಜಗದ್‌ವೃಕ್ಷಸ್ವರೂಪಂ ತತಃ ಕಿಮಿತ್ಯತ ಆಹ- ಅಶ್ವತ್ಥಮಿತಿ ॥ ಸುವಿರೂಢಮೂಲಂ ಪ್ರಬಲವಿಷ್ಣ್ವಾದಿಬಹುಮೂಲಕಂ ಏನಂ ಪ್ರಾಗುಕ್ತಂ ಅಶ್ವತ್ಥ-ನಾಮಕಂ ಜಗದ್‌ವೃಕ್ಷಮಸಂಗಶಸ್ತ್ರೇಣ ಸಂಗರಾಹಿತ್ಯಸಹಿತೇನ ಜ್ಞಾನಾಸಿನಾ ಛಿತ್ವಾ ಮೂಲಭೂತೋ ವಿಷ್ಣುಃ ಪ್ರಕೃತ್ಯಾದಿಜಗತೋ ವಿಲಕ್ಷಣಃ ಜಗಚ್ಚಾವಾಂತರ-ಭೇದಯುಕ್ತಂ ಪರತಂತ್ರಂ ಪ್ರವಾಹತೋಽವ್ಯಯಮಿತ್ಯಾದಿ ರೂಪೇಣ ವಿವಿಚ್ಯ ಜ್ಞಾತ್ವೇತ್ಯರ್ಥಃ । ಉಕ್ತಜ್ಞಾನರೂಪಚ್ಛೇದನಂ ತಸ್ಯ ಕಾರ್ಯಮಿತಿ ಭಾವಃ ॥ 3 ॥**

**ಅನುವಾದ–** ಜಗದ್‌ವೃಕ್ಷದ ಸ್ವರೂಪ ಹೀಗೆ ಇದೆ, ಸರಿ, ಮುಂದೇನು ? ಎಂದರೆ, '**ಅಶ್ವತ್ಥಮೇನಂ**' ಎಂದು ಹೇಳುತ್ತಾನೆ ಕೃಷ್ಣ. ಈ ಜಗದ್ ವೃಕ್ಷ 'ಸುವಿರೂಢ ಮೂಲ'ವಾಗಿದೆ. ಬಹಳ ಗಟ್ಟಿಯಾದ ವಿಷ್ಣು ಮುಂತಾದ ಅನೇಕ ಮೂಲಗಳಿಂದ ಕೂಡಿದೆ. ಅಶ್ವತ್ಥನಾಮಕವಾದ ಈ ಜಗದ್ ವೃಕ್ಷವನ್ನು ಅಸಂಗಶಸ್ತ್ರದಿಂದ, ಅಂದರೆ ವೈರಾಗ್ಯ ಸಹಿತವಾದ ಜ್ಞಾನವೆಂಬ ಕತ್ತಿಯಿಂದ ಛೇದಿಸಬೇಕು. ಅಂದರೆ, ಪ್ರಕೃತಿ ಮುಂತಾದ ಜಗತ್ತಿಗಿಂತ ವಿಷ್ಣು ವಿಲಕ್ಷಣನಾಗಿದ್ದಾನೆ. ಜಗತ್ತು ಮತ್ತು ಜಗತ್ತಿನಲ್ಲಿ ಸೇರಿರುವ ಅನೇಕ ಪದಾರ್ಥಗಳು ಪರಾಧೀನವಾಗಿವೆ, ಪ್ರವಾಹರೂಪದಿಂದ ಸದಾ ಇದ್ದು ನಾಶರಹಿತವಾಗಿವೆ ಎಂದು ಮುಂತಾಗಿ ವಿವೇಚಿಸಿ ಸರಿಯಾಗಿ ತಿಳಿಯಬೇಕು. ಇಂಥ ಜ್ಞಾನರೂಪವಾದ ಛೇದನವನ್ನು ಮಾಡಬೇಕೆಂದು ಅಭಿಪ್ರಾಯ. ॥ 3 ॥

**ತತಃ ಪರಂ ಪರಾಪರತತ್ತ್ವವಿಷಯವಿಮರ್ಶಾದನಂತರಂ ತತ್ ಊರ್ಧ್ವಾದಿ-ಪದೇನ ಪ್ರಕೃತಂ ಬ್ರಹ್ಮ ಪರಿಮಾರ್ಗಿತವ್ಯಮನ್ವೇಷಣೀಯಂ ಶ್ರವಣಾದಿನಾ**

**ವಿಷಯೀಕರ್ತವ್ಯಮ್ । ಜಗದ್ವೈಲಕ್ಷಣ್ಯಜ್ಞಾನೇ ಸತ್ಯೇವ ತತ್ಸ್ವರೂಪಮನ್ವೇಷ್ಟುಂ ಶಕ್ಯತ ಇತಿ ಭಾವಃ । ಯಸ್ಮಿನ್ ಗತಾಃ ಭೂಯಃ ಪುನರ್ನ ನಿವರ್ತಂತೇ ನ ಗರ್ಭಯಾತನಾಂ ಪ್ರಾಪ್ನುವಂತಿ । ತದಿತಿ ಪೂರ್ವೇಣಾನ್ವಯಃ । ಜಗದ್ವೃಕ್ಷ-ಚ್ಛೇದನೋಪಾಯಮಾಹ- ತಮೇವ ಚೇತಿ ॥ ಯೇಯಂ ಪುರಾಣೀ ಚಿರಂತನೀ ಸಂಸಾರಪ್ರವೃತ್ತಿಃ ಯತಃ ಪ್ರಸೃತಾ ವಿಸ್ಸೃತಾ ತಮೇವ ಚಾದ್ಯಂ ಪ್ರಾಥಮಿಕಂ ಪುರುಷಂ ವಿಷ್ಣುಂ ಪ್ರಪದ್ಯೇ ಪ್ರಪದ್ಯೇತ ವ್ಯತ್ಯಯಾತ್ । 'ತಮೇವಾದ್ಯಂ ಪ್ರಪದ್ಯೇತ ಯದಂಶಾಭಾಸಕೋ ಹ್ಯಯಮ್ । ಜೀವರಾಶಿರಿತಿ' (ನಾರಾಯಣಶ್ರುತಿಃ) ವಚನಾತ್ । ಜಗದ್ವೃಕ್ಷಚ್ಛೇದನಾರ್ಥಮಿತಿ ಯೋಜ್ಯಮ್ ॥ 4 ॥**

**ಅನುವಾದ–** **'ತತಃ ಪರಂ'** ಪರತತ್ವ ,ಅಪರತತ್ವಗಳ ವಿಷಯದಲ್ಲಿ ಹೀಗೆ ವಿಮರ್ಶೆ ಮಾಡಿದ ಬಳಿಕ, **'ತತ್'** ಊರ್ಧ್ವ ಮುಂತಾದ ಶಬ್ದಗಳಿಂದ ವರ್ಣಿತನಾದ ಆ ಪರಬ್ರಹ್ಮತತ್ವ **'ಪರಿಮಾರ್ಗಿತವ್ಯಂ'** ಅನ್ವೇಷಿಸಲ್ಪಡಬೇಕು, ಶ್ರವಣಾದಿಗಳಿಂದ ಅವನನ್ನು ತಿಳಿಯಬೇಕು. ಪರಮಾತ್ಮ ಜಗತ್ತಿಗಿಂತ ವಿಲಕ್ಷಣನೆಂದು ತಿಳಿದಾಗಲೇ ಅವನ ಸ್ವರೂಪವನ್ನು ಶ್ರವಣಾದಿಗಳಿಂದ ಅರಿಯುವುದು ಶಕ್ಯವಾಗುತ್ತದೆ ಎಂದು ಭಾವ. **'ಯಸ್ಮಿನ್ ಗತಾಃ'** ಅವನನ್ನು ಮೋಕ್ಷದಲ್ಲಿ ಹೊಂದಿದ ಜೀವರು **'ಭೂಯಃ ನ ನಿವರ್ತಂತಿ'** ತಿರುಗಿ ತಾಯಿಯ ಗರ್ಭದಲ್ಲಿ ಯಾತನೆಯನ್ನು ಹೊಂದುವುದಿಲ್ಲ. ಅಂಥ ಪರಮಾತ್ಮನನ್ನು ಶ್ರವಣಾದಿಗಳಿಂದ ಅರಿತುಕೊಳ್ಳಬೇಕೆಂದು ಹಿಂದಿನ ವಾಕ್ಯದೊಂದಿಗೆ ಅನ್ವಯಿಸಬೇಕು. ಜಗದ್ವೃಕ್ಷ ಛೇದನ ಮಾಡಲು ಉಪಾಯವನ್ನು ಹೇಳುತ್ತಾನೆ **'ತಮೇವಚಾದ್ಯಂ'** ಎಂದು **'ಪುರಾಣೀ'** ಸದಾಕಾಲವಿರುವ ಈ **'ಪ್ರವೃತ್ತಿಃ'** ಸಂಸಾರ ಪ್ರವೃತ್ತಿಯು **'ಯತಃ ಪ್ರಸೃತಾ'** ಯಾರಿಂದ ಮುಂದುವರಿಯುತ್ತದೆಯೋ **'ತಮೇವ ಚ ಆದ್ಯಂ ಪುರುಷಂ** ಆ ಪುರುಷೋತ್ತಮನಾದ ವಿಷ್ಣುವನ್ನೇ **'ಪ್ರಪದ್ಯೇ'** ಶರಣು ಹೊಂದಬೇಕು. **'ಪ್ರಪದ್ಯೇತ '** ಎಂದು ಪ್ರಥಮಪುರುಷದಲ್ಲಿ ಹೇಳಬೇಕಾಗಿದ್ದ ಕ್ರಿಯಾ ಪದವನ್ನು ವ್ಯತ್ಯಾಸಮಾಡಿ **'ಪ್ರಪದ್ಯೇ'** ಎಂದು ಉತ್ತಮಪುರುಷದಲ್ಲಿ ಹೇಳಿದ್ದು ಆರ್ಷಪ್ರಯೋಗ. ಪ್ರಥಮ-ಪುರುಷದ ಅರ್ಥವೇ ವಿವಕ್ಷಿ ವೆನ್ನಲು ನಾರಾಯಣ ಶ್ರುತಿ ಆಧಾರವಾಗಿದೆ– 'ಈ ಜೀವಸಮೂಹ ಯಾರ ಅಂಶದ ಸ್ವ ಸಾದೃಶ್ಯವನ್ನು ಹೊಂದಿರುವುದೋ ಆ ಪುರುಷೋತ್ತಮನನ್ನೇ ಶರಣು ಹೊಂದಬೇಕು' ಎಂದು ಶರಣು ಹೊಂದಬೇಕು, ಏಕೆ ಎಂದರೆ ಜಗದ್ವೃಕ್ಷದ ಛೇದನಕ್ಕಾಗಿ ಎಂದು ಸೇರಿಸಿಕೊಳ್ಳಬೇಕು ॥ 4 ॥

**ನಿರ್ಮಾನಮೋಹಾ ಜಿತಸಂಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**

**ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ-**
**ರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥ 5 ॥**

**ಅರ್ಥ–** ಅಹಂಕಾರ, ಮಿಥ್ಯಾಜ್ಞಾನರಹಿತರೂ, ವಿಷಯಾಸಕ್ತಿ ಎಂಬ ದೋಷವನ್ನು ಗೆದ್ದವರೂ ಪರಮಾತ್ಮ ತತ್ವಜ್ಞಾನಸಂಪಾದನೆಯಲ್ಲಿ ನಿರತರೂ, ವಿಷಯಾಭಿಲಾಷೆಯನ್ನು ವಿಶೇಷವಾಗಿ ತೊರೆದವರೂ ಸುಖದುಃಖಗಳೆಂಬ ದ್ವಂದ್ವಗಳಿಂದ ಮುಕ್ತರಾದವರೂ, ರಜಸ್ತಮೋಗುಣ ಸ್ವಭಾವರಹಿತರೂ ಆದ ಮುಮುಕ್ಷುಗಳು ನಾಶರಹಿತವಾದ ಆ ಪರಮಾತ್ಮನ ಸ್ವರೂಪವನ್ನು ಹೋಗಿ ಸೇರುವರು.

**ಭಗವತ್ಪ್ರತಿಪತ್ತೌ ಸಾಧನಾಂತರಾಣ್ಯಾಹ- ನಿರ್ಮಾನೇತಿ ॥ ಮಾನ-ಮೋಹಾಭ್ಯಾಂ ಅಹಂಕಾರಮಿಥ್ಯಾಜ್ಞಾನಾಭ್ಯಾಂ ನಿರ್ಗತಾಸ್ತಾಭ್ಯಾಂ ಹೀನಾ ಇತಿ ಯಾವತ್ । ಜಿತವಿಷಯಸಂಗದೋಷಾಃ । ಅಧ್ಯಾತ್ಮನಿತ್ಯಾಃ ಅಧ್ಯಾತ್ಮಜ್ಞಾನೇ ಭಗವಚ್ಛ್ರವಣಾದೌ ನಿರತಾಃ, ವಿಶೇಷತೋ ನಿವೃತ್ತವಿಷಯತೃಷ್ಣಾಃ ಸುಖದುಃಖ-ಸಂಜ್ಞೈಃ ದ್ವಂದ್ವೈರ್ಲಾಭಾಲಾಭಜಯಾಜಯಾದಿರೂಪೈರ್ವಿಮುಕ್ತಾಃ, ಅಮೂಢಾ ರಜಸ್ತಮಸ್ಸ್ವಭಾವಶೂನ್ಯಾಃ ಅವ್ಯಯಂ ತತ್ಪದಂ ಭಗವತ್ಸ್ವರೂಪಂ ಗಚ್ಛಂತಿ ॥ 5 ॥**

**ಅನುವಾದ–** ಭಗವಂತನನ್ನು ಅರಿತುಕೊಳ್ಳಲು ಬೇರೆ ಸಾಧನಗಳನ್ನೂ ಹೇಳುತ್ತಾನೆ **'ನಿರ್ಮಾನಮೋಹಾಃ'** ಎಂದು . **'ನಿರ್ಮಾನಮೋಹ'**ರೆಂದರೆ ಅಹಂಕಾರ ಮಿಥ್ಯಾಜ್ಞಾನ-ರಹಿತರೆಂದರ್ಥ. **'ಜಿತಸಂಗದೋಷಾಃ'** ವಿಷಯಾಸಕ್ತಿ ಎಂಬ ದೋಷವನ್ನು ನೀಗಿಸಿಕೊಂಡವರು. **'ಅಧ್ಯಾತ್ಮನಿತ್ಯಾಃ'** ಅಧ್ಯಾತ್ಮಜ್ಞಾನದಲ್ಲಿ, ಭಗವನ್ಮಹಿಮೆಗಳ ಶ್ರವಣಾದಿಗಳಲ್ಲಿ ನಿರತರಾದವರು. **'ವಿನಿವೃತ್ತಕಾಮಾಃ'** ವಿಷಯ ಲಾಲಸೆಯನ್ನು ವಿಶೇಷವಾಗಿ ತೊರೆದವರು. **'ಸುಖದುಃಖಸಂಜ್ಞೈಃ ದ್ವಂದ್ವೈಃ ವಿಮುಕ್ತಾಃ'** ಲಾಭ-ಅಲಾಭ, ಜಯ-ಅಪಜಯ ಮುಂತಾದ ರೂಪದ ದ್ವಂದ್ವಗಳಿಂದ ರಹಿತರಾದವರು. **'ಅಮೂಢಾಃ'** ರಜೋಗುಣ ತಮೋಗುಣಗಳ ಸ್ವಭಾವ ರಹಿತರು. **'ಅವ್ಯಯಂ ತತ್ ಪದಂ ಗಚ್ಛಂತಿ'** ನಾಶರಹಿತವಾದ ಆ ಭಗವತ್ಸ್ವರೂಪವನ್ನು ಅರಿತುಕೊಳ್ಳುತ್ತಾರೆ. ॥ 5 ॥

### ಶ್ರೀಹರಿಯ ಹಿರಿಮೆ-ಗರಿಮೆಗಳು

**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ 6 ॥**

**ಅರ್ಥ–** ಆ ಪರಮಾತ್ಮಸ್ವರೂಪವನ್ನು ಸೂರ್ಯನು ತೋರಿಸಲಾರ, ಚಂದ್ರನು ತೋರಿಸಲಾರ, ಅಗ್ನಿಯೂ ತೋರಿಸಲಾರ, ಅದನ್ನು ಹೊಂದಿದವರು ತಿರುಗಿ ಸಂಸ್ಕಾರಕ್ಕೆ ಬರುವುದಿಲ್ಲ, ಆ ಉತ್ತಮ ಸ್ವರೂಪ ನನ್ನದು.

**ಕೀದೃಶಂ ತತ್ಪದಂ ಯತ್ಪ್ರಾಪ್ತಿಃ ಪುರುಷಾರ್ಥ ಇತ್ಯತ ಆಹ– ನ ತದಿತಿ ॥ ತತ್ಪದಂ ಸೂರ್ಯಾದಿರ್ನ ಪ್ರಕಾಶಯತಿ । ಯದ್ಗತ್ವಾ ಯತ್ಸ್ವರೂಪಂ ಪ್ರಾಪ್ಯ ನ ನಿವರ್ತಂತೇ ಸಂಸಾರಂ ನ ಯಾಂತಿ ಪರಮಂ ತನ್ಮಮ ಧಾಮ ರೂಪಮಿತ್ಯರ್ಥಃ ॥ 6 ॥**

**ಅನುವಾದ–** ಯಾವ ಭಗವಂತನ ಸ್ವರೂಪವನ್ನು ಹೊಂದುವುದು ಪುರುಷಾರ್ಥ–ವೆನಿಸುವುದೋ ಆ ಭಗವತ್ಸ್ವರೂಪ ಎಂಥದ್ದೆಂದರೆ ಹೇಳುತ್ತಾನೆ – **'ನ ತದ್ ಭಾಸಯತೇ'** ಆ ಭಗವಂತನ ಸ್ವರೂಪವನ್ನು ಸೂರ್ಯಾದಿಗಳು ಬೆಳಗಿಸಲಾರರು. ಅದನ್ನು ಹೊಂದಿದ ಬಳಿಕ ಜೀವರು ತಿರುಗಿ ಸಂಸಾರವನ್ನು ಹೊಂದುವುದಿಲ್ಲ. **'ಪರಮಂ ತತ್ ಮಮ ಧಾಮ'** ಸರ್ವೋತ್ತಮವಾದ ಆ ಸ್ವರೂಪ ನನ್ನದು ಎಂದರ್ಥ. ॥ 6 ॥

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ 7 ॥**

**ಅರ್ಥ–** ಬ್ರಹ್ಮರುದ್ರಾದಿ ಜೀವಶರೀರದಲ್ಲಿ ಅನಾದಿನಿತ್ಯ ಜೀವಸ್ವರೂಪದಿಂದಿರುವ ಬ್ರಹ್ಮರುದ್ರಾದಿಗಳು ನನ್ನ ಅಂಶಮಾತ್ರರು, ಸೂರ್ಯನ ಮುಂದೆ ಮಿಣುಕುಹುಳಗಳಂತೆ. ಆದ್ದರಿಂದ ಅವರನ್ನಾಶ್ರಯಿಸದೆ ನನ್ನನ್ನೇ ಆಶ್ರಯಿಸಿ ಜಗದ್ವೃಕ್ಷವನ್ನು ಛೇದಿಸಬೇಕು. ಎಲ್ಲ ಜೀವರು ನನ್ನ ಅಂಶಮಾತ್ರರೇ ಆದರೂ ಪರಮಾತ್ಮನು ಯಾವಾಗ ಜೀವರ ಶರೀರದಲ್ಲಿರುವನೋ ಆಗ ಮಾತ್ರ ಅವನ ಪ್ರೇರಣೆಯಿಂದ ಪ್ರಾಕೃತ ಶರೀರದಲ್ಲಿರುವ ಮನಸ್ಸು ಮತ್ತು ಪಂಚೇಂದ್ರಿಯಗಳನ್ನು ಅವರು ಜನನ ಕಾಲದಲ್ಲಿ ಮೂಲಕಾರಣದಿಂದ ಈಚೆಗೆ ತರುತ್ತಾರೆ. ಸ್ಥಿತಿಕಾಲದಲ್ಲಿ ವಿಷಯ ಪದಾರ್ಥಗಳ ಕಡೆಗೆ ಸೆಳೆಯುತ್ತಾರೆ. ಮರಣಕಾಲದಲ್ಲಿ ಶರೀರದಿಂದ ಹೊರಗೆ ತರುತ್ತಾರೆ.

**ಜಗದ್ವೃಕ್ಷಚ್ಛೇದಾರ್ಥಂ ಬ್ರಹ್ಮಾದಿಪ್ರತಿಪತ್ತ್ಯೈವಾಲಂ ಕಿಂ ಭಗವತ್ ಪ್ರತಿ–ಪತ್ತ್ಯೇತ್ಯತ ಆಹ– ಮಮೈವೇತಿ ॥ ಜೀವಲೋಕೇ ಬ್ರಹ್ಮಾದಿಜೀವಶರೀರೇ ಸನಾತನೋऽನಾದಿನಿತ್ಯಃ ಜೀವಭೂತಃ ಜೀವರೂಪೋ ಮಮೈವ ಭಿನ್ನಾಂಶಃ । ನತು ಮತ್ಸ್ಯಾದಿವತ್ಸ್ವರೂಪಾಂಶಃ । ಭಿನ್ನೋऽಪಿ ಸೂರ್ಯಸ್ಯ ಖದ್ಯೋತ ಇವ ಕಿಂಚಿತ್ಸಾದೃಶ್ಯಮಾತ್ರೇಣಾಂಶ ಇತ್ಯುಚ್ಯತೇ । ಅತೋ ಬ್ರಹ್ಮಾದೀನಾಂ ಮದಂಶಾ–ಭಾಸತ್ವೇನ ತೇಷಾಂ ಬ್ರಹ್ಮಾದೀನಾಮ್ ಅಶಕ್ತತ್ವಾತ್ತೇಷಾಂ ಪ್ರತಿಪತ್ತಿಂ ವಿನಾ**

**ಭಗವತ್ಪ್ರತಿಪತ್ತಿರೇವ ಕಾರ್ಯೇತಿ ಭಾವಃ । ಜೀವಾನಾಮಂಶಾಭಾಸತ್ವೇ ಕ್ವಚಿದಪಿ ಕಾರ್ಯೇ ಶಕ್ತಿರ್ನ ಸ್ಯಾದಿತ್ಯತೋऽಸ್ತೀತ್ಯಾಹ- ಮನ ಇತಿ ॥ ಪ್ರಕೃತಿಸ್ಥಾನಿ ಪ್ರಕೃತಿಕಾರ್ಯಶರೀರಸ್ಥಾನಿ ಮನಷ್ಷಷ್ಠಾನಿ ಶ್ರೋತ್ರಾದಿಪಂಚೇಂದ್ರಿಯಾಣಿ ಮಮಾಂಶೋ ಜೀವಭೂತಃ ವಿಷಯಾನ್ಪ್ರತಿ ಕರ್ಷತಿ ಪ್ರವರ್ತಯತಿ ಸ್ಥಿತಿದಶಾಯಾಮ್ । ದೇಹಾವಾಪ್ತಿವೇಲಾಯಾಂ ತು ಮೂಲಕಾರಣಾತ್ । ಉತ್ಕ್ರಾಂತೌ ತು ಶರೀರಾತ್ ಕರ್ಷತಿ ॥ 7 ॥**

**ಅನುವಾದ–** 'ಜಗದ್ವೃಕ್ಷಭೇದನಕ್ಕೆ ಬ್ರಹ್ಮಾದಿ ಜೀವರನ್ನು ತಿಳಿದುಕೊಂಡರೆ ಸಾಕು. ಭಗವಂತನನ್ನೇಕೆ ತಿಳಿಯಬೇಕು' ಎಂದರೆ ಹೇಳುತ್ತಾನೆ– **'ಮಮೈವಾಂಶಃ'** ಎಂದು **'ಜೀವಲೋಕೇ'** ಬ್ರಹ್ಮಾದಿ ಜೀವ ಶರೀರದಲ್ಲಿ ಅನಾದಿನಿತ್ಯ ಜೀವಸ್ವರೂಪದಿಂದಿರುವ ಜೀವನು **'ಮಮೈವ ಅಂಶಃ'** ನನ್ನ ಭಿನ್ನಾಂಶನೇ ಹೊರತು ಮತ್ಸ್ಯಕೂರ್ಮಾದಿಗಳಂತೆ ಸ್ವರೂಪಾಂಶನಲ್ಲ. ಮಿಣುಕು ಹುಳು ಸೂರ್ಯನಿಗಿಂತ ಬೇರೆಯಾದರೂ ಅಲ್ಪಸಾದೃಶ್ಯದಿಂದ ಸೂರ್ಯನ ಒಂದು ಅಂಶವೆನಿಸುವಂತೆ, ಜೀವನೂ ನನ್ನ ಅಂಶವೆನಿಸುತ್ತಾನೆ. ಹೀಗಾಗಿ ಬ್ರಹ್ಮಾದಿಗಳು ನನ್ನ ಅಂಶಗಳಂತಿರುವುದರಿಂದ ಅಶಕ್ತರು. ಅವರನ್ನು ತಿಳಿಯಲು ಯತ್ನಿಸದೆ, ನನ್ನನ್ನು ತಿಳಿಯುವುದಕ್ಕೇ ಯತ್ನಿಸಬೇಕೆಂದು ಅಭಿಪ್ರಾಯ. 'ಜೀವರು ನಿನ್ನ ಅಂಶರಲ್ಲ, ಅಂಶದಂತೆ, ಎನ್ನುವುದಾದರೆ ಅವರಿಗೆ ಯಾವ ಕಾರ್ಯದಲ್ಲಿಯೂ ಶಕ್ತಿ ಇಲ್ಲ ಎಂದಾದೀತು,' ಎಂದರೆ, ಶಕ್ತಿ ಇದೆ ಎನ್ನುತ್ತಾನೆ– **'ಮನಃ ಷಷ್ಠಾನಿ ಇಂದ್ರಿಯಾಣಿ'** ಪ್ರಕೃತಿಪರಿಣಾಮವಾದ ಶರೀರದಲ್ಲಿರುವ ಶ್ರೋತ್ರ ಮುಂತಾದ ಪಂಚೇಂದ್ರಿಯಗಳನ್ನು ಆರನೆ ಇಂದ್ರಿಯವಾದ ಮನಸ್ಸನ್ನು ನನ್ನ ಭಿನ್ನ ಅಂಶನಾದ ಜೀವನು ವಿಷಯಪದಾರ್ಥಗಳ ಕಡೆಗೆ **'ಕರ್ಷತಿ'** ಸೆಳೆಯುತ್ತಾನೆ, ಸ್ಥಿತಿಕಾಲದಲ್ಲಿ. ದೇಹ ಪ್ರಾಪ್ತಿಕಾಲದಲ್ಲಿ ಮೂಲಕಾರಣದಿಂದ ಈಚೆಗೆ ಸೆಳೆದುಕೊಳ್ಳುತ್ತಾನೆ. ಮರಣಕಾಲದಲ್ಲಿ ಶರೀರದಿಂದ ಹೊರಗೆ ಸೆಳೆಯುತ್ತಾನೆ ॥ 7 ॥

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥ 8 ॥**

**ಅರ್ಥ–** ಪರಮಾತ್ಮನು ಯಾವಾಗ ಜೀವಶರೀರದಲ್ಲಿರುವನೊ ಆಗ ಮಾತ್ರ ಅವನ ಪ್ರೇರಣೆಯಿಂದ ಜೀವನು ತನ್ನ ಇಂದ್ರಿಯಗಳನ್ನು ವಿಷಯಗಳ ಕಡೆಗೆ ಸೆಳೆಯುತ್ತಾನೆ ಪರಮಾತ್ಮನು ಯಾವಾಗ ಜೀವಶರೀರದಿಂದ ಹೊರಗೆ ಹೋಗುವನೊ ಆಗ ಜೀವನು ಈ ಇಂದ್ರಿಯಗಳ ಒಂದೊಂದು ಅಂಶವನ್ನು ಹಿಡಿದು ಕೊಂಡು, ವಾಯುವು ಹೂವಿನಿಂದ ಪರಿಮಳಯುಕ್ತವಾದ ಅಂಶವನ್ನು ಸೆಳೆದೊಯ್ಯುವಂತೆ ಒಯ್ಯುತ್ತ ಬೇರೆ ಲೋಕಕ್ಕೆ ಹೋಗುತ್ತಾನೆ.

**ಕಿಂ ಸ್ವಸಾಮರ್ಥ್ಯೇನ ನೇತ್ಯಾಹ- ಶರೀರಮಿತಿ ॥ ಈಶ್ವರಃ ಶರೀರಂ ಜೀವ- ಶರೀರಂ ಯದಾಽಽಪ್ನೋತಿ ತದೈವ ಜೀವಸ್ತತ್ಪ್ರೇರಿತಃ ಸನ್ ಕರ್ಷತೀತ್ಯರ್ಥಃ । ಸ್ವಾತಂತ್ರ್ಯೇಣ ತು ಈಶ್ವರ ಏವ ಸರ್ವಾಣೀಂದ್ರಿಯಾಣಿ ವಿಷಯಾನ್‌ಪ್ರತಿ ಪ್ರಯುಂಕ್ತೇ । ತದಾಹ ಸೂತ್ರೇ- 'ಓಂ ಜ್ಯೋತಿರಾದ್ಯಧಿಷ್ಠಾನಂ ತು ತದಾಮನ- ನಾತ್ ಓಂ' ಇತ್ಯಾದಿ (2-4-15) । ತಥಾ ಯಚ್ಚ ಯದಾಽಪ್ಯುತ್ಕ್ರಾಮತೀಶ್ವರಃ ಜೀವಮಾದಾಯೇತಿ ಯೋಜ್ಯಮ್ । ತದೈತಾನಿ ಇಂದ್ರಿಯಾಣಿ ಸೂಕ್ಷ್ಮೇಂದ್ರಿ- ಯಾಂಶಾನ್ ಆಶಯಾತ್ಪುಷ್ಪಾದಿಸ್ಥಾನಾತ್ ಗಂಧಾನಿವ ಗಂಧವತಃ ಪುಷ್ಪಾದ್ಯವ- ಯವಾನಿವ ಭಾಗಶೋ ಗೃಹೀತ್ವಾ ಸಂಯಾತಿ ಲೋಕಾಂತರಮಿತ್ಯರ್ಥಃ । ನಚ 'ಅಗ್ನಿಂ ವಾಗಪ್ಯೇತಿ' (ಬೃ. 5-2-13) ಇತ್ಯಾದಿವಿರೋಧಃ । ತಸ್ಯ ಭಾಗವಿಷಯ- ತ್ವಾತ್ । 'ಓಂ ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ ಓಂ' ಇತಿ (3-1-4) ಸೂತ್ರಾತ್ । ಅತ ಏವ ಗಂಧಾನಿವೇತಿ ದೃಷ್ಟಾಂತೋಕ್ತಿಃ । ಅನ್ಯಥಾ ವಾಯುನಾಽನೇಕೇಷ್ವಾಕೃಷ್ಯಮಾಣೇಷು ಗಂಧಾನ್ ಗಂಧವತಃ ಪುಷ್ಪಾದ್ಯ- ವಯವಾನಿತ್ಯುಕ್ತಿರ್ನ ಸ್ಯಾತ್ । ಸರ್ವೇಂದ್ರಿಯಪ್ರೇರಣಸ್ಯಾಪಿ ಈಶಾಧೀನತ್ವಾನ್ನ ತೇಷಾಂ ಪ್ರತಿಪತ್ತಿರ್ಜಗದ್ ವ್ಯಕ್ಷಚ್ಛೇದನಶಕ್ತೇತಿ ಭಾವಃ ।**

**ಅನುವಾದ–** ಜೀವನು ಸ್ವಸಾಮರ್ಥ್ಯದಿಂದ ಇಂದ್ರಿಯಗಳನ್ನು ಸೆಳೆಯುವನೇ? ಎಂದರೆ 'ಅಲ್ಲ' ಎನ್ನುತ್ತಾನೆ '**ಶರೀರಂ ಯದವಾಪ್ನೋತಿ**' ಎಂದು. '**ಈಶ್ವರಃ ಶರೀರಂ ಯದವಾಪ್ನೋತಿ** ಪರಮಾತ್ಮ ಜೀವಶರೀರವನ್ನು ಪ್ರವೇಶಿಸಿದಾಗಲೇ ಅವನ ಪ್ರೇರಣೆಯಿಂದ ಜೀವನು '**ಕರ್ಷತಿ** ಇಂದ್ರಿಯಗಳನ್ನು ಸೆಳೆಯುತ್ತಾನೆ. ಸ್ವತಂತ್ರವಾಗಿ ಪರಮಾತ್ಮನೇ ಎಲ್ಲ ಇಂದ್ರಿಯಗಳನ್ನೂ ವಿಷಯ ಗಳ ಕಡೆಗೆ ಕಳಿಸುತ್ತಾನೆ. ಇದು '**ಓಂ ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ಓಂ** (ಬ್ರ.ಸೂ. 2.4.15) ಇತ್ಯಾದಿ ಬ್ರಹ್ಮಸೂತ್ರದಲ್ಲಿ ಉಕ್ತವಾಗಿದೆ. '**ಯಚ್ಚಾಪ್ಯುತ್ಕ್ರಾಮತೀಶ್ವರಃ**' ಇ 'ಜೀವಮಾದಾಯ' ಎಂದು ಸೇರಿಸಿಕೊಳ್ಳಬೇಕು. ಪರಮಾತ್ಮನು ಜೀವನನ್ನು ಕರೆದುಕೊಂಡ ಜೀವನ ಶರೀರದಿಂದ ನಿರ್ಗಮಿಸುವಾಗ, '**ಏತಾನಿ**' ಈ ಇಂದ್ರಿಯಗಳನ್ನು, ಅಂದರೆ, ಇಂದ್ರಿಯ ಗಳ ಸೂಕ್ಷ್ಮ ಅಂಶಗಳನ್ನು '**ವಾಯುರ್ಗಂಧಾನಿವಾಶಯಾತ್**' ವಾಯುವು ಪುಷ್ಪಾದಿ ಸ್ಥಾನದಿಂ ಪರಿಮಳವನ್ನು, ಅಂದರೆ ಪರಿಮಳಯುಕ್ತವಾದ ಪುಷ್ಪಾದಿ ಅವಯವಗಳನ್ನು ಹೇಗೋ ಹಾ ಅಂಶದಿಂದ ತೆಗೆದುಕೊಂಡು, ಜೀವನು ಲೋಕಾಂತರಕ್ಕೆ ಹೋಗುತ್ತಾನೆ ಎಂದರ್ಥ. '**ಅಗ್ನಿ ವಾಗಪ್ಯೇತಿ**' (ಬೃ.ಉ. 5.2.13) ಎಂಬ ಶ್ರುತಿಯ ವಿರೋಧ ಬರುತ್ತದೆ ಎನ್ನಬಾರದು. ಏಕೆಂ ಶ್ರುತಿ ಹೇಳುವುದು ಇಂದ್ರಿಯಗಳ ಬೇರೆ ಅಂಶಗಳ ಬಗ್ಗೆ. ಗೀತೆ ಹೇಳುವುದು ಬೇರೆ ಅಂಶ

ಬಗ್ಗೆ. ಇದು '**ಓಂ ಅಗ್ನ್ಯಾದಿ ಗತಿ ಶ್ರುತೇರಿತಿ ಚೇನ್ನ ಭಾಕ್ತತ್ವಾತ್ ಓಂ**' (ಬ್ರ.ಸೂ. 3.1.4) ಎಂಬ ಬ್ರಹ್ಮಸೂತ್ರದಲ್ಲಿ ಸ್ಪಷ್ಟವಿದೆ. ಅದರಿಂದಲೇ 'ಗಂಧಾನಿವ' ಎಂದು ಪರಿಮಳದ ದೃಷ್ಟಾಂತವನ್ನು ನೀಡಲಾಗಿದೆ. ಇಲ್ಲದಿದ್ದರೆ, ವಾಯುವು ಅನೇಕ ಪದಾರ್ಥಗಳನ್ನು ಸೆಳೆಯುವುದು ಕಂಡಿರುವಾಗ, ಕೇವಲ 'ಗಂಧಾನ್' 'ಪರಿಮಳಯುಕ್ತವಾದ ಪುಷ್ಪಾದಿ ಅವಯವಗಳನ್ನು' ಎಂದೇ ದೃಷ್ಟಾಂತ ಕೊಡಬೇಕಾಗಿರಲಿಲ್ಲ. ಬ್ರಹ್ಮಾದಿ ಜೀವರಿಗೆ ಅವರ ಎಲ್ಲ ಇಂದ್ರಿಯಗಳನ್ನು ಪ್ರೇರಿಸುವ ಶಕ್ತಿಯೂ ಕೂಡ ಪರಮಾತ್ಮನ ಅಧೀನವೇ ಆಗಿರುವುದರಿಂದ ಅವರನ್ನು ತಿಳಿಯುವುದು ಜಗದ್-ವೃಕ್ಷಚ್ಛೇದನಕ್ಕೆ ಸಾಧನವಾಗಲಾರದೆಂದು ಅಭಿಪ್ರಾಯ.

**ವಿವರಣೆ–** 'ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್' ಎಂಬ ಬ್ರಹ್ಮಸೂತ್ರದಲ್ಲಿ 'ಇಂದ್ರಿಯಪ್ರೇರಕನು ಪರಮಾತ್ಮನೇ ಹೊರತು ಜೀವನಲ್ಲ, 'ಯಶ್ಚಕ್ಷುಷಿ ತಿಷ್ಠನ್' ಎಂದು ಮುಂತಾಗಿ ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿದೆ' ಎಂದಿದೆ. 'ಅಗ್ನ್ಯಾದಿ ಗತಿ ಶ್ರುತೇರಿತಿ ಚೇನ್ನ ಭಾಕ್ತತ್ವಾತ್' ಎಂಬ ಬ್ರಹ್ಮಸೂತ್ರದಲ್ಲಿ 'ಜೀವ ಮರಣ ಹೊಂದುವಾಗ ಅವನ ವಾಗಾದಿ ಇಂದ್ರಿಯಗಳು ಅಗ್ನ್ಯಾದಿಭೂತಗಳಲ್ಲಿ ಹೋಗಿ ಸೇರುವುವು ಎಂದು ಶ್ರುತಿ ಹೇಳಿದರೂ ಅದು ಕೆಲವು ಭಾಗಗಳ ಬಗ್ಗೆ ಹೇಳಿದ್ದು. ಉಳಿದ ಭಾಗಗಳು ಜೀವನ ಜೊತೆಗೇ ಹೋಗುವುವು' ಎಂದು ಹೇಳಿದೆ.

**ಯದ್ವಾ ಯದ್ಯದಾ ಜೀವಃ ಶರೀರಮಾಪ್ನೋತಿ ತದೇಶ್ವರಃ ಏತಾನಿ ಗೃಹೀತ್ವಾ ಶರೀರಂ ಸಂಯಾತಿ । ಜೀವಃ ಯದೋತ್ಕ್ರಾಮತಿ ಚ ತದೇಶ್ವರಃ ಏತಾನಿ ಗೃಹೀತ್ವಾ ಲೋಕಾಂತರಂ ಸಂಯಾತೀತಿ ಯೋಜನಾ ॥ 8 ॥**

**ಅನುವಾದ–** ಅಥವಾ ಯಾವಾಗ ಜೀವನು ತನ್ನ ಶರೀರವನ್ನು ಹೊಂದುತ್ತಾನೋ ಆಗ ಪರಮಾತ್ಮನೇ ಇಂದ್ರಿಯಗಳನ್ನು ತೆಗೆದು ಕೊಂಡು ಆ ಶರೀರವನ್ನು ಪ್ರವೇಶಿಸುತ್ತಾನೆ. ಯಾವಾಗ ಜೀವನು ಮರಣ ಹೊಂದುತ್ತಾನೋ ಆಗಲೂ ಪರಮಾತ್ಮನೇ ಇಂದ್ರಿಯಗಳನ್ನು ತೆಗೆದುಕೊಂಡು ಲೋಕಾಂತರಕ್ಕೆ ನಡೆಯುತ್ತಾನೆ ಎಂದು ಅನ್ವಯ ಮಾಡಬೇಕು. ॥ 8 ॥

## ಇಂದ್ರಿಯ ಪ್ರೇರಕನಾದ ಶ್ರೀಹರಿ ಸಾರಭೋಕ್ತೃ

**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ 9 ॥**

**ಅರ್ಥ –** ಈ ಪರಮಾತ್ಮನು ಕಿವಿ, ಕಣ್ಣು, ತ್ವಕ್, ನಾಲಿಗೆ, ಘ್ರಾಣ ಮನಸ್ಸುಗಳನ್ನು ತಮ್ಮ ತಮ್ಮ ವಿಷಯಗಳಲ್ಲಿ ಪ್ರವೃತ್ತಿ ಮಾಡುವಂತೆ ಪ್ರೇರಿಸಿ ಶಬ್ದಾದಿವಿಷಯಗಳನ್ನು ಭೋಗಿಸುವನು.

**ಇಂದ್ರಿಯೇಷು ಪ್ರವರ್ತಕತ್ವೇನ ಸ್ಥಿತಸ್ಯ ಹರೇರಿಂದ್ರಿಯದ್ವಾರಾ ವಿಷಯ-ಭೋಗಮಾಹ- ಶ್ರೋತ್ರಮಿತಿ ॥ ಅಧಿಷ್ಠಾಯೈವೇತ್ಯನ್ವಯಃ । ಪ್ರವರ್ತಕಃ ಸನ್ನೇವೇತ್ಯರ್ಥಃ । ವಿಷಯಾನ್ ಶಬ್ದಾದೀನ್ ॥ 9 ॥**

**ಅನುವಾದ–** ಇಂದ್ರಿಯಗಳಲ್ಲಿ ಪ್ರೇರಕನಾಗಿ ಇರುವ ಹರಿಗೆ ಇಂದ್ರಿಯಗಳ ಮೂಲಕ ವಿಷಯಭೋಗ ಉಂಟೆನ್ನುತ್ತಾನೆ– **'ಶ್ರೋತ್ರಂ ಚಕ್ಷುಃ'** ಎಂದು. **'ಅಧಿಷ್ಠಾಯೈವ '** ಎಂದು ಅನ್ವಯ. ಪ್ರೇರಕನಾಗಿಯೇ ಎಂದರ್ಥ. **'ವಿಷಯಾನ್'** ಎಂದರೆ ಶಬ್ದಾದಿ ವಿಷಯಪದಾರ್ಥಗಳನ್ನು ಎಂದರ್ಥ. ॥ 9 ॥

**ಉತ್ಕ್ರಾಮಂತಂ ಸ್ಥಿತಂ ವಾಽಪಿ ಭುಂಜಾನಂ ವಾ ಗುಣಾನ್ವಿತಮ್ ।**
**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥ 10 ॥**

**ಅರ್ಥ–** ಮೂಢರು ಪರಮಾತ್ಮನು ಜೀವಶರೀರದಿಂದ ಹೊರಗೆ ಹೋಗುವುದನ್ನಾಗಲಿ ಜೀವಶರೀರದಲ್ಲಿಯೇ ಇರುವುದನ್ನಾಗಲಿ, ಶುಭಫಲಗಳನ್ನು ಮಾತ್ರ ಭೋಗಿಸುವುದನ್ನಾಗಲಿ ಕಂಡುಕೊಳ್ಳಲಾರರು. ಜ್ಞಾನದ ಕಣ್ಣುಳ್ಳವರು ಮಾತ್ರ ಕಾಣುವರು.

**ಜೀವವದಶುಭಭೋಗೋಽಪ್ಯಸ್ತಿ ಕಿಮಿತ್ಯತಃ ಶುಭಾನೇವ ಭುಂಕ್ತ ಇತಿ ವದನ್ ಕುತೋ ನೋಪಲಭ್ಯತ ಇತಿ ಶಂಕಾಂ ನಿರಾಹ- ಉತ್ಕ್ರಾಮಂತಮಿತಿ ॥ ಗುಣಾನ್ವಿತಂ ಶುಭಯುಕ್ತಮೇವೇತ್ಯರ್ಥಃ । ವಿಮೂಢಾ ಇತ್ಯನುಪಲಂಭೇ ಹೇತೂಕ್ತಿಃ ॥ 10 ॥**

**ಅನುವಾದ–** ಜೀವನಂತೆ ಪರಮಾತ್ಮನಿಗೆ ದುಃಖ ಭೋಗವೂ ಇದೆ ಏನು ? ಎಂದರೆ, ಇ[illegible] ಕೇವಲ ಸುಖವನ್ನೇ ಅವನು ಉಣ್ಣುತ್ತಾನೆ, ಎನ್ನುತ್ತ, ಅವನು ಸುಖ ಉಣ್ಣುವುದು ಜೀವನಿಗೆ [illegible] ಗೋಚರವಾಗುವುದಿಲ್ಲ ಎಂಬ ಪ್ರಶ್ನೆಗೆ ಪರಿಹಾರ ನೀಡುತ್ತಾನೆ. **'ಉತ್ಕ್ರಾಮಂತಂ'** ಎಂದು **'ಗುಣಾನ್ವಿತಂ'** ಶುಭಯುಕ್ತವಾದುದನ್ನೇ ಪರಮಾತ್ಮ ಉಣ್ಣುತ್ತಾನೆ ಎಂದರ್ಥ. ಏಕೆ ಗೋಚರಿ[illegible]ವುದಿಲ್ಲ ಎಂದರೆ **'ವಿಮೂಢಾಃ'** ಜೀವರು ಅಜ್ಞಾನಿಗಳಾಗಿರುವುದರಿಂದ ಎಂದು ಕಾರ[illegible] ಉಕ್ತವಾಗಿದೆ. ॥ 10 ॥

## ಮನದ ಮುಸುರೆ ತೊಳೆದುಕೊಂಡವರಿಗೆ ಹರಿ ಕಾಣಬಲ್ಲನು

**ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಮ್ ।**
**ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥ 11 ॥**

ಅರ್ಥ– ಜ್ಞಾನ ಸಾಧನವನ್ನು ಅನುಷ್ಠಾನ ಮಾಡುತ್ತ ಪ್ರಯತ್ನಿಸುವವರು ಮಾತ್ರ ಜ್ಞಾನವನ್ನು ಪಡೆದು ತಮ್ಮಲ್ಲಿಯೇ ಇರುವ ಪರಮಾತ್ಮನನ್ನು ಕಾಣುವರು. ಮಲಿನ ಅಂತಃಕರಣ ಉಳ್ಳ ಅವಿವೇಕಿಗಳು ಪ್ರಯತ್ನಪಟ್ಟರೂ ಕಾಣರು.

**ಯತ್ನೇ ಕೃತೇऽಪ್ಯನುಪಲಂಭಃ ಕಥಮಿತ್ಯತ ಆಹ- ಯತಂತ ಇತಿ ॥ ಯೋಗಿನೋ ಜ್ಞಾನೋಪಾಯಾನುಷ್ಠಾತಾರೋ ಯತಂತೋ ಯತಮಾನಾಃ ಜ್ಞಾನಂ ಪ್ರಾಪ್ಯೈನಂ ಪಶ್ಯಂತಿ । ಅಶುದ್ಧಬುದ್ಧಯೋ ಯತಮಾನಾ ಅಪಿ ಅಚೇತಸೋ ಅವಿವೇಕಿನೋ ನೈನಂ ಪಶ್ಯಂತೀತ್ಯರ್ಥಃ ॥ 11 ॥**

ಅನುವಾದ– ಜೀವರು ಯತ್ನ ಮಾಡಿದರೂ , ತಮ್ಮ ಇಂದ್ರಿಯಗಳಿಂದ ಭಗವಂತ ಸುಖ ಉಣ್ಣುವುದು ಅವರಿಗೆ ಏಕೆ ಗೋಚರವಾಗುವುದಿಲ್ಲ ಎಂದರೆ ಹೇಳುತ್ತಾನೆ– '**ಯತಂತೋ ಯೋಗಿನಃ**' ಎಂದು. '**ಯೋಗಿನಃ**' ಜ್ಞಾನಸಾಧನಾನುಷ್ಠಾನ ಮಾಡುವವರು ಯತ್ನ ಮಾಡಿದರೆ, ಜ್ಞಾನ ಹೊಂದಿ ಭಗವಂತನನ್ನು ಕಾಣುತ್ತಾರೆ. ಬುದ್ಧಿಶುದ್ಧಿ ಇಲ್ಲದವರು ಅವಿವೇಕಿಗಳು ಯತ್ನ ಮಾಡಿದರೂ ಭಗವಂತನನ್ನು ಕಾಣಲಾರರು ಎಂದರ್ಥ ॥ 11 ॥

## ವಿಶ್ವದಲ್ಲಿ ಹರಿಯುವುದು ಹರಿಯ ಶಕ್ತಿ

**ಯದಾದಿತ್ಯಗತಂ ತೇಜೋ ಜಗದ್‌ಭಾಸಯತೇऽಖಿಲಮ್ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥ 12 ॥**

ಅರ್ಥ– ಸೂರ್ಯನಲ್ಲಿ ಚಂದ್ರನಲ್ಲಿ ಮತ್ತು ಅಗ್ನಿಯಲ್ಲಿರುವ ಯಾವ ಬೆಳಕಿನ ಶಕ್ತಿ ಇಡೀ ಜಗತ್ತನ್ನು ಬೆಳಗಿಸುತ್ತಿದೆಯೋ ಅದು ನನ್ನ ಅಧೀನವೆಂದು ತಿಳಿ.

**'ಅಧಶ್ಚ ಮೂಲಾನ್ಯನುಸಂತತಾನೀತಿ' ಯತ್ಸರ್ವಾಂತರ್ಯಾಮಿತ್ವರೂಪಂ ವಿಜ್ಞಾನಮುಕ್ತಮ್, ಯಚ್ಚೋರ್ಧ್ವಶಬ್ದೇನ ಸರ್ವೋತ್ತಮತ್ವಮುಕ್ತಂ ತದ್‌ದ್ವಯ-ಮಧ್ಯಾಯಶೇಷೇಣ ಪ್ರಪಂಚಯತಿ- ಯದಾದಿತ್ಯೇತ್ಯಾದಿನಾ ॥ ತೇಜಃ ಜಗತ್-ಪ್ರಕಾಶನಶಕ್ತಿಃ । ಮಾಮಕಂ ಮದೀಯಂ ಮದಧೀನಮಿತ್ಯರ್ಥಃ । 'ತಮೇವ ಭಾಂತಮನುಭಾತಿ ಸರ್ವಂ' (ಕಠ.2-5-15) ಇತ್ಯಾದೇಃ । 'ಅನುಕೃತೇಸ್ತಸ್ಯ ಚೇತಿ'(1-3-22) ಸೂತ್ರಾತ್ ॥ 12 ॥**

ಅನುವಾದ– 'ಅಧಶ್ಚ ಮೂಲಾನ್ಯನುಸಂತತಾನಿ' ಎಂದು ಭಗವಂತನನ್ನು ಸರ್ವಾಂತರ್ಯಾಮಿ ಎಂದು ವರ್ಣಿಸಲಾಗಿದೆ. '**ಊರ್ಧ್ವ**' ಶಬ್ದದಿಂದ ಅವನು ಸರ್ವೋತ್ತಮ

ನೆಂದೂ ಹೇಳಿದೆ. ಇವೆರಡನ್ನೂ ಮುಂದೆ ಈ ಅಧ್ಯಾಯದ ಕೊನೆಭಾಗದಲ್ಲಿ ವಿವರಿಸುತ್ತಾನೆ **'ಯದಾದಿತ್ಯಗತಂ'** ಎಂದು ಮುಂತಾಗಿ. **'ತೇಜಃ'** ಜಗತ್ತನ್ನು ಬೆಳಗುವ ಶಕ್ತಿ **'ಮಾಮಕಂ'** ನನ್ನದು, ಅಂದರೆ, ನನ್ನ ಅಧೀನ ಎಂದರ್ಥ. **'ತಮೇವ ಭಾಂತಮನುಭಾತಿ ಸರ್ವಂ'** (ಕಾಠಕ. 2.5.15) ಎಂದು ಮುಂತಾಗಿ ಶ್ರುತಿಯೂ **'ಓಂ ಅನುಕೃತೇಸ್ತಸ್ಯ ಚ ಓಂ'** (ಬ್ರ.ಸೂ. 1.3.22) ಎಂದು ಬ್ರಹ್ಮಸೂತ್ರವೂ ಇದಕ್ಕೆ ಆಧಾರವಾಗಿದೆ. ॥ 12 ॥

**ವಿವರಣೆ–** 'ಅನುಕೃತೇಸ್ತಸ್ಯ ಚ' ಎಂಬ ಬ್ರಹ್ಮಸೂತ್ರದಲ್ಲಿ ಸೂರ್ಯಚಂದ್ರಾದಿಗಳ ಪ್ರಕಾಶ ಭಗವಂತನ ಪ್ರಕಾಶವನ್ನು ಅನುಕರಣ ಮಾಡುತ್ತದೆ, ಮತ್ತು ಅದಕ್ಕೆ ಅಧೀನವೂ ಆಗಿದೆ ಎಂದು **'ತಮೆವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ'** ಎಂಬ ಕಾಠಕೋಪನಿಷದ್ವಾಕ್ಯದ ಆಧಾರದಿಂದ ನಿರೂಪಿಸಲಾಗಿದೆ.

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥ 13 ॥**

**ಅರ್ಥ–** ನಾನು ಭೂಮಿಯಲ್ಲಿ ಅಂತರ್ಗತನಾಗಿದ್ದು ಸ್ವಶಕ್ತಿಯಿಂದ ಎಲ್ಲ ಜೀವಿಗಳನ್ನೂ ಧರಿಸುತ್ತೇನೆ. ಅಮೃತ ರಸಸ್ವರೂಪನಾಗಿದ್ದು ಸೌಮ್ಯನಾದುದರಿಂದ ಸೋಮ ಎಂಬ ಹೆಸರಿನಿಂದ ಚಂದ್ರಮಂಡಲದಲ್ಲಿದ್ದು ಎಲ್ಲ ಸಸ್ಯಗಳನ್ನೂ ಬೆಳೆಸುತ್ತೇನೆ.

**ಅಹಂ ಗಾಂ ಭೂಮಿಮಾವಿಶ್ಯ ಓಜಸಾ ಸ್ವಶಕ್ತ್ಯಾ ಭೂತಾನಿ ಧಾರಯಾಮಿ । ಅಮೃತರಸಾತ್ಮಕಃ ಸೌಮ್ಯತ್ವಾತ್ಸೋಮನಾಮಾ ಸೋಮಗಃ ಸನ್ಸರ್ವಾ ಓಷಧೀಃ ಸಸ್ಯಾದೀನಿ ಪುಷ್ಣಾಮಿ ವರ್ಧಯಾಮಿ ಚ ॥ 13 ॥**

**ಅನುವಾದ–** **'ಅಹಂ ಗಾಂ ಆವಿಶ್ಯ'** ನಾನು ಭೂಮಿಯನ್ನು ಪ್ರವೇಶಿಸಿ **'ಓಜಸಾ'** ನನ್ನ ಸಾಮರ್ಥ್ಯದಿಂದ **'ಭೂತಾನಿ ಧಾರಯಾಮಿ'** ಪ್ರಾಣಿಗಳನ್ನು ಕಾಪಾಡುತ್ತೇನೆ. ಮತ್ತು ಅಮೃತ ರಸಸ್ವರೂಪನಾಗಿ ಸೌಮ್ಯರೂಪನಾದರಿಂದ ಸೋಮನೆನಿಸಿ ಚಂದ್ರಮಂಡಲದಲ್ಲಿದ್ದು ಎಲ್ಲ ಸಸ್ಯ ಮುಂತಾದುವನ್ನು ಬೆಳೆಸುತ್ತೇನೆ. ॥ 13 ॥

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥ 14 ॥**

**ಅರ್ಥ–** ನಾನು ಎಲ್ಲ ಜೀವರಿಗೆ ಉಪಕಾರಕನಾಗಿದ್ದು ವೈಶ್ವಾನರನೆನಿಸಿ ಜಾಠರಾಗ್ನಿಯಲ್ಲಿದ್ದ ಜೀವಿಗಳ ದೇಹವನ್ನಾಶ್ರಯಿಸಿ, ಪ್ರಾಣ ಅಪಾನರೆಂಬ ಮುಖ್ಯಪ್ರಾಣರೂಪಗಳಿಂದ ಸಹಿತನಾ ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯಗಳೆಂಬ ನಾಲ್ಕು ಬಗೆಯ ಆಹಾರವನ್ನು ಜೀರ್ಣಗೊಳಿಸುತ್ತೇ

**ಕಿಂ ಚಾಹಂ ವಿಶ್ವನರಸಂಬಂಧಿತಯಾ ವೈಶ್ವಾನರನಾಮಾ ಜಾಠರ-ವೈಶ್ವಾನರಾಗ್ನಿಸ್ಥಃ ಸನ್ ಪ್ರಾಣಿನಾಂ ದೇಹಮಾಶ್ರಿತಃ ಪ್ರಾಣಾಪಾನಾಭ್ಯಾಂ ಮುಖ್ಯಪ್ರಾಣಸ್ವರೂಪಾಭ್ಯಾಂ ಸಮ್ಯಗ್ಯುಕ್ತಃ ಭಕ್ಷಭೋಜ್ಯಲೇಹ್ಯಪೇಯ ಭೇದೇನ ಚತುರ್ವಿಧಂ ಅನ್ನಂ ಪಚಾಮಿ ಜೀರ್ಣಂ ಕರೋಮಿ ॥ 14 ॥**

**ಅನುವಾದ–** ಮತ್ತು ನಾನು ಎಲ್ಲ ಜೀವರೊಳಗಿರುವುದರಿಂದ 'ವೈಶ್ವಾನರ' ನೆನಿಸಿ ವೈಶ್ವಾನರ ಎಂಬ ಜಠರಾಗ್ನಿಯಲ್ಲಿದ್ದು ಪ್ರಾಣಿಗಳ ದೇಹವನ್ನಾ ಶ್ರಯಿಸಿ ಮುಖ್ಯ ಪ್ರಾಣ ಸ್ವರೂಪರಾದ ಪ್ರಾಣ ಅಪಾನರೊಂದಿಗೆ ಕೂಡಿ ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯ ಎಂದು ನಾಲ್ಕು ಬಗೆಯಾಗಿರುವ ಅನ್ನವನ್ನು ಜೀರ್ಣಗೊಳಿಸುತ್ತೇನೆ. ॥ 14 ॥

## ನನ್ನಿಂದಲೇ ಜೀವರಿಗೆ ಜ್ಞಾನ-ತಿರೋಧಾನಗಳು

**ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।**
**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾಂತಕೃದ್ ವೇದವಿದೇವ ಚಾಹಮ್ ॥ 15 ॥**

**ಅರ್ಥ–** ಎಲ್ಲರ ಹೃದಯದಲ್ಲೂ ನಾನಿರುವೆ. ನನ್ನಿಂದಲೇ ಸ್ಮರಣೆ ಅನುಭವ ಭ್ರಮೆಗಳುಂಟಾಗುತ್ತದೆ. ಎಲ್ಲ ವೇದಗಳಿಂದಲೂ ನಾನೇ ಮುಖ್ಯ ಪ್ರತಿಪಾದ್ಯ, ವೇದವ್ಯಾಸ ರೂಪದಿಂದ ಬ್ರಹ್ಮಸೂತ್ರ ರಚಿಸಿದವನೂ ನಾನೇ. ವೇದಗಳನ್ನು ಸರಿಯಾಗಿ ತಿಳಿದವನೂ ನಾನೇ.

**ಕಿಂಚ ಸರ್ವಸ್ಯ ಹೃದಿ ಸನ್ನಿವಿಷ್ಟೋಽಹಮ್ । ಮತ್ತ ಏವ ಚ ಸ್ಮೃತಿಃ ಅನುಭವರೂಪಂ ಜ್ಞಾನಂ ಅಪೋಹನಂ ವಿಪರ್ಯಯಶ್ಚ ಭವತಿ । ಅಹಮೇವ ಪರಮಮುಖ್ಯವೃತ್ತ್ಯಾ ಸರ್ವೈಶ್ಚ ವೇದೈಃ ವೇದ್ಯಃ । ವೇದಾಂತಕೃತ್ ವೇದಾನಾ-ಮಂತೋ ನಿರ್ಣಯೋ ಯಸ್ಮಾತ್ಸ ವೇದಾಂತೋ ಬ್ರಹ್ಮಸೂತ್ರಸಂದರ್ಭಃ । ತಸ್ಯ ವ್ಯಾಸರೂಪೇಣ ಕರ್ತಾ ವೇದವಿತ್ ತತ್ತ್ವತೋ ವೇದಾರ್ಥಜ್ಞಾನವಾನಹ-ಮೇವೇತ್ಯರ್ಥಃ । 'ಮಾಂ ವಿಧತ್ತೇಽಭಿಧತ್ತೇ ಮಾಮಿ'ತ್ಯಾದೇಃ ॥ 15 ॥**

**ಅನುವಾದ–** ಮತ್ತು ಎಲ್ಲರ ಹೃದಯದಲ್ಲಿ ಇರುವವನು ನಾನು. ನನ್ನಿಂದಲೇ ಜನರಿಗೆ ಸ್ಮರಣೆ, ಅನುಭವರೂಪವಾದ ಜ್ಞಾನ ಮತ್ತು ಭ್ರಾಂತಿಗಳುಂಟಾಗುತ್ತದೆ. ನಾನೇ ಪರಮ ಮುಖ್ಯವೃತ್ತಿಯಿಂದ ಎಲ್ಲ ವೇದಗಳಿಂದ ಪ್ರತಿಪಾದ್ಯನಾಗಿದ್ದೇನೆ. 'ವೇದಾಂತ' ಎಂದರೆ ವೇದಾರ್ಥ

ನಿರ್ಣಾಯಕವಾದ ಬ್ರಹ್ಮಸೂತ್ರ ಗ್ರಂಥ . ಅದನ್ನು ವೇದವ್ಯಾಸರೂಪದಿಂದ ಮಾಡುವವನು ನಾನೇ . ವೇದದ ಅರ್ಥವನ್ನೂ ಸರಿಯಾಗಿ ತಿಳಿಯುವವನೂ ನಾನೇ. '**ಮಾಂ ವಿಧತ್ತೇಽಬಿಧತ್ತೇ ಮಾಂ**' ಇತ್ಯಾದಿ ವಚನ ಇದಕ್ಕೆ ಆಧಾರವಾಗಿದೆ. ||15 ||

**ವಿವರಣೆ–**

ಕಿಂ ವಿಧತ್ತೇ ಕಿಮಾಚಷ್ಟೇ ಕಿಮನೂದ್ಯ ವಿಕಲ್ಪಯೇತ್
ಇತ್ಯಸ್ಯಾ ಹೃದಯಂ ಸಾಕ್ಷಾನ್ನಾನ್ಯೋ ಮದ್ ವೇದಕಶ್ಚನ ।
ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯೋಽಪೋಹ್ಯ ಇತ್ಯಹಮ್ ॥ –ಭಾಗವತ 11.21.42

ಶ್ರೀಕೃಷ್ಣ ಉದ್ಧವನಿಗೆ ಉಪದೇಶಿಸುತ್ತಾನೆ— 'ವೇದವಿಧಿ ಎಲ್ಲವೂ ನನ್ನ ಪ್ರೀತಿಯ ಉದ್ದೇಶದಿಂದ ಕರ್ಮವನ್ನು ವಿಧಿಸುತ್ತದೆ. ಮಂತ್ರವೆಲ್ಲವೂ ನನ್ನ ಗುಣಗಾನ. ವಿವಿಧ ರೂಪವರ್ಣನೆಯೂ ನನ್ನ ರೂಪಗಳ ವರ್ಣನೆ. ನಿಷೇಧವೂ 'ನನಗೆ ಇಷ್ಟವಲ್ಲದುದು' ಎನ್ನುತ್ತಿದೆ . ಹೀಗೆ ವೇದಗಳ ಹಾರ್ದವನ್ನು ಸ್ವತಃ ತಿಳಿದವನು ನಾನೊಬ್ಬನೇ. ಇನ್ನಾರು ಅಲ್ಲ' ಎಂದು.

## ಶ್ರೀಹರಿಯು ಪುರುಷೋತ್ತಮ

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ 16 ॥**

**ಅರ್ಥ–** ಪ್ರಮಾಣಸಿದ್ಧರಾದ ಚೇತನರು ಅಸ್ವತಂತ್ರ ಪ್ರಪಂಚದಲ್ಲಿ ಕ್ಷರ ಅಕ್ಷರರೆಂದು ಎರಡು ವಿಧ. ಬ್ರಹ್ಮಾದಿ ಸರ್ವಜೀವರು ಶರೀರನಾಶ ಹೊಂದುವ ಪ್ರಯುಕ್ತ ಕ್ಷರರೆನಿಸುತ್ತಾರೆ. ಆಕಾಶದಂತೆ ಇರುವ ಲಕ್ಷ್ಮೀದೇವಿ ಶರೀರ ನಾಶವಿಲ್ಲದ ಪ್ರಯುಕ್ತ ಅಕ್ಷರಳೆನಿಸುತ್ತಾಳೆ.

**ಏವಂ ಸರ್ವಾಂತರ್ಯಾಮಿತ್ವಂ ಪ್ರಪಂಚ್ಯಾಧುನಾ ಸರ್ವೋತ್ತಮತ್ವಂ ಪ್ರಪಂಚಯತಿ – ದ್ವಾವಿತಿ ॥ ಇಮೌ ಪ್ರಮಾಣಪ್ರಮಿತೌ ಪುರುಷೌ ಚೇತನೌ ಲೋಕೇ ಈಶಿತವ್ಯವರ್ಗೇ । ದ್ವಾವೇತೌ ಕಾವಿತ್ಯತ ಆಹ– ಕ್ಷರಶ್ಚೇತಿ ॥ ಸರ್ವಾಣಿ ಭೂತಾನಿ ಬ್ರಹ್ಮಾದಿಜೀವರಾಶಿಃ ಶರೀರಕ್ಷರಣಹೇತುನಾ ಕ್ಷರ ಉಚ್ಯತೇ । ಕೂಟಸ್ಥಃ ಕೂಟಮಾಕಾಶಂ ತದ್ವತ್ ಸ್ಥಿತಃ ಪುರುಷಃ ಅಕ್ಷರದೇಹತ್ವಾತ್ ಶ್ರೀರಕ್ಷರ ಉಚ್ಯತೇ । 'ಪುಲ್ಲಿಂಗೇನೋಚ್ಯತೇ ಸ್ತ್ರೀ ಚ ಪುಂವಚ್ಛಕ್ತಿಮತೀ ಕ್ವಚಿತ್' ಇತಿ ಛಾಂದೋಗ್ಯ-ಭಾಷ್ಯೋಕ್ತೇಃ ॥ 16 ॥**

**ಅನುವಾದ–** ಹೀಗೆ ಪರಮಾತ್ಮ ಸರ್ವಾಂತರ್ಯಾಮಿ ಎಂಬುದನ್ನು ವಿವರಿಸಿದ ಬಳಿಕ ಈ

ಅವನು ಸರ್ವೋತ್ತಮ ಎಂಬುದನ್ನು ವಿವರಿಸುತ್ತಾನೆ- **'ದ್ವಾವಿಮೌ'** ಎಂದು ಮುಂತಾಗಿ. **'ಲೋಕೇ'** ಪರಮಾತ್ಮನ ಅಧೀನದಲ್ಲಿರುವ ಈ ಲೋಕದಲ್ಲಿ ಎರಡು ಬಗೆಯ ಚೇತನರಿದ್ದಾರೆ. **'ಇಮೌ'** ಪ್ರಮಾಣಸಿದ್ಧರಾಗಿದ್ದಾರೆ. ಎರಡು ಬಗೆಯ ಚೇತನರು ಯಾರೆಂದರೆ ಹೇಳುತ್ತಾನೆ- **'ಕ್ಷರಶ್ಚ ಅಕ್ಷರ ಏವ ಚ'** ಎಂದು. **'ಸರ್ವಾಣಿ ಭೂತಾನಿ'** ಎಂದರೆ ಬ್ರಹ್ಮಾದಿ ಸರ್ವ ಜೀವ ಸಮೂಹವು ಶರೀರನಾಶ ಉಳ್ಳದ್ದಾದರಿಂದ **'ಕ್ಷರ '** ಎನಿಸುತ್ತದೆ. **'ಕೂಟಸ್ಥಃ'** ಕೂಟವೆಂದರೆ ಆಕಾಶ. ಅದರಂತೆ ಇರುವ ಚೇತನವು ಶರೀರ ನಾಶರಹಿತವಾದ್ದರಿಂದ **ಅಕ್ಷರ** ಎನಿಸುತ್ತದೆ. ಲಕ್ಷ್ಮಿಯೇ ಅಕ್ಷರಚೇತನ. ಪುಲ್ಲಿಂಗದ ಅಕ್ಷರಶಬ್ದದಿಂದ ಲಕ್ಷ್ಮೀದೇವಿಯನ್ನು ಕರೆಯುವುದು ಅವಳು ಪುರುಷರಂತೆ ಶಕ್ತಿ ಉಳ್ಳವಳೆಂಬ ಅಭಿಪ್ರಾಯದಿಂದ. 'ಸ್ತ್ರೀಯೂ ಪುರುಷನಂತೆ ಶಕ್ತಿ ಉಳ್ಳವಳಾದರೆ ಪುಲ್ಲಿಂಗ ಶಬ್ದದಿಂದ ಕೆಲವೆಡೆ ಹೇಳುವುದುಂಟು' ಎಂದು ಛಾಂದೋಗ್ಯ-ಭಾಷ್ಯದಲ್ಲಿ ಹೇಳಿದೆ. ॥ 16 ॥

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ 17 ॥**

**ಅರ್ಥ-** ಸರ್ವೋತ್ತಮನಾದ ಚೇತನನು ಈ ಕ್ಷರ, ಅಕ್ಷರರಿಗಿಂತ ಬೇರೆಯೇ ಒಬ್ಬನು. ಇವರಿಬ್ಬರೊಳಗೆ ಯಾರೂ ಅಲ್ಲ. **'ಚೇತನಶ್ಚೇತನಾನಾಮ್'** ಇತ್ಯಾದಿ ಶ್ರುತಿ-ಸ್ಮೃತಿಗಳಲ್ಲಿ 'ಕ್ಷರಾಕ್ಷರರು ಕೇವಲ ಚೇತನರು. ಉತ್ತಮ ಪುರುಷನೇ ಪರಮ ಚೇತನನೆಂದು ಹೇಳಿದೆ. ಈ ಉತ್ತಮ ಪುರುಷನೇ **ಭೂಃ ಭುವಃ ಸ್ವಃ** ಎಂಬ ಮೂರು ಲೋಕಗಳಲ್ಲಿ ಅಂತರ್ನಿಯಾಮಕನಾಗಿ ಧಾರಣೆ ಪೋಷಣೆಗಳನ್ನು ಮಾಡುತ್ತಾನೆ. ಆದ್ದರಿಂದ ಮೂರು ಲೋಕಕ್ಕಿಂತಲೂ ಆತ ಬೇರೆ ಹಾಗೂ ಉತ್ತಮನೆನ್ನುವುದು ಯುಕ್ತಿಯುಕ್ತವೂ ಆಗಿದೆ. ಲೋಕ ನಾಶವಾದಾಗಲೂ ಅದರೊಳಗಿರುವ ಈ ಪುರುಷೋತ್ತಮನು ಮಾತ್ರ ನಾಶ ಹೊಂದುವುದಿಲ್ಲ. ಏಕೆಂದರೆ ಆತ ಅಚಿಂತ್ಯಶಕ್ತಿ ಉಳ್ಳವನು.

ಯದರ್ಥಂ ಪುರುಷದ್ವಯನಿರೂಪಣಂ ಕೃತಂ ತದಾಹ- **ಉತ್ತಮ ಇತಿ** ॥ ಕ್ಷರಾಕ್ಷರಾಭ್ಯಾಮಿತಿ ವಿಪರಿಣಾಮ್ಯಾನುಷಜ್ಯತೇ । ಉತ್ತಮಃ ಪುರುಷಸ್ತು ತಾಭ್ಯಾ-ಮನ್ಯಃ । ನ ತ್ವನಯೋರೇಕಃ ಪುರುಷೋತ್ತಮ ಇತ್ಯರ್ಥಃ । ಉಕ್ತಾರ್ಥೇ ಶ್ರುತ್ಯಾದಿ-ಸಮ್ಮತಿಮಾಹ- **ಪರಮೇತಿ** ॥ ಆತ್ಮಾಽತ್ರ ಚೇತನಃ । ಕ್ಷರಾಕ್ಷರೌ ಚೇತನ-ಮಾತ್ರಮ್ । ಉತ್ತಮಪುರುಷಸ್ತು ಪರಮಚೇತನ ಇತಿ । 'ಚೇತನಶ್ಚೇತನಾನಾಂ' (ಶ್ವೇ. 6-13) । 'ಬ್ರಹ್ಮಾಣಿ ಜೀವಾಃ ಸರ್ವೇಽಪಿ' ಇತ್ಯಾದಿ ಶ್ರುತಿಷೂದಾಹೃತ ಇತ್ಯರ್ಥಃ । ಅತಸ್ತಾಭ್ಯಾಮನ್ಯಃ ಪುರುಷೋತ್ತಮ ಇತಿ ಭಾವಃ । ಉಕ್ತಾರ್ಥೇ

**ಯುಕ್ತಿಮಪ್ಯಾಹ- ಯ ಇತಿ ॥ ಯಃ ಭೂರ್ಭುವಃ ಸ್ವರಿತಿ ಲೋಕತ್ರಯಮಾವಿಶ್ಯ ಬಿಭರ್ತಿ ಧತ್ತೇ । ಯೋ ಯಸ್ಯ ಧಾರಣಪೋಷಣ ಕರ್ತಾ ಸ ತಸ್ಮಾದುತ್ತಮೋಽನ್ಯಶ್ಚ ದೃಷ್ಟ ಇತಿ ಭಾವಃ । ಕಿಂ ಲೋಕನಾಶೇ ಪ್ರವಿಷ್ಟಸ್ಯಾಪಿ ನಾಶೋಽಸ್ತೀತ್ಯತ ಉಕ್ತಮ್- ಅವ್ಯಯ ಇತಿ ॥ ತತ್ಕಥಮಿತ್ಯತೋಽಚಿಂತ್ಯಶಕ್ತಿತ್ವಾದಿತ್ಯಾಹ- ಈಶ್ವರ ಇತಿ ॥ ಏತೇನ ಕ್ಷರಾಕ್ಷರಾಭ್ಯಾಮುತ್ತಮೋಽನ್ಯಃ ಕಿಂನಾಮಕ ಇತ್ಯಪಿ ಶಂಕಾ ಪರಾಸ್ತಾ ॥ 17 ॥**

**ಅನುವಾದ–** ಎರಡು ಬಗೆಯ ಚೇತನರಿರುವರೆಂದು ಹೇಳಿದ್ದರ ಉಪಯೋಗವನ್ನು ತೋರಿಸುತ್ತಾನೆ– '**ಉತ್ತಮಃ ಪುರುಷಸ್ತ್ವನ್ಯಃ**' ಎಂದು. '**ಕ್ಷರಶ್ಚಾಕ್ಷರಶ್ಚ**' ಎಂದು ಹಿಂದೆ ಹೇಳಿದ್ದನ್ನು '**ಕ್ಷರಾಕ್ಷರಾಭ್ಯಾಂ**' ಎಂದು ಮಾರ್ಪಾಟು ಮಾಡಿ ತಂದು ಅನ್ವಯಿಸಬೇಕು. ಉತ್ತಮ ಪುರುಷನು ಕ್ಷರ , ಅಕ್ಷರ ಪುರುಷರಿಗಿಂತ ಬೇರೆಯೇ ಇದ್ದಾನೆ ಹೊರತು ಅವರಲ್ಲೊಬ್ಬ ಪುರುಷೋತ್ತಮನಲ್ಲ ಎಂದರ್ಥ. ತಾನು ಹೇಳಿದ ವಿಷಯದಲ್ಲಿ ಶ್ರುತಿಸ್ಮೃತಿಗಳ ಸಮ್ಮತಿ ಇದೆ ಎನ್ನುತ್ತಾನೆ- '**ಪರಮಾತ್ಮೇತ್ಯುದಾಹೃತಃ**' ಎಂದು. 'ಪರಮಾತ್ಮ ' ಶಬ್ದದಲ್ಲಿ ಆತ್ಮ ಎಂದರೆ ಚೇತನ. ಕ್ಷರ , ಅಕ್ಷರರು ಕೇವಲ ಚೇತನರು. '**ಉತ್ತಮಃ ಪುರುಷಸ್ತು**' ಉತ್ತಮಚೇತನನು ಬೇರೆಯೇ ಇದ್ದಾನೆ ಎಂದು '**ಚೇತನಶ್ಚೇತನಾನಾಂ**' (ಶ್ವೇ. 6.13) '**ಬ್ರಹ್ಮಾಣಿ ಜೀವಾಃ ಸರ್ವೇಽಪಿ**' ಇತ್ಯಾದಿ ಶ್ರುತಿಗಳಲ್ಲಿ ಹೇಳಿದೆ ಎಂದರ್ಥ. ಆದ್ದರಿಂದ ಕ್ಷರ ಅಕ್ಷರದಿಂದ ಬೇರೆಯೇ ಪುರುಷೋತ್ತಮನಿದ್ದಾನೆ ಎಂದು ಅಭಿಪ್ರಾಯ. ತಾನು ಹೇಳಿದ ವಿಷಯದಲ್ಲಿ ಯುಕ್ತಿಯನ್ನೂ ಹೇಳುತ್ತಾನೆ– '**ಯೋ ಲೋಕತ್ರಯಮಾವಿಶ್ಯ**' ಎಂದು. '**ಭೂಃ ಭುವಃ ಸ್ವಃ**' ಎಂದು ಮೂರು ಲೋಕಗಳನ್ನು ಪ್ರವೇಶಿಸಿ ಯಾರು ಧರಿಸುತ್ತಾನೋ ಅವನು ಪುರುಷೋತ್ತಮ. ಯಾರು ಯಾರಿಗೆ ಧಾರಣ ಪೋಷಣಗಳನ್ನು ಮಾಡುವನೋ ಅವನು ಅವನಿಗಿಂತ ಉತ್ತಮನೂ ಬೇರೆಯಾಗಿರುವುದೂ ಕಂಡಿದೆ ಎಂದು ಅಭಿಪ್ರಾಯ . ಲೋಕಲಯ ಹೊಂದುವಾಗ ಲೋಕದಲ್ಲಿ ಪ್ರವೇಶಿಸಿರುವ ಪುರುಷೋತ್ತಮನಿಗೂ ನಾಶ ಉಂಟೆ ? ಎಂದರೆ ಇಲ್ಲ, ಅವನು '**ಅವ್ಯಯ**'. ಅದು ಹೇಗೆ ಎಂದರೆ ಅಚಿಂತ್ಯಶಕ್ತಿ ಇರುವುದರಿಂದ ಎನ್ನುತ್ತಾನೆ– '**ಈಶ್ವರಃ**' ಎಂದು . ಇದರಿಂದ ಕ್ಷರಾಕ್ಷರರಿಗಿಂತ ಉತ್ತಮನಾದ ಬೇರೆಯಾದ ವ್ಯಕ್ತಿಯ ಹೆಸರೇನೆಂಬ ಪ್ರಶ್ನೆಗೆ ಸಮಾಧಾನ ಹೇಳಿದಂತಾಯಿತು. '**ಈಶ್ವರ**' ಪರಮಾತ್ಮ ಎಂದು ಹೆಸರು. ॥ 17 ॥

**ವಿವರಣೆ–** 'ಚೇತನಶ್ಚೇತನಾನಾಂ' 'ಚೇತನರ ಚೈತನ್ಯಕ್ಕೆ ನಿಯಾಮಕನಾದ ಚೇತನ' ಅಂದರೆ, ಪರಮಚೇತನ ಪುರುಷೋತ್ತಮನು ಭಗವಂತ ಎಂದರ್ಥ.

ಬ್ರಹ್ಮಾಣಿ ಜೀವಾಃ ಸರ್ವೇಽಪಿ ಪರಬ್ರಹ್ಮಾಣಿ ಮುಕ್ತಿಗಾಃ
ಪ್ರಕೃತಿಃ ಪರಮಂ ಬ್ರಹ್ಮ ಪರಮಂ ಮಹದಚ್ಯುತಃ ॥

'ಎಲ್ಲ ಜೀವರು ಬ್ರಹ್ಮರು . ಮುಕ್ತಜೀವರು ಪರಬ್ರಹ್ಮರು. ಲಕ್ಷ್ಮೀಪರಮಬ್ರಹ್ಮಳು ಪರಮಾತ್ಮ ಪರಮ ಮಹದ್‌ಬ್ರಹ್ಮ' – ಈ ತಾರತಮ್ಯದಿಂದ ಪುರುಷೋತ್ತಮನು ಪರಮಾತ್ಮನೆಂದಂತಾಯಿತು.

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ 18 ॥**

**ಅರ್ಥ–** ನಾನು ಬ್ರಹ್ಮಾದಿ ಕ್ಷರರನ್ನೂ ಮೀರಿದವನು. ಅಕ್ಷರಳೆನಿಸಿದ ಲಕ್ಷ್ಮೀಗಿಂತಲೂ ಉತ್ತಮ. ಆದ್ದರಿಂದ ಶ್ರುತಿಯಲ್ಲಿಯೂ, ಸ್ಮೃತಿಯಲ್ಲಿಯೂ ಪುರುಷೋತ್ತಮನೆಂದು ಪ್ರಸಿದ್ಧನಾದವನು ನಾನೇ.

**ಸ ಕಿಂ ತ್ವತ್ತೋಽನ್ಯ ಇತ್ಯತೋಽಹಮೇವೇತಿ ಸಪ್ರಮಾಣಕಮಾಹ- ಯಸ್ಮಾದಿತಿ ॥ ಯಸ್ಮಾತ್‌ಕ್ಷರಂ ಚಾತೀತಃ ಅಕ್ಷರಾದಪ್ಯುತ್ತಮೋಽತಃ ಕಾರಣಾತ್ । ಲೋಕೇ ಪೌರುಷೇಯಗ್ರಂಥೇ ವೇದೇ ಅಪೌರುಷೇಯಗ್ರಂಥೇ ಚ ಪ್ರಥಿತಃ ಪ್ರಸಿದ್ಧಃ ಪುರುಷೋತ್ತಮೋಽಹಮೇವೇತ್ಯರ್ಥಃ ॥ 18 ॥**

**ಅನುವಾದ–** ಆ ಪುರುಷೋತ್ತಮ ನಿನಗಿಂತ ಬೇರೆಯೇನು ? ಎಂದರೆ, ಅಲ್ಲ, ನಾನೇ ಎಂದು ಪ್ರಮಾಣಪೂರ್ವಕವಾಗಿ ಹೇಳುತ್ತಾನೆ ಶ್ರೀಕೃಷ್ಣ– '**ಯಸ್ಮಾತ್ ಕ್ಷರಮತೀತೋಽಹಂ**' ಎಂದು ಮುಂತಾಗಿ. ಕ್ಷರಕ್ಕಿಂತ ಉತ್ತಮ ಮತ್ತು ಅಕ್ಷರಕ್ಕಿಂತಲೂ ಉತ್ತಮನಾದ್ದರಿಂದ ಲೋಕದಲ್ಲಿ, ಅಂದರೆ, ಪೌರುಷೇಯ ಗ್ರಂಥಗಳಲ್ಲಿ, ಮತ್ತು ವೇದದಲ್ಲಿ, ಅಂದರೆ ಅಪೌರುಷೆಯ ಗ್ರಂಥ ಗಳಲ್ಲಿ 'ಪ್ರಥಿತಃ' ಪ್ರಸಿದ್ಧನಾದ ಪುರುಷೋತ್ತಮನು ನಾನೇ ಎಂದರ್ಥ. ॥ 18 ॥

**ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಂ ।**
**ಸ ಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ॥ 19 ॥**

**ಅರ್ಥ–** ಅರ್ಜುನ ಯಾರು ನನ್ನನ್ನು ಹೀಗೆ ಕ್ಷರ – ಅಕ್ಷರರಿಗಿಂತ ಉತ್ತಮನೆಂದು ಶ್ರುತಿ ಸ್ಮೃತಿಗಳಲ್ಲಿ ಪ್ರಸಿದ್ಧನೆಂದು 'ನನ್ನ ಸರ್ವೋತ್ತಮತ್ವ ಅವಾಸ್ತವ, ಸತ್ಯವಲ್ಲ'ವೆಂಬ ಮಿಥ್ಯಾಜ್ಞಾನ ರಹಿತನಾಗಿ ಪುರುಷೋತ್ತಮನೆಂದು ತಿಳಿಯುವನೋ ಅವನು ಸರ್ವಶಾಸ್ತ್ರಗಳ ಸಾರವನ್ನು ತಿಳಿದವನೆನಿಸಿ ನನ್ನನ್ನು ಎಲ್ಲ ಬಗೆಯಿಂದಲೂ ಭಜಿಸುತ್ತಾನೆ, ಹೊಂದುತ್ತಾನೆ.

**ತಾತ್ಪರ್ಯದ್ಯೋತನಾಯೋಕ್ತಾರ್ಥಜ್ಞಾನಿನಃ ಫಲಮಾಹ- ಯೋಮಾ- ಮಿತಿ ॥ ಯೋಽಧಿಕಾರೀ ಮಾಮೇವಂ ಕ್ಷರಾಕ್ಷರೋತ್ತಮತ್ವೇನ ವೇದಾದಿಷು**

**ಪ್ರಥಿತತ್ವಪ್ರಕಾರೇಣಾಸಮ್ಮೂಢಃ ಸರ್ವೋತ್ತಮತ್ವಂ ಮಿಥ್ಯಾಭೂತಮುಚ್ಯತ ಇತಿ ಮೋಹರಹಿತಃ ಸನ್ಪುರುಷೋತ್ತಮಂ ಕ್ಷರಾಕ್ಷರಪುರುಷಾಭ್ಯಾಮುತ್ತಮಂ ಜಾನಾತಿ ಸ ಸರ್ವವಿತ್ ಸರ್ವಶಾಸ್ತ್ರಾರ್ಥಜ್ಞಾನೀ ಸರ್ವಭಾವೇನ ಸರ್ವಪ್ರಕಾರೇಣ ಮಾಂ ಭಜತಿ ॥ 19 ॥**

**ಅನುವಾದ–** ತಾನು ಹೇಳಿದ್ದರಲ್ಲಿತನಗೆ ಹೇಳುವ ವಿವಕ್ಷೆ ಇದೆ ಎಂದು ತಿಳಿಸುವುದಕ್ಕಾಗಿ ಅದನ್ನು ತಿಳಿಯುವ ಜ್ಞಾನಿಗೆ ಸಿಗುವ ಫಲವನ್ನು ಹೇಳುತ್ತಾನೆ– **'ಯೋ ಮಾಮೇವಂ'** ಎಂದು ಮುಂತಾಗಿ ಯಾರು ನನ್ನನ್ನು ಹೀಗೆ, ಅಂದರೆ ಕ್ಷರಾಕ್ಷರ ಪುರುಷರಿಗಿಂತ ಉತ್ತಮನೆಂದು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧನೆಂದು ತಿಳಿಯುವನೋ ಮತ್ತು **'ಅಸಂಮೂಢಃ'** ಶ್ರೀಕೃಷ್ಣನಲ್ಲಿ ಪುರುಷೋತ್ತಮತ್ವ ಕೇವಲ ಕಾಲ್ಪನಿಕ ಎಂದು ಅನ್ಯಥಾ ತಿಳಿಯುವುದಿಲ್ಲವೋ ಅವನು **'ಸರ್ವವಿತ್'** ಸರ್ವಶಾಸ್ತ್ರಾರ್ಥವನ್ನು ತಿಳಿದಂತಾಗುವುದು. **'ಸರ್ವಭಾವೇನ'** ಎಲ್ಲರೀತಿಯಿಂದಲೂ **'ಮಾಂ ಭಜತಿ'**ನನ್ನನ್ನು ಸೇವಿಸಿದಂತಾಗುವುದು. ॥ 19 ॥

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ ।**
**ಏತದ್ ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ 20 ॥**

*॥ ಓಂ ತತ್ಸದಿತಿ ಶ್ರೀಮದ್‌ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಪುರುಷೋತ್ತಮಯೋಗೋ ನಾಮ ಪಂಚದಶೋಽಧ್ಯಾಯಃ ॥*

**ಅರ್ಥ–** ಅರ್ಜುನ, ಹೀಗೆ ನಾನು ಹೇಳಿದ ನನ್ನ ಸರ್ವಾಂತರ್ಯಾಮಿತ್ವ ಜಗದ್ವೃ ಮೂಲಾಧಾರತ್ವ ಮುಂತಾದುದು ಮುಮುಕ್ಷುವು ಅವಶ್ಯ ತಿಳಿಯಬೇಕಾದುದು, ಅತಿ ರಹಸ್ ವಾದುದು. ಇದನ್ನು ತಿಳಿದರೆ ನಿಶ್ಚಯವಾಗಿಯೂ ಅಪರೋಕ್ಷಜ್ಞಾನ ಹೊಂದಬಹುದು ಮತ್ ಮುಕ್ತನಾಗಬಹುದು.

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ ಭಗವದ್ಗೀತೆಯಲ್ಲಿ ಪುರುಷೋತ್ತಮಯೋಗ ಎಂಬ ಹದಿನೈದನೆಯ ಅಧ್ಯಾಯವು ಮುಗಿಯಿತು.*

**ಏತಚ್ಚ ನ ಯಸ್ಮೈ ಕಸ್ಮೈಚಿದ್ವಾಚ್ಯಮಿತಿ ಭಾವೇನಾಹ– ಇತೀತಿ ॥ ಇತಿ 'ಅಧಶ್ಚ ಮೂಲಾನ್ಯನುಸಂತತಾನಿ' ಇತ್ಯಾದಿನೋಕ್ತಪ್ರಕಾರೇಣೇದಂ ಸರ್ವಾಂತರ್ಯಾಮಿತ್ವಾದಿಕಮ್ । ಯದ್ವಾ 'ಊರ್ಧ್ವಮೂಲಂ' ಇತ್ಯಾದಿನೋಕ್ತಪ್ರಕಾರೇಣೇದಂ ಜಗದ್‌ವೃಕ್ಷಮೂಲತ್ವಾದಿಕಂ ಶಾಸ್ತ್ರಂ ಶಿಕ್ಷಣೀಯಂ,ಗುಹ್ಯತಮಂ ಅತಿಗೋಪ್ಯಂ**

**ಮಯೋಕ್ತಮ್ । ತತಃ ಕಿಮಿತ್ಯತ ಆಹ- ಏತದಿತಿ ॥ ಏತತ್ಪ್ರಾಗುಕ್ತಂ ಸರ್ವಂ ಬುದ್ಧ್ವಾ ಬುದ್ಧಿಮಾನಪರೋಕ್ಷಜ್ಞಾನೀ ಸ್ಯಾತ್ । ಕೃತಕೃತ್ಯೋ ಮುಕ್ತಶ್ಚ ಸ್ಯಾದಿತಿ ॥ 20 ॥**

***॥ ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ ಪಂಚದಶೋಽಧ್ಯಾಯಃ ॥***

**ಅನುವಾದ–** ಇದನ್ನು ಯಾರಾರಿಗೋ ಹೇಳಬಾರದೆಂಬ ಅಭಿಪ್ರಾಯದಿಂದ ಹೇಳುತ್ತಾನೆ– '**ಇತಿ ಗುಹ್ಯತಮಂ**' ಎಂದು ಮುಂತಾಗಿ. '**ಇತಿ**' ಎಂದರೆ '**ಅಧಶ್ಚ ಮೂಲಾನ್ಯನುಸಂತತಾನಿ**' ಎಂದು ಮುಂತಾಗಿ ಹೇಳಿದಂತೆ '**ಇದಂ**' ಈ ಸರ್ವಾಂತರ್ಯಾಮಿತ್ವ ಸರ್ವೋತ್ತಮತ್ವ ಮುಂತಾದುದು ಅಥವಾ '**ಇತಿ**' ಎಂದರೆ '**ಊರ್ಧ್ವಮೂಲಂ**' ಎಂದು ಮುಂತಾಗಿ ಹೇಳಿದಂತೆ '**ಇದಂ**' ಜಗದ್ವೃಕ್ಷದ ಮೂಲ ಪರಮಾತ್ಮ ಎಂದು ಮುಂತಾದುದು ನಾನು ಹೇಳಿದ್ದು '**ಶಾಸ್ತ್ರಂ**' ಉಪದೇಶಕ್ಕೆ ಯೋಗ್ಯವಾದ ಪ್ರಮೇಯವಾಗಿದೆ. '**ಗುಹ್ಯತಮಂ**' ಅತ್ಯಂತಗೋಪ್ಯವಾಗಿದೆ. ಅದರಿಂದೇನು ಎಂದರೆ ಹೇಳುತ್ತಾನೆ–'**ಏತದ್ ಬುದ್ಧ್ವಾ**' ಎಂದು ಮುಂತಾಗಿ. ನಾನು ಹೇಳಿದ್ದನ್ನೆಲ್ಲ ತಿಳಿದರೆ '**ಬುದ್ಧಿಮಾನ್**' ಅಪರೋಕ್ಷಜ್ಞಾನಿಯಾಗುತ್ತಾನೆ. '**ಕೃತಕೃತ್ಯಃ**' ಮುಕ್ತನೂ ಆಗುತ್ತಾನೆ. ॥ 20 ॥

***ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ ಹದಿನೈದನೆಯ ಅಧ್ಯಾಯವು ಮುಗಿಯಿತು.***

# ಅಧ್ಯಾಯ - 16

## ದೈವೀ ಸಂಪತ್ತು

**ಶ್ರೀ ಭಗವಾನುವಾಚ -**

**ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥ 1 ॥**

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಮ್ ।**
**ದಯಾ ಭೂತೇಷ್ವಲೋಲುತ್ವಂ ಮಾರ್ದವಂ ಹ್ರೀರಚಾಪಲಮ್ ॥ 2 ॥**

**ತೇಜಃ ಕ್ಷಮಾಃ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥ 3 ॥**

**ಅರ್ಥ–** ಶ್ರೀಕೃಷ್ಣನು ಹೇಳಿದನು — ತನ್ನಿಂದ ಬೇರೆಯವರಿಗೆ ಬೇರೆಯವರಿಂದ ತನಗ ಭಯವಿಲ್ಲದಿರುವುದು, ಮನಸ್ಸಿನ ಪ್ರಸನ್ನತೆ, ಜ್ಞಾನಮಾರ್ಗದಲ್ಲಿ ನಿಷ್ಠೆ , ಅರ್ಹರಿಗೆ ದಾನ ಇಂದ್ರಿಯನಿಗ್ರಹ, ಜ್ಯೋತಿಷ್ಟೋಮ ಮೊದಲಾದ ಯಜ್ಞಗಳು ಅಥವಾ ದೇವ–ಋಷಿ–ಪಿತೃ– ಮನುಷ್ಯ–ಭೂತಯಜ್ಞಗಳು, ವೇದಾಧ್ಯಯನ, ಬ್ರಹ್ಮಚರ್ಯ ಮೊದಲಾದ ತಪಸ್ಸು, ಮನಸ್ಸು– ಮಾತು, ಕರ್ಮಗಳ ಏಕರೂಪತೆ. ॥ 1 ॥

ಅಹಿಂಸೆ, ನಿಜನುಡಿ, ಕ್ರೋಧವಿಲ್ಲದಿರುವಿಕೆ, ಧಾರಾಳತನ, ಭಗವಂತನಲ್ಲಿ ನಿಷ್ಠೆ, ರಾ ಮೊದಲಾದವರಿಗೆ ಹೇಳುವುದರಿಂದ ಒಬ್ಬನಿಗೆ ತೊಂದರೆಯಾಗುವಂತಹ ಅವನ ದೋಷಗಳನ ಅವರಿಗೆ ಹೇಳದಿರುವುದು, ಪ್ರಾಣಿಗಳಲ್ಲಿದಯೆ, ಭೋಗವಸ್ತುಗಳಲ್ಲಿ ಅತಿ ಆಸೆ ಇಲ್ಲದಿರುವುದು ಮೃದುಸ್ವಭಾವ , ಕರ್ತವ್ಯಲೋಪದ ಬಗ್ಗೆ ನಾಚಿಕೆ, ಸ್ಥೈರ್ಯ. ॥ 2 ॥

ಪರರಿಂದ ದಬ್ಬಾಳಿಕೆಗೊಳಗಾಗದಿರುವುದು , ಅಪಕಾರ ಮಾಡಿದವನ ಮೇಲೆ ಕೋಪವಿಲ್ಲ ಮತ್ತು ಅಪಕಾರ ಮಾಡದ ಮನಃಸ್ಥಿತಿ, ಆತಂಕವಿಲ್ಲದಿರುವಿಕೆ, ಅಂತರಂಗ ಬಹಿರಂಗ ಶುದ್ಧಿ ಕೇಡುಮಾಡದಿರುವುದು, ಬೀಗದಿರುವುದು – (ಈ ಗುಣಗಳು), ಓ ಭರತವಂಶಜನೇ ! ದೈ ಸಂಪತ್ತನ್ನು ಹೊಂದಿದವರಿಗೆ ಇರುತ್ತವೆ . ॥ 3 ॥

## ಅಧ್ಯಾಯ ಪೀಠಿಕೆ

### ಗೀತಾವಿವೃತಿ

**॥ ಓಂ ॥ ಪೂರ್ವಾಧ್ಯಾಯೇ 'ನಿರ್ಮಾನಮೋಹಾ' (15-5) ಇತ್ಯಾದಿನಾ ಸಂಕ್ಷೇಪೇಣೋಕ್ತಸ್ಯ ಪುಮರ್ಥಯೋರ್ಜ್ಞಾನಮೋಕ್ಷಯೋಃ ಸಾಧನಸ್ಯ 'ಯತನ್ತೋಽಪ್ಯಕೃತಾತ್ಮಾನಃ' (15-11) ಇತ್ಯಾದಿನಾ ಚೋಕ್ತಸ್ಯ ಪುಮರ್ಥ-ವಿರೋಧಿನಶ್ಚ ದೇವಾಸುರಲಕ್ಷಣರೂಪತ್ವಾತ್ ತತ್ ಪ್ರಪಂಚನಮಸ್ಮಿನ್ನಧ್ಯಾಯೇ ಕ್ರಿಯತ ಇತಿ ಪೂರ್ವಸಂಗತಿರಧ್ಯಾಯಭೇದಶ್ಚ ಜ್ಞೇಯಃ ।**

**ಅನುವಾದ-** 1. ಹಿಂದಿನ ಅಧ್ಯಾಯದಲ್ಲಿ 'ನಿರ್ಮಾನಮೋಹಾ.....' ಮೊದಲಾದ ಶ್ಲೋಕಗಳಲ್ಲಿ ಜ್ಞಾನಸಾಧನ ಮತ್ತು ಮೋಕ್ಷಸಾಧನಗಳನ್ನು ತಿಳಿಸಲಾಗಿದೆ. **'ಯತಂತೋಽ-ಪ್ಯಕೃತಾತ್ಮಾನಃ ನೈನಂ ಪಶ್ಯಂತ್ಯಚೇತಸಃ'** (ಶ್ಲೋಕ 11) ಎಂದು ಪುರುಷಾರ್ಥ ವಿರೋಧಿ ಸಂಗತಿಗಳನ್ನು ತಿಳಿಸಲಾಗಿದೆ. ಇವು ಕ್ರಮವಾಗಿ ದೇವ ಮತ್ತು ಅಸುರ ಲಕ್ಷಣಗಳು. ಇವುಗಳ ವಿವರಣೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಆದ್ದರಿಂದಲೇ ಈ ಅಧ್ಯಾಯಕ್ಕೆ ಹಿಂದಿನ ಅಧ್ಯಾಯದೊಂದಿಗೆ ಸಂಗತಿಯಿದೆ ಮತ್ತು ಇದು ಬೇರೆ ಅಧ್ಯಾಯ ಎಂದು ತಿಳಿಯಬೇಕು.

## ಆಸುರೀ ಸಂಪತ್ತಿನ ಮತ್ತು ಅಸುರ ಜನರ ಬಗ್ಗೆ ವಿವರಣೆಯ ಹಿನ್ನೆಲೆ

**ವಿರೋಧ್ಯುಕ್ತಿಶ್ಚ ಸಾಧನಮನುತಿಷ್ಠತಾ ತತ್ತ್ಯಾಗೋಽವಶ್ಯಂ ಕಾರ್ಯ ಇತಿ ಭಾವೇನೇತಿ ಬೋಧ್ಯಮ್ ।**

**ಅನುವಾದ-** ಸಾಧಕನು ವಿರೋಧಿಸಂಗತಿಗಳನ್ನು ಬಿಡಲೇಬೇಕು. ಬಿಡುವುದಕ್ಕಾಗಿ ಅವುಗಳ ಪರಿಚಯವನ್ನು ಇಲ್ಲಿ ನೀಡಲಾಗಿದೆ.

**ತತ್ರಾದಾವಭ್ಯರ್ಹಿತತ್ವಾದ್‌ದೇವಲಕ್ಷಣಂ ತಾವದಾಹ -ಅಭಯಮಿತ್ಯಾದಿ ಶ್ಲೋಕತ್ರಯೇಣ ॥**

**ಅನುವಾದ-** ಅವುಗಳಲ್ಲಿ ದೇವಲಕ್ಷಣವನ್ನು , ಅದು ಶ್ರೇಷ್ಠವಾದುದರಿಂದ, ಮೊದಲು ಹೇಳುತ್ತಾರೆ 'ಅಭಯಮ್.......' ಇತ್ಯಾದಿ ಮೂರು ಶ್ಲೋಕಗಳಿಂದ.

**ಅಭಯಂ ಸ್ವತೋಽನ್ಯಸ್ಯಾನ್ಯಸ್ಮಾಚ್ಚ ಸ್ವಸ್ಯ ಭಯಾಭಾವಃ । 'ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ' (12-15) ಇತ್ಯುಕ್ತೇಃ ।**

**ಅನುವಾದ- ಅಭಯಂ=** ತನ್ನಿಂದ ಪರರಿಗೆ, ಪರರಿಂದ ತನಗೆ ಭಯವಿಲ್ಲದಿರುವುದು.

'ಯಸ್ಮಾನ್ನೋದ್ವಿಜತೇಲೋಕೋ ಲೋಕಾನ್ನೋದ್ವಿಜತೇ ಚ ಯಃ' ಎಂದು (12.15) ಹೇಳಿರುವುದರಿಂದ .

**ಸತ್ತ್ವಸಂಶುದ್ಧಿಃ ಚಿತ್ತಪ್ರಸಾದಃ । ಜ್ಞಾನಯೋಗವ್ಯವಸ್ಥಿತಿಃ ಜ್ಞಾನೋಪಾಯ ನಿಷ್ಠತಾ । ದಾನಂ ಪಾತ್ರೇ ದ್ರವ್ಯಾದಿತ್ಯಾಗಃ । ದಮ ಇಂದ್ರಿಯನಿಗ್ರಹಃ । ಯಜ್ಞೋ ಜ್ಯೋತಿಷ್ಟೋಮಾದಿಃ । ದೇವಯಜ್ಞ ಪಿತೃಯಜ್ಞಾದಿರ್ವಾ । ಸ್ವಾಧ್ಯಾಯೋ ವೇದಾಧ್ಯಯನಮ್ । ತಪೋ ಬ್ರಹ್ಮಚರ್ಯಾದಿ । ಆರ್ಜವಂ ಮನೋವಾಕ್ಕರ್ಮಸ್ವೈಕರೂಪ್ಯಮ್ ॥ 1 ॥**

**ಅನುವಾದ- ಸತ್ತ್ವಸಂಶುದ್ಧಿಃ**= ಮನಸ್ಸಿನ ಪ್ರಸನ್ನತೆ, **ಜ್ಞಾನಯೋಗವ್ಯವಸ್ಥಿತಿಃ**= ಜ್ಞಾನ-ಮಾರ್ಗದಲ್ಲಿನಿಷ್ಠೆ, **ದಾನಂ** = ಅರ್ಹರಿಗೆ ವಿತ್ತ ಮೊದಲಾದವುಗಳನ್ನು ಕೊಡುವುದು, **ದಮ** = ಇಂದ್ರಿಯನಿಗ್ರಹ, **ಯಜ್ಞಃ** = ಜ್ಯೋತಿಷ್ಟೋಮ ಮೊದಲಾದವುಗಳು ಅಥವಾ ದೇವ -ಪಿತೃ-ಋಷಿ-ಮನುಷ್ಯ-ಭೂತಯಜ್ಞಗಳು. **ಸ್ವಾಧ್ಯಾಯಃ**= ವೇದಾಧ್ಯಯನ, **ತಪಃ**= ಬ್ರಹ್ಮಚರ್ಯ ಮೊದಲಾದವುಗಳು. **ಆರ್ಜವಂ**= ಮನಸ್ಸು -ಮಾತು-ಕೃತಿಗಳಲ್ಲಿ ಏಕರೂಪತೆ. ॥ 1 ॥

**ಅಹಿಂಸಾ ಪರಪ್ರಾಣಾವಿಯೋಜನಮ್ । ಸತ್ಯಂ ಯಥಾರ್ಥವಚನಮ್ । ಅಕ್ರೋಧಃ ಪರಪೀಡಾಕರಚಿತ್ತವಿಕಾರಾಭಾವಃ । ತ್ಯಾಗ ಔದಾರ್ಯಮ್ । ಶಾಂತಿಃ ಭಗವನ್ನಿಷ್ಠತಾ । ಅಪೈಶುನಂ ಪರೋಪದ್ರವನಿಮಿತ್ತದೋಷಾಣಾಂ ರಾಜಾದೇರ-ಕೀರ್ತನಮ್ । ಭೂತೇಷು ಪ್ರಾಣಿಷು ದಯಾಪರಹಿತಕರಶ್ಚಿತ್ತಗತೋ ಧರ್ಮ ವಿಶೇಷಃ । ಪರದುಃಖಾಸಹಿಷ್ಣುತ್ವಂ ವಾ । ಅಲೋಲುತ್ವಂ ವಿಷಯೇಷು ರಾಗಾಭಾವಃ। ಆತ್ಮಹಿಂಸಕೇಷ್ವಪ್ಯವಿರೋಧೋ ಮಾರ್ದವಂ ಅಕ್ರೌರ್ಯಂ ವಾ । ಹ್ರೀರಕಾರ್ಯ-ಕರಣೇ ಲಜ್ಜಾ । ಅಚಾಪಲಂ ಸ್ಥೈರ್ಯಮ್ ॥ 2 ॥**

**ಅನುವಾದ- ಅಹಿಂಸಾ** = ಪರರನ್ನು ಕೊಲ್ಲದಿರುವುದು, **ಸತ್ಯಂ**= ನಿಜನುಡಿ, **ಅಕ್ರೋಧಃ**= ಪರರಿಗೆ ಹಿಂಸೆಮಾಡುವಂತಹ ಚಿತ್ತವಿಕಾರವಿಲ್ಲದಿರುವಿಕೆ, **ತ್ಯಾಗಃ**= ಧಾರಾಳತನ, **ಶಾಂತಿ**= ಭಗವನ್ನಿಷ್ಠೆ , **ಅಪೈಶುನಂ**= ರಾಜ ಮೊದಲಾದವರಿಗೆ ಹೇಳುವುದರಿಂದ ತೊಂದರೆಯಾಗುವಂತಹ ಒಬ್ಬನ ದೋಷಗಳನ್ನು ಅವರಿಗೆ ಹೇಳದಿರುವುದು (ಚಾಡಿ ಹೇಳದಿರುವುದು), **ಭೂತೇಷು**= ಪ್ರಾಣಿಗಳಲ್ಲಿ , **ದಯಾ**= ಹಿತವುಂಟು ಮಾಡುವ ಮನಃಸ್ಥಿತಿ ಅಥವಾ ಪರರ ದುಃಖವನ್ನು ಸಹಿಸದಿರುವುದು, **ಅಲೋಲುತ್ವಂ** = ಭೋಗವಸ್ತುಗಳಲ್ಲಿ ಅತಿ ಆಸೆ ಇಲ್ಲದಿರುವುದು, **ಮಾರ್ದವಂ** = ತನಗೆ ಹಿಂಸೆ ಮಾಡಿದವರ ಮೇಲೂ ಅವಿರೋಧ ಅಥವಾ

ಕ್ರೌರ್ಯವಿಲ್ಲದ ಮನಃಸ್ಥಿತಿ, **ಹ್ರೀಃ**= ಕರ್ತವ್ಯಲೋಪದ ಬಗ್ಗೆ ನಾಚಿಕೆ, ಮಾಡಬೇಕಾದ ಕೆಲಸವನ್ನು ಮಾಡದ ಬಗ್ಗೆ ಲಜ್ಜೆ. **ಅಚಾಪಲಂ**= ಸ್ಥೈರ್ಯ. ॥ 2 ॥

**ತೇಜಃ ಪರೈರನಭಿಭವಃ । ಕ್ಷಮಾ ಕ್ರೋಧಾಭಾವೇನ ಸಹ ಅಪಕರ್ತುರನಪಕೃತಿಃ । ಧೃತಿರನಾತಂಕಃ । ಶೌಚಂ ಮೃತ್ತಿಕಾದಿಭಿರ್ಬಾಹ್ಯಶೌಚಮ್ । ಭಗವತ್ಸ್ಮೃತ್ಯಾದಿನಾಽಽಂತರಶೌಚಂ ಅದ್ರೋಹಃ ಪರವೃತ್ತ್ಯನುರೋಧಃ । ನಾತಿಮಾನಿತಾ ಅಹಂಕಾರರಾಹಿತ್ಯಮ್ । ಏತೇ ಗುಣಾಃ ದೈವೀಂ ದೇವಸಂಬಂಧಿನೀಂ ಸಮ್ಪದಮಭಿಜಾತಸ್ಯ ಪ್ರಾಪ್ತಸ್ಯ ಭವಂತಿ ।**

**ಅನುವಾದ- ತೇಜಃ**= ಪರರಿಂದ ದಬ್ಬಾಳಿಕೆಗೆ ಒಳಗಾಗದಂತಹ ಅಂತಃ ಶಕ್ತಿ, **ಕ್ಷಮಾ**= ಅಪಕಾರ ಮಾಡಿದವನ ಮೇಲೆ ಕೋಪವಿಲ್ಲದ ಮತ್ತು ಅಪಕಾರ ಮಾಡದ ಮನಃಸ್ಥಿತಿ, **ಧೃತಿಃ**= ಆತಂಕಕ್ಕೊಳಗಾಗದ ಮನಃಸ್ಥಿತಿ, **ಶೌಚಂ**= ಮಣ್ಣು ಮೊದಲಾದವುಗಳಿಂದ ಮಾಡಿಕೊಳ್ಳುವ ಬಹಿರಂಗಶುದ್ಧಿ ಭಗವಂತನ ಸ್ಮರಣೆ ಇತ್ಯಾದಿಗಳಿಂದ ಆಗುವ ಅಂತರಂಗಶುದ್ಧಿ. **ಅದ್ರೋಹಃ**= ಕೇಡನ್ನು ಬಯಸದಿರುವುದು, **ನಾತಿಮಾನಿತಾ**= ಅಹಂಕಾರವಿಲ್ಲದಿರುವಿಕೆ, **ಏತೇ ಗುಣಾಃ ದೈವೀಂ ದೇವಸಂಬಂಧಿನೀಂ ಸಂಪದಮಭಿಜಾತಸ್ಯ ಪ್ರಾಪ್ತಸ್ಯ ಭವಂತಿ**= ಈ ಗುಣಗಳು ದೇವಸ್ವಭಾವವನ್ನು ಹೊಂದಿದವರಲ್ಲಿ ಇರುತ್ತವೆ.

## 'ದೈವೀಂ ಸಂಪದಮಭಿಜಾತಸ್ಯ'ದ ವ್ಯಾಕರಣ

**ಅಭಿರಯಂ ಲಕ್ಷಣೇತ್ಥಂಭೂತಾಖ್ಯಾನೇತ್ಯುಕ್ತಲಕ್ಷಣಾರ್ಥಕಪ್ರತ್ಯರ್ಥೇ[1] ವರ್ತತ ಇತಿ ತಸ್ಯ ಕರ್ಮಪ್ರವಚನೀಯ ಸಂಜ್ಞಾಯಾಂ ಕರ್ಮಪ್ರವಚನೀಯಯುಕ್ತೇ ದ್ವಿತೀಯೇತಿ ದ್ವಿತೀಯೋಪಪತ್ತಿಃ ।**

**ಅನುವಾದ**– ಈ 'ಅಭಿ'ಯು '**ಲಕ್ಷಣೇತ್ಥಂಭೂತಾಖ್ಯಾನಭಾಗವೀಪ್ಸಾಸು ಪ್ರತಿಪರ್ಯನವಃ**' ಎಂಬ ಪಾಣಿನಿಸೂತ್ರ (1.4.90)ದಲ್ಲಿ ಹೇಳಿರುವ, **ಲಕ್ಷಣ**= ತಿಳಿಸುವ/ತಿಳಿಯಲು

---

1. ಈ ಪಾಠವು ರಾಜಾ. ಎಸ್. ಗುರುರಾಜಾಚಾರ್ಯರು ಸಂಪಾದಿಸಿ ಪ್ರಕಾಶಿಸಿದ ಮತ್ತು 1995 ರಲ್ಲಿ ಮಂತ್ರಾಲಯದ ಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠದಿಂದ ಪ್ರಕಟಿತ ಪುಸ್ತಕಗಳಲ್ಲಿ ಇದೆ.

**अभिरयं लक्षणा 'इत्थंभूताख्याने' इत्युक्तलक्षणार्थकप्रत्यर्थे कप्रत्यर्थे वर्तते-**

ಈ ಪಾಠವು ಇತ್ತೀಚೆಗೆ ಮುದ್ರಿತಪುಸ್ತಕ ಒಂದರಲ್ಲಿದೆ.

**अभिरयं लक्षणेत्थंभूताख्यानेत्युक्तलक्षणार्थः कः प्रत्यर्थे वर्तते-**

ಈ ಪಾಠವು ಹಸ್ತಪ್ರತಿಯೊಂದರಲ್ಲಿದೆ.

ಹೇತುವಾಗುವ ಎಂಬ ಅರ್ಥದ 'ಪ್ರತಿ'ಯ ಅರ್ಥದಲ್ಲಿ ಇದೆ ; ಆದ್ದರಿಂದ ಈ 'ಅಭಿ'ಗೆ **'ಅಭಿರಭಾಗೇ'** ಎಂಬ ಪಾಣಿನಿಸೂತ್ರಕ್ಕನುಗುಣವಾಗಿ ಕರ್ಮಪ್ರವಚನೀಯ ಸಂಜ್ಞೆ. ಇದರ ಅನ್ವಯವಿರುವ 'ಸಂಪದ್' ಶಬ್ದಕ್ಕೆ **'ಕರ್ಮ ಪ್ರವಚನೀಯ ಯುಕ್ತೇ ದ್ವಿತೀಯಾ'** ಎಂಬ ಪಾಣಿನಿ ಸೂತ್ರ (2.3.8)ದಿಂದ ದ್ವಿತೀಯಾ ವಿಭಕ್ತಿಯು ಯುಕ್ತವಾಗಿದೆ.

**ವಿವರಣೆ-** ಪ್ರಕೃತ ಗೀತಾಶ್ಲೋಕದಲ್ಲಿ **'ದೈವೀಂ ಸಂಪದಮಭಿಜಾತಸ್ಯ'** ಎಂದಿದೆ. ಇಲ್ಲಿ 'ದೈವೀಂ' ಮತ್ತು ಸಂಪದಂ' ಶಬ್ದಗಳು ದ್ವಿತೀಯಾ ವಿಭಕ್ತಿಯಲ್ಲಿವೆ. ಪಾಣಿನಿ ವ್ಯಾಕರಣದ ನಿಯಮದಂತೆ 'ಕರ್ಮ' ವಾಚಕ ಶಬ್ದಕ್ಕೆ ದ್ವಿತೀಯಾ ವಿಭಕ್ತಿಯು ಯುಕ್ತ. ಆದರೆ **'ಸಂಪದ್'** ಶಬ್ದದ ಅರ್ಥವು 'ಅಭಿಜಾತ' ಶಬ್ದದ ಅರ್ಥದಲ್ಲಿ ಅಡಕವಾಗಿರುವ 'ಜನನ' ಕ್ರಿಯೆಯ ಕರ್ಮವಲ್ಲ. ಆದ್ದರಿಂದ 'ಸಂಪದ್'ಶಬ್ದವನ್ನು ದ್ವಿತೀಯಾ ವಿಭಕ್ತಿಯಲ್ಲಿ ಪ್ರಯೋಗಿಸಿರುವುದು ಹೇಗೆ ?

ಈ ಪ್ರಶ್ನೆಗೆ ಉತ್ತರವನ್ನು ಗೀತಾವಿವೃತಿಯಲ್ಲಿ ಹೇಳಿದ್ದಾರೆ. ಅದು ಹೀಗೆ- 'ಕರ್ಮ'ವಾಚಕ ಶಬ್ದಗಳಿಗೆ ದ್ವಿತೀಯಾವಿಭಕ್ತಿ ಎಂದು ಸಾಮಾನ್ಯ ನಿಯಮ. ಭಾಷೆಯಲ್ಲಿ ಸಾಮಾನ್ಯ ನಿಯಮದ ಜೊತೆಗೆ ವಿಶೇಷನಿಯಮಗಳೂ ಇವೆ. ದ್ವಿತೀಯಾವಿಭಕ್ತಿಗೆ ಕಾರಣವಾಗುವ ವಿಶೇಷ ನಿಯಮಗಳಲ್ಲಿ ಒಂದನ್ನು **'ಕರ್ಮ ಪ್ರವಚನೀಯಯೋಗ'** ವೆಂದು ಪಾಣಿನಿಯು ಗುರುತಿಸಿದ್ದಾನೆ. ಈ **ಕರ್ಮಪ್ರವಚನೀಯ** ಸಂಜ್ಞೆಯು ಪ್ರಕೃತ **'ಅಭಿ'**ಗೆ ಇದೆ. ಆದ್ದರಿಂದ ಪ್ರಕೃತ, **'ಕರ್ಮ-ಪ್ರವಚನೀಯ'** **'ಅಭಿ'**ಯ ಸಂಬಂಧವಿರುವ **'ಸಂಪದ್'** ಶಬ್ದಕ್ಕೆ ದ್ವಿತೀಯಾ ವಿಭಕ್ತಿಯು ಯುಕ್ತ. 'ದೈವೀ' ಶಬ್ದವು **'ಸಂಪದ್'**ಶಬ್ದಕ್ಕೆ ವಿಶೇಷಣವಾದ್ದರಿಂದ ಇದಕ್ಕೂ ದ್ವಿತೀಯಾವಿಭಕ್ತಿಯು ಯುಕ್ತ.

## ಮೂರು ಶ್ಲೋಕಗಳ ವಿವೃತಿಯ ಉಪಸಂಹಾರ

**ತಥಾ ಚೈತ ಏವ ಗುಣಾಃ ಮುಮುಕ್ಷುಣಾऽವಶ್ಯಮುಪಾದೇಯಾ ಇತಿ ಭಾವಃ ॥ 3 ॥**

**ಅನುವಾದ-** ಆದ್ದರಿಂದ ಮೋಕ್ಷವನ್ನು ಬಯಸುವ ಸಾಧಕನು ಈ ಗುಣಗಳನ್ನು ಮಾತ್ರವೇ ತನ್ನದಾಗಿಸಿಕೊಳ್ಳಲೇಬೇಕು ಎಂದು ಅಭಿಪ್ರಾಯ. ॥ 3 ॥

## ಅಸುರರ ಲಕ್ಷಣ

**ದಂಭೋ ದರ್ಪೋऽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥ 4 ॥**

**ಅರ್ಥ-** ಪಾರ್ಥ ! ಆಸುರೀ ಸಂಪತ್ತನ್ನು ಹೊಂದಿದವನಿಗೆ ಬೂಟಾಟಿಕೆ, ಸೊಕ್ಕು, ಬಿಂಕ, ಸಿಡುಕು, ಒರಟುತನ ಮತ್ತು ಅಜ್ಞಾನ – ಇವುಗಳು ಇರುತ್ತವೆ.

**ತ್ಯಾಗಾಯಾಸುರಲಕ್ಷಣಮಾಹ - ದಂಭ ಇತಿ ॥**

**ಅನುವಾದ-** ಅಸುರಲಕ್ಷಣಗಳನ್ನು, ಅವುಗಳನ್ನು ಬಿಡುವುದಕ್ಕಾಗಿ, ಹೇಳುತ್ತಾನೆ.

**ಆತ್ಮಾಽಲ್ಪತ್ವಂ ಜ್ಞಾತ್ವಾಽಪಿ ಮಹತ್ತ್ವಪ್ರದರ್ಶನಂ ದಂಭಃ ।**

**ಅನುವಾದ-** ತನ್ನ ಸಾಧನೆ, ಸಿದ್ಧಿ , ಯೋಗ್ಯತೆಗಳು ಕಡಿಮೆ ಎಂದು ತಿಳಿದಿದ್ದರೂ ಹೆಚ್ಚುಗಾರಿಕೆಯ ಪ್ರದರ್ಶನವು ದಂಭ.

**ದರ್ಪಃ ಸತ್ಯಪಿ ಭಯಕಾರಣೇ ಮದಾತ್ತದಭಾವದರ್ಶನಮ್ ।**

**ಅನುವಾದ-** ಭಯಪಡಲು ಕಾರಣಗಳಿದ್ದರೂ, ಮದದಿಂದ, ಅವುಗಳಿಲ್ಲವೆಂದು ತೋರಿಸಿಕೊಳ್ಳುವುದು.

**ಅಭಿಮಾನಃ ಪ್ರಮಾಣಾತಿಕ್ರಮಃ ।**

**ಅನುವಾದ-** ಪ್ರಮಾಣದ ಅಥವಾ ಮಿತಿಯ ಉಲ್ಲಂಘನೆ.

**ಕ್ರೋಧಃ ಪರಪೀಡಾಕರಚಿತ್ತವಿಕಾರಃ ।**

**ಅನುವಾದ-** ಕ್ರೋಧ= ಪರರಿಗೆ ಪೀಡೆಯುಂಟು ಮಾಡುವ ಮನೋವಿಕಾರ

**ಪಾರುಷ್ಯಂ ನಿಷ್ಠುರತ್ವಮ್ ।**

**ಅನುವಾದ-** ಪಾರುಷ್ಯ= ನಿಷ್ಠುರವರ್ತನೆ.

**ಆಸುರೀಂ ಸಂಪದಮಭಿಜಾತಸ್ಯೇತ್ಯಸ್ಯ ಪ್ರಾಗಿವಾರ್ಥಃ । ತೇನ ಜಾತಸ್ಯೇತ್ಯ-ಕರ್ಮಕತ್ವಾತ್ಸಂಪದಮಿತಿ ನ ದ್ವಿತೀಯಾನುಪಪತ್ತಿದೋಷಃ ॥ 4 ॥**

**ಅನುವಾದ-** ಶ್ಲೋಕದಲ್ಲಿನ '**ಆಸುರೀಂ ಸಂಪದಮಭಿಜಾತಸ್ಯ**'– ಈ ವಾಕ್ಯಭಾಗಕ್ಕೆ ಮೇಲಿನ ಶ್ಲೋಕದಲ್ಲಿ ಹೇಗೆ ಹಾಗೆ ಅರ್ಥ. ಆದ್ದರಿಂದ '**ಜಾತಸ್ಯ**' ಎಂಬ ಪದದ ಅರ್ಥದಲ್ಲಿ ಅಡಕವಾಗಿರುವ ಜನನ ಕ್ರಿಯೆಯು ಅಕರ್ಮಕವಾದ್ದರಿಂದ '**ಸಂಪದಮ್**' ಎಂಬ ಪ್ರಯೋಗದಲ್ಲಿ ದ್ವಿತೀಯಾವಿಭಕ್ತಿಯು ಸರಿಯಲ್ಲ– ಈ ದೋಷವು ಇಲ್ಲ . ಮೂರನೆಯ ಶ್ಲೋಕದ ಗೀತಾವಿವೃತಿಯ ಅನುವಾದದ ವಿವರಣೆಯನ್ನು ನೋಡಿ. ॥ 4 ॥

**ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।**
**ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವಃ ॥ 5 ॥**

**ಅರ್ಥ**- ದೈವೀ ಸಂಪತ್ತು ವಿವಿಧ ಮುಕ್ತಿಯ ದಾರಿ. ಆಸುರೀ ಸಂಪತ್ತು ನೀಚತಮಸ್ಸಿನ ನಿವಾಸದ ದಾರಿ. ಪಾಂಡುಪುತ್ರ ! ಕೊರಗಬೇಡ, ನೀನು ದೈವೀ ಸಂಪತ್ತನ್ನು ಹೊಂದಿರುವಿ.

**ದೈವಸಮ್ಪದಾದೇಃ ಫಲಂ ಸಂದರ್ಶಯನ್ನರ್ಜುನಸ್ಯಾಸುರಸ್ವಭಾವಶಂಕಾಂ ವಾರಯತಿ ।**

**ಅನುವಾದ**- ದೈವೀ ಮೊದಲಾದ ಸಂಪತ್ತಿನ ಪ್ರಯೋಜನವನ್ನು ತೋರಿಸಿ, ಅರ್ಜುನನ, ತಾನು ಅಸುರಸ್ವಭಾವದವನೆ ? , ಎಂಬ ಶಂಕೆಯನ್ನು ಪರಿಹರಿಸುತ್ತಾನೆ.

**ಅಭಿಜಾತೋಽಸಿ ಪ್ರಾಗಿವಾರ್ಥಃ । ಜಾತಸ್ಯ ತವ ದೈವೀಸಂಪಲ್ಲಕ್ಷಣ-ಮಿತ್ಯರ್ಥಃ। 'ವೃಕ್ಷಂ ಪ್ರತಿ ವಿದ್ಯೋತತ' ಇತ್ಯತ್ರ ವೃಕ್ಷ ಇವ ಪ್ರದ್ಯೋತಸ್ಯೇತಿ ।**

**ಅನುವಾದ**- '**ಅಭಿಜಾತೋಽಸಿ**'- ಇಲ್ಲಿಯ '**ಅಭಿಜಾತ**' ಪದಕ್ಕೆ ಮೇಲೆ ಹೇಳಿದಂತೆಯೇ ಅರ್ಥ. ದೈವೀಸಂಪತ್ತು ನಿನ್ನ ಸತ್ಕುಲಪ್ರಸೂತಿಯ ಸೂಚಕ ಎಂದು ಅರ್ಥ. '**ವೃಕ್ಷಂ**' ಪ್ರತಿ ವಿದ್ಯೋತತೇ ವಿದ್ಯುತ್' ಎಂಬ ವಾಕ್ಯದಲ್ಲಿ ವಿದ್ಯುತ್‌ಗೆ ವೃಕ್ಷದಂತೆ.

**ವಿವರಣೆ**- '**ವೃಕ್ಷಂ ಪ್ರತಿ ವಿದ್ಯೋತತೆ ವಿದ್ಯುತ್**'- ಈ ವಾಕ್ಯದ ಸಂದರ್ಭ ಹೀಗಿದೆ ಮಿಂಚು ಮೂಡಿದಾಗ ಮರ ಮೊದಲಾದ ವಸ್ತುಗಳು ಬೆಳಗುತ್ತವೆ. ಮುಂದಿನ ಕ್ಷಣದಲ್ಲಿ ಮಿಂಚ ಇರುವುದಿಲ್ಲ; ಮರದ ಬೆಳಗೂ ಇರುವುದಿಲ್ಲ. ಆದರೆ ಮರ ಬೆಳಗಿದಾಗ ಅದನ್ನು ನೋಡಿದವರ ಮುಂದಿನ ಕ್ಷಣದಲ್ಲಿ ಮರದಲ್ಲಿ ನೋಡಿದ ಉಜ್ವಲತೆಯನ್ನು ಆಧರಿಸಿ ಮೂಡಿಹೋದ ಮಿಂಚನ ಊಹಿಸುತ್ತಾರೆ. ಈ ಮಿಂಚಿನ ಊಹೆಯನ್ನು '**ವೃಕ್ಷಂ ಪ್ರತಿ ವಿದ್ಯೋತತೇ ವಿದ್ಯುತ್**' ಎಂ ಪದಗುಚ್ಛದಿಂದ ಹೇಳುತ್ತಾರೆ. 'ಬೆಳಗಿದ ಮರ ಮಿಂಚನ್ನು ತಿಳಿಸುತ್ತದೆ ' ಎಂದು ಈ ಪದಗುಚ್ಛ ಅರ್ಥ. ಅಂತೆಯೇ ದೈವೀ ಸಂಪತ್ತು ನಿನ್ನ ಜನನದ ಶ್ರೇಷ್ಠತೆಗೆ, **ಜ್ಞಾಪಕ**= ಶ್ರೇಷ್ಠತೆಯನ್ನು ತಿಳಿಸುತ್ತ ಎಂದು '**ದೈವೀಂ ಸಂಪದಮ್ ಅಭಿಜಾತೋಽಸಿ**' ಎಂಬ ಪದಗುಚ್ಛದ ಅರ್ಥ.

**ಅತೋ ಮಾ ಶುಚಃ । ಶೋಕಂ ಮಾ ಕಾರ್ಷೀಃ ।**

**ಅನುವಾದ**- ಆದ್ದರಿಂದ **ಮಾ ಶುಚಃ** = ಶೋಕಿಸಬೇಡ.

**ನಿಬಂಧನಂ ನೀಚಸ್ಥಾನೇ ತಮಸಿ ನಿವಾಸಃ ।**

**ಅನುವಾದ**- **ನಿಬಂಧನಂ** = ನೀಚಸ್ಥಾನವಾದ ತಮಸ್ಸಿನಲ್ಲಿ ನಿವಾಸ.

**ವಿವರಣೆ**- ಶ್ಲೋಕದಲ್ಲಿರುವ 'ನಿಬಂಧಾಯ' ಪದದ ಅರ್ಥದಲ್ಲಿ ಅಡಕವಾಗಿರ 'ನಿಬಂಧನ'ದ ಅರ್ಥವನ್ನು ವಿವೃತಿಯು ಹೇಳಿದೆ.

**ವಿಮೋಕ್ಷಾಯ ವಿವಿಧಮೋಕ್ಷಾಯೇತ್ಯುಕ್ತ್ಯಾ ಮೋಕ್ಷಸ್ಯ ನಾನಾತ್ವಮುಚ್ಯತೇ ॥ 5 ॥**

**ಅನುವಾದ-** ವಿಮೋಕ್ಷಾಯ= ವಿವಿಧ ಮುಕ್ತಿಗೆ. ಈ ಉಕ್ತಿಯಿಂದ ಮುಕ್ತಿಯು ನಾನಾ ವಿಧವೆಂದು ಹೇಳಲ್ಪಡುತ್ತಿದೆ. ॥ 5 ॥

**ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।**
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥ 6 ॥**

**ಅರ್ಥ** – ಈ ಪ್ರಪಂಚದಲ್ಲಿ ಪ್ರಾಣಿಸಂಕುಲದ ಸೃಷ್ಟಿ ಅಥವಾ ಸ್ವಭಾವ ಎರಡು ವಿಧ – ದೈವ ಮತ್ತು ಆಸುರ. ದೈವವನ್ನು ವಿಸ್ತಾರವಾಗಿ ಈಗಾಗಲೇ ಹೇಳಲಾಗಿದೆ. ಪಾರ್ಥ! ಆಸುರವನ್ನು ಕೇಳು.

## ಎರಡು ಮಾನದಂಡ ಎರಡು ವಿಧ ಸೃಷ್ಟಿ

**ನನು ಸರ್ಗಾಣಾಮತಿಬಹುತ್ವಾದ್‌ದೇವಾಸುರಯೋರೇವೋಕ್ತಿಃ ಕಥಮಿತ್ಯತಃ ಶುಭಾಶುಭಫಲಾಧಿಕ್ಯಾದಿಭಾಕ್ತ್ವರೂಪಪೂರ್ವಶ್ಲೋಕೋಕ್ತೋಪಾಧಿದ್ವಯ-ವಿವಕ್ಷಯಾ ದ್ವಯೋರೇವೋಕ್ತಿರಿತಿ ಭಾವೇನಾಹ- ದ್ವಾವಿತಿ ॥**

**ಅನುವಾದ-** ಸೃಷ್ಟಿಯಲ್ಲಿ ಬಹಳ ಬಹಳ ವೈವಿಧ್ಯವಿದೆ. ಆದರೂ ದೈವ ಮತ್ತು ಆಸುರ ಎಂಬ ಎರಡೇ ಪ್ರಕಾರಗಳನ್ನು ಹೇಳಲಾಗಿದೆ. ಇದು ಹೇಗೆ ? ಹೀಗೆ- ಹಿಂದಿನ ಶ್ಲೋಕದಲ್ಲಿ ಹೇಳಿರುವ ಮುಕ್ತಿ ಅಧಿಕ ಶುಭ ಫಲ' ತಮಸ್ ಅಧಿಕ ಅಶುಭಫಲ ; ಮೊದಲನೆಯದನ್ನು ಪಡೆಯುವವರು ಒಂದು ವರ್ಗ; ಎರಡನೆಯದನ್ನು ಪಡೆಯುವವರು ಇನ್ನೊಂದು ವರ್ಗ. ಅಧಿಕ ಶುಭ ಫಲ ಮತ್ತು ಅಧಿಕ ಅಶುಭ ಫಲ– ಈ ಎರಡು ಮಾನದಂಡ ಅಥವಾ ವಿಭಾಜಕಗಳನ್ನು ಅವಲಂಬಿಸಿದ ವಿಭಾಗ ಎರಡೇ. ಆದ್ದರಿಂದ ಎರಡೇ ಪ್ರಕಾರಗಳ ಉಕ್ತಿ ಎಂಬ ಅಭಿಪ್ರಾಯದಿಂದ ಹೇಳುತ್ತಾನೆ– ದ್ವೌ ಎಂದು.

**ದೈವ ಆಸುರಶ್ಚೇತಿ ದ್ವಾವೇವ ಪ್ರಾಣಿನಾಂ ಸರ್ಗೌ ಸೃಷ್ಟೀ । ಭೂತಸರ್ಗೌ ಪ್ರಾಣಿಸ್ವಭಾವಾವಿತಿ ವಾ । ತದುಭಯಜಿಜ್ಞಾಸಾಯಾಮಾಹ-ದೈವ ಇತಿ ॥**

**ಅನುವಾದ-** ದೈವ ಮತ್ತು ಆಸುರ ಎಂದು ಎರಡೇ ಪ್ರಾಣಿಸಂಕುಲದ ಸೃಷ್ಟಿ ಅಥವಾ ಸ್ವಭಾವ. ಅವೆರಡನ್ನು ತಿಳಿಯುವ ಇಚ್ಛೆಯಿರುವಾಗ ಹೇಳುತ್ತಾನೆ **ದೈವವನ್ನು ವಿಸ್ತಾರವಾಗಿ ಹೇಳಿದ್ದೇನೆ** ಎಂದು.

**ಶೃಣ್ವಿತಿ ವಿಸ್ತರಶ ಇತ್ಯನುಷಂಗಃ ॥ 6 ॥**

**ಅನುವಾದ-** (ಶ್ಲೋಕದಲ್ಲಿರುವ) 'ಶೃಣು' ಪದದ ಅನಂತರವೂ 'ವಿಸ್ತರಶಃ' ಎಂಬ ಪದವನ್ನು ತಂದು ಸೇರಿಸಿಕೊಳ್ಳಬೇಕು. ॥ 6 ॥

## ಅಸುರ ಸ್ವಭಾವ

**ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥ 7 ॥**

**ಅರ್ಥ-** ಅಸುರ ಸ್ವಭಾವದವರು ಸರಿಯಾದ ಮಾರ್ಗದಲ್ಲಿ ಪ್ರವೃತ್ತಿಯನ್ನು , ತಪ್ಪು ಮಾರ್ಗದಿಂದ ನಿವೃತ್ತಿಯನ್ನು ತಿಳಿದಿರುವುದಿಲ್ಲ . ಅವರಲ್ಲಿ ಶುಚಿತ್ವವಿಲ್ಲ , ಒಳ್ಳೆಯ ನಡವಳಿಕೆ ಇಲ್ಲ; ಸತ್ಯವೂ ಇಲ್ಲ.

**ತದಾಹ- ಪ್ರವೃತ್ತಿಮಿತ್ಯಾದಿದ್ವಾದಶಶ್ಲೋಕೈಃ ॥**

**ಅನುವಾದ-** 'ಪ್ರವೃತ್ತಿಮ್' ಎಂಬ ಪದದಿಂದ ಆರಂಭವಾಗುವ ಹನ್ನೆರಡು ಶ್ಲೋಕಗಳಿಂದ, ಅದನ್ನು = ಆಸುರಸ್ವಭಾವವನ್ನು ಹೇಳುತ್ತಾನೆ.

**ಆಸುರಾ ಜನಾಃ ವಿಹಿತೇ ಪ್ರವೃತ್ತಿಂ ನಿಷಿದ್ಧೇ ನಿವೃತ್ತಿಂ ಚ ನ ವಿದುಃ । ತೇಷು ಶೌಚಾಚಾರಸತ್ಯಾನಿ ನ ವಿದ್ಯಂತೇ ।**

**ಅನುವಾದ-** ಆಸುರ ಸ್ವಭಾವದ ಜನರು ಶಾಸ್ತ್ರಗಳು / ಕಾನೂನುಗಳು ವಿಧಿಸುವ ರಚನಾತ್ಮಕ ಕೆಲಸಗಳಲ್ಲಿ ತೊಡಗಲಾರರು. ನಿಷೇಧಿಸುವ ಕೇಡುಗಳಿಂದ ದೂರವಿರಲಾರರು. ಅವರಲ್ಲಿ ಶುಚಿತ್ವ, ಒಳ್ಳೆಯ ನಡವಳಿಕೆ ಮತ್ತು ಸತ್ಯನುಡಿಗಳು ಇರುವುದಿಲ್ಲ.

**ತಾತ್ಪರ್ಯದ್ಯೋತನಾಯ ನಞ್ ತ್ರಯೋಕ್ತಿಃ ॥ 7 ॥**

**ಅನುವಾದ-** ಈ ವಿಷಯದಲ್ಲಿ ತಾತ್ಪರ್ಯವಿದೆ ಎಂದು ತಿಳಿಸುವುದಕ್ಕಾಗಿ ಮೂರು ನಞ್‌ಗಳ ಉಕ್ತಿ. ॥ 7 ॥

**ವಿವರಣೆ-** ತತ್= ಪದದಿಂದ ಅಥವಾ ಪದಗುಚ್ಛದಿಂದ ಪ್ರಕಟವಾಗುತ್ತಿರುವ ಅರ್ಥವು **ಪರಂ**= ಪ್ರಧಾನ ಅಥವಾ ಮುಖ್ಯ , **ಯಸ್ಯ**= ಯಾವುದಕ್ಕೆ , **ತತ್**= ಆ ಪದ ಅಥವಾ ಪದಗುಚ್ಛವು ತತ್ಪರ. **ತತ್ಪರಸ್ಯ ಭಾವಃ**= ತಾತ್ಪರ್ಯ. '**ಸೂರ್ಯನು ಅಸ್ತಂಗತನಾಗುತ್ತಿದ್ದಾನೆ**' ಎಂಬ ಪದಗುಚ್ಛಕ್ಕೆ 'ಸೂರ್ಯನು ಅಸ್ತಂಗಮನ ಕ್ರಿಯೆಯನ್ನು ಮಾಡುತ್ತಿದ್ದಾನೆ ' ಎಂದು ಶ ವೃತ್ತಿಜ್ಞೇಯವಾದ ಅರ್ಥ. ಆದರೆ ಹೀಗೆ ಹೇಳಿದವನಿಗೆ ಈ ಅಭಿಪ್ರಾಯವನ್ನು ಪ್ರಕಟಿಸುಃ ಆಶಯವಿಲ್ಲ. 'ಸಂಧ್ಯಾವಂದನೆಯ ಸಮಯ' ಎಂದು ತಿಳಿಸುವುದು ಮುಖ್ಯ ಆಶಯ. ಆದ್ದರಿಂ

ಈ ಆಶಯವೇ ಈ ಪದಗುಚ್ಛದ ಪ್ರಧಾನ ಅರ್ಥ. ಇದೇ ತಾತ್ಪರ್ಯ. ಪ್ರಕೃತ ಶ್ಲೋಕದ ಎರಡನೆಯ ಸಾಲಿನಲ್ಲಿ ನ **ಶೌಚಂ, ನ ಆಚಾರಃ,** ನ ಸತ್ಯಂ ಎಂದು ಮೂರುಸಲ 'ನಞ್'ಅನ್ನು ಪ್ರಯೋಗಿಸಲಾಗಿದೆ. ಒಂದೆ ಸಲ ಪ್ರಯೋಗಿಸಿ ಮೂರುಕಡೆ ಅನ್ವಯಿಸಲು ಅವಕಾಶವಿದೆ. ಆದರೂ ಮೂರು ಸಲ ಉಕ್ತಿಯು ಶೌಚಾಭಾವ, ಆಚಾರಾಭಾವ, ಸತ್ಯಾಭಾವಗಳು ಈ ಪದಗುಚ್ಛಗಳ ಮುಖ್ಯ ಆಶಯ ಎಂದು ತಿಳಿಸುವುದಕ್ಕಾಗಿ. ಒಂದೆ 'ನಞ್' ಅನ್ನು ಪ್ರಯೋಗಿಸಿ ಮೂರುಕಡೆ ಅನ್ವಯಿಸಿದ್ದಿದ್ದರೆ 'ಶೌಚ ಇತ್ಯಾದಿಗಳು ಅಲ್ಪ' ಎಂದಾಗಲಿ, 'ಶೌಚ ಇತ್ಯಾದಿಗಳು ಇಲ್ಲದವರ ಸಹವಾಸ ಮಾಡಿದವರು' ಎಂದಾಗಲಿ ಅಲ್ಪ ಅರ್ಥವನ್ನು ಚಿಂತಿಸಲು ಅವಕಾಶವಿರುತ್ತಿತ್ತು. ಮೂರು 'ನಞ್'ಗಳ ಉಕ್ತಿಯಿಂದ ಅಲ್ಪ ಅರ್ಥಗಳನ್ನು ಚಿಂತಿಸುವಂತಿಲ್ಲ; 'ಶೌಚ' ಇತ್ಯಾದಿಗಳ ಪೂರ್ಣಪ್ರಮಾಣದ ಅಭಾವವೇ ಮುಖ್ಯ ಆಶಯ ಎಂದು ತಿಳಿಯುತ್ತದೆ.

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**
**ಅಪರಸ್ಪರಸಂಭೂತಂ ಕಿಮನ್ಯತ್ ಕಾಮಹೈತುಕಮ್ ॥ 8 ॥**

**ಅರ್ಥ**- 1. ಅವರು ವಿಷ್ಣು ಈ ಜಗತ್ತಿನ ಸಂಹಾರಕಾರಣನಲ್ಲ ; ಸ್ಥಿತಿಕಾರಣ ಅಲ್ಲ; ನಿಯಾಮಕನೂ ಅಲ್ಲ ಎಂದು ಹೇಳುತ್ತಾರೆ. ಒಂದರಿಂದ ಇನ್ನೊಂದು ಕ್ರಮವಾಗಿ ಹುಟ್ಟಿತು ಎಂದೂ ಒಪ್ಪುವುದಿಲ್ಲ. ಇನ್ನೇನು ? ಬೇರೆಯೇ, ಕಾಮಹೇತುವಾದ ಅವಿದ್ಯಾಪರಿಣಾಮ ಎಂದು ಹೇಳುತ್ತಾರೆ.

2. ಅವರು ಜಗತ್ತು ಸತ್ಯ ಅಲ್ಲ; ಅದು ಸ್ಥಿರವಲ್ಲ = ತತ್ವಜ್ಞಾನದಿಂದ ನಾಶವಾಗುತ್ತದೆ; ಅದಕ್ಕೆ ನಿಯಾಮಕ ಇಲ್ಲ; ಅದು ಕ್ರಮವಾಗಿ ಹುಟ್ಟಿಲ್ಲ; ಇನ್ನೇನು ? ಸದಸದ್ವಿಲಕ್ಷಣ, ಮಾಯೆಯ ಪರಿಣಾಮ ಎಂದು ಹೇಳುತ್ತಾರೆ.

**ಕಿಂಚ ಜಗದಸತ್ಯಮ್ । ಅತ್ರ ಸತ್ಯಪ್ರತಿಷ್ಠೇಶ್ವರಶಬ್ದಾ ವಿಷ್ಣುಪರಾಃ । ನಞ್-ಬಹುವ್ರೀಹಿಃ । ಜಗದ್‌ವಿಶರಣಕರ್ತೃತಯಾ ಸತ್ಯಪದವಾಚ್ಯವಿಷ್ಣುಹೀನಮಾಹುಃ । ಸ್ಥಿತಿಹೇತುತಯಾ ಪ್ರತಿಷ್ಠಾಪದೋಕ್ತವಿಷ್ಣುಹೀನಮಾಹುಃ । ಅನೀಶ್ವರಂ ಸ್ವಾಮಿ-ಹೀನಮಾಹುಃ ।**

**ಅನುವಾದ**- ಮತ್ತು ಜಗತ್ತನ್ನು ಅಸತ್ಯ- ಈ ಶ್ಲೋಕದಲ್ಲಿ ಸತ್ಯ, ಪ್ರತಿಷ್ಠಾ, ಈಶ್ವರ ಶಬ್ದಗಳು ವಿಷ್ಣುವಾಚಕಗಳು. 'ನಞ್' ಮತ್ತು ಈ ಶಬ್ದಗಳಿಗೆ ಬಹುವ್ರೀಹಿಸಮಾಸ- ಜಗತ್ತಿನ ನಾಶಕರ್ತೃವಾದ್ದರಿಂದ ಸತ್ಯಪದವಾಚ್ಯನಾದ ವಿಷ್ಣುಹೀನ ಎಂದು ಹೇಳುತ್ತಾರೆ. (ಜಗತ್ತಿನ) ಸ್ಥಿತಿ ಕಾರಣನಾದ್ದರಿಂದ ಪ್ರತಿಷ್ಠಾಪದದಿಂದ ವಾಚ್ಯನಾದ ವಿಷ್ಣುಹೀನ ಎಂದು ಹೇಳುತ್ತಾರೆ. **ಅನೀಶ್ವರಂ**= ಸ್ವಾಮಿಹೀನ ಎಂದು ಹೇಳುತ್ತಾರೆ.

**ವಿವರಣೆ–**

ನ ವಿದ್ಯತೇ ಸತ್ಯಃ ಸಂಹಾರಹೇತುತಯಾ ಯಸ್ಯ ತತ್ ಅಸತ್ಯಮ್ ।

ನ ವಿದ್ಯತೇ ಪ್ರತಿಷ್ಠಾ ಸ್ಥಿತಿಹೇತುತಯಾ ಯಸ್ಯ ತತ್ ಅಪ್ರತಿಷ್ಠಮ್ ।

ನ ವಿದ್ಯತ ಈಶ್ವರಃ ನಿಯಾಮಕತಯಾ ಯಸ್ಯ ತತ್ ಅನೀಶ್ವರಮ್ ।

**ಜಗತ್ಸ್ರಷ್ಟ್ರ್ಯಾದಿಕರ್ತಾರಂ ಯೇ ನ ಜಾನಂತಿ ತ ಇತಿ ಚಾಹುರಾಸುರಜನಾ ಇತ್ಯನುಷಂಗಃ ।**

**ಅನುವಾದ –** 'ಜಗತ್ತಿನ ಸೃಷ್ಟ್ಯಾದಿಕರ್ತನನ್ನು ಒಪ್ಪದ ಆ ಅಸುರಸ್ವಭಾವದ ಜನರು ಹೀಗೂ ಹೇಳುತ್ತಾರೆ' ಎಂದು ಹಿಂದಿನ ಶ್ಲೋಕದಿಂದ 'ಜನಾ ನ ವಿದುರಾಸುರಾಃ' ಎಂಬ ಭಾಗವನ್ನು ಇಲ್ಲಿಗೂ ತಂದು ಸೇರಿಸಬೇಕು.

**'ಅಪರಸ್ಪರಸಂಭೂತಂ', 'ಅನ್ನಾದ್ ಭವಂತಿ ಭೂತಾನಿ' ಇತಿ (3-14) ತೃತೀಯೋಕ್ತದಿಶಾ ಪರಸ್ಪರ ಸಂಭೂತಂ ನ ಭವತೀತ್ಯರ್ಥಃ ।**

**ಅನುವಾದ–** ಮೂರನೇ ಅಧ್ಯಾಯದ **'ಅನ್ನಾದ್ ಭವಂತಿ ಭೂತಾನಿ'** ಇತ್ಯಾದಿಶ್ಲೋಕದಲ್ಲಿ ಹೇಳಿದಂತೆ ಒಂದರಿಂದ ಒಂದು ಕ್ರಮವಾಗಿ ಹುಟ್ಟಿಲ್ಲ ಎಂದು ಅರ್ಥ.

**ಯದ್ವಾ ಜಗದಸತ್ಯಂ ಸತ್ಯಂ ನ । ಮಿಥ್ಯೇತ್ಯರ್ಥಃ । ಅತ ಏವ, ಶುಕ್ತಿರೂಪ್ಯವನ್ನ ಪ್ರತಿತಿಷ್ಠತೀತ್ಯಪ್ರತಿಷ್ಠಂ ಜ್ಞಾನಬಾಧ್ಯಮ್ । ಅನೀಶ್ವರಂ ನಿಯಂತೃಹೀನಮ್ । ಅಪರಸ್ಪರಸಂಭೂತಂ ಪರೇಭ್ಯಃ ಸಂಭವಹೀನಮ್ । ಏಕಸ್ಮಾದೇಕಸ್ಯ ಜನಿರ್ನೇತಿ ಯಾವತ್ ।**

**ಅನುವಾದ–** ಅಥವಾ ಜಗತ್ತು **ಅಸತ್ಯಂ**= ಸತ್ಯಂ ನ, ಮಿಥ್ಯಾ ಎಂದು ಅರ್ಥ. ಆದ್ದರಿಂದಲೇ ಶುಕ್ತಿರಜತದಂತೆ. **ಅಪ್ರತಿಷ್ಠಂ**= ತತ್ವಜ್ಞಾನದಿಂದ ನಾಶಹೊಂದುತ್ತದೆ. **ಅನೀಶ್ವರಂ**= ನಿಯಾಮಕ ರಹಿತ, **ಅಪರಸ್ಪರಸಂಭೂತಂ**= **ಪರೇಭ್ಯಃ ಸಂಭವ ಹೀನಂ**, ಒಂದರಿಂದ ಇನ್ನೊಂದಕ್ಕೆ ಜನ್ಮವಿಲ್ಲ ಎಂದು ಅಭಿಪ್ರಾಯ.

**ಕಿಂ ತರ್ಹೀತಿ ಪ್ರಶ್ನಸ್ಯೋತ್ತರಮ್– ಅನ್ಯದಿತಿ ॥**

**ಅನುವಾದ–** ಹಾಗಾದರೆ ಏನು ? ಎಂಬ ಪ್ರಶ್ನೆಗೆ ಉತ್ತರ 'ಅನ್ಯದ್' ಎಂದು.

**ಸದಸದ್ಭ್ಯಾಮಿತಿ ಶೇಷಃ । ಸದಸದ್ವಿಲಕ್ಷಣಮಿತ್ಯರ್ಥಃ ।**

**ಅನುವಾದ**- **'ಸದಸದ್ಭ್ಯಾಮ್'** ಎಂಬ ಪದವನ್ನು **'ಅನ್ಯದ್'**ಗೆ ಸೇರಿಸಬೇಕು. ಸದಸದ್ವಿಲಕ್ಷಣ ಎಂದು ಅರ್ಥ.

**ಕೇನ ಜಾಯತ ಇತ್ಯತ ಉಕ್ತಮ್ । ಕಾಮಹೈತುಕಂ ಕಾಮಹೇತ್ವವಿದ್ಯಾ-ಪರಿಣಾಮರೂಪಮ್ ॥ 8 ॥**

**ಅನುವಾದ**- ಯಾವುದರಿಂದ ಹುಟ್ಟುತ್ತದೆ ? ಎಂಬ ಪ್ರಶ್ನೆಗೆ ಉತ್ತರವಾಗಿ 'ಕಾಮಹೈತುಕ' ಎಂದು ಹೇಳಲ್ಪಟ್ಟಿದೆ. ಆಸೆಗೆ ಕಾರಣವಾದ ಅವಿದ್ಯಾ ಪರಿಣಾಮರೂಪ. ॥ 8 ॥

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ 9 ॥**

**ಅರ್ಥ**- ಈ ದೃಷ್ಟಿಯನ್ನು ಅವಲಂಬಿಸಿ ಮನಸ್ಸನ್ನು ಹಾಳು ಮಾಡಿಕೊಂಡ, ಅಲ್ಪಮತಿಯ ಜನರು ಘೋರಕರ್ಮಗಳಲ್ಲಿ ನಿರತರಾಗಿ, ಅಹಿತಕಾರಿಗಳಾಗಿ ಜಗತ್ತನ್ನು ನಾಶ ಮಾಡಲು ಜನಿಸುತ್ತಾರೆ .

**ಏತಾಂ ದೃಷ್ಟಿಮಾಶ್ರಿತ್ಯ ನಷ್ಟಾತ್ಮಾನಃ ದುಷ್ಟಚಿತ್ತಾಃ ಅಲ್ಪಜ್ಞಾನಾಃ ಘೋರ-ಕರ್ಮನಿರತಾಃ ಜಗತಃ ಅಹಿತಾಃ ಶತ್ರವಃ ಕ್ಷಯಾಯಾನಿಷ್ಟಪ್ರಾಪ್ತಯೇ ಕಲಿ-ಯುಗಾದೌ ಪ್ರಭವಂತಿ ॥ 9 ॥**

**ಅನುವಾದ**- ಈ ದೃಷ್ಟಿಯನ್ನು ಆಶ್ರಯಿಸಿ, **ನಷ್ಟಾತ್ಮಾನಃ**= ಹಾಳಾದ ಚಿತ್ತವುಳ್ಳ, ಅಲ್ಪ ಜ್ಞಾನವುಳ್ಳ (ಈ ಜನರು) ಘೋರ ಕೆಲಸಗಳಲ್ಲಿ ನಿರತರಾಗಿ ಜಗತ್ತಿಗೆ , **ಅಹಿತಾಃ**= ಶತ್ರುಗಳಾಗಿ, **ಕ್ಷಯಾಯ**= ಅನಿಷ್ಟಪ್ರಾಪ್ತಿಗಾಗಿ ಕಲಿಯುಗಾದಿಯಲ್ಲಿ ಹುಟ್ಟುತ್ತಾರೆ.

**ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ ।**
**ಮೋಹಾದ್ಗೃಹೀತ್ವಾಽಸದ್ಗ್ರಾಹಾನ್ ಪ್ರವರ್ತಂತೇಽಶುಚಿವ್ರತಾಃ ॥ 10 ॥**

**ಅರ್ಥ**- ಪೂರೈಸಲಾಗದ ಆಸೆಗಳ ಬೆನ್ನು ಹತ್ತಿ, ಬೂಟಾಟಿಕೆ, ಬಿಂಕ, ಸೊಕ್ಕುಗಳನ್ನು ಹೊಂದಿದ ಇವರು ಕೊಳಕು ಸಂಗತಿಗಳಲ್ಲಿ ನಿಷ್ಠರಾಗಿ, ತಿಳಿಗೇಡಿತನದಿಂದ ತಪ್ಪುಗ್ರಹಿಕೆಗಳನ್ನೇ ಹಿಡಿದುಕೊಂಡು ಕ್ಷುದ್ರಭೋಗದಲ್ಲಿ ಪ್ರವೃತ್ತಿಮಾಡುತ್ತಾರೆ.

**ದುಷ್ಪೂರಂ ದುಃಖೇನ ಪೂರಣೀಯಂ ಕಾಮಮಿಚ್ಛಾಮಾಶ್ರಿತ್ಯ ದಂಭಮಾನ-ಮದೈರ್ಯುಕ್ತಾಃ ಸಂತಃ ಮೋಹಾತ್ ಮಿಥ್ಯಾಜ್ಞಾನಸ್ವಭಾವಾತ್ ಕುಶಾಸ್ತ್ರಾ-**

**ಭ್ಯಾಸಜನ್ಯವಿಪರೀತನಿಶ್ಚಯಾನ್, ಗೃಹೀತ್ವಾ ಆದಾಯಾಸದರ್ಥಾನ್ ಜ್ಞಾತ್ವೇತಿ ವಾ ಅಶುಚಿವ್ರತಾಃ ಕ್ಷುದ್ರಭೋಗಾಯ ಪ್ರವರ್ತಂತೇ ॥ 10 ॥**

**ಅನುವಾದ- ದುಷ್ಪೂರಂ**= ಪೂರೈಸಲಾಗದ, **ಕಾಮಂ**= ಆಸೆಗಳನ್ನು ಹೊಂದಿ, ದಂಭ-ಮಾನ-ಮದಗಳಿಂದ ಸಹಿತರಾಗಿ, **ಮೋಹಾತ್** = ಮಿಥ್ಯಾಜ್ಞಾನ ಸ್ವಭಾವದಿಂದ, ಕೆಟ್ಟಶಾಸ್ತ್ರಗಳ ಅಭ್ಯಾಸದಿಂದ ಹುಟ್ಟಿದ ವಿಪರೀತನಿಶ್ಚಯಗಳನ್ನು , **ಗೃಹೀತ್ವಾ** = ಹಿಡಿದುಕೊಂಡು, ಅಥವಾ ಇಲ್ಲದ /ಅಲ್ಲದ ಅರ್ಥಗಳನ್ನು ತಿಳಿದುಕೊಂಡು ಅಶುಚಿವ್ರತರಾಗಿ ಕ್ಷುದ್ರಭೋಗದಲ್ಲಿ ತೊಡಗುತ್ತಾರೆ. ॥ 10 ॥

**ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ ।**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥ 11 ॥**

**ಅರ್ಥ**- ಸಾವಿನ ಜೊತೆಗೇ ಸಾಯುವ, ಅಳೆಯಲಾಗದ ಚಿಂತೆಗೆ ಒಳಗಾದವರು ಇವರು. ಭೋಗವಸ್ತುಗಳ ಭೋಗವೇ ಪರಮಗುರಿ ಇವರಿಗೆ. ಬದುಕಿನಗುರಿ ಇಷ್ಟೇ ಎಂದು ನಿಶ್ಚಯವುಳ್ಳವರು.

**ಕಿಂಚ ಪ್ರಲಯಾಂತಾಂ ಮರಣಾಂತಾಂ ಅಪರಿಮೇಯಾಂ ಪರಿಮಾತುಮ-ಶಕ್ಯಾಂ ಚಿಂತಾಮುಪಾಶ್ರಿತಾಃ ।**

**ಅನುವಾದ**- ಇದರ ಜೊತೆಗೆ, **ಪ್ರಲಯಾಂತಾಂ**= ಸಾವಿನ ಜತೆಗೇ ಅಳಿಯುವ, **ಅಪರಿಮೇಯಾಂ**= ಅಳೆಯಲಾಗದ ಚಿಂತೆಯ ದಾಸರು.

**ಕಾಮೋಪಭೋಗಪರಮಾಃ ಕಾಮ್ಯಮಾನವಸ್ತ್ವನುಭವ ಏವ ಪರಮೋ ಯೇಷಾಂ ತೇ ವಿಷಯಭೋಗೈಕರತಾಃ ಏತಾವದೈಹಿಕಮೇವ ಫಲಂ ನಾನ್ಯ-ದಾಮುಷ್ಮಿಕಮಸ್ತೀತಿ ನಿಶ್ಚಯವಂತಃ ॥ 11 ॥**

**ಅನುವಾದ- ಕಾಮೋಪಭೋಗಪರಮಾಃ**= ಬಯಸಿದ ವಸ್ತುಗಳ ಭೋಗವೇ ಪರಮಗುರಿ ಯಾಗಿರುವ= ಕೇವಲ ವಿಷಯ ಪದಾರ್ಥಗಳ ಭೋಗದಲ್ಲಿ ಆಸಕ್ತರಾದ, **ಏತಾವತ್**= ಈ ಲೋಕದಲ್ಲಿ ಪಡೆಯಬಹುದಾದಷ್ಟೇ ಬದುಕಿನ ಫಲ, ಬೇರೆ ಪರಲೋಕದ ಫಲ ಯಾವುದೂ ಇಲ್ಲ ಎಂದು ನಿಶ್ಚಯವುಳ್ಳವರು. ॥ 11 ॥

**ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।**
**ಈಹಂತೇ ಕಾಮಭೋಗಾರ್ಥಂ ಅನ್ಯಾಯೇನಾರ್ಥಸಂಚಯಾನ್ ॥ 12 ॥**

**ಅರ್ಥ**- ನೂರಾರು ಆಸೆಗಳ ಹಗ್ಗದಿಂದ ಕಟ್ಟಲ್ಪಟ್ಟಿರುವವರು ; ಕಾಮ ಕ್ರೋಧಗಳಲ್ಲಿ ಮುಳುಗಿದವರು ; ಕಾಮಭೋಗಕ್ಕಾಗಿ ಅನ್ಯಾಯದಿಂದ ಧನರಾಶಿಯನ್ನು ಬಯಸುವವರು.

**ಆಶಾ ಏವ ಪಾಶಾಸ್ತೇಷಾಂ ಶತೈರ್ಬದ್ಧಾಃ ಕಾಮಕ್ರೋಧಾ ಏವ ಪರಂ ಅಯನಮೇಷಾಂ ತೇ ಕಾಮಕ್ರೋಧಪರಾಯಣಾಃ ಕಾಮಭೋಗಾರ್ಥಂ ಕಾಮ್ಯವಿಷಯಾನುಭವಾರ್ಥಮ್ ಅನ್ಯಾಯೇನ ಚೌರ್ಯಾದಿನಾಽರ್ಥ-ಸಂಚಯಾನ್ ದ್ರವ್ಯಸಮೂಹಾನೀಹಂತೇ ವಾಂಛಂತಿ ॥ 12 ॥**

**ಅನುವಾದ**- ಆಶೆಗಳೇ ಪಾಶಗಳು; ಅವುಗಳ ನೂರುಗಳಿಂದ ಕಟ್ಟಲ್ಪಟ್ಟವರು. ಕಾಮ-ಕ್ರೋಧಗಳೇ ಅವರ ಅಂತಿಮ ಆಶ್ರಯಸ್ಥಾನ. **ಕಾಮಭೋಗಾರ್ಥಂ**= ಕಾಮ್ಯವಿಷಯಗಳ ಅನುಭವಕ್ಕಾಗಿ, **ಅನ್ಯಾಯೇನ**= ಕಳ್ಳತನ ಮೊದಲಾದವುಗಳಿಂದ, **ಅರ್ಥಸಂಚಯಾನ್**= ದ್ರವ್ಯರಾಶಿಯನ್ನು , **ಈಹಂತೇ** = **ವಾಂಛಂತಿ** =ಬಯಸುತ್ತಾರೆ. ॥ 12 ॥

**ಇದಮದ್ಯ ಮಯಾ ಲಬ್ಧಂ ಇಮಂ ಪ್ರಾಪ್ಸ್ಯೇ ಮನೋರಥಮ್ ।**
**ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ॥ 13 ॥**

**ಅರ್ಥ**- ಇಂದು ಈ ಹಣವನ್ನು ನಾನು ಪಡೆದುಕೊಂಡಿದ್ದೇನೆ ; ಈ ಮನೋರಥವನ್ನು ಸದ್ಯದಲ್ಲೇ ಈಡೇರಿಸಿಕೊಳ್ಳುತ್ತೇನೆ; ಇಂದು ಈ ಧನ ಇದೆ ; ಈ ಧನವು ಸದ್ಯದಲ್ಲೇ ನನ್ನದಾಗಲಿದೆ.

**ಚಿಂತಾಪ್ರಕಾರಂ ದರ್ಶಯತಿ–ಇದಮಿತ್ಯಾದಿ ತ್ರಯೇಣ ॥**

**ಅನುವಾದ**- ಚಿಂತೆಯ ರೀತಿಗಳನ್ನು 'ಇದಮ್' ಇತ್ಯಾದಿ ಮೂರು ಶ್ಲೋಕಗಳಿಂದ ತೋರಿಸುತ್ತಾನೆ.

**ಇದಂ ಧನಂ ಅದ್ಯ ಮಯಾ ಲಬ್ಧಂ, ಇಮಂ ಮನೋರಥಂ ಪ್ರಾಪ್ಸ್ಯೇ ಪ್ರಾಪ್ಸ್ಯಾಮಿ । ಇದಂ ಧನಮಸ್ತಿ ಇದಮಪಿ ಧನಂ ಮೇ ಪುನರ್ಭವಿಷ್ಯತಿ ॥ 13 ॥**

**ಅನುವಾದ**- ಈ ಹಣವು ಈಗ ನನ್ನಿಂದ ಹೊಂದಲ್ಪಟ್ಟಿದೆ ; ಈ ಮನೋರಥವನ್ನು **ಪ್ರಾಪ್ಸ್ಯೇ**= **ಪ್ರಾಪ್ಸ್ಯಾಮಿ** = ಇನ್ನು ಮುಂದೆ ಹೊಂದುವೆನು. ಈ ಹಣ ಇದೆ ; ಈ ಹಣವೂ ನನ್ನದಾಗುತ್ತದೆ. ॥ 13 ॥

**ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ ।**
**ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ॥ 14 ॥**

**ಅರ್ಥ**–ಈ ಶತ್ರುವನ್ನು ನಾನು ಸಂಹರಿಸಿದ್ದೇನೆ ; ಬೇರೆ ಶತ್ರುಗಳನ್ನೂ ಕೊಲ್ಲುತ್ತೇನೆ; ನಾನು

ಅರಸರ ಅರಸ ; ಸಕಲ ಭೋಗಗಳೂ ನನಗೆ ಇವೆ ನಾನು ಕತಕೃತ್ಯ . ನಾನು ಬಲಶಾಲಿ ; ನಾನು ಸುಖಿ.

**ಅಸೌ ಶತ್ರುರ್ಮಯಾ ಹತಃ, ಅಪರಾನನ್ಯಾನಪಿ ಶತ್ರೂನ್ ಹನಿಷ್ಯೇ ಚ । ಅಹಮೀಶ್ವರಃ ಪರಮೇಶ್ವರಃ, ಭೋಗೀ ಐಹಿಕಾಮುಷ್ಮಿಕಭೋಗಸಂಪನ್ನಃ, ಸಿದ್ಧಃ ಕೃತಕೃತ್ಯಃ, ಬಲವಾನ್ ಸಮರ್ಥಃ ।। 14 ।।**

**ಅನುವಾದ-** ಈ ಶತ್ರು ನನ್ನಿಂದ ಕೊಲ್ಲಲ್ಪಟ್ಟಿದ್ದಾನೆ; **ಅಪರಾನ್**= **ಅನ್ಯಾನ್, ಅಪಿ, ಶತ್ರೂನ್**= ಬೇರೆ ಶತ್ರುಗಳನ್ನೂ , ಇನ್ನು ಮುಂದೆ ಕೊಲ್ಲುವೆನು ; ನಾನು **ಈಶ್ವರ** = ಪರಮೇಶ್ವರ, **ಭೋಗೀ**= ಈ ಲೋಕ, ಪರಲೋಕಗಳ ಭೋಗಗಳನ್ನು ಸಮೃದ್ಧವಾಗಿ ಹೊಂದಿರುವವನು, **ಸಿದ್ಧಃ**= ಕೃತಕೃತ್ಯನು ; **ಬಲವಾನ್**= ಸಮರ್ಥ. ।। 14 ।।

**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ।। 15 ।।**

**ಅರ್ಥ-** ನನಗೆ ವಿಪುಲ ಸಂಪತ್ತು ಇದೆ ; ನಾನು ಕುಲೀನ, ನನ್ನನ್ನು ಸರಿಗಟ್ಟುವವರು ಯಾರಿದ್ದಾರೆ ? ನಾನು ಯಜ್ಞಗಳನ್ನು ಮಾಡುತ್ತೇನೆ, ದಾನಮಾಡುತ್ತೇನೆ ; ಆನಂದಿಸುತ್ತೇನೆ ಹೀಗೆ ಅಜ್ಞಾನದಿಂದ ಮೋಹಕ್ಕೆ ಬಲಿಯಾದವರು.

**ಆಢ್ಯಃ ಧನಾದಿಸಂಪನ್ನಃ ಅಭಿಜನವಾನ್ ಕುಲೀನೋಽಸ್ಮಿ । ಮಯಾ ಸದೃಶೋಽನ್ಯಃ ಕೋಽಸ್ತಿ ನ ಕೋಽಪಿ । ಯಕ್ಷ್ಯೇ ಯಾಗಾದಿಧರ್ಮಾ-ನನುಷ್ಠಾಸ್ಯಾಮಿ । ಭೂರಿದಕ್ಷಿಣಾನ್ನಾದಿ ದಾಸ್ಯಾಮಿ । ಮೋದಿಷ್ಯೇ ಸಂತೋಷಂ ಪ್ರಾಪ್ಸ್ಯಾಮಿ ಇತ್ಯೇವಂರೂಪೇಣಾಜ್ಞಾನೇನ ವಿಮೋಹಿತಾಃ ।। 15 ।।**

**ಅನುವಾದ- ಆಢ್ಯಃ**= ಧನ ಮೊದಲಾದವುಗಳನ್ನು ಸಮೃದ್ಧವಾಗಿ ಹೊಂದಿದವನು **ಅಭಿಜನವಾನ್**= ಕುಲೀನ- ಸತ್ಕುಲಪ್ರಸೂತನು, ಆಗಿದ್ದೇನೆ. ನನ್ನಂತಹವನು ಬೇರೆ ಯಾರಿದ್ದಾರೆ ಯಾರೂ ಇಲ್ಲ. **ಯಕ್ಷ್ಯೇ**= ಯಾಗ ಮೊದಲಾದ ಧರ್ಮಗಳನ್ನು ಆಚರಿಸುತ್ತೇನೆ. ಭೂರಿದಕ್ಷಿ ಅನ್ನ ಮೊದಲಾದವುಗಳನ್ನು ದಾನ ಮಾಡುವೆನು ; **ಮೋದಿಷ್ಯೇ**= ಆನಂದವನ್ನು ಹೊಂದುವೆನು ಇಂತಹ ಅಜ್ಞಾನದಿಂದ ಮೋಹಕ್ಕೆ ಬಲಿಯಾದವರು. ।। 15 ।।

**ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ।। 16 ।**

**ಅರ್ಥ**- ನಾನಾ ಚಿಂತೆಗಳಿಂದ ತುಂಬಿದ ಮನಸ್ಸಿನಿಂದ ಕ್ಷೋಭೆಗೊಳಗಾಗಿ, ಮೋಹದ ಬಲೆಯಲ್ಲಿ ಸಿಕ್ಕಿಕೊಂಡು, ಸ್ವಚ್ಛಂದ ಭೋಗಕ್ಕೆ ಅತಿಯಾಗಿ ಅಂಟಿಕೊಂಡು ಕೊಳಕು ನರಕದಲ್ಲಿ ಬೀಳುತ್ತಾರೆ.

**ಏವಂ ಚಿಂತಾಪ್ರಕಾರಮುಕ್ತ್ವಾ ತೇಷಾಂ ಫಲಮಾಹ- ಅನೇಕೇತಿ ॥**

**ಅನುವಾದ**- ಹೀಗೆ ಚಿಂತೆಯ ರೀತಿಗಳನ್ನು ಹೇಳಿ ಅದರ ಫಲವನ್ನು ಹೇಳುತ್ತಾರೆ.

**ಅನೇಕಚಿಂತಾಯುಕ್ತಮನಸಾ ವಿಶೇಷಭ್ರಾಂತಿಮಂತಃ ಪುತ್ರಮಿತ್ರಾದಿವಿಷಯ-ಮೋಹಾಖ್ಯಜಾಲೇನ ಸಮಾವೃತಾಃ ವಿಶೇಷಭೋಗೇಷ್ವತಿತರಾಮಾಸಕ್ತಾಃ ಸಂತಃ ಅಶುಚೌ ನರಕೇ ಪತಂತಿ ॥ 16 ॥**

**ಅನುವಾದ**- ಅನೇಕ ಚಿಂತೆಗಳಿಂದ ತುಂಬಿದ ಮನಸ್ಸಿನಿಂದ ಕೂಡಿ ಭ್ರಾಂತಿವುಳ್ಳವರಾಗಿ, ಮಗ,ಗೆಳೆಯ ಮೊದಲಾದ ವಿಷಯಗಳ ಮೇಲೆ ಮೋಹ- ಎಂಬ ಬಲೆಯಿಂದ ಗಾಢವಾಗಿ ಆವರಿಸಲ್ಪಟ್ಟು , ವಿಷಯಭೋಗಗಳಲ್ಲಿ ಅತಿ ಅತಿಯಾಗಿ ಆಸಕ್ತರಾಗಿ ಕೊಳಕು ನರಕದಲ್ಲಿ ಬೀಳುತ್ತಾರೆ. ॥ 16 ॥

**ಆತ್ಮಸಂಭಾವಿತಾಃ ಸ್ತಬ್ಧಾಃ ಧನಮಾನಮದಾನ್ವಿತಾಃ ।**
**ಯಜಂತೇ ನಾಮ ಯಜ್ಞೈಸ್ತೇ ದಂಭೇನಾವಿಧಿಪೂರ್ವಕಮ್ ॥ 17 ॥**

**ಅರ್ಥ**- ತಮ್ಮನ್ನು ತಾವೇ ಪೂಜಿಸಿಕೊಳ್ಳುವ ಅಥವಾ ತಾವು ಪೂಜ್ಯರೆಂದು ತಾವೇ ಭಾವಿಸುವ, ಆದ್ದರಿಂದಲೇ ಬೀಗುವ, ತಮ್ಮ ಸಂಪತ್ತಿನಿಂದಾಗಿ ಗರ್ವ–ಸೊಕ್ಕುಗಳನ್ನು ಹೊಂದಿರುವ ಅವರು ಕಪಟದಿಂದ, ವಿಧಿಗಳನ್ನು ಅನುಸರಿಸದೇ ಯಜ್ಞಗಳನ್ನು ಮಾಡುತ್ತಾರೆ,.

**ಯಾಗಾದಿ ಕುರ್ವತಾಂ ಕಥಂ ನರಕೇ ಪಾತ ಇತ್ಯತ ಆಹ- ಆತ್ಮೇತಿ ॥**

**ಅನುವಾದ**- ಯಾಗ ಮೊದಲಾದವುಗಳನ್ನು ಮಾಡುವವರಿಗೆ ನರಕದಲ್ಲಿ ಪತನ ಹೇಗೆ ? ಉತ್ತರಿಸುತ್ತದೆ ಆತ್ಮ ಇತ್ಯಾದಿ ಶ್ಲೋಕ .

**ಆತ್ಮನೈವ ಸ್ವೇನೈವ ಸಂಭಾವಿತಾಃ ಬಹುಮತಾಃ । ವಯಂ ಪೂಜ್ಯಾ ಇತಿ ಮನ್ಯಮಾನಾ ಇತಿ ಯಾವತ್ । ಅತ ಏವ ಸ್ತಬ್ಧಾಃ ಅನಮ್ರಾಃ ಧನನಿಮಿತ್ತ-ಗರ್ವದರ್ಪಾಭ್ಯಾಮ್ ಉಪೇತಾಸ್ತೇ ಅವಿಧಿಪೂರ್ವಕಂ ದಂಭೇನ ಸ್ವಮಹತ್ವ-ಪ್ರದರ್ಶನನಿಮಿತ್ತೇನ ಯಜ್ಞೈರ್ಜ್ಯೋತಿಷ್ಟೋಮಾದಿಭಿರ್ಯಜಂತೇ ನಾಮ । ನ ಕೃತಾರ್ಥಬುದ್ಧ್ಯಾ । ಅತೋ ನರಕಪ್ರಾಪ್ತಿಸ್ತೇಷಾಮ್ ಇತಿ ಭಾವಃ ॥ 17 ॥**

**ಅನುವಾದ- ಆತ್ಮನೈವ** = ಸ್ವೇನೈವ, ಕೇವಲ ತಮ್ಮಿಂದಲೇ, **ಸಂಭಾವಿತಾಃ**= ಬಹುಮತಾಃ, ಪೂಜಿಸಲ್ಪಡುವ, ನಾವು ಪೂಜ್ಯರು ಎಂದು ಭಾವಿಸುವ ಎಂದು ಅಭಿಪ್ರಾಯ. ಆದ್ದರಿಂದಲೇ, **ಸ್ತಬ್ಧಾಃ- ಅನಮ್ರಾಃ**= ನಮ್ರತೆಯಿಲ್ಲದ, ಹಣದ ಕಾರಣದಿಂದ ಗರ್ವ ದರ್ಪಗಳಿಂದ ಕೂಡಿದ, ಅವರು, ವಿಧಿಯನ್ನು ಅನುಸರಿಸದೆ, **ದಂಭೇನ** = ತಮ್ಮ ದೊಡ್ಡಸ್ತಿಕೆಯನ್ನು ತೋರಿಸುವುದಕ್ಕಾಗಿ, **ಯಜ್ಞೈಃ**= ಜ್ಯೋತಿಷ್ಟೋಮ ಮೊದಲಾದವುಗಳಿಂದ ಹೋಮಿಸುತ್ತಾರೆ, ಅಷ್ಟೇ, ಕೃತಾರ್ಥಬುದ್ಧಿಯಿಂದ ಅಲ್ಲ. ಆದ್ದರಿಂದ ಅವರಿಗೆ ನರಕ ಪ್ರಾಪ್ತಿಯಾಗುತ್ತದೆ ಎಂದು ಅಭಿಪ್ರಾಯ. ॥ 17 ॥

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।**
**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥ 18 ॥**

**ಅರ್ಥ**- ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ - ಇವುಗಳನ್ನು ಆಶ್ರಯಿಸಿದವರಾಗಿ, ತನ್ನ ಮತ್ತು ಪರರ ದೇಹಗಳಲ್ಲಿ ಇರುವ ನನ್ನನ್ನು ಅತಿಯಾಗಿ ದ್ವೇಷಿಸುತ್ತ , ಇಲ್ಲದ ದೋಷಗಳನ್ನು ಹೇಳುತ್ತಾ, ಇರುವ ಗುಣಗಳನ್ನು ನಿರಾಕರಿಸುತ್ತಾ, ಯಜ್ಞಗಳನ್ನು ಮಾಡುತ್ತಾರೆ.

**ಸರ್ವಕರ್ಮಕಾರಯಿತಾರಂ ಸರ್ವಾಂತರ್ಯಾಮಿಣಂ ತ್ವಾಂ ಕುತೋ ನ ಯಜಂತ ಇತ್ಯತ ಆಹ- ಅಹಂಕಾರಮಿತಿ ॥**

**ಅನುವಾದ**- ಎಲ್ಲರ ಎಲ್ಲ ಕರ್ಮಗಳನ್ನು ಮಾಡಿಸುವ, ಸರ್ವಾಂತರ್ಯಾಮಿಯಾದ ನಿನ್ನನ್ನು ಉದ್ದೇಶಿಸಿ ಏಕೆ ಯಾಗವನ್ನು ಮಾಡುವುದಿಲ್ಲ ? ಉತ್ತರಿಸುತ್ತಾನೆ **'ಅಹಂಕಾರಮ್'** ಇತ್ಯಾದಿ ಶ್ಲೋಕದಿಂದ.

**ಅಹಂಕಾರಾದಿ ಸಂಶ್ರಿತಾಃ ಸಂತಃ ಆತ್ಮದೇಹೇ ಪರದೇಹೇಷು ಚ ನಿಯಾಮಕತಯಾ ಸ್ಥಿತಂ ಮಾಂ ಪ್ರದ್ವಿಷಂತಃ । ಯದಿ ಈಶ್ವರಃ ಕಾರಯಿತಾಽಸ್ತಿ ತರ್ಹೀದಾನೀಮಕುರ್ವಾಣಂ ಮಾಂ ಕಾರಯತು, ಕುರ್ವಾಣಂ ಚ ವಿಘಾತಯತು ಇತ್ಯೇವಂ ಭಗವದಪಲಾಪರೂಪಪ್ರದ್ವೇಷಂ ಕುರ್ವಂತಃ । ಅಭ್ಯಸೂಯಕಾಃ ನಿರ್ದೋಷೇ ದೋಷಾನ್ ವದಂತಃ ಗುಣಪೂರ್ಣೇ ಗುಣಹೀನತಾಂ ವದಂತಃ, ಯಜಂತ ಇತ್ಯನುಷಜ್ಯತೇ ॥ 18 ॥**

**ಅನುವಾದ**- ಅಹಂಕಾರ ಮೊದಲಾದವುಗಳನ್ನು ಆಶ್ರಯಿಸಿ, ತನ್ನ ದೇಹದಲ್ಲಿ ಮತ್ತು ಪರರ ದೇಹಗಳಲ್ಲಿ ನಿಯಾಮಕನಾಗಿ ಇರುವ ನನ್ನನ್ನು (ಕೃಷ್ಣನನ್ನು) **ಪ್ರದ್ವಿಷಂತಃ**= ಮಾಡಿಸುವ ಈಶ್ವರನು ಇರುವುದಾದರೆ ಈಗ ಕರ್ಮವನ್ನು ಮಾಡದ ನನ್ನಿಂದ ಮಾಡಿಸಲಿ, ಮಾಡುತ್ತಿರುವವನಿಗೆ ಭಂಗವುಂಟುಮಾಡಲಿ.- ಹೀಗೆ ದೇವರ ನಿರಾಕರಣರೂಪವಾದ

ಗಾಢದ್ವೇಷವನ್ನು ಮಾಡುತ್ತಾ , **ಅಭ್ಯಸೂಯಕಾಃ**= ನಿರ್ದೋಷನಲ್ಲಿ ದೋಷಗಳನ್ನು ಹೇಳುತ್ತಾ, ಗುಣಪೂರ್ಣನಲ್ಲಿ ಗುಣಹೀನತೆಯನ್ನು ಹೇಳುತ್ತ **'ಯಜಂತೇ'** ಎಂಬ ಹಿಂದಿನ ಶ್ಲೋಕದಲ್ಲಿರುವ ಪದವು ಇಲ್ಲಿಗೆ ಸೇರಿಸಲ್ಪಡುತ್ತದೆ. ॥ 18 ॥

## ಅಸುರಸ್ವಭಾವದವರ ಗತಿ

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ 19 ॥**

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥ 20 ॥**

**ಅರ್ಥ**- ದ್ವೇಷಿಸುವ, ಕ್ರೂರರಾದ, ಆದ್ದರಿಂದಲೇ ಅಮಂಗಳ ಸ್ವರೂಪದ ಆ ನರಾಧಮರನ್ನು ಹುಟ್ಟು -ಸಾವುಗಳ ಸರಣಿಯಲ್ಲಿ ಅದರಲ್ಲೂ ಅಸುರಯೋನಿಗಳಲ್ಲಿ ಮತ್ತೆ ಮತ್ತೆ ಎಸೆಯುತ್ತೇನೆ.

ಕುಂತೀಸುತ ! ಎಲ್ಲ ಜನ್ಮಗಳಲ್ಲೂ ಅಸುರಯೋನಿಯನ್ನೇ ಹೊಂದಿದ ಈ ಮೂಢರು ಅಲ್ಲಿಂದ ನನ್ನನ್ನು ಹೊಂದದೆ ನಿತ್ಯನರಕವನ್ನೇ ಹೊಂದುತ್ತಾರೆ.

**ನರಕೇ ಪತಂತೀತ್ಯೇತಾವದೇವ ನ ತೇಷಾಂ ಫಲಮ್, ಕಿಂತು ಕಿಂಚಿತ್ಕಾಲಂ ಸಂಸಾರಮನುಭೂಯ ಪಶ್ಚಾನ್ನಿತ್ಯನರಕಮಪಿ ಮಯ್ಯೈವ ಪ್ರಾಪ್ನುವಂತೀತ್ಯಾಹ-ತಾನಿತಿ ದ್ವಾಭ್ಯಾಂ ॥**

**ಅನುವಾದ**- ನರಕದಲ್ಲಿ ಪತನವಷ್ಟೇ ಅವರಿಗೆ ಫಲ ಅಲ್ಲ, ಇನ್ನೇನು ? ಸ್ವಲ್ಪ ಕಾಲ ಹುಟ್ಟು ಸಾವುಗಳ ಸರಣಿಯನ್ನು ಅನುಭವಿಸಿ, ಅನಂತರ ನಿತ್ಯನರಕವನ್ನು ನನ್ನಿಂದಲೇ ಪಡೆಯುತ್ತಾರೆ ಎಂದು ಹೇಳುತ್ತಾನೆ 'ತಾನ್..' ಇತ್ಯಾದಿ ಎರಡು ಶ್ಲೋಕಗಳಿಂದ.

**ತಾನ್ 'ಪ್ರವೃತ್ತಿಂ ಚ' ಇತ್ಯಾದಿನೋಕ್ತಾನ್ ।**

**ಅನುವಾದ**- 'ಪ್ರವೃತ್ತಿಂ ಚ ನಿವೃತ್ತಿಂಚ ' ಇತ್ಯಾದಿ ಶ್ಲೋಕಗಳಲ್ಲಿ ಹೇಳಲ್ಪಟ್ಟ.

**ದ್ವಿಷತಃ ಕ್ರೂರಾನ್ ಅತ ಏವಾಶುಭಾನ್ನರಾಧಮಾನ್ ಸಂಸಾರೇಷು ತತ್ರಾಪ್ಯಾ-ಸುರಯೋನಿಷು ಅಜಸ್ರಂ ಪುನಃ ಪುನಃ ಕ್ಷಿಪಾಮಿ ಸ್ಥಾಪಯಾಮಿ ॥ 19 ॥**

**ಅನುವಾದ**- ದ್ವೇಷಿಸುವ, ಕ್ರೂರರಾದ, ಆದ್ದರಿಂದಲೇ ಅಮಂಗಳ ಸ್ವರೂಪರಾದ

ನರಾಧಮರನ್ನು ಹುಟ್ಟು - ಸಾವುಗಳ ಸರಣಿಯಲ್ಲಿ, ಅದರಲ್ಲಿಯೂ, ಆಸುರಯೋನಿಗಳಲ್ಲಿ **ಅಜಸ್ರಂ**= ಪುನಃ ಪುನಃ , **ಕ್ಷಿಪಾಮಿ**= ಸ್ಥಾಪಿಸುತ್ತೇನೆ. ॥ 19 ॥

**ತತೋ ಮೂಢಾಃ ತಾಮಸಸ್ವಭಾವಾಃ ಜನ್ಮನಿ ಜನ್ಮನಿ ಅನೇಕಜನ್ಮಸು ಆಸುರೀಂ ಯೋನಿಮಾಪನ್ನಾಃ ಮಾಮಪ್ರಾಪ್ಯೈವಾಧಮಾಂ ನಿತ್ಯನರಕಲಕ್ಷಣಾಂ ಗತಿಂ ಯಾಂತಿ ॥ 20 ॥**

**ಅನುವಾದ-** ಅಲ್ಲಿಂದ **ಮೂಢಾಃ**= ತಾಮಸಸ್ವಭಾವದ (ಅವರು) **ಜನ್ಮನಿ ಜನ್ಮನಿ**= ಅನೇಕಜನ್ಮಗಳಲ್ಲಿ ಆಸುರಯೋನಿಗಳನ್ನು ಹೊಂದಿ, ನನ್ನನ್ನು ಹೊಂದದೆ, **ಅಧಮಾಂ**= ನಿತ್ಯ ನರಕಸ್ವರೂಪದ ಗತಿಯನ್ನು ಹೊಂದುತ್ತಾರೆ. ॥ 20 ॥

## ಬಿಡಲೇಬೇಕಾದ ಮೂರು

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥ 21 ॥**

**ಅರ್ಥ-** ಆತ್ಮನಾಶಕರವಾದ ಈ ನರಕದ ಬಾಗಿಲು ಮೂರು ವಿಧ ಕಾಮ , ಕ್ರೋಧ, ಲೋಭ, ಆದ್ದರಿಂದ ಈ ಮೂರನ್ನು ಬಿಟ್ಟುಬಿಡಬೇಕು.

**ಉಕ್ತೇಷು ಪುಮರ್ಥವಿರೋಧಿಷು ಪ್ರಧಾನದೋಷತ್ರಯಮವಶ್ಯಂ ತ್ಯಾಜ್ಯ-ಮಿತ್ಯಾಹ- ತ್ರಿವಿಧಮಿತಿ ॥**

**ಅನುವಾದ-** ಹೇಳಲ್ಪಟ್ಟ ಪುರುಷಾರ್ಥವಿರೋಧಿದೋಷಗಳಲ್ಲಿ ಮೂರು ಪ್ರಧಾನದೋಷಗಳನ್ನು ಬಿಡಲೇಬೇಕು ಎಂದು ಹೇಳುತ್ತಾನೆ. 'ತ್ರಿವಿಧಮ್' ಎಂದು.

**ಕಾಮಃ ಕ್ರೋಧ ಲೋಭ ಇತಿ ಇದಂ ತ್ರಿವಿಧಂ ನರಕದ್ವಾರಂ ನರಕ-ಸಾಧನಮ್ । ಅತ ಏವ ಆತ್ಮನೋ ನಾಶನಂ ಅನರ್ಥಪ್ರಾಪಕಮ್ । ತಸ್ಮಾದೇತತ್ತ್ರಯಂ ತ್ಯಜೇತ್ । ತತಶ್ಚ ಕಾರಣಾಭಾವಾನ್ನರಕಾಣಾಮಪ್ರಾಪ್ತಿರಿತಿ ಭಾವಃ ॥ 21 ॥**

**ಅನುವಾದ-** ಕಾಮ , ಕ್ರೋಧಃ , ಲೋಭ- ಈ ಮೂರು , **ನರಕದ್ವಾರಂ**= ನರಕಸಾಧನ ಆದ್ದರಿಂದಲೇ ಆತ್ಮನಿಗೆ ನಾಶನಂ = ಅನರ್ಥ ಸಂಪಾದಕ. ಆದ್ದರಿಂದ ಈ ಮೂರನ್ನು ಬಿಡಬೇಕು ಆಗ, ಕಾರಣವಿಲ್ಲದಿರುವುದರಿಂದ ನರಕಪ್ರಾಪ್ತಿಯಿಲ್ಲ ಎಂದು ಅಭಿಪ್ರಾಯ. ॥ 21 ॥

## ಬಿಟ್ಟವರಿಗೆ ಲಭಿಸುವ ಶ್ರೇಯಸ್ಸು

**ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।**
**ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ॥ 22 ॥**

**ಅರ್ಥ-** ಕುಂತೀಸುತ ! ತಮಸ್ಸಿನ ಬಾಗಿಲುಗಳಾದ ಮೂರರಿಂದ ದೂರನಾದ ಮನುಷ್ಯನು ತನಗೆ ಶ್ರೇಯಸ್ಸನ್ನು ಮಾಡಿಕೊಳ್ಳುತ್ತಾನೆ. ಅನಂತರ ಪರಗತಿಯನ್ನು= ಮುಕ್ತಿಯನ್ನು ಹೊಂದುತ್ತಾನೆ.

**ನ ಕೇವಲಂ ಕಾಮಾದಿತ್ಯಾಗೇ ನರಕಾಪ್ರಾಪ್ತಿಃ ಪರಮಪುಮರ್ಥಪ್ರಾಪ್ತಿಶ್ಚಾಸ್ತೀತ್ಯಾಹ- ಏತೈರಿತಿ ॥**

**ಅನುವಾದ-** ಕಾಮ ಮೊದಲಾದವುಗಳನ್ನು ತ್ಯಾಗ ಮಾಡಿದರೆ ನರಕಪ್ರಾಪ್ತಿ ಇಲ್ಲವೆಂದಷ್ಟೇ ಅಲ್ಲ, ಪರಮಪುರುಷಾರ್ಥ ಪ್ರಾಪ್ತಿಯೂ ಇದೆ ಎಂದು ಹೇಳುತ್ತಾನೆ 'ಏತೈಃ' ಎಂಬ ಶ್ಲೋಕದಿಂದ.

**ತಮೋದ್ವಾರೈರ್ನರಕಹೇತುಭಿಸ್ತ್ರಿಭಿರೇತೈಃ ಕಾಮಕ್ರೋಧಲೋಭೈರ್ವಿಮುಕ್ತೋ ನರಃ ಆತ್ಮನಃ ಶ್ರೇಯಃ ಪುಮರ್ಥಸಾಧನಮಾಚರತಿ । ತತಃ ಪರಾಂ ಗತಿಂ ಮೋಕ್ಷಂ ಯಾತಿ ॥ 22 ॥**

**ಅನುವಾದ- ತಮೋದ್ವಾರೈಃ**= ನರಕಕ್ಕೆ ಕಾರಣಗಳಾದ, **ತ್ರಿಭಿಃ ಏತೈಃ**= ಈ ಮೂರರಿಂದ ಕಾಮ–ಕ್ರೋಧ–ಲೋಭಗಳಿಂದ ಬಿಡುಗಡೆ ಹೊಂದಿದ ನರನು ತನಗೆ **ಶ್ರೇಯಃ**= ಪುರುಷಾರ್ಥ ಸಾಧನವನ್ನು ಆಚರಿಸುತ್ತಾನೆ. ಆದ್ದರಿಂದ **ಪರಾಂ ಗತಿಂ**= ಮೋಕ್ಷವನ್ನು ಹೊಂದುತ್ತಾನೆ. ॥ 22 ॥

**ವಿವರಣೆ-** ಕಾಮ–ಕ್ರೋಧ–ಲೋಭಗಳ ತ್ಯಾಗವು ಮನಸ್ಸನ್ನು ನಿರ್ಮಲಗೊಳಿಸುತ್ತದೆ. ನಿರ್ಮಲ ಮನಸ್ಸಿನಲ್ಲಿ ಒಳ್ಳೆಯ ವಿಚಾರಗಳು ಮೂಡುತ್ತವೆ. ಮುಕ್ತಿಗಾಗಿ ಸಾಧನೆಯನ್ನು ಮಾಡಬೇಕೆಂಬ ಇಚ್ಛೆ ಒಳ್ಳೆಯ ವಿಚಾರ. ಅನಂತರ ಸಾಧನದ ಕಡೆ ಪ್ರವೃತ್ತಿ. ಇದರಿಂದ ಮುಕ್ತಿ. ಆದ್ದರಿಂದ ಕಾಮಾದಿಗಳ ತ್ಯಾಗವೇ ಶ್ರೇಯಸ್ಸಿನ ಆಚರಣೆ ಎಂಬ ಉದ್ಗಾರ.

## ಶಾಸ್ತ್ರ ವಿಧಿಯನ್ನು ಬಿಡಬಾರದು

**ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥ 23 ॥**

**ಅರ್ಥ-** ಯಾರು ಶಾಸ್ತ್ರವು ಹೇಳಿದ ವಿಧಿಯನ್ನು ಬಿಟ್ಟು ಸ್ವೇಚ್ಛೆಯಿಂದ ಅನುಷ್ಠಾನದಲ್ಲಿ ಪ್ರವೃತ್ತಿ ಮಾಡುತ್ತಾನೋ ಅವನು ಪುರುಷಾರ್ಥಸಾಧನವನ್ನು ಹೊಂದುವುದಿಲ್ಲ ; ಐಹಿಕ ಸುಖವನ್ನು ಹೊಂದುವುದಿಲ್ಲ, ಮೋಕ್ಷವನ್ನೂ ಹೊಂದುವುದಿಲ್ಲ.

**ಶ್ರೇಯಃ ಸಾಧನಾನುಷ್ಠಾನೇ ಅಂಗಾಂತರಂ ವಿಧಾತುಂ ತದಕರಣೇ ಬಾಧಕಂ ತಾವದಾಹ- ಯ ಇತಿ ॥**

**ಅನುವಾದ** - ಶ್ರೇಯಸ್ಸಿನ ಸಾಧನಗಳನ್ನು ಅನುಷ್ಠಾನ ಮಾಡುವುದಕ್ಕಾಗಿ ಆ ಸಾಧನಗಳ ಬೇರೆ ಅಂಗಗಳನ್ನು ವಿಧಿಸಬೇಕು ; ವಿಧಿಸುವ ಉದ್ದೇಶದಿಂದ ಮೊದಲು, ಆ ಅಂಗಗಳನ್ನು ಪಾಲಿಸದಿದ್ದರೆ ಉಂಟಾಗುವ ಬಾಧಕವನ್ನು ಹೇಳುತ್ತಾನೆ 'ಯಃ' ಇತ್ಯಾದಿ ಶ್ಲೋಕಗಳಿಂದ.

**ಯಃ ಶಾಸ್ತ್ರೋಕ್ತವಿಧಾನಮುತ್ಸೃಜ್ಯ ಕಾಮಕಾರತಃ ಸ್ವೇಚ್ಛಾಮಾತ್ರೇಣ ಯತ್ರ ಕ್ವಚಿತ್ಪ್ರವರ್ತತೇ ಸ ಸಿದ್ಧಿಂ ಪುಮರ್ಥೋಪಾಯಂ ನಾವಾಪ್ನೋತಿ । ಸುಖಮೈಹಿಕಂ, ಪರಾಂ ಗತಿಂ ಮೋಕ್ಷಂ ವಾ ನಾಪ್ನೋತಿ ॥ 23 ॥**

**ಅನುವಾದ**- ಯಾರು ಶಾಸ್ತ್ರವು ಹೇಳಿದ ವಿಧಾನವನ್ನು ಬಿಟ್ಟು **ಕಾಮಕಾರತಃ**= ಕೇವಲ ಸ್ವೇಚ್ಛೆಯಿಂದ , ಯಾವುದೇ ಅನುಷ್ಠಾನದಲ್ಲಿ ತೊಡಗುತ್ತಾನೋ ಅವನು, **ಸಿದ್ಧಿಂ**= ಪುರುಷಾರ್ಥ ಸಾಧನಗಳನ್ನು ಹೊಂದುವುದಿಲ್ಲ . **ಸುಖಮ್**= ಐಹಿಕ ಸುಖವನ್ನಾಗಲಿ, **ಪರಾಂ ಗತಿಂ**= ಮೋಕ್ಷವನ್ನಾಗಲಿ, **ನಾಪ್ನೋತಿ**= ಹೊಂದುವುದಿಲ್ಲ. ॥ 23 ॥

## ಸಾಧಕರಿಗೆ ಶಾಸ್ತ್ರವೇ ಪ್ರಮಾಣ

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ 24 ॥**

*॥ ಓಂ ತತ್ಸದಿತಿ ಶ್ರೀಮದ್‌ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ*
*ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ*
*ದೈವಾಸುರಸಂಪದ್ವಿಭಾಗಯೋಗೋ ನಾಮ ಷೋಡಶೋಽಧ್ಯಾಯಃ ॥*

**ಅರ್ಥ**- ಇದು ಕಾರ್ಯ, ಇದು ಕಾರ್ಯವಲ್ಲ ಎಂಬ ವ್ಯವಸ್ಥೆಯನ್ನು ತಿಳಿಯಲು ನಿನಗೆ ಶಾಸ್ತ್ರವೇ ಪ್ರಮಾಣ. ಆದ್ದರಿಂದ ಶಾಸ್ತ್ರವಿಧಿಯಲ್ಲಿ ಹೇಳಲ್ಪಟ್ಟದ್ದನ್ನು ತಿಳಿದು ಕರ್ಮಗಳನ್ನು ಮಾಡು.

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ ಭಗವದ್ಗೀತೆಯಲ್ಲಿ*
*ದೈವಾಸುರಸಂಪದ್ವಿಭಾಗಯೋಗ ಎಂಬ ಹದಿನಾರನೆಯ ಅಧ್ಯಾಯವು ಮುಗಿಯಿತು.*

**ಕುತಃ ಶಾಸ್ತ್ರವಿಧ್ಯತಿಕ್ರಮೇ ಸಂಸಿದ್ಧಿಸುಖಾದ್ಯಭಾವ ಇತಿ ಶಂಕಾಂ ನಿರಸ್ಯನ್ನಂಗಾಂತರಂ ವಿಧತ್ತೇ- ತಸ್ಮಾದಿತಿ ॥**

**ಅನುವಾದ**- ಶಾಸ್ತ್ರವಿಧಿಯನ್ನು ಉಲ್ಲಂಘಿಸಿದರೆ ಮೋಕ್ಷ , ಐಹಿಕ ಸುಖ ಮೊದಲಾದವುಗಳು

ಏಕೆ ಉಂಟಾಗುವುದಿಲ್ಲ? ಈ ಶಂಕೆಯನ್ನು ಪರಿಹರಿಸಿ ಬೇರೆ ಅಂಗವನ್ನು ವಿಧಿಸುತ್ತಾನೆ 'ತಸ್ಮಾದ್' ಎಂಬ ಶ್ಲೋಕದಿಂದ.

**ಯಸ್ಮಾದಿದಂ ಕಾರ್ಯಮಿದಮಕಾರ್ಯಮಿತಿ ವ್ಯವಸ್ಥಾಯಾಂ ತೇ ತವ ವಿವೇಕಿನಃ ಶಾಸ್ತ್ರಂ ಪ್ರಮಾಣಮ್ । ತದತಿಕ್ರಮೇ ಚ ದೋಷಃ ತಸ್ಮಾದಿಹ ಲೋಕೇ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮರ್ಹಸಿ ಇತಿ ॥ 24 ॥**

*॥ ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ*
*ಷೋಡಶೋಽಧ್ಯಾಯಃ ॥*

**ಅನುವಾದ-** ಇದು ಕಾರ್ಯ, ಇದು ಕಾರ್ಯವಲ್ಲ ಎಂಬ ವ್ಯವಸ್ಥೆಯನ್ನು ತಿಳಿಯಲು, ತೇ= ವಿವೇಕಿಯಾದ ನಿನಗೆ ಶಾಸ್ತ್ರವು ಪ್ರಮಾಣ; ಅದನ್ನು ಉಲ್ಲಂಘಿಸಿದರೆ ದೋಷ; ಆದ್ದರಿಂದ ನೀನು ಶಾಸ್ತ್ರದಲ್ಲಿ ಹೇಳಿದಂತೆ ಕರ್ಮವನ್ನು ಮಾಡು. ॥ 24 ॥

*ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ*
**ಹದಿನಾರನೆಯ ಅಧ್ಯಾಯವು ಮುಗಿಯಿತು.**

# ಅಧ್ಯಾಯ - 17

**ಅರ್ಜುನ ಉವಾಚ -**

**ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥ 1 ॥**

**ಅರ್ಥ**- ಅರ್ಜುನ ಹೇಳಿದನು- ಶಾಸ್ತ್ರದ ವಿಧಿಯನ್ನು ಅರಿಯದೇ ಕೇವಲ ಶ್ರದ್ಧೆಯಿಂದಲೇ ಯಾಗವನ್ನು ಮಾಡುವವರ ನಿಷ್ಠೆ ಯಾವ ರೀತಿ ಇರುತ್ತದೆ . ಸಾತ್ವಿಕವೋ ? ರಾಜಸವೋ ? ತಾಮಸವೋ ?

## ಗೀತಾವಿವೃತಿ

**ಚತುರ್ದಶಾಧ್ಯಾಯೇ 'ನಾನ್ಯಂ ಗುಣೇಭ್ಯಃ ಕರ್ತಾರಂ' (14-19) ಇತ್ಯಾದಿನಾ ಸರ್ವೋಽಪಿ ಪರಿಣಾಮೋ ಗುಣಕೃತ ಇತಿ ಸಾಮಾನ್ಯತ ಉಕ್ತಸ್ಯಾತ್ರ ಸತ್ತ್ವಾದಿ-ಗುಣಕೃತಾನಾಂ ಶ್ರದ್ಧಾನಾಮಾಹಾರಸ್ಯ ತಪಃಪ್ರಭೃತಿಕರ್ಮಣಾಂ ಚ ಸದಸದ್ರೂ-ಪಾಣಾಂ ಭೇದೋಕ್ತ್ಯಾ ಪ್ರಪಂಚನಂ ಕ್ರಿಯತೇ ।**

**ಅನುವಾದ**- 14ನೇ ಅಧ್ಯಾಯದ 'ನಾನ್ಯಂ ಗುಣೇಭ್ಯಃ ಕರ್ತಾರಮ್' (14-19) ಮುಂತಾದ ಶ್ಲೋಕಗಳಲ್ಲಿ ಸಮಸ್ತಕಾರ್ಯಕ್ಕೂ ಗುಣವು ನಿಮಿತ್ತ ಎಂದು ಸಾಮಾನ್ಯವಾಗಿ ಹೇಳಲಾಯಿತು. ಈ ಅಧ್ಯಾಯದಲ್ಲಿ ವಿಶೇಷವಾಗಿ ಸತ್ವವೇ ಮುಂತಾದ ಗುಣಗಳನ್ನು ನಿಮಿತ್ತೀಕರಿಸಿದ ಶ್ರದ್ಧೆಗಳು, ಆಹಾರ, ತಪಸ್ಸು ಮೊದಲಾದ ಕರ್ಮಗಳು ಇವೆಲ್ಲವೂ **ಸತ್** ಹಾಗೂ, **ಅಸತ್** ಎಂದು[1] ಭಿನ್ನ ಭಿನ್ನವಾಗಿದೆ ಎಂದು ವಿಸ್ತಾರವಾಗಿ ಹೇಳುತ್ತಿದ್ದಾರೆ.

**ಪೂರ್ವತ್ರ ಶಾಸ್ತ್ರವಿಧಾನೋಕ್ತಂ ಜ್ಞಾತ್ವಾ ಕರ್ಮ ಕಾರ್ಯಮಿತ್ಯುಕ್ತೇ ಲಬ್ಧಾವ-ಸರೋಽರ್ಜುನಃ ಶಾಸ್ತ್ರವಿಧ್ಯಜ್ಞಾನಿನಾಂ ಕಾ ಸ್ಥಿತಿರಿತಿ ಪೃಚ್ಛತಿ- ಯ ಇತಿ ॥ ಯೇ ಜನಾಃ**

---

1. ಸತ್ ಮೋಕ್ಷಸಾಧನ. ಅಸತ್ ಮೋಕ್ಷಕ್ಕೆ ವಿರೋಧಿ. ಆದ್ದರಿಂದ ಸದಸತ್ ವಿಭಾಗವನ್ನು ತಿಳಿಯುವುದು ಅಗತ್ಯ.

**ಶಾಸ್ತ್ರವಿಧಿಮುತ್ಸೃಜ್ಯ ಅಜ್ಞಾತ್ವಾ ಶ್ರದ್ಧಯಾಽನ್ವಿತಾಃ ಶ್ರದ್ಧಾಮಾತ್ರೇಣ ಯಜಂತೇ ತೇಷಾಂ ನಿಷ್ಠಾ ತು ಸ್ಥಿತಿಸ್ತು ಕಾ ಕೀದೃಶೀ । ತಾಮೇವ ವಿವಿಚ್ಯಾಹ- ಸತ್ತ್ವಮಿತ್ಯಾ-ದಿನಾ ॥ ಕಿಂ ಸಾತ್ತ್ವಿಕೀ ರಾಜಸೀ ತಾಮಸೀ ವಾ ಸ್ಥಿತಿರಿತ್ಯರ್ಥಃ । ತೇ ಕಿಂ ಸಾತ್ವಿಕಾ ರಾಜಸಾಸ್ತಾಮಸಾ ವೇತಿ ಯಾವತ್ ॥ 1 ॥**

**ಅನುವಾದ-** ಶಾಸ್ತ್ರದಲ್ಲಿ ಹೇಳಿದ ವಿಧಾನವನ್ನು ಅರಿತು ಕರ್ಮವನ್ನು ಆಚರಿಸಬೇಕು ಎಂದು ಹಿಂದೆ ಹೇಳಲ್ಪಟ್ಟಿತ್ತು[1]. ಅರ್ಜುನ ಈಗ ಪ್ರಶ್ನೆಯನ್ನು ಕೇಳುತ್ತಿದ್ದಾನೆ. ಶಾಸ್ತ್ರದ ವಿಧಿಯನ್ನು ತಿಳಿಯದ ಮಂದಿಯ ನಿಷ್ಠೆ ಯಾವ ರೀತಿ ಇರುತ್ತದೆ ? **ಯೇ**= ಯಾವ ಮಂದಿ, **ಶಾಸ್ತ್ರವಿಧಿ-ಮುತ್ಸೃಜ್ಯ**= ಶಾಸ್ತ್ರದ ವಿಧಿಯನ್ನು ತಿಳಿಯದೇ, **ಶ್ರದ್ಧಯಾನ್ವಿತಾಃ**= ಕೇವಲ ಶ್ರದ್ಧೆಯಿಂದ, **ಯಜಂತೇ**= ಕರ್ಮಗಳನ್ನು ಮಾಡುತ್ತಾರೋ ಅವರ, **ನಿಷ್ಠಾತು**= ಸ್ಥಿತಿಯಾದರೂ, **ಕಾ**= ಯಾವ ರೀತಿಯದು ? ಅದನ್ನು ವಿವರಿಸುತ್ತಾನೆ. ಅವರ ಸ್ಥಿತಿಯು ಸಾತ್ವಿಕವೋ ? ರಾಜಸವೋ ? ತಾಮಸವೋ ? ಅವರು ಸಾತ್ವಿಕರೋ ? ರಾಜಸರೋ? ತಾಮಸರೋ ? ಎಂದು ಅಭಿಪ್ರಾಯ.

## ಶಾಸ್ತ್ರವಿಧಿಯನ್ನು ಬಿಟ್ಟವರು

'ಶಾಸ್ತ್ರವಿಧಿಮುತ್ಸೃಜ್ಯ' ಎಂಬ ಪದಕ್ಕೆ ಶಾಸ್ತ್ರದ ವಿಧಿಯನ್ನು ಅಪ್ರಮಾಣವೆಂದು ಪರಿತ್ಯಜಿಸಿದವರು ಎಂಬ ಅರ್ಥ ಮೇಲ್ನೋಟಕ್ಕೆ ತೋರುತ್ತದೆ. ಹಾಗೆ ಅರ್ಥವಲ್ಲವೆಂದು ಭಾಷ್ಯದಲ್ಲಿ ತೋರಿಸಿದ್ದಾರೆ. ಸಮಸ್ತ ವೇದಶಾಸ್ತ್ರವನ್ನು ತ್ರೈವರ್ಣಿಕರು ಅರ್ಥಸಹಿತ ಅಧ್ಯಯನ ಮಾಡಬೇಕೆಂದು ಶಾಸ್ತ್ರವಿಧಿ ಇದೆ. ವೇದವನ್ನು ಓದದವರು ಅಥವಾ ಅರ್ಥ ಸಹಿತವಾಗಿ ವೇದವನ್ನು ಓದದವರು ಇವರೇ ಶಾಸ್ತ್ರವಿಧಿಯನ್ನು ಪರಿತ್ಯಜಿಸಿದವರು.

## ಮೂರುವಿಧ ಶ್ರದ್ಧೆ

**ಶ್ರೀ ಭಗವಾನುವಾಚ -**

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ 2 ॥**

**ಅರ್ಥ-** ಶ್ರೀ ಭಗವಾನುವಾಚ - ಶ್ರದ್ಧೆಯು ಜೀವರ ಸ್ವಭಾವದಿಂದಲೇ ಹುಟ್ಟಿರುವುದು. ಅದು ಮೂರು ವಿಧವಾಗಿದೆ. 1. ಸಾತ್ವಿಕ, 2. ರಾಜಸ, 3. ತಾಮಸಶ್ರದ್ಧೆ. ಆ ಶ್ರದ್ಧೆಯನ್ನು ಹೊಂದಿರುವವರು ಮಾಡುವ ಕರ್ಮದ ಪ್ರಕಾರವನ್ನು ಕೇಳು.

---

1. ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ (16-24)

**ತೇ ತ್ರಿವಿಧಾ ಅಪಿ ಸಂತೀತಿ ಭಾವೇನ ಪ್ರಾಕ್ ಯಾಗಾಂಗತಯಾ ಯಷ್ಟೃವಿಶೇಷಣತ್ವೇನೋಕ್ತ ಶ್ರದ್ಧಾಂ ಸಾತ್ತ್ವಿಕತ್ವಾದಿನಾ ವಿಭಜ್ಯ ತದಾಶ್ರಯೇಣ ತೇಷಾಂ ಸಾತ್ವಿಕತ್ವಾದಿ ಸ್ವರೂಪಮಾಹ- ತ್ರಿವಿಧೇತಿ ದ್ವಾಭ್ಯಾಂ ॥**

**ಅನುವಾದ-** ಮೂರು ಬಗೆಯ ಶ್ರದ್ಧಾಳುಗಳಿರುವರು ಎಂಬ ಅಭಿಪ್ರಾಯದಿಂದ ಹಿಂದೆ ಯಾಗದ ಅಂಗವಾಗಿ ಯಷ್ಟೃವಿಗೆ ವಿಶೇಷಣವಾಗಿ ಹೇಳಲ್ಪಟ್ಟ ಶ್ರದ್ಧೆಯನ್ನು ಸಾತ್ವಿಕವೇ ಮೊದಲಾದ ಪ್ರಕಾರದಿಂದ ವಿಭಜಿಸಿ ಅದನ್ನು ಹೊಂದಿರುವವರ ಸಾತ್ವಿಕತೆಯೇ ಮುಂತಾದ ಅವರ ಸ್ವರೂಪವನ್ನು ಎರಡು ಶ್ಲೋಕದಿಂದ ಹೇಳುತ್ತಿದ್ದಾನೆ.

**ಶ್ರದ್ಧಾ ಆಸ್ತಿಕ್ಯನಿಷ್ಠಾ ಸ್ವಭಾವಜೈವೇತ್ಯನ್ವಯಃ। ಮನೋವೃತ್ತಿಶ್ರದ್ಧಾವ್ಯಾವೃತ್ತಯೇ ಸ್ವಭಾವಜೈವೇತ್ಯುಕ್ತಮ್ । ತಾಂ ತ್ರಿವಿಧಾಂ ಶೃಣು ಶ್ರುತ್ವಾ ತತ್ರ ನಿಷ್ಠಾಂ ಕುರ್ವಿತ್ಯರ್ಥಃ। ತದನ್ವಿತೈಃ ಕ್ರಿಯಮಾಣಯಜನಪ್ರಕಾರಂ ಶೃಣ್ವಿತ್ಯರ್ಥಃ ॥ 2 ॥**

**ಅನುವಾದ-** ಶ್ರದ್ಧಾ-ಆಸ್ತಿಕ್ಯ ಬುದ್ಧಿ,ಸ್ವಭಾವದಿಂದಲೇ ಹುಟ್ಟುತ್ತದೆ, 'ಸ್ವಭಾವಜೈವ ಎಂದು ಏವಕಾರಾನ್ವಯ. ಮನೋವೃತ್ತಿಯಾದ ಶ್ರದ್ಧೆಯು ಇನ್ನೊಂದರ ನಿಮಿತ್ತವಾಗಿ ಕಾಣಿಸುತ್ತದೆ. ಆದರೆ ಇಲ್ಲಿಹೇಳಿರುವ ಶ್ರದ್ಧೆಯು ನೈಮಿತ್ತಿಕವಲ್ಲ. ಆದ್ದರಿಂದಲೇ 'ಸ್ವಭಾವಜೈವ ' ಎಂದಿದ್ದಾರೆ. ಆ ಮೂರು ಪ್ರಕಾರವಾದ ಶ್ರದ್ಧೆಯನ್ನು ಕೇಳು. ಅದರಲ್ಲಿನಿಷ್ಠೆಯನ್ನು ಮಾಡು. ಆ ಶ್ರದ್ಧೆಯಿಂದ ಸಹಿತರಾದವರು ಮಾಡುವ ಯಜನಪ್ರಕಾರವನ್ನು ಕೇಳು ಎಂದು ಅರ್ಥ.

**ಶ್ರದ್ಧಾ = ಸ್ವಭಾವ**

**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥ 3 ॥**

**ಅರ್ಥ-** ಎಲ್ಲ ಜೀವರಾಶಿಗಳ ಶ್ರದ್ಧೆಯು ಅವರ ಸ್ವರೂಪಯೋಗ್ಯತೆಗೆ ಅನುಗುಣವಾಗಿ ಇರುವುದು. ಜೀವನು ಶ್ರದ್ಧಾಸ್ವರೂಪನು. ಯಾವ ರೀತಿಯ ಶ್ರದ್ಧೆಯನ್ನು ಹೊಂದಿರುವನೋ ಅವನು ಅದೇ ಸ್ವಭಾವದವನಾಗಿರುವನು.

**ಅಸ್ತು ಶ್ರದ್ಧಾತ್ರಿವಿಧಾ। ತೇಷಾಂ ಕಾ ನಿಷ್ಠೇತಿ ಪ್ರಶ್ನಸ್ಯ ಕಿಮುತ್ತರಮಿತ್ಯತ ಆಹ- ಯೋ ಯಚ್ಛ್ರದ್ಧಃ ಸ ಏವ ಸ ಇತಿ ॥ ಯೋ ಯಜಮಾನಃ ಸಾತ್ತ್ವಿಕಶ್ರದ್ಧಃ ಸ ಸಾತ್ತ್ವಿಕಃ। ಯೋ ರಾಜಸಶ್ರದ್ಧಃ ಸ ರಾಜಸಃ। ಯಸ್ತಾಮಸಶ್ರದ್ಧಃ ಸ ತಾಮಸ ಇತ್ಯರ್ಥಃ। ಕುತ ಏವಮಿತ್ಯತಸ್ತದುಪಪಾದನಾಯೋಕ್ತಮ್- ಸತ್ತ್ವೇತಿ ॥ ಸರ್ವಸ್ಯ**

**ಜಂತೋಃ ಶ್ರದ್ಧಾ ಸತ್ತ್ವಾನುರೂಪಾ ಜೀವಸ್ವರೂಪಾನುರೂಪಾ ಭವತಿ । 'ಸತ್ತ್ವಂ ಜೀವಃ ಕ್ವಚಿತ್ಪ್ರೋಕ್ತಃ' ಇತ್ಯಾದಿವಚನಾತ್ । ಶ್ರದ್ಧಾಯಾಃ ಜೀವಸ್ವರೂಪಾನುರೂಪತ್ವಾತ್ ತಯಾ ತತ್ಸ್ವರೂಪಂ ಜ್ಞೇಯಂ ಇತ್ಯರ್ಥಃ । ಶ್ರದ್ಧಾಯಾಃ ಜೀವಾನುರೂಪತ್ವಮೇವ ಕುತ ಇತ್ಯತ ಉಕ್ತಮ್- ಶ್ರದ್ಧೇತಿ ॥ ಅಯಂ ಪುರುಷೋ ಜೀವಃ ಶ್ರದ್ಧಾಮಯಃ । ತಾದಾತ್ಮ್ಯಾರ್ಥೇ ಮಯಟ್ । ಶ್ರದ್ಧಾಸ್ವರೂಪ ಇತ್ಯರ್ಥಃ ॥ 3 ॥**

**ಅನುವಾದ-** ಶ್ರದ್ಧೆಯು ಮೂರು ವಿಧ. ಆದರೆ ಆ ಶ್ರದ್ಧಾಳುಗಳ ನಿಷ್ಠೆಯು ಯಾವ ರೀತಿ ಇರುತ್ತದೆ ? ಎಂಬ ಪ್ರಶ್ನೆಗೆ ಏನು ಉತ್ತರ ಎಂದರೆ **'ಯೋ ಯಚ್ಛ್ರದ್ಧಃ ಸ ಏವ ಸಃ'** ಎಂದು ಉತ್ತರಿಸಿದ್ದಾನೆ. **ಯಃ**= ಯಾವ ಯಜಮಾನನು ಸಾತ್ವಿಕಶ್ರದ್ಧೆಯನ್ನು ಹೊಂದಿರುವನೋ ಅವನು ಸಾತ್ವಿಕ ಸ್ವಭಾವದವನು . ಯಾರು ರಾಜಸ ಶ್ರದ್ಧೆಯುಳ್ಳವನೋ ಅವನು ರಾಜಸನು, ತಾಮಸ ಶ್ರದ್ಧೆ ಇರುವವನು ತಾಮಸನು. ಹೀಗೆ ಏಕೆ ? ಎಂಬುದನ್ನು ಪ್ರತಿಪಾದಿಸಲು **'ಸತ್ವಾನುರೂಪಾ ಸರ್ವಸ್ಯ'** ಎಂದಿದ್ದಾನೆ. ಸಮಸ್ತ ಜೀವರಾಶಿಯ ಶ್ರದ್ಧೆಯೂ ಜೀವಸ್ವರೂಪಕ್ಕನುಗುಣವಾಗಿರುವುದು. ಸತ್ವವೆಂದರೆ ಜೀವ ಸ್ವರೂಪ. ಇದಕ್ಕೆ **'ಸತ್ವಂ ಜೀವಃ ಕ್ವಚಿತ್ ಪ್ರೋಕ್ತಃ'** ಎಂದು ವಚನವು ಆಧಾರವಾಗಿದೆ. ಅದರಿಂದ ಶ್ಲೋಕದಲ್ಲಿರುವ ಸತ್ವಾನುರೂಪಾ ಎಂಬುದಕ್ಕೆ ಸತ್ವ ಗುಣಕ್ಕೆ ಅನುಗುಣವಾದುದು ಎಂದು ಅರ್ಥೈಸಬಾರದು. ಎಲ್ಲರ ಶ್ರದ್ಧೆಯೂ ಸಾತ್ವಿಕವಲ್ಲ. ಕೆಲವರ ಶ್ರದ್ಧೆಯು ಮಾತ್ರ ಸಾತ್ವಿಕ. ಶ್ರದ್ಧೆಯು ಜೀವನ ಸ್ವರೂಪಕ್ಕೆ ಅನುಗುಣವಾಗಿರುವುದು ಅದರಿಂದ ಅದು ಜೀವನ ಸ್ವರೂಪವನ್ನು ತಿಳಿಯಲು ಕಾರಣವಾಗಿರುವುದು. ಶ್ರದ್ಧೆಯು ಜೀವ ಸ್ವರೂಪಕ್ಕೇ ಅನುಗುಣವಾದುದು ಏಕೆ ? ಇದಕ್ಕೆ ಉತ್ತರಿಸಲು **'ಶ್ರದ್ಧಾಮಯೋಽಯಂ ಪುರುಷಃ'** ಎನ್ನಲಾಗಿದೆ, **ಅಯಂ ಪುರುಷಃ**= ಈ ಜೀವನು, **ಶ್ರದ್ಧಾಮಯಃ**= ಶ್ರದ್ಧಾಸ್ವರೂಪನು. 'ಶ್ರದ್ಧಾಮಯಃ' ಎಂಬಲ್ಲಿ 'ಮಯಟ್' ಪ್ರತ್ಯಯವು ತಾದಾತ್ಮ್ಯ ಎಂಬ ಅರ್ಥದಲ್ಲಿದೆ.

**ವಿವರಣೆ-** ಶ್ರದ್ಧೆಯು ಎರಡು ವಿಧ. ಸ್ವರೂಪಭೂತವಾದ ಶ್ರದ್ಧೆ . ಅಂತಃಕರಣ ಪರಿಣಾಮ ರೂಪವಾದ ಶ್ರದ್ಧೆ . ಹೆಚ್ಚಾಗಿ ಸ್ವರೂಪಭೂತ ಶ್ರದ್ಧೆಗನುಗುಣವಾಗಿ ಮನಃ ಪರಿಣಾಮರೂಪ ಶ್ರದ್ಧೆಯು ಅಭಿವ್ಯಕ್ತವಾಗುತ್ತದೆ. ಪರಿಸರದ ಪ್ರಭಾವವು ಜೀವರಲ್ಲಿ ಸುಪ್ತವಾಗಿರುವ ಶ್ರದ್ಧೆಯ ಅಭಿವ್ಯಕ್ತಿಗೆ ಕಾರಣವಾಗುತ್ತದೆ. ಮಣ್ಣು ಗೊಬ್ಬರ ಇವೆಲ್ಲವೂ ಬೀಜದಲ್ಲಿರುವ ಗುಣವನ್ನೇ ಅಭಿವ್ಯಕ್ತಿಗೊಳಿಸುತ್ತವೆ. ಜೀವರ ಪ್ರವೃತ್ತಿಯು ಅವರ ಸ್ವಭಾವಕ್ಕನುಗುಣವಾಗಿರುವುದು. ಜೀವನ ಪ್ರವೃತ್ತಿಯು ಹೆಚ್ಚಾಗಿ ಯಾವ ರೀತಿ ಇರುವುದೋ ಅದರಿಂದ ಅವನು ಸಾತ್ವಿಕನೋ, ರಾಜಸನೋ, ತಾಮಸನೋ ಎಂದು ನಿರ್ಣಯಿಸಬಹುದು.

**ಯಜಂತೇ ಸಾತ್ತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ ।**
**ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥ 4 ॥**

**ಅರ್ಥ**– ಸಾತ್ವಿಕ ಪ್ರಕೃತಿಯವರು ದೇವತೆಗಳನ್ನು ಆರಾಧಿಸುವರು. ರಾಜಸರು ಯಕ್ಷರಾಕ್ಷಸರನ್ನು ಆರಾಧಿಸುತ್ತಾರೆ. ತಾಮಸ ಜನರು ಭೂತಪ್ರೇತಗಳ ಗಣವನ್ನೇ ಆರಾಧಿಸುವರು.

**'ಯೋ ಯಚ್ಛ್ರದ್ಧಃ' ಇತ್ಯತ್ರ ಸಾತ್ತ್ವಿಕಾದಿಶ್ರದ್ಧಃ ಸಾತ್ತ್ವಿಕಾದಿರಿತ್ಯುಕ್ತಮ್ । ತತ್ರ ಸಾತ್ತ್ವಿಕಶ್ರದ್ಧಾದಿಃ ಕಿಂಕರ್ಮವಾನಿತಿ ಜಿಜ್ಞಾಸಾಯಾಂ ತಾಂ ಶೃಣ್ವಿತಿ ಪ್ರತಿಜ್ಞಾತ-ಮಾಹ- ಯಜಂತ ಇತಿ ॥ ಸಾತ್ತ್ವಿಕಾಃ ಸಾತ್ತ್ವಿಕಶ್ರದ್ಧಾವಂತಃ, ಶಾಸ್ತ್ರವಿಧಾನ-ಮಜಾನಂತೋಽಪಿ ಸಾತ್ತ್ವಿಕಶ್ರದ್ಧಾಮಾತ್ರಾನ್ವಿತಾ ಜನಾ ಇತಿ ಯಾವತ್ । ದೇವಾನ್ ಯಜಂತೇ । ರಾಜಸಾ ರಾಜಸಶ್ರದ್ಧಾವನ್ತಃ ಶಾಸ್ತ್ರವಿಧಾನಮಜಾನಂತ ಇತಿ ಸರ್ವತ್ರ ಜ್ಞೇಯಮ್ । ಯಕ್ಷರಕ್ಷಾಂಸಿ ಯಜಂತೇ । ತಾಮಸಾಸ್ತಾಮಸ-ಶ್ರದ್ಧಾವಂತಃ ಪ್ರೇತಾದೀನ್ ಯಜಂತೇ ।**

**ಅನುವಾದ**– 'ಯೋ ಯಚ್ಛ್ರದ್ಧಃ' ಶ್ಲೋಕದಲ್ಲಿ ಸಾತ್ವಿಕ ಶ್ರದ್ಧೆವುಳ್ಳವನು ಸಾತ್ವಿಕನು, ರಾಜಸ ಶ್ರದ್ಧೆವುಳ್ಳವನು ರಾಜಸ, ತಾಮಸಶ್ರದ್ಧೆವುಳ್ಳವನು ತಾಮಸ ಎಂದು ಹೇಳಲ್ಪಟ್ಟಿದೆ. ಈ ರೀತಿ ಸಾತ್ವಿಕ ಶ್ರದ್ಧೆವುಳ್ಳವರೇ ಮೊದಲಾದವರು ಯಾವ ರೀತಿ ಕರ್ಮಾನುಷ್ಠಾನ ಮಾಡುವರು ಎಂದು ತಿಳಿಯಲು ಅಪೇಕ್ಷಿಸಿದಾಗ (17–2) ಶೃಣು ಎಂದು ಪ್ರತಿಜ್ಞಾತವಾದ ವಿಷಯವನ್ನು ಕೃಷ್ಣನು ಇಲ್ಲಿ ಹೇಳುತ್ತಿದ್ದಾನೆ.

**ಸಾತ್ವಿಕಾ**– ಸಾತ್ವಿಕಶ್ರದ್ಧೆವುಳ್ಳವರು. ಶಾಸ್ತ್ರದ ವಿಧಿಯನ್ನು ತಿಳಿಯದವರಾದರೂ ಕೇವಲ ಸಾತ್ವಿಕ ಶ್ರದ್ಧೆಯನ್ನು ಹೊಂದಿರುವವರು ಎಂದು ಅಭಿಪ್ರಾಯ. ಇವರು ದೇವತೆಗಳನ್ನು ಆರಾಧಿಸುವರು. **ರಾಜಸಾ**– ರಾಜಸಶ್ರದ್ಧೆವುಳ್ಳವರು, ಶಾಸ್ತ್ರದ ವಿಧಿಯನ್ನು ಅರಿಯದವರು ಎಂದು ಎಲ್ಲ ಸ್ಥಳದಲ್ಲೂ ಇಟ್ಟುಕೊಳ್ಳಬೇಕು . ಇವರು ಯಕ್ಷರಾಕ್ಷಸರನ್ನು ಪೂಜಿಸುವರು. **ತಾಮಸಾ**– ಶಾಸ್ತ್ರ ವಿಧಿಯನ್ನು ತಿಳಿಯದ ತಾಮಸ ಶ್ರದ್ಧೆಯವರು ಪ್ರೇತಾದಿಗಳನ್ನು ಪೂಜಿಸುವರು.

**ಯದ್ಯಪಿ ಯಾಗವಿಧಿಷು 'ಐಂದ್ರಂ ದಧಿ' ಇತ್ಯಾದಿಷು ಇಂದ್ರಾದಿದೇವತಾ ಏವೋದ್ದೇಶ್ಯತಯಾ ಶ್ರುತಾಃ ಇತಿ ರಾಜಸಾದಿರಪಿ ತತ್ರ ಶ್ರುತದೇವತೋದ್ದೇಶೇನೈವ ಯಜನಂ ಕರೋತಿ । ತಥಾಪಿ 'ತೈರಿಷ್ಟಂ ಯಕ್ಷರಾಕ್ಷಸಾಃ ದೀನತ್ವಾದ್ ದೇವ-ನಾಮಾನೋ ಬ್ರಹ್ಮೇಂದ್ರಾದಿಸನಾಮಕಾಃ ಗೃಹ್ಣಂತಿ' (ಮಹಾವಿಷ್ಣು ಪು.) ಇತಿ ಸ್ಮೃತ್ಯಾ ತತ್ತನ್ನಾಮಕಯಕ್ಷಾದೀನಾಮೇವ ತತ್ತದ್ಯಜ್ಞಭೋಕ್ತೃತ್ವಾದ್ ಯಕ್ಷರಕ್ಷಾಂಸಿ ಯಜಂತ ಇತ್ಯಾದ್ಯುಕ್ತಮಿತಿ ಜ್ಞೇಯಮ್ । ಅತ್ರ ದೇವಯಾಜಿನಾಂ ವಿಷ್ಣುಭಕ್ತ್ಯಾದಿ-ಮತ್ತ್ವಾನ್ಮೋಕ್ಷ ಏವ ಫಲಮ್ । ರಾಜಸಾನಾಂ ತು ಸ್ವರ್ಗಪ್ರತಿನಿಧಿತ್ವೇನ ಕಲ್ಪಿತಃ**

**ಸಾಂಕಲ್ಪಿಕಃ ಸ್ವರ್ಗಃ । ತಾಮಸಾನಾಂ ತು ಶಿವಪರಿವಾರಭೂತಾದಿತ್ವಪ್ರಾಪ್ತಿಃ ಫಲಂ ಜ್ಞೇಯಮ್ । ಮೋಕ್ಷಃ ಸಾಂಕಲ್ಪಿಕಃ ಸ್ವರ್ಗೋ ಭೂತಾದಿತ್ವಂ ಫಲಂ ಕ್ರಮಾತ್ (ಮಹಾವಿಷ್ಣು ಪು.) ಇತಿ ಸ್ಮೃತೇಃ ॥ 4 ॥**

**ಅನುವಾದ**- '**ಐಂದ್ರಂ ದಧಿ**' ಇವೇ ಮುಂತಾದ ಯಾಗ ವಿಧಿಗಳಲ್ಲಿ ಇಂದ್ರನೇ ಮೊದಲಾದ ದೇವತೆಗಳನ್ನೇ ಉದ್ದೇಶವಾಗಿಸಿ ಕರ್ಮಾನುಷ್ಠಾನವು ಶ್ರುತವಾಗಿದೆ. ಆದ್ದರಿಂದ ರಾಜಸರೇ ಮೊದಲಾದವರು ಕೂಡ ಅಲ್ಲಿ ಶ್ರುತವಾದ ದೇವತೆಯನ್ನೇ ಉದ್ದೇಶ್ಯವಾಗಿಸಿ ಕರ್ಮಾನುಷ್ಠಾನವನ್ನು ಮಾಡುವರು. ಆದರೂ 'ಬ್ರಹ್ಮ , ಇಂದ್ರ , ಇವರೇ ಮೋದಲಾದ ದೇವತೆಗಳ ಸಮಾನನಾಮವುಳ್ಳ ಯಕ್ಷರಾಕ್ಷಸರು ದೀನರಾದ್ದರಿಂದ ದೇವರೆನಿಸಿರುವವರು. ರಾಜಸರು ಮಾಡುವ ಯಾಗದ ಫಲವನ್ನು ಭೋಗಿಸುವರು ' ಎಂದು ಸ್ಮೃತಿಯು ಇರುವುದರಿಂದ ಕೃಷ್ಣನು '**ಯಕ್ಷ ರಕ್ಷಾಂಸಿ ಯಜಂತೇ**' ಎಂದಿರುವನು. ದೇವತೆಗಳನ್ನು ಉದ್ದೇಶಿಸಿ ಯಾಗ ಮಾಡುವ ಸಾತ್ವಿಕರು ವಿಷ್ಣುಭಕ್ತ್ಯಾದಿ ಗುಣಗಳನ್ನು ಹೊಂದಿರುತ್ತಾರೆ. ಆದ್ದರಿಂದ ಅವರಿಗೆ ಮೋಕ್ಷವೇ ಫಲ. ರಾಜಸರು ಸ್ವರ್ಗಪ್ರತಿನಿಧಿಯಾಗಿ ಕಲ್ಪಿತವಾದ ಸ್ವರ್ಗವನ್ನು ಹೊಂದುವರು. ತಾಮಸರು ಶಿವನ ಪರಿವಾರರಾದ ಭೂತಾದಿಗಳಾಗುವರು. '**ಮೋಕ್ಷಃ ಸಾಂಕಲ್ಪಿಕಃ ಸ್ವರ್ಗಃ ಭೂತಾದಿತ್ವಂ ಫಲಂ ಕ್ರಮಾತ್**'ಎಂಬ ಸ್ಮೃತಿಯೇ ಈ ವಿಷಯದಲ್ಲಿ ಆಧಾರ.

## ಅಸುರ ಬುದ್ಧಿಯವರು

**ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ ।**
**ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥ 5 ॥**

**ಅರ್ಥ**- ವೇದಾನುಕೂಲವಲ್ಲದ ಆಗಮಗಳಿಂದ ವಿಹಿತವಾದ ಕ್ಲೇಶರೂಪವಾದ ತಪಸ್ಸನ್ನು ವಂಚನೆ, ಅಹಂಕಾರ, ದುಷ್ಟಕಾಮನೆಗಳು ಮತ್ತು ಆಗ್ರಹ ಇವುಗಳಿಂದ ಸಹಿತರಾಗಿ ಮಾಡುವವರು ತಾಮಸರು.

ನ ಕೇವಲಂ ತಾಮಸಾನಾಂ ಭೂತಾದಿತ್ವಂ ತಮಃಪ್ರಾಪ್ತಿರಪೀತ್ಯಾಹ- **ಅಶಾಸ್ತ್ರೇತ್ಯಾದಿ ದ್ವಾಭ್ಯಾಮ್** ॥ ಯೇ ಜನಾಃ ಶಾಸ್ತ್ರಾದನ್ಯೇನ ದುರಾಗಮಾದಿನಾ ವಿಹಿತಂ ಘೋರಂ ಮಹಾಕಷ್ಟರೂಪಂ ತಪಃ ದಂಭಾಹಂಕಾರಸಂಯುಕ್ತಾ ಕಾಮರಾಗಬಲಾನ್ವಿತಾಃ ಇಚ್ಛಾಸಕ್ತ್ಯಾಗ್ರಹಯುಕ್ತಾಃ ಸಂತಃ ತಪ್ಯಂತೇ ಕುರ್ವಂತಿ । ॥ 5 ॥

**ಅನುವಾದ**- ತಾಮಸಜೀವಿಗಳು ಕೇವಲ ಭೂತಾದಿಗಳಾಗುವುದಲ್ಲ. ತಮಸ್ಸಿಗೂ ತೆರಳುವರು ಎಂದು ಎರಡು ಶ್ಲೋಕಗಳಿಂದ ಹೇಳುತ್ತಿದ್ದಾನೆ. ಯಾವ ಜನರು[1] ಶಾಸ್ತ್ರವಲ್ಲದ ದುರಾಗಮಗಳಿಂದ ವಿಹಿತವಾದ, **ಘೋರಂ**= ಮಹಾಕ್ಲೇಶರೂಪವಾದ ತಪಸ್ಸನ್ನು ಕಾಪಟ್ಯ ಅಹಂಕಾರ ಇವುಗಳಿಂದ ಸಹಿತರಾಗಿ **ಕಾಮರಾಗಬಲಾನ್ವಿತಾಃ**= ಇಚ್ಛೆ , ಆಸಕ್ತಿ, ಆಗ್ರಹ ಇವುಗಳಿಂದ ಯುಕ್ತರಾಗಿ, **ತಪ್ಯಂತೇ**= ಮಾಡುತ್ತಾರೆ. ಅವರು ದೈತ್ಯರು, ರಾಕ್ಷಸರು ಅಥವಾ ಪಿಶಾಚರು.

**ಕರ್ಶಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾಂತಃ ಶರೀರಸ್ಥಂ ತಾನ್ ವಿದ್ಧ್ಯಾಸುರನಿಶ್ಚಯಾನ್ ॥ 6 ॥**

**ಅರ್ಥ**- ಅರ್ಜುನ ! ಶರೀರದಲ್ಲಿರುವ ತತ್ತ್ವಾಭಿಮಾನಿದೇವತೆಗಳನ್ನು , ಅವರ ಒಳಗೆ ನಿಯಾಮಕನಾಗಿರುವ ಪರಮಾತ್ಮನನ್ನು ಅಲ್ಪಗುಣವುಳ್ಳವನೆಂದು ತಿಳಿಯುವ ಅವಿವೇಕಿಗಳು ಆಸುರಸ್ವಭಾವದವರೆಂದು ತಿಳಿ.

**ಕಿಂಚ ಶರೀರಸ್ಥಂ ಭೂತಗ್ರಾಮಂ ಲಕ್ಷ್ಮ್ಯಾದಿದೇವತಾಸಮುದಾಯಂ ಮಾಂ ಚಾಂತರ್ನಿಯಾಮಕತ್ವೇನ ಶರೀರಸ್ಥಂ ಕರ್ಶಯಂತೋಽ(ತಃ ಕೃಶತ್ವೇನಾ)ಲ್ಪಗುಣತ್ವೇನ ಪಶ್ಯಂತೋಽಚೇತಸೋಽವಿವೇಕಿನಃ । ತಾನಾಸುರನಿಶ್ಚಯಾನಸುರಸಂಬಂಧಿನಿಶ್ಚಯಾನ್ ವಿದ್ಧಿ ಜಾನೀಹಿ । ತೇ ದೈತ್ಯರಕ್ಷಃಪಿಶಾಚಾ ಇತ್ಯರ್ಥಃ । ತಮಃಪ್ರಾಪ್ತಿಯೋಗ್ಯಾ ಇತಿ ಭಾವಃ ॥ 6 ॥**

**ಅನುವಾದ**- ಶರೀರದಲ್ಲಿರುವ **ಭೂತಗ್ರಾಮಂ**- ಲಕ್ಷ್ಮ್ಯಾದಿ ದೇವತಾಸಮುದಾಯವನ್ನು, ಅವರ ಒಳಗೆ ನಿಯಾಮಕನಾಗಿರುವ ನನ್ನನ್ನು (ಪರಮಾತ್ಮನನ್ನು )ಸಹ ಅಲ್ಪಗುಣವುಳ್ಳವನೆಂದು ತಿಳಿಯುವವರು ಅವಿವೇಕಿಗಳು. ಅವರನ್ನು ಆಸುರಸ್ವಭಾವದವರೆಂದು ತಿಳಿ. ಅವರು ದೈತ್ಯರು, ರಾಕ್ಷಸರು ಅಥವಾ ಪಿಶಾಚರು. ತಮಸ್ಸನ್ನು ಹೊಂದಲು ಯೋಗ್ಯರು ಎಂದು ಅಭಿಪ್ರಾಯ.

## ಸಾತ್ವಿಕ-ರಾಜಸ-ತಾಮಸರಿಗೆ ಪ್ರಿಯವಾದ ಆಹಾರ-ಯಜ್ಞ-ತಪಸ್-ದಾನ

**ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥ 7 ॥**

---

1. ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಮ್ ।
ಮೂಲರಾಮಾಯಣಂ ಚೇತಿ ಸಂಭಿನ್ನಃ ಶಾಸ್ತ್ರಪುಂಗವಃ ॥
ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಮ್ ॥
ದುರಾಗಮಾಸ್ತದನ್ಯೇ ಯೇ ತೈರ್ನ ಜ್ಞೇಯೋ ಜನಾರ್ದನಃ ॥

**ಅರ್ಥ-** ಸಾತ್ವಿಕ, ರಾಜಸ, ತಾಮಸರೆಂದು ಮೂರು ವಿಧರಾದ ಮಂದಿಗೆ ಪ್ರಿಯವಾದ ಆಹಾರವೂ ಮೂರು ವಿಧ. ಅವರ ಯಜ್ಞ, ತಪಸ್ಸು, ದಾನವೂ ಮೂರು ವಿಧವಾಗಿದೆ. ಅದರ ಈ ವಿಶೇಷವನ್ನು ಕೇಳು.

**ಶ್ರದ್ಧಾಭೇದಾತ್ ಸಾತ್ತ್ವಿಕಾದಿಭೇದಃ, ತತ್ತದೀಯಸದಸತ್ಕರ್ಮವಿವೇಕೇನ ಸಾತ್ತ್ವಿಕಾದಿಸ್ವರೂಪವಿವೇಕ ಉಕ್ತಃ । ಆಹಾರಾದಿಭೇದೇನಾಪಿ ತೇಷಾಂ ವಿವೇಕಂ ಪ್ರತಿಜ್ಞಾಪೂರ್ವಮಾಹ- ಆಹಾರಸ್ತ್ವಿತ್ಯಾದಿ ಸಪ್ತಭಿಃ ॥ ಸರ್ವಸ್ಯೇತಿ । ಸಾತ್ತ್ವಿಕಾದಿ-ಜನಸ್ಯೇತ್ಯರ್ಥಃ । ಯಜ್ಞಸ್ತಪೋ ದಾನಂ ತಥಾ ತ್ರಿವಿಧಮಿತ್ಯರ್ಥಃ । ತೇಷಾಮಿತಿ । ಆಹಾರಾದೀನಾಮಿತ್ಯರ್ಥಃ ॥ 7 ॥**

**ಅನುವಾದ-** ಶ್ರದ್ಧಾ ಭೇದದಿಂದ ಸಾತ್ವಿಕ, ರಾಜಸ, ತಾಮಸರೆಂದು ಪ್ರಭೇದವೂ. ಅವರವರ ಸದಸತ್ ಕರ್ಮಗಳ ವೈಲಕ್ಷಣ್ಯದಿಂದ ಸಾತ್ವಿಕಾದಿ ಸ್ವರೂಪ ಭೇದವೂ ಹಿಂದೆ ಹೇಳಲ್ಪಟ್ಟಿದೆ. ಈಗ ಆಹಾರಾದಿಗಳ ಭೇದದಿಂದಲೂ ಸಹ ಸಾತ್ವಿಕಾದಿಗಳ ವೈಲಕ್ಷಣ್ಯವನ್ನು ಪ್ರತಿಜ್ಞಾ ಪೂರ್ವಕವಾಗಿ ಏಳು ಶ್ಲೋಕಗಳಿಂದ ಹೇಳುತ್ತಾನೆ. ಸರ್ವಸ್ಯ-ಸಾತ್ವಿಕರೇ ಮೊದಲಾದವರ, ಯಜ್ಞ, ತಪಸ್, ದಾನವೂ ಮೂರುವಿಧ. ತೇಷಾಂ- ಆಹಾರಾದಿಗಳ ಎಂದು ಅರ್ಥ.

**ಆಯುಸ್ಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ॥ 8 ॥**

**ಅರ್ಥ-** ಆಯುಸ್ಸು, ಮನಸ್ಸಿನ ನೈರ್ಮಲ್ಯ, ಬಲ, ಆರೋಗ್ಯ, ಸುಖ ಪ್ರೀತಿ ಇವುಗಳನ್ನು ವೃದ್ಧಿಗೊಳಿಸುವ ರಸ ಭೂಯಿಷ್ಟವಾದ ಸ್ನೇಹಗುಣವನ್ನು ಹೊಂದಿರುವ ಬಹುಕಾಲ ಗುಣ ನೀಡುವ ಮನೋಹರ ಆಹಾರವು ಸಾತ್ವಿಕರಿಗೆ ಪ್ರಿಯವಾದುದು.

**ಆಹಾರಭೇದಂ ತಾವತ್ ತ್ರಿಭಿರಾಹ- ಆಯುರಿತ್ಯಾದಿನಾ ॥ ಆಯುರ್ಜೀವ-ನಮ್ । ಸತ್ತ್ವಂ ಸಾಧುತ್ವಮ್ । ಸಾತ್ತ್ವಿಕವಸ್ತುಸೇವನೇನ ಚಿತ್ತಶುದ್ಧೇಃ । ಬಲಂ ಶಕ್ತಿಃ । ಆರೋಗ್ಯಂ ರೋಗರಾಹಿತ್ಯಮ್ । ಸುಖಂ ಸಕೃದುಪಭೋಗೇಽಪಿ ಬಹುಕಾಲೀನಮ್ । ಪ್ರೀತಿರುಪಭೋಗಕಾಲೀನಂ ಸುಖಮ್ । ಏತೇಷಾ-ಮಾಯುರಾದೀನಾಂ ವಿವರ್ಧನಾಃ ವಿಶೇಷೇಣ ವೃದ್ಧಿಹೇತವಃ । ರಸ್ಯಾಃ ರಸ-ಯುಕ್ತಾಃ । ಸ್ನಿಗ್ಧಾಃ ಸ್ನೇಹವಂತಃ । ಸ್ಥಿರಾಃ ಸೇವನೇನ ಬಹುಕಾಲಗುಣಪ್ರದಾಃ ಆಜ್ಯಾದಯಃ । ಅನುಭವೇ ಸತಿ ಪಶ್ಚಾದಪಿ ಭೂಯಾದಿತಿ ಮನೋಹಾರಿಣೋ ಹೃದ್ಯಾಃ । ಏತೇ ಆಹಾರಾಃ । ಕರ್ಮಣಿ ಘಞ್ । ಭಕ್ಷ್ಯಪದಾರ್ಥಾಃ ।**

**ಸಾತ್ತ್ವಿಕಾನಾಂ ಸತ್ತ್ವಗುಣಯುಕ್ತಾನಾಂ ಪ್ರಿಯಾಃ । ಆಯುರಾದಿವಿವರ್ಧನಾ ಇತಿ ವಿಶೇಷಣೋಕ್ತ್ಯಾ ತದ್ವಿಪರೀತತ್ವೇ ರಸ್ಯಾದೀನಾಮಪಿ ರಾಜಸತ್ವಮೇವೇತಿ ಜ್ಞೇಯಮ್ ॥ 8 ॥**

**ಅನುವಾದ-** ಆಹಾರದ ಭಿನ್ನತೆಯನ್ನು ಮೂರು ಶ್ಲೋಕಗಳಿಂದ ಹೇಳುತ್ತಿರುವನು. **ಆಯುಃ**= ಜೀವನವು, **ಸತ್ವಮ್**= ಉತ್ತಮ ನಡವಳಿಕೆ, ಸಾತ್ವಿಕವಸ್ತು ಸೇವನೆಯಿಂದ ಚಿತ್ತಶುದ್ಧಿಯಾಗುವುದು. ಅದರಿಂದ ನಮ್ಮ ನಡವಳಿಕೆ ಸಾತ್ವಿಕವಾಗಿರುವುದು. **ಬಲಂ**= ಶಕ್ತಿ, ಆರೋಗ್ಯ, ರೋಗರಾಹಿತ್ಯ, **ಸುಖಂ**= ಒಮ್ಮೆ ಭೋಗಿಸಿದರೂ ಬಹುಕಾಲವಿರುವ ಆನಂದವೇ ಸುಖ. **ಪ್ರೀತಿಃ**= ಭೋಗಕಾಲದಲ್ಲಿರುವ ಸುಖ. ಈ ಆಯುಸ್ಸು, ಬಲ ಮುಂತಾದವುಗಳನ್ನು ವಿಶೇಷವಾಗಿ ವೃದ್ಧಿಗೊಳಿಸುವ ಆಹಾರಗಳು ಸಾತ್ವಿಕ. **ರಸ್ಯಾಃ** = ರಸಯುಕ್ತವಾದ, **ಸ್ನಿಗ್ಧಾಃ** = ಸ್ನೇಹಗುಣವುಳ್ಳ, **ಸ್ಥಿರಾಃ**= ಸೇವಿಸುವುದರಿಂದ ಬಹುಕಾಲ ಫಲವನ್ನು ನೀಡುವ ಘೃತವೇ ಮೊದಲಾದ ಪದಾರ್ಥಗಳು, **ಹೃದ್ಯಾಃ** = ಅನುಭವಿಸಿದ ಅನಂತರದಲ್ಲೂ ಇನ್ನೂ ಬೇಕು ಎನಿಸುವಷ್ಟು ರುಚಿಕರವಾದ ಆಹಾರಗಳು **ಸಾತ್ವಿಕಾನಾಂ ಪ್ರಿಯಾಃ**= ಸತ್ವಗುಣ ಯುಕ್ತರಿಗೆ ಪ್ರಿಯವಾದವುಗಳು. 'ಆಹಾರಾಃ' ಎಂಬಲ್ಲಿ ಕರ್ಮಾರ್ಥದಲ್ಲಿ **ಘಞ್** ಪ್ರತ್ಯಯ ಬಂದಿದೆ. ಭಕ್ಷ್ಯಪದಾರ್ಥಗಳು ಎಂದು ಅಭಿಪ್ರಾಯ. **ಆಯುರಾದಿ ವಿವರ್ಧನಾಃ** ಎಂದು ವಿಶೇಷಣವನ್ನು ನೀಡಿರುವುದರಿಂದ ರಸಭೂಯಿಷ್ಠವಾಗಿದ್ದರೂ ಆಹಾರವು ಆಯುರಾದಿ ವರ್ಧಕವಾಗದಿದ್ದಲ್ಲಿ ರಾಜಸವೇ ಆಗುತ್ತದೆ- ಎಂದು ಅಭಿಪ್ರಾಯವಾಗುತ್ತದೆ.

**ಕಟ್ವಾಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ 9 ॥**

**ಅರ್ಥ-** ಖಾರ, ಹುಳಿ, ಉಪ್ಪು, ಇವುಗಳು ಅತಿಯಾಗಿರುವ, ಬಹು ಉಷ್ಣವಾದ, ತೀಕ್ಷ್ಣ ನೀರಸವಾದ, ಕರಕಲಾದ, ಅಥವಾ ಉರಿಯನ್ನುಂಟು ಮಾಡುವ, ದುಃಖ, ಮಾನಸಿಕ ಉದ್ವೇಗ, ರೋಗ ಇವುಗಳಿಗೆ ಕಾರಣವಾದ ಆಹಾರಗಳು ರಾಜಸಸ್ವಭಾವದವರಿಗೆ ಪ್ರಿಯವಾದುದು.

**ಕಟು ಮರೀಚಿಕಾದಿಃ । ಆಮ್ಲೋ ಜಂಬೀರರಸಾದಿಃ । ಲವಣಂ ಪ್ರಸಿದ್ಧಮ್ । ಅತ್ಯುಷ್ಣಮ್ । ಅತಿಶಬ್ದಃ ಸರ್ವತ್ರ ಸಂಪದ್ಯತೇ । ತೀಕ್ಷ್ಣಂ ಸರ್ಷಪಾದಿ । ರೂಕ್ಷಂ ಸ್ವತೋ ನೀರಸಮ್ । ವಿದಾಹಿ ವಿಶೇಷೇಣ ದಗ್ಧಂ ಸಂತಾಪಕರಂ ವಾ । ಏತೇ ಆಹಾರಾಃ ರಾಜಸಸ್ಯೇಷ್ಟಾಃ ಪ್ರಿಯಾಃ । ದುಃಖಂ ಶೋಕೋ ದೌರ್ಮನಸ್ಯಂ ಆಮಯೋ ರೋಗಃ ಏತತ್ತ್ರಯಪ್ರದಾಃ । ದುಃಖಾದಿದತ್ವವಿಶೇಷಣೋಕ್ತ್ಯಾ ತದಭಾವೇ ಕಟ್ವಾದೀನಾಂ ಸಾತ್ತ್ವಿಕತ್ವಮೇವೇತಿ ಜ್ಞೇಯಮ್ ॥ 9 ॥**

**ಅನುವಾದ- ಕಟು**= ಮೆಣಸು ಮುಂತಾದವುಗಳು, **ಆಮ್ಲ**= ನಿಂಬೆಹಣ್ಣು ಮೊದಲಾದವುಗಳು, **ಅತ್ಯುಷ್ಣಮ್** ಎಂಬಲ್ಲಿರುವ 'ಅತಿ' ಎಂಬುದನ್ನು ಎಲ್ಲ ಕಡೆಯಲ್ಲೂ ಪೂರೈಸಬೇಕು. **ತೀಕ್ಷ್ಣಮ್**= ಸಾಸಿವೆ ಮುಂತಾದವುಗಳು, **ರೂಕ್ಷಮ್**= ಸ್ವಾಭಾವಿಕವಾಗಿ ನೀರಸ ಪದಾರ್ಥಗಳು. ವಿದಾಹಿ= ಬಹಳವಾಗಿ ಸುಟ್ಟಿರುವ , ಅಥವಾ ಕೇವಲಸಂತಾಪವನ್ನುಂಟು ಮಾಡುವ, **ದುಃಖಂ**= ಶೋಕ, ದುರ್ಮನಸ್ಕತೆ, **ಆಮಯ**= ರೋಗ ಇವುಗಳನ್ನು ಉಂಟುಮಾಡುವ ಆಹಾರಗಳು ರಾಜಸರಿಗೆ ಇಷ್ಟವಾಗಿರುತ್ತದೆ. ದುಃಖಾದಿಗಳನ್ನು ನೀಡುವವುಗಳು ಎಂದು ವಿಶೇಷಣವನ್ನು ಹೇಳಿರುವುದರಿಂದ ದುಃಖಾದಿಗಳನ್ನು ನೀಡದಿರುವಾಗ ಖಾರ, ಉಪ್ಪು , ಹುಳಿ, ಮುಂತಾದವುಗಳೆಲ್ಲವೂ ಸಾತ್ವಿಕವೇ ಆಗುತ್ತವೆ ಎಂದು ಅಭಿಪ್ರಾಯ.

**ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥ 10 ॥**

**ಅರ್ಥ**– ತಯಾರಿಸಿ ಯಾಮ ಕಳೆದಿರುವ, ರಸವು ನಷ್ಟವಾಗಿರುವ ದುರ್ಗಂಧ ಯುಕ್ತವಾದ, ಹಳಸಿದ, ಬೇರೆಯವರು ತಿಂದು ಉಳಿದ ಅಶುಚಿಯಾದ ಆಹಾರವು ತಾಮಸಮಂದಿಗೆ ಇಷ್ಟವಾದುದು.

**ಯಾತಯಾಮಂ ಯಾಮಾಂತರಿತಪಾಕಮ್ । ಪೂರ್ವಂ ಸ್ವಾದು ಪಶ್ಚಾದನ್ಯಥಾಜಾತರಸಂ ಗತರಸಮ್ । ಪೂತಿ ದುರ್ಗಂಧಮ್ । ಪರ್ಯುಷಿತಂ ದಿನಾಂತರಿತಪಕ್ವಮ್ । ಅನ್ಯಭುಕ್ತಾವಶಿಷ್ಟಂ ಉಚ್ಛಿಷ್ಟಮ್ । ಅಮೇಧ್ಯಮಪವಿತ್ರಮ್ । ಭೋಜನಮ್ । ಕರ್ಮಣಿ ಲ್ಯುಟ್ । ಭೋಜ್ಯಮ್ । ಯಾತಯಾಮಾದಿ ಭೋಜ್ಯಂ ವಸ್ತು ಯತ್ತತ್ತಾಮಸಪ್ರಿಯಂ, ತಾದೃಶಂ ವಸ್ತು ಭೋಜನವಿಷಯತಯಾ ತಾಮಸಪ್ರಿಯಮಿತ್ಯರ್ಥಃ । ಸ್ವಾದುತ್ವಾದೇಃ ಪುರುಷಭೇದೇನ ವ್ಯವಸ್ಥಿತತ್ವೇಽಪಿ ಶುದ್ಧಭಾಗವತಸ್ವಭಾವಾಪೇಕ್ಷಯಾ ಸ್ವಾದುತ್ವಾದಿಕಂ ಧ್ಯೇಯಮ್ । ॥ 10 ॥**

**ಅನುವಾದ- ಯಾತಯಾಮಂ**= ಪಾಕ ಮಾಡಿ ಯಾಮ ಕಳೆದಿರುವ **ಗತರಸಂ**= ಹಿಂದೆ ಸ್ವಾದಿಷ್ಠವಾಗಿದ್ದು ಈಗ ಸವಿ ಇಲ್ಲದ, **ಪೂತಿ** = ದುರ್ಗಂಧ ಯುಕ್ತವಾದ, **ಪರ್ಯುಷಿತಂ**= ಪಕ್ವವಾಗಿ ದಿನ ಕಳೆದ, **ಉಚ್ಛಿಷ್ಟಂ**= ಬೇರೆಯವರು ತಿಂದು ಉಳಿದ, **ಅಮೇಧ್ಯಮ್**= ಅಪವಿತ್ರವಾದ ಭೋಜ್ಯಪದಾರ್ಥಗಳು ತಾಮಸರಿಗೆ ಪ್ರಿಯವಾದುದು. **ಭೋಜನಂ** ಎಂಬಲ್ಲಿ ಕರ್ಮಾರ್ಥದಲ್ಲಿ ಲ್ಯುಟ್‌ಪ್ರತ್ಯಯ ಬಂದಿದೆ. ಭೋಜ್ಯ ಎಂದು ಅರ್ಥ. ಒಂದೇ ಪದಾರ್ಥವು ಕೆಲವರಿಗೆ ರುಚಿಯಾಗಿಯೂ ಕೆಲವರಿಗೆ ರುಚಿಹೀನವಾಗಿಯೂ ತೋರುವುದು. ಹೀಗೆ

ಪುರುಷಭೇದೇನ ಭಿನ್ನಗಳಾದರೂ ಶುದ್ಧಭಾಗವತ ಸ್ವಭಾವದವರಿಗೆ ತೋರುವಂಥ ಸ್ವಾದುತ್ವ ಮುಂತಾದುವನ್ನು ಇಲ್ಲಿ ಹೇಳಿದೆ ಎಂದು ತಿಳಿಯಬೇಕು.

**ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥ 11 ॥**

**ಅರ್ಥ**– ಫಲಾಕಾಂಕ್ಷೆ ಇಲ್ಲದೆ ಕರ್ಮವನ್ನು ಆಚರಿಸುವುದು ತಮ್ಮ ಕರ್ತವ್ಯವೆಂದು ಭಾವಿಸಿ ಶಾಸ್ತ್ರದ ವಿಧಾನಕ್ಕನುಗುಣವಾಗಿ ಮನಃ ಪೂರ್ವಕವಾಗಿ ಯಾವ ಯಜ್ಞವನ್ನು ಅನುಷ್ಠಾನ ಮಾಡುವರೋ ಅದು ಸಾತ್ವಿಕ ಯಜ್ಞ .

**ಯಜ್ಞಭೇದೇನ ಸಾತ್ತ್ವಿಕಾದಿಭೇದಮಾಹ- ಅಫಲೇತಿ ॥ ಫಲಕಾಂಕ್ಷಾರಹಿತೈರ್ಯೋ ಯಜ್ಞೋ ವಿಧಿದೃಷ್ಟೋ ವಿಧಿಜ್ಞಾನಪೂರ್ವಕಃ ಯಷ್ಟವ್ಯಮೇವೇತಿ ಮನಃಸಮಾಧಾಯ ಇಜ್ಯತೇ ಅನುಷ್ಠೀಯತೇ ಸ ಸಾತ್ತ್ವಿಕ ಇತ್ಯರ್ಥಃ ॥ 11 ॥**

**ಅನುವಾದ**- ಯಜ್ಞ ಭೇದ ನಿಮಿತ್ತದಿಂದ ಸಾತ್ವಿಕಾದಿ ಪ್ರಭೇದವನ್ನು ಇಲ್ಲಿ ಹೇಳುತ್ತಿದ್ದಾನೆ. ಫಲದ ಬಯಕೆ ಇಲ್ಲದವರಿಂದ ಕರ್ತವ್ಯವಾದ್ದರಿಂದ ಯಜ್ಞವನ್ನು ಮಾಡಲೇ ಬೇಕೆಂದು ಮನಃ ಪೂರ್ವಕವಾಗಿ ವಿಧಿಜ್ಞಾನ ಪೂರ್ವಕ ಯಾವ ಯಜ್ಞವು ಮಾಡಲ್ಪಡುತ್ತದೆ ಅದು ಸಾತ್ವಿಕ ಯಜ್ಞ.

ಇಲ್ಲಿ ಅಗತ್ಯವಾಗಿ ಇರಬೇಕಾಗಿರುವುದು ಪರಮಾತ್ಮನ ಪೂಜೆ ಎಂಬ ಅನುಸಂಧಾನ.

**ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥ 12 ॥**

**ಅರ್ಥ**– ಫಲದ ಬಯಕೆಯಿಂದ ತನ್ನಲ್ಲಿ ದೊಡ್ಡಸ್ತಿಕೆಯನ್ನು ತೋರಿಸಲು ಆಡಂಬರದಿಂದ ಮಾಡುವ ಕರ್ಮವು ರಾಜಸವೆಂದು ತಿಳಿ.

**ಫಲಮಭಿಸಂಧಾಯ ಮೇ ಭೂಯಾದಿತಿ ಕಾಮಯಮಾನ ಏವ ಅಪಿ ದಂಭಾರ್ಥಮೇವ ಆತ್ಮಮಹತ್ತ್ವಪ್ರದರ್ಶನಾರ್ಥಮೇವ ಯದಿಜ್ಯತೇ ತಂ ಯಜ್ಞಂ ರಾಜಸಂ ವಿದ್ಧಿ ॥ 12 ॥**

**ಅನುವಾದ- ಫಲಮಭಿಸಂಧಾಯ ತು** = ತನಗೆ ಫಲವು ದೊರೆಯಲೆಂದು ಬಯಸಿಯೇ ಮತ್ತು , **ದಂಭಾರ್ಥಮೇವ**= ತನ್ನಲ್ಲಿ ಮಹತ್ವದ ಪ್ರದರ್ಶನಕ್ಕಾಗಿಯೇ ಯಾವ ಯಜ್ಞವು ಮಾಡಲ್ಪಡುತ್ತದೆ ಅದನ್ನು ರಾಜಸಯಜ್ಞವೆಂದು ತಿಳಿ.

**ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ 13 ॥**

**ಅರ್ಥ**– ಶಾಸ್ತ್ರದ ವಿಧಿಗೆ ಅನುಗುಣವಲ್ಲದ, ಅನ್ನದಾನ ರಹಿತವಾದ, ಮಂತ್ರೋಚ್ಚಾರಣೆ ಇಲ್ಲದ, ದಕ್ಷಿಣೆ ನೀಡದ ಶ್ರದ್ಧಾರಹಿತವಾದ ಯಜ್ಞವನ್ನು ಜ್ಞಾನಿಗಳು ತಾಮಸವೆನ್ನುವರು.

**ಅಸೃಷ್ಟಾನ್ನಂ ಅನ್ನದಾನಹೀನಮ್ । ಶಿಷ್ಟಂ ವ್ಯಕ್ತಮ್ ॥ 13 ॥**

**ಅನುವಾದ**– **ಅಸೃಷ್ಟಾನ್ನಮ್**= ಅನ್ನದಾನರಹಿತವಾದ.

## ಸಾತ್ವಿಕ ತಪಸ್

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ 14 ॥**

**ಅರ್ಥ**– ದೇವತೆಗಳು, ಬ್ರಾಹ್ಮಣರು, ಗುರುಗಳು, ಜ್ಞಾನಿಗಳು ಇವರ ಪೂಜೆ, ಬಾಹ್ಯ ಹಾಗೂ ಆಂತರಿಕ ಶುದ್ಧಿ , ಪ್ರಾಮಾಣಿಕತೆ, ಬ್ರಹ್ಮಚರ್ಯ, ಮತ್ತು ಪ್ರಾಣಿಹಿಂಸೆ ಮಾಡದಿರುವುದು ಇವೆಲ್ಲವೂ ಶಾರೀರಿಕ ತಪಸ್ಸು ಎನಿಸುತ್ತದೆ.

**ಪ್ರಾಕ್ ಪ್ರತಿಜ್ಞಾತಂ ತಪೋಭೇದೇನ ಸಾತ್ತ್ವಿಕಾದಿಭೇದಂ ದರ್ಶಯಿತುಂ ಶಾರೀರಾದಿಭೇದೇನ ತತ್ತ್ರೈವಿಧ್ಯಂ ತಾವದಾಹ**– **ದೇವೇತಿ ॥ ದೇವಾದಿಪೂಜನಂ ಯಥಾಯೋಗ್ಯಂ ಧ್ಯೇಯಮ್ । ಶೌಚಂ ಬಾಹ್ಯಾಭ್ಯಂತರರೂಪಮ್ । ಬ್ರಹ್ಮ-ಚರ್ಯಮೂರ್ಧ್ವರೇತಸ್ತ್ವಮ್ । ಶಾರೀರಂ ಶರೀರಸಂಬಂಧಿ ॥ 14 ॥**

**ಅನುವಾದ**– ಹಿಂದೆ ಪ್ರತಿಜ್ಞೆಮಾಡಿದ ಸಾತ್ವಿಕಾದಿಪ್ರಭೇದವು, ತಪೋಭೇದನಿಮಿತ್ತದಿಂದಲೂ ಇರುವುದೆಂದು ತಿಳಿಸಲು ಶಾರೀರಾದಿ ಭೇದದಿಂದ ತಪಸ್ಸಿನ ತ್ರೈವಿಧ್ಯವನ್ನು ಇಲ್ಲಿ ಹೇಳುತ್ತಿದ್ದಾನೆ. ಇಲ್ಲಿ ಹೇಳಲ್ಪಟ್ಟಿರುವ ದೇವ, ದ್ವಿಜ, ಗುರು ಮತ್ತು ಜ್ಞಾನಿಗಳ ಪೂಜೆಯು ಎಲ್ಲರಲ್ಲಿ ಸಮಾನವಲ್ಲ, ತಾರತಮ್ಯಕ್ಕನುಗುಣವಾಗಿರಬೇಕು. (1) **ಶೌಚಮ್**= ಬಾಹ್ಯ ಹಾಗೂ ಆಂತರ ಎರಡರ ಶುದ್ಧಿಯೂ ಅಗತ್ಯ. **ಬ್ರಹ್ಮಚರ್ಯಮ್** = ಊರ್ಧ್ವರೇತಸ್ಕನಾಗಿರುವುದು. **ಶಾರೀರಮ್**= ಶರೀರಕ್ಕೆ ಸಂಬಂಧಿಸಿರುವುದು.

ವಿಚಾರ– 1. ಸಮಾನಾಂ ವಿಷಮಾ ಪೂಜಾ ವಿಷಮಾನಾಂ ಸಮಾ ತಥಾ ।
ಕ್ರಿಯತೇ ಯೇನ ದೇವೋಽಪಿ ಸ್ವಪದಾದ್ ಭ್ರಶ್ಯತೇಹಿ ಸಃ ॥

–ಕೃಷ್ಣಾಮೃತ ಮಹಾರ್ಣವ

ಜ್ಞಾನ-ಭಕ್ತಿ-ವೈರಾಗ್ಯಾದಿಗುಣಗಳಿಂದ ಸಮಾನರಾದ ಜ್ಞಾನಿಗಳ ಪೂಜೆಯನ್ನು ತಾರತಮ್ಯದಿಂದ ಮಾಡಬಾರದು. ಜ್ಞಾನ, ಭಕ್ತಿ, ಸದಾಚಾರಾದಿಗುಣಗಳಿಂದ ತಾರತಮ್ಯವನ್ನು ಹೊಂದಿರುವವರ ಪೂಜೆಯನ್ನು ಸಮಾನವಾಗಿ ಮಾಡಬಾರದು.

ವೈಷ್ಣವೇಷ್ವನ್ಯಭಕ್ತೇಷು ಬ್ರಾಹ್ಮಣೇಷ್ವಿತರೇಷು ಚ ।
ಕರೋತಿ ಸಮತಾಂ ಯೋ ಹಿ ಬ್ರಹ್ಮಹತ್ಯಾಂ ಲಭೇತ್ತು ಸಃ ॥

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ 15 ॥**

**ಅರ್ಥ–** ಇತರರಿಗೆ ನೋವನ್ನುಂಟು ಮಾಡದ, ಸತ್ಯವು, ಪ್ರಿಯವು, ಹಿತವೂ ಆದ ಮಾತು, ಮತ್ತು ವೇದಾಧ್ಯಯನ ಮನನ ಇವೆಲ್ಲವೂ ವಾಗಿಂದ್ರಿಯದಿಂದ ಮಾಡುವ ತಪಸ್ಸು ಎನಿಸುತ್ತದೆ.

**ಅನುದ್ವೇಗಕರಂ ಪರಸ್ಯಾತಂಕೋ ಯಥಾ ನ ಭವತಿ ತಾದೃಶಂ ವಾಕ್ಯಮ್ । ಸತ್ಯಂ ಯಥಾರ್ಥಮ್ । ವಾಕ್ಯಮಿತಿ ಸರ್ವತ್ರಾನ್ವೇತಿ । ಪ್ರಿಯಂ ಶ್ರವಣಸಮಯೇ ಪುನಃ ಪುನಃ ಶ್ರವಣೇಚ್ಛಾಕರಮ್ । ಹಿತಂ ಕಾಲಾಂತರೇ ಸುಖಕರಂ ಚ । ಸ್ವಾಧ್ಯಾಯಾಭ್ಯಸನಂ ಚ ಯತ್ತದಿತಿ ಶೇಷಃ । ವಾಙ್ಮಯಂ ವಾಗಾತ್ಮಕಂ ತಪಃ ॥15॥**

**ಅನುವಾದ– ಅನುದ್ವೇಗಕರಂ** = ಮತ್ತೊಬ್ಬನ ಮನಸ್ಸಿಗೆ ಆತಂಕವನ್ನುಂಟು ಮಾಡದ ವಾಕ್ಯ, **ಸತ್ಯಂ**= ಯಥಾರ್ಥವಾದ ವಾಕ್ಯ, ವಾಕ್ಯ ಎಂಬುದನ್ನು ಎಲ್ಲ ಕಡೆಯಲ್ಲೂ ಪೂರೈಸಬೇಕು. **ಪ್ರಿಯಮ್**= ಕೇಳುವ ಸಮಯದಲ್ಲಿ ಮತ್ತೆ ಮತ್ತೆ ಕೇಳಬೇಕೆನಿಸುವ ವಾಕ್ಯ, **ಹಿತಂ**= ಕಾಲಾಂತರದಲ್ಲೂ ಸುಖ ನೀಡುವ ವಾಕ್ಯ , **ಸ್ವಾಧ್ಯಾಯಾಭ್ಯಸನಂ ಚ**= ವೇದಾಧ್ಯಯನ ಮತ್ತು ಇವೆಲ್ಲವೂ, **ವಾಙ್ಮಯಂ**= ವಾಗ್ರೂಪವಾದ ತಪಸ್ಸು.

**ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ 16 ॥**

**ಅರ್ಥ–** ಮಾನಸಿಕ ನೈರ್ಮಲ್ಯ, ಕ್ರೌರ್ಯವಿಲ್ಲದಿರುವಿಕೆ, ಮನನಶೀಲತೆ, ಮನಸ್ಸಿನ ಹತೋಟಿ, ಮನಸ್ಸನ್ನು ಪರಮಾತ್ಮನಲ್ಲಿ ಸ್ಥಾಪಿಸುವುದು ಅಂತಃಕರಣದ ಶುದ್ಧಿ ಇದೆಲ್ಲವೂ ಮನಸ್ಸಿನ ತಪಸ್ಸು ಎನಿಸುತ್ತದೆ.

**ಮನಃಪ್ರಸಾದಃ ವಿಷಯೇಷ್ವಪ್ರಯಾಸೇನ ಅಪ್ರವೃತ್ತಿಃ । ಸೌಮ್ಯತ್ವಂ ಅಕ್ರೌರ್ಯಮ್ । ಮೌನಂ ಮನನಶೀಲತ್ವಮ್ । ಆತ್ಮವಿನಿಗ್ರಹಃ ಆತ್ಮನಿ**

**ಪರಮಾತ್ಮನಿ ಮನಸೋ ವಿಶಿಷ್ಯಾವಸ್ಥಾನಮ್ । ಭಾವೇ ಆಶಯೇ ಸಂಶುದ್ಧಿಃ ನಾನಾಕಾಮರಾಹಿತ್ಯಮ್ । ಇತ್ಯೇತನ್ಮಾನಸಂ ತಪಃ ಉಚ್ಯತೇ ॥ 16 ॥**

**ಅನುವಾದ- ಮನಃಪ್ರಸಾದಃ**= ವಿಷಯ ಪದಾರ್ಥಗಳಲ್ಲಿ ಪ್ರಯಾಸವಿಲ್ಲದೇ **ಅಪ್ರವೃತ್ತಿ ಃ**= ಪ್ರವೃತ್ತಿ ಇಲ್ಲದಿರುವಿಕೆಯು, **ಸೌಮ್ಯತ್ವಂ**= ಕ್ರೌರ್ಯವಿಲ್ಲದಿರುವಿಕೆ, **ಮೌನಂ**= ಮನನಶೀಲತೆ, **ಆತ್ಮವಿನಿಗ್ರಹಃ**= **ಆತ್ಮನಿ**= ಪರಮಾತ್ಮನಲ್ಲಿ **ವಿನಿಗ್ರಹಃ**= ವಿಶೇಷವಾಗಿ ಮನಸ್ಸನ್ನು ಸ್ಥಾಪಿಸುವುದು, **ಭಾವಸಂಶುದ್ಧಿಃ, ಭಾವೇ**= ಅಂತಃಕರಣದಲ್ಲಿ, **ಸಂಶುದ್ಧಿಃ**= ನಾನಾವಿಧ ಬಯಕೆಗಳಿಲ್ಲದಿರುವುದು. ಇದೆಲ್ಲವೂ ಮಾನಸಿಕ ತಪಸ್ಸು.

**ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ ತ್ರಿವಿಧಂ ನರೈಃ ।**
**ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥ 17 ॥**

**ಅರ್ಥ-** ಜನರು ಮಾಡುವ ತಪಸ್ಸು ಮೂರು ರೀತಿಯಾಗಿದೆ. ಉತ್ತಮ ಶ್ರದ್ಧೆಯಿಂದ ಫಲವನ್ನು ಬಯಸದೆ ಪರಮಾತ್ಮನು ಸಂತುಷ್ಟನಾಗಲಿ ಎಂಬ ಅನುಸಂಧಾನದಿಂದ ಮಾಡುವ ತಪಸ್ಸನ್ನು ಸಾತ್ವಿಕವೆನ್ನುವರು.

**ಇದಾನೀಂ ಸಾತ್ತ್ವಿಕಾದಿತಪೋಭೇದೇನ ಸಾತ್ತ್ವಿಕಾದಿಜೀವಭೇದಂ ಪ್ರತಿಜ್ಞಾಪೂರ್ವಮಾಹ- ಶ್ರದ್ಧಯೇತ್ಯಾದಿಭಿಸ್ತ್ರಿಭಿಃ ॥ ನರೈಸ್ತಪ್ತಂ ಕೃತಂ ತಪಃ ಯತ್ ತತ್ ತ್ರಿವಿಧಮಿತ್ಯರ್ಥಃ । ತತ್ಕಥಮಿತ್ಯತ ಆಹ- ಅಫಲೇತಿ ॥ ಯುಕ್ತೈರ್ಭಗವದರ್ಪಣಾದಿಯೋಗಯುಕ್ತೈಃ ತಪ್ತಂ ತಪ ಇತ್ಯನುಷಜ್ಯತೇ ॥ 17 ॥**

**ಅನುವಾದ-** ಸಾತ್ವಿಕಾದಿ ತಪಸ್ಸಿನ ಭೇದದಿಂದ ಸಾತ್ವಿಕಾದಿ ಜೀವರ ಭೇದವನ್ನು ಪ್ರತಿಜ್ಞಾಪೂರ್ವಕವಾಗಿ ಮೂರು ಶ್ಲೋಕಗಳಿಂದ ಹೇಳುವನು. **ನರೈಃ ತಪ್ತಂ**= ಮಾನವರಿಂದ ಮಾಡಲ್ಪಡುವ ತಪಸ್ಸು ಮೂರು ವಿಧವಾಗಿದೆ. **ಯುಕ್ತೈಃ**= ಭಗವಂತನಿಗೆ ಸಮರ್ಪಣ ಭಾವನೆಯಿಂದ ಮಾಡುವ ತಪಸ್ಸು ಸಾತ್ವಿಕ ಎನಿಸುತ್ತದೆ.

**ರಾಜಸ ತಪಸ್**

**ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ ।**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥ 18 ॥**

**ಅರ್ಥ –** ಸಮಾಜದಲ್ಲಿ ಗೌರವ, ಪ್ರಶಂಸೆ, ಆದರವನ್ನು ಗಳಿಸಬೇಕೆಂಬ ದುರಾಸೆಯಿಂದ

ಕಾಪಟ್ಯದಿಂದ ಮಾಡುವ ತಪಸ್ಸು ರಾಜಸ. ಇದು ಅನಿತ್ಯಫಲವನ್ನು ನೀಡುತ್ತದೆ. ಫಲವನ್ನು ನೀಡಲೇ ಬೇಕೆಂಬ ನಿಯಮವೂ ಇಲ್ಲ.

**ಸತ್ಕಾರೋ ಮನಸಾ ಆದರಃ । ಮಾನೋ ವಾಚಾ ಪ್ರಶಂಸಾ । ಪೂಜಾ ಅರ್ಚನಮ್ । ಏತದರ್ಥಂ ದಂಭೇನ ಚ ಆತ್ಮನೋ ಮಹತ್ತ್ವಪ್ರದರ್ಶನಾರ್ಥಂ ವಾ ಯತ್ತಪಃ ಕ್ರಿಯತೇ ತತ್ತಪಃ ಇಹ ಲೋಕೇ ರಾಜಸಂ ಪ್ರೋಕ್ತಮ್ । ಚಲಂ ಪಾತಭಯೇನ ಚಲನಹೇತುಃ । ಅಧ್ರುವಂ ಕ್ಷಯಿಷ್ಣು ॥ 18 ॥**

**ಅನುವಾದ- ಸತ್ಕಾರಃ**= ಮನಸ್ಸಿನಿಂದ ಮಾಡುವ ಆದರ, **ಮಾನಃ**= ಮಾತಿನಿಂದ ಪ್ರಶಂಸೆ, **ಪೂಜಾ**= ಅರ್ಚನೆ. ಇದಕ್ಕಾಗಿ ಕಾಪಟ್ಯದಿಂದ ತನ್ನ ಮಹತ್ವವನ್ನು ತೋರಿಸಲು ಮಾಡುವ ತಪಸ್ಸು, ರಾಜಸ. **ಚಲಂ**= ಪತಿತನಾಗುವೆನೋ ಎಂದು ಭಯದಿಂದ ಚಲನೆಗೆ ಕಾರಣವಾದುದು. **ಅಧ್ರುವಮ್**= ಅಶಾಶ್ವತವಾದುದು.

**ತಾಮಸ ತಪಸ್**

**ಮೂಢಗ್ರಾಹೇಣಾಽತ್ಮನೋ ಯತ್ ಪೀಡಯಾ ಕ್ರಿಯತೆ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥ 19 ॥**

**ಅರ್ಥ**– ಅವಿವೇಕದಿಂದ ಉಂಟಾದ ದುರಾಗ್ರಹದಿಂದ ಅಥವಾ ತನಗೆ ತಾನೇ ಹಿಂಸೆಯನ್ನು ನೀಡುವ ಮೂಲಕ ಶತ್ರುನಾಶಕ್ಕಾಗಿ ಮಾಡುವ ತಪಸ್ಸು ತಾಮಸ.

**ಮೂಢಗ್ರಾಹೇಣ ಅವಿವೇಕದುರಾಗ್ರಹೇಣ ಆತ್ಮನಃ ಪೀಡಯಾ ಪರಸ್ಯ ಶತ್ರೋರುತ್ಸಾದನಾರ್ಥಂ ವಾ ಯತ್ತಪಃ ಕ್ರಿಯತೇ ತತ್ತಾಮಸಮ್ ॥ 19 ॥**

**ಅನುವಾದ- ಮೂಢಗ್ರಾಹೇಣ**= ಅವಿವೇಕದಿಂದ ಉಂಟಾದ ದುರಾಗ್ರಹದಿಂದ.

**ಸಾತ್ವಿಕದಾನ**

**ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥ 20 ॥**

**ಅರ್ಥ**– ದಾನ ಮಾಡುವುದು ಕರ್ತವ್ಯವೆಂಬ ಭಾವನೆಯಿಂದ, ಉಪಕಾರವನ್ನು ಅಪೇಕ್ಷಿಸದೆ ಪುಣ್ಯದೇಶ, ಪುಣ್ಯಕಾಲಗಳಲ್ಲಿ ಸತ್‌ಪಾತ್ರನಿಗೆ ಮಾಡುವ ದಾನ ಸಾತ್ವಿಕವೆಂದು ಸ್ಮೃತಿಗಳಲ್ಲಿ ಹೇಳಿದೆ.

**ಪ್ರಾಕ್ ಪ್ರತಿಜ್ಞಾತಸಾತ್ತ್ವಿಕಾದಿಭೇದೇನ ದಾನಭೇದಮಾಹ (ಪ್ರಾಕ್‌ಪ್ರತಿಜ್ಞಾತ-ದಾನಭೇದೇನ ಸಾತ್ತ್ವಿಕಾದಿಭೇದಮಾಹ)- ದಾತವ್ಯಮಿತ್ಯಾದಿತ್ರಿಭಿಃ ॥ ದಾತವ್ಯ-ಮಿತ್ಯಾಸ್ತಿಕ್ಯಬುದ್ಧ್ಯಾ ದಾನಮ್ । ಕರ್ಮಣಿ ಲ್ಯುಟ್ । ದಾತವ್ಯಂ ವಸ್ತು ಪುಣ್ಯದೇಶೇ ಪುಣ್ಯಕಾಲೇಽನುಪಕಾರಿಣೇ ಉಪಕಾರಮನಪೇಕ್ಷ್ಯ ಸತ್ಪಾತ್ರೇ ಚ ಪಾತ್ರಾಯ ದೀಯತೇ ಇತಿ ಯತ್ ತದ್ದಾನಂ ಸಾತ್ತ್ವಿಕಮ್ ॥ 20 ॥**

**ಅನುವಾದ-** ಹಿಂದೆ ಪ್ರತಿಜ್ಞಾತವಾದ ಸಾತ್ವಿಕಾದಿಪ್ರಭೇದವು ದಾನಭೇದ ನಿಮಿತ್ತವಾಗಿಯೂ ಇರುವುದೆಂದು ಮೂರು ಶ್ಲೋಕಗಳಿಂದ ಹೇಳುತ್ತಿದ್ದಾನೆ. ದಾನ ಮಾಡುವುದು ತನ್ನ ಕರ್ತವ್ಯವೆಂದು ಆಸ್ತಿಕ್ಯಬುದ್ಧಿಯಿಂದ ಮಾಡುವ ದಾನ. ಕರ್ಮಾರ್ಥದಲ್ಲಿ ಲ್ಯುಟ್ ಪ್ರತ್ಯಯ ಬಂದು ದಾನಶಬ್ದವು ನಿಷ್ಪನ್ನವಾಗಿದೆ. ಪುಣ್ಯದೇಶದಲ್ಲಿ ಪುಣ್ಯಕಾಲದಲ್ಲಿ ಉಪಕಾರವನ್ನು ಅಪೇಕ್ಷಿಸದೆ ಸತ್‌ಪಾತ್ರನಿಗೆ ನೀಡುವ ದಾನವೇ ಸಾತ್ವಿಕ.

### ರಾಜಸ ದಾನ

**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ರಾಜಸಮುದಾಹೃತಮ್ ॥ 21 ॥**

**ಅರ್ಥ–** ದಾನ ಪಡೆಯುವವನಿಂದ ಪ್ರತ್ಯುಪಕಾರವನ್ನು ಬಯಸಿ, ಅಥವಾ ಅನಿತ್ಯಫಲವನ್ನು ಅಪೇಕ್ಷಿಸಿ ನೀಡುವ, ಅನ್ಯಾಯದಿಂದ ಸಂಪಾದಿಸಿದ ವಸ್ತುವಿನ ದಾನ ಇದೆಲ್ಲವೂ ರಾಜಸ ಎನಿಸುತ್ತದೆ.

**ಪರಿಕ್ಲಿಷ್ಟಂ ಅನ್ಯಾಯಾರ್ಜಿತಂ ದ್ರವ್ಯಮ್ ॥ 21 ॥**

**ಅನುವಾದ- ಪರಿಕ್ಲಿಷ್ಟಂ**= ಅನ್ಯಾಯದಿಂದ ಸಂಪಾದಿಸಿದ ದ್ರವ್ಯ.

### ತಾಮಸ ದಾನ

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ॥ 22 ॥**

**ಅರ್ಥ –** ಅಶುಚಿ ದೇಶಕಾಲಗಳಲ್ಲಿ, ಅಪಾತ್ರರಿಗೆ ನೀಡುವ ದಾನವೂ ತಾಮಸ. ವ್ಯಕ್ತಿಗೆ ಗೌರವನೀಡದೆ, ಅವಮಾನಪೂರ್ವಕವಾಗಿ ಮಾಡುವ ದಾನ ತಾಮಸ.

**ಅದೇಶಕಾಲ ಇತಿ ದ್ವಂದ್ವೈಕವದ್ಭಾವಃ । ಅಶುಚಿದೇಶಕಾಲಯೋಃ ಅಸತ್ಕೃತಂ**

ನಮಸ್ಕಾರಾದಿಸತ್ಕಾರರಹಿತಮ್ । ಅವಜ್ಞಾತಂ ಅವಜ್ಞಾಕರಣಯುಕ್ತಂ ಯಥಾ ತಥಾ । ಅಪಾತ್ರೇಭ್ಯಃ ಯದ್ದೀಯತೇ ತತ್ತಾಮಸಮಿತ್ಯರ್ಥಃ ॥ 22 ॥

**ಅನುವಾದ**- ಅದೇಶ ಕಾಲ ಎಂಬಲ್ಲಿ ದೇಶಕಾಲಗಳು ಎರಡಾದರೂ ದ್ವಿವಚನವಿಲ್ಲ, ದ್ವಂದ್ವ ಸಮಾಸವಾಗಿ ಏಕವದ್ ಭಾವ ಬಂದಿದೆ. ಪವಿತ್ರವಲ್ಲದ ದೇಶ ಕಾಲಗಳಲ್ಲಿ ಎಂದು ಅರ್ಥ. **ಅಸತ್ಕೃತಮ್**= ನಮಸ್ಕಾರಾದಿ ಸತ್ಕಾರಗಳಿಲ್ಲದೆ, **ಅವಜ್ಞಾತಮ್**= ಅಪಮಾನ ಸಹಿತವಾದ ದಾನವು ತಾಮಸ. ಅಪಾತ್ರರಿಗೆ ನೀಡುವ ದಾನವೂ ತಾಮಸ.

### ಬ್ರಹ್ಮವಾದಿಗಳ ಯಜ್ಞ-ದಾನ-ತಪಸ್

**ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥ 23 ॥**

**ಅರ್ಥ**- ಓಂ, ತತ್, ಸತ್ ಎಂದು ಮೂರುನಾಮಗಳಿಂದ ಪರಮಾತ್ಮನು ಸ್ಮೃತಿಗಳಲ್ಲಿ ಹೇಳಲ್ಪಟ್ಟಿದ್ದಾನೆ. ಆ ಪರಮಾತ್ಮನೇ ವೇದ ಹಾಗೂ ಯಜ್ಞಗಳನ್ನು ಮತ್ತು ಅದರ ಅಧ್ಯಯನ, ಅಧ್ಯಾಪನ, ಯಜನಯಾಜನಗಳಿಗಾಗಿ ಬ್ರಾಹ್ಮಣರನ್ನು ಸೃಷ್ಟಿಮಾಡಿದ.

ಅಫಲಾಕಾಂಕ್ಷಿಭಿಃ ಇತ್ಯಾದಿನಾ ಪೂರ್ವಂ ಯಜ್ಞತಪೋದಾನಾನಾಂ ಸಾತ್ತ್ವಿಕತ್ವಾದಿಹೇತವೋಽಸಾಧಾರಣಧರ್ಮಾ ಉಕ್ತಾಃ । ಸಾಧಾರಣಾಂಸ್ತು ವಕ್ತುಮನೇಕಕರ್ತೃಕಚರಿತಾನುವಾದರೂಪಪುರಾಕಲ್ಪಾಖ್ಯಾರ್ಥವಾದಮಾಹ- ಓಮಿತ್ಯಾದಿನಾ ॥ ನಿರ್ದಿಶ್ಯತೇ ಅನೇನೇತಿ ನಿರ್ದೇಶೋ ನಾಮ ಬ್ರಹ್ಮಣಃ ತ್ರಿವಿಧಃ ಸ್ಮೃತಃ । ಓತಂ ಪ್ರವಿಷ್ಟಮಾಶ್ರಿತಂ ಇತಿ ಯಾವತ್, ಜಗದ್ಯತ್ರ ಪರೇ ಇತಿ ವಾ, ಈಶ್ವರೋ ವಾ ಜಗತಿ ಪ್ರೋತಃ ಪ್ರವಿಷ್ಟ ಇತಿ ವಾ ವ್ಯುತ್ಪತ್ತ್ಯಾ ಓಮಿತಿ ನಾಮ ಹರೇಃ । ಅವ ರಕ್ಷಣಕಾಂತಿಗತಿಪ್ರವೇಶೇತ್ಯಾದ್ಯರ್ಥಸ್ಯಾವತೇಃ ಅವತೇಷ್ಟಿಲೋಪಶ್ಚೇತಿ ಸೂತ್ರೇಣ ಮನ್ ಪ್ರತ್ಯಯ । ತಸ್ಯ ಟಿಲೋಪೇ ಜ್ವರತ್ವರೇತ್ಯೂಠಿ ಸಾರ್ವಧಾತುಕಾರ್ಧಧಾತುಕೇತಿ ಗುಣೇ ಚ ಓಮಿತಿ ರೂಪಸಿದ್ಧೇಃ । ಗುಣೈಸ್ತತತ್ವಾದ್ವಾ ತದಿತ್ಯಸ್ಯ ಪರೋಕ್ಷವಾಚಿತ್ವಾದ್ಬ್ರಹ್ಮಣಶ್ಚ ವೇದೈಕವೇದ್ಯತಯಾ ಪರೋಕ್ಷತ್ವಾದ್ವಾ ತದಿತಿ ನಾಮ । ನಿರ್ದೋಷಸರ್ವಶುಭಗುಣಪೂರ್ಣತ್ವಾತ್ಸದಿತಿ ನಾಮೇತಿ ಜ್ಞೇಯಮ್ । ತೇನ ಬ್ರಹ್ಮಣಾ ಬ್ರಾಹ್ಮಣಾದಯಃ ಪುರಾ ಸೃಷ್ಟಿಕಾಲೇ ವಿಹಿತಾಃ ಸೃಷ್ಟಾಃ । ವೇದಾನಾಂ ವಿಧಾನಂ ನಾಮ ಅಭಿವ್ಯಕ್ತಿರ್ಜ್ಞೇಯಾ ॥ 23 ॥

**ಅನುವಾದ- ಅಫಲಾಕಾಂಕ್ಷಿಭಿಃ** (17-11) ಇತ್ಯಾದಿ ಶ್ಲೋಕಗಳಿಂದ ಯಜ್ಞ, ದಾನ ತಪಸ್ಸು ಇವುಗಳು ಸಾತ್ವಿಕ, ರಾಜಸ ತಾಮಸವಾಗಲು ಕಾರಣಗಳಾದ ಅಸಾಧಾರಣ ಧರ್ಮಗಳು ಹೇಳಲ್ಪಟ್ಟಿವೆ. ಸಾಧಾರಣ ಧರ್ಮವನ್ನು ಹೇಳಲು ಅರ್ಥವಾದವನ್ನು ಇಲ್ಲಿ ಹೇಳುತ್ತಿದ್ದಾನೆ. ಇಲ್ಲಿ ಹೇಳುತ್ತಿರುವುದು ಅನೇಕರಿಂದ ಅನುಷ್ಠಿತವಾದ ಆಚರಣೆಗಳ ಅನುವಾದ ರೂಪವಾದ ಅರ್ಥವಾದ. ಯಾವುದರಿಂದ ನಿರ್ದೇಶಿಲ್ಪಡುತ್ತದೆ ಅದು ನಿರ್ದೇಶ. ಅಂದರೆ ಹೆಸರು . ಅದು ಮೂರು ರೀತಿಯಾಗಿದೆ- ಎಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ. **ಓತಮ್**= ಪ್ರವೇಶಿಸಿದೆ, ಈ ಜಗತ್ತು ಪರಮಾತ್ಮನಲ್ಲಿ ಪ್ರವಿಷ್ಟವಾಗಿದೆ. ಅವನನ್ನು ಆಶ್ರಯಿಸಿದೆ. ಅಥವಾ ಈಶ್ವರನು ಜಗತ್ತಿನಲ್ಲಿ **ಪ್ರೋತಃ**= ಪ್ರವೇಶಿಸಿದ್ದಾನೆ. ಆದ್ದರಿಂದ ಪರಮಾತ್ಮನಿಗೆ ಓಂ ಎಂದು ಹೆಸರು.

'ಅವ ' ರಕ್ಷಣ, ಕಾಂತಿ,ಗತಿ,ಪ್ರವೇಶ, ತೃಪ್ತಿ ಇವೇ ಮುಂತಾದ ಅರ್ಥವನ್ನು ನೀಡುವ 'ಅವ' ಧಾತುವಿಗೆ **'ಅವತೇಷ್ಟಿಲೋಪಶ್ಚ'** ಸೂತ್ರದಿಂದ ಮನ್ ಪ್ರತ್ಯಯ ಬಂದಿದೆ ಅವ ಮನ್, ಟಿಲೋಪ **'ಜ್ವರ ತ್ವರ ಸ್ರಿವ್ಯವಿಮವಾಮುಪಧಾಯಾಶ್ಚ'** (6-4-20) ಸೂತ್ರದಿಂದ ಊಠ್ ಆಗಮ, **'ಸಾರ್ವಧಾತುಕಾರ್ಧಧಾತುಕಯೋಃ'** (7-3-84) ಸೂತ್ರದಿಂದ ಗುಣವು ಬಂದು ಓಂ ರೂಪ ಸಿದ್ಧಿಸುತ್ತದೆ.

ಗುಣಗಳಿಂದ ಪರಮಾತ್ಮನು **ತತ**= ವ್ಯಾಪ್ತ. ಆದ್ದರಿಂದ **ತತ್** ಶಬ್ದವಾಚ್ಯನಾಗಿದ್ದಾನೆ. ಅಥವಾ **ತತ್**ಶಬ್ದವು ಪರೋಕ್ಷವಾಚಿ. ಬ್ರಹ್ಮನನ್ನು ಇಂದ್ರಿಯಗಳಿಂದ ತಿಳಿಯಲು ಸಾಧ್ಯವಿಲ್ಲ. ವೇದಗಳಿಂದ ಮಾತ್ರ ವೇದ್ಯ. ಹೀಗೆ ಪರೋಕ್ಷನಾದ್ದರಿಂದಲೂ **'ತತ್'** ಶಬ್ದವಾಚ್ಯ.

ದೋಷರಹಿತನೂ ಸಮಸ್ತ ಸದ್ಗುಣಗಳಿಂದ ಪೂರ್ಣನೂ ಆದ್ದರಿಂದ ಸತ್‌ಶಬ್ದದಿಂದ ವಾಚ್ಯನಾಗಿರುವನು. ಆ ಪರಮಾತ್ಮನಿಂದ ಬ್ರಾಹ್ಮಣಾದಿಗಳು, **ಪುರಾ**= ಸೃಷ್ಟಿಕಾಲದಲ್ಲಿ **ವಿಹಿತಾಃ**= ಸೃಷ್ಟಿಸಲ್ಪಟ್ಟಿರುವರು. ವೇದಗಳ ಸೃಷ್ಟಿ ಎಂದರೆ ಅಭಿವ್ಯಕ್ತಿ.

**ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ ।**
**ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ॥ 24 ॥**

**ಅರ್ಥ**– ' ಓಂ' ಎಂಬುದು ಭಗವಂತನ ನಾಮವಾದ್ದರಿಂದ 'ಓಂ' ಎಂದು ಉಚ್ಚರಿಸಿ ಬ್ರಹ್ಮಜ್ಞಾನಿಗಳ ವೇದಗಳಲ್ಲಿ ವಿಹಿತವಾದ ಯಜ್ಞದಾನ ತಪೋರೂಪ ಕ್ರಿಯೆಗಳು ನಡೆಯುತ್ತವೆ.

**ತಸ್ಮಾದೋಮಿತ್ಯಸ್ಯ ಭಗವನ್ನಾಮತ್ವಾತ್ ಓಮಿತ್ಯುದಾಹೃತ್ಯ ಓಂಕಾರ-ಮುಚ್ಚಾರ್ಯ ಬ್ರಹ್ಮವಾದಿನಾಂ ಸತತಂ ಯಜ್ಞಾದಿಕ್ರಿಯಾಃ ವಿಧಾನೋಕ್ತಾಃ ವಿಧ್ಯುಕ್ತಾಃ ಪ್ರವರ್ತಂತೇ । ಏತೇನೋಕ್ತೋಂಕಾರಾರ್ಥಧೀಪೂರ್ವಕಂ**

**ಓಮಿತ್ಯುಚ್ಚಾರ್ಯ ಬ್ರಾಹ್ಮಣೈಸ್ಸಹ ವಿಧ್ಯುಕ್ತದಿಶಾಽನುಷ್ಠಾನಂ ಯಜ್ಞಾದೇಃ ಸಾತ್ತ್ವಿಕತ್ವೇ ಹೇತುರುಕ್ತೋ ಭವತಿ ॥ 24 ॥**

**ಅನುವಾದ-** ತಸ್ಮಾತ್= 'ಓಮ್' ಎಂಬುದು ಭಗವಂತನ ನಾಮವಾದ್ದರಿಂದ ಓಮಿತ್ಯುದಾಹೃತ್ಯ= 'ಓಮ್' ಎಂದು ಉಚ್ಚರಿಸಿ ಬ್ರಹ್ಮಜ್ಞಾನಿಗಳ **ವಿಧಾನೋಕ್ತಾಃ**- ವೇದಶಾಸ್ತ್ರಗಳಲ್ಲಿ ವಿಹಿತವಾದ ಯಜ್ಞಾದಿಕ್ರಿಯೆಗಳು ನಿರಂತರವಾಗಿ ನಡೆಯುತ್ತವೆ. 'ಓಂ' ಪದವನ್ನು ಅದರ ಅರ್ಥಜ್ಞಾನ ಪೂರ್ವಕವಾಗಿ ಉಚ್ಚರಿಸಿ ಬ್ರಾಹ್ಮಣರಿಂದ ಸಹಿತನಾಗಿ ಶಾಸ್ತ್ರದ ವಿಧಿಗನುಗುಣವಾಗಿ ಅನುಷ್ಠಾನ ಮಾಡುವದು ಯಜ್ಞಾದಿಗಳು ಸಾತ್ವಿಕವಾಗಲು ಕಾರಣವಾಗುತ್ತದೆ.

**ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥ 25 ॥**

**ಅರ್ಥ**– ಮೋಕ್ಷಾಭಿಲಾಷಿಗಳು ಸ್ವರ್ಗಾದಿಫಲವನ್ನು ಬಯಸದೆ ಪರಮಾತ್ಮನ ಅನುಗ್ರಹವನ್ನು ಬಯಸುತ್ತ ಮುಮುಕ್ಷುಗಳು ಅನೇಕ ವಿಧವಾದ ಯಜ್ಞ ,ದಾನ , ತಪಸ್ಸು ಈ ಎಲ್ಲ ಕ್ರಿಯೆಗಳನ್ನು ಮಾಡುವರು.

**ಕಿಂಚ ತತ್ಪರೋಕ್ಷಂ ಫಲಂ ಸ್ವರ್ಗಾದಿ ಅನಭಿಸಂಧಾಯ ಮಮ ಸ್ಯಾದಿತ್ಯನಿಚ್ಛನ್, ತಥಾ ತತ್ ವೇದೈಕಗಮ್ಯತಯಾ ಪರೋಕ್ಷಭೂತಂ ಬ್ರಹ್ಮ ಅಭಿಸಂಧಾಯ ಮಮಾಸ್ಪದಂ ಸ್ಯಾದಿತೀಚ್ಛನ್ ಯಜ್ಞೋಽಗ್ನಿಹೋತ್ರಾದಿಃ ತಪಃ-ಕ್ರಿಯಾ ಪ್ರಾಗುಕ್ತಶಾರೀರಾದಿತಪೋರೂಪಕ್ರಿಯಾಃ ದಾನಕ್ರಿಯಾಶ್ಚ ವಿವಿಧಾಃ ಮೋಕ್ಷಕಾಂಕ್ಷಿಭಿಃ ಕ್ರಿಯಂತ ಇತ್ಯುಕ್ತ್ಯಾ ವೇದೈಕವೇದ್ಯತಯಾ ತತ್ಪದೋಕ್ತ ಬ್ರಹ್ಮೋದ್ದೇಶೇನೇತರಫಲಾನುದ್ದೇಶೇನ ಚ ಕ್ರಿಯಮಾಣತ್ವರೂಪಧರ್ಮಾಂತರ-ಮಪಿ ಯಜ್ಞಾದೇಃ ಸಾತ್ತ್ವಿಕತ್ವಾದಿಹೇತುರುಕ್ತೋ ಭವತಿ । ತದಿತಿ ಬ್ರಹ್ಮೋದ್ದಿಶ್ಯ ಯಜ್ಞಾದೇಃ ಕರಣಾಚ್ಚ ಬ್ರಹ್ಮಣಸ್ತದಿತಿ ನಾಮೇತಿ ಚೋಕ್ತಂ ಭವತಿ ॥ 25 ॥**

**ಅನುವಾದ-** ಪರೋಕ್ಷವಾದ ಸ್ವರ್ಗಾದಿಫಲವನ್ನು ಬಯಸದೆ, ಕೇವಲ ವೇದದಿಂ ತಿಳಿಯಲ್ಪಡುವವನಾದ್ದರಿಂದ ಪರೋಕ್ಷನಾದ ಬ್ರಹ್ಮನೇ ನನಗೆ ಆಶ್ರಯ ನೀಡಲೆಂದು ಬಯ ಮೋಕ್ಷಾಕಾಂಕ್ಷಿಗಳು ಅಗ್ನಿಹೋತ್ರಾದಿಗಳನ್ನು ಶಾರೀರಿಕವಾದ ತಪಸ್ಸು ,ಅನೇಕ ಪ್ರಕಾರಗಳಾ ದಾನ ಕ್ರಿಯೆಗಳು ಇವುಗಳನ್ನು ಮಾಡುವರು. ಕೇವಲ ವೇದ ಶಾಸ್ತ್ರಗಳಿಂದ ವೇದ್ಯನಾದ್ದರಿಂ ಬ್ರಹ್ಮನು 'ತತ್' ಶಬ್ದ ವಾಚ್ಯನಾಗಿರುವನು. ಇಂತಹ ಬ್ರಹ್ಮನನ್ನು ಉದ್ದೇಶ್ಯವಾಗಿಸಿ ಅನಿತ್ಯಫಲಗಳನ ಗುರಿಯಾಗಿ ಇಟ್ಟುಕೊಳ್ಳದೆ ಯಜ್ಞಾದಿ ಕರ್ಮಗಳನ್ನು ಆಚರಿಸಬೇಕು. ಈ ರೀತಿಯಾ

ಅನುಷ್ಠಾನವೇ ಯಜ್ಞಾದಿಗಳು ಸಾತ್ವಿಕವಾಗಲು ಕಾರಣ. ತತ್ ಎಂದು ಬ್ರಹ್ಮನನ್ನು ಉದ್ದೇಶಿಸಿ ಯಜ್ಞಾದಿಗಳನ್ನು ಮಾಡುವುದರಿಂದಲೂ ಬ್ರಹ್ಮನಿಗೆ ತತ್ ಎಂದು ನಾಮ ಎಂದು ಹೇಳಿದಂತಾಯಿತು.

**ಸತ್‌ಕರ್ಮ**

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ 26 ॥**

**ಅರ್ಥ**– ಉತ್ಪತ್ತಿ, ಸದ್ಗುಣಶಾಲಿತ್ವ, ಮಂಗಳಕಾರ್ಯ ಎಂಬ ಅರ್ಥಗಳಲ್ಲಿ ಸಚ್ಛಬ್ದವು ಪ್ರಯೋಗದಲ್ಲಿದೆ.

**ಕಿಂಚ ಸಾಧುಗುಣೋಪೇತತಯಾ ಸಚ್ಛಬ್ದಾರ್ಥಭಗವದ್‌ಜ್ಞಾನಪೂರ್ವಕ-ತಯಾಽನುಷ್ಠಾನಮಪಿ ಸಾತ್ತ್ವಿಕತ್ವಹೇತುರ್ಧರ್ಮಾಂತರಂ ಯಜ್ಞಾದೇರಿತಿ ಭಾವೇನ ಸಚ್ಛಬ್ದಾರ್ಥಮಾಹ- ಸದ್ಭಾವ ಇತಿ ॥ ಸದ್ಭಾವೇ ಅಸತಃ ಸತ್ತಾ-ರೂಪಪ್ರಜನನಾರ್ಥೇ, ಸಾಧುಭಾವೇ ಸಾಧುತ್ವೇ, ಪ್ರಶಸ್ತೇ ಕರ್ಮಣಿ ಶುಭಕರ್ಮಣಿ ಚೇತ್ಯರ್ಥಃ ॥ 26 ॥**

**ಅನುವಾದ**– ಸದ್ಗುಣಶಾಲಿಯಾದ್ದರಿಂದ ಭಗವಂತನಿಗೆ ಸತ್ ಎಂಬ ನಾಮವಿದೆ ಎಂಬ ಅನುಸಂಧಾನ ಪೂರ್ವಕವಾಗಿ ಅನುಷ್ಠಾನ ಮಾಡುವುದೂ ಯಜ್ಞಾದಿಗಳು ಸಾತ್ವಿಕವೆನಿಸಲು ಇನ್ನೊಂದು ಕಾರಣವೆನ್ನುವ ಅಭಿಪ್ರಾಯದಿಂದ 'ಸತ್' ಶಬ್ದದ ಅರ್ಥಗಳನ್ನು ಹೇಳುತ್ತಾನೆ– **ಸದ್ಭಾವೇ** = ಉತ್ಪತ್ತಿ ಎಂಬ ಅರ್ಥದಲ್ಲಿ, **ಸಾಧುಭಾವೇ**= ಸದ್ಗುಣಶಾಲಿ ಎಂಬ ಅರ್ಥದಲ್ಲಿ ಮತ್ತು , **ಪ್ರಶಸ್ತೇ ಕರ್ಮಣಿ** = ಶುಭಕರ್ಮ ಎಂಬ ಅರ್ಥದಲ್ಲಿ 'ಸತ್' ಶಬ್ದ ಪ್ರಯೋಗವಿದೆ ಎಂದು.

**ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ ।**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥ 27 ॥**

**ಅರ್ಥ**– ಯಜ್ಞ, ತಪಸ್ಸು, ದಾನ ಇವುಗಳ ವಿಷಯದಲ್ಲಿರುವ ನಿಷ್ಠೆಯೂ ಸತ್ ಎಂದು ಹೇಳಲ್ಪಡುತ್ತದೆ. ಪರಮಾತ್ಮನ ಪ್ರಾಪ್ತಿಗಾಗಿ ಮಾಡುವ ಕರ್ಮವೂ ಸತ್ ಶಬ್ದವಾಚ್ಯ.

**ಭಗವನ್ನಿಷ್ಠಾಪೂರ್ವಕತ್ವಮಪಿ ಕರ್ಮಣಃ ಸಾತ್ತ್ವಿಕತ್ವಹೇತುಭೂತಂ ಧರ್ಮಾಂತರಮಿತಿ ಭಾವೇನ ನಿಷ್ಠಾಽಪಿ ಸಚ್ಛಬ್ದಾರ್ಥ ಇತ್ಯಾಹ- ಯಜ್ಞ**

**ಇತಿ ।। ಸ್ಥಿತಿರ್ನಿಷ್ಠಾ । ಭಗವಾನೇಭಿರವಶ್ಯಂ ಫಲಂ ಪ್ರಯಚ್ಛತೀತಿ ಬುದ್ಧಿರಿತಿ ಯಾವತ್ । ಕಿಂಚ ಭಗವದ್ವಿಷಯತಯಾಽನುಷ್ಠಾನಮಪಿ ಧರ್ಮಾಂತರಮಿತಿ ಭಾವೇನಾಹ- ಕರ್ಮೇತಿ ।। ತದರ್ಥೀಯಂ ಸಚ್ಛಬ್ದಾರ್ಥ ಭಗವದರ್ಥೀಯಮ್ ।। 27 ।।**

**ಅನುವಾದ-** ಪರಮಾತ್ಮನ ಅವಶ್ಯ ಫಲನೀಡುವನೆಂಬ ಅಚಲಶ್ರದ್ಧೆಯೂ ಸಹ ಕರ್ಮದ ಸಾತ್ವಿಕತೆಗೆ ಕಾರಣವಾಗುತ್ತದೆ ಎಂದು ಹೇಳುವ ಉದ್ದೇಶದಿಂದ ನಿಷ್ಠೆಯೂ ಸತ್ ಶಬ್ದದ ಅರ್ಥವೆಂದು ಹೇಳುತ್ತಿದ್ದಾನೆ. ಸ್ಥಿತಿಃ – ನಿಷ್ಠೆ. ಪರಮಾತ್ಮನು ನಿಶ್ಚಯವಾಗಿ ಫಲವನ್ನು ನೀಡುತ್ತಾನೆ ಎಂಬ ವಿಶ್ವಾಸ. ಕರ್ಮವನ್ನು ಪರಮಾತ್ಮನ ಪ್ರಾಪ್ತಿಯನ್ನೇ ಉದ್ದೇಶ್ಯವಾಗಿಸಿ ಆಚರಿಸಬೇಕು ಇದೂ ಕೂಡ ಕರ್ಮದ ಸಾತ್ವಿಕತೆಗೆ ಇನ್ನೊಂದು ಕಾರಣ ಎಂಬ ಅಭಿಪ್ರಾಯದಿಂದ **ತದರ್ಥೀಯಂ**= ಸತ್ ಶಬ್ದದ ಅರ್ಥನಾದ ಪರಮಾತ್ಮನಿಗಾಗಿ ಮಾಡುವ ಕರ್ಮವೂ ಸತ್ ಎನಿಸುತ್ತದೆ ಎನ್ನುತ್ತಾನೆ .

**ಅಸತ್‌ಕರ್ಮ**

**ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ।। 28 ।।**

*।। ಓಂ ತತ್ಸದಿತಿ ಶ್ರೀಮದ್‌ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಶ್ರದ್ಧಾತ್ರಯವಿಭಾಗೋನಾಮ ಸಪ್ತದಶೋಽಧ್ಯಾಯಃ ।।*

**ಅರ್ಥ–** ಭಕ್ತಿ ಇಲ್ಲದೇ ಮಾಡಿದ ಹೋಮ, ದಾನ, ತಪಸ್ಸು ಮುಂತಾದ ಎಲ ಕರ್ಮಾಚರಣೆಗಳು ಅಸತ್ ಎನಿಸುತ್ತದೆ. ಆದರಿಂದ ಇಲ್ಲಿಯೂ ಫಲವಿಲ್ಲ, ಮರಣದ ನಂತರ ಪರಲೋಕದಲ್ಲಿಯೂ ಫಲವಿಲ್ಲ,

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ ಭಗವದ್ಗೀತೆಯಲ್ಲಿ ಶ್ರದ್ಧಾತ್ರಯವಿಭಾಗ ಎಂಬ ಹದಿನೇಳನೆಯ ಅಧ್ಯಾಯವು ಮುಗಿಯಿತು.*

**ಯಜ್ಞಾದೇಃ ಸಾತ್ತ್ವಿಕತ್ವಹೇತುಭೂತಧರ್ಮಾನುಕ್ತ್ವಾ ತದನ್ಯಥಾತ್ವೇಽಪಿ ಹೇತುಭೂತಧರ್ಮಾನಾಹ- ಅಶ್ರದ್ಧಯೇತಿ ।। ಭಗವಚ್ಛ್ರದ್ಧಾಭಾವೇ- ನೇತ್ಯರ್ಥಃ । ಹುತಮಿತ್ಯಾದೌ ಶಾಸ್ತ್ರಾನುಸಾರೇಣೇತಿ ಯೋಜ್ಯಮ್ । ಭಗವಚ್ಛ್ರದ್ಧಾಂ ವಿನಾ ಶಾಸ್ತ್ರಾನುಸಾರೇಣಾನುಷ್ಠಿತಮಪಿ ಯದ್ಧೋಮಾದಿಕಂ**

**ತದಸದೇವೋಚ್ಯತೇ । ತತ್ಪ್ರೇತ್ಯ ನಚ ಇಹ ಚ ನೋ । ಐಹಿಕಾಮುಷ್ಮಿಕ-ಪುಮರ್ಥಪ್ರದಂ ನೇತ್ಯರ್ಥಃ । ಅತೋ ಭಗವಚ್ಛ್ರದ್ಧಾಭಕ್ತ್ಯಾದಿ ಪೂರ್ವಕ-ಮೇವಾನುಷ್ಠಿತ ಹೋಮಾದೀನಿ ಇಹಾಮುತ್ರ ಫಲಪ್ರದಾನೀತಿ ಶ್ರದ್ಧೈವ ಪ್ರಯೋಜಿಕೇತಿ ಸೈವ ತ್ರಿವಿಧಾ ಭವತಿ ಶ್ರದ್ಧೇತ್ಯಾದಿನಾ ಪ್ರಾಧಾನ್ಯೇನೋಕ್ತೇತಿ ಭಾವಃ । ವಸ್ತುತಸ್ತು ಶ್ರದ್ಧಾಭಾವೇ ಶಾಸ್ತ್ರಾನುಸಾರಿತ್ವಮೇವ ನೇತಿ ಯೋಜ್ಯಮ್ ॥ 28 ॥**

***ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ ಸಪ್ತದಶೋಽಧ್ಯಾಯಃ ॥***

**ಅನುವಾದ–** ಇದುವರೆಗೂ ಯಜ್ಞಾದಿ ಕರ್ಮಗಳು ಸಾತ್ವಿಕವಾಗಲು ಕಾರಣಗಳಾದ ಧರ್ಮಗಳನ್ನು ಹೇಳಿದನು. ಈಗ ಅದೇ ಕರ್ಮಗಳು ತಾಮಸವಾಗಲು ಕಾರಣವಾದ ಧರ್ಮವನ್ನು ಹೇಳುತ್ತಿದ್ದಾನೆ. ಅಶ್ರದ್ಧಯಾ – ಭಗವಂತನಲ್ಲಿ ಶ್ರದ್ಧೆ ಇಲ್ಲದೆ ಎಂದು ಅರ್ಥ. ಹುತಂ, ತಪಃ ದತ್ತಂ, ಕೃತಂ ಎಂಬಲ್ಲಿ ಶಾಸ್ತ್ರಕ್ಕನುಗುಣವಾಗಿ ಎಂದು ಯೋಜಿಸಬೇಕು. ಶಾಸ್ತ್ರಕ್ಕನುಗುಣವಾಗಿ ಹೋಮಾದಿ ಕರ್ಮಗಳನ್ನು ಆಚರಿಸಿದರೂ ಪರಮಾತ್ಮನಲ್ಲಿ ಭಕ್ತಿ ಇಲ್ಲದಿದ್ದಲ್ಲಿ, ಆ ಕರ್ಮವು ಅಸತ್ ಎಂದೆನಿಸುವುದು. ಅಂತಹ ಕರ್ಮವು ಈ ಲೋಕದಲ್ಲಾಗಲಿ ಪರ ಲೋಕದಲ್ಲಾಗಲೀ ಉತ್ತಮ ಫಲವನ್ನು ನೀಡಲಾರದು.

ಆದ್ದರಿಂದ ಪರಮಾತ್ಮನಲ್ಲಿ ಭಕ್ತಿಶ್ರದ್ಧಾ ಪೂರ್ವಕವಾಗಿ ಹೋಮದಾನಾದಿ ಕರ್ಮಚರಣೆ-ಗಳನ್ನು ಮಾಡಿದಾಗ ಆ ಕರ್ಮವು, ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಉತ್ತಮ ಫಲವನ್ನು ನೀಡುವುದು. ಆದ್ದರಿಂದ ಉತ್ತಮಫಲವನ್ನು ಪಡೆಯಲು ಶ್ರದ್ಧೆಯು ಅತ್ಯಂತ ಅಗತ್ಯವಾದುದು. ಆ ಕಾರಣದಿಂದ 'ತ್ರಿವಿಧಾ ಭವತಿ ಶ್ರದ್ಧಾ' ಎಂದು ಶ್ರೀಕೃಷ್ಣನು ಶ್ರದ್ಧೆಯನ್ನೇ ಪ್ರಧಾನವಾಗಿ ಪ್ರತಿಪಾದಿಸಿದ್ದಾನೆ. ವಸ್ತುತಃ ಶ್ರದ್ಧೆ ಇಲ್ಲದೇ ಮಾಡಿದ ಕರ್ಮವು ಶಾಸ್ತ್ರಾನುಸಾರಿಯೇ ಅಲ್ಲ.

***ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ ಹದಿನೇಳನೆಯ ಅಧ್ಯಾಯವು ಮುಗಿಯಿತು.***

# ಅಧ್ಯಾಯ – 18

## ಕರ್ಮಸಂನ್ಯಾಸ-ಕರ್ಮತ್ಯಾಗಗಳ ಗೊಂದಲ ಪರಿಹರಿಸು

**ಅರ್ಜುನ ಉವಾಚ -**

**ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ ಕೇಶಿನಿಷೂದನ ॥ 1 ॥**

**ಅರ್ಥ**– ಅರ್ಜುನ ಹೇಳಿದನು– ಹೇ, ದೀರ್ಘ ಬಾಹುಗಳ, ಕೇಶಿ ಎಂಬ ದಾನವ ಸಂಹಾರಕ, ಹೃಷೀಕೇಶನೆ ! ನಾನು ಸಂನ್ಯಾಸ ಮತ್ತು ತ್ಯಾಗಗಳ ಪ್ರತ್ಯೇಕ ಸ್ವರೂಪವನ್ನು ತಿಳಿ ಬಯಸುತ್ತೇನೆ (ಏಕೆಂದರೆ, ಮೇಲ್ನೋಟಕ್ಕೆ ಸಂನ್ಯಾಸ ಎಂದರೂ ತ್ಯಾಗ ಎಂದರೂ ಒಂದೇ ಅ ಕಾಣುತ್ತದೆ.)

## ಅಧ್ಯಾಯದ ಪೀಠಿಕೆ

### ಗೀತಾವಿವೃತಿ

**ಪೂರ್ವಾಧ್ಯಾಯೇಷು ಸರ್ವೇಷು 'ತ್ರೈಗುಣ್ಯವಿಷಯಾ ವೇದಾ' (2-45) ಇತ್ಯಾದಿನಾ ಯತ್ಪುಮರ್ಥಹೇತುಜ್ಞಾನಸಾಧನಂ ವಿಪ್ರಕೀರ್ಣತಯೋಕ್ತಮ್, ತದಿಹ ಮಂದಾನಾಂ ಬುದ್ಧ್ಯಾರೋಹಾಯ ಸಂಕ್ಷಿಪ್ಯ ನಿರೂಪ್ಯತೇ । ತಥಾ ಚತುರ್ದಶಾಧ್ಯಾಯೋಕ್ತಂ ತ್ರಿಗುಣಕಾರ್ಯಂ ಚೋಚ್ಯತೇ । 'ಸಂನ್ಯಾಸಃ ಕರ್ಮಯೋಗಶ್ಚ' (5-2) ಇತ್ಯಾದಿನಾ ಪಂಚಮಾದೌ ಸಂನ್ಯಾಸಸ್ಯ 'ತ್ಯಾಗಾಚ್ಛಾಂತಿರನಂತರಂ' (12-12) ಇತಿ ದ್ವಾದಶೇ ತ್ಯಾಗಸ್ಯ ಚ ಪುಮರ್ಥಹೇತುತ್ವಮುಕ್ತಮ್ । ತಯೋಃ ಸ್ವರೂಪನಿರ್ಣಯಾಯ ಪೃಚ್ಛತಿ- ಸಂನ್ಯಾಸಸ್ಯೇತಿ ॥**

**ಅನುವಾದ**– ಹಿಂದಿನ ಅಧ್ಯಾಯಗಳಲ್ಲಿ (1) **'ತ್ರೈಗುಣ್ಯವಿಷಯಾ ವೇದಾಃ'** (2-4 ಎಂಬಲ್ಲೆಲ್ಲ ಪುರುಷಾರ್ಥಕ್ಕೆ ಸಾಧನವಾದ ಜ್ಞಾನದ ಸಾಧನವನ್ನು ಬಿಡಿ ಬಿಡಿಯ ಹೇಳಲಾಗಿತ್ತು . ಅಲ್ಪಮತಿಗಳು ಸಂಗ್ರಹವಾಗಿ ತಿಳಿಯುವಂತಾಗಲು ಅದನ್ನು ಈ ಅಧ್ಯಾಯ ಸಂಕ್ಷೇಪಗೊಳಿಸಿ ನಿರೂಪಿಸಲಾಗುತ್ತಿದೆ. ಅದರಂತೆ ಹದಿನಾಲ್ಕನೆಯ ಅಧ್ಯಾಯದಲ್ಲಿ ಹೇ

ಗುಣಗಳ ಕಾರ್ಯವನ್ನೂ ಹೇಳಲಾಗುತ್ತದೆ '**ಸಂನ್ಯಾಸಃಕರ್ಮಯೋಗಶ್ಚ**'(5-2) ಎಂಬಲ್ಲಿಂದ ಐದನೆಯ ಹಾಗೂ ಇತರ ಅಧ್ಯಾಯಗಳಲ್ಲಿ ಸಂನ್ಯಾಸವು ಪುರುಷಾರ್ಥಸಾಧನ ಎಂದು ಹೇಳಲಾಗಿತ್ತು. ಮತ್ತು, '**ತ್ಯಾಗಾತ್ ಶಾಂತಿರನಂತರಮ್**' (12-12) ಎಂದು ಹನ್ನೆರಡನೆಯ ಅಧ್ಯಾಯದಲ್ಲಿ ತ್ಯಾಗವನ್ನು ಪುರುಷಾರ್ಥ ಸಾಧನ ಎಂದು ಹೇಳಲಾಗಿತ್ತು. ಅವೆರಡರ ಸ್ವರೂಪ ಎಂಥದು ಎಂದು ನಿಶ್ಚಯಿಸಿಕೊಳ್ಳಲು ಅರ್ಜುನನು '**ಸಂನ್ಯಾಸಸ್ಯ**' ಎಂಬುದರಿಂದ ಪ್ರಶ್ನಿಸುತ್ತಿದ್ದಾನೆ.

**ಹೇ ಹೃಷಿಕೇಶ ! ಸರ್ವೇಂದ್ರಿಯಸ್ವಾಮಿನ್ । ಕೇಶಿನಾಮಕಾಸುರಮರ್ದನ !**
**ಸನ್ನ್ಯಾಸಸ್ಯ ತ್ಯಾಗಸ್ಯ ಚ ಪೃಥಕ್ ತತ್ತ್ವಂ ಸ್ವರೂಪಂ ವೇದಿತುಂ ಜ್ಞಾತುಮಿಚ್ಛಾಮಿ ।**
**ದ್ವಯೋರಪಿ ಶಬ್ದಯೋರಾಪಾತತೋಽರ್ಥೈಕ್ಯಪ್ರತೀತೇರಿತಿ ಭಾವಃ ॥ 1 ॥**

**ಅನುವಾದ–** **ಹೇ ಹೃಷೀಕೇಶ** ! (ಹೃಷೀಕ=) ಸಕಲ ಇಂದ್ರಿಯಗಳ, (ಈಶ=)ಒಡೆಯನೇ ! (ಕೇಶಿನಿಷೂದನ =) ಕೇಶಿ ಎಂಬ ಅಸುರನನ್ನು ಮರ್ದಿಸಿದವನೆ ! ಸಂನ್ಯಾಸ ಮತ್ತು ತ್ಯಾಗಗಳ ಪ್ರತ್ಯೇಕ, **ತತ್ವಂ** = ಸ್ವರೂಪವನ್ನು, **ವೇದಿತುಂ** = ತಿಳಿಯಲು ಬಯಸುತ್ತೇನೆ. ಸಂನ್ಯಾಸ ಮತ್ತು ತ್ಯಾಗ ಎಂಬ ಎರಡೂ ಶಬ್ದಗಳಿಗೂ ಮೇಲ್ನೋಟಕ್ಕೆ (ಬಿಡುವುದು ಎಂಬ) ಒಂದೇ ಅರ್ಥ ಕಾಣುವುದರಿಂದ ಈ ಪ್ರಶ್ನೆ ಎಂದು ಅಭಿಪ್ರಾಯ. ॥ 1 ॥

**ವಿವರಣೆ–** (1) 78 ಶ್ಲೋಕಗಳಿರುವ ಈ ಅಧ್ಯಾಯದ 55 ಶ್ಲೋಕಗಳಲ್ಲಿ ಕೃಷ್ಣಾರ್ಜುನರ ಸಂವಾದ ಮುಂದುವರೆದಿದೆ. ಮುಂದಿನ 17 ಶ್ಲೋಕಗಳಲ್ಲಿ ಕೃಷ್ಣನ ಉಪದೇಶದ ಉಪಸಂಹಾರ. 73ನೇ ಶ್ಲೋಕದಲ್ಲಿ ಅರ್ಜುನನ '**ಕರಿಷ್ಯೇ ವಚನಂ ತವ**' ಎಂಬ ಕೃಷ್ಣೋಪದೇಶದ ಸಾರ್ಥಕತೆಯ ನಿರೂಪಣ. ಕೊನೆಯ ಐದು ಶ್ಲೋಕಗಳಲ್ಲಿ ಸಂಜಯನ ಉಪಸಂಹಾರ.

ಆ ಮೊದಲ 55 ಶ್ಲೋಕಗಳಲ್ಲೂ ಹಿಂದಿನ ಯಾವ ವಿಷಯಗಳ ವಿಸ್ತೃತ ವಿವರಣೆ ಬಂದಿದೆ ಎಂಬುದನ್ನು ಇಲ್ಲಿ ಸಂಗ್ರಹಿಸಿದ್ದಾರೆ.

**ಶ್ರೀ ಭಗವಾನುವಾಚ –**

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ ।**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥ 2 ॥**

**ಅರ್ಥ–** ಶ್ರೀ ಕೃಷ್ಣನು ಹೇಳಿದನು – ಕಾಮ್ಯಕರ್ಮಗಳನ್ನು ಬಿಡುವುದು ಸಂನ್ಯಾಸ ಎಂದು ಜ್ಞಾನಿಗಳು ಹೇಳುತ್ತಾರೆ. (ಸಂನ್ಯಾಸ – ತ್ಯಾಗಗಳಲ್ಲಿ) ಕುಶಲರಾದ ಜ್ಞಾನಿಗಳು, ಸಕಲಕರ್ಮಗಳ ಫಲವನ್ನು ಬಿಡುವುದನ್ನು ತ್ಯಾಗ ಎನ್ನುತ್ತಾರೆ.

**ಅಥಾಽಪ್ಯಸ್ತಿ ವಿವಕ್ಷಾಭೇದೇನ ಭೇದ ಇತಿ ಭಾವೇನೋತ್ತರಮಾಹ- ಕಾಮ್ಯಾನಾಮಿತಿ ॥ ವೈಕಲ್ಪಿಕಕಾಮ್ಯಾನಾಂ ಜ್ಯೋತಿಷ್ಟೋಮಾದೀನಾಂ ಸ್ವರ್ಗಾದಿ- ಫಲಾನಿಚ್ಛಯಾ ವಿಶೇಷಣತ್ಯಾಗೇನ ಕಾಮ್ಯಾನಾಂ ಕರ್ಮಣಾಂ ತ್ಯಾಗಮ್, ನಿಯತಕಾಮ್ಯಾನಾಂ ಕಾರೀರ್ಯಾದೀನಾಂ ಸ್ವರೂಪಾಕರಣೇನ ತ್ಯಾಗಂ ಸಂನ್ಯಾಸಂ ಜ್ಞಾನಿನೋ ವಿದುಃ ಜಾನಂತಿ । ವಿಚಕ್ಷಣಾಃ ಕುಶಲಾಃ ಸರ್ವಕರ್ಮಣಾಂ ಭಗವತ್ಪ್ರೀತ್ಯನ್ಯಫಲತ್ಯಾಗಂ ತ್ಯಾಗಶಬ್ದಾರ್ಥಮಾಹುಃ ಇತ್ಯರ್ಥಃ ॥ 2 ॥**

**ಅನುವಾದ**– ಮೇಲ್ನೋಟಕ್ಕೆ ಒಂದೇ ಅರ್ಥ ಕಂಡರೂ ವಿವಕ್ಷೆ (1) ಬೇರೆ ಬೇರೆ ಅದರಿಂ ಅರ್ಥ ಭಿನ್ನವಾಗುತ್ತದೆ ಎಂಬ ಅಭಿಪ್ರಾಯದಿಂದ ಕೃಷ್ಣನು '**ಕಾಮ್ಯಾನಾಂ**' ಎಂಬುವುದರಿಂ ಉತ್ತರಿಸುತ್ತಿದ್ದಾನೆ. (ಕಾಮ್ಯಕರ್ಮಗಳು ಎರಡು ವಿಧ. 1. ವೈಕಲ್ಪಿಕ ಕಾಮ್ಯಗಳು. 2. ನಿಯ ಕಾಮ್ಯಗಳು. ಅವುಗಳಲ್ಲಿ) ವೈಕಲ್ಪಿಕಕಾಮ್ಯಗಳಾದ (2) ಜ್ಯೋತಿಷ್ಟೋಮ ಮೊದಲಾ ಹೋಮಗಳ ವಿಶೇಷಣವಾದ ಸ್ವರ್ಗಾದಿ ಫಲಗಳನ್ನು ಬಯಸದೆ ತ್ಯಜಿಸಿದಾಗ (ವಿಶಿಷ್ಟವಾದ ಕಾಮ್ಯಕರ್ಮವನ್ನು ತ್ಯಜಿಸಿದಂತಾಗುತ್ತದೆ. ಈ ತ್ಯಾಗವನ್ನು (**ಕವಯಃ**=) ಜ್ಞಾನಿಗಳು ಸಂನ್ಯಾ ಎಂದು, **ವಿದುಃ**= ತಿಳಿಯುತ್ತಾರೆ. ಇನ್ನು ನಿಯತಕಾಮ್ಯಗಳಾದ (3) ಕಾರೀರೀ ಮೊದಲಾದವುಗ ಸ್ವರೂಪವನ್ನೇ ಆಚರಿಸದೆ ತ್ಯಜಿಸುವುದನ್ನು ಸಂನ್ಯಾಸ ಎಂದು ಜ್ಞಾನಿಗಳು ತಿಳಿಯುತ್ತಾರೆ. (4 **ವಿಚಕ್ಷಣಾಃ**= ಕುಶಲರು, **ಸರ್ವಕರ್ಮಫಲತ್ಯಾಗಂ**= ಸಕಲ ಕರ್ಮಗಳ ಭಗವತ್ಪ್ರೀತಿ ಭಿ ಫಲವನ್ನು ಬಿಡುವುದನ್ನು ತ್ಯಾಗಶಬ್ದದ ಅರ್ಥ ಎಂದು ಹೇಳುತ್ತಾರೆ- ಎಂದರ್ಥ. ॥ 2 ॥

**ವಿವರಣೆ**– (1) ಶಬ್ದಗಳ ಅರ್ಥ ಏನು ಎಂದು ಕೋಶಾದಿಗಳಿಂದ ನಿಶ್ಚಿತವಾಗಿದ್ದರೂ ಮಾತನಾಡುವ ವ್ಯಕ್ತಿಯ ಇಚ್ಛೆಗನುಗುಣವಾಗಿ ಆ ಅರ್ಥದಲ್ಲಿ ಸ್ವಲ್ಪ ಭಿನ್ನತೆ ಬರಬಹುದು ವಕ್ತೃವಿನ ಆ ಹೇಳುವ ಇಚ್ಛೆಯನ್ನು ವಿವಕ್ಷಾ ಎನ್ನುತ್ತಾರೆ. **ವಕ್ತುಂ ಇಚ್ಛಾ**= ವಿವಕ್ಷಾ ಎಂದು ಆ ಶಬ್ ನಿರ್ವಚನ. ಉದಾಹರಣೆಗೆ, ಬ್ರಾಹ್ಮಣ-ದ್ವಿಜ-ವಿಪ್ರಶಬ್ದಗಳಿಗೆ ಅರ್ಥ ಒಂದೇ. ಬ್ರಾಹ್ಮಣ ದಂಪತಿಗಳಿಗೆ ಹುಟ್ಟಿದವನು ಎಂಬ ಅರ್ಥದಲ್ಲಿ ಇವುಗಳ ಪ್ರಯೋಗ ಬೇಕಾದಷ್ಟು ಕಡೆ ಇದೆ ಆದರೂ ಕೆಲವು ಸಂದರ್ಭಗಳಲ್ಲಿ ವಿಶಿಷ್ಟವಾದ ಅರ್ಥಗಳನ್ನು ಇಟ್ಟುಕೊಂಡು ಇವುಗಳನ ಬಳಸುತ್ತಾರೆ. ಉಪನಯನವಾದವನು ದ್ವಿಜ, ವೇದಾಧ್ಯಯನ ನಡೆಸಿದವ ವಿಪ್ರ, ಬ್ರಹ್ಮಜ್ಞಾ ಸಂಪಾದಿಸಿದವನು ಬ್ರಾಹ್ಮಣ- ಎಂದು .

**ವಿವರಣೆ**– (2,3,4) ಕಾಮ್ಯಕರ್ಮಗಳಲ್ಲಿ ಎರಡು ವಿಧಗಳು. 1. ವೈಕಲ್ಪಿಕ ಕಾಮ್ಯಗಳು 2. ನಿಯತಕಾಮ್ಯಗಳು. ಈ ವಿಭಾಗದ ಅಭಿಪ್ರಾಯ ಹೀಗಿದೆ. ಕಾಮನೆಗಳನ್ನು ಹೇಳಿ ಹೇಳಿ ಕರ್ಮಗಳು ಕಾಮ್ಯಕರ್ಮಗಳಷ್ಟೆ. **ಉದಾ**– '**ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ**'

ಸ್ವರ್ಗದ ಕಾಮನೆ ಇದ್ದವನು ಜ್ಯೋತಿಷ್ಟೋಮ ಎಂಬ ಯಾಗ ಮಾಡಬೇಕು'. ಈ ಮಾತಿನಂತೆ ಜ್ಯೋತಿಷ್ಟೋಮವು ಕಾಮ್ಯಕರ್ಮ. ಆದರೆ ಇಲ್ಲಿ ಹೇಳಿದ ಸ್ವರ್ಗದ (ಇಂದ್ರಲೋಕದ)ಕಾಮನೆ ಇಲ್ಲದೆಯೂ , ಕೇವಲ ಭಗವದನುಗ್ರಹದ ಇಚ್ಛೆಯಿಂದಲೂ ಈ ಯಾಗವನ್ನು ಮಾಡಬಹುದು. ಇಂಥ ಕಾಮ್ಯಕರ್ಮಗಳು ವೈಕಲ್ಪಿಕಕಾಮ್ಯ ಎನಿಸುತ್ತವೆ. '**ವೃಷ್ಟಿಕಾಮಃ ಕಾರೀರ್ಯಾ ಯಜೇತ**'= ಮಳೆಯ ಕಾಮನೆ ಇದ್ದವನು ಕಾರೀರೀಯಾಗವನ್ನು ಮಾಡಬೇಕು'– ಈ ತರಹದ ಲೌಕಿಕ ಕಾಮನೆಗಳಿದ್ದವನು ಮಾಡಬೇಕಾದ ಯಾಗವೂ ಕಾಮ್ಯಕರ್ಮವೇ, ಆದರೆ ಇದನ್ನು ಈ ಕಾಮನೆ ಗಳಿದ್ದವನೇ ಮಾಡಬೇಕೆ, ಹೊರತು , ಭಗವದನುಗ್ರಹದ ಉದ್ದೇಶದಿಂದಲ್ಲ. ಆದ್ದರಿಂದ ಇದು '**ನಿಯತಕಾಮ್ಯ** = 'ಒಂದೇ ಕಾಮನೆಗಾಗಿ ಮಾಡಬೇಕಾದ ಕರ್ಮ' ಎನಿಸುತ್ತದೆ.

ಈ ಎರಡರಲ್ಲಿ ವೈಕಲ್ಪಿಕ ಕಾಮ್ಯಗಳಲ್ಲಿ ಕಾಮನಾಂಶವನ್ನು ಬಿಟ್ಟು ಯಾಗಾಂಶವನ್ನು ಅನುಷ್ಠಾನ ಮಾಡುವುದು ಕಾಮ್ಯಕರ್ಮತ್ಯಾಗ ಎನಿಸುತ್ತದೆ. ನಿಯತಕಾಮ್ಯಕರ್ಮಗಳಲ್ಲಿ ಕಾಮನಾಂಶವನ್ನು ಯಾಗಾಂಶವನ್ನು ಹೀಗೆ ಎರಡನ್ನೂ ಬಿಡುವುದು ಕಾಮ್ಯಕರ್ಮತ್ಯಾಗ ಎನಿಸುತ್ತಿದೆ.

ಇನ್ನು ನಿತ್ಯ–ನೈಮಿತ್ತಿಕಕಾಮ್ಯಗಳನ್ನು ಮಾಡುವಾಗ ಭಗವತ್ಪ್ರೀತಿ ಎಂಬ ಒಂದೇ ಉದ್ದೇಶವಿದ್ದರೆ ಅದು ತ್ಯಾಗ ಎನಿಸುತ್ತದೆ ಎಂದು ಅಭಿಪ್ರಾಯ.

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥ 3 ॥**

**ಅರ್ಥ**– ಕೆಲವು ಜ್ಞಾನಿಗಳು (ಬಂಧಕತ್ವ ಎಂಬ) ದೋಷ ಇರುವ (ಕಾಮ್ಯ)ಕರ್ಮವನ್ನು ಬಿಡಬೇಕು ಎನ್ನುವರು ; ಉಳಿದವರು ಯಜ್ಞ–ದಾನ–ತಪಸ್ಸು ಮತ್ತು ನಿತ್ಯನೈಮಿತ್ತಿಕ ಕರ್ಮಗಳನ್ನು ಬಿಡಬಾರದೆಂದು ಹೇಳುವರು.

**'ಸರ್ವಕರ್ಮಫಲತ್ಯಾಗಮ್' ಇತಿ ಸ್ವೋಕ್ತತ್ಯಾಗಸ್ವರೂಪಾವಧಾರಣಾಯ ಪ್ರಾತೀತಿಕೀಂ ವಿದ್ವನ್ಮತವಿಪ್ರತಿಪತ್ತಿಮುದ್ಭಾವಯತಿ– ತ್ಯಾಜ್ಯಮಿತಿ ॥ ಏಕೇ ಮನೀಷಿಣೋ ಜ್ಞಾನಿನಃ ದೋಷವತ್ ಬಂಧಕತ್ವದೋಷಯುಕ್ತಂ ಕಾಮ್ಯಕರ್ಮ ತ್ಯಾಜ್ಯಂ ಅಕಾರ್ಯಮಾಹುಃ । ಅಪರೇ ಚ ಮನೀಷಿಣಃ ಯಜ್ಞಾದಿ ನ ತ್ಯಾಜ್ಯಮಿತಿ ಪ್ರಾಹುಃ । ತಪಃ ಕೃಚ್ಛ್ರಚಾಂದ್ರಾಯಣಾದಿ । ಕರ್ಮ ಯಜ್ಞಾಂಗಾನಿ । ಯದ್ವಾ ನಿತ್ಯನೈಮಿತ್ತಿಕಾನಿ । ಮನೀಷಿಣ ಇತಿ ವಿಶೇಷಣಾತ್ ಪ್ರಾಚೀನಪಕ್ಷೇಽಪಿ ಫಲತ್ಯಾಗ ಏವಾಭಿಮತೋ ನ ಸ್ವರೂಪತ್ಯಾಗಃ । ಅತೋ ನ ಮತಯೋರ್ವಿರೋಧಃ ॥3 ॥**

**ಅನುವಾದ**– 'ಸರ್ವಕರ್ಮಫಲತ್ಯಾಗವನ್ನು ತ್ಯಾಗ ಎನ್ನುವರು' (18 –2) ಎಂದು ಕೃಷ್ಣನು

ತಾನು ಹೇಳಿದ ತ್ಯಾಗದ ಸ್ವರೂಪದ ನಿಶ್ಚಯಕ್ಕಾಗಿ ವಿದ್ವಾಂಸರ ಮತಗಳ ವಿರೋಧವನ್ನು ತೋರಿಸುತ್ತಿದ್ದಾನೆ- ತ್ಯಾಜ್ಯಂ ಎಂದು. ಆದರೆ, ಈ ವಿರೋಧ ಮೇಲುನೋಟಕ್ಕೆ ಮಾತ್ರ. ನಿಜವಾಗಿ ವಿಚಾರ ಮಾಡಿದರೆ ಈ ವಿರೋಧ ಇಲ್ಲ (1) **ಏಕೇ**= ಕೆಲವು **ಮನೀಷಿಣಃ**= ಜ್ಞಾನಿಗಳು **ದೋಷವತ್**= ಬಂಧಕತ್ವವೆಂಬ ದೋಷವಿರುವ **ಕರ್ಮ**= ಕಾಮ್ಯಕರ್ಮವು, **ತ್ಯಾಜ್ಯಂ**= ಅಕಾರ್ಯವು ಎಂದು ಹೇಳುವರು. **ಅಪರೇ ಚ**= ಉಳಿದ ಜ್ಞಾನಿಗಳಾದರೋ ಯಜ್ಞ-ದಾನ - ತಪಸ್ಸುಗಳು ಬಿಡತಕ್ಕವುಗಳಲ್ಲ ಎಂದು ಹೇಳುವರು. (ಇವುಗಳಲ್ಲಿ) ತಪಸ್ಸೆಂದರೆ ಕೃಚ್ಛ್ರ ಚಾಂದ್ರಾಯಣ ಮೊದಲಾದವು. ಕರ್ಮ ಎಂದರೆ ಯಜ್ಞದ ಅಂಗಕರ್ಮಗಳು. ಅಥವಾ ಕರ್ಮ ಎಂದರೆ ನಿತ್ಯ-ನೈಮಿತ್ತಿಕ ಕರ್ಮಗಳು. 'ಮನೀಷಿಣಃ' ಎಂದು ವಿಶೇಷಣ ನೀಡಿದ್ದರಿಂದ ಹಿಂದಿನ ಪಕ್ಷದಲ್ಲೂ ತ್ಯಾಗ ಎಂದರೆ ಫಲವನ್ನು ಬಿಡುವುದೆ ಹೊರತು ಕರ್ಮವನ್ನೇ ಬಿಡುವುದಲ್ಲ. ಆದ್ದರಿಂದ ಎರಡು ಮತಗಳಲ್ಲಿ ವಿರೋಧವಿಲ್ಲ (1). II 3 II

**ವಿವರಣೆ**- (1) 'ಕೆಲವರು ಬಿಡುಬೇಕೆನ್ನುವರು' 'ಉಳಿದವರು ಬಿಡಬಾರದೆನ್ನುವರು' ಎಂಬ ಮಾತುಗಳನ್ನು ಕೇಳಿದಾಗ ಇವೆರಡು ಮತಗಳು ಪರಸ್ಪರ ವಿರುದ್ಧ ಎಂಬ ಭಾವನೆ ಬರುತ್ತದೆ. ಆದರೆ, 'ಕೆಲವು ಜ್ಞಾನಿಗಳು ಬಿಡಬೇಕೆನ್ನುವರು' ಎಂದು ಮೊದಲ ಮತವನ್ನು ಹೇಳುವಾಗ 'ಜ್ಞಾನಿಗಳು' ಎಂದು ಹೇಳಿದ್ದಾರೆ. ಆದ್ದರಿಂದ, ಮೊದಲ ಮತ ತಪ್ಪು ಎಂಬ ಅಭಿಪ್ರಾಯ ಕೃಷ್ಣನಿಗಿದೆ ಎನ್ನಲಾಗದು . ಎರಡನೆಯ ಮತವನ್ನು ಕೃಷ್ಣನೇ ಮುಂದೆ ಸಮರ್ಥಿಸುತ್ತಿದ್ದಾನೆ. ಆದ್ದರಿಂದ, ಇಲ್ಲಿ ಉಲ್ಲೇಖಿಸಿದ ಎರಡು ಮತಗಳಿಗೆ ವಿರೋಧವನ್ನು ಹೇಳಲಾಗದು. ಆದ್ದರಿಂದ, ಈ ವಿರೋಧವು 'ಕೆಲವರು' 'ಉಳಿದವರು' ಎಂದು ಹೇಳಿದ್ದರಿಂದ ಕಾಣುವ ವಿರೋಧವೆ ಹೊರತು ನಿಜವಾಗಲ್ಲ. **'ತ್ಯಾಜ್ಯಂ' 'ನ ತ್ಯಾಜ್ಯಂ'** ಎಂದು ವಿರೋಧ ಸ್ಪಷ್ಟವಾಗಿದೆಯಲ್ಲವೆ ? ಎಂದರೆ, ಆ ವಿರೋಧವೂ ಇಲ್ಲ. ಏಕೆಂದರೆ, ಮೊದಲ ಮತದಲ್ಲಿ 'ಕರ್ಮ ತ್ಯಾಜ್ಯಂ' ಎಂದಿಷ್ಟೇ ಹೇಳದೆ **'ದೋಷವತ್ ಕರ್ಮ ತ್ಯಾಜ್ಯಂ'** ಎಂದು ಹೇಳಿದ್ದಾರೆ. ಇದರ ಅಭಿಪ್ರಾಯ ಸಕಾಮತ್ವ ಎಂಬ (ಬಂಧನಕ್ಕೆ ಕಾರಣವಾಗುವ) ದೋಷವಿರುವ ಕರ್ಮವನ್ನು ಬಿಡಬೇಕು, ಅರ್ಥಾತ್, ದೋಷವನ್ನು ಬಿಡಬೇಕು ಎಂದರ್ಥ. ಆದ್ದರಿಂದ, ಎರಡು ಮತಗಳಲ್ಲಿ ನಿಜವಾಗಿ ವಿರೋಧ ವಿಲ್ಲ- ಎಂದು ಅಭಿಪ್ರಾಯ.

**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ II 4 II**

**ಅರ್ಥ**- ಪುರುಷಶ್ರೇಷ್ಠ , ಭಾರತೋತ್ತಮ ಅರ್ಜುನನೇ ! ಹೀಗೆ ವಾದಗ್ರಸ್ತವಾದ ತ್ಯಾಗದ ವಿಷಯದಲ್ಲಿ ನಿಶ್ಚಿತಮತವನ್ನು ನನ್ನಿಂದ ಕೇಳು. ತ್ಯಾಗವು (ಮುಂದೆ ಹೇಳುವಂತೆ) ಮೂರು ವಿಧವಾಗಿದೆ.

**ಅವಿರೋಧಪ್ರಕಾರಂ ಪ್ರತಿಜ್ಞಾಪೂರ್ವಮುಪಪಾದಯತಿ- ನಿಶ್ಚಯಮಿತಿ ॥ ತತ್ರ ವಿಪ್ರತಿಪನ್ನೇ ತ್ಯಾಗೇ ವಿಷಯೇ ನಿಶ್ಚಿತಂ ಮತಂ ಮೇ ಸಕಾಶಾತ್ ಶೃಣು ಶ್ರುತ್ವಾ ನಿಷ್ಠಾಂ ಕುರು । ತ್ಯಾಗೋ ಹಿ ಫಲತ್ಯಾಗಃ, ಕರ್ಮಣಿ ಮಮತಾತ್ಯಾಗಃ, ಭಗವತಿ ಕರ್ತೃತ್ವಾನು- ಸಂಧಾನಪೂರ್ವಂ ಸ್ವಸ್ಯ ಕರ್ತೃತ್ವಾಭಿಮಾನತ್ಯಾಗ ಇತಿ ತ್ರಿವಿಧಃ ಸಂಪ್ರಕೀರ್ತಿತ ಇತ್ಯೇಕೇ । ವಕ್ಷ್ಯಮಾಣಸಾತ್ತ್ವಿಕಾದಿಭೇದೇನೇತ್ಯನ್ಯೇ ॥ 4 ॥**

**ಅನುವಾದ-** ಎರಡು ಮತಗಳಲ್ಲಿ ಹೇಗೆ ವಿರೋಧ ಇಲ್ಲ ಎನ್ನುವುದನ್ನು ಪ್ರತಿಜ್ಞೆಮಾಡಿ ಹೇಳುತ್ತಾನೆ- ನಿಶ್ಚಯಂ ಎಂದು. **ತತ್ರ**= ವಿವಾದಗ್ರಸ್ತವಾದ, **ತ್ಯಾಗೇ**= ತ್ಯಾಗದ ವಿಷಯದಲ್ಲಿ (**ನಿಶ್ಚಯಂ**=) ನಿಶ್ಚಿತಮತವನ್ನು , **ಮೇ ಸಕಾಶಾತ್** = ನನ್ನ ಕಡೆಯಿಂದ, **ಶೃಣು**= ಕೇಳು, ಕೇಳಿ ನಿಷ್ಠೆತೋರಿಸು. ತ್ಯಾಗವು 1) ಫಲತ್ಯಾಗ 2) ಕರ್ಮದಲ್ಲಿ ನನ್ನದು ಎಂಬ ಮಮತೆಯ ತ್ಯಾಗ ಮತ್ತು (3) ಭಗವಂತನಲ್ಲಿ ಕರ್ತೃತ್ವವನ್ನು ತಿಳಿಯುತ್ತಾ ತಾನು ಕರ್ತೃ ಎಂಬ ಅಭಿಮಾನದ ತ್ಯಾಗ ಮೂರು ವಿಧವಾಗಿ ಹೇಳಲ್ಪಡುತ್ತದೆ. (1) ತ್ಯಾಗವು ಮೂರುವಿಧ ಎನ್ನುವುದಕ್ಕೆ ಇದು ಕೆಲವರ ವ್ಯಾಖ್ಯಾನ. ಇನ್ನು ಕೆಲವರು, ತ್ರಿವಿಧ ಎಂದರೆ ಮುಂದೆ ಹೇಳುವಂತೆ ಸಾತ್ವಿಕ-ರಾಜಸ-ತಾಮಸ ಎಂದು ಮೂರು ಎಂದು ವ್ಯಾಖ್ಯಾನಿಸುತ್ತಾರೆ (1) ॥ 4 ॥

**ವಿವರಣೆ-** (1) ಈ ಶ್ಲೋಕದಲ್ಲಿ ಕೃಷ್ಣನು ತ್ಯಾಗವು ಮೂರುವಿಧ ಎನ್ನುತ್ತಿದ್ದಾನೆ. ಆ ಮೂರು ವಿಧಗಳು ಯಾವುವು ಎಂದು ಹೇಳಿಲ್ಲ. '**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ**' ಎಂದು ಹಿಂದೆ (18-2) ತ್ಯಾಗ ಎಂದರೆ ಫಲತ್ಯಾಗ ಎಂಬ ಮಾತು ಬಂದಿದೆ. '**ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ಕರ್ತವ್ಯಾನಿ**' ಎಂದು ಮುಂದೆ (18-6) ಮಮತಾತ್ಯಾಗವು ತ್ಯಾಗ ಎನ್ನಲ್ಪಟ್ಟಿದೆ. '**ಯಸ್ಯ ನಾಹಂಕೃತೋ ಭಾವಃ ಬುದ್ಧಿರ್ಯಸ್ಯ ನ ಲಿಪ್ಯತೇ..**' ಎಂದು ಮುಂದೆ (18-17) ತ್ಯಾಗಶಬ್ದವನ್ನು ಬಳಸದೆ ಕರ್ತೃತ್ವಾಭಿಮಾನವನ್ನು ಬಿಡಬೇಕು ಎಂದಿದೆ. ಆದ್ದರಿಂದ, ತ್ಯಾಗವು ಮೂರುವಿಧ ಎನ್ನುವುದನ್ನು, ಕೃಷ್ಣನು ಬಾಯಿ ಬಿಟ್ಟು ಹೇಳದ, ಆದರೆ ಸೂಚಿಸಿರುವ ರೀತಿಯಿಂದಲೂ ವ್ಯಾಖ್ಯಾನಿಸಬಹುದು. ಅಥವಾ, ಕೃಷ್ಣನೇ ಮುಂದೆ 7-8-9ನೇ ಶ್ಲೋಕಗಳಲ್ಲಿ ವಿವರಿಸುವ ಸಾತ್ವಿಕಾದಿಪ್ರಭೇದಗಳನ್ನು ಇಟ್ಟುಕೊಂಡೂ ವ್ಯಾಖ್ಯಾನಿಸಬಹುದು- ಎಂದು ಆಶಯ.

## ಇವಿಷ್ಟನ್ನು ಎಂದಿಗೂ ಬಿಡಬೇಡ

**ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥ 5 ॥**

**ಅರ್ಥ-** ಯಜ್ಞ-ದಾನ-ತಪಸ್ಸು-ಕರ್ಮ ಇವನ್ನು ಬಿಡಬಾರದು. ಮಾಡಲೇಬೇಕು. ಯಜ್ಞ,

ದಾನ ಮತ್ತು ತಪಸ್ಸು ಇವು ಜ್ಞಾನಿಗಳಿಗೆ ಪವಿತ್ರವಾದವು. (ಅಪರೋಕ್ಷಜ್ಞಾನಿಗಳಿಗೆ ಮೋಕ್ಷದಲ್ಲಿ ಆನಂದಾತಿಶಯವನ್ನು ತಂದು ಕೊಡುವಂಥವು. ಉಳಿದವರಿಗೆ ಅಂತಃಕರಣಶುದ್ಧಿ ಉಂಟು ಮಾಡುತ್ತವೆ.

**ನಿಶ್ಚಯಂ ಶೃಣ್ವಿತಿ ಪ್ರತಿಜ್ಞಾತಮಾಹ- ಯಜ್ಞೇತಿ ॥ ದ್ವಂದ್ವೈಕವದ್ಭಾವಃ । ಕುತಃ ಕಾರ್ಯಮಿತ್ಯತ ಆಹ- ಯಜ್ಞ ಇತಿ ॥ ಪಾವನಾನಿ ಪಾವಿತ್ರ್ಯಕರಣಾನಿ । ಅಬಂಧಕಾನೀತಿ ಯಾವತ್ । ಯದ್ವಾ ಮನೀಷಿಣಾಂ ಜ್ಞಾನಿನಾಂ ಮುಕ್ತಾವಾನಂದಾತಿಶಯ ಕರಾಣಿ । ಅತಃ ಸರ್ವೈರಪಿ ವರ್ಣಾಶ್ರಮೋಚಿತಕರ್ಮಾಣಿ ಕಾರ್ಯಾಣ್ಯೇವೇತಿ । ಯತೀನಾಮಪಿ ಜ್ಞಾನಯಜ್ಞವಿದ್ಯಾಭಯದಾನ ಬ್ರಹ್ಮಚರ್ಯಾದಿ ತಪಾಂಸಿ ಚ ಸಂತ್ಯೇವ । ಸ್ತ್ರೀ-ಶೂದ್ರಾದೀನಾಮಪಿ ವಿಷ್ಣುನಾಮಾಧ್ಯಯನರೂಪೋ ಯಜ್ಞಃ ಸತ್ಯವಚನಮುಪವಾಸಾದಿತಪಶ್ಚಾಸ್ತ್ಯೇವೇತಿ ಭಾವಃ ॥ 5 ॥**

**ಅನುವಾದ**- '**ನಿಶ್ಚಯಂ ಶೃಣು**' ಎಂದು ಪ್ರತಿಜ್ಞೆ ಮಾಡಿದ್ದನ್ನು ಹೇಳುತ್ತಾನೆ- ಯಜ್ಞ ಎಂದು. 'ಯಜ್ಞದಾನತಪಃಕರ್ಮ' ಎಂಬಲ್ಲಿ ದ್ವಂದ್ವಸಮಾಸ ಹಾಗೂ ಏಕವಚನ. (1) ಏಕೆ ಯಜ್ಞಾದಿಗಳನ್ನು ಮಾಡಬೇಕೆಂದರೆ ಹೇಳುತ್ತಾನೆ- ಯಜ್ಞ ಎಂದು . **ಪಾವನಾನಿ**= ಪಾವಿತ್ರ್ಯ ತರುವಂಥವು. ಅಬಂಧಕಗಳು ಎಂಥರ್ಥ. ಅಥವಾ, **ಮನೀಷೀಣಾಂ**= ಅಪರೋಕ್ಷಜ್ಞಾನಿಗಳಿಗೆ ಮುಕ್ತಿಯಲ್ಲಿ ಆನಂದದಲ್ಲಿ ಅತಿಶಯವನ್ನು ತರುವಂಥವು. ಆದ್ದರಿಂದ ಎಲ್ಲರಿಂದಲೂ ವರ್ಣಾಶ್ರಮಗಳಿಗೆ ಯೋಗ್ಯವಾದ ಕರ್ಮಗಳು ಮಾಡಲ್ಪಡಲೇಬೇಕು. (2) ಸಂನ್ಯಾಸಿಗಳಿಗೂ ಕೂಡ ಜ್ಞಾನಯಜ್ಞ - ವಿದ್ಯಾದಾನ, ಅಭಯದಾನ, ಬ್ರಹ್ಮಚರ್ಯ, ಉಪವಾಸಾದಿ ತಪಸ್ಸುಗಳು ಇದ್ದೇ ಇವೆ. ಸ್ತ್ರೀಯರು ಶೂದ್ರರು ಹಾಗೂ ಉಳಿದವರಿಗೂ ಕೂಡ ಭಗವನ್ನಾಮಗಳ ಅಧ್ಯಯನ ಎಂಬ ಯಜ್ಞ- ಸತ್ಯ ಹೇಳುವುದು- ಉಪವಾಸಾದಿಗಳು ಎಂಬ ತಪಸ್ಸುಗಳು ಇದ್ದೇ ಇವೆ - ಎಂದು ಅಭಿಪ್ರಾಯ. ॥ 5 ॥

**ವಿವರಣೆ**- (1) ಯಜ್ಞದಾನತಪಃಕರ್ಮ ಎಂಬಲ್ಲಿ 'ಯಜ್ಞಶ್ಚ ದಾನಂ ಚ ತಪಶ್ಚ ಕರ್ಮ ಚ' ಎಂದು ವಿಗ್ರಹ. ಇದು ದ್ವಂದ್ವಸಮಾಸ. ಸಾಮಾನ್ಯನಿಯಮದಂತೆ ಇದು ಬಹುವಚನದಲ್ಲಿ ಬೇಕಿತ್ತು. ಆದರೆ, ದ್ವಂದ್ವ ಸಮಾಸಪ್ರಕರಣದಲ್ಲಿ ಸಮಾಹಾರ= ಸಮೂಹ ಎಂಬರ್ಥದ ದ್ವಂದ್ವಸಮಾಸಕ್ಕೆ ಏಕವಚನ ಬರುತ್ತದೆ ಎನ್ನಲಾಗಿದೆ. ಅದರಲ್ಲಿ 'ಜಾತಿರಪ್ರಾಣಿನಾಂ' (ಪಾ.ಸೂ -2-4-6) ಎಂಬ ನಿಯಮದಂತೆ ಇಲ್ಲಿ, ಸಮಾಹಾರಾರ್ಥದಲ್ಲಿ ಏಕವಚನ ಬಂದಿದೆ- ಎಂದು ಅಭಿಪ್ರಾಯ.

(2) '**ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ**' ಎನ್ನಲಾಗಿದೆ. ಇವುಗಳ

ಯಜ್ಞ-ದಾನ-ತಪಸ್ಸುಗಳೆಂದರೆ ಹಿಂದಿನ ಅಧ್ಯಾಯಗಳಲ್ಲಿ ಹೇಳಿದಂಥವು. ಕರ್ಮ ಎಂದರೆ ವರ್ಣಾಶ್ರಮೋಚಿತ ಸಂಧ್ಯಾವಂದನಾದಿಕರ್ಮಗಳು ಎಂದರ್ಥ. ಇವನ್ನು ಮುಂದೆ (18-41 ರಿಂದ 18-48ವರೆಗೆ) ವಿವರಿಸಲಾಗಿದೆ. 'ಬಿಡಬಾರದು' ಮಾಡಲೇ ಬೇಕು' ಎಂದಿದ್ದರಿಂದ ಎಲ್ಲ ವರ್ಣದವರೂ, ಎಲ್ಲ ಆಶ್ರಮದವರೂ ಮಾಡಬೇಕೆಂದು ತಿಳಿಯುವುದು. ಆದರಲ್ಲಿ, ಸಂನ್ಯಾಸಿಗಳಿಗೆ ಅಗ್ನ್ಯಾಧಾನದಲ್ಲಿ ಅಧಿಕಾರವಿಲ್ಲದ್ದರಿಂದ ಅವರಿಗೆ ಯಾವ ಯಜ್ಞ ? ಎಂಬ ಸಂಶಯ ಬರುತ್ತದೆ. ಅದರಂತೆ, ಅವರಿಗೆ, ಧನಾರ್ಜನೆ ಇಲ್ಲದಿರುವುದರಿಂದ ದಾನ ಹೇಗೆ ? ತಪಸ್ಸು ಎಂಥದ್ದು ? ಅಧ್ಯಾಯನಾಧಿಕಾರವೇ ಇಲ್ಲದ ಸ್ತ್ರೀ-ಶೂದ್ರರಿಗೆ ಎಂಥ ಯಜ್ಞ? ಎಂಥ ತಪಸ್ಸು ? - ಈ ಎಲ್ಲ ಸಂಶಯಗಳಿಗೆ ಇಲ್ಲಿ ಉತ್ತರ ನೀಡಿದ್ದಾರೆ.

**ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥ 6 ॥**

**ಅರ್ಥ-** ಹೇ ಅರ್ಜುನ ! ಈ ಯಜ್ಞಾದಿಕರ್ಮಗಳು **ಅಪಿ=** ಫಲಾಪೇಕ್ಷಿಗಳಿಗೆ ಬಂಧಕ ವಾಗಿದ್ದರೂ (1) **ಸಂಗಂ=** ನಾನೇ ಕರ್ತಾ ಎಂಬ ಅಭಿಮಾನವನ್ನು ಮತ್ತು ಫಲೇಚ್ಛೆಯನ್ನು ಬಿಟ್ಟು ಆಚರಿಸಲ್ಪಡಬೇಕು ಎಂದು ನಾನು ನಿರ್ಣಯಿಸಿದ ಶ್ರೇಷ್ಠವಾದ ಅಭಿಪ್ರಾಯವು.

**ಯಜ್ಞಾದಿ ನ ತ್ಯಾಜ್ಯಂ ಕಾರ್ಯಮೇವ ತದಿತ್ಯುಕ್ತಮಯುಕ್ತಮ್ । 'ತ್ಯಾಜ್ಯಂ ಕರ್ಮ' ಇತ್ಯುಕ್ತಮನೀಷಿಮತವಿರೋಧಾದಿತ್ಯತಃ ಸಂಗಾದಿತ್ಯಾಗರೂಪವಿಶೇಷಣ- ತ್ಯಾಗ ಏವ ತೇಷಾಮಭಿಮತಃ ನ ಸ್ವರೂಪತ್ಯಾಗ ಇತಿ ಭಾವೇನ ಯಜ್ಞಾದೇಃ ಕರಣಪ್ರಕಾರಮಾಹ- ಏತಾನೀತಿ ॥ ಪ್ರಾಗುಕ್ತಯಜ್ಞಾದಿರೂಪಕರ್ಮಾಣಿ ಮಮತಾಭಿಮಾನರೂಪಸ್ನೇಹಾಖ್ಯಸಂಗಂ ತ್ಯಕ್ತ್ವಾ ಸ್ವರ್ಗಾದಿಫಲಾನಿ ಚ ತ್ಯಕ್ತ್ವಾ ಕರ್ತವ್ಯಾನಿ ಇತಿ ನಿಶ್ಚಿತಂ ಮೇ ಉತ್ತಮಂ ಮತಮ್ ॥ 6 ॥**

**ಅನುವಾದ-** 'ತ್ಯಾಜ್ಯಂ (ದೋಷವದಿತ್ಯೇಕೇ) ಕರ್ಮ' ಎಂದು ಹಿಂದೆ (18-3) ತೋರಿಸಿದ ಜ್ಞಾನಿಗಳ ಮತದ ವಿರೋಧ ಬರುವುದರಿಂದ, 'ಯಜ್ಞಾದಿಗಳನ್ನು ಬಿಡಬಾರದು, ಮಾಡಲೇಬೇಕು' ಎಂದು ಹೇಳಿದ್ದು ಸರಿ ಅಲ್ಲ- ಎಂಬ ಶಂಕೆಗೆ, ಸಂಗಫಲತ್ಯಾಗ ಎಂಬ ವಿಶೇಷಣ ತ್ಯಾಗವೇ ಅವರಿಗೆ ಅಭಿಪ್ರೇತವಾಗಿದೆಯೇ ಹೊರತು ಕರ್ಮದ ತ್ಯಾಗವಲ್ಲ ಎಂಬ ಅಭಿಪ್ರಾಯ ದಿಂದ ಯಜ್ಞಾದಿಗಳನ್ನು ಆಚರಿಸುವ ಬಗೆಯನ್ನು ಹೇಳುತ್ತಾನೆ- ಏತಾನಿ ಎಂದು (2) **ಏತಾನಿ=** ಹಿಂದೆ ಹೇಳಿದ ಯಜ್ಞಾದಿರೂಪಕರ್ಮಗಳು ಸಂಗವನ್ನು ಬಿಟ್ಟು, ಸ್ವರ್ಗಾದಿಫಲಗಳನ್ನು ಬಿಟ್ಟು ಆಚರಿಸಲ್ಪಡಬೇಕು ಎನ್ನುವುದು ನನ್ನ ನಿಶ್ಚಿತವಾದ ಶ್ರೇಷ್ಠ ಅಭಿಪ್ರಾಯವು. ಇಲ್ಲಿ ಸಂಗ ಎಂದರೆ ಮಮತಾಭಿಮಾನ. ಇದೇ ಸ್ನೇಹ. ॥ 6 ॥

ವಿವರಣೆ-

(1) ಅಪಿಶಬ್ದದ ಈ ಅರ್ಥವನ್ನು ಶ್ರೀಸತ್ಯಧ್ಯಾನತೀರ್ಥರು ಗೀತಾಪ್ರತಿಪದಾರ್ಥಚಂದ್ರಿಕಾದಲ್ಲಿ ಹೇಳಿದ್ದಾರೆ.

(2) ಈ ಭಾಗದ ಸ್ಪಷ್ಟನೆಗೆ ಇದೇ ಅಧ್ಯಾಯದ ಮೂರನೇ ಶ್ಲೋಕದ ವಿವರಣೆ ನೋಡಿ.

## ತ್ರಿವಿಧ ಕರ್ಮತ್ಯಾಗದ ನಿರೂಪಣೆ

**ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ** ॥ 7 ॥

**ಅರ್ಥ-** ತಮ್ಮ ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮದ ತ್ಯಾಗವು ಸರಿ ಅಲ್ಲ. ತಪ್ಪು ತಿಳುವಳಿಕೆಯಿಂದ ಅದನ್ನು ಬಿಡುವುದು ತಾಮಸತ್ಯಾಗ ಎನಿಸುವುದು.

**ಸ್ವರೂಪತ್ಯಾಗೋ ನೇತ್ಯೇತದುಪಪಾದಯನ್ 'ತ್ಯಾಗೋ ಹಿ ತ್ರಿವಿಧಃ' ಇತ್ಯುಕ್ತಂ ಪ್ರಪಂಚಯತಿ- ನಿಯತಸ್ಯ ತ್ವಿತಿ ॥ ವರ್ಣಾಶ್ರಮೋಚಿತಸ್ಯ ತು ಕರ್ಮಣಃ ಸಂನ್ಯಾಸಸ್ತ್ಯಾಗೋ ನೋಪಪದ್ಯತೇ ಯುಕ್ತೋ ನ ಭವತಿ । 'ಸ್ವಯಜ್ಞಾದೀನ್ಪರಿತ್ಯಜ್ಯ ನಿರಯಂ ಯಾತ್ಯಸಂಶಯಮಿತಿ' ಪಾದ್ಮೇ ಪ್ರತ್ಯವಾಯಸ್ಮರಣಾತ್ । ಸ್ವರೂಪತ್ಯಾಗ ಏವ ತ್ಯಾಗಶಬ್ದಾರ್ಥೋ ನ ಸಂಗಫಲಯೋಸ್ತ್ಯಾಗ ಇತಿ ಮಿಥ್ಯಾಜ್ಞಾನಾಖ್ಯ-ಮೋಹಾತ್ತಸ್ಯ ಯಜ್ಞಾದಿಕರ್ಮಣಃ ಪರಿತ್ಯಾಗಃ ತಾಮಸಃ ಪರಿಕೀರ್ತಿತಃ ॥ 7 ॥**

**ಅನುವಾದ-** ಕರ್ಮವನ್ನೇ ಬಿಡುವುದು ತ್ಯಾಗವಲ್ಲ ಎನ್ನುವುದನ್ನು ಸಮರ್ಥಿಸುತ್ತಾ 'ತ್ಯಾಗೋ ಹಿ ತ್ರಿವಿಧಃ' (18-4) ಎಂದು ಹೇಳಿದ್ದನ್ನು ವಿವರಿಸುತ್ತಾನೆ- ನಿಯತಸ್ಯ ಎಂದು. **ನಿಯತಸ್ಯ**= ವರ್ಣಾಶ್ರಮಗಳಿಗೆ ಯೋಗ್ಯವಾದ ಕರ್ಮದ , **ಸಂನ್ಯಾಸಃ** = ತ್ಯಾಗವು, **ನ ಉಪಪದ್ಯತೇ**= ಸರಿಹೊಂದುವುದಿಲ್ಲ. ಏಕೆಂದರೆ 'ತನ್ನ ಕರ್ತವ್ಯವಾದ ಯಜ್ಞಾದಿಗಳನ್ನು ಬಿಟ್ಟು, ನಿಶ್ಚಿತವಾಗಿಯೂ, ನರಕವನ್ನು ಹೊಂದುವನು' ಎಂದು ಪದ್ಮಪುರಾಣದ ವಚನವಿದೆ. 'ಕರ್ಮದ ತ್ಯಾಗವೇ ತ್ಯಾಗಶಬ್ದದ ಅರ್ಥ ಹೊರತು ಸಂಗ-ಫಲಗಳ ತ್ಯಾಗ ಅಲ್ಲ. ಎಂಬ ಭ್ರಮೆಯು ಮೋಹ. ಇಂಥ ಮೋಹದಿಂದ ಯಜ್ಞಾದಿಕರ್ಮಗಳನ್ನು ಬಿಡುವುದು ತಾಮಸ ಎನಿಸುತ್ತದೆ. ॥ 7 ॥

**ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್** ॥ 8 ॥

**ಅರ್ಥ-** ಕರ್ಮವು ದುಃಖಕರ (ಮನಃಖೇದಕರ) ಎಂಬ ಕಾರಣದಿಂದಲೇ, ದೇಹಕ್ಕೆ

ಕಷ್ಟವಾಗುವ ಹೆದರಿಕೆಯಿಂದ ಕರ್ಮವನ್ನು ಬಿಡುವುದು ಎನ್ನುವುದು ರಾಜಸತ್ಯಾಗ. ಅಂತಹ ರಾಜಸತ್ಯಾಗವನ್ನು ಮಾಡಿ, ಸಃ= ಆ ಪುರುಷನು ತ್ಯಾಗದ ಫಲವನ್ನು ಹೊಂದುವುದೇ ಇಲ್ಲ.

**ದುಃಖಂ ಪ್ರತಿಕೂಲವೇದನೀಯರೂಪದುಃಖಕಾರಣಮಿತ್ಯೇವ ಕಾಯಕ್ಲೇಶ-ಭಯಾಚ್ಚ ಕರ್ಮ ತ್ಯಜೇದಿತಿ ಯತ್ಸ ರಾಜಸತ್ಯಾಗಃ । ತಂ ರಾಜಸತ್ಯಾಗಂ ಕೃತ್ವಾ ತ್ಯಾಗಫಲಂ ಭಗವತ್ಪ್ರೀತಿರೂಪಂ ನೈವ ಲಭೇತ್ ॥ 8 ॥**

**ಅನುವಾದ- ದುಃಖಂ**= ಪ್ರತಿಕೂಲವೇದನೀಯವೆನಿಸಿದ (1) ದುಃಖದ ಕಾರಣ ಎಂಬ ಕಾರಣದಿಂದಲೇ, ಮತ್ತು ದೇಹಕ್ಕೆ ಕಷ್ಟವಾಗುವ ಹೆದರಿಕೆಯಿಂದ ಕರ್ಮವನ್ನು ಬಿಡುವುದು ಎಂದೇನಿದೆಯೋ ಅದು ರಾಜಸತ್ಯಾಗ. **ತಂ** = ಆ ರಾಜಸತ್ಯಾಗವನ್ನು ಮಾಡಿ, **ತ್ಯಾಗಫಲಂ**= ಭಗವತ್ಪ್ರೀತಿರೂಪವಾದ ತ್ಯಾಗದ ಫಲವನ್ನು ಹೊಂದುವುದೇ ಇಲ್ಲ. ॥ 8 ॥

**ವಿವರಣೆ-** (1) 'ನನಗಿದು ಪ್ರತಿಕೂಲ = ಬೇಡವಾದದ್ದು ಎಂದು ಅನಿಸುವುದು ದುಃಖ' ಇದು ದುಃಖದ ಲಕ್ಷಣ. ಆ ಲಕ್ಷಣವನ್ನು ಇಲ್ಲಿ ಅನುವಾದಮಾಡಲಾಗಿದೆ.

**ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।**
**ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥ 9 ॥**

**ಅರ್ಥ -** ಹೇ ಅರ್ಜುನ! 'ಇದು ನನ್ನ ಕರ್ತವ್ಯ' ಎಂಬ ಬುದ್ಧಿಯಿಂದ ಮಮತೆಯನ್ನು ಬಿಟ್ಟು ಮತ್ತು ಸ್ವರ್ಗಾದಿಫಲವನ್ನು ಬಿಟ್ಟು ವರ್ಣಾಶ್ರಮೋಚಿತಕರ್ಮವನ್ನು ಮಾಡುವುದು ಎನ್ನುವುದೇನಿದೆಯೋ ಆ ಕರ್ಮಫಲತ್ಯಾಗವು ಸಾತ್ವಿಕ ಎನಿಸುವುದು.

**ಕಾರ್ಯಮವಶ್ಯಂ ಕರ್ತವ್ಯಂ ಅನ್ಯಥಾ ಪ್ರತ್ಯವಾಯಾದಿತಿ ಬುದ್ಧ್ಯಾ ಸಂಗಂ ಮದೀಯಮಿತಿ ಸ್ನೇಹಂ ಸ್ವರ್ಗಾದಿಫಲಂ ಚ ತ್ಯಕ್ತ್ವೈವ ನಿಯತಂ ವರ್ಣಾ-ಶ್ರಮೋಚಿತಂ ಕರ್ಮ ಯತ್ಕ್ರಿಯತೇ ಸ ತ್ಯಾಗಃ ಕರ್ಮಾನುಷ್ಠಾನಸಹಿತಃ ಸಾತ್ತ್ವಿಕೋ ಮತಃ ॥ 9 ॥**

**ಅನುವಾದ- ಕಾರ್ಯಂ** = ಅವಶ್ಯ ಕರ್ತವ್ಯ, ಇಲ್ಲದಿದ್ದರೆ ಪಾಪ ಬರುವುದು ಎಂಬ ಬುದ್ಧಿಯಿಂದ **ಸಂಗಂ** = ನನ್ನದೆಂಬ ಸ್ನೇಹವನ್ನು ಮತ್ತು (**ಫಲಂ** =) ಸ್ವರ್ಗಾದಿಫಲವನ್ನು ಬಿಟ್ಟು **ನಿಯತಂ**= ವರ್ಣಾಶ್ರಮೋಚಿತವಾದ ಕರ್ಮವನ್ನು ಏನು ಮಾಡಲಾಗುವುದೋ, **ಸಃ ತ್ಯಾಗಃ**= ಆ ತ್ಯಾಗವು ಕರ್ಮಾನುಷ್ಠಾನಸಹಿತವಾಗಿ ಸಾತ್ವಿಕ ಎನಿಸುವುದು. ॥ 9 ॥

## ರ್ಮತ್ಯಾಗಿಗಳ ಬಗೆಗಳು

**ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।**
**ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ** ॥ 10 ॥

**ಅರ್ಥ-** ಯಾವನು ತತ್ಕಾಲದಲ್ಲಿ ದುಃಖನೀಡುವ ಕರ್ಮವನ್ನು ದ್ವೇಷಿಸನೋ, ಪೂರ್ವಪುಣ್ಯಫಲದಲ್ಲಿ ಆಸಕ್ತನಾಗನೋ, ಎಲ್ಲ ಕರ್ಮಗಳನ್ನು ಪರಮಾತ್ಮನಲ್ಲಿ ಸಮರ್ಪಿಸಿ ದವನೋ, ಸತ್ವಗುಣದಿಂದ ಕೂಡಿದವನೋ, ಭಗವತ್ತತ್ವಜ್ಞಾನಿಯೋ, ಜಗತ್ತು-ಪರಮಾತ್ಮರ ಬಗ್ಗೆ ಗೊಂದಲಗಳಿಲ್ಲದವನೋ ಅವನು ಸಾತ್ವಿಕತ್ಯಾಗಿಯು.

**ಸಾತ್ತ್ವಿಕತ್ಯಾಗಿನೋ ವಿಶೇಷಣಾನ್ಯಾಹ- ನ ದ್ವೇಷ್ಟೀತಿ ॥ ಅಕುಶಲಂ ತಾತ್ಕಾಲಿಕಸುಖದಂ ನ ಕಿಂತು ಕಾಯಕ್ಲೇಶದುಃಖದಂ ಕರ್ಮ ನ ದ್ವೇಷ್ಟಿ । ಕುಶಲೇ ಪೂರ್ವಾರ್ಜಿತಪುಣ್ಯಫಲೇ ನಾನುಷಜ್ಜತೇ ನೇಚ್ಛತಿ । ಸತ್ತ್ವಸಮಾವಿಷ್ಟಃ ಸಮ್ಯಕ್ ಸತ್ತ್ವಗುಣೇನ ವ್ಯಾಪ್ತಃ ಮೇಧಾವೀ ಭಗವತ್ತತ್ತ್ವಜ್ಞಾನೀ ಛಿನ್ನಸಂಶಯಃ ಪರಾಪರ-ತತ್ತ್ವವಿಷಯೇ ಭಗವದ್ಧರ್ಮಾನುಷ್ಠಾನೇ ವಾ ಸಂದೇಹ ಹೀನಃ ತ್ಯಾಗೀ ಭಗವತಿ ಸರ್ವಕರ್ಮಸಮರ್ಪಣವಾನ್ಸ ಸಾತ್ತ್ವಿಕತ್ಯಾಗೀತ್ಯರ್ಥಃ ॥ 10 ॥**

**ಅರ್ಥ-** ಸಾತ್ವಿಕತ್ಯಾಗಿಯ ಲಕ್ಷಣಗಳನ್ನು ಹೇಳುತ್ತಾರೆ - 'ನ ದ್ವೇಷ್ಟಿ' ಎಂದು, **ಅಕುಶಲಂ**= ತಾತ್ಕಾಲಿಕ ಸುಖ ನೀಡದಂಥ, ಕಿಂತು, ದೇಹಕ್ಕೆ ಕಷ್ಟವನ್ನು ದುಃಖವನ್ನೂ ನೀಡುವಂಥ ಕರ್ಮವನ್ನು ದ್ವೇಷಿಸುವುದಿಲ್ಲ. **ಕುಶಲೇ**= ಹಿಂದೆ ಗಳಿಸಿದ ಪುಣ್ಯದ ಫಲದ ವಿಷಯದಲ್ಲಿ ನಾನುಷಜ್ಜತೇ = ಬಯಕೆ ಇಲ್ಲದವನು. **ಸತ್ವಸಮಾವಿಷ್ಟಃ**= ಚೆನ್ನಾಗಿ ಸತ್ವಗುಣದಿಂದ ಕೂಡಿದವನು. **ಮೇಧಾವೀ**= ಭಗವಂತನ ತತ್ವಜ್ಞಾನ ಇರುವವನು. **ಛಿನ್ನಸಂಶಯಃ**= ಜಗತ್ತು ಮತ್ತು ಪರಮಾತ್ಮನ ವಿಷಯದಲ್ಲಿ ಅಥವಾ ಭಾಗವತಧರ್ಮಗಳ ಅನುಷ್ಠಾನ ವಿಷಯದಲ್ಲಿ ಗೊಂದಲ ಇಲ್ಲದವನು. **ತ್ಯಾಗೀ**= ಭಗವಂತನಲ್ಲಿ ಎಲ್ಲ ಕರ್ಮಗಳನ್ನು ಸಮರ್ಪಿಸಿದವನು ಅಂಥವನು ಸಾತ್ವಿಕತ್ಯಾಗೀ ಎಂದರ್ಥ. ॥ 10 ॥

**ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ** ॥ 11 ॥

**ಅರ್ಥ-** ದೇಹಧಾರಿಯಾದ ಮನುಷ್ಯನಿಗೆ ಎಲ್ಲ ಕರ್ಮಗಳನ್ನು ಬಿಡಲು ಸಾಧ್ಯವಿಲ್ಲ. **ಹಿ**= ಆದ್ದರಿಂದ, ಯಾವನು ಕರ್ಮದ ಫಲವನ್ನು ಬಿಟ್ಟವನೊ ಅವನು ತ್ಯಾಗೀ ಎನಿಸುತ್ತಾನೆ.

**ಪೂರ್ವಂ 'ಕರ್ತವ್ಯಾನೀತಿ ಮೇ ಪಾರ್ಥ' ಇತ್ಯತ್ರ ಸಂಗ ಫಲತ್ಯಾಗ ಏವ ತ್ಯಾಗ ಶಬ್ದಾರ್ಥ ಇತಿ ಸ್ವಸಿದ್ಧಾಂತೋ ನಿರ್ಣೀತಃ । ಅಧುನಾ ತ್ಯಾಜ್ಯಂ ದೋಷವದಿತಿ ಪಕ್ಷಸ್ಯ ಬೀಜಖಂಡ ನಾಯ ಸರ್ವಕರ್ಮಪರಿತ್ಯಾಗೋ ವಾ ವಿಹಿತಕರ್ಮತ್ಯಾಗೋ ವಾ ನ ತ್ಯಾಗಶಬ್ದಾರ್ಥಃ, ಯೇನ 'ತ್ಯಾಜ್ಯಂ ದೋಷವದಿ' ತ್ಯಸ್ಯ ಸರ್ವಕರ್ಮ-ತ್ಯಾಗೋಽರ್ಥ ಇತ್ಯುಚ್ಯತ ಇತಿ ಭಾವೇನಾಹ- ನ ಹೀತಿ ॥ ಅಶೇಷತಃ ಕರ್ಮಾಣಿ ತ್ಯಕ್ತುಂ ನ ಶಕ್ಯಮ್, 'ನ ಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್' (3-5) ಇತ್ಯುಕ್ತೇಃ । ನಾಪಿ ವಿಹಿತಾಶೇಷತ್ಯಾಗಃ । 'ಸ್ವಯಜ್ಞಾದೀನ್ಪರಿತ್ಯಜ್ಯ ನಿರಯಂ ಯಾಂತಿ' ಇತಿ ಪ್ರತ್ಯವಾಯಸ್ಮರಣಾದಿತಿ ಭಾವಃ । ಹಿ ಯಸ್ಮಾದಶಕ್ಯಂ ತಸ್ಮಾದ್ಯಸ್ತು ಕರ್ಮಫಲತ್ಯಾಗೀ ಸ ಏವ ತ್ಯಾಗೀತ್ಯಭಿಧೀಯತೇ । ಅತಸ್ತ್ಯಾಜ್ಯಮಿತಿ ಪಕ್ಷಸ್ಯಾಪಿ ಫಲತ್ಯಾಗ ಏವಾರ್ಥ ಇತಿ ಭಾವಃ ॥ 11 ॥**

**ಅನುವಾದ-** ಹಿಂದೆ, **'ಸಂಗಂ ತ್ಯಕ್ತ್ವಾ ಫಲಾನಿ ಚ ಕರ್ತವ್ಯಾನೀತಿ ಮೇ ಪಾರ್ಥ'** (18-6) ಎಂದು ಸಂಗ-ಫಲಗಳ ತ್ಯಾಗವೇ ತ್ಯಾಗಶಬ್ದದ ಅರ್ಥ ಎಂದು ಕೃಷ್ಣನು ತನ್ನ ಸಿದ್ಧಾಂತವನ್ನು ನಿಶ್ಚಯಿಸಿದ್ದನು. ಈಗ, **'ತ್ಯಾಜ್ಯಂ ದೋಷವತ್'** 'ದೋಷವುಳ್ಳದ್ದಾದ್ದರಿಂದ ಸರ್ವಕರ್ಮಗಳೂ ತ್ಯಾಜ್ಯ' ಎಂಬ ಪಕ್ಷದ, ಅಂದರೆ ಪೂರ್ವಪಕ್ಷದ ಬೀಜವನ್ನು = ಮೂಲ ಕಾರಣವನ್ನು ಖಂಡಿಸಲು (1), ಸರ್ವಕರ್ಮತ್ಯಾಗವೂ, ವಿಹಿತಕರ್ಮತ್ಯಾಗವೂ ತ್ಯಾಗ ಶಬ್ದದ ಅರ್ಥವಲ್ಲ, ಅವು ಆ ಶಬ್ದದ ಅರ್ಥವಾಗಿದ್ದರೆ **'ತ್ಯಾಜ್ಯಂ ದೋಷವತ್'** ಎನ್ನುವುದಕ್ಕೆ ಸರ್ವಕರ್ಮತ್ಯಾಗವು ಅರ್ಥ ಎನ್ನಬಹುದಿತ್ತು ಎಂಬ ಅಭಿಪ್ರಾಯದಿಂದ ಹೇಳುತ್ತಾನೆ- 'ನ ಹಿ' ಎಂದು. ಎಲ್ಲಕರ್ಮಗಳನ್ನು ಬಿಡಲು ಸಾಧ್ಯವಿಲ್ಲ, ಏಕೆಂದರೆ, 'ಯಾರೂ ಎಂದಿಗೂ ಒಂದು ಕ್ಷಣವೂ ಕರ್ಮ ಮಾಡದೆ ಇರಲಾರರು ಎಂದು ಹಿಂದೆ (3-5) ಹೇಳಲಾಗಿದೆ. ಅಲ್ಲದೆ, ಎಲ್ಲ ವಿಹಿತಕರ್ಮಗಳ ತ್ಯಾಗವೂ ತ್ಯಾಗಶಬ್ದಾರ್ಥವಲ್ಲ ಏಕೆಂದರೆ, 'ತಮ್ಮ ಕರ್ತವ್ಯವಾದ ಯಜ್ಞಾದಿಗಳನ್ನು ಬಿಟ್ಟು ಮನುಷ್ಯರು ನರಕವನ್ನು ಹೊಂದುವರು' ಎಂದು ವಿಹಿತವನ್ನು ಬಿಟ್ಟರೆ ಪಾಪವನ್ನು ಪಾದ್ಮಪುರಾಣದಲ್ಲಿ ಹೇಳಲಾಗಿದೆ- ಎಂದು ಅಭಿಪ್ರಾಯ, ಹಿ= ಯಾವ ಕಾರಣದಿಂದ ಕರ್ಮತ್ಯಾಗವು ಅಶಕ್ಯವೋ ಆ ಕಾರಣದಿಂದ ಯಾವನು ಕರ್ಮಫಲತ್ಯಾಗಿಯೋ ಅವನೇ ತ್ಯಾಗೀ ಎಂದು ಕರೆಯಲ್ಪಡುತ್ತಾನೆ. ಆದ್ದರಿಂದ **'ತ್ಯಾಜ್ಯಂ ದೋಷವತ್'** (18-3) ಎಂಬ ಜ್ಞಾನಿಗಳ ಪಕ್ಷಕ್ಕೂ ಫಲತ್ಯಾಗವೇ ಅರ್ಥ ಎಂದು ಅಭಿಪ್ರಾಯ. ॥ 11 ॥

**ವಿವರಣೆ-** (1) ಈ ಶ್ಲೋಕಕ್ಕೆ ಗೀತಾಭಾಷ್ಯದ ಅವತರಣಿಕೆ ಹೀಗಿದೆ- **'ಅನ್ಯಃ ತ್ಯಾಗಾರ್ಥೋ (ತ್ಯಾಗಶಬ್ದಾರ್ಥೋ) ನ ಯುಕ್ತ ಇತ್ಯಾಹ - ನ ಹೀತಿ'** - ಎಂದು. ಇದನ್ನು

ವ್ಯಾಖ್ಯಾನಿಸುತ್ತಾ ಪ್ರಮೇಯದೀಪಿಕಾದಲ್ಲಿ **'ಪೂರ್ವಪಕ್ಷಬೀಜನಿರಾಸಾರ್ಥಮಿತಿ ಶೇಷಃ'** ಎಂದು ಹೇಳಿದೆ. ಶೇಷಪೂರಣ ಮಾಡಿದ ಗೀತಾಭಾಷ್ಯವಾಕ್ಯ ಹೀಗಾಗುತ್ತದೆ- **'ಪೂರ್ವಪಕ್ಷ-ಬೀಜನಿರಾಸಾರ್ಥಂ ಅನ್ಯಃ ತ್ಯಾಗಾರ್ಥೋ ನ ಯುಕ್ತ ಇತ್ಯಾಹ - ನ ಹೀತಿ'** ಎಂದಾಗುತ್ತದೆ.

ಇದಿಷ್ಟನ್ನು ಸಂಗ್ರಹಿಸಲು ಗೀತಾವಿವೃತಿಯ ಈ ಭಾಗ ಹೊರಟಿದೆ. ಆದ್ದರಿಂದ, ಗೀತಾವಿವೃತಿಯಲ್ಲೂ ಪಕ್ಷಸ್ಯ ಎಂದರೆ 'ಪೂರ್ವಪಕ್ಷಸ್ಯ' ಎಂದರ್ಥ. ಆಗ ಇದರ ಆಶಯ ಹೀಗಾಗುತ್ತಾದೆ. **'ತ್ಯಾಜ್ಯಂ ದೋಷವತ್'** ಎಂಬ ಜ್ಞಾನಿಗಳ ಪಕ್ಷಕ್ಕೆ ಸರ್ವಕರ್ಮತ್ಯಾಗವು ಅರ್ಥ ಎನ್ನುವುದು ಪೂರ್ವಪಕ್ಷ. ಕರ್ಮಫಲತ್ಯಾಗವು ಅರ್ಥ ಎನ್ನುವುದು, ಸಿದ್ಧಾಂತ. ಪೂರ್ವಪಕ್ಷದ ಬೀಜವನ್ನು ಖಂಡಿಸಲು ಈ ವಾಕ್ಯ ಹೊರಟಿದೆ. ಯಾರೂ ಕರ್ಮ ಮಾಡದೆ ಇರಲು ಸಾಧ್ಯವಿಲ್ಲದಾಗ ಸರ್ವಕರ್ಮಫಲತ್ಯಾಗವು ಅದರ ಅರ್ಥ ಎನ್ನುವುದು ಹೇಗೆ ? ಎಂದು ಇಲ್ಲಿ ಪೂರ್ವಪಕ್ಷವನ್ನು ಖಂಡಿಸಲಾಗುತ್ತದೆ - ಎಂದು.

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥ 12 ॥**

**ಅರ್ಥ-** ಮೃತರಾದ, ಫಲೇಚ್ಛೆ ಬಿಡದವರಿಗೆ ನರಕಾದಿ ಅನಿಷ್ಟಫಲ, ಸ್ವರ್ಗಾದಿ ಇಷ್ಟಫಲ ಹಾಗೂ ಸುಖದುಃಖ ರೂಪವಾದ ಮನುಷ್ಯ ಜನ್ಮ ಎಂಬ ಮೂರು ತರಹದ ಕರ್ಮಗಳ ಫಲವು ಆಗುವುದು . ಸಂನ್ಯಾಸಿಗಳಿಗೆ (ಫಲೇಚ್ಛೆಮಾಡದ, ಕಾಮ್ಯಕರ್ಮಗಳನ್ನೂ ಮಾಡದವರಿಗೆ) ಆ ತ್ರಿವಿಧ ಫಲವು ಈ ಲೋಕದಲ್ಲೂ ಪರಲೋಕದಲ್ಲೂ ಆಗುವುದಿಲ್ಲ.

**ಅತ್ಯಾಗಿನಿಂದಾಪೂರ್ವಂ ತ್ಯಾಗಿನಂ ಸ್ತೌತಿ- ಅನಿಷ್ಟಮಿತಿ ॥ ಅನಿಷ್ಟಂ ನರಕಾದಿ । ಇಷ್ಟಂ ಕಾಮ್ಯಕರ್ಮಿಣಾಮಿಚ್ಛಾವಿಷಯೀಭೂತಂ ಸ್ವರ್ಗಾದಿ । ಮಿಶ್ರಂ ಇಷ್ಟಾನಿಷ್ಟ-ಮೇಲನರೂಪಂ ಮಾನುಷಾದಿ । ಕರ್ಮಣಸ್ತ್ರಿವಿಧಂ ಫಲಮ್ ಅತ್ಯಾಗಿನಾಂ ಕರ್ಮಫಲಮತ್ಯಜತಾಂ ಪ್ರೇತ್ಯ ಮೃತ್ವಾ ದೇಹಾನ್ನಿರ್ಗತ್ಯ ಸ್ಥಿತಾನಾಂ ಭವತಿ । ಸಂನ್ಯಾಸಿನಾಂ ತು ಅನಿಯತಕಾಮ್ಯಾನಾಂ ಫಲತ್ಯಾಗಿನಾಮ್, ನಿಯತಾನಾಂ ಸ್ವರೂಪತ್ಯಾಗಿನಾಮ್, ಕ್ವಚಿದಪಿ ಇಹ ವಾ ಪರತ್ರ ವಾ ನಾಸ್ತಿ । ಇಷ್ಟಾನಿಷ್ಟಾದಿ-ರೂಪಂ ಕರ್ಮಣಃ ಫಲಮಿತ್ಯನುಷಂಗಃ ।**

**ಅನುವಾದ-** ಅತ್ಯಾಗಿಯನ್ನು ನಿಂದಿಸುವುದರೊಂದಿಗೆ ತ್ಯಾಗಿಯನ್ನು ಹೊಗಳುತ್ತಾನೆ- ಅನಿಷ್ಟಂ ಎಂದು. **ಅನಿಷ್ಟಂ**= ನರಕಾದಿಗಳು. **ಇಷ್ಟಂ** = ಕಾಮ್ಯಕರ್ಮಮಾಡುವವರು ಬಯಸುವ ಸ್ವರ್ಗಾದಿಗಳು. **ಮಿಶ್ರಂ**= ಇಷ್ಟಾನಿಷ್ಟಗಳ ಮೊತ್ತವಾದ ಮಾನುಷಾದಿ ಜನ್ಮ.

(ಹೀಗೆ) ಕರ್ಮದ ಮೂರು ತರಹದ ಫಲವು, **ಅತ್ಯಾಗಿನಾಂ**= ಕರ್ಮಫಲವನ್ನು ಬಿಡದವರಿಗೆ **ಪ್ರೇತ್ಯ** = **ಮೃತ್ವಾ** = ಸತ್ತು ದೇಹವನ್ನು ಕಳಚಿಕೊಂಡಿರುವವರಿಗೆ ಆಗುತ್ತದೆ. **ಸಂನ್ಯಾಸಿನಾಂ ತು**= ಅನಿಯತಕಾಮ್ಯಕರ್ಮಗಳ ಫಲವನ್ನು ಬಿಟ್ಟವರಿಗೆ ನಿಯತಕಾಮ್ಯಕರ್ಮಗಳನ್ನು ಸ್ವರೂಪತಃ ಬಿಟ್ಟವರಿಗೆ, **ಕ್ವಚಿದಪಿ**= ಈ ಲೋಕದಲ್ಲಿ ಅಥವಾ ಪರಲೋಕದಲ್ಲಿ ಇಷ್ಟಾನಿಷ್ಟಾದಿ ಫಲವು ಇಲ್ಲ. **'ನ ತು ಸಂನ್ಯಾಸಿನಾಂ ಕ್ವಚಿತ್'** ಎಂಬ ವಾಕ್ಯಕ್ಕೆ **'ಅನಿಷ್ಟಮಿಷ್ಟಂ ಮಿಶ್ರಂ ಚ ಕರ್ಮಣಃ ಫಲಂ'** ಎನ್ನುವುದನ್ನು ತಂದು ಇಟ್ಟುಕೊಳ್ಳಬೇಕು.

## 'ಸಂನ್ಯಾಸಿನಾಮ್' ಎಂಬ ಶಬ್ದಪ್ರಯೋಗದ ಔಚಿತ್ಯ

**ಅತ್ರ ತ್ಯಾಗಿನಾಮಿತಿ ವಕ್ತವ್ಯೇ ಸಂನ್ಯಾಸಿನಾಮಿತ್ಯುಕ್ತಿಃ ತ್ಯಾಗಿನೋ ಹಿ ಪರಾರ್ಥಂ ಕಾರೀರ್ಯಾದಿನಿಯತಕಾಮ್ಯಂ ಕುರ್ವಂತಿ, ಸಂನ್ಯಾಸಿನಸ್ತು ತದಪಿ ನೇತ್ಯೇತಾ-ವಂತಂ ತ್ಯಾಗಿಭ್ಯೋ ವಿಶೇಷಂ ಸೂಚಯಿತುಮ್ । ಫಲೇಚ್ಛಾಭಾವೇನ ತೇಷು ತ್ಯಾಗಿತ್ವಸ್ಯಾಪಿ ಸತ್ತ್ವಾತ್ । ನ ತ್ವಿತಿ ತು ಶಬ್ದೇನ ತ್ಯಾಗಿನಾಂ ಜ್ಞಾನಭಕ್ತ್ಯಾದಿದ್ವಾರಾ ಅಪರೋಕ್ಷತೋ ಮುಕ್ತಾವಾನಂದಾತಿಶಯಫಲಂ ಭವತೀತಿ ಸೂಚ್ಯತೇ । ಉಪ-ಪಾದಿತಮೇತತ್ 'ತ್ಯಾಗಾಚ್ಛಾಂತಿರನಂತರಂ' (12-12) ಇತ್ಯತ್ರ ದ್ವಾದಶೇऽ-ಧ್ಯಾಯೇ ಭಾಷ್ಯಾದೌ ॥ 12 ॥**

**ಅನುವಾದ**– ಇಲ್ಲಿ ('ಅತ್ಯಾಗಿನಾಂ' ಭವತಿ ಎಂದು ಹೇಳಿದ ಮೇಲೆ ಅದಕ್ಕೆ ಪ್ರತಿಯಾಗಿ) **'ತ್ಯಾಗಿನಾಂ ನ ಭವತಿ'** ಎಂದು ತ್ಯಾಗಿಶಬ್ದವನ್ನು ಬಳಸಬೇಕಿತ್ತು. ಅದರ ಬದಲು **'ಸಂನ್ಯಾಸಿನಾಂ ನ ಭವತಿ'** ಎಂದು ಹೇಳಿದ್ದರ ಅಭಿಪ್ರಾಯ ಹೀಗಿದೆ– ತ್ಯಾಗಿಗಳು ಮತ್ತೊಬ್ಬರಿಗಾಗಿ ವೃಷ್ಟಿ ಮುಂತಾದ ನಿಶ್ಚಿತಕಾಮನೆಗಳನ್ನು ನೀಡುವ ಕಾರೀರೀ ಮುಂತಾದ ಕರ್ಮವನ್ನು ಮಾಡುವರು. ಸಂನ್ಯಾಸಿಗಳಾದರೂ ಅದನ್ನೂ ಮಾಡುವುದಿಲ್ಲ– ಎಂಬ ಇಷ್ಟು ವ್ಯತ್ಯಾಸವು ಇದೆಯೆಂದು ಸೂಚಿಸಲು . ಫಲೇಚ್ಛೆ ಇಲ್ಲದಿರುವುದರಿಂದ ಅವರಲ್ಲಿ ತ್ಯಾಗಿತ್ವವೂ ಇದೆ (1) **'ನ ತು'** ಎಂದು 'ತು'ಶಬ್ದದಿಂದ, ತ್ಯಾಗಿಗಳಿಗೆ ಜ್ಞಾನ-ಭಕ್ತ್ಯಾದಿಗಳ ಮೂಲಕ ಅಪರೋಕ್ಷಜ್ಞಾನ ಉಂಟಾಗಿ, ತನ್ಮೂಲಕ ಮುಕ್ತಿಯಲ್ಲಿ ಆನಂದಾತಿಶಯವೆಂಬ ಫಲಸಿಗುತ್ತದೆ ಎಂದು ಸೂಚಿತವಾಗಿದೆ. ಈ ವಿಷಯವನ್ನು ಹಿಂದೆ **'ತ್ಯಾಗಾತ್ ಶಾಂತಿರನಂತರಂ'** (12-12) ಎಂಬ ಹನ್ನೆರಡನೆಯ ಅಧ್ಯಾಯದಲ್ಲಿ ಭಾಷ್ಯ – ತಾತ್ಪರ್ಯಗಳಲ್ಲಿ ಸಮರ್ಥಿಸಿದ್ದಾರೆ.

**ವಿವರಣೆ**– (1) ಹಿಂದೆ (18-2) ಹೇಳಿದಂತೆ ಕಾಮ್ಯಾದಿಕರ್ಮಗಳನ್ನು ಆಚರಿಸಿ ಅದರ ಫಲವನ್ನು ಬಯಸದಿರುವುದು ತ್ಯಾಗ. ನಿಯತ ಕಾಮ್ಯಕರ್ಮವನ್ನೂ ಬಿಟ್ಟು ಆಚರಿಸಿದ ಉಳಿದ ಕರ್ಮಗಳ ಫಲವನ್ನು ಬಯಸದಿರುವುದು ಸಂನ್ಯಾಸ. ಹೀಗೆ ಸಂನ್ಯಾಸ ಇದ್ದಲ್ಲಿ ತ್ಯಾಗವೂ ಇರುತ್ತದೆ ಎಂದು ಅಭಿಪ್ರಾಯ.

## ಕಾರ್ಯವೊಂದಕ್ಕೆ ಎಷ್ಟು ಕಾರಣಗಳು ?

**ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।**
**ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥ 13 ॥**

**ಅರ್ಥ**- ಹೇ ಅರ್ಜುನ ! ಯಾವುದೇ ಕರ್ಮ ಸಿದ್ಧಿಸಲು ಐದು ಕಾರಣಗಳಿವೆ. ಅವನ್ನು ನನ್ನಿಂದ ತಿಳಿ. ಅವುಗಳ ಬಗ್ಗೆ (ಕಪಿಲರಚಿತ) ಸಾಂಖ್ಯ ಸಿದ್ಧಾಂತದಲ್ಲಿ ಹೇಳಲಾಗಿದೆ.

**'ಕಾಮ್ಯಾನಾಂ' ಇತ್ಯತ್ರೋಕ್ತದಿಶಾ ವೈಕಲ್ಪಿಕಕಾಮ್ಯಾನಾಂ ಫಲತ್ಯಾಗಃ ನಿಯತ-ಕಾಮ್ಯಾನಾಂ ಸ್ವರೂಪತ್ಯಾಗಃ 'ನ ತು ಸಂನ್ಯಾಸಿನಾಂ' ಇತ್ಯತ್ರೋಕ್ತದಿಶಾ ಪರಾರ್ಥ-ಮಪಿ ನಿಯತಕಾಮ್ಯಾನಾಂ ಅನನುಷ್ಠಾನಮಿತ್ಯೇತಾವನ್ಮಾತ್ರಂ ನ ಸಂನ್ಯಾಸ-ಶಬ್ದಾರ್ಥಃ । ಕಿಂತು ಕರ್ಮಣಿ ಕರ್ತೃತ್ವಾಭಿಮಾನತ್ಯಾಗೋಽಪೀತಿ ವಕ್ತುಂ ಕರ್ಮ-ಕಾರಣಾನಿ ಪ್ರತಿಜ್ಞಾಪೂರ್ವಮಾಹ- ಪಂಚೇತ್ಯಾದಿ ತ್ರಿಭಿಃ ॥ ಏತಾನಿ ವಕ್ಷ್ಯಮಾಣಾನಿ ಕಾರಣಾನಿ ಕರ್ಮಕಾರಣಾನಿ ಮೇ ಸಕಾಶಾತ್ ನಿಬೋಧ ಬುದ್ಧ್ಯಸ್ವ । ಸಾಂಖ್ಯೇ ಕೃತಾಂತೇ ಕಪಿಲಾಖ್ಯವಿಷ್ಣುಕೃತಸಾಂಖ್ಯನಾಮಕಶಾಸ್ತ್ರೇ ಸರ್ವಕರ್ಮಸಿದ್ಧ್ಯರ್ಥಂ ಪ್ರೋಕ್ತಾನಿ । ಶ್ರೋತೃವಿಶ್ವಾಸಾಯೈತದುಕ್ತಿಃ ॥ 13 ॥**

**ಅನುವಾದ**- ಹಿಂದೆ '**ಕಾಮ್ಯಾನಾಂ ಕರ್ಮಣಾಂ ನ್ಯಾಸಂ**' ಎಂಬಲ್ಲಿ (18-2) ಹೇಳಿದಂತೆ ವೈಕಲ್ಪಿಕಕಾಮ್ಯ ಆಚರಿಸಿ ಅವುಗಳ ಫಲವನ್ನು ಬಿಡುವುದು, ನಿಯತಕಾಮ್ಯ ಕರ್ಮಗಳನ್ನು ಆಚರಿಸದಿರುವುದು, ಹಾಗೂ '**ನ ತು ಸಂನ್ಯಾಸಿನಾಂ ಕ್ವಚಿತ್**' ಎಂಬಲ್ಲಿ (18.12) ಹೇಳಿದಂತೆ ಇನ್ನೊಬ್ಬರಿಗೋಸ್ಕರವೂ ನಿಯತಕಾಮ್ಯಕರ್ಮಗಳನ್ನು ಆಚರಿಸದಿರುವುದು- ಇದಿಷ್ಟೇ ಸಂನ್ಯಾಸ ಶಬ್ದದ ಅರ್ಥವಲ್ಲ. ಕಿಂತು, ಮಾಡುವ ಕರ್ಮಕ್ಕೆ ನಾನೇ ಕರ್ತೃ ಎಂಬ ಅಭಿಮಾನದ ತ್ಯಾಗವು ಸಂನ್ಯಾಸಶಬ್ದದ ಅರ್ಥ(1) ಎಂದು ತಿಳಿಸಲು ಕರ್ಮಗಳ ಕಾರಣಗಳನ್ನು ಪ್ರತಿಜ್ಞೆ ಮಾಡಿ ಹೇಳುತ್ತಿದ್ದಾನೆ.- 'ಪಂಚ' ಎಂದು ಏತಾನಿ= ಮುಂದೆ ಹೇಳುವ, **ಕಾರಣಾನಿ**= ಕರ್ಮಕಾರಣಗಳನ್ನು **ಮೇ**= ನನ್ನ ಕಡೆಯಿಂದ, **ನಿಬೋಧ**= ತಿಳಿ. **ಸಾಂಖ್ಯೇ ಕೃತಾಂತೇ**= ಸಾಂಖ್ಯ ಸಿದ್ಧಾಂತೇ: ಕಪಿಲ ಎಂಬ ಹೆಸರಿನ ವಿಷ್ಣು ರಚಿಸಿದ ಸಾಂಖ್ಯ ಎಂಬ ಹೆಸರಿನ ಶಾಸ್ತ್ರದಲ್ಲಿ (ಸರ್ವಕರ್ಮಣಾಂ ಸಿದ್ಧಯೇ=) ಎಲ್ಲ ಕರ್ಮಗಳ ಸಿದ್ಧಿಗಾಗಿ ಹೇಳಲ್ಪಟ್ಟಿವೆ. ಕೇಳುವವರಲ್ಲಿ ವಿಶ್ವಾಸ ಮೂಡಿಸಲು ಇದನ್ನು ಹೇಳಿದ್ದು (2).

**ವಿವರಣೆ**- (1) ಈ ಶ್ಲೋಕದಿಂದಾರಂಭಿಸಿ ಕರ್ಮಗಳಿಗೆ ಐದು ವಿವಿಧ ಕಾರಣಗಳನ್ನು ಹೇಳುತ್ತಾರೆ. ಹಿಂದಿನ ವಿಷಯಕ್ಕೂ ಮುಂದಿನದಕ್ಕೂ ಏನು ಸಂಬಂಧ ಎನ್ನುವುದನ್ನು ಇಲ್ಲಿ ಬಹು

ಹೃದಯಂಗಮವಾಗಿ ನಿರೂಪಿಸಲಾಗಿದೆ. ಇದರೊಂದಿಗೆ, ಗೀತಾಚಾರ್ಯನಿಗೆ ಸಮ್ಮತವಾದ ಸಂನ್ಯಾಸದ ಸ್ವರೂಪವೂ ಇಲ್ಲಿ ಸಂಗೃಹೀತವಾಗಿದೆ.

(2) ಒಂದು ವಿಷಯವನ್ನು ನೇರವಾಗಿ ನಿರೂಪಿಸುವುದಕ್ಕಿಂತ, ಪ್ರಸಿದ್ಧವಾದ ಇಂಥ ಶಾಸ್ತ್ರದಲ್ಲಿ ಇದನ್ನು ಹೇಳಲಾಗಿದೆ ಎಂದು ಹೇಳಿ ನಿರೂಪಿಸುವುದಕ್ಕೂ ವ್ಯತ್ಯಾಸವಿದೆ. ಎರಡನೆಯ ವಿಧದಿಂದ ನಿರೂಪಿಸಿದಾಗ ಕೇಳುಗರಿಗೆ ತತ್ಕ್ಷಣದಲ್ಲಿ ವಿಶ್ವಾಸಮೂಡುತ್ತದೆ. ಆದ್ದರಿಂದ ಕೃಷ್ಣ ಹೀಗೆ ಹೇಳುತ್ತಿದ್ದಾನೆ.– ಎಂದು ಅಭಿಪ್ರಾಯ.

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್‌ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥ 14 ॥**

**ಅರ್ಥ**– ಅಧಿಕರಣ, ಕರ್ತಾ, ನಾನಾವಿಧವಾದ ಕರಣಗಳು, ಬಗೆ ಬಗೆಯ (ವಿಭಿನ್ನ ಪ್ರಧಾನ ಹಾಗೂ ಅವಾಂತರ) ಕ್ರಿಯೆಗಳು, ಮತ್ತು ಇವುಗಳ ಮಧ್ಯದಲ್ಲಿ ಐದನೆಯದ್ದು ದೈವ.

**ಪ್ರತಿಜ್ಞಾತಮಾಹ- ಅಧಿಷ್ಠಾನಮಿತಿ ॥ ಅಧಿಷ್ಠಾನಂ ದೇಹಭೂಮ್ಯಾದಿಃ । ಕರ್ತಾ ವಿಷ್ಣುಃ । ಪೃಥಗ್ವಿಧಂ ಕರಣಂ ಇಂದ್ರಿಯ ಸ್ರುಕ್‌ಸ್ರುವಾದಿ । ವಿವಿಧಾ ನಾನಾಪ್ರಕಾರಾ ಪೃಥಕ್ ಪರಸ್ಪರಭಿನ್ನಾ ಚೇಷ್ಟಾ ಹಸ್ತಾದಿಕ್ರಿಯಾ ಧ್ಯಾನರೂಪ-ಮಾನಸಕ್ರಿಯಾ ಚ । ಪ್ರಧಾನಹೋಮಾದಿಕ್ರಿಯಾಹೇತುಭೂತಾ ಕಾರಕಾಶ್ರಿತಾ-ವಾಂತರಕ್ರಿಯಾ ಚೇತ್ಯರ್ಥಃ । ದೈವಮದೃಷ್ಟಮ್ । ಅತ್ರ ಕರ್ಮ ವಿಷಯೇ । ಪಂಚಮಂ ಕಾರಣಮ್ ।**

**ಅನುವಾದ**– ಪ್ರತಿಜ್ಞೆ ಮಾಡಿದ ವಿಷಯವನ್ನು (ಐದು ಕಾರಣಗಳನ್ನು) ಹೇಳುತ್ತಾನೆ– ಅಧಿಷ್ಠಾನಂ ಎಂದು. **ಅಧಿಷ್ಠಾನಂ**= ಕ್ರಿಯೆ ನಡೆಯಲು ಆಶ್ರಯವಾದ ದೇಹ–ಭೂಮಿ ಮುಂತಾದವು, **ಕರ್ತಾ**= ವಿಷ್ಣು, **ಪೃಥಗ್ವಿಧಂ ಕರಣಂ**= ಇಂದ್ರಿಯ–ಸ್ರುಕ್– ಸ್ರುವ,ಮುಂತಾದವು ಪರಸ್ಪರ ಭಿನ್ನವಾದ **ಚೇಷ್ಟಾ** = ಕೈ–ಬಾಯಿ ಮೊದಲಾದವುಗಳ ಕ್ರಿಯೆ ಮತ್ತು ಧ್ಯಾನವೆಂಬ ಮನಃಸಂಬಂಧಿಕ್ರಿಯೆ (1)ಅಲ್ಲದೆ, ಪ್ರಧಾನವಾದ ಹೋಮ ಕ್ರಿಯಾಕ್ಕೆ ಕಾರಣವಾದ ಕರಣಾದಿ ಕಾರಕಗಳಲ್ಲಿರುವ ಅವಾಂತರ ಕ್ರಿಯೆ ಎಂದೂ ಅರ್ಥ (2) **ದೈವಂ** = ಅದೃಷ್ಟ ಎನಿಸಿದ ಪುಣ್ಯಾಪಾಪಗಳು. **ಅತ್ರ**= ಕರ್ಮದ ವಿಷಯದಲ್ಲಿ. **ಪಂಚಮಂ** ಎನ್ನುವುದಕ್ಕೆ **ಕಾರಣಂ** ಎನ್ನುವುದನ್ನು ಹಿಂದಿನಿಂದ ಇಟ್ಟುಕೊಳ್ಳಬೇಕು.

**ಯದ್ವಾ ಕರ್ತೃಪದೇನ ಪರಾಧೀನಕರ್ತಾ ಜೀವಃ । ದೈವಪದೇನ ವಿಷ್ಣುಃ ।**

**ಕರ್ಮಣಾಂ ಕರ್ತ್ರಾದಿಕಾರಕಷಟ್ಕಸಾಧ್ಯತ್ವೇऽಪಿ ಕರ್ಮಾಪಾದಾನಾದೇಃ ಅನುಕ್ತಿಃ ಅಸಾರ್ವತ್ರಿಕತ್ವಾತ್ತಸ್ಯೇತಿ ಜ್ಞೇಯಮ್ ॥ 14 ॥**

**ಅನುವಾದ-** ಅಥವಾ, ಕರ್ತಾ ಎನ್ನುವುದರಿಂದ ಭಗವಂತನಿಗೆ ಅಧೀನವಾಗಿ ಕರ್ತೃವಾದ ಜೀವನನ್ನು ಗ್ರಹಿಸಬೇಕು. ದೈವಪದದಿಂದ ವಿಷ್ಣುವನ್ನು ಇಟ್ಟುಕೊಳ್ಳಬೇಕು. ಕರ್ಮಗಳಿಗೆ ಕರ್ತೃ ಮೊದಲಾದ ಆರು ಕಾರಕಗಳಿದ್ದರೂ ಇಲ್ಲಿ ಕರ್ಮ-ಅಪಾದಾನ-ಸಂಪ್ರದಾನಕಾರಕಗಳನ್ನು ಹೇಳದಿರಲು ಕಾರಣ ಅವು ಎಲ್ಲ ಕರ್ಮಗಳಲ್ಲೂ ಇರುವುದಿಲ್ಲ ಎಂಬುದು (3) ॥ 14 ॥

**ವಿವರಣೆ-** (1) ದೇಹದಲ್ಲೇ ನಡೆಯುವ ಧ್ಯಾನ-ಪಾರಾಯಣಾದಿ ಕರ್ಮಗಳು ಮತ್ತು ದೇಹದಿಂದ ಹೊರಗೆ ನಡೆಯುವ ಹೋಮಾದಿಕ್ರಿಯೆಗಳು ಎರಡು ತರಹದ ಕ್ರಿಯೆಗಳನ್ನು ಇಟ್ಟುಕೊಂಡು ಇಲ್ಲಿ ಎಲ್ಲ ಸಂದರ್ಭದಲ್ಲೂ ಎರಡು ತರಹದ ಅಧಿಕರಣ-ಕರಣ-ವ್ಯಾಪಾರ ಗಳನ್ನು ಹೇಳಿದ್ದಾರೆ. ದೇಹದಲ್ಲಿ ನಡೆವ ಕ್ರಿಯೆಗೆ ದೇಹವು ಅಧಿಕರಣ, ಇಂದ್ರಿಯಗಳು ಕರಣ ಇಂದ್ರಿಯಗಳ ಚಟುವಟಿಕೆ ವ್ಯಾಪಾರ. ಬಾಹ್ಯಕರ್ಮವಾದ ಹೋಮವನ್ನು ತೆಗೆದುಕೊಂಡಾಗ ಭೂಮಿಯು ಅಧಿಕರಣ, ಸ್ರುಕ್-ಸ್ರುವ ಮೊದಲಾದವು ಕರಣ, ಆ ಕರಣಗಳ ಕ್ರಿಯೆಗಳು ವ್ಯಾಪಾರ ಎಂದು ಅಭಿಪ್ರಾಯ.

(2) ಒಂದು ಉದ್ದೇಶಕ್ಕಾಗಿ ಪ್ರಯತ್ನ ನಡೆದಾಗ ಕರ್ತೃವಿನಲ್ಲೂ ಕ್ರಿಯೆ ನಡೆಯಬೇಕು ಕರಣಾದಿಗಳಲ್ಲೂ ಕ್ರಿಯೆ ನಡೆಯಬೇಕು. ಅದರಲ್ಲಿ, ಕರ್ತೃವಿನ ಕ್ರಿಯೆ ಪ್ರಧಾನಕ್ರಿಯೆ ಎನಿಸಿದರೆ ಕರಣಾದಿಗಳ ಕ್ರಿಯೆ **ಅವಾಂತರ**= ಮಧ್ಯದಲ್ಲಿರುವ- ಕರಣಕ್ಕೂ ಫಲಕ್ಕೂ ಮಧ್ಯದಲ್ಲಿರುವ ಕ್ರಿಯೆ ಎನಿಸುತ್ತದೆ. ಆ ಎಲ್ಲವನ್ನು ಸಂಗ್ರಹಿಸಲು ಇಲ್ಲಿ '**ವಿವಿಧಚೇಷ್ಟಾ**' '**ಪೃಥಕ್‌ಚೇಷ್ಟಾ**' ಎನ್ನಲಾಗಿದೆ ಎಂದು ಆಶಯ.

(3) ಒಂದು ಕ್ರಿಯೆ ನಡೆಯಲು ಕಾರಣವಾದವುಗಳನ್ನು ಕಾರಕಗಳು ಎನ್ನುತ್ತಾರೆ. ಆ ಕಾರಕಗಳು ಕರ್ತಾ-ಕರ್ಮ-ಕರಣ-ಸಂಪ್ರದಾನ-ಅಪಾದಾನ-ಅಧಿಕರಣ ಎಂದು ಆರು ಎಂದು ವ್ಯಾಕರಣದಲ್ಲಿ ಪ್ರಸಿದ್ಧವಾಗಿವೆ. ಅಡುಗೆ ಎಂಬ ಕ್ರಿಯೆಯನ್ನು ಉದಾಹರಣೆಗೆ ತೆಗೆದುಕೊಂಡರೆ ಕ್ರಮವಾಗಿ- ಅಡುಗೆಯವರು, ಅಕ್ಕಿ, ಸೌಟುಗಳು ಕರ್ತೃ-ಕರ್ಮ-ಕರಣಗಳು. ಅಡುಗೆಮನೆ ಅಧಿಕರಣ. ದಾನಕ್ರಿಯೆಯಲ್ಲಿ ಯಾರಿಗೆ ದಾನ ನೀಡಲಾಗುವುದೋ ಅವರು ಸಂಪ್ರದಾನ. ಯಾವ ಕ್ರಿಯೆ ನಡೆದಾಗ ಎರಡು ಪದಾರ್ಥಗಳಲ್ಲಿ ಒಂದರಿಂದ ಮತ್ತೊಂದಕ್ಕೆ ಮೊದಲಿನ ಸಂಯೋಗ ಇಲ್ಲವಾಗುತ್ತದೋ ಅಲ್ಲಿ ಮೊದಲನೆಯದ್ದು ಅಪಾದಾನ. ಉದಾ- ಮರದಿಂದ ಎಲೆ ಉದುರುತ್ತದೆ. ಇಲ್ಲಿ ಉದುರುವುದು ಎಂಬ ಕ್ರಿಯೆಗೆ ಮರವು ಅಪಾದಾನ. ಹೀಗೆ, ಕ್ರಿಯೆಗೆ ಆರು ಕಾರಕಗಳಿರುವಾಗ, ಅವುಗಳಲ್ಲಿ, ಕರ್ತಾ-ಕರಣ-ಅಧಿಕರಣ ಎಂಬ ಮೂರೇ ಕಾರಕಗಳನ್ನು ಇಲ್ಲಿ ಪರಿಗಣಿಸಲು ಏನು ಕಾರಣ ? ಎಂದು ಪ್ರಶ್ನೆ.

ಇದಕ್ಕೆ ಉತ್ತರ- ಒಟ್ಟು ಕಾರಕಗಳು ಆರಾದರೂ ಎಲ್ಲ ಕ್ರಿಯೆಗಳಿಗೂ ಆರು ಕಾರಕಗಳಿರುವುದಿಲ್ಲ. ದಾನವನ್ನು ಬಿಟ್ಟು ಉಳಿದವುಗಳಿಗೆ ಸಂಪ್ರದಾನಕಾರಕ ಇರುವುದಿಲ್ಲ. ಮಲಗುವುದು, ಸಂತೋಷಪಡುವುದು ಎಂಬಂತಹ ಅಕರ್ಮಕ ಕ್ರಿಯೆಗಳಿಗೆ (ಕರ್ಮವೇ ಇಲ್ಲದ ಕ್ರಿಯೆಗಳಿಗೆ) ಕರ್ಮಕಾರಕ ಇರುವುದಿಲ್ಲ. ಇದರಂತೆ ಅಪಾದಾನಕಾರಕವೂ ಎಲ್ಲ ಕ್ರಿಯೆಗಳಿಗೆ ಇರದು. ಕರ್ತಾ-ಕರಣ-ಅಧಿಕರಣವೆಂಬ ಈ ಮೂರು ಕಾರಕಗಳು ಎಲ್ಲ ಕ್ರಿಯೆಗಳಲ್ಲೂ ಇದ್ದೇ ಇರುತ್ತದೆ. ಈ ಅಭಿಪ್ರಾಯದಿಂದ ಈ ಮೂರನ್ನೇ ಪರಿಗಣಿಸಿದ್ದು- ಎಂದು ಆಶಯ.

**ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥ 15 ॥**

**ಅರ್ಥ**- ಮನುಷ್ಯನು ಶರೀರ, ಮಾತು, ಮನಸ್ಸುಗಳಿಂದ, ಶಾಸ್ತ್ರಸಮ್ಮತವೇ ಆಗಲಿ ಶಾಸ್ತ್ರ-ವಿರುದ್ಧವೇ ಆಗಲಿ, ಯಾವ ಕರ್ಮವನ್ನು ಆರಂಭಿಸುವನೋ ಆ ಕರ್ಮಕ್ಕೆ ಈ ಐದು ಕಾರಣಗಳು.

**ತರ್ಹಿ ಕರಣಕಾರಕಂ ಕುತೋ ನೋಕ್ತಮಿತ್ಯತೋ ವಾ ಕಸ್ಯೈತಾನಿ ಕಾರಣಾನೀತ್ಯತೋ ವಾಽಽಹ - ಶರೀರೇತಿ ॥ ಅತ್ರ ಶರೀರಮನೋವಾಚಾಮೇವ ಕರಣಕಾರಕತ್ವೇನೋಕ್ತ್ಯಾ ಕರ್ಮಾಪಾದಾನಾದೀನಿ ನ ಸಾರ್ವತ್ರಿಕಾಣೀತಿ ಸೂಚಿತಮ್ ॥ 15 ॥**

**ಅನುವಾದ**- ಹಾಗಾದರೆ ಕರಣಕಾರಕವನ್ನು (1) ಏಕೆ ಹೇಳಲಿಲ್ಲ ಎಂಬ ಪ್ರಶ್ನೆಗೆ ಉತ್ತರವಾಗಿ ಅಥವಾ, ಯಾವುದಕ್ಕೆ ಇವು ಕಾರಣಗಳು ಎಂಬ ಪ್ರಶ್ನೆಗೆ ಉತ್ತರವಾಗಿಯೂ ಹೇಳುತ್ತಾನೆ- ಶರೀರ ಎಂದು. ಇಲ್ಲಿ ಶರೀರ-ಮನಸ್ಸು-ವಾಕ್‌ಗಳಿಗೆ ಮಾತ್ರ ಕರಣಕಾರಕತ್ವವನ್ನು ಹೇಳಿದ್ದರಿಂದ ಕರ್ಮ- ಅಪಾದಾನಾದಿಗಳು ಎಲ್ಲ ಕ್ರಿಯೆಗಳಲ್ಲಿ ಇರುವುದಿಲ್ಲ ಎನ್ನುವುದು ಸೂಚಿತವಾಗುತ್ತದೆ. ॥ 15 ॥

**ವಿವರಣೆ**- (1) ಶರೀರ ವಾಕ್ ಮನಸ್ಸುಗಳೆಂದು ಪರಿಚಯಿಸುತ್ತ ಕರಣಕಾರಕಗಳನ್ನು ಮಾತ್ರ ಹೇಳಿದ್ದರಿಂದ ಕರ್ಮಾದಿ ಕಾರಕಗಳು ಸಾರ್ವತ್ರಿಕವಲ್ಲವೆಂದು ಸೂಚಿತವಾಗುತ್ತದೆ. ಆದರೆ ಪ್ರಚಲಿತ ಗೀತಾವಿವೃತಿ ಪಾಠ '**ತರ್ಹಿ ಕರಣಕಾರಕಂ ಕುತೋ ನೋಕ್ತಂ**' ಎಂದು. ಹಿಂದಿನ ಶ್ಲೋಕದಲ್ಲಿ '**ಕರಣಂ ಚ ಪೃಥಗ್ವಿಧಂ**' ಎಂದು ಹೇಳಿಯೇ ಇದ್ದಾರೆ. ಅದ್ದರಿಂದ ಮತ್ತೆ ಕರಣಕಾರಕವನ್ನು ಏಕೆ ಹೇಳಲಿಲ್ಲ ಎಂಬ ಪ್ರಶ್ನೆ ಅಸಂಗತ ಎನಿಸುತ್ತದೆ. ಆದರೆ ಕರಣವು ಪೃಥಗ್‌ವಿಧ ಹೇಗೆ ? ಅದನ್ನು ತಿಳಿದರೆ ಚೇಷ್ಟೆ ಪೃಥಗ್‌ವಿವಿಧ ಹೇಗೆ ಎಂಬುದೂ ತಿಳಿಯುತ್ತದೆ.

ಹೀಗಾಗಿ ಕರಣ ಕಾರಕವನ್ನು ಯಾವುಯಾವುದೆಂದು ಹೇಳಬೇಕಾಗಿದೆ. ಏಕೆ ಹೇಳಿಲ್ಲ ಎಂಬ ಪ್ರಶ್ನೆಗೆ ಶರೀರವಾಗಾದಿಗಳೆಂದು ಉತ್ತರ ಹೇಳಿದೆ.

**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ** ॥ 16 ॥

**ಅರ್ಥ**– ಆ ಕರ್ಮದ ವಿಷಯದಲ್ಲಿ ಹೀಗೆ ಐದು ಕಾರಣಗಳಿರುವಾಗ ಯಾವನು ಸ್ವಯಂ ಕ್ರಿಯಾರಹಿತನಾದ ತನ್ನನ್ನು ಸ್ವತಂತ್ರಕರ್ತೃ ಎಂದು ತಿಳಿಯುತ್ತಾನೋ ಅವನು ಶಾಸ್ತ್ರಶ್ರವಣಾದಿಗಳಿಂದ ಶುದ್ಧವಾದ ಬುದ್ಧಿ ಇಲ್ಲದವನಾದ್ದರಿಂದ, ಬುದ್ಧಿ ಹಾಳಾದವನಾಗಿ ತತ್ವವನ್ನು ತಿಳಿಯುವುದಿಲ್ಲ.

**ತತಶ್ಚ ಕಿಮಿತ್ಯತ ಆಹ– ತತ್ರೈವಂ ಸತೀತಿ ॥ ತತ್ರ ಕರ್ಮಣೀಶ್ವರಾದಿ ಪಂಚಕಸ್ಯೈವಂ ಕಾರಣತ್ವೇ ಸತಿ ಜೀವಸ್ಯ ಸ್ವಾತಂತ್ರ್ಯಾಭಾವೇನ ಕೇವಲಂ ಪರ-ಪ್ರೇರಣಾಂ ವಿನಾ ಸ್ವತಃ ಕ್ರಿಯಾಹೀನಮಾತ್ಮಾನಂ ಕರ್ತಾರಂ ಸ್ವಾತಂತ್ರ್ಯೇಣ ಕರ್ಮ-ಕರ್ತಾರಂ ಯಸ್ತು ಪಶ್ಯತಿ ಮನ್ಯತೇ ಸೋಽಕೃತಬುದ್ಧಿತ್ವಾತ್ ಶ್ರವಣಾದ್ಯಸಂಸ್ಕೃತ-ಬುದ್ಧಿತ್ವಾದ್‌ದುರ್ಮತಿಃ ದುಷ್ಟಬುದ್ಧಿಃ ಸನ್ನ ಪಶ್ಯತಿ ತತ್ತ್ವವಿನ್ನ ಭವತೀತ್ಯರ್ಥಃ ।**
॥ 16 ॥

**ಅನುವಾದ**– ಅದರಿಂದೇನು ಎಂದರೆ ಹೇಳುತ್ತಾನೆ– ತತ್ರೈವಂ ಸತಿ ಎಂದು. **ತತ್ರ**= ಆ ಕರ್ಮದ ವಿಷಯದಲ್ಲಿ . **ಏವಂ ಸತಿ**= ಹೀಗಿರಲು= ಈಶ್ವರ, ಮೊದಲಾದ ಐವರು ಕಾರಣ ರಾಗಿರುವಾಗ, ಜೀವನಿಗೆ ಸ್ವಾತಂತ್ರ್ಯವಿಲ್ಲದ್ದರಿಂದ, **ಕೇವಲಂ** = ಪರಪ್ರೇರಣೆ ಇಲ್ಲದೆ ಸ್ವಯಂ ಕ್ರಿಯಾರಹಿತನಾದ, **ಆತ್ಮಾನಂ**= ತನ್ನನ್ನು, **ಕರ್ತಾರಂ**= ಸ್ವತಂತ್ರ ಕರ್ಮಕರ್ತೃ ಎಂದು, ಯಾರು **ಪಶ್ಯತಿ**= ತಿಳಿವನೋ ಅವನು **ಅಕೃತಬುದ್ಧಿತ್ವಾತ್**= ಶ್ರವಣಾದಿಗಳಿಂದ ಸಂಸ್ಕಾರ ಪಡೆಯದ ಬುದ್ಧಿ ಉಳ್ಳವನಾದ್ದರಿಂದ, **ದುರ್ಮತಿಃ ಸನ್**= ದುಷ್ಟಬುದ್ಧಿ ಉಳ್ಳವನಾಗಿ , **ನ ಪಶ್ಯತಿ** = ತತ್ವದರ್ಶಿ ಆಗಲಾರ. ॥ 16 ॥

**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಽಪಿ ಸ ಇಮಾನ್ ಲೋಕಾನ್ನ ಹಂತಿ ನ ನಿಬಧ್ಯತೇ** ॥ 17 ॥

**ಅರ್ಥ**– ಯಾವನಿಗೆ ನನ್ನಿಂದ ಇದು ಆಯಿತೆಂಬ ಭಾವನೆ ಇಲ್ಲವೋ (ಸ್ವಾತಂತ್ರ್ಯಾಭಿ-ಮಾನವು ಇಲ್ಲವೊ) ಯಾವನ ಬುದ್ಧಿಯು ಫಲದ ಆಸೆಯಿಂದ ಲಿಪ್ತವಾಗದೋ ಅಂತಹವನು ಈ ಲೋಕಗಳನ್ನು ಸಂಹರಿಸಿದರೂ ಸಂಹಾರದ ದೋಷ ಅವನನ್ನು ತಟ್ಟದು.

**ಏವಂ ಕರ್ತೃತ್ವಾಭಿಮಾನಿನಂ ವಿನಿಂದ್ಯ ಸ್ವಸ್ಯ ಕರ್ತೃತ್ವಾನಭಿಮಾನಿನಂ ಸ್ತೌತಿ-ಯಸ್ಯೇತಿ ॥ ಯಸ್ಯ ಪುಂಸಃ ಅಹಂಕೃತಃ ಮಯಾಽಯಮರ್ಥಃ ಕೃತ ಇತಿ ಭಾವಃ ಆಶಯಃ ಅಹಂಕೃತೋ ಭಾವಃ ಸ್ವಾತನ್ತ್ರ್ಯಾಭಿಮಾನೋ ನಾಸ್ತಿ । ಯಸ್ಯ ಬುದ್ಧಿರ್ನ ಲಿಪ್ಯತೇ ಫಲರಾಗಾದಿಲಿಪ್ತೋ ನ ಭವತಿ ಸಃ ಸ್ವಾತಂತ್ರ್ಯ ಜ್ಞಾನಹೀನಃ ಇಮಾನ್ ಲೋಕಾನ್‌ಹತ್ವಾಽಪಿ ನ ಲಿಪ್ಯತೇ ಹನನದೋಷಯುಕ್ತೋ ನ ಭವತಿ । ಕುತಃ । ನ ಹಂತಿ ಸ್ವಾತಂತ್ರ್ಯೇಣ । ಹನ್ಮೀತಿ ಬುದ್ಧಿಂ ನ ಕರೋತೀತಿ ವಾ । ನ ನಿಬಧ್ಯತೇ ತತ್ಫಲಂ ನಾಪ್ನೋತೀತ್ಯರ್ಥಃ ।**

**ಅನುವಾದ**- ಹೀಗೆ ಕರ್ತೃತ್ವಾಭಿಮಾನ ಇರುವವನನ್ನು ನಿಂದಿಸಿ, ತಾನು ಕರ್ತೃ ಎಂಬ ಅಭಿಮಾನ ಇಲ್ಲದವನನ್ನು ಹೊಗಳುತ್ತಾನೆ- ಯಸ್ಯ ಎಂದು. **ಯಸ್ಯ**= ಯಾವ ಪುರುಷನಿಗೆ, **ಅಹಂಕೃತಃ**= ನನ್ನಿಂದ ಈ ಪ್ರಯೋಜನವು ಸಾಧಿಸಲ್ಪಟ್ಟಿತು **ಇತಿ**= ಎಂಬ **ಭಾವಃ**= ಆಶಯವು (ಅಥವಾ) **ಅಹಂಕೃತೋ ಭಾವಃ** = ಸ್ವಾತಂತ್ರ್ಯಾಭಿಮಾನವು ಇಲ್ಲವೋ (1), **ಯಸ್ಯ**= ಯಾವ ಪುರುಷನ ಬುದ್ಧಿಯು **ನ ಲಿಪ್ಯತೇ** = ಫಲದಾಸೆ ಮುಂತಾದುದರ ಸಂಬಂಧ ಪಡೆಯದೋ, **ಸಃ**= ಅಂತಹ ಸ್ವಾತಂತ್ರ್ಯ ಜ್ಞಾನ ಇಲ್ಲದವನು ಈ ಲೋಕಗಳನ್ನು ಸಂಹರಿಸಿಯೂ, **ನ ಲಿಪ್ಯತೇ**= ಸಂಹಾರದೋಷದ ಸಂಬಂಧ ಪಡೆಯಲಾರ. ಏಕೆ ? **ನ ಹಂತಿ ಸ್ವಾತಂತ್ರ್ಯೇಣ**= ಸ್ವತಂತ್ರವಾಗಿ ಅವನು ಸಂಹರಿಸುತ್ತಿಲ್ಲ, ಅಥವಾ ಸಂಹರಿಸುತ್ತಿದ್ದೇನೆ ಎಂದೂ ತಿಳಿಯುವುದಿಲ್ಲ ರಾಗವಿಲ್ಲದ್ದರಿಂದ. (2) **ನ ನಿಬಧ್ಯತೇ**= ಅದರ ಫಲವನ್ನು ಹೊಂದುವುದಿಲ್ಲ- ಎಂದರ್ಥ.

**ಏತಚ್ಚೇಶ್ವರಸಾರ್ವಜ್ಞಸ್ವಾತಂತ್ರ್ಯ ಜ್ಞಾನೀ ಸನ್ನಪಿ ವಿಶ್ವಹನನಾರ್ಥಂ ಜಾತೋ ರುದ್ರೋ ಯಮೋ ವಾ ತದ್ವಿಷಯಮಿತಿ ಬೋಧ್ಯಮ್ । ಅನ್ಯಸ್ಯ ತ್ವಪರೋಕ್ಷಿಣೋಽಪಿ ದೋಷಕೃದೇವೇತಿ । ವೃತ್ರಹತ್ಯಾದಿನೇಂದ್ರಾದೇರಪಿ ಈಷದ್ಬಂಧೋಽಪೀಷದಹಂಕಾರ ಕೃತ ಏವೇತ್ಯಾಕರ ಏವ ವ್ಯಕ್ತಮ್ । ಏವಂ ಕರ್ತೃತ್ವಾಭಿಮಾನ್ಯನಭಿಮಾನಿನೋಃ ಸಹೇತುಕಂ ನಿಂದಾಸ್ತುತ್ಯೋರುಕ್ತ್ಯಾ ಕರ್ಮಣಿ ಕರ್ತೃತ್ವಾಭಿಮಾನತ್ಯಾಗೋಽಪಿ ಸಂನ್ಯಾಸಶಬ್ದಾರ್ಥಇತ್ಯುಕ್ತಂ ಭವತಿ ॥ 17 ॥**

**ಅನುವಾದ**- ಈಶ್ವರನ ಸರ್ವಜ್ಞತ್ವವನ್ನೂ ಸ್ವಾತಂತ್ರ್ಯವನ್ನು ತಿಳಿದೂ ಜಗತ್ತಿನ ಸಂಹಾರಕ್ಕಾಗಿ ಹುಟ್ಟಿದ ರುದ್ರನಿಗೂ ಅಥವಾ ಯಮನಿಗೂ ಇದು ಅನ್ವಯಿಸುತ್ತದೆಂದು ತಿಳಿಯಬೇಕು. ಬೇರೆಯವರು ಅಪರೋಕ್ಷಜ್ಞಾನಿಯಾಗಿದ್ದರೂ ಸಂಹಾರವು ದೋಷವನ್ನುಂಟು ಮಾಡುವುದು. ವೃತ್ರಾಸುರ ಸಂಹಾರಾದಿಗಳಿಂದ ಇಂದ್ರಾದಿಗಳಿಗೆ ಸ್ವಲ್ಪ ಬಂಧವಿದ್ದರೂ ಅದು ಸ್ವಲ್ಪ ಅಹಂಕಾರದಿಂದ ಆದದ್ದು ಎಂದು ಮೂಲಗ್ರಂಥದಲ್ಲಿ (ಗೀತಾಭಾಷ್ಯ-ಪ್ರಮೇಯ

ದೀಪಿಕಾಗಳಲ್ಲಿ) ಸ್ಪಷ್ಟವಾಗಿದೆ. ಹೀಗೆ, ಕರ್ತೃತ್ವಾಭಿಮಾನ ಇರುವವನನ್ನೂ ಇಲ್ಲದವನನ್ನೂ ಸಕಾರಣವಾಗಿ ನಿಂದಿಸಿದ್ದರಿಂದ ಮತ್ತು ಸ್ತುತಿಸಿದ್ದರಿಂದ 'ಕರ್ಮದಲ್ಲಿ ಕರ್ತೃತ್ವದ ಅಭಿಮಾನ ವನ್ನು ಬಿಡುವುದೂ ಸಂಸ್ಯಾಸ ಶಬ್ದದ ಅರ್ಥ'ಎಂದು ಹೇಳಿದಂತಾಗುತ್ತದೆ. ॥ 17 ॥

**ವಿವರಣೆ-** (1) 'ಯಸ್ಯ ನಾಹಂಕೃತೋ ಭಾವಃ' ಎಂಬಲ್ಲಿ ಇತಿ ಎಂಬುದನ್ನು ಸೇರಿಸಿ **'ಅಹಂಕೃತಃ ಇತಿ ಭಾವಃ ಯಸ್ಯ ನಾಸ್ತಿ'** ಎಂದು ಒಂದು ವ್ಯಾಖ್ಯಾನ. ಈ ಪಕ್ಷದಲ್ಲಿ **ಅಹಂಕೃತಃ** ಎನ್ನುವುದಕ್ಕೆ **'ಮಯಾ ಕೃತಃ'** ಎಂದು ವಿಗ್ರಹ. ಇತಿ ಶಬ್ದವನ್ನು ಸೇರಿಸದಿದ್ದಾಗ **'ಅಹಂಕೃತಃ ಭಾವಃ ಯಸ್ಯ ನಾಸ್ತಿ'** ಎಂದು ಅನ್ವಯ. ಈ ಪಕ್ಷದಲ್ಲಿ **ಅಹಂಕೃತಃ ಭಾವಃ** ಎನ್ನುವುದಕ್ಕೆ ಸ್ವಾತಂತ್ರ್ಯಾಭಿಮಾನ ಎಂದರ್ಥ. **'ಅಹಂ (ಅಹಂಕಾರೇಣ) ಕೃತಃ ಭಾವಃ'**ಎಂದು ವಿಗ್ರಹ ಮಾಡಿ ಅರ್ಥ ಹೇಳಬೇಕು. ಅಹಂಕಾರ ಎಂಬರ್ಥದಲ್ಲಿ 'ಅಹಂ' ಎಂಬ ಅವ್ಯಯವಿದ್ದು, ಅವ್ಯಯಕ್ಕೆ ಎಲ್ಲ ವಿಭಕ್ತಿಯ ಅರ್ಥವನ್ನೂ ಹೇಳಬಹುದು.

(2) ಗೀತಾವಿವೃತಿಯಲ್ಲಿ **'ನ ಲಿಪ್ಯತೇ'** ಎಂಬುದಕ್ಕೆ ಕಾರಣವನ್ನು ನೀಡುವ **'ಕುತಃ'? ನ ಹಂತಿ ಸ್ವಾತಂತ್ರ್ಯೇಣ,'ಹನ್ಮೀತಿ ಬುದ್ಧಿಂ ನ ಕರೋತೀತಿ ವಾ'** ಎಂಬ ವಿವರಣವಾಕ್ಯವು ಕಾಣುತ್ತದೆ. ಇಲ್ಲಿ 'ವಾ' ಎಂದು ಪಕ್ಷಾಂತರವನ್ನು ಸೂಚಿಸಿದ್ದಾರೆ. ಸ್ವತಂತ್ರವಾಗಿ ಸಂಹರಿಸುವು ದಿಲ್ಲ, ಅಥವಾ ಸ್ವತಂತ್ರವಾಗಿ ಸಂಹರಿಸುತ್ತಿದ್ದೇನೆ ಎಂದು ತಿಳಿಯುವುದೂ ಇಲ್ಲ. ಅದರಿಂದ ಲೋಪವಿಲ್ಲ. ರಾಗವಿಲ್ಲದ್ದರಿಂದ ಬಂಧವು ಇಲ್ಲ ಎಂದರ್ಥ.

## ಜೀವಕರ್ತೃತ್ವದ ವಿಶ್ಲೇಷಣೆ

**ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥ 18 ॥**

**ಅರ್ಥ-** 'ಯಜೇತ' ಇತ್ಯಾದಿರೂಪದ ಕರ್ಮವಿಧಿಯು ಜ್ಞಾನ-ಜ್ಞೇಯ-ಪರಿಜ್ಞಾತಾ (ಜ್ಞಾನ-ಪ್ರಯತ್ನ-ಜೀವ) ಈ ಮೂವರು ನಿಮಿತ್ತದಿಂದಿದೆ. ಕರಣ - ಕ್ರಿಯಾ- ಕರ್ತಾ ಎಂದು (ಹಿಂದೆ ಹೇಳಿದ ಐದು) ಕರ್ಮಕಾರಣಗಳ ಸಂಗ್ರಹ.

**ನನು ಜೀವಸ್ಯ ಸ್ವತಃ ಕರ್ತೃತ್ವಾಭಾವೇ 'ಯಜೇತೇತ್ಯಾದಿ' ವಿಧೀನಾಂ ವೈಯರ್ಥ್ಯಂ ಸ್ಯಾತ್ । ಜಡೇಶ್ವರಮುಕ್ತಾನಾಂ ತದವಿಷಯತ್ವಾದಿತ್ಯತ ಆಹ- ಜ್ಞಾನಮಿತಿ ॥ ವಿಧಿಶ್ಚೋದನಾ ಪ್ರೇರಣೇತಿ ಪರ್ಯಾಯಃ । ಕರ್ಮಚೋದನಾ ಯಜೇತೇತ್ಯಾದಿಕರ್ಮಸು ಪ್ರೇರಣಾ । 'ಜ್ಞಾನಂ ಜ್ಞೇಯಂ ಪರಿಜ್ಞಾತೇತಿ' ಇತಿಶಬ್ದೋ ಯೋಜ್ಯಃ । ತ್ರಿವಿಧಾ ಜ್ಞಾನಾದಿರೂಪೇಣ ತ್ರಿವಿಧಾ । ಜ್ಞಾನಂ ವಿಧಿ**

**ವಿಷಯಂ(ಕಂ) ಜ್ಞೇಯಂ ಚೇಷ್ಟಾಪ್ರಯತ್ನರೂಪ ಪ್ರವೃತ್ತಿಲಕ್ಷಣಂ ಪುರುಷಾರ್ಥ-ಲಕ್ಷಣಂ ಚ । ಪರಿಜ್ಞಾತಾ ತು (ಅಧಿಷ್ಠಾನಲಕ್ಷಣಂ) ಸರ್ವಜ್ಞಸರ್ವಪ್ರೇರಕೇಶ್ವರ-ಸನ್ನಿಹಿತೋ ಜೀವರಾಶಿಃ । ತತ್ತ್ರಿತಯನಿಮಿತ್ತಂ ಕರ್ಮಚೋದನಾ ಪ್ರವರ್ತತ ಇತಿ । 'ದಧಿತ್ರಪುಸಂ ಪ್ರತ್ಯಕ್ಷೋ ಜ್ವರ' ಇತ್ಯಾದಾವಿವ ನಿಮಿತ್ತನಿಮಿತ್ತಿನೋರ-ಭೇದೋಪಚಾರೇಣ ನಿಮಿತ್ತ ತ್ರೈವಿಧ್ಯೇನ ನೈಮಿತ್ತಿಕಚೋದನಾಽಪಿ ತ್ರಿವಿಧೇ-ತ್ಯುಪಚರ್ಯತೇ ।**

ಅನುವಾದ- (1) ಪ್ರಶ್ನೆ – ಜೀವನು ಸ್ವತಂತ್ರ ಕರ್ತೃ ಅಲ್ಲದಿದ್ದರೆ **'ಯಜೇತ'** ಮುಂತಾದ ವೇದವಿಧಿಗಳು ವ್ಯರ್ಥವಾದಾವು. ಏಕೆಂದರೆ, ಜಡ–ಈಶ್ವರ–ಮುಕ್ತರಂತೂ ವಿಧಿಗೆ ವಿಷಯರಲ್ಲ. ಇದಕ್ಕೆ ಉತ್ತರ ಹೇಳುತ್ತಾನೆ – ಜ್ಞಾನಂ ಎಂದು **'ಜ್ಞಾನಂ ಜ್ಞೇಯಂ ಪರಿಜ್ಞಾತಾ ಇತಿ'** ಎಂಬುದಾಗಿ (ಶ್ಲೋಕದಲ್ಲಿ ಇಲ್ಲದಿದ್ದರೂ) ಇತಿ ಶಬ್ದವನ್ನು ಸೇರಿಸಬೇಕು. ವಿಧಿಃ ಎಂದರೆ ಚೋದನಾ. ಅದರ ಇನ್ನೊಂದು ಹೆಸರು ಪ್ರೇರಣೆ. **ಕರ್ಮಚೋದನಾ=** ಯಜೇತ ಮುಂತಾದ ರೂಪದ ಕರ್ಮಗಳಲ್ಲಿ ಪ್ರೇರಣೆಯು– ತ್ರಿವಿಧಾ, ಜ್ಞಾನ–ಜ್ಞೇಯ–ಪರಿಜ್ಞಾತಾ ಎಂದು ಮೂರುವಿಧ. **ಜ್ಞಾನಂ=** ವಿಧಿಯ ಬಗೆಗಿನ ತಿಳುವಳಿಕೆ, **ಜ್ಞೇಯಂ=** ತಿಳಿವಿನ, ವಿಷಯ= ಪ್ರವೃತ್ತಿ ಮತ್ತು ಪ್ರವೃತ್ತಿಯಿಂದ ಪಡೆಯಬಯಸುವ ಫಲ. ಇವುಗಳಲ್ಲಿ ಪ್ರವೃತ್ತಿ ಎಂದರೆ (ಶರೀರದಲ್ಲಾಗುವ) ಚಟುವಟಿಕೆ ಮತ್ತು (ಆ ಚಟುವಟಿಕೆಗೆ ಕಾರಣವಾಗುವ) ಪ್ರಯತ್ನ. **ಪರಿಜ್ಞಾತಾ=** ಸರ್ವಜ್ಞನೂ ಸರ್ವರ ಪ್ರೇರಕನೂ ಆದ ಈಶ್ವರನ ಸನ್ನಿಧಾನವಿರುವ ಜೀವಗಣ. ಜ್ಞಾನ–ಜ್ಞೇಯ–ಪರಿಜ್ಞಾತಾ ಈ ಮೂರನ್ನು ನಿಮಿತ್ತವಾಗಿಟ್ಟುಕೊಂಡು ಕರ್ಮವಿಧಿಯು ಹೊರಟಿದೆ ಎಂದು (ಪೂರ್ವಾರ್ಧದ ಒಟ್ಟು ಅರ್ಥ) **'ದಧಿತ್ರಪುಸಂ ಪ್ರತ್ಯಕ್ಷೋ ಜ್ವರಃ'**= 'ಮೊಸರು ಸೇರಿದ ತವರ ಸಾಕ್ಷಾತ್ ಜ್ವರವೇ' ಇತ್ಯಾದಿಪ್ರಯೋಗಗಳಲ್ಲಿ ಕಾರಣ–ಕಾರ್ಯಗಳನ್ನು ಒಂದೇ ಎಂದು ಔಪಚಾರಿಕವಾಗಿ ಹೇಳಿದಂತೆ ಪ್ರಕೃತದಲ್ಲೂ ವಿಧಿಯ ಕಾರಣಗಳಾದ ಜ್ಞಾನ–ಜ್ಞೇಯ–ಪರಿಜ್ಞಾತಗಳು ಮೂರಾಗಿರುವುದರಿಂದ ಕಾರ್ಯವಾದ ವಿಧಿಯನ್ನೂ ಮೂರುವಿಧ ಎಂದು ಹೇಳಿದ್ದಾರೆ. (ವಿಧಿಯ ಸ್ವರೂಪದಲ್ಲಿ ಮೂರುವಿಧಗಳೇನೂ ಇಲ್ಲ) (2)

**'ಯಜೇತೇತ್ಯಾದಿ' ಶ್ರೌತಸ್ಮಾರ್ತವಿಧೌ ಸತಿ ಸ್ವಪ್ರವೃತ್ತಿವಿಷಯಪ್ರೇರಣಾಜ್ಞಾನಂ ಭವತಿ । ತತಶ್ಚೇಷ್ಟಾಪ್ರಯತ್ನರೂಪಪ್ರವೃತ್ತಿರಾತ್ಮಸನ್ನಿಹಿತೇಶ್ವರಪ್ರೇರಣಯಾ ಪುಮರ್ಥಮುದ್ದಿಶ್ಯ ಕರ್ಮಣಿ ಜೀವಸ್ಯ ಭವತಿ ಇತಿ ವಿಧಿಜ್ಞಾನಾದೇಃ ಕರ್ಮ-ಚೋದನಾಯಾಶ್ಚ ನಿಮಿತ್ತನಿಮಿತ್ತಿಭಾವೋ ಧ್ಯೇಯಃ । ನ ಚ ಸ್ವತಃ ಕರ್ತೃತ್ವಾ-ಭಾವಾತ್ಪರಾಧೀನಕರ್ತೃಜೀವಸ್ಯ ವಿಧಿಜ್ಞಾನದ್ವಾರಾ ಕಥಂ ಪ್ರವೃತ್ತ್ಯಾದ್ಯರ್ಥಂ**

**ವಿಧಿವಿಷಯತ್ವಮಿತಿ ಶಂಕ್ಯಮ್ । ಅಪರಾಧೀನಕರ್ತೃತ್ವಸ್ಯ ವಿಧಿವಿಷಯತಾಯಾಂ ಪ್ರಯೋಜಕತ್ವೇನ ಕ್ವಾಪ್ಯನುಪಲಂಭಾದನ್ವಯವ್ಯತಿರೇಕಾಭ್ಯಾಂ ಪರಾಧೀನಕರ್ತೃಶಕ್ತಿಕಸ್ಯೈವ ವಿಧಿವಿಷಯತ್ವಾವಶ್ಯಂಭಾವಾತ್ । ಜಡೇಶ್ವರಮುಕ್ತಾನಾಂ ವಿಧ್ಯವಿಷಯತ್ವೇನ ಪ್ರಮಾಣಭೂತವಿಧೇರ್ವೈಯರ್ಥ್ಯಾಯೋಗಾಚ್ಚ । ಪರಾಧೀನಕರ್ತುರೇವ ಪರಿಶೇಷಪ್ರಮಾಣೇ(ನಾ)ಽಪಿ ವಿಧಿವಿಷಯತ್ವಸ್ಯಾವಶ್ಯಕತ್ವಾಚ್ಚ । ತಸ್ಮಾಜ್ಜೀವೇ ವಿಧ್ಯವಿಷಯೇಭ್ಯೋ ಜಡೇಶ್ವರಮುಕ್ತೇಭ್ಯೋ ವ್ಯಾವೃತ್ತಸ್ಯ ಸ್ವಸಂಬಂಧಿತಯಾ ವಿಧಿಜ್ಞಾನಸ್ಯ ತಜ್ಜನ್ಯಾಯಾಃ ಫಲತತ್ಸಾಧನೇಚ್ಛಾಯಾಃ ಸಾಧನವಿಷಯಕೃತೇಶ್ಚಾನುಭವಸಿದ್ಧತ್ವಾತ್, ತಸ್ಯ ಚ ಜ್ಞಾನಾದೇಃ 'ನ ಋತೇ ತ್ವತ್' (ಋ. 10-113-9) ಇತ್ಯಾದಿಶ್ರುತಿಭಿರೀಶ್ವರಾಧೀನತ್ವೇಽಪ್ಯಸ್ವತಂತ್ರಕರ್ತೃತ್ವಮಾತ್ರೇಣ ವಿಧಿವಿಷಯತ್ವಂ ಕರ್ಮಫಲಭಾಕ್ತ್ವಂ ಚ ಯುಕ್ತಮ್ । ತದುಕ್ತಂ ಗೀತಾಭಾಷ್ಯೇ । 'ಅಕರ್ತೃತ್ವೇಽಪಿ ವಿಧಿದ್ವಾರಾ ಈಶ್ವರಪ್ರಸಾದಾದಿಚ್ಛೋತ್ಪತ್ತ್ಯುಕ್ತಕಾರಣೈಃ ಕರ್ಮದ್ವಾರಾ ಪುರುಷಾರ್ಥೋ ಭವತೀತಿ ನ ಪ್ರವೃತ್ತಿವಿಧಿವೈಯರ್ಥ್ಯಮ್' ಇತಿ ।**

**ಅನುವಾದ**- ಜ್ಞಾನಾದಿಗಳಿಗೂ ಕರ್ಮವಿಧಿಗೂ ಕಾರ್ಯಕಾರಣಭಾವವನ್ನು ಹೀಗೆ ತಿಳಿಯಬೇಕು- ಶ್ರುತಿ-ಸ್ಮೃತಿಗಳಲ್ಲಿ 'ಯಜೇತ'= 'ಯಾಗ ಮಾಡಬೇಕು' ಎಂದೆಲ್ಲ ವಿಧಾನ ಮಾಡಿದಾಗ (ಜೀವನಿಗೆ 'ನಾನು ಪ್ರವೃತ್ತಿ ಮಾಡುಬೇಕೆಂದು ವೇದ ವಿಧಿಸುತ್ತದೆ' ಎಂದು) ತನ್ನ ಪ್ರವೃತ್ತಿಯ ವಿಧಿಯ ಜ್ಞಾನವು ಬರುತ್ತದೆ. ಅದರ ಅನಂತರ, ಅದರಿಂದ ತನ್ನಲ್ಲಿ ಇರುವ ಭಗವಂತನ ಪ್ರೇರಣೆಯಿಂದ ಇಚ್ಛಾ-ಪ್ರಯತ್ನರೂಪವಾದ ಪ್ರವೃತ್ತಿಯು ಪುರುಷಾರ್ಥಕ್ಕಾಗಿ (ಫಲಕ್ಕಾಗಿ) ಜೀವನಿಗೆ ಕರ್ಮದಲ್ಲಿ ಉಂಟಾಗುತ್ತವೆ. ಹೀಗೆ ವಿಧಿಜ್ಞಾನ-ಜ್ಞೇಯ-ಪರಿಜ್ಞಾತಾಗಳಿಗೂ ಕರ್ಮವಿಧಿಗೂ ಕಾರ್ಯಕಾರಣಭಾವ.

**ಪ್ರಶ್ನೆ**- ಜೀವನಿಗೆ ಸ್ವಾತಂತ್ರ್ಯೇಣ ಕರ್ತೃತ್ವವು ಇಲ್ಲ. ಅವನು ಪರಾಧೀನ ಕರ್ತೃ. (ಸ್ವತಂತ್ರ ಕರ್ತೃ ಆದರೆ ಅವನಿಗೆ 'ಹೀಗೆ ಮಾಡು' ಎಂದೆಲ್ಲ ಹೇಳಬಹದು, ಆ ವಿಧಿಯ ಜ್ಞಾನದಿಂದ ಅವನಲ್ಲಿ ಪ್ರವೃತ್ತಿ ಅಗಬಹುದು) ವಿಧಿಜ್ಞಾನದಿಂದಾಗುವ ಪ್ರವೃತ್ತಿಗಾಗಿ ಪರಾಧೀನ ಕರ್ತೃವಾದ ಜೀವನು ಹೇಗೆ ವಿಧಿಗೆ ವಿಷಯನಾದಾನು ? (ಇನ್ನೊಬ್ಬರು ಮಾಡಿಸಿದರೆ ಮಾತ್ರ ಮಾಡುವವನಿಗೆ 'ಹೀಗೆ ಮಾಡು' ಎಂದು ಹೇಗೆ ಹೇಳಲು ಸಾಧ್ಯ ?)

**ಉತ್ತರ** - ವಿಧಿಗೆ ವಿಷಯನಾಗಲು ಅವನು ಸ್ವತಂತ್ರಕರ್ತೃವೇ ಆಗಿರಬೇಕೆಂದು ಎಲ್ಲೂ ಕಂಡಿಲ್ಲ. (ಯಾವ ರೀತಿಯಂದಲೂ ಯಾರ ಅಧೀನನೂ, ಆಗದವನಿಗೆ 'ಹೀಗೆ ಮಾಡು' ಎಂದು ಯಾರೂ ಹೇಳುವುದಿಲ್ಲ) ಪ್ರತ್ಯುತ, ಅನ್ವಯ ವ್ಯತಿರೇಕಗಳಿಂದ (3) ಪರಾಧೀನಕರ್ತೃತ್ವ

ಇರುವವನಿಗೇ ವಿಧಿವಿಷಯತ್ವವು ಆವಶ್ಯಕ. ಅಲ್ಲದೆ, ಜಡ-ಈಶ್ವರ-ಮುಕ್ತರು ಈ ಮೂವರು ವಿಧಿವಿಷಯರಲ್ಲ, ಸಂಸಾರಿಜೀವರೂ ವಿಧಿವಿಷಯರಲ್ಲದಿದ್ದರೆ, ವಿಧಿಗಳು ವ್ಯರ್ಥವಾಗಬೇಕಾದಾವು. ಆದರೆ, ಪರಮಪ್ರಮಾಣವಾದ ವೇದದ ವಿಧಿಯು ವ್ಯರ್ಥವಾಗುವುದು ಸರಿಯೂ ಅಲ್ಲ. ಅದೂ ಅಲ್ಲದೆ, ಪರಿಶೇಷಪ್ರಮಾಣದಿಂದಲೂ ಪರಾಧೀನಕರ್ತೃವಿಗೇ ವಿಧಿವಿಷಯತ್ವವು ಆವಶ್ಯಕವಾಗಿದೆ (4) ಆದ್ದರಿಂದ ವಿಧಿಗೆ ವಿಷಯರಾಗದ ಜಡ-ಈಶ್ವರ- ಮುಕ್ತರಲ್ಲಿ ಇಲ್ಲದ 'ಈ ವಿಧಿಗಳು ನನಗೆ ಸಂಬಂಧಿಸಿವೆ' ಎಂಬ ಜ್ಞಾನ, ಅದರಿಂದ ಹುಟ್ಟಿದ ಫಲ ಮತ್ತು ಅದರ ಸಾಧನಗಳ ಇಚ್ಛೆ ಹಾಗೂ ಸಾಧನದಲ್ಲಿ ಪ್ರಯತ್ನ ಇವುಗಳು ಜೀವನಲ್ಲಿ ಅನುಭವಸಿದ್ಧವಾದ್ದರಿಂದ, ಆ ಜ್ಞಾನ – ಇಚ್ಛೆ – ಪ್ರಯತ್ನಗಳು 'ನ ಋತೇ ತ್ವತ್ ಕ್ರೀಯತೇ ಕಿಂಚನ' (5) ಇತ್ಯಾದಿ ಶ್ರುತಿಗಳ ಅನುಸಾರ ಈಶ್ವರಾಧೀನನಾಗಿದ್ದರೂ ಅಸ್ವತಂತ್ರಕರ್ತೃತ್ವ ಮಾತ್ರದಿಂದಲೇ ಜೀವನಿಗೆ ವಿಧಿವಿಷಯತ್ವವೂ ಕರ್ಮಫಲಭೋಕ್ತೃತ್ವವೂ ಕೂಡುತ್ತದೆ. ಇದನ್ನು ಗೀತಾಭಾಷ್ಯದಲ್ಲಿ ಹೀಗೆ ಹೇಳಲಾಗಿದೆ – ಜೀವನು ಸ್ವತಂತ್ರಕರ್ತೃ ಅಲ್ಲದಿದ್ದರೂ ವಿಧಿಯ ಮೂಲಕ (ಯಜೇತ ಇತ್ಯಾದಿವಿಧಿಗಳ ಜ್ಞಾನ ಉಂಟಾಗಿ) ಈಶ್ವರನ ಅನುಗ್ರಹದಿಂದ ಇಚ್ಛೆ ಹುಟ್ಟಿ ಹಿಂದೆ, (18-14) ಹೇಳಿದ ಕಾರಣಗಳಿಂದ (ಅಧಿಷ್ಠಾನಾದಿಗಳಿಂದ) ಕ್ರಿಯೆ ನಡೆದು ಅದರ ಮೂಲಕ ಪುರುಷಾರ್ಥವಾದ ಫಲವು ಆಗುತ್ತದೆ. ಆದ್ದರಿಂದ ಹೀಗೆ ನಡೆಯಬೇಕು ಎನ್ನುವ ವಿಧಿ ವ್ಯರ್ಥವಲ್ಲ.(6)

**ಯದ್ವಾ 'ದೈವಂ ಚೈವೇತಿ' ಪೂರ್ವತ್ರ ದೈವಪದೇನೇಶ್ವರಸ್ಯ ಕರ್ಮಸು ಪ್ರೇರಕತ್ವಮುಕ್ತಮ್ । ತತ್ಪ್ರೇರಣಾಸ್ವರೂಪಮುಚ್ಯತೇ- ಜ್ಞಾನಮಿತಿ ॥ ಕರ್ಮ-ಚೋದನಾ ಕರ್ಮಸು ಜೀವಾನಾಂ ಈಶ್ವರಪ್ರೇರಣಾ ಜ್ಞಾನಂ ಜ್ಞೇಯಂ ಪರಿ-ಜ್ಞಾತೇತಿ ತ್ರಿವಿಧಾ । ಜ್ಞಾನಜ್ಞೇಯಪರಿಜ್ಞಾತೃರೂಪತ್ರಿವಿಧ ಭಗವತ್ಸ್ವರೂಪೇ-ತ್ಯರ್ಥಃ । ವಿಶೇಷಬಲಾದ್ಧರ್ಮಧರ್ಮಿಭಾವಃ ತಸ್ಯೇಯಂ ಪ್ರೇರಣೇತ್ಯಾದ್ಯುಕ್ತಿಶ್ಚ ಯುಕ್ತೇತಿ ಭಾವಃ ।**

**ಅನುವಾದ- ಪೂರ್ವಾರ್ಧಕ್ಕೆ ಮತ್ತೊಂದು ವ್ಯಾಖ್ಯಾನ -**

ಅಥವಾ, ಹಿಂದೆ (18-14) '**ದೈವಂ ಚೈವಾತ್ರ ಪಂಚಮಂ**' ಎಂದು ದೈವಪದದಿಂದ ಈಶ್ವರನನ್ನು ಹೇಳಿ ಅವನು ಕರ್ಮಪ್ರೇರಕ ಎನ್ನಲಾಗಿತ್ತು. ಅವನ ಪ್ರೇರಣಾ ಸ್ವರೂಪವನ್ನು ಹೇಳುತ್ತಾನೆ- 'ಜ್ಞಾನಂ' ಎಂದು. ಕರ್ಮ **ಚೋದನಾ**= ಕರ್ಮಗಳಲ್ಲಿ ಜೀವರನ್ನು ಈಶ್ವರನು ಪ್ರೇರಿಸುವುದು, **ಜ್ಞಾನಂ ಜ್ಞೇಯಂ ಪರಿಜ್ಞಾತಾ** ಇತಿ **ತ್ರಿವಿಧಾ**= ಜ್ಞಾನ-ಜ್ಞೇಯ-ಪರಿಜ್ಞಾತಾ ಎಂಬ ಮೂರು ವಿಧದ ಭಗವಂತನ ಸ್ವರೂಪ- ಎಂದರ್ಥ.(ಅಭೇದ ಇದ್ದರೂ ಭೇದಕಾರ್ಯವನ್ನು ನಡೆಸುವ) ವಿಶೇಷವನ್ನು ಒಪ್ಪಿದ್ದರಿಂದ ಭಗವಂತನ ಜ್ಞಾನ ಎಂಬ ಧರ್ಮ-ಧರ್ಮಿಭಾವದ ವ್ಯವಹಾರ ಹಾಗೂ ಈಶ್ವರನ ಪ್ರೇರಣೆ ಇತ್ಯಾದಿ ಮಾತು ಸರಿಹೊಂದುತ್ತದೆ.

**ಪೂರ್ವೋಕ್ತಪಂಚಕರ್ಮಕಾರಣಾನಿ ಸಂಕ್ಷಿಪ್ಯಾಹ- ಕರಣಮಿತಿ ॥ ಕರಣಂ ಇಂದ್ರಿಯಸ್ರುಕ್‌ಸ್ರುವಾದಿ । ಅಧಿಷ್ಠಾನಪದೋಕ್ತದೇಹಾದಿಕಮದೃಷ್ಟಂ ಚ । ಕರ್ಮ ಹಸ್ತಾದಿಚೇಷ್ಟಾ । ಕರ್ತೃಪದೇನ ಜೀವೇಶ್ವರಾವುಭಾವಪಿ ಗ್ರಾಹ್ಯಾವಿತಿ ತ್ರಿವಿಧಃ ಕರ್ಮಸಂಗ್ರಹಃ ಕರ್ಮಕರಣಸಂಗ್ರಹಃ । ಪಂಚಕಾರಣಾನಾಂ ಸಂಕ್ಷೇಪ ಇತಿ । ॥ 18 ॥**

**ಅನುವಾದ- ಉತ್ತರಾರ್ಧದ ವ್ಯಾಖ್ಯಾನ**

ಹಿಂದೆ ಹೇಳಿದ ಐದು ಕಾರಣಗಳನ್ನು ಸಂಕ್ಷೇಪಗೊಳಿಸಿ ಹೇಳುತ್ತಿದ್ದಾನೆ – 'ಕರಣಂ' ಎಂದು **ಕರಣಂ**= ಇಂದ್ರಿಯ ಸ್ರುಕ್ ಸ್ರುವ ಮೊದಲಾದವು. ಅಲ್ಲದೆ ಹಿಂದೆ ಅಧಿಷ್ಠಾನಪದದಿಂ ಹೇಳಿದ ದೇಹಾದಿಗಳು ಮತ್ತು ದೈವಪದಿಂದ ಹೇಳಿದ ಅದೃಷ್ಟವನ್ನು ಕರಣಶಬ್ದದಿಂ ಇಟ್ಟುಕೊಳ್ಳಬೇಕು. **ಕರ್ಮ** = ಕೈಕಾಲುಗಳ ಚಟುವಟಿಕೆ. ಕರ್ತೃ ಎಂಬ ಪದದಿಂದ ಜೀವ ಮತ್ತು ಈಶ್ವರ ಇಬ್ಬರನ್ನೂ ಇಟ್ಟುಕೊಳ್ಳಬೇಕು. ಹೀಗೆ, **ಕರ್ಮಸಂಗ್ರಹಃ**= ಕರ್ಮಕರಣಗಳನ್ನು ಸಂಗ್ರಹಿ ಇಟ್ಟುಕೊಳ್ಳಬೇಕು. ಪಂಚಕರಣಗಳನ್ನು ಸಂಕ್ಷೇಪಗೊಳಿಸಬೇಕು– ಎಂದರ್ಥ. ॥ 18 ॥

**ವಿವರಣೆ**- (1) ಅಧ್ಯಾತ್ಮ ಸಿದ್ಧಾಂತಗಳಲ್ಲಿ ಜೀವಕರ್ತೃತ್ವವು ಒಂದು ಮುಖ್ಯ ಪ್ರಮೇಯ ಅದರ ಬಗ್ಗೆ ಬಹಳ ಸೂಕ್ಷ್ಮ ವಿವೇಚನೆಯು ಇಲ್ಲಿ ಬಂದಿದೆ. ಗೀತಾವಿವೃತಿಯು ಸಂಗ್ರ ಗ್ರಂಥವಾದ್ದರಿಂದ ಈ ವಿಷಯದ ಹೆಚ್ಚಿನ ಚರ್ಚೆಗಾಗಿ ಈ ಶ್ಲೋಕದ ಗೀತಾಭಾಷ್ಯ, ಮಹಾಭಾರ ತಾತ್ಪರ್ಯನಿರ್ಣಯದ 22ನೇ ಅಧ್ಯಾಯದ 65ನೇ ಶ್ಲೋಕದಿಂದ ಸುಮಾರು 60 ಶ್ಲೋಕಗಳು ತಾತ್ಪರ್ಯಚಂದ್ರಿಕಾದ ಕರ್ತೃತ್ವಾಧಿಕಣ- ಇವುಗಳನ್ನು ನೋಡಬಹುದು. ಇವಲ್ಲದೆ ಶ್ರೀಸತ್ಯಧ್ಯಾನತೀರ್ಥರ 'ಸಭಾಸಾರಸ್ರಂಗ್ರಹ' ಶ್ರೀವಿದ್ಯಾಮಾನ್ಯತೀರ್ಥರ 'ಗೀತೋಪನ್ಯಾಸಗಳು ಹಾಗೂ ಶ್ರೀವಿಶ್ವೇಶತೀರ್ಥರ 'ಗೀತಾಸಾರೋದ್ಧಾರ' ಇವುಗಳ ಈ ಭಾಗವನ್ನು (18ನೇ ಅಧ್ಯಾಯದ 18ನೇ ಶ್ಲೋಕದ ಭಾಗವನ್ನು) ನೋಡುವುದೂ ಅತ್ಯಂತ ಉಚಿತ.

(2) ಒಂದು ವಿಧಿಗೆ ಮೂರು ನಿಮಿತ್ತಗಳು ಎನ್ನುವ ಅಭಿಪ್ರಾಯದಲ್ಲಿ ಜ್ಞಾನ-ಜ್ಞೇಯ- ಪರಿಜ್ಞಾತಾ ಎಂದು ವಿಧಿಯೇ ಮೂರು ವಿಧ ಎಂಬುದು ಲಾಕ್ಷಣಿಕ ಪ್ರಯೋಗ. ಇಂ ಪ್ರಯೋಗಕ್ಕೆ ಉದಾ: **'ದಧಿತ್ರಪುಸಂ ಪ್ರತ್ಯಕ್ಷೋ ಜ್ವರಃ'** – ಎಂದು ಅಭಿಪ್ರಾಯ.

(3) ಅನ್ವಯ ಎಂದರೆ ಅಸ್ತಿತ್ವ. ವ್ಯತಿರೇಕ ಎಂದರೆ ಅಭಾವ. ಹೀಗೆ, ಅನ್ವಯವ್ಯತಿರೇ ಶಬ್ದಗಳಿಗೆ ಅಸ್ತಿತ್ವ-ಅಭಾವಗಳು ಅರ್ಥ. ಕಾರ್ಯಕಾರಣ ಭಾವವನ್ನು ಹೇಳುವ ಸಂದರ್ಭದ ಅನ್ವಯಶಬ್ದವನ್ನು ಅನ್ವಯ ಸಹಚಾರ ಎಂಬ ಅರ್ಥದಲ್ಲೂ, ವ್ಯತಿರೇಕ ಶಬ್ದವನ್ನು ವ್ಯತಿರೇ ಸಹಚಾರ ಎಂಬರ್ಥದಲ್ಲೂ ಬಳಸಲಾಗುತ್ತದೆ. **'ಕಾರಣಸತ್ವೇ ಕಾರ್ಯಸತ್ವಂ'** 'ಕಾರಣಾಭಾವ

ಕಾರ್ಯಾಭಾವಃ' ಕಾರಣ ಇದ್ದಾಗ ಕಾರ್ಯವೂ ಇರುತ್ತದೆ- ಎನ್ನುವುದು ಅನ್ವಯಸಹಚಾರ. ಕಾರಣ ಇಲ್ಲದಾಗ ಕಾರ್ಯವೂ ಇರದು- ಎನ್ನುವುದು ವ್ಯತಿರೇಕ ಸಹಚಾರ. ಇವೆರಡನ್ನು ಹೇಳಲು ಬಂದರೆ ಕಾರ್ಯಕಾರಣಭಾವವನ್ನು ಹೇಳಲು ಬರುತ್ತದೆ.

ಪ್ರಕೃತ, ಲೋಕದಲ್ಲಿ 'ಹೀಗೆ ಮಾಡು' ಎಂದು ಯಾರಿಗೆ ಹೇಳುತ್ತಾರೆ ? ಅಸ್ವತಂತ್ರರಾದ ಜೀವರಿಗೆ 'ಹೀಗೆ ಮಾಡು' ಎಂದು ಹೇಳುತ್ತಾರೆ. ಸ್ವತಂತ್ರನಾದ ಪರಮಾತ್ಮನಿಗೆ 'ಹೀಗೆ ಮಾಡೆಂದು' ಆಜ್ಞೆಮಾಡುವುದಿಲ್ಲ . ಈ ಅನ್ವಯವ್ಯತಿರೇಕಗಳಿಂದ ಪರಾಧೀನ ಕರ್ತೃವೇ ವಿಧಿ ವಿಷಯ ಎಂದು ಸಿದ್ಧವಾಗುತ್ತದೆ- ಎಂದು ಅಭಿಪ್ರಾಯ.

(4) **'ಪ್ರಸಕ್ತ ಪ್ರತಿಷೇಧೇ ಸತಿ ಪರಿಶಿಷ್ಯಮಾಣೇ ಬುದ್ಧಿಃ ಪರಿಶೇಷಃ'**- ಎಂದು ಪ್ರಮಾಣ ಪದ್ಧತಿ. ಉದಾಹರಣೆಗೆ ಅಪರಾಧವೊಂದರಲ್ಲಿ ಮೊದಲು ನಾಲ್ವರ ಮೇಲೆ ಸಂಶಯ ಇದ್ದು , ಕ್ರಮೇಣ ಮೂವರು ಅಲ್ಲ ಎಂದು ತಿಳಿದಾಗ ನಾಲ್ಕನೆಯವನು ಅಪರಾಧಿ ಎಂದು ತೀರ್ಮಾನ ಮಾಡುವುದು ಪರಿಶೇಷ. ಇದು ಅನುಮಾನವಾದ್ದರಿಂದ ಇದನ್ನು ಪರಿಶೇಷಾನುಮಾನ ಎನ್ನಲಾಗುವುದು.

ಪ್ರಕೃತ ವಿಧಿವಿಷಯರು ಯಾರು ? ಎಂಬ ಜಿಜ್ಞಾಸೆ ಮೂಡಿದಾಗ ಪ್ರಸಕ್ತರಾದವರು ಜಡ-ಈಶ್ವರ-ಮುಕ್ತ - ಸಂಸಾರಿ ಇವರಲ್ಲಿ ಮೊದಲ ಮೂವರು ವಿಧಿವಿಷಯರಾಗಲಾರರು ಎಂದರೆ ಉಳಿದ ಸಂಸಾರಿ ಜೀವನೇ ವಿಧಿವಿಷಯನಾಗಬೇಕು- ಎನ್ನುವುದು ಪರಿಶೇಷಾನುಮಾನ. ಇದನ್ನು ಶಾಸ್ತ್ರೀಯವಾಗಿ ಪ್ರಯೋಗ ಮಾಡುವ ಕ್ರಮ ಹೀಗಿದೆ- 'ವಿಧಿವಿಷಯತ್ವಂ ಸಂಸಾರಿಜೀವಾಶ್ರಿತಂ ಅನ್ಯತ್ರ ಅನಾಶ್ರಿತತ್ವೇ ಸತಿ ಆಶ್ರಿತತ್ವಾತ್'- ಎಂದು.

(5) **'ನಿಷುಸೀದ ಗಣಪತೇ'** ಎಂಬ ಋಗ್ವೇದಮಂತ್ರದ ಮೂರನೇ ಪಾದ' **'ನ ಋತೇ ತ್ವತ್ ಕ್ರಿಯತೇ ಕಿಂಚನಾರೇ'** ಎಂದು. **'ಅರೇ=** ಹೇ ಇಂದ್ರಿಯಗಣಗಳ ಪತಿಯೇ ! **ತ್ವತ್ ಋತೇ=** ನೀನಿಲ್ಲದೆ, **ಕಿಂಚನ=** ಯಾವುದೂ, **ನ ಕ್ರಿಯತೇ=** ನಡೆಯುವುದಿಲ್ಲ- ಎಂದು ಇದರ ಅರ್ಥ.

(6) ಜೀವನು ಸ್ವತಂತ್ರಕರ್ತೃ ಅಲ್ಲ ನಿಜ. ಎಲ್ಲವೂ ಭಗವಂತನ ಪ್ರೇರಣೆಯಿಂದಲೇ ನಡೆಯುತ್ತದೆ, ಆದ್ದರಿಂದ ಜೀವನು ಪರಾಧೀನಕರ್ತೃ ಎನ್ನುವುದೂ ನಿಜ. ಆದರೂ, ಕರ್ಮವಿಧಿಯೊಂದಕ್ಕೆ ಬೇಕಾಗುವುದೆಲ್ಲವೂ ಜೀವನಲ್ಲಿ ನಡೆಯುತ್ತದೆ. ಅಂದರೆ, ಭಗವಂತನ ಅನುಗ್ರಹದಿಂದಲೇ ಅವನಿಗೆ ವಿಧಿಜ್ಞಾನ ಉಂಟಾಗುತ್ತದೆ. ಅವನ ಅನುಗ್ರಹದಿಂದಲೇ ಜೀವನಲ್ಲಿ ಇಚ್ಛೆ ಉಂಟಾಗಿ, ಅವನ ಅನುಗ್ರಹದಿಂದಲೇ ಕ್ರಿಯೆ ನಡೆದು ಫಲ ದೊರೆಯುತ್ತದೆ. ಹೀಗೆ, ಕರ್ಮ-ವಿಧಿಗೆ ಬೇಕಾದ್ದೆಲ್ಲವೂ ಪರಾಧೀನ ಕರ್ತೃ ಜೀವನಲ್ಲಿ ಇದೆಯಾದ್ದರಿಂದ ಅವನು ವಿಧಿ ವಿಷಯನಾಗುವನು- ಎಂದು ಅಭಿಪ್ರಾಯ.

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥ 19 ॥**

**ಅರ್ಥ**- ಜ್ಞಾನವೂ ಕರ್ಮವೂ ಕರ್ತೃವೂ ಸತ್ವಾದಿಗುಣಭೇದದಿಂದ ಮೂರುವಿಧ. ಹೀಗೆ ಗುಣಗಳನ್ನು ಹೇಳುವ ವೈದಿಕ ಸಾಂಖ್ಯ ಶಾಸ್ತ್ರದಲ್ಲಿ ಹೇಳಲಾಗಿದೆ. ಆ ಪ್ರಭೇದಗಳನು ಹೇಗಿದೆಯೋ ಹಾಗೆ ಕೇಳು.

**ಸಾತ್ತ್ವಿಕಜ್ಞಾನಕರ್ಮಾದೇಃ ಮುಕ್ತಿಹೇತುತ್ವಾತ್ತದನುಷ್ಠಾನಾಯ ಸತ್ತ್ವಾದಿಗುಣನಿಮಿತ್ತಾನ್ ಜ್ಞಾನಾದಿಭೇದಾನ್ಪ್ರತಿಜ್ಞಾಪೂರ್ವಮಾಹ- ಜ್ಞಾನಮಿತಿ ॥ ಸತ್ತ್ವಾದಿಗುಣಭೇದತಃ ಜ್ಞಾನಾದಿಕಂ ಪ್ರತ್ಯೇಕಂ ದ್ವಿವಿಧಮ್ । ಗುಣಸಂಖ್ಯಾನೇ ಗುಣಾಃ ಸಂಖ್ಯಾಯಂತೇ ಯತ್ರ ತಸ್ಮಿನ್ವೈದಿಕಸಾಂಖ್ಯಶಾಸ್ತ್ರೇ ಪ್ರೋಚ್ಯತೇ । ತಾನ್ಯಪಿ ಯಥಾವದ್ಯಥಾಸ್ಥಿತಂ ಶೃಣು ॥ 19 ॥**

**ಅನುವಾದ**- ಸಾತ್ವಿಕವಾದ ಜ್ಞಾನ-ಕರ್ಮ ಮುಂತಾದವೇ ಮೋಕ್ಷಕಾರಣವಾದ್ದರಿಂ ಅಂಥವುಗಳ ಅನುಷ್ಠಾನಕ್ಕಾಗಿ ಸತ್ವಾದಿಗುಣಗಳಿಂದಾದ ಜ್ಞಾನಾದಿಗಳ ಪ್ರಭೇದಗಳನ್ನು ಪ್ರತಿ ಮಾಡಿ ಹೇಳುತ್ತಾನೆ- ಜ್ಞಾನಂ ಎಂದು. ಸತ್ವ-ರಜಸ್-ತಮಸ್ಸೆಂಬ ಗುಣಗಳ ಪ್ರಭೇದದಿಂ ಜ್ಞಾನಾದಿಗಳು ಪ್ರತ್ಯೇಕವಾಗಿ ಮೂರುವಿಧವಾಗಿವೆ. ಗುಣಸಂಖ್ಯಾನೇ ಎನ್ನುವುದಕ್ಕೆ '**ಗುಣಾಃ ಸಂಖ್ಯಾಯಂತೇ ಯತ್ರ ತಸ್ಮಿನ್**' ಎಂದು ವಿಗ್ರಹ. **ಗುಣಸಂಖ್ಯಾನೇ**= ವೈದಿಕ ಸಾಂಖ್ಯಶಾಸ್ತ್ರದ ಹೇಳಲ್ಪಡುತ್ತದೆ. ಅವನ್ನೂ , **ಯಥಾವತ್** = ಹೇಗಿದೆಯೋ ಹಾಗೆ ಕೇಳು. ॥ 19 ॥

## ತ್ರಿವಿಧ ಜ್ಞಾನಗಳ ನಿರೂಪಣೆ

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತದ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥ 20 ॥**

**ಅರ್ಥ**- ಪರಸ್ಪರ ಭಿನ್ನರಾದ ಎಲ್ಲ ಜೀವ-ಜಡಗಳಲ್ಲಿ ಯಾವಾಗಲೂ ಇರುವ ಭಗವಂತನನ ಪ್ರಧಾನನನ್ನಾಗಿ ಭೇದರಹಿತನನ್ನಾಗಿ ನಾಶರಹಿತನನ್ನಾಗಿ ಯಾವ ಜ್ಞಾನದಿಂದ ಮನುಷ್ಯನ ತಿಳಿಯುವನೋ ಆ ಜ್ಞಾನವನ್ನು ಸಾತ್ವಿಕವನ್ನಾಗಿ ತಿಳಿ.

**ಪ್ರತಿಜ್ಞಾತಂ ಜ್ಞಾನತ್ರೈವಿಧ್ಯಂ ತಾವದಾಹ- ಸರ್ವೇತ್ಯಾದಿತ್ರಯೇಣ ॥ ವಿಭಕ್ತೇಷು ಪರಸ್ಪರಂ ಭಿನ್ನೇಷು ತಾರತಮ್ಯೋಪೇತೇಷು ಚ ಸರ್ವಭೂತೇಷು ಭವಂತಿ ವಿದ್ಯಂತ ಇತಿ ಭೂತಾನಿ ಜೀವಾಃ ಪ್ರಕೃತ್ಯಾದಿಜಡಾನಿ ಚ । ಸರ್ವೇಷು**

**ಜೀವೇಷು ಜಡೇಷು ಚ । ತದಾಧಾರತ್ವೇನ ತೇಭ್ಯೋ ಭಿನ್ನತ್ವೇನೇತಿ ಸಪ್ತಮ್ಯ-ಭಿಪ್ರಾಯಃ । ಭಾವಂ ಸದಾ ವಿದ್ಯಮಾನಂ ವಿಷ್ಣುಮ್ । ಏಕಂ ಪ್ರಧಾನಮ್ । ಸರ್ವೋತ್ತಮಮಿತಿ ಯಾವತ್ । ಅವಿಭಕ್ತಂ ಸರ್ವತ್ರ ಸ್ಥಿತಾವಪಿ ಅಧಿಷ್ಠಾನ-ಭೇದನಿಮಿತ್ತಭೇದಹೀನಮ್ । 'ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ' ಇತಿ (3-2-11) ಸೂತ್ರೋಕ್ತದಿಶಾ ಸರ್ವತ್ರ ನಿರ್ದೋಷಾಶೇಷಸದ್ಗುಣತಯಾ ಐಕ್ಯೇನ ಸ್ಥಿತಮಿತಿ ಯಾವತ್ । ಅವ್ಯಯಂ ಸ್ವತೋಽಧಿಷ್ಠಾನವ್ಯಯೇನ ಚ ವ್ಯಯಹೀನಮ್ । ಯೇನ ಜ್ಞಾನೇನೇಕ್ಷತೇ ವಿಷಯೀಕರೋತಿ ತದ್ ಜ್ಞಾನಂ ಸಾತ್ತ್ವಿಕಂ ವಿದ್ಧಿ ಜಾನೀಹೀತಿ ॥ 20 ॥**

**ಅನುವಾದ–** ಪ್ರತಿಜ್ಞೆ ಮಾಡಿದ ಜ್ಞಾನದ ತ್ರೈವಿಧ್ಯವನ್ನು ಹೇಳುತ್ತಾನೆ- ಸರ್ವ ಎಂದು. **ವಿಭಕ್ತೇಷು**= ಪರಸ್ಪರ ಭಿನ್ನರಾದ ಮತ್ತು ತಾರತಮ್ಯದಿಂದ ಕೂಡಿದ, **ಸರ್ವ ಭೂತೇಷು** = ಎಲ್ಲ ಜೀವರಲ್ಲಿ ಮತ್ತು ಜಡಗಳಲ್ಲಿ, **ಭಾವಂ**= ಯಾವಾಗಲು ಇರುವ ಪರಮಾತ್ಮನನ್ನು , **ಏಕಂ**= ಪ್ರಧಾನನ್ನಾಗಿ, ಅಂದರೆ ಸರ್ವೋತ್ತಮನನ್ನಾಗಿ ಎಂದರ್ಥ, **ಅವಿಭಕ್ತಂ** = ಎಲ್ಲೆಡೆ ಇದ್ದೂ ಅಧಿ ಕರಣಭೇದದಿಂದಾದ ಭೇದ ಇಲ್ಲದವನನ್ನಾಗಿ, '**ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ**' ಎಂಬ ಸೂತ್ರದಲ್ಲಿ ಹೇಳಿದಂತೆ ಎಲ್ಲೆಡೆ ನಿರ್ದುಷ್ಟನಾಗಿ ಅನಂತಗುಣಪೂರ್ಣನಾಗಿ ಒಬ್ಬನಾಗಿ ಇದ್ದಾನೆ ಎಂದರ್ಥ, **ಅವ್ಯಯಂ**= ಸ್ವಯಂ ಹಾನಿ ಇಲ್ಲದವನನ್ನಾಗಿ ಮತ್ತು ಅಧಿಷ್ಠಾನ ಹಾನಿಯಿಂದಲೂ ಹಾನಿ ಇಲ್ಲದವನನ್ನಾಗಿ, **ಯೇನ**= ಯಾವ ಜ್ಞಾನದಿಂದ, **ಈಕ್ಷತೇ**= ವಿಷಯೀ-ಕರಿಸುವನೋ ಆ ಜ್ಞಾನವನ್ನು ಸಾತ್ವಿಕವೆಂದು ತಿಳಿ.

ಇಲ್ಲಿ ಭೂತಾನಿ ಎನ್ನುವುದಕ್ಕೆ '**ಭವಂತಿ ಇತಿ= ಭೂತಾನಿ**' ಎಂದು ವಿಗ್ರಹ. ಇರುವಂಥವು ಎಂದರ್ಥ. ಆದ್ದರಿಂದ ಭೂತಾನಿ ಎಂದರೆ ಜೀವ-ಜಡ ಎರಡೂ. '**ಸರ್ವಭೂತೇಷು ಭಾವಂ**'= ಜೀವ ಜಡಗಳಲ್ಲಿ ಇರುವ' ಎಂದು ಸಪ್ತಮೀ ವಿಭಕ್ತಿಯನ್ನು ಪ್ರಯೋಗಿಸಿದ್ದರಿಂದ ಈಶ್ವರನು ಆಧಾರ, ಜೀವಜಡಗಳು ಆಧೇಯ ಆದರಿಂದ ಅವುಗಳಿಗಿಂತ ಅವನು ಭಿನ್ನ ಎಂದು ತಿಳಿಯುತ್ತದೆ. ॥ 20 ॥

**ಪೃಥಕ್ತ್ವೇನ ತು ಯದ್‌ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತದ್‌ಜ್ಞಾನಂ ವಿಧಿ ರಾಜಸಮ್ ॥ 21 ॥**

**ಅರ್ಥ –** ಯಾವ ಜ್ಞಾನವು ಎಲ್ಲ ಜೀವ – ಜಡಗಳಲ್ಲಿ ( ಜೀವಜಡಗಳನ್ನು) ಭಿನ್ನ ಎಂದು ವಿಷಯೀಕರಿಸುವುದೋ, ಅಂದರೆ, ನಾನಾವಿಧವಾದ ಜೀವ-ಜಡಪದಾರ್ಥಗಳನ್ನು

(ಪೃಥಗ್ವಿಧಾನ್=) ಪರಸ್ಪರ ಭಿನ್ನಗಳನ್ನಾಗಿಯೂ ತಾರತಮ್ಯ ಇರುವವುಗಳನ್ನಾಗಿಯೂ ವಿಷಯೀ-ಕರಿಸುವುದೋ, (ತು=) ಆದರೆ ಭಗವಂತನ ವಿಷಯದಲ್ಲಿ ಸಂದಿಗ್ಧವೊ ಆ ಜ್ಞಾನವನ್ನು ರಾಜಸವನ್ನಾಗಿ ತಿಳಿ.

**ಯದ್‌ಜ್ಞಾನಂ ಸರ್ವಭೂತೇಷು ಪೃಥಕ್ತ್ವೇನ ವೇತ್ತಿ ಸರ್ವಜೀವಜಡಾನಿ ಅಂತರ್ಭೇದಯುತತ್ವೇನ ವಿಷಯೀಕರೋತಿ ಇತ್ಯಸ್ಯೈವ ವ್ಯಾಖ್ಯಾ- ನಾನೇ-ತ್ಯಾದಿ ॥ ನಾನಾಭಾವಾನ್ ನಾನಾಪ್ರಕಾರಭೂತಜೀವಜಡರೂಪಪದಾರ್ಥಾನ್ ಪೃಥಗ್ವಿಧಾನ್‌ಪರಸ್ಪರಂ ಭಿನ್ನಾನ್ನೀಚೋಚ್ಚತಯಾ ಸ್ಥಿತಾಂಶ್ಚ ವೇತ್ತಿ ವಿಷಯೀ-ಕರೋತಿ । ವಿಷ್ಣೋರನ್ಯತ್ರ ಯಥಾರ್ಥಮಿತಿ ಯಾವತ್ । ಉಪಲಕ್ಷಣಮೇತತ್ । ಸಂದಿಗ್ಧತಯಾ ಭಗವತ್ಸ್ವರೂಪವಿಷಯಕಂ ಚ । ತದ್‌ಜ್ಞಾನಂ ರಾಜಸಮಿತ್ಯರ್ಥಃ । ತುಶಬ್ದೇನ ವಾಽಯಮರ್ಥೋ ಗ್ರಾಹ್ಯಃ । ತೇನೇಶ್ವರಾದನ್ಯತ್ರ ಯಥಾರ್ಥಜ್ಞಾನಸ್ಯ ಸಾತ್ತ್ವಿಕತ್ವಾತ್ ಕಥಂ ರಾಜಸತ್ವಮಿತಿ ನಿರಸ್ತಂ ಬೋಧ್ಯಮ್ । ಈಶ್ವರವಿಷಯೇ ಸಂಶಯರೂಪತ್ವಸ್ಯಾಧಿಕಸ್ಯಾಪಿ ಭಾವಾತ್ ॥ 21 ॥**

**ಅನುವಾದ- ಯತ್ ಜ್ಞಾನಂ=** ಯಾವ ಜ್ಞಾನವು, **ಸರ್ವ ಭೂತೇಷು ಪೃಥಕ್ತ್ವೇನ ವೇತ್ತಿ** ಎಲ್ಲ ಜೀವ ಜಡಗಳನ್ನು ತಮ್ಮೊಳಗೆ ಭಿನ್ನಗಳನ್ನಾಗಿ ವಿಷಯೀಕರಿಸುವುದೋ, ಅದರದ್ದೇ ವ್ಯಾಖ್ಯಾ **'ನಾನಾಭಾವಾನ್ ಪೃಥಗ್ವಿಧಾನ್ ವೇತ್ತಿ'** ಎಂದು. **ನಾನಾಭಾವಾನ್=** ನಾನಾವಿಧವಾ ಜೀವ-ಜಡಗಳೆಂಬ ಪದಾರ್ಥಗಳನ್ನು, **ಪೃಥಗ್ವಿಧಾನ್=** ಪರಸ್ಪರ ಭಿನ್ನಗಳನ್ನಾಗಿಯೂ ತಾರತವ ದಿಂದ ಇರುವವನ್ನಾಗಿಯೂ , **ವೇತ್ತಿ=** ವಿಷಯೀಕರಿಸುವುದೋ, (ಅಂದರೆ ಭಗವಂತನನ ಬಿಟ್ಟು ಉಳಿದ ವಿಷಯದಲ್ಲಿ ಯಥಾರ್ಥವಾದದ್ದು ಎಂದರ್ಥ. ಉಪಲಕ್ಷಣವಾಗಿ ಮತ್ತೊಂದನ ಇಟ್ಟುಕೊಳ್ಳಬೇಕು . ಭಗವಂತನನ್ನು ಸಂದಿಗ್ಧವಾಗಿ ವಿಷಯೀಕರಿಸುವಂಥದ್ದೋ . ಅಂಥ ಜ್ಞಾನ ರಾಜಸ ಎಂದರ್ಥ. ಅಥವಾ 'ಭಗವಂತನ ವಿಷಯದಲ್ಲಿ ಸಂದಿಗ್ಧವಾದದ್ದು' ಎಂದು ಅರ್ಥವ (ವೈಲಕ್ಷಣ್ಯ ಎಂಬ ಅರ್ಥವನ್ನು ನೀಡುವ) 'ತು' ಎಂಬ ಶಬ್ದದಿಂದ ತೆಗೆದುಕೊಳ್ಳಬೇಕು. ಇದರಿ ಒಂದು ಶಂಕೆ ಪರಿಹೃತವಾಯಿತು. ಆ ಶಂಕೆ ಏನೆಂದರೆ ಈಶ್ವರಭಿನ್ನವಾದ ಜಗತ್ತಿನ ವಿಷಯದ ಯಥಾರ್ಥವಾದ ಜ್ಞಾನವು ಸಾತ್ವಿಕವಾದ್ದರಿಂದ ಅದು ರಾಜಸ ಹೇಗೆ ?- ಎಂದು. (ಅ ಆದರೆ ಅದು ಸಾತ್ವಿಕವಾಗಬಹುದಾದರೂ) ರಾಜಸಜ್ಞಾನವು ಈಶ್ವರನ ವಿಷಯದ ಸಂಶಯರೂಪವಾಗಿದೆ ಈ ಅಂಶವು ಸಾತ್ವಿಕ ಜ್ಞಾನಕ್ಕಿಂತ ಹೆಚ್ಚಿನದ್ದು . ॥ 21 ॥

**ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥ 22**

**ಅರ್ಥ-** ಯಾವ ಜ್ಞಾನವು ಒಬ್ಬ ಜೀವನನ್ನು ಬ್ರಹ್ಮನಂತೆ (ಅಥವಾ ಜಗತ್ತಿನಂತೆ) ವಿಷಯೀಕರಿಸುವುದೋ, ಯುಕ್ತಿಹೀನವೂ ಮತ್ತು ಜ್ಞಾನಾಂಶಕ್ಕಿಂತ ಹೆಚ್ಚು ಅಜ್ಞಾನದಿಂದ ಕೂಡಿದ್ದೊ ಆ ಜ್ಞಾನವು ತಾಮಸವೆಂದು ಹೇಳಲ್ಪಟ್ಟಿದೆ.

**ಯತ್ತಿ್ವತಿ । ಕಾರ್ಯಶಬ್ದೋಽತ್ರ ಸಂಸಾರಿಣೋ ಮುಕ್ತತ್ವೇನ ಕ್ರಿಯಮಾಣತ್ವ-ಹೇತುನಾ ಜೀವಪರಃ । ಕೃತ್ಸ್ನಶಬ್ದೋ ಬ್ರಹ್ಮಪರೋ ಜಗತ್ಪರಶ್ಚ । ಅಯಮರ್ಥಃ । ಏಕಸ್ಮಿನ್ಕಾರ್ಯೇ ಜೀವೇ ಕೃತ್ಸ್ನವದ್ಬ್ರಹ್ಮವತ್ ಯದ್‌ಜ್ಞಾನಂ ಸಕ್ತಮ್ । ಕೋಽರ್ಥಃ ? ಬ್ರಹ್ಮ ಯಥಾ ಸ್ವಾತ್ಮಾನಂ ವಿಷಯೀಕರೋತಿ ಬ್ರಹ್ಮೇತಿ, ತಥಾ ಜೀವಂ ಬ್ರಹ್ಮೇತಿ ಯದ್‌ಜ್ಞಾನಂ ವಿಷಯೀಕರೋತೀತ್ಯರ್ಥಃ । ಜೀವೇ ಬ್ರಹ್ಮಾಭೇದವಿಷಯಕಂ ಯದ್‌ಜ್ಞಾನಂ ತತ್ತಾಮಸಮಿತಿ ಯಾವತ್ । ತಥಾ ಏಕಸ್ಮಿನ್ಕಾರ್ಯೇ ಜೀವೇ ಕೃತ್ಸ್ನವಜ್ಜಗದ್ವದ್ಯಜ್ಞಾನಂ ಸಕ್ತಮ್ । ಪ್ರಪಂಚಂ ಯಥಾ ವಿಷಯೀಕರೋತಿ ಪ್ರಪಂಚೋಽಯಮಿತಿ, ತಥಾ ಜೀವಂ ಯದ್‌ಜ್ಞಾನಂ ವಿಷಯೀಕರೋತಿ । ಜೀವಂ ಜಗದಾತ್ಮಕತ್ವೇನ ವಿಷಯೀಕುರ್ವದ್ಯಜ್ಜ್ಞಾನಂ ತತ್ತಾಮಸಮಿತಿ ಯಾವತ್ । ತಥಾ ಏಕಸ್ಮಿನ್ಕಾರ್ಯೇ ಜೀವೇ ಕೃತ್ಸ್ನವದ್ಯಜ್ಜ್ಞಾನಂ ಸಕ್ತಮ್ । ಏಕಮೇವ ಜೀವಂ ಕೃತ್ಸ್ನಜಗದಾತ್ಮಕತ್ವೇನ ಯದ್ವಿಷಯೀಕರೋತಿ ಏಕಜೀವಕಲ್ಪಿತಂ ಜಗದಿತಿ ಯಜ್ಜ್ಞಾನಂ ವಿಷಯೀಕರೋತೀತಿ ತ್ರಿ(ತ್ರೇ)ಧಾರ್ಥಃ ।**

**ಅನುವಾದ-** 'ಯತ್ತು' ಎಂದು. ಕಾರ್ಯ ಶಬ್ದಕ್ಕೆ ಮಾಡಲ್ಪಡುವಂಥದ್ದು ಎಂದರ್ಥ. ಸಂಸಾರಿ ಜೀವನು ಮುಕ್ತನಾಗಿ ಮಾಡಲ್ಪಡುವುದರಿಂದ ಪ್ರಕೃತ ಶ್ಲೋಕದಲ್ಲಿ ಕಾರ್ಯಶಬ್ದಕ್ಕೆ ಜೀವನಲ್ಲಿ ತಾತ್ಪರ್ಯ. ಕೃತ್ಸ್ನ ಶಬ್ದಕ್ಕೆ ಬ್ರಹ್ಮನಲ್ಲೂ ಜೀವನಲ್ಲೂ ತಾತ್ಪರ್ಯ. ಇದರಿಂದ ಶ್ಲೋಕಾರ್ಥ ಹೀಗಾಗುತ್ತದೆ- **ಏಕಸ್ಮಿನ್ ಕಾರ್ಯೇ=** ಜೀವನಲ್ಲಿ **ಕೃತ್ಸ್ನವತ್=** ಬ್ರಹ್ಮನಂತೆ ಯಾವ ಜ್ಞಾನವು **ಸಕ್ತಂ=** ತೊಡಗಿದೆಯೋ (ವಿಷಯೀಕರಿಸುವುದೋ) ಅಂದರೆ ಏನರ್ಥ ? ಬ್ರಹ್ಮ ಹೇಗೆ ತನ್ನನ್ನು ಬ್ರಹ್ಮನೆಂದು ವಿಷಯೀಕರಿಸುವನೋ ಹಾಗೆ ಜೀವನನ್ನು ಬ್ರಹ್ಮ ಎಂದು ಯಾವ ಜ್ಞಾನ ವಿಷಯೀಕರಿಸುವುದೋ ಎಂದರ್ಥ. ಜೀವನ ವಿಷಯದಲ್ಲಿ ಬ್ರಹ್ಮಾಭೇದವನ್ನು ವಿಷಯೀಕರಿಸುವ ಜ್ಞಾನ ಯಾವುದೋ ಅದು ತಾಮಸಜ್ಞಾನ ಎಂದು ಒಟ್ಟರ್ಥ. ಅದರಂತೆ, **ಏಕಸ್ಮಿನ್ ಕಾರ್ಯೇ=** ಜೀವನಲ್ಲಿ, **ಕೃತ್ಸ್ನವತ್=** ಜಗತ್ತಿನಂತೆ ಯಾವ ಜ್ಞಾನ **ಸಕ್ತಂ=** ತೊಡಗಿದೆಯೋ, ಅಂದರೆ, ಪ್ರಪಂಚವನ್ನು ಹೇಗೆ 'ಇದು ಪ್ರಪಂಚ' ಎಂದು ವಿಷಯೀಕರಿಸುತ್ತದೊ ಅದರಂತೆ ಜೀವನನ್ನು ಯಾವ ಜ್ಞಾನ ವಿಷಯೀಕರಿಸುತ್ತದೊ (ಅರ್ಥಾತ್) ಜೀವನನ್ನು ಜಗದ್ರೂಪ ಎಂದು ವಿಷಯೀಕರಿಸುವ ಯಾವ ಜ್ಞಾನವಿದೆಯೊ ಅದು ತಾಮಸ ಎಂದು ತಾತ್ಪರ್ಯ. ಇದರಂತೆ,

**ಏಕಸ್ಮಿನ್ ಕಾರ್ಯೇ**= ಒಬ್ಬ ಜೀವನಲ್ಲಿ **ಕೃತ್ಸ್ನವತ್**= ಜಗತ್ತಿನಂತೆ, **ಯತ್ ಜ್ಞಾನಂ**= ಯಾ ಜ್ಞಾನವು, **ಸಕ್ತಂ**= ತೊಡಗಿದೆಯೋ, ಅಂದರೆ, ಒಬ್ಬನೇ ಜೀವನನ್ನು ಸಮಸ್ತ ಜಗದ್ರೂಪ ಎಂದ ಯಾವುದು ವಿಷಯೀಕರಿಸುವುದೋ ಅಂದರೆ, ಏಕಜೀವನಿಂದ ಕಲ್ಪಿತವಾದದ್ದು ಜಗತ್ತು ಎಂ ಯಾವ ಜ್ಞಾನವೋ (ಅದು ತಾಮಸ)- ಹೀಗೆ ಮೂರು ರೀತಿಯಿಂದ ಅರ್ಥ (1).

**ಕಿಂಚ ಯಜ್ಜ್ಞಾನಮಹೈತುಕಂ ಯುಕ್ತಿಶೂನ್ಯಮ್ ಅತತ್ತ್ವಾರ್ಥವದಸತ್ಯ ವಿಷಯಕಂ ಸದಸದ್ವಿಲಕ್ಷಣಾದ್ಯವಿದ್ಯಮಾನಾಕಾರಕಲ್ಪನಾಯುಕ್ತಮಿತಿ ಯಾವತ್ । ಅಲ್ಪಂ ಬಹುಲಾಜ್ಞಾನಯುತತ್ವೇನ ಧರ್ಮೇಣಾಲ್ಪಜ್ಞಾನಸದೃಶಂ ಚ ಯತ್ ತತ್ತಾಮಸಮ್ । ಅತ್ರ ಬ್ರಹ್ಮವದಿತಿ ಜೀವ ಇತಿ ಚ ವಾಚ್ಯೇ ಕೃತ್ಸ್ನವದಿತ್ಯುಕ್ತಿಃ ಜಗತೋऽಪಿ ಗ್ರಹಣಾಯ । ತೇನಾಕಾರ್ಯತ್ವಾದಿಕೃತ್ಸ್ನಗುಣಪರಿಪೂರ್ಣತ್ವೇನ ಕೃತ್ಸ್ನಪದೋಕ್ತಬ್ರಹ್ಮಣಾ ಕಾರ್ಯತ್ವಾದಿನಾ ತದಧೀನಸ್ಯ ಜೀವಸ್ಯಾಭೇದಜ್ಞಾನಂ ಮಿಥ್ಯಾಜ್ಞಾನತ್ವಾತ್ಕಥಂ ನ ತಾಮಸಮಿತಿ ತಾಮಸತ್ವೋಪಪಾದನಾಯೇತಿ । ಕಾರ್ಯ ಇತ್ಯೇವ ವಾಚ್ಯೇ ಏಕಸ್ಮಿನ್ನಿತ್ಯುಕ್ತಿಃ ಏಕಜೀವಮತಸ್ಯ ಸಂಗ್ರಹಾಯೇತಿ । ಅತ್ರ ಯದ್ಯಪ್ಯೇಕಸ್ಮಿನ್‌ಕಾರ್ಯಶಬ್ದಿತೇ ಜೀವೇ ಕೃತ್ಸ್ನವದಕಾರ್ಯತ್ವಾದಿಗುಣಪರಿ- ಪೂರ್ಣಬ್ರಹ್ಮವಜ್ಜಗದ್ವಚ್ಚ ಯಜ್ಜ್ಞಾನಂ ಸಕ್ತಮಿತ್ಯಸ್ಯ ಚೈಕಂ ಜೀವಂ ಬ್ರಹ್ಮಾತ್ಮಕತ್ವೇನ ಜಗದಾತ್ಮಕತ್ವೇನ ಚ ವಿಷಯೀಕಾರಿ ಯಜ್ಜ್ಞಾನಮಿತ್ಯರ್ಥಃ । ತಾದೃಶಂ ಚ ಜ್ಞಾನಮಹೈತುಕಂ ಅತತ್ತ್ವಾರ್ಥಮಲ್ಪಂ ಚ ಭವತ್ಯೇವೇತಿ ಪುನರಹೈತುಕ- ಮಿತ್ಯಾದ್ಯುಕ್ತಿಃ ಪುನರುಕ್ತಿರೇವ । ತಥಾऽಪ್ಯಹೈತುಕಜ್ಞಾನಾದಿತ್ರಿತಯಂ ಪ್ರತ್ಯೇಕಂ ಏಕೈಕಂ ತಾಮಸಮ್ । ಪೂರ್ವಾರ್ಧೋಕ್ತಮಿಥ್ಯಾಜ್ಞಾನರೂಪವಿಶೇಷಣ- ಸಹಿತಮತಿತಾಮಸಮಿತಿ ವಕ್ತುಂ ಇತಿ ಜ್ಞೇಯಮ್ ।**

**ಅನುವಾದ**- ಅಲ್ಲದೆ ಯಾವ ಜ್ಞಾನವು, **ಅಹೈತುಕಂ**= ಯುಕ್ತಿ ಇಲ್ಲದ್ದೋ, **ಅತತ್ವಾರ್ಥ ವತ್**= ಅಸತ್ಯವನ್ನು ವಿಷಯೀಕರಿಸುವುದೋ, ಅಂದರೆ, ಇಲ್ಲದ ಸದಸದ್ವಿಲಕ್ಷಣತ್ವಾ ಧರ್ಮಗಳ ಕಲ್ಪನೆಗಳಿಂದ ಕೂಡಿದ್ದು ಎಂದು ತಾತ್ಪರ್ಯ. ಅಲ್ಲದೆ, **ಅಲ್ಪಂ**= ಬಹಳ ಅಜ್ಞಾನದಿಂ ಕೂಡಿರುವಿಕೆ ಎಂಬ ಧರ್ಮದಿಂದ ಅಲ್ಪಜ್ಞಾನಕ್ಕೆ ಸದೃಶವೊ(2) ಅದು ತಾಮಸ.

ಈ ಶ್ಲೋಕದಲ್ಲಿ 'ಬ್ರಹ್ಮವತ್' ಎಂದೂ ಜೀವೇ ಎಂದೂ ಹೇಳಬೇಕಾದಲ್ಲಿ ಕೃತ್ಸ್ನವತ್ ಎಂದದ ಜಗತ್ತನ್ನೂ ಸಂಗ್ರಹಿಸಲು . ಇದರಿಂದ ಜ್ಞಾನಕ್ಕೆ ತಾಮಸತ್ವವನ್ನು ಸಮರ್ಥಿಸಿದಂತಾಗುವುದು ಅದು ಹೇಗೆಂದರೆ- ಕೃತ್ಸ್ನ ಎಂದರೆ ಸಕಲ. ಬ್ರಹ್ಮನ ಅಕಾರ್ಯತ್ವ ಮುಂತಾದ ಸಕಲಗು ಪೂರ್ಣನಾದ್ದರಿಂದ ಕೃತ್ಸ್ನಪದದಿಂದ ಉಕ್ತನಾಗುವನು. ಇಂಥ (ಅಕಾರ್ಯನಾದ) ಬ್ರಹ್ಮನಿಗು

ಕಾರ್ಯತ್ವಾದಿನಿಮಿತ್ತದಿಂದ ಆ ಬ್ರಹ್ಮನಿಗೆ ಅಧೀನನಾದ ಜೀವನಿಗೂ ಅಭೇದದ ಜ್ಞಾನವು ಮಿಥ್ಯಾಜ್ಞಾನವಾದ್ದರಿಂದ ಹೇಗೆ ತಾಮಸವಾಗದು ? ಹೀಗೆ ತಾಮಸತ್ವದ ಸಮರ್ಥನೆ. (3)

ಕಾರ್ಯೇ ಎಂದಿಷ್ಟೇ ಹೇಳಬೇಕಾದಾಗ ಏಕಸ್ಮಿನ್ ಕಾರ್ಯೇ ಎಂದದ್ದು ಏಕಜೀವಮತವನ್ನು ಸಂಗ್ರಹಿಸಲು. (4)

ಈ ಶ್ಲೋಕದಲ್ಲಿ ನಿಜವಾಗಿ **ಏಕಸ್ಮಿನ್ ಕಾರ್ಯೇ**= ಒಬ್ಬ ಕಾರ್ಯ ಎನಿಸಿದ ಜೀವನಲ್ಲಿ, **ಕೃತ್ಸ್ನವತ್**= ಅಕಾರ್ಯತ್ವಾದಿಗುಣಪೂರ್ಣ ಬ್ರಹ್ಮನಂತೆ ಮತ್ತು ಜಗತ್ತಿನಂತೆ ಯಾವ ಜ್ಞಾನ ತೊಡಗಿದೆಯೋ ಎನ್ನುವುದಕ್ಕೆ ಒಬ್ಬ ಜೀವನನ್ನು ಬ್ರಹ್ಮಾತ್ಮಕ ಎಂದೂ ಜಗದಾತ್ಮಕ ಎಂದೂ ವಿಷಯೀಕರಿಸುವ ಯಾವ ಜ್ಞಾನವೊ ಎಂದರ್ಥ. ಅಂಥ ಜ್ಞಾನವು ಅಹೈತುಕವೂ, ಅತತ್ವಾರ್ಥವೂ ಅಲ್ಪವೂ ಆಗಿಯೇ ಇರುತ್ತದೆ. ಆದ್ದರಿಂದ ಶ್ಲೋಕದಲ್ಲಿ '**ಅಹೈತುಕಂ ಅತತ್ವಾರ್ಥಮ್ ಅಲ್ಪಂ**' ಎಂದದ್ದು ಪುನರುಕ್ತಿಯೇ. ಆದರೂ, ಅಹೈತುಕ-ಅತತ್ವಾರ್ಥಕ- ಅಲ್ಪವಾದ ಮೂರು ಜ್ಞಾನಗಳು ಪ್ರತ್ಯೇಕವಾಗಿ ಒಂದೊಂದೂ ತಾಮಸ . ಶ್ಲೋಕದ ಮೊದಲರ್ಧದಲ್ಲಿ ಹೇಳಿದ ಮಿಥ್ಯಾಜ್ಞಾನ ಎಂಬ ವಿಶೇಷಣವಿದ್ದಾಗ ಅತಿತಾಮಸ ಎಂದು ಹೇಳಲು- ಎಂದು ತಿಳಿಯಬೇಕು.

**ಯದ್ವಾ ಸಾಮಾನಾಧಿಕರಣ್ಯೇನ ಪದಾನಾಂ ವಿಶೇಷಣವಿಶೇಷ್ಯಭಾವಃ । ಏವಂ ಚ ಕಾರ್ಯೇ ಜೀವೇ ಕೃತ್ಸ್ನವಜ್ಜಗದ್ವ್ಯತ್ಸಕ್ತಮ್ । ಏಕಸ್ಮಿನ್ಕಾರ್ಯೇ ಜೀವೇ ಕೃತ್ಸ್ನವದ್ಬ್ರಹ್ಮವದ್ವ್ಯತ್ಸಕ್ತಮ್ । ಯದಹೈತುಕಂ । ಯಚ್ಚಾತತ್ತ್ವಾರ್ಥವದ್ ಅಸತ್ಯಾರ್ಥಕಲ್ಪನಾಯುಕ್ತಮ್ । ಯಚ್ಚಾಲ್ಪಮ್ । ತಾನಿ ಸರ್ವಾಣ್ಯಪಿ ಷಡ್ವಿಧಾ-ಜ್ಞಾನಾನಿ ಪ್ರತ್ಯೇಕಂ ತಾಮಸಾನೀತಿ ಯೋಜನಾ । ಅತೋ ನ ಪುನರುಕ್ತಿ-ಶಂಕಾಽವಕಾಶ ಇತಿ ।। 22 ।।**

ಅಥವಾ, ಒಂದೆ ವಿಭಕ್ತಿಯ ಪದಗಳಾದ್ದರಿಂದ ಅವುಗಳಿಗೆ ವಿಶೇಷಣವಿಶೇಷ್ಯಭಾವವನ್ನು ಇಟ್ಟುಕೊಳ್ಳಬೇಕು.ಈಗ ಅರ್ಥ ಹೀಗೆ- **ಕಾರ್ಯೇ**= ಜೀವನಲ್ಲಿ **ಕೃತ್ಸ್ನವತ್**= ಜಗತ್ತಿನಂತೆ ಯಾವ ಜ್ಞಾನ ತೊಡಗಿದಯೋ, **ಏಕಸ್ಮಿನ್ ಕಾರ್ಯೇ**= ಒಬ್ಬ ಜೀವನಲ್ಲಿ ಕೃತ್ಸ್ನವತ್ ಜಗತ್ತಿನಂತೆ ತೊಡಗಿದೆಯೋ ಜೀವನಲ್ಲಿ , **ಕೃತ್ಸ್ನವತ್**= ಬ್ರಹ್ಮನಂತೆ ತೊಡಗಿದೆಯೋ, ಯಾವುದು ಅಹೈತುಕವೂ, ಮತ್ತು ಯಾವುದು, **ಅತತ್ವಾರ್ಥವತ್**= ಇಲ್ಲದ ಅರ್ಥದ ಕಲ್ಪನೆಯಿಂದ ಕೂಡಿದ್ದು , ಮತ್ತು ಯಾವುದು ಅಲ್ಪವೂ ಆ ಎಲ್ಲಾ ಆರು ವಿಧದ ಜ್ಞಾನಗಳು ಪ್ರತ್ಯೇಕವಾಗಿ ತಾಮಸಗಳು- ಎಂದು ಅನ್ವಯ. ಆದ್ದರಿಂದ ಪುನರುಕ್ತಿಶಂಕೆಗೆ ಅವಕಾಶ ಇಲ್ಲ (5) . ।। 22 ।।

**ವಿವರಣೆ –** (1)

(ಅ) ಜೀವನೇ ಬ್ರಹ್ಮ

(ಆ) ಜೀವನೇ ಜಗತ್ತು

(ಇ) ಏಕಜೀವಾಜ್ಞಾನಕಲ್ಪಿತವಾಗಿದೆ ಜಗತ್ತು- ಈ ಮೂರು ಅರ್ಥಗಳನ್ನು 'ಏಕಸ್ಮಿ **ಕಾರ್ಯೇ ಕೃತ್ಸ್ನವತ್**' ಎಂಬ ಭಾಗ ಹೇಳುತ್ತಿದೆ.

(2) ಅಲ್ಪಜ್ಞಾನವು ತಾಮಸಜ್ಞಾನ ಎಂದು ಗೀತೆಯಲ್ಲಿ ಹೇಳಲಾಗಿದೆ. ಇದರಿಂದ ಬ ಜ್ಞಾನವು ತಾಮಸಜ್ಞಾನವಾಗಲಾರದು ಎಂಬ ಭ್ರಮೆಗೆ ಅವಕಾಶವಿದೆ. ಅದನ್ನು ಪರಿಹರಿಸ ವ್ಯಾಖ್ಯಾನವನ್ನು ಇಲ್ಲಿ ಮಾಡುತ್ತಿದ್ದಾರೆ. ಅಲ್ಪಜ್ಞಾನ ಎಂದರೆ ಅಲ್ಪಜ್ಞಾನಸದೃಶ ಎಂದರ್ಥ. ಬ ಜ್ಞಾನವೂ ಕೂಡ ಅಲ್ಪಜ್ಞಾನಸದೃಶವಾಗಿ ಅಲ್ಪ ಎನಿಸಬಹುದು. ಸಾದೃಶ್ಯ ಹೇಳಲು ಸಾಧಾ ಧರ್ಮ ಯಾವುದು ? ಎಂದರೆ ಬಹ್ವಜ್ಞಾನಯುಕ್ತತ್ವ. ಸ್ವಲ್ಪ ಜ್ಞಾನ ಇರುವವರಿಗೆ ಜ್ಞಾನಕ್ಕಿ ಹೆಚ್ಚು ಅಜ್ಞಾನ ಇರುತ್ತದೆ. ಅದರಂತೆ, ಬಹಳ ಜ್ಞಾನ ಇರುವವರಿಗೂ ಜ್ಞಾನಕ್ಕಿಂತ ಹೆಚ್ಚು ಅಜ್ಞ ಇದ್ದಾಗ ಅದರಲ್ಲೂ ಬಹು-ಅಜ್ಞಾನ-ಯುಕ್ತತ್ವ ಎಂಬ ಸಾದೃಶ್ಯ ಪ್ರಾಪ್ತವಾಯಿತು. ಅರ್ಥದಲ್ಲಿ ಅದೂ ಅಲ್ಪವೇ- ಎಂದು ಆಶಯ.

(3) 'ಜೀವನನ್ನು ಬ್ರಹ್ಮನೆಂದು ತಿಳಿವ ಜ್ಞಾನ ತಾಮಸ' ಎಂದರೆ ಅದೇಕೆ ತಾಮಸ ಎಂ ಸ್ಪಷ್ಟೀಕರಣ ನೀಡಿದಂತಾಗದು. 'ಕಾರ್ಯನಾದ ಜೀವನನ್ನು ಅಕಾರ್ಯತ್ವಾದಿ ಗುಣಪೂ ನಾದ ಬ್ರಹ್ಮವೆಂದು ತಿಳಿವ ಜ್ಞಾನ ತಾಮಸ' ಎಂದಾಗ, ವಿರುದ್ಧಧರ್ಮ ಇರುವವರಿಗೆ ಅಭೆ ವನ್ನು ಹೇಳುವುದರಿಂದ ಅದು ತಾಮಸ ಎಂದು ಸಮರ್ಥನೆಯನ್ನು ನೀಡಿದಂತಾಗುವುದು . ಕಾರಣದಿಂದ 'ಜೀವೇ ಬ್ರಹ್ಮವತ್' ಎನ್ನದೆ '**ಕಾರ್ಯೇ ಕೃತ್ಸ್ನವತ್**' ಎಂದು ಹೇಳಿದ್ದು ಎಂ ಆಶಯ.

(4) ಅದ್ವೈತಸಿದ್ಧಾಂತದಲ್ಲಿ ಏಕಜೀವವಾದ, ಬಹುಜೀವವಾದ ಎಂಬ ಎರಡು ಪಕ್ಷಗಳಿ ಬ್ರಹ್ಮನಿಗೆ ಅನೇಕ ಅಜ್ಞಾನಗಳ ಸಂಬಂಧದಿಂದ ಅನೇಕ ಜೀವರು ಆಗಿದ್ದಾರೆ ಎಂಬು ಬಹುಜೀವವಾದವಾದರೆ, ಒಂದೇ ಅಜ್ಞಾನದಿಂದ ಒಬ್ಬನೇ ಜೀವ ಆಗಿದ್ದಾನೆ. ಜೀವರಂ ಕಾಣುತ್ತಿರುವ ಉಳಿದೆಲ್ಲರೂ ಜಡಗಳಂತೆ ಆ ಒಬ್ಬ ಜೀವನ ಅಜ್ಞಾನದಿಂದ ಕಲ್ಪಿತರು – ಎನ್ನುವು ಏಕಜೀವವಾದ. ಅದನ್ನು ಅನುವಾದ ಮಾಡಲು 'ಏಕಸ್ಮಿನ್' ಶಬ್ದವನ್ನು ಬಳಸಿದ್ದು- ಎಂ ಆಶಯ. ಈ ಏಕಜೀವವಾದದ ವಿಸ್ತಾರವಾದ ವಿಮರ್ಶೆಯು ವಿಷ್ಣುತತ್ತ್ವವಿನಿರ್ಣಯದ ಬಂದಿದೆ.

(5) ಮೊದಲ ವ್ಯಾಖ್ಯಾನದಲ್ಲಿ '**ಯತ್ ಜ್ಞಾನಂ ಏಕಸ್ಮಿನ್ ಕಾರ್ಯೇ ಕೃತ್ಸ್ನವತ್ ಸ ಅಹೈತುಕಂ, ಅತತ್ತ್ವಾರ್ಥವತ್ ಅಲ್ಪಂ ಚ ತತ್ ತಾಮಸಂ**' ಎಂದು ಒಂದೇ ವಾಕ್ಯ. ತಾಮಸ ನಾಲ್ಕು ಕಾರಣಗಳನ್ನು ಹೇಳಿದಂತಾಗುತ್ತದೆ. ಆಗ ಕೊನೆಯ ಮೂರು ವಿಶೇಷಣಗಳು ಅರ್ಥಾ

ಸಿದ್ಧವಾದ್ದರಿಂದ ಪುನರುಕ್ತಿ ಬರುತ್ತದೆ ಎಂದು ಶಂಕೆ. ಅತಿತಾಮಸತ್ವವನ್ನು ಹೇಳಲು ಆ ವಿಶೇಷಣಗಳು ಎಂದು ಪರಿಹಾರ.

ಯದ್ವಾ ಎಂದು ಆರಂಭಿಸಿದ ಎರಡನೆಯ ವ್ಯಾಖ್ಯಾನದಲ್ಲಿ **'ಯತ್ ಜ್ಞಾನಂ ಏಕಸ್ಮಿನ್ ಕಾರ್ಯೇ ಕೃತ್ಸ್ನವತ್ ಸಕ್ತಂ ತತ್ ತಾಮಸಂ' 'ಯತ್ ಅಹೈತುಕಂ ತತ್ ತಾಮಸಂ' 'ಯತ್ ಅತತ್ತ್ವಾರ್ಥವತ್ ತತ್ ತಾಮಸಂ' 'ಯತ್ ಅಲ್ಪಂ ತತ್ ತಾಮಸಂ'** ಎಂದು ನಾಲ್ಕು ಬೇರೆ ಬೇರೆ ವಾಕ್ಯಗಳು. ಹಿಂದಿನ ವ್ಯಾಖ್ಯಾನದಲ್ಲಿ, ಪರಿಹಾರ ಹೇಳಿದರೂ, ಪುನರುಕ್ತಿ ಶಂಕೆಗೆ ಅವಕಾಶವಿತ್ತು. ಈ ವ್ಯಾಖ್ಯಾನದಲ್ಲಿ ಶಂಕೆಗೂ ಅವಕಾಶವಿಲ್ಲ ಎಂದು ಆಶಯ.

## ತ್ರಿವಿಧಕರ್ಮಗಳ ನಿರೂಪಣೆ

**ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥ 23 ॥**

**ಅರ್ಥ-** ಯಾವ ಕರ್ಮವು ನಿಯತವೂ ನನ್ನದೆಂಬ ಸ್ನೇಹ ಇಲ್ಲದ್ದೊ, ಕೀರ್ತಿಯಲ್ಲಿ ಪ್ರೀತಿ, ಅಕೀರ್ತಿಯಲ್ಲಿ ದ್ವೇಷ- ಇವನ್ನು ಬಿಟ್ಟು ಫಲವನ್ನು ಬಯಸದವನು ಮಾಡಿದಂಥದ್ದೊ ಅದು ಸಾತ್ತ್ವಿಕ ಎನಿಸುತ್ತದೆ.

**ಪ್ರಾಕ್‌ಪ್ರತಿಜ್ಞಾತಂ ಗುಣಕೃತಕರ್ಮತ್ರೈವಿಧ್ಯಂ ಆಹ- ನಿಯತಮಿತ್ಯಾದಿತ್ರಿಭಿಃ ॥ ಹರೇಃ ಸರ್ವೋತ್ತಮತ್ವಜ್ಞಾನಭಕ್ತಿಪೂರ್ವಕಂ ತದರ್ಪಣಬುದ್ಧ್ಯಾ ಕ್ರಿಯಮಾಣ-ಸ್ವವರ್ಣಾಶ್ರಮೋಚಿತಂ ಹಿ ನಿಯತಮಿತ್ಯುಚ್ಯತೇ । 'ಮಯಿ ಸರ್ವಾಣಿ' ಇತ್ಯಾದೌ ಭಗವತ್ಸರ್ವೋತ್ತಮತ್ವಜ್ಞಾನತದ್ಭಕ್ತಿಪೂರ್ವಕಂ ತದರ್ಪಣಬುದ್ಧ್ಯಾ ಕರ್ಮಕರಣಸ್ಯ ವಿಧಾನಾತ್ । 'ಯೇ ಮೇ ಮತಮ್' (3-31) ಇತ್ಯಾದೌ ತಸ್ಯೈವ ಮುಕ್ತಿ-ಹೇತುತ್ವೋಕ್ತೇಃ । ಯತ್ಕರಣೇ ಫಲಪ್ರಾಪ್ತಿಃ ಯದಕರಣೇ ಪ್ರತ್ಯವಾಯಃ ತಸ್ಯೈವ ನಿಯತತ್ವಾತ್ । ಸಂಗರಹಿತಂ ಮದೀಯತಾ ಸ್ನೇಹಹೀನಮ್ । ಕೀರ್ತ್ಯಾದೌ ರಾಗಾದಿಹಾನತಃ ಅಕೀರ್ತ್ಯಾದೌ ದ್ವೇಷತ್ಯಾಗತಃ ಕೃತಂ ಫಲಪ್ರಾಪ್ತೀಚ್ಛಾಹೀನೇನ ಕೃತಂ ಯತ್ತತ್ಕರ್ಮ ಸಾತ್ತ್ವಿಕಮುಚ್ಯತ ಇತ್ಯರ್ಥಃ ॥ 23 ॥**

**ಅನುವಾದ-** ಹಿಂದೆ ಪ್ರತಿಜ್ಞೆ ಮಾಡಿದ ಸತ್ವಾದಿಗುಣಗಳಿಂದಾಗುವ ಕರ್ಮಗಳ ತ್ರೈವಿಧ್ಯವನ್ನು ಹೇಳುತ್ತಾನೆ- ನಿಯತಂ ಇತ್ಯಾದಿ ಮೂರು ಶ್ಲೋಕಗಳಿಂದ. ಹರಿಯು ಸರ್ವೋತ್ತಮ ಎಂಬ ಜ್ಞಾನ, ಅವನಲ್ಲಿ ಭಕ್ತಿ ಇವಿದ್ದು, ಹರಿ ಅರ್ಪಣಬುದ್ಧಿಯಿಂದ ಮಾಡುವ, ತಮ್ಮ ವರ್ಣ-ಆಶ್ರಮಗಳಿಗೆ ಯೋಗ್ಯವಾದ ಕರ್ಮವು ನಿಯತ ಎನಿಸುವುದಷ್ಟೆ.. ಏಕೆಂದರೆ, **'ಮಯಿ ಸರ್ವಾಣಿ ಕರ್ಮಾಣಿ'**

ಎಂದು ಹಿಂದೆ (3-30) ಭಗವಂತನ ಸರ್ವೋತ್ತಮತ್ವವನ್ನು ತಿಳಿದು ಅವನಲ್ಲಿ ಭಕ್ತಿಯಿಂದ ಅವನಿಗೆ ಇದು ಅರ್ಪಿತ ಎಂಬ ಬುದ್ಧಿಯಿಂದ ಕರ್ಮ ಮಾಡಬೇಕು ಎಂದು ವಿಹಿತವಾಗಿದೆ. **'ಯೇ ಮೇ ಮತಮಿದಂ'** (ಅದರ ಮುಂದಿನ ಶ್ಲೋಕ) ಮುಂತಾದೆಡೆ ಅಂಥ ಕರ್ಮವೆ ಮುಕ್ತಿ ಹೇತು ಎಂದು ಹೇಳಲಾಗಿದೆ. ಯಾವುದನ್ನು ಮಾಡಿದರೆ ಫಲ ದೊರೆವುದೋ ಮತ್ತು ಯಾವುದನ್ನು ಮಾಡದಿದ್ದರೆ ಪಾಪ ಬರುವುದೋ ಅದೇ ನಿಯತ (ಆದ್ದರಿಂದ ನಿಯತ ಎನ್ನುವುದಕ್ಕೆ ಹಿಂದೆ ಹೇಳಿದ ಅರ್ಥ) **ಸಂಗರಹಿತಂ=** ನನದೆಂಬ ಸ್ನೇಹ ಇಲ್ಲದ್ದು **(ಅರಾಗ-ದ್ವೇಷತಃ ಕೃತಂ =)** ಕೀರ್ತಿ - ಲಾಭಾದಿಗಳಲ್ಲಿ ಆಸೆ ಇಲ್ಲದೆ, ಅಪಕೀರ್ತಿ ದ್ರವ್ಯನಾಶಾದಿಗಳಲ್ಲಿ ದ್ವೇಷ ಬಿಟ್ಟು ಆಚರಿಸಿದ, **(ಅಫಲ ಪ್ರೇಪ್ಸುನಾ ಕೃತಂ =)** ಫಲ ಪಡೆವ ಬಯಕೆ ಇಲ್ಲದವನಿಂದ ಆಚರಿಸಲ್ಪಟ್ಟ ಯಾವ ಕರ್ಮವಿದೆಯೊ ಅದು ಸಾತ್ವಿಕ ಎನಿಸುವುದು- ಎಂದರ್ಥ. ॥ 23 ॥

**ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥ 24 ॥**

**ಅರ್ಥ-** ಯಾವ ಕರ್ಮ ಫಲ ಪಡೆವ ಬಯಕೆ ಇರುವವನಿಂದ ಮತ್ತು ಕರ್ತೃತ್ವಾಭಿಮಾನ ಇರುವವನಿಂದ ದೇಹಕ್ಕೆ ಬಹಳ ಶ್ರಮವಾಗುವಂತೆ ಆಚರಿಸಲ್ಪಡುವುದೋ ಆ ಕರ್ಮ ರಾಜಸ ಎನಿಸುವುದು.

**ಯತ್ತು ಕಾಮೇಪ್ಸುನಾ ಫಲಪ್ರಾಪ್ತೀಚ್ಛಾವತಾ ಕರ್ತೃತ್ವಾಭಿಮಾನಸಹಿತೇನ ಚ । ಪುನಃಶಬ್ದಃ ಸಮುಚ್ಚಯೇ । ಬಹ್ವಾಯಾಸಯುಕ್ತಂ ಚ ಕ್ರಿಯತೇ ತತ್ಕರ್ಮ ರಾಜಸಂ ಉದಾಹೃತಮ್ ॥ 24 ॥**

**ಅನುವಾದ- ಯತ್ತು=** ಯಾವ ಕರ್ಮವಾದರೂ **(ಕಾಮೇಪ್ಸುನಾ=)** ಫಲಪ್ರಾಪ್ತಿಯ ಬಯಕೆ ಇರುವವನಿಂದ ಮತ್ತು **(ಸಾಹಂಕಾರೇಣ=)** ನಾನೇ ಕರ್ತೃ ಎಂಬ ಅಭಿಮಾನ ಇರುವವನಿಂದ ಒಬ್ಬನಲ್ಲೇ ಎರಡೂ ಧರ್ಮಗಳಿರಬೇಕು ಎಂಬ ಅರ್ಥದಲ್ಲಿ ಪುನಃ ಶಬ್ದವನ್ನು ಬಳಸಿದ್ದು ಬಹಳ ಆಯಾಸದಿಂದ ಕೂಡಿದ್ದಾಗಿಯೂ ಯಾವುದು ಆಚರಿಸಲ್ಪಡುವುದೊ ಆ ಕರ್ಮ ರಾಜಸ ಎನಿಸುತ್ತೆ.

**ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಮ್ ।**
**ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ ॥ 25 ॥**

**ಅರ್ಥ-** ಮುಂದೆ ಆಗುವ ಅನರ್ಥ, ಹಾನಿ, ಮತ್ತೊಬ್ಬರಿಗಾಗುವ ತೊಂದರೆ,

ಸಾಮರ್ಥ್ಯ- ಇವುಗಳನ್ನೂ ವಿಚಾರ ಮಾಡದೆ ಮಿಥ್ಯಾಜ್ಞಾನದಿಂದ ಮಾಡುವ ಕರ್ಮ ತಾಮಸ ಎನಿಸುತ್ತದೆ.

**ಅನುಬಂಧಂ ಕರ್ಮಾಂತರಮೇವಾನುಬಧ್ಯಮಾನಂ ಕ್ಷಯಂ ನಾಶಂ ಹಿಂಸಾಂ ಪರಪೀಡಾಂ ಚ ಅನವೇಕ್ಷ್ಯ ಪೌರುಷಮಾತ್ಮನಃ ಕರ್ಮಸಾಮರ್ಥ್ಯಂ ಚಾನವೇಕ್ಷ್ಯ ಅವಿಮೃಶ್ಯ ಮೋಹಾದಹಂಕರ್ತೇತಿ ಮಿಥ್ಯಾಜ್ಞಾನಾದ್ಯತ್ ಕರ್ಮಾರಭ್ಯತೇ ತತ್ತಾಮಸಮುಚ್ಯತ ಇತ್ಯರ್ಥಃ ॥ 25 ॥**

**ಅನುವಾದ- ಅನುಬಂಧಂ**= ಮುಂದೆ ಆಗುವ ದುಷ್ಪರಿಣಾಮವನ್ನು ,**ಕ್ಷಯಂ**= ನಾಶವನ್ನು, ಮತ್ತು **ಹಿಂಸಾಂ**= ಮತ್ತೊಬ್ಬರಿಗಾಗುವ ಪೀಡೆಯನ್ನು ವಿಚಾರಮಾಡದೆ, ಮತ್ತು, **ಪೌರುಷಂ**= ತನ್ನ ಸಾಮರ್ಥ್ಯವನ್ನು , **ಅನವೇಕ್ಷ್ಯ**= ವಿಮರ್ಶಿಸದೆ, **ಮೋಹಾತ್**= ನಾನೇ ಕರ್ತೃ ಎಂಬ ತಪ್ಪು ತಿಳುವಳಿಕೆಯಿಂದ ಯಾವ ಕರ್ಮ ಮಾಡಲ್ಪಡುವುದೋ ಅದು ತಾಮಸ ಎನಿಸುವುದು ಎಂದರ್ಥ. ॥ 25 ॥

## ತ್ರಿವಿಧ ಕರ್ತೃಗಳ ನಿರೂಪಣೆ

**ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥ 26 ॥**

**ಅರ್ಥ-** ಫಲಸ್ನೇಹ ಇಲ್ಲದ, ನಾನೇ ಸ್ವತಂತ್ರನೆಂದು ಹೇಳದ, ಧೈರ್ಯ-ಉತ್ಸಾಹಗಳಿಂದ ಕೂಡಿದ, ಫಲಸಿದ್ಧ ಆದರೂ ಆಗದಿದ್ದರೂ ಸಂತೋಷ-ದುಃಖಗಳನ್ನು ಅನುಭವಿಸಿದ ಕರ್ತೃವು ಸಾತ್ವಿಕ ಎನಿಸುವನು.

**ಪ್ರಾಕ್ ಪ್ರತಿಜ್ಞಾತಂ ಗುಣಕೃತಕರ್ತೃತ್ರೈವಿಧ್ಯಂ ಆಹ- ಮುಕ್ತೇತ್ಯಾದಿ ತ್ರಿಭಿಃ ॥ ಮುಕ್ತಸಂಗಃ ಫಲಸ್ನೇಹಹೀನಃ, ಸರ್ವಸ್ಯ ಭಗವದಧೀನತ್ವನಿಶ್ಚಯಾದೇವಾಹಂ ಕರ್ತೇತಿ ನ ವದತೀತ್ಯನಹಂವಾದೀ । ಆತ್ಮಕರ್ತೃತ್ವಾಭಿಮಾನಹೀನ ಇತಿ ಯಾವತ್। ಧೃತಿಃ ಕರ್ಮಣ್ಯವರ್ಜನೀಯದುಃಖಸಹನಮ್ । ಉತ್ಸಾಹಃ ಕರ್ಮಕಾತರತಾ । ತಾಭ್ಯಾಂ ಸಮನ್ವಿತಃ ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಫಲಸ್ಯ ಸಿದ್ಧಾವಸಿದ್ಧೌ ವಾ ಹರ್ಷವಿಷಾದಹೀನಃ ಸ ಕರ್ತಾ ಸಾತ್ತ್ವಿಕ ಉಚ್ಯತ ಇತ್ಯರ್ಥಃ ॥ 26 ॥**

**ಅನುವಾದ-** ಹಿಂದೆ (18-19) ಪ್ರತಿಜ್ಞೆ ಮಾಡಿದ ಸತ್ವಾದಿಗುಣಗಳಿಂದಾದ ಕರ್ತೃಗಳ ತ್ರೈವಿಧ್ಯವನ್ನು ಹೇಳುತ್ತಾನೆ- **ಮುಕ್ತಸಂಗಃ** ಇತ್ಯಾದಿ ಮೂರು ಶ್ಲೋಕಗಳಿಂದ. **ಮುಕ್ತಸಂಗಃ**=

ಕರ್ಮಫಲದಲ್ಲಿ ಆಸಕ್ತಿ ಇಲ್ಲದವನು. **ಅನಹಂವಾದೀ**= ಸಕಲವೂ ಭಗವದಧೀನ ಎಂಬ ನಿಶ್ಚಯ ಇರುವುದರಿಂದಲೇ, **ಅಹಂ ಕರ್ತಾ** (ನಾನು ಕರ್ತಾ) ಎಂದು ಹೇಳದವನು. ತನ್ನ ಕರ್ತೃತ್ವಾಭಿಮಾನ ಇಲ್ಲದವನು ಎಂದು ಅಭಿಪ್ರಾಯ. **ಧೃತಿಃ**= ಕರ್ಮದಲ್ಲಿ ಅನಿವಾರ್ಯವಾ ಬರುವ ದುಃಖಗಳನ್ನು ಸಹಿಸುವಿಕೆ. **ಉತ್ಸಾಹಃ** = ಕರ್ಮ ಮಾಡಲು ಕಾತುರತೆ. ಇವೆರಡರಿಂ ಕೂಡಿದವನು (**ಧೃತ್ಯುತ್ಸಾಹಸಮನ್ವಿತಃ**) **ಸಿದ್ಧ್ಯಸಿದ್ಧ್ಯೋಃ ನಿರ್ವಿಕಾರಃ** = ಫಲ ಸಿದ್ಧಿಸಿದರೂ ಸಿದ್ಧಿಸದಿದ್ದರೂ ಸಂತೋಷ ಬೇಸರಗಳು ಇಲ್ಲದವನು. ಅಂತಹ ಕರ್ತಾ ಸಾತ್ವಿಕ ಎನಿಸುತ್ತಾನೆ - ಎಂದರ್ಥ. ॥ 26 ॥

**ರಾಗೀ ಕರ್ಮಫಲಪ್ರೇಪ್ಸುಃ ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ 27 ॥**

**ಅರ್ಥ**- ಕೀರ್ತ್ಯಾದಿಗಳನ್ನು ಬಯಸುವ, ಕರ್ಮಫಲದ ಬಯಕೆ ಇರುವ, ಜಿಪುಣ ಪರಹಿಂಸಕ, (ಬಳಸುವ ವಸ್ತುಗಳಲ್ಲಿ) ಶುದ್ಧಿ ಸಂಪಾದಿಸದ, ಕಾರ್ಯಸಿದ್ಧಿಸಿದಾಗ ಸಂತೋಷ ವನ್ನೂ ಸಿದ್ಧಿಸದಾಗ ದುಃಖವನ್ನೂ ಅನುಭವಿಸುವ ಕರ್ತೃ ರಾಜಸ ಎನಿಸುವನು.

ರಾಗೀ **ಕೀರ್ತ್ಯಾದಿಕಾಮಃ । ಕರ್ಮಫಲಪ್ರಾಪ್ತೀಚ್ಛಾವಾನ್ । ಲುಬ್ಧಃ ಕರ್ಮಣ್ಯಪೇಕ್ಷಿತದ್ರವ್ಯವ್ಯಯಹೀನಃ । ಹಿಂಸಾತ್ಮಕಃ ಹಿಂಸಾಸ್ವಭಾವಃ । ಅಶುಚಿಃ ದ್ರವ್ಯಾದಿಷು ಶುದ್ಧಿಹೀನಃ । ಕಾರ್ಯಸಿದ್ಧ್ಯಸಿದ್ಧ್ಯೋಃ ಹರ್ಷಶೋಕಾನ್ವಿತಃ ಸ ಕರ್ತಾ ರಾಜಸಃ ॥ 27 ॥**

**ಅನುವಾದ**- ರಾಗೀ= ಕೀರ್ತಿ-ಲಾಭಗಳನ್ನು ಬಯಸುವವನು. (**ಕರ್ಮಫಲ ಪ್ರೇಪ್ಸುಃ**=) ಕರ್ಮಫಲಪ್ರಾಪ್ತಿಯ ಬಯಕೆ ಇರುವವನು. **ಲುಬ್ಧಃ**= ಕರ್ಮಕ್ಕೆ ಬೇಕಾದ ಹಣದ ಖರ್ಚು ಮಾಡದವನು. **ಹಿಂಸಾತ್ಮಕಃ**= ಹಿಂಸಿಸುವ ಸ್ವಭಾವದವನು. **ಅಶುಚಿಃ**= ಪದಾರ್ಥ-ದೇಹ-ಸ್ಥ ಮೊದಲಾದವುಗಳಲ್ಲಿ ಶುದ್ಧಿ ಇಲ್ಲದವನು. **ಹರ್ಷಶೋಕಾನ್ವಿತಃ**= ಸುಖ-ದುಃಖಗಳಿರುವವನು ಇದಕ್ಕೆ ಮೊದಲು **ಕಾರ್ಯಸಿದ್ಧ್ಯಸಿದ್ಧ್ಯೋಃ** ಎಂಬುದನ್ನು ಇಟ್ಟುಕೊಳ್ಳಬೇಕು. ಅಂತಹ ಕರ್ತೃವ ರಾಜಸನು. ॥ 27 ॥

**ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ ।**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ 28 ॥**

**ಅರ್ಥ** - ಯೋಗಗಳಿಲ್ಲದ, ಭಕ್ತಿಹೀನ, ಅವಿನೀತ, ಗೂಢದ್ವೇಷದಿಂದ ಕೆಲಸ ಮಾಡುವ

ನೀಚಕೆಲಸಗಳನ್ನು ಮಾಡುವ, ಸೋಮಾರಿ, ಮನೋದೌರ್ಬಲ್ಯವಿರುವ, ಕೆಲಸಗಳನ್ನು ಮುಂದೆ ಹಾಕುವ ಕರ್ತಾ ತಾಮಸ ಎನಿಸುವನು.

**ಅಯುಕ್ತಃ ಭಗವದರ್ಪಣಾದಿಯೋಗರಹಿತಃ । ಪ್ರಕೃಷ್ಟೋಽಕೃತಃ ಪ್ರಾಕೃತಃ । 'ಭಗವದ್ಭಕ್ತಿಸಾಮರ್ಥ್ಯಾತ್ಪ್ರಕೃಷ್ಟೋ ನ ಕೃತೋ ಹಿ ಯಃ । ಸ ಪ್ರಾಕೃತ' ಇತಿ (ಶಬ್ದತತ್ತ್ವೇ) ಸ್ಮೃತೇಃ । ಸ್ತಬ್ಧಃ ಆತ್ಮಸಮ್ಭಾವನಯಾ ಕ್ವಾಪ್ಯನಮ್ರಃ । ಶಠಃ ಗೂಢದ್ವೇಷೇಣ ಕರ್ಮಕಾರೀ । ನೈಷ್ಕೃತಿಕೋ ನೀಚಕರ್ಮ ಕೃತ್ । ಪ್ರಾಪ್ತ-ಕಾಲೇऽಪಿ ಕರ್ಮಣ್ಯುದಾಸೀನೋऽಲಸಃ । ವಿಷಾದೀ ಸರ್ವವ್ಯಾಪಾರೋಪ-ರತಿಹೇತುಮನೋದೌರ್ಬಲ್ಯವಾನ್ । ಪ್ರಾಪ್ತೇऽಪಿ ಕರ್ಮಕಾಲೇ ಪಶ್ಚಾತ್ ಕುರ್ಯಾಮಿತಿ ಧ್ಯಾಯನ್ವಾ, ಪರಕೃತದೋಷಂ ದೀರ್ಘಕಾಲಕೃತಮಪ್ಯನುಚಿತಂ ಸೂಚಯನ್ವಾ ದೀರ್ಘಸೂತ್ರೀ । ಸ ತಾಮಸ ಕರ್ತೇತ್ಯರ್ಥಃ ॥ 28 ॥**

**ಅನುವಾದ- ಅಯುಕ್ತಃ**= ಭಗವದರ್ಪಣ-ಜ್ಞಾನ-ಭಕ್ತಿ ಮುಂತಾದ ಯೋಗಗಳಿಲ್ಲದವನು. **ಪ್ರಕೃಷ್ಟಃ ಅಕೃತಃ**= **ಪ್ರಾಕೃತಃ** ಎಂದು ವಿಗ್ರಹ. 'ಭಗವದ್ಭಕ್ತಿಯ ಶಕ್ತಿಯಿಂದ ಯಾರು ಪ್ರಕೃಷ್ಟ (ಉತ್ತಮ)ನಾಗಿ ಮಾಡಲ್ಪಟ್ಟಿಲ್ಲವೋ ಅವನು ಪ್ರಾಕೃತ' ಎಂಬ (ಶಬ್ದತತ್ತ್ವ) ಸ್ಮೃತಿಯ ಅನುಸಾರ, **ಪ್ರಾಕೃತ** = ಭಗವದ್ಭಕ್ತಿಯಿಂದ ಉತ್ತಮನಾಗದವನು. **ಸ್ತಬ್ಧಃ** = ತಾನು ಶ್ರೇಷ್ಠನೆಂಬ ಭಾವನೆಯಿಂದ ಯಾರಿಗೂ ಬಾಗದವನು. **ಶಠಃ**= ಹೊರಗೆ ಕಾಣದ ದ್ವೇಷದಿಂದ ಕೆಲಸ ಮಾಡುವವನು. **ನೈಕೃತಿಕಃ**= ನೀಚಕೆಲಸಗಳನ್ನು ಮಾಡುವವನು. **ಅಲಸಃ**= ಸೋಮಾರಿ= ಅದರ ಕಾಲ ಬಂದಾಗಲೂ ಆ ಕರ್ಮದ ಬಗ್ಗೆ ಉದಾಸೀನನಾದನು. **ವಿಷಾದೀ**= ಎಲ್ಲವ್ಯಾಪಾರಗಳ ಸ್ಥಗಿತತೆಗೆ ಕಾರಣವಾದ ಮನೋದೌರ್ಬಲ್ಯ ಇರುವವನು. **ದೀರ್ಘಸೂತ್ರೀ**= ಕೆಲಸ ಮಾಡಬೇಕಾದ ಸಮಯಬಂದರೂ ಆಮೇಲೆ ಮಾಡಿದರಾಯಿತೆಂದು ವಿಚಾರ ಮಾಡುವವನು. ಅಥವಾ, ಹಿಂದೆ ಯಾವಾಗಲೋ ಮಾಡಿದ್ದರೂ, ಈಗ ನೆನಪಿಸಲು ಅಯೋಗ್ಯವಾಗಿದ್ದರೂ, ಮತ್ತೊಬ್ಬರ ನ್ಯೂನತೆಗಳನ್ನು ಎತ್ತಿ ತೋರಿಸುವವನು, ಅಂಥವನು ತಾಮಸ. ॥ 28 ॥

## ತ್ರಿವಿಧ ಬುದ್ಧಿ - ಧೈರ್ಯಗಳ ನಿರೂಪಣೆ

**ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥ 29 ॥**

**ಅರ್ಥ**- ಹೇ ಅರ್ಜುನ ! ನಾನು ನಿನಗೆ ಬಿಡಿಸಿ ಹೇಳುವ, ಸತ್ತ್ವ-ರಜಸ್-ತಮೋಗುಣಗಳಿಂದ ಮೂರು ವಿಧವಾದ ಬುದ್ಧಿ ಮತ್ತು ಧೈರ್ಯಗಳ ಪ್ರಭೇದವನ್ನು ಸಂಪೂರ್ಣವಾಗಿ ಕೇಳು.

ಏವಂ ಜ್ಞಾನಕರ್ಮಕರ್ತೃಣಾಂ ಗುಣಕೃತಂ ತ್ರೈವಿಧ್ಯಂ ನಿರೂಪ್ಯಾಧುನಾ ಬುದ್ಧೇಃ ಧೃತೇಶ್ಚ ಗುಣತಃ ತ್ರೈವಿಧ್ಯಂ ಪ್ರತಿಜ್ಞಾಪೂರ್ವಮಾಹ - **ಬುದ್ಧೇರಿತ್ಯಾದಿಭಿಃ ಸಪ್ತಭಿಃ** ॥ **ಗುಣತಃ** ಸತ್ತ್ವಾದಿಗುಣಭೇದತೋ ನಿಮಿತ್ತಾತ್ತ್ರಿವಿಧಮೇವ ಬುದ್ಧೇರ್ಭೇದಂ ಧೃತೇಶ್ಚ ಭೇದಂ ಪೃಥಕ್ತ್ವೇನ ಮಯಾ ಪ್ರೋಚ್ಯಮಾನಮಶೇಷೇಣ ಶೃಣು । ಶ್ರುತ್ವಾ ನಿಷ್ಠಾಂ ಕುರು ॥ 29 ॥

**ಅನುವಾದ-** ಹೀಗೆ (ಇಲ್ಲಿಯವರೆಗೆ) ಜ್ಞಾನ-ಕರ್ಮ-ಕರ್ತೃಗಳ ಗುಣಗಳಿಂದಾದ ತ್ರೈವಿಧ್ಯವನ್ನು ಹೇಳಿ, ಈಗ, ಬುದ್ಧಿ ಮತ್ತು ಧೈರ್ಯದ ಗುಣಗಳಿಂದಾದ ತ್ರೈವಿಧ್ಯವನ್ನು ಪ್ರತಿಜ್ಞೆ ಮಾಡಿ ಹೇಳುತ್ತಾನೆ – **ಬುದ್ಧೇಃ** ಮುಂತಾದ ಏಳು ಶ್ಲೋಕಗಳಿಂದ. **ಗುಣತಃ**= ಸತ್ತ್ವಾದಿಗುಣಗಳ ಪ್ರಬೇಧದ ನಿಮಿತ್ತದಿಂದ, (ಧೃತೇಶ್ಚೈವ ಎಂಬಲ್ಲಿನ) ಏವಕಾರವನ್ನು ತ್ರಿವಿಧಂ ಎಂಬುದರ ಜೊತೆ ಸೇರಿಸಬೇಕು, **ತ್ರಿವಿಧಮೇವ**= ಮೂರುವಿಧವೇ ಆದ, ಬುದ್ಧಿಯ ಪ್ರಭೇದವನ್ನು ಮತ್ತು ಧೈರ್ಯದ ಪ್ರಭೇದವನ್ನು ಪ್ರತ್ಯೇಕವಾಗಿ ನನ್ನಿಂದ ಹೇಳಲ್ಪಡುವುದನ್ನು ಸಂಪೂರ್ಣವಾಗಿ ಕೇಳು. ಕೇಳಿ ನಿಷ್ಠೆ ಮಾಡು. ॥ 29 ॥

**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸ ಪಾರ್ಥ ಸಾತ್ತ್ವಿಕೀ ॥ 30 ॥**

**ಅರ್ಥ-** ಹೇ ಅರ್ಜುನ ! ಯಾವ ಬುದ್ಧಿಯೆಂಬ ಅಂತಃಕರಣವು ಸಂಸಾರಕಾರಣವಾದ ಧರ್ಮವನ್ನೂ ಮೋಕ್ಷಕಾರಣವಾದ ಧರ್ಮವನ್ನೂ, ಕರ್ತವ್ಯ-ಅಕರ್ತವ್ಯಗಳನ್ನೂ ಭಯ-ಭಯಾಭಾವಗಳನ್ನು, ಬಂಧ-ಮೋಕ್ಷಗಳ ಪ್ರಕಾರವನ್ನೂ ತಿಳಿಸುವುದೋ ಅದು ಸಾತ್ವಿಕ.

ಬುದ್ಧೇರ್ಭೇದಮಾಹ- **ಪ್ರವೃತ್ತಿಮಿತ್ಯಾದಿತ್ರಿಭಿಃ** ॥ **ಪ್ರವೃತ್ತಿಂ** ಸಂಸಾರಹೇತುಂ ಪ್ರವೃತ್ತಿಹೇತುಂ ಧರ್ಮಂ ಚ ನಿವೃತ್ತಿಂ ನಿವೃತ್ತಿಹೇತುಧರ್ಮಂ ಚ । ಕಾರ್ಯಾ-ಕಾರ್ಯೇ ಕರ್ತವ್ಯಮಕರ್ತವ್ಯಂ ಚ । ತನ್ನಿಮಿತ್ತಭಯಾಭಯೇ ಬಂಧಮೋಕ್ಷ-ಪ್ರಕಾರಂ ಚ ಯಾ ಬುದ್ಧಿರ್ವೇತ್ತಿ ಸಾ ಸಾತ್ತ್ವಿಕೀತ್ಯರ್ಥಃ । ಕರ್ತೃತ್ವೋಪಚಾರಾದ್ಯಾ ವೇತ್ತೀತ್ಯುಕ್ತಮ್ । ಯಯಾ ವೇತ್ತಿ ಪುಮಾನಿತ್ಯರ್ಥಃ ॥ 30 ॥

**ಅನುವಾದ-** ಬುದ್ಧಿಯ ಪ್ರಭೇದವನ್ನು ಹೇಳುತ್ತಾನೆ- **ಪ್ರವೃತ್ತಿಂ** ಮುಂತಾದ ಮೂರು ಶ್ಲೋಕಗಳಿಂದ. **ಪ್ರವೃತ್ತಿಂ**= ಸಂಸಾರಕಾರಣವಾದ ಧರ್ಮವನ್ನು, (**ನಿವೃತ್ತಿಂ**=) ಮೋಕ್ಷಕಾರಣವಾದ ಧರ್ಮವನ್ನು . **ಕಾರ್ಯಾಕಾರ್ಯೇ**= ಕರ್ತವ್ಯ ಮತ್ತು ಅಕರ್ತವ್ಯಗಳನ್ನು, (**ಭಯಾ-ಭಯೇ**= ಕರ್ತವ್ಯಾಕರ್ತವ್ಯಗಳಿಗೆ ಕಾರಣವಾದ ಭಯ ಮತ್ತು ಅಭಯಗಳನ್ನು. **ಬಂಧ**

**ಮೋಕ್ಷಂ**= ಸಂಸಾರ ಬಂಧದ ರೀತಿಯನ್ನು ಮೋಕ್ಷದ ಬಗೆಯನ್ನೂ ಯಾವ ಬುದ್ಧಿಯು **ವೇತ್ತಿ**= ತಿಳಿಯುವುದೋ ಅದು ಸಾತ್ವಿಕ- ಎಂದರ್ಥ. ಕಾರಣವಾದ ಬುದ್ಧಿಯನ್ನು ಕರ್ತೃ ಎಂದು ಔಪಚಾರಿಕ ವಾಗಿ ಗೌಣವೃತ್ತಿಯಿಂದ (1) ಹೇಳಿದ್ದು '**ಯಾ ವೇತ್ತಿ**' ಎಂದು. 'ಯಾವ ಬುದ್ಧಿಯಿಂದ ಮನುಜನು ತಿಳಿಯುತ್ತಾನೋ' ಎಂದು ಅದರ ಅರ್ಥ. ಬುದ್ಧಿಯು ತಿಳಿಯುತ್ತದೊ ಎಂದಲ್ಲ. ।। 30 ।।

**ವಿವರಣೆ**- (1) ಲಕ್ಷಣಾದಂತೆ ಗೌಣೀ ಎಂಬುದು ಒಂದು ಶಬ್ದದ ಅಮುಖ್ಯವೃತ್ತಿ- '**ಉಪಲಕ್ಷಣಾ ಚ ಗೌಣೀ ಚ ತಿಸ್ರಃ ಶಬ್ದಸ್ಯ ವೃತ್ತಯಃ**' ಎಂಬ ನವಿಲಕ್ಷಣತ್ವಾಧಿಕರಣ (ಬ್ರ.ಸೂ. 2-1-2) ಅನುವ್ಯಾಖ್ಯಾನದಲ್ಲಿ ಮತ್ತು ಅದರ ಸುಧಾವ್ಯಾಖ್ಯಾನದಲ್ಲಿ, ತರ್ಕತಾಂಡವದಲ್ಲೂ ಇದರ ಬಗ್ಗೆ ವಿವರಿಸಿದೆ. ಒಂದು ಶಬ್ದವು ತನ್ನ ಅರ್ಥದ ಸಾದೃಶ್ಯವಿರುವ ವಸ್ತುವನ್ನು ತಿಳಿಸಲು ಕಾರಣವಾದ ವೃತ್ತಿ ಗೌಣೀ. ಇದೇ ಉಪಚಾರ. **ಉದಾ** : '**ಸಿಂಹೋ ಮಾಣವಕಃ**' 'ಈ ಬಾಲಕ ಸಿಂಹ' ಇಲ್ಲಿ ಸಿಂಹ ಎಂದರೆ ಸಿಂಹಸದೃಶ ಎಂದರ್ಥ. ಪ್ರಕೃತ, ಕರಣವಾದ ಬುದ್ಧಿಯನ್ನು ಕರ್ತೃ ಎಂದು ಹೇಳಿದ್ದು ಔಪಚಾರಿಕವಾಗಿ. ಪ್ರತಿದಿನ ಹಸಿ ಕಟ್ಟಿಗೆಯಿಂದ ಕಷ್ಟ ಪಡುತ್ತಿದ್ದ ಅಡುಗೆ ಯವನೊಬ್ಬ ಒಂದು ದಿನ ಚೆನ್ನಾಗಿ ಒಣಗಿದ ಕಟ್ಟಿಗೆ ಸಿಕ್ಕಾಗ 'ಇವತ್ತು ಕಟ್ಟಿಗೆಯೇ ಅಡುಗೆ ಮಾಡಿತು' ಎನ್ನುವುದು ಕರಣವನ್ನು ಕರ್ತೃವಾಗಿ ಹೇಳುವುದಕ್ಕೆ ಮತ್ತೊಂದು ಉದಾಹರಣೆ- 'ಕಟ್ಟಿಗೆಯಿಂದ ಅಡುಗೆ ಮಾಡಿದೆ' ಎನ್ನುವುದರ ಬದಲು ಇಲ್ಲಿ 'ಕಟ್ಟಿಗೆಯು ಮಾಡಿತು' ಎಂದು ಕರ್ತೃತ್ವವನ್ನು ಹೇಳಿದೆ. ಕರ್ತೃವಿಗೆ ಹೇಗೆ ಕ್ರಿಯೆಯಲ್ಲಿ ಪ್ರಾಶಸ್ತ್ಯವಿದೆಯೊ ಅದರಂತೆ ಕರಣಕ್ಕೂ ತನ್ನ ಕ್ರಿಯೆಯಲ್ಲಿ ಪ್ರಾಶಸ್ತ್ಯವಿದ್ದು ಅದರ ಅತಿಶಯವನ್ನು ಸೂಚಿಸಲು ಇಂಥ ಪ್ರಯೋಗ ನಡೆಯುತ್ತದೆ. ಈ ಪ್ರಾಶಸ್ತ್ಯವೇ ಕರ್ತೃ-ಕರಣಗಳಿಗೆ ಸಾದೃಶ್ಯ ತರುವುದು. (ಈ ಬಗ್ಗೆ ತತ್ತ್ವೋದ್ಯೋತ ಎಂಬ ಪ್ರಕರಣಗ್ರಂಥದಲ್ಲಿ ಆಚಾರ್ಯರು ಪ್ರಯೋಗಿಸಿರುವ '**ಮಿಥ್ಯಾಶಬ್ದಃ ವದತಿ**' ಎಂಬ ಪ್ರಯೋಗಕ್ಕೆ ಟೀಕಾಕೃತ್ಪಾದರು ನೀಡಿರುವ ವಿವರಣೆಯನ್ನು ಕಾಣಬಹುದು)

**ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।**
**ಅಯಥಾವತ್ ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ।। 31 ।।**

**ಅರ್ಥ**- ಹೇ ಅರ್ಜುನ, ಯಾವ ಬುದ್ಧಿಯೆಂಬ ಅಂತಃಕರಣದಿಂದ ಮನುಷ್ಯನು ಧರ್ಮ, ಅಧರ್ಮ, ಕರ್ತವ್ಯ ಮತ್ತು ಅಕರ್ತವ್ಯಗಳನ್ನು ಪೂರ್ತಿಯಾಗಿ ಇದ್ದ ಹಾಗೆ ಗ್ರಹಿಸನೊ,ಅಂದರೆ, ಕೆಲವಂಶದಲ್ಲಿ ಅಯಥಾರ್ಥ ರೂಪವಾಗಿ ತಿಳಿವನೋ ಆ ಬುದ್ಧಿ ರಾಜಸ.

**ಯಯೇತಿ ।। ಧರ್ಮಾದಿಕಂ ಯಯಾ ಬುದ್ಧ್ಯಾ ಅಯಥಾವತ್ಪ್ರಜಾನಾತಿ**

**ನಿಯಮೇನ ಯಥಾವನ್ನ ಜಾನಾತಿ । ಕಿಂಚದ್ಯಥಾವತ್ಕಿಂಚದಯಥಾವಜ್ಜಾನಾತೀತಿ ಯಾವತ್ । ಯಾಥಾರ್ಥ್ಯನಿಯಮಹೀನಾ ಯಾ ಬುದ್ಧಿಃ ಸಾ ರಾಜಸೀತ್ಯರ್ಥಃ । ॥ 31 ॥**

**ಅನುವಾದ**– ಯಯಾ ಎಂದು ಧರ್ಮಾದಿಗಳನ್ನು ಯಾವ ಬುದ್ಧಿಯಿಂದ, **ಅಯಥಾವತ್ ಪ್ರಜಾನಾತಿ** = ಯಾವಾಗಲೂ ಎಲ್ಲವನ್ನೂ ಇದ್ದಹಾಗೆ ಗ್ರಹಿಸನೊ, ಅಂದರೆ, ಕೆಲವನ್ನು ಇದ್ದಹಾಗೆ ಕೆಲವನ್ನು ಇಲ್ಲದ ಹಾಗೆ ತಿಳಿವನೋ ಎಂದರ್ಥ. (ಒಟ್ಟಿನಲ್ಲಿ) ಯಥಾರ್ಥತೆಯ ನಿಯಮ (ಯಾವಾಗಲೂ ಯಥಾರ್ಥವಾಗಿರುವಿಕೆ) ಇಲ್ಲದ ಬುದ್ಧಿ ರಾಜಸ ಎಂದರ್ಥ. ॥ 31 ॥

**ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾಽಽವೃತಾ ।**
**ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥ 32 ॥**

**ಅರ್ಥ**– ಹೇ ಅರ್ಜುನ ! ಯಾವ ಬುದ್ಧಿ ಅಧರ್ಮವನ್ನು ಧರ್ಮವೆಂದು ಗ್ರಹಿಸುವುದೋ ಅಜ್ಞಾನದಿಂದ ಆವೃತವಾಗಿ ಎಲ್ಲ ವಿಷಯಗಳನ್ನು ಇರುವುದಕ್ಕಿಂತ ಬೇರೆ ರೀತಿಯಾಗಿ ಗ್ರಹಿಸುವುದೊ ಅದು ತಾಮಸ.

**ಯಾ ಚ ಬುದ್ಧಿರಧರ್ಮಂ ಧರ್ಮಮಿತಿ ಮನ್ಯತೇ । ನೈತಾವನ್ಮಾತ್ರಂ ಕಿಂತು ತಮಸಾವೃತಾ ಅಜ್ಞಾನೇನಾವೃತಾ ಸತೀ ಸರ್ವಾರ್ಥಾನ್ವಿಪರೀತಾನ್ । ಯೈರಾ-ಕಾರೈರರ್ಥಾಃ ವರ್ತಂತೇ ತತೋ ವಿಪರೀತೈರಸತ್ಯತ್ವಾನೀಶ್ವರತ್ವಾ ಪರಾಧೀನತ್ವ-ಕ್ಷಣಿಕತ್ವಾದಿ ಪ್ರಕಾರೈಶ್ಚ ಮನ್ಯತೇ ಸಾ ಬುದ್ಧಿಃ ತಾಮಸೀತ್ಯರ್ಥಃ ॥ 32 ॥**

**ಅನುವಾದ**– ಇನ್ನು ಯಾವ ಬುದ್ಧಿ ಅಧರ್ಮವನ್ನು ಧರ್ಮವೆಂದು ಗ್ರಹಿಸುವುದೋ, ಇಷ್ಟೇ ಅಲ್ಲ, ಕಿಂತು, **ತಮಸಾ ಆವೃತಾಸತೀ**= ಅಜ್ಞಾನದಿಂದ ಆವರಿಸಲ್ಪಟ್ಟು , **ಸರ್ವಾರ್ಥಾನ್ ವಿಪರೀತಾನ್**= ಯಾವ ಧರ್ಮಗಳಿಂದ ಕೂಡಿ ಪದಾರ್ಥಗಳು ಇರುವವೊ ಅದಕ್ಕಿಂತ ವಿರುದ್ಧವಾದ, ಪ್ರಕಾರಗಳಿಂದ ಅಂದರೆ ಅಸತ್ಯಗಳು, ಈಶ್ವರನಿಲ್ಲದವು, ಪರಾಧೀನವಲ್ಲದವು ಕ್ಷಣಿಕಗಳು, ಕಲ್ಪಿತಗಳು ಎಂದೆಲ್ಲ ಗ್ರಹಿಸುವುದೊ ಆ ಬುದ್ಧಿ ತಾಮಸ ಎಂದರ್ಥ. ॥ 32 ॥

## ಧೈರ್ಯದ ಮೂರು ಪ್ರಭೇದಗಳ ವಿವರಣೆ

**ಧೃತ್ಯಾ ಯಯಾ ಧಾರಯತೇ ಮನಃ ಪ್ರಾಣೇಂದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥ 33 ॥**

**ಅರ್ಥ**– ಹೇ ಅರ್ಜುನ ! ಮನುಷ್ಯನು ಭಗವದ್ಭಕ್ತಿ ಎಂಬ ಯೋಗದಿಂದ ಕೂಡಿದ

ಶಾಸ್ತ್ರವಿಹಿತ ವಿಷಯಗಳಲ್ಲೇ ಪ್ರವೃತ್ತವಾದ ಯಾವ ಧೈರ್ಯದಿಂದ ಮನಸ್ಸು, ಉಸಿರು ಮತ್ತು ಇಂದ್ರಿಯಗಳ ಪ್ರವೃತ್ತಿಗಳನ್ನು ನಿಗ್ರಹಿಸುವನೊ ಅದು ಸಾತ್ವಿಕಧೈರ್ಯ.

**ಪ್ರತಿಜ್ಞಾತಂ ಧೃತೇಸ್ತ್ರೈವಿಧ್ಯಮಾಹ- ಧೃತ್ಯೇತ್ಯಾದಿತ್ರಿಭಿಃ ॥ ಅವ್ಯಭಿಚಾರಿಣ್ಯಾ ವಿಹಿತವಿಷಯಯಾ । ಯೋಗೇನ ಭಗವದ್ಭಕ್ತಿಯೋಗೇಣ ಯುಕ್ತಯೇತಿ ಶೇಷಃ । ಯಯಾ ಧೃತ್ಯಾ ಮನಸಃ ಪ್ರಾಣಸ್ಯೇಂದ್ರಿಯಾಣಾಂ ಚ ಕ್ರಿಯಾ ಧಾರಯತೇ । ಸಾ ಧೃತಿಃ ಸಾತ್ತ್ವಿಕೀತ್ಯರ್ಥಃ ॥ 33 ॥**

**ಅನುವಾದ** – ಹಿಂದೆ (18–29) ಪ್ರತಿಜ್ಞೆ ಮಾಡಿದ ಧೈರ್ಯದ (1) ಮೂರು ವಿಧಗಳನ್ನು ಧೃತ್ಯಾ ಇತ್ಯಾದಿ ಮೂರು ಶ್ಲೋಕಗಳಿಂದ ಹೇಳುತ್ತಾನೆ. **ಅವ್ಯಭಿಚಾರಿಣ್ಯಾ**= ಶಾಸ್ತ್ರವಿಹಿತವಿಷಯ ಗಳಿರುವಂಥ, **ಯೋಗೇನ**= ಭಗವದ್ಭಕ್ತಿ ಎಂಬ ಯೋಗದಿಂದ, ಯುಕ್ತಯಾ ಎಂದು ಶೇಷ ಪೂರಣ ಮಾಡಬೇಕು. **ಯುಕ್ತಯಾ**= ಕೂಡಿದ, ಯಾವ ಧೈರ್ಯದಿಂದ ಮನಸ್ಸು, ಉಸಿರು ಮತ್ತು ಇಂದ್ರಿಯಗಳ ಚಟುವಟಿಕೆಗಳನ್ನು ನಿಗ್ರಹಿಸುವನೋ ಅದು ಸಾತ್ವಿಕ ಧೈರ್ಯ. ॥33 ॥

**ವಿವರಣೆ**– (1) ಕಠಿಣ ಪರಿಸ್ಥಿತಿಗಳಲ್ಲಿ ಕಂಗೆಡದಿರುವ ಮನೋಬಲವು ಧೈರ್ಯ ಎನಿಸುತ್ತದೆ.

**ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ ।**
**ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥ 34 ॥**

**ಅರ್ಥ**- (ತು=) ಮತ್ತು ಎಲೈ ಅರ್ಜುನ, (ಮನುಷ್ಯನು) ಯಾವ ಧೈರ್ಯದಿಂದ ಧರ್ಮ–ಅರ್ಥ–ಕಾಮಗಳನ್ನು ಧರಿಸುತ್ತಾನೆಯೋ, ನನ್ನದೆಂಬ ಭಾರೀ ಅಭಿಮಾನದಿಂದ ಫಲವನ್ನು ಬಯಸುವನೋ ಆ ಧೈರ್ಯ ರಾಜಸ.

**ಯಯಾ ಧೃತ್ಯಾ ಧರ್ಮಕಾಮಾರ್ಥಾಂಧಾರಯತೇ । ಪ್ರಸಂಗೇನ ಪ್ರಕೃಷ್ಟೇನ ಕರ್ಮಣಿ ಮದೀಯತಾಸ್ನೇಹೇನ ಫಲಾಕಾಂಕ್ಷೀ ಧೃತಿಃ ಸಾ ರಾಜಸೀತ್ಯರ್ಥಃ ॥34॥**

**ಅನುವಾದ**– ಯಾವ ಧೈರ್ಯದಿಂದ ಧರ್ಮ– ಕಾಮ – ಅರ್ಥಗಳನ್ನು ಧರಿಸುವನೋ, **ಪ್ರಸಂಗೇನ, ಪ್ರ**= ಪ್ರಕೃಷ್ಟವಾದ, **ಸಂಗೇನ** = ಕರ್ಮದ ವಿಷಯದಲ್ಲಿ ನನ್ನದೆಂಬ ಸ್ನೇಹದಿಂದ, ಫಲವನ್ನು ಬಯಸುವನೋ ಆ ಧೈರ್ಯ ರಾಜಸ ಎಂದರ್ಥ (1) ॥ 34 ॥

**ವಿವರಣೆ**– (1) ಫಲದಲ್ಲಿ ಇದು ನನ್ನದೆಂಬ ಅತಿಸ್ನೇಹ ಬೆಳೆಸಿಕೊಂಡ ವ್ಯಕ್ತಿ ಧರ್ಮ–ಅರ್ಥ–ಕಾಮಗಳ ವಿಷಯದಲ್ಲಿ ಮನಃ–ಪ್ರಾಣ–ಇಂದ್ರಿಯಗಳ ಪ್ರವೃತ್ತಿಯನ್ನು ತನ್ನ ವಶದಲ್ಲಿಟ್ಟುಕೊಳ್ಳಲು ಸಮರ್ಥನಾಗುವನು. ಇಂಥ ಧೈರ್ಯ ರಾಜಸ. (ಈ ಶ್ಲೋಕಕ್ಕೆ ಈ ವಿವರಣೆಯನ್ನು

ಶ್ರೀಹಯವದನ ಪುರಾಣಿಕರು ಅ.ಭಾ.ಮಾ. ಮಂಡಲದ ಸರ್ವಮೂಲ ಅನುವಾದದಲ್ಲಿ ನೀಡಿದ್ದಾರೆ.)

**ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।**
**ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ॥ 35 ॥**

**ಅರ್ಥ**- ಹೇ ಅರ್ಜುನ, ದುರ್ಬುದ್ಧಿಯ ಮನುಷ್ಯನು ಯಾವ ಧೈರ್ಯದಿಂದ ಅತಿಯಾದ ನಿದ್ದೆ-ಹೆದರಿಕೆ-ದುಃಖಗಳನ್ನು, ಮನೋದೌರ್ಬಲ್ಯವನ್ನು ಮತ್ತು ಗರ್ವವನ್ನು ಬಿಡುವುದಿಲ್ಲವೋ ಅದು ತಾಮಸ ಧೈರ್ಯ.

**ಯೋ ದುರ್ಮೇಧಾಃ ದುಷ್ಟಬುದ್ಧಿಃ ಪುರುಷಃ ಯಯಾ ಧೃತ್ಯಾ ಸ್ವಪ್ನಮತೀವ ನಿದ್ರಾಂ ಭಯಂ ಶೋಕಂ ದುಃಖಂ ವಿಷಾದಂ ಮನೋದೌರ್ಬಲ್ಯಂ ಮದಂ ಚ । ಸ್ವಪ್ನಾದ್ಯುಪಲಕ್ಷಿತಂ ಸರ್ವಂ ನಿಷಿದ್ಧಂ ಭಗವದ್ವೇಷಾದಿ ನ ವಿಮುಂಚತಿ ಸಾ ತಾಮಸೀತ್ಯರ್ಥಃ ॥ 35 ॥**

**ಅನುವಾದ**- ಯಾವ, **ದುರ್ಮೇಧಾಃ**= ದುಷ್ಟಬುದ್ಧಿಯ ಮಾನವನು ಯಾವ ಧೈರ್ಯದಿಂದ, **ಸ್ವಪ್ನಂ**= ಅತಿಯಾದ ನಿದ್ದೆಯನ್ನು, ಭಯವನ್ನು , **ಶೋಕಂ**= ದುಃಖವನ್ನು, **ವಿಷಾದಂ**= ಮನೋದೌರ್ಬಲ್ಯವನ್ನು , ಮದವನ್ನೂ , ಸ್ವಪ್ನಾದಿಗಳೊಂದಿಗೆ ಉಪಲಕ್ಷಣವಾಗಿ ಇಟ್ಟು ಕೊಳ್ಳಬೇಕಾದ ಎಲ್ಲ ನಿಷಿದ್ಧವಾದ ಭಗವದ್ವೇಷಾದಿ ದುರ್ಗುಣಗಳನ್ನು ಬಿಡುವುದಿಲ್ಲವೋ ಅದು ತಾಮಸ ಧೈರ್ಯ. ॥ 35 ॥

## ತ್ರಿವಿಧಸುಖಗಳ ನಿರೂಪಣೆ

**ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।**
**ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ ॥ 36 ॥**

**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ॥ 37 ॥**

**ಅರ್ಥ**- ಹೇ ಅರ್ಜುನ ! ಯಾವ ಸುಖ ಬಹುಕಾಲ ಅಭ್ಯಾಸದಿಂದ ಆಸ ಹುಟ್ಟಿಸುವುದೋ, ದುಃಖವನ್ನು ಕೊನೆಗಾಣಿಸುತ್ತದೋ ಅಂಥ ಸುಖದ ಮೂರು ವಿಧಗಳನ ಹೇಳುತ್ತೇನೆ ಕೇಳು. ಅದರಲ್ಲಿ ಮೊದಲ ಸುಖ ಸಾತ್ತ್ವಿಕ. ಅದರ ಲಕ್ಷಣ – ಮೊದಲು ವಿಷದಂ

ಇರುತ್ತದೆ. ಕೊನೆಯಲ್ಲಿ ಅಮೃತಸದೃಶವಾಗಿರುತ್ತದೆ. ಪರಮಾತ್ಮನ ಪ್ರಸಾದದಿಂದ ಮತ್ತು ಬುದ್ಧಿಯು ವಿಷಯದಲ್ಲಿ ಹೋಗದಿರುವುದರಿಂದ ಹುಟ್ಟಿರುತ್ತದೆ.

ಅಥವಾ, ಹೇ ಅರ್ಜುನ ! ಈಗ ಮೂರು ಪ್ರಕಾರದ ಸುಖವನ್ನು ಹೇಳುವೆ ಕೇಳು. ಯಾವ ಸುಖ ಬಹುಕಾಲ ಅಭ್ಯಾಸದಿಂದ ಆಸಕ್ತಿ ಹುಟ್ಟಿಸುವುದೊ, ದುಃಖವನ್ನು ಕೊನೆಗಾಣಿಸುತ್ತದೊ ಅದು ಸಾತ್ವಿಕ ಸುಖ. ಅದು ಮೊದಲು ವಿಷದಂತೆ ಇರುತ್ತದೆ. ಕೊನೆಯಲ್ಲಿ ಅಮೃತ ಸದೃಶವಾಗಿರುತ್ತದೆ. ಪರಮಾತ್ಮನ ಪ್ರಸಾದದಿಂದ ಮತ್ತು ಬುದ್ಧಿಯು ವಿಷಯದಲ್ಲಿ ತೊಡಗದಿರುವುದರಿಂದ ಹುಟ್ಟಿರುತ್ತದೆ.

**ಪ್ರತಿಜ್ಞಾಪೂರ್ವಂ ಗುಣತಃ ಸುಖಸ್ಯ ತ್ರೈವಿಧ್ಯಮಾಹ- ಸುಖಂ ತ್ವಿತಿ ॥ ಯತ್ರ ಯಸ್ಮಿನ್ಸುಖೇ ಚಿರಕಾಲಮಭ್ಯಾಸಾತ್ಪುನಃ ಪುನಃ, ರಮತೇ । ದುಃಖಾಂತಂ ದುಃಖನಾಶಂ ಚ ನಿತರಾಂ ಗಚ್ಛತಿ ಪ್ರಾಪ್ನೋತಿ ತತ್ಸುಖಂ ತ್ರಿವಿಧಮಿತ್ಯರ್ಥಃ । ಯದ್ವಾ ಪೂರ್ವಾರ್ಧಮೇವ ಪ್ರತಿಜ್ಞಾಪರಮ್ । ಉತ್ತರಾರ್ಧಂ 'ಯತ್ತದಿತಿ' ಶ್ಲೋಕಶ್ಚ ಸಾತ್ತ್ವಿಕಸುಖೋಕ್ತಿಪರಃ । ಯತ್ಪ್ರಸಿದ್ಧಂ ಸುಖಂ ಅಗ್ರೇ ಪೂರ್ವಂ ವಿಷಮಿವ ಆಯಾಸಸಾಧ್ಯತ್ವಾತ್ । ಪರಿಣಾಮೇ ವಿಪಾಕೇ ಅಮೃತಸದೃಶಂ ಆತ್ಮ-ಬುದ್ಧಿಪ್ರಸಾದಜಂ ಆತ್ಮನೋ ವಿಷ್ಣೋಃ ಪ್ರಸಾದಾದನುಗ್ರಹಾಜ್ಜಾತಮ್ । ಬುದ್ಧೇಃ ಪ್ರಸಾದಾಚ್ಚ । ಬುದ್ಧೇಃ ಪ್ರಸಾದೋ ನಾಮ ಸ್ವತೋ ವಿಷಯೇಷ್ವಪ್ರವೃತ್ತಿಃ । ತತೋ ಜಾತಂ ಚ ಯತ್ತತ್ಸುಖಂ ಸಾತ್ತ್ವಿಕಮಿತ್ಯರ್ಥಃ ॥ 36-37 ॥**

**ಅನುವಾದ–** ಪ್ರತಿಜ್ಞೆ ಮಾಡಿ, ಗುಣಗಳನ್ನಾಧರಿಸಿದ ಸುಖದ ಮೂರು ಪ್ರಭೇದಗಳನ್ನು ಹೇಳುತ್ತಿದ್ದಾನೆ– **ಸುಖಂ ತು** ಎಂದು. **ಯತ್ರ**= ಯಾವ ಸುಖದಲ್ಲಿ ಬಹುಕಾಲ ಅಭ್ಯಾಸದಿಂದ ಮತ್ತೆ ಮತ್ತೆ ರತನಾಗುವನೋ, ಮತ್ತು **ದುಃಖಾಂತಂ**= ದುಃಖದ ನಾಶವನ್ನು ಚೆನ್ನಾಗಿ **ಗಚ್ಛತಿ**= ಹೊಂದುವನೊ ಆ ಸುಖ ಮೂರುವಿಧ ಎಂದರ್ಥ. ಅಥವಾ, ಈ ಶ್ಲೋಕದ ಪೂರ್ವಾರ್ಧವು ಮಾತ್ರ ಪ್ರತಿಜ್ಞಾಪರವಾಗಿದೆ. ಈ ಶ್ಲೋಕದ ಉತ್ತರಾರ್ಧ ಮತ್ತು '**ಯತ್ತದಗ್ರೇ**' ಎಂಬ ಮುಂದಿನ ಶ್ಲೋಕವು ಸಾತ್ವಿಕಸುಖವನ್ನು ಹೇಳಲು ಹೊರಟಿದೆ (1). **ಯತ್** = ಪ್ರಸಿದ್ಧವಾದ ಯಾವ ಸುಖ ಮೊದಲಿಗೆ ವಿಷದಂತಿರುತ್ತದೊ, **ಪರಿಣಾಮೇ**= ಕೊನೆಯಲ್ಲಿ ಅಮೃತಸದೃಶವೊ, **ಆತ್ಮಬುದ್ಧಿ-ಪ್ರಸಾದಜಂ, ಆತ್ಮ**= ವಿಷ್ಣುವಿನ, **ಪ್ರಸಾದ**= ಅನುಗ್ರಹದಿಂದ, **ಜಂ**= ಹುಟ್ಟಿದ್ದೊ , ಮತ್ತು ಬುದ್ಧಿಯ ಪ್ರಸಾದದಿಂದಲೂ ಬುದ್ಧಿಯ ಪ್ರಸಾದ ಎಂದರೆ ಪ್ರಯತ್ನವಿಲ್ಲದೆ ವಿಷಯಗಳ ಕಡೆ ಹೋಗದಿರುವುದು (2) ಅದರಿಂದಲೂ ಹುಟ್ಟಿದ ಸುಖ ಯಾವುದಿದೆಯೋ ಅದು ಸಾತ್ವಿಕ ಎಂದರ್ಥ. ॥ 36-37 ॥

**ವಿವರಣೆ**– '**ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ**' ಎಂಬ ವಾಕ್ಯ ಸ್ವಯಂ ಪೂರ್ಣವಾಗಿದೆ. ಇದರ ಮುಂದಿನ ವಾಕ್ಯದಲ್ಲಿ '**ಯತ್ರ**' ಎಂದು ಯತ್ ಶಬ್ದವಿದೆ. ಇದರಿಂದ ಇದು ಅಪೂರ್ಣವಾಕ್ಯವಾಗಿದೆ. ಇದಕ್ಕೆ ಹಿಂದಿನ ವಾಕ್ಯದೊಂದಿಗೆ ಅನ್ವಯ ಮಾಡಿದರೆ ಇದು ಪ್ರತಿಜ್ಞೆಯ ಭಾಗವಾಗುತ್ತದೆ. ಮುಂದಿನ ಶ್ಲೋಕದೊಂದಿಗೆ ಜೋಡಿಸಿದರೆ ಇದೂ ಸಾತ್ವಿಕಸುಖದ ಲಕ್ಷಣವನ್ನು ಹೇಳುವ ವಾಕ್ಯವಾಗುತ್ತದೆ.

ಪ್ರತಿಜ್ಞೆಯ ಭಾಗ ಎಂದು ಇಟ್ಟುಕೊಂಡಾಗ ಇದು ಎಲ್ಲ ತರಹದ ಸುಖದ ಲಕ್ಷಣ ಆಗುತ್ತದೆ. ಆದರೆ ರಾಜಸ ತಾಮಸ ಸುಖಗಳು ತತ್ಕಾಲದಲ್ಲಿ ದುಃಖನಾಶ ಮಾಡಿದರೂ ಮಾಡದಿದ್ದಂತೆಯೇ. ಏಕೆಂದರೆ ಮುಂದೆ ದುಃಖ ಮೋಹಗಳಿದ್ದೇ ಇದೆ. ಈ ಅಭಿಪ್ರಾಯದಲ್ಲಿ ದುಃಖ ನಾಶಕತ್ವವು ಕೇವಲ ಸಾತ್ವಿಕ ಸುಖದ ಲಕ್ಷಣವಾಗಬಹುದು. ಈ ಕಾರಣದಿಂದ ಎರಡನೇ ವ್ಯಾಖ್ಯಾನದಲ್ಲಿ ಇದನ್ನು ಪ್ರತಿಜ್ಞೆಗೆ ಸೇರಿಸದೆ ಮುಂದಿನ ಭಾಗಕ್ಕೆ ಸೇರಿಸಿದ್ದು.

(2) ಆತ್ಮಬುದ್ಧಿಪ್ರಸಾದಜ ಎಂಬ ವಿಶೇಷಣದಿಂದ ಈ ವಿಷಯ ತಿಳಿದು ಬರುತ್ತದೆ– ಸಾತ್ವಿಕಸುಖವು ಪರಮಾತ್ಮನ ಹಾಗೂ ಬುದ್ಧಿಯ ಪ್ರಸನ್ನತೆಯಿಂದ ಹುಟ್ಟುವಂಥದ್ದು – ಎಂದು. ಪರಮಾತ್ಮನು ಚೇತನನಾದ್ದರಿಂದ ಅವನಲ್ಲಿ ಪ್ರಸನ್ನತೆ ಹೊಂದುತ್ತದೆ. ಆದರೆ ಜಡವಾದ ಬುದ್ಧಿಯಲ್ಲಿ ಪ್ರಸನ್ನತೆ ಹೇಗೆ ? ಎಂಬ ಶಂಕೆಗೆ ಇಲ್ಲಿ ಉತ್ತರ ಬಂದಿದೆ.

**ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಮ್ ।**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥ 38 ॥**

**ಅರ್ಥ**– **(ಯತ್ತತ್=)** ಪ್ರಸಿದ್ಧವಾದ ಯಾವ ಸುಖವು ವಿಷಯಪದಾರ್ಥಗಳಿಗೂ ಇಂದ್ರಿಯಗಳಿಗೂ ಆಗುವ ಸಂಬಂಧದಿಂದ ಹುಟ್ಟಿದ್ದೋ, ಮೊದಲಿಗೆ ಅಮೃತದಂತಿದ್ದು ಕೊನೆಗೆ ವಿಷದಂತಾಗುವುದೋ ಆ ಸುಖ ರಾಜಸ.

**ವಿಷಯೇಂದ್ರಿಯಸಂಯೋಗಾಚ್ಛಬ್ದಾದಿವಿಷಯಾಣಾಂ ಶ್ರೋತ್ರಾದೀಂದ್ರಿಯಾಣಾಂ ಸಂಯೋಗೇನೋತ್ಪನ್ನವಿಷಯಾನುಭವೇನ ಜಾಯಮಾನಂ ಯತ್ತತ್ಪ್ರಸಿದ್ಧಂ ಸುಖಮ್ ಅಗ್ರೇ ಪ್ರಥಮಮಮೃತಸದೃಶಮ್ । ವಿಪಾಕೇ ವಿಷಮಿವ ದುಃಖಾವಹತ್ವಾತ್ । ತತ್ಸುಖಂ ರಾಜಸಮಿತ್ಯರ್ಥಃ ॥ 38 ॥**

**ಅನುವಾದ**– **ವಿಷಯೇಂದ್ರಿಯಸಂಯೋಗಾತ್**= ಶಬ್ದಸ್ಪರ್ಶರೂಪರಸಗಂಧವೆಂಬ ವಿಷಯಗಳ ಹಾಗೂ ಶ್ರೋತ್ರ–ತ್ವಕ್–ಚಕ್ಷು–ರಸನ–ಘ್ರಾಣವೆಂಬ ಇಂದ್ರಿಯಗಳ ಸಂಬಂಧ ದಿಂದ ಹುಟ್ಟಿದ ವಿಷಯಾನುಭವದಿಂದ ಹುಟ್ಟುವ, **ಯತ್ತತ್**= ಪ್ರಸಿದ್ಧವಾದ (2) ಯಾವ

ಸುಖವು **ಅಗ್ರೇ**= ಮೊದಲು ಅಮೃತಸದೃಶ, ಪರಿಣಾಮದಲ್ಲಿ ದುಃಖವನ್ನು ತರುವುದರಿಂದ ವಿಷದಂತಿರುವುದೋ ಆ ಸುಖ ರಾಜಸ ಎಂದರ್ಥ. ॥ 38 ॥

**ವಿವರಣೆ**– (1) ಮೂಲದಲ್ಲಿ ವಿಷಯೇಂದ್ರಿಯ ಸಂಬಂಧದಿಂದ ಸುಖ ಹುಟ್ಟುತ್ತದೆ ಎಂದಿದೆ. ಇದರ ಅಭಿಪ್ರಾಯ ವಿಷಯೇಂದ್ರಿಯ ಸಂಬಂಧದಿಂದ ಹುಟ್ಟುವ ವಿಷಯಾನುಭವ ದಿಂದ. ಸಂಬಂಧವು ಗಾಢನಿದ್ದೆಯಲ್ಲಿದ್ದರೂ ಅದರಿಂದ ಸುಖ ಆಗದು. ಸುಖ ಆಗುವು ದೇನಿದ್ದರೂ ವಿಷಯದ ಜ್ಞಾನದಿಂದ .

(2) **ಯತ್** ಶಬ್ದಕ್ಕೆ ಪ್ರತಿಯಾಗಿ ತತ್ ಶಬ್ದವಿರಬೇಕೆಂದು ನಿಯಮ. ಆದರೆ ಈ ಶ್ಲೋಕದಲ್ಲಿ '**ಯತ್ತತ್**' ಎಂಬಲ್ಲಿ, ಮತ್ತು '**ತತ್ಸುಖಂ**' ಎಂಬಲ್ಲಿ ಹೀಗೆ ಎರಡು ತತ್‌ಶಬ್ದಗಳಿವೆ. ಯಚ್ಛಬ್ದದ ಆಕಾಂಕ್ಷಾ ಪೂರಣಕ್ಕೆ ಒಂದು ತತ್ ಶಬ್ದ ಸಾಕು. ಇನ್ನೊಂದು ವ್ಯರ್ಥ. ಹಾಗಾಗಬಾರದೆಂದು ಇನ್ನೊಂದು ತತ್ ಶಬ್ದಕ್ಕೆ ಪ್ರಸಿದ್ಧ ಎಂಥರ್ಥ ಇಟ್ಟುಕೊಳ್ಳಲಾಗಿದೆ. ಅದರ ಹಿನ್ನೆಲೆಯಲ್ಲಿ **ಯತ್ತತ್ ಪ್ರಸಿದ್ಧಂ** ಎಂಬ ವಿವರಣೆ ಬಂದಿದೆ. ಹಿಂದೆ 37ನೇ ಶ್ಲೋಕದಲ್ಲಿದ್ದ ಯತ್ತತ್ ಎಂಬುದಕ್ಕೂ ಇದೇ ಅಭಿಪ್ರಾಯ.

**ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ ।**
**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮತಮುದಾಹೃತಾಮ್ ॥ 39 ॥**

**ಅರ್ಥ**– ಯಾವ ಸುಖ ಆರಂಭದಲ್ಲೂ ಕೊನೆಯಲ್ಲೂ, ತನಗೆ ಪರವಶತೆಯನ್ನು ತರುವುದೊ, ನಿದ್ದೆ, ಆಲಸ್ಯ ಮತ್ತು ಅಧರ್ಮಬುದ್ಧಿಗಳಿಂದ ಹುಟ್ಟಿದ್ದೊ ಅದು ತಾಮಸ ಎನಿಸಿದೆ.

**ಯತ್ಸುಖಮಗ್ರೇ ಚಾನುಬಂಧೇ ಚ ಪಶ್ಚಾತ್, ವಿಪಾಕಕಾಲ ಇತಿ ಯಾವತ್ । ಆತ್ಮನಃ ಸ್ವಸ್ಯ ಮೋಹನಂ ಮೋಹಕರಂ ಪಾರವಶ್ಯಕೃತ್ । ನಿದ್ರಾಲಸ್ಯಪ್ರಮಾದ್ಯೈರುತ್ಥಿತಂ ಉತ್ಪನ್ನಮ್ । ಆಲಸ್ಯಂ ಶರೀರಮಾಂದ್ಯಮ್ । ಪ್ರಮಾದಃ ಅಧರ್ಮೇ ಬುದ್ಧಿಃ । ತತ್ಸುಖಂ ತಾಮಸಮಿತ್ಯರ್ಥಃ ॥ 39 ॥**

**ಅನುವಾದ**– ಯಾವ ಸುಖವು ಆರಂಭದಲ್ಲೂ, **ಅನುಬಂಧೇ ಚ**= ಅನಂತರ, ಪರಿಣಾಮ ಕಾಲದಲ್ಲಿಎಂದರ್ಥ. **ಆತ್ಮನಃ** = ತನಗೆ (ಸುಖವನ್ನು ಅನುಭವಿಸುವವನಿಗೆ), (**ಮೋಹನಂ** =) **ಮೋಹಕರಂ** = ಪರವಶತೆಯನ್ನು ತರುವುದೋ, ನಿದ್ರೆ-ಆಲಸ್ಯ-ಪ್ರಮಾದಗಳಿಂದ, **ಉತ್ಥಿತಂ**= ಹುಟ್ಟಿದ್ದೋ. ಇಲ್ಲಿ ಆಲಸ್ಯ ಎಂದರೆ ಶರೀರದ ಚಟುವಟಿಕೆಗಳು ಮಂದವಾಗುವುದು. ಪ್ರಮಾದ ಎಂದರೆ ಅಧರ್ಮವಿಷಯದಲ್ಲಿ ಬುದ್ಧಿ. ಇಂಥ ಸುಖವು ತಾಮಸ ಎನಿಸುತ್ತದೆ. ॥ 39 ॥

## ತ್ರಿಗುಣಸಂಬಂಧ ಇಲ್ಲದ್ದು ಯಾವುದೂ ಇಲ್ಲ

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥ 40 ॥**

ಅರ್ಥ– (ಪುನಃ=) ಮತ್ತು , ಪ್ರಕೃತಿಯಿಂದ ಹುಟ್ಟಿದ ಸತ್ತ್ವ-ರಜಸ್-ತಮೋಗುಣಗಳಿಂದ ಮುಕ್ತವಾದ (ಸತ್ತ್ವಂ=) ಜೀವಸಮುದಾಯವು ಭೂಮಿಯಲ್ಲಾಗಲಿ ಸ್ವರ್ಗದಲ್ಲಿ ದೇವತೆಗಳಲ್ಲಾಗಲಿ ಇಲ್ಲ.

ಸರ್ವಜೀವಾನಾಂ ಗುಣತ್ರಯಬದ್ಧತ್ವೇನ ತ್ರೈವಿಧ್ಯಮಾಹ- ನ ತದಸ್ತೀತಿ ॥ ಯತ್ತತ್ತ್ವಂ ಜೀವಜಾತಂ ಪ್ರಕೃತಿಜೈರೇಭಿಸ್ತ್ರಿಭಿಃ ಸತ್ತ್ವಾದಿಗುಣೈಃ ಮುಕ್ತಂ ಸ್ಯಾತ್ ತತ್ಸತ್ತ್ವಂ ಪೃಥಿವ್ಯಾಂ ದಿವಿ ದೇವೇಷು ವಾ । ಪುನಃ ಶಬ್ದಃ ಸಮುಚ್ಚಯೇ । ನಾಸ್ತಿ । ಮುಕ್ತವ್ಯಾವೃತ್ತ್ಯರ್ಥಂ ಪೃಥಿವ್ಯಾಮಿತ್ಯಾದ್ಯುಕ್ತಿಃ । ತತ್ರಾಯಂ ವಿವೇಕಃ । ಸಾತ್ತ್ವಿಕ-ರಾಜಸತಾಮಸಭೇದೇನ ಜೀವಾಸ್ತ್ರಿವಿಧಾಃ । ಸಾತ್ತ್ವಿಕಾದಯೋಽಪಿ ಪ್ರತ್ಯೇಕಂ ತ್ರಿವಿಧಾಃ । ಪಿತೃಗನ್ಧರ್ವಪೂರ್ವಕಾಃ ಸಾತ್ತ್ವಿಕತಾಮಸಾಃ । ಮುನಯಃ ಸಾತ್ತ್ವಿಕ-ರಾಜಸಾಃ । ದೇವಾಃ ಸಾತ್ತ್ವಿಕಸಾತ್ತ್ವಿಕಾಃ । ಸಾತ್ತ್ವಿಕಸಾತ್ತ್ವಿಕೇಷ್ವಪಿ ಬೃಹಸ್ಪತ್ಯಾದಯಃ ಸಾತ್ತ್ವಿಕಸಾತ್ತ್ವಿಕತಾಮಸಾಃ । ಇಂದ್ರಃ ಸಾತ್ತ್ವಿಕಸಾತ್ತ್ವಿಕರಾಜಸಃ । ಬ್ರಹ್ಮಾದಿ-ರುದ್ರಾವಸಾನಾಃ ಸಾತ್ತ್ವಿಕಸಾತ್ತ್ವಿಕಸಾತ್ತ್ವಿಕಾಃ । ತೇಷ್ವಪಿ ರುದ್ರಃ ಸಾತ್ತ್ವಿಕಸಾತ್ತ್ವಿಕ-ಸಾತ್ತ್ವಿಕತಾಮಸಃ, ಬ್ರಹ್ಮಾಣೀಭಾರತ್ಯೌ ತಾದೃಗ್ರಾಜಸ್ಯೌ । ಬ್ರಹ್ಮವಾಯೂ ತು ಸಾತ್ತ್ವಿಕ ಸಾತ್ತ್ವಿಕಸಾತ್ತ್ವಿಕಸಾತ್ತ್ವಿಕಾವೇವೇತಿ । ಮಧ್ಯಮೋತ್ತಮನರಾಃ ರಾಜಸಾಃ, ತೇಽಪಿ ಪ್ರತ್ಯೇಕಂ ತ್ರಿವಿಧಾಃ । ತೇಷು ವಿಪ್ರಾದಿಪುಲ್ಕಸಾನ್ತಾಃ ಯೇ ಭಾಗವತಾಃ ತೇ ರಾಜಸಸಾತ್ತ್ವಿಕಾಃ । ರಾಜಸಸಾತ್ತ್ವಿಕೇಷ್ವಪಿ ವಿಪ್ರಾ ರಾಜಸಸಾತ್ತ್ವಿಕಸಾತ್ತ್ವಿಕಾಃ । ಕ್ಷತ್ರಿಯಾಸ್ತು ಸ್ವಲ್ಪರಜೋಯುಕ್ತತಯಾ ರಾಜಸರಾಜಸಸಾತ್ತ್ವಿಕಾಃ । ವೈಶ್ಯಾಸ್ತು ಸಮಸತ್ತ್ವರಜೋಯುಕ್ತತಯಾ ರಾಜಸರಾಜಸಸಾತ್ತ್ವಿಕಾಃ । ಶೂದ್ರಾಸ್ತು ತಮಸೋಽಲ್ಪತ್ವೇನ ರಜೋಽಧಿಕೇನ ಯುಕ್ತತಯಾ ತಾಮಸರಾಜಸಸಾತ್ತ್ವಿಕಾಃ । ರಾಜಸಸಾತ್ತ್ವಿಕಸಾತ್ತ್ವಿಕವಿಪ್ರೇಷ್ವಪಿ ಯೇ ಶುದ್ಧಸತ್ತ್ವಾತ್ಮಕಾಃ ತೇ ಪರಮಹಂಸ-ಶಬ್ದಿತಾಃ ಶಿಖಾಯಜ್ಞೋಪವೀತಹೀನಾಃ ಏಕದಂಡಿನಃ । ಕಿಂಚಿದ್ರಜೋಯುಕ್ತ-ಸತ್ತ್ವವಂತೋ ಹಂಸಶಬ್ದಿತಾಃ ಯಜ್ಞೋಪವೀತವಂತಃ ಏಕದಂಡಿನಃ ಶಿಖಾ-ಹೀನಾಃ । ತತೋಽಧಿಕರಜೋಯುಕ್ತಸತ್ತ್ವವಂತಃ ತ್ರಿದಂಡಿನಃ ಶಿಖಾ-

**ಯಜ್ಞೋಪವೀತವಂತೋ ಗ್ರಾಮ್ಯೈಕರಾತ್ರಿಚರಾಃ ಬಹೂದಕಸಂಜ್ಞಕಾಃ । ತತೋಽಪ್ಯಧಿಕರಜೋಯುಕ್ತಸತ್ತ್ವವಂತಸ್ತ್ರಿದಂಡಿನಃ ಶಿಖಾಯಜ್ಞೋಪವೀತ-ವಂತೋ ಯಾವಜ್ಜೀವಂ ಪುತ್ರದತ್ತಾಶನಾಃ ಕುಟೀಚಕಾಃ । ತಾಮಸಾ ಅಪಿ ಸಾತ್ತ್ವಿಕಾದಿ ಭೇದೇನ ತ್ರಿವಿಧಾಃ । ತತ್ರ ನರಾಧಮಾಃ ಸಾತ್ತ್ವಿಕತಾಮಸಾಃ । ದೈತ್ಯಭೃತ್ಯಾ ರಾಜಸತಾಮಸಾಃ । ಮಹಾದೈತ್ಯಾಸ್ತಾಮಸತಾಮಸಾ ಇತಿ ॥ 40 ॥**

**ಅನುವಾದ**– ಮೂರುಗುಣಗಳಿಂದ ಬದ್ಧರೆಂಬ ಸರ್ವಜೀವರ ಮೂರು ಪ್ರಭೇದಗಳನ್ನು ಹೇಳುತ್ತಿದ್ದಾರೆ– 'ನ ತದಸ್ತಿ' ಎಂದು. **ಯಾವ ಸತ್ವಂ**= ಜೀವಸಮುದಾಯವು ಪ್ರಕೃತಿಯಿಂದ ಹುಟ್ಟಿದ ಈ ಮೂರು ಸತ್ವಾದಿಗಳಿಂದ ಬಿಡುಗಡೆಗೊಂಡಿದೆಯೊ ಅಂಥ ಜೀವಸಮುದಾಯ ಭೂಮಿಯಲ್ಲಿಯಾಗಲಿ ಸ್ವರ್ಗದಲ್ಲಿ ದೇವತೆಗಳಲ್ಲಾಗಲಿ ಇಲ್ಲ. ಪುನಃ ಶಬ್ದ ಸಮುಚ್ಚಯ ಎಂಬ ಅರ್ಥದಲ್ಲಿ ಇದೆ. (1) ಮುಕ್ತರನ್ನು ಇಟ್ಟುಕೊಳ್ಳಬಾರದೆಂಬ ಕಾರಣದಿಂದ 'ಪೃಥಿವ್ಯಾಂ ದಿವಿ ದೇವೇಷು ವಾ' ಎಂದು ಹೇಳಿದ್ದು. ॥ 40 ॥

**ಈ ವಿಷಯದಲ್ಲಿ ಹೀಗೆ ಬಿಡಿಸಿ ತಿಳಿಯಬೇಕು**–

ಸಾತ್ವಿಕ–ರಾಜಸ–ತಾಮಸ ಎಂದು ಸಂಸಾರಿ ಜೀವರು ಮೂರು ವಿಧ. ಈ ಒಬ್ಬೊಬ್ಬರಲ್ಲೂ ಮತ್ತೆ ಮೂರು ವಿಧಗಳು. ಅವು ಹೀಗಿದೆ–

| | |
|---|---|
| ಪಿತೃ – ಗಂಧರ್ವ ಮೊದಲಾದವರು | – ಸಾತ್ವಿಕ ತಾಮಸರು |
| ಮುನಿಗಳು | – ಸಾತ್ವಿಕ ರಾಜಸರು |
| ದೇವತೆಗಳು | – ಸಾತ್ವಿಕ ಸಾತ್ವಿಕರು. |

**ಈ ಸಾತ್ವಿಕ ಸಾತ್ವಿಕರಲ್ಲೂ** ,

| | |
|---|---|
| ಬೃಹಸ್ಪತಿ ಮೊದಲಾದವರು | – ಸಾತ್ವಿಕಸಾತ್ವಿಕ ತಾಮಸರು |
| ಇಂದ್ರ | – ಸಾತ್ವಿಕ ಸಾತ್ವಿಕ ರಾಜಸ |
| ಬ್ರಹ್ಮನಿಂದಾರಂಭಿಸಿ ರುದ್ರಪರ್ಯಂತರು | – ಸಾತ್ವಿಕ ಸಾತ್ವಿಕ ಸಾತ್ವಿಕರು . |

**ಅವರಲ್ಲೂ** ,

| | |
|---|---|
| ರುದ್ರ | – ಸಾತ್ವಿಕ ಸಾತ್ವಿಕ ಸಾತ್ವಿಕ ತಾಮಸ. |
| ಸರಸ್ವತೀ – ಭಾರತೀಯರು | – ಸಾತ್ವಿಕ ಸಾತ್ವಿಕ ಸಾತ್ವಿಕ ರಾಜಸರು |
| ಬ್ರಹ್ಮವಾಯುಗಳು ಮಾತ್ರ | – ಸಾತ್ವಿಕ ಸಾತ್ವಿಕ ಸಾತ್ವಿಕ ಸಾತ್ವಿಕರೇ. |

ಮನುಷ್ಯರಲ್ಲಿ ಮಧ್ಯಮರು ಮತ್ತು ಉತ್ತಮರು ರಾಜಸರು. ಅವರಲ್ಲೂ ಮೂರು ಪ್ರಭೇದಗಳು-

| | |
|---|---|
| ಬ್ರಾಹ್ಮಣಾದಿಚಾಂಡಲಪರ್ಯಂತ ಎಲ್ಲ ಭಾಗವತರು | – ರಾಜಸ ಸಾತ್ವಿಕರು . ಅವರಲ್ಲೂ |
| ಬ್ರಾಹ್ಮಣರು | – ರಾಜಸಸಾತ್ವಿಕ ಸಾತ್ವಿಕರು. |
| ಕ್ಷತ್ರಿಯರು ಸ್ವಲ್ಪರಜೋಗುಣಯುಕ್ತರಾದ್ದರಿಂದ | – ರಾಜಸರಾಜಸ ಸಾತ್ವಿಕರು. |
| ವೈಶ್ಯರು ಸಮಾನವಾಗಿ ಸತ್ವಮತ್ತು ರಜೋಗುಣಗಳಿಂದ ಯುಕ್ತರಾದ್ದರಿಂದ | – ರಾಜಸರಾಜಸ ಸಾತ್ವಿಕರು |

ಶೂದ್ರರಲ್ಲಿ ತಮಸ್ಸು ಸ್ವಲ್ಪ ಇದ್ದು , ರಜಸ್ಸು ಹೆಚ್ಚಿರುವುದರಿಂದ ಅವರು– ತಾಮಸ ರಾಜಸಸಾತ್ವಿಕರು . (ರಾಜಸ ತಾಮಸ ಸಾತ್ವಿಕರು ಎಂದರ್ಥ.)

ರಾಜಸ ಸಾತ್ವಿಕರೆನಿಸಿದ ಬ್ರಾಹ್ಮಣರಲ್ಲೂ ಶುದ್ಧ ಸತ್ತ್ವಗುಣವಿರುವವರಿಗೆ ಪರಮಹಂಸ ರೆಂದು ಹೆಸರು. ಇವರಿಗೆ ಶಿಖಾ–ಯಜ್ಞೋಪವೀತಗಳು ಇರುವುದಿಲ್ಲ. ಒಂದು ದಂಡವಿರುತ್ತದೆ. ಸ್ವಲ್ಪರಜಸ್ಸಿನೊಂದಿಗೆ ಸತ್ವಗುಣವಿರುವವರಿಗೆ ಹಂಸರೆಂದು ಹೆಸರು. ಇವರಿಗೆ ಯಜ್ಞೋಪವೀತ ಇರುತ್ತದೆ. ಒಂದು ದಂಡವೂ ಇರುತ್ತದೆ. ಶಿಖಾ ಇರುವುದಿಲ್ಲ. ಅವರಿಗಿಂತ ಹೆಚ್ಚು ರಜೋ ಗುಣದಿಂದ ಕೂಡಿದವರಿಗೆ ಬಹೂದಕರೆಂದು ಹೆಸರು . ಇವರಿಗೆ ಮೂರು ದಂಡಗಳು– ಶಿಖಾ –ಯಜ್ಞೋಪವೀತಗಳು ಇರುತ್ತವೆ. ಇವರು ಒಂದು ಗ್ರಾಮದಲ್ಲಿ ಒಂದು ರಾತ್ರಿ ವಾಸಿಸುವವರು. ಅದಕ್ಕಿಂತ ಹೆಚ್ಚು ರಜೋಗುಣದ ಜೊತೆ ಸತ್ವಗುಣವಿರುವವರು ಕುಟೀಚಕರು. ಮೂರು ದಂಡಗಳು– ಶಿಖಾ–ಯಜ್ಞೋಪವೀತಗಳು ಇವರಿಗೆ ಇರುತ್ತವೆ . ಇವರು ಬದುಕಿರುವವರೆ ಮಕ್ಕಳು ನೀಡುವ ಆಹಾರವನು ಸ್ವೀಕರಿಸುವವರು.

**ತಾಮಸರಲ್ಲೂ ಸಾತ್ವಿಕ – ರಾಜಸ–ತಾಮಸರೆಂದು ಮೂರು ಪ್ರಭೇದಗಳಿವೆ.**

| | |
|---|---|
| ಅವರಲ್ಲಿ ಮನುಷ್ಯಾಧಮರು | – ಸಾತ್ವಿಕ ತಾಮಸರು |
| ದೈತ್ಯರ ಸೇವಕರು | – ರಾಜಸತಾಮಸರು. |
| ಮಹಾದೈತ್ಯರು | – ತಾಮಸತಾಮಸರು ಎಂದು ವಿಭಾಗ. |

**ವಿವರಣೆ–** (1) ಹಿಂದೆ ಹೇಳಿದ ವಿಷಯದೊಂದಿಗೆ ಈ ವಿಷಯವನ್ನು ಸೇರಿಸಿ ತಿಳಿಯ ಬೇಕೆಂಬ ಅಭಿಪ್ರಾಯದಿಂದ ಪುನಃ ಎಂಬ ಪದ ಇದೆ– ಎಂದರ್ಥ. (ಶ್ರೀ ಸತ್ಯಧ್ಯಾನತೀರ್ಥ ಗೀತಾಪ್ರತಿಪದಾರ್ಥಚಂದ್ರಿಕೆಯಲ್ಲಿ ಈ ಶ್ಲೋಕದ ಅರ್ಥವನ್ನು 'ಪುನಃ= ಮತ್ತು' ಎಂ ಆರಂಭಿಸಿದ್ದಾರೆ.) ಇದರಿಂದ ಈ ಅರ್ಥವು ತಿಳಿಯುತ್ತದೆ. ಹೀಗಲ್ಲದಿದ್ದರೆ, ದಿವಿ, ದೇವೇ ಮುಂತಾದವುಗಳ ಸಮುಚ್ಚಯವು ಪುನಃ ಶಬ್ದದ ಅರ್ಥ ಎಂದು ತಿಳಿಯಲು ಅವಕಾಶವಿ

ಆದರೆ ಅವುಗಳ ನಡುವೆ 'ವಾ' ಎಂಬುದು ಇರುವುದರಿಂದ 'ಪುನಃ' ಎಂಬುದು ಅಲ್ಲಿ ಹೊಂದದು.

## ವರ್ಣಧರ್ಮದ ನಿರೂಪಣೆ

**ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥ 41 ॥**

**ಅರ್ಥ**- ಹೇ ಶತ್ರುತಾಪಕ ಅರ್ಜುನನೇ ! ಬ್ರಾಹ್ಮಣ-ಕ್ಷತ್ರಿಯ-ವೈಶ್ಯರ ಹಾಗೂ ಶೂದ್ರರ ಕರ್ಮಗಳು, ಅವರವರ ಸ್ವಭಾವಾನುಸಾರಿಯಾದ ಸತ್ತ್ವ-ರಜಸ್-ತಮೋಗುಣಗಳಿಂದ ಭಿನ್ನ ಭಿನ್ನವಾಗಿವೆ.

**ಇದಾನೀಂ ಬ್ರಾಹ್ಮಣಾದ್ಯಧಿಕಾರಿಗುಣಕೃತಕರ್ಮಾಣಿ ಭಿನ್ನಾನಿ ಸಂತೀತ್ಯಾಹ- ಬ್ರಾಹ್ಮಣೇತಿ ॥ ತ್ರೈವರ್ಣಿಕಾನಾಮಿವ ದ್ವಿಜನ್ಮತ್ವಂ ನೇತಿ ದ್ಯೋತನಾಯ ಶೂದ್ರಾಣಾಮಿತಿ ಪೃಥಙ್ನಿರ್ದೇಶಃ । ಸ್ವಭಾವಪ್ರಭವೈಃ ಬ್ರಾಹ್ಮಣಾದಿತತ್ತತ್- ಸ್ವಭಾವಾನುಬಂಧಿಭಿಃ ಸತ್ತ್ವಾದಿಗುಣೈಃ ಕರ್ಮಾಣಿ ಪ್ರವಿಭಕ್ತಾನಿ ತಾನಿ ಮೇ ಶೃಣ್ವಿತಿ ಭಾವಃ ॥ 41 ॥**

**ಅನುವಾದ**- ಈಗ (ಶ್ರೀಕೃಷ್ಣನು) ಬ್ರಾಹ್ಮಣಾದಿ ಅಧಿಕಾರಿಗಳ ಗುಣಗಳಿಂದ ಆದ ಕರ್ಮಗಳು ಬೇರೆ ಬೇರೆ ಇವೆ ಎಂದು ಹೇಳುತ್ತಾನೆ 'ಬ್ರಾಹ್ಮಣ' ಎನ್ನುವುದರಿಂದ (1) ತ್ರಿವರ್ಣದವರಿಗೆ ಇರುವಂತೆ (ಉಪನಯನಸಂಸ್ಕಾರದಿಂದ) ದ್ವಿಜತ್ವವು ಶೂದ್ರರಿಗೆ ಇಲ್ಲ ಎನ್ನುವುದು ಸೂಚಿಸಲು 'ಶೂದ್ರಾಣಾಂ' ಎಂದು ಪ್ರತ್ಯೇಕಿಸಿ ನಿರ್ದೇಶಿದ್ದು (2) **ಸ್ವಭಾವಪ್ರಭವೈಃ**= ಬ್ರಾಹ್ಮಣಾದಿಗಳ ಅಯಾಯಾ ಸ್ವಭಾವಗಳನ್ನನುಸರಿಸಿದ, (**ಗುಣೈಃ**=) ಸತ್ತ್ವಾದಿಗುಣಗಳಿಂದ ಕರ್ಮಗಳು ಭಿನ್ನಭಿನ್ನವಾಗಿವೆ. ಅವನ್ನು ನನ್ನಿಂದ ಕೇಳು ಎಂದು ಆಶಯ. ॥ 41 ॥

**ವಿವರಣೆ**- ಗೀತೆಯಲ್ಲಿ '**ಬ್ರಾಹ್ಮಣಕ್ಷತ್ರಿಯವಿಶಾಂ**' ಎಂಬುದು ಒಂದು ಸಮಸ್ತಪದ. ಇದರಲ್ಲೇ ಶೂದ್ರ ಶಬ್ದವನ್ನೂ ಸೇರಿಸದೆ ಅದನ್ನು ಪ್ರತ್ಯೇಕವಾಗಿ ಹೇಳಿದ್ದಕ್ಕೆ ಕಾರಣವನ್ನು ಇಲ್ಲಿ ಹೇಳುತ್ತಿದ್ದಾರೆ. ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರ ಕರ್ತವ್ಯಕರ್ಮಗಳನ್ನು ಮುಂದೆ ಕೃಷ್ಣ ಹೇಳುತ್ತಿದ್ದಾನೆ. ಆಯಾ ವರ್ಣದವರ ಸ್ವಭಾವದಲ್ಲಿರುವ ಸತ್ತ್ವಾದಿಗುಣಗಳಿಗೂ ಅವರಿಗೆ ಹೇಳಿದ ಕರ್ಮಗಳಿಗೂ ಸಂಬಂಧವಿದೆ. ಈ ಅಭಿಪ್ರಾಯದಿಂದ ಗೀತೆಯಲ್ಲಿ '**ಸ್ವಭಾವಪ್ರಭವೈಃ**' ಎಂದೂ ವಿವೃತಿಯಲ್ಲಿ '**ಬ್ರಾಹ್ಮಣಾದ್ಯಧಿಕಾರಿಗುಣಕೃತಕರ್ಮಾಣಿ**' ಎಂದೂ ಹೇಳಿದ್ದಾರೆ. ಇದರರ್ಥ ಬ್ರಾಹ್ಮಣಾದಿ ಎಲ್ಲರಿಗೂ ಇಲ್ಲಿ ಹೇಳಿದ ಗುಣಗಳು ಇರುತ್ತವೆ. ಎಂದಲ್ಲ. ಬ್ರಾಹ್ಮಣನಿಗೆ ಹೇಳಿದ

ಗುಣಗಳು ಬ್ರಾಹ್ಮಣನಲ್ಲಿ ಇಲ್ಲದೆ ಬೇರೆ ಗುಣಗಳು ಇರಬಹುದು. ಈ ಬಗ್ಗೆ ಗೀತಾತಾತ್ಪರ್ಯದಲ್ಲಿ ಆಚಾರ್ಯರು ಈ ಅಧ್ಯಾಯದ 44ನೇ ಶ್ಲೋಕದ ವ್ಯಾಖ್ಯಾನದಲ್ಲಿ ಹೀಗೊಂದು ಪ್ರಮಾಣಶ್ಲೋಕವನ್ನು ಉಲ್ಲೇಖಿಸಿದ್ದಾರೆ–

'ಏತೇ ನೈಸರ್ಗಿಕಾ ಭಾವಾಃ, ಸ್ಯಾದ್ಭಾವೋಽನ್ಯೋಽಪಿ ಕುತ್ರ ಚಿತ್ ॥
ಬಲಾದ್ವಿರುದ್ಧಭಾವಸ್ತು ಹೇಯಃ ಸ್ವಾಭಾವಿಕೋಽಪಿ ಯಃ ।
ಅನಿಸರ್ಗೋಽಪಿ ಹಿ ಶುಭೋ ವರ್ಧನೀಯಃ ಪ್ರಯತ್ನತಃ ॥' – ಎಂದು.

ಇದರ ಅನುವಾದ– 'ಇವು ಸ್ವಾಭಾವಿಕ. ಕೆಲವೊಮ್ಮೆ ಅವರಿಗಲ್ಲದ ಭಾವವು ಅವರಲ್ಲಿ ಬರುವುದುಂಟು. ಅದು ವಿರುದ್ಧ ಭಾವವಾಗಿದ್ದರೆ ಸ್ವಾಭಾವಿಕವಾಗಿದ್ದರೂ ಅದನ್ನು ಬಿಡಬೇಕು. ಸ್ವಾಭಾವಿಕವಲ್ಲದಿದ್ದರೂ ಮಂಗಲಮಯ ಭಾವವನ್ನು ಪ್ರಯತ್ನ ಪೂರ್ವಕ ಬೆಳೆಸಿಕೊಳ್ಳಬೇಕು.

**ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಾಹ್ಮಂ ಕರ್ಮ ಸ್ವಭಾವಜಮ್ ॥ 42 ॥**

**ಅರ್ಥ**– ಭಗವಂತನಲ್ಲಿ ನಿಷ್ಠೆ , ಇಂದ್ರಿಯನಿಗ್ರಹ, ಬ್ರಹ್ಮಚರ್ಯ ಮುಂತಾದ ತಪಸ್ಸು, ಒಳಹೊರಗಿನ ಶುದ್ಧಿ, ಸಿಟ್ಟು ಮಾಡಿಕೊಳ್ಳದಿರುವುದು, ತ್ರಿಕರಣಗಳ ಏಕರೂಪತೆ, ಸಾಮಾನ್ಯ-ವಿಶೇಷ ಜ್ಞಾನ, ಧರ್ಮಾದಿಗಳಲ್ಲಿ ನಂಬಿಕೆ– ಇವು ಬ್ರಾಹ್ಮಣರ ಸಹಜ ಕರ್ಮ.

ತತ್ರ ಚತುರ್ವರ್ಣಕರ್ಮಾಣಿ ಕ್ರಮಾತ್ ತ್ರಿಭಿರಾಹ– **ಶಮ ಇತ್ಯಾದಿಭಿಃ ॥**
**ಶಮೋ ಭಗವನ್ನಿಷ್ಠಾ ಬುದ್ಧಿಃ । ದಮ ಇಂದ್ರಿಯನಿಗ್ರಹಃ । ತಪೋ ಬ್ರಹ್ಮಚರ್ಯಾದಿ । ಶೌಚಂ ಬಾಹ್ಯಾಭ್ಯಂತರಶುದ್ಧಿಃ । ಕ್ಷಾಂತಿಃ ಕ್ರೋಧಾನುತ್ಪತ್ತಿಃ । ಆರ್ಜವಂ ಮನೋವಾಕ್ಕಾಯಕರ್ಮಣಾಮವೈಪರೀತ್ಯಮ್ । ಜ್ಞಾನಂ ಸಾಮಾನ್ಯತಃ । ವಿಜ್ಞಾನಂ ವಿಶೇಷತಃ । ಆಸ್ತಿಕ್ಯಂ ಧರ್ಮಾದಾವಸ್ತ್ಯನೇನ ಪ್ರಯೋಜನಮಿತಿ ಭಾವನಾ । ಏತತ್ಸರ್ವಂ ಸ್ವಭಾವಜಂ ಸಹಜಂ ಬ್ರಾಹ್ಮಂ ಬ್ರಾಹ್ಮಣಸಂಬಂಧಿ ಕರ್ಮೇತಿ ॥ 42 ॥**

ಅವುಗಳಲ್ಲಿ ನಾಲ್ಕು ವರ್ಣಗಳ ಕರ್ಮಗಳನ್ನು ಕ್ರಮವಾಗಿ ಮೂರು ಶ್ಲೋಕಗಳಿಂದ ಹೇಳುತ್ತಿದ್ದಾನೆ. – ಶಮ ಇತ್ಯಾದಿ ಶ್ಲೋಕಗಳಿಂದ. **ಶಮಃ**= ಭಗವನ್ನಿಷ್ಠೆ. **ದಮಃ**= ಇಂದ್ರಿಯಗಳ ಮೇಲೆ ಹತೋಟಿ. **ತಪಃ**= ಬ್ರಹ್ಮಚರ್ಯದಿಂದ ಇರುವುದು (ಉಪವಾಸಗಳನ್ನು ಮಾಡುವುದು) ಮುಂತಾದವು. **ಶೌಚಂ**= (ದೇಹದ) ಹೊರ-ಒಳಗಿನ ಶುದ್ಧಿ, **ಕ್ಷಾಂತಿಃ**= ಕೋಪ ಬರ ದಿರುವುದು. **ಆರ್ಜವಂ**= (ನೇರವಾಗಿರುವುದು) ಮನಸ್ಸು-ಮಾತು-ದೈಹಿಕಕೃತಿಗಳಲ್ಲಿ

ಏಕರೂಪತೆ, **ಜ್ಞಾನಂ**= ಸಾಮಾನ್ಯಜ್ಞಾನ. **ವಿಜ್ಞಾನಂ**= ವಿಶೇಷಜ್ಞಾನ. **ಆಸ್ತಿಕ್ಯಂ**= ಧರ್ಮಾದಿಗಳ ವಿಷಯದಲ್ಲಿ 'ಇದರಿಂದ ನನಗೆ ಪ್ರಯೋಜನವಿದೆ ಎಂಬ ಬುದ್ಧಿ . ಇದೆಲ್ಲ **ಸ್ವಭಾವಜಂ**= ಸಹಜವಾದ **ಬ್ರಾಹ್ಮಂ**= ಬ್ರಾಹ್ಮಣಸಂಬಂಧಿ ಕರ್ಮ.

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥ 43 ॥**

**ಅರ್ಥ**- ಹೆದರದಿರುವುದು, ದೈಹಿಕವರ್ಚಸ್ಸು, ಧೈರ್ಯ, ದಕ್ಷತೆ, ಯುದ್ಧದಲ್ಲಿ ಹೆದರಿ ಓಡಿ ಹೋಗದಿರುವುದು, ದಾನ, ಅಪರಾಧಿಗಳನ್ನು ಶಿಕ್ಷಿಸುವುದು- ಇವು ಕ್ಷತ್ರಿಯರ ಸಹಜ ಕರ್ಮ.

**ಶೌರ್ಯಮಭೀರುತ್ವಮ್ । ತೇಜಃ ಶರೀರಗತವರ್ಚೋವಿಶೇಷಃ । ಧೃತಿರ್ಧೈರ್ಯಮ್ । ದಾಕ್ಷ್ಯಂ ಪಾಟವಮ್ । ಯುದ್ಧೇ ಚಾಪ್ಯಪಲಾಯನಂ ಭೀತ್ಯಾ ಯುದ್ಧಾದನಿವರ್ತನಮ್ । ದಾನಂ ಗೋಭೂತಿಲಹಿರಣ್ಯಾದೇಃ ಪಾತ್ರೇ ಪ್ರತಿಪಾದನಮ್ । ಈಶ್ವರಭಾವೋ ದಂಡನಾದಿಕರ್ತೃತ್ವಮ್ । ಪ್ರಸಹ್ಯ ವಿತ್ತಾಹರಣಂ ಶಾರೀರೋ ದಂಡ ಏವ ಚ । ಅಶಿಷ್ಟಾನಾಂ ಶಾಸನಂ ಚ ತಥೈವಾರ್ಥವಿನಾಶನಮ್ । ಏಷ ಈಶ್ವರಭಾವಃ ಸ್ಯಾನ್ನ ಕಾರ್ಯಃ ಕ್ಷತ್ರಿಯೇತರೈಃ (ವ್ಯಾಸಸ್ಮೃತಿಃ) ಇತಿ ಸ್ಮೃತೇಃ । ಏತತ್ಸರ್ವಂ ಸ್ವಭಾವಜಂ ಕ್ಷತ್ರಿಯಸಂಬಂಧಿ ಕರ್ಮೇತ್ಯರ್ಥಃ ।**

**ಅನುವಾದ**- ಶೌರ್ಯಂ = ನಿರ್ಭಯತೆ. **ತೇಜಃ**= ದೇಹದಲ್ಲಿನ ವಿಶಿಷ್ಟವರ್ಚಸ್ಸು. **ಧೃತಿಃ**= ಧೈರ್ಯ. **ದಾಕ್ಷ್ಯಂ**= ದಕ್ಷತೆ. **ಯುದ್ಧೇ ಚಾಪ್ಯಪಲಾಯನಂ**= ಭಯದಿಂದ ಯುದ್ಧದಿಂದ ಹಿಂಜರಿಯದಿರುವುದು. **ದಾನಂ**= ಹಸು-ಭೂಮಿ-ತಿಲ-ಬಂಗಾರ ಮೊದಲಾದವನ್ನು ಸತ್ಪಾತ್ರರಿಗೆ ನೀಡುವುದು. **ಈಶ್ವರಭಾವಃ**= (ಅಪರಾಧಿಗಳಿಗೆ) ಶಿಕ್ಷೆ ನೀಡುವುದು. (ಈಶ್ವರಭಾವ ಎಂಬ ಶಬ್ದದ ವಿವರಣೆಯನ್ನು ವ್ಯಾಸಸ್ಮೃತಿ ಹೀಗೆ ನೀಡಿದೆ-) 'ಬಲಾತ್ಕಾರದಿಂದ ಸಂಪತ್ತನ್ನು ಕಸಿದುಕೊಳ್ಳುವುದು, ದೈಹಿಕಶಿಕ್ಷೆ ನೀಡುವುದು, ದುಷ್ಟರನ್ನು ದಂಡಿಸುವುದು, ದುಷ್ಟರ ಸಂಪತ್ತನ್ನು ನಾಶಮಾಡುವುದು- ಇದು ಈಶ್ವರಭಾವ ಎನಿಸುತ್ತದೆ. ಈ ಕೆಲಸಗಳನ್ನು ಕ್ಷತ್ರಿಯೇತರರು ಮಾಡಬಾರದು' ಎಂದು ಸ್ಮೃತಿ. ಇದೆಲ್ಲವೂ ಸ್ವಾಭಾವಿಕವಾದ ಕ್ಷತ್ರಿಯರ ಕರ್ಮ ಎಂದು ಅರ್ಥ.

## ಬ್ರಾಹ್ಮಣನಿಗೂ ಕ್ಷಾತ್ರಧರ್ಮ - ಕ್ಷತ್ರಿಯನಿಗೂ ಬ್ರಾಹ್ಮಧರ್ಮ

**ಅತ್ರ ಬ್ರಾಹ್ಮಣಧರ್ಮಾಃ ಶಮಾದಯೋಽಪಿ ತೇಭ್ಯಃ ಕಿಂಚಿದೂನಾಃ**

**ಕ್ಷಾತ್ರಧರ್ಮೇಷ್ವಪಿ ಗ್ರಾಹ್ಯಾಃ । ಶಮಾದೇರ್ಬ್ರಾಹ್ಮಣಧರ್ಮತೋಕ್ತಿಸ್ತು ಕ್ಷತ್ರಿಯ-ಧರ್ಮಾದ್ಯಪೇಕ್ಷಯಾऽಧಿಕ್ಯವಿವಕ್ಷಯೈವ । ಯೇಷು ಚಕ್ರವರ್ತಿಷು ವಿಪ್ರೇಭ್ಯೋऽಧಿಕಶಮಾದಯಃ ತೇऽತ್ರ ನ ವಿವಕ್ಷಿತಾಃ । ಕಿಂತು ತದನ್ಯ ಏವೇತಿ ಜ್ಞೇಯಮ್ । ಕ್ಷತ್ರಧರ್ಮಾ ಅಪಿ ವಿಪ್ರಾದಿಷು ಕ್ರಮಾದೂನಾ ಜ್ಞೇಯಾಃ ॥43 ॥**

ಇಲ್ಲಿ ಬ್ರಾಹ್ಮಣಧರ್ಮಗಳಾದ ಶಮಾದಿಗಳನ್ನೂ ಬ್ರಾಹ್ಮಣರಲ್ಲಿರುವ ಆ ಧರ್ಮಗಳಿಗಿಂ ಸ್ವಲ್ಪ ಕಡಿಮೆ ಕ್ಷತ್ರಿಯಧರ್ಮಗಳಲ್ಲಿಯೂ ಪರಿಗಣಿಸಬೇಕು (ಶಮಾದಿಗಳು ಕ್ಷತ್ರಿಯರಲ್ ಇದ್ದರೂ) ಅವು ಬ್ರಾಹ್ಮಣಧರ್ಮ ಎಂದು ಹೇಳಿದ್ದು, (ಬ್ರಾಹ್ಮಣರಲ್ಲಿ) ಕ್ಷತ್ರಿಯಧರ್ಮಕ್ಕಿಂ ಶಮಾದಿಗಳು ಹೆಚ್ಚು ಇರುತ್ತವೆ ಎಂಬ ಅಭಿಪ್ರಾಯದಿಂದ.

(ಕಾರ್ತವೀರ್ಯಾರ್ಜುನ ಮೊದಲಾದ) ಚಕ್ರವರ್ತಿಗಳಲ್ಲಿ ಬ್ರಾಹ್ಮಣರಲ್ಲಿರುವುದಕ್ಕಿಂತಲ್ ಹೆಚ್ಚಿನ ಶಮಾದಿಗುಣಗಳು ಇವೆ. ಅವರನ್ನು ಇಲ್ಲಿ ಇಟ್ಟುಕೊಂಡಿಲ್ಲ. (ಶಮಾದಿಗಳು ಕ್ಷಾತ್ ಧರ್ಮಕ್ಕಿಂತ ಕಡಿಮೆ ಎಂಬ ಮಾತು ಉಳಿದ ಕ್ಷತ್ರಿಯರಿಗೆ ಮಾತ್ರ ಅನ್ವಯವಾಗುವುದು

ಕ್ಷತ್ರಿಯಧರ್ಮಗಳಾದ ಶೌರ್ಯಾದಿಗಳನ್ನೂ ಸಹ ಬ್ರಾಹ್ಮಣರಲ್ಲಿ ಬ್ರಾಹ್ಮಣಧರ್ಮಕ್ಕಿಂ ಕಡಿಮೆ ತಿಳಿಯಬೇಕು. ॥ 43 ॥

**ಕೃಷಿಗೋರಕ್ಷವಾಣಿಜ್ಯಂ ವೈಶ್ಯಂ ಕರ್ಮ ಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥ 44 ॥**

**ಅರ್ಥ**- ಬೇಸಾಯ, ಗೋವುಗಳ ಪಾಲನೆ, ವ್ಯಾಪಾರ- ಇವು ವೈಶ್ಯರ ಸಹಜ ಕರ್ಮ. ಇನ್ನು (ಬ್ರಾಹ್ಮಣ-ಕ್ಷತ್ರಿಯ-ವೈಶ್ಯರ) ಸೇವೆ ಶೂದ್ರನ ಸಹಜ ಕರ್ಮ.

**ಕೃಷಿಃ ಕರ್ಷಣೇನ ಜೀವನಂ ಗವಾಂ ಪಾಲನಂ ವಾಣಿಜ್ಯಂ ವಾರ್ತಯಾ ಜೀವನಮ್ । ಅತ್ರಾಪಿ ಕ್ಷತ್ರಿಯಾದೂನಾಃ ಶಮಾದಯೋऽಪಿ ವೈಶ್ಯಕರ್ಮಮಧ್ಯೇ ಗ್ರಾಹ್ಯಾಃ । ಪರಿಚರ್ಯಾತ್ಮಕಂ ತ್ರೈವರ್ಣಿಕಸೇವಾರೂಪಮ್ । ಅತ್ರಾಪಿ ವೈಶ್ಯಾದೂನಶಮಾದಿಕಂ ಚ ಗ್ರಾಹ್ಯಮ್ ॥ 44 ॥**

**ಅನುವಾದ**- **ಕೃಷಿಃ**= ಉಳುಮೆಯಿಂದ ಜೀವನ, ಗೋವುಗಳ ರಕ್ಷಣೆ, ವಾಣಿಜ್ಯಂ ವ್ಯಾಪಾರದಿಂದ ಜೀವನ. ಈ ವೈಶ್ಯಧರ್ಮಗಳಲ್ಲೂ (ಕ್ಷತ್ರಿಯಧರ್ಮಗಳಲ್ಲಿ ಪರಿಗಣಿಸಿದಂತ ಶಮಾದಿ ಬ್ರಾಹ್ಮಣಧರ್ಮಗಳನ್ನೂ (ಶೌರ್ಯಾದಿ ಕ್ಷತ್ರಿಯ ಗುಣಗಳನ್ನೂ) ಪರಿಗಣಿಸಬೇಕು **ಪರಿಚರ್ಯಾತ್ಮಕಂ**= ಮೂರು ವರ್ಣದವರ ಸೇವಾರೂಪವಾದದ್ದು. ಈ ಶೂದ್ರಧರ್ಮಗಳಲ್ ವೈಶ್ಯರಿಗಿಂತ ಕಡಿಮೆಯ ಶಮಾದಿ ಗುಣಗಳನ್ನು ಪರಿಗಣಿಸಬೇಕು. ॥ 44 ॥

## ಕರ್ಮ ಮೋಚಕವಾಗುವ ಬಗೆ
## (ಸಂಕ್ಷೇಪವಾಗಿ ಪುರುಷಾರ್ಥಸಾಧನ ನಿರೂಪಣೆ)

**ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ॥ 45 ॥**

ಅರ್ಥ- ಮನುಷ್ಯ ತನ್ನ ತನ್ನ ಕರ್ಮದಲ್ಲಿ (ಬ್ರಾಹ್ಮಣಾದಿ ಸ್ವಸ್ವ ಕರ್ಮದಲ್ಲಿ) ನಿರತನಾಗಿ (ಭಗವತ್ಪೂಜಾರೂಪದಿಂದ ಮಾಡುತ್ತಾ) (ಜ್ಞಾನದ್ವಾರಾ) ಮುಕ್ತಿಯನ್ನು ಪಡೆಯುತ್ತಾರೆ. ಸ್ವಕರ್ಮನಿರತನು ಮುಕ್ತಿ ಪಡೆಯುವ ಬಗೆಯನ್ನು ಕೇಳು.

**ಅಸ್ತ್ವೇವಂ ಬ್ರಾಹ್ಮಣಾದಿಕರ್ಮ ಪ್ರವಿಭಕ್ತಮ್ । ತತಃ ಕಿಮಿತ್ಯತ ಆಹ- ಸ್ವೇ ಸ್ವ ಇತಿ ॥ ಪ್ರಾಗುಕ್ತಬ್ರಾಹ್ಮಣಾದಿಸ್ವಕೀಯೇ ಕರ್ಮಣ್ಯಭಿರತಃ ಸ್ವಸ್ವಕರ್ಮಣಾ ಭಗವದಾರಾಧನಂ ಕುರ್ವನ್ನರಃ ಸಂಸಿದ್ಧಿಂ ಮುಕ್ತಿಂ ಜ್ಞಾನದ್ವಾರಾ ಲಭತೇ ಪ್ರಾಪ್ನೋತಿ । ಏತದೇವ ಸಮ್ಯಗ್ವಿಶದಯಿತುಂ ಪ್ರತಿಜಾನೀತೇ- ಸ್ವಕರ್ಮೇತಿ ॥ ವಿಂದತಿ ಲಭತೇ । ತತ್ತಂ ಪ್ರಕಾರಂ ಶೃಣು ಇತಿ ॥ 45॥**

ಅನುವಾದ- ಬ್ರಾಹ್ಮಣಾದಿಗಳ ಕರ್ಮ ಹೀಗೆ ಬೇರೆ ಬೇರೆಯಾಗಿರಲಿ. ಆದರಿಂದೇನು ಎಂಬ ಪ್ರಶ್ನೆಗೆ 'ಸ್ವೇ ಸ್ವೇ' ಎನ್ನುವುದರಿಂದ ಉತ್ತರ ಹೇಳುತ್ತಿದ್ದಾನೆ ಶ್ರೀಕೃಷ್ಣ. (ಸ್ವೇ ಸ್ವೇ=) ಹಿಂದೆ ಹೇಳಿದ ಬ್ರಾಹ್ಮಣಾದಿ ಸ್ವಸಂಬಂಧಿ ಕರ್ಮದಲ್ಲಿ, **ಅಭಿರತಃ**= ಸ್ವಕರ್ಮದಿಂದ ಭಗವದಾರಾಧನವನ್ನು ಮಾಡುವ ಮನುಷ್ಯನು, **ಸಂಸಿದ್ಧಿಂ**= ಮುಕ್ತಿಯನ್ನು ಜ್ಞಾನದ್ವಾರಾ **ಲಭತೇ**= ಹೊಂದುತ್ತಾನೆ. ಇದನ್ನೇ ಚೆನ್ನಾಗಿ ವಿಶದಪಡಿಸಲು 'ಸ್ವಕರ್ಮಣಾ' ಎಂಬುದರಿಂದ ಪ್ರತಿಜ್ಞೆ ಮಾಡುತ್ತಿದ್ದಾನೆ. **ವಿಂದತಿ**= ಹೊಂದುತ್ತಾನೆ. **ತತ್**= ಆ ಬಗೆಯನ್ನು ಕೇಳು.

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ 46 ॥**

ಅರ್ಥ- ಯಾರಿಂದ ಎಲ್ಲ ಜೀವಿಗಳ ಚಟುವಟಿಕೆ ನಡೆವುದೋ, ಯಾರಿಂದ ಈ ಎಲ್ಲ ಜಗತ್ತು ವ್ಯಾಪ್ತವಾಗಿದೆಯೋ ಅವನನ್ನು (ಆ ಪರಮಾತ್ಮನನ್ನೂ) ಸ್ವವರ್ಣಕ್ಕೆ ವಿಹಿತವಾದ ಕರ್ಮದಿಂದ ಪೂಜಿಸಿ ಮನುಷ್ಯನು ಮುಕ್ತಿಯನ್ನು ಹೊಂದುತ್ತಾನೆ.

**ಯತೋ ಯಸ್ಮಾದ್ಭಗವತೋ ಭೂತಾನಾಂ ಪ್ರಾಣಿನಾಂ ಪ್ರವೃತ್ತಿಃ ಚೇಷ್ಟಾ ಭವತಿ । ಯೇನ ಚ ಭಗವತಾ ಇದಂ ಸರ್ವಂ ಚರಾಚರಾತ್ಮಕಂ ಜಗತ್ತತಂ ವ್ಯಾಪ್ತಂ**

**ತಂ ಭಗವಂತಂ ಸ್ವಕರ್ಮಣಾ ಸಮಭ್ಯರ್ಚ್ಯ ಶಮದಮಾದಿಪೂರ್ವಕಂ ಪೂಜಯಿತ್ವಾ ಸಿದ್ಧಿಂ ಮೋಕ್ಷಂ ವಿಂದತಿ ಲಭತೇ ಮಾನವಃ ಮನುಷ್ಯೋ ಬ್ರಾಹ್ಮಣಾದಿರಿತ್ಯರ್ಥಃ ॥ 46 ॥**

**ಅನುವಾದ–** **ಯತಃ**= ಯಾವ ಭಗವಂತನಿಂದ **ಭೂತಾನಾಂ** = ಪ್ರಾಣಿಗಳ, **ಪ್ರವೃತ್ತಿಃ**= ಚಟುವಟಿಕೆಯು ಆಗುವುದೋ ಮತ್ತು, **ಯೇನ** = ಯಾವ ಭಗವಂತನಿಂದ, **ಇದಂ ಸರ್ವಂ**= ಈ ಎಲ್ಲ ಚರಾಚರಾತ್ಮಕ ಜಗತ್ತು **ತತಂ**= ವ್ಯಾಪ್ತವೋ **ತಂ**= ಆ ಭಗವಂತನನ್ನು ಸ್ವವಿಹಿತ ಕರ್ಮದಿಂದ, **ಸಮಭ್ಯರ್ಚ್ಯ**= ಶಮದಮಾದಿಗುಣಪೂರ್ವಕ ಪೂಜಿಸಿ (1) **ಸಿದ್ಧಿಂ**= ಮೋಕ್ಷವನ್ನು **ವಿಂದತಿ**= ಹೊಂದುತ್ತಾನೆ. **ಮಾನವಃ**= ಬ್ರಾಹ್ಮಣಾದಿ ಮನುಷ್ಯನು– ಎಂದರ್ಥ. ॥ 46 ॥

**ವಿವರಣೆ-** (1) ಸಮ್+ ಅಭ್ಯರ್ಚ್ಯ ಎನ್ನುವುದಕ್ಕೆ ಚೆನ್ನಾಗಿ ಪೂಜಿಸಿ ಎಂದರ್ಥ. ಅದರಲ್ಲಿ ಸಮ್ ಎಂಬುದರ ಅರ್ಥವನ್ನೂ 'ಶಮದಮಾದಿ ಪೂರ್ವಕಂ' ಎಂದು ವಿವರಿಸಿದ್ದಾರೆ. ಹಿಂದೆ ಹೇಳಿದ ಶಮಾದಿಗುಣಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಪೂಜಿಸುವುದು 'ಚೆನ್ನಾಗಿ ಪೂಜಿಸುವುದು' ಎಂದು ಆಶಯ.

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ 47 ॥**

**ಅರ್ಥ-** ಚೆನ್ನಾಗಿ (ಸಕಲ ಅಂಗಗಳೊಂದಿಗೆ) ಆಚರಿಸಿದ ಪರಧರ್ಮಕ್ಕಿಂತ (ಸ್ವವರ್ಣಕ್ಕೆ ವಿಹಿತವಲ್ಲದ ಕರ್ಮಕ್ಕಿಂತ) ಕೆಲವು ಅಂಗಗಳು ಇಲ್ಲದ ಸ್ವವರ್ಣವಿಹಿತಧರ್ಮವೇ ಶ್ರೇಯಸ್ಕರ. (ಮನುಷ್ಯನು) ಬ್ರಾಹ್ಮಣಾದಿ ಸ್ವಭಾವಕ್ಕೆ ನಿಯಮಿಸಲ್ಪಟ್ಟ ಕರ್ಮವನ್ನು ಮಾಡುತ್ತಿದ್ದರೆ ಅಂಗಹೀನತೆಯಿಂದಾಗುವ ದೋಷವನ್ನು ಹೊಂದಲಾರ.

**ಸ್ವಧರ್ಮನಿರತತ್ವಮಾವಶ್ಯಕಮಿತ್ಯೇತದುಪಪಾದಯತಿ- ಶ್ರೇಯಾನಿತಿ ॥ ವಿಗುಣೋಽಂಗಹೀನೋಽಪಿ ಸ್ವಧರ್ಮಃ ಸಮ್ಯಗನುಷ್ಠಿತಾತ್ಪರಧರ್ಮಾ-ಚ್ಛ್ರೇಯಾನ್ ಪುಮರ್ಥಸಾಧನಮ್ । ವಿಗುಣಃ ಕಥಂ ಶ್ರೇಯಾನಿತ್ಯತ ಆಹ- ಸ್ವಭಾವೇತಿ ॥ ಕಿಲ್ಬಿಷಂ ವೈಗುಣ್ಯಕೃತದೋಷಂ ನಾಪ್ನೋತಿ ॥ 47 ॥**

**ಅನುವಾದ-** ಸ್ವಧರ್ಮತತ್ಪರತೆಯು ಆವಶ್ಯಕವೆನ್ನುವುದನ್ನು ಸಮರ್ಥಿಸುತ್ತಿದ್ದಾನೆ 'ಶ್ರೇಯಾನ್' ಎಂಬುದರಿಂದ. **ವಿಗುಣಃ**= ಅಂಗಹೀನವಾಗಿದ್ದರೂ ಸ್ವಧರ್ಮವು ಚೆನ್ನಾಗಿ ಆಚರಿಸಲ್ಪಟ್ಟ ಪರಧರ್ಮಕ್ಕಿಂತ, **ಶ್ರೇಯಾನ್** = ಪುರುಷಾರ್ಥಸಾಧನವು. ಅಂಗಹೀನವಾದದ್ದು ಹೇಗೆ ಶ್ರೇಯಸ್ಕರ ಎಂಬ ಪ್ರಶ್ನೆಗೆ ಉತ್ತರ– 'ಸ್ವಭಾವ' ಎಂದು, **ಕಿಲ್ಬಿಷಂ**= ಅಂಗಹೀನತೆಯಿಂದಾದ ದೋಷವನ್ನು , **ನ ಆಪ್ನೋತಿ** = ಹೊಂದಲಾರ.

**ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥ 48 ॥**

**ಅರ್ಥ**- ಹೇ ಕುಂತೀಪುತ್ರ ! ಸ್ವವಿಹಿತಕರ್ಮವು ಅಂಗವೈಕಲ್ಯದೋಷದಿಂದ ಕೂಡಿದ್ದರೂ ಅದನ್ನು ಬಿಡಬಾರದು. ಏಕೆಂದರೆ, ಹೊಗೆಯು ಬೆಂಕಿಯನ್ನು ಆವರಿಸುವಂತೆ ಎಲ್ಲ ಕರ್ಮಗಳನ್ನು ದೋಷವು ಆವರಿಸಿರುತ್ತದೆ.

**ವೈಗುಣ್ಯಶಂಕಯಾ ಸ್ವಧರ್ಮತ್ಯಾಗೋ ನ ಕಾರ್ಯಃ । ವೈಗುಣ್ಯದೋಷಸ್ಯ ಸರ್ವತ್ರಾವರ್ಜನೀಯತ್ವಾದಿತ್ಯಾಹ- ಸಹಜಮಿತಿ ॥ ಹಿ ಯಸ್ಮಾತ್ಸರ್ವಾರಂಬಾಃ ಸರ್ವಕರ್ಮಾಣಿ ಧೂಮೇನಾಗ್ನಿರಾವೃತ ಇವ ದೋಷೇಣಾವೃತಾ ಏವ, ತತಃ ಸದೋಷಮಪಿ ಸಹಜಂ ಕರ್ಮ ನ ತ್ಯಜೇದಿತಿ ॥ 48 ॥**

**ಅನುವಾದ**- ಅಂಗಹೀನತೆಯ ಸಂಶಯದಿಂದ ಸ್ವಧರ್ಮವನ್ನು ಬಿಡಬಾರದು, ಏಕೆಂದರೆ, ಅಂಗಹೀನತಾದೋಷವು ಎಲ್ಲೂ ತಪ್ಪಿಸಲಾಗದ್ದು ಎಂದು ಹೇಳುತ್ತಿದ್ದಾನೆ- **ಸಹಜಂ** ಎಂದು. **ಹಿ** ಏಕೆಂದರೆ, **ಸರ್ವಾರಂಭಾಃ** = ಸರ್ವಕರ್ಮಗಳು, ಹೊಗೆಯಿಂದ ಬೆಂಕಿಯಂತೆ ದೋಷದಿಂದ ಆವರಿಸಲ್ಪಟ್ಟವೇ, ಆದ್ದರಿಂದ ದೋಷಸಹಿತವಾಗಿದ್ದರೂ ಸಹಜಕರ್ಮವನ್ನು ಬಿಡಬಾರದು.

## ಸಿದ್ಧಿಗೆ ಬೇಕು ಈ ಗುಣಗಲು

**ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥ 49 ॥**

**ಅರ್ಥ**- ಮನಸ್ಸನ್ನು ಗೆದ್ದ (ಆದರಿಂದ) ಎಲ್ಲ ವಿಷಯಗಳಲ್ಲಿ ಆಸಕ್ತಿ ಕಳೆದುಕೊಂಡ, (ಐಹಿಕ-ಪಾರತ್ರಿಕ ಸ್ವರ್ಗಾದಿ ಸುಖಗಳಲ್ಲಿ) ಆಸೆ ಇಲ್ಲದ ಮನುಷ್ಯನು (ಸಂನ್ಯಾಸೇನ) ಸಕಲಕರ್ಮಗಳನ್ನು ಭಗವಂತನಲ್ಲಿ ಸಮರ್ಪಿಸುವುದರಿಂದ ಮೋಕ್ಷದ ಉಪಾಯಗಳ ಸಿದ್ಧಿಯನ್ನು ಹೊಂದುತ್ತಾನೆ.

**ಸ್ವಕರ್ಮನಿರತಃ ಸಿದ್ಧಿಂ ವಿಂದತಿ 'ಇತ್ಯತ್ರಾಪೇಕ್ಷಿತಧರ್ಮಾಂತರಾಣ್ಯಾಹ-ಅಸಕ್ತೇತಿ ॥ ಸರ್ವತ್ರ ಶಬ್ದಾದಿವಿಷಯೇಷು । ಅಸಕ್ತಬುದ್ಧಿತ್ವೇ ಹೇತುರ್ಜಿತಾತ್ಮೇತಿ । ವಶೀಕೃತಮನಸ್ಕಃ ವೈಷಯಿಕಸುಖೇ ಕ್ಷುದ್ರಾಮುಷ್ಮಿಕಸುಖೇ ಚಾಪಗತೇಚ್ಛಃ । ಪರಮಾಂ ಸಂಪೂರ್ಣಾಂ ನೈಷ್ಕರ್ಮ್ಯಸಿದ್ಧಿಂ ನೈಷ್ಕರ್ಮ್ಯಾಯ ಮೋಕ್ಷಾಯ ಸಿದ್ಧಿಂ ಉಪಾಯಸಿದ್ಧಿಂ ಪ್ರಾರಬ್ಧಾನ್ಯ-ಸರ್ವಾನಿಷ್ಟಕರ್ಮನಾಶಾಖ್ಯಾಂ ಸಿದ್ಧಿಂ ವಾ । ಸಂನ್ಯಾಸೇನ ಕಾಮ್ಯಕರ್ಮತ್ಯಾಗೇನ ಸರ್ವಕರ್ಮಣಾಂ ಭಗವತಿ ಸಮರ್ಪಣೇನ ವಾಽಧಿಗಚ್ಛತಿ ಪ್ರಾಪ್ನೋತಿ ॥ 49 ॥**

**ಅನುವಾದ-** '**ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು**' ಎಂದು ಹಿಂದೆ (18 -45)ಹೇಳಿದ ವಿಷಯದಲ್ಲಿ ಅಪೇಕ್ಷಿತವಾದ ಬೇರೆ ಕೆಲವು ಧರ್ಮಗಳನ್ನು ಅಸಕ್ತ ಎನ್ನುವುದರಿಂದ ಹೇಳುತ್ತಿದ್ದಾನೆ. (1) **ಸರ್ವತ್ರ**= ಶಬ್ದಾದಿವಿಷಯಗಳಲ್ಲಿ. ಆಸಕ್ತ ಬುದ್ಧಿತ್ವಕ್ಕೆ ಕಾರಣ ಜಿತಾತ್ಮಾ ಎನ್ನುವುದು. (2) (**ಜಿತಾತ್ಮಾ**= ) **ಜಿತ**= ವಶೀಕೃತವಾದ **ಆತ್ಮಾ**= ಮನಸ್ಸುಳ್ಳ ವನು (**ವಿಗತಸ್ಪೃಹಃ**=) ವೈಷಯಿಕಸುಖದಲ್ಲೂ ಕ್ಷುಲ್ಲಕವಾದ ಸ್ವರ್ಗಾದಿ ಪರಲೋಕದ ಸುಖದಲ್ಲೂ ಆಸೆ ಇಲ್ಲದವನು. **ಪರಮಾಂ**= ಸಂಪೂರ್ಣವಾದ, **ನೈಷ್ಕರ್ಮ್ಯಸಿದ್ಧಿಂ**= **ನೈಷ್ಕರ್ಮ್ಯಾಯ**= ಮೋಕ್ಷಕ್ಕಾಗಿ, **ಸಿದ್ಧಿಂ**= ಉಪಾಯಗಳ ಸಿದ್ಧಿಯನ್ನು , ಅಥವಾ, **ಸಿದ್ಧಿಂ**= ಪ್ರಾರಬ್ಧಕರ್ಮ ಹೊರತಾದ ಎಲ್ಲ ಅನಿಷ್ಟಕರ್ಮಗಳ ನಾಶವೆಂಬ ಸಿದ್ಧಿಯನ್ನು (3)**ಸಂನ್ಯಾಸೇನ**= ಕಾಮ್ಯಕರ್ಮಗಳನ್ನು ಬಿಡುವುದರಿಂದ, ಅಥವಾ, **ಸಂನ್ಯಾಸೇನ**= ಸಕಲ ಕರ್ಮಗಳನ್ನು ಭಗವಂತ ನಲ್ಲಿಸಮರ್ಪಿಸುವುದರಿಂದ. **ಅಧಿಗಚ್ಛತಿ**= ಹೊಂದುತ್ತಾನೆ. ॥ 49 ॥

**ವಿವರಣೆ-** 1. ಹಿಂದೆ ಸ್ವಕರ್ಮನಿರತನು ಮೋಕ್ಷ ಹೊಂದುವ ಬಗೆಯನ್ನು ಹೇಳುವೆ ಕೇಳು ಎಂದು ಪ್ರತಿಜ್ಞೆ ಮಾಡಿ 'ಅಂಗಹೀನವಾದರೂ ಸ್ವಕರ್ಮವನ್ನು, ಭಗವತ್ಪೂಜಾರೂಪದಿಂದ ಅನುಷ್ಠಾನ ಮಾಡಬೇಕು'– ಎಂಬ ಒಂದು ಅಂಶವನ್ನು ಮೂರು ಶ್ಲೋಕಗಳಲ್ಲಿ ಹೇಳಲಾಗಿತ್ತು ಅದರೊಂದಿಗೆ ಇರಬೇಕಾದ ಅಸಕ್ತ ಬುದ್ಧಿತ್ವ ಇತ್ಯಾದಿ ಧರ್ಮಗಳನ್ನು ಈ ಶ್ಲೋಕದಲ್ಲಿ ಹೇಳುತ್ತಿದ್ದಾರೆ– ಎಂದು ಅಭಿಪ್ರಾಯ.

2. 'ಹೊಟ್ಟೆ ತುಂಬಿದ ಮಗು ಆಟವಾಡುತ್ತದೆ' ಎಂದರೆ 'ಹೊಟ್ಟೆ ತುಂಬಿದ್ದರಿಂದ ಆಟ ವಾಡುತ್ತದೆ' ಎಂದು ಒಂದಕ್ಕೊಂದು ಕಾರಣ ಎಂದು ತಿಳಿದು ಬರುತ್ತದೆ. ಅದರಂತೆ 'ಜಿತಾತ್ಮ ನಾದ್ದರಿಂದ ಅಸಕ್ತಬುದ್ಧಿಯಾದವನು' ಎಂದು ಅಸಕ್ತ ಬುದ್ಧಿತ್ವಕ್ಕೆ ಮನೋಜಯವು ಕಾರಣ ಎಂಬ ಅರ್ಥದಲ್ಲಿ '**ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ** ' ಎಂದು ಹೇಳಿದ್ದು.

3. '**ಸ್ವಕರ್ಮ ನಿರತಃ ಸಿದ್ಧಿಂ**' (18–45) ಎಂಬಲ್ಲಿ ಹಿಂದೆ ಸಿದ್ಧಿಶಬ್ದವನ್ನು ಮೋಕ್ಷ ಎಂಬರ್ಥದಲ್ಲಿ ಬಳಸಲಾಗಿದೆ. ಇಲ್ಲಿನೈಷ್ಕರ್ಮ್ಯಸಿದ್ಧಿಂ ಎಂಬಲ್ಲಿ ನೈಷ್ಕರ್ಮ್ಯಶಬ್ದಕ್ಕೆ ಮೋಕ್ಷ ಎಂಬ ಅರ್ಥ ಇರುವುದರಿಂದ ಬೇರೊಂದು ರೀತಿಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ '**ನೈಷ್ಕರ್ಮ್ಯಾಯ ಸಿದ್ಧಿಃ**= ನೈಷ್ಕರ್ಮ್ಯಸಿದ್ಧಿಃ' ಎಂದು ವಿಗ್ರಹ. ಮೋಕ್ಷಕ್ಕಾಗಿ ಸಿದ್ಧಿ ಎಂದು ಅದರರ್ಥ. ಮೋಕ್ಷಕ್ಕಾಗಿ ಯಾವುದರ ಸಿದ್ಧಿ ? ಎಂದರೆ ಮೋಕ್ಷೋಪಾಯಗಳ ಸಿದ್ಧಿ ಎಂದು ಅಭಿಪ್ರಾಯ. ಮೋಕ್ಷೋಪಾಯಗಳೆಂದರೆ ಶ್ರವಣಾದಿಗಳು ಎಂದು ಒಂದು ಅರ್ಥ ಪ್ರಾರಬ್ಧಾನ್ಯಕರ್ಮನಾಶವು ಮೋಕ್ಷೋಪಾಯ ಎಂದು ಮತ್ತೊಂದು ಅರ್ಥ.

ಇದರಂತೆ, ಈ ಅಧ್ಯಾಯದ ಆರಂಭದಲ್ಲಿ ಹೇಳಿದಂತೆ ಸಂನ್ಯಾಸ ಶಬ್ದಕ್ಕೂ ಎರಡು ಅರ್ಥಗಳು – ಎಂದು ಅಭಿಪ್ರಾಯ.

## ಸಿದ್ಧಪುರುಷರಿಗೆ ದೊರೆಯುವ ಫಲ

**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಽಽಪ್ನೋತಿ ನಿಬೋಧ ಮೇ ।**
**ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥ 50 ॥**

**ಅರ್ಥ**- ಹೇ ಕುಂತೀಪುತ್ರ ! ಜ್ಞಾನದ ಕೊನೆಯ ಅವಸ್ಥೆ ಸಿದ್ಧಿ ಎನಿಸುತ್ತದೆ. ಯಾವ ಪ್ರಕಾರದಿಂದ ಆ ಸಿದ್ಧಿಯನ್ನು ಪಡೆದವನಾಗಿ ಲಕ್ಷ್ಮೀದೇವಿಯನ್ನು ಹೊಂದುತ್ತಾನೆ ಎನ್ನುವುದನ್ನು ಸಂಕ್ಷಿಪ್ತವಾಗಿ ನನ್ನ ಕಡೆಯಿಂದ ತಿಳಿ.

**ಪ್ರತಿಜ್ಞಾಪೂರ್ವಂ ನೈಷ್ಕರ್ಮ್ಯಸಿದ್ಧಿಸಾಧನಂ ವಿವೃಣ್ವನ್, ತದನಂತರಫಲಮಾಹ- ಸಿದ್ಧಿಮಿತಿ ॥ ಯಾ ನೈಷ್ಕರ್ಮ್ಯಾಯ ಸಿದ್ಧಿಃ ಜ್ಞಾನಸ್ಯ ಪರಿನಿಷ್ಠಾ ತಾಂ ನೈಷ್ಕರ್ಮ್ಯಸಿದ್ಧಿಂ ಯೇನ ಪ್ರಕಾರೇಣ ಪ್ರವರ್ತಮಾನಃ ಪ್ರಾಪ್ತೋ ಭೂತ್ವಾ ಅಪರಂ ಬ್ರಹ್ಮ ಲಕ್ಷ್ಮೀಮಾಪ್ನೋತಿ ತಂ ಪ್ರಕಾರಂ ಸಂಕ್ಷೇಪತೋ ಮೇ ನಿಬೋಧ ಬುಧ್ಯಸ್ವ ॥ 50 ॥**

**ಅನುವಾದ**- ಪ್ರತಿಜ್ಞಾ ಪೂರ್ವಕವಾಗಿ ನೈಷ್ಕರ್ಮ್ಯದ (ಮೋಕ್ಷದ) ಸಿದ್ಧಿಯ (ಉಪಾಯದ) ಸಾಧನಂ (ಉಪಾಯವನ್ನು) ವಿವರಿಸುತ್ತಾ ನೈಷ್ಕರ್ಮ್ಯಸಿದ್ಧಿಯ ಅನಂತರದ ಫಲವನ್ನು ಹೇಳುತ್ತಾನೆ- ಸಿದ್ಧಿಂ ಎನ್ನುವುದರಿಂದ (1) **ಯಾ**= ಯಾವ ನೈಷ್ಕರ್ಮ್ಯ ಸಿದ್ಧಿಯು (ಹಿಂದಿನ ಶ್ಲೋಕದಲ್ಲಿ ವಿವರಿಸಿದಂತೆ ಮೋಕ್ಷೋಪಾಯವು) ಜ್ಞಾನದ ಕೊನೆಯ ಅವಸ್ಥೆಯೋ (2) ಅಂತಹ, (ಸಿದ್ಧಿಂ=) ನೈಷ್ಕರ್ಮ್ಯಸಿದ್ಧಿಯನ್ನು (**ಯಥಾ**=) ಯಾವ ಪ್ರಕಾರದಿಂದ ಇರುತ್ತಾ ಹೊಂದಿದವನಾಗಿ ಬ್ರಹ್ಮ= ಅಪರ ಬ್ರಹ್ಮಳಾದ ಲಕ್ಷ್ಮೀದೇವಿಯನ್ನು , **ಆಪ್ನೋತಿ**= ಹೊಂದುತ್ತಾನೋ ಆ ಪ್ರಕಾರವನ್ನು ಸಂಕ್ಷಿಪ್ತವಾಗಿ (**ಮೇ ಸಕಾಶಾತ್**) = ನನ್ನ ಕಡೆಯಿಂದ, **ನಿಬೋಧ**= ತಿಳಿ. ॥ 50 ॥

**ವಿವರಣೆ**- (1) 'ಮೇ ನಿಬೋಧ' 'ನನ್ನಿಂದ ತಿಳಿ' ಎಂದರೆ 'ನಾನು ಹೇಳುತ್ತೇನೆ ನೀನು ಕೇಳಿ ತಿಳಿ' ಎಂದರ್ಥ. ಹೀಗೆ ಇದು ಪ್ರತಿಜ್ಞೆ ಆಗಿದೆ. ಯಾವುದರ ಪ್ರತಿಜ್ಞೆ ? ನೈಷ್ಕರ್ಮ್ಯಸಿದ್ಧಿಸಾಧನದ ಪ್ರತಿಜ್ಞೆ. **ನೈಷ್ಕರ್ಮ್ಯ**= ಮೋಕ್ಷ. ಅದರ ಸಿದ್ಧಿಸಾಧನವಾದ ಜ್ಞಾನ, ಅದರ, **ಸಾಧನ**- ಮುಂದಿನ ಶ್ಲೋಕಗಳಲ್ಲಿ ಹೇಳುತ್ತಿರುವ ವಿಶುದ್ಧಬುದ್ಧಿಯುಕ್ತತ್ವಾದಿಗಳು. ಜ್ಞಾನದಿಂದ ಮೋಕ್ಷ ದೊರೆಯುವ ಮಧ್ಯ ಬ್ರಹ್ಮಪ್ರಾಪ್ತಿ ಆಗುವುದೆಂದು '**ಸಿದ್ಧಿಂ ಪ್ರಾಪ್ತಃ ಬ್ರಹ್ಮ ಆಪ್ನೋತಿ**' ಎನ್ನುವುದರಿಂದ ಹೇಳಿದ್ದಾರೆ. ಅದನ್ನು '**ತದನಂತರಫಲಮಾಹ**' ಎಂಬ ಭಾಗದಿಂದ ಗೀತಾವಿವೃತಿಯಲ್ಲಿ ವಿವರಿಸಿದ್ದಾರೆ.

(2) '**ಜ್ಞಾನಸ್ಯ ಪರಾ ನಿಷ್ಠಾ**' ಎಂದರೆ 'ಜ್ಞಾನದ ಕೊನೆಯ ಮೋಕ್ಷಸಾಧನಾವಸ್ಥೆ' ಎಂದು ಅರ್ಥ. (ಗೀತಾಪ್ರತಿಪದಾರ್ಥಚಂದ್ರಿಕಾ)

**ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾಽಽತ್ಮಾನಂ ನಿಯಮ್ಯ ಚ ।**
**ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥ 51 ॥**

**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ 52 ॥**

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।**
**ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥ 53 ॥**

**ಅರ್ಥ**- (ಸಾಧಕನು) ವಿಷಯಗಳಲ್ಲಿ ಆಸಕ್ತಿ ಇಲ್ಲದ ಅಂತಃಕರಣದಿಂದ, ಯುಕ್ತನಾಗಿ ಧೈರ್ಯದಿಂದ ಮನಸ್ಸನ್ನು ನಿಗ್ರಹಿಸಿ, ಶಬ್ದಸ್ಪರ್ಶಾದಿ ಭೋಗ್ಯ ಪದಾರ್ಥಗಳನ್ನು ಬಿಟ್ಟು ರಾಗದ್ವೇಷಗಳನ್ನೂ ತ್ಯಜಿಸಿ, ದುರ್ಜನರಿಂದ ದೂರ ವಾಸಿಸುತ್ತಾ, ಅಲ್ಪಾಹಾರವನ್ನು ಸೇವಿಸುತ್ತಾ ಮಾತು-ದೇಹ-ಮನಸ್ಸುಗಳನ್ನು ಅಂಕೆಯಲ್ಲಿಟ್ಟುಕೊಂಡು, ನಿರಂತರ ಧ್ಯಾನವೆಂಬ ಉಪಾಯ ದಲ್ಲಿ ತೊಡಗಿಕೊಂಡು, ವೈರಾಗ್ಯವನ್ನು ಆಶ್ರಯಿಸಿ ಅಹಂಕಾರ (ನಾನೇ ಕರ್ತೃ ಎಂ ಅಭಿಮಾನ)ಬಲ (ಶಕ್ತಿಯ ಅಭಿಮಾನ) ದರ್ಪ (ಭಯದ ಕಾರಣವಿದ್ದರೂ ಅದನ ಕಾಣದಿರುವುದು) ಕಾಮ (ವಿಷಯಾಭಿಲಾಷೆ) ಸಿಟ್ಟು- ಪರಿಗ್ರಹ (ಸಂಗ್ರಹ ಪ್ರವೃತಿ) ಇವುಗಳನ ಬಿಟ್ಟು, ಮಮತೆಯಿಲ್ಲದವನಾಗಿ ಶಾಂತನಾಗಿ (ಕಾರಣವಿದ್ದಾಗಲೂ ಕೋಪಿಸಿಕೊಳ್ಳದವನಾಗಿ ಪರಬ್ರಹ್ಮನಲ್ಲಿಮನಸ್ಸಿಡಲು ಸಮರ್ಥನಾಗುತ್ತಾನೆ.

ಪ್ರತಿಜ್ಞಾತಮಾಹ- **ಬುದ್ಧ್ಯೇತಿ** ॥ ವಿಶುದ್ಧಯಾ ವಿಷಯೇಷ್ವಸಕ್ತಯಾ ಬುದ್ಧ್ಯಾ ಯುಕ್ತಃ । ಧೃತ್ಯಾ ಧೈರ್ಯೇಣ ಸ್ತಂಭನಶಕ್ತ್ಯಾ ಆತ್ಮಾನಂ (ಮನೋ) ನಿಯಮ್ಯ ವಿಷಯೇಭ್ಯೋ ನಿವರ್ತ್ಯ ಚ ಶಬ್ದಾದೀನ್ ವಿಷಯಾನ್ ತ್ಯಕ್ತ್ವಾ ತದನುಭವೇಚ್ಛಾಂ ವಿಹಾಯೇತಿ ಯಾವತ್ । ಅಸ್ಯ ಯದ್ರಾಗದ್ವೇಷೌ ಯೌ ರಾಗದ್ವೇಷೌ ತೌ ಚ ತ್ಯಕ್ತ್ವಾ । ವ್ಯುದಸ್ಯೇತಿ ಪಾಠೇ ತು ನ ಕ್ಲೇಶಃ ॥ 51॥

ವಿವಿಕ್ತಸೇವೀ ಜನಸಮ್ಮರ್ದಹೀನ ದೇಶವಾಸೀ ಲಘ್ವಾಹಾರವಾನ್ । ಯತ-ವಾಕ್ಕಾಯಮಾನಸಃ ಸದ್ವಿಷಯ ಏವ ನಿಯಮಿತವಾಗಾದಿಃ । ನಿತ್ಯಂ ಧ್ಯಾನ-ರೂಪೋಪಾಯಪರಃ । ವೈರಾಗ್ಯಂ ಸಮುಪಾಶ್ರಿತಃ ॥ 52 ॥

ಅಹಂಕಾರಂ ಸ್ವಕರ್ತೃತ್ವಾಭಿಮಾನಮ್, ಬಲಂ ಸ್ವಸಮರ್ಥತಾಭಿಮಾನಮ್, ದರ್ಪಂ ಭೀತಿಹೇತೋರದೃಷ್ಟಿಮ್, ಕಾಮಂ ವಿಷಯಾಭಿಲಾಷಮ್, ಕ್ರೋಧಂ

**ಪರಿಗ್ರಹಂ ಚ ವಿಮುಚ್ಯ, ನಿರ್ಮಮಃ ಕರ್ಮಣಿ ಮದೀಯತಾಬುದ್ಧಿಹೀನಃ, ಶಾಂತಃ ಹೇತುಭಿರಪ್ಯನುತ್ಥಿತಕೋಪಃ, ಬ್ರಹ್ಮಭೂಯಾಯ ಬ್ರಹ್ಮಣಿ ಸ್ಥಿತಿರ್ಬ್ರಹ್ಮ-ಭೂಯಂ ತಸ್ಮೈ ಸರ್ವದಾ ಬ್ರಹ್ಮಮನಸ್ಕತ್ವಾಯೇತ್ಯರ್ಥಃ। ಕಲ್ಪತೇ ಸಮರ್ಥೋ ಭವತಿ ॥ 53 ॥**

**ಅನುವಾದ**– ಪ್ರತಿಜ್ಞೆ ಮಾಡಿದ್ದನ್ನು (ಮೋಕ್ಷೋಪಾಯದ ಉಪಾಯವನ್ನು) ಹೇಳುತ್ತಾನೆ- ಬುದ್ಧ್ಯಾ ಎಂದು. **ವಿಶುದ್ಧಯಾ**= ವಿಷಯಗಳಲ್ಲಿ ಆಸಕ್ತಿ ಇಲ್ಲದ, **ಬುದ್ಧ್ಯಾ**= (ಅಂತಃಕರಣ ದಿಂದ) ಕೂಡಿದ. **ಧೃತ್ಯಾ** = ಧೈರ್ಯದಿಂದ, ಅಂದರೆ ತಡೆಯುವ ಶಕ್ತಿಯಿಂದ, **ಆತ್ಮಾನಂ**= ಮನಸ್ಸನ್ನು , **ನಿಯಮ್ಯ**= ವಿಷಯಗಳಿಂದ ಹಿಂತೆಗೆದು, ಮತ್ತು, **ಶಬ್ದಾದೀನ್ ವಿಷಯಾನ್ ತ್ಯಕ್ತ್ವಾ** = ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳೆಂಬ ಭೋಗ್ಯಪದಾರ್ಥಗಳನ್ನು ಬಿಟ್ಟು, ಅಂದರೆ , ಅವನ್ನು ಅನುಭವಿಸಬೇಕೆಂಬ ಆಕಾಂಕ್ಷೆಯನ್ನು ತೊರೆದು ಎಂದು ತಾತ್ಪರ್ಯ. **ಅಸ್ಯ**= ಈತನ, **ಯತ್**= **ಯೌ**= ಯಾವ, **ರಾಗದ್ವೇಷೌ** = ರಾಗದ್ವೇಷಗಳೊ ಅವೆರಡನ್ನು , **ತ್ಯಕ್ತ್ವಾ** = ಬಿಟ್ಟು. '**ವ್ಯುದಸ್ಯ**' ಎಂಬ ಪಾಠವನ್ನು ಇಟ್ಟುಕೊಂಡಾಗಲಂತೂ ಅನ್ವಯದ ಕ್ಲೇಶವಿಲ್ಲ (1). ॥ 51 ॥

**ವಿವಿಕ್ತಸೇವೀ**= (ದುಷ್ಟ) ಜನರ ಸಂದಣಿ ಇಲ್ಲದ ಕಡೆ ವಾಸಿಸುವವ. (**ಲಘ್ವಾಶೀ**=) ಅಲ್ಪ ಆಹಾರ ಉಳ್ಳವನು. **ಯತವಾಕ್ಕಾಯಮಾನಸಃ**= ಒಳ್ಳೆಯ ವಿಷಯಗಳಲ್ಲಿ ಮಾತು-ಶರೀರ, ಮನಸ್ಸುಗಳನ್ನು ನಿಯಂತ್ರಿಸಿದವನು. (**ನಿತ್ಯಂ ಧ್ಯಾನಯೋಗಪರಃ** =) ನಿತ್ಯದಲ್ಲೂ ಧ್ಯಾನವೆಂಬ ಸಾಧನದಲ್ಲಿ ತತ್ಪರನಾದವ. ವೈರಾಗ್ಯವನ್ನು ಆಶ್ರಯಿಸಿದವನು. ॥ 52 ॥

**ಅಹಂಕಾರಂ**= ತಾನು ಕರ್ತೃ ಎಂಬ ಅಭಿಮಾನವನ್ನು , **ಬಲಂ**= ತಾನು ಸಮರ್ಥನೆಂಬ ಅಭಿಮಾನವನ್ನು , **ದರ್ಪಂ**= ಭಯಕ್ಕೆ ಕಾರಣವಿದ್ದರೂ ಅದನ್ನು ಕಾಣದಿರುವಿಕೆಯನ್ನು, **ಕಾಮಂ**= ವಿಷಯಗಳಲ್ಲಿ ಆಸಕ್ತಿಯನ್ನು, ಸಿಟ್ಟನ್ನು ಮತ್ತು ಸಂಗ್ರಹಪ್ರವೃತ್ತಿಯನ್ನು ಬಿಟ್ಟು, **ನಿರ್ಮಮಃ**= ಕರ್ಮದಲ್ಲಿ ನನ್ನದು ಎಂಬ ಬುದ್ಧಿಯನ್ನು ಕಳೆದುಕೊಂಡ, **ಶಾಂತಃ**= ಸಿಟ್ಟಾಗಲು ಕಾರಣವಿದ್ದರೂ ಸಿಟ್ಟು ಮಾಡಿಕೊಳ್ಳದವನು, ಬ್ರಹ್ಮಭೂಯಾಯ, **ಬ್ರಹ್ಮಣಿ ಸ್ಥಿತಿಃ**= **ಬ್ರಹ್ಮಭೂಯಂ ತಸ್ಮೈ**= ಬ್ರಹ್ಮ ಭೂಯಾಯ ಎಂದು ವಿಗ್ರಹ. ಬ್ರಹ್ಮನಲ್ಲಿ ಮನಸ್ಸನ್ನು ಇಡುವುದಕ್ಕಾಗಿ ಎಂದು ಅರ್ಥ, **ಕಲ್ಪತೇ**= ಸಮರ್ಥನಾಗುತ್ತಾನೆ. ॥ 53॥

**ವಿವರಣೆ**– (1) 51ನೇ ಶ್ಲೋಕದ ಕೊನೆಯ ಪಾದದ ಪಾಠ ಎರಡು ತೆರನಾಗಿದೆ. 1. ರಾಗದ್ವೇಷೌ ಯದಸ್ಯ ಚ. 2. ರಾಗದ್ವೇಷೌ ವ್ಯುದಸ್ಯ ಚ ಎಂದು ಅವುಗಳಲ್ಲಿ ಎರಡನೇ ಪಾಠದಲ್ಲಿ ಯಾವ ತೊಂದರೆಯೂ ಇಲ್ಲ. ರಾಗದ್ವೇಷಗಳನ್ನು ಬಿಟ್ಟು ಎಂದರ್ಥ ಸುಲಭವಾಗಿ ದೊರೆಯುತ್ತದೆ. ಮೊದಲನೇ ಪಾಠವನ್ನಿಟ್ಟುಕೊಂಡಾಗ ಸ್ವಲ್ಪ ತೊಡಕಿದೆ. ಯದಸ್ಯ ಎಂಬಲ್ಲಿ

**ಯತ್** ಮತ್ತು **ಅಸ್ಯ** ಎಂಬ ಎರಡು ಪದಗಳಿವೆ. ಅವುಗಳಲ್ಲಿ, **ಅಸ್ಯ**= ಈತನ ಎಂದರ್ಥ ಮಾಡಬಹುದು. ಆದರೆ 'ಯತ್' ಎಂಬ ನಪುಂಸಕಲಿಂಗದ ಏಕವಚನಕ್ಕೂ ರಾಗದ್ವೇಷೌ ಎಂಬ ಪುಲ್ಲಿಂಗದ ದ್ವಿವಚನಕ್ಕೂ ಹೊಂದಿಕೆ, ಆಗದು ಎನ್ನುವುದು ಇಲ್ಲಿರುವ ತೊಡಕು. 'ವಿಶೇಷಣ ವಿಶೇಷ್ಯ ಶಬ್ದಗಳ ಲಿಂಗ-ವಚನ-ವಿಭಕ್ತಿಗಳು ಒಂದೇ ಆಗಿರಬೇಕು' ಎಂಬ ನಿಯಮವನ್ನು, ಇಲ್ಲಿ ಮೀರಲಾಗಿದೆಯಲ್ಲವೆ ಎಂಬುದು ಇಲ್ಲಿ ಹುಟ್ಟುವ ಶಂಕೆ . **ಯತ್**= ಎನ್ನುವುದಕ್ಕೆ **ಯೌ** ಎಂದು ಅರ್ಥವನ್ನು ಆಶ್ರಯಿಸಿ ಈ ತೊಡಕನ್ನು ಪರಿಹರಿಸಬೇಕು ಎಂದು ಅಭಿಪ್ರಾಯ . 'ವ್ಯದಸ್ಯ' ಎಂಬ ಪಾಠದಲ್ಲಿ ಈ ಕ್ಲೇಶವೂ ಇಲ್ಲ.

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥ 54 ॥**

**ಅರ್ಥ-** ಬ್ರಹ್ಮನಲ್ಲಿ ಮನಸ್ಸಿಟ್ಟ, ಲಕ್ಷ್ಮಿಯನ್ನು ಹೊಂದಿ ಸಹಜವಾಗಿ ವಿಷಯಗಳೆಡೆ ಮನಸ್ಸು ಹರಿಯದ ಪುರುಷನು ಶೋಕಿಸಲಾರ, ಆಸೆ ಪಡಲಾರ. ಎಲ್ಲ ಪ್ರಾಣಿಗಳಲ್ಲಿ ಸಮನಾಗಿ (ಅವುಗಳ ಯೋಗ್ಯತಾನುಸಾರ ವರ್ತಿಸುತ್ತಾ) ನನ್ನಲ್ಲಿ ಉತ್ತಮವಾದ ಭಕ್ತಿಯನ್ನು ಹೊಂದುವನು.

**ತತಃ ಕಿಮಿತ್ಯತ ಆಹ- ಬ್ರಹ್ಮಭೂತ ಇತಿ ॥ ಬ್ರಹ್ಮಣಿಸ್ಥಿತಮನಸ್ಕಃ ಲಕ್ಷ್ಮೀಂ ಪ್ರಾಪ್ತಃ ಪ್ರಸನ್ನಾತ್ಮಾ ಸ್ವತ ಏವ ವಿಷಯೇಷ್ವಪ್ರವೃತ್ತಮನಾಃ । ನ ಶೋಚತಿ ನ ಕಾಂಕ್ಷತಿ । ಸರ್ವೇಷು ಭೂತೇಷು ಸಮಃ ಪರಾಂ ಭಕ್ತಿಂ ಲಭತೇ ॥ 54 ॥**

**ಅನುವಾದ-** ಅದರಿಂದೇನು ಎಂದರೆ ಹೇಳುತ್ತಾನೆ- **ಬ್ರಹ್ಮಭೂತಃ** ಎಂದು (**ಬ್ರಹ್ಮಭೂತಃ**) ಬ್ರಹ್ಮನಲ್ಲಿ ಮನಸ್ಸಿಟ್ಟವನು ಮತ್ತು ಲಕ್ಷ್ಮೀದೇವಿಯನ್ನು ಹೊಂದಿದವನು, **ಪ್ರಸನ್ನಾತ್ಮಾ**= ಸ್ವಾಭಾವಿಕವಾಗಿಯೇ ವಿಷಯಗಳಲ್ಲಿ ಹರಿಯದ ಮನಸ್ಸುಳ್ಳವನು ದುಃಖಿಸಲಾರ, ಆಸೆ ಪಡಲಾರ. ಎಲ್ಲ ಪ್ರಾಣಿಗಳಲ್ಲಿ ಸಮನಾಗಿ ಶ್ರೇಷ್ಠ ಭಕ್ತಿಯನ್ನು ಹೊಂದುವನು. ॥ 54 ॥

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್ ॥ 55 ॥**

**ಅರ್ಥ-** ಆ ಶ್ರೇಷ್ಠ ಭಕ್ತಿಯಿಂದ, ನಾನು ಎಷ್ಟು ವ್ಯಾಪಿಸಿದ್ದೇನೆ ಯಾವ ನಾಮ-ರೂಪಗಳನ್ನು ಪಡೆದಿದ್ದೇನೆ ಎನ್ನುವುದನ್ನು ಯಥಾರ್ಥವಾಗಿ ತನ್ನ ಯೋಗ್ಯತಾನುಸಾರ ತಿಳಿಯುತ್ತಾನೆ. ಭಕ್ತಿಯ ಬಲದಿಂದ ನನ್ನನ್ನು ಸರಿಯಾಗಿ ತಿಳಿದು, ಅದರ ನಂತರದಲ್ಲಿ ನನ್ನನ್ನು ಪ್ರವೇಶಿಸುತ್ತಾನೆ. (ಅಂದರೆ ಮುಕ್ತನಾಗುತ್ತಾನೆ.)

**ತತಶ್ಚ ಕಿಮಿತ್ಯತ ಆಹ- ಭಕ್ತ್ಯೇತಿ ॥ ಅಹಂ ಯಾವಾನ್‌ದೇಶಕಾಲ-ಗುಣೈರ್ಯಾವಾನ್ ವ್ಯಾಪ್ತೋಽಸ್ಮಿ। ಯಶ್ಚ ಯನ್ನಾಮಾ ಯದ್ರೂಪಶ್ಚಾಸ್ಮಿ ತಾದೃಶಂ ಮಾಂ ಪ್ರಾಗುಕ್ತಯಾ ಪರಮಭಕ್ತ್ಯಾ ತತ್ತ್ವತಃ । ಅಭಿ ಸ್ವಯೋಗ್ಯತಾನುಸಾರೇಣ ಜಾನಾತಿ । ತೇನಾಪಿ ಕಿಮಿತ್ಯತ ಆಹ- ತತ ಇತಿ ॥ ಭಕ್ತಿಬಲಾತ್ತತ್ತ್ವತೋ ಮಾಂ ಜ್ಞಾತ್ವಾ ತದನಂತರಂ ಮಾಂ ವಿಶತೇ । ಮದನುಪ್ರವಿಷ್ಟೋ ಭವತಿ ಮುಕ್ತೋ ಭವತೀತ್ಯರ್ಥಃ ॥ 55 ॥**

**ಅನುವಾದ-** ಅದರಿಂದೇನು ಎಂದರೆ ಹೇಳುತ್ತಾನೆ- ಭಕ್ತ್ಯಾ ಎಂದು. ನಾನು **ಯಾವಾನ್=** ದೇಶ-ಕಾಲ-ಗುಣಗಳಿಂದ ಎಷ್ಟು ವ್ಯಾಪ್ತನೋ, ಮತ್ತು **ಯಃ=** ಯಾವ ನಾಮ ಉಳ್ಳವನು ಯಾವ ರೂಪ ಉಳ್ಳವನು ಆಗಿದ್ದೇನೋ ಅಂತಹ ನನ್ನನ್ನು ಹಿಂದಿನ ಶ್ಲೋಕದಲ್ಲಿ ಹೇಳಿದ ಪರಮ ಭಕ್ತಿ ಯಿಂದ ಯಥಾರ್ಥವಾಗಿ, **ಅಭಿ=** ತನ್ನ ಯೋಗ್ಯತೆಗೆ ಅನುಗುಣವಾಗಿ, **ಜಾನಾತಿ=** ತಿಳಿಯುತ್ತಾನೆ. ಅದರಿಂದಲೂ ಏನೆಂದರೆ ಹೇಳುತ್ತಾನೆ- **ತತಃ** ಎಂದು (**ತತಃ=**) ಭಕ್ತಿಯ ಬಲದಿಂದ ನನ್ನನ್ನು ಯಥಾರ್ಥವಾಗಿ ತಿಳಿದು ಅದರ ಅನಂತರದಲ್ಲಿ **ಮಾಂ ವಿಶತೇ =** ನನ್ನನ್ನು ಪ್ರವೇಶಿಸಿದವನಾಗುವನು . ಅಂದರೆ ಮುಕ್ತನಾಗುತ್ತಾನೆ ಎಂದರ್ಥ. ॥ 55 ॥

## ಗೀತೋಪದೇಶದ ಉಪಸಂಹಾರ

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥ 56 ॥**

**ಅರ್ಥ-** (**ಮದ್ವ್ಯಪಾಶ್ರಯಃ=**) ನನ್ನಲ್ಲಿ ಸಮರ್ಪಿಸುತ್ತಲೇ ಎಲ್ಲ ವಿಹಿತ ಕರ್ಮಗಳನ್ನು ಯಾವಾಗಲೂ ಮಾಡುವ ಮನುಷ್ಯನು ನನ್ನ ಅನುಗ್ರಹದಿಂದ ಅನಾದ್ಯನಂತಕಾಲವೂ ಇರುವ ವಿಕಾರಗಳಿಲ್ಲದ (**ಪದಂ=**) ನನ್ನ ಸ್ವರೂಪವನ್ನು ಹೊಂದುವನು.

**ಪುನರಂತರಂಗಸಾಧನಾನ್ಯುಕ್ತ್ವಾ ಶಾಸ್ತ್ರಾರ್ಥಮುಪಸಂಹರತಿ- ಸರ್ವೇತಿ ॥ ಯದ್ವಾ 'ಯತಃ ಪ್ರವೃತ್ತಿರ್ಭೂತಾನಾಂ' ಇತ್ಯತ್ರ ಸ್ವಕರ್ಮಣಾ ತಮಭ್ಯರ್ಚ್ಯ ಇತ್ಯುಕ್ತಮ್ । ತತ್ರ ಕರ್ಮಕರಣೇ ವಿಶಿಷ್ಯ ಫಲಂ ವ್ಯನಕ್ತಿ- ಸರ್ವೇತಿ ॥ ಮದ್ವ್ಯಪಾಶ್ರಯಃ ಮಯ್ಯೇವ ಸಮರ್ಪಯನ್ನೇವ ಸರ್ವಾಣಿ ವಿಹಿತಾನಿ ಕರ್ಮಾಣಿ ಸದಾ ಕುರ್ವಾಣಃ ಮತ್ಪ್ರಸಾದಾಚ್ಛಾಶ್ವತಂ ಪದಂ ಅವ್ಯಯಂ ಮತ್ಸ್ವರೂಪ-ಮವಾಪ್ನೋತಿ । ಶಾಶ್ವತಮವ್ಯಯಮಿತಿ ಕೂಟಸ್ಥತಯಾಽಽದ್ಯಂತಹೀನಮಿತ್ಯರ್ಥಃ ।**

**ಅತ್ರ ಅಪಿಶಬ್ದೋ ನೈಕಮಪಿ ಕರ್ಮ ಅತದಾಶ್ರಯೇಣ ಕಾರ್ಯಮಿತ್ಯರ್ಥ-ಸೂಚನಾಯ ॥ 56 ॥**

**ಅನುವಾದ-** ಮತ್ತೆ ಅಂತರಂಗಸಾಧನೆಗಳನ್ನು ಹೇಳಿ ಶಾಸ್ತ್ರಾರ್ಥವನ್ನು ಉಪಸಂಹಾರ ಮಾಡುತ್ತಿದ್ದಾನೆ- ಸರ್ವ ಎಂದು. ಅಥವಾ (1) ಹಿಂದೆ **'ಯತಃ ಪ್ರವೃತ್ತಿ ರ್ಭೂತನಾಂ'** (18-46) ಶ್ಲೋಕದಲ್ಲಿಸ್ವವಿಹಿತಕರ್ಮದಿಂದ ಭಗವಂತನನ್ನು ಅರ್ಚಿಸಿ ಎಂದು ಹೇಳಲಾಗಿದೆ. ಅದರಲ್ಲಿಕರ್ಮಮಾಡಿದರೆ ಸಿಗುವ ಫಲವನ್ನು ವಿಶೇಷವಾಗಿ ಹೇಳುತ್ತಿದ್ದಾನೆ - ಸರ್ವ ಎಂದು. **ಮದ್ವ್ಯಪಾಶ್ರಯಃ=** ನನ್ನಲ್ಲೇ ಸಮರ್ಪಿಸುತ್ತಲೇ, ಎಲ್ಲ ವಿಹಿತಕರ್ಮಗಳನ್ನು ಯಾವಾಗಲೂ ಮಾಡುತ್ತ ನನ್ನ ಅನುಗ್ರಹದಿಂದ ಶಾಶ್ವತವಾದ ಅವ್ಯಯವಾದ, **ಪದಂ=** ನನ್ನ ಸ್ವರೂಪವನು ಹೊಂದುತ್ತಾನೆ.

**ಶಾಶ್ವತಂ ಅವ್ಯಯಂ** ಎಂಬ ಶಬ್ದಗಳಿಗೆ ಆಕಾಶದಂತೆ ನಿರ್ವಿಕಾರನಾಗಿ ಆದಿ-ಅಂತಗಳು ಇಲ್ಲದವನು ಎಂದರ್ಥ. (2) ಇಲ್ಲಿ, 'ಒಂದು ಕರ್ಮವನ್ನೂ ಭಗವದಾಶ್ರಯವಿಲ್ಲದೆ (ಅವನಲ್ಲಿ ಸಮರ್ಪಿಸದೆ) ಮಾಡಬಾರದು ' ಎಂಬ ಅರ್ಥವನ್ನು ಸೂಚಿಸಲು ಸರ್ವಕರ್ಮಾಣ್ಯಪಿ ಎಂಬಲ್ಲಿ 'ಅಪಿ' ಶಬ್ದವನ್ನು ಹೇಳಲಾಗಿದೆ.(3) ॥ 56 ॥

**ವಿವರಣೆ-** (1) ಈ ಶ್ಲೋಕಕ್ಕೆ ಎರಡು ತರಹದ ಸಂಗತಿಗಳನ್ನು ಹೇಳುತ್ತಿದ್ದಾರೆ. ಒಂದು ದೃಷ್ಟಿಯಿಂದ ಇಲ್ಲಿಂದ ಶ್ರೀಕೃಷ್ಣತನ್ನ ಉಪದೇಶದ ಉಪಸಂಹಾರ ಮಾಡುತ್ತಿದ್ದಾನೆ. ಮತ್ತೊಂದು ದೃಷ್ಟಿಯಿಂದ, ಹಿಂದೆ ಹೇಳಿದ, 'ಭಗವತ್ಪೂಜಾಬುದ್ಧಿಯಿಂದ ಕರ್ಮ ಮಾಡಬೇಕು'ಎಂಬುದಕ್ಕೆ ಫಲಗಳನ್ನು ವಿಶೇಷವಾಗಿ ಈ ಶ್ಲೋಕದಲ್ಲಿ ಹೇಳಲಾಗಿದೆ.

(2) **ಶಾಶ್ವತಂ** (ಶಶ್ವತ್ ಭವಂ)= ಎಲ್ಲ ಕಾಲದಲ್ಲೂ ಇರುವಂಥದು. **ಅವ್ಯಯಂ=** ವ್ಯಯ ಅಂದರೆ ವಿಕಾರ ಇಲ್ಲದ್ದು - ಈ ಅರ್ಥವನ್ನೂ ಪದಗಳಿಗೆ ಇಟ್ಟುಕೊಂಡು ಅದರ ತಾತ್ಪರ್ಯವನ್ನು ಇಲ್ಲಿ ಹೇಳಿದ್ದಾರೆ.

(3) 'ಎಲ್ಲ ಕರ್ಮಗಳನ್ನು' ಎಂದಾಗಲೇ ಸಕಲಕರ್ಮಗಳು ಲಭಿಸುತ್ತಿರಲು 'ಎಲ್ಲ ಕರ್ಮಗಳನ್ನೂ' ಎಂದು ಹೇಳಿದ್ದು ಪ್ರತಿಯೊಂದನ್ನೂ ಬಿಡದೆ ತೆಗೆದುಕೊಳ್ಳಬೇಕೆಂದು ಸೂಚಿಸಲು- ಎಂದು ಆಶಯ.

## ನಿನ್ನ ಮನ ನನ್ನಲ್ಲೇ ಸದಾ ಇರಲಿ

**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ ।**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥ 57 ॥**

**ಅರ್ಥ**– ಹೇ ಅರ್ಜುನ, ಎಲ್ಲ ಕರ್ಮಗಳನ್ನು ಮನಸ್ಸಿನಿಂದ ನನ್ನಲ್ಲಿ ಸಮರ್ಪಿಸಿ ನಾನೇ ಸರ್ವೋತ್ತಮನೆಂಬ ಭಾವ ಉಳ್ಳವನಾಗಿ ಜ್ಞಾನಸಾಧನವನ್ನೂ ಆಶ್ರಯಿಸಿ ಯಾವಾಗಲೂ ನನ್ನಲ್ಲೇ ಮನಸ್ಸನ್ನಿಟ್ಟವನಾಗು.

**ಯದಿ ಭಗವದಾಶ್ರಯೇಣ ವಿಹಿತಕರ್ಮ ಕುರ್ವತೋ ಮುಕ್ತಿಸ್ತರ್ಹಿ ತ್ರೈವಿದ್ಯ-ಸ್ಯಾಪಿ ಸಾ ಸ್ಯಾತ್ । ತಸ್ಯಾಪಿ ವಿಹಿತಕರ್ಮಕರಣಭಗವದರ್ಪಣಯೋಃ ಸತ್ತ್ವೇನ ಭಗವದಾಶ್ರಯತ್ವಾದಿತ್ಯತ ಆಹ– ಚೇತಸೇತಿ ॥ ಚೇತಸಾ ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಸಮರ್ಪ್ಯ ಮತ್ಪರಃ ಅಹಮೇವ ಪರಃ ಸರ್ವೋತ್ತಮ ಇತಿ ಭಾವೋ ಯಸ್ಯ ಸ ಮತ್ಪರಃ ಭವ । ಕಿಂಚ ಬುದ್ಧಿಯೋಗಂ ಬುದ್ಧೇರ್ಯೋಗಂ ಪ್ರತ್ಯಾ-ಹಾರಾದಿರೂಪಂ ಉಪಾಯಮಾಶ್ರಿತ್ಯ ಮಚ್ಚಿತ್ತಃ ಮಯ್ಯೇವ ನಿರುದ್ಧಚಿತ್ತಃ ಸತತಂ ಭವೇತ್ಯುಕ್ತ್ವಾ ತ್ರೈವಿದ್ಯಸ್ಯೈವಂರೂಪತ್ವಾಭಾವಾನ್ನ ತಸ್ಯ ಮುಕ್ತಿಶಂಕೇತಿ ಭಾವಃ ।**
**॥ 57 ॥**

**ಅನುವಾದ**– ಭಗವಂತನನ್ನು ಆಶ್ರಯಿಸಿ ವಿಹಿತಕರ್ಮವನ್ನು ಮಾಡುವವರಿಗೆ ಮೋಕ್ಷ ಇರುವುದಾದರೆ ತ್ರೈವಿದ್ಯರಿಗೂ ಅದು ಇರಬೇಕಾದೀತು. ಏಕೆಂದರೆ, ವಿಹಿತಕರ್ಮಗಳ ಆಚರಣೆ ಮತ್ತು ಭಗವದರ್ಪಣಗಳು ಇರುವುದರಿಂದ ಅವರೂ ಭಗವದಾಶ್ರಯರೇ ಆಗಿದ್ದಾರೆ. ಈ ಪ್ರಶ್ನೆಗೆ ಉತ್ತರವಾಗಿ ಹೇಳುತ್ತಾನೆ ಚೇತಸಾ ಎಂದು. ಮನಸ್ಸಿನಿಂದ ಎಲ್ಲ ಕರ್ಮಗಳನ್ನೂ ನನ್ನಲ್ಲಿ ಸಮರ್ಪಿಸಿ ಮತ್ಪರಃ, **ಅಹಮೇವ ಪರಃ ಯಸ್ಯ ಸಃ**= ಮತ್ಪರಃ ಎಂದು ವಿಗ್ರಹ. ನಾನೇ ಸರ್ವೋತ್ತಮ ಎಂಬ ಭಾವ ತಳೆದವನು ಆಗು. ಅಲ್ಲದೆ, **ಬುದ್ಧಿಯೋಗಂ**= ಜ್ಞಾನದ ಪ್ರತ್ಯಾಹಾರಾದಿರೂಪ ಉಪಾಯವನ್ನು ಆಶ್ರಯಿಸಿ, **ಮಚ್ಚಿತ್ತಃ**= ನನ್ನಲ್ಲೇ ನಿಲ್ಲಿಸಿದ ಮನಸ್ಸುಳ್ಳವನು ಯಾವಾಗಲೂ ಆಗು . ಹೀಗೆ ಹೇಳಿದ್ದರಿಂದ ತ್ರೈವಿದ್ಯರು ಹೀಗಿರುವುದಿಲ್ಲವಾದ್ದರಿಂದ ಆವರಿಗೆ ಮುಕ್ತಿ ಸಿಗುವುದೆ ? ಎಂದು ಶಂಕೆ ಇಲ್ಲ . ॥ 57 ॥

**ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
**ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥ 58 ॥**

**ಅರ್ಥ**– ನನ್ನಲ್ಲೇ ಮನಸ್ಸಿಟ್ಟು ನೀನು ಎಲ್ಲ ದುಸ್ತರಕಷ್ಟಗಳನ್ನು ನನ್ನ ಅನುಗ್ರದಿಂದ ದಾಟುವಿ. ಇನ್ನು, ಒಂದು ವೇಳೆ ಅಹಂಕಾರದಿಂದ 'ಯುದ್ಧ ಮಾಡು' ಎಂಬ ನನ್ನ ಮಾತನ್ನು ಕೇಳದಿದ್ದರೆ ನಾಶಹೊಂದುವಿ (ಪುರುಷಾರ್ಥಗಳನ್ನು ಕಳೆದುಕೊಳ್ಳುವಿ)

**ಭಗವಚ್ಚಿತ್ತಸ್ಯ ಫಲಮಾಹ– ಮಚ್ಚಿತ್ತ ಇತಿ ॥ ಮಚ್ಚಿತ್ತೋ ಮಯ್ಯೇವ**

ನಿರುದ್ಧಮನಸ್ಕಃ । ಸರ್ವಾಣಿ ದುರ್ಗಾಣಿ ದುಸ್ತರಾಣಿ ದುಃಖೇನ ತರ್ತವ್ಯಾನಿ ಕಷ್ಟಾನಿ ಮತ್ಪ್ರಸಾದಾತ್ತರಿಷ್ಯಸಿ । ಏವಂ ಸ್ವವಿಹಿತವೃತ್ತ್ಯಾ ಭಗವದಾರಾಧನಸ್ಯ ಪರಮಧರ್ಮತ್ವಾದ್ಯುದ್ಧಾಖ್ಯಂ ಸ್ವವಿಹಿತಕರ್ಮ ಭಗವತ್ಪ್ರೀತ್ಯರ್ಥಮೇವಾವಶ್ಯಂ ಕಾರ್ಯಮಿತ್ಯೇತಾವತಾ ಪ್ರಬಂಧೇನ ಪ್ರತಿಪಾದಿತಮ್ । ತದಕರಣೇಽನಿಷ್ಟ-ಮಾಹ- **ಅಥ ಚೇದಿತಿ ॥ ಅರ್ಥಾಂತರೇ ಅಥ ಶಬ್ದಃ । ಅಹಂ ನ ಯೋತ್ಸ್ಯಮೀ-ತ್ಯಹಂಕಾರಾತ್ ಯುದ್ಧಸ್ವೇತಿ ಮದೀಯವಚನಂ ತ್ವಂ ನ ಶ್ರೋಷ್ಯಸಿ ಚೇತ್ ಶ್ರುತ್ವಾ** ನ ಕರೋಷಿ ಚೇತ್ । ವಿನಂಕ್ಷ್ಯಸಿ ಪುರುಷಾರ್ಥ ಹೀನೋ ಭವಿಷ್ಯಸಿ । ಮದ್ವಚನಾಕರಣೇ ವಿನಾಶ ಇತ್ಯಭ್ಯುಪೇತ್ಯೋಕ್ತಮ್ ॥ 58 ॥

**ಅನುವಾದ-** ಭಗವಂತನಲ್ಲಿ ಮನಸ್ಸಿಟ್ಟವನ ಫಲವನ್ನು ಹೇಳುತ್ತಾನೆ- **ಮಚ್ಚಿತ್ತ** ಎಂದು. **ಮಚ್ಚಿತ್ತಃ** = ನನ್ನಲ್ಲೇ ಏಕಾಗ್ರಗೊಳಿಸಿದ ಮನಸ್ಸುಳ್ಳವನು ಎಲ್ಲಾ, **ದುರ್ಗಾಣಿ= ದುಸ್ತರಾಣಿ=** ದುಃಖದಿಂದ ದಾಟಬಹುದಾದ ಕಷ್ಟಗಳನ್ನು ನನ್ನ ಅನುಗ್ರಹದಿಂದ ದಾಟುವಿ. ಹೀಗೆ 'ಸ್ವವಿಹಿತ ಕರ್ಮಾಚರಣೆಯಿಂದ ಭಗವಂತನ ಆರಾಧನವು ಮುಖ್ಯ ಧರ್ಮವಾಗಿರುವುದರಿಂದ ಯುದ್ಧ ವೆಂಬ ನಿನಗೆ ವಿಹಿತವಾದ ಕರ್ಮವನ್ನೂ ಭಗವತ್ಪ್ರೀತಿಗಾಗಿಯೇ ತಪ್ಪದೇ ಮಾಡಬೇಕು' ಎನ್ನುವುದನ್ನು ಇಲ್ಲಿಯವರೆಗಿನ ಗ್ರಂಥದಿಂದ ಪ್ರತಿಪಾದಿಸಲಾಯಿತು. ಅದನ್ನು ಮಾಡದಿದ್ದರೆ ಅನಿಷ್ಟವನ್ನು ಹೇಳುತ್ತಾನೆ- **ಅಥ ಚೇತ್** ಎಂದು. ಬೇರೊಂದು ವಿಷಯ ಪ್ರಾರಂಭವಾಗಿದೆ ಎಂಬರ್ಥದಲ್ಲಿ ಅಥ ಎಂಬ ಶಬ್ದ ಇದೆ.

'ನಾನು ಯುದ್ಧ ಮಾಡುವುದಿಲ್ಲ' ಎಂಬ ಅಹಂಕಾರದಿಂದ ಯುದ್ಧಮಾಡು ಎಂಬ ನನ್ನ ಮಾತನ್ನು ನೀನು ಕೇಳದಿದ್ದರೆ, ಕೇಳಿ ಆಚರಿಸದಿದ್ದರೆ, **ವಿನಂಕ್ಷ್ಯಸಿ**= ನಾಶ ಹೊಂದುವಿ- ಪುರುಷಾರ್ಥರಹಿತನು ಆಗುವಿ. 'ನನ್ನ ಮಾತನ್ನು ಪಾಲಿಸದಿದ್ದರೆ ವಿನಾಶ' ಎಂದು ಹೇಳಿದ್ದು ('ನನ್ನ ಮಾತನ್ನು ಪಾಲಿಸದೆ ಇರಬಹುದು' ಎನ್ನುವುದನ್ನು) ಒಪ್ಪಿ. (ನಿಜವಾಗಿ, 'ನನ್ನ ಮಾತನ್ನು ಮೀರಲಾರೆ ' ಎಂದು ಮುಂದೆ ಹೇಳುತ್ತಿದ್ದಾನೆ.) ॥ 58 ॥

## ನನ್ನ ಮಾತನ್ನು ಮೀರಲು ನೀನು ಅಶಕ್ತ

**ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈವ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥ 59 ॥**

**ಅರ್ಥ –** ನೀನು, ಯುದ್ಧ ಮಾಡಲು ಬಿಡಲು ನಾನು ಸ್ವತಂತ್ರ ಎಂಬ ಅಹಂಕಾರದಿಂದ 'ನಾನು ಯುದ್ಧ ಮಾಡುವುದಿಲ್ಲ' ಎಂದು ಏನು ಯೋಚಿಸುವೆಯೋ, ಆ ನಿನ್ನ ಆಲೋಚನೆಯು ವ್ಯರ್ಥ. ಈಶ್ವರೇಚ್ಛೆಯು ನಿನ್ನನ್ನು (ಯುದ್ಧದಲ್ಲಿ) ಪ್ರೇರಿಸುತ್ತದೆ.

**ಮದುಕ್ತಾಕರಣಮಶಕ್ಯಂ ಚ ತವೇತ್ಯಾಹ- ಯದಿತಿ ॥ ಮಿಥ್ಯೈವ ವ್ಯರ್ಥೈವ ತೇ ವ್ಯವಸಾಯಃ ನಿಶ್ಚಯಃ । ಕುತಃ ?ಪ್ರಕೃತಿರಿತೀಶ್ವರೇಚ್ಛಾ । ತ್ವಾಂ ನಿಯೋಕ್ಷ್ಯತಿ ಪ್ರೇರಯತಿ ॥ 59 ॥**

**ಅನುವಾದ-** ಅಲ್ಲದೆ, ನಾನು ಹೇಳಿದ್ದನ್ನು ಮಾಡದಿರುವುದು ನಿನಗೆ ಅಸಾಧ್ಯ ಎಂದು ಹೇಳುತ್ತಾನೆ. **ಯತ್** ಎಂದು. **ಮಿಥ್ಯೈವ=** ವ್ಯರ್ಥವೇ ನಿನ್ನ ನಿಶ್ಚಯ. ಏಕೆ ? **ಪ್ರಕೃತಿಃ=** ಈಶ್ವರೇಚ್ಛೆಯು ನಿನ್ನನ್ನು **ನಿಯೋಕ್ಷ್ಯತಿ=** ಪ್ರೇರಿಸುತ್ತದೆ. ॥ 59 ॥

**ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್ ಕರಿಷ್ಯಸ್ಯವಶೋऽಪಿ ತತ್ ॥ 60 ॥**

**ಅರ್ಥ-** ಹೇ ಅರ್ಜುನ, ಪೂರ್ವ ಸಂಸ್ಕಾರದಿಂದ ಹುಟ್ಟಿದ ನಿನ್ನ ಕರ್ಮದಿಂದ ಬದ್ಧನಾದ ನೀನು ಯಾವ ಕರ್ಮವನ್ನು ಮೋಹದಿಂದ (ಬಂಧುಸ್ನೇಹದಿಂದಾದ ಅಜ್ಞಾನದಿಂದ) ಮಾಡಲಿಚ್ಛಿಸುವುದಿಲ್ಲವೋ ಆ ಕರ್ಮವನ್ನು ನಿನ್ನ ಅಧೀನನಾಗದೆಯೇ (ನಿನ್ನ ಇಚ್ಛೆ ಇಲ್ಲದಿದ್ದರೂ) ಮಾಡುವಿ.

**ಈಶ್ವರೇಚ್ಛಯಾ ಜೀವನಿಯಮೇ ನಿಮಿತ್ತತ್ವಾದಿಕಂ ದರ್ಶಯನ್ನುಕ್ತಂ ವಿವೃಣೋತಿ ಸ್ವಭಾವಜೇನೇತಿ ॥ ಸ್ವಭಾವಃ ಸಂಸ್ಕಾರಸ್ತಜ್ಜಾತೇನ ಸ್ವೇನ ಕರ್ಮಣಾ ನಿಬದ್ಧಃ । ಹೇ ಕೌಂತೇಯ ಯತ್ಕರ್ಮ ಮೋಹಾದ್ಬಂಧುಸ್ನೇಹಮೋಹಾತ್ ಕರ್ತುಂ ನೇಚ್ಛಸಿ । ತತ್ಕರ್ಮಾವಶೋऽಪಿ ಸ್ವಾನಧೀನೋऽಪಿ ಭಗವದಿಚ್ಛಾಧೀ-ನೋऽಪಿ ಸನ್ ಕರಿಷ್ಯಸಿ ॥ 60 ॥**

**ಅನುವಾದ-** ಈಶ್ವರೇಚ್ಛೆಯು ಜೀವರನ್ನು ನಿಯಮಿಸುವಲ್ಲಿ ನಿಮಿತ್ತ (**ಆದಿ=** ಉಳಿದ ನಿಮಿತ್ತಗಳೂ ಇವೆ) ಎಂಬುದನ್ನು ತೋರಿಸುತ್ತಾ ಹಿಂದೆ ಹೇಳಿದ್ದನ್ನು (**'ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ'** ಎಂಬ ಮಾತನ್ನು) ವಿವರಿಸುತ್ತಾನೆ- ಸ್ವಭಾವಜೇನ ಎಂದು. **ಸ್ವಭಾವಜೇನ=** ಸ್ವಭಾವ ಎಂದರೆ ಸಂಸ್ಕಾರ. ಆದರಿಂದ ಹುಟ್ಟಿದ ಸ್ವಕರ್ಮದಿಂದ ಬದ್ಧನು. ಹೇ ಅರ್ಜುನ ! ಯಾವ ಕರ್ಮವನ್ನು, **ಮೋಹಾತ್=** ಬಂಧುಸ್ನೇಹದಿಂದಾದ ಅಜ್ಞಾನದಿಂದ ಮಾಡಲು ಇಚ್ಛಿಸುವುದಿಲ್ಲವೋ ಆ ಕರ್ಮವನ್ನು , **ಅವಶೋऽಪಿ=** ನಿನ್ನ ಅಧೀನನಾಗದೆಯೂ ಭಗವದಧೀನನಾಗಿಯೂ ಮಾಡುವಿ. ॥ 60 ॥

**ವಿವರಣೆ - ಅವಶಃ** ಎನ್ನುವುದಕ್ಕೆ ವಶನಾಗದೆ ಎಂದರ್ಥ. ಯಾರ ವಶನಾಗದೆ ಎಂದರೆ ನಿನ್ನ

ವಶನಾಗದೆ, ಅಂದರೆ ನಿನ್ನ ಇಚ್ಛೆ ಇಲ್ಲದಿದ್ದರೂ ಎಂದು ಒಂದು ಅರ್ಥ. ಅ ಶಬ್ದಕ್ಕೆ ಪರಮಾತ್ಮ ಎಂದು ಅರ್ಥ ಇರುವುದರಿಂದ, **ಅವಶಃ** ಎಂದರೆ ಪರಮಾತ್ಮನ ವಶನಾಗಿ ಎಂದು ಎರಡನೆಯ ಅರ್ಥ.

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥ 61 ॥**

**ಅರ್ಥ**- ಹೇ ಅರ್ಜುನ ! (**ಈಶ್ವರಃ** =) ಜಗತ್ತನ್ನು ನಿಯಮಿಸುವ ನಾರಾಯಣನು, ಶರೀರವೆಂಬ ಯಂತ್ರದಲ್ಲಿರುವ ಎಲ್ಲ ಜೀವಿಗಳನ್ನು ತನ್ನ ಇಚ್ಛೆಯಿಂದ ನಾನಾ ಕರ್ಮಗಳಲ್ಲಿ ತೊಡಗಿಸುತ್ತಾ ಎಲ್ಲ ಜೀವಿಗಳ ಹೃದಯಪ್ರದೇಶದಲ್ಲಿ ಇರುವನು.

**ನನ್ವೀಶ್ವರೇಚ್ಛಾಯಾಃ ಪ್ರವರ್ತಕತ್ವೇ, ಈಶ್ವರಃ ಪ್ರವರ್ತಕೋ ನೇತಿ ಶಂಕಾಮ್ ಈಶ್ವರಸ್ವರೂಪಂ ದರ್ಶಯನ್ ಪರಿಹರತಿ- ಈಶ್ವರ ಇತಿ ॥ ಈಶ್ವರಃ ಯಂತ್ರಾರೂಢಾನಿ ಯಂತ್ರಾಣಿ ಶರೀರಾಣಿ ತದಾರೂಢಾನಿ ತತ್ರಸ್ಥಾನಿ ಭೂತಾನಿ ಪ್ರಾಣಿನಃ ಮಾಯಯಾ ಸ್ವರೂಪಭೂತೇಚ್ಛಯಾ ಭ್ರಾಮಯನ್ನಾನಾಕರ್ಮಸು ಪ್ರವರ್ತಯನ್ ಸರ್ವಭೂತಾನಾಂ ಹೃದ್ದೇಶೇ ತಿಷ್ಠತಿ ॥ 61 ॥**

**ಅನುವಾದ**- ಈಶ್ವರೇಚ್ಛೆಯು ಪ್ರವರ್ತಕವಾದರೆ ಈಶ್ವರನು ಪ್ರವರ್ತಕನಲ್ಲ ಎಂದಾಗದೆ ? ಎಂಬ ಸಂಶಯವನ್ನು ಈಶ್ವರಸ್ವರೂಪವನ್ನು ತೋರಿಸುತ್ತಾ ಪರಿಹರಿಸುತ್ತಾನೆ- **ಈಶ್ವರಃ** ಎಂದು. **ಈಶ್ವರಃ** = ನಿಯಾಮಕನಾದ ಪರಮಾತ್ಮನು. **ಯಂತ್ರಾಣಿ** = ಶರೀರಗಳು, **ಯಂತ್ರಾರೂಢಾನಿ** = ಅವುಗಳಲ್ಲಿರುವ, **ಭೂತಾನಿ**= ಪ್ರಾಣಿಗಳನ್ನು , **ಮಾಯಯಾ**= ಸ್ವರೂಪೇಚ್ಛೆಯಿಂದ, **ಭ್ರಾಮಯನ್** = ನಾನಾ ಕರ್ಮಗಳಲ್ಲಿ ತೊಡಗಿಸುತ್ತಾ, ಹೃದಯ ಪ್ರದೇಶದಲ್ಲಿ ಇರುವನು. ॥ 61 ॥

## ಶರಣಾಗತಿಯ ಮಹಿಮೆ

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥ 62 ॥**

**ಅರ್ಥ**- ಹೇ ಭರತಕುಲೋತ್ಪನ್ನ ! ಆ ನಿಯಾಮಕನಾದ ಪರಮಾತ್ಮನನ್ನೇ ಎಲ್ಲವಿಧದಿಂದ ಮೊರೆ ಹೊಂದು. ಅವನ ಅನುಗ್ರಹದಿಂದ ಉತ್ಕೃಷ್ಟವಾದ ಶಾಂತಿಯನ್ನು (ಭಗವನ್ನಿಷ್ಠಬುದ್ಧಿಯನ್ನು) ಶಾಶ್ವತವಾದ ವೈಕುಂಠಾದಿಸ್ಥಾನವನ್ನು ಹೊಂದುವಿ.

**ಯಸ್ಮಾದೇವಮೀಶ್ವರ ಏವ ಸ್ವತಂತ್ರಃ ಜೀವಾಸ್ತದಧೀನಾಸ್ತಸ್ಮಾದಹಂಕಾರಮುತ್ಸೃಜ್ಯ ತಮೇವೇಶ್ವರಂ ಸರ್ವಭಾವೇನ ಸರ್ವಪ್ರಕಾರೇಣ ಶರಣಂ ಗಚ್ಛ ಯಾಹಿ । ಮಾಂ ಶರಣಂ ಯಾಹೀತಿ ವಕ್ತವ್ಯೇ ಈಶ್ವರಸ್ತಿಷ್ಠತಿ ತಂ ಶರಣಂ ಯಾಹೀತಿ ಪರೋಕ್ಷನಿರ್ದೇಶಃ ಕೃಷ್ಣಸ್ಯೇಶ್ವರತ್ವನಿಶ್ಚಯಾರ್ಥತ್ವಾಭಿಪ್ರಾಯೇಣ । 'ನಿಶ್ಚಯಾರ್ಥಃ ಸ ತು ಜ್ಞೇಯೋ ಯತ್ರಾತ್ಮೈವ ಪರೋಕ್ಷತಃ । ಉಚ್ಯತೇ' ಇತಿ ಸ್ಮೃತೇಃ । ತತ್ಪ್ರಸಾದಾದೀಶ್ವರಪ್ರಸಾದಾತ್ ಪರಾಂ ಶಾಂತಿಂ ಬುದ್ಧೇರ್ಭಗವನ್ನಿಷ್ಠತಾಮ್ । ಶಾಶ್ವತಂ ಸ್ಥಾನಂ ವೈಕುಂಠಾದಿಲೋಕಂ ಪ್ರಾಪ್ಸ್ಯಸೀತಿ । ವೈಕುಂಠಾದಿಸ್ಥಾನಸ್ಯ ಶಾಶ್ವತತ್ವಂ ಚ ಚಿತ್‌ಪ್ರಕೃತ್ಯಾತ್ಮಕತ್ವಾತ್ । 'ಶ್ರೀರೇವ ಲೋಕರೂಪೇಣ ವಿಷ್ಣೋಸ್ತಿಷ್ಠತಿ' ಇತ್ಯಾದೇಃ ॥ 62 ॥**

**ಅನುವಾದ**- ಯಾವ ಕಾರಣದಿಂದ, ಹೀಗೆ ಈಶ್ವರನೇ ಸ್ವತಂತ್ರನೂ ಜೀವರು ಅವನ ಅಧೀನರೂ ಆ ಕಾರಣದಿಂದ ಅಹಂಕಾರವನ್ನು ತೊರೆದು ಆ ಈಶ್ವರನನ್ನೇ **ಸರ್ವಭಾವೇನ**= ಎಲ್ಲ ಪ್ರಕಾರದಿಂದ **ಶರಣಂ ಗಚ್ಛ**= ಮೊರೆ ಹೊಂದು. 'ನನ್ನನ್ನು ಮೊರೆ ಹೊಂದು' ಎಂದು ಹೇಳ ಬೇಕಾಗಿರುವಲ್ಲಿ 'ಈಶ್ವರ ಇದ್ದಾನೆ. ಅವನನ್ನು ಮೊರೆ ಹೊಂದು' ಎಂದು ಪ್ರಥಮಪುರುಷದಲ್ಲಿ ಹೇಳಿದ್ದು ಕೃಷ್ಣನು ಈಶ್ವರ ಎಂಬುದು ನಿಶ್ಚಿತ ಎಂಬ ಅಭಿಪ್ರಾಯದಿಂದ . 'ಎಲ್ಲಿ ತನ್ನನ್ನು ತಾನೇ ಪ್ರಥಮಪುರುಷದಲ್ಲಿ ಹೇಳಿಕೊಳ್ಳುತ್ತಾನೊ ಅದು ನಿಶ್ಚಯಕ್ಕಾಗಿ ಎಂದು ತಿಳಿಯಬೇಕು'- ಎಂದು ಸ್ಮೃತಿಯಿದೆ (1) **ತತ್ಪ್ರಸಾದಾತ್**= ಈಶ್ವರನ ಅನುಗ್ರಹದಿಂದ, **ಪರಾಂ ಶಾಂತಿಂ**= ಬುದ್ಧಿಯು ಭಗವನ್ನಿಷ್ಠವಾಗಿರುವುದನ್ನು. **ಶಾಶ್ವತಂ ಸ್ಥಾನಂ** = ವೈಕುಂಠಾದಿಲೋಕವನ್ನು ಹೊಂದುವಿ.

'ಲಕ್ಷ್ಮೀದೇವಿಯೇ ವಿಷ್ಣುಲೋಕಗಳ ರೂಪದಿಂದ ಇರುತ್ತಾಳೆ ' ಇತ್ಯಾದಿವಚನಾನುಸಾರ ಚೇತನ ಪ್ರಕೃತಿಯಾದ ಲಕ್ಷ್ಮೀದೇವಿಯೇ ವೈಕುಂಠಾದಿ ಲೋಕರೂಪಳಾದ್ದರಿಂದ ಅವುಗಳಿಗೆ ನಿತ್ಯತ್ವ. ॥ 62 ॥

**ವಿವರಣೆ**- (1) ಭೀಮನು 'ನಾನು ನೂರುಮಂದಿ ಕೌರವರನ್ನು ಸಂಹರಿಸುತ್ತೇನೆ' ಎಂದು ಹೇಳುವುದಕ್ಕಿಂತ 'ಈ ಭೀಮನು ನೂರುಮಂದಿ ಕೌರವರನ್ನು ಸಂಹರಿಸುತ್ತಾನೆ' ಎಂದು ಹೇಳಿದಾಗ ಅರ್ಥದಲ್ಲಿ ಒಂದು ಅತಿಶಯ ಬರುತ್ತದೆ. ಅದರಂತೆ ಕೃಷ್ಣ ಇಲ್ಲಿ ಹೇಳುತ್ತಿದ್ದಾನೆ ಎಂದು ಆಶಯ.

**'ಯಥೇಚ್ಛಸಿ ತಥಾ ಕುರು'**

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥ 63 ॥**

**ಅರ್ಥ** –ಹೀಗೆ, ಗೋಪ್ಯಕ್ಕಿಂತ ಹೆಚ್ಚು ಗೋಪ್ಯವಾದ ಜ್ಞಾನಂ= ತಿಳಿಯಬೇಕಾದ್ದನ್ನು ನಿನಗೆ ವಿವರಿಸಿದ್ದೇನೆ. ಇದನ್ನು ಸಂಪೂರ್ಣವಾಗಿ ವಿಮರ್ಶಿಸಿ ಹೇಗೆ ಬಯಸುವಿಯೋ ಹಾಗೆ ಮಾಡು.

**ಏವಂ ಭಗವಾನರ್ಜುನಸ್ಯಾತಿಗೋಪ್ಯಂ ತತ್ತ್ವಂ ಉಪದಿಶ್ಯ ತದನುವಾದ-ಪೂರ್ವಂ ತೂಷ್ಣೀಂ ಸ್ಥಿತಂ ಅರ್ಜುನಮಾಕ್ಷಿಪತಿ- ಇತೀತಿ ॥ ಗುಹ್ಯಾದ್‌ಗುಹ್ಯತರಂ ಅತಿಗೋಪ್ಯಮ್ ಇತಿ ಪ್ರಾಗುಕ್ತಪ್ರಕಾರೇಣ ಜ್ಞಾನಂ ಜ್ಞೇಯಂ ತೇ ತುಭ್ಯಂ ಮಯಾ ಆಖ್ಯಾತಮ್ । ಏತದಶೇಷೇಣ ವಿಮೃಶ್ಯ ವಿಚಾರ್ಯ ಯಥೇಚ್ಛಸಿ ತಥಾ ಕುರ್ವಿತ್ಯಾಕ್ಷೇಪಃ ॥ 63 ॥**

**ಅನುವಾದ**– ಹೀಗೆ ಭಗವಂತನು ಅರ್ಜುನನಿಗೆ ಅತಿರಹಸ್ಯವಾದ ತತ್ವವನ್ನು ಉಪದೇಶಿಸಿ, ತಾನು ಹೇಳಿದ್ದನ್ನು ಅನುವಾದ ಮಾಡಿ ಮಾತನಾಡದೆ ನಿಂತಿದ್ದ ಅರ್ಜುನನನ್ನು ಆಕ್ಷೇಪಿಸುತ್ತಾನೆ- ಇತಿ ಎಂದು. **ಗುಹ್ಯಾತ್ ಗುಹ್ಯತರಂ**= ಅತಿಗೋಪ್ಯವಾದ, **ಇತಿ**= ಹಿಂದೆ ಹೇಳಿದ ವಿಧದಿಂದ, **ಜ್ಞಾನಂ**= ಜ್ಞೇಯವನ್ನು, **ತೇ**= ನಿನಗೆ ನನ್ನಿಂದ ಹೇಳಲ್ಪಟ್ಟಿದೆ. ಇದನ್ನು ಸಂಪೂರ್ಣವಾಗಿ **ವಿಮೃಶ್ಯ**= ವಿಚಾರಮಾಡಿಯೂ ಹೇಗೆ ಬಯಸುವಿಯೋ ಹಾಗೆ ಮಾಡುವೆಯಾ ? ಎಂದು ಆಕ್ಷೇಪ (1) ॥ 63 ॥

**ವಿವರಣೆ**- (1) **ಯಥೇಚ್ಛಸಿ ತಥಾ ಕುರು** = ಹೇಗೆ ಬಯಸುವೆಯೋ ಹಾಗೆ ಮಾಡು ಎಂಬ ಮಾತಿನಿಂದ ಮೇಲ್ನೋಟಕ್ಕೆ ಕೃಷ್ಣನು ಅರ್ಜುನನಿಗೆ ಮನಬಂದಂತೆ ವರ್ತಿಸು ಎಂದು ಹೇಳುವಂತೆ ಕಾಣುತ್ತದೆ. ಆದರೆ, ಕೃಷ್ಣನ ಅಭಿಪ್ರಾಯ ಹಾಗಲ್ಲ. 'ಮನ ಬಂದಂತೆ ವರ್ತಿಸುವೆಯೋ ? ನಾನು ಹೇಳಿದ್ದಕ್ಕಿಂತ ವಿರುದ್ಧವಾಗಿ ವರ್ತಿಸುವೆಯೋ ? ಎಂದು ಆಕ್ಷೇಪಿಸುವುದು ಅಭಿಪ್ರೇತವಾಗಿದೆ. ಇಲ್ಲದಿದ್ದರೆ, ಈ ಮಾತಿನ ನಂತರ '**ಕರಿಷ್ಯೇ ವಚನಂ ತವ**= ನಿನ್ನ ಮಾತನ್ನು ನಡೆಸುವೆ' ಎಂಬ 73ನೇ ಶ್ಲೋಕದಲ್ಲಿ ಬರುವ ಅರ್ಜುನನ ಮಾತಿನ ನಂತರ ಕೃಷ್ಣನ 64ರಿಂದ 72 ಶ್ಲೋಕದ ಉಪಸಂಹಾರ ವಚನಗಳು ಇರಬೇಕಿತ್ತು. ಈ ವಿವರಣೆಯನ್ನು ಗೀತಾತಾತ್ಪರ್ಯ-ನ್ಯಾಯದೀಪಿಕೆ ಗಳಲ್ಲಿ ಕಾಣಬಹುದು.

**ಇದು ಅತಿ ರಹಸ್ಯಸಾಧನ**

**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥ 64 ॥**

**ಅರ್ಥ** – ನೀನು ನಿಶ್ಚಯವಾಗಿಯೂ ನನಗೆ ಪ್ರಿಯನಾಗಿರುವಿ (ಇತಿ =) ತತಃ ಆದ್ದರಿಂದ

ನಿನಗೆ ಹಿತವಾದದ್ದನ್ನು ಹೇಳುತ್ತೇನೆ. ಎಲ್ಲಸಾಧನಗಳಲ್ಲೂ ಅತಿ ರಹಸ್ಯವಾದ (ಸಾಧನವನ್ನು ಹೇಳುವ) ನನ್ನ ಉತ್ಕೃಷ್ಟವಚನವನ್ನು ಮತ್ತೂ ಆಲಿಸು.

**ತತ್ತ್ವಸಾರಮುಪಸಂಹೃತ್ಯ ಸಾಧನಸಾರಕಥನಮುಪಸಂಹರ್ತುಂ ಪ್ರತಿಜಾನೀತೇ- ಸರ್ವೇತಿ ॥ ಚತುರ್ದಶಾದೌ ಸಾಧನಸಾರಸ್ಯೋಕ್ತತ್ವಾದ್‌ಭೂಯ ಇತ್ಯುಕ್ತಮ್ । ಪುನರಿತ್ಯರ್ಥಃ । ಸರ್ವಸಾಧನೇಷು ಗೋಪ್ಯತಮಂ ಮೇ ಪರಮಂ ವಚಃ ಶೃಣು । ಮೇ ಇಷ್ಟೋಽಸಿ । ದೃಢಮಿತಿ ನಿಶ್ಚಯಃ । ತತಸ್ತೇ ಹಿತಂ ವಕ್ಷ್ಯಾಮಿ । ಉಪಸಂಹಾರರೂಪೇಣ ಕಥಯಿಷ್ಯಾಮೀತ್ಯರ್ಥಃ ॥ 64 ॥**

**ಅನುವಾದ-** ಪ್ರಮೇಯಸಾರದ ಉಪಸಂಹಾರವನ್ನು ಮಾಡಿ, ಸಾಧನಸಾರದ ಉಪಸಂಹಾರ ವನ್ನು ಮಾಡುವ ಪ್ರತಿಜ್ಞೆ ಮಾಡುತ್ತಾನೆ ಸರ್ವ ಎಂದು. ಹದಿನಾಲ್ಕನೆ ಅಧ್ಯಾಯ ಮೊದಲಾದೆಡೆ ಸಾಧನದ ಸಾರವನ್ನು ಹೇಳಿರುವುದರಿಂದ 'ಭೂಯಃ' ಎಂದು ಹೇಳಿದ್ದು. **ಪುನಃ=** ಮತ್ತೂ ಎಂದರ್ಥ. ಎಲ್ಲಸಾಧನಗಳಲ್ಲಿ ಅತ್ಯಂತ ಗೋಪ್ಯವಾದ ನನ್ನ ಉತ್ಕೃಷ್ಟವಚನವನ್ನು ಕೇಳು. ನನಗೆ ಪ್ರಿಯನಾಗಿರುವಿ, **'ದೃಢಂ'** ಎಂದರೆ ನಿಶ್ಚಯ. ಆದ್ದರಿಂದ ನಿನ್ನ ಹಿತವನ್ನು ಹೇಳುವೆನು. ಉಪಸಂಹಾರರೂಪವಾಗಿ ತಿಳಿಸುವೆನು ಎಂದರ್ಥ. ॥ 64 ॥

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥ 65 ॥**

**ಅರ್ಥ –** ನೀನು ನನಗೆ ಪ್ರಿಯನಾದ್ದರಿಂದ, ನನ್ನಲ್ಲಿ ಮನಸ್ಸಿಡು, ನನ್ನಲ್ಲಿ ಭಕ್ತಿ ಮಾಡು, ನನ್ನನ್ನಾರಾಧಿಸು, ನನ್ನನ್ನು ನಮಸ್ಕರಿಸು. (ಇವುಗಳಿಂದ) ನೀನು ನನ್ನನ್ನೇ ಹೊಂದುವಿ. (ಹೀಗೆಂದು) ಯಥಾರ್ಥವಾಗಿ ನಿನಗೆ ಶಪಥ ಮಾಡುವೆನು.

**ತದಾಹ- ಮನ್ಮನಾ ಇತಿ ॥ ಯತೋ ಮೇ ಪ್ರಿಯೋಽಸಿ ಅತೋ ಮನ್ಮನಸ್ತ್ವಾದಿಸಾಧನಸಾರಚತುಷ್ಟಯೇನ ಮಾಮೇವೈಷ್ಯಸಿ ಪ್ರಾಪ್ಸ್ಯಸಿ । ತೇ ಸತ್ಯಂ ಪ್ರತಿಜಾನೇ । ಅವಶ್ಯಂ ಮತ್ಪ್ರಾಪ್ತಿರ್ಭವತೀತಿ ಪ್ರತಿಜ್ಞಾಂ ಕರೋಮಿ । ನಾತ್ರ ಸಂದೇಹಃ ಕಾರ್ಯ ಇತಿ ಭಾವಃ ॥ 65 ॥**

**ಅನುವಾದ-** ಅದನ್ನು (ಉಪಸಂಹಾರರೂಪವಾಗಿ ತಿಳಿಸುವೆ ಎಂದದ್ದನ್ನು) ಹೇಳುತ್ತಾನೆ, **'ಮನ್ಮನಾಃ'** ಎಂದು. ಯಾವ ಕಾರಣದಿಂದ ನನಗೆ ಪ್ರಿಯನಾಗಿರುವೆಯೋ, ಆ ಕಾರಣದಿಂದ ನನ್ನಲ್ಲಿ ಮನಸ್ಸಿಡುವುದು ಮೊದಲಾದ ಸಾಧನಗಳಲ್ಲಿ ಮುಖ್ಯವಾದ ನಾಲ್ಕು ಸಾಧನಗಳಿಂದ

ನನ್ನನ್ನೇ ಹೊಂದುವಿ. ತೇ ಸತ್ಯಂ ಪ್ರತಿಜಾನೇ= ಅವಶ್ಯವಾಗಿ ನನ್ನ ಪ್ರಾಪ್ತಿ ಆಗುವುದೆಂದು ನಿನಗೆ ಪ್ರತಿಜ್ಞೆಯನ್ನು ಮಾಡುವೆ. ಈ ವಿಷಯದಲ್ಲಿ ಸಂಶಯ ಪಡಬಾರದು ಎಂದು ಅಭಿಪ್ರಾಯ. ||65||

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥ 66 ॥**

**ಅನುವಾದ**– ಎಲ್ಲ (ಅನ್ಯದೇವತಾ ಸಂಬಂಧಿಯಾದ) ಕರ್ಮಗಳನ್ನು ಬಿಟ್ಟು, ನನ್ನೊಬ್ಬನನ್ನೇ (ನನ್ನನೇ ಪ್ರಧಾನವಾಗಿ) ಮೊರೆಯನ್ನು ಹೊಂದು. ನಾನು ನಿನ್ನನ್ನು ಎಲ್ಲ ಪಾಪಗಳಿಂದ ಬಿಡುಗಡೆಗೊಳಿಸುವೆ. ದುಃಖಪಡಬೇಡ.

**ಕಥಂ ಮನ್ಮನಸ್ತ್ವಾದಿಕಮಿತ್ಯತ ಉಕ್ತಮ್– ಸರ್ವಧರ್ಮಾನಿತಿ ॥ ಅನ್ಯಸರ್ವಧರ್ಮಾನ್ ಪರಿತ್ಯಜ್ಯ ಮನ್ಮನಾ ಮದ್ಭಕ್ತೋ ಮದ್ಯಾಜೀತ್ಯೇವಮ್ । ಪೂರ್ವಶೇಷೋಽಯಮ್ । 'ಮನ್ಮನಾ ಭವೇತ್ಯಾದಿನಾ' ಕಿಮುಕ್ತಂ ಭವತೀತ್ಯತಸ್ತಸ್ಯೋಪಸಂಹಾರರೂಪೇಣ ವ್ಯಾಖ್ಯಾ ಕ್ರಿಯತೇ– ಮಾಮೇಕಂ ಶರಣಂ ವ್ರಜೇತಿ ॥ ಮನ್ಮನಸ್ತ್ವಾದೇರೇವ ಶರಣಾಗತಿರೂಪತ್ವಾತ್ । ಉಕ್ತಂ ಹಿ– 'ಸರ್ವೋತ್ತಮತ್ವವಿಜ್ಞಾನಪೂರ್ವಂ ತತ್ರ ಮನಃ ಸದಾ । ಸರ್ವಾಧಿಕಪ್ರೇಮಯುಕ್ತಂ ಸರ್ವಸ್ಯಾತ್ರ ಸಮರ್ಪಣಮ್ । ಅಖಂಡಾ ತ್ರಿವಿಧಾ ಪೂಜಾ ತದ್ರತ್ಯೈವ ಸ್ವಭಾವತಃ । ರಕ್ಷತೀತ್ಯೇವ ವಿಶ್ವಾಸಸ್ತದೀಯೋಽಹಮಿತಿ ಸ್ಮೃತಿಃ । ಶರಣಾಗತಿರೇಷಾ ಸ್ಯಾದ್ವಿಷ್ಣೌ ಮೋಕ್ಷಫಲಪ್ರದಾ ॥' (ಮಹಾವಿಷ್ಣುಪು.) ಇತಿ ।**

**ಅನುವಾದ**– **ಮನ್ಮನಸ್ತ್ವಾದಿಕಂ**= ಭಗವಂತನಲ್ಲಿ ಮನಸ್ಸಿಡುವುದು ಮುಂತಾದದ್ದು ಹೇಗೆಂದರೆ ಹೇಳುತ್ತಾನೆ ' ಸರ್ವಧರ್ಮಾನ್ 'ಎಂದು (ಇದರರ್ಥ) ಉಳಿದೆಲ್ಲ ಧರ್ಮಗಳನ್ನು ಬಿಟ್ಟು ನನ್ನಲ್ಲಿ ಮನಸ್ಸಿಟ್ಟವನು, ನನ್ನ ಭಕ್ತನು, ನನ್ನ ಆರಾಧಕನು ಆಗು– ಹೀಗೆ '**ಸರ್ವಧರ್ಮಾನ್ ಪರಿತ್ಯಜ್ಯ**' ಎನ್ನುವುದು ಹಿಂದಿನ ಮಾತಿಗೆ ಸೇರಿದ್ದು (1) 'ಮನ್ಮನಾ ಭವ' ಇತ್ಯಾದಿ ವಚನದಿಂದ ಏನು ಹೇಳಿದಂತಾಯಿತೆಂಬ ಪ್ರಶ್ನೆಗೆ ಉತ್ತರವಾಗಿ '**ಮಾಮೇಕಂ ಶರಣಂ ವ್ರಜ**' (ನನ್ನೊಬ್ಬನನ್ನೇ ಮೊರೆಹೊಂದು) ಎಂದು ಉಪಸಂಹಾರ ರೂಪದಿಂದ ವ್ಯಾಖ್ಯಾನವನ್ನು ಮಾಡಲಾಗುತ್ತಿದೆ. ಏಕೆಂದರೆ, ಮನ್ಮನಸ್ತ್ವಾದಿಗಳೇ ಶರಣಾಗತಿರೂಪವಾಗಿವೆ. (2) ಇದು ಗೀತಾತಾತ್ಪರ್ಯದಲ್ಲಿ ತೋರಿಸಿದ (ಮಹಾವಿಷ್ಣುಪುರಾಣದಲ್ಲಿ) ಹೇಳಲ್ಪಟ್ಟದ್ದು ಪ್ರಸಿದ್ಧ. (ಆ ಪ್ರಮಾಣವಚನಗಳ ಅರ್ಥ.) 'ಭಗವಂತನ ಸರ್ವೋತ್ತಮತ್ವಜ್ಞಾನ ಪೂರ್ವಕ ಅವನಲ್ಲಿ ಸದಾ ಎಲ್ಲಕ್ಕಿಂತ ಹೆಚ್ಚಿನ ಪ್ರೀತಿಸಹಿತವಾದ ಮನಸ್ಸು, ಎಲ್ಲವನ್ನೂ ಭಗವಂತನಲ್ಲೇ ಅರ್ಪಿಸುವುದು,

ನಿರಂತರವಾಗಿ ವಾಕ್-ಕಾಯ-ಮನಸ್ಸುಗಳಿಂದ ಅವನ ಮೇಲಿನ ಪ್ರೀತಿಯಿಂದ, **ಸ್ವಭಾವತಃ**= ಫಲಾಪೇಕ್ಷೆ ಇಲ್ಲದೆ ಅವನನ್ನು ಪೂಜಿಸುವುದು, ಭಗವಂತನು ತಪ್ಪದೆ ರಕ್ಷಿಸುವನೆಂಬ ನಂಬಿಕೆ, ಅವನವನು ನಾನು ಎಂಬ ನೆನಪು- ಇದೆಲ್ಲ ಭಗವಂತನಲ್ಲಿ ಶರಣಾಗತಿ (ಮೊರೆ ಹೊಂದು ವುದು) ಎನಿಸುತ್ತದೆ. ಈ ಶರಣಾಗತಿಯು ಮೋಕ್ಷಫಲವನ್ನು ನೀಡುತ್ತದೆ.- ಎಂದು.

**ಯದ್ವಾ ' ಸರ್ವಧರ್ಮಾನ್ ಪರಿತ್ಯಜ್ಯೇ'ತಿ ಸರ್ವಧರ್ಮಫಲಾನಿ ಪರಿತ್ಯಜ್ಯ ಇತ್ಯರ್ಥಃ । ಅನ್ಯಥಾ ಯುದ್ಧವಿಧಿವಿರೋಧಃ ಸ್ಯಾತ್ । ಯದ್ವಾಽವೈಷ್ಣವ-ಸರ್ವಧರ್ಮಾನ್ಪರಿತ್ಯಜ್ಯೇತ್ಯರ್ಥಃ। ಅನಾದಿಜನ್ಮಕೃತಪ್ರತಿಬಂಧಕ (ಸ್ಯ)ಸತ್ತ್ವಾತ್ಕಥಂ ಮಾಮೇವ ಏಷ್ಯಸೀತ್ಯುಕ್ತಿರಿತ್ಯತ ಆಹ- ಅಹಂ ತ್ವೇತಿ ॥ ತ್ವಾ ತ್ವಾಮನಾದಿಜನ್ಮ-ಕೃತಪಾಪೇಭ್ಯಃ ಮೋಕ್ಷಯಿಷ್ಯಾಮಿ ವಿನಿರ್ಮುಕ್ತಂ ಕರಿಷ್ಯಾಮಿ । ಮಾ ಶುಚಃ ಸಂಸಾರಭಯಾಚ್ಛೋಕಂ ಮಾಕಾರ್ಷೀಃ ॥ 66 ॥**

**ಅನುವಾದ-** ಅಥವಾ, ಸರ್ವಧರ್ಮಾನ್ ಪರಿತ್ಯಜ್ಯ= ಎಲ್ಲ ಧರ್ಮಗಳ ಫಲವನ್ನು ಬಿಟ್ಟು ಎಂದರ್ಥ. ಹೀಗರ್ಥವಲ್ಲದಿದ್ದರೆ ಯುದ್ಧ ಮಾಡು ಎಂಬ ವಿಧಿಯ ವಿರೋಧ ಬಂದೀತು.

ಅಥವಾ, ಎಲ್ಲ ಅವೈಷ್ಣವ ಧರ್ಮಗಳನ್ನು ಬಿಟ್ಟು ಎಂದರ್ಥ. ಅನಾದಿಯಾದ ಜನ್ಮಗಳಿಂದ ಆದ (ಪಾಪವೆಂಬ) ಪ್ರತಿಬಂಧಕ ಇರುವುದರಿಂದ 'ಮಾಮೇವ ಏಷ್ಯಸಿ = ನನ್ನನ್ನೇ ಹೊಂದುವಿ' ಎಂಬ ಮಾತು ಹೇಗೆ ? ಎಂದರೆ ಹೇಳುತ್ತಾನೆ- **ಅಹಂ ತ್ವಾ** ಎಂದು. **ತ್ವಾ**= ನಿನ್ನನ್ನು, **(ಸರ್ವಪಾಪೇಭ್ಯಃ**=) ಅನಾದಿಜನ್ಮಗಳಿಂದಾದ ಪಾಪಗಳಿಂದ, **ಮೋಕ್ಷಯಿಷ್ಯಾಮಿ**= ಮುಕ್ತ ನನ್ನಾಗಿ ಮಾಡುವೆ. **ಮಾ ಶುಚಃ**= ಸಂಸಾರಭಯದಿಂದ ದುಃಖಪಡಬೇಡ. ॥ 66 ॥

**ವಿವರಣೆ-** (1) **'ಸರ್ವಧರ್ಮಾನ್ ಪರಿತ್ಯಜ್ಯ'** ಎಂಬ ವಾಕ್ಯಖಂಡವನ್ನು ಎರಡು ಕ್ರಮ ಗಳಿಂದ ವ್ಯಾಖ್ಯಾನಿಸುತ್ತಿದ್ದಾರೆ. ಒಂದು, 'ಸರ್ವಧರ್ಮಾನ್ ಪರಿತ್ಯಜ್ಯ ಮನ್ಮನಾ ಭವ, ಮದ್ಭಕ್ತೋ ಭವ, ಎಂದು ಹಿಂದಿನ ವಾಕ್ಯದ ಉಳಿದ ಭಾಗವಾಗಿದೆ. **'ಸರ್ವಧರ್ಮಾನ್ ಪರಿತ್ಯಜ್ಯ'** ಎಂಬುದು. ಈ ಪಕ್ಷದಲ್ಲಿ 'ಎಲ್ಲ ಕಾಮ್ಯ ಧರ್ಮಗಳನ್ನು ಬಿಟ್ಟು ನನ್ನಲ್ಲಿ ಮನಸ್ಸಿಡು' ಎಂದು ಅರ್ಥ. ಎರಡನೆಯ ವ್ಯಾಖ್ಯಾನವನ್ನು ಮುಂದೆ **'ಯದ್ವಾ'** ಎಂದು ಮಾಡುತ್ತಿದ್ದಾರೆ. ಈ ಪಕ್ಷದಲ್ಲಿ **'ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ'** ಎಂದು ಕಾಣುವಂತೆಯೇ ವಾಕ್ಯ ವನ್ನಿಟ್ಟುಕೊಂಡು **ಸರ್ವಧರ್ಮಾನ್ ಪರಿತ್ಯಜ್ಯ** ಎನ್ನುವುದಕ್ಕೆ 'ಎಲ್ಲ ಧರ್ಮಗಳ ಫಲಗಳನ್ನು ಬಿಟ್ಟು' ಎಂದೂ , 'ಎಲ್ಲ ಅವೈಷ್ಣವಧರ್ಮಗಳನ್ನು ಬಿಟ್ಟು' ಎಂದೂ ವ್ಯಾಖ್ಯಾನ ಮಾಡಿದ್ದಾರೆ.

(2) ಭಗವಂತನಲ್ಲಿ ಮನಸ್ಸಿಡುವುದು, ಭಕ್ತಿ ಮಾಡುವುದು, ಅವನನ್ನು ಆರಾಧಿಸುವುದು, ನಮಸ್ಕರಿಸುವುದು – ಈ ನಾಲ್ಕನ್ನು ಮಾಡುವುದೆಂದರೂ ಶರಣ ಹೊಂದುವುದೆಂದರೂ ಒಂದೇ.

ಆದ್ದರಿಂದ '**ಸರ್ವಧರ್ಮಾನ್ ಪರಿತ್ಯಜ್ಯ ಮನ್ಮನಾ ಭವ**' ಎನ್ನುವುದರ ಉಪಸಂಹಾರವಚನ 'ಮಾಮೇಕಂ ಶರಣಂ ವ್ರಜ' ಎನ್ನುವುದು- ಎಂದು ಅಭಿಪ್ರಾಯ.

## ಗೀತಾಶ್ರವಣಕ್ಕೆ ಯಾರು ಅಧಿಕಾರಿ ?

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥ 67 ॥**

**ಅರ್ಥ**- ಈ ಗೀತಾಶಾಸ್ತ್ರವನ್ನು ನೀನು, ತಪಸ್ಸು ಮಾಡದವನಿಗೆ ಹೇಳಬಾರದು. ಗುರು ಶುಶ್ರೂಷೆ ಮಾಡದವನಿಗೆ ಹೇಳುವುದು ಹೆಚ್ಚು ದೋಷಕರ. ಭಕ್ತಿಹೀನನಿಗಂತೂ ಎಂದೂ ಹೇಳ ಬಾರದು. ಎಲ್ಲಕ್ಕಿಂತ ಹೆಚ್ಚಾಗಿ, ನನ್ನ ದ್ವೇಷ ಇರುವವರಿಗೆ ಹೇಳುವುದು ಮಹಾದೋಷಕರ (1)

**ಗೀತಾಶಾಸ್ತ್ರೇಽನಧಿಕಾರಿನಿರಾಸೇನ ಲಕ್ಷಣಯಾಽಧಿಕಾರಿಣಮಾಹ- ಇದಮಿತಿ ॥ ಇದಂ ಗೀತಾಶಾಸ್ತ್ರಂ ತಪೋಹೀನಾಯ ತೇ ತ್ವಯಾ ನ ವಾಚ್ಯಮ್ । ಅಶುಶ್ರೂಷವೇ ಸೇವಾಮಕುರ್ವತೇ ನ ವಾಚ್ಯಮ್ । ತಪೋಹೀನೋಪದೇಶಾದಪ್ಯಶುಶ್ರೂಷೋರುಪದೇಶೋ ಮಹಾದೋಷಕರ ಇತಿ ಸೂಚನಾಯಾತ್ರ ಚ ಶಬ್ದಃ । 'ಸಮುಚ್ಚಯೇಽಥವಾಽಽಧಿಕ್ಯೇ ನ್ಯೂನತ್ವೇ ಚಃ ಪ್ರಯುಜ್ಯತ'' (ಶಬ್ದನಿರ್ಣಯೇ) ಇತ್ಯುಕ್ತೇಃ । ಚಶ್ಚಕಾರ ಇತ್ಯರ್ಥಃ । ಅಶುಶ್ರೂಷೂಪದೇಶಾದಪ್ಯಭಕ್ತಾಯ ಕದಾಚನ ಕದಾಪಿ ನ ವಾಚ್ಯಮಿತ್ಯುಕ್ತಿಃ ಅಲ್ಪಮಾತ್ರತಪಃ ಶುಶ್ರೂಷಾವತೋ ಭಕ್ತಿಮತಃ ಕದಾಚಿದುಪದೇಶೇಽಪಿ ಭಕ್ತಿಹೀನಾಯೋಪದೇಶೇ ಮಹಾಂದೋಷ ಇತಿ ಸೂಚನಾಯ । ಮಾಂ ಯೋಽಭ್ಯಸೂಯತಿ ತಸ್ಮೈ ನ ಚ ವಾಚ್ಯಮಿತ್ಯತ್ರಾಪಿ ಚ ಶಬ್ದಃ ತಪೋಹೀನಾದಿತ್ರಿತಯೋಪದೇಶಾದಪ್ಯಸೂಯಾವತ ಉಪದೇಶೇ ದೋಷಾಧಿಕ್ಯಜ್ಞಾಪನಾರ್ಥಃ । ಏತೇನ ತಪಃಪ್ರಭೃತಿಗುಣಯುಕ್ತೋಽಧಿಕಾರೀತಿ ಸೂಚಿತಮ್ ॥ 67 ॥**

**ಅನುವಾದ**- ಗೀತಾಶಾಸ್ತ್ರದಲ್ಲಿ ಅನಧಿಕಾರಿಗಳನ್ನು ನಿರಾಕರಿಸುವ ಮೂಲಕ ಲಕ್ಷಣಾವೃತ್ತಿ ಯಿಂದ ಅಧಿಕಾರಿಯನ್ನು ಹೇಳುತ್ತಾನೆ- 'ಇದಂ' ಎಂದು. **ಇದಂ**= ಈ ಗೀತಾಶಾಸ್ತ್ರ ತಪಸ್ಸಿಲ್ಲದವನಿಗೆ , **ತೇ**= ನಿನ್ನಿಂದ ಹೇಳಲ್ಪಡಬಾರದು. **ಅಶುಶ್ರೂಷವೇ**= ಸೇವೆ ಮಾಡದವನಿ ಹೇಳಬಾರದು. ತಪಸ್ಸಿಲ್ಲದವನಿಗೆ ಉಪದೇಶಿಸುವುದಕ್ಕಿಂತ ಗುರುಸೇವೆ ಇಲ್ಲದವನಿ ಉಪದೇಶಿಸುವುದು ಹೆಚ್ಚು ದೋಷವನ್ನುಂಟು ಮಾಡುವುದು ಎಂದು ಸೂಚಿಸಲು ಚಕಾರವನ್ನು ಹೇಳಲಾಗಿದೆ. 'ಸಮುಚ್ಚಯ (ಗುಂಪು), ಆಧಿಕ್ಯ (ಹೆಚ್ಚುಗಾರಿಕೆ) ಅಥವಾ ನ್ಯೂನತೆ ಎಂಬ ಅರ್ಥ

ದಲ್ಲಿ 'ಚಃ' = ಚಕಾರವು ಪ್ರಯೋಗಿಸಲ್ಪಡುತ್ತದೆ' ಎಂದು (ಗೀತಾತಾತ್ಪರ್ಯದಲ್ಲಿ ಉಲ್ಲೇಖಿಸಿದ ಶಬ್ದನಿರ್ಣಯ ಎಂಬ ಗ್ರಂಥದ) ಮಾತಿನಂತೆ ಈ ಅರ್ಥ. ಪ್ರಮಾಣವಚನದಲ್ಲಿರುವ 'ಚಃ' ಎನ್ನುವುದಕ್ಕೆ ಚಕಾರ ಎಂದರ್ಥ. ಗುರುಸೇವೆ ಇಲ್ಲದವನಿಗೆ ಮಾಡುವ ಉಪದೇಶಕ್ಕಿಂತ ಭಕ್ತಿ ಇಲ್ಲದವನಿಗೆ **ಕದಾಚನ**= ಎಂದಿಗೂ ಹೇಳಬಾರದು- ಈ ಮಾತು, ಸ್ವಲ್ಪವೇ ತಪಸ್ಸು -ಗುರುಸೇವೆ ಇರುವ ಭಕ್ತನಿಗೆ ಒಂದೊಮ್ಮೆ ಹೇಳಿದರೂ ಭಕ್ತಿ ಇಲ್ಲದವನಿಗೆ ಉಪದೇಶಿಸಿದರೆ ಬಹಳ ದೋಷ, ಎಂದು ಸೂಚಿಸಲು. ನನ್ನ ಬಗ್ಗೆ ಯಾರು ಅಸೂಯೆ (ದ್ವೇಷ) ಪಡುವರೋ ಅವರಿಗೆ ಹೇಳಬಾರದು ಎಂಬಲ್ಲಿ ಚಶಬ್ದವನ್ನು ಹೇಳಿದ್ದು, ತಪಸ್ಸು -ಸೇವೆ-ಭಕ್ತಿ ಇಲ್ಲದ ಮೂವರಿಗಿಂತ ದ್ವೇಷಿಗೆ ಉಪದೇಶಿಸಿದರೆ ಹೆಚ್ಚು ದೋಷ , ಎಂದು ತಿಳಿಸಲು.

ಇದರಿಂದ ತಪಸ್ಸು ಮೊದಲಾದ ಗುಣ ಇರುವವನು ಅಧಿಕಾರಿ ಎಂದು ಸೂಚಿತವಾಯಿತು.

**ವಿವರಣೆ**- (1) ಮೇಲ್ನೋಟಕ್ಕೆ ಶ್ಲೋಕದ ಅನುವಾದ ಹೀಗಾಗುತ್ತದೆ- 'ಈ ಗೀತಾಶಾಸ್ತ್ರವನ್ನು ತಪಸ್ಸು ಇಲ್ಲದವನಿಗೆ ಹೇಳಬಾರದು. ಭಕ್ತಿ ಇಲ್ಲದವನಿಗೆ ಎಂದೂ ಹೇಳಬಾರದು. ಮತ್ತು ಸೇವೆ ಮಾಡದವನಿಗೆ ಹೇಳಬಾರದು, ಮತ್ತು ಯಾರು ನನ್ನನ್ನು ದ್ವೇಷಿಸುವರೊ ಅವರಿಗೂ ಹೇಳ ಬಾರದು' - ಎಂದು

ಆದರೆ, ಗೀತಾವಿವೃತಿಯಲ್ಲಿ ನೀಡಿದ ವಿವರಣಾನುಸಾರ 'ಚ 'ಶಬ್ದಕ್ಕೆ ಕೇವಲ 'ಮತ್ತು' ಎಂಬ ಅರ್ಥವಲ್ಲ, 'ಆಧಿಕ್ಯ' ಎಂಬ ಆರ್ಥವೂ ಇದೆ. ನಾಲ್ಕು ತರಹದ ಅನಧಿಕಾರಿಗಳಿಗೆ ಹೇಳಬಾರದು ಎನ್ನುವುದಷ್ಟೇ ಇದರ ಅರ್ಥವಲ್ಲ, ಒಂದೊಂದು ವಿಧದ ಅನಧಿಕಾರಿಗಿಂತ ಮತ್ತೊಬ್ಬ ಅನಧಿ ಕಾರಿಗೆ ಉಪದೇಶಿಸುವುದು ಹೆಚ್ಚು ದೋಷಕರ. ಈ ತಾರತಮ್ಯವು **ಚ**ಶಬ್ದದಿಂದ ಸಿಗುತ್ತದೆ. ಅದರಲ್ಲೂ ಶ್ಲೋಕದ ನಾಲ್ಕು ಪಾದಗಳಲ್ಲಿ ಕಾಣುವಂತೆ ತಪಸ್ಸು-ಭಕ್ತಿ-ಸೇವೆ-ದ್ವೇಷರಾಹಿತ್ಯ ಇಲ್ಲದವರಿಗೆ ಉಪದೇಶಿಸಿದರೆ ಹೆಚ್ಚು ಹೆಚ್ಚು ದೋಷ ಎಂದು ವ್ಯಾಖ್ಯಾನ ಮಾಡದೆ ತಪಸ್ಸು - ಸೇವೆ-ಭಕ್ತಿ-ದ್ವೇಷರಾಹಿತ್ಯ ಎಂಬ ಕ್ರಮವನ್ನು ಇಟ್ಟುಕೊಳ್ಳಬೇಕೆಂದು 'ಕದಾಚನ' ಎಂಬ ಶಬ್ದದ ಸ್ವಾರಸ್ಯದಿಂದ ಗೀತಾತಾತ್ಪರ್ಯದಲ್ಲಿ ಮತ್ತು ತದನುಸಾರಿ ಗೀತಾವಿವೃತಿಯಲ್ಲಿ ಹೇಳಲಾಗಿದೆ - ಈ ಹಿನ್ನೆಲೆಯಲ್ಲಿ ಮೇಲಿನಂತೆ ಅನುವಾದ ಮಾಡಲಾಗಿದೆ.

## ಗೀತಾಪ್ರವಚನದ ಫಲ

**ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ 68 ॥**

**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ 69 ॥**

**ಅರ್ಥ–** ಅತಿ ಗೋಪ್ಯವಾದ ಈ ಗೀತಾಶಾಸ್ತ್ರವನ್ನು ಯಾರು ನನ್ನ ಭಕ್ತರಿಗೆ ಉಪದೇಶಿಸುವನೋ ಅವನು ನನ್ನಲ್ಲಿ ಉತ್ತಮ ಭಕ್ತಿಯನ್ನು ಮಾಡಿ ನನ್ನನ್ನೇ ಹೊಂದುವನು. (ಈ ಬಗ್ಗೆ) ಸಂಶಯ ಇಲ್ಲ. || 68 ||

ಅವನಿಗಿಂತ ಅತಿ ಹೆಚ್ಚಿನ ಪ್ರಿಯಕರನು ನನಗೆ ಮನುಷ್ಯರಲ್ಲಿ ಯಾರೂ ಇಲ್ಲ. ಅವನಿಗಿಂತ ಪ್ರಿಯಕರನು ಮುಂದೆ ಬರುವುದು ಇಲ್ಲ. (ಹಿಂದೆ ಇರಲೂ ಇಲ್ಲ) || 69 ||

**ಗೀತಾಶಾಸ್ತ್ರಸ್ಯ ವ್ಯಾಖ್ಯಾನಂ ಫಲೋಕ್ತ್ಯಾ ಪ್ರಶಂಸತಿ- ಯ ಇತ್ಯಾದಿ-ದ್ವಾಭ್ಯಾಮ್ || ಪರಮಂ ಗುಹ್ಯಂ ಅತಿಗೋಪ್ಯಮ್ ಇದಂ ಗೀತಾಶಾಸ್ತ್ರಮ್ । ಯೋಽಧಿಕಾರೀ ಮದ್ಭಕ್ತೇಷು ಮಮ ಭಕ್ತೇಭ್ಯೋಽಭಿಧಾಸ್ಯತಿ ಉಪದೇಕ್ಷ್ಯತಿ ಸ ಇತಿ ಯೋಜ್ಯಮ್ । ಮಯಿ ಪರಾಂ ಭಕ್ತಿಂ ಕೃತ್ವಾ ಮಾಮೇವೈಷ್ಯತಿ । ಪ್ರಾಪ್ಸ್ಯತಿ । ಅಸಂಶಯಃ ನಾಸ್ತಿ ಸಂಶಯಃ || 68 ||**

**ತಸ್ಮಾದ್ಗೀತಾವ್ಯಾಖ್ಯಾತುಃ ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ನ ಚಾಸ್ತಿ ನೈವಾಸ್ತಿ । ತಸ್ಮಾದನ್ಯೋ ಮೇ ಪ್ರಿಯತಮೋ ಭವಿತಾ ಚ ನ । ನಾಭೂದಿತಿ ಚ ಜ್ಞೇಯಮ್ । ಅತ್ರ ಮನುಷ್ಯೇಷ್ವಿತ್ಯುಕ್ತ್ಯಾ ದೇವಾನಾಂ ಫಲಾಧಿಕ್ಯಂ ಸೂಚಯತಿ । || 69 ||**

**ಅನುವಾದ–** ಗೀತಾಶಾಸ್ತ್ರದ ಉಪದೇಶ ಮಾಡುವುದನ್ನು ಫಲವನ್ನು ಹೇಳಿ ಹೊಗಳುತ್ತಾನೆ- 'ಯ' ಇತ್ಯಾದಿ ಎರಡು ಶ್ಲೋಕಗಳಿಂದ. **ಪರಮಂ ಗುಹ್ಯಂ**= ಅತಿ ಗೋಪ್ಯವಾದ, **ಇದಂ**= ಈ ಗೀತಾಶಾಸ್ತ್ರವನ್ನು , **ಯಃ** = ಯಾವ ಅಧಿಕಾರಿಯು, **ಮದ್ಭಕ್ತೇಷು**= ನನ್ನ ಭಕ್ತರಿಗೆ, **ಅಭಿಧಾಸ್ಯತಿ**= ಉಪದೇಶಿಸುವನೋ, **ಸಃ**= ಅವನು ಎಂದು ಸೇರಿಸಿಕೊಳ್ಳಬೇಕು, ನನ್ನಲ್ಲಿ ಉತ್ತಮ ಭಕ್ತಿಯನ್ನು ಮಾಡಿ ನನ್ನನ್ನೇ, **ಏಷ್ಯತಿ**= ಹೊಂದುವನು. **ಅಸಂಶಯಃ**= ಸಂಶಯ ಇಲ್ಲ. || 68 ||

**ಅನುವಾದ– ತಸ್ಮಾತ್**= ಗೀತೆಯ ಉಪದೇಶ ಮಾಡುವವನಿಗಿಂತ, ಮನುಷ್ಯರಲ್ಲಿ ಯಾರು ನನಗೆ ಅತಿಹೆಚ್ಚು ಪ್ರಿಯಕರರು, **ನ ಚ ಅಸ್ತಿ**= ಇಲ್ಲವೇ ಇಲ್ಲ. (**ನ ಚ ಅಸ್ತಿ** ಎಂಬಲ್ಲಿ '**ಚ**' ಎನ್ನುವುದಕ್ಕೆ ಏವಶಬ್ದದ ಅರ್ಥ ಮಾಡಬೇಕು ಎಂದಭಿಪ್ರಾಯ) ಅವನಿಗಿಂತ ಬೇರೆ ನನಗೆ ಅತಿಹೆಚ್ಚು ಪ್ರಿಯರು ಮುಂದೆ ಬರುವುದೂ ಇಲ್ಲ (1) ಹಿಂದೆ ಇರಲಿಲ್ಲ ಎಂದೂ ತಿಳಿಯಬೇಕು. ಇಲ್ಲಿ ಮನುಷ್ಯರಲ್ಲಿ ಎಂದು ಹೇಳಿದ್ದರಿಂದ ದೇವತೆಗಳಿಗೆ ಹೆಚ್ಚು ಫಲವಿದೆ ಎಂದು ತಿಳಿಯಬೇಕು. ||69||

**ವಿವರಣೆ–** (1)– ಭವಿತಾ ಎಂಬುದು **ಭವಿಷ್ಯತ್** ಕಾಲವನ್ನು ಹೇಳುವ **ಲೃಟ್** ಲಕಾರ. ಆದ್ದರಿಂದ, 'ನ ಭವಿತಾ' ಎಂದರೆ ಮುಂದೆ ಬರುವುದಿಲ್ಲ ಎಂದರ್ಥ.

## ಗೀತಾಧ್ಯಯನದ ಫಲ

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ 70 ॥**

**ಅರ್ಥ–** ಧರ್ಮನೆನಿಸಿದ ನನ್ನ ಪರವಾದ ಅಥವಾ ಧರ್ಮಸಾಧನವಾದ ನಮ್ಮಿಬ್ಬರ ಈ ಸಂವಾದವನ್ನು ಯಾರು ಅಧ್ಯಯನ ಮಾಡುವರೋ ಅವರು ಜ್ಞಾನಯಜ್ಞದಿಂದ ನನ್ನನ್ನು ಆರಾಧಿಸಿದಂತಾಗುವುದೆಂದು ನನ್ನ ಅಭಿಪ್ರಾಯ.

ಗೀತಾಧ್ಯಯನಮಪಿ ಫಲಕಥನೇನ ಪ್ರಶಂಸತಿ– **ಅಧ್ಯೇಷ್ಯತೇ ಚೇತಿ** ॥ ಧರ್ಮ್ಯಂ ಧಾರಕತ್ವಾದ್ಧರ್ಮೋ ಭಗವಾನ್ । ತದೀಯಂ ಧರ್ಮ್ಯಮ್, ಧರ್ಮಸಾಧನಮಿತಿ ವಾ । ಇಮಮಾವಯೋಃ ಸಂವಾದಂ ಗೀತಾಪ್ರಬನ್ಧಂ ಯಃ ಅಧ್ಯೇಷ್ಯತೇ ಚ ಪಠಿಷ್ಯತಿ ಚ ತೇನ ಪುಂಸಾ ಜ್ಞಾನಯೋಗೇನ ಜ್ಞಾನಾಖ್ಯ-ಯಜ್ಞೇನಾಹಮಿಷ್ಟಃ ಪೂಜಿತಃ ಸ್ಯಾಂ ಭವೇಯಮ್ ಇತಿ ಮೇ ಮತಿಃ ॥ 70 ॥

**ಅನುವಾದ–** ಫಲವನ್ನು ಹೇಳಿ ಗೀತೆಯ ಅಧ್ಯಯನವನ್ನೂ ಹೊಗಳುತ್ತಾನೆ– **ಅಧ್ಯೇಷ್ಯತೇ ಚ** ಎಂದು. **ಧರ್ಮ್ಯಂ**= ಧಾರಕನಾದ್ದರಿಂದ ಭಗವಂತನು ಧರ್ಮ ಎನಿಸುತ್ತಾನೆ. ಅವನಿಗೆ ಸಂಬಂಧಿಸಿದ್ದು ಧರ್ಮ್ಯ ಅಥವಾ, ಧರ್ಮ್ಯ ಎನ್ನುವುದಕ್ಕೆ ಧರ್ಮಸಾಧನ ಎಂದರ್ಥ. ಈ ನಮ್ಮಿಬ್ಬರ **ಸಂವಾದಂ**= ಗೀತಾಗ್ರಂಥವನ್ನು **ಯಃ ಅಧ್ಯೇಷ್ಯತೇ ಚ**= ಮತ್ತು ಯಾರು ಪಠಿಸುವರೋ, **ತೇನ**= ಆ ಪುರುಷನಿಂದ, **ಜ್ಞಾನಯಜ್ಞೇನ**= ಜ್ಞಾನವೆಂಬ ಯಜ್ಞದಿಂದ ನಾನು, **ಇಷ್ಟಃ**= ಪೂಜಿತನು, **ಸ್ಯಾಂ**= ಆಗುವೆನು ಎಂದು ನನ್ನ ಅಭಿಪ್ರಾಯ. ॥ 70 ॥

## ಗೀತಾಶ್ರವಣದ ಫಲ

**ಶ್ರದ್ಧಾವಾನನಸೂಯಶ್ಚ**
**ಶೃಣುಯಾದಪಿ ಯೋ ನರಃ ।**
**ಸೋಽಪಿ ಮುಕ್ತಃ ಶುಭಾನ್ ಲೋಕಾನ್**
**ಪ್ರಾಪ್ನುಯಾತ್ ಪುಣ್ಯಕರ್ಮಣಾಮ್ ॥ 71 ॥**

**ಅರ್ಥ–** ಶ್ರದ್ಧೆ ಇರುವ ಅಸೂಯೆ ಇಲ್ಲದ ಯಾವ ಮನುಷ್ಯನು ಇದನ್ನು ಕೇಳುವನೋ ಅವನೂ ಕೂಡ (ಪಾಪಗಳಿಂದ) ಮುಕ್ತನಾಗಿ ಪುಣ್ಯಕರ ಕರ್ಮ ಮಾಡಿದವರ ಮಂಗಲಮಯ ಲೋಕಗಳನ್ನು ಹೊಂದುವನು.

ಗೀತಾಶ್ರವಣಮಪಿ ಫಲೋಕ್ತ್ಯಾ ಪ್ರಶಂಸತಿ - ಶ್ರದ್ಧಾವಾನಿತಿ ॥ ಅಸ್ಮಾದಸ್ತಿ ಮೇ ಫಲಮಿತ್ಯಾಸ್ತಿಕ್ಯಬುದ್ಧಿಮಾನ್ । ಅನಸೂಯಃ ಅಸೂಯಾದಿದೋಷರಹಿತಶ್ಚ ನರಃ ಇಮಮಾವಯೋಃ ಸಂವಾದಂ ಶೃಣುಯಾಚ್ಚೇದಪಿ । ಸೋಽಪಿ ಮುಕ್ತಃ ಸನ್ ಪುಣ್ಯಕರ್ಮಣಾಂ ಶುಭಾನ್ ಲೋಕಾನವಾಪ್ನುಯಾತ್ । ಅತ್ರ ಸೋಽಪಿ ಶ್ರವಣಂ ಕುರ್ವನ್ನಪಿ ಮುಕ್ತಃ ಕಿಮು ತದಧ್ಯೇತೇತ್ಯುಕ್ತ್ಯಾ ಶ್ರವಣಂ ಕುರ್ವತೋಽಪಿ ತದಧ್ಯೇತುರ್ಮುಕ್ತಾವಧಿಕಸುಖಮಿತಿ ಸೂಚಿತಮ್ । ತಥಾ ತಸ್ಮಾದಪಿ ವ್ಯಾಖ್ಯಾತುರ್ಮನುಷ್ಯಸ್ಯಾಧಿಕಂ ಸುಖಮ್ । ತತೋ ದೇವಾನಾಮಿತಿ ಜ್ಞಾತವ್ಯಮ್ ॥ 71 ॥

ಅನುವಾದ- ಗೀತೆಯ ಶ್ರವಣಮಾಡುವುದನ್ನೂ ಫಲ ಹೇಳಿ ಹೊಗಳುತ್ತಾನೆ- ಶ್ರದ್ಧಾವಾನ್ ...ದು. ಆಸ್ತಿಕ್ಯಬುದ್ಧಿಮಾನ್= ಇದರಿಂದ ನನಗೆ ಫಲವಿದೆ ಎಂದು ಬುದ್ಧಿ ಇರುವವನು. ...ನಸೂಯಃ= ಹೊಟ್ಟೆಕಿಚ್ಚು ಮೊದಲಾದ ದೋಷಗಳಿಲ್ಲದ ಮನುಷ್ಯನು ಈ ನಮ್ಮಿಬ್ಬರ ...ಭಾಷನೆಯನ್ನು ಕೇಳಿದರೂ, ಅವನೂ ಮೋಕ್ಷ ಹೊಂದಿ ಪುಣ್ಯಕರ ಕರ್ಮ ಮಾಡಿದವರ ...ಂಗಳಲೋಕಗಳನ್ನು ಹೊಂದುವನು. ಈ ಶ್ಲೋಕದಲ್ಲಿ ಸೋಽಪಿ= ಶ್ರವಣ ಮಾಡುವವನೂ ...ುಕ್ತನಾಗುವಾಗ ಇನ್ನು ಅದರ ಅಧ್ಯಯನ ಮಾಡುವವ ಮೋಕ್ಷ ಹೊಂದುವನು ಎಂದು ...ಳುವುದೇನಿದೆ ಎಂದು (ಕೈಮುತ್ಯವನ್ನು) ಹೇಳಿದ್ದರಿಂದ ಶ್ರವಣ ಮಾಡುವವನಿಗಿಂತ ಅಧ್ಯಯನ ...ಾಡುವವನಿಗೆ ಮುಕ್ತಿಯಲ್ಲಿ ಹೆಚ್ಚು ಸುಖವೆಂದು ಸೂಚಿತವಾಗಿದೆ. ಅದರಂತೆ, ಅಧ್ಯಯನ ...ಾಡುವವನಿಗಿಂತಲೂ ಉಪದೇಶಿಸುವ ಮನುಷ್ಯನಿಗೆ ಹೆಚ್ಚು ಸುಖ. ಅವನಿಗಿಂತ ದೇವತೆಗಳಿಗೆ ...ೆಚ್ಚು ಸುಖ) ಎಂದು ತಿಳಿಯಬೇಕು. ॥ 71 ॥

**...ಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।**
**...ಚ್ಚಿದಜ್ಞಾನಸಂಮೋಹಃ ಪ್ರಣಷ್ಟಸ್ತೇ ಧನಂಜಯ ॥ 72 ॥**

ಅರ್ಥ- ಹೇ ಪಾರ್ಥ ! ನೀನಿದನ್ನು ಏಕಾಗ್ರಮನದಿಂದ ಕೇಳಿದಿ ತಾನೆ ? ಹೇ ಧನಂಜಯ! ... ಅಜ್ಞಾನದಿಂದ ಹುಟ್ಟಿದ ಭ್ರಮೆಯು ನಾಶವಾಯಿತಷ್ಟೆ ?

ಏತಾವಾನುಪದೇಶಃ ಅರಣ್ಯರುದಿತವಜ್ಜಾತೋ ನ ಭವತಿ ಕಿಲೇತಿ ಭಾವೇನ ಪೃಚ್ಛತಿ- ಕಚ್ಚಿದಿತಿ ॥ ಕಿಮಿತ್ಯರ್ಥೇಽವ್ಯಯಮೇತತ್ । ಹೇ ಪಾರ್ಥ ತ್ವಯ್ಯೈಕಾಗ್ರೇಣ ಚೇತಸಾ ಏತತ್ ಮದುಕ್ತಂ ಗೀತಾಪ್ರಮೇಯಂ ಶ್ರುತಂ ಕಿಮ್ । ಅಜ್ಞಾನೋತ್ಥಃ ಸಮ್ಮೋಹಃ ಕಚ್ಚಿತ್ತೇ ಪ್ರಣಷ್ಟಃ ॥ 72 ॥

**ಅನುವಾದ**– ಈ ಇಷ್ಟು ಉಪದೇಶ ಅರಣ್ಯರೋದನದಂತೆ (1) ಆಗಲಿಲ್ಲ ತಾನೆ ? ಎಂಬ ಅಭಿಪ್ರಾಯದಿಂದ ಪ್ರಶ್ನಿಸುತ್ತಾನೆ– ಕಚ್ಚಿತ್ ಎಂದು. **ಕಚ್ಚಿತ್** ಎಂಬುದು '**ಕಿಂ**' ಎಂಬ ಅರ್ಥದಲ್ಲಿರುವ ಅವ್ಯಯ (2) ಹೇ ಪಾರ್ಥ, ನಿನ್ನಿಂದ ಏಕಾಗ್ರ ಮನಸ್ಸಿನಿಂದ ನಾನು ಹೇಳಿದ ಗೀತಾಪ್ರಮೇಯವು ಕೇಳಲ್ಪಟ್ಟಿತ್ತೇನು ? ಅಜ್ಞಾನದಿಂದ ಹುಟ್ಟಿದ ನಿನ್ನ ಮೋಹವು (ಭ್ರಮೆಯು) ನಾಶವಾಯಿತು ತಾನೆ ? ॥ 72 ॥

**ವಿವರಣೆ**– (1) ನಾಲ್ಕು ಜನ ಓಡಾಡುವಲ್ಲಿ ಅತ್ತರೆ ಪ್ರತಿಕ್ರಿಯಿಸಲು ಜನ ಬರುವರು. ನಿರ್ಜನವಾದ ಕಾಡಿನಲ್ಲಿ ಅತ್ತು ಕರೆದರೆ ಯಾರೂ ಬರುವುದಿಲ್ಲ. ಹೀಗೆ ಪ್ರತಿಕ್ರಿಯೆ ಇಲ್ಲದ ಮಾತಿಗೆ ಅರಣ್ಯರೋದನವು = ಕಾಡಿನಲ್ಲಿ ಅಳುವುದು ದೃಷ್ಟಾಂತವಾಗಿ ಹೇಳಲ್ಪಟ್ಟಿದೆ.

(2) '**ಶ್ರುತಂ ಕಚ್ಚಿತ್**' ಎಂದರೆ '**ಶ್ರುತಂ ಕಿಂ**' ಎಂದರ್ಥ. '**ಕಿಂ**' ಎಂಬುದು ಪ್ರಶ್ನಾರ್ಥದಲ್ಲಿರುವ ಅವ್ಯಯವಾದ್ದರಿಂದ '**ಕಚ್ಚಿತ್**' ಎಂಬುದು ಅದೇ ಅರ್ಥದ ಅವ್ಯಯ ಎಂದು ಅಭಿಪ್ರಾಯ.

## 'ನಾನು ಯುದ್ಧಕ್ಕೆ ಸಿದ್ಧ' – ಅರ್ಜುನ

**ಅರ್ಜುನ ಉವಾಚ –**

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಽಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥ 73 ॥**

**ಅರ್ಥ**– ಅರ್ಜುನ ಹೇಳಿದನು — ಹೇ ಕೃಷ್ಣ! ಭ್ರಮೆ ಕಳೆಯಿತು, ನಿನ್ನ ಅನುಗ್ರಹದಿಂದ (ಯುದ್ಧವು ಧರ್ಮವೆಂಬ)ಸ್ಮರಣೆಯು ಬಂದಿತು. ಸಂಶಯವನ್ನು ಕಳೆದುಕೊಂಡು ಸನ್ನದ್ಧನಾಗಿರುವೆ. ನಿನ್ನ ಮಾತನ್ನು ನಡೆಸುವೆ.

**ಇತಿ ಪೃಷ್ಟಸ್ಯೋತ್ತರಮಾಹಾರ್ಜುನಃ– ನಷ್ಟ ಇತಿ ॥ ನಷ್ಟೋ ಮೋಹಃ ಪ್ರಥಮಾಧ್ಯಾಯೋಕ್ತೋ ವಿಪರೀತಜ್ಞಾನಲಕ್ಷಣೋ ಮೋಹೋ ನಷ್ಟಃ । ತ್ವತ್ಪ್ರಸಾದಾತ್ ಮಯಾ ಸ್ಮೃತಿರ್ಲಬ್ಧಾ ॥ ನಾರಾಯಣದ್ವಿಟ್ ತದನುಬಂಧಿನಿಗ್ರಹಃ ಪರಮೋ ಧರ್ಮೋಽವಶ್ಯಂ ಕಾರ್ಯ ಏವೇತ್ಯಾದಿಸ್ಮೃತಿರ್ಮಮ ಜಾತಾಽಸ್ತಿ । ಗತಸಂದೇಹಃ ಯುದ್ಧೇ ಸ್ಥಿತೋಽಸ್ಮಿ । ಯಥೇಚ್ಛಸಿ ತಥಾ ಕುರ್ವಿತಿ ಭಗವತ್ಕೃತಾಕ್ಷೇಪಪರಿಹಾರಾಯ ಭಗವಂತಮನುಸರತಿ ॥ ಕರಿಷ್ಯೇ ವಚನಂ ತವೇತಿ ॥ 73 ॥**

**ಅನುವಾದ**– ಹೀಗೆ ಕೇಳಿದ್ದಕ್ಕೆ ಉತ್ತರವನ್ನು ಅರ್ಜುನ ಹೇಳುತ್ತಾನೆ– **ನಷ್ಟಃ** ಎಂದು. **ನಷ್ಟೋ ಮೋಹಃ**= ಮೊದಲಧ್ಯಾಯದಲ್ಲಿ ಹೇಳಿದ ವಿಪರೀತಜ್ಞಾನ (ಭ್ರಮೆ) ಎಂಬ ಮೋಹವು

ಕಳೆಯಿತು. ನಿನ್ನ ಅನುಗ್ರಹದಿಂದ **ಸ್ಮೃತಿರ್ಲಬ್ಧಾ** = ನಾರಾಯಣ ದ್ವೇಷಿಗಳನ್ನು ಹಾಗೂ ಅವರಿಗೆ ನೆರವಾಗುವವರನ್ನು ದಂಡಿಸುವುದೆಂಬ ಶ್ರೇಷ್ಠ ಧರ್ಮವನ್ನು ತಪ್ಪದೆ ಆಚರಿಸಬೇಕು ಇತ್ಯಾದಿ ನೆನಪು ನನಗಾಯಿತು. ಸಂದೇಹ ಕಳೆದುಕೊಂಡವನಾಗಿ ಯುದ್ಧದಲ್ಲಿ ನಿಂತಿರುವೆ. '**ಯಥೇಚ್ಛಸಿ ತಥಾ ಕುರು**' ಎಂಬ ಕೃಷ್ಣನ ಆಕ್ಷೇಪದ (1) ಪರಿಹಾರಕ್ಕಾಗಿ ಕೃಷ್ಣನನ್ನು ಅನುಸರಿಸುತ್ತಾನೆ – ಕರಿಷ್ಯೇ ವಚನಂ ತವ ಎಂದು. ॥ 73॥

**ವಿವರಣೆ**– (1) ಇದರ ವಿವರಣೆಗೆ 63ನೆ ಶ್ಲೋಕದ ವಿವರಣೆಯನ್ನು ನೋಡಿ.

## ಗೀತೋಪದೇಶ ಸಾಕ್ಷಿ ಸಂಜಯನ ಉದ್ಗಾರ

**ಸಂಜಯ ಉವಾಚ –**

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಶ್ರೌಷಮದ್ಭುತಂ ರೋಮಹರ್ಷಣಮ್ ॥ 74 ॥**

**ಅರ್ಥ**– ಹೀಗೆ ನಾನು ಮಹಾತ್ಮ ಕೃಷ್ಣ ಮತ್ತು ಅರ್ಜುನನ ಈ ಆಶ್ಚರ್ಯಕರ ರೋಮಾಂಚಕಾರಿ ಸಂಭಾಷಣೆಯನ್ನು ಕೇಳಿದೆನು.

ಏಕಾಂತೇ ಸಂಜಾತಃ ಕೃಷ್ಣಾರ್ಜುನಸಂವಾದಃ ಕಥಂ ತ್ವಯಾ ಜ್ಞಾತ ಇತಿ ಧೃತರಾಷ್ಟ್ರಹೃದ್ಗತಶಂಕಾಂ ನಿರಾಹ ಸಂಜಯ ಇತ್ಯಾಹ– **ಇತ್ಯಹಮಿತಿ** ॥ ಇತಿ ಪದೇನ ಪ್ರಥಮಾಧ್ಯಾಯಾದ್ಯುಕ್ತಸ್ಯ ಸರ್ವಸ್ಯ ಪರಾಮರ್ಶಃ । ಮಹಾನಾತ್ಮಾ ಮನೋ ಯಸ್ಯ ತಸ್ಯ ಮಹಾತ್ಮನಃ । **ಅದ್ಭುತಂ** ಪ್ರಾಕ್ ಕುತ್ರಾಪಿ ನ ಶ್ರುತಂ ಆಶ್ಚರ್ಯಮ್, **ರೋಮಹರ್ಷಣಂ** ರೋಮಾಂಚಕರಮ್ ॥ 74 ॥

**ಅನುವಾದ**– ಏಕಾಂತದಲ್ಲಿ ನಡೆದ ಕೃಷ್ಣಾರ್ಜುನರ ಸಂಭಾಷಣೆಯನ್ನು ನೀನು ಹೇಗೆ ತಿಳಿದೆ ಎಂಬ ಧೃತರಾಷ್ಟ್ರನ ಮನದಲ್ಲಿದ್ದ ಸಂಶಯವನ್ನು ಸಂಜಯ ಪರಿಹರಿಸಿದನು ಎಂದು ಹೇಳುತ್ತಾನೆ– **ಇತ್ಯಹಂ** ಎಂದು. ಇತಿ (= ಹೀಗೆ) ಎಂಬ ಪದದಿಂದ ಮೊದಲಧ್ಯಾಯದಿಂದಾರಂಭಿಸಿ ಹೇಳಿದ ಎಲ್ಲವನ್ನೂ ಇಟ್ಟುಕೊಳ್ಳುವುದು. **ಮಹಾನ್ ಆತ್ಮಾ ಯಸ್ಯ ಸಃ = ಮಹಾತ್ಮಾ , ತಸ್ಯ= ಮಹಾತ್ಮನಃ** ಎಂದು ವಿಗ್ರಹ. ದೊಡ್ಡ ಮನಸ್ಸಿನವನಾದ ಎಂದು ಅರ್ಥ. **ಅದ್ಭುತಂ**= ಹಿಂದೆಲ್ಲೂ ಕೇಳದಂಥ ಆಶ್ಚರ್ಯ. **ರೋಮಹರ್ಷಣಂ** = ರೋಮಾಂಚಕಾರಿ. ॥ 74 ॥

**ವ್ಯಾಸಪ್ರಸಾದಾಚ್ಛ್ರುತವಾನೇತದ್ಗುಹ್ಯಮಹಂ ಪರಮ್ ।**
**ಯೋಗಂ ಯೋಗೇಶ್ವರಾತ್ ಕೃಷ್ಣಾತ್ ಸಾಕ್ಷಾತ್ ಕಥಯತಃ ಸ್ವಯಮ್ ॥ 75 ॥**

**ಅರ್ಥ**- ನಾನು ವೇದವ್ಯಾಸರ ಅನುಗ್ರಹದಿಂದ ಈ ರಹಸ್ಯವಾದ ಉತ್ತಮವಾದ ಯೋಗವನ್ನು (ಪುರುಷಾರ್ಥೋಪಾಯವನ್ನು) ತಾನಾಗಿಯೇ ಉಪದೇಶಿಸುವ ಯೋಗೇಶ್ವರನಾದ (ಎಲ್ಲ ಉಪಾಯಗಳ ಒಡೆಯನಾದ) ಕೃಷ್ಣನಿಂದ ನೇರವಾಗಿ ಕೇಳಿದೆ.

**ವ್ಯಾಸೇನ ಹಿ ಸಂಜಯಸ್ಯ ಕುರುಕ್ಷೇತ್ರೇ ಯುದ್ಧಸಮಾಪ್ತಿಪರ್ಯಂತಂ ತತ್ರ ಪ್ರವೃತ್ತಸ್ಯ ಸರ್ವಸ್ಯಾಪಿ ದರ್ಶನಶ್ರವಣೇ ತವ ಸ್ಯಾತಾಮಿತಿ ದಿವ್ಯ ದೃಷ್ಟಿದಾನಾತ್ ವ್ಯಾಸಪ್ರಸಾದಾದಿತ್ಯುಕ್ತಮ್ । ಯೋಗಂ ಪುಮರ್ಥೋಪಾಯಂ ಯೋಗೇಶ್ವರಾತ್ ಸರ್ವೋಪಾಯಾನಾಮೀಶ್ವರಾತ್ । ಸ್ವಯಮೇವ ಕಥಯತಃ ಕೃಷ್ಣಾತ್ । ಸಾಕ್ಷಾದನ್ಯಾವ್ಯವಧಾನೇನ ಶ್ರುತವಾನಿತ್ಯನ್ವಯಃ ॥ 75 ॥**

**ಅನುವಾದ**- ವೇದವ್ಯಾಸರು ಸಂಜಯನಿಗೆ ಕುರುಕ್ಷೇತ್ರದಲ್ಲಿ ಯುದ್ಧ ಮುಗಿವವರೆಗೆ ಅಲ್ಲಿ ನಡೆವ ಎಲ್ಲವನ್ನೂ ನೋಡುವಂತೆ ಮತ್ತು ಕೇಳುವಂತೆ ಆಗಲಿ ಎಂದು ದಿವ್ಯದೃಷ್ಟಿಯನ್ನು ಕೊಟ್ಟದ್ದರಿಂದ ವ್ಯಾಸಪ್ರಸಾದಾತ್ (ವೇದವ್ಯಾಸರ ಅನುಗ್ರಹದಿಂದ) ಎಂದು ಹೇಳಿದ್ದು. **ಯೋಗಂ**= ಪುರುಷಾರ್ಥೋಪಾಯವನ್ನು. **ಯೋಗೇಶ್ವರಾತ್**= ಎಲ್ಲ ಉಪಾಯಗಳ ಒಡೆಯನಾದ ತಾನಾಗಿಯೇ ಹೇಳುವ ಕೃಷ್ಣನಿಂದ. **ಸಾಕ್ಷಾತ್**= ಬೇರೆಯವರ ಮೂಲಕವಲ್ಲದೆ **ಶ್ರುತವಾನ್**= ಕೇಳಿದೆನು ಎಂದು ಅನ್ವಯ (1). ॥ 75 ॥

**ವಿವರಣೆ**- (1) ಪೂರ್ವಾರ್ಧದಲ್ಲಿ ಶ್ರುತವಾನ್, ಉತ್ತರಾರ್ಧದಲ್ಲಿ 'ಕೃಷ್ಣಾತ್ ಸಾಕ್ಷಾತ್ ಕಥಯತಃ ಸ್ವಯಂ' ಎಂದು ಪದಗಳಿವೆ. ಇವುಗಳಿಗೆ 'ಸ್ವಯಂ ಕಥಯತಃ ಕೃಷ್ಣಾತ್ ಸಾಕ್ಷಾತ್ ಶ್ರುತವಾನ್' ಎಂದು ಅನ್ವಯ- ಎಂದು ಅಭಿಪ್ರಾಯ.

**ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ॥ 76 ॥**

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾರಾಜನ್ ಹೃಷ್ಯಾಮಿ ಚ ಪುನಃ ಪುನಃ ॥ 77 ॥**

**ಅರ್ಥ**- ಹೇ ರಾಜ ! ಧೃತರಾಷ್ಟ್ರ, ಕೃಷ್ಣಾರ್ಜುನರ ಈ ಪುಣ್ಯಕರ ಸಂಭಾಷಣೆಯನ್ನು ನೆನೆದು ನೆನೆದು ಮತ್ತೆ ಮತ್ತೆ (ಮಾತು ಮಾತಿಗೆ) ಹರ್ಷಗೊಳ್ಳುತ್ತೇನೆ. ॥ 76 ॥

**ಅರ್ಥ-** ರಾಜನೆ, ಅದಲ್ಲದೆ, ಶ್ರೀಕೃಷ್ಣನ ಅತ್ಯಾಶ್ಚರ್ಯಕರವಾದ ಆ ವಿಶ್ವರೂಪವನ್ನು ನೆನೆದು ನೆನೆದು ನನಗೆ ಬಹಳ ಆಶ್ಚರ್ಯವಾಗುತ್ತಿದೆ ಮತ್ತು ಮತ್ತೆ ಮತ್ತೆ ಹರ್ಷಗೊಳ್ಳುತ್ತೇನೆ. ॥77॥

**ತಚ್ಛ್ರವಣೇನ ಸ್ವಸ್ಯ ಜಾತಂ ತಾತ್ಕಾಲಿಕಂ ಫಲಮಾಹ- ರಾಜನ್ನಿತಿ ॥ ಹೇ ರಾಜನ್ ಇತಿ ಧೃತರಾಷ್ಟ್ರಸ್ಯ ಸಮ್ಬೋಧನಮ್ । ಪುಣ್ಯಂ ಪಾರತ್ರಿಕಸುಖ ಹೇತ್ವದೃಷ್ಟಕರಮ್। ॥ 76 ॥**

**ತಚ್ಚ ರೂಪಂ ವಿಶ್ವರೂಪಮ್ ॥ 77 ॥**

**ಅನುವಾದ–** ಆ ಸಂವಾದವನ್ನು ಕೇಳುವುದರಿಂದ ತನಗೆ ಆದ ಆ ಕಾಲದ ಫಲವನ್ನು (ಸಂಜಯ) ಹೇಳುತ್ತಾನೆ.- ರಾಜನ್ ಎಂದು. **ಹೇ ರಾಜನ್** ಎಂದು ಧೃತರಾಷ್ಟ್ರ ಸಂಬೋಧನೆ. **ಪುಣ್ಯಂ=** ಪರಲೋಕದಲ್ಲಿನ ಸುಖಕ್ಕೆ ಕಾರಣವಾದ ಪುಣ್ಯವನ್ನುಂಟು ಮಾಡುವಂತದು. ॥ 76 ॥

**ತಚ್ಚ ರೂಪಂ** = ವಿಶ್ವರೂಪವನ್ನು. ॥ 77 ॥

### ಕೃಷ್ಣಾರ್ಜುನರಿದ್ದಲ್ಲಿ ಏಳಿಗೆ ನಿಶ್ಚಿತ

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥ 78 ॥**

*॥ ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಸಂನ್ಯಾಸಯೋಗೋ ನಾಮ ಅಷ್ಟಾದಶೋಽಧ್ಯಾಯಃ ॥*

**ಅರ್ಥ–** ಯಾವ ಸೇನೆಯಲ್ಲಿ ಸಾಧನವಂತರಿಗೊಡೆಯನಾದ ಶ್ರೀಕೃಷ್ಣನಿರುವನೋ, ಯಾವ ಸೇವೆಯಲ್ಲಿ ಧನುರ್ಧಾರಿಯಾದ ಅರ್ಜುನನಿರುವನೋ ಆ ಪಕ್ಷದಲ್ಲಿ ರಾಜ್ಯಲಕ್ಷ್ಮೀ, ವಿಜಯ ಸಂಪತ್ತು ಮತ್ತು ಸ್ಥಿರವಾದ ನ್ಯಾಯವಿರುತ್ತದೆ ಎಂದು ನನಗೆ ನಿಶ್ಚಯವಿದೆ. (ಎಂದು ಸಂಜಯ ಧೃತರಾಷ್ಟ್ರನಿಗೆ ಹೇಳಿದನು.)

*ಇಲ್ಲಿಗೆ ಶ್ರೀಕೃಷ್ಣಾರ್ಜುನಸಂವಾದರೂಪವಾದ ಭಗವದ್ಗೀತೆಯಲ್ಲಿ ಸಂನ್ಯಾಸಯೋಗ ಎಂಬ ಹದಿನೆಂಟನೆಯ ಅಧ್ಯಾಯವು ಮುಗಿಯಿತು.*

**ಯುದ್ಧಕರಣನಿಶ್ಚಯಂ ಶ್ರುತವತೋ ರಾಜ್ಞಃ ಕುತ್ರ ಜಯಾದಿರಿತಿ ಹೃದ್ಗತ- ಶಂಕಾಂ ನಿರಾಹ ಸಂಜಯಃ- ಯತ್ರೇತಿ ॥ ಯತ್ರ ಸೇನಾಯಾಂ ಯೋಗೀಶ್ವರಃ**

**ಸರ್ವೋಪಾಯವತಾಂ ಸ್ವಾಮೀ । ತತ್ರ ಶ್ರೀಃ ರಾಜ್ಯಲಕ್ಷ್ಮೀರ್ಭೂತಿಃ ಸಂಪತ್ ನೀತಿರ್ನ್ಯಾಯಃ ಧ್ರುವಾ ನಿಶ್ಚಲೇತಿ ಮಮ ಮತಿಃ ನಿಶ್ಚಯ ಇತ್ಯರ್ಥಃ ॥ 78 ॥**

*॥ ಇತಿ ಶ್ರೀಮದ್ಗೀತಾರ್ಥಸಂಗ್ರಹೇ ಶ್ರೀರಾಘವೇಂದ್ರಯತಿಕೃತೇ ಅಷ್ಟಾದಶೋಽಧ್ಯಾಯಃ ॥*

**ಅನುವಾದ–** ಯುದ್ಧಮಾಡುವುದರ ನಿಶ್ಚಯವನ್ನು ಕೇಳಿದ ರಾಜಧೃತರಾಷ್ಟ್ರನಿಗೆ 'ಯಾವ ಕಡೆ ಜಯ–ಕೀರ್ತಿಗಳಾದಾವು' ಎಂದು ಮನದಲ್ಲಿ ಮೂಡಿದ ಶಂಕೆಯನ್ನು ಸಂಜಯನು ಪರಿಹರಿಸುತ್ತಾನೆ– **ಯತ್ರ** ಎಂದು. **ಯತ್ರ**= ಯಾವ ಸೇನೆಯಲ್ಲಿ, **ಯೋಗೀಶ್ವರಃ** (1)= ಎಲ್ಲ ಉಪಾಯಬಲ್ಲವರ ಒಡೆಯ. **ಶ್ರೀಃ**= ರಾಜ್ಯಲಕ್ಷ್ಮಿಯು, **ಭೂತಿಃ**= ಸಂಪತ್ತು, **ನೀತಿಃ**= ನ್ಯಾಯವು ಸ್ಥಿರವಾದದ್ದು (ಇರುತ್ತದೆ) ಎಂದು ನನಗೆ **ಮತಿಃ**= ನಿಶ್ಚಯವಿದೆ – ಎಂದರ್ಥ.

**ವಿವರಣೆ– (1)** ಈ ಶ್ಲೋಕದಲ್ಲಿ **'ಯೋಗೇಶ್ವರಃ'** ಎಂದು ಪ್ರಚಲಿತ ಪ್ರಸಿದ್ಧ ಪಾಠ. ಗೀತಾವಿವೃತಿಯ ಅನುಸಾರ 'ಯೋಗೀಶ್ವರಃ' ಎಂದು ಪಾಠ. ಯೋಗ ಎಂದರೆ ಉಪಾಯಗಳು. ಅವುಗಳ ನಿಯಾಮಕ ಎಂದು ಪ್ರಚಲಿತಪಾಠಗಳ ಅರ್ಥ. ಉಪಾಯಗಳನ್ನು ಬಲ್ಲವರಿಗೆ ನಿಯಾಮಕ ಎಂದು ಗೀತಾವಿವೃತಿ ಅನುಸಾರಿ ಪಾಠದ ಆಶಯ.

## ಅಂತಿಮ ಮಂಗಲಾಚರಣೆ

**'ಅಶೇಷಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।**
**ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥ 1 ॥'**

**ಅನುವಾದ–** ಸಕಲಗುಣಪೂರ್ಣನಾದ ದೋಷರಹಿತನಾದ ಲಕ್ಷ್ಮೀ–ವಾಯುಗಳ ಒಡೆಯನಾದ ಭಕ್ತರ ಅಭೀಷ್ಟಗಳನ್ನು ದಯಪಾಲಿಸುವ ವಿಷ್ಣುವಿಗೆ ನಮಸ್ಕಾರ.

**'ಇತಿ ಶ್ರೀಕೃಷ್ಣಗೀತಾಭಾಷ್ಯಾದ್ಯುಕ್ತಾರ್ಥಸಂಗ್ರಹಃ ।**
**ರಾಘವೇಂದ್ರೇಣ ಯತಿನಾ ಕೃತಃ ಸಜ್ಜನಸಂವಿದೇ ॥ 2 ॥'**

ಹೀಗೆ ಶ್ರೀರಾಘವೇಂದ್ರಯತಿಗಳಿಂದ ಸಜ್ಜನರ ಜ್ಞಾನಕ್ಕಾಗಿ ಶ್ರೀಕೃಷ್ಣಗೀತಾಭಾಷ್ಯಾದಿಗಳ (ಶ್ರೀಮದ್ಭಗವದ್ಗೀತಾಭಾಷ್ಯ–ಗೀತಾತಾತ್ಪರ್ಯ–ತಟ್ಟೀಕಾಗಳ) ಅರ್ಥಗಳ ಸಂಗ್ರಹವು ಮಾಡಲ್ಪಟ್ಟಿತು.

*॥ ಇತಿ ಶ್ರೀಮತ್ಸರ್ವತಂತ್ರಸ್ವತಂತ್ರಶ್ರೀಸುಧೀಂದ್ರಪೂಜ್ಯಪಾದಶಿಷ್ಯೇಣ ರಾಘವೇಂದ್ರೇಣ ಕೃತೇ ಶ್ರೀಮದ್ಗೀತಾರ್ಥಸಂಗ್ರಹೇ ಅಷ್ಟಾದಶೋಽಧ್ಯಾಯಃ ॥*

ಕೀರ್ತಿಶಾಲಿಗಳಾದ ಸಕಲಶಾಸ್ತ್ರಗಳಲ್ಲಿ ಸ್ವತಂತ್ರರಾದ (1) ಶ್ರೀಸುಧೀಂದ್ರತೀರ್ಥರ ಪೂಜ್ಯರ ಶಿಷ್ಯರಾದ ಶ್ರೀರಾಘವೇಂದ್ರರು ರಚಿಸಿದ ಶ್ರೀಮದ್ಗೀತಾರ್ಥಸಂಗ್ರಹದ ಹದಿನೆಂಟನೆಯ ಅಧ್ಯಾಯವು ಸಮಾಪ್ತವಾಯಿತು .

**ವಿವರಣೆ–** (1) ಕಾವ್ಯ–ವ್ಯಾಕರಣ–ವೇದಾಂತ – ಮೀಮಾಂಸಾ–ನ್ಯಾಯ ಮೊದಲಾದ ಎ ಶಾಸ್ತ್ರಗಳಲ್ಲೂ ಮತ್ತೊಬ್ಬರ ಅಪೇಕ್ಷೆ ಇಲ್ಲದೆ ಅಧ್ಯಾಪನ–ವಿಚಾರ–ವಿಮರ್ಶಗಳನ್ನು ನಡ ಬಲ್ಲವರು ಎಂದರ್ಥ.

*ಇಲ್ಲಿಗೆ ಶ್ರೀರಾಘವೇಂದ್ರತೀರ್ಥರು ಬರೆದ ಶ್ರೀಮದ್ಗೀತಾರ್ಥಸಂಗ್ರಹದಲ್ಲಿ ಸಂನ್ಯಾಸಯೋಗ ಎಂಬ ಹದಿನೆಂಟನೆಯ ಅಧ್ಯಾಯವು ಮುಗಿಯಿತು.*

## ॥ ಶ್ರೀ ಕೃಷ್ಣಾರ್ಪಣಮಸ್ತು ॥

